ಪ್ರಾತಃ ಸ್ಮರಣೀಯ ಗುರುಗಳಾದ ಶ್ರೀಶ್ರೀವಿದ್ಯಾಮಾನ್ಯತೀರ್ಥರ ಜನ್ಮಶತಮಾನೋತ್ಸವ
ಹಾಗೂ ಶ್ರೀಶ್ರೀ ವಿದ್ಯೇಶತೀರ್ಥಶ್ರೀಪಾದರ ಷಷ್ಟ್ಯಬ್ದ ಮಹೋತ್ಸವ ಸ್ಮಾರಕ ವಿಶೇಷ ಪ್ರಕಾಶನ

# ಸತ್ಕಥಾಸಾಗರ

## ಮಹತ್ಕಥಾ ತರಂಗ-4



ಸಂಗ್ರಹ - ಪ್ರೇರಣೆ

ಶ್ರೀ ಶ್ರೀ 108 ಶ್ರೀ ವಿದ್ಯೇಶತೀರ್ಥಶ್ರೀಪಾದರು, ಶ್ರೀಭಂಡಾರಕೇರಿ ಮಠ, ಉಡುಪಿ

ಶ್ರೀ ಐತರೇಯಶೋಧಪ್ರಕಾಶನಪೀಠ
ಶ್ರೀ ಭಾಗವತಾಶ್ರಮ ಪ್ರತಿಷ್ಠಾನ, ಶ್ರೀಭಂಡಾರಕೇರಿ ಮಠ, ಗಿರಿನಗರ, ಬೆಂಗಳೂರು-560 085

# ಸತ್ಕಥಾಸಾಗರ

## ಮಹತ್ಕಥಾ ತರಂಗ–೪

(ದಿ.ವಿದ್ವಾನ್. ಕೊಯಮತ್ತೂರು ವಾದಿರಾಜಾಚಾರ್ಯ
ಇವರು ಬರೆದ ''ಸಾವಿರ ಕಥೆಗಳು'' ಇಂದ ಆಯ್ದ ಕಥೆಗಳು)

ಪ್ರಾತಃ ಸ್ಮರಣೀಯ ಗುರುಗಳಾದ ಶ್ರೀಶ್ರೀವಿದ್ಯಾಮಾನ್ಯತೀರ್ಥರ
ಜನ್ಮಶತಮಾನೋತ್ಸವ ಹಾಗೂ ಶ್ರೀಶ್ರೀ ವಿದ್ಯೇಶತೀರ್ಥಶ್ರೀಪಾದರ
ಷಷ್ಟ್ಯಬ್ದ ಮಹೋತ್ಸವ ಸ್ಮಾರಕ ವಿಶೇಷ ಪ್ರಕಾಶನ

ಸಂಗ್ರಹ - ಪ್ರೇರಣೆ
ಶ್ರೀ ಶ್ರೀ ೧೦೮ ಶ್ರೀ ವಿದ್ಯೇಶತೀರ್ಥಶ್ರೀಪಾದರು
ಶ್ರೀಭಂಡಾರಕೇರಿ ಮಠ – ಉಡುಪಿ

ಪ್ರಕಾಶನ
''ಶ್ರೀ ಐತರೇಯಶೋಧಪ್ರಕಾಶನಪೀಠ''
ಶ್ರೀ ಭಾಗವತಾಶ್ರಮ ಪ್ರತಿಷ್ಠಾನ
ಶ್ರೀಭಂಡಾರಕೇರಿ ಮಠ,
ಗಿರಿನಗರ, ಬೆಂಗಳೂರು-560 085
ದೂ. 080-26721527
www.vidyeshabhandara.org

**Satkatha Sagara - Mahat katha Taranga-4**
Collection of short stories from Puranas and Mahabharata, Upanishats written by **Nyaya Siromani, Late Vidwan Sri Coimbatore Vadirajacharya,** Udupi.

*This book is published in commemoration of Janmasatamanotsava of His Holiness Sri Vidyamanya Tirtha Swamiji and Sastyabda Mahotsava of H.H. Sri Vidyesa Tirtha Swamiji of Bhandarakeri Matha, Udupi.*

| | | |
|---|---|---|
| Edited by | : | **Dr. G. Sheshagiri Acharya Vedagarbha** |
| Published by | : | **Aitareya Shodha Prakashana Peetha**<br>a research and publication unit of<br>Sri Bhagavatashrama Pratisthana,<br>Sri Bhandarakeri Matha(Udupi).<br>Bengaluru-560 085. Ph. 080-26721527 |

| | | |
|---|---|---|
| First edition | : | 2014 |
| Copies | : | 1000 |
| Copyright | : | Reserved |
| Price | : | Rs. 600 |
| Pages | : | 885 + 29 |
| Page Design | : | **Sri R.S.Premkumar** |
| Cover Page | : | **Sri K.M.Sheshagiri** |
| Copies available at | | **Sri Bhagavatashrama Pratishthana,**<br>Sri Bhandarakere Matha,<br>1343, Ist H Main, 8th Cross,<br>2nd Stage, Girinagar, Bengaluru-85.<br>Ph. 080-26721527 |
| Printed at | : | **Vagartha Printers**, N.R.Colony, Bengaluru-4<br>Ph. 080-22427677 |

# ಹೃದಯವಾಣಿ

ಸತ್ಕಥಾಸಾಗರದ ನಾಲ್ಕನೇ ತರಂಗವೆನಿಸಿದ ಮಹತ್ಕಥಾ ತರಂಗವನ್ನು ಜಿಜ್ಞಾಸು ವರ್ಗಕ್ಕೆ ಇದೀಗ ಪ್ರಸ್ತುತ ಪಡಿಸುತ್ತಿದ್ದೇವೆ.

ಈ ತರಂಗದಲ್ಲಿ ವಿಷ್ಣುಭಕ್ತರಾದ ಮಹಾತ್ಮರ ವಿವಿಧ ಕಥೆಗಳನ್ನು ಸೇರಿಸಲಾಗಿದೆ. ಭಗವದ್‌ಭಕ್ತಿಯ ಪ್ರಭಾವದಿಂದ ಮಹಾತ್ಮರು ಏರಿದ ಎತ್ತರ, ತೋರಿದ ಆದರ್ಶ ಹಾಗೂ ಪ್ರಮಾದವಶಾತ್ ಪ್ರಾಪ್ತದೋಷವನ್ನು ತೊಳೆದುಕೊಂಡ ಪರಿಯನ್ನು ನಾವು ಈ ಕಥೆಗಳಲ್ಲಿ ಕಾಣಬಹುದು. ಮಹಾತ್ಮರ ಚರಿತ್ರೆಯು ಭಗವಂತನ ಸರ್ವೋತ್ಕರ್ಷಕ್ಕೆ ಹಿಡಿದ ಕನ್ನಡಿ.

**''ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ''**

ದಿವಂಗತ ಶ್ರೀ ವಾದಿರಾಜಾಚಾರ್ಯರು ಬರೆದ ಸಾವಿರ ಕಥೆಗಳಲ್ಲಿ 670 ಕಥೆಗಳನ್ನು ಅವರು ಸುಪುತ್ರರಿಂದ ನಾವು ಸಂಗ್ರಹಿಸಿದ್ದೆವು. ವಿದ್ಯಾಮಾನ್ಯರ ಜನ್ಮಶತಮಾನೋತ್ಸವ ಮತ್ತು ನಮ್ಮ ಷಷ್ಟಿಪೂರ್ತಿಯ ಶುಭಸಂದರ್ಭದಲ್ಲಿ ಇದರ ಪ್ರಕಾಶನಕ್ಕೆ ಒಪ್ಪಿಗೆಯ ಸೌಜನ್ಯವನ್ನು ತೋರಿದ ಸುಪುತ್ರರಿಗೆ ಭಗವಂತನ ಅನುಗ್ರಹ ರಕ್ಷಾಕವಚವಿರಲಿ ಎಂದು ಹಾರೈಸುತ್ತೇವೆ. ನಮ್ಮ ಶಿಷ್ಯರಾದ ಶ್ರೀ ವೇದಗರ್ಭ ಶೇಷಗಿರಿರಾಯರು ಈ ಸಂಗ್ರಹದಿಂದ ಅನುಕ್ರಮವಾಗಿ ಕಥೆಗಳನ್ನು ಯಥೋಚಿತ ವಾಗಿ ಸಂಯೋಜಿಸಿ, ಕಥೆಗಳ ಆಕರ ಗ್ರಂಥಗಳನ್ನು ಸೂಚಿಸಿ ಕರಡು ಪ್ರತಿಗಳನ್ನು ತಿದ್ದಿ ಅಂದವಾಗಿ ಮುದ್ರಣದಲ್ಲಿ ಮೂಡಿಬರುವಂತೆ ಶ್ರದ್ಧೆಯಿಂದ ಪರಿಶ್ರಮ ತಪಸ್ಸನ್ನು ಆಚರಿಸಿದ್ದಾರೆ. ಅವರಿಗೆ ಅಭಿನಂದನಪೂರ್ವಕ ಶ್ರೇಯಸ್ಸನ್ನು ಮಧ್ವಾಂತರ್ಗತ ವೇದವ್ಯಾಸರಲ್ಲಿ ಪ್ರಾರ್ಥಿಸುತ್ತೇವೆ.

ನಮ್ಮ ಇನ್ನೋರ್ವ ಶಿಷ್ಯ ಶ್ರೀನಿಧಿ ವಾಸಿಷ್ಠ ಸಕಾಲದಲ್ಲಿ ಮುದ್ರಿತವಾಗಿ ನಮ್ಮ ಕೈಸೇರುವಂತೆ ಪರಿಶ್ರಮವಹಿಸಿದ್ದಾರೆ. ಚಿತ್ರಕಲಾವಿದರಾದ ಶ್ರೀ ಕೆ.ಎಂ.ಶೇಷಗಿರಿ ಯವರು ಅಂದವಾಗಿ ಮುಖಪುಟ ವಿನ್ಯಾಸವನ್ನು ಮಾಡಿ ಸೇವೆ ಸಲ್ಲಿಸಿದ್ದಾರೆ. ಇವರೀರ್ವರಿಗೂ ಭಗವಂತನ ಅನುಗ್ರಹವಿರಲಿ. ಸಕಾಲದಲ್ಲಿ ಮುದ್ರಿಸಿದ ವಾಗರ್ಥ ಮುದ್ರಣ ಸಂಸ್ಥೆಯನ್ನು ಅಭಿನಂದಿಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮರಣೆಗಳು
**ಶ್ರೀ ವಿದ್ಯೇಶತೀರ್ಥರು**
ಶ್ರೀಭಂಡಾರಕೇರಿ ಮಠ

# ಕನ್ನಡ ಸಾಹಿತ್ಯ ಪರಿಷತ್ತು

ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು-೫೬೦ ೦೧೮

ದೂ : ೨೬೬೧೨೯೯೧, ೨೬೬೨೩೫೮೪ ಫ್ಯಾಕ್ಸ್ : ೨೨೪೨೩೮೬೭

ಸ್ಥಾಪನೆ ೧೯೧೫ ಕ್ರಮಸಂಖ್ಯೆ: ಕಸಾಪ/ದಾಖಲೆ/೨೦೧೩-೧೪

ದಿನಾಂಕ: ೧೨-೦೩-೨೦೧೪

ಇವರಿಂದ

**ಪುಂಡಲೀಕ ಹಾಲಂಬಿ**

ಅಧ್ಯಕ್ಷರು

ಇವರಿಗೆ

**ಪೂಜ್ಯ ಶ್ರೀ ಶ್ರೀ ಶ್ರೀ ವಿದ್ಯೇಶತೀರ್ಥ ಶ್ರೀಪಾದರು**

ಭಂಡಾರಕೆರೆ ಮಠ, ಉಡುಪಿ

ಪೂಜ್ಯರೇ,

ತಮ್ಮ ಪತ್ರ ಡಾ.ಶೇಷಗಿರಿಆಚಾರ್ಯರ ಮೂಲಕ ತಲುಪಿತು. ತಮ್ಮ ಮಠದಿಂದ ಪ್ರಕಾಶಿತವಾಗಲಿರುವ "**ಸಾವಿರ ಕಥೆಗಳು**" ಇದರ ಕೆಲವು ಮಾದರಿ ಕಥೆಗಳನ್ನು ಅವಲೋಕಿಸಿದೆ. ಸುಂದರವಾದ ಕನ್ನಡ ಗದ್ಯದಲ್ಲಿ ದಿ|| ಕೊಯ ಮತ್ತೂರು ವಾದಿರಾಜಾಚಾರ್ಯರು ಅವರು ಬರೆದ ಈ ಕಥಾಸಂಕಲನ ಕನ್ನಡಿಗರಿಗೆ ತುಂಬಾ ಉಪಯುಕ್ತವಾಗಿದೆ. ವಿಶೇಷವಾಗಿ ಮಕ್ಕಳಿಗೆ ಹಾಗೂ ಮಹಿಳೆಯರಿಗೆ ಪುರಾಣ, ಮಹಾಭಾರತ, ರಾಮಾಯಣಗಳಲ್ಲಿ ಬಂದಿರುವ ಕಥೆಗಳಲ್ಲಿ ಬಂದಿರುವ ವಿಷಯ ಸಂದೇಶದಿಂದ ಕೂಡಿದೆ.

ಕೃತಿ ಉತ್ತಮವಾಗಿ ಲೋಕಾರ್ಪಣೆಗೊಂಡು ಜನರಿಗೆ ತಲುಪಲಿ ಎಂದು ನಿಮ್ಮಲ್ಲಿ ನಮಸ್ಕಾರಗಳೊಂದಿಗೆ ಪ್ರಾರ್ಥಿಸುತ್ತೇನೆ.

ಇಂತಿ ನಮಸ್ಕಾರಗಳು

ತಮ್ಮ ವಿಶ್ವಾಸಿ

ಸಹಿ

**(ಪುಂಡಲೀಕ ಹಾಲಂಬಿ)**

ಅಧ್ಯಕ್ಷರು

**ಪ್ರೊ.ಜಿ.ವೆಂಕಟಸುಬ್ಬಯ್ಯ** ಎಂ.ಎ ಬಿ.ಟಿ
ನಂ. 58,31ನೆ ಕ್ರಾಸ್, 7ನೆ ಬ್ಲಾಕ್, ಜಯನಗರ, ಬೆಂಗಳೂರು 560 070
ದೂ : 080-26649232
ನಿವೃತ್ತ ಪ್ರಾಧ್ಯಾಪಕರು ವಿಜಯ ಕಾಲೇಜು ಬೆಂಗಳೂರು
ನಿವೃತ್ತ ಪ್ರಾಂಶುಪಾಲರು ವಿಜಯ ಸಂಜೆ ಕಾಲೇಜು ಬೆಂಗಳೂರು
ಮಾಜಿ ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು
ಮಾಜಿ ಅಧ್ಯಕ್ಷರು ಹಾಗೂ ಪ್ರಧಾನ ಸಂಪಾದಕರು ಬೃಹತ್ ಕನ್ನಡ-ಕನ್ನಡ ನಿಘಂಟು
ಅಧ್ಯಕ್ಷರು ಶ್ರೀ ರಾಮಕೃಷ್ಣ ಸ್ಟೂಡೆಂಟ್ಸ್ ಹೋಂ

ಡಾ|| ವೇದಗರ್ಭ ಜಿ. ಶೇಷಗಿರಿರಾಯರಲ್ಲಿ ವಿಜ್ಞಾಪನೆಗಳು

ಸನ್ಮಾನ್ಯ ಶ್ರೀ ಶ್ರೀ ಶ್ರೀ ವಿದ್ಯೇಶತೀರ್ಥ ಮಹಾಸ್ವಾಮಿಗಳಿಗೆ ನನ್ನ ಸಾಷ್ಟಾಂಗ ಪ್ರಣಾಮಗಳನ್ನು ತಿಳಿಸಿ. ತಾವು ನನಗೆ ಕೊಟ್ಟ ಕೆಲವು ಜ಼ೆರಾಕ್ಸ್ ಪುಟಗಳನ್ನು ಆಳವಾಗಿ ಪರಿಶೀಲಿಸಿದ್ದೇನೆ. ತಾವು ತಿಳಿಸಿದ **ಸಾವಿರಕಥೆ**ಗಳ ಸಂಬಂಧದ ಈ ಬರವಣಿಗೆಯನ್ನು ಮಾಡಿರುವವರು ನಿಜವಾಗಿ ರಾಮಾಯಾಣ, ಮಹಾಭಾರತ, ಭಾಗವತ ಮತ್ತು ಎಲ್ಲ ಮಹಾಪುರಾಣಗಳನ್ನು ಓದಿ ಜೀರ್ಣಿಸಿಕೊಂಡಿರುವ ವಿದ್ವಾಂಸರಾಗಿರಬೇಕು. ಈ ಪುಸ್ತಕಗಳಲ್ಲಿರುವ ಎಲ್ಲ ಬರಹಗಳೂ ಜನೋಪಯೋಗಿ ದೃಷ್ಟಿಯಿಂದ ರಚಿತವಾಗಿದೆ. ಎಲ್ಲಿಯೂ ಲೇಖಕರು ತಮ್ಮ ವಿದ್ವತ್ತನ್ನು ಪ್ರದರ್ಶಿಸಲು ಪ್ರಯತ್ನಪಟ್ಟಿಲ್ಲ.

ಅವರ ವಾಕ್ಯ ಸರಣಿಯು ಸರಳವಾಗಿದ್ದು ವಾಕ್ಯಗಳು ಚಿಕ್ಕದಾಗಿದ್ದು ಓದುಗರಿಗೆ ಸುಲಭವಾಗಿ ಅರ್ಥವಾಗುತ್ತದೆ. ವಾಕ್ಯಗಳು ವ್ಯಾಕರಣಬದ್ಧವಾಗಿದೆ, ಶೈಲಿಯು ಸುಲಲಿತ ವಾಗಿದೆ. ಸಾಮಾನ್ಯರು ಓದಿ ತಮ್ಮ ಪ್ರಾಚೀನ ಗ್ರಂಥಗಳ ಸಾರವನ್ನು ಅರ್ಥಮಾಡಿ ಕೊಂಡು ಸಜ್ಜನರಾಗಿ ಬಾಳಲಿ ಎಂಬ ಉದ್ದೇಶವನ್ನು ಹೊಂದಿರುವುದು ಸ್ಪಷ್ಟ.

ತಾವು ಈ ಲೇಖಕರ ಎಲ್ಲ ಹಸ್ತಪ್ರತಿಗಳನ್ನು ಸಂಗ್ರಹಿಸಿ ಭಾಗಗಳಾಗಿ ಪ್ರಕಟಿಸಿದರೆ ಕನ್ನಡ ಜನತೆಗೆ ಸಹಾಯ ಮಾಡಿದ ಹಾಗಾಗುತ್ತದೆ, ತಮಗೆ ಪುಣ್ಯಬರುತ್ತದೆ, ಪರಮಾಚಾರ್ಯರ ಆಶೀರ್ವಾದ ಲಭಿಸುತ್ತದೆ. ನನಗೆ ನಿಜವಾಗಿ ಸಂತೋಷವಾಗು ತ್ತಿದೆ.

ಇಂತಿ ತಮ್ಮವ

27-02-2014 **ಜಿ. ವೆಂಕಟಸುಬ್ಬಯ್ಯ**

**ನಾಡೋಜ ಡಾ||.ಎಂ.,ಚಿದಾನಂದಮೂರ್ತಿ,**
ಎಂ.ಎ., ಪಿ.ಎಚ್.ಡಿ(ಮೈ).,ಡಿ.ಲಿಟ್(ಬೆಂ)
ವಿಶ್ರಾಂತ ಕನ್ನಡ ಪ್ರಾಧ್ಯಾಪಕರು(ಬೆಂಗಳೂರು ವಿಶ್ವವಿದ್ಯಾಲಯ)
ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಪಂಪ ಪ್ರಶಸ್ತಿ ವಿಜೇತರು
'ವಿಜಯ' ನಂ 1013/ಬಿ, 4ನೆ ಅಡ್ಡರಸ್ತೆ ,11ನೆ ಮುಖ್ಯರಸ್ತೆ ,
ಹಂಪಿನಗರ, ಬೆಂಗಳೂರು-560 104 ದೂ. 080-23300687

ದಿನಾಂಕ 20-2-2014

## ಅಪೂರ್ವ ಪೌರಾಣಿಕ ಕಥೆಗಳ ಸಂಕಲನ

ದಿ || ವಿದ್ವಾನ್ ಕೊಯಮತ್ತೂರು ವಾದಿರಾಜಾಚಾರ್ಯರು ಹುಟ್ಟಿನಿಂದ ಕರ್ನಾಟಕ ಉಡುಪಿ ಪ್ರಾಂತದವರು, ದ್ವೈತವೇದಾಂತ ಮತ್ತು ಇತರ ಭಾರತೀಯ ತತ್ವಶಾಸ್ತ್ರ ಶಾಖೆಗಳನ್ನು ಆಳವಾಗಿ ಬಲ್ಲವರಾಗಿದ್ದು ಅವರು ಉಡುಪಿಯ ತಮ್ಮ ಗುರುಗಳ ಆದೇಶದ ಮೇರೆಗೆ ತಮಿಳುನಾಡಿನ ಕೊಯಮತ್ತೂರಿನಲ್ಲಿ ನೆಲಸಿ ಅಲ್ಲಿ ಸಂಸ್ಕೃತ ಪಾಠ ಪ್ರವಚನಗಳನ್ನು ಮಾಡಿಕೊಂಡು ಶಿಷ್ಯರ ಜ್ಞಾನವನ್ನು ಬೆಳಗಿದ ಮಹಾಮೇಧಾವಿಗಳು. ಕರ್ನಾಟಕದ ದಕ್ಷಿಣದ ಗಡಿಗೆ ಅಂಟಿಕೊಂಡಂತಿರುವ ಕೊಯಮತ್ತೂರು ಇಂದಿಗೂ ತಮಿಳು-ಕನ್ನಡ ದ್ವಿಭಾಷಾ ಪ್ರದೇಶ, ಹೀಗಾದ್ದ ರಿಂದಲೇ ಶ್ರೀ ಪರಮಾಚಾರ್ಯರು ಸಂಸ್ಕೃತದಲ್ಲಿ ಸ್ಥಳೀಯ ತಮಿಳಿನಲ್ಲಿ ಮತ್ತು ತಮ್ಮ ಮಾತೃಭಾಷೆ ಕನ್ನಡದಲ್ಲಿಯೂ ಪ್ರವಚನ ನೀಡುತ್ತಿರಬಹುದು.

ಅವರು ಮಹಾಭಾರತ, ರಾಮಾಯಣ ಮತ್ತು ಇತರ ಪುರಾಣಗಳಿಂದ ಸಂಗ್ರಹಿಸಿ ರಚಿಸಿರುವ **'ಒಂದು ಸಾವಿರ ಕಥೆಗಳು'** ಕೃತಿಯ ಪೂರ್ಣಪಾಠ ಲಭ್ಯವಾಗಿರದಿದ್ದರೂ ಅದರ ಹಸ್ತಪ್ರತಿಯ ಆರುನೂರುಎಪ್ಪತ್ತು ಕತೆಗಳು ಲಭ್ಯವಾಗಿದೆ. ಸಂಸ್ಕೃತಗಳಲ್ಲಿನ ಕತೆಗಳನ್ನು ಕನ್ನಡೀಕರಿಸಿ ಮನಮುಟ್ಟುವಂತೆ ಬಹು ಅಚ್ಚುಕಟ್ಟಾಗಿ, ಕೆಲವೆಡೆ ಮೋಹಕವಾದ ಶೈಲಿಯಲ್ಲಿ ನೀಡಿದ್ದಾರೆ. ಉದಾಹರಣೆಗೆ ಹರಿಶ್ಚಂದ್ರನ ಕಥೆ, ನರಕಾಸುರನ ವಧೆ,ಪಾಂಡವರ ಕಥೆಗಳನ್ನು ನೋಡಬಹುದು.

ನಮ್ಮ ರಾಷ್ಟ್ರ ಭಾರತದ ಸಮೃದ್ಧ ಸಾಂಸ್ಕೃತಿಕ ಸಂಪತ್ತನ್ನು ಅರಿಯಬೇಕಾದರೆ ರಾಮಾಯಣ, ಮಹಾಭಾರತ ಕಥೆಗಳನ್ನು , ಪುರಾಣಗಳಲ್ಲಿ ಬರುವ ಕಥೆಗಳನ್ನು ವಿಶ್ಲೇಷಿಸಿ ನೋಡಬೇಕು. ಎಲ್ಲ ಕಡೆ ಕಾಣುವ ಆತ್ಮವೆಂದರೆ 'ಧರ್ಮ'ದ ಪರಿಕಲ್ಪನೆ.

'ಧರ್ಮ'ವೆಂಬುದು ಮತವಲ್ಲ ಅದೊಂದು ಇನ್ನೊಂದು ಬಾಷೆಗೆ ಅನುವಾದಿಸಲು ಸಾಧ್ಯವಾಗದಂತಹ ಉದಾತ್ತ ಪರಿಕಲ್ಪನೆಯನ್ನು ಹೊಂದಿದೆ. ಅದರ ಅರ್ಥವಂತಿಕೆ ಗಡಿಯನ್ನು ಮೀರಿದ್ದು. 'ಸತ್ಯಂ ವದ ಧರ್ಮಂ ಚರ' ಈ ಮಾತೇ ಅದನ್ನು ಸೂಚಿಸುತ್ತದೆ. ಬದುಕಿನಲ್ಲಿ ಸತ್ಯಪ್ರಿಯತೆ, ನ್ಯಾಯಯುತ ನಡವಳಿಕೆ, ಪರೋಪಕಾರ, ದ್ವೇಷ ಅಸೂಯೆಗಳ ತ್ಯಾಜ್ಯ ಇತ್ಯಾದಿಗಳನ್ನು ಮೋಹಕ ಕತೆಗಳ ಮೂಲಕ ರಾಮಾಯಣ, ಮಹಾಭಾರತದ ಕಥೆಗಳು, ಪೌರಾಣಿಕ ಕತೆಗಳು ಜನರಿಗೆ ತಮ್ಮದೇ ಆದ ರೀತಿಯಲ್ಲಿ ತಲುಪಿಸುತ್ತವೆ. ಅಂತಹ ನೂರಾರು ಕಥೆಗಳನ್ನು ದಿ| ವಾದಿರಾಜಾಚಾರ್ಯರು ತಮ್ಮ ಕೃತಿಯಲ್ಲಿ ನೀಡಿ ಕನ್ನಡದ ಸಂಪತ್ತನ್ನು ಹೆಚ್ಚಿಸಿರುವುದಲ್ಲದೆ ಭಾರತೀಯ ಸಂಸ್ಕೃತಿಯ ಬಗೆಗಿನ ನಮ್ಮ ಅಭಿಮಾನವನ್ನು ವರ್ಧಿಸಿದ್ದಾರೆ. ಅವರ ಕೃತಿಯು ಓದುಗರಿಗೆ ಮುದವನ್ನು ನೀಡುತ್ತದೆ, ಅಂತೆಯೇ ಅದರ ಪರಂಪರೆಯ ಬಗ್ಗೆ ಓದುಗರಿಗೆ ಅರಿವನ್ನು ಹೆಚ್ಚಿಸುವುದಲ್ಲದೆ ಅವರ ಜೀವನ ವಿಧಾನವನ್ನೂ ಬದಲಾಯಿಸುತ್ತದೆ, ನಮ್ಮ ರಾಷ್ಟ್ರ ಭಾರತದ ಬಗ್ಗೆ ಅಭಿಮಾನವನ್ನು ವರ್ಧಿಸುತ್ತದೆ.

**ಎಂ. ಚಿದಾನಂದ ಮೂರ್ತಿ**



**ದಿ|| ಶ್ರೀ ಬನ್ನಂಜೆ ವಾದಿರಾಜಾಚಾರ್ಯ**

# ಲೇಖಕರ ಕಿರು ಪರಿಚಯ

| | | |
|---|---|---|
| ಲೇಖಕರು | : | **ದಿ|| ಶ್ರೀ ಬನ್ನಂಜೆ ವಾದಿರಾಜಾಚಾರ್ಯ**, ಉಡುಪಿ (ಕೊಯಮತ್ತೂರು ವಾದಿರಾಜಾಚಾರ್ಯ) |
| ಮಾತಾಪಿತೃಗಳು | : | **ದಿ|| ಶ್ರೀ ರಾಮಚಂದ್ರ ಭಟ್ ಹಾಗೂ ಶ್ರೀಮತಿ ಭೂಮಿ** |
| ವಂಶದ ಹೆಸರು | : | **ಪೆರಲ್ತಾಯ** |
| ಹುಟ್ಟಿದ ಊರು | : | **ಕೃಷ್ಣಾಪುರ** |
| ಹುಟ್ಟಿದ ವರ್ಷ | : | **1916** |
| ವಿದ್ಯಾಬ್ಯಾಸ | : | ಬನ್ನಂಜೆಯ ಪ್ರಾಥಮಿಕ ಶಾಲೆಯಲ್ಲಿ ಓದಿದ ನಂತರ ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ವ್ಯಾಸಂಗ. ಮದ್ರಾಸು ವಿಶ್ವವಿದ್ಯಾಲಯದಿಂದ "**ನ್ಯಾಯಶಿರೋಮಣಿ**" ಎಂಬ ಪದವಿ ಪ್ರಾಪ್ತಿ. |
| ವಿದ್ಯಾಗುರುಗಳು | : | ಪರಮಪೂಜ್ಯ **ಶ್ರೀ ವಿದ್ಯಾಮಾನ್ಯ ತೀರ್ಥಶ್ರೀಪಾದಂಗಳವರು** ಇವರಲ್ಲಿ **ಶ್ರೀಮನ್ನ್ಯಾಯಸುಧಾ** ಗ್ರಂಥದ ಅಧ್ಯಯನ. ನಂತರ ವ್ಯಾಸರಾಜರ **ತರ್ಕತಾಂಡವದ** ಅಧ್ಯಯನವನ್ನು **ದಿ. ಪಾಂಡುರಂಗೀ ಜಯತೀರ್ಥಾಚಾರ್ಯರ** ಬಳಿ ನಡೆಸಿದರು. ಇವರೇ ಮುಂದೆ ಉತ್ತರಾದಿ ಮಠಾಧೀಶರಾದ ಶ್ರೀ ಸತ್ಯಪ್ರಜ್ಞ ತೀರ್ಥ ಶ್ರೀಪಾದರಾದರು. |

1937ರಲ್ಲಿ ಉಚ್ಚಿಲದಲ್ಲಿ ದಾಂಪತ್ಯ ಜೀವನ ಪ್ರವೇಶಿಸಿ ಗುರುಗಳ ಆದೇಶದ ಮೇರೆಗೆ ಕೊಯಮತ್ತೂರಿನಲ್ಲಿ ನೆಲೆಸಿ ಅಲ್ಲಿ ಜಿಜ್ಞಾಸುಗಳಿಗೆ ತತ್ವಜ್ಞಾನ ಪ್ರಸಾರ ಮಾಡುತ್ತಾ ದ್ವೈತಸಿದ್ಧಾಂತದ ಪ್ರಚಾರದಲ್ಲಿ ನಿರತರಾದರು. ನ್ಯಾಯಸುಧೆಯ ಮಂಗಳವನ್ನು ಹನ್ನೆರಡು ಬಾರಿ ನಡೆಸಿದರು. 108 ಬಾರಿ ಶ್ರೀಮದ್ಭಾಗವತ ಸಪ್ತಾಹ ಮಂಗಳವನ್ನು ಮಾಡಿದ್ದಾರೆ. **ಭಾಗವತ ದಶಮ ಸ್ಕಂದದ ಹೋಮವನ್ನು ಮಾಡಿದ್ದಾರೆ. ಮುತ್ತಿನಂತಹ ತಮ್ಮ ಹಸ್ತಾಕ್ಷರದಲ್ಲಿ 'ಸಾವಿರ ಕಥೆಗಳು' ಎಂಬ ಸತ್ಕಥಾ ಸಂಕಲನ ಸಂಗ್ರಹಿಸಿದ್ದಾರೆ.** ಕೊಯಮತ್ತೂರಿನ ಪ್ರಖ್ಯಾತರಾದ ದಿ। ತಾಮ್ರಪರ್ಣಿ ಸುಬ್ಬಾಚಾರ್ಯರೇ ಮೊದಲಾದ ಶಿಷ್ಯರಿಗೆ ಪಾಠಹೇಳಿ ಅವರಿಂದ ಅನೇಕ ಗ್ರಂಥಗಳನ್ನು ರಚನೆ ಮಾಡಲಿಕ್ಕೆ ಮಾರ್ಗದರ್ಶನ ನೀಡಿದ್ದಾರೆ.

ಸಾರ್ಥಕ ದಾಂಪತ್ಯ ಜೀವನ ನಡೆಸಿದ ಆಚಾರ್ಯರು ಪತ್ನಿಯಾದ ಶ್ರೀಮತಿ ಲಕ್ಷ್ಮಿಯಲ್ಲಿ ಎರಡು ಗಂಡು ಹಾಗೂ ಒಬ್ಬ ಮಗಳನ್ನು ಪಡೆದಿದ್ದಾರೆ.

।। श्रीरस्तु ।।

**जयति हरिरचिन्त्यः सर्वदेवैकवन्द्यः परमगुरुरभीष्टावाप्तिदः सज्जानाम् ।।**
**निखिलगुणगणार्णो नित्यनिर्मुक्तदोषः सरसिजनयनोऽसौ श्रीपतिर्मानदो नः ।।**

श्रीमन्मध्वशास्त्र संपन्न वेदमूर्ति उडुपीश्री वादिराजभट्टरवर पादसन्निधानगळल्लि, कोयमुत्तूरु पुर वासिगळाद नावेल्लरु विद्वत् शिरोभूषणराद निंमन्नु अनेक साष्टांग नमस्कारगळु निंम पादगळल्लि समार्पिसिरुव मान्य पत्र ।।

**महनीयरे**

श्रीमत्परमहंसेत्यादि गुणगणालंकृतराद श्री श्री १०८ श्री भण्डारकेरी मठाधीश श्री विद्यामान्यतीर्थ श्रीपादंगळवरिंद आज्ञाप्तरागि नीवु ई कोयमुत्तूरिगे बंदु अज्ञर्गळाद नंमन्नु उद्धरिसि इरूविरि । निंमिंद कोयमुत्तुरिन अनेक माध्वरु नावु **माध्वरु यंत हेळि कोळ्ळुव बगेयल्लि मध्व** शास्त्रद ज्ञानैश्वर्यवन्नु पडदिरुवरु । नीवु हरि वायुगुरुगळल्लि निर्व्याज भक्तियन्नु माडि अवर कृपाकटाक्षके पात्ररागि इरूविरि ।

**पूज्यरे**

कळेद साधारण संवत्सर कार्तिकमासदल्लि नीवु परमानुग्रह माडिद कारण कोयमुत्तूरिन अशेष स्त्री पुरुष माध्वरु ७ दिनगळ पर्यन्तवागि ''श्रीमद्भागवत, श्रीमन्न्यसुधा श्रीसर्वमूल ग्रन्थगळ पारायण अर्थ कथन गळन्नु श्रवणमाडि ग्रन्थगळ प्रतिपाद्य श्री भारतीरमण मुख्यप्राणांतर्गत वेदव्यास देवर परमानुग्रहवन्नु होंदिरुवरु ।। ईरीतियागि पदे पदे नमगेश्रवण माडुव भाग्यवन्नु कोडिसबेकु ।।

**मध्वशास्त्रदल्लि दीक्षा उळ्ळवरे**

ई काल पर्यन्त याव मनुष्यन दया दाक्षिण्यक्कू नीवु ओळगागदे पारमार्थिकदिंद प्रवर्तकरागि इरुविरि । कोयमुत्तूरिन माध्वरु मडिद भाग्य विशेषदिंद निम्मन्नु श्रीहरियु नमगे कोट्टिरुवनु । नीवु हरि वायु गुरुगळ अनुग्रहदिंद बहुकाल नम्मेल्लरिगू ज्ञानोपदेशकरागि इरबेकेनुत श्रीभारतीरमण मुख्यप्राणान्तर्गत सर्व स्वामी श्रीकृष्णनन्नु पदे पदे प्रार्थना माडि निमगे नंम विनय भक्तिपूर्वकवाद साष्टंग नमस्कारगळन्नु समर्पिसिरुत्तेवे ।।

कोयमुत्तूरु — **कोयमुत्तूरु पुरवासिनः**

विरोधकृत् श्रावणकृष्णद्वितीय । ८.८.१९७१

# ಸಂಪಾದಕೀಯ

''ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಂ ।
ದೇವೀಂ ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ
ಇಂದ್ರಾದೀನ್ ಕಾಮಮುಖ್ಯಾನಪಿ ಸಕಲ ಸುರಾನ್ ತದ್ಗುರೂನ್ ಮದ್ಗುರೂಂಶ್ಚ ॥''

ಕಾಮೀ ಯೇನ ಹಿ ಕೀಚಕೋ ವಿನಿಹತೋ ಕ್ರೋಧೀ ಚ ದುಃಶಾಸನ ಃ ।
ಸ್ತಬ್ಧೋ ಲುಬ್ಧ ಸುಯೋಧನಶ್ಚ ಮಣಿಮಾನ್ ಮುಗ್ಧೋ ಮದಾಂಧೋ ಬಕಃ ॥

ಕೃಷ್ಣೇರ್ಷ್ಯಾಭಿರತಶ್ಚ ಮಾಗಧಪತಿಃ ಷಡ್ವೈರಿವರ್ಗಾತ್ತದಾ ।
ಸ ತ್ವಂ ಭೀಮ ಗುಣಾಭಿರಾಮ ದಯಯಾ ದಾಸಂ ಹಿ ಮಾಮುದ್ಧರ ॥

ಆಪಾದಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿಧ್ಯಂತಿ ಚ ಮನೋರಥಾಃ ॥

''ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ ॥'' ಮತಾನಿ. ಅ.2-129

ನನ್ನ ಗುರುಗಳಾದ ಶ್ರೀಮತ್ಪರಮಪೂಜ್ಯ ಭಂಡಾರಕೇರಿ ಮಠಾಧೀಶರಾದ ಶ್ರೀ 108 ಶ್ರೀ ವಿದ್ಯೇಶತೀರ್ಥಶ್ರೀಪಾದರು ತಮ್ಮ ಸಂಚಾರದಲ್ಲಿ ದಿ॥ಕೊಯಮತ್ತೂರು ವಾದಿರಾಜಾಚಾರ್ಯರು ವೇದೇತಿಹಾಸಪುರಾಣ ಮೂಲಗಳಿಂದ ಬರೆದ **'ಸಾವಿರ ಕಥೆಗಳ'** ಪೈಕಿ 672 ಕಥೆಗಳನ್ನು ಒಳಗೊಂಡ 7 ಪುಸ್ತಕಗಳನ್ನು ಸಂಗ್ರಹಿಸಿ, ಪರಿಶೀಲಿಸಿ, ಇವು ಜನಸಾಮಾನ್ಯರಿಗೆ, ಸಂಸ್ಕೃತ ಬರದ ಆಸ್ತಿಕ ಜಿಜ್ಞಾಸುಗಳಿಗೆ (ಯಾವುದೇ ಜಾತಿಯವರಿರಲಿ) ಉಪಯುಕ್ತವೆಂದು ಭಾವಿಸಿ ಇವುಗಳನ್ನು ತಮ್ಮ ಗುರುಗಳಾದ ಶ್ರೀ ವಿದ್ಯಾಮಾನ್ಯತೀರ್ಥರ ಜನ್ಮಶತಮಾನೋತ್ಸವ ಹಾಗೂ ತಮ್ಮ ಷಷ್ಟ್ಯಬ್ದ ಮಹೋತ್ಸವಗಳ ಅಂಗವಾಗಿ ಪ್ರಕಾಶನ ಮಾಡಲು, ಈ ಕಾರ್ಯದಲ್ಲಿ ತುಂಬಾ

ಅನುಗ್ರಹಪೂರ್ಣವಾತ್ಸಲ್ಯ ಹಾಗೂ ವಿಶ್ವಾಸಪೂರ್ವಕವಾಗಿ ನನಗೆ ಸಂಪಾದನಾ ಕಾರ್ಯವನ್ನು ಆದೇಶಿಸಿದರು. ಅಂತೆಯೇ ಈಗಾಗಲೇ **'ಸತ್ಕಥಾ ಸಾಗರ'** ಶಿರೋನಾಮೆಯಿಂದ ಮೂರು ತರಂಗಗಳ ರೂಪದಿಂದ ಸಂಪಾದಿತವಾಗಿ ಜಿಜ್ಞಾಸು ಗಳಿಗೆ ಜ್ಞಾನಪ್ರಸಾದ ರೂಪವಾಗಿ ಅನುಗ್ರಹಿಸಿದ್ದಾರೆ ಶ್ರೀಪಾದರು.

ಅವು

| | | |
|---|---|---|
| (1) ಭಗವತ್ಕಥಾ ತರಂಗ | 191 ಕಥೆಗಳು | 604 ಪುಟಗಳು |
| (2) ಭಾರತಕಥಾ ತರಂಗ | 116 ಕಥೆಗಳು | 532 ಪುಟಗಳು |
| (3) ಸದಾಚಾರ ತರಂಗ | 126 ಕಥೆಗಳು | 404 ಪುಟಗಳು |
| (4) ಮಹತ್ಕಥಾ ತರಂಗ | 212 ಕಥೆಗಳು | 914 ಪುಟಗಳು |
| ಒಟ್ಟು | 645 ಕಥೆಗಳು | 2454 ಪುಟಗಳು |

ಹೀಗೆ 672 ಕಥೆಗಳಲ್ಲಿ ಉಳಿದವು ಕೇವಲ 28. ಅವುಗಳಲ್ಲಿ ಕೆಲವು ಓದಲು ಬಾರದೆ ಕೊನೆಯ ಪುಟಗಳಲ್ಲಿದ್ದು ಹಾಳಾಗಿರುವುದರಿಂದ ಕೈಬಿಡಲಾಯಿತು. ಉಳಿದ ಸುಮಾರು 26 ಕಥೆಗಳು ಶ್ರೀಮಧ್ವರ ಚರಿತ್ರೆಗೆ ಸಂಬಂಧಿಸಿದುದು. ಆಚಾರ್ಯ ಮಧ್ವರ ಬಗ್ಗೆ ಅನೇಕ ವಿಸ್ತೃತ ಗ್ರಂಥಗಳು ಪ್ರಚಾರದಲ್ಲಿರುವುದರಿಂದ ಅವುಗಳನ್ನು ಕೈಬಿಡಲಾಯಿತು.

ಪೂಜ್ಯ ದಿ.ವಾದಿರಾಜಾಚಾರ್ಯರು ಬರೆದ ಕಥೆಗಳು ವಿಕ್ಷಿಪ್ಯ ಸಂಗ್ರಹಿಸಲ್ಪಟ್ಟಿವೆ. ಅದನ್ನು ಮೇಲಿನಂತೆ ವಿಂಗಡಿಸಿ ಪ್ರಕಟಿಸಲಾಗಿದೆ.

(1) ಭಗವಂತನ ವಿವಿಧ ಅವತಾರ ಕಥೆಗಳನ್ನು ಮೊದಲ ತರಂಗದಲ್ಲಿ,

ನಂತರ (2) ವಿಸ್ತಾರವಾದ ಭಾರತ ಕಥೆ.

ನಂತರ ನಿತ್ಯ ಜೀವನಕ್ಕೆ ಬೇಕಾದ (3) ಸದಾಚಾರದ ವಿವಿಧ ವಿಷಯಗಳನ್ನು ಎಂದರೆ-ವ್ರತ, ದಾನ, ತೀರ್ಥಕ್ಷೇತ್ರ, ನದಿಗಳು, ಪುಣ್ಯಪಾಪ ಪ್ರಶ್ನೆಗೋಸ್ಕರ ನರಕಾದಿಗಳ ವರ್ಣನೆ- ಬ್ರಹ್ಮಾಂಡ ವರ್ಣನೆ, ಸೃಷ್ಟಿವರ್ಣನೆ ಮೊದಲಾದವು ಮೂರನೇ ತರಂಗದಲ್ಲಿ ಕೊಡಲಾಗಿದೆ.

ಪ್ರಕೃತ ನಾಲ್ಕನೆಯ ಕೊನೆಯ ಈ ತರಂಗದಲ್ಲಿ ವಿವಿಧ ಭಗವದ್ಭಕ್ತರ ಚರಿತ್ರೆ ಗಳನ್ನು ಸಂಗ್ರಹಿಸುವ ಪ್ರಯತ್ನ ಮಾಡಲಾಗಿದೆ. ಮೊದಲ ಎರಡು ತರಂಗಗಳಲ್ಲಿ ಮಹಾಲಕ್ಷ್ಮೀ, ಷಣ್ಮಹಿಷಿಯರು, ವಾಯುದೇವರು ಮೊದಲಾದ ಭಗವದ್ಭಕ್ತರ ಚರಿತ್ರೆಗಳು ಬಂದಿವೆ. ಉಳಿದ ಗರುಡ, ಶೇಷ, ರುದ್ರ, ಇಂದ್ರ, ಸೂರ್ಯ, ಚಂದ್ರ, ವಿನಾಯಕ ಮೊದಲಾದ ದೇವತೆಗಳ, ಪಿತೃಗಳ, ಕಶ್ಯಪ, ವಶಿಷ್ಠ, ವಿಶ್ವಾಮಿತ್ರಾದಿ

ಅನೇಕ ಮಹರ್ಷಿಗಳ, ವಿವಿಧ ಆಶ್ರಮ ವರ್ಣಗಳಲ್ಲಿ ಜನಿಸಿ ತಮ್ಮ ತಪಸ್ಸಿನಿಂದ ಮಹತ್ತ್ವ ಪಡೆದ ಅನೇಕ ಜ್ಞಾನಿವರೇಣ್ಯರ ಮಹಿಳಾ ಜ್ಞಾನಿಗಳಾದ ಕೌಶಿಕಪತ್ನಿ, ಪತಿವ್ರತೆಯರಾದ ಅರುಂಧತಿ, ದಮಯಂತಿ, ಸಾವಿತ್ರಿ, ಸುಕನ್ಯಾ, ದೇವಯಾನಿ ಮೊದಲಾದವರ, ಧರ್ಮವ್ಯಾಧ ಮೊದಲಾದ ಶೂದ್ರಯೋನಿಯಲ್ಲಿ ಹುಟ್ಟಿಯೂ ಬ್ರಾಹ್ಮಣನಾದ ಕೌಶಿಕಮುನಿಗೆ ಉಪದೇಶಗೈದ ಭಕ್ತರ ಚರಿತ್ರೆಗಳ ಮಾಂಧಾತ, ನಹುಷ, ಸಗರ, ದಿಲೀಪ, ನಳ, ಕಾರ್ತವೀರ್ಯಾರ್ಜುನ, ಚಂದ್ರಹಾಸ, ಶಿಬಿ, ಯಯಾತಿ, ರಂತಿದೇವ ಮೊದಲಾದ ರಾಜಮಹಾರಾಜರ ಹಾಗೂ ಪ್ರಾಣಿಪಕ್ಷಿ, ಕೀಟ, ಸರ್ಪಗಳಂಥ ನೀಚಯೋನಿಯಲ್ಲಿದ್ದೂ (ಶಾಪಾದಿ ಕಾರಣಗಳಿಂದ) ಸಾಧನೆ ಮಾಡಿದ ಸೃಷ್ಟಿಯ ಎಲ್ಲ ಸ್ತರಗಳ ಜೀವಿಗಳ ಕಥಾಸಂಗ್ರಹವೇ ಕೊನೆಯ ತರಂಗ ಮಹತ್ಕಥಾ ತರಂಗ-ಮಹಾತ್ಮರ ಚರಿತ್ರೆಗಳ ಸಂಗ್ರಹ.

ಇವರ ಜೀವನದ ಏಳು ಬೀಳುಗಳು ಇಲ್ಲಿಯ ವಸ್ತು. ಏಳಿಗೆಗೆ ತಪಸ್ಸು ಕಾರಣವಾದರೆ ಬೀಳುವಿಕೆಗೆ ಅರಿಷಡ್ವರ್ಗಗಳಿಗೆ ಬಲಿಯಾಗುವುದೇ ಕಾರಣವಾಗಿರುತ್ತದೆ. ಕಾರಣ ಶ್ರೇಯಸ್ಸನ್ನು ಬಯಸುವ ಎಲ್ಲ ಜೀವಿಗಳು ಕಾಮಕ್ರೋಧಾದಿಗಳನ್ನು ಗೆಲ್ಲುವ ಗಂಭೀರ ಪ್ರಯತ್ನ ಮಾಡುವುದಕ್ಕಾಗಿ ಅಧ್ಯಾತ್ಮಜೀವನದ ನಿಜವಾದ ಬದುಕಿಗೆ ಮಾರ್ಗದರ್ಶನಕ್ಕಾಗಿ ಇವರೆಲ್ಲರ ಕಥೆಗಳು ಬೆಳಕಾಗಿರುತ್ತವೆ.

ಈ ಎಲ್ಲ ಜೀವರ ಪೈಕಿ ಹನುಮಭೀಮ ಮಧ್ವರೂಪಿ ವಾಯುದೇವರ ಜೀವನ ಪರಮಶುದ್ಧ ಭಾಗವತ ಧರ್ಮಗಳನ್ನು ಅವಲಂಬಿಸಿದ್ದು ಎಂದು ಅವರ ಜೀವನ. ಅವುಗಳ ಆಕರಗ್ರಂಥಗಳಿಂದ ತಿಳಿಯುತ್ತದೆ. ಉಳಿದ ಸಾಧಕರೂ ಭಾಗವತರೇ, ಭಕ್ತರೇ. ಆದರೆ ಅಲ್ಲಲ್ಲಿ ಅವರ ಜೀವನದಲ್ಲಿ ಭಕ್ತಿಯ ವಿಚ್ಛೇದಗಳಿರುತ್ತವೆ. ಅಲ್ಲೂ ತಾರತಮ್ಯವಿದೆ. ಸತ್ಯ, ಧರ್ಮ, ಅಹಿಂಸೆ ಮೊದಲಾದ ಸಾಮಾನ್ಯ ಧರ್ಮಗಳನ್ನು ಹಿಡಿದು ವಿಷ್ಣು ಪಾದೈಕ ಸಂಶ್ರಯತ್ವವೇ ಮೊದಲಾದ ವಿಶೇಷ ಧರ್ಮಗಳನ್ನು ಹನುಮಂತ, ಭೀಮ, ಮಧ್ವರಲ್ಲಿ ಪೂರ್ಣ ನೋಡಬಹುದು. ಉಳಿದವರಲ್ಲಿ ಈ ಗುಣಗಳ ತಾರತಮ್ಯ ಸ್ಫುಟವಾಗಿ ಕಾಣುತ್ತದೆ.

ತಪಸ್ಸಿನ ಮೂಲ ಗುಣ ಭಕ್ತಿ. ತಪಸ್ಸು ದೇಹ ದಂಡನಾತ್ಮಕ ಹಾಗೂ ಜಪ-ಶಾಸ್ತ್ರ-ಮನನ ರೂಪವಾಗಿ ಎರಡು ವಿಧ.

**''ವಿಷ್ಣು ಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಮ್ ।''**

ಆದಕ್ಕಾಗಿ ಈ ಎಲ್ಲ ವೈಷ್ಣವ ಚೇತನರಲ್ಲೂ ಯಥಾಯೋಗ್ಯ ಭಕ್ತಿ ಅನಿವಾರ್ಯ.

ಭಗವದ್ಭಕ್ತರ ಹಿರಿಮೆ ಗರಿಮೆಗಳ ಜ್ಞಾನದಿಂದ ಅವರಲ್ಲಿ ಭಕ್ತಿಮಾಡುವ ಗುಣಬರುತ್ತದೆ. ತನ್ಮೂಲಕವಾಗಿ ಅನಂತಗುಣ ಪರಿಪೂರ್ಣನಾದ ಪರಮಾತ್ಮನಲ್ಲಿ ಪೂರ್ಣಭಕ್ತಿಯನ್ನು ಮಾಡಬೇಕೆಂಬ ಮನಸ್ಸಿಗೆ ಈ ಚರಿತ್ರೆಗಳು ಕಾರಣವಾಗುತ್ತವೆ. ಭಗವದ್ಭಕ್ತರ ಹಿರಿಮೆಯೇ ಅಗಮ್ಯ ಅಚಿಂತ್ಯವೆಂದಾದಾಗ ಭಗವಂತನ ಹಿರಿಮೆ. ಅಚಿಂತ್ಯ, ಅನಂತವೆಂದು ಹೇಳುವುದು ಅನಗತ್ಯ. ಅಂತೆಯೇ ಅವನ ಸರ್ವೋತ್ತಮತ್ವ ಸ್ವತಃ ಸಿದ್ಧವಾಗುತ್ತದೆ. ಆದ್ದರಿಂದ ಆಚಾರ್ಯರು–

''**ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ**'' ಅಂದರು.

ಅಂತಹಭಕ್ತರು ಈಗಲೂ ಇದ್ದಾರೆ. ಹಿಂದೆಯೂ ಇದ್ದರು. ಮುಂದೆಯೂ ಇರುತ್ತಾರೆ. ಉದಾ. ಚ್ಯವನಋಷಿಗಳು ತಮ್ಮ ಮಹಿಮೆ ತೋರಿಸುತ್ತಾರೆ.

ಇವೆಲ್ಲ ಸಾಮರ್ಥ್ಯದ ಹಿನ್ನೆಲೆ ಭಗವಂತನು ಯಾರ್‍ಯಾರಿಗೆ ಯಾವ್ಯಾವ ಕರ್ತವ್ಯ ವಿಧಿಸಿದ್ದಾನೋ ಅದರ ಪ್ರಾಮಾಣಿಕ ಅನುಷ್ಠಾನ ಮಾತ್ರ;

''**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ।**'' –ಗೀತೆ

''**ಸ್ವವಿಹಿತವೃತ್ತ್ಯಾ, ಭಕ್ತ್ಯಾ ಭಗವದಾರಾಧನಮೇವ ಸರ್ವೇಷಾಂ....ಧರ್ಮಃ । ತದ್ವಿರುದ್ಧಃ ಸರ್ವೋಽಪ್ಯಧರ್ಮಃ ॥** – ಗೀತಾ.ಭಾ.ತಾ.

ಅದಕ್ಕೋಸ್ಕರ ನಾವು ಭಗವಂತನನ್ನು ಜಗದ್ಗುರುಗಳಾದ ಶ್ರೀಮದಾಚಾರ್ಯರನ್ನು ವಾಯುಸ್ತುತಿಯಲ್ಲಿ ಶ್ರೀ ಪಂಡಿತಾಚಾರ್ಯರು ಪ್ರಾರ್ಥಿಸಿದಂತೆ ಪ್ರಾರ್ಥಿಸಿದರೆ ಸಾಕು.

''**ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವನ್**
**ಊರ್ಜಿತಾಂ ನಿರ್ನಿಮಿತ್ತಾಂ ನಿರ್ವ್ಯಾಜಾಂ ನಿಶ್ಚಲಾಂ**
**ಸದ್ಗುಣಗಣಬೃಹತೀಂ ಶಾಶ್ವತೀ ಮಾಶುದೇವ** '' ॥

ನಮ್ಮ ನಾಲ್ಕೂ ತರಂಗಗಳ ಅಭಿಪ್ರಾಯವನ್ನು ಶ್ರೀಮದಾಚಾರ್ಯರ ಈ ಮಾತಿನಲ್ಲಿ ನೋಡಬಹುದು.

''**ತಸ್ಮಾದನಂತ ಗುಣಪೂರ್ಣಮಮುಂ ರಮೇಶಂ**
**ನಿಶ್ಚಿತ್ಯ ದೋಷರಹಿತಂ ಪರಯೈವ ಭಕ್ತ್ಯಾ ।**
**ವಿಜ್ಞಾಯ ದೈವತಗಣಾಂಶ್ಚ ಯಥಾಕ್ರಮೇಣ**
**ಭಕ್ತ್ಯಾ ಹರೇರಿತಿ ಸದೈವ ಭಜೇತ ಧೀರಃ ॥** ಮ.ತಾ.ನಿ. 13-135

ಮೂಲ ಆಕಾರ ಗ್ರಂಥಗಳಲ್ಲಿನ ಕಥಾ ತಾತ್ಪರ್ಯ ಗ್ರಹಣವು ಅಷ್ಟು ಸುಲಭವಲ್ಲ. ಅದಕ್ಕಾಗಿ ಶ್ರೀಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ

ಅಧ್ಯಾಯ 9 ಹಾಗೂ 22ರಲ್ಲಿ ಹೀಗೆ ಸಂಗ್ರಹಿಸಿದ್ದಾರೆ. ವೇದ, ಪುರಾಣೇತಿಹಾಸ ಗಳಲ್ಲಿರುವ ಕಥೆಗಳು ಸಾಮಾನ್ಯವಾಗಿ ಭಾಷಾತ್ರಯ, (ಸಮಾಧಿ, ದರ್ಶನ, ಗುಹ್ಯ), ನೂರಾರು ರೀತಿ ಮೊದಲಾದ ಚೌಕಟ್ಟಿನಲ್ಲಿ ರಚಿತವಾಗಿವೆ. ಅವುಗಳ ತಾತ್ಪರ್ಯ ಗ್ರಹಣಕ್ಕಾಗಿ-

**''ಮಾರ್ಕಂಡೇಯಸ್ತದಾಗತ್ಯ ತೇಷಾಮಕಥಯತ್ ಕಥಾಃ ।**
**ಬಹ್ವ್ಯಶ್ಚೈವ ವಿಚಿತ್ರಾಶ್ಚ ಭಾಷಾತ್ರಯಸಮನ್ವಿತಾಃ ।**
**ಲೋಕದರ್ಶನಮಾಶ್ರಿತ್ಯ ದೇವಾಶ್ಚ ಮುನಯಸ್ತಥಾ ।**
**ಬ್ರೂಯುಃಕಥಾಸ್ತತ್ರ ಶಿಕ್ಷಾ ಗ್ರಾಹ್ಯಾ ನಾರ್ಥಃ ಕಥಂಚನ ।**
**ಅರ್ಥಃ ಸಮಾಧಿಭಾಷಾಸು ಗ್ರಾಹ್ಯಃ ಸರ್ವೋಽಪ್ಯಸಂಶಯಂ ।**
**ಪರದರ್ಶನಭಾಷಾಸು ಜ್ಞೇಯಂ ತದ್ದರ್ಶನಂ ತಥಾ ।**
**ಗ್ರಾಹ್ಯೋ ನಾರ್ಥೋ ವೈದಿಕಂ ತು ದರ್ಶನಂ ಗ್ರಾಹ್ಯಮೇವ ಹಿ ।**
**ಅನ್ಯಾರ್ಥೋ ಗುಹ್ಯಭಾಷಾಸು ಗ್ರಾಹ್ಯ ಏವಂ ವಿನಿರ್ಣಯಃ ''॥**

ಮ.ತಾ.ನಿ. ಅ.22-397 ರಿಂದ 400

ಮಾರ್ಕಂಡೇಯ ಮುನಿಗಳು ಬಂದು ಪಾಂಡವರಿಗೆ ಮೂರು ಭಾಷೆಗಳಿಂದ ಕೂಡಿದ ವಿಚಿತ್ರವಾದ ಬಹಳ ಕಥೆಗಳನ್ನು ಹೇಳಿದರು. ಲೋಕರೀತಿಯನ್ನು ಅನುಸರಿಸಿ ದೇವತೆಗಳೂ ಮುನಿಗಳೂ ಕಥೆಗಳನ್ನು ಹೇಳುವರು. ಆಗ ಅದರಲ್ಲಿ ನೀತಿಯನ್ನು ಮಾತ್ರ (ಶಿಕ್ಷಾ) ಸ್ವೀಕರಿಸಬೇಕು. ಕಥಾವಸ್ತುವನ್ನಲ್ಲ. ಸಮಾಧಿ ಭಾಷೆಯಲ್ಲಿ ಹೇಳಿದ್ದೆಲ್ಲ ಸತ್ಯ ಗ್ರಾಹ್ಯ. ದರ್ಶನಭಾಷೆಯ ವಿಷಯಗಳಲ್ಲಿ ಪರದರ್ಶನ ಪ್ರಕಾರವೆಂದು ತಿಳಿಯುವುದು. ಗುಹ್ಯ ಭಾಷೆಯ ವಸ್ತು ತೋರಿಕೆಯ ಅರ್ಥವಲ್ಲ, ನೂರಾರು ರೀತಿಗಳು ಮುಂತಾದುವಂತೂ ತುಂಬಾ ಜಿಜ್ಞಾಸೆಗೆ ಅರ್ಹವೆಂದು ತಿಳಿಯುವುದು. ಹೀಗೆ ಕಥಾರ್ಥಗಳು ತುಂಬಾ ಜಟಿಲ. ಆದ್ದರಿಂದ ಈ ಎಲ್ಲ ಕಥೆಗಳ ಸರಿಯಾದ ಅರ್ಥ ಗ್ರಹಣಕ್ಕಾಗಿ ಬಲ್ಲವರ ಸಹಾಯ ಪಡೆಯಬೇಕು.

ಈ ಕಥೆಗಳ ಸಂಪಾದನೆಗೆ ಹತ್ತಾರು ಗ್ರಂಥಗಳ ಸಹಾಯ ಪಡೆಯಲಾಗಿದೆ. ಆಕರಗಳನ್ನು ಸಾಧ್ಯವಾದ ಮಟ್ಟಿಗೆ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಆ ಕೆಲಸ ಸಮಯದ ಅಭಾವದಿಂದಾಗಿ ಪೂರ್ಣವಾಗಿಲ್ಲ. ಅದಕ್ಕಾಗಿ ವಿಷಾದಿಸುತ್ತೇನೆ.

ಒಟ್ಟಾರೆ ಆ ಸಂಪಾದನೆ ಕೆಲಸವನ್ನು ಕೊಟ್ಟು ಆದೇಶಿಸಿ ನನ್ನ ಆಧ್ಯಾತ್ಮಿಕ ಪ್ರಗತಿಗೆ ಶ್ರೀಪಾದರು ಅನುಗ್ರಹಿಸಿದ್ದಾರೆ-ಕಾರಣೀಭೂತರಾಗಿದ್ದಾರೆ. ಈ ಕಥೆಗಳ ಅಧ್ಯಯನ ನಮ್ಮನ್ನು ನಾವು ಮೌಲ್ಯಮಾಪನ ಮಾಡಲು ತುಂಬಾ ಸಹಾಯವಾಗುತ್ತದೆ.

ಆತ್ಮನಿರೀಕ್ಷಣೆಗೆ ಇದೊಂದು ಸೂಕ್ತ ಸರಕು. ಇದರ ಉಪಯೋಗ ಕನ್ನಡಾಭಿಮಾನಿಗಳೂ, ಅಧ್ಯಾತ್ಮಿಕ ಜಿಜ್ಞಾಸುಗಳು ಸ್ವಾಗತಿಸುವರೆಂದು ಭಾವಿಸಿದ್ದೇನೆ.

ಶ್ರೀ ವಾದಿರಾಜಾಚಾರ್ಯರು ಬರೆದ ಈ ಕೃತಿಯು ಸುಂದರ ಶುದ್ಧವಾದ ಕನ್ನಡದ ಗದ್ಯ ಸಾಹಿತ್ಯಕ್ಕೆ ಧಾರ್ಮಿಕ ಸಾಹಿತ್ಯಕ್ಕೆ ಉತ್ತಮ ಕೊಡುಗೆ. ಕನ್ನಡ ಗದ್ಯೇತಿಹಾಸಕ್ಕೆ ಸೇರಲೇಬೇಕಾದ ಅಮೂಲ್ಯ ಸಾಹಿತ್ಯ ಇದಾಗಿದೆ. ಈ ಸಾವಿರ ಕಥೆಗಳನ್ನು ಹಲವು ಮಹಾಪ್ರಬಂಧ (ಪಿಹೆಚ್‌ಡಿ) ಮಂಡನೆಗೂ ಆಕರವಾಗಿ ಬಳಸಬಹುದು. ಇದನ್ನು ಕನ್ನಡ ಸಾಹಿತ್ಯ ಪ್ರೇಮಿಗಳು ಮನಗಾಣುವರೆಂದು ನನ್ನ ನಂಬಿಕೆ. ಈ ಬಗ್ಗೆ ತಮ್ಮ ಸಮ್ಮತಿಯನ್ನು ಸೂಚಿಸಿರುವ ಸನ್ಮಾನ್ಯ ಪ್ರೊ.ಜಿ.ವೆಂಕಟಸುಬ್ಬಯ್ಯನವರು ಹಾಗೂ ನಾಡೋಜ ಡಾ.ಚಿದಾನಂದಮೂರ್ತಿಯವರನ್ನು ನಾನು ತುಂಬಾ ಕೃತಜ್ಞತೆಗಳನ್ನು ಪ್ರತ್ಯೇಕವಾಗಿ ತಿಳಿಸಬಯಸುತ್ತೇನೆ. ಕನ್ನಡ ಸಾಹಿತ್ಯ ಅಧ್ಯಕ್ಷರು ಈ ಬಗ್ಗೆ ಇನ್ನೂ ಹೆಚ್ಚಿನ ಆಡಳಿತಾತ್ಮಕ, ತಾಂತ್ರಿಕ ಕ್ರಮಗಳನ್ನು ತೆಗೆದುಕೊಳ್ಳಲು ಕೋರುತ್ತೇನೆ.

ಈ ನಾಲ್ಕೂ ಕೃತಿಗಳ ಸಂಪಾದನೆಯಲ್ಲಿರಬಹುದಾದ ದೋಷಗಳನ್ನು ತಿಳಿಸಿದಲ್ಲಿ ಸರಿಪಡಿಸಲು ಉಪಕಾರವಾಗುತ್ತದೆ. ಕಥಾ ಜೋಡಣೆಯಲ್ಲಿ ಪೂರ್ವಾಪರೀಕಾರಗಳ ಸಮಸ್ಯೆಯೂ ಇದೆ. ಮೊದಲು ಬರಬೇಕಾದುವು ಆಮೇಲೆ ಬಂದಿವೆ. ಅದಕ್ಕೆ ಕ್ಷಮೆ ಇರಲಿ. ವಿಷಯ ಮುಖ್ಯವಾಗಿರಲಿ. ಇವು ಎಲ್ಲ ಭಗವದ್ಭಕ್ತರ ಕಥೆಯೇ. ಆಕಡೆ ಗಮನಿಸಿ ಓದಲು ಕೋರಲಾಗಿದೆ. ಜಿಜ್ಞಾಸುಗಳ ಸಲಹೆಗಳಿಗೆ ಸ್ವಾಗತವಿದೆ. ಸಂಪಾದನೆಯನ್ನು ಕೇವಲ ಜನಪ್ರಿಯ ಆವೃತ್ತಿಯ ದೃಷ್ಟಿಯಿಂದ ನೋಡಬೇಕೇ ಹೊರತು ಪಂಡಿತ ಆವೃತ್ತಿಯಂತಲ್ಲ ಎಂದು ಕೋರುತ್ತೇನೆ. ಸಂಪಾದನೆಯ ಬಗ್ಗೆ ತೀರ ಕನಿಷ್ಠ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ. ನನ್ನ ಕನಸಿನ ಸಂಪಾದನೆ ಇನ್ನೂ ತುಂಬಾ ವಿಸ್ತೃತವಾಗಿದೆ. ಅನೇಕ ಇತಿಮಿತಿಗಳ ಹಿನ್ನೆಲೆಯ ಸಂಪಾದನೆ ಇದಾಗಿದೆ.

**ಕೃತಜ್ಞತೆಗಳು**

1. ಪುಸ್ತಕದ ಸಂಪಾದನೆಯನ್ನು ಮಾಡಲು ಆದೇಶಿಸಿರುವ ಶ್ರೀ ಶ್ರೀ 108 ಶ್ರೀ ವಿದ್ಯೇಶತೀರ್ಥಶ್ರೀಪಾದರಿಗೆ ಅನಂತ ಸಾಷ್ಟಾಂಗ ಪ್ರಣಾಮಗಳು.
2. ಕಥಾ ಕರ್ತೃಗಳಾದ ದಿ. ಪೂಜ್ಯ ಕೊಯಮತ್ತೂರು ವಾದಿರಾಜಾಚಾರ್ಯರಿಗೆ ಸಾಷ್ಟಾಂಗ ಪ್ರಣಾಮಗಳು.
3. ಪೂಜ್ಯ ಲೇಖಕರ ಕೃತಿಯನ್ನು ನೋಡಿ ಅವುಗಳನ್ನು ಪರಿಶೀಲಿಸಿ ತಮ್ಮ ಅಮೂಲ್ಯ ಅಭಿಪ್ರಾಯಗಳನ್ನು ನೀಡಿದ ಸನ್ಮಾನ್ಯರಾದ ಶ್ರೀಯುತ ಪುಂಡಲೀಕ ಹಾಲಂಬಿ,

ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪ್ರೊ.ಜಿ.ವೆಂಕಟ ಸುಬ್ಬಯ್ಯ, ನಾಡಿನ ಹಿರಿಯ ದಿಗ್ಗಜ ಸಾಹಿತಿಗಳು, ನಾಡೋಜ ಡಾ.ಎಂ. ಚಿದಾನಂದಮೂರ್ತಿ, ಖ್ಯಾತ ಕನ್ನಡ ಇತಿಹಾಸ ತಜ್ಞರು, ಸಂಶೋಧಕರು ಇವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

4. ಸಂಪಾದನೆಯ ಕೆಲಹಂತದಲ್ಲಿ ನೆರವಾಗಿರುವ ಶ್ರೀಯುತ ಹೆಚ್.ಪಿ. ನರಸಿಂಹಮೂರ್ತಿ, ನಾಗೇಂದ್ರಪ್ರಸಾದ್, ರಾಯಸಂ ಶ್ರೀಧರ ಇವರಿಗೆ ಕೃತಜ್ಞತಪೂರ್ವಕ ಅಭಿನಂದನೆಗಳು.
5. ಸುಂದರವಾಗಿ ಅಚ್ಚುಕಟ್ಟಾಗಿ ಅತಿ ಶೀಘ್ರವಾಗಿ ಅಕ್ಷರಜೋಡಣೆ ಮಾಡಿರುವ ಶ್ರೀ ಆರ್.ಎಸ್.ಪ್ರೇಮ್‌ಕುಮಾರ್ ಅವರಿಗೆ ಅನೇಕ ಅಭಿನಂದನೆಗಳು.
6. ಅಂದವಾಗಿ ಸಕಾಲದಲ್ಲಿ ಮುದ್ರಣ ಮಾಡಿಕೊಟ್ಟಿರುವ ವಾಗರ್ಥ ಪ್ರಿಂಟರ್ಸ್, ಬೆಂಗಳೂರು-4 ಇವರಿಗೆ ಅನೇಕ ಅಭಿನಂದನೆಗಳು.

ಈ ನಾಲ್ಕೂ ತರಂಗಗಳ ಸಂಪಾದನೆಯ ಪುಣ್ಯವೆಲ್ಲವನ್ನು ಈ ಕಾರ್ಯವನ್ನು ಮಾಡಿಸಿದ ಪರಮಪೂಜ್ಯ ನನ್ನ ಗುರುಗಳಾದ ಶ್ರೀ 108 ಶ್ರೀ ವಿದ್ಯೇಶತೀರ್ಥ ಶ್ರೀಪಾದರ ಪಾದಕಮಲಗಳಲ್ಲಿ ಸಮರ್ಪಿಸುತ್ತೇನೆ.

॥ ಶ್ರೀಕೃಷ್ಣಾರ್ಪಣಮಸ್ತು ॥

ಬೆಂಗಳೂರು
19-6-2014
ಜಯ ಜ್ಯೇಷ್ಠ ಬಹುಳ-ಸಪ್ತಮೀ

ಡಾ. ಜಿ. ಶೇಷಗಿರಿ ಆಚಾರ್ಯ ವೇದಗರ್ಭ
ದೂರವಾಣಿ : 080-26721028

# ವಿಷಯಾನುಕ್ರಮಣಿಕೆ

**ಪ್ರಾಣಿ-ಪಕ್ಷಿ-ಕೀಟ-ಸರ್ಪ ಪರಿಚ್ಛೇದ**

**ಋಷಿ ಪರಿಚ್ಛೇದ**

# ಸಂಕೇತಾಕ್ಷರಗಳು

| | |
|---|---|
| ಋ.ಸ. | ಋಗ್ವೇಸಂಹಿತಾ |
| ಮಾ.ಉ.ಭಾ. | ಮಾಂಡೂಕ್ಯ ಉಪನಿಷದ್ಭಾಷ್ಯ |
| ಛಾ.ಉಪ. | ಛಾಂದ್ಯೋಗ್ಯ ಉಪನಿಷತ್ |
| ಬೃ.ಉಪ. | ಬೃಹದಾರಣ್ಯಕೋಪನಿಷತ್ |
| ಮ.ಭಾ. | ಮಹಾಭಾರತ |
| ಆ.ಪ. | ಆದಿಪರ್ವ |
| ವ.ಪ. | ವನಪರ್ವ |
| ಉ.ಪ. | ಉದ್ಯೋಗ ಪರ್ವ |
| ಅನು.ಪ. | ಅನುಶಾಸನ ಪರ್ವ |
| ಶಾಂ.ಪ. | ಶಾಂತಿಪರ್ವ |
| ಆಶ್ವ.ಪ. | ಆಶ್ವಮೇಧಿಕ ಪರ್ವ |
| ಹ.ವಂ. | ಹರಿವಂಶ |
| ಹ.ವಂ.ಪ. | ಹರಿವಂಶ ಪರ್ವ |
| ಹ.ವಂ.ಭ.ಪ. | ಹರಿವಂಶ ಭವಿಷ್ಯತ್ಪರ್ವ |
| ಸ್ಕಾಂ.ಪು. | ಸ್ಕಾಂದ ಪುರಾಣ |
| ಸ್ಕಂ.ಪು. | ಸ್ಕಂದಪುರಾಣ |
| ಬ್ರ.ಪು. | ಬ್ರಹ್ಮ ಪುರಾಣ |
| ಭ.ಪು. | ಭವಿಷ್ಯತ್ಪುರಾಣ |
| ಮಾ.ಪು. | ಮಾತ್ಸ್ಯ ಪುರಾಣ |
| ವಾ.ಪು. | ವಾಯು ಪುರಾಣ |
| ಪ.ಪು.ಉ.ಖಂ. | ಪದ್ಮ ಪುರಾಣ ಉತ್ತರಖಂಡ |
| ಭಾಗ | ಭಾಗವತ |

| | |
|---|---|
| ದೇ.ಭಾ. | ದೇವೀ ಭಾಗವತ |
| ಭಾ.ತಾ. | ಭಾಗವತ ತಾತ್ಪರ್ಯ |
| ಮ.ತಾ.ನಿ. | ಮಹಾಭಾರತ ತಾತ್ಪರ್ಯ ನಿರ್ಣಯ |
| ಜ್ಯೇ.ಮಾ.ಮಾ | ಜ್ಯೇಷ್ಠ ಮಾಸ ಮಾಹಾತ್ಮ್ಯ |
| ಪು.ಮಾ.ಮಾ | ಪುಷ್ಯಮಾಸ ಮಾಹಾತ್ಮ್ಯ |
| ಆಷಾ.ಮಾ.ಮಾ. | ಆಷಾಢ ಮಾಸ ಮಾಹಾತ್ಮ್ಯ |
| ಪ.ಪು.ಮಾಘ.ಮಾ.ಮಾ. | ಪದ್ಮಪುರಾಣ ಮಾಘ ಮಾಸ ಮಾಹಾತ್ಮ್ಯ |
| ಮಾ.ಮಾ. | ಮಾಸಮಾಹಾತ್ಮ್ಯ |
| ವಿ.ರ. | ವಿಷ್ಣುರಹಸ್ಯ |
| ಗ.ಪು.ಬ್ರ.ಕಾಂ. | ಗರುಡಪುರಾಣ ಬ್ರಹ್ಮಕಾಂಡ |
| ಜೈ.ಭಾ. | ಜೈಮಿನಿ ಭಾರತ |
| ಪು.ನಾ.ಚಾ | ಪುರಾಣನಾಮ ಚೂಡಾಮಣಿ |
| ಪು.ಭಾ.ಕೋ. | ಪುರಾಣ ಭಾರತಕೋಶ |
| E.P.W. | Encyclopedia of Puranic Words |
| ಗೀ.ಪ್ರೆ. | ಗೀತಾಪ್ರೆಸ್ |
| ಟಿ.ಆರ್.ಕೆ. | ಟಿ.ಆರ್.ಕೃಷ್ಣಾಚಾರ್ |
| ಬೃ.ಸ್ತೋ.ರ. | ಬೃಹತ್ ಸ್ತೋತ್ರ ರತ್ನಾಕರ |

# ದೇವ-ಗಂಧರ್ವ ಪರಿಚ್ಛೇದ

## ಬಲರಾಮದೇವರ ಮಹಿಮೆ [1]

ಬಲರಾಮದೇವರು ಶೇಷದೇವರ ಅವತಾರ. ಇವರಲ್ಲಿ **ಶುಕ್ಲಕೇಶರೂಪದಿಂದ** (ಬಿಳಿಕೂದಲು) **ಪರಮಾತ್ಮನು ಆವಿಷ್ಟನಾಗಿರುವುದರಿಂದ** ಭಾಗವತಾದಿಗಳಲ್ಲಿ ಪರಮಾತ್ಮನ ಅವತಾರಗಳನ್ನು ಎಣಿಸುವಾಗ ಇವರನ್ನೂ ಒಂದು ಅವತಾರವೆಂದು ಎಣಿಸಿರುವರು. ಇದರಿಂದ ಬಲರಾಮದೇವರು ಸಾಕ್ಷಾತ್ ಪರಮಾತ್ಮನೇ ಎಂದು ತಿಳಿಯಬಾರದು. ಪರಮಾತ್ಮನಿಂದ ಬೇರೆಯಾದ ಪರಮಾತ್ಮನಿಂದ ಅಧಮರಾದ ಶೇಷದೇವರು ಎಂಬ ಜೀವನು ಬಲರಾಮದೇವರು ಕೆಲವು ಸಮಯದಲ್ಲಿ ಪರ ಮಾತ್ಮನು ಶುಕ್ಲಕೇಶ ರೂಪದಿಂದ ಆವೇಶವುಳ್ಳವನಾಗಿ ಅವರಿಂದ ಮಹಾ ಕಾರ್ಯ ವನ್ನು ಮಾಡಿಸುವನೆಂದು ತಿಳಿಯಬೇಕು. ಇಂತಹ ಅವತಾರಗಳಿಗೆ ಭಗವಂತನ **ಆವೇಶಾವತಾರಗಳೆನ್ನುವರು. ರಾಮಕೃಷ್ಣಾದಿಗಳು ಸ್ವರೂಪಾವತಾರಗಳು.**

ಬಲರಾಮದೇವರು ವಸುದೇವನ ಪತ್ನಿಯಾದ ದೇವಕಿದೇವಿಯ ಗರ್ಭದಲ್ಲಿ ಮೂರು ತಿಂಗಳು ವಾಸಮಾಡಿದ್ದರು. ತರುವಾಯ ದುರ್ಗಾದೇವಿಯರು ಭಗವದಾಜ್ಞೆಯಿಂದ ಅವರನ್ನು ಅಲ್ಲಿಂದ ತೆಗೆದು ವಸುದೇವನ ಮತ್ತೊಬ್ಬ ಪತ್ನಿಯಾದ ರೋಹಿಣಿಯ ಉದರದಲ್ಲಿ ಸ್ಥಾಪನೆ ಮಾಡಿದರು. ಆಮೇಲೆ ಅಲ್ಲಿ ಏಳು ತಿಂಗಳು ಇದ್ದು ಹುಟ್ಟಿದರು. ಈರೀತಿಯಾಗಿ ಬಲರಾಮದೇವರು ದೇವಕಿದೇವಿಗೂ ರೋಹಿಣಿದೇವಿಗೂ ಮಗನು. ಪೂರ್ವದಲ್ಲಿ ದೇವಕೀ ರೋಹಿಣಿ ಇಬ್ಬರೂ ತಮಗೆ ಶೇಷದೇವರು ಮಗನಾಗಿ ಹುಟ್ಟಬೇಕೆಂದು ವರವನ್ನು ಕೇಳಿಕೊಂಡಿದ್ದರು. ಆದುದರಿಂದ ಈರೀತಿಯಾಗಿ ಒಂದೇ ದೇಹದಲ್ಲಿ ಇಬ್ಬರಿಗೂ ಮಗನಾದರು.

---

1. ಭಾಗ. X ಅ.3, 13, 16, 34, 36, 37, 41-43, 51-53, 59, 61, 88-90, 96, XI- 30. ಮ.ತಾ.ನಿ. ಅ.12-14, 16-18, 20, 22, 23, 28, 32

ಇವರು ಶ್ರೀಕೃಷ್ಣಪರಮಾತ್ಮನೊಡನೆ ನಂದಗೋಕುಲದಲ್ಲಿ ನಂದಗೋಪನ ಮನೆಯಲ್ಲಿಯೇ ಬೆಳೆಯುತ್ತಿದ್ದರು. ಕಾರಣವೇನೆಂದರೆ ಕಂಸನು ವಸುದೇವ ದೇವಕಿಯರನ್ನು ಬಂಧನದಲ್ಲಿ ಇಟ್ಟಿರುವಾಗ ವಸುದೇವನ ಇತರ ಪತ್ನಿಯರೂ ಅಲ್ಲಿ ಇರಬಹುದೆಂದು ಅವರು ಗರ್ಭಿಣಿಯರಾದರೆ ಮಾತ್ರ ಅಲ್ಲಿಯೇ ದೇವಕಿಯ ಮಗನು 'ಯಾರು ಅವರ ಮಗನು ಯಾರು ಎಂದು ತನಗೆ ತಿಳಿಯದೆ ಹೋಗ ಬಹುದು ಎಂಬ ಸಂದೇಹದಿಂದ ಗರ್ಭಿಣಿಯರಾದವರೆಲ್ಲರೂ ಹಡೆಯುವವರೆಗೆ ಎಲ್ಲಿಯಾದರೂ ಬೇರೆ ಸ್ಥಳದಲ್ಲಿ ಇರಬೇಕು ಎಂದು ನಿಯಮಿಸಿದ್ದನು. ಹಾಗೆ ರೋಹಿಣಿಯು ಗರ್ಭಿಣಿಯಾದ ಕೂಡಲೇ ಅವಳನ್ನು ನಂದಗೋಕುಲಕ್ಕೆ ನಂದ ಗೋಪನ ಮನೆಗ ಕಳಹಿಸಿದ್ದನು. ಆದುದರಿಂದ ರೋಹಿಣಿಯು ಅಲ್ಲಿಯೇ ಬಲರಾಮದೇವರನ್ನು ಹಡೆದಳು. ಆಮೇಲೆಯೂ ಬಲರಾಮದೇವರು ಅಲ್ಲಿಯೇ ಬೆಳೆಯುತ್ತಾ ಇದ್ದರು. ಕೃಷ್ಣ ಪರಮಾತ್ಮನೊಡನೆ ಬಾಲಕ್ರೀಡೆಯನ್ನೆಲ್ಲಾ ಮಾಡುತ್ತಾ ಇದ್ದರು.

ಬಾಲರೊಡನೆ ಕ್ರೀಡೆಯನ್ನು ಮಾಡುತ್ತಿರುವಾಗ ಧೇನುಕ ಎಂಬ ಕತ್ತೆಯ ರೂಪವುಳ್ಳ ರಾಕ್ಷಸರನ್ನು ಕೊಂದರು. ಹಾಗೆಯೇ ಗೋಪಾಲರೂಪದಿಂದ ಆಟಕ್ಕೆ ಬಂದು ಆಟದಲ್ಲಿ ಸೋತು ತನ್ನನ್ನು ಎತ್ತಿಕೊಂಡು ಆಕಾಶಮಾರ್ಗದಲ್ಲಿ ಹಾರಿಹೋದ ಪ್ರಲಂಬ ಎಂಬ ದೈತ್ಯನನ್ನು ದೇವರ ಆವೇಶಬಲದಿಂದ ಸಂಹರಿಸಿದರು. ತರುವಾಯ ಕಂಸನ ಮಧುರಾಪಟ್ಟಣಕ್ಕೆ ಕೃಷ್ಣಪರಮಾತ್ಮನೊಡನೆ ಹೋಗಿ ಮುಷ್ಟಿಕ ಎಂಬ ಮಲ್ಲ ನನ್ನು ಇತರ ಅನೇಕ ಮಲ್ಲರನ್ನೂ ಕಂಸನ ತಮ್ಮಂದಿರನ್ನೂ ಸಂಹರಿಸಿದನು. ಅನಂತರ ಯುದ್ಧಕ್ಕೆ ಅನೇಕಬಾರಿ ಬಂದ ಜರಾಸಂಧನನ್ನು ಭಗವಂತನ ಶುಕ್ಲಕೇಶಾವೇಶ ಬಲದಿಂದ ಜಯಿಸಿದರು. ಒಂದು ಸಲ ಅವನನ್ನು ಹಿಡಿದು ಸಂಹಾರಮಾಡುವೆ ನೆಂದು ತನ್ನ ಮುಸಲಾಯುಧವನ್ನು (ಒನಕೆ) ಮೇಲೆ ಎತ್ತಿದರು.

ಆಗ 'ರಾಮ! ಇವನನ್ನು ಬಡೆಯಬೇಡ. ನಿನ್ನ ಆಯುಧವು ವ್ಯರ್ಥವಾಗ ಬಾರದು. ಇವನು ಈಗ ಸಾಯಲಾರನು. ಇವನನ್ನು ಸಂಹರಿಸುವ ಬಲಿಷ್ಠನು ಬೇರೊಬ್ಬನು ಇರುವನು' ಎಂದು ಅಶರೀರವಾಣಿಯಾಯಿತು. ಆಮೇಲೆ ಅವನನ್ನು ಬಿಟ್ಟುಬಿಟ್ಟರು. ಮತ್ತೊಂದು ಬಾರಿ ಅವನನ್ನು ಹಗ್ಗದಿಂದ ಕಟ್ಟಿಹಾಕಿದರು. ಆಗ ಕೃಷ್ಣಪರಮಾತ್ಮನು ಇವನಿಂದ ಆಗುವ ಕಾರ್ಯವಿದೆಯೆಂದು ಹೇಳಿ ಬಿಡಿಸಿಬಿಟ್ಟನು. ಚಿಕ್ಕತನದಲ್ಲಿ ಎಷ್ಟೋ ಸಲ ಭೀಮಸೇನದೇವರಿಗೂ ಇವರಿಗೂ ಕ್ರೀಡಾಯುದ್ಧವಾಗು ವುದು. ಆಗ ಇವರಲ್ಲಿ ಆಗಾಗ್ಗೆ ಶುಕ್ಲಕೇಶಾವೇಶವು ಬಂದುಬಿಡುವುದು. ಆ

ಸಮಯದಲ್ಲಿ ಇವರು ಭೀಮಸೇನದೇವರನ್ನು ಗುದ್ದಿದರೂ ಕೂಡರೂ ಭೀಮಸೇನ ದೇವರು ಆವೇಶವುಳ್ಳ ಪರಮಾತ್ಮನ ಮೇಲಿನ ಭಕ್ತಿಯಿಂದ ಸುಮ್ಮನೆ ಇದ್ದು ಬಿಡುವರು. ಆ ಆವೇಶವು ಹೋದಮೇಲೆ ಮಾತ್ರ ಪೂರ್ವದ್ದನ್ನು ಸೇರಿಸಿ ಗುದ್ದುತ್ತಿದ್ದರು. ಭೀಮಸೇನದೇವರು ಕೃಷ್ಣಪರಮಾತ್ಮನಲ್ಲಿ ಗದಾವಿದ್ಯಾಭ್ಯಾಸ ಮಾಡಿದರೆ ದೇವರ ಎದುರಾಗಿ ಗದೆಯನ್ನು ಬೀಸಿದರೆ ದೇವರ ಹತ್ತಿರ ಯುದ್ಧಮಾಡಿದಂತೆ ಆಗುವುದು ಎಂಬ ಭಾವನೆಯಿಂದ ಬಲರಾಮನ ದೇವರೊಡನೆಯೇ ಗದಾಯುದ್ಧವನ್ನು ಅಭ್ಯಾಸ ಮಾಡಿದ್ದರು.

ಒಂದು ಸಮಯದಲ್ಲಿ ಇವರಿಗೆ ಕೃಷ್ಣಪರಮಾತ್ಮನೊಡನೆ ಸ್ವಲ್ಪ ವೈಮನಸ್ಯವು ಏರ್ಪಟ್ಟಿತು. ಕಾರಣವೇನೆಂದರೆ ಶತಧನ್ವ ಎಂಬ ಯಾದವನು ಕೃಷ್ಣಬಲರಾಮರು ಅರಗಿನ ಮನೆಯಲ್ಲಿ ಪಾಂಡವರು ಸುಟ್ಟು ಮೃತರಾದರು ಎಂಬ ಸುಳ್ಳು ವರ್ತಮಾನವನ್ನು ಕೇಳಿ ಕೌರವರೊಡನೆ ಮಾತಾಡಿಸಲಿಕ್ಕೆ ಹೋಗಿರಲು ರಾತ್ರಿಯಲ್ಲಿ ಮಲಗಿದ್ದ ಸತ್ಯಭಾಮಾದೇವಿಯರ ತಂದೆಯಾದ ಸತ್ರಜಿತನ್ನು ಸಂಹರಿಸಿ ಸ್ಯಮಂತಕ ಮಣಿಯನ್ನು ಅಪಹರಿಸಿದನು. ಆಗ ಸತ್ಯಭಾಮಾದೇವಿಯರು ಲೋಕದೃಷ್ಟಿಯಿಂದ ದುಃಖವನ್ನು ತೋರಿಸಿ ಹಸ್ತಿನಾವತಿಗೆ ಹೋಗಿ ಕೃಷ್ಣಬಲರಾಮರೊಡನೆ ಈ ವಿಷಯವನ್ನು ತಿಳಿಸಿದರು. ಆಗ ಕೃಷ್ಣಬಲರಾಮದೇವರೂ ಲೋಕರೀತಿಯಂತೆ ಅಳುವನ್ನು ತೋರಿಸಿ ದ್ವಾರಕಾಪಟ್ಟಣಕ್ಕೆ ಬಂದರು. ಆಗ ದ್ರೌಪದಿದೇವಿಯರ ಸ್ವಯಂವರ ವರ್ತಮಾನವನ್ನು ಕೇಳಿ ಸ್ವಯಂವರಕ್ಕೆ ಹೋಗಿ ಅಲ್ಲಿ ಪಾಂಡವರನ್ನು ನೋಡಿ ಪುನಃ ಹಿಂದೆ ತಿರುಗಿ ಬಂದವರು ಆ ಶತಧನ್ವನನ್ನು ಸಂಹರಿಸಬೇಕೆಂದು ಉದ್ಯುಕ್ತರಾದರು. ಅದನ್ನು ತಿಳಿದು ಶತಧನ್ವನು ಕೃತವರ್ಮ ಅಕ್ರೂರರೊಡನೆ ಅವರು ಪೂರ್ವದಲ್ಲಿ ಹೇಳಿದ್ದ ಮಾತನ್ನು ನಂಬಿ ನನಗೆ ಸಹಾಯವನ್ನು ಮಾಡಬೇಕೆಂದು ಕೇಳಿಕೊಂಡನು.

ಆಗ ಅವರು ಕೃಷ್ಣಪರಮಾತ್ಮನೊಡನೆ ವಿರೋಧ ಮಾಡಲಿಕ್ಕೆ ನಮಗೆ ಸಾಮರ್ಥ್ಯವಿಲ್ಲವೆಂದು ಬಿಟ್ಟರು. ಕೊನೆಗೆ ಶತಧನ್ವನು ಅಕ್ರೂರನ ಕೈಯಲ್ಲಿದ್ದ ಸ್ಯಮಂತಕರತ್ನವನ್ನು ಕೊಟ್ಟು ತಾನು ಒಂದು ಹೆಣ್ಣುಕುದುರೆಯ ಮೇಲೆ ಕೂತುಕೊಂಡು ಓಡಿದನು. ಕೃಷ್ಣಬಲರಾಮದೇವರೂ ರಥದಲ್ಲಿ ಕೂತುಕೊಂಡು ಅವನನ್ನು ಅಟ್ಟಿಸಿಕೊಂಡು ಹೋದರು. ಅವನ ಕುದುರೆಯು ನೂರು ಯೋಜನ ದೂರ ಓಡಿ ಮಿಥಿಲಾನಗರದ ಬಳಿಯಲ್ಲಿ ಕೆಳಗೆಬಿದ್ದು ಪ್ರಾಣಬಿಟ್ಟಿತು. ಶತಧನ್ವನು ಕಾಲಿನಿಂದ ಓಡಲಿಕ್ಕೆ ಆರಂಭಿಸಿದನು. ಆಗ ಕೃಷ್ಣಪರಮಾತ್ಮನು ಬಲರಾಮದೇವರನ್ನು ರಥದಲ್ಲಿಯೇ ಇರಲಿಕ್ಕೆ ಹೇಳಿ ತಾನು ಇಳಿದುಹೋಗಿ ಶತಧ್ವನನ್ನು ಸಂಹರಿಸಿದರು.

ಆಮೇಲೆ ಅಲ್ಲಿ ಸ್ವಲ್ಪ ಹುಡುಕುವಂತೆ ಮಾಡಿ ಬಲರಾಮದೇವರ ಬಳಿಗೆ ಬಂದು ನಾವು ಶತಧನ್ವನನ್ನು ಕೊಂದು ಉಪಯೋಗವಾಗಲಿಲ್ಲ. ಅವನ ಕೈಯಲ್ಲಿ ಮಣಿಯಿಲ್ಲ ಎಂದರು. ಅದನ್ನು ಕೇಳಿ ಬಲರಾಮದೇವರು ತನ್ನ ಹತ್ತಿರ ಕೃಷ್ಣಪರಮಾತ್ಮನು ಸುಳ್ಳು ಹೇಳುತ್ತಿರುವನೆಂದು ಭಾವಿಸಿ ಕೋಪಿಸಿಕೊಂಡು ನಾನು ದ್ವಾರಕೆಗೆ ಬರಲಾರೆನೆಂದು ಹೇಳಿ ಮಿಥಿಲೆಗೆ ಹೋದರು. ಅಲ್ಲಿಯ ರಾಜನು ಅವರನ್ನು ಸತ್ಕರಿಸಿದನು. ಅಲ್ಲಿ ಕೃಷ್ಣಪರಮಾತ್ಮನ ಮೇಲಿನ ಕೋಪದಿಂದ ಐದು ವರ್ಷವಿದ್ದರು. ಆ ಸಮಯವನ್ನು ನೋಡಿ ದುರ್ಯೋಧನನು ಅಲ್ಲಿಗೆ ಬಂದು ಗದಾಯುದ್ಧದಲ್ಲಿ ಅವರ ಶಿಷ್ಯನಾದನು. ಮತ್ತು ಅವರೊಡನೆ ತನಗೆ ಸುಭದ್ರೆಯನ್ನು ಮದುವೆ ಮಾಡಿಕೊಡಬೇಕೆಂದು ಕೇಳಿಕೊಂಡನು. ಹಾಗೆಯೇ ಆಗಲಿ ಎಂದು ಹೇಳಿ ಬಲರಾಮದೇವರು ತನ್ನ ಕೈಯಿಂದ ದುರ್ಯೋಧನನ ಕೈಯನ್ನು ಮುಟ್ಟಿ ಸತ್ಯಮಾಡಿದರು. ತರುವಾಯ ಶ್ರೀಕೃಷ್ಣಪರಮಾತ್ಮನು ಬಲರಾಮದೇವರನ್ನು ಸಮಾಧಾನಪಡಿಸಿ ದ್ವಾರಕಾಪಟ್ಟಣಕ್ಕೆ ಬರಮಾಡಿಕೊಂಡನು.

ತರುವಾಯ ಅರ್ಜುನನು ತೀರ್ಥಯಾತ್ರಾ ಮಾಡುತ್ತಾ ಬಂದವನು ಸುಭದ್ರೆ ಯನ್ನು ಮದುವೆ ಮಾಡಿಕೊಳ್ಳಬೇಕೆಂಬ ಆಸೆಯಿಂದ ರೈವತಪರ್ವತಕ್ಕೆ ಬಂದವನು ಭಗವಂತನನ್ನು ಸ್ಮರಿಸಿಕೊಂಡು ರಾತ್ರಿಕಾಲದಲ್ಲಿ ಶ್ರೀಭಗವಂತನು ಅರ್ಜುನನಿದ್ದಲ್ಲಿಗೆ ಬಂದು ನೀನು ಸನ್ಯಾಸಿವೇಷವನ್ನು ಧರಿಸಿಕೊಂಡು ಬಾ. ನಿನ್ನ ಕಾರ್ಯವು ಕೈಗೂಡುವುದು ಎಂದು ಹೇಳಿಹೋದನು. ತರುವಾಯ ಯತಿವೇಷವನ್ನು ಧರಿಸಿದ್ದ ಅರ್ಜುನನನ್ನು ನೋಡಿ ಯಾದವರೆಲ್ಲರೂ ಬಲರಾಮದೇವರ ಹತ್ತಿರ ಹೇಳಿದರು. ಬಲರಾಮದೇವರು ಯತಿಗಳನ್ನು ನೋಡಿ ಉಪಚರಿಸಿ ಕರೆದುಕೊಂಡು ಹೋದರು. ತರುವಾಯ ಅರ್ಜುನನನ್ನು ಕನ್ಯೆಯರ ಅಂತಃಪುರದಲ್ಲಿಯೇ ಇಡಬೇಕೆಂದು ಬಲರಾಮದೇವರು ಹೇಳಲು ಕೃಷ್ಣಪರಮಾತ್ಮನು ಈ ಸನ್ಯಾಸಿಯು ಯುವಕನಾಗಿರು ವನು. ಸುಂದರನಾಗಿರುವನು. ಚೆನ್ನಾಗಿ ಮಾತಾಡುವನು. ಆದುದರಿಂದ ಹೆಣ್ಣು ಮಕ್ಕಳು ಸಂಚರಿಸುವಲ್ಲಿ ಇಡುವುದು ನ್ಯಾಯವಲ್ಲ. ಇನ್ನು ದೊಡ್ಡವರ ಅಭಿಪ್ರಾಯ ದಂತೆ ನಡೆಯಲಿ ಎಂದನು. ಬಲರಾಮದೇವರು ಕೃಷ್ಣನಿಗೆ ಒಂದೂ ತಿಳಿಯದು ಎಂದು ಹೇಳಿ ಅಂತಃಪುರದಲ್ಲೇ ಅರ್ಜುನನನ್ನು ಇಡಿಸಿದರು. ಅವನ ಸೇವೆಗಾಗಿ ಸುಭದ್ರೆಯನ್ನೇ ನಿಯಮಿಸಿದರು.

ಒಂದು ದಿನದಲ್ಲಿ ಕೃಷ್ಣಪರಮಾತ್ಮನು ಸುಭದ್ರೆಯನ್ನು ಅರ್ಜುನನಿಗೆ ಮದುವೆ ಮಾಡಬೇಕೆಂಬ ಅಭಿಪ್ರಾಯವುಳ್ಳವನಾಗಿ ಈ ಕಾರ್ಯಕ್ಕೆ ವಿಘ್ನ ಮಾಡಲಿರುವ

ಬಲರಾಮದೇವರನ್ನೂ ಇತರ ಯಾದವರನ್ನು ಕರೆದುಕೊಂಡು ಒಂದು ಉತ್ಸವದ ನೆಪವನ್ನು ಹೇಳಿ ಕರೆದುಕೊಂಡು ಹೋದನು. ಅಂತಹ ಸಂದರ್ಭಲ್ಲಿ ಸುಭದ್ರೆಯು ಅರ್ಜುನನೊಡನೆ 'ಯತಿಗಳೇ! ನೀವು ತೀರ್ಥಯಾತ್ರಾ ಮಾಡುತ್ತಾ ಬರುವಿರಷ್ಟೆ! ನನ್ನ ಸೋದರ ಅತ್ತೆಯಮಗನಾದ ಅರ್ಜುನನು ತೀರ್ಥಯಾತ್ರೆಗೆ ಹೋಗಿರುವ ನೆಂದು ಕೇಳಿರುವೆನು. ಅವನನ್ನು ಎಲ್ಲಿಯಾದರೂ ನೋಡಿರುವಿರಾ ?' ಎಂದು ಕೇಳಿದಳು. ಅದಕ್ಕೆ ಅರ್ಜುನನು ಹೌದು ಎಂದನು. ಸುಭದ್ರೆಯು ಎಲ್ಲಿ ? ಎಂದಳು. ಅರ್ಜುನನು 'ಇಲ್ಲಿಯೇ' ಎಂದನು. ಸುಭದ್ರೆಯು 'ಇಲ್ಲಿಯೇ' ಎಲ್ಲಿ? ಎಂದಳು. ಅರ್ಜುನನು ಮತ್ತು 'ಇಲ್ಲಿಯೇ' ಎಂದು. ಸುಭದ್ರೆಯು ಇಲ್ಲಿಯೇ ಎಲ್ಲಿ ಎಂದು ಪುನಃ ಪುನಃ ಕೇಳಿದಳು. ಅದಕ್ಕೆ ಅರ್ಜುನನು ನಗುತ್ತಾ ಹುಚ್ಚಿ! ನಾನು ಅರ್ಜುನನು. ನಿನ್ನನ್ನು ಮದುವೆಯಾಗಲಿಕ್ಕೆ ಬಂದೆನು. ನನ್ನನ್ನು ನೀನು ಮದುವೆಯಾಗು ಎಂದನು. ಅದಕ್ಕೆ ಅವಳು ಕೃಷ್ಣಪರಮಾತ್ಮನನ್ನು ತಂದೆತಾಯಿಗಳನ್ನೂ ಬಿಟ್ಟು ಆಗಲಾರದು ಎಂದು ಹೇಳಿದಳು. ಆಗ ರಾತ್ರಿಕಾಲವಾಗಿದ್ದಿತು. ಆ ಸಮಯದಲ್ಲಿಯೇ ಶ್ರೀಕೃಷ್ಣ ಪರಮಾತ್ಮನು ಸಮುದ್ರತೀರದಲ್ಲಿ ಮಲಗಿದ್ದ ಬಲರಾಮದೇವರೇ ಮೊದಲಾದವರಿಗೆ ತಿಳಿಯದಂತೆ ತಂದೆತಾಯಿಗಳನ್ನು ಕರೆದುಕೊಂಡು ಬಂದು ಸೇರಿದರು. ಆಗ ಇಂದ್ರ ಶಚಿಯರೂ ಸಪ್ತಋಷಿಗಳೂ ಬಂದರು. ಒಬ್ಬರಿಗೂ ತಿಳಿಯದಂತೆ ವೈಭವದಿಂದ ಮದುವೆಯು ನಡೆಯಿತು.

ತರುವಾಯ ಎಲ್ಲರೂ ಹೊರಟುಹೋದರು. ಅರ್ಜುನನಿಗೆ ಹೋಗಲಿಕ್ಕೆ ತನ್ನ ರಥವನ್ನು ಇಟ್ಟು ಹೋಗಿ ಸಮುದ್ರದತೀರದಲ್ಲಿ ಎಲ್ಲರ ಒಟ್ಟಿಗೆ ಒಂದೂ ತಿಳಿಯದವರಂತೆ ಮಲಗಿದನು. ಮರುದಿವಸದಲ್ಲಿ ಅರ್ಜುನನು ಸುಭದ್ರೆಯನ್ನು ರಥದಲ್ಲಿ ಕೂತುಕೊಳ್ಳಿಸಿಕೊಂಡು ಹೊರಟನು. ಆಗ ಜನರು ಸನ್ಯಾಸಿಯು ಕನ್ಯೆಯನ್ನು ಅಪಹರಿಸುತ್ತಿರುವನು ಎಂದು ಹೇಳಿ ಯುದ್ಧಕ್ಕೆ ಬಂದರು. ಅರ್ಜುನನು ಯುದ್ಧವನ್ನು ಮಾಡಿದನು. ಈ ಸಂದರ್ಭವು ಬರುವುದನ್ನು ತಿಳಿದು ಶ್ರೀಕೃಷ್ಣಪರಮಾತ್ಮನು ಮೊದಲೇ ಸುಭದ್ರೆಗೆ ಸಾರಥ್ಯವನ್ನು ಮಾಡುವ ಕ್ರಮವನ್ನು ಹೇಳಿಕೊಟ್ಟಿದ್ದನು. ಇದರಿಂದ ಸುಭದ್ರೆಯು ಸಾರಥ್ಯವನ್ನು ಮಾಡಿದಳು. ಈ ಸಮಯದಲ್ಲಿ ಅರ್ಜುನನು ಸುಭದ್ರೆಯಿಂದ ಪ್ರಾರ್ಥಿತನಾಗಿ ಒಬ್ಬನನ್ನೂ ಸಂಹರಿಸಲಿಲ್ಲ. ಎಲ್ಲರನ್ನೂ ಭಯಪಡಿಸಿ ಓಡಿಸಿದನು. ಒಬ್ಬರ ಮೈಯಲ್ಲೂ ಗಾಯಮಾಡಲಿಲ್ಲ. ವಿಪೃಥು ಎಂಬ ಯಾದವನು ಯುದ್ಧಮಾಡುವನಂತೆ ಬಂದು ತಾನು ಸೋತುಹೋದಂತೆ ತೋರಿಸಿ ಅರ್ಜುನನ ಹತ್ತಿರ ಬಂದು ಅರ್ಜುನ! ನೀನು ಇಲ್ಲಿರುವ ವಿಷಯವೆಲ್ಲಾ ನನಗೆ ತಿಳಿದಿರುವುದು.

ದೇವರು ಹೇಳಿರುವರು. ನೀನು ಕ್ಷೇಮದಿಂದ ಹೊರಟುಹೋಗು' ಎಂದು ಹೇಳಿ ಆಮೇಲೆ ಸೋತುಹೋದಂತೆ ಓಡಿಹೋದನು. ಹೋಗಿ ಈ ವಿಷಯವನ್ನು ಬಲರಾಮದೇವರ ಹತ್ತಿರ ಹೇಳಿದನು. ಅದನ್ನು ಕೇಳಿ ಬಲರಾಮದೇವರಿಗೆ ತುಂಬಾ ಕೋಪವು ಬಂದಿತು. ತರುವಾಯ ಅಕ್ರೂರ ಉದ್ಧವ ಮೊದಲಾದವರು ಆ ಸನ್ಯಾಸಿ ಯನ್ನು ಕೊಂದುಹಾಕುತ್ತೇವೆ ಎಂದು ಹೇಳಿ ಹೊರಟರು. ಆಗ ಬಲರಾಮರು ಕೃಷ್ಣನ ಬಳಿ ಬಂದು ಒಂದು ಮಾತನ್ನು ಕೇಳಿರಿ. ಅವನಿಗೆ ಸಮ್ಮತವಾಗಿದ್ದರೆ ಮಾತ್ರಹೋಗಿರಿ ಎಂದರು. ಅವರೆಲ್ಲರೂ ಕೃಷ್ಣಪರಮಾತ್ಮನ ಹತ್ತಿರ ಕೇಳಲು ಭಗವಂತನು 'ನಾನು ಮೊದಲೇ ಹೇಳಿದೆನು. ಸನ್ಯಾಸಿಯು ಯುವಕನಾಗಿದ್ದಾನೆ. ಹೆಣ್ಣುಮಕ್ಕಳು ಸಂಚಾರವಿರುವ ಸ್ಥಳದಲ್ಲಿ ಇಡುವುದು ಬೇಡವೆಂದು. ಆ ನನ್ನ ಮಾತು ನಡೆಯಲಿಲ್ಲ. ಸುಭದ್ರೆಯನ್ನೇ ಸೇವೆಗೆ ನಿಯಮಿಸಿದಿರಿ. ಈಗ ಕೇಳಿದರೆ ಏನು ಹೇಳಲಿ? ಅವನು ಅರ್ಜುನನೆಂದೂ ತಿಳಿದಿದೆ. ನೀವೀಗ ಅವನ ಹತ್ತಿರ ಯುದ್ಧಕ್ಕೆ ಹೋಗುವಿರಿ. ಅವನು ಲೋಕದಲ್ಲಿ ವೀರನೆಂದು ಪ್ರಸಿದ್ಧನಾಗಿರುವನು. ನಮಗೂ ಅವನಿಗೂ ಇಷ್ಟರವರೆಗೆ ಜಗಳವಾಗಲಿಲ್ಲ. ಈಗ ನೀವು ಯುದ್ಧಕ್ಕೆ ಹೋದರೆ ಸೋತುಹೋದರೆ ಅಪಕೀರ್ತಿಯು ಬರುವುದು. ಅರ್ಜುನನು ಸುಭದ್ರೆಗೆ ಹೇಳಿದ ವಗನೇ. ನಾವಾಗಿ ಕರೆದು ಅವನಿಗೆ ಮದುವೆ ಮಾಡಿಕೊಡಬೇಕಾಗಿತ್ತು. ಅವನಾಗಿ ಕರೆದುಕೊಂಡು ಹೋದನು. ಅದರಿಂದ ನಮಗೇನು ಹಾನಿಯಿದೆ? ಅಥವಾ ನೀವು ಹೋಗಿ ಅರ್ಜುನನ್ನು ಜಯಿಸಿ ಸುಭದ್ರೆಯನ್ನು ಕರಕೊಂಡು ಬರುತ್ತೀರಿ.[1] ಇನ್ನು ಮುಂದೆ ಒಬ್ಬನು ಅಪಹರಿಸಿಕೊಂಡು ಹೋದ ಕನ್ಯೆಗೆ ಯಾರು ಮದುವೆ ಮಾಡಿಕೊಳ್ಳಲಿಕ್ಕೆ ಬರುವನು? ಇದನ್ನೆಲ್ಲಾ ಯೋಚಿಸಿದರೆ ನೀವೀಗ ಯುದ್ಧಕ್ಕೆ ಹೋಗುವುದು ಉಚಿತವಲ್ಲವೆಂದು ತೋರುವುದು' ಎಂದು ಹೇಳಿದನು.

ಆಗ ಬಲರಾಮದೇವರು ಯುದ್ಧಕ್ಕೆ ಹೋಗಬೇಡಿರಿ. ಕೃಷ್ಣನ ಅಭಿಪ್ರಾಯವನ್ನು ಅನುಸರಿಸುವುದು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಕ್ಷೇಮಕ್ಕೆ ಕಾರಣವು' ಎಂದರು. ಆಮೇಲೆ ಯುದ್ಧಕ್ಕೆ ಹೋಗುವ ವರ್ತಮಾನವು ನಿಂತು ಹೋಯಿತು. ಅರ್ಜುನನು ಕ್ಷೇಮದಿಂದ ಇಂದ್ರಪ್ರಸ್ಥಕ್ಕೆ ಸುಭದ್ರೆಯನ್ನು ಕರೆದು ಕೊಂಡು ಹೋಗಿ ಸೇರಿದನು. ತರುವಾಯ ಕೃಷ್ಣ ಬಲರಾಮದೇವರು ಅಲ್ಲಿಗೆ ಹೋಗಿ ಬೇಕಾದ ರತ್ನವೇ ಮೊದಲಾದ ಪದಾರ್ಥಗಳನ್ನು ತೆಗೆದುಕೊಂಡು ಹೋಗಿ ಬಹುಮಾನಮಾಡಿ ಬಂದರು.

---

1. ಬಂದರೂ

ಬಲರಾಮದೇವರು ಒಂದು ದಿವಸದಲ್ಲಿ ಮಿತ್ರರನ್ನು ನೋಡಬೇಕೆಂಬ ಆಸೆಯಿಂದ ರಥದಲ್ಲಿ ಕೂತುಕೊಂಡು ನಂದಗೋಕುಲಕ್ಕೆ ಹೋದರು. ಬಹುದಿವಸದ ಮೇಲೆ ಬಂದು ಬಲರಾಮದೇವರನ್ನು ನೋಡಿ ಗೋಪಾಲರೂ ಗೋಪಿಯರೂ ಸಂತೋಷದಿಂದ ಆಲಿಂಗಿಸಿದರು. ವಯಸ್ಸಿನಿಂದ ದೊಡ್ಡವರಿಗೆ ಬಲರಾಮದೇವರು ನಮಸ್ಕರಿಸಿ ಆಶೀರ್ವಾದವನ್ನು ಪಡೆದರು. ಎಲ್ಲರೂ ಕುಶಲಪ್ರಶ್ನೆಯನ್ನು ಮಾಡಿಕೊಂಡರು. ಗೋಪಾಲರೂ ಗೋಪಿಯರೂ ಕೃಷ್ಣನ ವಿಷಯವನ್ನು ಪ್ರಶ್ನಿಸಿದರು. ಕೃಷ್ಣನನ್ನು ಸ್ಮರಿಸಿಕೊಂಡು ಅತ್ತರು. ಬಲರಾಮದೇವರು ಎಲ್ಲರಿಗೂ ಸಮಾಧಾನಪಡಿಸಿದರು. ಚೈತ್ರವೈಶಾಖ ಎರಡು ತಿಂಗಳುಗಳಲ್ಲಿ ಅಲ್ಲಿಯೇ ರಾತ್ರಿಕಾಲದಲ್ಲಿ ಗೋಪಸ್ತ್ರೀಯರಿಗೆ ಸಂತೋಷಪಡಿಸುತ್ತಾ ಇದ್ದರು. ಯಮುನಾತೀರದ ಉಪವನದಲ್ಲಿ ಗೋಪಸ್ತ್ರೀಯರೊಡನೆ ವಿಹಾರಮಾಡಿದರು.

ಆಗ ವರುಣದೇವರು ಕಳುಹಿಸಿದ ವಾರುಣಿಯೆಂಬ ಮದ್ಯವು ಮರವು ಪೊಂದುಗಳಿಂದ (ತೂತುಗಳಿಂದ) ಸುರಿಯಿತು. ಅದರ ಸುವಾಸನೆಯು ಗಾಳಿಯಿಂದ ಸರ್ವತ್ರ ಬಂದಿತು. ಅದನ್ನು ತಿಳಿದು ಬಲರಾಮದೇವರು ಗೋಪಸ್ತ್ರೀಯರೊಂದಿಗೆ ಅಲ್ಲಿಗೆ ಹೋಗಿ ಅದನ್ನು ಕುಡಿದರು. ಅಲಂಕೃತರಾದ ಬಲರಾಮದೇವರು ಸ್ತ್ರೀಯರೊಡನೆ ಸಂಚರಿಸುತ್ತಾ ಜಲಕ್ರೀಡೆಯನ್ನು ಮಾಡಬೇಕೆಂಬ ಬಯಕೆಯಿಂದ ತಾನಿರುವಲ್ಲಿಗೆ ಪ್ರವಾಹರೂಪದಿಂದ ಬರುವಂತೆ ಯಮುನೆಯನ್ನು ಕರೆದರು. ಆಗ ಯಮುನೆಯು ಇವರು ಮದ್ಯಪಾನದಿಂದ ಮತ್ತರಾಗಿರುವರೆಂದು ತಿಳಿದುಕೊಂಡು ಬರಲಿಲ್ಲ. ಇದರಿಂದ ಬಲರಾಮದೇವರು ಕೋಪಿಸಿಕೊಂಡು ತನ್ನ ಲಾಂಗಲವೆಂಬ (ನೇಗಿಲು) ಆಯುಧದ ತುದಿಯಿಂದ ಯಮುನೆಯನ್ನು ಸೆಳೆಯಲಿಕ್ಕೆ ಆರಂಭಿಸಿದರು 'ಪಾಪಿಷ್ಠಳೇ! ನಾನು ಕರೆದರೆ ನನ್ನನ್ನು ಅವಮಾನಮಾಡಿ ಹೋಗುವಿಯಾ? ನಾನು ಈ ಆಯುಧದ ಅಗ್ರಭಾಗದಿಂದ ಸಾವಿರಾರು ಚೂರಾಗಿ ಸೀಳಿಹಾಕುವೆನು' ಎಂದು ಬೆದರಿಸಿದರು. ಆಗ ಯಮುನೆಯು ಮೂರ್ತಿಮತ್ತಾಗಿ ಬಂದು ಬಲರಾಮದೇವರ ಕಾಲಿಗೆ ಬಿದ್ದಳು. 'ರಾಮ!ರಾಮ! ನಿಮ್ಮ ಮಹಿಮೆಯನ್ನು ತಿಳಿಯದೆ ಹೋದೆನು. ನೀವು ಒಂದು ಅಂಶದಿಂದ ಸಮಸ್ತಜಗತ್ತನ್ನೂ ಧರಿಸಿದವರು. ನಿಮ್ಮನ್ನೇ ಮರೆಹೊಂದಿರುವ ನನ್ನನ್ನು ಬಿಡಬೇಕು' ಎಂದು ಪ್ರಾರ್ಥಿಸಿಕೊಂಡಳು.

ತರುವಾಯ ಬಲರಾಮದೇವರು ಯಮುನೆಯನ್ನು ಬಿಟ್ಟುಬಿಟ್ಟರು. ಸ್ತ್ರೀಯರೊಡನೆ ಯಮುನಾಜಲದಲ್ಲಿ ಕ್ರೀಡೆಯನ್ನು ಮಾಡಿದರು. ಇಚ್ಛಾನುಸಾರವಾಗಿ ಕ್ರೀಡೆಯನ್ನು ಮಾಡಿ ಮೇಲೆ ಬರಲು ಯಮುನಾದೇವಿಯು ಬಲರಾಮದೇವರಿಗೆ

ನೀಲವಸ್ತ್ರಗಳನ್ನೂ ವಿಚಿತ್ರ ಆಭರಣಗಳನ್ನೂ ಕಾಂತಿಯುಳ್ಳ ಮಾಲೆಯನ್ನೂ ಕೊಟ್ಟರು. ಬಲರಾಮದೇವರು ಆ ನೀಲವಸ್ತ್ರವನ್ನು ಧರಿಸಿ ಆಭರಣಗಳನ್ನು ಧರಿಸಿ ಪ್ರಕಾಶಿಸಿದರು. ಈರೀತಿಯಾಗಿ ಅಲ್ಲಿಯ ಸ್ತ್ರೀ ಮಧುರಸ್ವಭಾವದಿಂದ ಸಂತೋಷದಿಂದ ಎರಡು ತಿಂಗಳನ್ನೂ ಒಂದು ರಾತ್ರಿಯಂತೆ ಕಳೆದರು. ಅನಂತರ ದಲ್ಲಿ ದ್ವಾರಕಾ ಪಟ್ಟಣಕ್ಕೆ ಬಂದರು.

ನರಕಾಸುರನಿಗೆ ಮಿತ್ರನಾದ ಸುಗ್ರೀವನಿಗೆ ಮಂತ್ರಿಯಾಗಿದ್ದ ಮೈಂದನ ತಮ್ಮನಾದ ವಿವಿದ ಎಂಬ ಕಪಿಯಿದ್ದನು. ಅವನು ತನ್ನ ಮಿತ್ರನಾದ ನರಕಾಸುರನನ್ನು ಕೊಂದದ್ದಕ್ಕಾಗಿ ಕೃಷ್ಣಪರಮಾತ್ಮನಿಗೆ ವಿರೋಧವನ್ನು ಮಾಡಲಿಕ್ಕೆ ಬಂದನು. ಮೈಂದವಿವಿದರು ಅಶ್ವಿನೀದೇವತೆಗಳ ಅವತಾರಭೂತರು. ಅವರು ರಾಮಾಯಣ ಕಾಲದಲ್ಲಿ ಇದ್ದವರು. ಪೂರ್ವದಲ್ಲಿ ದೇವತೆಗಳು ಅಮೃತ ಮಥನ ಕಾಲದಲ್ಲಿಯೂ ಇವರು ಇದ್ದರು. ದೇವತೆಗಳು ಅಮೃತಪಾನವಾದ ಮೇಲೆ ದೈತ್ಯರ ಹತ್ತಿರ ಯುದ್ಧಮಾಡುವಾಗ ಅಮೃತದ ಪಾತ್ರೆಯನ್ನು ಇವರ ಕೈಯಲ್ಲಿ ಕೊಟ್ಟಿದ್ದರು. ಆಗ ಇವರು ಬಲಾತ್ಕಾರದಿಂದ ಅಮೃತಪಾನವನ್ನು ಮಾಡಿದ್ದರು. ದೇವತೆಗಳಾದರೂ ಇವರು ದೇವಾಂಶರಾದ ಕಾರಣ ಅಮೃತಪಾನ ಮಾಡಿದ್ದನ್ನು ಉಪೇಕ್ಷಿಸಿದ್ದರು. ಆದರೂ ಬಲಾತ್ಕಾರದಿಂದ ಅಮೃತಪಾನ ಮಾಡಿದ್ದರಿಂದ ಅವರಿಗೆ ಅಸುರಾವೇಶವು ಬಂದುಬಿಟ್ಟಿತು. ಆದುದರಿಂದ ಅಸುರಾವೇಶವಿದ್ದ ಪ್ರಯುಕ್ತ ರಾಮದೇವರು ವೈಕುಂಠಲೋಕಕ್ಕೆ ಹೋಗುವಾಗ ಅವರ ಹಿಂದೆ ಹೋಗಲಿಲ್ಲ. ಅಮೃತಪಾನ ಮಾಡಿದ ಕಾರಣ ಸಾಯಲಿಲ್ಲ. ಅಸುರಾವೇಶವಿದ್ದ ಪ್ರಯುಕ್ತವೇ ನರಕಾಸುರನಿಗೆ ಮಿತ್ರರಾಗಿದ್ದರು. ಇದರಿಂದ ಅವರಿಬ್ಬರೂ ನರಕಾಸುರನ ಮರಣದ ಅನಂತರದಲ್ಲಿ ಆನರ್ತದೇಶಕ್ಕೇ ಬಂದು ಉಪದ್ರಮಾಡಲಿಕ್ಕೆ ಆರಂಭಿಸಿದರು.

ವಿವಿದನು ಬಂದು ಊರಿಗೆ ಬೆಂಕಿಕೊಟ್ಟನು. ಪರ್ವತವನ್ನು ಕಿತ್ತು ಉರುಳಿಸಿ ಊರನ್ನು ಪುಡಿಮಾಡಿದನು. ಹತ್ತುಸಾವಿರ ಆನೆಯ ಬಲವುಳ್ಳ ವಿವಿದನು ಸಮುದ್ರ ದಲ್ಲಿ ನಿಂತು ನೀರನ್ನು ಎರಚಿ ತೀರದ ಊರನ್ನೆಲ್ಲಾ ಮುಳುಗಿಸುವನು. ಆಶ್ರಮಗಳಿಗೆ ಹೋಗಿ ಮರಗಳನ್ನು ಮುರಿದು ಮಲಮೂತ್ರ ವಿಸರ್ಜನೆ ಮಾಡಿ ಆಶ್ರಮಗಳನ್ನು ಕೆಡಿಸಿದನು. ಹೆಂಗಸರನ್ನೂ ಗಂಡಸರನ್ನೂ ಎಳೆದುಕೊಂಡು ಹೋಗಿ ಪರ್ವತದ ಗುಹೆಯೊಳಗೆ ಇಟ್ಟು ಗುಹಾದ್ವಾರವನ್ನು ಕಲ್ಲಿನಿಂದ ಮುಚ್ಚುವನು. ಕುಲಸ್ತ್ರೀಯರನ್ನು ಕೆಡಿಸುವನು. ಹೀಗೆಲ್ಲಾ ಅನ್ಯಾಯವನ್ನು ಮಾಡಿದನು. ಅವನ ಅಣ್ಣನಾದ ಮೈಂದನೂ ಹಾಗೆಯೇ ಮಾಡಿದನು.

ತರುವಾಯ ಅವರಿಬ್ಬರು ಅಮೃತಪಾನ ಮಾಡಿದ್ದರೂ ಅವರನ್ನು ಸಂಹರಿಸುವಂತೆ ಬಲರಾಮದೇವರಿಗೆ ಕೃಷ್ಣಪರಮಾತ್ಮನು ಅನುಗ್ರಹಮಾಡಿ ಕಳುಹಿಸಿದನು. ಒಂದು ದಿನದಲ್ಲಿ ಬಲರಾಮದೇವರು ಮೈಂದನನ್ನು ಸಂಹರಿಸಿದರು. ಮತ್ತೊಂದು ದಿನದಲ್ಲಿ ವಿವಿದನು ಸುಂದರವಾದ ಹಾಡನ್ನು ಕೇಳಿ ರೈವತಪರ್ವತಕ್ಕೆ ಹೋದನು. ಅಲ್ಲಿ ಬಲರಾಮದೇವರು ಹೂವಿನಮಾಲೆಯನ್ನು ಹಾಕಿಕೊಂಡು ಮದ್ಯಪಾನ ಮಾಡಿ ಹೆಂಗಸರ ಮಧ್ಯದಲ್ಲಿ ಹಾಡುಹೇಳುತ್ತಾ ಇರುವುದನ್ನು ನೋಡಿದನು. ದುಷ್ಟನಾದ ಆ ಕಪಿಯು ಒಂದು ಮರವನ್ನು ಹತ್ತಿ ತಾನು ಬಂದದ್ದನ್ನು ತಿಳಿಸುವುದಕ್ಕಾಗಿ ಮರವನ್ನು ಆಡಿಸಿ ಕಲಕಲ ಶಬ್ದವನ್ನು ಮಾಡಿದನು. ಕಪಿಯ ಧೈರ್ಯವನ್ನು ನೋಡಿ ಬಲರಾಮದೇವರ ಸ್ತ್ರೀಯರು ನೆಗುವವರಾದರು. ಆಗ ಬಲರಾಮದೇವರು ನೋಡುತ್ತಿರುವಂತೆ ವಿವಿದನು ಅವರ ಎದುರಲ್ಲಿ ಹೋಗಿ ನಿಲ್ಲುವುದು ಹುಬ್ಬನ್ನು ಹಾರಿಸುವುದು ಪೃಷ್ಠಭಾಗವನ್ನು ತೋರಿಸುವುದು ಹೀಗೆಲ್ಲಾ ಅವಮಾನ ಮಾಡಿದನು. ಅದನ್ನು ನೋಡಿ ಬಲರಾಮದೇವರು ಕೋಪದಿಂದ ಅವನ ಮೇಲೆ ಒಂದು ಕಲ್ಲನ್ನು ಬಿಸಾಡಿದನು. ಅವನು ಆ ಕಲ್ಲನ್ನು ತಪ್ಪಿಸಿಕೊಂಡು ಮದ್ಯದ ಪಾತ್ರೆಯನ್ನೇ ಸೆಳೆದುಕೊಂಡು ಬಂದು ಬಲರಾಮದೇವರನ್ನೇ ತಿರಸ್ಕರಿಸಿದನು. ಮದ್ಯದ ಪಾತ್ರೆಯನ್ನೇ ಒಡೆದು ಹಾಕಿ ಬಲರಾಮದೇವರನ್ನು ತುಂಬಾ ಅವಮಾನಮಾಡಿದನು. ಬಲರಾಮದೇವರು ಅವನ ಅವಿನಯವನ್ನೂ ಅವನು ದೇಶಗಳನ್ನು ಹಾಳು ಮಾಡಿದ್ದನ್ನೂ ನೋಡಿ ಕೋಪದಿಂದ ಮುಸಲಾಯುಧವನ್ನು (ಒನಕೆಯನ್ನೂ) ಹಲಾಯುಧವನ್ನೂ (ನೇಗಿಲನ್ನೂ) ತೆಗೆದರೂ ಬಲಿಷ್ಠನಾದ ವಿವಿದನೂ ದೊಡ್ಡ ಒಂದು ಪರ್ವತವನ್ನು ತೆಗೆದು ಬಲರಾಮದೇವರ ತಲೆಯ ಮೇಲೆ ಬಡೆದನು. ತಲೆಯ ಮೇಲೆ ಬರುವ ಪರ್ವತವನ್ನು ತಡೆದು ಮುಸಲದಿಂದ ವಿವಿದನನ್ನು ಬಡಿದರು. ಅವನ ತಲೆಯಿಂದ ರಕ್ತವು ಸುರಿಯಿತು. ಅದನ್ನು ಲಕ್ಷ್ಯಮಾಡದೆ ಒಂದು ದೊಡ್ಡ ಮರವನ್ನು ಮುರಿದು ಅದರ ಎಲೆಗಳನ್ನೆಲ್ಲಾ ಉದುರಿಸಿ ಮರದಿಂದ ಬಲರಾಮದೇವರನ್ನು ಬಡೆದನು. ಬಲರಾಮದೇವರು ಆ ಮರವನ್ನು ನೂರಾಗಿ ಚೂರು ಮಾಡಿದರು.

ಈರೀತಿಯಾಗಿ ಎಲ್ಲಾ ಮರಗಳನ್ನೂ ಕಿತ್ತಿಕಿತ್ತಿ ಬಲರಾಮದೇವರ ಮೇಲೆ ಹಾಕಿದನು. ಅವರು ಅವುಗಳನ್ನು ಚೂರು ಚೂರು ಮಾಡಿದರು. ತರುವಾಯ ಬಲರಾಮದೇವರ ಬಳಿಗೆ ಬಂದು ತನ್ನ ಎರಡು ಕೈಗಳಿಂದ ಬಲರಾಮದೇವರ ಎದೆಗೆ ಗುದ್ದಿದನು. ಆಗ ಬಲರಾಮದೇವರೂ ಹಲಮುಸಲಗಳನ್ನು ಕೆಳಗೆ ಇಟ್ಟು ಮುಷ್ಟಿಯಿಂದ ಅವನ ಕುತ್ತಿಗೆ ಎದೆಗಳ ಸಂದಿಗೆ ಬಡಿದರು. ಅವನು ಹಾಗೇ ರಕ್ತವನ್ನು

ಕಾರುತ್ತಾ ಕೆಳಗೆ ಬಿದ್ದು ಪ್ರಾಣವನ್ನು ಬಿಟ್ಟನು. ಆಕಾಶದಿಂದ ದೇವತೆಗಳ ಋಷಿಗಳ ಜಯ ಜಯ ಎಂಬ ಶಬ್ದವೂ ಸಾಧು ಸಾಧು ಎಂಬ ಶಬ್ದವೂ ಉಂಟಾಯಿತು. ಹೂವಿನಮಳೆಯೂ ಸುರಿಯಿತು. ಈರೀತಿಯಾಗಿ ಲೋಕಕ್ಕೆ ಉಪದ್ರವನ್ನು ಉಂಟು ಮಾಡುತ್ತಿದ್ದ ವಿವಿದನನ್ನು ಸಂಹರಿಸಿ ಬಲರಾಮದೇವರು ಸ್ತ್ರೀಯರಿಂದ ಕೂಡಿ ಕೊಂಡು ಪುರವನನು ಪ್ರವೇಶಿಸಿದರು.

ದುರ್ಯೋಧನನ ಮಗಳಾದ ಲಕ್ಷಣೆಗೆ ಸ್ವಯಂವರವಾಯಿತು. ಅಲ್ಲಿ ಸ್ವಯಂವರಮಂಟಪದಲ್ಲಿ ಇದ್ದ ಲಕ್ಷಣೆಯನ್ನು ಜಾಂಬವತೀದೇವಿಯ ಮಗನಾದ ಸಾಂಬನು ಅಪಹರಿಸಿದನು. ಆಗ ಕೌರವರೆಲ್ಲರೂ ಕೋಪಿಸಿಕೊಂಡು ಈ ಅವಿನಯ ಶಾಲಿಯಾದ ಬಾಲಕನು ನಮ್ಮನ್ನೆಲ್ಲಾ ತಿರಸ್ಕರಿಸಿ ಸ್ವಯಂವರದಲ್ಲಿದ್ದ ಕನ್ಯೆಯನ್ನು ಬಲಾತ್ಕಾರದಿಂದ ಅಪಹರಿಸಿದನು. ಇವನನ್ನು ಕಟ್ಟಿಹಾಕಿರಿ. ಯಾದವರು ಏನು ಮಾಡಲಿಕ್ಕೆ ಆಗುವುದು? ಅವರು ನಮ್ಮ ಅನುಗ್ರಹದಿಂದ ಭೂಮಿಯನ್ನು ಆಳುತ್ತಿರುವರು. ನಾವು ಬಾಲಕನನ್ನು ಬಂಧನದಲ್ಲಿ ಇಟ್ಟಿದ್ದನ್ನು ತಿಳಿದುಕೊಂಡು ಯಾದವರು ಇಲ್ಲಿಗೆ ಬಂದರೆ ಹಲ್ಲು ತೆಗೆದಂತೆ ಹಾವಿನಂತೆ ದರ್ಪವನ್ನು ಕಳೆದುಕೊಂಡು ಎಂದರೆ ಅವಮಾನವನ್ನು ಹೊಂದಿಹೋಗುವರು. ಎಂದು ಕರ್ಣನ ಮುಖವನ್ನು ನೋಡಿಕೊಂಡು ಭೂರಿಶ್ರವನೂ ಸುಯೋಧನನೂ ದುಃಶಾಸನ ಶಕುನಿಯರೂ ಹೇಳಿದರು. ಇವರು ಗಾಂಧಾರಿವಿದುರರ ಮಾತನ್ನು ಕೇಳದೆ ಇತರ ದೊಡ್ಡವರ ಹತ್ತಿರ ಸೇರದೆ ಸಾಂಬನನ್ನು ಬಂಧಿಸಲಿಕ್ಕೆ ಆರಂಭಿಸಿದರು. ಆಗ ಸಾಂಬನನ್ನು ತನ್ನನ್ನು ಅಟ್ಟಿಸಿಕೊಂಡು ಬರುತ್ತಿರುವ ದುರ್ಯೋಧನಾದಿಗಳನ್ನು ನೋಡಿ ಸಿಂಹದಂತೆ ಧನುಸ್ಸನ್ನು ಹಿಡಿದುಕೊಂಡು ಒಬ್ಬನೇ ನಿಂತುಕೊಂಡನು. ಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ಕೌರವರೆಲ್ಲರೂ ಸೇರಿ ರಥವನ್ನು ಕುದುರೆಗಳನ್ನೂ ಸಂಹರಿಸಿ ಕೈಯಲ್ಲಿದ್ದ ಧನುಸ್ಸನ್ನೂ ಮುರಿದು ಆ ಸಾಂಬನನ್ನು ಲಕ್ಷಣೆಯನ್ನೂ ಕರೆದುಕೊಂಡು ಜಯಶೀಲರಾಗಿ ತನ್ನ ಪುರಕ್ಕೆ ತಿರುಗಿದರು.

ಈ ವಿಷಯವನ್ನು ನಾರದರು ದ್ವಾರಕಾಪುರಕ್ಕೆ ಹೋಗಿ ತಿಳಿಸಿದರು. ಅದನ್ನು ಕೇಳಿ ಉಗ್ರಸೇನನಿಂದ ಪ್ರೇರಿತರಾಗಿ ಯಾದವರೆಲ್ಲರೂ ಯುದ್ಧಕ್ಕೆ ಸಿದ್ಧರಾದರು. ಆಗ ಬಲರಾಮದೇವರು ಕೋಪಿಸಿಕೊಂಡಿರುವ ಯಾದವ ಶ್ರೇಷ್ಠರನ್ನೆಲ್ಲಾ ಸಮಾಧಾನ ಪಡಿಸಿದರು. ಕೌರವರೊಡನೆ ಜಗಳವನ್ನು ಇಚ್ಛಿಸಲಿಲ್ಲ. ಅವರು ಕುಲವೃದ್ಧರಾದ ಬ್ರಾಹ್ಮಣರಿಂದ ಸಹಿತರಾಗಿ ಸೂರ್ಯನಂತೆ ಪ್ರಕಾಶಮಾನವಾದ ರಥದಲ್ಲಿ ಕೂತು ಕೊಂಡು ಹಸ್ತಿನಾವತಿಗೆ ಹೋಗಿ ಹೊರಗಿನ ಉದ್ಯಾನದಲ್ಲಿ ಇಳಿದು ಧೃತರಾಷ್ಟ

ನಿದ್ದಲ್ಲಿಗೆ ರಾಜಿಮಾಡುವುದಕ್ಕಾಗಿ ಉದ್ಧವನನ್ನು ಕಳುಹಿಸಿದರು. ಉದ್ಧವನು ಹೋಗಿ ಧೃತರಾಷ್ಟ್ರ ಭೀಷ್ಮ ದ್ರೋಣ ಬಾಹ್ಲಿಕ ದುರ್ಯೋಧನರಿಗೆ ನಮಸ್ಕರಿಸಿ ಊರಹೊರಗೆ ತೋಟದಲ್ಲಿ ಬಲರಾಮದೇವರು ಬಂದಿರುವರೆಂದು ತಿಳಿಸಿದನು. ಅದನ್ನು ಕೇಳಿ ಅವರೆಲ್ಲರೂ ತಮಗೆ ಪರಮಮಿತ್ರರಾದ ಬಲರಾಮದೇವರು ಬಂದಿರುವರೆಂದು ಅತ್ಯಂತ ಸಂತೋಷವುಳ್ಳವರಾಗಿ ಮಂಗಳವಸ್ತುವನ್ನು ಕೈಯಲ್ಲಿ ಹಿಡಿದುಕೊಂಡು ಬಲರಾಮದೇವರಿದ್ದಲ್ಲಿಗೆ ಬಂದು ಶಿರಸಾ ನಮಸ್ಕರಿಸಿದರು. ಸತ್ಕರಿಸಿದರು. ಪರಸ್ಪರ ಕುಶಲ ಪ್ರಶ್ನೆಯು ಮುಗಿದಮೇಲೆ ಬಲರಾಮದೇವರು ''ಮಹಾರಾಜರಾದ ಉಗ್ರಸೇನಪ್ರಭುಗಳು ನಿಮಗೆ ಆಜ್ಞಾಮಾಡಿರುವುದನ್ನು ಮನಸ್ಸಿಟ್ಟು ಕೇಳಿ, ಬೇಗನೆ ಹಾಗೆಯೇ ಮಾಡಿರಿ. 'ನೀವು ಬಹುಜನರು ಸೇರಿ ಧಾರ್ಮಿಕನಾದ ನಮ್ಮ ಹುಡುಗನನ್ನು ಬಂಧಿಸಿದ್ದೀರಿ. ಅದನ್ನು ನೀವು ಬಂಧುಗಳು ಎಂಬ ಅಭಿಪ್ರಾಯದಿಂದ ಕ್ಷಮಿಸಿದ್ದೇನೆ' ಎಂದು ಹೇಳಿಕಳುಹಿಸಿರುವರು'' ಎಂದು ಧೈರ್ಯದಿಂದ ಹೇಳಿದರು. ಬಲರಾಮದೇವರು ತನ್ನ ವೀರ್ಯಶೌರ್ಯ ಬಲ ಇತ್ಯಾದಿಗಳಿಗೆ ಸರಿಯಾಗಿ ಹೇಳಿದ ಮಾತನ್ನು ಕೇಳಿ ಕೌರವರು ಬಲರಾಮದೇವರು ಕೇಳುವಂತೆ ''ಆಹಾ! ಏನಿದು ವಿಚಿತ್ರವಾದ ಕಾಲಗತಿಯು. ಕಾಲಿನ ಮೆಟ್ಟು ತಲೆಯ ಮೇಲೆ ಹತ್ತುತ್ತದಲ್ಲಾ! ಈ ಯಾದವರು ನಮ್ಮ ಬಂಧುಗಳು ಎಂದು ಅವರೊಡನೆ ಕೂತುಕೊಳ್ಳುವುದು ಮಲಗುವುದು ಇತ್ಯಾದಿಗಳನ್ನು ಮಾಡುತ್ತಾ ಇವರೂ ರಾಜರಾಗಿರಲಿ ಎಂದು ನಾವಾಗಿ ರಾಜಾಸನವನ್ನು ಬಿಟ್ಟುಕೊಟ್ಟಿದ್ದೇವೆ. ಛತ್ರಚಾಮರ ಕಿರೀಟ ಸಿಂಹಾಸನ ಇವುಗಳನ್ನೆಲ್ಲಾ ನಾವು ಉಪೇಕ್ಷೆಯನ್ನು ಆಡಿ 'ಅಯ್ಯೋ ಪಾಪ ಅನುಭವಿಸಲಿ' ಎಂದು ನಾವು ಬಿಟ್ಟಿರುವ ಪ್ರಯುಕ್ತ ಇವರು ಅನುಭವಿಸುತ್ತಾ ಇದ್ದಾರೆ. ಇವುಗಳನ್ನೆಲ್ಲಾ ಕೊಟ್ಟಿರುವ ನಮಗೇ ಎದುರು ನಿಂತಿರುವ ಇನ್ನು ಇವುಗಳನ್ನು ಬಿಡಬಾರದು. ಹಾವುಗಳಿಗೆ ಹಾಲೆರೆದರೆ ಹಾಲು ಹಾಕಿದವನನ್ನೇ ಕಚ್ಚುವಂತೆ ಮಾಡಿದರು. ನಮ್ಮ ಅನುಗ್ರಹದಿಂದ ಬದುಕಿಬಂದವರು ನಮಗೇನೇ ಆಜ್ಞಾಪಿಸು ತ್ತಾರಂತೆ. ಸಾಕ್ಷಾತ್ ಇಂದ್ರದೇವರೇ ಆಗಲಿ ನಾವು ಕೊಡದೆ ಇದ್ದದ್ದನ್ನು ಹೇಗೆ ಹೊಂದುವರು'' ಎಂದು ಹೇಳುತ್ತಾ ತಮ್ಮ ಊರ ಒಳಗೆ ಹೊರಟೇ ಹೋದರು.

ಕೌರವರ ದುಷ್ಟಸ್ವಭಾವವನ್ನೂ ಕೆಟ್ಟಮಾತನ್ನೂ ತಿಳಿದು ಬಲರಾಮದೇವರು ಕೋಪಪರವಶರಾದರು. ಅವರನ್ನು ಒಬ್ಬರೂ ನೋಡಲಾಗಲಿಲ್ಲ. ಅಷ್ಟು ಭಯಂಕರ ರಾದರು. ನಗುತ್ತಾ ಹೇಳಿದರು 'ಅಹಂಕಾರಿಗಳು ಅಯೋಗ್ಯರು ಶಾಂತಿಯನ್ನು ಇಚ್ಛಿಸುವುದಿಲ್ಲ. ಪಶುಗಳಿಗೆ ಕೋಲಿನ ಪೆಟ್ಟಿನಂತೆ ಅವರಿಗೆ ಪೆಟ್ಟೇ ಬೇಕಾಗಿದೆ. ನಾನು

ಕೋಪಿಸಿಕೊಂಡ ಯಾದವರನ್ನೂ ಕೃಷ್ಣನನ್ನು ಮೆಲ್ಲನೆ ಸಮಾಧಾನಪಡಿಸಿ ಇವರ ಹತ್ತಿರ ರಾಜಿ ಮಾಡುವ ಎಂದು ಬಂದೆನು. ಈ ದುಷ್ಟರು ಜಗಳಪ್ರಿಯರು ನನ್ನನ್ನೇ ಅವಮಾನಮಾಡಿ ಕೆಟ್ಟ ಮಾತುಗಳನ್ನೆಲ್ಲಾ ಆಡಿದರು. ಉಗ್ರಸೇನನು ಮಹಾರಾಜ ನಾಗದೇ ಹೋದನೆ? ಅವನ ಆಜ್ಞೆಯನ್ನು ಶ್ರೀಕೃಷ್ಣನಿಗಾಗಿ ಇಂದ್ರಾದಿದೇವತೆಗಳೂ ಸ್ವೀಕರಿಸುವರು. ಯಾವಾತನಿಗೆ ದೇವಲೋಕದ ಸುಧರ್ಮಾ ಎಂಬ ಸಭೆಯಿಂದ ಪಾರಿಜಾತದ ಮರವಿದೆ. ಅಂತಹವನು ಸಿಂಹಾಸನದಲ್ಲಿ ಕೂತುಕೊಳ್ಳಲು ಅರ್ಹ ನಾಗದೇ ಹೋದನೇ? 'ಯಾವಾತನ ಪಾದಯುಗಲವನ್ನು ಸಾಕ್ಷಾತ್ ರಮಾದೇವಿ ಯರು ಸೇವಿಸುವರೋ ಅಂತಹ ಕೃಷ್ಣನಿಗೂ ಛತ್ರಚಾಮರಾದಿ ರಾಜಚಿಹ್ನೆಗಳನ್ನು ಇಟ್ಟುಕ್ಕೊಳ್ಳಲಿಕ್ಕೆ ಯೋಗ್ಯತೆಯಿಲ್ಲದೆ ಹೋಯಿತೇ? ಬ್ರಹ್ಮರುದ್ರಾದಿ ದೇವತೆ ಗಳಿಂದಲೂ ವಂದ್ಯನಾದ ಕೃಷ್ಣಪರಮಾತ್ಮನಿಗೆ ಸಿಂಹಾಸನವೆಲ್ಲಿಂದ ಬರಬೇಕಲ್ಲವೇ? ಯಾದವರೆಲ್ಲರೂ ಕೌರವರು ಕೊಟ್ಟ ಭೂಮಿಯನ್ನು ಅನುಭವಿಸುತ್ತಾ ಇರುವು ದಲ್ಲವೇ? ನಾವೆಲ್ಲರೂ ಕಾಲಿನ ಮೆಟ್ಟಾದವೇ? ಕೌರವರು ಕಿರೀಟವನ್ನು ಧರಿಸುವ ತಲೆಯಾಗಿ ಹೋದರೇ? ಐಶ್ವರ್ಯಮತ್ತರಾದ ಹುಚ್ಚರಂತೆ ಇರುವ ಕ್ರೂರವಾದ ಮಾತುಗಳನ್ನು ಶಿಕ್ಷಿಸುವ ಸಾಮರ್ಥ್ಯವುಳ್ಳ ಯಾರು ಸಹಿಸುವನು? ಈಗಲೇ ಭೂಮಿಯನ್ನು ಕೌರವರಿಂದ ರಹಿತವನ್ನಾಗ ಮಾಡುವೆನು' ಎಂದು ಹೇಳುತ್ತಾ ಮೂರು ಲೋಕಗಳನ್ನೂ ಸುಡುವಂತೆ ಹಲವೆಂಬ ಆಯುಧವನ್ನು ಹಿಡಿದುಕೊಂಡು ಎದ್ದರು. ತನ್ನ ಲಾಂಗಲದ ಅಗ್ರಭಾಗದಿಂದ ಹಸ್ತಿನಾವತಿಯನ್ನು ಹಿಡಿದು ಗಂಗೆಗೆ ಎಳೆದು ಹಾಕುವೆನೆಂದು ಎಳೆದರು.

ಆಗ ಹಸ್ತಿನಾವತಿಯು ದೋಣಿಯು ನೀರಿನಲ್ಲಿ ನಡುಗುವಂತೆ ನಡುಗಿತು. ಬಲರಾಮದೇವರು ಹಸ್ತಿನಾವತಿಯನ್ನು ಗಂಗೆಗೆ ಎಳೆಯುತ್ತಿರುವುದನ್ನು ನೋಡಿ ಕೌರವರು ಭಯವುಳ್ಳವರಾಗಿ [1]ಬದುಕಿರುವ ಆಸೆಯಿಂದ ಕುಟುಂಬ ಸಹಿತರಾಗಿ ಬಲರಾಮದೇವರನ್ನೇ ಮರೆಹೊಂದಿದರು. ಲಕ್ಷಣೆಯಿಂದ ಸಹಿತನಾದ ಸಾಂಬನನ್ನು ಮುಂದೆ ಮಾಡಿಕೊಂಡು ಬಂದು ಕೈಮುಗಿದುಕೊಂಡು 'ರಾಮ! ರಾಮ! ನಿಮ್ಮ ಪ್ರಭಾವವನ್ನು ನಾವು ತಿಳಿಯದೆ ಹೋದೆವು. ಮೂಢರಾದ ಕುಟುಂಬಿಗಳಾದ ನಮ್ಮನ್ನು ಕ್ಷಮಿಸಬೇಕು. ಎಲ್ಲ ಲೋಕಗಳೂ ನಿಮ್ಮ ಅಧೀನಗಳು. ಸಹಸ್ರ ಶಿರಸ್ಸುಳ್ಳ ಶೇಷದೇವರಾದ ನೀವು ಒಂದು ತಲೆಯಲ್ಲಿ ಸಮಸ್ತಲೋಕಗಳನ್ನೂ ಧರಿಸಿರುವಿರಿ. ನಿಮ್ಮ ಕೋಪವು ಜನರ ಶಿಕ್ಷೆಗೋಸ್ಕರವಲ್ಲದೆ ದ್ವೇಷದಿಂದಲೋ ಮಾತ್ಸರ್ಯ

1. ಬದುಕುವ

ದಿಂದಲೋ ಅಲ್ಲ. ನಿಮಗೆ ನಮಸ್ಕಾರವು. ನಿಮ್ಮನ್ನು ನಾವು ಮರೆಹೊಂದಿರುವೆವು' ಎಂದು ಸ್ತೋತ್ರಮಾಡಿದರು.

ಈರೀತಿಯಾದ ಭಯಪಟ್ಟು ಇರುವ ನಡುಗುವ ಊರುಉಳ್ಳ ಅವರ ಪ್ರಾರ್ಥನೆಯನ್ನು ಕೇಳಿ ಬಲರಾಮದೇವರು ಭಯಪಡಬೇಡಿರಿ ಎಂದು ಹೇಳಿ ಅಭಯಪ್ರದಾನ ಮಾಡಿದರು. ದುರ್ಯೋಧನನು ಮಗಳ ಮೇಲಿನ ಪ್ರೇಮದಿಂದ ಇಪ್ಪತ್ತುಸಾವಿರ ಯೌವನವುಳ್ಳ ಆನೆಗಳನ್ನು, ಲಕ್ಷ ಕುದುರೆಗಳನ್ನೂ, ಆರುಸಾವಿರ ಬಂಗಾರದ ಸೂರ್ಯನಂತೆ ತೇಜಸ್ಸುಳ್ಳ ರಥಗಳನ್ನೂ, ಬಂಗಾರದ ಸರವನ್ನು, ಹಾಕಿಕೊಂಡಿರುವ ಸಾವಿರದಾಸಿಯರನ್ನೂ, ಮಗಳಿಗ ಬಳುವಳಿಯನ್ನಾಗಿ (ಸ್ತ್ರೀಧನ) ಕೊಟ್ಟನು. ಬಲರಾಮದೇವರು ಅದನ್ನೆಲ್ಲಾ ಸ್ವೀಕರಿಸಿ ಮಗನನ್ನೂ ಸೊಸೆಯನ್ನೂ ಕರೆದುಕೊಂಡು ಮಿತ್ರರಿಂದ ನಮಸ್ಕೃತರಾಗಿ ದ್ವಾರಕಾಪಟ್ಟಣಕ್ಕೆ ಬಂದು ಸಭೆಯಲ್ಲಿ ತಾನು ಕೌರವರ ವಿಷಯವಾಗಿ ಮಾಡಿದ ವ್ಯಾಪಾರವನ್ನೆಲ್ಲಾ ಹೇಳಿದರು. ಈಗಲೂ ಕೂಡ ಹಸ್ತಿನಾವತಿಯು ಗಂಗೆಯ ದಕ್ಷಿಣದಲ್ಲಿ ಸ್ವಲ್ಪ ಎತ್ತರವಾಗಿದ್ದುಕೊಂಡು ಬಲರಾಮದೇವರ ಪರಾಕ್ರಮವನ್ನು ಸೂಚಿಸುತ್ತದೆ.

ತರುವಾಯ ಭಾರತಯುದ್ಧದ ಸಮಯದಲ್ಲಿ ದುರ್ಯೋಧನನು ಬಲರಾಮ ದೇವರ ಸಮೀಪಕ್ಕೆ ತನಗೆ ಯುದ್ಧಕ್ಕೆ ಸಹಾಯಮಾಡಬೇಕೆಂದು ಕೇಳಲಿಕ್ಕೆ ಹೋದನು. ಅದಕ್ಕೆ ಬಲರಾಮದೇವರು 'ದುರ್ಯೋನ! ನಾನು ಉಪಪ್ಲಾವ್ಯ ನಗರದಲ್ಲಿ ಸಭೆಯಲ್ಲಿ ಕೃಷ್ಣನಿರುವಾಗ ನಿನ್ನ ಪಕ್ಷವಾಗಿ ಮಾತನಾಡಿದೆನು. ಆಗ ನನ್ನ ಮಾತನ್ನು ಸಾತ್ಯಕಿಯು ಖಂಡಿಸಿದನು. ಅದನ್ನು ಕೇಳಿ ಕೃಷ್ಣನು ಒಂದು ಮಾತನ್ನೂ ಆಡಲಿಲ್ಲ. ಆದುದರಿಂದ ನಿನಗೆ ನಾನು ಸಹಾಯ ಮಾಡುವುದು ಕೃಷ್ಣನಿಗೆ ಸಮ್ಮತವಲ್ಲ. ಕೃಷ್ಣನಿಗೆ ಸಮ್ಮತವಲ್ಲದ ಕಾರ್ಯವನ್ನು ನಾನು ಮಾಡಲಾರೆನು. ನಿನಗೇನು? ವೀರಕ್ಷತ್ರಿಯನಾಗಿದ್ದಿ. ಧರ್ಮಯುದ್ಧವನ್ನು ಮಾಡು' ಎಂದು ಹೇಳಿ ಕಳುಹಿಸಿದರು.

ತರುವಾಯ ಅವರು ಉದಾಸೀನರಾಗಿ ತೀರ್ಥಯಾತ್ರೆಯನ್ನು ಮಾಡುವ ನಿಮಿತ್ತವನ್ನು ಮಾಡಿಕೊಂಡು ಹೊರಟುಹೋದರು. ಪ್ರಭಾಸಕ್ಕೆ ಹೋಗಿ ಸ್ನಾನಮಾಡಿ ತರ್ಪಣಬಿಟ್ಟು ಬ್ರಾಹ್ಮಣರಿಂದ ಕೂಡಿಕೊಂಡು ಸರಸ್ವತೀ ನದಿಗೆ ಹೋದನು. ಪೃಥೂದಕ ಬಿಂದುಸರ ತ್ರಿತಕೂಪ ಸುದರ್ಶನ ವಿಶಾಲಬ್ರಹ್ಮತೀರ್ಥ ಚಕ್ರತೀರ್ಥ ಪ್ರಾಚೀಸರಸ್ವತೀ ಯಮುನಾ ಇತ್ಯಾದಿ ನದಿಗಳಿಗೆ ಹೋಗಿ ಗಂಗಾಸ್ನಾನವನ್ನು ಮಾಡಿ ನೈಮಿಷಾರಣ್ಯಕ್ಕೆ ಹೋದರು. ಅಲ್ಲಿ ಮುನಿಗಳೆಲ್ಲರೂ ಸತ್ರಯಾಗವನ್ನು ಮಾಡುತ್ತಾ

ಇದ್ದರು. ಋಷಿಗಳೆಲ್ಲರೂ ಬಲರಾಮದೇವರನ್ನು ನೋಡಿ ಸ್ತೋತ್ರಮಾಡಿ ಎದ್ದುನಿಂತು ನಮಸ್ಕರಿಸಿದರು. ಬಲರಾಮದೇವರು ಎಲ್ಲರಿಂದಲೂ ಸತ್ಕೃತರಾಗಿ ಪರಿವಾರ ಸಹಿತ ವಾಗಿ ಕೂತುಕೊಂಡರು. ತಾನು ಬಂದರೂ ಎದ್ದು ನಿಲ್ಲದೆ ಕೈಯನ್ನೂ ಮುಗಿಯದೆ ಎಲ್ಲ ಬ್ರಾಹ್ಮಣರ ಎದುರಲ್ಲಿ ಎತ್ತರವಾದ ಆಸನದಲ್ಲಿ ಕೂತುಕೊಂಡು ಇರುವ ಸೂತಜಾತಿಯವರಾದ ವೇದವ್ಯಾಸದೇವರ ಶಿಷ್ಯರಾದ ರೋಮಪರ್ಷಣರನ್ನು ನೋಡಿದರು. ಬಲರಾಮದೇವರಿಗೆ ಅವರನ್ನು ನೋಡಿ ಕೋಪವುಂಟಾಯಿತು. ಸಂಕರ ಜಾತಿಯವನಾದ ಇವನು ಬ್ರಾಹ್ಮಣರಿಗಿಂತ ಎತ್ತರ ಸ್ಥಳದಲ್ಲಿ ಏಕೆ ಕೂತಿರುವನು? ನಮಗಿಂತಲೂ ಮೇಲೆ ಕೂತಿರುವನು. ದುರಹಂಕಾರಿಯಾಗಿರು ವನು. ಸಂಹಾರಕ್ಕೆ ಅರ್ಹನಾಗಿರುವನು. ಪೂಜ್ಯರಾದ ವೇದವ್ಯಾಸದೇವರ ಶಿಷ್ಯ ನಾಗಿದ್ದು ಬಹುಶಾಸ್ತ್ರಗಳನ್ನು ಅಧ್ಯಯನಮಾಡಿ ಇತಿಹಾಸ ಪುರಾಣ ಧರ್ಮಶಾಸ್ತ್ರ ಗಳನ್ನೆಲ್ಲಾ ಅಧ್ಯಯನ ಮಾಡಿಯೂ ಇಂದ್ರಿಯನಿಗ್ರಹವಿಲ್ಲದ ವಿನಯವಿಲ್ಲದ ನಾನೇ ಪಂಡಿತನೆಂದು ಅಹಂಕಾರವುಳ್ಳ ಇವನಿಗೆ ಇವನು ಓದಿದ್ದು ಎಲ್ಲ ಉಪಯೋಗವಿಲ್ಲ. ಇಂತಹವರ ಸಂಹಾರಕ್ಕಾಗಿಯೇ ನನ್ನ ಅವತಾರಗಳು. ಇಂತಹ ಧರ್ಮದ ವೇಷ ವನ್ನು ಹಾಕುವವರನ್ನು ಮೊದಲು ಕೊಲ್ಲಬೇಕು. ಇವರು ಅಧಿಕ ಪಾಪಿಗಳು' ಎಂದು ಹೇಳುವವರಾಗಿ ಆಗ ಸಂಹಾರ ಮಾಡುವ ಕಾರ್ಯವನ್ನು ಬಿಟ್ಟವರಾಗಿದ್ದರೂ ಭಗವದಿಚ್ಛೆಯಿಂದ ಕೈಯಲ್ಲಿದ್ದ ದರ್ಭೆಯಿಂದ ರೋಮಹರ್ಷಣರನ್ನು ಸಂಹರಿಸಿ ದರು.

ಆಗ ಋಷಿಗಳೆಲ್ಲರೂ ಹಾಹಾ ಎಂದು ಹೇಳುತ್ತಾ ಖಿನ್ನರಾದರು. ಬಲರಾಮ ದೇವರೊಡನೆ 'ಪ್ರಭೋ! ನೀವು ಅಧರ್ಮವನ್ನು ಮಾಡಿದಿರಿ. ನಾವೇ ಇವರಿಗೆ ನಮ್ಮ ಮಧ್ಯದಲ್ಲಿ ಬ್ರಾಹ್ಮಣಯೋಗ್ಯ ಆಸನವನ್ನು ಕೊಟ್ಟಿದ್ದೆವು. ಈ ಸತ್ರಯಾಗವು ಮುಗಿಯುವವರೆಗೆ ಅಕ್ಷಯವಾದ ಆಯುಷ್ಯವನ್ನು ಕೊಟ್ಟಿದ್ದೇವೆ. ನೀವು ತಿಳಿಯದವ ರಂತೆ ಬ್ರಾಹ್ಮಣವಧಕ್ಕೆ ಸಮಾನವಾದ ವಧವನ್ನು ಮಾಡಿದಿರಿ. ನಿಮಗೆ ಈರೀತಿಯಾಗಿ ಮಾಡಬೇಕು. ಈರೀತಿಯಾಗಿ ಮಾಡಬಾರದು ಎಂದು ಹೇಳಲಿಕ್ಕೆ ಶಾಸ್ತ್ರವು ಹೊರಟಿಲ್ಲ. ಆದರೂ ನೀವು ಇದಕ್ಕೆ ಸರಿಯಾದ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ ಜನರಿಗೆ ಶಿಕ್ಷೆಗೆ ಎಂದರೆ ತಾವೂ ಏನಾದರೂ ಇಂತಹ ಪಾಪವನ್ನು ಮಾಡಿದರೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದು ನ್ಯಾಯ ಎಂದು ತಿಳಿದುಕೊಳ್ಳಲಿಕ್ಕೆ ಆಗುವುದು' ಎಂದು ಹೇಳಿದರು.

ಅದಕ್ಕೆ ಬಲರಾಮದೇವರು 'ಲೋಕಾನುಗ್ರಹಕ್ಕಾಗಿ ಉತ್ತಮರೀತಿಯಿಂದಲೇ

ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ಏನು ಮಾಡಬೇಕು? ನೀವೇ ಹೇಳಿರಿ. ಇವನಿಗೆ ನೀವು ಕೊಟ್ಟಿರುವ ದೀರ್ಘಾಯುಷ್ಯವನ್ನು ದೂರದರ್ಶನ ಶಕ್ತಿ ದೂರಶ್ರವಣಶಕ್ತಿ ಎಲ್ಲವನ್ನೂ ಯೋಗಸಾಮರ್ಥ್ಯದಿಂದ ಸಾಧಿಸಿಕೊಡುವೆನು' ಎಂದು ಹೇಳಿದರು.

ಆಗ ಋಷಿಗಳು 'ನಿಮ್ಮ ಅಸ್ತ್ರವೀರ್ಯ ನೀವು ಉಂಟುಮಾಡಿದ ಮೃತ್ಯು ನಮ್ಮ ಮಾತು ಒಂದೂ ವ್ಯರ್ಥವಾಗದಂತೆ ಮಾಡಬೇಕು' ಎಂದು ಹೇಳಿದರು. ಅದಕ್ಕೆ ಬಲರಾಮದೇವರು 'ಆತ್ಮಾ ವೈ ಪುತ್ರನಾಮಾಸಿ' ಎಂದು ಶ್ರುತಿಯಲ್ಲಿ ಹೇಳುವುದು. (ಅಂದರೆ ತನ್ನ ದೇಹದ ಒಂದು ಭಾಗದಿಂದ ಮಗನ ದೇಹವು ಹುಟ್ಟುವುದು ಎಂದ ಅಭಿಪ್ರಾಯವು) ಆದುದರಿಂದ ಇವನ ಮಗನು. ನೀವು ವರವಾಗಿ ಕೊಟ್ಟಿರುವ ದೀರ್ಘಾಯುಷ್ಯ ಇಂದ್ರಿಯ ಶಕ್ತಿಗಳುಳ್ಳವನಾಗಿ ಪುರಾಣಗಳನ್ನು ಹೇಳುವವನಾಗಲಿ. ಇನ್ನು ನಾನು ನಿಮಗೆ ಏನು ಪ್ರಿಯಕಾರ್ಯವನ್ನು ಮಾಡಲಿ' ಎಂದು ಕೇಳಿದರು.

ಋಷಿಗಳು ಇಲ್ವಲನ ಮಗನಾದ ಬಲ್ವಲ ಎಂಬ ದಾನವನು ಪರ್ವಕಾಲದಲ್ಲಿ ಬಂದು ನಮ್ಮ ಸತ್ರಯಾಗವನ್ನು ಕೆಡಿಸುವನು. ಆ ಪಾಪಿಯನ್ನು ಸಂಹರಿಸಿ ಒಂದು ವರ್ಷಕಾಲ ಭಾರತವರ್ಷದಲ್ಲಿ ಸಂಚರಿಸುತ್ತಾ ತೀರ್ಥಸ್ನಾನ ಮಾಡಿದರೆ ಶುದ್ಧರಾಗುವಿರಿ' ಎಂದರು.

ತರುವಾಯ ಪರ್ವಕಾಲವು ಬರಲು ಧೂಳಿಯಿಂದ ಸಹಿತವಾದ ಭಯಂಕರವಾದ ಗಾಳಿಯು ಬಂದಿತು. ಕೀವಿನ(ರೆಸಿಯ) ದುರ್ವಾಸನೆಯು ಸರ್ವಸ್ಥಳದಲ್ಲಿ ಬರಲಿಕ್ಕೆ ಆರಂಭವಾಯಿತು. ಮೇಲೆ ಯಜ್ಞಶಾಲೆಯಲ್ಲಿ ಎಲ್ಲಾ ಬಲ್ವನು ಸುರಿಸಿದ ಮಲದ(ಹೇಲಿನ) ಮಳೆಯು ಬಂದಿತು. ಹಾಗೆಯೇ ಬಲ್ವಲನೂ ಕಾಣಿಸಿದನು. ಶೂಲವನ್ನು ಹಿಡಿದುಕೊಂಡು ಬಂದಿದ್ದನು. ಆಗ ಬಲರಾಮದೇವರು ತನ್ನ ಮುಸಲವನ್ನು ಹಲವನ್ನೂ ಸ್ಮರಿಸಿದರು. ಅವು ಎರಡು ಆಯುಧಗಳೂ ಬೇಗನೇ ಬಲರಾಮದೇವರ ಕೈಗೆ ಬಂದವು. ತರುವಾಯ ಬಲರಾಮದೇವರು ಆಕಾಶದಲ್ಲಿ ಸಂಚರಿಸುವ ಅವನನ್ನು ಹಲದಿಂದ ಹಿಡಿದು ಸೆಳೆದು ಮುಸಲದಿಂದ ಅವನ ತಲೆಗೆ ಬಡೆದರು. ಇದರಿಂದ ಅವನು ಹಣೆಯು ಸೀಳಿಹೋಗಿ ರಕ್ತವನ್ನು ಸುರಿಸುತ್ತಾ ಆರ್ತಧ್ವನಿಯನ್ನು ಮಾಡುತ್ತಾ ವಜ್ರದಿಂದ ಬಡಿಯಲ್ಪಟ್ಟ ಪರ್ವತದಂತೆ ಕೆಳಗೆ ಬಿದ್ದನು. ಮುನಿಗಳೆಲ್ಲರೂ ಬಲರಾಮದೇವರನ್ನು ಸ್ತುತಿಸಿ ಆಶೀರ್ವಾದವನ್ನು ಮಾಡಿ ಅವರಿಗೆ ಮಹಾಭಿಷೇಕವನ್ನು ಮಾಡುವವರಾದರು. ಬಾಡಿಹೋಗದೆ ಇರುವ ಕಮಲ ಪುಷ್ಪಗಳ ವೈಜಯಂತೀಮಾಲೆಯನ್ನು ಕೊಟ್ಟರು. ದಿವ್ಯವಸ್ತ್ರಗಳನ್ನೂ ಆಭರಣಗಳನ್ನೂ ಕೊಟ್ಟರು. ಆಮೇಲೆ ಬಲರಾಮದೇವರು ಋಷಿಗಳಿಂದ ಅನುಜ್ಞೆಯನ್ನು ಪಡೆದು

ಕೌಶಿಕೀನದಿಗೆ ಹೋದರು. ಅಲ್ಲಿ ಸರಯೂನದಿಯ ಉತ್ಪತ್ತಿಸ್ಥಾನವಾದ ಸರೋವರಕ್ಕೆ ಹೋಗಿ ಅಲ್ಲಿ ಸ್ನಾನ ಮಾಡಿದರು. ಹಾಗೆಯೇ ಸರಯೂ ನದಿಗೆ ಹೋದರು. ಅಲ್ಲಿಂದ ಪ್ರಯಾಗಕ್ಕೆ ಹೋಗಿ ಪುಲಹಾಶ್ರಮ ಗೋಮತೀ ಗಂಡಕೀ ವಿಪಾಶಾ ಶೋಣ ಗಯಾ ಗಂಗಾಸಾಗರಸಂಗಮಗಳಿಗೆಲ್ಲಾ ಹೋದರು. ಮಹೇಂದ್ರಪರ್ವತದಲ್ಲಿ ಪರಶುರಾಮ ದೇವರನ್ನು ನೋಡಿ ನಮಸ್ಕರಿಸಿದರು. ಆಮೇಲೆ ಸಪ್ತಗೋದಾವರೀ ವೇಣೀ ಪಂಪಾ ಭೀಮರಥೀ ಇವುಗಳಲ್ಲಿ ಸ್ನಾನ ಮಾಡಿದರು. ಆಮೇಲೆ ಸ್ಕಂದನನ್ನು ನೋಡಿ ಶ್ರೀಶೈಲ ವೇಂಕಟಾದ್ರಿ ಕಾಮಕೋಷ್ಣೀ ಕಾಂಚೀ ಇಲ್ಲಿಗೆಲ್ಲಾ ಹೋದರು. ಕಾವೇರೀ ಸ್ನಾನ ಮಾಡಿದರು. ಶ್ರೀರಂಗಕ್ಕೆ ಹೋದರು. ಋಷಭಾದ್ರಿ ದಕ್ಷಿಣಾಮಧುರಾ ದರ್ಶನ ಮಾಡಿಕೊಂಡು ಹೋಗಿ ರಾಮಸೇತುವಿಗೆ ಹೋಗಿ ಅಲ್ಲಿ ಹತ್ತುಸಾವಿರ ಗೋವು ಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದರು. ಆಮೇಲೆ ಕೃತಮಾಲಾ ತಾಮ್ರಪರ್ಣೀ ಮಲಯಪರ್ವತಗಳಿಗೆ ಹೋದರು.

ಅಗಸ್ತ್ಯರಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದವನ್ನು ಪಡೆದು ಕನ್ಯಾಕುಮಾರೀ ಕ್ಷೇತ್ರಕ್ಕೆ ಹೋದರು. ಪಂಚಾಪ್ಸರ ಸ್ತೀರ್ಥವನ್ನು ಹೊಂದಿ ಸ್ಯಾನಂದೂರ ಎಂದು ಹೆಸರುಳ್ಳ ಅನಂತಶಯನಕ್ಕೆ ಹೋದರು. ಅಲ್ಲಿಂದ ಕ್ರಮದಿಂದ ಗೋಕರ್ಣಕ್ಕೆ ಹೋಗಿ ವೇದವ್ಯಾಸದೇವರನ್ನು ನೋಡಿ ಶೂರ್ಪಾರ್ಕಾರಕ್ಷೇತ್ರಕ್ಕೆ ಹೋದರು. ಅಲ್ಲಿಂದ ತಾಪೀ ಪಯೋಷ್ಣೀ ನಿರ್ವಿಂಧ್ಯಾ ನದಿಗಳಲ್ಲಿ ಸ್ನಾನಮಾಡಿ ದಂಡಕಾರಣ್ಯಕ್ಕೆ ಹೋದರು. ಮಾಹಿಷ್ಮತೀ ನಗರದಲ್ಲಿ ಇರುವ ರೇವಾನದಿಗೆ ಹೋಗಿ ಅನುತೀರ್ಥಕ್ಕೆ ಹೋಗಿ ಪ್ರಭಾಸಕ್ಕೆ ಪುನಃ ಬಂದು ಸೇರಿದರು. ಬ್ರಾಹ್ಮಣರ ಮಾತಿನಿಂದ ಕೌರವ ಪಾಂಡವರ ಯುದ್ಧವನ್ನು ಅದರಿಂದ ಎಲ್ಲಾ ರಾಜರೂ ಮೃತರಾಗಿ ಭೂಭಾರವು ಕಡಿಮೆಯಾದದ್ದನ್ನೂ ಕೇಳಿ ಭೀಮದುರ್ಯೋಧನರಿಗೆ ಗದಾಯುದ್ಧವನ್ನು ನೋಡ ಲಿಕ್ಕೆ ಹೋದರು. ಅಲ್ಲಿ ಧರ್ಮರಾಜನೂ ಕೃಷ್ಣಾರ್ಜುನರೂ ಸತ್ಕಾರ ಮಾಡಿದರು. ಭೀಮ ದುರ್ಯೋಧನ ರನ್ನು ಯುದ್ಧದಲ್ಲಿ ತಡೆಯಲಿಕ್ಕೆ ಹೋದರು. ಅವರಿಬ್ಬರೂ ಕೇಳಲಿಲ್ಲ. ಕೊನೆಗೆ ದೈವೇಚ್ಛೆಯೆಂದು ಬಿಟ್ಟುಬಿಟ್ಟರು. ಕೊನೆಗೆ ಯುದ್ಧದಲ್ಲಿ ಭೀಮಸೇನದೇವರು ದುರ್ಯೋಧನನ ತೊಡೆಯನ್ನು ಮುರಿದು ಕೆಳಗೆ ಬೀಳಿಸಿ ತಾವು ಪ್ರತಿಜ್ಞಾ ಮಾಡಿದಂತೆ ಅವನ ತಲೆಯನ್ನು ಪುನಃ ಪುನಃ ಮೆಟ್ಟಲು ಇದು ಅಧರ್ಮ ಅಧರ್ಮ ಎಂದು ಹೇಳುತ್ತಾ ಭೀಮಸೇನನ ದೇವರ ಹತ್ತಿರ ಯುದ್ಧಕ್ಕೆ ಹೋದರು. ಭೀಮಸೇನ ದೇವರು ಭಯಪಡಲಿಲ್ಲ. ಆಗ ಕೃಷ್ಣಪರಮಾತ್ಮನು ಬಂದು ಬಲರಾಮದೇವರನ್ನು ಹಿಡಿದು ಭೀಮಸೇನದೇವರು ಧರ್ಮಯುದ್ಧವನ್ನೇ

ಮಾಡಿದ್ದೆಂದು ಸಮಾಧಾನ ಪಡಿಸಿದರು. ಇದೆಲ್ಲಾ ಸರಿಯಾದ ಧರ್ಮವಲ್ಲ ಎಂದು ಹೇಳುತ್ತಾ ಅಲ್ಲಿಂದ ದ್ವಾರಕಾಪಟ್ಟಣಕ್ಕೆ ಹೋಗಿಬಿಟ್ಟರು. ಉಗ್ರಸೇನಾದಿಗಳಿಂದ ಸತ್ಕೃತರಾದರು. ಹೀಗೆ ಅನೇಕ ಮಹಾಕಾರ್ಯಗಳನ್ನು ಮಾಡಿದರು.

ಇವರು ರೇವತರಾಜನ ಮಗಳಾದ ರೇವತೀದೇವಿಯನ್ನು ಮದುವೆಯಾಗಿದ್ದರು. ರೇವತರಾಜನು ಬಹಳ ಪೂರ್ವಿಕನು. ಅವನು ತನ್ನ ಮಗಳಿಗೆ ಸರಿಯಾದ ವರನನ್ನು ಕೇಳಲಿಕ್ಕೆ ಬ್ರಹ್ಮದೇವರ ಸಭೆಗೇ ಹೋದನು. ಆಗ ಅಲ್ಲಿ ಸಂಗೀತವನ್ನು ನಡೆಯುವುದನ್ನು ನೋಡಿ ಅದು ಮುಗಿಯಲಿ ಎಂದು ಇದ್ದನು. ಅದು ಶ್ರೇಷ್ಠವಾದ ಸಂಗೀತವಾದ ಕಾರಣ ಅದನ್ನು ಕೇಳಿ ಅವನಿಗೆ ಹಾಗೇ ಸ್ವಲ್ಪ ಮೂರ್ಛೆಯೂ ಬಂದಿತ್ತು. ಆ ಸಂಗೀತವು ಮುಗಿದಮೇಲೆ ಬ್ರಹ್ಮದೇವರು ಅವನನ್ನು ಎಬ್ಬಿಸಿ ಬಂದಿರುವ ಕಾರಣವನ್ನು ಕೇಳಿದರು. ಅವನು ತನ್ನ ಮಗಳಿಗೆ ಸರಿಯಾದ ವರನನ್ನು ಕೇಳಿದನು. ಆಗ ಬ್ರಹ್ಮದೇವರು ನಿನಗೆ ಮನಸ್ಸಿಗೆ ಬಂದಿರುವ ಕೆಲವು ರಾಜರ ಹೆಸರನ್ನು ಹೇಳುವಂತೆ ಹೇಳಿದರು. ಆಗ ರಾಜನು ತನಗೆ ತಿಳಿದ ಕೆಲವು ರಾಜಪುತ್ರರ ಹೆಸರನ್ನು ಹೇಳಲು ಬ್ರಹ್ಮದೇವರು ನಗುತ್ತಾ ರಾಜನೇ! ನೀನು ಹೇಳಿದ ರಾಜಪುತ್ರರ ಮಕ್ಕಳ ಮೊಮ್ಮಕ್ಕಳ ವಂಶವೂ ಈಗ ಇಲ್ಲ. ನೀನು ಮಗಳನ್ನು ಕರೆದುಕೊಂಡು ಇಲ್ಲಿಗೆ ಬಂದಮೇಲೆ ಇಪ್ಪತ್ತೇಳು ಚತುರ್ಯುಗಗಳು ಕಳೆದುಹೋದವು. ಈಗ ಇಪ್ಪತ್ತೆಂಟನೇ ದ್ವಾಪರಯುಗವು. ಈಗ ಶೇಷದೇವರ ಅವತಾರಭೂತರಾದ ಬಲರಾಮದೇವರಿಗ ನಿನ್ನ ಮಗಳನ್ನು ಮದುವೆಮಾಡಿಕೊಡು' ಎಂದರು. ಆದರಂತೆ ದೇವತರಾಜನು ಬಂದು ಬಲರಾಮದೇವರಿಗೆ ತನ್ನ ಮಗಳನ್ನು ಮದುವೆಮಾಡಿಕೊಟ್ಟು ತಪಸ್ಸಿಗೆ ಹೊರಟುಹೋದನು. ರೇವತಿಯು ಪೂರ್ವಯುಗದವಳಾದ ಪ್ರಯುಕ್ತ ಉದ್ದವಾಗಿ ಬೆಳೆದಿದ್ದಳು. ಅವಳನ್ನು ತನ್ನ ಲಾಂಗಲದಿಂದ ಹಿಡಿದು ಎಳೆದು ತನಗೆ ಬೇಕಾದಷ್ಟೆ ಉದ್ದ ಮಾಡಿಕೊಂಡರು. ಅವಳಲ್ಲಿ ಶಠ ಉಲ್ಮುಕ ಎಂಬ ಇಬ್ಬರು ಮಕ್ಕಳನ್ನು ಪಡೆದಿದ್ದರು.

ಈರೀತಿಯಾಗಿ ಬಲರಾಮದೇವರು ಅನೇಕ ಮಹಾಕಾರ್ಯಗಳನ್ನು ಮಾಡಿ ಕೊನೆಗೆ ಭಗವಂತನ ಇಚ್ಛಾನುಸಾರವಾಗಿ ಯಾದವರು ಶಾಪಗ್ರಸ್ತರಾಗಿ ಪರಸ್ಪರವಾಗಿ ಬಡಿದುಕೊಳ್ಳಲು ತಾನು ಯೋಗಸಾಮರ್ಥ್ಯದಿಂದ ದೇಹವನ್ನು ಪರಿತ್ಯಜಿಸಿ ತನ್ನ ಲೋಕವನ್ನು ಹೊಂದಿದರು.



# ರುದ್ರದೇವರು [1]

ರುದ್ರದೇವರು ಸ್ವರೂಪದಿಂದ ಗರುಡಶೇಷರಿಗೆ ಸಮಾನರು. ರುದ್ರದೇವರೇ ಇನ್ನೊಂದು ಕಲ್ಪದಲ್ಲಿ ಶೇಷದೇವರಾಗಿ ಆಮೇಲೆ ಮೋಕ್ಷವನ್ನು ಹೊಂದುವರು. ಅವರಿಗೆ ಅನೇಕ ರೂಪಗಳು ಇರುವುವು. ಅಹಂಕಾರ ತತ್ವಕ್ಕೆ ಅಭಿಮಾನಿಯಾದ ರುದ್ರದೇವರೇ ಸದಾಶಿವ ಎಂಬ ಹೆಸರನ್ನು ಹೊಂದಿರುವರು. ಆರೂಪದಲ್ಲಿ ತಮೋ ಗುಣಕ್ಕೆ ನಿಯಾಮಕರಾಗಿರುವರು. ಅವರು ಕಪಾಲಮಾಲೆಯನ್ನು ಧರಿಸಿರುವರು. ಅಪವಿತ್ರವಾದ ಆನೆಯ ಚರ್ಮವನ್ನು ಧರಿಸಿರುವರು. ಅಮಂಗಲಲೋಕವನ್ನು ನಾಶ ಮಾಡುವರು. ಭಗವದಾಜ್ಞೆಯಿಂದ ಜನರನ್ನು ವಿಷಯಾಸಕ್ತರನ್ನಾಗಿಯೂ ಭಗವಂತ ನಲ್ಲಿ ವಿಮುಖರನ್ನಾಗಿಯೂ ಮಾಡುವರು. ಕೆಲವು ಸಮಯದಲ್ಲಿ ಅಸುರಾವೇಶದಿಂದ ಭಗವಂತನಿಗೆ ವಿರುದ್ಧವಾದ ಕಾರ್ಯವನ್ನು ಮಾಡುವರು. ರುದ್ರದೇವರು ಹತ್ತು ಕಲ್ಪ ಉಪ್ಪುನೀರಿನ ಸಮುದ್ರದಲ್ಲಿ ತಪಸ್ಸು ಮಾಡಲಿಕ್ಕೆ ಪ್ರವೇಶಿಸಿದರು. ಆದರಿಂದ ಅವರು ತಪಃ ಎಂದು ಹೆಸರನ್ನು ಪಡೆದರು.

ವೇದವ್ಯಾಸದೇವರ ಮಗನಾದ ಶುಕಾಚಾರ್ಯರು ವಾಯುದೇವರ ಆವೇಶವುಳ್ಳ ರುದ್ರದೇವರು ಎಂದು ತಿಳಿಯಬೇಕು. ಅವರು ಜ್ಞಾನಕ್ಕಾಗಿ ಭೂಮಿ ಯಲ್ಲಿ ಹುಟ್ಟಿರುವರು. ಅತ್ರಿಋಷಿಗಳಿಂದ ಅವರ ಪತ್ನಿಯಾದ ಅನಸೂಯಾದೇವಿ ಯಲ್ಲಿ ದುರ್ವಾಸ ಎಂಬ ಹೆಸರಿನಿಂದ ಹುಟ್ಟಿರುವರು. ದ್ರೋಣಾಚಾರ್ಯರಿಂದ ಕೃಪಿಯಲ್ಲಿ ಅಶ್ವತ್ಥಾಮಾಚಾರ್ಯರಾಗಿ ಹುಟ್ಟಿರುವರು. ಈಶಾನ್ಯ ಕೋಣೆಯಲ್ಲಿ ಇರುವ ರುದ್ರದೇವರು ವಾಮದೇವ ಎಂದು ಹೆಸರುಳ್ಳುವರಾಗಿರುವರು. ತನ್ನ ಎಡಭಾಗದಲ್ಲಿ ಇರುವ ಪರಮಾತ್ಮನನ್ನು ತನಗೆ ಯೋಗ್ಯವಾದ ಭಕ್ತಿಯಿಂದ ಸರ್ವಕಾಲದಲ್ಲಿಯೂ ಪೂಜಿಸುತ್ತಿರುವ ಕಾರಣ ವಾಮದೇವ ಎಂದು ಹೆಸರನ್ನು ಹೊಂದಿದರು. ಆದೇವರನ್ನು ಪೂಜಿಸಿದ ಕಾರಣವೇ ಉತ್ತಮತ್ವವನ್ನು ಕಾಲ ನಿಯಾಮಕತ್ವವನ್ನು ಬಲ ನಿಯಾಮಕತ್ವವನ್ನು ಹೊಂದಿದರು. ರುದ್ರದೇವರು ಭಗವಂತನಿಗೆ ದ್ರೋಹಿಗಳಾದ ತ್ರಿಪುರಾಸುರರನ್ನು ಸಂಹರಿಸಲಿಕ್ಕೆ ಧರಿಸಿದ ರೂಪಕ್ಕೆ ಅಘೋರವೆಂದು ಹೆಸರು. ತನ್ನನ್ನು ತಪಸ್ಸನ್ನು ಮಾಡಿ ಕ್ಲೇಶ ಪಡುತ್ತಿದ್ದ ಅಸುರರಿಗೆ ವರವನ್ನು ಕೊಡಲಿಕ್ಕೆ ಸದ್ಯೋಜಾತ ಎಂಬ ಹೆಸರನ್ನು ಪಡೆದರು. ಉತ್ಕೃಷ್ಟವಾದ

1. ಗ.ಪು.ಬ್ರ.ಕಾಂ. ಅ-19

ರೋದನ ಮಾಡಿದ ಕಾರಣ ಊರ ಎಂದು ಹೆಸರುಳ್ಳವರಾದರು. ಉಳಿದ ರೋದನ ವನ್ನು ಮಾಡಲಿಕ್ಕೆ ಆ ರೂಪಕ್ಕೇ ಮಗನಾಗಿ ಔರ್ವ ಎಂದು ಹೆಸರಿನಿಂದ ಹುಟ್ಟಿದರು.

ರುದ್ರದೇವರು ಗುಣಗಳಿಂದ ಪೂರ್ಣವಾದ ಶ್ರೀಬ್ರಹ್ಮ ಇತ್ಯಾದಿಗಳಿಂದ ಪೂಜಿತವಾದ ಪಾದಕಮಲವುಳ್ಳ ಸಂಕರ್ಷಣ ಎಂದು ಹೆಸರುಳ್ಳ ತನ್ನ ಬಿಂಬರೂಪವನ್ನು ಪ್ರತ್ಯಕ್ಷವಾಗಿ ತಿಳಿಯುವವರಾಗಿ ಕಣ್ಣುಗಳಲ್ಲಿ ನೀರನ್ನು ತುಂಬಿಸಿಕೊಂಡು ಗದ್ಗದ ಸ್ವರವುಳ್ಳವರಾಗಿ 'ಅನ್ಯಾದ್ಯನಂತ ಬ್ರಹ್ಮಕಲ್ಪಗಳಲ್ಲಿ ನಾನು ನಿನ್ನನ್ನು ಚೆನ್ನಾಗಿ ಸ್ಮರಿಸಲಿಲ್ಲ. ಯಾವ ಪುಣ್ಯದಿಂದ ನಿನ್ನ ಪಾದವನ್ನು ನೋಡಿದೆನೋ' ಎಂದು ಹೇಳಿ ಕುತ್ತಿಗೆಯು ಬಿಗಿದು ಹೋಗಲು ಭಯದಿಂದ ನಡುಗುತ್ತಾ 'ನನಗೆ ಪುನಃ ನಿನ್ನ ಪಾದದರ್ಶನವು ಹೇಗೆ ಆಗುವುದು'? ಎಂದು ಹೇಳುತ್ತಾ ಅಳುವವ ರಾದರು. ಆಮೇಲೆ 'ಮುಕುಂದ! ನಾರಾಯಣ ನನಗೆ ಪುನಃ ನಿನ್ನ ದರ್ಶನವು ಹೇಗೆ ಸಿಗುವುದು. ನಿನ್ನನ್ನು ಸ್ತೋತ್ರ ಮಾಡುವುದು ಹೇಗೆ ಆಗುವುದು? ನನ್ನ ಕಣ್ಣುಗಳು ಪಾಪಯುಕ್ತವಾದುವು. ಯಾವಾಗಲೂ ಪರಸ್ತ್ರೀಯರನ್ನು ನೋಡುವುದರಲ್ಲಿ ಆಸಕ್ತವಾಗಿರುವುವು. ನಿನ್ನನ್ನು ನೋಡಲಿಕ್ಕೆ ಆಸಕ್ತವಾಗುವುದಿಲ್ಲ. ಹಾಗೆಯೇ ವಾಗಿಂದ್ರಿಯವೂ ಹೆಂಡತಿ ಮಕ್ಕಳನ್ನು ಸ್ತುತಿಸುವುದು. ನಿನ್ನನ್ನು ಸ್ತೋತ್ರ ಮಾಡುವುದಿಲ್ಲ. ನಿನ್ನನ್ನು ಸ್ತೋತ್ರಮಾಡಲಿಕ್ಕೆ ನನ್ನ ವಾಗಿಂದ್ರಿಯಕ್ಕೆ ಅವಕಾಶವೇ ಇರುವುದಿಲ್ಲ. ಯಾವ ಪುಣ್ಯದಿಂದ ನಿನ್ನ ಪಾದಗಳನ್ನು ನೋಡಿದೆನೋ? ಹಾಗೆಯೇ ನನ್ನ ಕಿವಿಯಿಂದ ನಿನ್ನ ಕಥೆಯನ್ನು ಕೇಳಲಿಲ್ಲ. ಬಹಳವಾದ ಲೋಕವೃತ್ತಾಂತವನ್ನು ಕೇಳಿರುವೆನು. ದೇವ! ಯಾವ ಪುಣ್ಯದಿಂದ ನಿನ್ನನ್ನು ನಾನು ನೋಡಿದೆನೋ!' ಎಂದು ಹೇಳಿ 'ನನಗೆ ಇನ್ನು ಹೇಗೆ ಭಗವಂತನ ಕಥೆಯ ಶ್ರವಣವು ಉಂಟಾಗುವುದೋ' ಎಂದು ಹೇಳುತ್ತಾ ಕುತ್ತಿಗೆಯು ಬಿಗಿದುಹೋಗಲು ನಡುಗುತ್ತಾ ಅಳುವವರಾದರು.

ಆಮೇಲೆ 'ಭಗವಂತನೇ! ನಿನಗೆ ಸಮರ್ಪಿಸಿದ ಗಂಧಪುಷ್ಪಾದಿಗಳನ್ನು ಧರಿಸಲಿಲ್ಲ. ಮಕ್ಕಳ ಮಲಮೂತ್ರಗಳೂ ಬೆವರು ಸ್ತನದ ನೀರು ಮೈಯಬೆವರೂ ನಿನಗೆ ಸಮರ್ಪಿಸದೆ ಇರುವ ಗಂಧಾದಿಗಳು ನನ್ನ ಮೈಗೆ ಹಚ್ಚಿಕೊಂಡಿವೆ. ನಿನ್ನನ್ನು ಯಾವ ಪುಣ್ಯದಿಂದ ನೋಡಿದೆನೋ? ನನಗಿನ್ನು ನಿನ್ನ ನಿರ್ಮಾಲ್ಯ ಗಂಧದ ಸ್ಪರ್ಶವು ಹೇಗೆ ಲಭಿಸುವುದೋ?' ಎಂದು ಹೇಳುತ್ತಾ ಭಗವಂತನ ನಿರ್ಮಾಲ್ಯಗಂಧವನ್ನು ಸ್ಪರ್ಶ ಮಾಡುತ್ತಾ ಅಳುವವರಾದರು. ಮತ್ತು 'ನೃಸಿಂಹ! ನನ್ನ ಮೂಗಿನಿಂದ ನಿನ್ನ ಪಾದಕ್ಕೆ ಸಮರ್ಪಿಸಿದ ಪುಷ್ಪಗಳ ವಾಸನೆಯನ್ನು ಮೂಸಲಿಲ್ಲ. ನಿನ್ನ ಪಾದಕ್ಕೆ ಸಮರ್ಪಿಸದ ಗಂಧಪುಷ್ಪಾದಿಗಳನ್ನು ಮೂಸಿರುವೆನು. ಯಾವ ಪುಣ್ಯದಿಂದ ನಿನ್ನನ್ನು

ನೋಡಿದೆನೋ?' ಎಂದು ಹೇಳಿ ನಿರ್ಮಾಲ್ಯಪುಷ್ಪವನ್ನು ಮೂಸುತ್ತಾ ಮೂಸುತ್ತಾ 'ಇನ್ನು ನಿನ್ನ ನಿರ್ಮಾಲ್ಯವನ್ನು ಹೇಗೆ ಮೂಸುವುದೋ' ಎಂದು ಹೇಳುತ್ತಾ ಅಳುವವರಾದರು. ಆಮೇಲೆ 'ನಾಲಿಗೆಯಲ್ಲಿ ನಿಯಾಮಕನಾಗಿರುವ ಭಗವಂತನೇ! ನನ್ನ ನಾಲಿಗೆಯಿಂದ ನಿನಗೆ ಸಮರ್ಪಿಸಿದ ತುಲಸಿಯಿಂದ ಮಿಶ್ರಿತವಾದ ನಿನ್ನ ಪಾದಜಲದಿಂದ ಯುಕ್ತವಾದ ನೈವೇದ್ಯಶೇಷವನ್ನು ಭೋಜನ ಮಾಡಲಿಲ್ಲ. ಹಾಗೆ ಭೋಜನ ಮಾಡಿದ್ದರೆ ಹತ್ತು ಸಾವಿರ ಕೋಟಿ ಯಜ್ಞಗಳನ್ನು ಮಾಡಿದ ಪುಣ್ಯವು ಬರುತ್ತಿತ್ತು. ಆದರೆ ನಾನು ಹಾಗೆ ಮಾಡದೆ ನಿನಗೆ ಸಮರ್ಪಣೆ ಮಾಡದೆ ಇರುವ ಅನ್ನವನ್ನು ಅನೇಕಬಾರಿ ಭೋಜನ ಮಾಡಿರುವೆನು. ಯಾವ ಪುಣ್ಯದಿಂದ ಈಗ ನಿನ್ನನ್ನು ನೋಡಿದೆನೋ?' ಎಂದು ಹೇಳಿ ಭಗವಂತನ ನೈವೇದ್ಯವನ್ನು ಭೋಜನ ಮಾಡುತ್ತಾ 'ನನಗೆ ಇನ್ನು ವಿಷ್ಣುನೈವೇದ್ಯವು ಹೇಗೆ ಲಭಿಸುವುದೋ?' ಎಂದು ಹೇಳುತ್ತಾ ಭಯದಿಂದ ನಡುಗುತ್ತಾ ಅಳುವವರಾದರು.

ಆಮೇಲೆ 'ಭಗವಂತನೇ! ಕಿರೀಟಕುಂಡಲಾದಿ ಆಭರಣಗಳಿಂದ ಅಲಂಕೃತ ವಾದ ರಮಾದೇವಿಯರಿಂದ ಆದೃತವಾದ ನಿನ್ನ ಮುಖವನ್ನು ಅನೇಕ ಜನ್ಮಗಳಿಂದ ಮಾಡಿದ ಪುಣ್ಯಸಮೂಹದಿಂದ ಸಜ್ಜನರ ಸಹವಾಸದಿಂದ ನೋಡಿದೆನು. ನಾನು ಅನೇಕ ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಇನ್ನು ಮೇಲೆ ನನಗೆ ಮರೆಯಾಗುವಿ ಯಲ್ಲಾ!' ಎಂದು ಹೇಳಿ ಭಗವಂತನ ಮುಖವನ್ನು ನೋಡುತ್ತಾ ನೋಡುತ್ತಾ ಅಳುವವರಾದರು. ಆಮೇಲೆ 'ಭಗವಂತನೇ! ಯೋಗೀಶ್ವರರು ತಮ್ಮ ಹೃದಯದಲ್ಲಿ ಧರಿಸಿರುವ ನಿನ್ನ ಪಾದಾರವಿಂದವನ್ನು ಈಗ ನೋಡಿದೆನು. ಇನ್ನು ಮುಂದೆ ನಾನು ಹೇಗೆ ನೋಡಲಿ?' ಎಂದು ಹೇಳುತ್ತಾ ಅಳುವವರಾದರು. ಮತ್ತೂ 'ಭಗವಂತನೇ! ಸರ್ವವನ್ನು ಧರಿಸಿರುವ ಮೂರುರೇಖೆಗಳಿಂದ ಕೂಡಿದ ನಿನ್ನ ಹೊಟ್ಟೆಯನ್ನು ನೋಡಿದೆನು. ಇನ್ನು ಮುಂದೆ ಹೇಗೆ ನೋಡುವೆನೋ?' ಎಂದು ಹೇಳಿ ಅಳುವವರಾದರು. 'ಗಂಧಪುಷ್ಪಗಳಿಗೆ ಆಶ್ರಯವಾದ ಕೌಸ್ತುಭ ಮಣಿಗೂ ರಮಾದೇವಿಯರಿಗೂ ಅಲಂಕಾರಕ್ಕೆ ಕಾರಣವಾದ ನಿಮ್ಮ ಎದೆಯನ್ನು ನೋಡಿದೆನು. ಇನ್ನು ಮುಂದೆ ಹೇಗೆ ನೋಡುವೆನೋ' ಎಂದು ಹೇಳುತ್ತಾ ಅಳುವವರಾದರು.

ಈರೀತಿಯಾಗಿ ಅತ್ತಕಾರಣದಿಂದಲೇ ಊರ ಎಂದು ಹೆಸರುಳ್ಳವರಾದರು. ಅವರ ಮಗನಾಗಿ ಅವತಾರಮಾಡಿದ ರುದ್ರದೇವರಿಗೆ ಔರ್ವ ಎಂದು ಹೆಸರಾಯಿತು. ಆ ಔರ್ವ ಎಂದು ಹೆಸರುಳ್ಳ ರೂಪವುಳ್ಳ ರುದ್ರದೇವರೂ ಮೋಕ್ಷಯೋಗ್ಯರಾದ ಜನರು ಸಂಸಾರವಿಷಯದಲ್ಲಿಯೇ ಆಸಕ್ತರಾಗಿರುವುದನ್ನು ನೋಡಿ ಭಗವಂತನ

ಪಾದಕಮಲವನ್ನು ಸ್ಮರಿಸುತ್ತಾ ಕುತ್ತಿಗೆಯು ಬಿಗಿದು ಹೋಗಿ ಅಳುವವರಾದರು. 'ಈ ಪಾಪಿಗಳು ದುಷ್ಟ ಇಂದ್ರಿಯಗಳಿಂದ ದುಷ್ಟ ವಿಷಯಗಳನ್ನು ಅನುಭವಿಸುತ್ತಿರುವರಲ್ಲಾ! ಭಗವಂತನೇ! ಇವರನ್ನು ಈ ದುರ್ವಿಷಯಗಳಿಂದ ಯಾವಾಗ ಬಿಡಿಸುವಿ ಎಂದು ತಿಳಿಯಲಿಲ್ಲವಲ್ಲಾ! ಈ ಮೂರ್ಖರು ಸಂಸಾರ ವಿಷಯಕ್ಕಾಗಿಯೇ ಅತ್ಯಂತ ಆದರದಿಂದ ಮಹಾಪ್ರಯತ್ನವನ್ನು ಮಾಡುತ್ತಿರುವರಲ್ಲಾ! ಈ ತುಚ್ಛವಾದ ಸುಖಕ್ಕಾಗಿಯೇ ಎಷ್ಟು ಹಣವನ್ನು ವೆಚ್ಚ ಮಾಡುತ್ತಿರುವರು! ಇವರು ನಿನ್ನ ಬಂಧಕಶಕ್ತಿಯಿಂದ ಮೋಹಿತರಾಗಿರುವರಲ್ಲಾ! ಇವರನ್ನು ಯಾವಾಗ ಬಿಡುಸುವಿ?' ಎಂದು ಪುನಃಪುನಃ ಸ್ಮರಿಸುತ್ತಾ ಅಳುವವರಾದರು. 'ಇವರು ಅತಿಕಷ್ಟಪಟ್ಟು ಅತಿಲೋಭದಿಂದ ತಮ್ಮ ಸ್ನಾನಸಂಧ್ಯಾವಂದನ ಮೊದಲಾದ ಕರ್ತವ್ಯವನ್ನು ಬಿಟ್ಟು ಮಹಾದೈನ್ಯದಿಂದ ಹಣವನ್ನು ಸಂಪಾದಿಸಿ ಅಂತಹ ಹಣವನ್ನು ಕೀರ್ತಿಬರಬೇಕೆಂದು ಅಯೋಗ್ಯಜನರಿಗೆ ಕೊಡುತ್ತಿರುವರಲ್ಲಾ! ಸತ್ಪಾತ್ರರಲ್ಲಿ ಭಗವಂತನಿಗೆ ಪ್ರೀತಿಯಾಗಲಿ ಎಂಬ ಬುದ್ಧಿಯಿಂದ ಸ್ವಲ್ಪ ಹಣವನ್ನು ಕೊಡುವುದಿಲ್ಲವಲ್ಲಾ! ಇವರ ಆಯುಷ್ಯವು ವ್ಯರ್ಥವಾಯಿತಲ್ಲಾ! ವ್ಯರ್ಥವಾಗಿ ಹಾಳಾಗುತ್ತಿರುವರಲ್ಲಾ!' ಎಂದು ಸ್ಮರಿಸಿ ಅಳುವವರಾದರು.

'ಇವರ ಆಯುಷ್ಯವು ವ್ಯರ್ಥವಾಗಿ ಹೋಗುತ್ತಿದೆ. ಇವರ ಆಸೆಯು ಯೌವನವನ್ನು ಹೊಂದುತ್ತಿದೆ. ಇವರ ಹೆಗಲಲ್ಲಿಯೇ ಕೂತಿರುವ ಮೃತ್ಯುದೇವತೆಯು ಇವರ ಆಸೆಯನ್ನು ನೋಡಿ ನಗುತ್ತಿರುವಳು. ಇವರು ನಾನು ನಾಳೆ ನಾಳಿದ್ದೂ ಹೀಗೆಯೇ ಇರುತ್ತೇನೆ. ಈ ನನ್ನ ಮನೆಯು ನೂರುವರ್ಷದವರೆಗೆ ಹೀಗೆಯೇ ಇರುವುದು. ನನ್ನ ಮಗನು ನೂರುವರ್ಷ ಬದುಕುವನು. ನನಗೂ ನೂರುವರ್ಷ ಆಯುಷ್ಯವಿರುವುದು. ನನಗೆ ಒಳ್ಳೇ ಲಕ್ಷಣವುಳ್ಳ ಹೆಂಡತಿಯಿರುವಳು. ನನ್ನ ಮನೆಯಲ್ಲಿ ಬೇಕಾದ ಹಾಲನ್ನು ಕೊಡುವ ಬೇಕಾದ ದನಗಳು ಇರುವುವು. ಸಂಪನ್ನರಾದ ಸ್ನೇಹಿತರು ಬೇಕಾದಷ್ಟು ಇರುವರು. ನನ್ನ ಮಗನ ಮದುವೆಗೆ ಬೇಕಾದಷ್ಟು ಹಣವನ್ನು ವೆಚ್ಚ ಮಾಡಿರುವೆನು. ಇನ್ನು ಮಗಳಿಗೂ ಹಾಗೆಯೇ ಬಹು ಹಣವನ್ನು ವೆಚ್ಚಮಾಡಿ ಬಹುಸಂಭ್ರಮದಿಂದ ಮದುವೆಯನ್ನು ಮಾಡುವೆನು. ಓದಿಕೊಂಡಿರುವ ಸದ್ಬ್ರಾಹ್ಮಣರನ್ನು ನೋಡಿ ನನ್ನ ಮಗಳನ್ನು ಮದುವೆ ಮಾಡಿಕೊಡಲಾರೆನು. ಒಳ್ಳೇ ಹಣವಂತರನ್ನು ನೋಡಿ ಮದುವೆ ಮಾಡಿಕೊಡುವೆನು. ನಾನು ಭಗವಂತನ ಮಹಿಮೆಯನ್ನು ಹೇಳುವ ಪುರಾಣವನ್ನು ಕೇಳಲಾರೆನು. ಪುರಾಣವನ್ನು ಕೇಳಿದರೆ ನನ್ನ ಭಾಗ್ಯವು ನಾಶವನ್ನು ಹೊಂದುವುದು. ನಾನು ದೇವರ ಪೂಜೆಯನ್ನು ಮಾಡಲಾರೆನು.

ದೇವರ ಪೂಜೆಯನ್ನು ಮಾಡಿದರೂ ನನ್ನ ಭಾಗ್ಯವು ಹಾಳಾಗುವುದು.' ಹೀಗೆಲ್ಲಾ ಜನರು ಹೇಳುತ್ತಿರುವರು. ಇಂತಹ ಮೂರ್ಖರನ್ನು ನೋಡಿ ಸರ್ವರಿಗೂ ಫಲವನ್ನು ಕೊಡುವವನಾದ ಭಗವಂತನು ನೆಗುತ್ತಿರುವನು. ಈರೀತಿಯಾಗಿ ಎಲ್ಲಾ ಮೂರ್ಖರು ಹೇಳುತ್ತಿರುವರಲ್ಲಾ' ಎಂದು ಹೇಳುತ್ತಾ ಅವರನ್ನು ನೋಡಿ ಔರ್ವ ಎಂದು ಹೆಸರುಳ್ಳ ರುದ್ರದೇವರು ಅಳುವವರಾದರು. ಆದುದರಿಂದಲೆ ಅವರಿಗೆ ಔರ್ವ ಎಂದು ಹೆಸರು ಸಾರ್ಥಕವಾಯಿತು.

ದಕ್ಷಪ್ರಜೇಶ್ವರ ಮಗಳಾದ ಸತೀದೇವಿಯು ದಕ್ಷಯಾಗದಲ್ಲಿ ತನ್ನ ದೇಹವನ್ನು ಪರಿತ್ಯಜಿಸಿ ಹಿಮವಂತನ ಮಗಳಾಗಿ ಹುಟ್ಟಿದಾಗ ರುದ್ರದೇವರು 'ನಾನು ಊರ್ಧ್ವರೇತಸ್ಸುಳ್ಳವನಾಗಿ ಇರುತ್ತೇನೆ' ಎಂದು ಹೇಳಿಕೊಂಡರು. ಆದರಿಂದ ಆಗ ಊರ್ಧ್ವ ಎಂದು ಹೆಸರನ್ನು ಹೊಂದಿದರು. ಆಮೇಲೆ ಪಾರ್ವತೀದೇವಿಯನ್ನು ಮದುವೆಯಾಗಿ ಅವರಲ್ಲಿಯೇ ಆಸಕ್ತರಾಗಿದ್ದರು. ಅದರಿಂದ ಲಂಪಟ ಎಂಬ ಹೆಸರನ್ನು ಪಡೆದರು. ಸದಾಶಿವ ಮೊದಲಾದ ಹನ್ನೆರಡು ರೂಪವುಳ್ಳ ರುದ್ರ ದೇವರೂ, ನರ ಲಕ್ಷ್ಮಣ ಬಲರಾಮ ಎಂದು ಹೆಸರುಳ್ಳ ಶೇಷದೇವರೂ ಸಂಸಾರ ದಲ್ಲಿ ಮೋಕ್ಷದಲ್ಲಿಯೂ ಸಮಾನರು. ಸರಸ್ವತೀಭಾರತಿಯರಿಂದ ನೂರುಪಾಲು ಕಡಿಮೆಯಾಗಿರುವರು.



# ರುದ್ರದೇವರು ಪರಮವೈಷ್ಣವರು [1]

ಪಾರ್ವತೀದೇವಿಯರು ರುದ್ರದೇವರೊಡನೆ 'ಪಾಷಂಡಿಗಳೊಡನೆ ಮಾತಾಡ ಬಾರದು. ಪಾಷಂಡಿಗಳು ಚಂಡಾಲರಿಗಿಂತಲೂ ನಿಂದ್ಯರು' ಎಂದು ಹೇಳೋಣ ವಾಯಿತಲ್ಲಾ! ಪಾಷಂಡಿಗಳೆಂದು ಯಾರು? ಅವರು ಯಾವ ಚಿಹ್ನೆಯುಳ್ಳವ ರಾಗಿರುವರು?' ಎಂದು ಕೇಳಿದರು.

ಆದಕ್ಕೆ ರುದ್ರದೇವರು 'ಪಾರ್ವತಿ! ಯಾರು ಜಗತ್ಸ್ವಾಮಿಯಾದ ನಾರಾಯಣನಿಗಿಂತ ಇತರ ದೇವತೆಯನ್ನು ಸರ್ವೋತ್ತಮನೆಂದು ಹೇಳುವರೋ ಅವರು ಪಾಷಂಡಿಗಳು. ಯಾರು ಕಪಾಲ ಭಸ್ಮ ಎಲುಬು ಇವುಗಳನ್ನು ಧರಿಸುವರೋ, ವಾನಪ್ರಸ್ಥಾಶ್ರಮವಿಲ್ಲದೆ ಜಟೆಯನ್ನು ಮರದ ತೊಗಲನ್ನು ಧರಿಸುವರೋ,

1. ಪ.ಪು. ಭಾ.ಗ.XII 13-16 (ಗೀ.ಪ್ರೆ)

ವೇದವಿಹಿತವಾಗದ ಕಾರ್ಯವನ್ನು ಮಾಡುವರೋ ಅವರು ಪಾಷಂಡಿಗಳು. ಯಾರು ಪರಮಾತ್ಮನಿಗೆ ಪ್ರಿಯವಾದ ಶಂಖಚಕ್ರಾದಿ ಮುದ್ರೆಗಳನ್ನೂ, ದ್ವಾದಶನಾಮಗಳನ್ನು, ಧರಿಸುವುದಿಲ್ಲವೋ, ಅವರೂ ಪಾಷಂಡಿಗಳು. ಯಾರು ಶ್ರುತಿಸ್ಮೃತಿಗಳಲ್ಲಿ ಹೇಳಿದ ಆಚಾರವನ್ನು ಮಾಡುವುದಿಲ್ಲವೋ ಅವರು ಪಾಷಂಡಿಗಳು. ಸರ್ವಲೋಕದಲ್ಲಿಯೂ ನಿಂದ್ಯರು. ಸಮಸ್ತ ಯಜ್ಞಗಳನ್ನು ಅನುಭವಿಸುವವನಾದ ಬ್ರಾಹ್ಮಣರಿಗೆ ಪ್ರಿಯದೇವತೆಯಾದ ಸರ್ವೋತ್ತಮದೇವತೆಯಾದ ಪರಮಾತ್ಮನನ್ನು ಬಿಟ್ಟು ಇತರ ದೇವತೆಗಳನ್ನು ಉದ್ದೇಶ ಮಾಡಿಯೇ ದಾನಹೋಮಗಳು ಯಾರು ಮಾಡುವನೋ, ಯಾರು ವೇದಗಳಲ್ಲಿ ಹೇಳಿದ ಕರ್ಮಗಳನ್ನು ಭಗವಂತನಿಗೆ ಸಮರ್ಪಿಸದೆ ಮಾಡುವರೋ ಅವರೂ ಪಾಷಂಡಿಗಳು. ಯಾರು ನಾರಾಯಣನನ್ನು ಬ್ರಹ್ಮರುದ್ರಾದಿ ದೇವತೆಗಳಿಗೆ ಸಮನನ್ನಾಗಿ ತಿಳಿಯುವರೋ, ಜಾಗ್ರದಾದಿ ಅವಸ್ಥೆಗಳಲ್ಲಿ ಯಾರು ಪರಮಾತ್ಮನನ್ನು ಮನಸ್ಸು ವಾಕ್ ಕಾಯಕರ್ಮಗಳಿಂದ ನಾರಾಯಣನನ್ನು ತಿಳಿಯುವು ದಿಲ್ಲವೋ, ಅವನು ಪಾಷಂಡಿಯಾಗುವನು. ದೇವಿ! ಹೆಚ್ಚಿಗೆ ಏಕೆ ಹೇಳಲಿ? ವಿಷ್ಣುಭಕ್ತಿಯಿಲ್ಲದವರನ್ನು ಮುಟ್ಟಬಾರದು, ನೋಡಬಾರದು, ಅವರೊಡನೆ ಮಾತಾಡಬಾರದು' ಎಂದು ಹೇಳಿದರು.

ಅದನ್ನು ಕೇಳಿ ಪಾರ್ವತೀದೇವಿಯರು ಆಶ್ಚರ್ಯಪಡುವವರಾಗಿ 'ಪೂಜ್ಯರೇ! ಒಂದು ರಹಸ್ಯವಾದ ವಿಷಯವನ್ನು ಕೇಳುವೆನು. ನನ್ನ ಮೇಲೆ ಪ್ರೀತಿಯಿಂದ ಹೇಳಬೇಕು. ನನಗೆ ತುಂಬಾ ಸಂದೇಹವುಂಟಾಗಿದೆ. ಕಪಾಲವನ್ನು ಭಸ್ಮವನ್ನು ಚರ್ಮವನ್ನು ಎಲುಬನ್ನೂ ಧರಿಸುವುದು ವೇದಗಳಲ್ಲಿ ನಿಂದಿತವಾಗಿದೆಯಷ್ಟೆ! ಅದನ್ನು ನೀವು ಹೇಗೆ ಧರಿಸಿರುವಿರಿ? ಹೆಂಗಸಿನ ಚಂಚಲಸ್ವಭಾವದಿಂದ ಕೇಳುತ್ತಿದ್ದೇನೆ. ತಾವು ಇದಕ್ಕೆ ಕಾರಣವನ್ನು ಹೇಳಿದ್ದಿಲ್ಲ. ತಮ್ಮ ಹತ್ತಿರ ಹೀಗೆ ಕೇಳಬಾರದು. ಆದರೂ ಕೇಳುತ್ತಿದ್ದೇನೆ. ಕ್ಷಮಿಸಬೇಕು' ಎಂದು ಹೇಳಿದರು.

ಈರೀತಿಯಾಗಿ ಪಾರ್ವತಿದೇವಿಯರು ಪ್ರಶ್ನೆಮಾಡಲು ಒಬ್ಬ ಜನರೂ ಇಲ್ಲದೆ ಇರುವ ಸ್ಥಳದಲ್ಲಿ ರುದ್ರದೇವರು ಹೇಳುವವರಾದರು. ''ದೇವಿ! **ಇದು ತುಂಬಾ ಗುಟ್ಟಾದ ವಿಷಯವು. ಅದ್ಭುತವಾದ ವಿಷಯವು. ನಾನು ಹೇಳಿದ ವಿಷಯವನ್ನು ನೀನು ಒಬ್ಬರ ಹತ್ತಿರವೂ ಹೇಳಬಾರದು.** ನನಗೆ ಪ್ರಿಯಳಾದ ಕಾರಣ ನಿನಗೆ ಹೇಳುತ್ತಿರು ವೆನು. ಪೂರ್ವದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ಮಹಾಬಲಿಷ್ಠರಾದ ಮಹಾ ಪರಾಕ್ರಮಿಗಳಾದ ನಮುಚಿಯೇ ಮೊದಲಾದ ಅಸುರರು ಪರಮಾತ್ಮನಲ್ಲಿ ಆಸಕ್ತರಾಗಿ ಇದ್ದರು. ಅದರಿಂದ ಅಂದರೆ ಪರಮಾತ್ಮನಲ್ಲಿ ಆಸಕ್ತರಾದ ಕಾರಣವೇ

ಮಹಾಸಾಮರ್ಥ್ಯವುಳ್ಳವರಾಗಿದ್ದರು. ಆದರಿಂದ ಇಂದ್ರಾದಿದೇವತೆಗಳು ಅವರಿಂದ ಭಗ್ನರಾದರು. ಇಂದ್ರಾದಿದೇವತೆಗಳು ಪರಮಾತ್ಮನ ಸಮೀಪಕ್ಕೆ ಬಂದು ಭಯದಿಂದ ಪೀಡಿತರಾಗಿ 'ಭಗವಂತನೇ! ದೇವತೆಗಳಿಂದ ಪರಾಜಯಶೂನ್ಯರಾದ ತಪಸ್ಸಿನಿಂದ ದೋಷಹೀನರಾದ ಈ ಮಹಾದೈತ್ಯರನ್ನು ನೀನೇ ಜಯಿಸಬೇಕು' ಎಂದು ಪ್ರಾರ್ಥಿಸಿ ಕೊಂಡರು.

ಈರೀತಿಯಾಗಿ ದೇವತೆಗಳ ಮಾತನ್ನು ಕೇಳಿ ಪರಮಾತ್ಮನು ನನ್ನೊಡನೆ 'ದೇವಶ್ರೇಷ್ಠನಾದ ರುದ್ರನೇ! ನೀನು ಅಸುರರ ಮೋಹಕ್ಕಾಗಿ ಪಾಷಂಡಧರ್ಮವನ್ನು ಅನುಸರಿಸು. ಅವರನ್ನು ಕುರಿತು ತಾಮಸ ಪುರಾಣಗಳನ್ನು ಹೇಳು. ಅವರಿಗಾಗಿ ತಾಮಸಶಾಸ್ತ್ರಗಳನ್ನು ಹೇಳು. ನನ್ನ ಭಕ್ತರಾದ ಯಾವ ಋಷಿಗಳಿರುವರೋ ಅವರಲ್ಲಿ ಪ್ರವೇಶಿಸಿ ತಾಮಸಶಾಸ್ತ್ರಗಳನ್ನು ಹೇಳು. ಕಣಾದ, ಗೌತಮ, ಶಕ್ತಿ ಉಪಮನ್ಯು, ಜೈಮಿನಿ, ಕಪಿಲಋಷಿ, ಮೃಕಂಡು, ಬೃಹಸ್ಪತಿ, ಜಮದಗ್ನಿ ಇವರೆಲ್ಲರನ್ನೂ ಪ್ರವೇಶಿಸಿ ಜಗತ್ತಿಗೆ ಹಿತವನ್ನು ಮಾಡು. ನಿನ್ನ ಶಕ್ತಿಯಿಂದ ಅವರು ಆಗಲೇ ತಾಮಸಶಾಸ್ತ್ರಗಳನ್ನು ಹೇಳುವರು. ಕಪಾಲ, ಚರ್ಮ, ಎಲುಬು ಇವುಗಳೆಲ್ಲವನ್ನೂ ನೀನೇ ಧರಿಸುವವನಾಗಿ ಲೋಕಗಳನ್ನು ಮೋಹಗೊಳಿಸು' ಎಂದು ಹೇಳಿದನು. ಅದನ್ನು ಕೇಳಿ ನಾನು ತುಂಬಾ ಭಯವುಳ್ಳವನಾಗಿ ಆದೆನು.

ತರುವಾಯ ನಾನು ಭಗವಂತನಿಗೆ ನಮಸ್ಕರಿಸಿ 'ದೇವ! ನೀನು ಹೇಳಿದಂತೆ ಲೋಕದಲ್ಲಿ ನಾನು ಮಾಡಿದರೆ ನನಗೆ ನಾಶವೇ ಏರ್ಪಡುವುದಲ್ಲಾ! ಈ ಕಾರ್ಯವನ್ನು ನಾನು ಮಾಡಲಿಕ್ಕೆ ಆಗಲಾರದು. ನಿನ್ನ ಆಜ್ಞೆಯನ್ನು ಮೀರುವುದೂ ಸರಿಯಲ್ಲ. ಇದರಿಂದ ನನಗೆ ತುಂಬಾ ದುಃಖವಾಗಿದೆ' ಎಂದು ಹೇಳಿಕೊಂಡೆನು. ತರುವಾಯ ಪರಮಾತ್ಮನು ನನ್ನನ್ನು ಸಮಾಧಾನಪಡಿಸಿ 'ನೀನು ಮಾಡುವುದು ನಿನ್ನ ನಾಶಕ್ಕೆ ಕಾರಣವಾಗಲಾರದು. ದೇವತೆಗಳ ಹಿತಕ್ಕಾಗಿ ನನ್ನ ಮಾತಿನಂತೆ ಮಾಡು. ನಿನಗೆ ಇದರಿಂದ ಅನರ್ಥವಾಗದಂತೆ ಉಪಾಯವನ್ನು ಹೇಳುತ್ತೇನೆ. ನಿತ್ಯವೂ ನನ್ನ ಸಹಸ್ರನಾಮವನ್ನು ಜಪಿಸು. ಶ್ರೀರಾಮರೂಪವನ್ನು ಧ್ಯಾನಮಾಡುತ್ತಾ ರಾಮಷಡಕ್ಷರ ಮಂತ್ರವನ್ನು ಜಪಿಸುತ್ತಾ ಇರು. ಈ ಮಂತ್ರವು ಸರ್ವದುಃಖಪರಿಹಾರಕವಾದದ್ದು ಪಾಪಿಗಳ ಪಾಪವನ್ನು ಪರಿಹಾರ ಮಾಡುವುದು. ಈ ಮಂತ್ರವನ್ನು ನಿತ್ಯವೂ ಜಪಿಸು ವವನಾಗಿ ನೀನು ಶುದ್ಧನಾಗುವಿ. ಕಪಾಲ, ಭಸ್ಮ ಇತ್ಯಾದಿಗಳನ್ನು ಧರಿಸುವುದರಿಂದ ಉಂಟಾಗುವ ದೋಷವು ರಾಮಮಂತ್ರಜಪದಿಂದ ಪರಿಹೃತವಾಗುವುದು. ನಿನಗೆ ನನ್ನಿಂದ ಇತರ ದೇವತೆಯಲ್ಲಿ ಸರ್ವೋತ್ತಮ ಎಂಬ ಭಾವನೆಯಿಂದ ಭಕ್ತಿಯುಂಟಾಗ

ಲಾರದು. ಹೃದಯದಲ್ಲಿ ಇರುವ ನನ್ನನ್ನು ಸರ್ವೋತ್ತಮನೆಂದು ಮನಸ್ಸಿನಿಂದಲೇ ಪೂಜಿಸುತ್ತಿರು. ನನ್ನ ಮೇಲಿನ ಭಕ್ತಿಯಿಂದ ನನ್ನ ಆಜ್ಞೆಯಂತೆ ಮಾಡು. ಅದೆಲ್ಲವೂ ನನ್ನ ಆಜ್ಞೆಯಿಂದ ನಿನಗೆ ಶುಭವೇ ಆಗುವುದು' ಎಂದು ನನ್ನೊಡನೆ ಹೇಳಿ ದೇವತೆಗಳನ್ನು ಕಳುಹಿಸಿದನು. ದೇವತೆಗಳೂ ನನ್ನೊಡನೆ ಮೋಹಶಾಸ್ತ್ರವನ್ನು ಮಾಡುವಂತೆ ಪ್ರಾರ್ಥಿಸಿದರು.

ತರುವಾಯ ನಾನು ಭಗವಂತನ ಆಜ್ಞೆಯಿಂದ ಭಸ್ಮ ಮೊದಲಾದ ವನ್ನು ಧರಿಸಿಕೊಂಡಿರುವೆನು. ತಾಮಸಶಾಸ್ತ್ರಗಳನ್ನು ಮಾಡಿದೆನು. ಗೌತಮಾದಿ ಬ್ರಾಹ್ಮಣರನ್ನು ಪ್ರವೇಶಿಸಿ ವೇದವಿರುದ್ಧ ಶಾಸ್ತ್ರಗಳನ್ನು ಹೇಳಿದೆನು. ನನ್ನನ್ನು ನೋಡಿ ಎಲ್ಲಾ ರಾಕ್ಷಸರು ನಾನು ಹೇಳಿದ ಶಾಸ್ತ್ರವನ್ನು ಕೇಳಿ ಭಗವಂತನಿಂದ ಪರಾಙ್ಮುಖರಾದರು. ತಾಮಸಸ್ವಭಾವವುಳ್ಳವರಾಗಿ ಭಸ್ಮಾದಿಗಳನ್ನು ಧರಿಸುವವರಾಗಿ ನನ್ನನ್ನೇ ಮಾಂಸರಕ್ತ ಗಂಧ ಇತ್ಯಾದಿಗಳಿಂದ ಪೂಜಿಸಿದರು. ನನ್ನಿಂದ ವರವನ್ನು ಪಡೆದು ಮದಬಲವುಳ್ಳವರಾಗಿ ಅತ್ಯಂತ ವಿಷಯಾಸಕ್ತರಾಗಿ ಕಾಮಕ್ರೋಧವುಳ್ಳವರಾಗಿ ಸಾಮರ್ಥ್ಯರಹಿತರಾಗಿ ದೇವತೆಗಳಿಂದ ಸೋತುಹೋದರು. ಸರ್ವಧರ್ಮದಿಂದ ರಹಿತರಾಗಿ ಕಾಲಕ್ರಮದಿಂದ ಅಧಮಗತಿಯನ್ನು ಹೊಂದುವರು. ಭೂಮಿಯಲ್ಲಿ ಯಾರು ಈ ರೀತಿಯಾಗಿ ಅನುಸರಿಸುವರೋ ಅವರು ಸರ್ವಧರ್ಮರಹಿತರಾಗಿ ನರಕವನ್ನೇ ಹೊಂದುವರು. ದೇವಿ! ಈರೀತಿಯಾಗಿ ದೇವರ ಆಜ್ಞೆಯಿಂದ ದೇವತೆಗಳ ಹಿತಕ್ಕಾಗಿ ನಿಂದ್ಯವಾದ ಭಸ್ಮಧಾರಣೆ ಮೊದಲಾದ ವನ್ನು ಮಾಡುತ್ತಿರುವೆನು. ಅಸುರರ ಮೋಹಕ್ಕಾಗಿ ನಾನು ಧರಿಸುವ ಹೊರಗಿನ ವೇಷವಿದು. ಮನಸ್ಸಿನಲ್ಲಿ ಯಾವಾಗಲೂ ಪರಮಾತ್ಮನನ್ನು ಧ್ಯಾನಮಾಡುತ್ತಲೇ ಇರುವೆನು. ಸಹಸ್ರನಾಮಕ್ಕೆ ಸದೃಶವಾದ ರಾಮಮಂತ್ರವನ್ನು ಯಾವಾಗಲೂ ಜಪಿಸುತ್ತಲೇ ಇರುವೆನು'' ಎಂದು ರುದ್ರದೇವರು ಹೇಳಿದರು.

ಪಾರ್ವತೀದೇವಿಯರು 'ಪರಮಾತ್ಮನಲ್ಲಿ ಭಕ್ತಿಯಿಲ್ಲದ ಬ್ರಾಹ್ಮಣರು ಮಾಡಿದ ತಾಮಸಶಾಸ್ತ್ರಗಳು ಯಾವುವು? ಅವುಗಳ ಹೆಸರನ್ನು ಹೇಳಿರಿ' ಎಂದು ಕೇಳಿದರು. ಅದಕ್ಕೆ ರುದ್ರದೇವರು 'ದೇವಿ! ಕೇಳು. ತಾಮಸಶಾಸ್ತ್ರಗಳನ್ನು ಹೇಳುವೆನು. ಅವುಗಳ ಸ್ಮರಣೆ ಮಾತ್ರದಿಂದಲೇ ಜ್ಞಾನಿಗಳು ಪತಿತರಾಗುವರು. ನಾನು ಮೊದಲು ಪಾಶುಪತ ಮೊದಲಾದ ಶೈವಶಾಸ್ತ್ರವನ್ನು ಮಾಡಿರುವೆನು. ನನ್ನ ಶಕ್ತಿಯಿಂದ ಆವಿಷ್ಟರಾದ ಬ್ರಾಹ್ಮಣರಿಂದ ರಚಿತಗಳಾದ ಶಾಸ್ತ್ರಗಳನ್ನು ಹೇಳುವೆನು. ಕೇಳು ಕಣಾದ ಮಾಡಿದ ಶಾಸ್ತ್ರವು ವೈಶೇಷಿಕಶಾಸ್ತ್ರವು. ಗೌತಮನು ಮಾಡಿದ್ದು ನ್ಯಾಯಶಾಸ್ತ್ರವು. ಕಪಿಲ

ಮುನಿಯು ಮಾಡಿದ್ದು ನಿರೀಶ್ವರ ಸಾಂಖ್ಯವು. ಗೌತಮನು ಮಾಡಿದ್ದು ನ್ಯಾಯ ಶಾಸ್ತ್ರವು. ಕಪಿಲಮುನಿಯು ಮಾಡಿದ್ದು ನಿರೀಶ್ವರ ಸಾಂಖ್ಯವು. (ಕಪಿಲದೇವರು ಮಾಡಿದ್ದು ಭಗವಂತನನ್ನು ಪ್ರತಿಪಾದನೆ ಮಾಡುವ ಪರಮಸಾಂಖ್ಯಶಾಸ್ತ್ರವು ಪರಮಸಾತ್ವಿಕವಾದದ್ದು) ಬೃಹಸ್ಪತಿಯು ಹೇಳಿದ್ದು ಚಾರ್ವಾಕಶಾಸ್ತ್ರವು. ದೈತ್ಯರ ನಾಶಕ್ಕೋಸ್ಕರ ಬುದ್ಧರೂಪಿಯಾದ ಪರಮಾತ್ಮನು ಮಾಡಿದ್ದು ಬುದ್ಧಶಾಸ್ತ್ರವು. ದುಷ್ಟವಾದ ಮಾಯವಾದ ಶಾಸ್ತ್ರವು ಪ್ರಚ್ಛನ್ನಬೌದ್ಧಶಾಸ್ತ್ರವೆನ್ನಿಸುವುದು. ಕಲಿಯುಗ ದಲ್ಲಿ ಒಬ್ಬ ಬ್ರಾಹ್ಮಣನಲ್ಲಿ ಆವಿಷ್ಟನಾದ ನನ್ನಿಂದಲೇ ರಚಿತವಾದದ್ದು. ಅದು ಶ್ರುತಿವಾಕ್ಯಗಳಿಗೆ ವಿಪರೀತವಾದ ಅರ್ಥವನ್ನು ಹೇಳುವುದು. ಪರಮನಿಂದ್ಯ ವಾದದ್ದು. ಅದರಲ್ಲಿ ಪರಮಾತ್ಮ ಜೀವರಿಗೆ ಐಕ್ಯವನ್ನು ಹೇಳುತ್ತದೆ. ಪರಬ್ರಹ್ಮನ ರೂಪವು ನಿರ್ಗುಣವಾದದ್ದು ಎಂದು ಹೇಳಲ್ಪಡುವುದು. ಸರ್ವಜಗತ್ತಿನ ಮೋಹ ಕ್ಕಾಗಿ ಮಾಡಲ್ಪಟ್ಟದ್ದು. ಜೈಮಿನಿಯೆಂಬ ಬ್ರಾಹ್ಮಣನೂ ನಿರೀಶ್ವರ ಶಾಸ್ತ್ರವನ್ನು ಮಾಡಿರುವನು. ಇವುಗಳೆಲ್ಲವೂ ತಾಮಸ ಶಾಸ್ತ್ರಗಳು. ಇನ್ನು ತಾಮಸಪುರಾಣಗಳನ್ನು ಹೇಳುತ್ತೇನೆ. ಕೇಳು. ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯ, ಬ್ರಹ್ಮವೈವರ್ತ, ಲೈಂಗ, ವಾರಾಹ, ವಾಮನ, ಕೌರ್ಮ, ಮಾತ್ಸ್ಯ, ಗಾರುಡ, ಸ್ಕಾಂದ, ಬ್ರಹ್ಮಾಂಡ ಎಂಬ ಹದಿನೆಂಟು ಪುರಾಣ ಗಳಲ್ಲಿ ಮಾತ್ಸ್ಯ, ಕೌರ್ಮ, ಲೈಂಗ, ಶೈವ, ಸ್ಕಾಂದ, ಆಗ್ನೇಯ ಎಂಬ ಆರು ಪುರಾಣಗಳು **ತಾಮಸ ಪುರಾಣಗಳು.** ವೈಷ್ಣವ, ನಾರದೀಯ, ಭಾಗವತ, ಗಾರುಡ, ಪಾದ್ಮ, ವಾರಾಹ ಪುರಾಣಗಳು **ಸಾತ್ವಿಕ ಪುರಾಣಗಳು.** ಬ್ರಹ್ಮಾಂಡ, ಬ್ರಹ್ಮವೈವರ್ತ, ಮಾರ್ಕಂಡೇಯ, ಭವಿಷ್ಯ, ವಾಮನ, ಬ್ರಾಹ್ಮ ಎಂಬ ಪುರಾಣಗಳು, **ರಾಜಸ ಪುರಾಣಗಳು.** ವಾಸಿಷ್ಠ, ಹಾರೀತ, ವ್ಯಾಸ, ಪರಾಶರ, ಭಾರದ್ವಾಜ, ಕಾಶ್ಯಪ ಎಂಬ ಸ್ಮೃತಿಗಳು **ಸಾತ್ವಿಕ ಸ್ಮೃತಿಗಳು.** ಯಾಜ್ಞವಲ್ಕ್ಯ, ಆತ್ರೇಯ, ತೈತ್ತಿರ, ದಾಕ್ಷ, ಕಾತ್ಯಾಯನ, ವೈಷ್ಣವ ಎಂಬ ಸ್ಮೃತಿಗಳು **ರಾಜಸಸ್ಮೃತಿಗಳು.** ಗೌತಮ, ಬಾರ್ಹಸ್ಪತ್ಯ, ಸಾಂವರ್ತ, ಯಮ, ಶಾಂಖ, ಔಶನಸ ಎಂಬ **ತಾಮಸಸ್ಮೃತಿಗಳು.** ಪುರಾಣಗಳಲ್ಲಿಯೂ ಸ್ಮೃತಿಗಳಲ್ಲಿಯೂ ತಾಮಸಗಳು ನರಕಗಳಿಗೆ ಕಾರಣವಾದವುಗಳು.



# ರುದ್ರದೇವರು ಕಾಶಿಯಲ್ಲಿ ವಾಸಮಾಡಿದ್ದು

ಕಾಶೀನಗರದಲ್ಲಿ ದಿವೋದಾಸನೆಂಬ ರಾಜನು ವಾಸಮಾಡುತ್ತಿದ್ದನು. ಅದೇ ಸಮಯದಲ್ಲಿ ರುದ್ರದೇವರು ಪಾರ್ವತೀದೇವಿಯನ್ನು ಮದುವೆ ಮಾಡಿಕೊಂಡು ಪತ್ನಿಯ ಪ್ರೀತಿಗಾಗಿ ಮಾವನ ಮನೆಯಲ್ಲಿಯೇ ವಾಸಮಾಡುತ್ತಿದ್ದರು. ರುದ್ರದೇವರ ಆಜ್ಞೆಯಿಂದ ಅವರ ಗಣಗಳು ಪೂರ್ವದಲ್ಲಿ ರುದ್ರದೇವರು ಉಪದೇಶ ಮಾಡಿದಂತೆ ಸುಂದರರೂಪವನ್ನು ಧರಿಸಿಕೊಂಡು ಪಾರ್ವತೀದೇವಿಯರನ್ನು ಸಂತೋಷಪಡಿಸು ತ್ತಿದ್ದವು. ಆದರಿಂದ ಪಾರ್ವತಿದೇವಿಯು ಸಂತೋಷಪಡುತ್ತಿದ್ದಳು. ಆದರೆ ಪಾರ್ವತೀದೇವಿಯ ತಾಯಿಯಾದ ಮೇನಾದೇವಿಯು ಮಾತ್ರ ಸಂತೋಷಪಡು ತ್ತಿದ್ದಿಲ್ಲ. ಅವಳು ಪಾರ್ವತೀದೇವಿಯೊಡನೆ 'ನಿನ್ನ ಗಂಡನೂ ಅವನ ಪರಿವಾರದವರೂ ಅನಾಚಾರಿಗಳು. ನಿನ್ನ ಗಂಡನಾದ ಶಿವನು ಪರಮದರಿದ್ರನು. ಅವನಿಗೆ ಯಾವಾಗಲೂ ಒಳ್ಳೇ ಸ್ವಭಾವವೇ ಇರುವುದಿಲ್ಲ' ಎಂದು ಹೇಳಿದಳು.

ಈರೀತಿಯಾಗಿ ತನ್ನ ಗಂಡನನ್ನು ನಿಂದಿಸಲು ಪಾರ್ವತೀದೇವಿಗೆ ಸ್ತ್ರೀಸ್ವಭಾವ ದಿಂದ ಕೋಪವು ಬಂದಿತು. ಪೂರ್ವದಲ್ಲಿ ದಕ್ಷನು ಶಿವನಿಂದೆಯನ್ನು ಮಾಡಿ ಅನರ್ಥವನ್ನು ಹೊಂದಿದನು. ಈಗ ತಾಯಿಗೆ ಅಂತಹ ಅವಸ್ಥೆಯನ್ನು ತಂದುಹಾಕ ಬಾರದು ಎಂಬ ಅಭಿಪ್ರಾಯವುಳ್ಳವಳಾಗಿ ತಾಯಿಯ ಎದುರಲ್ಲಿ ಮಂದಹಾಸವನ್ನು ಮಾತ್ರ ಮಾಡಿ ಒಂದೂ ಮಾತಾಡದೆ ರುದ್ರದೇವರ ಬಳಿಗೆ ಹೋದಳು. ಮುಖವನ್ನು ಕಾಂತಿಹೀನವನ್ನಾಗಿ ಮಾಡಿಕೊಂಡು ಹೋಗಿ ರುದ್ರದೇವರೊಡನೆ 'ನಾನಿನ್ನು ಈ ಮನೆಯಲ್ಲಿ ವಾಸಮಾಡಲಾರೆನು. ನನ್ನನ್ನು ನಿಮ್ಮ ಮನೆಗೆ ಕರೆದುಕೊಂಡು ಹೋಗಿರಿ' ಎಂದು ಹೇಳಿದಳು. ರುದ್ರದೇವರು ಹಾಗೆಯೇ ಆಗಲಿ ಎಂದು ಹೇಳಿ ತಾನು ಎಲ್ಲಿ ವಾಸಮಾಡಲಿ ಎಂದು ಎಲ್ಲಾ ಲೋಕಗಳನ್ನು ನೋಡಿದರು. ವಾಸಮಾಡಲಿಕ್ಕೆ ಸಿದ್ಧಿಕ್ಷೇತ್ರವಾದ ಕಾಶೀನಗರವೇ ಉತ್ತಮವಾದದ್ದೆಂದು ಯೋಚಿಸಿದರು. ಆದರೆ ಆ ನಗರವನ್ನು ದಿವೋದಾಸನು ಆಳುತ್ತಿದ್ದನು. ರುದ್ರದೇವರು ಹತ್ತಿರದಲ್ಲೇ ಇದ್ದ ನಿಕುಂಭ ಎಂಬ ಭೂತವನ್ನು ಕರೆದು 'ನೀನು ಕಾಶಿಗೆ ಹೋಗಿ ಅದನ್ನು ಶೂನ್ಯವನ್ನಾಗಿ ಮಾಡು. ಮೃದುವಾದ ಉಪಾಯದಿಂದಲೇ ಮಾಡು. ಆ ರಾಜನು ಅತಿ ಪರಾಕ್ರಮಶಾಲಿಯಾಗಿರುವನು' ಎಂದರು.

ನಿಕುಂಭನು ರುದ್ರದೇವರ ಆಜ್ಞೆಯಿಂದ ಕಾಶಿಗೆ ಹೋಗಿ ಕಂಡುಕ ಎಂದು

1. ಹ.ವಂ.

ಹೆಸರುಳ್ಳ ಒಬ್ಬ ಕ್ಷೌರಿಕನಿಗೆ (ನಾಶವನಿಗೆ) ಸ್ವಪ್ನದಲ್ಲಿ ಕಾಣಿಸಕೊಂಡು 'ನಿನಗೆ ನಾನು ಹಿತವನ್ನು ಮಾಡುತ್ತೇನೆ. ನಗರದ ಕೊನೆಯಲ್ಲಿ ನನಗೊಂದು ಸ್ಥಾನವನ್ನು ಮಾಡಿ ನನ್ನ ಪ್ರತಿಮೆಯನ್ನು ಸ್ಥಾಪಿಸು' ಎಂದು ಹೇಳಿದನು. ಆ ಕ್ಷೌರಿಕನು ತರುವಾಯ ರಾಜನ ಹತ್ತಿರ ತಿಳಿಸಿ ಊರಿನ ದ್ವಾರದಲ್ಲಿ ಸ್ಥಾಪನೆ ಮಾಡಿ ಮಹತ್ತಾದ ಪೂಜೆಯನ್ನು ನಿತ್ಯವೂ ಮಾಡುತ್ತಾ ಬಂದನು. ಗಂಧ ಪುಷ್ಪ ಧೂಪ ಅನ್ನ ಪಾನ ಇತ್ಯಾದಿಗಳಿಂದ ಮಹಾಪೂಜೆಯನ್ನು ಮಾಡಿದನು.

ಈರೀತಿಯಾಗಿಯೇ ನಿತ್ಯವೂ ಪೂಜೆಯು ನಡೆಯುತ್ತಿತ್ತು. ಊರ ಜನರು ಬಂದು ಸೇವೆಯನ್ನು ಮಾಡುವರು. ಅವರಿಗೆ ಮಕ್ಕಳನ್ನು ಬಂಗಾರವನ್ನು ಆಯುಷ್ಯ ವನ್ನು ಸರ್ವ ಅಭೀಷ್ಟಗಳನ್ನು ಭೂತವು ಕೊಡುತ್ತಿತ್ತು. ಆ ಸಮಯದಲ್ಲಿ ರಾಜನಾದ ದಿವೋದಾಸನಿಗೆ ಮಕ್ಕಳು ಇರಲಿಲ್ಲ. ರಾಜನು ಈ ರೀತಿಯಾಗಿ ಭೂತವು ಎಲ್ಲರಿಗೂ ಎಲ್ಲ ವರಗಳನ್ನೂ ಕೊಡುತ್ತಿರುವುದು ಎಂಬ ವರ್ತಮಾನವನ್ನು ಕೇಳಿ ಸುಯಶಾ ಎಂಬ ಹೆಸರುಳ್ಳ ತನ್ನ ಹೆಂಡತಿಯನ್ನು ಸೇವಾಮಾಡಲಿಕ್ಕೆ ಕಳುಹಿಸಿದನು. ರಾಜಪತ್ನಿಯು ರಾಜನಿಂದ ಪ್ರೇರಿತಳಾಗಿ ಮಗನು ಹುಟ್ಟಬೇಕೆಂಬ ಆಸೆಯಿಂದ ಬಂದು ಭೂತಕ್ಕೆ ಮಹಾಪೂಜೆಯನ್ನು ಮಾಡಿಸಿದಳು. ಮಗನು ಹುಟ್ಟಬೇಕೆಂದು ಪ್ರಾರ್ಥಿಸಿದಳು. ಹೀಗೆ ಬಹಳ ಸಲ ಬಂದು ಮಗನಾಗಬೇಕೆಂದು ಪ್ರಾರ್ಥಿಸಿದಳು. ನಿಕುಂಭನು ಮಾತ್ರ 'ರಾಜನಿಗೆ ಕೋಪಬರಲಿ. ಅವನಿಗೆ ಕೋಪಬಂದರೆ ನನ್ನ ಕಾರ್ಯವಾಗುವುದು' ಎಂಬ ಅಭಿಪ್ರಾಯದಿಂದ ಮಗನನ್ನು ಕೊಡಲೇ ಇಲ್ಲ. ಬಹುಕಾಲವಾದ ಮೇಲೆ ರಾಜನಿಗೆ ಕೋಪವುಂಟಾಯಿತು. ಈ ಭೂತವು ನಗರದ್ವಾರದಲ್ಲಿ ಇದ್ದುಕೊಂಡು ನಗರದ ಜನರಿಗೆಲ್ಲಾ ವರಗಳನ್ನು ಕೊಡುತ್ತದೆ. ನನಗೆ ಮಾತ್ರ ಕೊಡುವುದಿಲ್ಲ. ನನ್ನ ನಗರದಲ್ಲಿ ನನ್ನ ನಗರದ ಜನರು ಪೂಜಿಸುತ್ತಾರೆ. ನನ್ನ ಪತ್ನಿಯು ಹೋಗಿ ಎಷ್ಟು ಪ್ರಾರ್ಥಿಸಿದರೂ ವರವನ್ನು ಕೊಡುವುದಿಲ್ಲ. ಉಪಕಾರ ಸ್ಮರಣೆಯಿಲ್ಲದೆ ಈ ಭೂತವು ಏಕೆ ಹೀಗೆ ಮಾಡುತ್ತಿದೆ? ನಿಕುಂಭನು ತನ್ನ ಸ್ಥಾನವನ್ನು ನಾಶಮಾಡಿಸಿದ್ದನಸು ನೋಡಿ ಕೋಪಿಸಿಕೊಂಡು ಅದು ಹೀಗೆ ಮಾಡುವುದರಿಂದ ಅದು ನನ್ನ ನಗರದಲ್ಲಿ ಸತ್ಕಾರವನ್ನು ಹೊಂದುವುದು ಸರಿಯಲ್ಲ. ಆದುದರಿಂದ ಆ ದುಷ್ಟಭೂತದ ಸ್ಥಾನವನ್ನೇ ನಾಶಮಾಡಿಸಿದನು.

'ನಿರಪರಾಧಿಯಾದ ನನ್ನ ಸ್ಥಾನವನ್ನು ನಾಶಮಾಡಿಸಿದೆಯಾದ ಕಾರಣ ನಿನ್ನ ನಗರವು ನಿಷ್ಕಾರಣವಾಗಿ ಶೂನ್ಯವಾಗಲಿ' ಎಂದು ಶಾಪವನ್ನು ಕೊಟ್ಟನು. ಈರೀತಿಯಾಗಿ ಅವನ ಶಾಪದಿಂದ ಕಾಶೀನಗರವು ಜನರಿಂದ ಶೂನ್ಯವಾಯಿತು.

ಜನರೆಲ್ಲರೂ ಸರ್ವದಿಕ್ಕಿಗೆ ಓಡಿಹೋದರು. ನಿಕುಂಭನು ಶಾಪವನ್ನು ಕೊಟ್ಟು ರುದ್ರದೇವರ ಬಳಿಗೆ ಹೋದನು. ರುದ್ರದೇವರು ಪಾರ್ವತೀದೇವಿಯರನ್ನು ಕರೆದುಕೊಂಡು ಅಲ್ಲಿಗೆ ಬಂದು ವಾಸಮಾಡುತ್ತಿದ್ದರು. ದಿವೋದಾಸನು ಆ ನಗರವನ್ನು ಬಿಟ್ಟು ಊರಹೊರಗೆ ಗೋಮತೀಯೆಂಬಲ್ಲಿ ರಾಜ್ಯವನ್ನು ಮಾಡಿ ಕೊಂಡನು. ಪಾರ್ವತೀದೇವಿಯರು 'ಈ ನಗರಿಯಲ್ಲಿ ನಾನು ವಾಸ ಮಾಡಲಾರೆನು. ಮನೆಯಲ್ಲಿ ವಾಸಮಾಡಬೇಕು' ಎಂದರು. ರುದ್ರದೇವರು ನಾನು ಮನೆಯಲ್ಲಿ ವಾಸಮಾಡಲಾರೆನು. ಇದು ಅವಿಮುಕ್ತ ಕ್ಷೇತ್ರ ಅಂದರೆ ಮೋಕ್ಷಕ್ಕೆ ಕಾರಣವಾದ ಕ್ಷೇತ್ರವೆಂದು ನೆಗುತ್ತಾ ಹೇಳಿದರು. ಆದುದರಿಂದ ಕಾಶಿಯು ಅವಿಮುಕ್ತ ಕ್ಷೇತ್ರವೆಂದು ಪ್ರಸಿದ್ಧಿಯನ್ನು ಹೊಂದಿತು. ಅಲ್ಲಿ ರುದ್ರದೇವರು ಸರ್ವದೇವತೆಗಳಿಂದ ನಮಸ್ಕೃತ ರಾಗಿ ಪಾರ್ವತೀದೇವಿಯರಿಂದ ಸಹಿತರಾಗಿ ಮೂರು ಯುಗಗಳಲ್ಲಿಯೂ ವಾಸ ಮಾಡುವರು. ಕಲಿಯುಗದಲ್ಲಿ ಮೂವತ್ತಾರು ಸಾವಿರ ವರ್ಷ ಸಂಧ್ಯಾಂಶವು ಕಳೆದುಹೋದ ಮೇಲೆ ಆ ರುದ್ರದೇವರು ಇದ್ದ ಪುರವು ಮರೆಯಾಗುತ್ತದೆ.



## ದೂರ್ವಾಸರ ಆತಿಥ್ಯ [1]

ಮಹಾನುಭಾವರಾದ ಪಾಂಡವರು ಶಕುನಿಯೊಡನೆ ಕಪಟದ್ಯೂತದಲ್ಲಿ ಸೋತು ಅರಣ್ಯಕ್ಕೆ ಹೋದರು. ಅಲ್ಲಿ ಮುನಿಗಳೊಡನೆ ವಿಚಿತ್ರ ಕಥೆಗಳನ್ನು ಕೇಳುತ್ತಾ ಸಂತೋಷದಿಂದದ ಇದ್ದರು. ಸೂರ್ಯದೇವರು ಕೊಟ್ಟಿರುವ ಅಕ್ಷಯಪಾತ್ರೆಯಲ್ಲಿ ದೊರೆಯುವ ಅನ್ನದಿಂದ ಬಂದ ಬ್ರಾಹ್ಮಣರನ್ನು ತೃಪ್ತಿಪಡಿಸುತ್ತಿದ್ದರು. ಹಾಗೆಯೇ ಅರಣ್ಯದ ನಾನಾಮೃಗಗಳ ಮಾಂಸದಿಂದಲೂ ತೃಪ್ತಿಪಡಿಸುತ್ತಿದ್ದರು. ಸೂರ್ಯ ದೇವರು ಕೊಟ್ಟಿರುವ ಅಕ್ಷಯಪಾತ್ರೆಯಲ್ಲಿ ಅನ್ನವು ದ್ರೌಪದೀದೇವಿಯರ ಭೋಜನವು ಆಗುವವರೆಗೆ ಬರುವುದು. ಆಮೇಲೆ ಆದಿನ ಬರಲಾರದು. ಹೀಗೆ ಪಾಂಡವರು ಸಂತೋಷದಿಂದ ಇದ್ದರು.

ದುರ್ಯೋಧನನು ಪಾಂಡವರು ಕಾಡಿಗೆ ಹೋದರೂ ಅಲ್ಲಿ ಊರಲ್ಲಿ ಇರುವಂತೆ ಸಂತೋಷದಿಂದಲೇ ಇದ್ದಾರೆ ಎಂಬ ವರ್ತಮಾನವನ್ನು ತಿಳಿದು ಅವರಿಗೆ ಏನಾದರೂ ಮಾಡಿ ದುಃಖವನ್ನು ತಂದುಹಾಕಬೇಕೆಂದು ಯೋಚಿಸಿದನು.

1. ಮ.ಭಾ.ವ.ಪ. ಅ. 262, 263; ಮ.ತಾ.ನಿ.ದಲ್ಲಿ ಇದರ ಉಲ್ಲೇಖವಿಲ್ಲ.

ಕಪಟಿಗಳಾದ ಕರ್ಣದುಃಶಾಸನಾದಿಗಳಿಂದ ಕೂಡಿಕೊಡು ಪಾಂಡವರಿಗೆ ಯಾವ ಉಪಾಯದಿಂದ ದುಃಖವನ್ನು ಉಂಟುಮಾಡಲಿ ಎಂದು ಯೋಚಿಸುತ್ತಿದ್ದನು.

ಇಂತಹ ಸಮಯದಲ್ಲಿ ಮಹಾಕೀರ್ತಿವಂತರಾದ ತಪಸ್ವಿಗಳಾದ ಧರ್ಮಿಷ್ಠ ರಾದ ದುರ್ವಾಸರು ಹತ್ತುಸಾವಿರ ಶಿಷ್ಯರಿಂದ ಕೂಡಿಕೊಂಡು ದುರ್ಯೋಧನನ ಮನೆಗೆ ಬಂದನು. ಅತ್ಯಂತ ಕೋಪಸ್ವಭಾವವುಳ್ಳವರಾದ ದುರ್ವಾಸರು ಮನೆಗೆ ಬಂದದ್ದನ್ನು ನೋಡಿ ದುರ್ಯೋಧನನು ವಿನಯವುಳ್ಳವನಾಗಿ ತಮ್ಮಂದಿರಿಂದ ಕೂಡಿಕೊಂಡು ಆತಿಥ್ಯವನ್ನು ಸ್ವೀಕರಿಸಬೇಕೆಂದು ಕೇಳಿಕೊಂಡನು. ಶಾಸ್ತ್ರದಲ್ಲಿ ಹೇಳಿದ ರೀತಿಯಿಂದ ಪೂಜೆಯನ್ನು ಮಾಡಿದನು. ತಾನು ಭೃತ್ಯನಂತೆ ಇದ್ದನು. ದುರ್ವಾಸರು ಕೆಲವು ದಿವಸಗಳವರೆಗೆ ಅಲ್ಲಿಯೇ ಇದ್ದರು. ದುರ್ಯೋಧನನು ಅವರು ಶಾಪವನ್ನು ಕೊಡುವರು ಎಂಬ ಭಯದಿಂದ ರಾತ್ರಿಹಗಲೂ ಆಲಸ್ಯವಿಲ್ಲದೇ ಸೇವಿಸುತ್ತಾ ಇದ್ದನು. 'ನನಗೆ ಹಸಿವೆಯಾಗುತ್ತದೆ. ಬೇಗನೇ ಅನ್ನವನ್ನು ಹಾಕು' ಎಂದು ಹೇಳಿ ಸ್ನಾನಕ್ಕೆ ಹೋಗುವರು. ಸ್ನಾನಕ್ಕೆ ಹೋದವರು ಬಹುಹೊತ್ತಾದರೂ ಬರಲಾರರು. ಆಮೇಲೆ ಬಂದು ನನಗೆ ಹಸಿವೆಯಿಲ್ಲ, ನನಗೆ ಊಟವೂ ಬೇಕಾಗಿಲ್ಲ ಎನ್ನುವರು. ಕೆಲವು ಸಮಯ ಅಕಸ್ಮಾತ್ ಎಂದರೆ ಮೊದಲು ತಿಳಿಸದೆ ಬಂದು ನಮಗೆಲ್ಲಾ ಹಸಿವೆಯಾಗುತ್ತದೆ. ಬೇಗನೇ ಭೋಜನ ಮಾಡಿಸು ಎನ್ನುವರು. ಕೆಲವು ಸಮಯ ಮಧ್ಯರಾತ್ರಿಯಲ್ಲಿ ನಮಗೆ ಹಸಿವೆಯಾಗುತ್ತದೆ. ಭೋಜನ ಮಾಡಿಸು' ಎಂದು ಹೇಳಿ ಅಡಿಗೆ ಮಾಡಿಸಿ, ಆಮೇಲೆ 'ಈ ಅನ್ನವು ಚೆಂದಾಗಿಲ್ಲ. ನಾವು ಊಟಮಾಡಲಾರೆವು' ಎಂದು ಹೇಳಿ ಊಟ ಮಾಡಲಾರರು. ಹೀಗೆಲ್ಲಾ ದುರ್ವಾಸರು ಮಾಡಿದರೂ ದುರ್ಯೋಧನನು ಸ್ವಲ್ಪವಾದರೂ ಬೇಸರಿಕೆಯನ್ನೋ ಕೋಪವನ್ನೋ ತೋರಿಸಲೇ ಇಲ್ಲ. ಆಗ ದುರ್ವಾಸರು ಸಂತೋಷಪಟ್ಟರು. 'ದುರ್ಯೋಧನ1 ನಿನಗೆ ನಾನು ವರವನ್ನು ಕೊಡುವೆನು. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳು. ನಾನು ಪ್ರೀತಿಯನ್ನು ಹೊಂದಿದ ಮೇಲೆ ಯೋಗ್ಯವಾದ ಎಂದರೆ ಅಧರ್ಮಕರವಾಗದೆ ಇರುವ ಯಾವುದು ಬೇಕಾದರೂ ದೊರೆಯುವುದು' ಎಂದರು.

ಈರೀತಿಯಿಂದ ದುರ್ವಾಸರ ಮಾತನ್ನು ಕೇಳಿ ದುರ್ಯೋಧನನು ತಾನು ಪುನಃ ತಾಯಿಯ ಹೊಟ್ಟೆಯಿಂದ ಹುಟ್ಟಿದಂತೆ ಭಾವನ ಮಾಡಿದನು. ದುರ್ವಾಸರು ಸಂತುಷ್ಟರಾದರೆ ಈರೀತಿಯಾಗಿ ವರವನ್ನು ಕೇಳಬೇಕೆಂದು ಮೊದಲೇ ಕರ್ಣ ದುಃಶಾಸನಾದಿಗಳಿಂದ ಸಹಿತನಾಗಿ ಯೋಚನೆ ಮಾಡಿದ್ದನು. ಆಗ ಅತಿಸಂತೋಷ ದಿಂದ ಈರೀತಿಯಾಗಿ ವರವನ್ನು ಕೇಳಿದನು.

'ಪೂಜ್ಯರೇ! ತಾವು ಶಿಷ್ಯರಿಂದ ಸಹಿತರಾಗಿ ನನಗೆ ಹೇಗೆ ಅತಿಥಿಗಳಾಗಿ ಬಂದಿರೋ ಅದೇರೀತಿಯಾಗಿ ನಮ್ಮ ವಂಶದಲ್ಲಿ ಜ್ಯೇಷ್ಠನಾದ ಶ್ರೇಷ್ಠನಾದ ಗುಣವಂತ ನಾದ ಆಚಾರವಂತನಾದ ಧರ್ಮರಾಜನಿಗೂ ಅತಿಥಿಗಳಾಗಿ ಹೋಗಬೇಕು. ಆ ಮಹಾನುಭಾವನು ಅರಣ್ಯದಲ್ಲಿ ವಾಸಮಾಡುತ್ತಿರುವನು. ಅಲ್ಲಿ ಸುಕುಮಾರಿಯಾದ ಯಶಸ್ವಿನಿಯಾದ ರಾಜಪುತ್ರಿಯಾದ ದ್ರೌಪದಿಯು ಎಲ್ಲಾ ಬ್ರಾಹ್ಮಣರನ್ನು ಭೋಜನ ಮಾಡಿಸಿ ತನ್ನ ಪತಿಗಳಿಗೂ ಊಟಮಾಡಿಸಿ ತಾನೂ ಉಂಡು ಶ್ರಮವನ್ನು ಪರಿಹರಿಸಿಕೊಂಡು ಸುಖವಾಗಿ ಕೂತಿರುವ ಸಮಯದಲ್ಲಿ ನೀವು ಅಲ್ಲಿಗೆ ಅತಿಥಿಗಳಾಗಿ ಹೋಗಬೇಕು. ನನಗೆ ಅನುಗ್ರಹ ಮಾಡಬೇಕೆಂಬ ಅಭಿಪ್ರಾಯವಿದ್ದರೆ ಹಾಗೆ ಮಾಡಬೇಕು'

ಈರೀತಿಯಾದ ದುರ್ಯೋಧನನ ಮಾತನ್ನು ಕೇಳಿ ದುರ್ವಾಸರು ನಿನ್ನ ಮೇಲಿನ ಪ್ರೀತಿಯಿಂದ ಹಾಗೇ ಮಾಡುವೆನು' ಎಂದು ಹೇಳಿ ಬಂದಂತೆಯೇ ಅಲ್ಲಿಂದ ಶಿಷ್ಯರಿಂದ ಸಹಿತರಾಗಿ ಹೊರಟು ಹೋದರು. ದುರ್ಯೋಧನನು ಆಗ ತಾನು ಕೃತಾರ್ಥನಾದೆನೆಂದು ತಿಳಿದುಕೊಂಡನು. ತನ್ನ ಕೈಯಿಂದ ಕರ್ಣನ ಕೈಯನ್ನು ಹಿಡಿದುಕೊಂಡು ಸಂತೋಷವನ್ನು ಹೊಂದಿದನು. ಕರ್ಣನು ತಮ್ಮಂದಿರಿಂದ ಕೂಡಿದ ದುರ್ಯೋಧನೊಡನೆ 'ದುರ್ಯೋಧನ! ದೈವೇಚ್ಛೆಯಿಂದ ನಿನ್ನ ಅಭೀಷ್ಟವು ಸಿದ್ಧಿಸಿತು. ದೈವೇಚ್ಛೆಯಿಂದಲೇ ನಿನ್ನ ಶತ್ರುಗಳು ಮಹಾವ್ಯಸನಸಮುದ್ರ ದಲ್ಲಿ ಮುಳುಗಿದರು. ಪಾಂಡುಪುತ್ರರು ದುರ್ವಾಸರ ಕೋಪವೆಂಬ ಬೆಂಕಿಯಲ್ಲಿ ಬಿದ್ದರು. ತಮ್ಮ ಪಾಪಗಳಿಂದಲೇ ಮಹಾ ಆಪತ್ತನ್ನು ಹೊಂದಿದರು' ಎಂದನು.

ಒಂದು ದಿನದಲ್ಲಿ ದುರ್ವಾಸರು ವನದಲ್ಲಿ ಪಾಂಡವರೆಲ್ಲರೂ ಭೋಜನ ಮಾಡಿದ ಮೇಲೆ ದ್ರೌಪದೀದೇವಿಯರೂ ಭೋಜನಮಾಡಿ ಸುಖವಾಗಿ ಕೂತಿರುವ ಸಮಯವನ್ನು ನೋಡಿ ಹತ್ತು ಸಾವಿರ ಶಿಷ್ಯರಿಂದ ಕೂಡಿರೊಂಡು ಅತಿಥಿಗಳಾಗಿ ಬಂದರು. ಬರುತ್ತಿರುವ ಅತಿಥಿಗಳನ್ನು ನೋಡಿ ಧರ್ಮರಾಜನು ತಮ್ಮಂದಿರಿಂದ ಕೂಡಿಕೊಂಡು ಎದುರುಗೊಂಡು ಕರೆದುಕೊಂಡು ಬಂದನು. ಕೈಮುಗಿದು ಆಸನದಲ್ಲಿ ಕೂತುಕೊಳ್ಳಿಸಿದನು. ಶಾಸ್ತ್ರದಲ್ಲಿ ಹೇಳಿದಂತೆ ಪೂಜಿಸಿದನು. 'ತಾವು ಆತಿಥ್ಯವನ್ನು ಸ್ವೀಕರಿಸಬೇಕು. ಆಹ್ನಿಕವನ್ನು ತೀರಿಸಿಕೊಂಡು ಬೇಗನೇ ಬನ್ನಿರಿ' ಎಂದು ಕೇಳಿಕೊಂಡನು. ದುರ್ವಾಸರು ಶಿಷ್ಯರಿಂದ ಸಹಿತರಾಗಿ ತಮ್ಮನ್ನು ಧರ್ಮರಾಜನು ಹೇಗೆ ಭೋಜನ ಮಾಡಿಸುವನು? ಎಂದು ಯೋಚಿಸುತ್ತಾ ಸ್ನಾನಮಾಡಲಿಕ್ಕೆ ಹೋಗಿ, ಅಲ್ಲಿ ಸ್ನಾನಮಾಡಿದರು.

ಈ ಸಮಯದಲ್ಲಿ ಪರಮಪತಿವ್ರತೆಯಾದ ದ್ರೌಪದೀದೇವಿಯರು (ಲೋಕದ ಜನರ ದೃಷ್ಟಿಯಿಂದ) ಅನ್ನಕ್ಕಾಗಿ ತುಂಬಾ ಯೋಚನೆ ಮಾಡಿದರು. ಎಷ್ಟು ಯೋಚನೆ ಮಾಡಿದರೂ ಅನ್ನವು ಸಿಗುವ ಉಪಾಯವು ಕಾಣಿಸಲಿಲ್ಲ. ಕೊನೆಗೆ 'ಭಗವಂತನೇ! ಸರ್ವೋತ್ತಮನೇ! ಶರಣಾಗತವತ್ಸಲನೇ! ನೀನೇ ನನ್ನನ್ನು ರಕ್ಷಿಸು. ನಿನ್ನ ಅನುಗ್ರಹ ವಿದ್ದರೆ ಯಾವ ಆಪತ್ತಿನ ಭಯವೂ ಇಲ್ಲ. ಪೂರ್ವದಲ್ಲಿ ದುರ್ಯೋಧನನ ಸಭೆಯಲ್ಲಿ ನನ್ನನ್ನು ಅಕ್ಷಯವಸ್ತ್ರವನ್ನು ಕೊಟ್ಟು ದುಃಶಾಸನನಿಂದ ಬಿಡಿಸಿದಂತೆ ಈಗಲೂ ಈ ಸಂಕಟದಿಂದ ಬಿಡಿಸಬೇಕು' ಎಂದು ಶ್ರೀಕೃಷ್ಣಪರಮಾತ್ಮನನ್ನೆ ಪ್ರಾರ್ಥಿಸಿಕೊಂಡರು.

ಈರೀತಿಯಾಗಿ ದ್ರೌಪದೀದೇವಿಯರು ಸ್ತೋತ್ರಮಾಡಲು ಭಕವತ್ಸಲನಾದ ಶ್ರೀಭಗವಂತನು ದ್ರೌಪದೀದೇವಿಯರಿಗೆ ಬಂದಿರುವ ಆಪತ್ತನ್ನು ತಿಳಿದು ಹಾಸಿಗೆ ಯಲ್ಲಿ ಸಮೀಪದಲ್ಲಿ ಇದ್ದ ರುಕ್ಮಿಣೀದೇವಿಯರನ್ನೂ ಬಿಟ್ಟು ಓಡಿಬಂದನು. ದ್ರೌಪದೀ ದೇವಿಯರು ಬಂದಿರುವ ಭಗವಂತನನ್ನು ನೋಡಿ ನಮಸ್ಕರಿಸಿ ಸಂತೋಷದಿಂದ, ದುರ್ವಾಸರು ಬಂದಿರುವ ವಿಷಯವನ್ನೆಲ್ಲಾ ಹೇಳಿದರು. ಆಗ ಶ್ರೀಭಗವಂತನು 'ದ್ರೌಪದಿ! ನನಗೆ ತುಂಬಾ ಹಸಿವೆಯಾಗುತ್ತಿದೆ. ನನಗೆ ಭೋಜನವನ್ನು ಮೊದಲು ಮಾಡಿಸು. ಆಮೇಲೆ ಎಲ್ಲಾ ಮಾಡುವಿಯಂತೆ' ಎಂದನು.

ಈರೀತಿಯಾಗಿ ಭಗವಂತನ ಮಾತನ್ನು ಕೇಳಿ ದ್ರೌಪದಿದೇವಿಯರು ಲಜ್ಜಾಪಡುತ್ತಾ 'ಭಗವಂತನೇ! ಅಕ್ಷಯಪಾತ್ರೆಯು ನಾನು ಭೋಜನಮಾಡುವವರೆಗೆ ಮಾತ್ರ ಅನ್ನವನ್ನು ಕೊಡುವುದು. ನಾನು ಊಟಮಾಡಿಯಾಯಿತು. ಆದುದರಿಂದ ಅನ್ನವಿಲ್ಲವಲ್ಲಾ' ಎಂದು ಹೇಳಿದರು. ಆಗ ಭಗವಂತನು 'ದ್ರೌಪದಿ! ಇದು ತಮಾಷೆ ಮಾಡುವ ಕಾಲವಲ್ಲ. ನನಗೆ ಹಸಿವೆಯನ್ನು ತಡೆಯಲಾಗುವುದಿಲ್ಲ. ಬೇಗನೇ ಹೋಗು. ಅಕ್ಷಯಪಾತ್ರೆಯನ್ನು ನನಗೆ ತಂದುತೋರಿಸು' ಎಂದನು. ಈರೀತಿಯಾಗಿ ಕರುಣಾಸಾಗರನಾದ ಪರಮಾತ್ಮನು ನಿರ್ಬಂಧಮಾಡಿ ದ್ರೌಪದಿದೇವಿಯರ ಕೈಯಿಂದ ಅಕ್ಷಯಪಾತ್ರೆಯನ್ನು ತರಿಸಿದನು. ತೊಳೆದಿರುವ ಆ ಅಕ್ಷಯಪಾತ್ರೆಯ ಕುತ್ತಿಗೆಯ ಹತ್ತಿಕೊಂಡಿದ್ದ ಬೇಯಿಸಿದ ಸೊಪ್ಪನ್ನು ನೋಡಿ ಅದನ್ನು ತೆಗೆದು 'ಇದರಿಂದ ಸರ್ವಾಂತರ್ಯಾಮಿಯಾದ ಪರಮಾತ್ಮನು ಸಂತುಷ್ಟನಾಗಲಿ' ಎಂದು ಹೇಳಿ ತಾನು ಸ್ವೀಕಾರ ಮಾಡಿದನು. ತರುವಾಯ ಭಕ್ತರ ಕ್ಲೇಶವನ್ನು ಪರಿಹರಿಸುವ ಕೇಶವನು ಭೀಮಸೇನದೇವರೊಡನೆ ಮುನಿಗಳನ್ನೆಲ್ಲಾ ಬೇಗನೆ ಭೋಜನಕ್ಕೆ ಕರೆದುಕೊಂಡುವ ಬರುವಂತೆ ಹೇಳಿದನು.

ತರುವಾಯ ಭೀಮಸೇನದೇವರು ಬೇಗನೆ ಮುನಿಗಳನ್ನು ಭೋಜನಕ್ಕೆ

ಕರೆಯಲಿಕ್ಕೆ (ಕೂಗಲಿಕ್ಕೆ) ಹೋದರು. ಇಲ್ಲಿ ದುರ್ವಾಸರೇ ಮೊದಲಾದ ಮುನಿಗಳು ಸ್ನಾನಕ್ಕೆ ಗಂಗೆಯಲ್ಲಿ ಇಳಿದು ಮುಳುಗಿ ಮೇಲೆ ಬರುವಾಗ ಅವರೆಲ್ಲರಿಗೂ ಹೊಟ್ಟೆ ತುಂಬಿ ಹೋಗಿತ್ತು. ಮೇಲೆ ಮೇಲೆ ತೇಗು ಬರುತ್ತಿತ್ತು. ನೀರಿನಿಂದ ಮೇಲೆ ಬಂದು ಒಬ್ಬರ ಮುಖವನ್ನು ಮತ್ತೊಬ್ಬರು ನೋಡಿಕೊಂಡರು. ದುರ್ವಾಸರನ್ನು ನೋಡಿ ಎಲ್ಲಾ ಮುನಿಗಳು 'ಧರ್ಮರಾಜನಿಂದ ಅಡಿಗೆಯನ್ನು ಮಾಡಿಸಿ ನಾವು ಸ್ನಾನಕ್ಕೆ ಬಂದಿದ್ದೇವೆ. ಕುತ್ತಿಗೆಯವರೆಗೆ ತೃಪ್ತಿರಾಗಿದ್ದೇವೆ. ನಾವೀಗ ಹೋಗಿ ಏನನ್ನು ಊಟಮಾಡಲಿ? ವ್ಯರ್ಥವಾಗಿ ಅಡಿಗೆ ಮಾಡಿಸಿದೆವಲ್ಲಾ! ಅಲ್ಲಿಗೆ ಹೋಗಿ ಏನು ಮಾಡಲಿ?' ಎಂದು ಹೇಳಿದರು.

ಆಗ ದುರ್ವಾಸರು 'ಧರ್ಮರಾಜನಿಂದ ವ್ಯರ್ಥವಾಗಿ ಅಡಿಗೆ ಮಾಡಿಸಿ ಮಹಾ ಅಪರಾಧವನ್ನು ಮಾಡಿದೆವು. ನಾವೀಗ ಹೋದರೆ ಪಾಂಡವರು ಕ್ರೂರದೃಷ್ಟಿಯಿಂದ ನೋಡಿಯೇ ಸುಡದೆ ಇರಬೇಕಲ್ಲಾ! ಅಂಬರೀಷರಾಜನ ಮಹಿಮೆಯನ್ನು ಸ್ಮರಿಸಿ ಕೊಂಡು ನಾನು ವಿಷ್ಣುಭಕ್ತರಿಂದ ಬಹಳ ಭಯಪಡುತ್ತೇನೆ. ಪಾಂಡವರೆಲ್ಲರೂ ಮಹಾನುಭಾವರು. ಧರ್ಮದಲ್ಲಿ ಆಸಕ್ತರು. ಪರಾಕ್ರಮಶಾಲಿಗಳು. ವಿದ್ಯಾವಂತರು. ವ್ರತಮಾಡುವವರು. ತಪಸ್ಸು ಮಾಡುತ್ತಿರುವವರು. ಸದಾಚಾರ ಸಂಪನ್ನರು. ಶ್ರೀಕೃಷ್ಣ ಪರಮಾತ್ಮನ ಭಕ್ತರು. ಅವರು ಕೋಪಿಸಿಕೊಂಡರೆ ನಮ್ಮನ್ನೆಲ್ಲಾ ಬೆಂಕಿಯು ಹತ್ತಿಯನ್ನು ಸುಡುವಂತೆ ಸುಟ್ಟುಹಾಕುವರು. ಆದುದರಿಂದ ಶಿಷ್ಯರೇ! ಅವರ ಹತ್ತಿರ ಹೇಳದೆಯೇ ಓಡಿಹೋಗಿರಿ' ಎಂದು ಹೇಳಿದರು.

ಈರೀತಿಯಾಗಿ ಗುರುಗಳಾದ ದುರ್ವಾಸರ ಹೇಳಲು ಆ ಮನಿಗಳೆಲ್ಲರೂ ಪಾಂಡವರಿಂದ ಅತ್ಯಂತ ಭಯವುಳ್ಳವರಾಗಿ ಹತ್ತು ದಿಕ್ಕುಗಳಿಗೆ ಓಡಿಹೋದರು. ಭೀಮಸೇನದೇವರು ಗಂಗಾತೀರಕ್ಕೆ ಬಂದು ಮುನಿಗಳನ್ನು ಕಾಣದೆ ಅವರನ್ನು ಹುಡುಕುತ್ತಾ ಗಂಗೆಗೆ ಇಳಿಯುವ ಸ್ಥಳಗಳಲ್ಲಿ ಎಲ್ಲಾ ಹುಡುಕಿದರು. ಆಗ ಅಲ್ಲಿರುವ ಋಷಿಗಳು 'ಅವರೆಲ್ಲರೂ ಆಗಲೇ ಓಡಿಹೋದರು' ಎಂದು ಹೇಳಲು ಭೀಮಸೇನ ದೇವರು ಧರ್ಮರಾಜನ ಸಮೀಪಕ್ಕೆ ಬಂದು ತಿಳಿಸಿದರು. ತರುವಾಯ ಪಾಂಡವ ರೆಲ್ಲರೂ ಎಲ್ಲಿ ಪುನಃ ದುರ್ವಾಸರು ಬರುವರೋ ಎಂದು ನಿರೀಕ್ಷಿಸುತ್ತಾ ಇದ್ದರು. ಇದ್ದಕ್ಕಿದ್ದಂತೆ ಮಧ್ಯರಾತ್ರಿಯಲ್ಲಿ ಬಂದು ಉಪದ್ರ ಕೊಡಬಹುದು. ಈ ಆಪತ್ತಿನಿಂದ ನಾವು ಹೇಗೆ ಪಾರಾಗಲಿ' ಎಂದುಕೊಂಡರು.

ಈರೀತಿಯಾಗಿ ಯೋಚಿಸುತ್ತಿರುವಾಗ ಶ್ರೀಕೃಷ್ಣಪರಮಾತ್ಮನು ಎದುರಿಗೆ ಬಂದವನಾಗಿ 'ಪರಮಕೋಪಉಳ್ಳವರಾದ ದುರ್ವಾಸರಿಂದ ನಿಮಗೆ ಬಂದಿರುವ

ಆಪತ್ತನ್ನು ತಿಳಿದು ದ್ರೌಪದಿಯು ಧ್ಯಾನಮಾಡಲು ನಾನು ಬೇಗನೇ ಬಂದೆನು. ನಿಮಗಿನ್ನು ಆ ದುರ್ವಾಸರಿಂದ ಸ್ವಲ್ಪವೂ ಭಯವಿರುವುದಿಲ್ಲ. ದುರ್ವಾಸರು ನಿಮ್ಮ ತೇಜಸ್ಸಿನಿಂದ ಭಯವುಳ್ಳವರಾಗಿ ಆಗಲೇ ಓಡಿಹೋಗಿರುವರು. ನಿತ್ಯವೂ ಧರ್ಮದಲ್ಲಿರುವವರಿಗೆ ಯಾವಾಗಲೂ ಭಯವುಂಟಾಗಲಾರದು. ನಾನು ಹೋಗಿ ಬರುತ್ತೇನೆ. ನಿಮಗೆ ಮಂಗಳವಾಗಲಿ' ಎಂದು ಹೇಳಿದರು.

ಶ್ರೀಭಗವಂತನು ಹೇಳಿದ ಮಾತನ್ನು ಕೇಳಿ ದ್ರೌಪದಿದೇವಿಯರಿಂದ ಸಹಿತರಾದ ಪಾಂಡವರು ವ್ಯಸನರಹಿತರಾಗಿ 'ಗೋವಿಂದನೇ! ನಿನ್ನಿಂದ ದಾಟಲಿಕ್ಕೆ ಅಶಕ್ಯವಾದ ಆಪತ್ತನ್ನು ದಾಟಿದೆವು. ಸಮುದ್ರದಲ್ಲಿ ಮುಳುಗುವವರು ದೋಣಿಯನ್ನು ಆಶ್ರಯಿಸಿ ಮೇಲೆ ಬಂದಂತಾಯಿತು. ಭಗವಂತನೇ! ಮಂಗಳವಾಗಲಿ. ನಿನ್ನ ಕಾರ್ಯವನ್ನು ನೋಡಿಕೊ' ಎಂದು ಹೇಳಿದರು. ಶ್ರೀಭಗವಂತನು ಪಾಂಡವರ ಅನುಜ್ಞೆಯನ್ನು ಪಡೆದು ದ್ವಾರಕಾಪಟ್ಟಣಕ್ಕೆ ಹೋದನು. ಮಹಾನುಭಾವರಾದ ಪಾಂಡವರು ದ್ರೌಪದೀದೇವಿಯರಿಂದ ಸಹಿತರಾಗಿ ಸಂತೋಷದಿಂದ ಕಾಡಿನಲ್ಲಿ ವಿಹಾರ ಮಾಡುತ್ತಾ ಇದ್ದನು.



## ಇಂದ್ರದೇವರ ಬ್ರಹ್ಮಹತ್ಯೆಯ ವಿಭಾಗವು [1]

ಹನ್ನೊಂದು ಸಾವಿರವರ್ಷ ವೃತ್ರಾಸುರನಿಗೂ ಇಂದ್ರದೇವರಿಗೂ ಯುದ್ಧವು ನಡೆಯಿತು. ತರುವಾಯ ಇಂದ್ರದೇವರು ಸೋತು ಹೋದವರಾಗಿ ವೃತಾಸುರ ನೊಡನೆ ರಾಜಿಮಾಡಿಕೊಂಡು ಬಂದು ರುದ್ರದೇವರನ್ನು ಮರೆಹೊಂದಿದರು. ವಾತ್ರಘ್ನೀ ಸಾಭ್ರಮತೀ ಸಂಗಮದಲ್ಲಿ ರುದ್ರದೇವರನ್ನು ಸಂತೋಷಪಡಿಸಿದನು. ತರುವಾದ ರುದ್ರದೇವರು ಅಂತರಿಕ್ಷದಲ್ಲಿ ದರ್ಶನವನ್ನು ಕೊಟ್ಟರು. ಅವರ ಶರೀರದಿಂದ ಭೂಮಿಯಲ್ಲಿ ಭಸ್ಮವು ಬಿದ್ದಿತು. ಆದರಿಂದ ಭಸ್ಮಗಾತ್ರವೆಂದು ಹೆಸರುಳ್ಳ ಲಿಂಗವು ನಿರ್ಮಿತವಾಯಿತು. ಆದರ ದರ್ಶನದಿಂದ ಬ್ರಹ್ಮಹತ್ಯೆಯು ಪರಿಹೃತವಾಗು ವುದು. ರುದ್ರದೇವರು ಇಂದ್ರದೇವರಿಗೆ ಪ್ರತ್ಯಕ್ಷರಾಗಿ 'ಇಂದ್ರ! ನೀನು ಯಾವುದನ್ನು ಇಚ್ಛಿಸುವಿಯೋ ಅದನ್ನು ಕೊಡುವೆನು. ಈ ವಜ್ರಾಯುಧದಿಂದ ಬೇಗನೇ ವೃತ್ರಾಸುರನನ್ನು ಸಂಹರಿಸುವಿ' ಎಂದು ಹೇಳಿದರು. ಆಗ ಇಂದ್ರದೇವರು 'ನಿಮ್ಮ

1. ಭಾಗ. VI-9

ಅನುಗ್ರಹದಿಂದ ಅಸುರನನ್ನು ವಜ್ರಾಯುಧದಿಂದ ನೀವು ನೋಡುತ್ತಿರುವಂತೆಯೇ ಸಂಹರಿಸುವೆನು' ಎಂದು ಹೇಳಿದರು.

ಈರೀತಿಯಾಗಿ ಹೇಳಿ ಇಂದ್ರದೇವರು ವೃತ್ರಾಸುರನ ಬಳಿಗೆ ಹೋದರು. ಆಗ ದೇವಸೈನ್ಯದಲ್ಲಿ ದುಂದುಭಿಯನ್ನು ಬಾರಿಸಿದರು. ಮೃದಂಗ ಡಿಂಡಿಮ ಭೇರೀ ಇತ್ಯಾದಿ ಅನೇಕ ವಾದ್ಯಗಳನ್ನು ಬಾರಿಸಿದರು. ಅಸುರರಿಗೆಲ್ಲಾ ಬಲವು ಕಡಿಮೆ ಯಾಯಿತು. ಇಂದ್ರದೇವರು ಆ ಕ್ಷಣದಲ್ಲಿಯೇ ಬಲವುಳ್ಳವರಾದರು. ಆಗ ಋಷಿ ಗಳು ಸರ್ಪಗಳೂ ಇಂದ್ರದೇವರನ್ನು 'ಜಯ ಜಯ' ಎಂದು ಸ್ತೋತ್ರ ಮಾಡಿದರು. ಋಷಿಗಳಿಂದ ಸ್ತೋತ್ರ ಮಾಡಲ್ಪಟ್ಟ ಯುದ್ಧಕ್ಕೆ ಹೋಗುತ್ತಿದ್ದ ಇಂದ್ರದೇವರ ರೂಪವು ಅತ್ಯದ್ಭುತವಾಗಿದ್ದಿತು. ಆ ಸಮಯದಲ್ಲಿ ಇದ್ದಕ್ಕಿದ್ದಂತೆ ಯುದ್ಧರಂಗವನ್ನು ವೃತ್ರಾಸುರನ ಮುಖವು ಜ್ವಲಿಸಿತು. ಮೈಯೆಲ್ಲಾ ಕಪ್ಪಾಯಿತು. ಮೈಯಲ್ಲಿ ಕಂಪವು ಉಂಟಾಯಿತು. ಉಷ್ಣವಾದ ಶ್ವಾಸವು ಉಂಟಾಯಿತು. ಮೈಯೆಲ್ಲಾ ರೋಮಾಂಚನವಾಯಿತು. ದೀರ್ಘಶ್ವಾಸವುಂಟಾಯಿತು. ಹದ್ದು ಮೊದಲಾದ ಭಯಂಕರ ಪಕ್ಷಿಗಳು ಕೂಗಿ ಕೊಂಡವು. ವೃತ್ರಾಸುರನ ತಲೆಯ ಮೇಲೆ ಚಕ್ರದಂತೆ ಸುತ್ತಿದವು.

ತರುವಾಯ ಇಂದ್ರದೇವರು ಆನೆಯ ಮೇಲೆ ಕೂತುಕೊಂಡು ಕೈಯಲ್ಲಿ ವಜ್ರಾಯುಧವನ್ನು ಹಿಡಿದುಕೊಂಡು ವೃತ್ರಾಸುರನ ಬಳಿಗೆ ಬಂದರು. ವಜ್ರಧಾರಿ ಯಾಗಿದ್ದ ಪ್ರಲಯ ಕಾಲದ ಅಗ್ನಿಯಂತೆ ಇದ್ದ ಮಹಾತೇಜಸ್ವಿಯಾದ ಇಂದ್ರದೇವರು ಮಹಾಗರ್ಜನೆ ಮಾಡುವವರಾಗಿ ವಜ್ರಾಯುಧವನ್ನು ಸಮುದ್ರ ತೀರದಲ್ಲಿ ವೃತ್ರಾಸುರನ ಮೇಲೆ ಹಾಕಿದರು. ಸರ್ವದೇವತೆಗಳಿಗೂ ಭಯಂಕರನಾದ ವೃತ್ರಾಸುರನು ಮೃತನಾಗಲು ಮಹಾಶಬ್ದವುಂಟಾಯಿತು. ಇಂದ್ರದೇವರ ತಲೆಯ ಮೇಲೆ ಮಹತ್ತಾದ ಪುಷ್ಪದ ಮಳೆಯು ಸುರಿಯಿತು. ಇಂದ್ರದೇವರು ವೃತ್ರಾಸುರನನ್ನು ಕೊಂದು ದೇವತೆಗಳಿಂದ ಸ್ತೋತ್ರ ಮಾಡಲ್ಪಡುತ್ತಾ ದೇವಲೋಕ ವನ್ನು ಪ್ರವೇಶಿಸಿದರು.

ತರುವಾಯ ವೃತ್ರಾಸುರನ ಶರೀರದಿಂದ ಒಂದು ತೇಜಸ್ಸು ಹೊರಗೆ ಬಂದಿತು. ಅದೇ ಬ್ರಹ್ಮಹತ್ಯೆಯು. ಬ್ರಹ್ಮಹತ್ಯೆಯು ಭಯಂಕರಳಾಗಿದ್ದಳು. ಭಯಂಕರವಾದ ಮುಖ ಕೃಷ್ಣ ಪಿಂಗಲ ಬಣ್ಣವುಳ್ಳವಳಾಗಿದ್ದಳು. ತಲೆಯ ಓಡುಗಳನ್ನು ಮಾಲೆಯನ್ನಾಗಿ ಹಾಕಿಕೊಂಡು ಕೃಶಳಾಗಿ ಮೈಯೆಲ್ಲಾ ರಕ್ತವುಳ್ಳವಳಾಗಿ ಮೀನಿನ ದುರ್ವಾಸನೆ ಯುಳ್ಳವಳಾಗಿ ಅತಿಭಯಂಕರಳಾಗಿ ಇದ್ದಳು. ಅವಳು ಇಂದ್ರದೇವರನ್ನು ಹುಡುಕುತ್ತಾ ಹೋದಳು. ಓಡುತ್ತಾ ಅವಳು ಇಂದ್ರದೇವರನ್ನು ನೋಡಿ ಇಂದ್ರದೇವರ ಕುತ್ತಿಗೆ

ಯಲ್ಲಿ ಹಿಡಿದುಕೊಂಡಳು. ಇಂದ್ರದೇವರು ಬ್ರಹ್ಮಹತ್ಯೆಯ ಭಯದಿಂದ ಪದ್ಮನಾಳದಲ್ಲಿ ಬಹುವರ್ಷ ವಾಸಮಾಡಿದರು. ಅವರು ಬ್ರಹ್ಮಹತ್ಯೆಯಿಂದ ಹಿಡಿಯಲ್ಪಟ್ಟವರಾಗಿ ಚೇಷ್ಟಾರಹಿತರಾದರು. ಬ್ರಹ್ಮಹತ್ಯೆಯಿಂದ ಬಿಡಿಸಿಕೊಳ್ಳ ಬೇಕೆಂದು ಪ್ರಯತ್ನ ಮಾಡಿದರು. ಬಿಡಿಸಿಕೊಳ್ಳಲಿಕ್ಕೆ ಆಗಲಿಲ್ಲ. ತರುವಾಯ ಮೇಕೆಯ ರೂಪವನ್ನು ಧರಿಸಿ ಬ್ರಹ್ಮದೇವರ ಬಳಿಗೆ ಬಂದು ಶಿರಸಾ ಪೂಜಿಸಿದರು. ಬ್ರಹ್ಮದೇವರು, ಇಂದ್ರದೇವರು ಬ್ರಹ್ಮಹತ್ಯೆಯಿಂದ ಹಿಡಿಯಲ್ಪಟ್ಟಿರುವರೆಂದು ತಿಳಿದು ಸ್ವಲ್ಪ ಯೋಚನೆ ಮಾಡುವಂತೆ ತೋರಿಸಿಕೊಂಡು ಇದ್ದರು. ಆಗ ಬ್ರಹ್ಮಹತ್ಯೆಯು ಬ್ರಹ್ಮದೇವರ ಬಳಿಗೆ ಬಂದು 'ಪೂಜ್ಯರೇ! ನಾನು ತಮ್ಮ ಬಳಿಗೆ ಬಂದಿರುವೆನು. ನಾನು ಏನು ಮಾಡಬೇಕೆಂಬುದನ್ನು ತಾವು ಆಜ್ಞಾಪಿಸಬೇಕು' ಎಂದು ಹೇಳಿದಳು. ಅದಕ್ಕೆ ಬ್ರಹ್ಮದೇವರು ಮಧುರವಾದ ಸ್ವರದಿಂದ 'ಸುಂದರಿ! ದೇವೇಂದ್ರನನ್ನು ಬಿಟ್ಟುಬಿಡು. ನನ್ನ ಪ್ರಿಯವನ್ನು ಮಾಡು. ನಿನಗೆ ನಾನು ಏನು ಮಾಡಲಿ? ನಿನು ಯಾವುದನ್ನು ಇಚ್ಛಿಸುವಿ? ಹೇಳು' ಎಂದು ಕೇಳಿದರು.

ಬ್ರಹ್ಮಹತ್ಯೆಯು 'ದೇವೋತ್ತಮರೇ! ನಿಮ್ಮ ಮಾತಿನಿಂದ ಇಂದ್ರದೇವರನ್ನು ಬಿಟ್ಟು ಹೋಗುತ್ತೇನೆ. ನಿಮಗೆ ನಮಸ್ಕಾರವು. ನನಗೆ ವಾಸಸ್ಥಾನವನ್ನು ಕೊಡಿರಿ' ಎಂದು ಹೇಳಿದಳು.

ಬ್ರಹ್ಮದೇವರು 'ಹಾಗೆಯೇ ಆಗಲಿ' ಎಂದು ಹೇಳಿ 'ಇಂದ್ರದೇವರ ಬ್ರಹ್ಮಹತ್ಯೆಯನ್ನು ಪರಿಹರಿಸುವುದಕ್ಕಾಗಿ ಅಗ್ನಿಯನ್ನು ಕೂಗಿ 'ಇಂದ್ರನ ಬ್ರಹ್ಮಹತ್ಯೆಯಲ್ಲಿ ನಾಲ್ಕನೇ ಒಂದು ಭಾಗವನ್ನು ಸ್ವೀಕರಿಸು' ಎಂದು ಹೇಳಿದರು. ಆಗ ಅಗ್ನಿದೇವರು 'ನನಗೆ ಬಂದಿರುವ ಬ್ರಹ್ಮಹತ್ಯೆಯು ಪರಿಹಾರವಾಗುವ ಉಪಾಯವೇನು?' ಎಂದು ಕೇಳಿದರು. ಆಗ ಬ್ರಹ್ಮದೇವರು '**ಯಾರು ಜ್ವಲಿಸುತ್ತಿರುವ ನಿನ್ನಲ್ಲಿ ಎಳ್ಳು ಇತ್ಯಾದಿಗಳಿಂದ ಹೋಮ ಮಾಡುವುದಿಲ್ಲವೋ ಆಗ ನಿನ್ನಲ್ಲಿರುವ ಬ್ರಹ್ಮಹತ್ಯೆಯು ನಿನ್ನನ್ನು ಬಿಟ್ಟು ಅವನಲ್ಲಿ ಹೋಗಿ ಅವನಲ್ಲಿಯೇ ಇರುವುದು**' ಎಂದು ಹೇಳಿದರು. ತರುವಾಯ ಅಗ್ನಿಯು ಒಂದು ಭಾಗ ಬ್ರಹ್ಮಹತ್ಯೆಯು ಅಂಗೀಕರಿಸಿದರು.

ಆಮೇಲೆ ಬ್ರಹ್ಮದೇವರು ಮರಗಿಡಗಳನ್ನು ಕರೆದು ಒಂದು ಭಾಗ ಬ್ರಹ್ಮಹತ್ಯೆಯನ್ನು ಸ್ವೀಕರಿಸಬೇಕೆಂದರು. ಅದಕ್ಕೆ ಅವುಗಳು 'ನಮ್ಮ ಬ್ರಹ್ಮಹತ್ಯೆಯು ಹೇಗೆ ಹೋಗುವುದು. ನಾವು ಮೊದಲೇ ಮೃತಪ್ರಾಯರಾಗಿರುವೆವು. ಪುನಃ ನಮ್ಮನ್ನು ಮೃತರನ್ನಾಗಿ ಮಾಡಬಾರದು. ನಾವು ಬಿಸಿಲನ್ನೂ ಶೀತವನ್ನು ಮಳೆಯನ್ನೂ ಗಾಳಿಯನ್ನು ಸಹಿಸಿಕೊಂಡು ಇರುವೆವು. ನಮ್ಮನ್ನು ಜನರು ಕಡಿಯುವರು.

ಸೀಳುವರು. ಅದನ್ನು ಸಹಿಸಿಕೊಂಡಿರುವುವೆವು' ಎಂದು ಹೇಳಿದವು. ಬ್ರಹ್ಮದೇವರು ಯಾರು ಮಹಾಮೋಹದಿಂದ ನಿಷ್ಕಾರಣವಾಗಿ **ನಿಮ್ಮನ್ನು ಕಡಿಯುವನೋ ಸೀಳುವನೋ ಅವನಿಗೆ ನಿಮ್ಮ ಬ್ರಹ್ಮಹತ್ಯೆಯು ಹೋಗುವುದು**' ಎಂದರು. ತರುವಾಯ ಮರಗಿಡಗಳು ಬ್ರಹ್ಮಹತ್ಯೆಯನ್ನು ಸ್ವೀಕರಿಸಿ ಬ್ರಹ್ಮದೇವರನ್ನು ಪೂಜಿಸಿ ಹೊರಟು ಹೋದವು. ಆಮೇಲೆ ಬ್ರಹ್ಮದೇವರು ಅಪ್ಸರಸ್ತ್ರೀಯರನ್ನು ಕರೆದು ಬ್ರಹ್ಮಹತ್ಯೆಯನ್ನು ಸ್ವೀಕರಿಸುವಂತೆ ಹೇಳಿದರು. ಅವರೂ ತಮ್ಮ ಬ್ರಹ್ಮಹತ್ಯೆಯ ಪರಿಹಾರದ ಉಪಾಯವನ್ನು ಹೇಳಬೇಕೆಂದರು. ಅದಕ್ಕೆ ಬ್ರಹ್ಮದೇವರು '**ಯಾರು ರಜಸ್ವಲಾಸ್ತ್ರೀಯ ಸಂಗವನ್ನು ಮಾಡುವನೋ ಅವನಿಗೆ ನಿಮ್ಮಲ್ಲಿರುವ ಬ್ರಹ್ಮಹತ್ಯೆಯು ಹೋಗುವುದು**' ಎಂದರು. ಅಪ್ಸರಸ್ತ್ರೀಯರು ಆಗಲಿ ಎಂದು ಬ್ರಹ್ಮಹತ್ಯೆಯನ್ನು ಸ್ವೀಕರಿಸಿ ತಮ್ಮ ಸ್ಥಾನಕ್ಕೆ ಹೊರಟುಹೋದರು. ತರುವಾಯ ಬ್ರಹ್ಮದೇವರು ನೀರನ್ನು ಯೋಚಿಸಿದರು. ನೀರು ಬಂದು ನಮಸ್ಕರಿಸಿ ಆಜ್ಞಾ ಮಾಡಬೇಕೆಂದು ಕೇಳಿಕೊಂಡಿತು. ಆಗ ಬ್ರಹ್ಮದೇವರು 'ಇಂದ್ರನಿಗೆ ವೃತ್ರಾಸುರನ ಸಂಹಾರದಿಂದ ಭಯಂಕರವಾದ ಬ್ರಹ್ಮಹತ್ಯೆಯು ಬಂದಿರುವುದು. ಅದರ ನಾಲ್ಕನೇ ಒಂದು ಭಾಗವನ್ನು ನೀನು ಸ್ವೀಕರಿಸಬೇಕು' ಎಂದು ಹೇಳಿದರು. ಆಗ ನೀರು ನನ್ನ ಬ್ರಹ್ಮಹತ್ಯೆಯು ಹೋಗುವ ಉಪಾಯವು ಏನು ಎಂಬು ಕೇಳಲು 'ನೀರು ಅಲ್ಪವೆಂದು ತಿಳಿದುಕೊಂಡು **ನೀರಿನಲ್ಲಿ ಯಾರು ಮಲಮೂತ್ರಾದಿಗಳನ್ನು ಹಾಕುತ್ತಾನೋ ಅವನಿಗೆ ನಿನ್ನಲ್ಲಿರುವ ಬ್ರಹ್ಮಹತ್ಯೆಯು ಹೊರಟುಹೋಗುವುದು**' ಎಂದು ಹೇಳಿದರು. ಈರೀತಿಯಾಗಿ ಬ್ರಹ್ಮಹತ್ಯೆಯಿಂದ ಇಂದ್ರದೇವರನ್ನು ಬ್ರಹ್ಮದೇವರು ಬಿಡಿಸಿದರು. ಬ್ರಹ್ಮಹತ್ಯೆಯು ಹೊರಟು ಹೋಯಿತು. ಇಂದ್ರದೇವರು ಸಂತೋಷಪಟ್ಟರು. ಆಮೇಲೆ ಇಂದ್ರದೇವರು ಈ ತೀರ್ಥದಲ್ಲಿ ತಪಸ್ಸು ಮಾಡಿ ಶುದ್ಧವಾದ ಮನಸ್ಸುಳ್ಳವರಾದರು. ನಂತರದಲ್ಲಿ ಅಶ್ವಮೇಧಯಾಗವನ್ನು ಮಾಡಿ ಶುದ್ಧರಾದರು.



# ಕಾಲಿಂದೀ ಮಹಿಮಾ ಇಂದ್ರದೇವರ ಯಾಗವು [1]

ಒಂದು ಸಮಯದಲ್ಲಿ ನಾರದರೂ ಪರ್ವತಋಷಿಗಳೂ ಆಕಾಶಮಾರ್ಗದಲ್ಲಿ ಹೋಗುತ್ತಾ ಮನೋಹರವಾದ ಖಾಂಡವವನವನ್ನು ನೋಡಿದರು. ಅವರಿಬ್ಬರೂ ಆಕಾಶದಿಂದ ಕೆಳಗೆ ಇಳಿದು ಕಾಲಿಂದೀನದಿಯ ತೀರದಲ್ಲಿ ಸ್ವಲ್ಪ ಹೊತ್ತು ಕೂತುಕೊಂಡರು. ಆಮೇಲೆ ಅವರಿಬ್ಬರೂ ಸ್ನಾನಮಾಡಲಿಕ್ಕೆ ಯಮುನೆಗೆ (ಕಾಲಿಂದಿಗೆ) ಇಳಿದರು. ಅಷ್ಟರಲ್ಲಿ ಶಿಬಿರಾಜನು ಮೃಗಬೇಟೆಯಾಡುತ್ತಾ ಅಲ್ಲಿಗೆ ಬಂದನು. ಅವನು ನಾರದಪರ್ವತರು ಸ್ನಾನಕ್ಕೆ ಇಳಿದದ್ದನ್ನು ನೋಡಿ ಅವರು ಸ್ನಾನವನ್ನು ಮುಗಿಸಿಕೊಂಡುಬರಲೆಂದು ನಿರೀಕ್ಷಿಸಿಕೊಂಡು ಇದ್ದನು. ಆಮೇಲೆ ಮುನಿಗಳಿಬ್ಬರೂ ವಿಧಿಪ್ರಕಾರವಾಗಿ ಸ್ನಾನವನ್ನು ಮುಗಿಸಿಕೊಂಡು ಬಂದರು. ಶಿಬಿರಾಜನಿಂದ ನಮಸ್ಕೃತರಾಗಿ ಅವನ ಒಟ್ಟಿಗೆ ಕಾಲಿಂದೀತೀರದಲ್ಲಿ ಕೂತು ಕೊಂಡರು. ಶಿಬಿರಾಜನು ಗರ್ವರಹಿತನಾಗಿರುವವನು. ಕಾಲಿಂದೀತೀರದಲ್ಲಿ ಇದ್ದ ಸಾವಿರಾರು ಯಜ್ಞಸ್ತಂಭಗಳನ್ನು ನೋಡಿ ನಾರದ ಪರ್ವತರೊಡನೆ 'ಪೂಜ್ಯರೇ! ಇಷ್ಟು ಯಜ್ಞಸ್ತಂಭಗಳನ್ನು ಯಾರು ಇಟ್ಟಿರುವರು? ಯಾರು ಇಷ್ಟು ಯಾಗಗಳನ್ನು ಮಾಡಿರುವರು? ದೇವತೆಯೋ? ಮನುಷ್ಯನೋ? ಕಾಶಿಯೇ ಮೊದಲಾದ ತೀರ್ಥಗಳನ್ನು ಬಿಟ್ಟು ಇಲ್ಲಿ ಯಾರು ಯಾಗವನ್ನು ಮಾಡಿರುವರು? ಇತರ ತೀರ್ಥಗಳಿಗಿಂತ ಇಲ್ಲಿ ವಿಶೇಷವೇನಿದೆ?' ಎಂದು ಕೇಳಿದನು.

ಆದಕ್ಕೆ ನಾರದರು 'ಪೂರ್ವದಲ್ಲಿ ಹಿರಣ್ಯಕಶಿಪುವು ಇಂದ್ರಾದಿದೇವತೆಗಳನ್ನು ಜಯಿಸಿ ಮೂರುಲೋಕಗಳನ್ನೂ ಹೊಂದಿ ಬಹಳ ಗರ್ವವುಳ್ಳವನಾಗಿದ್ದನು. ಅವನು ತನ್ನ ಮಗನಾದ ವಿಷ್ಣುಭಕ್ತನಾದ ಪ್ರಹ್ಲಾದನಿಗೆ ತುಂಬಾ ದ್ರೋಹವನ್ನು ಮಾಡಿದನು. ಆದರಿಂದ ಭಗವಂತನು ನೃಸಿಂಹರೂಪವನ್ನು ಧರಿಸಿ ಅವತರಿಸಿ ಹಿರಣ್ಯಕಶಿಪುವನ್ನು ಸಂಹರಿಸಿ ಮೂರುಲೋಕಗಳನ್ನು ಇಂದ್ರದೇವರಿಗೆ ಕೊಟ್ಟನು. ಇಂದ್ರದೇವರು ತನ್ನ ಪದವಿಯನ್ನು ಹೊಂದಿದ ಮೇಲೆ ಬೃಹಸ್ಪತ್ಯಾಚಾರ್ಯರನ್ನು ಸತ್ಕರಿಸಿ ಅವರೊಡನೆ 'ಗುರುಗಳೇ! ನನಗೆ ನೃಸಿಂಹದೇವರು ದೇವತಾರಾಜ್ಯವನ್ನು ಕೊಟ್ಟಿರುವರು. ನಾನು ಆ ಪರಮಾತ್ಮನನ್ನು ಯಾಗಗಳಿಂದ ಆರಾಧಿಸಬೇಕೆಂದು ಅಭಿಪ್ರಾಯವುಳ್ಳವ ನಾಗಿರುವೆನು. ನನಗೆ ಬೇಗನೇ ಯಾಗಮಾಡಲಿಕ್ಕೆ ಯೋಗ್ಯವಾದ ಪವಿತ್ರವಾದ ಸ್ಥಳವನ್ನು ಹೇಳಬೇಕು' ಎಂದು ಕೇಳಿದರು.

---

1. ಪ.ಪು.

ಅದಕ್ಕೆ ಬೃಹಸ್ಪತ್ಯಾಚಾರ್ಯರು 'ಖಾಂಡವವನವು ಪರಮಪವಿತ್ರವಾದ ಸ್ಥಳವು. ಅಲ್ಲಿ ಪರಮಪವಿತ್ರವಾದ ಯಮುನಾನದಿಯಿದೆ. ಆ ನದಿಯು ಮರಣಕಾಲದಲ್ಲಿ ತನ್ನನ್ನು ಸ್ಮರಿಸಿದವರಿಗೆ ಉತ್ತಮಲೋಕವನ್ನು ಕೊಡುವುದು. ಇಂದ್ರ! ನಿನ್ನವರಿಗೆಲ್ಲರಿಗೂ ಕಲ್ಯಾಣವಾಗಬೇಕೆಂದು ಅಭಿಪ್ರಾಯವಿದ್ದರೆ ಆ ಯಮುನಾ ತೀರದಲ್ಲಿ ಯಾಗಗಳಿಂದ ಭಗವಂತನನ್ನು ಆರಾಧಿಸು' ಎಂದು ಹೇಳಿದರು.

ಅದನ್ನು ಕೇಳಿ ಇಂದ್ರದೇವರು ಬೇಗನೇ ವಾಹನವನ್ನು ಏರಿಕೊಂಡು ತನ್ನದ್ದಾದ ಈ ಖಾಂಡವವನಕ್ಕೆ ಬಂದರು. ಗುರುಗಳಿಂದಲೂ ದೇವತೆಗಳಿಂದಲೂ ಸಹಿತರಾಗಿ ಯಾಗಕ್ಕೆ ಬೇಕಾದ ಸಾಮಗ್ರಿಗಳನ್ನು ತೆಗೆದುಕೊಂಡು ಇಲ್ಲಿಗೆ ಬಂದು ಈ ವನವನ್ನು ನೋಡಿ ಸಂತೋಷಪಟ್ಟರು. ಗುರುಗಳಿಂದ ಪ್ರೇರಿತರಾಗಿ ಇಂದ್ರದೇವರು ಬ್ರಹ್ಮದೇವರ ಮಕ್ಕಳಾದ ವಸಿಷ್ಠರೇ ಮೊದಲಾದ ಸಪ್ತಋಷಿಗಳನ್ನು ಇಟ್ಟುಕೊಂಡು ಯಾಗಗಳನ್ನು ಮಾಡಿದರು. ಆಗ ಇಂದ್ರದೇವರ ಮೇಲೆ ಪ್ರಸನ್ನನಾಗಿ ಶ್ರೀಭಗವಂತನೂ ಬ್ರಹ್ಮರುದ್ರರಿಂದ ಕೂಡಿಕೊಂಡು ಆ ಯಾಗಕ್ಕೆ ಬಂದಿದ್ದನು. ಅವರನ್ನು ನೋಡಿ ಇಂದ್ರದೇವರು ಅವರಿಗೆ ಭಕ್ತಿಯಿಂದ ಸತ್ಕರಿಸಿದರು. ತ್ರಿಮೂರ್ತಿಗಳೂ ಇಂದ್ರದೇವರಿಂದಲೂ ಎಲ್ಲಾ ಮುನಿಗಳಿಂದಲೂ ಸತ್ಕೃತರಾಗಿ ಬಂಗಾರದ ಆಸನಗಳಲ್ಲಿ ಕೂತುಕೊಂಡರು. ಇಂದ್ರದೇವರು ಅವರ ಪಾದಗಳನ್ನು ತೊಳೆದು ಆ ನೀರನ್ನು ತಲೆಯಮೇಲೆ ಧರಿಸಿಕೊಂಡರು.

ಆಮೇಲೆ ಇಂದ್ರದೇವರು ಭಕ್ತಿಯಿಂದ ಪರಮಾತ್ಮನನ್ನು ಸ್ತುತಿಸಿದರು. ಇಂದ್ರದೇವರು ಭಕ್ತಿಯನ್ನು ನೋಡಿ ಮುನಿಗಳೆಲ್ಲರೂ ಸಂತುಷ್ಟರಾಗಿ ಇಂದ್ರದೇವರನ್ನು ಸ್ತುತಿಸಿದರು. ಶ್ರೀಭಗವಂತನೂ ಮುನಿಗಳನ್ನು ಇಂದ್ರದೇವರನ್ನೂ ಸ್ತುತಿಸಿ 'ಇಂದ್ರ! ನೀನು ಇಲ್ಲಿ ಬಹುದಕ್ಷಿಣೆ ಕೊಟ್ಟು ಯಾಗಗಳನ್ನು ಮಾಡು. ಯಾವ ಫಲವನ್ನು ಅಪೇಕ್ಷಿಸದೆ ಮಾಡು. ನನ್ನ ಸಾಮಿಪ್ಯವನ್ನು ಹೊಂದುವಿ. ಒಂದೊಂದು ಯಾಗದಲ್ಲಿ ಅನೇಕ ಪ್ರಸ್ಥ (ಪಡಿ) ರತ್ನಗಳನ್ನು ದಾನಮಾಡು. ಅದರಿಂದ ಈ ಪ್ರದೇಶವು ಇಂದ್ರಪ್ರಸ್ಥವೆಂದು ಹೆಸರನ್ನು ಪಡೆಯುವುದು. ಬ್ರಹ್ಮನೇ! ನೀನು ಇಲ್ಲಿಗೆ ಗಂಗೆಯನ್ನು ಸರಸ್ವತಿಯನ್ನೂ ತರಿಸಿ ಪ್ರಯಾಗವೆಂಬ ತೀರ್ಥವನ್ನು ಮಾಡು. ರುದ್ರನೇ! ನೀನು ಕಾಶಿಯನ್ನು ಶಿವಕಾಂಚಿಯನ್ನು ನಿರ್ಮಿಸು. ಇಲ್ಲಿ ಗೌರಿಯಿಂದ ಸಹಿತನಾಗಿ ಯಾವಾಗಲೂ ವಾಸಿಸು. ಬ್ರಹ್ಮಪುತ್ರರೇ! ನೀವೂ ಯೋಗಸಾಮರ್ಥ್ಯದಿಂದ ಇಲ್ಲಿ ಏಳು ತೀರ್ಥಗಳನ್ನು ನಿರ್ಮಿಸಿರಿ. ಬೃಹಸ್ಪತಿಯೇ! ನೀನು ನಿಗಮೋದ್ಬೋಧಕ ಎಂದು ಹೆಸರುಳ್ಳ ತೀರ್ಥವನ್ನು ನಿರ್ಮಿಸು. ಇಲ್ಲಿ ಅಧ್ಯಯನ ಮಾಡದೆ ಇದ್ದರೂ ಸ್ನಾನ

ಮಾಡುವ ಮಾತ್ರದಿಂದಲೇ ವೇದಗಳ ಜ್ಞಾನವು ಉಂಟಾಗಲಿ. ಪೂರ್ವಜನ್ಮದ ಸ್ಮರಣೆಯುಂಟಾಗಲಿ. ನಾನೂ ಇಲ್ಲಿ ಸಮುದ್ರದೊಡನೆ ಗೋಮತಿಯ ಸಂಗಮ ವಾಗುವಲ್ಲಿ ದ್ವಾರಕೆಯನ್ನು ನಿರ್ಮಿಸುತ್ತೇನೆ. ಕೋಶಲೆಯನ್ನು ಮಧ್ವರಣ್ಯವನ್ನೂ ರಚಿಸುತ್ತೇನೆ. ಅಲ್ಲಿ ರಾಮಕೃಷ್ಣರೂಪಗಳಿಂದ ಅವತರಿಸುತ್ತೇನೆ. ನರನಾರಾಯಣರ ವಾಸಸ್ಥಾನವಾದ ಬದರಿಯನ್ನು ಇಲ್ಲಿಯೇ ಉಂಟುಮಾಡುತ್ತೇನೆ. ಅಲ್ಲಿ ಯಾವಾಗಲೂ ವಾಸಮಾಡುತ್ತೇನೆ. ಹರಿದ್ವಾರ, ಪುಷ್ಕರ ಎಂಬ ಎರಡು ತೀರ್ಥಗಳನ್ನು ಸ್ಥಾಪಿಸು ತ್ತೇನೆ. ನೈಮಿಷಾರಣ್ಯದಲ್ಲಿಯೂ ಕಾಲಂಜರಗಿರಿಯಲ್ಲಿಯೂ ಇರುವ ಎಲ್ಲಾ ತೀರ್ಥಗಳನ್ನೂ ಸರಸ್ವತೀ ತೀರದಲ್ಲಿ ಇರುವ ತೀರ್ಥಗಳನ್ನು ಇಲ್ಲಿ ಸ್ಥಾಪಿಸುತ್ತೇನೆ' ಎಂದು ಹೇಳಿದನು. ಭಗವಂತನು ಹೀಗೆ ಹೇಳಿ ಹೇಳಿದಂತೆಯೇ ಮಾಡಲು ಅದನ್ನು ನೋಡಿ ಅವನ ಮಾತನ್ನು ಕೇಳಿ ಬ್ರಹ್ಮರುದ್ರಾದಿದೇವತೆಗಳೂ ಋಷಿಗಳೂ ಭಗವಂತನು ಹೇಳಿ ದಂತೆಯೇ ಮಾಡಿದರು.

ಸಮಸ್ತತೀರ್ಥಗಳಿಂದ ಕೂಡಿದ ಈ ಸ್ಥಾನದಲ್ಲಿ ಇಂದ್ರ ದೇವರು ಬಂಗಾರದ ಯಜ್ಞಸ್ತಂಭಗಳನ್ನು ಮಾಡಿ ಬಹುಯಾಗಗಳನ್ನು ಮಾಡಿ, ಭಗವಂತನನ್ನು ಸಂತೋಷ ಪಡಿಸಿದರು. ಪರಮಾತ್ಮನ ಮುಂಭಾಗದಲ್ಲಿಯೇ ಬ್ರಾಹ್ಮಣರಿಗೆ ಅನೇಕ ಪಡಿ ರತ್ನಗಳನ್ನು ದಾನಮಾಡಿದರು. ಆಮೇಲೆ ಇದು ಇಂದ್ರಪ್ರಸ್ಥತೀರ್ಥವೆಂದು ಪ್ರಸಿದ್ಧ ವಾಗಿದೆ. ಎಲ್ಲಾ ತೀರ್ಥಗಳಿಂದ ಕೂಡಿದ ಇಲ್ಲಿ ಸತ್ತವನು ಪುನಃ ಹುಟ್ಟಲಾರನು. ಇಂದ್ರದೇವರು ಕೊಟ್ಟ ರತ್ನಗಳನ್ನು ಪಡೆದ ಬ್ರಾಹ್ಮಣರು ಅವರಿಗೆ ಬೇಕಾದ ಆಶೀರ್ವಾದಗಳನ್ನು ಮಾಡಿದರು. 'ದೇವೇಂದ್ರ! ನಿಮಗೆ ಈ ದಾನಗಳಿಂದ ಭಗವಂತನು ಅನುಗ್ರಹ ಮಾಡಲಿ. ನಿಮಗೆ ಭಗವಂತನಲ್ಲಿ ಭಕ್ತಿಯು ದೃಢವಾಗಿ ಆಗಲಿ. ಈ ಕರ್ಮಭೂಮಿಯಲ್ಲಿ ಪೂರ್ವದಲ್ಲಿ ನೀವು ನೂರು ಯಜ್ಞಗಳನ್ನು ಮಾಡಿರುವಿರಿ. ಫಲವನ್ನು ಇಚ್ಛಿಸಿ ಮಾಡಿದ ಈ ಪುಣ್ಯದಿಂದ ಇಂದ್ರಪದವಿಯು ಲಭಿಸಿರುವುದು. ಈಗ ಯಾವ ಫಲವನ್ನು ಅಪೇಕ್ಷಿಸದೆ ಯಾಗಗಳಿಂದ ಪರಮಾತ್ಮ ನನ್ನು ಆರಾಧಿಸಿರುವಿರಿ. ಇನ್ನು ಮುಂದೆ ಭೂಮಿಯಲ್ಲಿ ಒಬ್ಬ ಬ್ರಾಹ್ಮಣಶ್ರೇಷ್ಠರಾಗಿ ಹುಟ್ಟುವಿರಿ. ಅಲ್ಲಿಯೂ ವಿಹಿತಧರ್ಮಗಳಿಂದ ಭಗವಂತನನ್ನು ಆರಾಧಿಸುವವರಾಗಿ ನೀವು ಇಲ್ಲಿ ಮಾಡಿದ ಯಜ್ಞಾದಿಗಳೆಲ್ಲವನ್ನೂ ಸ್ಮರಿಸುವಿರಿ. ಅದರ ಸ್ಮರಣೆ ಬರಲು ಮನೆಯನ್ನು ಬಿಟ್ಟು ಆ ಜನ್ಮದ ತಂದೆಯಿಂದ ಕೂಡಿಕೊಂಡು ತೀರ್ಥಸಂಚಾರ ಮಾಡುತ್ತಾ ಇಲ್ಲಿಗೆ ಬರುವಿರಿ. ಸನ್ಯಾಸಾಶ್ರಮ ಸ್ವೀಕಾರ ಮಾಡಿ ದೇಹವನ್ನು ಪರಿತ್ಯಾಗ ಮಾಡುವಿರಿ. ಆಮೇಲೆ ವಿಮಾನವನ್ನು ಏರಿ ಭಗವಂತನ ಲೋಕಕ್ಕೆ ಹೋಗುವಿರಿ'

ಎಂದು ಬ್ರಾಹ್ಮಣರು ಆಶೀರ್ವದಿಸಿದರು. ಅದನ್ನು ಕೇಳಿ ಇಂದ್ರದೇವರು ಸಂತೋಷ ಪಟ್ಟರು. ತರುವಾಯ ಇಂದ್ರದೇವರು ವಿಧಿಪ್ರಕಾರವಾಗಿ ಯಜ್ಞಗಳನ್ನು ಮಾಡಿ ಮುಗಿಸಿ ಭಗವಂತನೇ ಮೊದಲಾದ ಎಲ್ಲಾ ದೇವತೆಗಳಿಗೂ ಪೂಜಿಸಿ ಕಳುಹಿಸಿದರು. ಋತ್ವಿಕ್‌ಗಳಾದ ವಸಿಷ್ಠಾದಿ ಬ್ರಹ್ಮಪುತ್ರರನ್ನು ಬೇಕಾದ ಧನಾದಿಗಳಿಂದ ಸಂತೋಷ ಪಡಿಸಿ ಬೃಹಸ್ಪತ್ಯಾಚಾರ್ಯರನ್ನು ಮುಂದೆ ಮಾಡಿಕೊಂಡು ಇಂದ್ರದೇವರು ಸ್ವರ್ಗಕ್ಕೆ ಹೋದರು.



## ವಿವಸ್ವಾನ್ ಮತ್ತು ಸಂಜ್ಞಾದೇವಿಯು

ಕಶ್ಯಪರಿಗೆ ದಕ್ಷಪುತ್ರಿಯಾದ ಅದಿತಿಯಲ್ಲಿ ವಿವಸ್ವಾನ್ ಎಂದು ಹೆಸರುಳ್ಳ ಸೂರ್ಯನು ಹುಟ್ಟಿದನು. ಅವನಿಗೆ ತ್ವಷ್ಟ್ರು ಎಂಬುವನ ಮಗಳು ಸಂಜ್ಞಾದೇವಿಯು ಹೆಂಡತಿಯು. ಅವಳಿಗ ಸುರೇಣು ಎಂದು ಹೆಸರಿದ್ದಿತು. ಸಂಜ್ಞಾದೇವಿಯು ಅತಿ ಉಷ್ಣವಾದ ಗಂಡನ ರೂಪದಿಂದ ಸಂತೋಷಪಡುತ್ತಾ ಇದ್ದಿಲ್ಲ. ಮಂಡಲದಲ್ಲಿ ಇದ್ದ ಸೂರ್ಯನ ತೇಜಸ್ಸಿನಿಂದ ಸಂಜ್ಞಾದೇವಿಯ ದೇಹವು ಸ್ವಲ್ಪ ಸುಟ್ಟುಹೋಗಿ ಅಷ್ಟು ಸುಂದರವಾಗಿ ಕಾಣುತ್ತಿದ್ದಿಲ್ಲ. ಸೂರ್ಯನಿಗೆ ಮಾರ್ತಂಡ ಎಂಬ ಹೆಸರೂ ಇದ್ದಿತು. ಕಾರಣವೇನೆಂದರೆ ಅದಿತಿಯು ಗರ್ಭಿಣಿಯಾಗಿರುವಾಗ ಒಂದು ದಿನದಲ್ಲಿ ಬುಧನು ಭಿಕ್ಷೆಗೆ ಬಂದನು. ಆಗ ಗರ್ಭಗೌರವದಿಂದ ಅದಿತಿಯು ಭಿಕ್ಷೆಯನ್ನು ತರುವಾಗ ಹೊತ್ತಾಯಿತೆಂದು ಬುಧನು ನಿನ್ನ ಗರ್ಭದಲ್ಲಿ ಇರುವ ಶಿಶುವು ಮೃತವಾಗಲಿ ಎಂದು ಶಾಪವನ್ನು ಕೊಟ್ಟನು. ಅದನ್ನು ಕೇಳಿ ಅದಿತಿಯು ತುಂಬಾ ಭಯಪಟ್ಟಳು. ಆಗ ಕಶ್ಯಪರು ಪತ್ನಿಯ ಮೇಲಿನ ಪ್ರೇಮದಿಂದ ತಾನು ತನ್ನ ತಪಃ ಸಾಮರ್ಥ್ಯದಿಂದ ಶಿಶುವನ್ನು ಬದುಕಿಸಿ ನಿನ್ನ ಗರ್ಭದ ಶಿಶುವು ಮೃತವಾಗಲಿಲ್ಲ. ಬದುಕಿಯೇ ಇದೆ ಎಂದರು. ಅದಿತಿಯು ಆ ಶಿಶುವನ್ನು ಮೃತನಾದನು ಎಂದು ವಿಪರೀತವಾಗಿ ತಿಳಿದುಕೊಂಡ ಪ್ರಯುಕ್ತ ಆಮೇಲೆ ಹುಟ್ಟಿದ ಆ ಕೂಸಿಗೆ ಮಾರ್ತಂಡ ಎಂದು ಹೆಸರಾಯಿತು. ಅವನೇ ವಿವಸ್ವಾನ್ ಎಂಬ ಸೂರ್ಯನು.

ಈರೀತಿಯಾಗಿ ಕಶ್ಯಪರ ಸಾಮರ್ಥ್ಯದಿಂದ ಬದುಕಿದ ಸೂರ್ಯನು ಅತಿ ತೇಜಸ್ಸುಳ್ಳವನಾಗಿ ತನ್ನ ಸಮೀಪದಲ್ಲಿಯೇ ಇರುವ ಸಂಜ್ಞಾದೇವಿಯನ್ನು ತುಂಬಾ

1. ಹ.ವಂ.ಪರ್ವ. ಅ-9

ಸಂತಾಪಪಡಿಸುತ್ತಿದ್ದನು. ಅವಳಿಗೆ ಹತ್ತಿರ ಬರುವಾಗ ಎಲ್ಲಾ ಅತಿಬಿಸಿಯಾಗುತ್ತಿತ್ತು. ಸೂರ್ಯನು ಸಂಜ್ಞಾದೇವಿಯಲ್ಲಿ ಇಬ್ಬರು ಗಂಡುಮಕ್ಕಳನ್ನು ಒಂದು ಹೆಣ್ಣು ಮಗಳನ್ನೂ ಪಡೆದನು. ಶ್ರಾದ್ಧದೇವ ಎಂದೂ ಹೆಸರುಳ್ಳ ವೈವಸ್ವತಮನುವೇ ಪ್ರಥಮ ಪುತ್ರನು. ಆಮೇಲೆ ಯಮ ಯಮುನಾ ಎಂಬ ಇಬ್ಬರು ಅವಳಿ ಜವಳಿ (ರಟ್ಟೆ) ಮಕ್ಕಳು ಹುಟ್ಟಿದರು.

ಸಂಜ್ಞಾದೇವಿಯು ಅತಿ ಉಷ್ಣವಾದ ಸೂರ್ಯದೇವರ ರೂಪವನ್ನು ನೋಡಿ ಸಹಿಸಲಾರದೆ ತನ್ನಂತೆಯೇ ಇರುವ ತನ್ನ ಛಾಯೆಯಿಂದ ಪ್ರತಿಮಾರೂಪವನ್ನು ಸೃಷ್ಟಿಸಿದಳು. ಅವಳಿಗೆ ಛಾಯಾದೇವಿಯೆಂದೇ ಹೆಸರು. ಆ ಛಾಯಾದೇವಿಯು ಸಂಜ್ಞಾದೇವಿಗೆ ನಮಸ್ಕರಿಸಿ ಕೈಮುಗಿದು ನಾನೇನು ಮಾಡಬೇಕೆಂದು ಕೇಳಿಕೊಂಡಳು. ಅದಕ್ಕೆ ಸಂಜ್ಞಾದೇವಿಯು 'ನಾನು ನನ್ನ ತಂದೆಯ ಮನೆಗೆ ಹೋಗುವೆನು. ನಿನಗೆ ಮಂಗಲವಾಗಲಿ. ಒಂದೂ ವಿಕಾರವಿಲ್ಲದೆ ಈ ಮನೆಯಲ್ಲಿ ನೀನು ಇರಬೇಕು. ಈ ನನ್ನ ಎರಡು ಗಂಡುಮಕ್ಕಳನ್ನು ಒಂದು ಹೆಣ್ಣುಮಗಳನ್ನು ರಕ್ಷಿಸಿಕೊಂಡು ಇರಬೇಕು. ಈ ರಹಸ್ಯವಿಷಯವನ್ನು ಒಬ್ಬರೊಡನೆಯೂ ಹೇಳಬಾರದು. ಸೂರ್ಯದೇವ ರೊಡನೆಯೂ ಹೇಳಬಾರದು' ಎಂದು ಹೇಳಿದಳು. ಅದಕ್ಕೆ ಛಾಯಾದೇವಿಯು 'ಸೂರ್ಯದೇವರು ತಲೆಕೂದಲನ್ನು ಹಿಡಿದು ಸೆಳೆದು ಶಾಪ ಕೊಡಲಿಕ್ಕೆ ಉದ್ಯುಕ್ತ ರಾಗುವವರೆಗೆ ಈ ವಿಷಯವನ್ನು ತಿಳಿಸುವುದಿಲ್ಲ, ನೀನು ಸುಖವಾಗಿ ಹೊರಟು ಹೋಗು' ಎಂದು ಹೇಳಿದಳು.

ಈರೀತಿಯಾಗಿ ಸಂಜ್ಞಾದೇವಿಯು ಮನೆಯಲ್ಲಿ ತನ್ನ ಸ್ಥಾನದಲ್ಲಿ ಛಾಯಾದೇವಿ ಯನ್ನು ಇಟ್ಟು ನಾಚಿಕೆಪಟ್ಟುಕೊಳ್ಳುತ್ತಾ ತ್ವಷ್ಟೃ ಎಂಬ ತನ್ನ ತಂದೆಯ ಬಳಿಗೆ ಹೋದಳು. ತಂದೆಯು ಮಗಳನ್ನು ನೋಡಿ 'ನೀನು ಇಲ್ಲಿಗೇಕೆ ಬಂದಿರುವೆ? ಗಂಡನ ಬಳಿಗೆ ಹೋಗು' ಎಂದು ಬೆದರಿಸಿದನು. ಅಲ್ಲಿಂದ ಅವಳು ಹೆಣ್ಣುಕುದುರೆಯ ರೂಪವನ್ನು ಧರಿಸಿಕೊಂಡು ಉತ್ತರ ಕುರುದೇಶಕ್ಕೆ ಹೋಗಿ ಹುಲ್ಲು ಮೇಯುತ್ತಾ ಇದ್ದಳು. ಇಲ್ಲಿ ಸೂರ್ಯನು ಛಾಯಾದೇವಿಯಲ್ಲಿ ಸಂಜ್ಞಾದೇವಿಯೆಂದೇ ತಿಳಿದು ಕೊಂಡು ತನಗೆ ಸಮಾನನಾದ ಮಗನನ್ನು ಪಡೆದನು. ಪೂರ್ವದಲ್ಲಿ ಹುಟ್ಟಿದ ವೈವಸ್ವತ ಮನುವಿಗೆ ಸಮಾನವಾದ ಬಣ್ಣವುಳ್ಳವನಾದ ಕಾರಣ ಈ ಶಿಶುವಿಗೆ ಸಾವರ್ಣ ಎಂದು ಹೆಸರಿಟ್ಟರು. ಅವನು ಸಾವರ್ಣಮನುವೆಂಬ ಮನುವಾದನು. ಎರಡನೆಯದಾಗಿ ಹುಟ್ಟಿದ ಮಗನೇ ಶನೈಶ್ವರನು. (ತಪತೀ ಎಂಬ ಹೆಣ್ಣು ಮಗಳೂ ಹುಟ್ಟಿದಳು. ಅವಳು ಮುಂದೆ ಸಂವರಣನಿಗೆ ಹೆಂಡತಿಯಾದಳು.)

ಛಾಯಾದೇವಿಯು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಲ್ಲಿ ವಿಶೇಷವಾಗಿ ಸ್ನೇಹ ಮಾಡಿದಳು. ಸಂಜ್ಞಾದೇವಿಯ ಮಕ್ಕಳಲ್ಲಿ ಅಷ್ಟು ಸ್ನೇಹವನ್ನು ಮಾಡಲಿಲ್ಲ. ವೈವಸ್ವತಮನುವು ಅದನ್ನು ಸಹಿಸಿಕೊಂಡು ಇದ್ದನು. ಯಮನು ಮಾತ್ರ ಸಹಿಸಲಿಲ್ಲ. ಅವನು ರೋಷದಿಂದಲೂ ಬಾಲಸ್ವಭಾವದಿಂದ ಮುಂದೆ ನಡೆಯಬೇಕಾದ ಕಾರ್ಯಕ್ಕನುಸಾರವಾದ ಭಗವತ್ಪ್ರೇರಣೆಯಿಂದಲೂ ಕಾಲನ್ನು ಒದೆಯುವೆನೆಂದು ತೋರಿಸಿ ಬೆದರಿಸಿದನು. ಇದರಿಂದ ಛಾಯಾದೇವಿಯು ತುಂಬಾ ದುಃಖಿತಳಾಗಿ ನನಗೆ ಒದೆಯುವೆನೆಂದು ತೋರಿಸಿ ನಿನ್ನ ಕಾಲು ಬಿದ್ದುಹೋಗಲಿ' ಎಂದು ಶಾಪ ಕೊಟ್ಟಳು. ಯಮನು ಶಾಪದಿಂದ ತುಂಬಾ ಭಯವುಳ್ಳವನಾಗಿ ವ್ಯಥೆಯುಳ್ಳವನಾಗಿ ತಂದೆಯ ಬಳಿಗೆ ಬಂದು ತನಗೆ ಬಂದ ಶಾಪವನ್ನು ಪರಿಹರಿಸಬೇಕೆಂದು ಕೇಳಿಕೊಂಡನು. ''ತಾಯಿಯಾದವಳು ಎಲ್ಲಾ ಮಕ್ಕಳಲ್ಲಿಯೂ ಸ್ನೇಹದಿಂದ ಇರಬೇಕು. ಇವಳು ನಮ್ಮನ್ನೆಲ್ಲಾ ಬಿಟ್ಟು ಚಿಕ್ಕವನಲ್ಲಿಯೇ ಪ್ರೇಮವುಳ್ಳವಳಾಗಿರುವಳು. ಅದರಿಂದ ನಾನು ಅವಳಿಗೆ ನನ್ನ ಕಾಲನ್ನು ತೋರಿಸಿದೆನು. ಆದರೂ ಕಾಲಿನಿಂದ ಅವಳ ದೇಹವನ್ನು ಒದೆಯಲಿಲ್ಲ. ಬಾಲ್ಯದಿಂದಲೋ ಮೋಹದಿಂದಲೋ ನಾನು ಕಾಲು ಎತ್ತಿದ್ದನ್ನು ನೀವು ಕ್ಷಮಿಸಬೇಕು. 'ಪೂಜನೀಯಳಾದ ನನ್ನನ್ನು ಅತಿಕ್ರಮಿಸಿದಿ ಯಾದ ಕಾರಣ ನಿನ್ನ ಈ ಪಾದವು ಬಿದ್ದುಹೋಗುವುದು' ಎಂದು ಶಾಪವನ್ನು ಕೊಟ್ಟಳು. ಮಕ್ಕಳು ದುಷ್ಟರಾಗಬಹುದು. ಹಾಗೆ ತಾಯಿಯು ದುಷ್ಟಳಾಗಬಾರದು. ತಾಯಿಯು ನನಗೆ ಶಾಪಕೊಟ್ಟಳು. ನಿಮ್ಮ ಅನುಗ್ರಹದಿಂದ ನಾನು(ನನ್ನ) ಕಾಲು ಹೋಗಬಾರದು'' ಎಂದು ಹೇಳಿದನು.

ಸೂರ್ಯನು 'ಮಗ! ಧರ್ಮವನ್ನು ತಿಳಿದ ಸತ್ಯವಾದ ನಿನಗೆ ಹೀಗೆ ಕೋಪ ಬರಬೇಕಾದರೆ ಈ ವಿಷಯದಲ್ಲಿ ಏನೋ ಒಂದು ಮಹತ್ತಾದ ಕಾರ್ಯವಿರಬೇಕು. ನಿನ್ನ ತಾಯಿಯ ಮಾತನ್ನು ಸುಳ್ಳು ಮಾಡಲಿಕ್ಕೆ ಆಗಲಾರದು. ಕ್ರಿಮಿಗಳು ನಿನ್ನ ಕಾಲಿನ ಮಾಂಸವನ್ನು ಕಚ್ಚಿಕೊಂಡು ಭೂಮಿಯಲ್ಲಿ ಹೋಗುವುವು. ಅದರಿಂದ ನೀನು ಸುಖವನ್ನು ಹೊಂದುವಿ. ನಿನ್ನ ತಾಯಿಯ ಮಾತೂ ಸತ್ಯವಾಗುತ್ತದೆ. ಶಾಪ ಪರಿಹಾರದಿಂದ ನೀನೂ ರಕ್ಷಿತನಾಗುವಿ'ಎಂದು ಹೇಳಿದನು. ಛಾಯಾದೇವಿಯೊಡನೆ 'ಸಮಾನರಾದ ಮಕ್ಕಳಲ್ಲಿ ಸಮವಾಗಿಯೇ ಸ್ನೇಹವನ್ನು ಮಾಡಬೇಕು. ಅದನ್ನು ಬಿಟ್ಟು ಚಿಕ್ಕವನಲ್ಲಿ ಏಕೆ ಹೆಚ್ಚು ಸ್ನೇಹವನ್ನು ಮಾಡುತ್ತಿರುವೆ?' ಎಂದು ಪುನಃ ಪುನಃ ಕೇಳಿದನು. ಛಾಯಾದೇವಿಯು ಸಂಜ್ಞಾದೇವಿಯು ಮಾಡಿದ ಕಾರ್ಯವನ್ನು ಮರೆ ಮಾಡುತ್ತಾ ತಾನು ಒಂದೂ ಮಾತಾಡಲೇ ಇಲ್ಲ. ಆಗ ಸೂರ್ಯನು ಮನಸ್ಸನ್ನು

ಸ್ಥಿರಪಡಿಸಿಕೊಂಡು ಧ್ಯಾನಮಾಡಿ ಸಮಸ್ತವನ್ನು ತಿಳಿದನು. ಛಾಯಾದೇವಿಗೆ ನಾಶವನ್ನು ಹೊಂದುವಂತೆ ಶಾಪಕೊಡುವೆನೆಂದು ಅಭಿಪ್ರಾಯವುಳ್ಳವನಾಗಿ ಅವಳ ತಲೆ ಕೂದಲನ್ನು ಹಿಡಿದು ಸೆಳೆದನು. ಛಾಯಾದೇವಿಯು ಸಂಜ್ಞಾದೇವಿಯೊಡನೆ ಅಷ್ಟು ಪರ್ಯಂತ ಮಾತ್ರ ತಿಳಿಸುವುದಿಲ್ಲವೆಂದು ಕೇಳಿದ್ದ ಕಾರಣ ಆಗ ಎಲ್ಲಾ ವಿಷಯವನ್ನು ಸೂರ್ಯನೊಡನೆ ಹೇಳಿಬಿಟ್ಟಳು. ಅದನ್ನು ಕೇಳಿ ಸೂರ್ಯನು ಅತ್ಯಂತ ಕೋಪವುಳ್ಳವನಾಗಿ ಮಾವನ ಮನೆಗೆ ಹೋದನು. ಮಾವನಾದ ತ್ವಷ್ಟೃವು ರೋಷದಿಂದ ಸುಟ್ಟುಹಾಕುವೆನೆಂದು ಬಂದಿರುವ ಸೂರ್ಯದೇವರನ್ನು ವಿಧಿ ಪ್ರಕಾರವಾಗಿ ಪೂಜಿಸಿ ಸಮಾಧಾನಪಡಿಸಿದನು. 'ನಿನ್ನ ರೂಪವು ಅತಿತೇಜಸ್ಸಿನಿಂದ ಕೂಡಿದ್ದಾಗಿ ಶೋಭಿಸುವುದಿಲ್ಲ. ನಿನ್ನ ತೇಜಸ್ಸನ್ನು ಸಹಿಸದೆ ಸಂಜ್ಞೆಯು ಹುಲ್ಲು ಬೆಳೆದಿರುವ ವನದಲ್ಲಿ ಸಂಚರಿಸುತ್ತಿರುವಳು. ನೀನು ಅಲ್ಲಿಗೆ ಹೋದರೆ ಶುಭವಾದ ಆಚಾರವುಳ್ಳ ನಿತ್ಯವೂ ತಪಸ್ಸು ಮಾಡುತ್ತಿರುವ ಹೆಣ್ಣುಕುದುರೆಯ ರೂಪವನ್ನು ಧರಿಸಿರುವ ಎಲೆಯನ್ನು ತಿನ್ನುತ್ತಿರುವ ಕೃಶಳಾಗಿರುವ ಜಟಾಧಾರಿಣಿಯಾಗಿರುವ ಬ್ರಹ್ಮಚಾರಿಣಿಯಾದ ಶ್ಲಾಘ್ಯಳಾದ ಯೋಗಬಲವುಳ್ಳ ಸಂಜ್ಞೆಯನ್ನು ನೋಡುವಿ' ಎಂದು ಹೇಳಿದನು. ಮತ್ತು ನಾನು ಹೇಳುವುದು ಸಮ್ಮತವಾಗಿದ್ದರೆ ನಿನ್ನ ರೂಪವನ್ನು ಅತಿಮನೋಹರವನ್ನಾಗಿ ಮಾಡುವೆನು' ಎಂದು ಹೇಳಿದನು. ಸೂರ್ಯನು ಹಾಗೆಯೇ ಆಗಲಿ ಎಂದನು. ತ್ವಷ್ಟೃವು ಯಂತ್ರದಿಂದ ಸೂರ್ಯದೇವರ ಮುಖದಲ್ಲಿ ಚೆನ್ನಾಗಿ ತಿಕ್ಕಿದನು. ಆಗ ಮುಖದಿಂದ ಬಹಳ ತೇಜಸ್ಸು ಕೆಳಗೆ ಬಿದ್ದಿತು. ಮುಖವು ಕೆಂಪಾಯಿತು. ರೂಪವು ಅತಿ ಮನೋಹರವಾಯಿತು. ಕೆಳಗೆ ಬಿದ್ದ ತೇಜಸ್ಸಿನಿಂದ ದಾತಾ, ಆರ್ಯಮಾ, ಮಿತ್ರ, ವರುಣ, ಅಂಶಭಗ, ಇಂದ್ರ, ವಿವಸ್ವಾನ್, ಪೂಷಾ, ಪರ್ಜನ್ಯ, ತ್ವಷ್ಟಾ ,ವಿಷ್ಣು ಎಂಬ ದ್ವಾದಶ ಆದಿತ್ಯರು ವ್ಯಕ್ತರಾದರು. ಸೂರ್ಯನು ತನ್ನ ದೇಹದಿಂದ ವ್ಯಕ್ತರಾದ ದ್ವಾದಶ ಆದಿತ್ಯರನ್ನು ನೋಡಿ ಸಂತೋಷವನ್ನು ಹೊಂದಿದನು. ತ್ವಷ್ಟನು ಗಂಧಪುಷ್ಪ ಪ್ರಕಾಶಮಾನವಾದ ಕಿರೀಟ ಇತ್ಯಾದಿಗಳಿಂದ ಸೂರ್ಯನನ್ನು ಪೂಜಿಸಿ 'ದೇವ! ನಿನ್ನ ಹೆಂಡತಿಯನ್ನು ನೋಡಲಿಕ್ಕೆ ಹೋಗು. ಉತ್ತರ ಕುರುದೇಶದಲ್ಲಿ ಕುದುರೆಯ ರೂಪವನ್ನು ಧರಿಸಿಕೊಂಡು ಹುಲ್ಲು ಬೆಳೆದಿರುವ ಪ್ರದೇಶದಲ್ಲಿ ಸಂಚರಿಸುತ್ತಿರುವಳು' ಎಂದು ಹೇಳಿದನು.

ಸೂರ್ಯನು ಯೋಗಸಾಮರ್ಥ್ಯದಿಂದ ಒಬ್ಬರಿಗೂ ಹತ್ತಿರ ಹೋಗಲಿಕ್ಕೆ ಆಗಲಾರದ ತೇಜಸ್ಸುಳ್ಳ ಯಾರ ಭಯವೂ ಇಲ್ಲದೆ ಇರುವ ಕುದುರೆಯ ರೂಪವನ್ನು ಧರಿಸಿರುವ ತನ್ನ ಹೆಂಡತಿಯಾದ ಸಂಜ್ಞಾದೇವಿಯನ್ನು ತಿಳಿದನು. ತಾನೂ ಕುದುರೆಯ

ರೂಪವನ್ನು ಧರಿಸಿಕೊಂಡು ಅವಳಿದ್ದಲ್ಲಿಗೆ ಹೋದನು. ಅಲ್ಲಿ ಪರಪುರುಷನೆಂಬ ಸಂದೇಹದಿಂದ ಸಂಗವನ್ನು ಮಾಡಲಿಕ್ಕೆ ಕೇಳದಿರುವ ಅವಳ ಮುಖದಲ್ಲಿ ಸಂಗವನ್ನು ಮಾಡಿದನು. ಅವಳು ಆ ರೇತಸ್ಸನ್ನು ತನ್ನ ಮೂಗಿನಿಂದ ಹೊರಗೆ ಹಾಕಿದಳು. ಆದರಿಂದ ಅಶ್ವಿನೀದೇವತೆಗಳು ಹುಟ್ಟಿದರು. ಆಮೇಲೆ ಸೂರ್ಯನು ಸುಂದರವಾದ ರೂಪದಿಂದ ಸಂಜ್ಞಾದೇವಿಗೆ ಕಾಣಿಸಿಕೊಂಡನು. ಅವಳು ಗಂಡನನ್ನು ನೋಡಿ ಸಂತೋಷ ಹೊಂದಿದಳು.

ಯಮನು ತಾನು ತಾಯಿಗೆ ಬೆದರಿಸಿದೆನೆಂದು ತುಂಬಾ ಪಶ್ಚಾತ್ತಾಪವುಳ್ಳವನಾಗಿ ಧರ್ಮದಿಂದ ಪ್ರಜೆಗಳನ್ನು ಸಂತೋಷಪಡಿಸಿದನು. ಆ ಉತ್ತಮಕರ್ಮದಿಂದ ಅವನು ಪಿತೃಗಳಿಗೆ ಆಧಿಪತ್ಯವು ದಕ್ಷಿಣದಿಕ್ಕಿಗೆ ಪಾಲಕತ್ವವನ್ನು ಹೊಂದಿದನು. ಸಾವರ್ಣನು ಸಾವರ್ಣಮನ್ವಂತರದಲ್ಲಿ ಮನುವಾಗುವನು. ಅವನು ಈಗಲೂ ಮೇರುಪರ್ವತದಲ್ಲಿ ಘೋರವಾದ ತಪಸ್ಸನ್ನು ಮಾಡುತ್ತಿರುವನು. ಅವನ ತಮ್ಮನಾದ ಶನೈಶ್ವರನು ನವಗ್ರಹದಲ್ಲಿ ಒಂದು ಗ್ರಹವಾದನು. ಅಶ್ವಿನಿದೇವತೆಗಳು ಸ್ವರ್ಗದಲ್ಲಿ ವೈದ್ಯರಾದರು. ತ್ವಷ್ಟನು ಸೂರ್ಯನ ತೇಜಸ್ಸಿನಿಂದ ವಿಷ್ಣುಚಕ್ರವನ್ನು ಅಭಿವ್ಯಕ್ತ ಮಾಡಿದನು. ಅದು ಯುದ್ಧದಲ್ಲಿ ದೈತ್ಯರನ್ನು ಸಂಹರಿಸಲಿಕ್ಕೆ ಅಪ್ರತಿಹತವಾಗಿ ಹೋಗುವುದು. ಚಿಕ್ಕವಳಾದ ಯಮುನೆಯು ಯಮುನಾ ಎಂಬ ಹೆಸರಿನಿಂದಲೇ ನದಿಯಾಗಿ ಹೋದಳು. ಈರೀತಿಯಾಗಿ ಈ ದೇವತೆಗಳ ಜನ್ಮವನ್ನು ಕೇಳಿ ಮನಸ್ಸಿನಲ್ಲಿ ಇಟ್ಟುಕೊಂಡರೆ ಆಪತ್ತುಗಳೆಲ್ಲ ಹೋಗುವುವು. ಮಹಾಕೀರ್ತಿಯು ಬರುವುದು.



## ವಿನಾಯಕನ ಕಥೆ [1]

ಪೂರ್ವದಲ್ಲಿ ಚಂದ್ರಜ್ಯೋತಿಃ ಎಂಬ ಪಟ್ಟಣದಲ್ಲಿ ಧರ್ಮಕಾಂತ ಎಂಬ ರಾಜನಿದ್ದನು. ಅವನಿಗೆ ಸ್ವರ್ಣಕಾಂತೆಯೆಂಬ ಹೆಂಡತಿಯಿದ್ದಳು. ಅವಳು ಪತಿವ್ರತೆ ಯಾಗಿದ್ದಳು. ಒಂದು ದಿವಸ ಅವಳು ಅಂತಃಪುರದಲ್ಲಿ ಒಬ್ಬ ಬ್ರಾಹ್ಮಣರಲ್ಲಿ ಪುರಾಣ ಕಥೆಯನ್ನು ಕೇಳುತ್ತಿದ್ದಳು. ಆಗ ರಾಜನು ಅಂತಃಪುರಕ್ಕೆ ಬಂದನು. ದೂರದಲ್ಲಿಯೇ ಆ ಬ್ರಾಹ್ಮಣನನ್ನು ನೋಡಿ ಪತ್ನಿಯ ಮೇಲೆ ಸಂದೇಹವುಳ್ಳವನಾಗಿ ಬಹುಸಮಯ

1. ಸ್ಕಂ.ಪು. ಸ್ಯಮಂತಕೋಪಾಖ್ಯಾನ. ಮತಾನಿ ಅ-17, 20. ಭಾಗ. X-60.
ಬ್ರ.ಪು.ಭಾ.ಮಾಮಾ. ಅ. 8-10

ಅಂತಃಪುರಕ್ಕೆ ಬರಲೇ ಇಲ್ಲ. ಇದರಿಂದ ರಾಜಪತ್ನಿಯು ಬಹಳ ನೊಂದುಕೊಂಡವಳಾಗಿ ಗೌರೀದೇವಿಯನ್ನು ಮರೆಹೊಂದಿದಳು. ಗೌರೀದೇವಿಯು ಸ್ವಪ್ನದಲ್ಲಿ ಕಾಣಿಸಿಕೊಂಡು 'ರಾಜಪತ್ನಿ! ಭಯಪಡಬೇಡ. ನಿನಗೆ ವರವನ್ನು ಕೊಡಲು ಬಂದಿರುವೆನು. ನಿನ್ನ ಮನಸ್ಸಿನಲ್ಲಿರುವುದನ್ನು ತಿಳಿದಿರುವೆನು. ಅದಕ್ಕೆ ಕಾರಣವನ್ನು ಹೇಳುವೆನು. ನೀನು ಒಂದು ದಿನ ಬ್ರಾಹ್ಮಣನೊಡನೆ ಪುರಾಣವನ್ನು ಕೇಳುತ್ತಾ ಇದ್ದಿ. ಆಗ ನಿನ್ನ ಗಂಡನು ದೂರದಲ್ಲಿ ನೋಡಿ ನಿನ್ನ ಮೇಲೆ ಸಂದೇಹಪಟ್ಟು ನಿನ್ನ ಬಳಿಗೆ ಬಾರದೆ ಇರುವನು. ದೋಷರಹಿತಳಾದ ನಿನ್ನ ಮೇಲೆ ನಿನ್ನ ಗಂಡನಿಗೆ ಸಂದೇಹ ಬರಲಿಕ್ಕೆ ಕಾರಣವನ್ನು ಹೇಳುವೆನು. ಭಾದ್ರಪದಮಾಸದ ಶುಕ್ಲಪಕ್ಷದ ಚೌತಿದಿವಸದಲ್ಲಿ ನೀನು ಚಂದ್ರನನ್ನು ನೋಡಿರುವಿ. ಆದುದರಿಂದಲೇ ನಿನ್ನ ಮೇಲೆ ನಿನ್ನ ಗಂಡನಿಗೆ ಸಂದೇಹವುಂಟಾಗಿರುವುದು. ಆ ದಿವಸ ಚಂದ್ರನನ್ನು ನೋಡದೆ ಇರಲಿಕ್ಕೆ ಕಾರಣವೂ ಇರುವುದು. ಒಂದು ದಿನದಲ್ಲಿ ನಾನು ಸ್ನಾನ ಮಾಡುವ ಸಮಯದಲ್ಲಿ ಯಾರಾದರೂ ಜನರು ಬರುವರೆಂಬ ಸಂದೇಹದಿಂದ ನನ್ನ ಮೈಯ ಮಣ್ಣಿನಿಂದ ವಿನಾಯಕನನ್ನು ಮಾಡಿ ಜೀವಕಲೆಯನ್ನು ಕೊಟ್ಟು ಒಬ್ಬರನ್ನೂ ಒಳಗೆ ಬಿಡಬೇಡ ಎಂದು ಹೇಳಿ ಬಾಗಿಲಲ್ಲಿ ನಿಲ್ಲಿಸಿದೆನು.

ತರುವಾಯ ಅವನು ಒಬ್ಬರನ್ನೂ ಒಳಗೆ ಬಿಡಲಿಲ್ಲ. ಆ ಸಮಯದಲ್ಲಿ ರುದ್ರದೇವರೇ ಬಾಯಾರಿಕೆಯಿಂದ ಮನೆಗೆ ಬರಲು ಅವರನ್ನೂ ವಿನಾಯಕನು ತಡೆದನು. ಯಾರೋ ಪರಪುರುಷನು ಬಂದು ನನ್ನನ್ನೇ ತಡೆಯುತ್ತಿರುವನೆಂದು ಕೋಪಿಸಿಕೊಂಡು ಶೂಲದಿಂದ ಅವನ ತಲೆಯನ್ನು ಹಾರಿಸಿದನು. ಅದನ್ನು ನೋಡಿ ನಾನು ಬಹಳ ದುಃಖವನ್ನು ಹೊಂದಿದೆನು. ನನ್ನ ಮಗನನ್ನು ಬದುಕಿಸಬೇಕೆಂದೂ ಎಲ್ಲರೂ ಅವನನ್ನು ಪೂಜಿಸುವಂತೆ ಮಾಡಬೇಕೆಂದೂ ಕೇಳಿಕೊಂಡೆನು. ಆಗ ಅವರು ಉತ್ತರದಿಕ್ಕಿಗೆ ತಲೆಹಾಕಿ ಮಲಗಿರುವವರ ತಲೆಯನ್ನು ಇಟ್ಟು ಬದುಕಿಸುವೆನೆಂದು ಹೇಳಿದರು. ಹೇಗಾದರೂ ನನಗೆ ಪುತ್ರಭಿಕ್ಷೆಯನ್ನು ಕೊಡಬೇಕೆಂದು ಕೇಳಿಕೊಂಡೆನು. ರುದ್ರದೇವರು ದೂತರನ್ನು ಕಳುಹಿಸಿದರು. ಅವರು ಹುಡುಕಿಕೊಂಡು ಹೋಗುವಾಗ ಕಾಡಿನಲ್ಲಿ ಒಂದು ಆನೆಯು ಉತ್ತರದಿಕ್ಕಿಗೆ ತಲೆಯನ್ನು ಹಾಕಿ ಮಲಗಿಕೊಂಡಿದ್ದಿತು. ದೂತರು ಅದರ ತಲೆಯನ್ನು ಕಡಿದು ತಂದು ನನ್ನ ಪತಿಯ ಕೈಯಲ್ಲಿ ಕೊಟ್ಟರು. ರುದ್ರದೇವರು ಆ ಆನೆಯ ತಲೆಯನ್ನು ನನ್ನ ಮಗನ ದೇಹದ ಮುಂಡದಮೇಲೆ ಇಟ್ಟು ಬದುಕಿಸಿದರು. ಈರೀತಿಯಾಗಿ ವಿನಾಯಕನಿಗೆ ಆನೆಯ ತಲೆಯಾಯಿತು.

(ಈರೀತಿಯಾಗಿ[1] ವಿನಾಯಕನಿಗೆ ಆನೆಯ ತಲೆಯಾಗಲು ಮುಖ್ಯವಾದ ಬೇರೆ ಕಾರಣವಿದೆ. ವಿನಾಯಕಜೀವನು ವಿಶ್ವ ಎಂಬ ಪರಮಾತ್ಮನ ರೂಪವನ್ನು ಧ್ಯಾನ ಮಾಡಿ ಆ ಪದವಿಯನ್ನು ಹೊಂದಿರುವನು. ವಿಶ್ವ ಎಂಬ ಭಗವದ್ರೂಪಕ್ಕೆ ಹತ್ತೊಂಭತ್ತು ತಲೆಗಳು. ಮಧ್ಯದಲ್ಲಿ ಆನೆಯ ತಲೆಯು ಎರಡು ಪಾರ್ಶ್ವಗಳಲ್ಲಿ ಒಂಭತ್ತು ಒಂಭತ್ತು ಮನುಷ್ಯಾಕಾರತಲೆಗಳು. ಈರೀತಿಯಾಗಿ ಮಧ್ಯೆ ಆನೆಯ ತಲೆಯುಳ್ಳ ಭಗವಂತನನ್ನು ಧ್ಯಾನಮಾಡಿದ ಕಾರಣ ಅವನೂ ಆನೆಯನ್ನು ಪಡೆದನು. ದೇವರನ್ನು ಹೇಗೆ ಧ್ಯಾನಮಾಡುವರೋ ಹಾಗೆ ಫಲವನ್ನು ಹೊಂದುವನೆಂದು ಶಾಸ್ತ್ರದಲ್ಲಿ ಹೇಳಿರುವುದು.)

ತರುವಾಯ ರುದ್ರದೇವರು ವಿನಾಯಕನಿಗೆ ಎಲ್ಲರೂ ಪೂಜಿಸುವಂತೆ ವರವನ್ನು ಕೊಟ್ಟರು. 'ಕೃಷಿಯ ಆರಂಭ ಮಾಡುವಾಗಲೂ ಮದುವೆಕಾಲದಲ್ಲಿಯೂ ಯಾತ್ರೆಯನ್ನು ಮಾಡುವಾಗಲೂ ಮನೆಯನ್ನು ಕಟ್ಟುವಾಗಲೂ ಆನೆ ಇತ್ಯಾದಿಗಳನ್ನು ಸಂಗ್ರಹಿಸುವಾಗಲೂ ಯಾರು ನಿನಗೆ ಪೂಜಿಸುವುದಿಲ್ಲವೋ ಅವರಿಗೆ ನನ್ನ ಆಜ್ಞೆಯಿಂದ ವಿಘ್ನವನ್ನು ಮಾಡು. ಯಾರು ಪೂಜಿಸುವರೋ ಅವರಿಗೆ ಸರ್ವಾಭೀಷ್ಟವನ್ನು ಕೊಡುವವನಾಗು. ಭಾದ್ರಪದಮಾಸದ ಶುಕ್ಲಪಕ್ಷದ ಚೌತಿಯಲ್ಲಿ ಯಾರು ನಿನ್ನನ್ನು ಇಪ್ಪತ್ತೊಂದುಪತ್ರೆಗಳಿಂದ ಭಕ್ಷ್ಯಭೋಜ್ಯಾದಿಗಳಿಂದ ಪೂಜಿಸುವರೋ ಅವರು ಮಕ್ಕಳು ಮೊಮ್ಮಕ್ಕಳು ಸಹಿತರಾಗಿ ಸರ್ವಅಭೀಷ್ಟವುಳ್ಳವರಾಗುವರು. ವಿದ್ಯಾರ್ಥಿಯು ಪೂಜಿಸಿದರೆ ವಿದ್ಯೆಯನ್ನು ಹೊಂದುವನು. ಹಣವನ್ನು ಅಪೇಕ್ಷಿಸುವವನು ಹಣವನ್ನು ಹೊಂದುವನು. ಒಳ್ಳೇ ಹೆಂಡತಿಯು ಬರಬೇಕೆಂದು ಆಸೆಯುಳ್ಳವನು. ಒಳ್ಳೇ ಕನ್ಯೆಯನ್ನು ಹೊಂದುವನು. ಸುಖವನ್ನು ಬಯಸುವವನು ಸುಖವನ್ನು ಹೊಂದುವನು' ಎಂದು ರುದ್ರದೇವರು ವಿನಾಯಕನಿಗೆ ವರವನ್ನು ಕೊಟ್ಟು ನನ್ನೊಡನೆ ಸಂತೋಷದಿಂದ ಇದ್ದರು.

ವಿನಾಯಕನು ಭಾದ್ರಪದಮಾಸದ ಶುಕ್ಲಪಕ್ಷದ ಚೌತಿಯ ದಿನದಲ್ಲಿ ಎಲ್ಲರೂ ಮಾಡುವ ಪೂಜೆಯನ್ನು ಸ್ವೀಕರಿಸುವುದಕ್ಕಾಗಿ ಎಲ್ಲಾ ಸ್ಥಳಗಳಿಗೂ ಹೋದನು. ಭೋಜನವನ್ನು ಮಾಡಿ ದೊಡ್ಡ ಹೊಟ್ಟೆಯನ್ನು ಮಾಡಿಕೊಂಡು ಸಂತೋಷದಿಂದ ಬೆಳದಿಂಗಳಿನಲ್ಲಿ ಒಂದು ಇಲಿಯಮೇಲೆ ಕೂತುಕೊಂಡು ಬರುತ್ತಿದ್ದನು. ಆಗ ಇಲಿಯ ಎದುರಾಗಿ ಒಂದು ಹಾವು ಬಂದಿತು. ಆಗ ಇಲಿಯು ತನ್ನ ಮೇಲೆ ಕೂತಿರುವ ವಿನಾಯಕನು ವಿಶೇಷವಾಗಿ ಭೋಜನಮಾಡಿ ತುಂಬಾ ಭಾರವಿದ್ದ ಕಾರಣವೂ ತಾನು

1. ಮಾ.ಉ.ಭಾ.

ಚಿಕ್ಕದಾಗಿರುವ ಪ್ರಯುಕ್ತವೂ ಎದುರಲ್ಲೇ ಸರ್ಪವನ್ನು ನೋಡಿದ ಕಾರಣವೂ ಕೆಳಗೆ ಬಿದ್ದು ಹೊರಳಾಡಿತು. ಮೂರ್ಛೆಯನ್ನು ಹೊಂದಿತು. ಇಲಿಯು ಬೀಳಲು ಇಳಿಯ ಮೇಲೆ ಕೂತಿದ್ದ ವಿನಾಯಕನೂ ಕೆಳಗೆ ಬಿದ್ದನು. ಕೆಳಗೆ ಬಿದ್ದು ಅವನ ಹೊಟ್ಟೆಯು ಒಡೆದುಹೋಯಿತು. ಇದರಿಂದ ಹೊಟ್ಟೆಯ ಒಳಗಿನಿಂದ ಮೋದಕ ಮೊದಲಾದ ಭಕ್ಷ್ಯಗಳು ಹೊರಗೆ ಬಂದವು. ಅದನ್ನು ನೋಡಿ ವಿನಾಯಕನು ಅವೆಲ್ಲವನ್ನೂ ತನ್ನ ಹೊಟ್ಟೆಯ ಒಳಗೆ ಹಾಕಿಕೊಂಡು ಹೊಟ್ಟೆಯನ್ನು ಸರಿಮಾಡಿಕೊಂಡು ಪುನಃ ಹೊಟ್ಟೆಯು ಒಡೆದುಹೋಗುವುದೆಂಬ ಭಯದಿಂದ ಎದುರಲ್ಲಿ ಇದ್ದ ಸರ್ಪವನ್ನೇ ಹಿಡಿದು ತನ್ನ ಹೊಟ್ಟೆಗೆ ಸುತ್ತಿಕೊಂಡನು. ಇದನ್ನು ನೋಡಿ ಚಂದ್ರನು ನೆಗಾಡಿದನು. ವಿನಾಯಕನು ತನ್ನನ್ನು ನೋಡಿ ನಗುತ್ತಿರುವ ಚಂದ್ರನನ್ನು ನೋಡಿ 'ನನ್ನನ್ನು ಅಪಹಾಸ ಮಾಡಿದ ನಿನ್ನನ್ನು ಯಾವಾಗಲೂ ನೋಡದೆ ಹೋಗಲಿ. ನೀನು ಕ್ಷೀಣನಾಗಿ ಹೋಗು' ಎಂದು ಶಾಪವನ್ನು ಕೊಟ್ಟನು. ಮತ್ತೂ ಕೋಪವನ್ನು ತಡೆಯಲಾಗದೆ ತನ್ನ ಒಂದು ದಂತವನ್ನು ಕಿತ್ತು ಅದರಿಂದ ಚಂದನನ್ನು ಬಡೆದನು. ಆಗ ಚಂದ್ರನು ವಿಘ್ನನಾಯಕ ನೊಡನೆ ಕ್ಷಮಾ ಬೇಡಿಕೊಂಡನು. ತರುವಾಯ ವಿನಾಯಕನು ಪ್ರಸನ್ನನಾಗಿ 'ನೀನು ಕೃಷ್ಣಪಕ್ಷದಲ್ಲಿ ಮಾತ್ರ ಕ್ಷಯವನ್ನು ಹೊಂದು. ಭಾದ್ರಪದಮಾಸದ ಶುಕ್ಲಪಕ್ಷದ ಚೌತಿದಿವಸ ಮಾತ್ರ ನಿನ್ನನ್ನು ಯಾರೂ ನೋಡದಿರಲಿ' ಎಂದು ಹೇಳಿ ತನ್ನ ಮನೆಗೆ ಹೊರಟುಹೋದನು.

(ಸ್ವರೂಪದಲ್ಲಿ ಚಂದ್ರನಿಗಿಂತ ವಿನಾಯಕನು ಚಿಕ್ಕವನು. ಆದರೆ ಚೌತಿದಿನದಲ್ಲಿ ಅವನಲ್ಲಿ ವಿಶ್ವ ಎಂದು ಹೆಸರುಳ್ಳ ಪರಮಾತ್ಮನ ವಿಶೇಷವಾದ ಆವೇಶವಿರುವ ಕಾರಣ ಆಗ ಅವನು ಕೊಟ್ಟ ಶಾಪವರಗಳು ಪರಮಾತ್ಮನು ಕೊಟ್ಟದ್ದೇ ಆಗುವ ಪ್ರಯುಕ್ತ ಸ್ವರೂಪದಿಂದ ದೊಡ್ಡವನಾದ ಚಂದ್ರನೂ ವಿನಾಯಕನೊಡನೆ ಕ್ಷಮೆಯನ್ನು ಕೇಳಿಕೊಂಡನು ಎಂದು ತಿಳಿಯಬೇಕು.)

ಆದುದರಿಂದ ರಾಜಪತ್ನಿ! ಭಾದ್ರಪದಮಾಸ ಶುಕ್ಲಪಕ್ಷದ ಚೌತಿಯಲ್ಲಿ ಚಂದ್ರನನ್ನು ನೋಡಬಾರದು. ನೀನು ಆ ದಿನ ಚಂದ್ರನನ್ನು ನೋಡಿದಿ. ಆದುದರಿಂದ ಪತಿವ್ರತೆಯಾದ ನಿನ್ನಲ್ಲಿಯೂ ನಿನ್ನ ಗಂಡನಿಗೆ ಸಂದೇಹವುಂಟಾಯಿತು. ಆದುದ ರಿಂದ ಆ ದಿವಸದಲ್ಲಿ ಚಂದ್ರನನ್ನು ಯಾರೂ ನೋಡಬಾರದು. ನೋಡಿದ ಪಕ್ಷದಲ್ಲಿ ಆಗಲೇ ನಿಂದೆಯು ಉಂಟಾಗುವುದು. ಆದುದರಿಂದ ಆದಿವಸದಲ್ಲಿ ಚಂದ್ರನನ್ನು ನೋಡಿದರೆ ಆ ದೋಷಪರಿಹಾರಕ್ಕಾಗಿ ಪುರಾಣದಲ್ಲಿ ಇರುವ ಒಂದು ಶ್ಲೋಕವನ್ನು ಹೇಳಬೇಕು. ಆ ಶ್ಲೋಕವು-

**'ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ ।**
**ಸುಕುಮಾರಕ ಮಾರೋದೀಸ್ತವ ಹ್ಯೇಷ ಸ್ಯಮಂತಕಃ'**

(ಸಿಂಹವು ಪ್ರಸೇನನನ್ನು ಸಂಹರಿಸಿದನು. ಆ ಸಿಂಹವು ಜಾಂಬವಂತರಿಂದ ಮೃತವಾಯಿತು. ಮಗುವೇ ನೀನು ಅಳಬೇಡ. ಈ ಸ್ಯಮಂತಕರತ್ನವು ನಿನಗೆ ಸೇರಿದ್ದು.) ಎಂದಿರುವುದು. ಈ ಶ್ಲೋಕವನ್ನು ಕೇಳಿ ಕೃಷ್ಣಪರಮಾತ್ಮನು ತನ್ನ ನಿಂದೆಯು ಹೋದಂತೆ ಪ್ರಸಿದ್ಧಿಪಡಿಸಿದನು. ಅಂತಹ ಮಹಾಪವಿತ್ರವಾದ ಕೃಷ್ಣ ಪರಮಾತ್ಮನ ವಿಷಯಕವಾದ ಕಥೆಯನ್ನು ಅವಶ್ಯವಾಗಿ ಕೇಳಬೇಕು. ಆ ಕಥೆಯು ಹೀಗೆ ಇರುವುದು.

ಪಶ್ಚಿಮಸಮುದ್ರದ ಮಧ್ಯದಲ್ಲಿ ದ್ವಾರಕಾ ಎಂಬ ಪುರವಿದ್ದಿತು. ಅದರಲ್ಲಿ ಯಾದವರು ವಾಸಿಸುತ್ತಿದ್ದರು. ಅವರಿಗೆಲ್ಲಾ ಶ್ರೀಕೃಷ್ಣನು ನಿಯಾಮಕನಾಗಿದ್ದನು. ಶ್ರೀಕೃಷ್ಣನು ಭಗವಂತನ ಅವತಾರವೆಂದು ಜ್ಞಾನಿಗಳೆಲ್ಲರೂ ಹೇಳುವರು. ಅಂತಹ ಭಗವಂತನು ಜಗತ್ತನ್ನು ರಕ್ಷಿಸುತ್ತಿರಲು ಸತ್ರಾಜಿತ್ ಎಂಬ ಯಾದವನು ಸೂರ್ಯ ದೇವರನ್ನು ಪ್ರಾರ್ಥಿಸಿ ಸೂರ್ಯದೇವರ ಅನುಗ್ರಹದಿಂದ ಸ್ಯಮಂತಕ ಎಂಬ ರತ್ನವನ್ನು ಹಿಡಿದುಕೊಂಡು ಮನೆಗೆ ಬಂದನು. ಆ ರತ್ನವು ದಿವಸಕ್ಕೆ ಎಂಟು ಭಾರ ಬಂಗಾರವನ್ನು ಕೊಡುತ್ತಿತ್ತು. (ಒಂದು ಭಾರಕ್ಕೆ ಇಪ್ಪತ್ತೈದು ತೊಲೆಗಳು) ಅದನ್ನು ಶ್ರೀಭಗವಂತನು ಅವನ ಮನಸ್ಸಿನ ಲೋಭವನ್ನು ತಿಳಿಸುವುದಕ್ಕಾಗಿ ತನಗೆ ಕೊಡಬೇಕೆಂದು ಕೇಳಿದನು. ಆದರೆ ಸತ್ರಾಜಿತು ಕೊಡಲಿಲ್ಲ.

ಒಂದು ದಿವಸದಲ್ಲಿ ಸತ್ರಾಜಿತುವಿನ ತಮ್ಮನಾದ ಪ್ರಸೇನನು ಆ ರತ್ನವನ್ನು ಕುತ್ತಿಗೆಯಲ್ಲಿ ಧರಿಸಿಕೊಂಡು ಕುದುರೆಯ ಮೇಲೆ ಕೂತುಕೊಂಡು ಮೃಗಬೇಟೆಗಾಗಿ ಕಾಡಿಗೆ ಹೋದನು. ಆ ರತ್ನವನ್ನು ಯಾವಾಗಲೂ ಬಹುಮಡಿಯಾಗಿ ಧರಿಸಬೇಕು. ಇಲ್ಲದಿದ್ದರೆ ಅದರಿಂದ ಅನರ್ಥವಾಗುವುದು. ಆದುದರಿಂದಲೇ ಆ ರತ್ನವನ್ನು ಧರಿಸಿಕೊಂಡು ಹೋದ ಕಾರಣ ಪ್ರಸೇನನನ್ನು ಒಂದು ಸಿಂಹವು ಕುದುರೆಯಿಂದ ಸಹಿತವಾಗಿ ಕೊಂದು ಹಾಕಿತು. ತರುವಾಯ ಸಿಂಹವು ಆ ಸ್ಯಮಂತಕ ರತ್ನವನ್ನು ಹಿಡಿದುಕೊಂಡು ಮುಂದೆ ಹೋಯಿತು. ತರುವಾಯ ಜಾಂಬವಂತನೆಂಬ ಕರಡಿಯು ಆ ಸಿಂಹವನ್ನು ಸಂಹರಿಸಿ ಆ ರತ್ನವನ್ನು ಹಿಡಿದುಕೊಂಡು ತನ್ನ ಗುಹೆಯೊಳಗೆ ಹೋಗಿ ತನ್ನ ಮಗುವಿನ ಆಟದ ಸಾಮಗ್ರಿಯನ್ನಾಗಿ ಮಾಡಿದರು.

ಇಲ್ಲಿ ಸತ್ರಾಜಿತುವು ತಮ್ಮನು ಕಾಡಿಗೆ ಹೋದವನು ಹಿಂದೆ ತಿರುಗಿಬಾರದೆ ಇದ್ದುದನ್ನು ನೋಡಿ ಮಣಿಯನ್ನು ಧರಿಸಿಕೊಂಡು ಹೋದ ಅವನನ್ನು ಮಣಿಯ

ಆಸೆಯಿಂದ ಕೃಷ್ಣನೇ ಸಂಹರಿಸಿದನು ಎಂದು ಹೇಳುತ್ತಾ ಬಂದನು. ಜನರೆಲ್ಲರೂ ಇವನ ಮಾತನ್ನು ಕೇಳಿ ಹಾಗೆ ಹೇಳುತ್ತಿರಲು ಈ ವಿಷಯವನ್ನು ತಿಳಿದ ಶ್ರೀಕೃಷ್ಣ ಪರಮಾತ್ಮನು ಎಲ್ಲಾ ಯಾದವರನ್ನೂ ಕರೆದುಕೊಂಡು ಕಾಡಿಗೆ ಹೋಗಿ ಅಲ್ಲಿ ಸತ್ತು ಬಿದ್ದಿದ್ದ ಕುದುರೆಯನ್ನೂ ಪ್ರಸೇನನನ್ನೂ ತೋರಿಸಿ ಮುಂದೆ ಸಿಂಹದ ಹೆಜ್ಜೆಯನ್ನು ನೋಡಿ ಸಿಂಹವು ಕೊಂದಿರುವುದೆಂದು ನಿಶ್ಚಯಿಸಿ ಮುಂದೆ ಹೋದರು. ಮುಂದೆ ಸ್ವಲ್ಪ ದೂರದಲ್ಲಿ ಸಿಂಹವೂ ಸತ್ತು ಬಿದ್ದಿತ್ತು. ಅಲ್ಲಿಂದ ಮುಂದೆ ಕರಡಿಯ ಹೆಜ್ಜೆಯನ್ನು ನೋಡಿ ಅದನ್ನೇ ಅನುಸರಿಸುತ್ತಾ ಹೋಗಿ ಕರಡಿಯ ಗುಹೆಯವರೆಗೆ ಹೋದರು. ಕೃಷ್ಣಪರಮಾತ್ಮನು ಎಲ್ಲರನ್ನೂ ಗುಹಾದ್ವಾರದಲ್ಲಿಯೇ ನಿಲ್ಲಿಸಿ ಗುಹೆಯಒಳಗೆ ಹೋದನು. ಅಲ್ಲಿ ಒಬ್ಬ ದಾದಿಯು 'ಸಿಂಹಃ ಪ್ರಸೇನಮವಧೀತ್' ಎಂಬ ಶ್ಲೋಕವನ್ನು ಹೇಳುತ್ತಾ ಅಳುತ್ತಿರುವ ಮಗುವನ್ನು ಸಮಾಧಾನಪಡಿಸುತ್ತಿದ್ದಳು. ಅವಳು ಅಪೂರ್ವಪುರುಷನಾದ ಭಗವಂತನನ್ನು ನೋಡಿ ಭಯದಿಂದ ಕೂಗಿಕೊಂಡಳು. ಆಗ ಜಾಂಬವಂತರು ಬಂದು ಭಗವಂತನೆಂದು ತಿಳಿಯದೆ ಇಪ್ಪತ್ತೆಂಟು ದಿವಸ ಭಗವಂತನೊಡನೆ ಯುದ್ಧವನ್ನು ಮಾಡಿದರು. ಗುಹಾದ್ವಾರದಲ್ಲಿ ಇದ್ದ ಯಾದವರು ಪ್ರಸೇನನನ್ನು ಕೃಷ್ಣನು ಕೊಂದದ್ದು ಅಲ್ಲ ಎಂದು ತಿಳಿದವರಾಗಿ, ಭಗವಂತನು ಬಹುದಿವಸ ಗುಹೆಯಿಂದ ಹೊರಗೆ ಬಾರದೆ ಇರಲು ಗುಹೆಯೊಳಗೆ ಅವನು ಮೃತನಾದನು, ಎಂದು ಭ್ರಮೆಯುಳ್ಳವರಾಗಿ ದ್ವಾರಕೆಗೆ ಹೋದರು. ಭಗವಂತನು ಕೊನೆಗೆ ಸ್ವಲ್ಪ ಚೆನ್ನಾಗಿ ಯುದ್ಧವನ್ನು ಮಾಡಲು ಜಾಂಬವಂತರು ತುಂಬಾ ಶ್ರಮವುಳ್ಳವರಾಗಿ ತನ್ನ ಪ್ರಭುವಾದ ಶ್ರೀರಾಮದೇವರನ್ನು ಸ್ಮರಿಸಿಕೊಂಡರು. ಶ್ರೀರಾಮಚಂದ್ರದೇವರ ಸ್ಮರಣೆಯು ಬರುತ್ತಿರಲು ಜಾಂಬವಂತರು ಭಗವದ್ರೂಪಗಳಿಗೆ ಭೇದವಿಲ್ಲದ ಕಾರಣ ಕೃಷ್ಣರೂಪವನ್ನೇ ರಾಮರೂಪವನ್ನಾಗಿ ನೋಡಿದರು.

ತರುವಾಯ ರಾಮನೇ ಕೃಷ್ಣನು ಎಂದು ತಿಳಿದುಕೊಂಡು ಕೃಷ್ಣಪರಮಾತ್ಮನಿಗೆ ನಮಸ್ಕರಿಸಿ ಕ್ಷಮಾ ಕೇಳಿಕೊಂಡು ತನ್ನ ಮಗಳಾದ ಜಾಂಬವತಿಯನ್ನು ಮದುವೆ ಮಾಡಿಕೊಟ್ಟು ಸ್ಯಮಂತಕರತ್ನವನ್ನು ಕೊಟ್ಟರು. ಕೃಷ್ಣಪರಮಾತ್ಮನು ಜಾಂಬವಂತರಿಗೆ ನೋವಾಗದಂತೆ ತನ್ನ ಚಕ್ರದಿಂದ ಅವರ ಮುದಿದೇಹವನ್ನು ಸೀಳಿ ಯೌವನವುಳ್ಳ ದೇಹವುಳ್ಳವರನ್ನಾಗಿ ಮಾಡಿದರು.

ತರುವಾಯ ಅಲ್ಲಿಂದ ಹೊರಟು ರತ್ನದಿಂದಲೂ ಸ್ತ್ರೀರತ್ನದಿಂದ ಸಹಿತನಾಗಿ ದ್ವಾರಕಾಪಟ್ಟಣಕ್ಕೆ ಬಂದು ಎಲ್ಲರನ್ನೂ ಸಂತೋಷಪಡಿಸಿದನು. ಎಲ್ಲರಿಗೂ ನಡೆದ ಕಥೆಯನ್ನೆಲ್ಲಾ ಹೇಳಿ 'ಯಾದವರೇ! ನನಗೆ ಏಕೆ ಹೀಗೆ ನಿಂದೆಯುಂಟಾಯಿತು

ಎಂಬುದನ್ನು ಹೇಳುವೆನು ಕೇಳಿರಿ. ಭಾದ್ರಪದಮಾಸದಲ್ಲಿ ಶುಕ್ಲಪಕ್ಷದ ಚೌತಿಯಲ್ಲಿ ವಿನಾಯಕನ ಶಾಪವನ್ನು ಹೊಂದಿರುವ ಚಂದ್ರನನ್ನು ನೋಡಿದೆನು. ಆದುದರಿಂದ ಆ ದಿವಸ ಯಾರೂ ಚಂದ್ರನನ್ನು ನೋಡಬಾರದು. ನೋಡಿದರೆ ಅವನಿಗೆ ಒಂದು ಅಪವಾದವು ಬರುವುದು. ಆದುದರಿಂದ ಅದನ್ನು ತಿಳಿಸುವುದಕ್ಕಾಗಿಯೇ ನಾನು ನಿಂದಾರಹಿತನಾದರೂ ಅದರಿಂದ ನಿಂದೆಯು ಬಂದಂತೆ ತೋರಿಸಿರುವೆನು' ಎಂದು ಹೇಳಿದನು. ಆ ರತ್ನವನ್ನು ಸತ್ರಾಜಿತ ರಾಜನಿಗೆ ಕೊಟ್ಟನು. ಸತ್ರಾಜಿತುವು ತುಂಬಾ ಪಶ್ಚಾತ್ತಾಪವನ್ನು ಹೊಂದಿ ತನ್ನ ಮಗಳಾದ ಸತ್ಯಭಾಮಾದೇವಿಯನ್ನು ಅವನಿಗೆ ಮದುವೆ ಮಾಡಿಕೊಟ್ಟು ಆ ರತ್ನವನ್ನು ಕೊಟ್ಟನು. ಭಗವಂತನು ಮಣಿಯು ನಿನ್ನಲ್ಲೇ ಇರಲಿ. ಅದರ ಫಲವು ನನಗೆ ಸಿಕ್ಕಿದರೆ ಸಾಕು ಎಂದು ಹೇಳಿ ಆ ರತ್ನವನ್ನು ಸತ್ರಜಿತುವಿಗೇನೇ ಕೊಟ್ಟುಬಿಟ್ಟನು.

ಯಾದವರೆಲ್ಲರೂ ಭಗವಂತನೊಡನೆ ಆದಿನ ಚಂದ್ರನನ್ನು ನೋಡಿಬಿಟ್ಟರೆ ಅದರ ದೋಷವು ಹೇಗೆ ಪರಿಹೃತವಾಗುವುದು ಎಂದು ಕೇಳಿದರು. ಯಾರು ಆ ದಿನ ಈ ಸ್ಯಮಂತಕರತ್ನದ ಕಥೆಯನ್ನು ಕೇಳುವರೋ ಅವರು ಚಂದ್ರನನ್ನು ನೋಡಿದರೂ ದೋಷವನ್ನು ಹೊಂದಲಾರರು ಎಂದು ಹೇಳಿ ಹೊರಟುಹೋದನು. ಆದುದರಿಂದ ಆ ದಿನ ಆಕಥೆಯನ್ನು ಅವಶ್ಯವಾಗಿ ಕೇಳಬೇಕು. ನೀನೂ ಆ ಕಥೆಯನ್ನು ಕೇಳು. ನಿನ್ನ ಗಂಡನು ನಿನ್ನಲ್ಲಿ ಪ್ರೀತಿಯನ್ನು ಮಾಡುವನು'' ಎಂದು ಹೇಳಿ ಮರೆಯಾದರು.

ತರುವಾಯ ರಾಜಪತ್ನಿಯು ಸ್ವಪ್ನದಿಂದ ಏಳುವವಳಾಗಿ ವಿನಾಯಕನ ಪೂಜೆ ಯನ್ನು ಮಾಡಿ ಸ್ಯಮಂತಕರತ್ನದ ಕಥೆಯನ್ನು ಕೇಳಿದಳು. ಈ ಕಥೆಯು ಲೋಕದಲ್ಲಿ ಪ್ರಸಿದ್ಧವಾಗುವಂತೆ ಮಾಡಿದಳು. ಸ್ವಲ್ಪ ಸಮಯದ ಮೇಲೆ ರಾಜನು ವಿಚಾರಿಸಿ ತನ್ನ ಪತ್ನಿಯನ್ನು ದೋಷವಿಲ್ಲವೆಂದು ತಿಳಿದು ಪತ್ನಿಯೊಡನೆ ಸಂತೋಷದಿಂದ ಇದ್ದನು.

ಆದುದರಿಂದ ಆ ಚೌತಿಯದಿನ ಚಂದ್ರನನ್ನು ನೋಡಿದರೆ ಕಳ್ಳ ವ್ಯಭಿಚಾರಿ ಎಂಬ ಅಪವಾದವು ಬರುವುದು. ಅದಕ್ಕಾಗಿ ಸ್ಯಮಂತಕರತ್ನದ ಕಥೆಯನ್ನು ಕೇಳಿದ ಅದರ ಪರಿಹಾರವಾಗುವುದು. ಈ ಕಥೆಯನ್ನು ಯಾರು ಕೇಳುವರೋ ಅವರಿಗೆ ಸರ್ವಅಭೀಷ್ಟವೂ ಸಿದ್ಧವಾಗುವುದು.



# ಅರುಣನ ಸಾರಥ್ಯ [1]

ತಾಯಿಯಾದ ವಿನತಾದೇವಿಯು ಸರ್ಪಗಳ ಕಪಟದಿಂದ ಕದ್ರೂವಿನ ದಾಸ್ಯವನ್ನು ಹೊಂದಿದಮೇಲೆ ಗರುಡದೇವರು ಸರಿಯಾಗಿ ಸಾವಿರವರ್ಷವಾದ ಮೇಲೆ ಮೊಟ್ಟೆಯನ್ನು ಭೇದಿಸಿಕೊಂಡು ಹೊರಗೆ ಬಂದರು. ಮಹಾಪ್ರಕಾಶದಿಂದ ದಿಕ್ಕುಗಳನ್ನು ಪ್ರಕಾಶಗೊಳಿಸುತ್ತಾ ಅಗ್ನಿಯ ರಾಶಿಯಂತೆ ಜ್ವಲಿಸುತ್ತಾ ಮೇಲೆ ಹಾರಿದರು. ಈ ಪ್ರಕಾರವಾಗಿ ಇರುವ ಗರುಡದೇವರನ್ನು ನೋಡಿ ಅಗ್ನಿದೇವರ ಬಳಿಗೆ ದೇವತೆಗಳು ಹೋಗಿ 'ನಿನ್ನ ತೇಜಸ್ಸು ಜ್ವಲಿಸುತ್ತಾ ಇದೆ. ನಮ್ಮನ್ನು ಸುಡಬೇಡ' ಎಂದ ಕೇಳಿಕೊಂಡರು.

ಆಗ ಅಗ್ನಿದೇವರು ಅದು ನನ್ನ ತೇಜಸ್ಸಲ್ಲ. ಅದು ನನ್ನಂತೆ ತೇಜಸ್ಸುಳ್ಳ ಗರುಡದೇವರು. ವಿನತಾದೇವಿಯ ಮಗನು. ಅವರ ತೇಜೋರಾಶಿಯನ್ನು ನೋಡಿ ನಿಮಗೆ ಮೋಹವುಂಟಾಯಿತು. ಗರುಡದೇವರು ನಾಗಗಳನ್ನು ನಾಶಮಾಡುವರು. ಕಶ್ಯಪರ ಮಗನು. ಮಹಾಬಲಿಷ್ಠರು. ದೇವತೆಗಳ ಹಿತದಲ್ಲಿ ಆಸಕ್ತರು ದೈತ್ಯರಾಕ್ಷಸರ ಅಹಿತದಲ್ಲಿ ಆಸಕ್ತರು. ನೀವು ಭಯಪಡುವುದು ಬೇಡ. ನನ್ನಿಂದ ಸಹಿತರಾಗಿ ನೋಡಿರಿ ಎಂದರು.

ಈರೀತಿಯಾಗಿ ಹೇಳಲು ದೇವತೆಗಳು ಗರುಡದೇವರನ್ನು ವಿಸ್ತಾರವಾಗಿ ಸ್ತೋತ್ರಮಾಡಿ ನೀವು ಕೋಪಿಸಿಕೊಳ್ಳಬಾರದು. ದಯತೋರಿಸಬೇಕು. ನಮ್ಮ ಎದೆ ನಡುಗುತ್ತದೆ. ಪ್ರಸನ್ನರಾಗಬೇಕು. ನಮಗೆ ಸುಖವನ್ನು ಉಂಟುಮಾಡಬೇಕು ಎಂದು ಪ್ರಾರ್ಥನಾ ಮಾಡಿಕೊಂಡರು.

ಈರೀತಿಯಾಗಿ ದೇವತೆಗಳು ಸ್ತೋತ್ರಮಾಡಲು ಗರುಡದೇವರು ತನ್ನ ತೇಜಸ್ಸಿನ ಉಪಸಂಹಾರವನ್ನು ಮಾಡಿದರು. ನನ್ನ ದೇಹವನ್ನು ನೋಡಿ ಎಲ್ಲಾ ಜನರೂ ಭಯಪಡಬಾರದು ಎಂದು ಶಾಂತರೂಪವನ್ನು ಧರಿಸಿದರು. ಅರುಣನನ್ನು ಬೆನ್ನಿನ ಮೇಲೆ ಹೊತ್ತುಕೊಂಡು ತಂದೆಯ ಮನೆಯಿಂದ ಸಮುದ್ರದ ಇನ್ನೊಂದು ತೀರದಲ್ಲಿರುವ ತಾಯಿಯ ಸಮೀಪಕ್ಕೆ ಹೋದರು. ಅಣ್ಣನಾದ ಅರುಣನನ್ನು ಸೂರ್ಯದೇವರ ಮುಂಭಾಗದಲ್ಲಿಟ್ಟರು. ಸೂರ್ಯದೇವರು ಅತ್ಯುಗ್ರ ತೇಜಸ್ಸಿನಿಂದ ಲೋಕಗಳನ್ನು ಸುಡಬೇಕೆಂದು ಇಚ್ಛಿಸಿದಾಗ ಅವರನ್ನು ಶಾಂತರನ್ನಾಗಿ ಮಾಡುವುದಕ್ಕಾಗಿ ಅರುಣನನ್ನು ಸೂರ್ಯದೇವರ ಮುಂಭಾಗದಲ್ಲಿ ಸ್ಥಾಪಿಸಿದರು.

---

1. ಮ.ಭಾ.ಆ.ಪ. ಅ.24

ಸೂರ್ಯದೇವರಿಗೆ ಕೋಪವುಂಟಾಗಲು ಕಾರಣವೇನೆಂದರೆ ರಾಹುವಿನ ಕೈಯಲ್ಲಿ ಭಗವಂತನು ಅಮೃತವನ್ನು ಹಾಕಿದಾಗ ಚಂದ್ರಸೂರ್ಯರು ಸೂಚನೆ ಮಾಡಿದ ಕಾರಣ ಪರಮಾತ್ಮನು ರಾಹುವಿನ ತಲೆಯನ್ನು ಕಡಿದು ಹಾಕಿದನಷ್ಟೆ. ಇದರಿಂದ ರಾಹುವು ಯಾವಾಗಲೂ ಅವರಿಬ್ಬರಲ್ಲಿ ವೈರವನ್ನು ಮಾಡಿದನು. ರಾಹುವು ಪೀಡಿಸೋಣ ಸೂರ್ಯದೇವರಿಗೆ ಕೋಪವುಂಟಾಯಿತು. ದೇವತೆಗಳಿಗೋಸ್ಕರ ನಾನು ಸೂಚನೆ ಮಾಡಿದರೆ ರಾಹು ನನ್ನ ಮೇಲೆ ಕೋಪಿಸಿಕೊಂಡಿದ್ದಾನೆ. ನಾನು ಒಬ್ಬನು ಮಾತ್ರ ದುಃಖವನ್ನು ಅನುಭವಿಸಬೇಕಾಗಿದೆ. ಸಹಾಯಮಾಡಲಿಕ್ಕೆ ಜನರು ಬೇಕು. ಅವರಿಗೆ ಆಪತ್ತು ಬಂದರೆ ಒಬ್ಬರೂ ಕೇಳುವವರಿಲ್ಲ. ನನ್ನನ್ನು ರಾಹುವು ಹಿಡಿಯುವುದನ್ನು ದೇವತೆಗಳೆಲ್ಲಾ ನೋಡುತ್ತಾ ಇರುವರು. ನನಗೊಬ್ಬರೂ ಸಹಾಯಮಾಡುವವರಿಲ್ಲ. ಆದುದರಿಂದ ನಾಳೆ ಬೆಳಿಗ್ಗೆ ಲೋಕಗಳನ್ನೆಲ್ಲಾ ನಾಶಮಾಡುವೆನು. ಈರೀತಿ ಅಭಿಪ್ರಾಯವುಳ್ಳವನಾಗಿ ಸೂರ್ಯನು ಮುಳುಗಿದನು.

ತರುವಾಯ ಲೋಕನಾಶಕ್ಕೋಸ್ಕರ ಸಂತಾಪಗೊಳಿಸಿದರು. ತರುವಾಯ ದೇವತೆಗಳು ಇದ್ದಲ್ಲಿಗೆ ಋಷಿಗಳು ಹೋಗಿ ಈ ದಿವಸ ಅರ್ಧರಾತ್ರಿ ಸಮಯದಲ್ಲಿ ಸರ್ವಲೋಕ್ಕೂ ಭಯವನ್ನುಂಟುಮಾಡುವ ಮೂರುಲೋಕವನ್ನೂ ನಾಶಮಾಡು. ಮಹಾದಾಹವು ಉಂಟಾಗುವುದು ಎಂದು ಹೇಳಿದರು. ತರುವಾಯ ದೇವತೆಗಳೂ ಋಷಿಗಳೂ ಚತುರ್ಮುಖ ಬ್ರಹ್ಮದೇವರು ಇದ್ದಲ್ಲಿಗೆ ಹೋಗಿ ಬ್ರಹ್ಮದೇವರೊಡನೆ 'ಇನ್ನೂ ಸೂರ್ಯೋದಯವಾಗಿಲ್ಲ. ಈಗಲೇ ಇಷ್ಟ ದಾಹವುಂಟಾಗುತ್ತದೆ. ಸೂರ್ಯೋದಯವಾದರೆ ಏನಾಗುತ್ತದೆ ಎಂದು ತಿಳಿಯಲಿಲ್ಲ' ಎಂದರು.

ಆಗ ಬ್ರಹ್ಮದೇವರು 'ಲೋಕನಾಶಕ್ಕೋಸ್ಕರ ಸೂರ್ಯನು ಉದಯಿಸಬೇಕೆಂದು ಉದ್ಯುಕ್ತನಾಗಿದ್ದಾನೆ. ಅವನು ಉದಯಿಸುತ್ತಲೇ, ಸರ್ವಲೋಕಗಳನ್ನು ಭಸ್ಮವನ್ನಾಗಿ ಮಾಡುವನು. ಅದಕ್ಕೆ ಸರಿಯಾಗಿ ಪ್ರತೀಕಾರವನ್ನು ನಾನು ಮೊದಲೇ ಮಾಡಿರುವೆನು. ಕಶ್ಯಪರ ಮಗನಾದ ದೊಡ್ಡ ಶರೀರವುಳ್ಳವನಾದ ಮಹಾತೇಜಸ್ವಿಯಾದ ಅರುಣ ಎಂಬುವನು ಸೂರ್ಯನ ಮುಂದೆ ಕೂತುಕೊಳ್ಳುವನು. ಅವನು ಸೂರ್ಯನಿಗೆ ಸಾರಥ್ಯವನ್ನು ಮಾಡುವನು. ಸೂರ್ಯನ ತೇಜಸ್ಸನ್ನು ಅಪಹರಿಸುವನು. ಲೋಕಗಳಿಗೂ ದೇವತೆಗಳಿಗೂ ಋಷಿಗಳಿಗೂ ಕ್ಷೇಮವಾಗುವುದು' ಎಂದರು.

ತರುವಾಯ ಬ್ರಹ್ಮದೇವರು ಆಜ್ಞೆಯಿಂದ ಅರುಣನು ಅದೇ ರೀತಿಯಾಗಿ

ಮಾಡಿದನು. ಸೂರ್ಯನು ಅರುಣನಿಂದ ಸಹಿತನಾಗಿ ಉದಯಿಸಿದನು. ಲೋಕಗಳಿಗೆ ಕ್ಷೇಮವೇ ಉಂಟಾಯಿತು.



## ತಪತೀ [1]

ಸೂರ್ಯದೇವರಿಗೆ ತಪಸ್ವಿನಿಯಾದ ತಪತೀ ಎಂಬ ಮಗಳು ಇದ್ದಳು. ಅವಳಂತೆ ಸುಂದರಿಯಾದವಳು ದೇವತಾಸ್ತ್ರೀಯಾಲೀ ಯಕ್ಷಗಂಧರ್ವಮನುಷ್ಯರ ಸ್ತ್ರೀಯಾಗಲೀ ಯಾರೊಬ್ಬ ಸ್ತ್ರೀಯೂ ಇರಲಿಲ್ಲ. ಅವಳು ಸದಾಚಾರಸಂಪನ್ನಳಾಗಿದ್ದಳು. ಅವಳ ಸೌಂದರ್ಯಾದಿಗುಣಗಳಿಂದ ಅವಳಿಗೆ ಯೋಗ್ಯನಾದ ವರನನ್ನು ಮೂರುಲೋಕ ದಲ್ಲಿಯೂ ಸೂರ್ಯದೇವರು ತಿಳಿಯಲಿಲ್ಲ. ಅವಳಿಗೆ ಹದಿನಾರು ವರ್ಷವಾಗಲು ಅವಳನ್ನು ಯಾರಿಗೆ ಮದುವೆಮಾಡಿಕೊಡಲಿ ಎಂದು ಸೂರ್ಯದೇವರು ಯೋಚನೆ ಮಾಡಲಿಕ್ಕೆ ಆರಂಭಿಸಿದರು.

ಇಂತಹ ಸಮಯದಲ್ಲಿ ಕುರುವಂಶದ ಋಕ್ಷ ಎಂಬ ರಾಜನ ಮಗನಾದ ಸಂವರಣನು ಅರ್ಘ್ಯಗಂಧಪುಷ್ಪ ಇತ್ಯಾದಿಗಳಿಂದ ಸೂರ್ಯದೇವರನ್ನು ಪೂಜಿಸಿ ದನು. ಸೂರ್ಯದೇವರು ಪರಮಸುಂದರನಾದ ಗುಣವಂತನಾದ ಆ ಸಂವರಣ ನನ್ನು ತನ್ನ ಮಗಳಾದ ತಪತಿಗೆ ಯೋಗ್ಯನಾದ ವರನೆಂದು ಭಾವಿಸಿದರು. ಸೂರ್ಯದೇವರು ಆಕಾಶದಲ್ಲಿ ಹೇಗೆ ಶೋಭಿಸುತ್ತಿದ್ದರೋ ಹಾಗೆಯೇ ಭೂಮಿ ಯಲ್ಲಿ ಸಂವರಣನು ಶೋಭಿಸುತ್ತಿದ್ದನು. ಹೇಗೆ ಉದಯಿಸಿಕೊಂಡು ಬರುವ ಸೂರ್ಯನನ್ನು ಬ್ರಾಹ್ಮಣರು ಪೂಜಿಸುತ್ತಿದ್ದರೋ ಹಾಗೆಯೇ ಸಂವರಣನನ್ನು ಪ್ರಜೆ ಗಳು ಪೂಜಿಸುತ್ತಿದ್ದರು. ಸಂವರ್ಣನು ಚಂದ್ರನಿಗಿಂತಲೂ ಶಾಂತಿಸಂಪನ್ನನಾಗಿದ್ದನು. ಸೂರ್ಯನಿಗಿಂತಲೂ ತೇಜಸ್ವಿಯಾಗಿದ್ದನು. ಇಂತಹ ಗುಣವುಳ್ಳವನಾದ ಸಂವರ್ಣ ನಿಗೆ ಸೂರ್ಯದೇವರು ತನ್ನ ಮಗಳಾದ ತಪತಿಯನ್ನು ಮದುವೆಮಾಡಿಕೊಡುವು ದೆಂದು ಯೋಚಿಸಿದರು.

ಒಂದುದಿನ ಮಹಾಪರಾಕ್ರಮಶಾಲಿಯಾದ ಸಂವರಣನು ಒಂದು ಪರ್ವತದ ಉಪವನದಲ್ಲಿ ಮೃಗಬೇಟೆ ಆಡುತ್ತಾ ಹೋದನು. ರಾಜನು ಮೃಗಬೇಟೆ ಆಡುತ್ತಿರಲು, ಆ ಪರ್ವತದಲ್ಲಿ ಹಸಿವೆದಾಹದಿಂದ ಕೂಡಿದ ರಾಜನ ಕುದುರೆಯು

1. ಮ.ಭಾ.ಆ.ಪ. ಅ.170, 171

ಮರಣವನ್ನು ಹೊಂದಿತು. ಈರೀತಿಯಾಗಿ ಕುದುರೆಯು ಸಾಯಲು ರಾಜನು ಕಾಲುಗಳಿಂದಲೇ ಆ ಬೆಟ್ಟದಲ್ಲಿ ನಡೆಯುತ್ತಾ ಹೋದನು. ಒಂದು ಸ್ಥಳದಲ್ಲಿ ಪರಮಸುಂದರಿಯಾದ ಕನ್ಯೆಯೊಬ್ಬಳನ್ನು ನೋಡಿದನು. ಒಬ್ಬಳೇ ಇದ್ದ ಆ ಕನ್ಯೆಯ ಬಳಿಗೆ ರಾಜನೊಬ್ಬನೇ ಹೋದನು. ಹತ್ತಿರವೇ ಹೋಗಿ ನಿಂತನು. ಕಣ್ಣಿನ ರೆಪ್ಪೆಹಾಕದೆ ಅವಳನ್ನೇ ನೋಡಿದನು. ರಾಜನು ಅವಳ ಸೌಂದರ್ಯವನ್ನು ನೋಡಿ ಶ್ರೀದೇವಿ ಯಾಗಿರಬಹುದೋ? ಸೂರ್ಯನ ಪ್ರಭೆಯಾಗಿರಬಹುದೋ? ಅಗ್ನಿಯ ಜ್ವಾಲೆ ಯಾಗಿರಬಹುದೋ ಹೀಗೆಲ್ಲಾ ಯೋಚನೆ ಮಾಡಿದನು. ಅವಳ ಸೌಂದರ್ಯದಿಂದ ಆ ಬೆಟ್ಟವು ಬಂಗಾರದ ಬೆಟ್ಟದಂತೆ ಪ್ರಕಾಶಿಸಿತು. ಅವಳ ಸೌಂದರ್ಯವನ್ನು ನೋಡಿ ಲೋಕದಲ್ಲಿರುವ ಎಲ್ಲಾ ಸ್ತ್ರೀಯರೂ ಅಧಮರು ಎಂದುಕೊಂಡನು. ಇವಳನ್ನು ನೋಡಿದ ಕಾರಣ ತನ್ನ ಕಣ್ಣುಗಳು, ಸಫಲವಾದವು ಎಂದುಕೊಂಡನು. ಸಂವರಣನು ಆ ಸುಂದರಿಯನ್ನು ನೋಡಿ ಕಾಮಬಾಣ ವಶನಾದನು. ಕಾಮಬಾಣ ಪೀಡಿತನಾಗಿ ಆಸುಂದರಿಯೊಡನೆ ಮಾತನಾಡಿದನು. 'ಸುಂದರಿ! ನೀನು ಯಾರು? ಯಾರ ಮಗಳು? ಜನರ ಹಿತವಾದ ಈ ಅರಣ್ಯದಲ್ಲಿ ನೀನೊಬ್ಬಳೇ ಏಕೆ ಸಂಚರಿಸುವಿ? ನಿನ್ನನ್ನು ನೋಡುವ ಮಾತ್ರದಿಂದ ಮನ್ಮಥನು ನನ್ನನ್ನು ಪೀಡಿಸುತ್ತಿರುವನು' ಇತ್ಯಾದಿ ರೀತಿಯಿಂದ ಮಾತನಾಡಿದನು. ಆದರೆ ಆ ಸುಂದರಿಯು ಆ ಕಾಮಬಾಣ ಪೀಡಿತನಾದ ರಾಜನೊಡನೆ ಮಾತನಾಡಲೇ ಇಲ್ಲ. ಮೇಘದಲ್ಲಿ ಮಿಂಚುಬಂದು ಮರೆಯಾಗುವಂತೆ ಆ ಸುಂದರಿಯು ಅಲ್ಲಿಯೇ ಮರೆಯಾದಳು. ರಾಜನು ಅವಳನ್ನು ಹುಡುಕುತ್ತಾ ಹುಚ್ಚುಹಿಡಿದವನಂತೆ ಸಂಚರಿಸಿದನು. ತರುವಾಯ ಅವಳನ್ನು ಕಾಣದೆ ರಾಜನು ಬಹಳ ವಿಲಾಪವನ್ನು ಮಾಡಿ ಒಂದು ಮುಹೂರ್ತ ಕಾಲ ಸುಮ್ಮನೆ ಇದ್ದನು. ಎಷ್ಟೋ ಶತ್ರುಗಳನ್ನು ಯುದ್ಧದಲ್ಲಿ ಬೀಳಿಸಿದ ಕಾಮಪರವಶನಾಗಿ ಕೆಳಗೆ ಬಿದ್ದನು.

ಆ ಸಮಯದಲ್ಲಿ ಸುಂದರಿಯಾದ ತಪತಿಯು ಅವನ ಕಣ್ಣಿಗೆ ಕಾಣಿಸಿ ಕೊಂಡಳು. ತಪತಿಯು ಮಂದಹಾಸವನ್ನು ಮಾಡುತ್ತಾ ಮಧುರವಾದ ವಾಣಿಯಿಂದ 'ರಾಜಶಾರ್ದೂಲ! ಏಳು. ನೀನು ಹೀಗೆ ಮೂರ್ಛೆಯನ್ನು ಹೊಂದಲು ಅರ್ಹನಲ್ಲ' ಎಂದಳು. ಈರೀತಿಯಾಗಿ ಹೇಳಲು ರಾಜನು ತನ್ನ ಎದುರಲ್ಲಿ ನಿಂತಿರುವ ಆ ಸುಂದರಿಯನ್ನು ನೋಡಿ 'ಸುಂದರಿ! ನಾನು ಕಾಮವಶನಾಗಿರುವೆನು. ನನ್ನನ್ನು ಕಾಪಾಡು' ಎಂದು ನಾನಾಪರಿಯಾಗಿ ಕೇಳಿಕೊಂಡನು. ಅದಕ್ಕೆ ಅವಳು ರಾಜನೇ! ನಾನು ಸ್ವತಂತ್ರಳಲ್ಲ. ನನಗೆ ತಂದೆಯು ಇದ್ದಾರೆ. ನನ್ನ ಮೇಲೆ ನಿನಗೆ ಅಷ್ಟು ಪ್ರೀತಿಯಿದ್ದರೆ ನನ್ನ ತಂದೆಯ ಹತ್ತಿರ ಕೇಳು. ನೀನು ಹೇಗೆ ನನ್ನನ್ನು ನೋಡಿ

ಮಾಡಿದನು. ಸೂರ್ಯನು ಅರುಣನಿಂದ ಸಹಿತನಾಗಿ ಉದಯಿಸಿದನು. ಲೋಕಗಳಿಗೆ ಕ್ಷೇಮವೇ ಉಂಟಾಯಿತು.



## ತಪತೀ [1]

ಸೂರ್ಯದೇವರಿಗೆ ತಪಸ್ವಿನಿಯಾದ ತಪತೀ ಎಂಬ ಮಗಳು ಇದ್ದಳು. ಅವಳಂತೆ ಸುಂದರಿಯಾದವಳು ದೇವತಾಸ್ತ್ರೀಯಾಲೀ ಯಕ್ಷಗಂಧರ್ವಮನುಷ್ಯರ ಸ್ತ್ರೀಯಾಗಲೀ ಯಾರೊಬ್ಬ ಸ್ತ್ರೀಯೂ ಇರಲಿಲ್ಲ. ಅವಳು ಸದಾಚಾರಸಂಪನ್ನಳಾಗಿದ್ದಳು. ಅವಳ ಸೌಂದರ್ಯಾದಿಗುಣಗಳಿಂದ ಅವಳಿಗೆ ಯೋಗ್ಯನಾದ ವರನನ್ನು ಮೂರುಲೋಕ ದಲ್ಲಿಯೂ ಸೂರ್ಯದೇವರು ತಿಳಿಯಲಿಲ್ಲ. ಅವಳಿಗೆ ಹದಿನಾರು ವರ್ಷವಾಗಲು ಅವಳನ್ನು ಯಾರಿಗೆ ಮದುವೆಮಾಡಿಕೊಡಲಿ ಎಂದು ಸೂರ್ಯದೇವರು ಯೋಚನೆ ಮಾಡಲಿಕ್ಕೆ ಆರಂಭಿಸಿದರು.

ಇಂತಹ ಸಮಯದಲ್ಲಿ ಕುರುವಂಶದ ಋಕ್ಷ ಎಂಬ ರಾಜನ ಮಗನಾದ ಸಂವರಣನು ಅರ್ಘ್ಯಗಂಧಪುಷ್ಪ ಇತ್ಯಾದಿಗಳಿಂದ ಸೂರ್ಯದೇವರನ್ನು ಪೂಜಿಸಿ ದನು. ಸೂರ್ಯದೇವರು ಪರಮಸುಂದರನಾದ ಗುಣವಂತನಾದ ಆ ಸಂವರಣ ನನ್ನು ತನ್ನ ಮಗಳಾದ ತಪತಿಗೆ ಯೋಗ್ಯನಾದ ವರನೆಂದು ಭಾವಿಸಿದರು. ಸೂರ್ಯದೇವರು ಆಕಾಶದಲ್ಲಿ ಹೇಗೆ ಶೋಭಿಸುತ್ತಿದ್ದರೋ ಹಾಗೆಯೇ ಭೂಮಿ ಯಲ್ಲಿ ಸಂವರಣನು ಶೋಭಿಸುತ್ತಿದ್ದನು. ಹೇಗೆ ಉದಯಿಸಿಕೊಂಡು ಬರುವ ಸೂರ್ಯನನ್ನು ಬ್ರಾಹ್ಮಣರು ಪೂಜಿಸುತ್ತಿದ್ದರೋ ಹಾಗೆಯೇ ಸಂವರಣನನ್ನು ಪ್ರಜೆ ಗಳು ಪೂಜಿಸುತ್ತಿದ್ದರು. ಸಂವರ್ಣನು ಚಂದ್ರನಿಗಿಂತಲೂ ಶಾಂತಿಸಂಪನ್ನನಾಗಿದ್ದನು. ಸೂರ್ಯನಿಗಿಂತಲೂ ತೇಜಸ್ವಿಯಾಗಿದ್ದನು. ಇಂತಹ ಗುಣವುಳ್ಳವನಾದ ಸಂವರ್ಣ ನಿಗೆ ಸೂರ್ಯದೇವರು ತನ್ನ ಮಗಳಾದ ತಪತಿಯನ್ನು ಮದುವೆಮಾಡಿಕೊಡುವು ದೆಂದು ಯೋಚಿಸಿದರು.

ಒಂದುದಿನ ಮಹಾಪರಾಕ್ರಮಶಾಲಿಯಾದ ಸಂವರಣನು ಒಂದು ಪರ್ವತದ ಉಪವನದಲ್ಲಿ ಮೃಗಬೇಟೆ ಆಡುತ್ತಾ ಹೋದನು. ರಾಜನು ಮೃಗಬೇಟೆ ಆಡುತ್ತಿರಲು, ಆ ಪರ್ವತದಲ್ಲಿ ಹಸಿವೆದಾಹದಿಂದ ಕೂಡಿದ ರಾಜನ ಕುದುರೆಯು

1. ಮ.ಭಾ.ಆ.ಪ. ಅ.170, 171

ಮರಣವನ್ನು ಹೊಂದಿತು. ಈರೀತಿಯಾಗಿ ಕುದುರೆಯು ಸಾಯಲು ರಾಜನು ಕಾಲುಗಳಿಂದಲೇ ಆ ಬೆಟ್ಟದಲ್ಲಿ ನಡೆಯುತ್ತಾ ಹೋದನು. ಒಂದು ಸ್ಥಳದಲ್ಲಿ ಪರಮಸುಂದರಿಯಾದ ಕನ್ಯೆಯೊಬ್ಬಳನ್ನು ನೋಡಿದನು. ಒಬ್ಬಳೇ ಇದ್ದ ಆ ಕನ್ಯೆಯ ಬಳಿಗೆ ರಾಜನೊಬ್ಬನೇ ಹೋದನು. ಹತ್ತಿರವೇ ಹೋಗಿ ನಿಂತನು. ಕಣ್ಣಿನ ರೆಪ್ಪೆಹಾಕದೆ ಅವಳನ್ನೇ ನೋಡಿದನು. ರಾಜನು ಅವಳ ಸೌಂದರ್ಯವನ್ನು ನೋಡಿ ಶ್ರೀದೇವಿ ಯಾಗಿರಬಹುದೋ? ಸೂರ್ಯನ ಪ್ರಭೆಯಾಗಿರಬಹುದೋ? ಅಗ್ನಿಯ ಜ್ವಾಲೆ ಯಾಗಿರಬಹುದೋ ಹೀಗೆಲ್ಲಾ ಯೋಚನೆ ಮಾಡಿದನು. ಅವಳ ಸೌಂದರ್ಯದಿಂದ ಆ ಬೆಟ್ಟವು ಬಂಗಾರದ ಬೆಟ್ಟದಂತೆ ಪ್ರಕಾಶಿಸಿತು. ಅವಳ ಸೌಂದರ್ಯವನ್ನು ನೋಡಿ ಲೋಕದಲ್ಲಿರುವ ಎಲ್ಲಾ ಸ್ತ್ರೀಯರೂ ಅಧಮರು ಎಂದುಕೊಂಡನು. ಇವಳನ್ನು ನೋಡಿದ ಕಾರಣ ತನ್ನ ಕಣ್ಣುಗಳು, ಸಫಲವಾದವು ಎಂದುಕೊಂಡನು. ಸಂವರಣನು ಆ ಸುಂದರಿಯನ್ನು ನೋಡಿ ಕಾಮಬಾಣ ವಶನಾದನು. ಕಾಮಬಾಣ ಪೀಡಿತನಾಗಿ ಆಸುಂದರಿಯೊಡನೆ ಮಾತನಾಡಿದನು. 'ಸುಂದರಿ! ನೀನು ಯಾರು? ಯಾರ ಮಗಳು? ಜನರ ಹಿತವಾದ ಈ ಅರಣ್ಯದಲ್ಲಿ ನೀನೊಬ್ಬಳೇ ಏಕೆ ಸಂಚರಿಸುವಿ? ನಿನ್ನನ್ನು ನೋಡುವ ಮಾತ್ರದಿಂದ ಮನ್ಮಥನು ನನ್ನನ್ನು ಪೀಡಿಸುತ್ತಿರುವನು' ಇತ್ಯಾದಿ ರೀತಿಯಿಂದ ಮಾತನಾಡಿದನು. ಆದರೆ ಆ ಸುಂದರಿಯು ಆ ಕಾಮಬಾಣ ಪೀಡಿತನಾದ ರಾಜನೊಡನೆ ಮಾತನಾಡಲೇ ಇಲ್ಲ. ಮೇಘದಲ್ಲಿ ಮಿಂಚುಬಂದು ಮರೆಯಾಗುವಂತೆ ಆ ಸುಂದರಿಯು ಅಲ್ಲಿಯೇ ಮರೆಯಾದಳು. ರಾಜನು ಅವಳನ್ನು ಹುಡುಕುತ್ತಾ ಹುಚ್ಚುಹಿಡಿದವನಂತೆ ಸಂಚರಿಸಿದನು. ತರುವಾಯ ಅವಳನ್ನು ಕಾಣದೆ ರಾಜನು ಬಹಳ ವಿಲಾಪವನ್ನು ಮಾಡಿ ಒಂದು ಮುಹೂರ್ತ ಕಾಲ ಸುಮ್ಮನೆ ಇದ್ದನು. ಎಷ್ಟೋ ಶತ್ರುಗಳನ್ನು ಯುದ್ಧದಲ್ಲಿ ಬೀಳಿಸಿದ ಕಾಮಪರವಶನಾಗಿ ಕೆಳಗೆ ಬಿದ್ದನು.

ಆ ಸಮಯದಲ್ಲಿ ಸುಂದರಿಯಾದ ತಪತಿಯು ಅವನ ಕಣ್ಣಿಗೆ ಕಾಣಿಸಿ ಕೊಂಡಳು. ತಪತಿಯು ಮಂದಹಾಸವನ್ನು ಮಾಡುತ್ತಾ ಮಧುರವಾದ ವಾಣಿಯಿಂದ 'ರಾಜಶಾರ್ದೂಲ! ಏಳು. ನೀನು ಹೀಗೆ ಮೂರ್ಛೆಯನ್ನು ಹೊಂದಲು ಅರ್ಹನಲ್ಲ' ಎಂದಳು. ಈರೀತಿಯಾಗಿ ಹೇಳಲು ರಾಜನು ತನ್ನ ಎದುರಲ್ಲಿ ನಿಂತಿರುವ ಆ ಸುಂದರಿಯನ್ನು ನೋಡಿ 'ಸುಂದರಿ! ನಾನು ಕಾಮವಶನಾಗಿರುವೆನು. ನನ್ನನ್ನು ಕಾಪಾಡು' ಎಂದು ನಾನಾಪರಿಯಾಗಿ ಕೇಳಿಕೊಂಡನು. ಅದಕ್ಕೆ ಅವಳು ರಾಜನೇ! ನಾನು ಸ್ವತಂತ್ರಳಲ್ಲ. ನನಗೆ ತಂದೆಯು ಇದ್ದಾರೆ. ನನ್ನ ಮೇಲೆ ನಿನಗೆ ಅಷ್ಟು ಪ್ರೀತಿಯಿದ್ದರೆ ನನ್ನ ತಂದೆಯ ಹತ್ತಿರ ಕೇಳು. ನೀನು ಹೇಗೆ ನನ್ನನ್ನು ನೋಡಿ

ಮೋಹಿತನಾಗಿರುವೆಯೋ ಹಾಗೆಯೇ ನನ್ನ ಮನಸ್ಸನ್ನೂ ಅಪಹರಿಸಿರುವಿ. ಆದರೆ ನಾನು ಸ್ವತಂತ್ರಳಲ್ಲ. ಆದುದರಿಂದ ನಾನು ನಿನ್ನ ಬಳಿಗೆ ಬರಲಾರೆನು. ಸ್ತ್ರೀಯು ಸ್ವತಂತ್ರವಲ್ಲವಷ್ಟೆ! ನಿನ್ನಂತಹ ಸರ್ವಲೋಕಗಳಲ್ಲಿಯೂ ಪ್ರಸಿದ್ಧವಾದ ವಂಶದಲ್ಲಿ ಹುಟ್ಟಿರುವ ಮಹಾರಾಜನನ್ನು ಯಾವ ಸ್ತ್ರೀಯು ಅಪೇಕ್ಷಿಸದೆ ಇರುವಳು? ಹೀಗಿರುವಾಗ ನೀನು ನನ್ನ ತಂದೆಯಾದ ಸೂರ್ಯದೇವರಿಗೆ ನಮಸ್ಕಾರ ಮಾಡಿ ಪ್ರಾರ್ಥನೆ ಮಾಡಿಕೊ. ಅವರು ಅಭಿಪ್ರಾಯಪಟ್ಟರೆ ನಾನು ನಿನ್ನ ವಶಳಾಗುವೆನು. ನಾನು ಲೋಕಪ್ರಕಾಶಕರಾದ ಸೂರ್ಯದೇವರ ಮಗಳು. ತಪತೀ ಎಂದು ಹೆಸರುಳ್ಳವಳು' ಎಂದು ಹೇಳಿದಳು. ಹೀಗೆ ಹೇಳುತ್ತಾ ಬೇಗನೇ ಮೇಲೆ ಹೊರಟುಹೋದಳು. ರಾಜನು ತಪತಿ ತಪತಿ ಎಂದು ವಿಲಾಪವನ್ನು ಮಾಡುತ್ತಾ ಅಲ್ಲಿಯೇ ಬಿದ್ದನು.

ತರುವಾಯ ಅಲ್ಲಿಗೆ ರಾಜನನ್ನು ಹುಡುಕುತ್ತಾ ಪರಿವಾರಸಹಿತನಾಗಿ (ಮಂತ್ರಿಯು) ಬಂದನು. ಕಾಮಮೋಹಿತನಾಗಿ ನೆಲದಲ್ಲಿ ಬಿದ್ದಿರುವ ರಾಜನನ್ನು ನೋಡಿ ಮಂತ್ರಿಯು ತಂದೆಯು ಬಿದ್ದ ಮಗನನ್ನು ಎಬ್ಬಿಸುವಂತೆ ಎಬ್ಬಿಸಿದನು. ಜ್ಞಾನದಿಂದಲೂ ವಯಸ್ಸಿನಿಂದಲೂ ವೃದ್ಧನಾದ ಮಂತ್ರಿಯು ಮಧುರವಾದ ವಾಣಿಯಿಂದ ನಿನಗೆ ಮಂಗಳವಾಗಲಿ ಎಂದನು. ರಾಜನಿಗೆ ಹಸಿವೆ ಬಾಯಾರಿಕೆಗಳು ಆಗಿರಬಹುದೆಂದು ಯೋಚಿಸಿದನು. ತಣ್ಣಗಿರುವ ನೀರನ್ನು ತಲೆಗೆ ಹಾಕಿದನು. ತರುವಾಯ ರಾಜನಿಗೆ ಮೂರ್ಛೆಯು ಹೋಗಿ ಜ್ಞಾನವು ಬಂದಿತು. ರಾಜನು ಮಂತ್ರಿ ಒಬ್ಬನನ್ನು ಹೊರತು ಮತ್ತೆಲ್ಲರನ್ನೂ ದೂರಹೋಗುವಂತೆ ಹೇಳಿದನು. ರಾಜನ ಅಪ್ಪಣೆಯಿಂದ ಮಹತ್ತಾದ ಸೈನ್ಯವೆಲ್ಲವೂ ಹೊರಟುಹೋಯಿತು. ರಾಜನು ಆ ಬೆಟ್ಟದಲ್ಲಿಯೇ ಇದ್ದುಕೊಂಡು ಶುದ್ಧನಾಗಿದ್ದುಕೊಂಡು ಸೂರ್ಯದೇವರನ್ನು ಆರಾಧನೆ ಮಾಡಬೇಕೆಂದು ಯೋಚಿಸಿದನು. ಸಂವರಣರಾಜನು ತನ್ನ ಪುರೋಹಿತರಾದ ವಸಿಷ್ಠರನ್ನು ಸ್ಮರಿಸಿಕೊಂಡನು. ವಸಿಷ್ಠರು ದಿವ್ಯದೃಷ್ಟಿಯಿಂದ ರಾಜನು ತಪತಿಯಿಂದ ಅಪಹೃತವಾದ ಮನಸ್ಸುಳ್ಳವನಾಗಿರುವನೆಂದು ತಿಳಿದು ಹನ್ನೆರಡನೇ ದಿವಸದಲ್ಲಿ ಬಂದರು. ವಸಿಷ್ಠರು ರಾಜನೊಡನೆ ನಿನ್ನ ಕಾರ್ಯವನ್ನು ಸಾಧಿಸುವೆನು ಎಂದರು. ರಾಜನು ನೋಡುತ್ತಿರುವಾಗಲೇ ವಸಿಷ್ಠರು ಸೂರ್ಯದೇವರಿದ್ದಲ್ಲಿಗೆ ಮೇಲೆ ಹೋಗಲಿಕ್ಕೆ ಆರಂಭಿಸಿದರು. ಒಂದುಕ್ಷಣದಲ್ಲಿ ವಸಿಷ್ಠರು ಸೂರ್ಯದೇವರಿದ್ದಲ್ಲಿಗೆ ಹೋಗಿ, ಸೂರ್ಯದೇವರಿಗೆ ಕೈಮುಗಿದು ನಾನು ವಸಿಷ್ಠ ಎಂದು ಹೇಳಿಕೊಂಡರು.

ಆಗ ಸೂರ್ಯದೇವರು 'ಮಹರ್ಷಿಗಳೇ! ಸ್ವಾಗತವು. ಯಾವ ಅಭಿಪ್ರಾಯ

ದಿಂದ ಬಂದಿರುವಿರಿ? ನನ್ನಿಂದ ಯಾವ ವರವನ್ನು ಬೇಕಾದರೂ ಕೇಳಿಕೊಳ್ಳಿರಿ' ಎಂದರು. ಈರೀತಿಯಾಗಿ ಸೂರ್ಯದೇವರು ಹೇಳಲು ವಸಿಷ್ಠರು ಸೂರ್ಯ ದೇವರನ್ನು ನಮಸ್ಕಾರಮಾಡಿ, ಸ್ತೋತ್ರ ಮಾಡಿದರು. ಆ ಸೂರ್ಯದೇವರು ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದರು. ವಸಿಷ್ಠರು ನಿಮ್ಮ ಮಗಳಾದ ತಪತಿಯನ್ನು ಸಂವರಣ ರಾಜನಿಗೋಸ್ಕರ ಕೊಡಬೇಕು. ಆ ರಾಜನು ಮಹಾ ಕೀರ್ತಿವಂತನು. ನಿಮ್ಮ ಮಗಳಿಗೆ ಸರಿಯಾದ ವರನು ಎಂದರು.

ಆದಕ್ಕೆ ಸೂರ್ಯದೇವರು ಕೊಡುತ್ತೇನೆ ಎಂದರು. ರಾಜರ ಮಧ್ಯದಲ್ಲಿ ಸಂವರಣನು ಉತ್ತಮ ವರನು. ಋಷಿಗಳ ಮಧ್ಯದಲ್ಲಿ ನೀವು ಉತ್ತಮರು. ಸ್ತ್ರೀಯ ಮಧ್ಯದಲ್ಲಿ ತಪತಿಯು ಶ್ರೇಷ್ಠಳಾಗಿದ್ದಾಳೆ. ನಾನು ಯಾಕೆ ಕೊಡದೆ ಇರಲಿ? ಎಂದು ಹೇಳಿ ಸಂವರಣ ರಾಜನಿಗೋಸ್ಕರ ತನ್ನ ಮಗಳಾದ ತಪತಿಯನ್ನು ವಸಿಷ್ಠರ ಕೈಯಲ್ಲಿ ಒಪ್ಪಿಸಿದರು. ವಸಿಷ್ಠರು ಆ ಕನ್ಯೆಯನ್ನು ಕರೆದುಕೊಂಡು ಸಂವರಣರಾಜನು ಇದ್ದಲ್ಲಿಗೆ ಬಂದರು. ಮನ್ಮಥಾವಿಷ್ಟನಾದ ರಾಜನು ವಸಿಷ್ಠರೊಡನೆ ಬರುತ್ತಾ ಇದ್ದ ಪರಮ ಸುಂದರಿಯಾದ ತಪತಿಯನ್ನು ನೋಡಿ ತುಂಬಾ ಸಂತೋಷಪಟ್ಟನು. ರಾಜನಿದ್ದಲ್ಲಿ ವಸಿಷ್ಠರು ಹನ್ನೆರಡನೆ ರಾತ್ರಿಯಲ್ಲಿ ಬಂದರು. ಈ ರೀತಿ ಸಂವರಣರಾಜನು ತಪಸ್ಸಿನಿಂದ ಸೂರ್ಯದೇವರನ್ನು ಆರಾಧಿಸಿ, ವಸಿಷ್ಠರ ತೇಜಸ್ಸಿನಿಂದ ತಪತಿಯನ್ನು ಹೊಂದಿದನು. ದೇವಗಂಧರ್ವರಿಂದ ಸೇವಿತವಾದ ಆ ಪರ್ವತದಲ್ಲಿಯೇ ರಾಜನು ವಿಧಿಪ್ರಕಾರವಾಗಿ ತಪತಿಯನ್ನು ಮದುವೆ ಮಾಡಿಕೊಂಡನು.

ತರುವಾಯ ರಾಜನು ವಸಿಷ್ಠರಿಂದ ಅನುಜ್ಞೆಯನ್ನು ಪಡೆದು ಪತ್ನಿಯೊಡನೆ ಆ ಪರ್ವತದಲ್ಲಿ ವಿಹರಿಸಲು ಇಚ್ಛಿಸಿದನು. ರಾಜನು ರಾಜ್ಯವನ್ನು ನೋಡಿಕೊಳ್ಳಲಿಕ್ಕೆ ಮಂತ್ರಿಗೆ ಆಜ್ಞಾಮಾಡಿ, ತಾನು ಹನ್ನೆರಡು ವರ್ಷಕಾಲ ವನದಲ್ಲಿಯೇ ವಿಹಾರ ಮಾಡಿದನು. ಆ ಸಮಯದಲ್ಲಿ ಊರಲ್ಲಿ ಮಳೆಯು ಬರಲಿಲ್ಲ. ಪ್ರಜೆಗಳು ಕ್ಷಯವನ್ನು ಹೊಂದಿದರು. ಜನರೆಲ್ಲಾ ಆಹಾರವಿಲ್ಲದೆ ಪರಸ್ಪರ ಬಡಿದುಕೊಂಡು ಸತ್ತರು. ಊರು ಸ್ಮಶಾನದಂತೆ ಆಯಿತು. ಆಗ ವಸಿಷ್ಠರು. ಕಾಡಿಗೆ ಬಂದು ರಾಜನನ್ನು ಊರಿಗೆ ಕರೆದುಕೊಂಡು ಬಂದರು. ತಪತಿಯಿಂದ ಸಹಿತನಾದ ಸಂವರಣರಾಜನು ಊರಿಗೆ ಬರಲು ಇಂದ್ರದೇವರು ಮಳೆಸುರಿಸಿದರು. ರಾಜ್ಯದಲ್ಲಿ ಸುಭಿಕ್ಷೆಯುಂಟಾಯಿತು.

ತರುವಾಯ ರಾಜನಿಂದ ಜನರು ಸಂತೋಷಪಟ್ಟರು. ರಾಜನು ಹನ್ನೆರಡು ವರ್ಷಕಾಲ ಪತ್ನಿಯಾದ ತಪತಿಯಿಂದ ಕೂಡಿಕೊಂಡು ಯಾಗವನ್ನು ಮಾಡಿದನು.

ಈರೀತಿಯಾಗಿ ಸೂರ್ಯದೇವರ ಮಗಳಾದ ತಪತಿಯನ್ನು ಸಂವರಣರಾಜನು ಮದುವೆ ಮಾಡಿಕೊಂಡು, ಅವಳಲ್ಲಿ **ಕುರು** ಎಂಬ ಪ್ರಸಿದ್ಧನಾದ ಮಗನನ್ನು ಪಡೆದನು.



## ಮಾತಲಿಯ ಕಥೆ [1]

ಇಂದ್ರದೇವರ ಸಾರಥಿಯಾದ ಮಾತಲಿಗೆ ಗುಣಕೇಶಿಯೆಂಬ ಅತ್ಯಂತ ಸುಂದರಿಯಾದ ಮಗಳಿದ್ದಳು. ಅವಳಿಗೆ ಮದುವೆಮಾಡುವ ಕಾಲವು ಬರಲು ಮಾತಲಿಯು ತನ್ನ ಪತ್ನಿಯೊಡನೆ ಯೋಚನೆ ಮಾಡಿದನು. 'ಹೆಣ್ಣು ಮಕ್ಕಳೇ ಹುಟ್ಟಬಾರದು. ಕನ್ಯೆಯಿಂದಾಗಿ ತಂದೆಯ ಕುಲವೂ ತಾಯಿಯ ಕುಲವೂ ಗಂಡನ ಕುಲವೂ ಮೂರು ಕುಲವೂ ಸಂಶಯಗ್ರಸ್ತವಾಗಿರುತ್ತದೆ. ಅವಳು ಸರಿಯಾಗಿದ್ದರೆ ಒಳ್ಳೆಯದಾಗುವುದು. ದೇವಲೋಕದಲ್ಲಿಯೂ ಮನುಷ್ಯಲೋಕದಲ್ಲಿಯೂ ವಿಚಾರಿಸಿದರೂ ನಮ್ಮ ಮಗಳಿಗೆ ಸರಿಯಾದ ವರನೇ ಸಿಗಲಿಲ್ಲ' ಎಂದನು.

ಮಾತಲಿಯು ದೇವತೆಗಳಲ್ಲಿಯೂ ದೈತ್ಯರಲ್ಲಿಯೂ ಮನುಷ್ಯರಲ್ಲಿಯೂ ಋಷಿಗಳಲ್ಲಿಯೂ ಸರಿಯಾದ ವರನನ್ನು ಹೊಂದಲಿಲ್ಲ. ತರುವಾಯ ತನ್ನ ಹೆಂಡತಿಯಾದ ಸುಧರ್ಮೆಯೊಡನೆ ರಾತ್ರಿಯಲ್ಲಿ ಯೋಚನೆ ಮಾಡಿ ನಾಗಲೋಕಕ್ಕೆ ಹೋಗುವುದೆಂದು ನಿಶ್ಚಯಿಸಿದನು. ಮಗಳನ್ನು ಶಿರಸಾ ಆಘ್ರಾಣನೆ ಮಾಡಿ ಹೆಂಡತಿಯೊಡನೆ ಹೇಳಿಕೊಂಡು ಭೂಮಿಗೆ ಪ್ರವೇಶಿಸಿದನು.

ದಾರಿಯಲ್ಲಿ ಮಾತಲಿಯು ವರುಣಲೋಕಕ್ಕೆ ಹೋಗುತ್ತಿದ್ದ ನಾರದರನ್ನು ನೋಡಿದನು. ನಾರದರು ಮಾತಲಿಯನ್ನು ನೋಡಿ 'ಮಾತಲಿಯೇ! ನಿನ್ನ ಕಾರ್ಯಕ್ಕಾಗಿ ಹೊರಟಿರುವಿಯಾ? ಅಥವಾ ಇಂದ್ರದೇವರ ಆಜ್ಞೆಯಿಂದ ಹೊರಟಿರುವಿಯಾ? ಎಂದು ಕೇಳಿದರು. ಮಾತಲಿಯು ಎಲ್ಲಾ ವಿಷಯವನ್ನೂ ಹೇಳಿದನು. ಅದಕ್ಕೆ ನಾರದರು ನಾವಿಬ್ಬರೂ ಒಟ್ಟಿಗೆ ಹೋಗುವ. ನಾನು ವರುಣದೇವರನ್ನು ನೋಡಲಿಕ್ಕೆ ಸ್ವರ್ಗದಿಂದ ಹೊರಟುಬರುತ್ತಿದ್ದೇನೆ. ನಾನು ಭೂಮಿಯಲ್ಲಿ ಎಲ್ಲರನ್ನೂ ಹೇಳುತ್ತೇನೆ. ನೋಡಿ ಯಾವ ವರನಾಗಬಹುದೆಂದು ಯೋಚಿಸುವ ಎಂದರು. ವರುಣಲೋಕಕ್ಕೆ ಹೋಗಿ ನಾರದರು ಅಲ್ಲಿರುವವರ ವಿಷಯವನ್ನೆಲ್ಲಾ ಮಾತಲಿಗೆ ಹೇಳಿದರು. ಮಾತಲಿಗೆ ಅಲ್ಲಿ ಯಾವ ವರನೂ ಇಷ್ಟವಾಲಿಲ್ಲ. ಅಲ್ಲಿಂದ ಪಾತಾಳಕ್ಕೆ

1. ಮ.ಭಾ.ಉ.ಪ. ಅ. 97-105

ಕರೆದುಕೊಂಡು ಹೋಗಿ ತೋರಿಸಿದರು. ಅಲ್ಲಿಯೂ ಸರಿಯಾದ ವರನು ಸಿಗಲಿಲ್ಲ. ತರುವಾಯ ದಾನವರು ಇರುವ ಹಿರಣ್ಯಪುರವನ್ನು ತೋರಿಸಿ ಇಲ್ಲಿ ವರನನ್ನು ನೋಡಿ ಎಂದರು. ಮಾತಲಿಯು ಇವರೆಲ್ಲರೂ ದೇವತೆಗಳ ದ್ವೇಷಿಗಳು. ಇವರ ಸಂಬಂಧವು ನನಗೆ ಸರಿಬೀಳದು ಎಂದನು. ಅದೇ ರೀತಿಯಾಗಿ ಗರುಡಲೋಕಕ್ಕೆ ಹೋಗಿ ನೋಡಿದರು. ರಸಾತಲಕ್ಕೆ ಹೋದರು. ಅಲ್ಲಿ ಎಲ್ಲಿಯೂ ಸರಿಯಾದ ವರನು ಸಿಗಲಿಲ್ಲ.

ಕೊನೆಗೆ ನಾಗಲೋಕಕ್ಕೆ ಹೋದರು. ಅಲ್ಲಿ ಮಾತಲಿಯು ಒಬ್ಬ ಸರ್ಪನನ್ನು ಪರೀಕ್ಷಿಸಿ ನೋಡಿ ನಾರದರೇ! ಈ ಸರ್ಪನು ಯಾರು? ಇವನ ತಂದೆ ಯಾರು? ತಾಯಿಯು ಯಾರು? ಯಾವ ವಂಶದವನು? ಇವನು ನಮ್ಮ ಗುಣಕೇಶಿಗೆ ಸರಿಯಾದ ವರನೆಂದು ತೋರುತ್ತದೆ ಎಂದು ಕೇಳಿದನು.

ಅದಕ್ಕೆ ನಾರದರು 'ಇವನು ಐರಾವತ ಎಂಬ ಸರ್ಪನ ಕುಲದಲ್ಲಿ ಹುಟ್ಟಿದವನು. ಇವನ ಹೆಸರು ಸುಮುಖ ಎಂದು. ಇವನು ಆರ್ಯಕ ಎಂಬ ಸರ್ಪನ ಮಗನ ಮಗನು. ವಾಮನ ಎಂಬ ಸರ್ಪದ ಮಗಳ ಮಗನು. ಇವನ ತಂದೆಯು ಚಿಕುರ ಎಂಬ ನಾಗನು. ಅವನು ಸ್ವಲ್ಪ ಸಮಯದ ಹಿಂದೆ ಗರುಡದೇವರಿಂದ ಮೃತನಾಗಿರುವನು' ಎಂದು ಹೇಳಿದರು.

ಅದನ್ನು ಕೇಳಿ ಮಾತಲಿಯು 'ನನಗೆ ಇವನು ಅಳಿಯನಾಗಬೇಕೆಂದು ಆಸೆಯಿದೆ. ಇವನಿಗೆ ನನ್ನ ಮಗಳನ್ನು ಕೊಡಬೇಕೆಂದು ಅಭಿಪ್ರಾಯವಿದೆ. ಈ ವಿಷಯದಲ್ಲಿ ನೀವು ಸ್ವಲ್ಪ ಪ್ರಯತ್ನ ಮಾಡಬೇಕು' ಎಂದನು. ಮಾತಲಿಯ ಮಾತನ್ನು ಕೇಳಿ ಆರ್ಯಕನೊಡನೆ 'ಇವನು ಇಂದ್ರದೇವರಿಗೆ ಸಾರಥಿಯೂ ಮಿತ್ರನೂ ಮಂತ್ರಿಯೂ ಆಗಿರುವನು. ಒಳ್ಳೇ ಗುಣವಂತನಾಗಿರುವನು. ಇವನಿಗೆ ಪರಮ ರೂಪವತಿಯಾದ ಅತ್ಯಂತ ಗುಣವತಿಯಾದ ಗುಣಕೇಶಿಯೆಂಬ ಮಗಳಿರುವಳು. ಅವಳನ್ನು ನಿಮ್ಮ ಸುಮುಖನಿಗೆ ಕೊಟ್ಟು ಮದುವೆ ಮಾಡಬೇಕೆಂದು ಆಸೆಪಡುತ್ತಾನೆ. ಆದುದರಿಂದ ನೀನು ಮೊಮ್ಮಗನಿಗಾಗಿ ಗುಣಕೇಶಿಯನ್ನು ಸ್ವೀಕರಿಸಬೇಕು. ಸುಮುಖನಿಗೆ ತಂದೆಯಿಲ್ಲದೆ ಇದ್ದರೂ ನಿನ್ನ ಮೇಲಿನ ಮತ್ತು ಐರಾವತನ ಮೇಲಿನ ಗೌರವದಿಂದನ ನಾವು ಅಪೇಕ್ಷಿಸುತ್ತೇವೆ' ಎಂದು ಹೇಳಿದರು.

ಆರ್ಯಕನು ಸಂತೋಷವುಳ್ಳವನಾದರೂ ದೀನನಾಗಿ 'ನನ್ನ ಮಗನು ಮೃತನಾಗಿರುವಾಗ ನನ್ನ ಮೊಮ್ಮಗನಿಗೆ ಗುಣಕೇಶಿಯನ್ನು ಹೇಗೆ ಮದುವೆ ಮಾಡಲಿ? ನನಗೆ ತಮ್ಮ ಮಾತು ಬಹುಮಾನಾರ್ಹವಲ್ಲವೆಂದಲ್ಲ. ಇಂದ್ರದೇವರ ಮಿತ್ರನಾದವನ

ಸಂಬಂಧವನು ಯಾರು ಬೇಡವೆಂದು ಹೇಳುವರು? ಆದರೆ ಪ್ರಕೃತ ಸಂದರ್ಭವು ಸರಿಯಾಗಿ ಇಲ್ಲದ ಕಾರಣ ಯೋಚಿಸುತ್ತೇನೆ. ಇವನ ತಂದೆಯಾದ ನನ್ನ ಮಗನನ್ನು ಗರುಡದೇವರು ತಿಂದುಬಿಟ್ಟರು. ಇದರಿಂದ ನಾವೆಲ್ಲರೂ ದುಃಖದಿಂದ ಇದ್ದೇವೆ. ಮಾತ್ರವಲ್ಲದೆ ಗರುಡದೇವರು ಹೋಗುವಾಗ ಇನ್ನೊಂದು ತಿಂಗಳಲ್ಲಿ ನಾನು ಸುಮುಖನನ್ನು ತಿನ್ನುವೆನು ಎಂದು ಹೇಳಿಯೇ ಹೋಗಿದ್ದಾರೆ. ಗರುಡದೇವರು ನಿಶ್ಚಯವಾಗಿಯೂ ಹಾಗೆಯೇ ಮಾಡುವರು. ಆದುದರಿಂದ ನನಗೆ ಆ ಗರುಡದೇವರ ಮಾತಿನಿಂದ ಸಂತೋಷವಿಲ್ಲ' ಎಂದನು.

ಆಗ ಮಾತಲಿಯು 'ನಾನೊಂದು ಯೋಚನೆ ಮಾಡಿದ್ದೇನೆ. ನಾನಂತೂ ಇವನನ್ನು ಅಳಿಯನೆಂದು ನಿಶ್ಚಯ ಮಾಡಿಯಾಯಿತು. ಇವನು ನನ್ನೊಡನೆಯೂ ನಾರದರೊಡನೆಯೂ ಬಂದು ಇಂದ್ರದೇವರನ್ನು ನೋಡಲಿ. ಅಲ್ಲಿ ಇವನ ಆಯುಷ್ಯವನ್ನು ತಿಳಿಯುತ್ತೇನೆ. ಗರುಡದೇವರಿಗೆ ವಿಘ್ನ ಮಾಡಲಿಕ್ಕೆ ಪ್ರಯತ್ನ ಮಾಡುತ್ತೇನೆ. ಕಾರ್ಯಸಿದ್ಧಿಗೋಸ್ಕರ ಸುಮುಖನು ನನ್ನೊಡನೆ ಇಂದ್ರದೇವರ ಬಳಿಗೆ ಬರಲಿ. ನಿನಗೆ ಮಂಗಳವಾಲಿ' ಎಂದನು. ತರುವಾಯ ಆರ್ಯಕನ ಸಮ್ಮತಿಯಿಂದ ಸುಮುಖನನ್ನು ಕರಕೊಂಡು ಬಂದು ದೇವರಾಜನಾದ ಇಂದ್ರದೇವರನ್ನು ನೋಡಿದರು. ಭಗವಂತನೂ ಆ ಸಮಯದಲ್ಲಿ ಅಲ್ಲಿಯೇ ಇದ್ದನು. ನಾರದರು ಮಾತಲಿಯ ಅಭಿಪ್ರಾಯವನ್ನೆಲ್ಲಾ ಹೇಳಿದರು.

ಆಗ ಪರಮಾತ್ಮನು ಇಂದ್ರದೇವರೊಡನೆ ಇವನಿಗೆ ಅಮೃತವನ್ನು ಕೊಟ್ಟುಬಿಡು. ಅಮರರಿಗೆ ಸಮಾನಮಾಡು. ಮಾತಲಿಯೂ ನಾರದರೂ ಸುಮುಖನೂ ನಿನ್ನಿಂದ ಅಭೀಷ್ಟವನ್ನು ಹೊಂದಲಿ ಎಂದನು. ಇಂದ್ರದೇವರು ಗರುಡದೇವರ ಪರಾಕ್ರಮ ವನ್ನು ಯೋಚಿಸಿ ಪರಮಾತ್ಮನೊಡನೆ ನೀವೇ ಕೊಡಬೇಕು ಎಂದರು.

ಭಗವಂತನು 'ನೀನು ಮೂರು ಲೋಕಕ್ಕೂ ರಾಜನಾಗಿದ್ದಿ. ನೀನು ಕೊಟ್ಟದ್ದನ್ನು ಯಾರು ಸರಿಯಲ್ಲ ಎನ್ನುವವರಿದ್ದಾರೆ? ಎಂದನು. ತರುವಾಯ ಇಂದ್ರದೇವರು ಸುಮುಖನಿಗೆ ಅಮೃತವನ್ನು ಕೊಡಲಿಲ್ಲ. ಅಧಿಕವಾದ ಆಯುಷ್ಯವನ್ನು ಕೊಟ್ಟರು. ಸುಮುಖನು ಇಂದ್ರದೇವರ ವರವನ್ನು ಪಡೆದು ಸಂತೋಷವುಳ್ಳವನಾಗಿ ಮದುವೆ ಮಾಡಿಕೊಂಡು ಮನೆಗೆ ಹೋದನು. ನಾರದರೂ ಆರ್ಯಕನೂ ತಮ್ಮ ಕಾರ್ಯ ವಾಗಲು ಸಂತೋಷದಿಂದ ಇಂದ್ರದೇವರನ್ನು ಸತ್ಕರಿಸಿ ಹೊರಟುಹೋದರು.

ತರುವಾಯ ಗರುಡದೇವರು ಇಂದ್ರದೇವರು ಸುಮುಖನಿಗೆ ಅಧಿಕ ಆಯುಷ್ಯವುಂಟಾಗುವಂತೆ ವರವನ್ನು ಕೊಟ್ಟ ವಿಷಯವನ್ನು ಕೇಳಿದರು. ಆಗಲೇ

ಕೋಪಿಸಿಕೊಂಡು ಇಂದ್ರದೇವರಿದ್ದಲ್ಲಿಗೆ ಓಡಿ ಬಂದರು.

ಗರುಡದೇವರು 'ದೇವೇಂದ್ರ! ಇದೇನು ನನ್ನನ್ನು ಅವಮಾನ ಮಾಡಿ ಹೀಗೆ ವರವನ್ನು ಕೊಟ್ಟಿರುವಿ? ಸ್ವಾಭಾವಿಕವಾಗಿ ದೇವರು ಒಬ್ಬೊಬ್ಬರಿಗೆ ಒಂದೊಂದು ಆಹಾರವನ್ನು ಕಲ್ಪಿಸಿರುವನು. ನನಗೆ ಹಾಗೆಯೇ ಸರ್ಪಗಳು ಆಹಾರವು. ನಾನು ಸುಮುಖವನ್ನು ತಿನ್ನುತ್ತೇನೆ ಎಂದು ಹೇಳಿದ್ದೇನೆ. ಇವನೆಂಬ ಆಹಾರದಿಂದ ನನ್ನ ಕುಟುಂಬವನ್ನು ರಕ್ಷಿಸಬೇಕು. ಇವನಿಗೆ ನೀನು ಹೀಗೆ ಮಾಡಿರುವಾಗ ಇನ್ನೊಬ್ಬರನ್ನು ಹಿಂಸಿಸಲಿಕ್ಕೆ ನನಗೆ ಇಚ್ಛೆಯಿಲ್ಲ. ಏನು ಇಚ್ಛಾನುಸಾರವಾಗಿ ಕ್ರೀಡಾ ಮಾಡುವಿಯಾ? ಇದರಿಂದಾಗಿ ನಾನೂ ನನ್ನ ಜನರೂ ಪ್ರಾಣಬಿಡುವೆವಷ್ಟೆ! ನಿನಗೆ ಸಂತೋಷವಾಗಲಿ. ಮೂರುಲೋಕದಲ್ಲಿಯೂ ಸಮರ್ಥನಾದ ನಾನು ಇನ್ನೊಬ್ಬರ ಭೃತ್ಯನಾದೆನು. ನನಗೂ ದಕ್ಷಪ್ರಜೇಶ್ವರ ಮಗಳೇ ತಾಯಿಯು. ಕಶ್ಯಪರೇ ತಂದೆಯು. ನಾನೂ ಮೂರುಲೋಕಗಳನ್ನೂ ಧರಿಸಲಿಕ್ಕೆ ಸಮರ್ಥನು. ನನಗೂ ಬಹಳವಾದ ಬಲವಿದೆ. ನಾನೂ ಎಷ್ಟೋ ದೈತ್ಯರನ್ನು ಜಯಿಸಿದ್ದೇನೆ. ನಿನ್ನ ತಮ್ಮನ ಧ್ವಜದಲ್ಲಿ ಕೂತಿರುತ್ತೇನೆ. ನಿನ್ನ ತಮ್ಮನನ್ನು ಹೊತ್ತುಕೊಂಡು ಹೋಗುತ್ತೇನೆ. ಇದಕ್ಕಾಗಿ ಇಷ್ಟು ಅವಮಾನ ಮಾಡುವಿ? ನನಗಿಂತ ಇತರನು ನನ್ನಷ್ಟು ಭಾರವನ್ನು ಧರಿಸುವವನು ಯಾರು ಇದ್ದಾನೆ? ನಾನು ಉತ್ತಮನಾಗಿದ್ದು ನಿನ್ನ ತಮ್ಮನನ್ನು ಹೊರುತ್ತೇನೆ. ನನಗೆ ಅವಮಾನ ಮಾಡಿ ನನ್ನ ಆಹಾರವನ್ನೇ ತಪ್ಪಿಸಿದಿ. ಇದರಿಂದ ನಿನ್ನಿಂದಲೂ ನಿನ್ನ ತಮ್ಮನಿಂದಲೂ ನನ್ನ ಗೌರವವು ಹಾಳಾಯಿತು. ಅದಿತಿಯಲ್ಲಿ ಹುಟ್ಟಿದವರಲ್ಲಿ ಎಲ್ಲಾ ನೀನಷ್ಟೆ ಬಲವಂತನು. ನಿನ್ನನ್ನು ಶ್ರಮವಿಲ್ಲದೆ ಒಂದು ರೆಕ್ಕೆಯಿಂದ ಹೊತ್ತುಕೊಂಡು ಹೋಗುವೆನು. ಯಾರು ಬಲವುಳ್ಳವರು ಎಂದು ವಿಚಾರ ಮಾಡು' ಎಂದರು.

ಅಹಂಕಾರದಿಂದ ಹೇಳಿದ ಕಠಿಣವಾದ ಗರುಡದೇವರ ಮಾತನ್ನು ಕೇಳಿ 'ಗರುಡ! ನೀನು ಅತ್ಯಂತ ದುರ್ಬಲನು ಬಲಿಷ್ಠನೆಂದು ತಿಳಿದುಕೊಂಡಿರುವಿ. ನನ್ನ ಎದುರಲ್ಲಿ ನೀನು ಸ್ತೋತ್ರಮಾಡಿಕೊಂಡದ್ದು ಸಾಕು. ಮೂರುಲೋಕವೂ ಕೂಡ ನನ್ನ ದೇಹವನ್ನು ಧರಿಸಲಿಕ್ಕೆ ಸಮರ್ಥವಾಗಲಾರದು. ನನ್ನನ್ನು ನಾನೇ ಧರಿಸಿಕೊಳ್ಳುತ್ತೇನೆ. ನಿನ್ನನ್ನೂ ನಾನೇ ಧರಿಸುತ್ತೇನೆ. ಈ ನನ್ನ ಎಡಕೈಯನ್ನು ನಿನ್ನ ಮೈಮೇಲೆ ಇಡುತ್ತೇನೆ. ಅದನ್ನು ಧರಿಸಿದರೆ ನೀನು ನಿನ್ನನ್ನು ಹೊಗಳಿಕೊಂಡದ್ದು ಸಾರ್ಥಕವಾಗುವುದು' ಎಂದು ಹೇಳಿ ಭಗವಂತನು ತನ್ನ ಎಡಕೈಯನ್ನು ಗರುಡದೇವರ ಹೆಗಲಮೇಲೆ ಇಟ್ಟರು. ಆದರಿಂದಲೇ ಗರುಡದೇವರು ಮಹಾಭಾರವುಳ್ಳವರಾಗಿ ಪರವಶರಾಗಿ ಜ್ಞಾನಶೂನ್ಯರಾಗಿ ಕೆಳಗೆ ಬಿದ್ದರು. ದೇವರ ಒಂದು ಕೈಯನ್ನು ಧರಿಸಲಿಕ್ಕೆ ಅವರಿಂದ

ಸಾಧ್ಯವಾಗಲಿಲ್ಲ. ಭಗವಂತನು ತನ್ನ ಕೈಯನ್ನು ಮೆಲ್ಲನೆ ಇಟ್ಟನಷ್ಟೆ! ಪೀಡಿಸಲಿಲ್ಲ. ಸ್ವಲ್ಪ ಪೀಡಿಸಿದ್ದರೆ ಗರುಡದೇವರ ಪ್ರಾಣವೇ ಹೋಗುತ್ತಿತ್ತು. ಗರುಡದೇವರು ಶ್ರಮದಿಂದ ಬಾಯಿಯನ್ನು ತೆರೆದರು. ಕೈಕಾಲು ಬಿದ್ದುಹೋಯಿತು. ಮಹಾಭಾರದಿಂದ ಪೀಡಿತ ರಾದರು. ರೆಕ್ಕೆಯ ಗರಿಗಳು ಉದುರಿದವು. ಗರುಡದೇವರು ಪರಮಾತ್ಮನಿಗೆ ಶಿರಸ್ಸಿನಿಂದ ನಮಸ್ಕಾರಮಾಡಿ ಮೆಲ್ಲನೆ 'ಭಗವಂತನೇ! ಸಮಸ್ತಲೋಕಗಳಿಗಿಂತಲೂ ಭಾರವುಳ್ಳ ನಿನ್ನ ಕೈಯಿಂದ ನಾನು ಪುಡಿಯಾಗಿ ಹೋದೆನು. ಭಗವಂತನೇ ಕ್ಷಮಿಸಬೇಕು. ನನಗೆ ನಿನ್ನ ಬಲವು ತಿಳಿಯಲಿಲ್ಲ. ಆದರಿಂದ ಅಹಂಕಾರವನ್ನು ಹೊಂದಿದೆನು' ಎಂದು ಹೇಳಿದರು. ತರುವಾಯ ಪರಮಾತ್ಮನು ಗರುಡದೇವರ ಮೇಲೆ ಅನುಗ್ರಹ ಮಾಡಿದನು. ಇನ್ನು ಮುಂದೆ ಹೀಗೆ ಅಹಂಕಾರವನ್ನು ಹೊಂದ ಬೇಡ ಎಂದನು. ತನ್ನ ಪಾದದ ಅಂಗುಷ್ಠದಿಂದ ಸುಮುಖನನ್ನು ಗರುಡದೇವರ ಎದೆಯಮೇಲೆ ಬಿಸಾಡಿದರು. ಗರುಡದೇವರು ತರುವಾಯ ಸರ್ಪದೊಡನೆ ಇದ್ದರು. ಈರೀತಿಯಾಗಿ ಗರುಡದೇವರು ಗರ್ವನಾಶವನ್ನು ಹೊಂದಿದರು.



## ಆತ್ಮಾರಾಮನ ಕಥೆ [1]

ಮಧ್ಯದೇಶದಲ್ಲಿ ಆತ್ಮಾರಾಮನೆಂಬ ಒಬ್ಬ ಬ್ರಾಹ್ಮನಿದ್ದನು. ಅವನು ದೊಡ್ಡ ವಂಶದಲ್ಲಿ ಹುಟ್ಟಿದವನು. ದೇವ ಬ್ರಾಹ್ಮಣರನ್ನೂ ಪೂಜಿಸುತ್ತಿದ್ದನು. ಅವನ ತಂದೆಯು ಲೋಕದಲ್ಲಿ ಪ್ರಸಿದ್ಧನಾದ ಬ್ರಾಹ್ಮಣೋತ್ತಮನಾಗಿದ್ದನು. ವಿಷ್ಣುಭಕ್ತನಾಗಿ ದ್ದನು. ವೇದವೇದಾಂಗ ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದನು. ಆತ್ಮಾರಾಮನೂ ವಿನಯವುಳ್ಳವನಾಗಿದ್ದನು. ಎಲ್ಲಾ ಪಂಡಿತರಿಗೂ ಬೇಕಾದವನಾಗಿದ್ದನು. ತಂದೆಯ ಮರಣಾನಂತರದಲ್ಲಿ ಅವನ ಹಣವೆಲ್ಲವೂ ನಷ್ಟವಾಯಿತು. ಜೀವನಕ್ಕೇ ಕಷ್ಟವಾಯಿತು. ಎಲ್ಲಿ ಹೋದರೂ ಸತ್ಕರಿಸುವವರು ಇಲ್ಲದೆ ಹೋದರು. ಆಗ ಅವನು 'ದೊಡ್ಡ ವಂಶದಲ್ಲಿ ಹುಟ್ಟಿದ ನನಗೆ ಈ ಗತಿಯಾಯಿತಲ್ಲಾ! ನಮ್ಮ ಪೂರ್ವಿಕರಿಗೆಲ್ಲಾ ಮಹಾ ಅಪಕೀರ್ತಿಯು ಬಂದಿತಲ್ಲಾ! ಏನು ಮಾಡಲಿ? ಎಲ್ಲಿಗೆ ಹೋಗಲಿ?' ಎಂದು ಯೋಚನೆಯಲ್ಲಿ ಮುಳುಗಿದನು.

ಮೆಲ್ಲನೆ ವೇಂಕಟಾಚಲದ ಬಳಿಗೆ ಹೋದನು. ಕಪಿಲತೀರ್ಥದಲ್ಲಿ ಕಪಿಲೇಶ್ವರ

ಸನ್ನಿಧಾನದಲ್ಲಿ ಸ್ನಾನಮಾಡಿ ಅದನ್ನು ಆರಂಭಿಸಿ ಹದಿನೇಳು ತೀರ್ಥಗಳಲ್ಲಿ ಕ್ರಮದಿಂದ ಸ್ನಾನಮಾಡಲು ಆರಂಭಿಸಿದನು. ಸ್ನಾನದಿಂದ ಪಾಪರಹಿತನಾಗಿ ಚಿತ್ತ ಶುದ್ಧಿಯುಳ್ಳವನಾದನು. ಒಂದು ಸ್ಥಳದಲ್ಲಿ ಶೋಕದಿಂದ ಯೋಚನೆ ಮಾಡುತ್ತಾ ಕೂತೂಕೊಂಡಿದ್ದನು. ಸಮೀಪದಲ್ಲೇ ಒಂದು ಗುಹಾಮಧ್ಯದಲ್ಲಿ ಧ್ಯಾನಮಾಡುತ್ತಿದ್ದ ಪ್ರಕಾಶಮಾನರಾದ ಸನತ್ಕುಮಾರನೆಂಬ ಯೋಗಿಗಳನ್ನು ನೋಡಿದನು. ಇವರು ಎಲ್ಲವನ್ನು ತಿಳಿದವರು. ಇವರು ಹಿತವನ್ನು ಹೇಳುವರು ಎಂದುಕೊಂಡು ಅವರ ಸಮೀಪಕ್ಕೆ ಹೋಗಿ ನಮಸ್ಕರಿಸಿ 'ನಾನು ನರಕಕ್ಕಿಂತಲೂ ಹೆಚ್ಚು ದುಃಖವನ್ನು ಅನುಭವಿಸುತ್ತಿರುವೆನು. ನಾನು ಮಹಾಪಾಪಿಯು. ತಮ್ಮನ್ನು ಮರೆ ಹೊಂದಿರುವೆನು. ನನ್ನ ಹಿತವನ್ನು ತಾವು ತಿಳಿದಿರುವಿರಿ' ಎಂದು ಹೇಳಿ ಉದ್ದಕ್ಕೆ ನಮಸ್ಕರಿಸಿದನು.

ಸನತ್ಕುಮಾರರೂ ಬಹುಹೊತ್ತು ಧ್ಯಾನ ಮಾಡುತ್ತಾ ಇದ್ದು 'ಮಗು! ಏಳು. ಪೂರ್ವಜನ್ಮದಲ್ಲಿ ಘೋರವಾದ ನೀನು ಅನೇಕ ದಾನಗಳಿಗೆ ವಿಘ್ನವನ್ನು ಮಾಡಿರುವಿ. ಜನರಿಗೆ ನಾನಾವಿಧವಾಗಿ ಉಪದ್ರವನ್ನು ಮಾಡಿರುವಿ. ಬ್ರಾಹ್ಮಣರಿಗೆ ಸ್ವಲ್ಪವೂ ದಾನಮಾಡಿದವನಲ್ಲ. ಬಹು ಅನಾಚಾರವುಳ್ಳವನಾಗಿದ್ದಿ. ಭಗವಂತನಲ್ಲಿ ಸ್ವಲ್ಪವೂ ಭಕ್ತಿಯನ್ನು ಮಾಡಿಲ್ಲ. ನಿನಗೆ ಹೇಗೆ ಸುಖವಾಗಬೇಕು? ಆದರೂ ಒಂದು ಉಪಾಯವಿದೆ. ಅದನ್ನು ನಿನಗೆ ಹೇಳವೆನು' ಎಂದು ಹೇಳಿ ತನ್ನನ್ನು ತುಂಬಾ ಪ್ರಾರ್ಥನೆ ಮಾಡಿದ ಅವನಿಗೆ ಲಕ್ಷ್ಮೀಮಂತ್ರವನ್ನು ಉಪದೇಶಿಸಿದರು. ಆಮೇಲೆ ಎಲ್ಲಿಯೂ ಕಾಣಿಸಲೇ ಇಲ್ಲ. ಇದರಿಂದ ಆತ್ಮಾರಾಮನು ಸ್ವಲ್ಪ ಭಯವುಳ್ಳವನಾದನು. ಆಶ್ಚರ್ಯಪಟ್ಟನು. ಸಂತೋಷದಿಂದ ರೋಮಾಂಚವನ್ನು ಹೊಂದಿದನು. ಶುಚಿಯಾಗಿ ಆ ಮಂತ್ರವನ್ನು ಜಪಿಸಿದನು. ಬೆಟ್ಟವನ್ನು ಹತ್ತಿ ಸ್ವಾಮಿ ಪುಷ್ಕರಿಣಿಯನ್ನು ನೋಡಿದನು. ಅಲ್ಲಿ ಆತ್ಮಾರಾಮನು ಭಕ್ತಿಯಿಂದ ಶಾಸ್ತ್ರೋಕ್ತಪ್ರಕಾರವಾಗಿ ಸ್ನಾನ ಮಾಡಿದನು. ಮೇಲೆ ಬಂದು ಪವಿತ್ರವಾದ ಉತ್ತಮವಾದ ವನವನ್ನು ನೋಡಿದನು. ಅಲ್ಲಿ ಸಿದ್ಧರಿಂದ ಸೇವಿತವಾದ ಅನೇಕ ಗೋಪುರಗಳಿಂದ ಕೂಡಿದ ದೇವತೆಗಳಿಂದ ಸೇವಿತವಾದ ಗಂಧರ್ವನಗರದಂತೆ ಇರುವ ಅನೇಕ ರತ್ನಖಚಿತವಾದ ನರ್ತನ ವಾದ್ಯಘೋಷಗಳಿಂದ ಮನೋಹರವಾದ ವಿಮಾನವನ್ನು ನೋಡಿದನು. ಆ ದಿವ್ಯ ವಿಮಾನವನ್ನು ನೋಡಲು ಹೋದನು. ಅಲ್ಲಿ ಶಂಖ ಚಕ್ರ ಗದಾಧಾರಿಯಾದ ಶ್ರೀನಿವಾಸದೇವರನ್ನು ನೋಡಿದನು. ಶ್ರೀನಿವಾಸದೇವರಿಗೆ ನಮಸ್ಕರಿಸಿ ಎದ್ದು ಸ್ತೋತ್ರ ಮಾಡಿದನು. ಭಗವಂತನನ್ನು ನೋಡುತ್ತಾ ಸುಮ್ಮನೆ ನಿಂತುಕೊಂಡನು.

ಆಗ ಶ್ರೀನಿವಾಸದೇವರು 'ನೀನು ಮಾಡಿದ ಅಪರಾಧವನ್ನೆಲ್ಲಾ ಕ್ಷಮಿಸಿರುವೆನು.

ನೀನು ಮಾಡಿದ ಲಕ್ಷ್ಮೀಮಂತ್ರದ ಜಪದಿಂದ ನಿನಗೆ ಬಹುಕಾಲವಿರುವ ಮಹತ್ತಾದ ಐಶ್ವರ್ಯವನ್ನು ಕೊಟ್ಟಿರುವೆನು. ದೀರ್ಘಾಯುಷ್ಯವನ್ನು ಆರೋಗ್ಯವನ್ನು ಜ್ಞಾನವನ್ನೂ ಕೊಟ್ಟಿರುವೆನು. ನಾನು ಕೊಟ್ಟಿರುವ ಬಹುಭೋಗಗಳನ್ನು ಅನುಭವಿಸುತ್ತಿರು' ಎಂದು ಹೇಳಿದರು. ಆಗ ಆತ್ಮಾರಾಮನು ಪುನಃ ನಮಸ್ಕಾರ ಮಾಡಿದನು. ನಮಸ್ಕಾರವನ್ನು ಮಾಡಿ ಏಳುವಾಗ ಶ್ರೀನಿವಾಸದೇವರೂ ಕಾಣಿಸಲಿಲ್ಲ. ಆ ಪವಿತ್ರವಾದ ವನವೂ ಕಾಣಿಸಲಿಲ್ಲ. ಅತ್ಯಂತ ಭಯವುಳ್ಳವನಾಗಿ ಸ್ವಾಮಿ ಪುಷ್ಕರಿಣಿಯ ಹತ್ತಿರಕ್ಕೆ ಬಂದು 'ಇದು ಸ್ವಪ್ನವೋ? ನನ್ನ ಬುದ್ಧಿಭ್ರಮೆಯೋ? ಮಾಯೆಯೋ? ಅಥವಾ ಸತ್ಯವೋ? ದೇವೇಶ! ನನಗೊಂದು ತಿಳಿಯಲಿಲ್ಲ. ಇದು ಸತ್ಯವೇ ಆಗಲಿ' ಎಂದು ಹೇಳುತ್ತಾ ಬೆಟ್ಟದಿಂದ ಕೆಳಗೆ ಇಳಿದು ವೇಂಕಟಾಚಲದ ಬಳಿಯಲ್ಲಿಯೇ ವಾಸಮಾಡಿದನು. ಬಹುಕಾಲದವರೆಗೆ ಸುಖದಿಂದ ಇದ್ದನು.



# ಗಂಧರ್ವಕನ್ಯೆಯರ ಕಥೆ [1]

ಸುಖಸಂಗೀತವೆಂಬ ಗಂಧರ್ವನಿದ್ದನು. ಅವನಿಗೆ ಪ್ರಮೋಹಿನಿಯೆಂಬ ಮಗಳಿದ್ದಳು. ಸುಶೀಲನೆಂಬ ಗಂಧರ್ವನಿಗೆ ಸುಶೀಲೆಯೆಂಬ ಮಗಳಿದ್ದಳು. ಸ್ವರವೇದಿಯೆಂಬ ಗಂಧರ್ವನಿಗೆ ಸುಸ್ವರಾ ಎಂಬ ಮಗಳಿದ್ದಳು. ಚಂದ್ರಕಾಂತನೆಂಬ ಗಂಧರ್ವನಿಗೆ ಸುತಾರೆಯೆಂಬ ಮಗಳಿದ್ದಳು. ಸುಪ್ರಭ ಎಂಬ ಗಂಧರ್ವನಿಗೆ ಚಂದ್ರಿಕಾ ಎಂಬ ಮಗಳಿದ್ದಳು. ಅವರು ಐದು ಕುಮಾರಿಯರೂ ಸಮಾನ ವಯಸ್ಸಿನವರು ಅಕ್ಕ ತಂಗಿಯರಂತೆ ಶೋಭಿಸುತ್ತಿದ್ದರು. ಪರಮಸುಂದರಿಯರಾಗಿ ದ್ದರು. ಅವರು ಒಂದು ಸಮಯದಲ್ಲಿ ವಸಂತ ಋತುವಿನಲ್ಲಿ ಮಂದಾರ ಪುಷ್ಪಗಳನ್ನು ಹುಡುಕುತ್ತಾ ವನದಿಂದ ವನಕ್ಕೆ ಹೋಗಿದ್ದರು. ಗೌರಿಯನ್ನು ಪೂಜಿಸಬೇಕೆಂದು ಒಂದು ಅಚ್ಛೋದಸರೋವರಕ್ಕೆ ಹೋದರು. ಆ ಸರೋವರ ದಲ್ಲಿ ಸ್ನಾನಮಾಡಿ ಬಂಗಾರದ ತಾವರೆ ಹೂವುಗಳನ್ನು ಉತ್ಪಲಪುಷ್ಪಗಳನ್ನು ತಂದು ಮೌನವುಳ್ಳವರಾಗಿ ಬಂಗಾರದ ಉಸುಬಿನಿಂದ ಗೌರಿಯನ್ನು ಮಾಡಿ ಆವಾಹನೆ ಮಾಡಿ ಪೂಜೆ ಮಾಡಿದರು. ಹಾಡು ಹೇಳಿದರು. ನರ್ತನ ಮಾಡಿದರು. ಆ ಸಮಯದಲ್ಲಿ ವೇದನಿಧಿ ಮುನಿಯ ಮಗನಾದ ಸುಂದರನಾದ ಬ್ರಹ್ಮಚಾರಿಯು ಸ್ನಾನಮಾಡಲಿಕ್ಕೆ ಬಂದನು.

ಅವನನ್ನು ನೋಡಿ ಆ ಐದು ಜನರೂ ಮೋಹಿತರಾಗಿ 'ಇವನು ನನಗೆ ಪತಿಯು, ನನಗೆ ಪತಿಯು' ಎಂದು ವಿವಾದ ಮಾಡಿಕೊಂಡರು. ಬ್ರಹ್ಮಚಾರಿಯು ಅಲ್ಲಿ ಸ್ನಾನಮಾಡಿ ಮಧ್ಯಾಹ್ನಿಕವನ್ನು ಮಾಡಿ ಅವರು ವಿವಾದ ಮಾಡಿಕೊಳ್ಳುವುದನ್ನು ನೋಡಿ, 'ನನಗೆ ತಪಸ್ಸಿಗೆ ಇವರು ವಿಘ್ನ ಮಾಡುವರು. ಇವರು ಹತ್ತಿರಕ್ಕೆ ಬರುವ ಮೊದಲೇ ಮರೆಯಾಗುವೆನು' ಎಂದು ಯೋಗಸಾಮರ್ಥ್ಯದಿಂದ ಮರೆಯಾಗಿ ಹೋದನು. ಅದನ್ನು ನೋಡಿ ಐದು ಜನ ಕನ್ಯೆಯರೂ ಕಾಮಬಾಣದಿಂದ ಸಂತಪ್ತರಾಗಿ ಬಹಳವಾಗಿ ವಿಲಾಪವನ್ನು ಮಾಡಿದರು.

ಆಮೇಲೆ ತಂದೆಯರ ಭಯದಿಂದ ಬಹುಕಷ್ಟದಿಂದ ಮನೆಗೆ ಹೋದರು. ತಾಯಿಯರು ಬರಲಿಕ್ಕೆ ಯಾಕೆ ಹೊತ್ತಾಯಿತೆಂದು ಕೇಳಲು 'ನಾವು ಕಿಂನರಿಯರಿಂದ ಚೆಂಡಾಟವನ್ನು ಆಡುತ್ತಿದ್ದೆವು. ಅದರಿಂದ ನಮಗೆ ತುಂಬಾ ಶ್ರಮವಾಗಿದೆ. ಯಾರೊಡನೆಯೂ ನಮಗೆ ಮಾತು ಬೇಡವಾಗಿದೆ' ಎಂದು ಹೇಳಿದರು. ಕಾಮಪೀಡೆಯಿಂದ ತುಂಬಾ ಶ್ರಮಪಡುತ್ತಿದ್ದರು. ಒಂದು ರಾತ್ರಿಯನ್ನು ಯುಗವನ್ನು ಕಳೆಯುವಂತೆ ಕಳೆದರು. ಮರುದಿನ ಬೆಳಗಾಗಲು ಅವರು ತಾಯಿಯರೊಡನೆ ಹೇಳಿ ಗೌರಿಪೂಜೆಯನ್ನು ಮಾಡಲಿಕ್ಕೆ ಹೋದರು. ಅಚ್ಛೋದಸರೋವರಕ್ಕೆ ಹೋದರು. ಅಲ್ಲಿ ಆ ದಿನವೂ ಆ ಬ್ರಹ್ಮಚಾರಿಯನ್ನು ನೋಡಿದರು. ಅವರು ಅವನ ಸುತ್ತಲೂ ಹೋಗಿ ಕೈಯನ್ನು ಹಿಡಿದುಕೊಂಡು 'ನಿನ್ನೆ ನಮ್ಮನ್ನು ಮೋಸ ಮಾಡಿ ಹೋದಿ. ನಿನ್ನನ್ನು ನಾವು ಪತಿಯನ್ನಾಗಿ ಸ್ವೀಕರಿಸಿರುವೆವು. ಈಗ ಬಿಡಲಾರೆವು' ಎಂದರು. ಆಗ ಬ್ರಹ್ಮಚಾರಿಯು ತಾನು ಈಗ ಮದುವೆಯಾಗಲಾರೆನೆಂದನು. ಅವರು ಏನೇನು ಹೇಳಿದರೂ ಒಪ್ಪಲಿಲ್ಲ. ಆಗ ಪ್ರಮೋಹಿನಿಯು ಅವನ ಪಾದವನ್ನು ಹಿಡಿದಳು. ಸುಶೀಲಾ ಸುಸ್ವರೆಯರು ಅವನ ಎರಡು ಭುಜಗಳನ್ನು ಹಿಡಿದರು. ಸುತಾರೆಯು ಆಲಿಂಗಿಸಿದಳು. ಚಂದ್ರಿಕೆಯು ಚುಂಬನ ಮಾಡಿದಳು. ಆದರೂ ವಿಕಾರರಹಿತನಾಗಿ ಆ ಬ್ರಹ್ಮಚಾರಿಯು ಪ್ರಲಯಾಗ್ನಿಯಂತೆ ಕೋಪವುಳ್ಳವನಾಗಿ 'ನೀವು ಪಿಶಾಚಿಗಳಂತೆ ಕಾಡುತ್ತಿರುವಿರಾದ ಕಾರಣ ಪಿಶಾಚಿಗಳೇ ಆಗಿರಿ' ಎಂದು ಶಾಪವನ್ನು ಕೊಟ್ಟನು.

ಈರೀತಿಯಾಗಿ ಅವನಿಂದ ಶಾಪವನ್ನು ಹೊಂದಿದ ಅವರು ಅವನನ್ನು ಬಿಟ್ಟು ಮುಂದೆ ನಿಂತುಕೊಂಡು 'ಎಲಾ ಪಾಪಿಯೇ! ನಿರಪರಾಧಿಗಳಾದ ನಮಗೆ ಏನು ಮಾಡಿದಿ? ನೀನೂ ನಮ್ಮ ಶಾಪದಿಂದ ಪಿಶಾಚನಾಗು' ಎಂದು ಹೇಳಿದರು. ತರುವಾಯ ಆ ಗಂಧರ್ವ ಕನ್ಯೆಯರೂ ಆ ಬ್ರಹ್ಮಚಾರಿಯೂ ಪಿಶಾಚಿಗಳಾಗಿ ಕ್ರೂರವಾಗಿ ಕೂಗುತ್ತಾ ಸಂಚರಿಸುತ್ತಿದ್ದರು. ಆಹಾರಕ್ಕಾಗಿ ಬಹುದುಃಖಪಡುತ್ತಿದ್ದರು.

ಅಲ್ಲಿ ಇಲ್ಲಿ ಓಡುತ್ತಾ ಸರೋವರದ ತೀರದಲ್ಲಿ ವಾಸಮಾಡುತ್ತಿದ್ದರು. ಹೀಗೆಯೇ ಬಹಳ ಸಮಯವು ಕಳೆಯಲು ರೋಮಶಮುನಿಗಳು ಪುಷ್ಯಮಾಸದ ಚತುರ್ದಶಿ ಯಲ್ಲಿ ಅಚ್ಛೋದ ಸರೋವರದಲ್ಲಿ ಸ್ನಾನ ಮಾಡಲಿಕ್ಕೆ ಬಂದರು. ಅವರನ್ನು ನೋಡಿ ಹಸಿವೆಯಿಂದ ಪೀಡಿತಗಳಾದ ಆ ಪಿಶಾಚಗಳೆಲ್ಲವೂ ಒಟ್ಟಿಗೆ ಸೇರಿ ಅವರನ್ನು ಕೊಲ್ಲಬೇಕೆಂದು ಬಂದವು. ಆಗ ಅವರ ತೀಕ್ಷ್ಣವಾದ ತೇಜಸ್ಸಿನಿಂದ ದಗ್ಧರಾಗಿ ಅವರ ಮುಂದೆ ನಿಲ್ಲಲಿಕ್ಕೇ ಅಸಮರ್ಥರಾಗಿ ದೂರಕ್ಕೆ ಓಡಿ ಹೋದರು. ಅದೇ ಸಮಯದಲ್ಲಿ ಅಲ್ಲಿಗೆ ಆ ಬ್ರಹ್ಮಚಾರಿಯ ತಂದೆಯಾದ ವೇದನಿಧಿಯು ಬಂದನು. ಅವನು ಲೋಮಶರನ್ನು ನೋಡಿ ಉದ್ದಕ್ಕೆ ನಮಸ್ಕರಿಸಿ ಅವರನ್ನು ಸ್ತುತಿಸಿ 'ಈ ಐದು ಜನ ಪಿಶಾಚಿನಿಯರು ಗಂಧರ್ವಕನ್ಯೆಯರು, ಈ ಪಿಶಾಚನು ನನ್ನ ಮಗನು. ಪರಸ್ಪರ ಶಾಪದಿಂದ ಪಿಶಾಚಜನ್ಮವನ್ನು ಹೊಂದಿದರು. ತಮ್ಮ ದರ್ಶನದಿಂದ ಇವರಿಗೆ ಈಗ ಬಿಡುಗಡೆಯಾಗುವುದು. ಸೂರ್ಯೋದಯವಾದಾಗ ಕತ್ತಲೆಯು ನಿಲ್ಲುವುದೇ?' ಎಂದು ಹೇಳಿದನು.

ಲೋಮಶರು ಅದನ್ನು ಕೇಳಿ ದಯೆಯುಳ್ಳವರಾಗಿ 'ನನ್ನ ಅನುಗ್ರಹದಿಂದ ಇವರಿಗೆ ಈಗಲೇ ಸ್ಮರಣೆಯುಂಟಾಗಲಿ. ಇವರ ಪರಸ್ಪರ ಶಾಪವು ನಾಶವನ್ನು ಹೊಂದುವಂತೆ ಧರ್ಮವನ್ನು ಹೇಳುವೆನು' ಎಂದರು. ಆಗ ವೇದನಿಧಿಯು 'ಬೇಗನೇ ಧರ್ಮವನ್ನು ಹೇಳಿರಿ. ಸಾವಕಾಶಮಾಡುವ ಸಮಯವು ಇದಲ್ಲ. ಇವರ ಶಾಪವು ಅಷ್ಟು ಕಠಿಣವಾಗಿರುವುದು' ಎಂದನು. ಅದಕ್ಕೆ ಲೋಮಶ ಮುನಿಗಳು 'ಇವರು ನನ್ನೊಡನೆ ಮಾಘಸ್ನಾನವನ್ನು ಮಾಡಲಿ. ಮಾಘಸ್ನಾನವನ್ನು ಮುಗಿಯಲು ಶಾಪವು ಪರಿಹೃತವಾಗುವುದು. ಇಲ್ಲದಿದ್ದರೆ ಆಗಲಾರದು' ಎಂದರು. ಶಾಪವು ಪಾಪದ ಫಲವು. ಉತ್ತಮತೀರ್ಥದಲ್ಲಿ ಮಾಘಸ್ನಾನದಿಂದ ಪಾಪವು ಪರಿಹೃತ ವಾಗುವುದು. ಏಳುಜನ್ಮದಲ್ಲಿ ಮಾಡಿದ ಪಾಪವನ್ನೂ ಮಾಘಸ್ನಾನವು ಪರಿಹರಿಸು ವುದು. ಯಾವ ಪಾಪಕ್ಕೆ ಪ್ರಾಯಶ್ಚಿತ್ತವು ಕಾಣಿಸುವುದಿಲ್ಲವೋ ಅಂತಹ ಪಾಪವೂ ತೀರ್ಥಸ್ನಾನದಿಂದ ಪರಿಹೃತವಾಗುವುದು. ಮಾಘಮಾಸದಲ್ಲಿ ಮಾನಸಸರೋವರ ದಲ್ಲಿ ಸ್ನಾನಮಾಡಿದರೆ ಪಾಪಪರಿಹಾರವಾಗುವುದು. ಅಚ್ಛೋದ ಸೋರವರದಲ್ಲಿ ಸ್ನಾನಮಾಡಿದರೆ ಇಂದ್ರಲೋಕವುಂಟಾಗುವುದು. ಬದರಿಯಲ್ಲಿ ಸ್ನಾನಮಾಡಿದರೆ ಕ್ರಮದಿಂದ ಮೋಕ್ಷವಾಗುವುದು. ನರ್ಮದಾನದಿಯಲ್ಲಿ ಸ್ನಾನಮಾಡಿದರೆ ಪಾಪ ಪರಿಹಾರವಾಗುವುದು. ದುಃಖಪರಿಹಾರವಾಗುವುದು. ರುದ್ರ ಲೋಕವು ಲಭಿಸು ವುದು. ಯಮುನಾನದಿಯಲ್ಲಿ ಸ್ನಾನಮಾಡಿದರೆ ಸೂರ್ಯ ಲೋಕವು ಸಿಗುವುದು.

ಸರಸ್ವತೀ ನದಿಯಲ್ಲಿ ಸ್ನಾನಮಾಡಿದರೆ ವಿಶಾಲಫಲವುಂಟಾಗುವುದು. ಗಂಗೆಯಲ್ಲಿ ಸ್ನಾನಮಾಡಿದರೆ ವಿಷ್ಣುಲೋಕವು ಲಭಿಸುವುದು. ಸರಯೂ ಗಂಡಕೀ ಇತ್ಯಾದಿ ನದಿಗಳಲ್ಲಿ ಸ್ನಾನಮಾಡಿದರೆ ಸ್ವರ್ಗಲೋಕವು ಉಂಟಾಗುವುದು' ಇತ್ಯಾದಿ ರೀತಿಯಿಂದ ಧರ್ಮವನ್ನು ಉಪದೇಶಿಸಿ 'ಪ್ರಯಾಗವು ಪರಮಪ್ರಶಸ್ತವಾದದ್ದು. ಅಲ್ಲಿ ಸ್ನಾನಮಾಡಿದರೆ ರಾಜಸೂಯ ಅಶ್ವಮೇಧಯಾಗಗಳಿಂದ ಪುಣ್ಯಕ್ಕಿಂತಲೂ ಹೆಚ್ಚಾದ ಪುಣ್ಯವು ಲಭಿಸುವುದು' ಎಂದು ಹೇಳಿ ಪ್ರಯಾಗದ ಮಹಿಮೆಯನ್ನು ಸೂಚಿಸುವ ಅನೇಕ ಇತಿಹಾಸಗಳನ್ನು ಹೇಳಿದರು. ಅದನ್ನು ಕೇಳಿ ಅವರೆಲ್ಲರೂ ಸಂತುಷ್ಟರಾಗಿ ಪಾಪರಹಿತರಾಗಿ ಅಚ್ಛೋದ ಸರೋವರದಲ್ಲಿ ಸ್ನಾನಮಾಡಿ ಆಕಾಶಮಾರ್ಗದಿಂದ ಪ್ರಯಾಗಕ್ಕೆ ಹೋದರು. ಲೋಮಶರು ಅದನ್ನು ತೋರಿಸಿ 'ಶ್ರದ್ಧೆಯಿಂದ ಶ್ರೇಷ್ಠವಾದ ಈ ತೀರ್ಥವನ್ನು ನೋಡಿರಿ. ಇದು ಬ್ರಹ್ಮದೇವರು ಯಜ್ಞಮಾಡಿದ ಯಜ್ಞಶಾಲೆಯು. ಈ ಮೂರು ಕುಂಡಗಳು ಸರ್ವದಾ ಅಗ್ನಿಯಿಂದ ಉರಿಯುತ್ತಿರುವುವು. ಇಲ್ಲಿ ತೃಪ್ತಿಯನ್ನು ಹೊಂದಿದ ಅಗ್ನಿಯು ಯಾರಿಂದಲೂ ತೃಪ್ತಿಯನ್ನು ಹೊಂದುವುದಿಲ್ಲ. ಆನೆಯ ಸೊಂಡಿಲಿನಷ್ಟು ಗಾತ್ರವಾದ ಧಾರೆಯಿಂದ ಇಲ್ಲಿ ಶೂಲಟಂಕ ಎಂದು ಹೆಸರುಳ್ಳ ರುದ್ರದೇವರು ಆವಿರ್ಭೂತರಾಗಿರುವರು.

ಸರ್ವದೇವತೆಗಳಿಂದ ಸೇವ್ಯವಾದ ಪಾತಾಳದವರಗೆ ಜಟೆಯಿರುವ ಅಕ್ಷಯ ವಟವಿದು. ಮಾರ್ಕಂಡೇಯರು ಕಲ್ಪದಲ್ಲಿ ಇಲ್ಲಿಯೇ ಪ್ರವೇಶಿಸಿದ್ದರು. ಲೋಕದಲ್ಲಿ ನೀರು ತುಂಬಿರುವ ಸಮಯದಲ್ಲಿ ಪರಮಾತ್ಮನು ನಿದ್ರೆ ಬಂದಂತೆ ಮಲಗಿರುವನು. ರುದ್ರದೇವರಿಂದ ಆದೃತಳಾದ ಸ್ವರ್ಗಕ್ಕೆ ಕಾರಣಳಾದ ಗಂಗೆಯು. ಇವಳು ಸೂರ್ಯ ಲೋಕವನ್ನು ಹೊಂದಲಿಕ್ಕೆ ಕಾರಣಳಾದ ಯಮುನೆಯು. ಈ ಪುಣ್ಯನದಿಗಳ ಸಂಗಮವನ್ನು ಎಲ್ಲರೂ ಸೇವಿಸುವರು. ಇಲ್ಲಿ ಸ್ನಾನ ಮಾಡುವರು. ನರಕದಿಂದ ರಹಿತರಾಗುವರು. ಇಲ್ಲಿ ಬ್ರಹ್ಮದೇವರು ಸೃಷ್ಟಿಮಾಡುವ ಇಚ್ಛೆಯಿಂದ ಮಹಾಯಜ್ಞವು ಮಾಡಿರುವರು. ಇಲ್ಲಿ ಲೋಕಶಿಕ್ಷೆಗಾಗಿ ಪರಮಾತ್ಮನೂ ಸ್ನಾನಮಾಡಿರುವನು. ರುದ್ರ ದೇವರೂ ಆರುತಿಂಗಳು ತ್ರಿವೇಣಿಯಲ್ಲಿ ಸ್ನಾನಮಾಡಿ ಒಂದೇ ಬಾಣದಿಂದ ತ್ರಿಪುರಾಸುರರನ್ನು ಸಂಹರಿಸಿದನು. ಇಂದ್ರದೇವರ ಶಾಪದಿಂದ ಸ್ವರ್ಗದಿಂದ ಭ್ರಷ್ಟಳಾದ ಊರ್ವಶಿಯು ಸ್ವರ್ಗದ ಇಚ್ಛೆಯಿಂದ ಇಲ್ಲಿ ಸ್ನಾನಮಾಡಿ ಸ್ವರ್ಗವನ್ನು ಹೊಂದಿರುವಳು. ನಹುಷರಾಜನು ಇಲ್ಲಿ ಸ್ನಾನಮಾಡಿ ಯಯಾತಿಯೆಂಬ ಮಗನನ್ನು ಪಡೆದನು. ಇಂದ್ರದೇವರೂ ಹಣವನ್ನು ಇಚ್ಛೆಯಿಂದ ಇಲ್ಲಿ ಸ್ನಾನಮಾಡಿ ಕುಬೇರನ ನಿಧಿಗಳೆಲ್ಲವನ್ನು ಅಪಹರಿಸಿರುವರು. ನರನಾರಾಯಣರು ಲೋಕಶಿಕ್ಷೆಗಾಗಿ ಇಲ್ಲಿ ಹತ್ತು

ಸಾವಿರ ವರ್ಷ ಉಪವಾಸ ವ್ರತವನ್ನು ಮಾಡಿರುವರು. ಜೈಗೀಷವ್ಯರು ಇಲ್ಲಿ ಅಣಿಮಾದಿ ಐಶ್ವರ್ಯವನ್ನು ಹೊಂದಿರುವರು. ಕಶ್ಯಪರೂ ಇಲ್ಲಿ ತಪಸ್ಸನ್ನು ಮಾಡಿರುವರು. ಭರದ್ವಾಜರು ಈ ತೀರ್ಥದಲ್ಲಿ ಸ್ನಾನಮಾಡಿ ಸಪ್ತಋಷಿಗಳಲ್ಲಿ ಒಬ್ಬರಾಗಿರುವರು. ಸನಕಾದಿಗಳು ಯೋಗದ ಫಲವನ್ನು ಹೊಂದಿರುವರು. ಇಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿದವರೆಲ್ಲರೂ ಸ್ವರ್ಗಲೋಕವನ್ನು ಹೊಂದಿರುವರು. ಪೂರ್ವದಲ್ಲಿ ಒಬ್ಬ ಗಂಧರ್ವನು ಋಚೀಕರಿಂದ ಶಾಪವನ್ನು ಹೊಂದಿ ಕಾಗೆಯಾದನು. ಇಲ್ಲಿ ಸ್ನಾನಮಾಡಿ ಶಾಪರಹಿತನಾದನು. ಈಗ ನಿನ್ನ ಮಗನೂ ಐದು ಜನ ಕನ್ಯೆಯರೂ ನನ್ನ ಮಾತಿನಿಂದ ಮುಳುಗಲಿ' ಎಂದು ಹೇಳಿದರು. ಈರೀತಿಯಾಗಿ ಎಲ್ಲರೂ ಲೋಮಶರ ಮಾತನ್ನು ಕೇಳಿ ಪ್ರಯಾಗದಲ್ಲಿ **ಭಕ್ತಿಯಿಂದ ಮಾಘಮಾಸದಲ್ಲಿ ಸ್ನಾನಮಾಡಿದರು. ಹುಣ್ಣಿಮೆದಿನದಲ್ಲಿ ಆ ಕನ್ಯೆಯರೂ ಆ ಬ್ರಹ್ಮಚಾರಿಯೂ ಸ್ನಾನ ಮಾಡಿ ಪಿಶಾಚಜನ್ಮದಿಂದ ರಹಿತರಾದರು.** ಆಮೇಲೆ ಅವರು ಪರಸ್ಪರ ಅನುರಾಗ ವನ್ನು ಹೊಂದಿದರು. ವೇದನಿಧಿಯು ಆ ದಿವ್ಯರೂಪವುಳ್ಳ ಕನ್ಯೆಯರನ್ನು ತನ್ನ ಮಗ ನನ್ನು ನೋಡಿ ಲೋಮಶರನ್ನು ಸ್ತೋತ್ರಮಾಡಿದನು. ತರುವಾಯ ಲೋಮಶರು ಆ ಬ್ರಹ್ಮಚಾರಿಯೊಡನೆ ಆ ಗಂಧರ್ವ ಕನ್ಯೆಯರನ್ನು ಮದುವೆಯಾಗಬೇಕೆಂದು ಹೇಳಿ ದರು. ತರುವಾಯ ಹಾಗೆಯೇ ಬ್ರಹ್ಮಚಾರಿಯು ಅವರನ್ನು ಮದುವೆಯಾದನು. ಎಲ್ಲರೂ ಸಂತೋಷವನ್ನು ಹೊಂದಿದರು. ಲೋಮಶರು ಎಲ್ಲರಿಗೂ ಅನುಜ್ಞೆಯನ್ನು ಕೊಟ್ಟು ಎಲ್ಲರಿಂದಲೂ ನಮಸ್ಕೃತರಾಗಿ ಮೇರುಪರ್ವತಕ್ಕೆ ಹೋದರು. ವೇದನಿಧಿಯು ಐದು ಜನ ಸೊಸೆಯರನ್ನು ಮಗನನ್ನು ಕರೆದುಕೊಂಡು ಕುಬೇರನ ನಗರಿಗೆ ಹೋದನು.



## ಜಯವಿಜಯರ ಕಥೆ [1]

ಪುಣ್ಯಶೀಲ ಸುಶೀಲ ಎಂಬ ಭಗವಂತನ ಭೃತ್ಯರು ಧರ್ಮದತ್ತನೆಂಬ ಬ್ರಾಹ್ಮಣನಿಗೆ ಹೇಳಿದರು—ಪೂರ್ವದಲ್ಲಿ ತೃಣಬಿಂದುವಿನ ಮಗಳಾದ ದೇವಹೂತಿಯಲ್ಲಿ ಕರ್ದಮರ ದೃಷ್ಟಿಯು ಬೀಳುವುದರಿಂದಲೇ ಜಯ ವಿಜಯ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಆಮೇಲೆ ಆ ದೇವಹೂತಿಯಲ್ಲಿಯೇ ಕಪಿಲದೇವರು ಅವತರಿಸಿದರು. ಜಯವಿಜಯರು ಯಾವಾಗಲೂ ವಿಷ್ಣುಭಕ್ತರಾಗಿದ್ದರು. ಧರ್ಮಿಷ್ಠರಾಗಿದ್ದರು. ನಿತ್ಯವೂ ಅಷ್ಟಾಕ್ಷರಮಂತ್ರವನ್ನು ಜಪಿಸುತ್ತಿದ್ದರು. ವಿಷ್ಣುಪ್ರಿಯಕರಗಳಾದ ವ್ರತಗಳನ್ನು

ಮಾಡುತ್ತಿದ್ದರು. ಅವರು ಯಾವಾಗಲೂ ಪೂಜೆಯನ್ನು ಮಾಡುವಾಗ ಪರಮಾತ್ಮನು ಪ್ರತ್ಯಕ್ಷನಾಗುತ್ತಿದ್ದನು. ಒಂದು ಸಮಯದಲ್ಲಿ ಮರುತ್ತರಾಜನು ಅವರಿಬ್ಬರನ್ನೂ ತಾನು ಮಾಡುವ ಯಾಗಕ್ಕೆ ಕೂಗಿದನು. ಯಾಗ ಮಾಡಿಸುವುದರಲ್ಲಿ ಚತುರರಾದ ಅವರಿಬ್ಬರೂ ಅವನ ಯಾಗಕ್ಕೆ ಹೋಗಿದ್ದರು. ಜಯನು ಅಲ್ಲಿ ಬ್ರಹ್ಮಾ ಎಂಬ ಋತ್ವಿಕ್ ಆದನು. ವಿಜಯನು ಯಾಗವನ್ನು ಮಾಡಿಸಿದನು. ಇಬ್ಬರೂ ಸೇರಿ ಯಜ್ಞವನ್ನು ಸಂಪೂರ್ಣವಾಗಿ ಮುಗಿಸಿದರು.

ತರುವಾಯ ಮರುತ್ತರಾಜನು ಅವಭೃಥಸ್ನಾನವನ್ನು ಮಾಡಿ ಅವರಿಗೆ ಬಹಳ ಹಣವನ್ನು ಕೊಟ್ಟನು. ಅದನ್ನು ತೆಗೆದುಕೊಂಡು ಅವರಿಬ್ಬರೂ ತಮ್ಮ ಆಶ್ರಮಕ್ಕೆ ಹೋದರು. ತರುವಾಯ ಅಲ್ಲಿ ಆ ಹಣವನ್ನು ವಿಭಾಗ ಮಾಡಿಕೊಳ್ಳುವಾಗ ಜಗಳವಾಡಿಕೊಂಡರು. ಜಯನು ಈ ಹಣವನ್ನು ಇಬ್ಬರೂ ಸಮಭಾಗ ಮಾಡಬೇಕು ಎಂದನು. ವಿಜಯನು 'ನಮಗೆ ರಾಜನು ಯಾರಿಗೆ ಎಷ್ಟು ಹಣವನ್ನು ಕೊಟ್ಟಿರುವನೋ ಅವರು ಅಷ್ಟು ಹಣವನ್ನು ಇಟ್ಟುಕೊಳ್ಳಬೇಕು. ಸಮಭಾಗ ಮಾಡಲಿಕ್ಕೆ ಆಗಲಾರದು' ಎಂದನು. ಅದನ್ನು ಕೇಳಿ ಜಯನು ಕೋಪದಿಂದ ನೀನು ಮೊಸಳೆಯಾಗು ಎಂದು ಶಪಿಸಿದನು. ವಿಜಯನು ಅದನ್ನು ಕೇಳಿ ಕೋಪದಿಂದ ನೀನು ಆನೆಯಾಗು ಎಂದು ಶಪಿಸಿದನು.

ತರುವಾಯ ಅವರಿಬ್ಬರೂ ಪೂಜಾಕಾಲದಲ್ಲಿ ಪ್ರತ್ಯಕ್ಷನಾದ ಪರಮಾತ್ಮನೊಡನೆ 'ನಾವು ಶಾಪವನ್ನು ಕೊಟ್ಟುಕೊಂಡು ಇರುವೆವು. ಅದನ್ನು ಪರಿಹರಿಸಬೇಕು' ಎಂದು ಕೇಳಿಕೊಂಡರು. ಅದಕ್ಕೆ ಪರಮಾತ್ಮನು 'ನನ್ನ ಭಕ್ತರ ಮಾತು ಯಾವಾಗಲೂ ಸುಳ್ಳಾಗಲಾರದು. ನಾನೂ ಅದನ್ನು ಬೇರೆ ವಿಧವಾಗಿ ಮಾಡುವುದಿಲ್ಲ. ಪ್ರಹ್ಲಾದನ ಮಾತಿನಿಂದ ನಾನು ಕಂಬದಿಂದಲೇ ಹೊರಗೆ ಬಂದಿರುವೆನು. ಆದುದರಿಂದ ನೀವಿಬ್ಬರೂ ಈ ಶಾಪವನ್ನು ಅನುಭವಿಸಿ ಆಮೇಲೆ ನಿತ್ಯವೂ ನನ್ನ ಸ್ಥಾನವನ್ನು ಹೊಂದಿರಿ' ಎಂದು ಹೇಳಿ ಮರೆಯಾದನು. ತರುವಾಯ ಅವರಿಬ್ಬರೂ ಗಂಡಕೀ ತೀರದಲ್ಲಿ ಆನೆ ಮೊಸಳೆಯಾಗಿ ಹುಟ್ಟಿದರು. ಆಗಲೂ ಅವರಿಗೆ ಭಗವದನುಗ್ರಹ ದಿಂದ ಪೂರ್ವಜನ್ಮಸ್ಮರಣೆಯಿದ್ದಿತು. ಒಂದುದಿನ ಕಾರ್ತಿಕಮಾಸದಲ್ಲಿ ಆನೆಯು ಗಂಡಕೀನದಿಯಲ್ಲಿ ಸ್ನಾನಮಾಡಲಿಕ್ಕೆ ಹೋಯಿತು. ಆಗ ಅಲ್ಲಿ ಇದ್ದ ಮೊಸಳೆಯು ಶಾಪವನ್ನು ಸ್ಮರಿಸಿಕೊಂಡು ಬಂದು ಅದರ ಕಾಲನ್ನು ಹಿಡಿಯಿತು. ಆಗ ಆನೆಯು ಪರಮಾತ್ಮನನ್ನು ಸ್ಮರಿಸಿತು. ಆಗ ಶಂಖಚಕ್ರಗದಾಧಾರಿಯಾದ ಪರಮಾತ್ಮನು ಪ್ರತ್ಯಕ್ಷನಾದನು. ಚಕ್ರವನ್ನು ಬಿಟ್ಟು ಆನೆಯನ್ನೂ ಮೊಸಳೆಯನ್ನೂ ಉದ್ಧರಿಸಿ ಅವರಿಗೆ

ತನ್ನ ಸಾರೂಪ್ಯವನ್ನು ಕೊಟ್ಟು ವೈಕುಂಠಲೋಕಕ್ಕೆ ಕರೆದುಕೊಂಡು ಹೋದನು. ಆ ಸಮಯವನ್ನು ಆರಂಭಿಸಿ ಆ ಸ್ಥಳಕ್ಕೆ ಹರಿಕ್ಷೇತ್ರವೆಂದು ಪ್ರಸಿದ್ಧಿಯುಂಟಾಯಿತು. ದೇವರ ಚಕ್ರದ ಸಂಘರ್ಷದಿಂದ (ತ್ರಿಕೋಣದಿಂದ) ನದಿಯಲ್ಲಿ ಇದ್ದ ಶಿಲೆಗಳಲ್ಲಿ ಚಕ್ರಗಳಾದವು. ಆಮೇಲೆ ಆ ಜಯವಿಜಯರಿಬ್ಬರೂ ಪರಮಾತ್ಮನ ದ್ವಾರಪಾಲಕ ರಾಗಿ ಪ್ರಸಿದ್ಧರಾದರು.



## ಸುರಭಿಯ ಕಥೆ [1]

ಒಂದು ದಿನ ಸ್ವರ್ಗದಲ್ಲಿ ಇದ್ದ ಗೋವುಗಳಿಗೆ ತಾಯಿಯಾದ ಸುರಭಿಯು ಕಣ್ಣೀರು ಸುರಿಸುತ್ತಾ ಅಳುವವಳಾದಳು. ಅವಳನ್ನು ನೋಡಿ ಇಂದ್ರದೇವರು ಕೃಪೆಯುಳ್ಳವ ರಾಗಿ 'ಅಮ್ಮ! ಯಾಕೆ ಅಳುತ್ತಿರುವಿ? ದೇವತೆಗಳಿಗೆಲ್ಲಾ ಕ್ಷೇಮವಷ್ಟೆ! ಮನುಷ್ಯರಿಗೋ ಗೋವುಗಳಿಗೋ ಕ್ಷೇಮವಷ್ಟೆ! ನೀನು ಅಳಲಿಕ್ಕೆ ಅಲ್ಪಕಾರಣವಿರಲಾರದು. ಮಹಾಕಾರಣವೇ ಇರಬೇಕು' ಎಂದು ಕೇಳಿದರು.

ಆಗ ದೇವಲೋಕದ ಗೋವಾದ ಸುರಭಿಯು 'ದೇವೇಂದ್ರ! ನಿಮಗೆಲ್ಲಾ ಒಂದೂ ಅನರ್ಥವೂ ಬಂದಿಲ್ಲ. ನಾನು ನನ್ನ ಮಗನಿಗೋಸ್ಕರ ದುಃಖಪಡುವೆನು. ಅದಕ್ಕಾಗಿ ಅಳುವೆನು. ಆ ಅಲ್ಪನಾದ ಕೃಷೀವಲನನ್ನು ನೋಡು. ದುರ್ಬಲನಾದ ನನ್ನ ಮಗನಾದ ಎತ್ತಿನ ಕುತ್ತಿಗೆ ನೇಗಿಲನ್ನು ಕಟ್ಟಿ ಬಾರುಕೋಲಿನಿಂದ (ಚಾಟುವಾರಿಯಿಂದ) ಸುಮ್ಮನೆ ಬಡಿಯುತ್ತಾನೆ. ನನ್ನ ಮಗನು ಎಷ್ಟು ದುಃಖಪಡುತ್ತಾನೆ. ಎಷ್ಟು ಪೆಟ್ಟು ತಿನ್ನುತ್ತಿರುವನು? ಈರೀತಿಯಾಗಿ ಶ್ರಮಪಡುತ್ತಿರುವ ಮಗನನ್ನು ನೋಡಿ ಅತ್ಯಂತ ಕೃಪೆಯುಳ್ಳವನಾಗಿದ್ದೇನೆ. ನನ್ನ ಮನಸ್ಸು ನಡುಗುತ್ತಿದೆ. ಒಬ್ಬ ಬಲಿಷ್ಠನಾದ ಮಗನು ಭಾರವನ್ನು ಹೊತ್ತುಕೊಂಡಿದ್ದಾನೆ. ಮತ್ತೊಬ್ಬ ಮಗನು ಮಾತ್ರ ತುಂಬಾ ಕೃಶನಾಗಿ ಬಹುಕಷ್ಟದಿಂದ ಭಾರವನ್ನು ವಹಿಸಿದ್ದಾನೆ. ಅವನಿಗಾಗಿ ನಾನು ದುಃಖಪಡುತ್ತೇನೆ. ಕೃಷೀವಲನು ಬಾರುಕೋಲಿನಿಂದ ಬಡೆಯುತ್ತಲೇ ಇದ್ದಾನೆ. ನನ್ನ ಮಗನಿಗೆ ಭಾರವನ್ನು ಹೊರಲಿಕ್ಕೆ ಶಕ್ತಿಯಿಲ್ಲ. ದೇವೇಂದ್ರ! ನೋಡು. ಅದರಿಂದ ನಾನು ಕೃಪೆಯುಳ್ಳವಳಾಗಿ ಅತ್ಯಂತ ದುಃಖವುಳ್ಳವರಾಗಿ ಕಣ್ಣೀರು ಸುರಿಸುತ್ತಾ ಅಳುತ್ತಿರು

1. ಮ.ಭಾ.ವ.ಪ. ಅ.9

ವೇನು'ಎಂದಿತು.

ಇಂದ್ರದೇವರು 'ನಿನ್ನ ಸಾವಿರಾರು ಮಕ್ಕಳು ದುಃಖಪಡುತ್ತಾ ಇದ್ದಾರೆ. ಈ ಒಬ್ಬ ಮಗನು ದುಃಖಪಡುವನೆಂದು ಯಾಕೆ ಕೃಪೆಯುಳ್ಳವಳಾಗಿರುವಿ?' ಎಂದು ಕೇಳಿದರು.

ಅದಕ್ಕೆ ಸುರಭಿಯು 'ನನಗೆ ಸಾವಿರಾರು ಮಕ್ಕಳಲ್ಲಿಯೂ ಸಮ ಬುದ್ಧಿಯೇ ಇರುವುದು. ಆದರೂ ಯಾರು ತುಂಬಾ ದುಃಖಪಡುತ್ತಿರುವರೋ ಅವರಲ್ಲಿ ಹೆಚ್ಚಾದ ದಯೆಯುಂಟಾಗುವುದು' ಎಂದಳು.

ಸುರಭಿಯ ಮಾತನ್ನು ಕೇಳಿದ ಇಂದ್ರದೇವರು ಅತ್ಯಂತ ಆಶ್ಚರ್ಯಉಳ್ಳವರಾಗಿ ತನ್ನ ಜೀವಿತಕ್ಕಿಂತಲೂ ಮಕ್ಕಳಮೇಲೆ ತಾಯಂದಿರಿಗೆ ಹೆಚ್ಚು ಪ್ರೇಮವಿರುವುದೆಂದು ತಿಳಿದುಕೊಂಡರು. ತರುವಾಯ ಉಳುತ್ತಿದ್ದ ಕೃಷಿವಲನಿಗೆ ವಿಘ್ನ ಮಾಡುವುದಕ್ಕಾಗಿ ಬಹುಮಳೆಯನ್ನು ಸುರಿಸಿದರು.



## ಸುಂದರ ಎಂಬ ಗಂಧರ್ವನ ಕಥೆ [1]

ಪೂರ್ವದಲ್ಲಿ ವೈಕುಂಠನಂತೆ ಇರುವ ಶ್ರೀರಂಗದಲ್ಲಿ ವಸಿಷ್ಠಾದಿಗಳು ರಂಗನಾಥದೇವರನ್ನು ಮೋಕ್ಷಕ್ಕಾಗಿ ಸೇವಿಸುತ್ತಿದ್ದರು. ಅಲ್ಲಿ ಒಂದು ದಿನದಲ್ಲಿ ವೀರಬಾಹುವಿನ ಮಗನಾದ ಸುಂದರ ಎಂದು ಹೆಸರುಳ್ಳ ಗಂಧರ್ವನು ನೂರಾರು ವಸ್ತ್ರರಹಿತರಾದ ಹೆಂಗಸರಿಂದ ಸಹಿತನಾಗಿ ತಾನೂ ವಸ್ತ್ರರಹಿತನಾಗಿ ಜಲಕ್ರೀಡೆಯನ್ನು ಮಾಡಿದನು. ವಸಿಷ್ಠರು ಶ್ರೀರಂಗದೇವರ ಗುಡಿಯಿಂದ ಮಾಧ್ಯಾಹ್ನಿಕವನ್ನು ಮಾಡಲಿಕ್ಕೆ ಕಾವೇರಿಗೆ ಹೋದರು. ಇತರ ಮುನಿಗಳೂ ಹೋದರು. ಅವರನ್ನು ನೋಡಿ ಸ್ತ್ರೀಯರು ಭಯದಿಂದ ಬೇಗನೇ ಸೀರೆಗಳನ್ನು ಉಟ್ಟುಕೊಂಡರು. ಸುಂದರನು ಮಾತ್ರ ಹಾಗೆಯೇ ವಸ್ತ್ರರಹಿತನಾಗಿಯೇ ಇದ್ದನು. ಆಗ ವಸಿಷ್ಠರು ಕೋಪಿಸಿಕೊಂಡವರಾಗಿ 'ಸುಂದರ! ನಮ್ಮನ್ನು ನೋಡಿಯೂ ಲಜ್ಜೆಯಿಲ್ಲದವನಾಗಿ ವಸ್ತ್ರವನ್ನು ಧರಿಸದೆ ಇರುವಿಯಾದ ಕಾರಣ ಬೇಗನೇ ರಾಕ್ಷಸನಾಗು' ಎಂದು ಶಾಪವನ್ನು ಕೊಟ್ಟರು.

ಆಗ ಗಂಧರ್ವಸ್ತ್ರೀಯರು ಭಕ್ತಿಯಿಂದ ವಸಿಷ್ಠರಿಗೆ ನಮಸ್ಕರಿಸಿ 'ನಮ್ಮನ್ನು ನೋಡಿ ತಾವು ಕೋಪಿಸಿಕೊಳ್ಳಬಾರದು. ಸ್ತ್ರೀಗೆ ಪತಿಯೇ ಭೂಷಣವು.

ಪತಿರಹಿತಳಾದ ಸ್ತ್ರೀಯು ನೂರುಮಕ್ಕಳುಳ್ಳವಳಾದರೂ ವಿಧವೆಯೆಂದು ಹೇಳಲ್ಪಡುವಳು. ವಿಧವೆಯರ ಜನ್ಮವು ವ್ಯರ್ಥ. ಆದುದರಿಂದ ನಮ್ಮ ಪತಿಯಲ್ಲಿ ದಯೆಯನ್ನು ಮಾಡಬೇಕು. ನಮ್ಮ ಪತಿಯು ಮಾಡಿರುವ ಒಂದು ಅಪರಾಧವನ್ನು ಕ್ಷಮಿಸಬೇಕು. ಅವರು ನಿಮ್ಮ ಪ್ರಿಯ ಶಿಷ್ಯರು' ಎಂದು ಬೇಡಿಕೊಂಡರು. ಅದನ್ನು ಕೇಳಿ ವಸಿಷ್ಠರು ಪ್ರಸನ್ನರಾಗಿ 'ಸುಂದರಿಯರಿರಾ! ನಾನು ಹೇಳಿದ ಮಾತು ಯಾವಾಗಲೂ ಸುಳ್ಳಾಗಲಾರದು. ಆದರೂ ನಿಮಗೊಂದು ಉಪಾಯವನ್ನು ಹೇಳುತ್ತೇನೆ. ಕೇಳಿರಿ. ಈ ಶಾಪವು ಹದಿನಾರು ವರ್ಷ ಮಾತ್ರ ಇರುತ್ತದೆ. ಹದಿನಾರನೇ ವರ್ಷದಲ್ಲಿ ರಾಕ್ಷಸಾಕಾರವುಳ್ಳ ಈ ಸುಂದರನು ದೈವೇಚ್ಛೆಯಿಂದ ಸರ್ವಪಾಪಪರಿಹಾರಕವಾದ ವೇಂಕಟಾಚಲಕ್ಕೆ ಹೋಗಿ ಚಕ್ರತೀರ್ಥಕ್ಕೆ ಹೋಗುತ್ತಾನೆ. ಅಲ್ಲಿ ಪದ್ಮನಾಭ ಎಂಬ ಯೋಗಿಯು ಇರುತ್ತಾನೆ. ಅವನನ್ನು ತಿನ್ನಲಿಕ್ಕೆ ಸುಂದರನು ಹೋಗುತ್ತಾನೆ. ಆಗ ಆ ಯೋಗಿಯ ರಕ್ಷಣೋಸ್ಕರ ಭಗವಂತನಿಂದ ಪ್ರೇರಿತವಾದ ಚಕ್ರವು ಬಂದು ಅವನ ಶಿರಸ್ಸನ್ನು ಕತ್ತರಿಸುತ್ತದೆ. ತರುವಾಯ ನಿಮ್ಮ ಗಂಡನಾದ ಸುಂದರನು ಶಾಪರಹಿತನಾಗಿ ತನ್ನ ಸ್ವರೂಪವನ್ನು ಹೊಂದಿ ಸ್ವರ್ಗಕ್ಕೆ ಬಂದು ನಿಮ್ಮನ್ನು ಸಂತೋಷಪಡಿಸುವನು' ಎಂದು ಹೇಳಿ ಮುನಿಗಳಿಂದ ರಂಗನಾಥದೇವರ ಆಲಯಕ್ಕೆ ಹೋದರು.

ತರುವಾಯ ಆ ಸ್ತ್ರೀಯರು ತಮ್ಮ ಗಂಡನನ್ನು ಆಲಿಂಗಿಸಿಕೊಂಡು ಅಳುವವರಾದರು. ಅವರು ನೋಡುತ್ತಿರುವಾಗಲೇ ಸುಂದರನು ದೊಡ್ಡ ಕೋರೆಹಲ್ಲುವುಳ್ಳ ದೊಡ್ಡ ಶರೀರವುಳ್ಳ ಕೆಂಪಾದ ಮೀಸೆ ತಲೆಕೂದಲುಗಳುಳ್ಳ ರಾಕ್ಷಸನಾದನು. ಅವನನ್ನು ನೋಡಿ ಸ್ತ್ರೀಯರು ಭಯವುಳ್ಳವರಾಗಿ ಸ್ವರ್ಗಕ್ಕೆ ಹೋದರು. ತರುವಾಯ ರಾಕ್ಷಸರೂಪವುಳ್ಳ ಸುಂದರನು ಪ್ರಾಣಿಗಳನ್ನು ಭಕ್ಷಿಸುತ್ತಾ ಸಂಚರಿಸುತ್ತಾ ಹದಿನಾರನೇ ವರ್ಷದಲ್ಲಿ ಪದ್ಮನಾಭನನ್ನು ತಿನ್ನಲಿಕ್ಕೆ ಹೋದನು. ದೇವರ ಚಕ್ರಾಯುಧವು ಬಂದು ಅವನ ತಲೆಯನ್ನು ಕತ್ತರಿಸಿತು. ತರುವಾಯ ಸುಂದರನು ಆ ದೇಹವನ್ನು ಬಿಟ್ಟು ದೇವ್ಯದೇಹವುಳ್ಳವನಾಗಿ ವಿಮಾನವನ್ನು ಏರಿ ಸುದರ್ಶನಕ್ಕೆ ನಮಸ್ಕರಿಸಿದನು. ಸ್ತೋತ್ರವನ್ನು ಮಾಡಿದನು. ಸುದರ್ಶನದ ಅನುಜ್ಞೆಯನ್ನು ಪಡೆದು ಪದ್ಮನಾಭನಿಗೂ ನಮಸ್ಕರಿಸಿ ಅವನ ಅನುಜ್ಞೆಯನ್ನು ಪಡೆದು ಸ್ವರ್ಗಕ್ಕೆ ಹೋದನು. ಪದ್ಮನಾಭನು ಚಕ್ರವನ್ನು ಅಲ್ಲಿಯೇ ಸನ್ನಿಹಿತವಾಗಿರುವಂತೆಯೂ ಭೂತಪ್ರೇತಪಿಶಾಚಾದಿಗಳಿಂದ ಭಯವು ಬಾರದಂತೆ ಮಾಡಿಕೊಡಬೇಕೆಂದು ಪ್ರಾರ್ಥಿಸಿಕೊಂಡನು. ಚಕ್ರವು ಹಾಗೆಯೇ ಆಗಲಿ ಎಂದು ಹೇಳಿ ಅಂತರ್ಧಾನವನ್ನು ಹೊಂದಿತು.



# ಘಂಟಾಕರ್ಣನು [1]

ಶ್ರೀಕೃಷ್ಣಪರಮಾತ್ಮನು ದುಷ್ಟಜನರನ್ನು ಮೋಹಗೊಳಿಸುವುದಕ್ಕಾಗಿ ರುದ್ರದೇವರನ್ನು ತಪಸ್ಸು ಮಾಡಿ ಮಗುವನ್ನು ಪಡೆಯಬೇಕೆಂದು ನೆಪಮಾಡಿಕೊಂಡು ದ್ವಾರಕೆಯಲ್ಲಿರುವ ಎಲ್ಲರನ್ನೂ ಜಾಗ್ರತೆಯಿಂದ ಇರುವಂತೆ ತಿಳಿಸಿ ತಾನು ಗರುಡಾರೂಢನಾಗಿ ಹೋದನು. ಹೋಗುವಾಗ ದಾರಿಯಲ್ಲಿ ಬದರಿಕಾಶ್ರಮದಲ್ಲಿ ಇಳಿದನು. ಭಗವಂತನು ಸಾಯಂಕಾಲದಲ್ಲಿ ಬದರಿಗೆ ಹೋಗಿ ಸೇರಿದನು. ಆಮೇಲೆ ಗರುಡದೇವರಿಂದ ಕೆಳಗೆ ಇಳಿದು ದೀಪದಿಂದ ಪ್ರಕಾಶಮಾನವಾದ ಸ್ಥಳದಲ್ಲಿ ದೇವತೆಗಳಿಂದ ಸಹಿತರಾಗಿ ಕೂತುಕೊಂಡರು.

ಮುನಿಗಳು ಶ್ರೀಕೃಷ್ಣಪರಮಾತ್ಮನು ಬಂದಿರುವುದನ್ನು ನೋಡಿ ಅಗ್ನಿಹೋತ್ರಗಳನ್ನು ಮುಗಿಸಿ ಅತಿಥಿ ಸತ್ಕಾರಗಳನ್ನು ಮಾಡಿ ಶ್ರೀಭಗವಂತನನ್ನು ನೋಡಬೇಕೆಂದು ಅರ್ಘ್ಯವನ್ನು ಹಿಡಿದುಕೊಂಡು ತಮ್ಮ ಆಶ್ರಮದಿಂದ ಬಂದರು. ಬಂದು ಭಕ್ತವತ್ಸಲನಾದ ಪರಮಾತ್ಮನಿಗೆ ನಮಸ್ಕರಿಸಿದರು. ಅರ್ಘ್ಯಪಾದ್ಯಾದಿಗಳನ್ನು ಕೊಟ್ಟರು. ತಾವು ಕೃತಾರ್ಥರಾದೆವು ಎಂದುಕೊಂಡರು. ನಾವು ಏನು ಸೇವೆಯನ್ನು ಮಾಡಬೇಕೆಂದು ಕೈಮುಗಿದುಕೊಂಡು ಕೇಳಿದರು. ಶ್ರೀಕೃಷ್ಣಪರಮಾತ್ಮನು ಎಲ್ಲರೊಡನೆ ಕುಶಲಪ್ರಶ್ನೆಯನ್ನು ಮಾಡಿ ಎಲ್ಲರಿಗೂ ತಪಸ್ಸು ಅಭಿವೃದ್ಧಿಯನ್ನು ಹೊಂದಲಿ ಎಂದು ಹೇಳಿ ಎಲ್ಲರನ್ನೂ ಆಸನದಲ್ಲಿ ಕೂತುಕೊಳ್ಳಲಿಕ್ಕೆ ಹೇಳಿದನು. ಎಲ್ಲರೂ ಭಗವಂತನೊಡನೆ ನಾವು ಕುಶಲಿಗಳೆಂದರು. ಶ್ರೀಭಗವಂತನಿಗೂ ದೇವತೆಗಳಿಗೂ ಗೆಡ್ಡೆ ಹಣ್ಣುಗಳನ್ನು ಅತಿಥೋಪಚಾರವನ್ನು ಮಾಡಿದರು.

ತರುವಾಯ ಶ್ರೀಭಗವಂತನು ತಾನು ಪೂರ್ವದಲ್ಲಿ ತಪಸ್ಸು ಮಾಡಿದ ಗಂಗೆಯ ಉತ್ತರತೀರದಲ್ಲಿರುವ ಪ್ರದೇಶವನ್ನು ನೋಡಲಿಕ್ಕೆ ಹೋದನು. ಆ ಸುಂದರವಾದ ಪ್ರದೇಶವನ್ನು ಬಹುಕಾಲ ನೋಡಿದನು. ಅದೇ ಆಶ್ರಮದಲ್ಲಿ ಕೂತುಕೊಂಡನು. ತಾನೂ ಧ್ಯಾನ ಮಾಡುವವನಂತೆ ಕಣ್ಣು ಮುಚ್ಚಿಕೊಂಡು ಕೂತುಕೊಂಡನು.

ಈರೀತಿಯಾಗಿ ಭಗವಂತನು ಧ್ಯಾನ ಮಾಡುವಂತೆ ಕೂತಿರಲು ಮಹಾ ಭಯಂಕರವಾದ ಶಬ್ದವಾಯಿತು. 'ತಿನ್ನಿರಿ, ತಿನ್ನಿರಿ, ಸಂತೋಷಪಡಿರಿ. ಆ ಮೃಗಗಳು ಇದ್ದಲ್ಲಿಗೆ ಓಡಿರಿ, ಆ ಮೃಗಗಳನ್ನು ಇಲ್ಲಿಗೆ ಕಳುಹಿಸಿರಿ. ಇವನೇ ವಿಷ್ಣುವು. ಇವನೇ ಕೃಷ್ಣನು ಹೇ ವಿಷ್ಣೋ! ನಿನಗೆ ನಮಸ್ಕಾರ. ಮಾಧವನೇ! ನಿನಗೆ ನಮಸ್ಕಾರ' ಇತ್ಯಾದಿ

1. ಹಂ.ವ.ಭ.ಪ. .79-83. ಮ.ತಾ.ನಿ. ಅ.22

ಮಹಾಶಬ್ದವು ರಾತ್ರಿ ಕಾಲದಲ್ಲಿ ಆಯಿತು. ತರುವಾಯ ಸಿಂಹಗಳು ಗರ್ಜನೆ ಮಾಡುವ ಶಬ್ದವೂ ಮೃಗಗಳನ್ನು ಅನುಸರಿಸಿ ನಾಯಿಗಳು ಓಡುವ ಶಬ್ದವೂ ಭಯದಿಂದಿರುವ ಕರಡಿಗಳ ಹುಲಿಗಳ ಮೃಗಗಳ ಕೂಗುವ ಶಬ್ದವೂ ಆನೆಗಳು ಕೂಗುವ ಶಬ್ದವೂ ಮೂರುಲೋಕದಲ್ಲಿ ಭಯಂಕರವಾಗಿ ರಾತ್ರಿಕಾಲದಲ್ಲಿ ಆದವು. ಈರೀತಿಯಾಗಿ ಆದ ಶಬ್ದವನ್ನು ಕೇಳಿ ಧ್ಯಾನಮಾಡುವಂತೆ ಕೂತಿದ್ದ ಪರಮಾತ್ಮನು ಧ್ಯಾನದಿಂದ ಎಚ್ಚೆತ್ತವನಂತೆ ತೋರಿಸುತ್ತಾ ಕಣ್ಣುತೆರೆದು 'ನನ್ನ ಸ್ತೋತ್ರದಿಂದ ಕೂಡಿದ ಆ ಶಬ್ದವು ಯಾರದು? ಮೃಗಗಳೂ ನಾಯಿಗಳೂ ಕೂಗುವ ಶಬ್ದವೂ ಕೇಳಿಸುತ್ತಿದೆ' ಎಂದು ಹೇಳಿಕೊಂಡು ಯೋಚನೆ ಮಾಡುವವನಂತೆ ತೋರಿಸಿ ಎಲ್ಲಾ ದಿಕ್ಕುಗಳನ್ನೂ ನೋಡುತ್ತಾ ಆ ಶಬ್ದಗಳ ಕಾರಣವನ್ನು ನೋಡುತ್ತಾ ಕೂತುಕೊಂಡನು.

ತರುವಾಯ ಮೃಗಗಳೆಲ್ಲವೂ ಪರಮಾತ್ಮನು ಕೂತುಕೊಂಡು ಇರುವಲ್ಲಿಗೆ ಓಡಿಬಂದವು. ಅವುಗಳ ಹಿಂದೆ ಸಾವಿರಾರು ದೀಪಗಳು ಬಂದವು. ಆಗ ಕತ್ತಲೆ ಯೆಲ್ಲಾ ಹೋಗಿ ಹಗಲಿನಂತೆ ಆಯಿತು. ತರುವಾಯ ಭಯಂಕರಗಳಾದ ಭೂತಗಳೂ ಪಿಶಾಚಿಗಳೂ ಕೂಗುತ್ತಾ ಬಂದವು. ಮಾಂಸವನ್ನು ತಿನ್ನುತ್ತಾ ರಕ್ತವನ್ನು ಕುಡಿಯುತ್ತಾ ವಿಕಾರಯುಕ್ತವಾದ ಮುಖಗಳುಳ್ಳ ಪಿಶಾಚಿಗಳು ಬಂದವು. ಅನೇಕ ಮೃಗಗಳೂ ಆಗಳೂ ಬಾಣಗಳಿಂದ ಒಡೆಯಲ್ಪಟ್ಟು ಸಾಯುತ್ತಿದ್ದವು. ಓಡುತ್ತಿದ್ದವು. ತರುವಾಯ ಸಾವಿರಾರು ಮೃಗಗಳು ದೇವರಿದ್ದಲ್ಲಿಗೆ ಓಡಿಬಂದು ದೇವರ ಸುತ್ತಲೂ ನಿಂತುಕೊಂಡವು. ಅಲ್ಲಿಗೆ ಭಯಂಕರ ಪಿಶಾಚಿಗಳೂ ಬಂದವು. ನಾಯಿಗಳೂ ಬಂದವು. ತರುವಾಯ ಶ್ರೀಭಗವಂತನು ತುಂಬಾ ಆಶ್ಚರ್ಯವನ್ನು ಹೊಂದಿದವನಂತೆ ನೋಡುತ್ತಾ ಇದ್ದನು. 'ಇದು ಯಾರ ಶಬ್ದವು? ಇದು ಯಾರ ಜನಸಮೂಹವು? ಯಾರು ನನ್ನನ್ನು ಭಕ್ತಿಯಿಂದ ಸೋತ್ರ ಮಾಡುತ್ತಿರುವನು? ಯಾರಲ್ಲಿ ನಾನು ಪ್ರೀತಿಯುಳ್ಳವನಾಗಲಿ? ಪ್ರೀತನಾದ ನನ್ನಿಂದ ಯಾರು ಮುಕ್ತಿಯನ್ನು ಹೊಂದಲಿರು ವನು?' ಇತ್ಯಾದಿ ರೀತಿಯಾಗಿ ಯೋಚಿಸುವಂತೆ ತೋರಿಸುತ್ತಾ ಪ್ರಾಕೃತ ಪುರುಷನಂತೆ ಪರಮಾತ್ಮನು ಕೂತಿದ್ದನು.

ಅನಂತರದಲ್ಲಿ ಭಯಂಕರಗಳಾದ ವಿಕಾರಯುಕ್ತವಾದ ಮುಖವುಳ್ಳ, ವಿಸ್ತಾರವಾಗಿ ಇರುವ ಪಿಂಗಲಬಣ್ಣದ ರೋಮಗಳುಳ್ಳ, ಉದ್ದ ನಾಲಿಗೆಯುಳ್ಳ, ದೊಡ್ಡ ಕಪೋಲವುಳ್ಳ, ಜೋಲುವ ಕೂದಲುಗಳುಳ್ಳ, ಹಾಹಾಕಾರವನ್ನು ಮಾಡುತ್ತಿರುವ ಮಾಂಸವನ್ನು ಎನ್ನುತ್ತಿರುವ ಬಹುರಕ್ತವನ್ನು ಪಾನಮಾಡುತ್ತಿರುವ ಅಂಗಗಳಿಗೆಲ್ಲಾ ಕರುಳನ್ನು ಸುತ್ತಿಕೊಂಡಿರುವ ಅತ್ಯಂತ ಕಶವಾಗಿರುವ ಹೊಟ್ಟೆಯುಳ್ಳ,

ಶೂಲದಿಂದ ಮನುಷ್ಯರ ತಲೆಯನ್ನು ಕುಕ್ಕಿ ಹಿಡಿದುಕೊಂಡಿರುವ ಅನೇಕ ಹೆಣಗಳನ್ನು ಕೈಗಳಿಂದ ಎಳೆದುಕೊಂಡು ಬರುತ್ತಿರುವ ತಮ್ಮ ಪಿಶಾಚಿ ಜಾತಿಗೆ ಸರಿಯಾಗಿ ನಾನಾ ವಿಧವಾಗಿ ನಗುತ್ತಿರುವ, ಬಹಳ ಪ್ರಾಕೃತಮಾತುಗಳನ್ನು ಆಡುತ್ತಿರುವ, ಮರಗಳನ್ನು ಆಡಿಸುತ್ತಾ ಬರುತ್ತಿರುವ ತುಟಿಯನ್ನು ನೆಕ್ಕಿಕೊಂಡು ಹಲ್ಲುಗಳಿಂದ ಕಟಕಟ ಶಬ್ದ ಮಾಡುತ್ತಿರುವ, 'ಕೃಷ್ಣ ಕೃಷ್ಣ ಮಾಧವ' ಎಂದು ಪದೇಪದೇ ಹೇಳುತ್ತಿರುವ 'ವಿಷ್ಣುವು ನಮಗೆ ಯಾವಾಗ ಕಾಣಿಸುವನು? ಅವನೀಗ ಎಲ್ಲಿ ಇರುವನು? ನಮ್ಮ ಸ್ವಾಮಿಯು ಎಲ್ಲಿ ವಾಸಮಾಡುವನು? ಎಲ್ಲಿ ಅವನನ್ನು ನೋಡುವೆವು? ಪದ್ಮದ ದಲದಂತೆ ಕಣ್ಣು ಇರುವ ಇಂದ್ರದೇವರಿಗೆ ತಮ್ಮನಾಗಿ ಅವತರಿಸಿರುವ ಆ ಭಗವಂತನು ಎಲ್ಲಿ ಇರುವನು? ಕಮಲದಂತೆ ಕಣ್ಣುಗಳುಳ್ಳ ಆ ಭಗವಂತನೇ ಪರಬ್ರಹ್ಮನೆಂದು ಬಲ್ಲವರು ಹೇಳುವರು.

ಅಂತಹ ಪರಮಾತ್ಮನನ್ನು ನೋಡಲಿಕ್ಕೆ ನಾವೀಗ ಹೊರಟಿರುವೆವು. ಕೊನೆಯ ಕಾಲದಲ್ಲಿ ಈ ಜಗತ್ತೆಲ್ಲಾ ಅವನನ್ನೇ ಪ್ರವೇಶಿಸುವುದು. ಆ ಸೃಷ್ಟಿಕರ್ತನನ್ನು ನಾವೆಲ್ಲಿ ನೋಡಲಿ? ಆ ಭಗವಂತನನ್ನು ನೋಡಲಿಕ್ಕೇ ನಾವೀಗ ಹೋಗುತ್ತಿರುವೆವು. ಪ್ರಯತ್ನ ಮಾಡುತ್ತಿರುವೆವು. ಲೋಕದಲ್ಲಿ ಭಯಂಕರವಾದ ಎಲ್ಲ ಜನರ ದ್ವೇಷಕ್ಕೆ ಪಾತ್ರವಾದ ಮನುಷ್ಯರ ಮಾಂಸವನ್ನು ತಿನ್ನುತ್ತಿರುವ ಸರ್ವರಿಗೂ ಭಯವನ್ನು ಉಂಟುಮಾಡುವ ಈ ಪಿಶಾಚಜನ್ಮವು ನಮಗೆ ಹೇಗೆ ಬಂದಿತು? ತಾವು ಜನ್ಮಾಂತರದಲ್ಲಿ ಬಹು ಪಾಪವನ್ನು ಮಾಡಿರುವೆವು. ಆದುದರಿಂದಲೇ ನಮಗೆ ನರಮಾಂಸಾದಿಗಳಲ್ಲಿಯೇ ಪ್ರೀತಿಯು ಹೆಚ್ಚಾಗಿದೆ. ನಮ್ಮ ದುಷ್ಕರ್ಮವಿರುವವರೆಗೂ ಈರೀತಿಯಾಗಿ ಪ್ರಾಣಿಗಳನ್ನು ಪೀಡಿಸುವ ಈ ಅವಸ್ಥೆಯಿರುವುದು. ನಾವು ಬಹುಜನ್ಮಗಳಲ್ಲಿ ಮಹಾಪಾಪ ಮಾಡಿರುವೆವು. ಅದುದರಿಂದಲೇ ಅದರ ಘೋರವಾದ ಫಲವು ಇನ್ನೂ ಮುಗಿದಿಲ್ಲ. ಆದುದರಿಂದಲೇ ನಾಯಿಗಳಿಂದ ಕೂಡಿಕೊಂಡು ಪ್ರಾಣಿಗಳನ್ನು ಸಂಹರಿಸಲಿಕ್ಕೆ ಪ್ರಯತ್ನಿಸುತ್ತಿರುವೆವು. ಅಜ್ಞಾನದಿಂದ ಆವೃತವಾದ ಮನಸ್ಸುಳ್ಳವರಾಗಿ 'ಏನನ್ನೂ ಮಾಡಬೇಕು? ಏನನ್ನು ಮಾಡಬಾರದು?' ಎಂಬುದನ್ನು ತಿಳಿಯದೆ ಇದ್ದೇವೆ. ಈ ಸಂಸಾರದಲ್ಲಿ ಬಹುವಿಧಗಳಾದ ದುಃಖಗಳಿವೆ. ಈ ದುಃಖ ಮೂಲವಾದ ಸಂಸಾರಕ್ಕೆ ಶಂಖ ಚಕ್ರಗದಾಧಾರಿಯಾದ ಪರಮಾತ್ಮನೇ ಔಷಧದಂತೆ ಇರುವವನು. ನಾವು ಆ ಪರಮಾತ್ಮನನ್ನು ಪ್ರಯತ್ನಮಾಡಿ ಅವಶ್ಯವಾಗಿ ನೋಡಬೇಕು' ಎರಡು ಪಿಶಾಚಗಳು ದೇವರ ಕಣ್ಣಿಗೆ ಕಾಣಿಸಿದವು.

ತರುವಾಯ ಮಹಾಭಯಂಕರವಾದ ಮಾಂಸಭಕ್ಷಕರಾದ ದೀಪವನ್ನು

ಹಿಡಿದುಕೊಂಡಿರುವ ಆ ಪಿಶಾಚಗಳು ಸುಖವಾಗಿ ಆಸನದಲ್ಲಿ ಧ್ಯಾನಮಾಡುವಂತೆ ಕೂತಿದ್ದ ಶ್ರೀಕೃಷ್ಣಪರಮಾತ್ಮನನ್ನು ನೋಡಿದವು. ಅವು ಶ್ರೀಕೃಷ್ಣಪರಮಾತ್ಮನ ಬಳಿಗೆ ಹೋಗಿ 'ನೀನು ಯಾರು? ಯಾರಿಗೆ ಸೇರಿದವನು? ಎಲ್ಲಿಂದ ಬರುತ್ತಿರುವಿ? ಘೋರವಾದ ಮೃಗಗಳಿಂದ ತುಂಬಿರುವ ಮನುಷ್ಯರಿಂದ ರಹಿತವಾದ ಪಿಶಾಚಿಗಳಿಂದ ಸೇವಿತವಾದ ಹುಲಿಗಳಿಂದಲೂ ಇತರ ದುಷ್ಟಮೃಗಗಳಿಂದಲೂ ಸೇವಿತವಾದ ಈ ಭಯಂಕರವಾದ ಅರಣ್ಯದಲ್ಲಿ ಏಕೆ ಬಂದಿರುವಿ? ಸುಕುಮಾರನಾಗಿರುವಿ. ಸಾಕ್ಷಾತ್ ವಿಷ್ಣುವಿನಂತೆ ಇರುವಿ. ನೀನು ದೇವತೆಯೋ? ಯಕ್ಷನೋ? ಗಂಧರ್ವನೋ? ಇಂದ್ರನೋ? ಕುಬೇರನೋ? ಒಬ್ಬನೇ ಈ ಭಯಂಕರವಾದ ವನದಲ್ಲಿ ಧ್ಯಾನಮಾಡುವಂತೆ ಕೂತಿರುವಿಯಲ್ಲಾ!' ಇತ್ಯಾದಿ ರೀತಿಯಾಗಿ ಕೇಳಿದವು. ಆಗ ಶ್ರೀಕೃಷ್ಣಪರಮಾತ್ಮನು ಸಾಮಾನ್ಯ ಜನರು ನನ್ನ ಕ್ಷತ್ರಿಯನೆಂದು ಹೇಳುವರು. ಯದುವಂಶದಲ್ಲಿ ಹುಟ್ಟಿರುವೆನು. ಕ್ಷತ್ರಿಯ ವ್ಯಾಪಾರವುಳ್ಳವನಾಗಿರುವೆನು. ಲೋಕಗಳನ್ನು ರಕ್ಷಿಸುವೆನು. ದುಷ್ಟರನ್ನು ಶಿಕ್ಷಿಸುವೆನು. ಕೈಲಾಸಕ್ಕೆ ರುದ್ರದೇವರನ್ನು ನೋಡಲಿಕ್ಕೆ ಹೋಗಬೇಕೆಂದಿರುವೆನು. ಈರೀತಿಯಾಗಿ ನನ್ನ ವೃತ್ತಾಂತವು ನಿಮ್ಮ ವೃತ್ತಾಂತವನ್ನು ಹೇಳಿಕೊಳ್ಳಿರಿ. ನೀವೀಗ ಬ್ರಾಹ್ಮಣರ ಆಶ್ರಮಕ್ಕೆ ಯಾಕೆ ಬಂದಿರಿ? ಇದು ಮಹಾಪುಣ್ಯಪ್ರದವಾದ ಬ್ರಾಹ್ಮಣರಿಂದ ಸೇವಿತವಾದ ಬದರಿಕಾಶ್ರಮವು. ಅಲ್ಪರು ಇರುವ ಸ್ಥಳವಲ್ಲ, ತಪಸ್ಸು ಮಾಡುವವರಿಂದ ಯುಕ್ತವಾದ ಸ್ಥಳವು. ಇಲ್ಲಿ ನಾಯಿಗಳು ಇರುವುದಿಲ್ಲ. ಮಾಂಸವನ್ನು ತಿನ್ನುವ ಪಿಶಾಚಿಗಳೂ ಇರುವುದಿಲ್ಲ. ಇಲ್ಲಿ ಮೃಗಗಳನ್ನು ಕೊಲ್ಲಬಾರದು. ಮೃಗಬೇಟೆಯಾಡಬಾರದು. ಅಲ್ಪರೂ ನಾಸ್ತಿಕರೂ ಇಲ್ಲಿಗೆ ಬರಲೇಬಾರದು. ನಾನು ಈ ಪ್ರದೇಶವನ್ನು ರಕ್ಷಿಸುತ್ತಿರುವೆನು. ಯಾರಾದರೂ ನಾನು ಹೇಳಿದ ಮಾತನ್ನು ಮೀರುವುದಾದರೆ ಶಿಕ್ಷಿಸುತ್ತೇನೆ. ನೀವಿಬ್ಬರೂ ಯಾರು? ಈ ಮಹತ್ತಾದ ಸೈನ್ಯವು ಯಾರಿಗೆ ಸೇರಿದ್ದು? ಇನ್ನು ಮುಂದೆ ನೀವು ಪ್ರವೇಶಿಸಬಾರದು. ಅಲ್ಲಿ ಋಷಿಗಳು ಇರುವರು. ಅವರು ಮಾಡುವ ತಪಸ್ಸಿಗೆ ವಿಘ್ನವಾಗುವುದು. ಇಲ್ಲಿಯೇ ನಿಲ್ಲಿರಿ. ನಿಂತು ಹೇಳುವುದನ್ನೆಲ್ಲಾ ಹೇಳಿರಿ. ಇಲ್ಲದಿದ್ದರೆ ಬಲಾತ್ಕಾರದಿಂದ ನಿಮ್ಮನ್ನು ನಾನು ತಡೆಯುವೆನು' ಎಂದು ಹೇಳಿದನು.

ಈರೀತಿಯಾಗಿ ಭಗವಂತನು ಪ್ರಶ್ನೆ ಮಾಡಲು ಆ ಪಿಶಾಚಿಗಳಲ್ಲಿ ಘೋರವಾದ ಉದ್ದವಾದ ಪಿಶಾಚಿಯು 'ಕೇಳು ನಾನು ಶ್ರೀಕೃಷ್ಣಪರಮಾತ್ಮನಿಗೆ ನಮಸ್ಕರಿಸಿ ಸಮಸ್ತವನ್ನು ಹೇಳುವೆನು. ನಾನು ಘಂಟಾಕರ್ಣನೆಂದು ಹೆಸರುಳ್ಳ ಪಿಶಾಚನು ಮಾಂಸಭಕ್ಷಕನು. ಎರಡನೇ ಮೃತ್ಯುದಿನಂತೆ ಇರುವವನು. ನಾನು ರುದ್ರದೇವರ

ಮಿತ್ರನಾದ ಕುಬೇರನ ಭೃತ್ಯನು. ಇವನು ನನ್ನ ತಮ್ಮನು. ಯಮದೇವರಿಗೂ ಯಮನಂತೆ ನಾನಿರುವೆನು. ಈ ಮೃಗಬೇಟೆಯು ವಿಷ್ಣುವಿನ ಮಹಾಪೂಜೆಗೆಂದು ನನ್ನ ಅಭಿಪ್ರಾಯವಿದೆ. ಈ ನಾಯಿಗಳೆಲ್ಲ ನನಗೇ ಸೇರಿದವು. ನಾನು ಭೂತಗಳಿಂದ ಸೇವಿತವಾದ ಕೈಲಾಸದಿಂದ ಬರುತ್ತಾ ಇರುವೆನು. ನಾನು ಪೂರ್ವದಲ್ಲಿ ವಿಷ್ಣುವಿನ ನಾಮವೇ ಕಿವಿಗೆ ಬೀಳಬಾರದೆಂದು ಎರಡು ಕಿವಿಗಳೂ ಘಂಟೆಗಳನ್ನು ಕಟ್ಟಿ ಕೊಂಡಿದ್ದೆನು. ನಾನು ಕೈಲಾಸಕ್ಕೆ ಹೋಗಿ ರುದ್ರದೇವರನ್ನು ಆರಾಧಿಸಿ ಸೋತ್ರ ಮಾಡಿದೆನು.

ತರುವಾಯ ರುದ್ರದೇವರು ಪ್ರಸನ್ನರಾಗಿ ವರವನ್ನು ಕೇಳಿಕೊ ಎಂದರು. ನಾನು ನನಗೆ ಮೋಕ್ಷವನ್ನು ಕೊಡಬೇಕೆಂದು ಪ್ರಾರ್ಥಿಸಿದೆನು. ಆಗ ರುದ್ರದೇವರು ಎಲ್ಲ ರಿಗೂ ಮೋಕ್ಷವನ್ನು ಕೊಡುವವನು ವಿಷ್ಣುವೊಬ್ಬನೇ ಆದುದರಿಂದ ಬದರಿಕಾಶ್ರಮಕ್ಕೆ ಹೋಗಿ ನಾರಾಯಣನನ್ನು ಆರಾಧನಮಾಡಿ ಅವನಿಂದ ಮೋಕ್ಷಪಡೆಯು ಎಂದು ಹೇಳಿದರು. ಈರೀತಿಯಾದ ರುದ್ರದೇವರಿಂದ ಆಜ್ಞೆಯನ್ನು ಹೊಂದಿದ ನಾನು ಆ ನಾರಾಯಣನೇ ಸರ್ವೋತ್ತಮನೆಂದು ತಿಳಿದುಕೊಂಡು ಅವನಿಂದ ಮೋಕ್ಷವನ್ನು ಅಪೇಕ್ಷಿಸುತ್ತಾ ಈ ಪ್ರದೇಶಕ್ಕೆ ಬಂದೆನು. ನಿನಗೆ ಕುತೂಹಲವಿದ್ದರೆ ಕೇಳು. ಇನ್ನೊಂದು ನನ್ನ ಕಾರ್ಯವನ್ನು ಹೇಳುತ್ತೇನೆ. ಪಶ್ಚಿಮ ಸಮುದ್ರದ ತೀರದಲ್ಲಿ ಯಾದವಶ್ರೇಷ್ಠ ರಿಂದ ಯುಕ್ತವಾದ ದ್ವಾರಕಾಪುರಿಯಿರುವುದು. ಅಲ್ಲಿ ವಿಷ್ಣುವು ಇರುವನು. ಲೋಕಹಿತಕ್ಕಾಗಿ ದ್ವಾರಕೆಯಲ್ಲಿ ವಾಸಮಾಡುವ ಅವನನ್ನು ನೋಡಲಿಕ್ಕೆ ನಾವು ಹೊರಟಿರುವೆವು. ನಾವು ಈಗ ಹೋಗಿ ಆ ವಿಷ್ಣುವನ್ನು ನೋಡಬೇಕು. ಆ ವಿಷ್ಣುವೇ ಸರ್ವೋತ್ತಮ. ಮನುಷ್ಯನೇ! ನಾವು ಬೇರೆ ಸ್ಥಳಕ್ಕೆ ಹೋಗುವೆವು. ನಾನು ಇಚ್ಛಾನುಸಾರವಾಗಿ ಬೇರೆ ಸ್ಥಳಕ್ಕೆ ಹೋಗು. ನಮಗೂ ನಿಯಮವಿದೆ. ನೀನು ಬೇಕಾದಲ್ಲಿಗೆ ಹೋಗು. ಮಧ್ಯರಾತ್ರಿಯಾಯಿತು' ಹೀಗೆ ಹೇಳಿ ಭಯಂಕರ ರೂಪವುಳ್ಳ ಆ ಪಿಶಾಚವು ಅದೇ ಪ್ರದೇಶದಲ್ಲಿ ಬಹಳ ರಕ್ತವನ್ನು ಪಾನಮಾಡಿ ಇಚ್ಛಾನುಸಾರವಾಗಿ ಮಾಂಸರಾಶಿಯನ್ನು ಭಕ್ಷಣೆ ಮಾಡಿ ಆಚಮನೆ ಮಾಡಿ ಎಲ್ಲಾ ಸಾಧನವನ್ನು ಹತ್ತಿರದಲ್ಲಿ ಇಟ್ಟು ಬಹಳ ಕರುಗಳನ್ನು ಹಾಕಿ ದರ್ಭೆಯಿಂದ ಹಿಡಿದ ಆಸನವನ್ನು ಮಾಡಿ ನೀರಿನಿಂದ ಪ್ರೋಕ್ಷಿಸಿ ಎಲ್ಲಾ ನಾಯಿಗಳನ್ನು ಮಹಾಪ್ರಯತ್ನದಿಂದ ದೂರಮಾಡಿ ಸುಖವಾಗಿ ಕೂತುಕೊಂಡು ಏಕಾಗ್ರಮನಸ್ಸುಳ್ಳವನಾಗಿ ಭಗವಂತನಿಗೆ ನಮಸ್ಕರಿಸಿ ಭಕ್ತವತ್ಸಲನಾದ ಪರಮಾತ್ಮನನ್ನು ನಾನಾ ವಿಧವಾಗಿ ಸ್ತೋತ್ರ ಮಾಡಿತು.

ಹಿಡಿದುಕೊಂಡಿರುವ ಆ ಪಿಶಾಚಗಳು ಸುಖವಾಗಿ ಆಸನದಲ್ಲಿ ಧ್ಯಾನಮಾಡುವಂತೆ ಕೂತಿದ್ದ ಶ್ರೀಕೃಷ್ಣಪರಮಾತ್ಮನನ್ನು ನೋಡಿದವು. ಅವು ಶ್ರೀಕೃಷ್ಣಪರಮಾತ್ಮನ ಬಳಿಗೆ ಹೋಗಿ 'ನೀನು ಯಾರು? ಯಾರಿಗೆ ಸೇರಿದವನು? ಎಲ್ಲಿಂದ ಬರುತ್ತಿರುವಿ? ಘೋರವಾದ ಮೃಗಗಳಿಂದ ತುಂಬಿರುವ ಮನುಷ್ಯರಿಂದ ರಹಿತವಾದ ಪಿಶಾಚಿಗಳಿಂದ ಸೇವಿತವಾದ ಹುಲಿಗಳಿಂದಲೂ ಇತರ ದುಷ್ಟಮೃಗಗಳಿಂದಲೂ ಸೇವಿತವಾದ ಈ ಭಯಂಕರವಾದ ಅರಣ್ಯದಲ್ಲಿ ಏಕೆ ಬಂದಿರುವಿ? ಸುಕುಮಾರನಾಗಿರುವಿ. ಸಾಕ್ಷಾತ್ ವಿಷ್ಣುವಿನಂತೆ ಇರುವಿ. ನೀನು ದೇವತೆಯೋ? ಯಕ್ಷನೋ? ಗಂಧರ್ವನೋ? ಇಂದ್ರನೋ? ಕುಬೇರನೋ? ಒಬ್ಬನೇ ಈ ಭಯಂಕರವಾದ ವನದಲ್ಲಿ ಧ್ಯಾನಮಾಡುವಂತೆ ಕೂತಿರುವಿಯಲ್ಲಾ!' ಇತ್ಯಾದಿ ರೀತಿಯಾಗಿ ಕೇಳಿದವು. ಆಗ ಶ್ರೀಕೃಷ್ಣಪರಮಾತ್ಮನು ಸಾಮಾನ್ಯ ಜನರು ನನ್ನ ಕ್ಷತ್ರಿಯನೆಂದು ಹೇಳುವರು. ಯದುವಂಶದಲ್ಲಿ ಹುಟ್ಟಿರುವೆನು. ಕ್ಷತ್ರಿಯ ವ್ಯಾಪಾರವುಳ್ಳವನಾಗಿರುವೆನು. ಲೋಕಗಳನ್ನು ರಕ್ಷಿಸುವೆನು. ದುಷ್ಟರನ್ನು ಶಿಕ್ಷಿಸುವೆನು. ಕೈಲಾಸಕ್ಕೆ ರುದ್ರದೇವರನ್ನು ನೋಡಲಿಕ್ಕೆ ಹೋಗಬೇಕೆಂದಿರುವೆನು. ಈರೀತಿಯಾಗಿ ನನ್ನ ವೃತ್ತಾಂತವು ನಿಮ್ಮ ವೃತ್ತಾಂತವನ್ನು ಹೇಳಿಕೊಳ್ಳಿರಿ. ನೀವೀಗ ಬ್ರಾಹ್ಮಣರ ಆಶ್ರಮಕ್ಕೆ ಯಾಕೆ ಬಂದಿರಿ? ಇದು ಮಹಾಪುಣ್ಯಪ್ರದವಾದ ಬ್ರಾಹ್ಮಣರಿಂದ ಸೇವಿತವಾದ ಬದರಿಕಾಶ್ರಮವು. ಅಲ್ಪರು ಇರುವ ಸ್ಥಳವಲ್ಲ, ತಪಸ್ಸು ಮಾಡುವವರಿಂದ ಯುಕ್ತವಾದ ಸ್ಥಳವು. ಇಲ್ಲಿ ನಾಯಿಗಳು ಇರುವುದಿಲ್ಲ. ಮಾಂಸವನ್ನು ತಿನ್ನುವ ಪಿಶಾಚಿಗಳೂ ಇರುವುದಿಲ್ಲ. ಇಲ್ಲಿ ಮೃಗಗಳನ್ನು ಕೊಲ್ಲಬಾರದು. ಮೃಗಬೇಟೆಯಾಡಬಾರದು. ಅಲ್ಪರೂ ನಾಸ್ತಿಕರೂ ಇಲ್ಲಿಗೆ ಬರಲೇಬಾರದು. ನಾನು ಈ ಪ್ರದೇಶವನ್ನು ರಕ್ಷಿಸುತ್ತಿರುವೆನು. ಯಾರಾದರೂ ನಾನು ಹೇಳಿದ ಮಾತನ್ನು ಮೀರುವುದಾದರೆ ಶಿಕ್ಷಿಸುತ್ತೇನೆ. ನೀವಿಬ್ಬರೂ ಯಾರು? ಈ ಮಹತ್ತಾದ ಸೈನ್ಯವು ಯಾರಿಗೆ ಸೇರಿದ್ದು? ಇನ್ನು ಮುಂದೆ ನೀವು ಪ್ರವೇಶಿಸಬಾರದು. ಅಲ್ಲಿ ಋಷಿಗಳು ಇರುವರು. ಅವರು ಮಾಡುವ ತಪಸ್ಸಿಗೆ ವಿಘ್ನವಾಗುವುದು. ಇಲ್ಲಿಯೇ ನಿಲ್ಲಿರಿ. ನಿಂತು ಹೇಳುವುದನ್ನೆಲ್ಲಾ ಹೇಳಿರಿ. ಇಲ್ಲದಿದ್ದರೆ ಬಲಾತ್ಕಾರದಿಂದ ನಿಮ್ಮನ್ನು ನಾನು ತಡೆಯುವೆನು' ಎಂದು ಹೇಳಿದನು.

ಈರೀತಿಯಾಗಿ ಭಗವಂತನು ಪ್ರಶ್ನೆ ಮಾಡಲು ಆ ಪಿಶಾಚಿಗಳಲ್ಲಿ ಘೋರವಾದ ಉದ್ದವಾದ ಪಿಶಾಚಿಯು 'ಕೇಳು ನಾನು ಶ್ರೀಕೃಷ್ಣಪರಮಾತ್ಮನಿಗೆ ನಮಸ್ಕರಿಸಿ ಸಮಸ್ತವನ್ನು ಹೇಳುವೆನು. ನಾನು ಘಂಟಾಕರ್ಣನೆಂದು ಹೆಸರುಳ್ಳ ಪಿಶಾಚನು ಮಾಂಸಭಕ್ಷಕನು. ಎರಡನೇ ಮೃತ್ಯುದಿನಂತೆ ಇರುವವನು. ನಾನು ರುದ್ರದೇವರ

ಮಿತ್ರನಾದ ಕುಬೇರನ ಭೃತ್ಯನು. ಇವನು ನನ್ನ ತಮ್ಮನು. ಯಮದೇವರಿಗೂ ಯಮನಂತೆ ನಾನಿರುವೆನು. ಈ ಮೃಗಬೇಟೆಯು ವಿಷ್ಣುವಿನ ಮಹಾಪೂಜೆಗೆಂದು ನನ್ನ ಅಭಿಪ್ರಾಯವಿದೆ. ಈ ನಾಯಿಗಳೆಲ್ಲ ನನಗೇ ಸೇರಿದವು. ನಾನು ಭೂತಗಳಿಂದ ಸೇವಿತವಾದ ಕೈಲಾಸದಿಂದ ಬರುತ್ತಾ ಇರುವೆನು. ನಾನು ಪೂರ್ವದಲ್ಲಿ ವಿಷ್ಣುವಿನ ನಾಮವೇ ಕಿವಿಗೆ ಬೀಳಬಾರದೆಂದು ಎರಡು ಕಿವಿಗಳೂ ಘಂಟೆಗಳನ್ನು ಕಟ್ಟಿ ಕೊಂಡಿದ್ದೆನು. ನಾನು ಕೈಲಾಸಕ್ಕೆ ಹೋಗಿ ರುದ್ರದೇವರನ್ನು ಆರಾಧಿಸಿ ಸೋತ್ರ ಮಾಡಿದೆನು.

ತರುವಾಯ ರುದ್ರದೇವರು ಪ್ರಸನ್ನರಾಗಿ ವರವನ್ನು ಕೇಳಿಕೊ ಎಂದರು. ನಾನು ನನಗೆ ಮೋಕ್ಷವನ್ನು ಕೊಡಬೇಕೆಂದು ಪ್ರಾರ್ಥಿಸಿದೆನು. ಆಗ ರುದ್ರದೇವರು ಎಲ್ಲ ರಿಗೂ ಮೋಕ್ಷವನ್ನು ಕೊಡುವವನು ವಿಷ್ಣುವೊಬ್ಬನೇ ಆದುದರಿಂದ ಬದರಿಕಾಶ್ರಮಕ್ಕೆ ಹೋಗಿ ನಾರಾಯಣನನ್ನು ಆರಾಧನಮಾಡಿ ಅವನಿಂದ ಮೋಕ್ಷಪಡೆಯು ಎಂದು ಹೇಳಿದರು. ಈರೀತಿಯಾದ ರುದ್ರದೇವರಿಂದ ಆಜ್ಞೆಯನ್ನು ಹೊಂದಿದ ನಾನು ಆ ನಾರಾಯಣನೇ ಸರ್ವೋತ್ತಮನೆಂದು ತಿಳಿದುಕೊಂಡು ಅವನಿಂದ ಮೋಕ್ಷವನ್ನು ಅಪೇಕ್ಷಿಸುತ್ತಾ ಈ ಪ್ರದೇಶಕ್ಕೆ ಬಂದೆನು. ನಿನಗೆ ಕುತೂಹಲವಿದ್ದರೆ ಕೇಳು. ಇನ್ನೊಂದು ನನ್ನ ಕಾರ್ಯವನ್ನು ಹೇಳುತ್ತೇನೆ. ಪಶ್ಚಿಮ ಸಮುದ್ರದ ತೀರದಲ್ಲಿ ಯಾದವಶ್ರೇಷ್ಠ ರಿಂದ ಯುಕ್ತವಾದ ದ್ವಾರಕಾಪುರಿಯಿರುವುದು. ಅಲ್ಲಿ ವಿಷ್ಣುವು ಇರುವನು. ಲೋಕಹಿತಕ್ಕಾಗಿ ದ್ವಾರಕೆಯಲ್ಲಿ ವಾಸಮಾಡುವ ಅವನನ್ನು ನೋಡಲಿಕ್ಕೆ ನಾವು ಹೊರಟಿರುವೆವು. ನಾವು ಈಗ ಹೋಗಿ ಆ ವಿಷ್ಣುವನ್ನು ನೋಡಬೇಕು. ಆ ವಿಷ್ಣುವೇ ಸರ್ವೋತ್ತಮ. ಮನುಷ್ಯನೇ! ನಾವು ಬೇರೆ ಸ್ಥಳಕ್ಕೆ ಹೋಗುವೆವು. ನಾನು ಇಚ್ಛಾನುಸಾರವಾಗಿ ಬೇರೆ ಸ್ಥಳಕ್ಕೆ ಹೋಗು. ನಮಗೂ ನಿಯಮವಿದೆ. ನೀನು ಬೇಕಾದಲ್ಲಿಗೆ ಹೋಗು. ಮಧ್ಯರಾತ್ರಿಯಾಯಿತು' ಹೀಗೆ ಹೇಳಿ ಭಯಂಕರ ರೂಪವುಳ್ಳ ಆ ಪಿಶಾಚವು ಅದೇ ಪ್ರದೇಶದಲ್ಲಿ ಬಹಳ ರಕ್ತವನ್ನು ಪಾನಮಾಡಿ ಇಚ್ಛಾನುಸಾರವಾಗಿ ಮಾಂಸರಾಶಿಯನ್ನು ಭಕ್ಷಣೆ ಮಾಡಿ ಆಚಮನೆ ಮಾಡಿ ಎಲ್ಲಾ ಸಾಧನವನ್ನು ಹತ್ತಿರದಲ್ಲಿ ಇಟ್ಟು ಬಹಳ ಕರುಗಳನ್ನು ಹಾಕಿ ದರ್ಭೆಯಿಂದ ಹಿಡಿದ ಆಸನವನ್ನು ಮಾಡಿ ನೀರಿನಿಂದ ಪ್ರೋಕ್ಷಿಸಿ ಎಲ್ಲಾ ನಾಯಿಗಳನ್ನು ಮಹಾಪ್ರಯತ್ನದಿಂದ ದೂರಮಾಡಿ ಸುಖವಾಗಿ ಕೂತುಕೊಂಡು ಏಕಾಗ್ರಮನಸ್ಸುಳ್ಳವನಾಗಿ ಭಗವಂತನಿಗೆ ನಮಸ್ಕರಿಸಿ ಭಕ್ತವತ್ಸಲನಾದ ಪರಮಾತ್ಮನನ್ನು ನಾನಾ ವಿಧವಾಗಿ ಸ್ತೋತ್ರ ಮಾಡಿತು.

ನಿನ್ನಲ್ಲೇ ದೃಢವಾದ ಭಕ್ತಿಯನ್ನು ಕೊಡು ಎಂದು ಪ್ರಾರ್ಥಿಸಿ ನಿಶ್ಚಲವಾದ ಮನಸ್ಸಿನಿಂದ ಭಗವಂತನನ್ನು ಧ್ಯಾನ ಮಾಡಿತು.

ಶ್ರೀಭಗವಂತನು ಅವನನ್ನು ನೋಡಿ ಇವನು ಕುಬೇರನ ಉಪದೇಶದಿಂದ ನನ್ನನ್ನು ಸ್ಮರಣೆ ಮಾಡಿದ್ದರೂ ಅಹಂಕಾರಪಟ್ಟನು. ಆದುದರಿಂದ ಈ ಅವಸ್ಥೆಯು ಬಂದಿತು. ಇವನನ್ನು ನಾನೀಗ ಉದ್ಧಾರ ಮಾಡುವೆನು ಎಂದು ಹೇಳಿಕೊಂಡು ಅವನಿಗೆ ಮನಸ್ಸಿನಲ್ಲಿ ತನ್ನ ರೂಪವನ್ನು ತೋರಿಸಿದನು. ಅವನು ಪರಮಸಂತೋಷ ದಿಂದ ಕೃತರ್ಥನಾದೆನೆಂದು ತಿಳಿದುಕೊಂಡನು. ಆಮೇಲೆ ಕಣ್ಣುತೆರೆದು ತಾನು ಧ್ಯಾನ ಮಾಡುವಾಗ ತೋರಿದ ಭಗವಂತನೇ ಇವನು ಇರುವನು. ಇವನೇ ಪರಮಾತ್ಮನು ಎಂದು ಹೇಳುತ್ತಾ ಕುಣಿಯಲಿಕ್ಕೆ ಆರಂಭಿಸಿದನು. ಭಗವಂತನ ಮಹಿಮೆಯನ್ನು ಸುತ್ತಿಸುತ್ತಾ ನರ್ತನ ಮಾಡಿದನು. ಶಕ್ತಿಯಿದ್ದಷ್ಟು ಕುಣಿದು ಆಮೇಲೆ ಗಟ್ಟಿಯಾಗಿ ವಿಕಾರವಾಗಿ ನಗಾಡಿ ಅಲ್ಲಿಯೇ ಇದ್ದ ಒಂದು ಬ್ರಾಹ್ಮಣನ ಹೆಣವನ್ನು ತೆಗೆದು ಎರಡಾಗಿ ಸೀಳಿ ಅದರ ಒಂದು ತುಂಡಿಗೆ ನೀರಿನಿಂದ ಪ್ರೋಕ್ಷಣೆಮಾಡಿ ಒಂದು ಪಾತ್ರೆಯಲ್ಲಿ ಇಟ್ಟು ದೇವರಿಗೆ ನಮಸ್ಕರಿಸಿ ಕೈಜೋಡಿಸಿಕಂಡು ನಿಂತುಕೊಂಡು 'ಭಗವಂತನೇ! ಉಚಿತವಾದ ಈ ಭಕ್ಷ್ಯವನ್ನು ನೀನು ಸ್ವೀಕರಿಸಪೇಕು. ನಾವು ನಿನ್ನ ಭಕ್ತರು. ಭಕ್ತಿಯಿಂದ ಕೊಟ್ಟದ್ದನ್ನು ನೀನು ಸ್ವೀಕರಿಸಬೇಕು. ಈ ಬ್ರಾಹ್ಮಣಶವವು ಮಾಂಸಭಕ್ಷಕರಾದ ನಮಗೆ ಶಾಸ್ತ್ರದಲ್ಲಿ ವಿಹಿತವಾದದ್ದು. ಆದುದರಿಂದ ದೋಷವಿಲ್ಲದಿದ್ದರೆ ನೀನೂ ಸ್ವೀಕರಿಸು' ಎಂದು ಹೇಳಿ ಮತ್ತು ವಿಕಾರದಿಂದ ನಗಾಡಿ ಆ ಬ್ರಾಹ್ಮಣನ ಹೆಣವನ್ನು ಭಗವಂತನಿಗೆ ಕೊಡಲಿಕ್ಕೆ ಇಚ್ಛಿಸಿತು.

ಆಗ ಭಗವಂತನು ಅವನಲ್ಲಿ ಮನಸ್ಸಿನಿಂದಲೇ ಪ್ರೀತಿಯುಳ್ಳವನಾಗಿ ಮನಸ್ಸಿನಿಂದಲೇ ಸತ್ಕರಿಸಿದನು. ಅವನೊಡನೆ 'ಪಿಶಾಚ! ಇಷ್ಟೇ ಸಾಕು. ನನ್ನಂತವರು ಬ್ರಾಹ್ಮಣನ ಹೆಣವನ್ನು ಮುಟ್ಟಬಾರದು. ಬ್ರಾಹ್ಮಣನು ಎಲ್ಲರಿಂದಲೂ ಪೂಜ್ಯನು. ಘೋರಕರ್ಮವುಳ್ಳ ಪಿಶಾಚಗಳು ಮಾತ್ರ ಬ್ರಾಹ್ಮಣರಿಗೆ ಹಿಂಸಾಮಾಡಲಿಕ್ಕೆ ಪ್ರಯತ್ನ ಮಾಡುತ್ತಾರೆ. ಬ್ರಾಹ್ಮಣರನ್ನು ಯಾವಾಗಲೂ ಕೊಲ್ಲಬಾರದು. ಅವರ ಹಿಂಸೆಯು ನರಕಕ್ಕೆ ಕಾರಣವಾದದ್ದು. ಆದುದರಿಂದ ನಾವು ಬ್ರಾಹ್ಮಣ ಹೆಣವನ್ನು ಮುಟ್ಟ ಬಾರದು. ನಿನ್ನ ಭಕ್ತಿಯಿಂದ ನಿನ್ನ ಮನೋನಿರ್ಮಲತೆಯಿಂದ ನಾನು ಅತ್ಯಂತ ಸಂತುಷ್ಟನಾಗಿರು ವೆನು' ಇತ್ಯಾದಿ ಮಾತುಗಳನ್ನು ಹೇಳುತ್ತಾ ಮೃದುವಾದ ತನ್ನ ಕೈಯಿಂದ ಆ ಪಿಶಾಚದ ಸರ್ವಾಂಗವನ್ನು ಸ್ಪರ್ಶಮಾಡಿದನು. ಅವನ ಪಾಪವನ್ನು

ಪರಿಹರಿಸಿದನು. ಆಗಲೇ ಘಂಟಾಕರ್ಣನು ಸರ್ವಾಭರಣಗಳಿಂದ ಅಲಂಕೃತವಾದ ಪರಮಸುಂದರವಾದ ರೂಪವುಳ್ಳವನಾದನು. ತರುವಾಯ ಭಗವಂತನು ಅವನೊಡನೆ 'ನಿನಗೆ ಇಂದ್ರನು ಇರುವವರೆಗೆ ಸ್ವರ್ಗವಾಸವಿರುವುದು. ಆಮೇಲೆ ನನ್ನ ಸಾಯುಜ್ಯವನ್ನು ಹೊಂದುವಿ. ಈ ನಿನ್ನ ಮನಸ್ಸಿನಲ್ಲಿ ಇರುವ ವರವನ್ನು ಕೇಳಿಕೊ. ನೀನು ಕೇಳಿದ್ದನ್ನೆಲ್ಲಾ ನಾನು ನಿನಗೆ ಕೊಡುವೆನು' ಎಂದು ಹೇಳಿದನು.

ಅದಕ್ಕೆ ಘಂಟಾಕರ್ಣನು 'ಭಗವಂತನೇ! ಯಾರು ನಮ್ಮ ಸಂಗಮವನ್ನು ಶುದ್ಧವಾದ ಮನಸ್ಸಿನಿಂದ ಸ್ಮರಿಸುವನೋ ಅವನಿಗೆ ನಿನ್ನಲ್ಲಿ ದೃಢವಾದ ಭಕ್ತಿಯಾಗಲಿ. ಅವನ ಮನಸ್ಸಿನಲ್ಲಿ ದೋಷವು ಬಾರದೆ ಹೋಗಲಿ! ಎಂದು ಬೇಡಿಕೊಂಡನು. ಭಗವಂತನು 'ಹಾಗೆಯೇ ಆಗಲಿ. ನೀನು ಸ್ವರ್ಗಕ್ಕೆ ಹೋಗು. ಇಂದ್ರನಿಗೆ ಅತಿಥಿಯಾಗು. ಇಂದ್ರನು ನಿನ್ನನ್ನು ನಿರೀಕ್ಷಿಸಿಕೊಂಡು ಇರುವನು' ಎಂದು ಹೇಳಿ ಆ ಮೃತನಾದ ಬ್ರಾಹ್ಮಣನನ್ನೂ ಬದುಕಿಸಿ ಎಬ್ಬಿಸಿ ಅವನಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ಅವನನ್ನು ಸತ್ಕರಿಸಿ ಕಳುಹಿಸಿ ಆ ಸ್ಥಳದಿಂದ ಋಷಿಗಳು ಅಗ್ನಿಹೋತ್ರವನ್ನು ಮಾಡುತ್ತಿರುವ ಸ್ಥಳಕ್ಕೆ ಹೋದನು. ಘಂಟಾಕರ್ಣನೂ ಅವನ ತಮ್ಮನೂ ಸ್ವರ್ಗಕ್ಕೆ ಹೋದರು.



# ಋಷಿಮುನಿ ಪರಿಚ್ಛೇದ

## ಕಶ್ಯಪರ ಮಹಿಮೆ [1]

ವಾಯುದೇವರು ಕಾರ್ತವೀರ್ಯಾರ್ಜುನನೊಡನೆ ಹೇಳಿದರು. 'ಪೂರ್ವದಲ್ಲಿ ಅಂಗ ಎಂಬ ರಾಜನು ಈ ಭೂಮಿಯನ್ನು ಬ್ರಾಹ್ಮಣರಿಗೆ ದಕ್ಷಿಣೆಯನ್ನಾಗಿ ಕೊಡಬೇಕೆಂದು ಯೋಚಿಸಿದನು. ಆಗ ಭೂದೇವಿಯು 'ಈ ರಾಜನು ಎಲ್ಲಾ ಪ್ರಾಣಿಗಳಿಗೂ ಆಧಾರಭೂತಳಾದ ಬ್ರಹ್ಮದೇವರ ಮಗಳಾದ ನನ್ನನ್ನು ಬ್ರಾಹ್ಮಣರಿಗೆ ಕೊಡಲಿಕ್ಕೆ ಯೋಚಿಸುವನು. ನಾನು ಬ್ರಹ್ಮಲೋಕಕ್ಕೆ ಹೋಗುವೆನು. ಈ ರಾಜನು ರಾಷ್ಟ್ರದಿಂದ ಸಹಿತವಾಗಿ ನಾಶವನ್ನು ಹೊಂದಲಿ' ಎಂದು ಹೊರಟುಹೋದಳು. ತರುವಾಯ ಭೂದೇವಿಯು ಹೊರಟುಹೋದದ್ದನ್ನು ನೋಡಿ ಕಶ್ಯಪರು ತಾನೇ

1. ಮ.ಭಾ.ಅ.ಪ. ಅ.154

ಭೂಮಿಯಲ್ಲಿ ಪ್ರವೇಶಿಸಿ ಧರಿಸಿದರು. ತರುವಾಯ ಭೂಮಿಯಲ್ಲಿ ಚೆನ್ನಾಗಿ ಮರಗಿಡಗಳು ಬೆಳೆದವು. ಭೂಮಿಯಲ್ಲಿ ಬೇಕಾದ ಧರ್ಮಗಳು ನಡೆದವು. ಒಂದು ಭಯವೂ ಇರಲಿಲ್ಲ. ಈರೀತಿಯಾಗಿ ದೇವತೆಗಳ ಪರಿಮಾಣದಲ್ಲಿ ಮೂವತ್ತು ಸಾವಿರ ವರ್ಷ ಕಶ್ಯಪರೇ ಭೂಮಿಯನ್ನು ಧರಿಸುತ್ತಾ ಇದ್ದರು. ತರುವಾಯ ಭೂದೇವಿಯು ಬಂದ ಕಶ್ಯಪರಿಗೆ ನಮಸ್ಕರಿಸಿ ಕಶ್ಯಪರ ಮಗಳಾದಳು. ಆದುದರಿಂದ ಭೂದೇವಿಗೆ ಕಾಶ್ಯಪಿಯೆಂಬ ಹೆಸರಾಯಿತು. ಈರೀತಿಯಾಗಿ ಬ್ರಾಹ್ಮಣರಾದ ಕಶ್ಯಪರು ಇದ್ದರು. ಕಾರ್ತವೀರ್ಯಾರ್ಜುನ! ಕಶ್ಯಪರಿಗೆ ಸಮಾನನಾದ ಕ್ಷತ್ರಿಯನನ್ನು ಹೇಳು' ಎಂದು ವಾಯುದೇವರು ಹೇಳಿದರು. ಕಾರ್ತವೀರ್ಯನು ಸುಮ್ಮನೆ ಆದನು.



## ಉಚಥ್ಯರ ಮಹಿಮೆ[1]

ಮತ್ತೂ ವಾಯುದೇವರು ಹೇಳಿದರು. 'ಕಾರ್ತವೀರ್ಯನೇ! ಉಚಥ್ಯರ ಮಹಿಮೆಯನ್ನು ಕೇಳು. ಚಂದ್ರನಿಗೆ ಭದ್ರಾ ಎಂದು ಹೆಸರುಳ್ಳ ಪರಮಸುಂದರಿಯಾದ ಮಗಳಿದ್ದಳು. ಚಂದ್ರನು ಅವಳಿಗೆ ಉಚಥ್ಯರು ಸರಿಯಾದ ಪತಿಯೆಂದು ತಿಳಿದುಕೊಂಡನು. ಆ ಭದ್ರೆಯೂ ಉಚಥ್ಯರನ್ನು ಮದುವೆಯಾಗಬೇಕು ಎಂದು ಕಠಿಣವಾದ ತಪಸ್ಸನ್ನು ಮಾಡಿದಳು. ತರುವಾಯ ಚಂದ್ರನು ಉಚಥ್ಯರನ್ನು ಕರೆದು ಮದುವೆಮಾಡಿಕೊಟ್ಟನು. ಅವರು ಸ್ವೀಕರಿಸಿದರು. ಆ ಭದ್ರೆಯನ್ನು ವರುಣದೇವರು ಮೊದಲೇ ಆಸೆಪಟ್ಟಿದ್ದರು. ವರುಣದೇವರು ವನಪ್ರಸ್ಥ ಎಂಬ ಸ್ಥಳಕ್ಕೆ ಹೋಗಿ ಯಮುನೆಯಲ್ಲಿ ಆ ಭದ್ರೆಯನ್ನು ಅಪಹಾರ ಮಾಡಿಕೊಂಡು ತನ್ನ ಪುರಕ್ಕೆ ಕರೆದುಕೊಂಡು ಹೋದರು. ಅತಿಮನೋಹರವಾದ ತನ್ನ ಪಟ್ಟಣದಲ್ಲಿ ಅವಳೊಡನೆ ಸಂತೋಷದಿಂದ ಇದ್ದರು.

ನಾರದರು ಹೋಗಿ ಈರೀತಿಯಾಗಿ ವರುಣದೇವರು ಭದ್ರೆಯನ್ನು ಅಪಹಾರ ಮಾಡಿಕೊಂಡು ಹೋದ ವಿಷಯವನ್ನು ಉಚಥ್ಯರೊಡನೆ ತಿಳಿಸಿದರು. ಉಚಥ್ಯರು ನಾರದರೊಡನೆ ''ನೀವು ಹೋಗಿ ವರುಣದೇವರೊಡನೆ ಈರೀತಿಯಾಗಿ ಕಠಿಣವಾದ ಮಾತನ್ನು ಹೇಳಿರಿ. 'ನನ್ನ ಮಾತಿನಿಂದ ನನ್ನ ಹೆಂಡತಿಯನ್ನು ಬಿಡು. ಯಾಕೆ ಅಪಹರಿಸಿದ್ದಿ? ಲೋಕಪಾಲಕನಾಗಿದ್ದುಕೊಂಡು ಲೋಕಗಳನ್ನು ಹಾಳು

1. ಮ.ಭಾ.ಅ.ಪ. ಅ.154

ಮಾಡುವಿಯಾ? ಚಂದ್ರನು ನನಗೆ ಮದುವೆ ಮಾಡಿಕೊಟ್ಟಿರುವನು. ನೀನೇಕೆ ಅಪಹರಿಸಿದೆ?' ಎಂದು ಹೇಳಿರಿ'' ಎಂದು ಹೇಳಿ ಕಳುಹಿಸಿದರು. ಆಗ ನಾರದರು ಹೋಗಿ ವರುಣದೇವರೊಡನೆ 'ಉಚಥ್ಯರ ಹೆಂಡತಿಯನ್ನು ಯಾಕೆ ಅಪಹರಿಸಿದಿ? ಬಿಟ್ಟು ಬಿಡು' ಎಂದು ಹೇಳಿದರು. ಅದಕ್ಕೆ ವರುಣದೇವರು 'ಇವಳು ನನಗೆ ಪ್ರಿಯಳಾದವಳು. ನಾನು ಬಿಡಲಾರೆನು' ಎಂದನು.

ಆಗ ನಾರದರು ಉಚಥ್ಯರ ಬಳಿಗೆ ಬಂದು 'ವರುಣದೇವರು ನನ್ನ ಕುತ್ತಿಗೆಗೆ ಕೈಹಾಕಿ ದೂಡಿದರು. ನಿಮ್ಮ ಹೆಂಡತಿಯನ್ನು ಅವರು ಕೊಡಲಾರರು. ನೀವು ಮಾಡುವ ಕಾರ್ಯವನ್ನು ಮಾಡಿರಿ' ಎಂದು ಹೇಳಿದರು. ನಾರದರ ಮಾತನ್ನು ಕೇಳಿ ಉಚಥ್ಯರು ಕೋಪದಿಂದ ಜ್ವಲಿಸಿದರು. ತನ್ನ ತೇಜಸ್ಸಿನಿಂದ ಸಮುದ್ರದ ನೀರನ್ನೆಲ್ಲಾ ಕುಡಿದರು. ಆಗ ಮಿತ್ರರಿಂದ ಪ್ರಾರ್ಥಿತರಾದರೂ ವರುಣದೇವರು ಭದ್ರೆಯನ್ನು ಬಿಡಲೇ ಇಲ್ಲ. ತರುವಾಯ ಉಚಥ್ಯರು ಕೋಪಿಸಿಕೊಂಡು ಭೂಮಿಯೊಡನೆ ಸ್ಥಳವನ್ನು ತೋರಿಸು ಎಂದರು. ಭೂಮಿಯು ಮೇಲೆ ಬಂದಿತು. ಸಮುದ್ರವು ದೂರಕ್ಕೆ ಸರಿಯಿತು. ಅದು ಒಂದೂ ಬೆಳೆಸು ಆಗದ ಪ್ರದೇಶವಾಯಿತು. ತರುವಾಯ ನದಿಯೊಡನೆ 'ಸರಸ್ವತಿ! ನೀನು ಅದೃಶ್ಯಳಾಗಿ ಮರುಪ್ರದೇಶಕ್ಕೆ ಹೋಗು. ನೀನು ಬಿಟ್ಟ ಸ್ಥಳವು ಅಪುಣ್ಯಭೂಮಿಯಾಗಲಿ ಎಂದರು. ತರುವಾಯ ಆಪ್ರದೇಶವೆಲ್ಲ ಪುಡಿಪುಡಿಯಾಗಲು ವರುಣದೇವರು ಭದ್ರೆಯನ್ನು ಕರೆದುಕೊಂಡು ಬಂದು ಉಚಥ್ಯರಿಗೆ ಒಪ್ಪಿಸಿ ಮರೆಹೊಂದಿದರು. ಉಚಥ್ಯರು ಪತ್ನಿಯನ್ನು ಹೊಂದಿ ಸಂತೋಷವುಳ್ಳವರಾದರು. ಮಹಾತೇಜಸ್ವಿಯಾದ ಉಚಥ್ಯರು ತನ್ನ ಪತ್ನಿಯನ್ನು ಹೊಂದಿ ವರುಣದೇವರೊಡನೆ ನೀನು ಕೂಗುತ್ತಿರಲು ಇವಳನ್ನು ತಪಸ್ಸಾಮರ್ಥ್ಯ ದಿಂದ ಪಡೆದಿರುವೆನು ಎಂದು ಹೇಳಿ ಭದ್ರೆಯನ್ನು ಕರೆದುಕೊಂಡು ತನ್ನ ಮನೆಗೆ ಹೋದರು. ಬ್ರಾಹ್ಮಣೋತ್ತಮರಾದ ಉಚಥ್ಯರು ಈರೀತಿಯಿಂದ ಮಹಿಮೆಉಳ್ಳವ ರಾಗಿದ್ದರು. ಉಚಥ್ಯರಂತೆ ಉತ್ತಮನಾದ ಕ್ಷತ್ರಿಯನನ್ನು ಹೇಳು ನೋಡೋಣ'' ಎಂದು ಹೇಳಿದರು. ಕಾರ್ತವೀಯನು ಸುಮ್ಮನೆ ಆದನು.



# ಅಗಸ್ತ್ಯರ ಮತ್ತು ವಸಿಷ್ಠರ ಮಹಿಮೆ [1]

ವಾಯುದೇವರು ಮತ್ತೂ ಹೇಳಿದರು. 'ಪೂರ್ವದಲ್ಲಿ ದೇವತೆಗಳು ಅಸುರರಿಂದ ಸೋತುಹೋದವರಾಗಿ ಉತ್ಸಾಹ ರಹಿತರಾದರು. ದೇವತೆಗಳಿಗಾಗಿ ಮಾಡುವ ಯಜ್ಞಗಳೂ ಪಿತೃಗಳಿಗೆ ಮಾಡುವ ಶ್ರಾದ್ಧಗಳೂ ಮನುಷ್ಯರು ಮಾಡುವ ಎಲ್ಲಾ ಸತ್ಕರ್ಮಗಳೂ ದಾನವರಿಂದ ನಿಂತುಹೋದವು. ದೇವತೆಗಳು ಐಶ್ವರ್ಯಭ್ರಷ್ಟರಾಗಿ ಭೂಮಿಯಲ್ಲಿ ಸಂಚರಿಸಿದರು. ತರುವಾಯ ಒಂದು ದಿವಸದಲ್ಲಿ ಸೂರ್ಯನಂತೆ ಪ್ರಕಾಶಿಸುತ್ತಾ ಇದ್ದ ಮಹಾವ್ರತವನ್ನು ಮಾಡಿರುವ ಅಗಸ್ತ್ಯರನ್ನು ನೋಡಿದರು. ದೇವತೆಗಳು ಅವರಿಗೆ ನಮಸ್ಕರಿಸಿ ಕುಶಲಪ್ರಶ್ನೆಯನ್ನು ಮಾಡಿ ಅನಂತರದಲ್ಲಿ ಅವರೊಡನೆ ನಾವು ದಾನವರೊಡನೆ ಯುದ್ಧದಲ್ಲಿ ಸೋತುಹೋದವರಾಗಿ ಐಶ್ವರ್ಯದಿಂದ ಭ್ರಷ್ಟರಾಗಿರುವೆವು. ನಮ್ಮ ಭಯವನ್ನು ನೀವು ಪರಿಹರಿಸಬೇಕು ಎಂದರು.

ಆಗ ಭಗವದನುಗ್ರಹಕ್ಕೆ ಪಾತ್ರರಾದ ಅಗಸ್ತ್ಯರು ಕೋಪಿಸಿಕೊಂಡರು. ಪ್ರಲಯಕಾಲದ ಅಗ್ನಿಯಂತೆ ಜ್ವಲಿಸಿದರು. ಅವರ ತೇಜಸ್ಸಿನಿಂದ ಸಾವಿರಾರು ಜನ ದಾನವರು ಸುಡಲ್ಪಟ್ಟವರಾಗಿ ಅಂತರಿಕ್ಷದಿಂದ ಕೆಳಗೆ ಬಿದ್ದರು. ಅನೇಕರು ಸಂತಪ್ತರಾಗಿ ಎರಡುಲೋಕಗಳನ್ನೂ ಬಿಟ್ಟು ದಕ್ಷಿಣದಿಕ್ಕಿಗೆ ಓಡಿದರು. ಬಲಿಯೊಬ್ಬನು ಭೂಮಿಯಲ್ಲಿ ಇದ್ದುಕೊಂಡು ಅಶ್ವಮೇಧಯಾಗವನ್ನು ಮಾಡುತ್ತಿದ್ದನು. ಅವನು ಇತರ ಅಸುರರು ಭೂಮಿಯಲ್ಲಿ ಇದ್ದವರೂ ಕೆಳಗೆ ಇದ್ದವರೂ ಅಗಸ್ತ್ಯರಿಂದ ಸುಟ್ಟುಹೋದರು. ಲೋಕಭ್ರಷ್ಟರಾದ ದೇವತೆಗಳು ಪುನಃ ಲೋಕಗಳನ್ನು ಹೊಂದಿದರು. ಆಮೇಲೆ ದೇವತೆಗಳು ಅಗಸ್ತ್ಯರೊಡನೆ ಇನ್ನೂ ಭೂಮಿಯಲ್ಲಿರುವ ಎಲ್ಲಾ ಅಸುರರನ್ನು ಕೊಲ್ಲಬೇಕೆಂದು ಹೇಳಿದರು. ಅದಕ್ಕೆ ಅವರು ಇನ್ನೂ ನಾಶಮಾಡಿದರೆ ನನ್ನ ತಪಸ್ಸೆಲ್ಲಾ ನಾಶವಾಗುವುದು. ಆದುದರಿಂದ ಇನ್ನು ನಾಶಮಾಡಲಾರೆನು ಎಂದರು. ಈರೀತಿಯಾಗಿ ಅಗಸ್ತ್ಯರು ತಪಸ್ಸಿನ ಸಾಮರ್ಥ್ಯದಿಂದ ದಾನವರೆಲ್ಲರೂ ಸುಟ್ಟುಹೋದರು. ಈಪ್ರಕಾರವಾಗಿ ಅಗಸ್ತ್ಯರು ಮಹಿಮೆಯುಳ್ಳವರಾಗಿದ್ದರು. ಇವರಂತೆ ಇರುವ ಒಬ್ಬ ಕ್ಷತ್ರಿಯನನ್ನು ಹೇಳು' ಎಂದು ವಾಯುದೇವರು ಹೇಳಲು ಕಾರ್ತವೀರ್ಯಾರ್ಜುನನು ಸುಮ್ಮನೆ ಆದನು.

ವಾಯುದೇವರು ಪುನಃ ಹೇಳಿದರು. 'ರಾಜನೇ! ಮಹಾನುಭಾವರಾದ

1. ಮ.ಭಾ.ಅ.ಪ. ಅ.155

ವಸಿಷ್ಠರ ಮಹಿಮೆಯನ್ನು ಕೇಳು. ದೇವತೆಗಳು ಗಂಗಾತೀರದಲ್ಲಿ ವೈಖಾನಸ ಎಂಬ ಸರೋವರದ ಬಳಿಯಲ್ಲಿ ಮನಸ್ಸಿನಿಂದ ವಸಿಷ್ಠರನ್ನು ಯೋಚಿಸಿ ಸತ್ರಯಾಗವನ್ನು ಮಾಡಿದರು. ಯಾಗಮಾಡುತ್ತಾ ಇದ್ದ ದೀಕ್ಷಿತರಾದ ಅವರನ್ನು ನೋಡಿ ಪರ್ವತದಂತೆ ಇರುವ ಬಲಿ ಎಂಬ ಹೆಸರುಳ್ಳ ಅನೇಕ ರಾಕ್ಷಸರು ಕೊಲ್ಲಲಿಕ್ಕೆ ಇಚ್ಛೆಸಿದರು. ಅಲ್ಲಿ ಹತ್ತಿರದಲ್ಲಿಯೇ ಬ್ರಹ್ಮದೇವರ ವರವುಳ್ಳ ಸರೋವರವಿದ್ದಿತು. ಸತ್ತರಾಕ್ಷಸರು ಅಲ್ಲಿ ಮುಳುಗಿ ಬದುಕಿಬರುತ್ತಿದ್ದರು. ಹತ್ತು ಸಾವಿರ ರಾಕ್ಷಸರು ದೊಡ್ಡ ಪರ್ವತಗಳನ್ನೂ ಪರಿಘ ಎಂಬ ಆಯುಧಗಳನ್ನೂ ಮರಗಳನ್ನೂ ಹಿಡಿದುಕೊಂಡು ಯುದ್ಧಕ್ಕೆ ಬಂದರು. ಅವರಿಂದ ಪೀಡಿತರಾಗಿ ದೇವತೆಗಳು ಇಂದ್ರದೇವರನ್ನು ಮರೆಹೊಂದಿದರು. ಇಂದ್ರದೇವರೂ ಅವರಿಂದ ಪೀಡಿತರಾಗಿ ಭಗವದನುಗ್ರಹಪಾತ್ರರಾದ ವಸಿಷ್ಠರನ್ನು ಮರೆಹೊಂದಿದರು. ಈಗ ವಸಿಷ್ಠರು ಅವರಿಗೆ ಅಭಯಪ್ರದಾನವನ್ನು ಮಾಡಿದರು. ತರುವಾಯ ವಸಿಷ್ಠರು ದುಃಖಿತರಾದ ಎಲ್ಲಾ ದೇವತೆಗಳನ್ನೂ ನೋಡಿ ಜ್ವಲಿಸುವ ತನ್ನ ತೇಜಸ್ಸಿನಿಂದ ಎಲ್ಲರನ್ನೂ ಸುಟ್ಟುಹಾಕಿದರು. ಕೈಲಾಸಕ್ಕೆ ಹೊರಟಿರುವ ಗಂಗೆಯನ್ನು ಅಲ್ಲಿಗೆ ತರಿಸಿ ಆ ಗಂಗೆಯನ್ನು ಆ ಸರೋವರವನ್ನು ಸೀಳಿಹಾಕಿದರು. ಸೀಳಿಹೋದ ಸರೋವರದಿಂದ ಸರಯೂನದಿಯಾಯಿತು. ಬಲಿಷ್ಠರಾದ ಆ ರಾಕ್ಷಸರು ಸತ್ತ ಸ್ಥಳವು ಬಲಿನ ಎಂದು ಹೆಸರುಳ್ಳದ್ದಾಯಿತು. ಈರೀತಿಯಾಗಿ ಇಂದ್ರಾದಿ ದೇವತೆಗಳು ವಸಿಷ್ಠರಿಂದ ರಕ್ಷಿಸಲ್ಪಟ್ಟರು. ಬ್ರಹ್ಮದೇವರ ವರವನ್ನು ಪಡೆದಿರುವ ಅಸುರರು ಸಂಹೃತರಾದರು. ಈಪ್ರಕಾರವಾಗಿರುವ ವಸಿಷ್ಠರಿಗೆ ಸಮಾನನಾದ ಕ್ಷತ್ರಿಯನನ್ನು ಹೇಳು'' ಈರೀತಿಯಾಗಿ ವಾಯುದೇವರ ಮಾತನ್ನು ಕೇಳಿ ಕಾರ್ತವೀರ್ಯಾರ್ಜುನನು ಸುಮ್ಮನೆ ಆದನು.



## ಅತ್ರಿಚ್ಯವನರ ಮಹಿಮೆ [1]

ವಾಯುದೇವರು ಹೇಳಿದರು ''ಕಾರ್ತವೀರ್ಯಾಜುನ! ಅತ್ರಿ ಋಷಿಗಳ ಮಹಿಮೆಯನ್ನು ಕೇಳು. ದೇವತೆಗಳೂ ದಾನವರೂ ಭಯಂಕರವಾದ ಯುದ್ಧವನ್ನು ಮಾಡಿಕೊಂಡರು. ಆಗ ಸ್ವರ್ಭಾನುವೆಂದು ಹೆಸರುಳ್ಳ ರಾಹುವು ಬಾಣಗಳಿಂದ ಸೂರ್ಯಚಂದ್ರರನ್ನು ಬಡಿದನು. ಇದರಿಂದ ಕತ್ತಲೆಯಾಯಿತು. ಕತ್ತಲೆಯಲ್ಲಿ

1. ಮ.ಭಾ. ಅ.ಪ.ಅ. 156, 157

ದಾನವರು ದೇವತೆಗಳನ್ನು ಸಂಹರಿಸಲಿಕ್ಕೆ ಆರಂಭಿಸಿದರು. ಬಲಿಷ್ಠರಾದ ಅಸುರ ರಿಂದ ಬಡಿಯಲ್ಪಟ್ಟ ಕ್ಷೀಣಸಾಮರ್ಥ್ಯವುಳ್ಳ ದೇವತೆಗಳು ತಪಸ್ಸು ಮಾಡುತ್ತಿರುವ ಅತ್ರಿಋಷಿಗಳನ್ನು ನೋಡಿದರು. ತರುವಾಯ ದೇವತೆಗಳು ಜೀತೇಂದ್ರಿಯರಾದ ಕ್ರೋಧವನ್ನು ಜಯಿಸಿರುವ ಅವರೊಡನೆ ಚಂದ್ರಸೂರ್ಯರಿಬ್ಬರೂ ಅಸುರರಿಂದ ಬಾಣಗಳಿಂದ ಬಡೆಯಲ್ಪಟ್ಟರು. ಆದರಿಂದ ಕತ್ತಲೆಯಾಗಿ ಕತ್ತಲೆಯಲ್ಲಿ ನಾವು ಅಸುರರಿಂದ ಬಡಿಯಲ್ಪಡುತ್ತಿದ್ದೇವೆ. ಶಾಂತಿಯನ್ನು ಹೊಂದಲಿಲ್ಲ. ನಮ್ಮನ್ನು ಭಯದಿಂದ ಕಾಪಾಡಬೇಕು' ಎಂದರು.

ಅದಕ್ಕೆ ಅತ್ರಿ ಋಷಿಗಳು ನಿಮ್ಮನ್ನು ಹೇಗೆ ರಕ್ಷಣೆ ಮಾಡಲಿ ಎಂದು ಕೇಳಿದರು. 'ಸೂರ್ಯನಂತೆ ಚಂದ್ರನಂತೆ ಪ್ರಕಾಶವನ್ನು ಉಂಟುಮಾಡಿ ಕತ್ತಲೆಯನ್ನು ಪರಿಹರಿಸಬೇಕು' ಎಂದು ದೇವತೆಗಳು ಹೇಳಿಕೊಂಡರು. ಈರೀತಿಯಾಗಿ ಹೇಳಲು ಆಗ ಅತ್ರಿಋಷಿಗಳು ಸೂರ್ಯನೂ ಚಂದ್ರನೂ ಅತಿಪ್ರಕಾಶರಹಿತರಾಗಿರುವುದನ್ನು ನೋಡಿ ತಪಃಸಾಮರ್ಥ್ಯದಿಂದ ಪ್ರಕಾಶವನ್ನು ಉಂಟುಮಾಡಿದರು. ಜಗತ್ತಿನಲ್ಲಿ ಕತ್ತಲೆಯನ್ನೆಲ್ಲಾ ಪರಿಹರಿಸಿದರು. ತನ್ನ ತೇಜಸ್ಸಿನಿಂದ ದೇವತೆಗಳ ಶತ್ರುಸಮೂಹ ಗಳನ್ನು ಜಯಿಸಿದರು. ಅತ್ರಿಗಳಿಂದ ದಗ್ಧರಾದ ರಾಕ್ಷಸರನ್ನು ಅತ್ರಿಗಳಿಂದ ರಕ್ಷಿತರಾಗಿ ದೇವತೆಗಳು ಸಂಹರಿಸಿದರು. ಸೂರ್ಯನಿಗೆ ಪ್ರಕಾಶವು ಬರುವಂತೆ ಮಾಡಿದರು. ದೇವತೆಗಳನ್ನು ರಕ್ಷಿಸಿದರು. ಇಂತಹ ಅತ್ರಿಋಷಿಗಳಂತೆ ಇರುವ ಅಥವಾ ಅವರಿಗಿಂತ ಅಧಿಕನಾದ ಕ್ಷತ್ರಿಯನನ್ನು ಹೇಳು' ಎಂದು ವಾಯುದೇವರು ಹೇಳಲು ಕಾರ್ತವೀರ್ಯನು ಸುಮ್ಮನೆ ಇದ್ದನು. ಮತ್ತೂ ವಾಯುದೇವರು ಹೇಳಿದರು—

''ಇನ್ನು ಚ್ಯವನಋಷಿಗಳ ಮಹಿಮೆಯನ್ನು ಹೇಳುವೆನು. ಕೇಳು. ಚ್ಯವನ ಋಷಿಗಳು ಅಶ್ವಿನೀದೇವತೆಗಳೊಡನೆ ಪ್ರತಿಜ್ಞೆ ಮಾಡಿ ಇಂದ್ರದೇವರೊಡನೆ 'ನೀವು ದೇವತೆಗಳಿಂದ ಸಹಿತರಾಗಿ ಅಶ್ವಿನೀದೇವತೆಗಳಿಗೆ ಸೋಮಪಾನವನ್ನು ಮಾಡಿಸ ಬೇಕು' ಎಂದು ಹೇಳಿದರು. ಇಂದ್ರದೇವರು 'ಅಶ್ವಿನೀದೇವತೆಗಳು ನಿಂದ್ಯರು. ಅವರು ಸೋಮಪಾನ ಮಾಡುವುದು ಹೇಗೆ ಆಗುವುದು'' ಅವರು ದೇವತೆ ಗಳೆಲ್ಲರಿಂದಲೂ ನಿಂದ್ಯರು. ಅಶ್ವಿನೀದೇವತೆಗಳೊಡನೆ ಸೋಮಪಾನ ಮಾಡಲಿಕ್ಕೆ ಇಚ್ಛಿಸಲಾರೆವು. ಬೇರೆ ಯಾವ ಕಾರ್ಯವನ್ನು ಹೇಳಿದರೂ ನಾವು ಮಾಡುವೆವು' ಎಂದರು.

ಚ್ಯವನರು–'ಅಶ್ವಿನೀದೇವತೆಗಳೂ ದೇವತೆಗಳೇ. ಸೂರ್ಯದೇವರ ಮಕ್ಕಳು. ಆದುದರಿಂದ ಅವರೊಡನೆ ನೀವು ಸೋಮಪಾನಮಾಡಬೇಕು. ದೇವತೆಗಳೇ!

ನಾನು ಹೇಳಿದಂತೆ ಮಾಡಿದರೇನೇ ನಿಮಗೆ ಕ್ಷೇಮವಾಗುವುದು. ಇಲ್ಲದಿದ್ದರೆ ಆಗಲಾರದು' ಎಂದರು.

ಇಂದ್ರದೇವರು 'ಅಶ್ವಿನೀದೇವತೆಗಳೊಡನೆ ಸೋಮಪಾನವನ್ನು ಮಾಡಲಿಕ್ಕೆ ನನಗೆ(ನಾನು) ಇಚ್ಛಿಸಲಾರೆನು. ಬೇರೆ ಯಾರು ಬೇಕಾದರೂ ಮಾಡಲಿ. ನಾನು ಮಾಡಲಾರೆನು' ಎಂದರು.

ಚ್ಯವನರು 'ನೀನು ಮಾಡದಿದ್ದರೆ ಬಲಾತ್ಕಾರದಿಂದ ನಾನು ಮಾಡಿಸುವೆನು' ಎಂದರು. ತರುವಾಯ ಚ್ಯವನರು ಅಶ್ವಿನಿದೇವತೆಗಳ ಹಿತಕ್ಕಾಗಿ ಕರ್ಮವನ್ನು ಆರಂಭಿಸಿದರು. ದೇವತೆಗಳೆಲ್ಲರೂ ಭಗವದ್ವಿಷಯಕ ಮಂತ್ರಬಲದಿಂದ ತಿರಸ್ಕೃತ ರಾದರು. ಅದನ್ನು ನೋಡಿ ಇಂದ್ರದೇವರು ಕ್ರೋಧ ಮೂರ್ಛಿತರಾಗಿ ದೊಡ್ಡ ಪರ್ವತವನ್ನು ವಜ್ರಾಯುಧವನ್ನು ಹಿಡಿದುಕೊಂಡು ಬಂದರು. ಚ್ಯವನರು ಭಗವದನುಗ್ರಹದಿಂದ ನೀರನ್ನು ಎರಚಿ ವಜ್ರದಿಂದಲೂ ಪರ್ವತನಿಂದಲೂ ಸಹಿತರಾದ ಇಂದ್ರದೇವರನ್ನು ಸ್ತಂಭನೆ ಮಾಡಿದರು. ತರುವಾಯ ಘೋರ ಶತ್ರುವಾದ ಮದ ಎಂಬವನನ್ನು ಆಹುತಿಯಿಂದ ಉಂಟುಮಾಡಿದರು. ಅವನು ಬಾಯಿತೆರೆದುಕೊಂಡು ಬಂದನು. ಅವನಿಗೆ ಸಾವಿರಹಲ್ಲುಗಳು ನೂರುಯೋಜನ ವಿದ್ದವು. ಕೋರೆಹಲ್ಲುಗಳು ಇನ್ನೂರು ಯೋಜನಗಳಿದ್ದವು. ತಿಮಿಯಬಾಯಿಗೆ ಹೊಂದಿದ ಮೀನುಗಳಂತೆ ಅವನ ನಾಲಿಗೆಯು ಬುಡದಲ್ಲಿ ದೇವತೆಗಳೆಲ್ಲರೂ ಇದ್ದರು. ಆಗ ದೇವತೆಗಳು ಇಂದ್ರದೇವರೊಡನೆ ಈ ಮುನಿಗಳಿಗೆ ನಮಸ್ಕರಿಸು. ನಾವು ಅಶ್ವಿನೀದೇವತೆಗಳೊಡನೆ ಸೋಮಪಾನವನ್ನು ಮಾಡುವ ಎಂದರು. ತರುವಾಯ ಇಂದ್ರದೇವರು ಚ್ಯವನನಿಗೆ ನಮಸ್ಕರಿಸಿ ಅಶ್ವಿನೀದೇವತೆಗಳೊಡನೆ ಸೋಮಪಾನ ಮಾಡಿದರು. ತರುವಾಯ ಚ್ಯವನರು ಮದವನ್ನು ಪಗಡೆ ಆಟದಲ್ಲಿ ಮೃಗಬೇಟೆಯಲ್ಲಿ ಮದ್ಯಪಾನಲ್ಲಿ ಸ್ತ್ರೀಯರಲ್ಲಿ ವಿಭಾಗ ಮಾಡಿದರು. ಆದುದರಿಂದ ಜನರು ಈ ದೋಷದಿಂದ ನಾಶವನ್ನು ಹೊಂದುವರು. ಇಂತಹ ಕ್ಷತ್ರಿಯನನ್ನು ಹೇಳು' ಎನ್ನಲು ಕಾರ್ತವೀಯನು ಸುಮ್ಮನೆ ಆದನು.



# ವಿಶ್ವಾಮಿತ್ರರ ಕಥೆ [1]

ಕುಶಿಕರಾಜನಿಗೆ ಗಾಧಿ ಎಂಬ ಮಗನು ಹುಟ್ಟಿದನು. ಇಂದ್ರದೇವರೇ ಗಾಧಿ ಎಂಬ ಹೆಸರಿನಿಂದ ಅವತರಿಸಿದರು. ಗಾಧಿರಾಜನಿಗೆ ಮಕ್ಕಳಿರಲಿಲ್ಲ. ಅವನು ವನವಾಸ ಮಾಡಿದನು. ವನದಲ್ಲಿ ಇರುವಾಗ ಸತ್ಯವತೀ ಎಂಬ ಅತ್ಯಂತ ರೂಪವತಿಯಾದ ಮಗಳು ಹುಟ್ಟಿದಳು. ತರುವಾಯ ಮಹಾತಪಸ್ವಿಯಾದ ಚ್ಯವನರ ಮಗನಾದ ಋಚೀಕ ಋಷಿಗಳು ಬಂದು ಆ ಸತ್ಯವತಿಯನ್ನು ತನಗೆ ಮದುವೆ ಮಾಡಿಕೊಡ ಬೇಕೆಂದು ಕೇಳಿದರು. ಗಾಧಿರಾಜನು ಅವರು ದರಿದ್ರರು ಎಂದು ತಿಳಿದುಕೊಂಡು ಸಾಧ್ಯವಿಲ್ಲ ಎಂದನು. ಆಮೇಲೆ ನನಗೆ ಸರಿಯಾಗಿ ಕನ್ಯಾಶುಲ್ಕವನ್ನು ಕೊಡಿರಿ. ನನ್ನ ಮಗಳನ್ನು ಮದುವೆಯಾಗಿರಿ ಎಂದನು. ಆಗ ಋಚೀಕರು 'ರಾಜ ಶ್ರೇಷ್ಠನೇ! ನೀನು ನಿನ್ನ ಮಗಳಿಗೆ ಕೊಡಬೇಕಾದ ಶುಲ್ಕವೇನು? ಸಂದೇಹವಿಲ್ಲದೆ ಹೇಳು' ಎಂದರು. ಗಾಧಿರಾಜನು ಒಂದು ಕಿವಿ ಮಾತ್ರ ಕಪ್ಪಾಗಿ ಉಳ್ಳ ಚಂದ್ರನಂತೆ ಪ್ರಕಾಶವುಳ್ಳ ವಾಯುವೇಗವುಳ್ಳ ಸಾವಿರ ಕುದುರೆಗಳನ್ನುತಂದುಕೊಡಬೇಕು ಎಂದನು.

ತರುವಾಯ ಋಚೀಕರು ಹೋಗಿ ವರುಣದೇವರೊಡನೆ 'ಒಂದು ಕಿವಿಯು ಕಪ್ಪಾಗಿ ಉಳ್ಳ ಬೆಳ್ಳಗಿರುವ ವಾಯುವೇಗವುಳ್ಳ ಸಾವಿರಕುದುರೆಗಳನ್ನು ನನಗೆ ಕೊಡಬೇಕು' ಎಂದು ಕೇಳಿದರು. ಅದಕ್ಕೆ ವರುಣದೇವರು 'ಹಾಗೆಯೇ ಆಗಲಿ' ಎಲ್ಲಿ ನಿಮ್ಮ ಇಚ್ಛೆಯಿದೆಯೋ ಅಲ್ಲಿ ಕುದುರೆಗಳು ಮೇಲೆ ಬರುವುವು' ಎಂದರು. ಅವರ ಇಚ್ಛೆಯಂತೆ ಕಾನ್ಯಕುಬ್ಜದ ಸಮೀಪದಲ್ಲಿ ಗಂಗಾಜಲದಿಂದ ಸಹಸ್ರ ಕುದುರೆಗಳು ಮೇಲಕ್ಕೆ ಬಂದವು. ಆ ಸ್ಥಳಕ್ಕೆ ಈಗಲೇ ಅಶ್ವತೀರ್ಥ ಎಂಬ ಹೆಸರಿರುವುದು. ತರುವಾಯ ಋಚೀಕರು ಪ್ರೀತಿಯಿಂದ ಸಾವಿರ ಕುದುರೆಗಳನ್ನು ಗಾಧಿರಾಜನಿಗೆ ತಂದುಕೊಟ್ಟರು. ರಾಜನು ಆಶ್ಚರ್ಯವುಳ್ಳವನಾಗಿ ಇನ್ನು ಮಗಳನ್ನು ಕೊಡದಿದ್ದರೆ ಶಾಪವನ್ನು ಕೊಡುವರು ಎಂಬ ಭಯದಿಂದ ಮಗಳನ್ನು ಅಲಂಕರಿಸಿ ಶಾಸ್ತ್ರದಲ್ಲಿ ಹೇಳಿದ ಪ್ರಕಾರವಾಗಿ ಮದುವೆಮಾಡಿಕೊಟ್ಟನು. ಸತ್ಯವತಿಯು ಋಚೀಕರನ್ನು ಪತಿಯನ್ನಾಗಿ ಹೊಂದಿ ಸಂತೋಷವನ್ನು ಹೊಂದಿದಳು. ಋಚೀಕರೂ ಸತ್ಯವತಿಯ ನಡತೆಯಿಂದ ಸಂತೋಷಪಟ್ಟರು. ನಿನಗೆ ಬೇಕಾದವನನ್ನು ಕೇಳಿಕೊ ಎಂದರು. ಅವಳು ಹೋಗಿ ಈ ವಿಷಯವನ್ನು ತಾಯಿಯ ಹತ್ತಿರ ತಿಳಿಸಿದಳು. ಆಗ ತಾಯಿಯು ಮುಖವನ್ನು ತಗ್ಗಿಸಿಕೊಂಡು ಸ್ವಲ್ಪಹೊತ್ತು ಇದ್ದು 'ಮಗಳೇ! ನನಗೂ ನಿನ್ನ ಗಂಡನು

1. ಮ.ಭಾ.ಅ.ಪ.ಅ.4

ಅನುಗ್ರಹ ಮಾಡಬೇಕು. ನನಗೂ ಮಕ್ಕಳಾಗುವಂತೆ ಅನುಗ್ರಹಿಸಬೇಕು. ಅವರು ಮಹಾತಪಸ್ವಿಗಳು. ಸಮರ್ಥರು' ಎಂದು ಹೇಳಿದಳು. ಆಗ ಸತ್ಯವತಿಯು ಬೇಗನೇ ಗಂಡನಿದ್ದಲ್ಲಿಗೆ ಹೋಗಿ ತಾಯಿಯ ಪ್ರಾರ್ಥನೆಯನ್ನು ಹೇಳಿದಳು. ಆಗ ಋಚೀಕರು 'ನಿನ್ನ ತಾಯಿಯೂ ಬೇಗನೇ ಗುಣವಂತನಾದ ಮಗನನ್ನು ಹಡೆಯುವಳು. ನಿನ್ನ ಪ್ರೀತಿಯು ವ್ಯರ್ಥವಾಗಬಾರದು. ನಿನಗೂ ಕೂಡ ಗುಣವಂತನಾದ ಮಗನು ಹುಟ್ಟುವನು. ನಮ್ಮ ವಂಶಕ್ಕೆ ಕಾರಣನಾಗುತ್ತಾನೆ. ಋತುಸ್ನಾನ ಮಾಡಿದಮೇಲೆ ನಿನ್ನ ತಾಯಿಯು ಅಶ್ವತ್ಥವೃಕ್ಷವನ್ನು ಆಲಿಂಗಿಸಲಿ. ನೀನು ಅತ್ತಿಯ ಮರವನ್ನು ಆಲಿಂಗಿಸು. ಈಚರುಗಳನ್ನು ಅಭಿಮಂತ್ರಿಸಿದ್ದೇನೆ. ಈ ಚರುವನ್ನು ನೀನು ಸ್ವೀಕರಿಸು. ಆ ಚರುವನ್ನು ನಿನ್ನ ತಾಯಿಯು ಸ್ವೀಕರಿಸಲಿ. ನೀವಿಬ್ಬರೂ ಒಳ್ಳೇ ಮಕ್ಕಳನ್ನು ಹಡೆಯುವಿರಿ' ಎಂದರು.

ತರುವಾಯ ಸತ್ಯವತಿಯು ಸಂತೋಷವುಳ್ಳವಳಾಗಿ ತಾಯಿಯ ಬಳಿಗೆ ಹೋಗಿ ಎಲ್ಲಾ ವಿಷಯಗಳನ್ನೂ ತಿಳಿಸಿದಳು. ಆಗ ತಾಯಿಯು ಮಗಳೊಡನೆ 'ಮಗಳೆ! ತಾಯಿಯಾದ ನಾನು ಹೇಳುವಂತೆ ಮಾಡು. ತಾಯಿಯಾದ ನನ್ನ ಮಾತು ಪ್ರಮಾಣವಾಗಿದ್ದರೆ ನಿನಗೆ ಗಂಡನು ಕೊಟ್ಟ ಚರುವನ್ನು ನನಗೆ ಕೊಡು ನಿನಗೆ ಹೇಳಿದ ಮರವನ್ನೇ ನಾನು ಆಲಿಂಗಿಸುವೆನು. ಏಕೆಂದರೆ ಎಲ್ಲರೂ ತನ್ನ ಮಗನು ಶ್ರೇಷ್ಠನಾಗಿರಬೇಕೆಂದು ಯೋಚಿಸುವರು. ಅದೇ ಪ್ರಕಾರವಾಗಿ ನಿನ್ನ ಗಂಡನೂ ನಿನಗೆ ಶ್ರೇಷ್ಠನಾದ ಮಗನು ಹುಟ್ಟುವಂತೆ ಮಾಡಿರಬೇಕು. ಆದುದರಿಂದ ನಿನ್ನ ತಮ್ಮನು ಶ್ರೇಷ್ಠನಾದವನು ಹುಟ್ಟುವಂತೆ ನೋಡಿಕೊ. ಅದರಿಂದಲೇ ನನಗೆ ನಿನ್ನ ಚರುವಿನಲ್ಲಿ ಅಭಿಲಾಷೆಯು' ಎಂದಳು. ತರುವಾಯ ಅವರು ಹಾಗೆಯೇ ಮಾಡಿಕೊಂಡರು.

ತರುವಾಯ ಇಬ್ಬರೂ ಗರ್ಭಿಣಿಯರಾದರು. ಚ್ಯವನಪುತ್ರರಾದ ಋಚೀಕರು ಗರ್ಭಿಣಿಯಾದ ತನ್ನ ಪತ್ನಿಯನ್ನು ನೋಡಿದವರಾಗಿ ಸ್ವಲ್ಪ ದುಃಖಯುಕ್ತವಾದ ಮನಸ್ಸುಳ್ಳವರಾಗಿ 'ಚರುವನ್ನೂ ಮರವನ್ನೂ ನೀನು ವ್ಯತ್ಯಾಸಮಾಡಿ ಉಪ ಯೋಗಿಸಿದಿ. ನಾನು ನಿನ್ನ ಚರುವಿನಲ್ಲಿ ಸಂಪೂರ್ಣ ಬ್ರಹ್ಮತೇಜಸ್ಸನ್ನು ಇಟ್ಟಿದ್ದೆನು. ನಿನ್ನ ತಾಯಿಯ ಚರುವಿನಲ್ಲಿ ಕ್ಷತ್ರಿಯ ತೇಜಸ್ಸನ್ನು ಇಟ್ಟಿದ್ದೆನು. ನೀನು ಮೂರುಲೋಕ ಗಳಲ್ಲಿಯೂ ಪ್ರಸಿದ್ಧವಾದ ಗುಣವುಳ್ಳ ಬ್ರಾಹ್ಮಣನನ್ನು ಪಡೆಯಬೇಕು. ನಿನ್ನ ತಾಯಿಯು ಉತ್ತಮ ಕ್ಷತ್ರಿಯನನ್ನು ಹಡೆಯಬೇಕು ಎಂದು ಮಾಡಿದ್ದೆನು. ನೀನೂ ನಿನ್ನ ತಾಯಿಯೂ ವ್ಯತ್ಯಾಸ ಮಾಡಿಕೊಡಲು ಕಾರಣ ನಿನ್ನ ತಾಯಿಯು ಶ್ರೇಷ್ಠನಾದ ಬ್ರಾಹ್ಮಣನನ್ನು ಹಡೆಯುವಳು. ನೀನು ಉಗ್ರಕರ್ಮವುಳ್ಳ ಕ್ಷತ್ರಿಯನನ್ನು ಹಡೆಯುವಿ'

ಎಂದರು. ಅದನ್ನು ಕೇಳಿ ಸತ್ಯವತಿಯು ಶೋಕದಿಂದ ಮೂರ್ಛಿತಳಾಗಿ ಬಿದ್ದಳು. ಜ್ಞಾನವು ಬಂದಮೇಲೆ ಸತ್ಯವತಿಯು ಗಂಡನಿಗೆ ಶಿರಸಾ ನಮಸ್ಕಾರ ಮಾಡಿ 'ನನಗೆ ಅನುಗ್ರಹಮಾಡಬೇಕು. ನನಗೆ ಕ್ಷತ್ರಿಯ ಮಗನು ಹುಟ್ಟಬಾರದು. ನನ್ನ ಮೊಮ್ಮಗನು ಬೇಕಾದರ ಕ್ರೂರಕರ್ಮವುಳ್ಳವನಾಗಲಿ' ಎಂದು ಪ್ರಾರ್ಥಿಸಿಕೊಂಡಳು. ಅದಕ್ಕೆ ಮಹಾತಪಸ್ವಿಗಳಾದ ಋಚೀಕರು ಹಾಗೆಯೇ ಆಗಲಿ ಎಂದರು. ಆಮೇಲೆ ಸತ್ಯವತಿಯು ಜಮದಗ್ನಿ ಋಷಿಗಳನ್ನು ಹಡೆದಳು. ಗಾಧಿರಾಜನ ಹೆಂಡತಿಯು ವಿಶ್ವಾಮಿತ್ರರನ್ನು ಹಡೆದಳು. ತರುವಾಯ ವಿಶ್ವಾಮಿತ್ರರು ಮಹಾತಪಸ್ಸನ್ನು ಮಾಡಿ ಬ್ರಾಹ್ಮಣ್ಯವನ್ನು ಹೊಂದಿದರು. ಕ್ಷತ್ರಿಯರಾಗಿದ್ದ ಅವರು ಬ್ರಾಹ್ಮಣವಂಶಕ್ಕೆ ಕಾರಣ ರಾದರು. ಅವರಿಗೆ ಮಹಾನುಭಾವರಾದ ಮಹಾತಪಸ್ವಿಗಳಾದ ಬ್ರಾಹ್ಮಣವಂಶ ಅಭಿವೃದ್ಧಿಗೆ ಕಾರಣರಾದ ಮಧುಚ್ಛಂದ ದೇವರಾತ ಇತ್ಯಾದಿ ಮಕ್ಕಳು ಹುಟ್ಟಿದರು.



## ವಿಶ್ವಾಮಿತ್ರರೂ ಚಂಡಾಲನೂ [1]

ಪೂರ್ವದಲ್ಲಿ ತ್ರೇತಾದ್ವಾಪರಯುಗಗಳ ಸಂಧಿಕಾಲದಲ್ಲಿ ಹನ್ನೆರಡು ವರ್ಷಕಾಲ ಮಳೆಯು ಬರಲಿಲ್ಲ. ರಾತ್ರಿಯಲ್ಲಿ ಮಂಜೂಕೂಡ ಬೀಳಲಿಲ್ಲ. ನದಿಗಳೂ ಸರೋವರಗಳೂ ಭಾವಿಗಳೂ ಎಲ್ಲವೂ ಬತ್ತಿಹೋದವು. ಎಲ್ಲಾ ಸ್ಥಳದಲ್ಲಿಯೂ ನೀರು ಆರಿಹೋಯಿತು. ಅರವಟ್ಟಿಗೆಗಳಲ್ಲಿ ನೀರು ಕೊಡುವವರಿಲ್ಲ, ಯಜ್ಞ ಮಾಡುವವರಿಲ್ಲ. ಅಮಂಗಳರೂಪವಾಗಿತ್ತು. ಕೃಷಿಯಲ್ಲಿ ಗೋರಕ್ಷಣೆ ಮಾಡುವವ ರಿಲ್ಲ. ಅಂಗಡಿಯಿಲ್ಲ. ಮಹೋತ್ಸವಗಳು ಇರಲಿಲ್ಲ. ಎಲ್ಲಿ ನೋಡಿದರೂ ಸತ್ತವರ ಎಲುಬುಗಳು ಕಾಣಿಸುತ್ತಿದ್ದವು. ಊರು ಶೂನ್ಯವಾಗಿತ್ತು. ಗ್ರಾಮಗಳೆಲ್ಲಾ ಸುಟ್ಟು ಹೋಗಿದ್ದವು. ಕೆಲವು ಸ್ಥಳಗಳಲ್ಲಿ ಕಳ್ಳರಿಂದ ಕೆಲವು ಸ್ಥಳಗಳಲ್ಲಿ ಶೂರರಿಂದ ಕೆಲವು ಸ್ಥಳಗಳಲ್ಲಿ ರಾಜರಿಂದ ಪರಸ್ಪರ ಭಯದಿಂದಲೂ ಅನೇಕ ಸ್ಥಳಗಳು ನಿರ್ಜನ ಪ್ರದೇಶಗಳಾಗಿದ್ದವು. ದೇವಾಲಯವಿರಲಿಲ್ಲ. ಹುಡುಗರು ಇರಲಿಲ್ಲ. ಮುದುಕರು ಇರಲಿಲ್ಲ. ದನಗಳು ಮೇಕೆಗಳು ಒಂದೂ ಇರಲಿಲ್ಲ. ಎಲ್ಲಿ ನೋಡಿದರೂ ಹೆಣಗಳು ಕಾಣುತ್ತಿದ್ದವು. ಮನುಷ್ಯರೆಲ್ಲರೂ ಹಸಿವೆಯಿಂದ ಒಬ್ಬರನ್ನೊಬ್ಬರು ಪರಸ್ಪರ ಬಡೆದು ಕೊಂದು ತಿಂದುಕೊಳ್ಳಲಿಕ್ಕೆ ಆರಂಭಿಸಿದರು. ಋಷಿಗಳೆಲ್ಲಾ ತಮ್ಮ ನಿಯಮವನ್ನೆಲ್ಲಾ

1. ಮ.ಭಾ.ಶಾಂ.ಪ. ಅ.141

ಬಿಟ್ಟು ಅಗ್ನಿಹೋತ್ರವನ್ನೂ ದೇವರಪೂಜೆಯನ್ನು ಬಿಟ್ಟು ಆಶ್ರಮಗಳನ್ನು ಬಿಟ್ಟು ಓಡಲಿಕ್ಕೆ ಆರಂಭಿಸಿದರು. ಪೂಜ್ಯರಾದ ವಿಶ್ವಾಮಿತ್ರರು ಹೆಂಡತಿ ಮಕ್ಕಳನ್ನು ಎಲ್ಲಿಯೋ ಜನರ ಮಧ್ಯದಲ್ಲಿ ಬಿಟ್ಟು ಸಿಕ್ಕಿದ್ದನ್ನು ತಿನ್ನುತ್ತಾ ನಿಷಿದ್ಧ ಅನಿಷಿದ್ಧ ಎಂದು ನೋಡದೆ ತಿನ್ನುತ್ತಾ ಓಡುತ್ತಿದ್ದರು.

ಒಂದು ದಿನದಲ್ಲಿ ಹಸಿವೆಯಿಂದ ಬೀಳುತ್ತಾ ಏಳುತ್ತಾ ಪ್ರಾಣಿಗಳನ್ನು ಕೊಲ್ಲತಕ್ಕವರಾದ ಚಂಡಾಲರ ಮನೆಗೆ ಹೋದರು. ಒಡೆದು ಹೋದ ಗಡಿಗೆಗಳಿಂದ ಕೂಡಿದ, ನಾಯಿ ಮಾಂಸದಿಂದ ಅಲಂಕೃತವಾದ, ಹಂದಿಕತ್ತೆಗಳ ಎಲುಬುಗಳಿಂದ ಕೂಡಿದ್ದ, ಹೆಣಕ್ಕೆ ಹೊದಿಸಿದ ವಸ್ತ್ರದಿಂದ ಕೂಡಿದ, ಹಾವಿನ ತೊಗಲಿನಿಂದ ಅಲಂಕೃತವಾದ, ಕೋಳಿಗಳ ಕೂಗಿನಿಂದ ಕೂಡಿದ, ಕತ್ತೆಗಳ ಧ್ವನಿಯಿಂದ ಯುಕ್ತವಾದ, ಗೂಗೆಗಳ ಶಬ್ದಗಳಿಂದ ಕೂಡಿದ, ಪರಸ್ಪರ ಜಗಳಗಳಿಂದ ಕೂಡಿದ, ಅನೇಕ ನಾಯಿಗಳಿಂದ ಕೂಡಿದ, ಹೊಲೆಯರ ಮನೆಗಳನ್ನು ಹೊಂದಿ ಹಸಿವೆಯಿಂದ ಪೀಡಿತರಾದ, ವಿಶ್ವಾಮಿತ್ರರು ಆಹಾರವನ್ನು ಹುಡುಕಲು ಬಹಳ ಪ್ರಯತ್ನ ಮಾಡಿದರು. ಭಿಕ್ಷಾ ಕೇಳಿದರೂ ಒಂದಿಷ್ಟು ಮಾಂಸವನ್ನೋ ಹಣ್ಣನ್ನೋ ಗೆಡ್ಡೆಯನ್ನೋ ಯಾವುದನ್ನೂ ಹೊಂದಲಿಲ್ಲ. ಹಾ! ಬಹುಕಷ್ಟವು ಬಂದು ಸೇರಿತು ಎಂದು ಹೇಳುತ್ತಾ ಬಲವಿಲ್ಲದೆ ಹೊಲೆಯರ ಕೇರಿಯಲ್ಲಿ ಬಿದ್ದು ಬಿಟ್ಟರು. ವಿಶ್ವಾಮಿತ್ರರು ನಾನು ಏನು ಮಾಡಲಿ? ಹಸಿವೆಯಿಂದ ಪ್ರಾಣವು ಹೋಗುವುದಲ್ಲಾ! ಎಂದುಕೊಂಡರು. ಚಂಡಾಲನ ಮನೆಯಲ್ಲಿ ಆಗಲೇ ಶಸ್ತ್ರದಿಂದ ಸಾಯಲ್ಪಟ್ಟ ಒಂದು ನಾಯಿಯ ಕಟಿಯ (ಸೊಂಟದ) ಭಾಗವನ್ನು ನೋಡಿದರು. ಅದನ್ನು ನೋಡಿ ವಿಶ್ವಾಮಿತ್ರರು ಇದನ್ನು ಕದ್ದುಕೊಳ್ಳಬೇಕು. ಪ್ರಾಣಧಾರಣೆ ಮಾಡಲಿಕ್ಕೆ ಬೇರೆ ಉಪಾಯವೇ ಇಲ್ಲವಲ್ಲಾ! ಆಪತ್ತು ಬಂದ ಕಾಲದಲ್ಲಿ ಕದ್ದುಕೊಳ್ಳಬಹುದು ಎಂದು ಹೇಳುತ್ತಾರೆ. ಮೊದಲು ಹೀನರಾದವರ ಸೊತ್ತನ್ನು ಅಪಹಾರ ಮಾಡಬಹುದು. ಅದು ಸಿಗದಿದ್ದರೆ ಮಧ್ಯಮರ ಅದೂ ಸಿಗದಿದ್ದರೆ ಉತ್ತಮರ ವಸ್ತುವನ್ನು ಅಪಹರಿಸಬಹುದು. ಆದುದರಿಂದ ನಾನೀಗ ಈ ಚಂಡಾಲರ ಮಾಂಸವನ್ನು ಅಪಹರಿಸುವೆನು.

ಈರೀತಿಯಾಗಿ ಮನಸ್ಸಿನಲ್ಲಿ ಮಾಡಿಕೊಂಡು ಅಲ್ಲಿಯೇ ಮಲಗಿಕೊಂಡರು. ರಾತ್ರಿಯಾಗಲು ಎಲ್ಲರೂ ಮಲಗಿರಲು ವಿಶ್ವಾಮಿತ್ರರು ಮೆಲ್ಲನೆ ಎದ್ದು ಚಂಡಾಲನ ಮನೆಯ ಬಾಗಿಲಿಗೆ ಬಂದರು. ಆಗ ಚಂಡಾಲನು ಮಲಗಿದ್ದವನೇ 'ಯಾರು ನಾಯಿಯ ದೇಹವನ್ನು ಮುಟ್ಟುವುದು? ನಾನು ಎಚ್ಚರದಿಂದ ಇದ್ದೇನೆ. ನಿದ್ದೆ ಬಂದಿಲ್ಲ, ಕೊಂದು ಹಾಕುವೆನು' ಎಂದು ಹೇಳಿದನು. ವಿಶ್ವಾಮಿತ್ರರು ತಾನು

ಮಾಡಿದ ಆ ಕಾರ್ಯದಿಂದ ಭಯಉಳ್ಳವರಾಗಿ 'ನಾನು ವಿಶ್ವಾಮಿತ್ರನು ಹಸಿವೆಯಿಂದ ಪೀಡಿತನಾಗಿ ಬಂದಿರುವೆನು. ನನ್ನನ್ನು ಕೊಲ್ಲಬೇಡ' ಎಂದರು. ಆ ಮಾತನ್ನು ಕೇಳಿ ಚಂಡಾಲನು ಸಂಭ್ರಮದಿಂದ ತನ್ನ ಚಾಪೆಯಿಂದ ಎದ್ದು ಬಂದುಬಿಟ್ಟನು. ಅವನು ಕಣ್ಣಿನಲ್ಲಿ ನೀರನ್ನು ಸುರಿಸಿ ಬಹುಮಾನದಿಂದ ಕೈಮುಗಿದು ಸ್ವಾಮಿ! ರಾತ್ರಿಯಲ್ಲಿ ನೀವು ಏನು ಮಾಡುತ್ತಿರುವಿರಿ? ಎಂದು ಕೇಳಿದನು. ಅದಕ್ಕೆ ವಿಶ್ವಾಮಿತ್ರರು ನನಗೆ ಹಸಿವೆಯಿಂದ ಪ್ರಾಣವು ಹೋಗುತ್ತಾ ಇದೆ. ಹಸಿವೆಯಿಂದ ಸ್ಮೃತಿಯು ಹೋಗುತ್ತಾ ಇದೆ. ದುರ್ಬಲನಾಗಿದ್ದೇನೆ. ಭಕ್ಷಾಭಕ್ಷ್ಯ ರಹಿತನಾಗಿದ್ದೇನೆ. ಇದು ಅಧರ್ಮ ಎಂದು ತಿಳಿದುಕೊಂಡೇ ಆ ನಾಯಿಯ ಕಟಿಯ ಭಾಗವನ್ನು ಅಪಹರಿಸುತ್ತಾ ಇದ್ದೇನೆ. ನಿಮ್ಮ ಮನೆಯಲ್ಲಿ ನನಗೊಂದೂ ಭಿಕ್ಷೆಯು ದೊರೆಯಲಿಲ್ಲ. ಆದರಿಂದ ನಾಯಿಯ ದೇಹವನ್ನು ಅಪಹರಿಸುವ ಬುದ್ಧಿಯು ನನಗೆ ಬಂದಿತು. ಅಗ್ನಿಯು ಹೇಗೆ ಸರ್ವವನ್ನೂ ಸುಟ್ಟರೂ ಪವಿತ್ರವೋ ಹಾಗೆಯೇ ನಾನು ಸರ್ವವನ್ನೂ ಭಕ್ಷಣೆ ಮಾಡಿದರೂ ಪವಿತ್ರವೇ. ಆದುದರಿಂದ ಈ ನಾಯಿಯ ಮಾಂಸವನ್ನು ತೆಗೆದುಕೊಂಡು ಹೋಗುವೆನು' ಎಂದರು.

ಅದಕ್ಕೆ ಋಷಿಗಳೇ ನನ್ನ ಮಾತನ್ನು ಕೇಳಿ. ಕೇಳಿ ಹಾಗೆಯೇ ಮಾಡಿರಿ. ನಿಮಗೆ ಧರ್ಮವನ್ನು ಹೇಳುತ್ತೇನೆ. ಮೃಗಗಳಲ್ಲಿ ಅಧರ್ಮಮೃಗವು ನಾಯಿಯೆಂದು ಜ್ಞಾನಿಗಳು ಹೇಳುವರು. ಅದರಲ್ಲೂ ಅದರ ಕಟಿಪ್ರದೇಶವು ಅತ್ಯಂತಹೀನವಾದದ್ದು. ಭಕ್ಷಣೆ ಮಾಡಲಿಕ್ಕೆ ಅಯೋಗ್ಯವಾದ ಅದರಲ್ಲೂ ಚಂಡಾಲನಸೊತ್ತಿನ ಅಪಹಾರವು ನಿಮಗೆ ಯೋಗ್ಯವೇ ಇಲ್ಲ. ನಿಮ್ಮ ಪ್ರಾಣಧಾರಣೆಗೆ ಬೇರೇನಾದರೂ ಉಪಾಯವನ್ನು ನೋಡಿರಿ. ನಾಯಿಯ ಮಾಂಸದಲ್ಲಿ ಆಸೆಪಟ್ಟರೆ ನಿಮ್ಮ ತಪಸ್ಸಿನ ನಾಶವಾಗುವುದು. ತಿಳಿದವರು ಧರ್ಮಸಾಂಕರ್ಯವನ್ನು ಮಾಡಬಾರದು. ಧರ್ಮವನ್ನು ಬಿಡಬೇಡಿರಿ ಎಂದು ಹೇಳಿದನು.

ಈರೀತಿಯಾಗಿ ಚಂಡಾಲನು ಹೇಳಲು ವಿಶ್ವಾಮಿತ್ರರು ಹಸಿವೆಯನ್ನು ತಾಳಲಾರದೆ ನನಗೆ ಆಹಾರವಿಲ್ಲದೆ ಬಹಳ ಕಾಲವಾಯಿತು. ಬೇರೆ ಒಂದು ಉಪಾಯವೂ ಇಲ್ಲ. ನನ್ನ ಪ್ರಾಣವು ಹೋಗುತ್ತಾ ಇದೆ. ಹೇಗಾದರೂ ಮಾಡಿ ಪ್ರಾಣರಕ್ಷಣೆ ಮಾಡಿಕೊಳ್ಳುತ್ತೇನೆ. ಸಾಯುವುದಕ್ಕಿಂತ ಬದುಕುವುದು ಲೇಸು. ನಾನು ಬದುಕಿರಬೇಕೆಂಬ ಆಸೆಯಿಂದ ತಿನ್ನಬಾರದ ವಸ್ತುವನ್ನಾದರೂ ಬುದ್ಧಿಪೂರ್ವಕವಾಗಿ ತಿನ್ನುವೆನು. ಅದಕ್ಕೆ ನೀನು ಅನುಮತಿಯನ್ನು ಕೊಡಬೇಕು. ಬದುಕಿದ ಮೇಲೆ ಧರ್ಮವನ್ನು ಮಾಡಿ ಪಾಪವನ್ನು ಪರಿಹರಿಸಿಕೊಳ್ಳುವೆನು' ಎಂದರು.

ವಿಶ್ವಾಮಿತ್ರರು 'ಈ ದುರ್ಭಿಕ್ಷೆಯಲ್ಲಿ ಬೇರೆ ಮಾಂಸವು ಸಿಗುವಂತೆ ಇಲ್ಲ. ಬೇರೆ ಏನಾದರೂ ಪಡೆಯಲಿಕ್ಕೆ ನನ್ನ ಕೈಯಲ್ಲಿ ಹಣವಿಲ್ಲ. ಹಸಿವೆಯಿಂದ ಪ್ರಾಣ ಹೋಗುತ್ತಿದೆ. ಬೇರೆ ಗತಿಯಿಲ್ಲ. ಆದುದರಿಂದ ನಾಯಿಯ ಮಾಂಸವನ್ನೇ ಷಡ್ರಸಗಳಿಂದ ಕೂಡಿದ ಭೋಜನಕ್ಕಿಂತ ರುಚಿಕರವೆಂದು ತಿಳಿಯುತ್ತೇನೆ' ಎಂದರು. ಈರೀತಿಯಾಗಿಯೇ ಚಂಡಾಲನಿಗೂ ವಿಶ್ವಾಮಿತ್ರರಿಗೂ ಬಹಳ ವಿವಾದವಾಯಿತು. ಕೊನೆಗೆ ಚಂಡಾಲನು 'ಚಂಡಾಲನ ಮನೆಯಿಂದ ಕಳ್ಳತನದಿಂದ ಅತ್ಯಾಗ್ರಹದಿಂದ ನಾಯಿಯ ಮಾಂಸವನ್ನು ಅಪಹರಿಸುವುದು ನಿಂಗೇ ದೋಷ. ನಾನು ಕೊಟ್ಟೆನೆಂದು ನನಗೊಂದೂ ದೋಷವಿಲ್ಲ' ಎಂದು ಹೇಳಿ ಹೊರಟುಹೋದನು. ವಿಶ್ವಾಮಿತ್ರರು ನಾಯಿಯ ಮಾಂಸವನ್ನು ಅಪಹರಿಸಿದರು.

ತರುವಾಯ ಪತ್ನಿಯಿಂದ ಸಹಿತರಾಗಿ ವನದಲ್ಲಿ ನಾಯಿಯ ಮಾಂಸವನ್ನು ಭಕ್ಷಣೆ ಮಾಡಲು ಇಚ್ಛಿಸಿದರು. ಆಗ ವಿಶ್ವಾಮಿತ್ರರು ವಿಧಿಪ್ರಕಾರವಾಗಿ ದೇವತೆಗಳಿಗೆ ಆಹುತಿಯನ್ನು ಕೊಟ್ಟು ತಿನ್ನಬೇಕು ಎಂದು ಇಂದ್ರಾದಿದೇವತೆಗಳನ್ನು ಕೂಗಿ ನಾಯಿಯ ಮಾಂಸದ ಭಾಗವನ್ನು ತೆಗೆದಿಟ್ಟರು. ಅಷ್ಟರಲ್ಲಿ ಒಳ್ಳೇ ಮಳೆಯನ್ನು ಸುರಿಸಿ ಇಂದ್ರದೇವರು ಧಾನ್ಯಗಳನ್ನು ಉಂಟುಮಾಡಿದರು. ವಿಶ್ವಾಮಿತ್ರರು ಬಹುಕಾಲ ತಪಸ್ಸು ಮಾಡಿ ಸಿದ್ಧಿಯನ್ನು ಹೊಂದಿದರು. ಅವರು ನಾಯಿಯ ಮಾಂಸವನ್ನು ತಿನ್ನದೇ ದೇವತೆಗಳನ್ನು ಸಂತೋಷಪಡಿಸಿದರು. ಈರೀತಿಯಾಗಿ ವಿಶ್ವಾಮಿತ್ರರು ನಾಯಿಯ ಮಾಂಸವನ್ನು ತಿನ್ನಲು ಪ್ರಯತ್ನಮಾಡಿದರೆಂದು ಎಲ್ಲರೂ ನಿಷಿದ್ಧಪದಾರ್ಥವನ್ನು ತಿನ್ನಬಹುದು ಎಂದು ತಿಳಿಯಬಾರದು. ವಿಶ್ವಾಮಿತ್ರರು ಅಪರೋಕ್ಷಜ್ಞಾನಿಗಳಾದ ಪ್ರಯುಕ್ತ ಅವರಿಗೆ ದೋಷವಾಗಲಾರದು. ಅಪರೋಕ್ಷಜ್ಞಾನಿಗಳಿಗೆ ಪ್ರಾಣ ಹೋಗುವ ಕಾಲದಲ್ಲಿ ನಿಷಿದ್ಧವಾದ ಪದಾರ್ಥವನ್ನು ತಿಂದರೂ ದೋಷವಿಲ್ಲವೆಂದು ಪ್ರಮಾಣವಿದೆ. ಆದುದರಿಂದಲೇ **ಜ್ಞಾನಿಗಳು ಹೀಗೆ ಮಾಡಬೇಕು ಎಂದು ಹೇಳಿದ ರೀತಿಯಾಗಿ ನಡೆಯಬೇಕಲ್ಲದೆ ಅವರು ಮಾಡಿದಂತೆ ನಾವು ಮಾಡಬಾರದು. ಮಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ। ನೋ ಇತರಾಣಿ। ತೈ. ಉ.ಶೀ.ವ.23.** ಅವರು ನಿಷಿದ್ಧಕಾರ್ಯ ಮಾಡಿದರು. ಅದನ್ನು ತಪಸ್ಸಿನಿಂದ ಆ ಪಾಪವನ್ನು ಪರಿಹರಿಸಿ ಕೊಳ್ಳುವ ಸಾಮರ್ಥ್ಯವಿದೆ. ಅವರನ್ನು ನೋಡಿ ನಾವೂ ಕೂಡ ನಿಷಿದ್ಧಭಕ್ಷಣೆ ಮಾಡಲಿಕ್ಕೆ ಹೋದರೆ ರುದ್ರದೇವರು ವಿಷಪಾನವನ್ನು ಮಾಡಿದ್ದನ್ನು ನೋಡಿ ನಾವೂ ಮಾಡಿದರೆ ಏನು ಗತಿಯಾಗುವುದೋ ಅದೇ ಗತಿಯಾಗಬಹುದು.



# ಅತ್ರಿಗೌತಮರ ವಿವಾದ [1]

ಪೃಥುರಾಜನು ಯಜ್ಞದಲ್ಲಿ ದೀಕ್ಷಿತನಾಗಿ ಕೂತಿದ್ದನು. ಅವನಿದ್ದಲ್ಲಿಗೆ ಹಣಕ್ಕಾಗಿ ಹೋಗಬೇಕೆಂದು ಅತ್ರಿಋಷಿಗಳು ಯೋಚಿಸಿದರು. ಆಮೇಲೆ ಪುನಃ ಹಣಕ್ಕೋಸ್ಕರ ಪುಣ್ಯವು ನಾಶವಾಗುವುದೆಂದು ಪುನಃ ಹೋಗುವುದು ಬೇಡವೆಂದು ಯೋಚಿಸಿದರು. ಅವರು ಯೋಚನೆ ಮಾಡಿ ಕಾಡಿಗೇ ಹೋಗುವುದೆಂದು ನಿಶ್ಚಯಿಸಿದರು. ತನ್ನ ಹೆಂಡತಿಯನ್ನು ಮಕ್ಕಳನ್ನೂ ಕರೆದು, ಅಕ್ಷಯವಾದ ಮೋಕ್ಷವನ್ನು ಹೊಂದುವುದಕ್ಕಾಗಿ ನಾವೆಲ್ಲರೂ ಕಾಡಿಗೆ ಹೋಗುವ. ಅನೇಕ ಗುಣವುಳ್ಳ ಈ ಅರಣ್ಯಗಮನವನ್ನು ನೀವು ಅಂಗೀಕಾರ ಮಾಡಿರಿ ಎಂದರು. ಆಗ ಅವರ ಹೆಂಡತಿಯು 'ಯಜ್ಞವೇ ಮೊದಲಾದ ಧರ್ಮವನ್ನು ಮಾಡುವುದಕ್ಕಾಗಿ ಹಣವನ್ನು ಸಂಪಾದಿಸಿರಿ. ಮಹಾನುಭಾವನಾದ ಪೃಥುರಾಜನ ಬಳಿಗೆ ಹೋಗಿ ಹಣವನ್ನು ಕೇಳಿರಿ. ಆ ಯಜ್ಞ ಮಾಡುತ್ತಿರುವ ರಾಜನು ನಿಮಗೆ ತುಂಬಾ ಹಣವನ್ನು ಕೊಡುವನು. ರಾಜನಿಂದ ಬಹು ಹಣವನ್ನು ತೆಗೆದುಕೊಂಡು ಬಂದು ಮಕ್ಕಳಿಗೆ ಭೃತ್ಯರಿಗೆ ಎಲ್ಲಾ ಕೊಟ್ಟು ಆಮೇಲೆ ಎಲ್ಲಿಗೆ ಬೇಕಾದರೂ ಹೋಗಿರಿ' ಎಂದಳು.

ಆಗ ಅತ್ರಿಗಳು 'ಮಹಾನುಭಾವಳೇ! ಮಹಾನುಭಾವರಾದ ಗೌತಮರು ಪೃಥುರಾಜನ ವಿಷಯವನ್ನು ಹೇಳಿದ್ದಾರೆ. ಆದರೆ ಅಲ್ಲಿಗೆ ಹೋದರೆ ಅಲ್ಲಿ ಎಷ್ಟೋ ಜನ ನನ್ನನ್ನು ದ್ವೇಷಮಾಡುವವರಿದ್ದಾರೆ. ಹಾಗೆ ಗೌತಮರೇ ಹೇಳಿದ್ದಾರೆ. ಅದರಿಂದ ಅಲ್ಲಿಗೆ ಹೋಗಲಿಕ್ಕೆ ನನಗೆ ಇಚ್ಛೆಯಿಲ್ಲ. ಅಲ್ಲಿ ನಾನು ಹೋಗಿ ಒಳ್ಳೇ ಮಾತನ್ನು ಹೇಳಿದರೆ ಅಲ್ಲಿದ್ದವರು ಅದಕ್ಕೆ ವಿಪರೀತವಾಗಿ ಹೇಳುವರು. ಆದರೂ ನೀನು ಹೇಳಿದ ಮಾತೂ ನನ್ನ ಮನಸ್ಸಿಗೆ ಬಂತು. ಅಲ್ಲಿಗೆ ನಾನು ಹೋಗುತ್ತೇನೆ. ಪೃಥುರಾಜನು ನನಗೆ ದನಗಳನ್ನೂ ಬೇಕಾದಷ್ಟು ಹಣವನ್ನೂ ಕೊಡುವನು' ಎಂದು ಹೇಳಿ ಬೇಗನೆ ಪೃಥುರಾಜನ ಯಜ್ಞವು ನಡೆಯುವ ಸ್ಥಳಕ್ಕೆ ಹೋದರು. ಯಜ್ಞಶಾಲೆಗೆ ಹೋಗಿ ಪೃಥುರಾಜನನ್ನು ಮಂಗಲವಾಕ್ಯಗಳಿಂದ ಸ್ತೋತ್ರಮಾಡಿದರು. 'ರಾಜನೇ! ನೀನು ಧನಕ್ಕೆ ಅರ್ಹನು. ನೀನೇ ನಿಯಾಮಕನು. ನೀನು ಭೂಮಿಯಲ್ಲಿ ಮೊದಲಿನವನು. ಮನುಷ್ಯರನ್ನು ರಕ್ಷಣೆ ಮಾಡುವವನು. ನಿನ್ನನ್ನು ಮುನಿಗಳೆಲ್ಲಾ ಸ್ತೋತ್ರ ಮಾಡುತ್ತಾರೆ. ನೀನು ಹೊರತು ಇನ್ನೊಬ್ಬನು ಧರ್ಮವನ್ನು ತಿಳಿದವನು ಇಲ್ಲ' ಎಂದರು.

---

1. ಮ.ಭಾ.ವ.ಪ. ಅ.185

ಆಗ ಗೌತಮರು ಪರಲೋಕದಲ್ಲಿಯೇ ಬಹುಮಾನವಾಗಿವುಳ್ಳವರಾಗಿ 'ಅತ್ರಿಋಷಿಗಳೇ! ಪುನಃ ಈ ಮಾತನ್ನು ಆಡಬೇಡಿರಿ. ನಿಮಗೆ ಬುದ್ಧಿಯಿಲ್ಲ. ನಮಗೆಲ್ಲಾ ಇಂದ್ರದೇವರೇ ಶ್ರೇಷ್ಠರು' ಎಂದರು.

ಆಗ ಅತ್ರಿಋಷಿಗಳು ಭೂಮಿಯಲ್ಲಿ ಈ ರಾಜನೇ ಇಂದ್ರದೇವ ನಿಮಗೇ ಬುದ್ಧಿಯಿಲ್ಲ' ಎಂದರು.

ಅದಕ್ಕೆ ಗೌತಮರು 'ನನಗೆ ತಿಳಿಯುವುದು ನಿಮಗೇನೇ ರಾಜನನ್ನು ನೋಡಬೇಕೆಂಬ ಆಸೆಯಿಂದ ಬುದ್ಧಿಭ್ರಮ ಬಂದಿರುವುದು. ರಾಜನನ್ನು ನೋಡ ಬೇಕೆಂದು ಸಭೆಯಲ್ಲಿ ಸ್ತೋತ್ರ ಮಾಡುವಿರಿ. ನಿಮಗೆ ಸರಿಯಾದ ಧರ್ಮವು ತಿಳಿಯದು. ಬಾಲಕನಾಗಿರುವಿರಿ. ಮೂರ್ಖರು ವಯಸ್ಸುಮಾತ್ರ ಆಯಿತಷ್ಟೆ' ಎಂದು ಹೇಳಿದರು.

ಈರೀತಿಯಾಗಿ ಎಲ್ಲಾ ಋಷಿಗಳು ನೋಡುವಂತೆ ಇವರಿಬ್ಬರೂ ಜಗಳಾಡಿ ಕೊಂಡರು. ಆಗ ಋಷಿಗಳೆಲ್ಲರೂ 'ಇವರು ಹೇಗೆ ಬಂದರು? ಈ ಪೃಥುರಾಜನ ಮಹಾಸಭೆಯಲ್ಲಿ ಇವರು(ರನ್ನು) ಒಳಗೆ ಯಾರು ಬಿಟ್ಟರು? ಯಾಕೆ ಇಷ್ಟು ಗಟ್ಟಿಯಾಗಿ ಕೂಗಿಕೊಳ್ಳುತ್ತಾರೆ? ಯಾವ ಕಾರ್ಯಕ್ಕಾಗಿ ಬಂದಿರುತ್ತಾರೆ?' ಎಂದು ಮಾತಾಡಿ ಕೊಂಡರು. ತರುವಾಯ ಕಾಶ್ಯಪರು ಇವರಿಬ್ಬರೂ ವಿವಾದವುಳ್ಳವರಾಗಿ ಬಂದಿರು ವರು ಎಂದರು. ಆಗ ಗೌತಮರು ಮುನಿಗಳೊಡನೆ 'ನಮ್ಮಿಬ್ಬರ ಪ್ರಶ್ನೆಯನ್ನು ಕೇಳಿರಿ. ಅತ್ರಿಋಷಿಗಳು ಪೃಥುರಾಜನನ್ನೇ ಶ್ರೇಷ್ಠನೆಂದು ಹೇಳುತ್ತಾರೆ. ಈ ವಿಷಯದಲ್ಲಿ ಸಂಶಯವಿದೆ' ಎಂದು ಹೇಳಿದರು ಆ ಮುನಿಗಳೆಲ್ಲರೂ ಸನತ್ಕುಮಾರರ ಹತ್ತಿರ ಈ ಸಂಶಯವನ್ನು ಕೇಳಿದರು. ಅವರ ಮಾತನ್ನು ಕೇಳಿ ಮಹಾತಪಸ್ವಿಯಾದ ಸನತ್ಕುಮಾರರು 'ಬ್ರಾಹ್ಮಣರು ಕ್ಷತ್ರಿಯರಿಂದ ಸಹಿತರಾಗಿ, ಕ್ಷತ್ರಿಯರು ಬ್ರಾಹ್ಮಣರಿಂದ ಸಹಿತರಾಗಿ ಇದ್ದರೆ ಗಾಳಿಯೂ ಬೆಂಕಿಯೂ ಸೇರಿ ಕಾಡನ್ನು ಸುಡುವಂತೆ ಶತ್ರುಗಳನ್ನು ಸಂಹರಿಸುವರು. ಭೂಮಿಯಲ್ಲಿ ರಾಜನಾದವನೇ ಪ್ರಸಿದ್ಧನಾದವನು. ಧರ್ಮವ್ಯವಸ್ಥೆ ಯನ್ನು ಮಾಡುವವನು. ಪ್ರಜೆಗಳಿಗೆ ಸ್ವಾಮಿಯಾದವನು. ರಕ್ಷಣೆ ಮಾಡುವವನು. ನೀತಿಯನ್ನು ತಿಳಿದವನು. ತಂದೆಯಂತೆ ಇರುವವನು. ಹಿತವನ್ನು ಉಪದೇಶಿಸು ವವನು. ವಿರಾಟ್ ಸಮ್ರಾಟ್ ಇತ್ಯಾದಿ ಹೆಸರಿನಿಂದ ಸ್ತೋತ್ರಮಾಡಲ್ಪಡುವನು. ಇವನನ್ನು ಯಾರು ಸತ್ಕಾರ ಮಾಡಲಾರರು? ಇವನೇ ಧರ್ಮಪ್ರವರ್ತಕನಾದ ಕಾರಣ ಪ್ರಥಮ ಕಾರಣನು. ಯುದ್ಧದಲ್ಲಿ ಜಯಿಸಿ ಉಪದ್ರವನ್ನು ಪರಿಹಾರ ಮಾಡುವನು ಇತ್ಯಾದಿ ಬಹುಗುಣಉಳ್ಳವನು. ಸೂರ್ಯನು ಆಕಾಶ ಇದ್ದುಕೊಂಡು

# ಅತ್ರಿಗೌತಮರ ವಿವಾದ [1]

ಪೃಥುರಾಜನು ಯಜ್ಞದಲ್ಲಿ ದೀಕ್ಷಿತನಾಗಿ ಕೂತಿದ್ದನು. ಅವನಿದ್ದಲ್ಲಿಗೆ ಹಣಕ್ಕಾಗಿ ಹೋಗಬೇಕೆಂದು ಅತ್ರಿಋಷಿಗಳು ಯೋಚಿಸಿದರು. ಆಮೇಲೆ ಪುನಃ ಹಣಕ್ಕೋಸ್ಕರ ಪುಣ್ಯವು ನಾಶವಾಗುವುದೆಂದು ಪುನಃ ಹೋಗುವುದು ಬೇಡವೆಂದು ಯೋಚಿಸಿದರು. ಅವರು ಯೋಚನೆ ಮಾಡಿ ಕಾಡಿಗೇ ಹೋಗುವುದೆಂದು ನಿಶ್ಚಯಿಸಿದರು. ತನ್ನ ಹೆಂಡತಿಯನ್ನು ಮಕ್ಕಳನ್ನೂ ಕರೆದು, ಅಕ್ಷಯವಾದ ಮೋಕ್ಷವನ್ನು ಹೊಂದುವುದಕ್ಕಾಗಿ ನಾವೆಲ್ಲರೂ ಕಾಡಿಗೆ ಹೋಗುವ. ಅನೇಕ ಗುಣವುಳ್ಳ ಈ ಅರಣ್ಯಗಮನವನ್ನು ನೀವು ಅಂಗೀಕಾರ ಮಾಡಿರಿ ಎಂದರು. ಆಗ ಅವರ ಹೆಂಡತಿಯು 'ಯಜ್ಞವೇ ಮೊದಲಾದ ಧರ್ಮವನ್ನು ಮಾಡುವುದಕ್ಕಾಗಿ ಹಣವನ್ನು ಸಂಪಾದಿಸಿರಿ. ಮಹಾನುಭಾವನಾದ ಪೃಥುರಾಜನ ಬಳಿಗೆ ಹೋಗಿ ಹಣವನ್ನು ಕೇಳಿರಿ. ಆ ಯಜ್ಞ ಮಾಡುತ್ತಿರುವ ರಾಜನು ನಿಮಗೆ ತುಂಬಾ ಹಣವನ್ನು ಕೊಡುವನು. ರಾಜನಿಂದ ಬಹು ಹಣವನ್ನು ತೆಗೆದುಕೊಂಡು ಬಂದು ಮಕ್ಕಳಿಗೆ ಭೃತ್ಯರಿಗೆ ಎಲ್ಲಾ ಕೊಟ್ಟು ಆಮೇಲೆ ಎಲ್ಲಿಗೆ ಬೇಕಾದರೂ ಹೋಗಿರಿ' ಎಂದಳು.

ಆಗ ಅತ್ರಿಗಳು 'ಮಹಾನುಭಾವಳೇ! ಮಹಾನುಭಾವರಾದ ಗೌತಮರು ಪೃಥುರಾಜನ ವಿಷಯವನ್ನು ಹೇಳಿದ್ದಾರೆ. ಆದರೆ ಅಲ್ಲಿಗೆ ಹೋದರೆ ಅಲ್ಲಿ ಎಷ್ಟೋ ಜನ ನನ್ನನ್ನು ದ್ವೇಷಮಾಡುವವರಿದ್ದಾರೆ. ಹಾಗೆ ಗೌತಮರೇ ಹೇಳಿದ್ದಾರೆ. ಆದರಿಂದ ಅಲ್ಲಿಗೆ ಹೋಗಲಿಕ್ಕೆ ನನಗೆ ಇಚ್ಛೆಯಿಲ್ಲ. ಅಲ್ಲಿ ನಾನು ಹೋಗಿ ಒಳ್ಳೇ ಮಾತನ್ನು ಹೇಳಿದರೆ ಅಲ್ಲಿದ್ದವರು ಅದಕ್ಕೆ ವಿಪರೀತವಾಗಿ ಹೇಳುವರು. ಆದರೂ ನೀನು ಹೇಳಿದ ಮಾತೂ ನನ್ನ ಮನಸ್ಸಿಗೆ ಬಂತು. ಅಲ್ಲಿಗೆ ನಾನು ಹೋಗುತ್ತೇನೆ. ಪೃಥುರಾಜನು ನನಗೆ ದನಗಳನ್ನೂ ಬೇಕಾದಷ್ಟು ಹಣವನ್ನೂ ಕೊಡುವನು' ಎಂದು ಹೇಳಿ ಬೇಗನೆ ಪೃಥುರಾಜನ ಯಜ್ಞವು ನಡೆಯುವ ಸ್ಥಳಕ್ಕೆ ಹೋದರು. ಯಜ್ಞಶಾಲೆಗೆ ಹೋಗಿ ಪೃಥುರಾಜನನ್ನು ಮಂಗಲವಾಕ್ಯಗಳಿಂದ ಸ್ತೋತ್ರಮಾಡಿದರು. 'ರಾಜನೇ! ನೀನು ಧನಕ್ಕೆ ಅರ್ಹನು. ನೀನೇ ನಿಯಾಮಕನು. ನೀನು ಭೂಮಿಯಲ್ಲಿ ಮೊದಲಿನವನು. ಮನುಷ್ಯರನ್ನು ರಕ್ಷಣೆ ಮಾಡುವವನು. ನಿನ್ನನ್ನು ಮುನಿಗಳೆಲ್ಲಾ ಸ್ತೋತ್ರ ಮಾಡುತ್ತಾರೆ. ನೀನು ಹೊರತು ಇನ್ನೊಬ್ಬನು ಧರ್ಮವನ್ನು ತಿಳಿದವನು ಇಲ್ಲ' ಎಂದರು.

---

1. ಮ.ಭಾ.ವ.ಪ. ಅ.185

ಆಗ ಗೌತಮರು ಪರಲೋಕದಲ್ಲಿಯೇ ಬಹುಮಾನವಾಗಿವುಳ್ಳವರಾಗಿ 'ಅತ್ರಿಋಷಿಗಳೇ! ಪುನಃ ಈ ಮಾತನ್ನು ಆಡಬೇಡಿರಿ. ನಿಮಗೆ ಬುದ್ಧಿಯಿಲ್ಲ. ನಮಗೆಲ್ಲಾ ಇಂದ್ರದೇವರೇ ಶ್ರೇಷ್ಠರು' ಎಂದರು.

ಆಗ ಅತ್ರಿಋಷಿಗಳು ಭೂಮಿಯಲ್ಲಿ ಈ ರಾಜನೇ ಇಂದ್ರದೇವ ನಿಮಗೇ ಬುದ್ಧಿಯಿಲ್ಲ' ಎಂದರು.

ಅದಕ್ಕೆ ಗೌತಮರು 'ನನಗೆ ತಿಳಿಯುವುದು ನಿಮಗೇನೇ ರಾಜನನ್ನು ನೋಡಬೇಕೆಂಬ ಆಸೆಯಿಂದ ಬುದ್ಧಿಭ್ರಮ ಬಂದಿರುವುದು. ರಾಜನನ್ನು ನೋಡ ಬೇಕೆಂದು ಸಭೆಯಲ್ಲಿ ಸ್ತೋತ್ರ ಮಾಡುವಿರಿ. ನಿಮಗೆ ಸರಿಯಾದ ಧರ್ಮವು ತಿಳಿಯದು. ಬಾಲಕನಾಗಿರುವಿರಿ. ಮೂರ್ಖರು ವಯಸ್ಸುಮಾತ್ರ ಆಯಿತಷ್ಟೆ' ಎಂದು ಹೇಳಿದರು.

ಈರೀತಿಯಾಗಿ ಎಲ್ಲಾ ಋಷಿಗಳು ನೋಡುವಂತೆ ಇವರಿಬ್ಬರೂ ಜಗಳಾಡಿ ಕೊಂಡರು. ಆಗ ಋಷಿಗಳೆಲ್ಲರೂ 'ಇವರು ಹೇಗೆ ಬಂದರು? ಈ ಪೃಥುರಾಜನ ಮಹಾಸಭೆಯಲ್ಲಿ ಇವರು(ರನ್ನು) ಒಳಗೆ ಯಾರು ಬಿಟ್ಟರು? ಯಾಕೆ ಇಷ್ಟು ಗಟ್ಟಿಯಾಗಿ ಕೂಗಿಕೊಳ್ಳುತ್ತಾರೆ? ಯಾವ ಕಾರ್ಯಕ್ಕಾಗಿ ಬಂದಿರುತ್ತಾರೆ?' ಎಂದು ಮಾತಾಡಿ ಕೊಂಡರು. ತರುವಾಯ ಕಾಶ್ಯಪರು ಇವರಿಬ್ಬರೂ ವಿವಾದವುಳ್ಳವರಾಗಿ ಬಂದಿರು ವರು ಎಂದರು. ಆಗ ಗೌತಮರು ಮುನಿಗಳೊಡನೆ 'ನಮ್ಮಿಬ್ಬರ ಪ್ರಶ್ನೆಯನ್ನು ಕೇಳಿರಿ. ಅತ್ರಿಋಷಿಗಳು ಪೃಥುರಾಜನನ್ನೇ ಶ್ರೇಷ್ಠನೆಂದು ಹೇಳುತ್ತಾರೆ. ಈ ವಿಷಯದಲ್ಲಿ ಸಂಶಯವಿದೆ' ಎಂದು ಹೇಳಿದರು ಆ ಮುನಿಗಳೆಲ್ಲರೂ ಸನತ್ಕುಮಾರರ ಹತ್ತಿರ ಈ ಸಂಶಯವನ್ನು ಕೇಳಿದರು. ಅವರ ಮಾತನ್ನು ಕೇಳಿ ಮಹಾತಪಸ್ವಿಯಾದ ಸನತ್ಕುಮಾರರು 'ಬ್ರಾಹ್ಮಣರು ಕ್ಷತ್ರಿಯರಿಂದ ಸಹಿತರಾಗಿ, ಕ್ಷತ್ರಿಯರು ಬ್ರಾಹ್ಮಣರಿಂದ ಸಹಿತರಾಗಿ ಇದ್ದರೆ ಗಾಳಿಯೂ ಬೆಂಕಿಯೂ ಸೇರಿ ಕಾಡನ್ನು ಸುಡುವಂತೆ ಶತ್ರುಗಳನ್ನು ಸಂಹರಿಸುವರು. ಭೂಮಿಯಲ್ಲಿ ರಾಜನಾದವನೇ ಪ್ರಸಿದ್ಧನಾದವನು. ಧರ್ಮವ್ಯವಸ್ಥೆ ಯನ್ನು ಮಾಡುವವನು. ಪ್ರಜೆಗಳಿಗೆ ಸ್ವಾಮಿಯಾದವನು. ರಕ್ಷಣೆ ಮಾಡುವವನು. ನೀತಿಯನ್ನು ತಿಳಿದವನು. ತಂದೆಯಂತೆ ಇರುವವನು. ಹಿತವನ್ನು ಉಪದೇಶಿಸು ವವನು. ವಿರಾಟ್ ಸಮ್ರಾಟ್ ಇತ್ಯಾದಿ ಹೆಸರಿನಿಂದ ಸ್ತೋತ್ರಮಾಡಲ್ಪಡುವನು. ಇವನನ್ನು ಯಾರು ಸತ್ಕಾರ ಮಾಡಲಾರರು? ಇವನೇ ಧರ್ಮಪ್ರವರ್ತಕನಾದ ಕಾರಣ ಪ್ರಥಮ ಕಾರಣನು. ಯುದ್ಧದಲ್ಲಿ ಜಯಿಸಿ ಉಪದ್ರವನ್ನು ಪರಿಹಾರ ಮಾಡುವನು ಇತ್ಯಾದಿ ಬಹುಗುಣಉಳ್ಳವನು. ಸೂರ್ಯನು ಆಕಾಶ ಇದ್ದುಕೊಂಡು

ತನ್ನ ತೇಜಸ್ಸಿನಿಂದ ಕತ್ತಲೆಯನ್ನು ಪರಿಹರಿಸುವಂತೆ ರಾಜನು ಭೂಮಿಯಲ್ಲಿ ಇದ್ದುಕೊಂಡು ಅಧರ್ಮಗಳನ್ನು ಪರಿಹರಿಸುವನು. ಆದುದರಿಂದ ಭೂಮಿಯಲ್ಲಿ ರಾಜರಿಗೆ ಪ್ರಾಧಾನ್ಯವು ಪ್ರಮಾಣದಿಂದ ಸಿದ್ಧವಾದದ್ದು. ಆದುದರಿಂದ ಭೂಮಿಯಲ್ಲಿ ರಾಜನು ಶ್ರೇಷ್ಠನು ಎಂದು ಹೇಳಿದ ಮಾತು ಸತ್ಯವಾದದ್ದೇ' ಎಂದು ಹೇಳಿದರು.

ತರುವಾಯ ಪೃಥುರಾಜನು ಸಂತುಷ್ಟನಾಗಿ ಅತ್ರಿಋಷಿಗಳೊಡನೆ ಪ್ರೀತಿಯಿಂದ 'ನನ್ನನ್ನು ಮನುಷ್ಯರಲ್ಲಿ ಶ್ರೇಷ್ಠನೆಂದೂ ದೇವತೆಗಳಂತೆ ಭೂಮಿಯಲ್ಲಿ ಶ್ರೇಷ್ಠನೆಂದು ಹೇಳಿದಿರಿ. ಆದರಿಂದ ನಿಮಗೆ ಬೇಕಾದಷ್ಟು ಹಣವನ್ನು ಕೊಡುತ್ತೇನೆ. ಒಳ್ಳೇ ಯುವತಿಯರಾದ ವಸ್ತ್ರಾಲಂಕರಗಳಿಂದ ಭೂಷಿತರಾದ ಸಾವಿರ ದಾಸಿಯರನ್ನು ಕೊಡುವೆನು. (ಇಪ್ಪತ್ತೈದು ತೊಲೆಗೆ ಒಂದು ಭಾರವೆಂದು ಹೆಸರು) ಹತ್ತುಕೋಟಿ ಭಾರ ಬಂಗಾರವನ್ನು ಹತ್ತು ಕೋಟಿ ಭಾರ ಬೆಳ್ಳಿಯನ್ನು ಕೊಡುವೆನು' ಎಂದು ಹೇಳಿ ಹಾಗೆಯೇ ಸತ್ಕಾರ ಮಾಡಿಕೊಟ್ಟನು. ಅತ್ರಿಋಷಿಗಳು ಅಷ್ಟು ಹಣವನ್ನು ತೆಗೆದು ಕೊಂಡು ಮನೆಗೆ ಹೋದನು. ಹಣವನ್ನು ಮಕ್ಕಳಿಗೆ ಕೊಟ್ಟು ತಾನು ಸಂತೋಷದಿಂದ ವನಕ್ಕೇನೇ ಹೋದರು.



## ಅಗಸ್ತ್ಯರ ಚರಿತ್ರೆ [1]

ಮಣಿಮತೀ ಎಂಬ ನಗರದಲ್ಲಿ ಇಲ್ವಲ ಎಂಬ ದೈತ್ಯನಿದ್ದನು. ಅವನಿಗೆ ವಾತಾಪಿ ಎಂಬ ತಮ್ಮನಿದ್ದನು. ಇಲ್ವಲನು ತಪಸ್ಸು ಮಾಡುತ್ತಿದ್ದ ಒಬ್ಬ ಋಷಿಗಳ ಬಳಿಗೆ ಹೋಗಿ ನನಗೆ ಇಂದ್ರನಿಗೆ ಸಮಾನನಾದ ಮಗನನ್ನು ಕೊಡಬೇಕೆಂದು ಕೇಳಿದನು. ಅದಕ್ಕೆ ಆ ಋಷಿಗಳು ಕೊಡಲಿಲ್ಲ. ಇದರಿಂದ ಇಲ್ವಲನು ಆ ಋಷಿಗಳ ಮೇಲೆ ಕೋಪಿಸಿ ಕೊಂಡನು. ಆ ಸಮಯವನ್ನು ಆರಂಭಿಸಿ ಇಲ್ವಲನು ಬ್ರಾಹ್ಮಣರನ್ನು ಸಂಹರಿಸಲಿಕ್ಕೆ ಆರಂಭಿಸಿದನು. ಬ್ರಾಹ್ಮಣರ ಮೇಲೆ ಕೋಪವುಳ್ಳ ಇಲ್ವಲನು ಯಾರಾದರೂ ಬ್ರಾಹ್ಮಣರು ಬಂದರೆ ವಾತಾಪಿಯೊಡನೆ ಕುರಿಯ ರೂಪವನ್ನು ಧರಿಸಲಿಕ್ಕೆ ಹೇಳುವನು. ಇಚ್ಛಾನುಸಾರವಾಗಿ ರೂಪವನ್ನು ಧರಿಸುವ ಸಾಮರ್ಥ್ಯವುಳ್ಳ ವಾತಾಪಿಯು ಆಗಲೇ ಕುರಿಯ ರೂಪವನ್ನು ಧರಿಸುವನು. ಇಲ್ವಲನು ಅವನನ್ನು ಕಡಿದು ಬೇಯಿಸಿ ಪಕ್ವಮಾಡಿ ಬ್ರಾಹ್ಮಣನಿಗೆ ಬಡಿಸುವನು. ಬ್ರಾಹ್ಮಣನು ಭೋಜನ

1. ಮ.ಭಾ.ವ.ಪ. ಅ.96-99

ಮಾಡಿದ ಮೇಲೆ 'ವಾತಾಪಿ' ಎಂದೂ ಕೂಗುವನು. ಕೂಡಲೇ ವಾತಾಪಿಯು ತನ್ನ ರೂಪದಿಂದ ಬ್ರಾಹ್ಮಣನ ಹೊಟ್ಟೆಯನ್ನು ಸೀಳಿಕೊಂಡು ನೆಗುತ್ತಾ ಹೊರಗೆ ಬರುವನು. ಈರೀತಿಯಾಗಿಯೇ ಇಲ್ವಲನೂ ವಾತಾಪಿಯೂ ಸೇರಿ ಬಹುಬ್ರಾಹ್ಮಣರನ್ನು ಸಂಹರಿಸಿದನು.

ಈ ಸಮಯದಲ್ಲಿ ಅಗಸ್ತ್ಯಋಷಿಗಳು ಸಂಚರಿಸುತ್ತಾ ಒಂದು ಭಾವಿಯಲ್ಲಿ ತಲೆಕೆಳಗಾಗಿ ಜೋಲುತ್ತಾ ಇರುವ ತನ್ನ ಪಿತೃಗಳನ್ನು ನೋಡಿದರು. ಅವರನ್ನು ನೋಡಿ ನೀವು ಏಕೆ ಈರೀತಿಯಾಗಿ ತಲೆಕೆಳಗಾಗಿ ನೇತಾಡುತ್ತಿರುವಿರಿ ಎಂದು ಕೇಳಿದರು. ಅದಕ್ಕೆ ಅವರು ನಾವು ನಿನ್ನ ಪಿತೃಗಳು. ಸಂತಾನಕ್ಕೋಸ್ಕರ ಜೋಲುತ್ತಿರುವೆನು. ಮಗ! ನೀನು ಉತ್ತಮವಾದ ಮಗನನ್ನು ಪಡೆಯುವ ಪಕ್ಷದಲ್ಲಿ ನಮಗೆ ಈ ನರಕದಿಂದ ಬಿಡುಗಡೆಯಾಗುವುದು. ನೀನು ಸದ್ಗತಿಯನ್ನು ಹೊಂದುವಿ ಎಂದು ಹೇಳಿದರು. ಅದಕ್ಕೆ ಅಗಸ್ತ್ಯರು ಹಾಗೆಯೇ ಮಾಡುವೆನು. ನಿಮ್ಮ ಮನಸ್ಸಿನ ದುಃಖವನ್ನು ಬಿಡಿರಿ ಎಂದು ಹೇಳಿದರು.

ತರುವಾಯ ಅಗಸ್ತ್ಯರು ತನಗೆ ಯೋಗ್ಯಳಾದ ಸ್ತ್ರೀಯನ್ನು ಕಾಣದೆ ಸಿಂಹ ಇತ್ಯಾದಿ ಪ್ರಾಣಿಗಳ ಸೊಂಟ ಮೊದಲಾದ ಉತ್ತಮಗಳಾದ ಅಂಗದಿಂದ ಉತ್ತಮವಾದ ಸ್ತ್ರೀಯನ್ನು ನಿರ್ಮಿಸಿ ಮಹಾತಪಸ್ವಿಯಾದ ಅಗಸ್ತ್ಯರು ಮಕ್ಕಳಾಗಬೇಕೆಂದು ಆಸೆಪಡುತ್ತಿದ್ದ ವಿದರ್ಭರಾಜನಿಗೆ ಕೊಟ್ಟರು. ಅಂದರೆ ಆ ಸ್ತ್ರೀಯು ವಿದರ್ಭರಾಜನಿಗೆ ಮಗಳಾಗಿ ಹುಟ್ಟಿದಳು. ಆ ಹೆಣ್ಣುಮಗಳು ಹುಟ್ಟಿದ ಕೂಡಲೇ ಬ್ರಾಹ್ಮಣರ ಹತ್ತಿರ ತಿಳಿಸಿದರು. ಬ್ರಾಹ್ಮಣರು ಹೆಣ್ಣುಮಗಳನ್ನು ನೋಡಿ ಸಂತೋಷಪಟ್ಟರು. ಲೋಪಾಮುದ್ರಾ ಎಂದು ಹೆಸರಿಟ್ಟರು. ಲೋಪಾಮುದ್ರೆಯು ತಂದೆಯ ಮನೆಯಲ್ಲಿ ಪರಮಸುಂದರಿಯಾಗಿ ಬೆಳೆಯುತ್ತಿದ್ದಳು. ಯೌವನವನ್ನು ಹೊಂದಿರುವ ಅವಳನ್ನು ಅಲಂಕೃತರಾದ ನೂರು ಕನ್ಯೆಯರೂ ನೂರು ಜನದಾಸಿಯರೂ ಸೇವಿಸುತ್ತಿದ್ದರು. ಶೀಲಸದಾಚಾರಗಳಿಂದ ಕೂಡಿದ ಲೋಪಾಮುದ್ರೆಯು ಯೌವನವನ್ನು ಹೊಂದಿದರೂ ಅಗಸ್ತ್ಯರ ಭಯದಿಂದ ಯಾರೊಬ್ಬರೂ ಮದುವೆ ಮಾಡಲಿಕೊಳ್ಳಲಿಕ್ಕೆ ಬರಲಿಲ್ಲ. ಲೋಪಾಮುದ್ರೆಯು ಸತ್ಯವಚನವುಳ್ಳವಳಾಗಿ ರೂಪದಿಂದ ಅಪ್ಸರಸ್ತ್ರೀಯರನ್ನು ಮೀರಿದವಳಾಗಿ ತನ್ನ ಶೀಲದಿಂದ ತಂದೆಯನ್ನೂ ಸ್ವಜನರನ್ನೂ ಸಂತೋಷಪಡಿಸಿದಳು.

ತರುವಾಯ ಅಗಸ್ತ್ಯರು ಲೋಪಾಮುದ್ರೆಯು ಸಂಸಾರ ಮಾಡಲು ಸಮರ್ಥಳು ಎಂದು ತಿಳಿದಮೇಲೆ ವಿದರ್ಭರಾಜನ ಬಳಿಗೆ ಬಂದು ರಾಜನೇ! ನನಗೆ ಸತ್ಪುತ್ರನನ್ನು

ಪಡೆಯುವುದಕ್ಕೋಸ್ಕರ ಮದುವೆಮಾಡಿಕೊಳ್ಳಬೇಕೆಂಬ ಆಸೆಯಿದೆ. ಆದುದರಿಂದ ಲೋಪಾಮುದ್ರೆಯನ್ನು ನನಗೆ ಮದುವೆಯಮಾಡಿಕೊಡು ಎಂದು ಕೇಳಿದರು. ಈರೀತಿಯಾಗಿ ಅಗಸ್ತ್ಯರು ಕೇಳಲು ರಾಜನಿಗೆ ಏನು ಮಾಡಬೇಕೆಂದು ತೋರಲಿಲ್ಲ. ಕೊಡಲಾರೆನೆಂದು ಹೇಳಲಿಕ್ಕೂ ಶಕ್ತನಾಗಲಿಲ್ಲ. ಕೊಡಲಿಕ್ಕೂ ಇಚ್ಛಿಸಲಿಲ್ಲ. ತರುವಾಯ ಅವನು ಹೆಂಡತಿಯ ಬಳಿಗೆ ಬಂದು 'ಏನು ಮಾಡಲಿ? ಇವರು ಮಹಾವೀರ್ಯವುಳ್ಳವರು. ಕೋಪಿಸಿಕೊಂಡರೆ ಶಾಪಕೊಡುವರಲ್ಲಾ' ಎಂದನು. ರಾಜನು ಪತ್ನೀಸಹಿತನಾಗಿ ದುಃಖದಿಂದ ಇರಲು, ಲೋಪಾಮುದ್ರೆಯು ಬಂದು 'ನೀನು ನನಗೋಸ್ಕರ ದುಃಖವನ್ನು ಹೊಂದುವುದು ಬೇಡ. ನನ್ನನ್ನು ಋಷಿಗಳಿಗೆ ಮದುವೆ ಮಾಡಿಕೊಡಿರಿ. ನಿಮ್ಮನ್ನು ರಕ್ಷಿಸಿಕೊಳ್ಳಿರಿ' ಎಂದಳು.

ತರುವಾಯ ಮಗಳ ಮಾತಿನಿಂದ ರಾಜನು ಅಗಸ್ತ್ಯರನ್ನು ಸತ್ಕರಿಸಿ ಲೋಪಾ ಮುದ್ರೆಯನ್ನು ಮದುವೆಮಾಡಿಕೊಟ್ಟನು. ತರುವಾಯ ಅಗಸ್ತ್ಯರು ಲೋಪಾಮುದ್ರೆ ಯೊಡನೆ ಈ ಬೆಲೆಬಾಳುವ ಸೀರೆಗಳನ್ನು ಆಭರಣಗಳನ್ನೂ ಬಿಟ್ಟು ಬಿಡು ಎಂದು ಹೇಳಿದರು. ಲೋಪಾಮುದ್ರೆಯು ಹಾಗೆಯೇ ಆಗಲಿ ಎಂದು ಹೇಳಿ ನಾರು ಸೀರೆಯನ್ನೂ ಕೃಷ್ಣಾಜಿನವನ್ನೂ ಧರಿಸಿದಳು. ಗಂಡನ ಸಮಾನವ್ರತವುಳ್ಳವಳಾದಳು. ಅಗಸ್ತ್ಯರು ಹೆಂಡತಿಯನ್ನು ಕರೆದುಕೊಂಡು ಗಂಗಾತೀರಕ್ಕೆ ಹೋಗಿ ಅಲ್ಲಿ ತನಗೆ ಅನುಕೂಲಳಾದ ಪತ್ನಿಯೊಡನೆ ಉಗ್ರವಾದ ತಪಸ್ಸು ಮಾಡಿದರು. ಲೋಪಾ ಮುದ್ರೆಯು ಪ್ರೀತಿಯಿಂದಲೂ ಬಹುಮಾನದಿಂದಲೂ ಪತಿಯನ್ನು ಸೇವಿಸಿದಳು. ಅಗಸ್ತ್ಯರು ಪತ್ನಿಯಲ್ಲಿ ಪ್ರೀತಿಯುಳ್ಳವರಾದರು. ಬಹುದಿವಸಗಳು ಕಳೆದಮೇಲೆ ಒಂದು ದಿವಸದಲ್ಲಿ ಅಗಸ್ತ್ಯರು ತಪಸ್ಸಿನಿಂದ ಪ್ರಕಾಶಮಾನಳಾದ ಋತುಸ್ನಾನ ಮಾಡಿದ ಲೋಪಮುದ್ರೆಯನ್ನು ನೋಡಿದರು. ಅಗಸ್ತ್ಯರು ಅವಳ ಸೇವೆಯಿಂದಲೂ ಶೌಚ ಇಂದ್ರಿಯನಿಗ್ರಹ ತೇಜಸ್ಸು ಸೌಂದರ್ಯ ಇವುಗಳಿಂದ ಪ್ರೀತಿಯುಳ್ಳವರಾಗಿ ವಿಹಾರ ಮಾಡಲಿಕ್ಕೆ ಕರೆದರು. ಆಗ ಲೋಪಾಮುದ್ರೆಯು ಸ್ವಲ್ಪ ಲಜ್ಜೆಯುಳ್ಳವಳಾಗಿ ಕೈಮುಗಿದುಕೊಂಡು 'ನಿಶ್ಚಯವಾಗಿಯೂ ಮಕ್ಕಳನ್ನು ಹೊಂದುವುದಕ್ಕೋಸ್ಕರ ಪತಿಯು ಪತ್ನಿಯನ್ನು ಹೊಂದುವುದು. ಆದರೆ ನನ್ನ ಮನಸ್ಸಿನ ಅಭಿಲಾಷೆಯಂತೆ ನೀವು ಮಾಡಬೇಕು. ನಾನು ನನ್ನ ತಂದೆಯ ಮನೆಯಲ್ಲಿ ಉಪ್ಪರಿಗೆಯಲ್ಲಿ ಹಾಸಿಗೆಯಲ್ಲಿ ಮಲಗಿದ್ದೆನು. ಅದೇ ವಿಧವಾದ ಹಾಸಿಗೆಯಲ್ಲಿ ಹೂವಿನ ಮಾಲೆಯುಳ್ಳ ಬಂಗಾರದ ಆಭರಣಗಳಿಂದ ಅಲಂಕೃತರಾದ ನಿಮ್ಮನ್ನು ನಾನೂ ದಿವ್ಯಾಭರಣಗಳಿಂದ ಅಲಂಕೃತಳಾಗಿ ಹೊಂದಬೇಕೆಂದು ಆಸೆಯುಳ್ಳವಳಾಗಿದ್ದೇನೆ. ಇಲ್ಲದಿದ್ದರೆ ಈ

ನಾರುಸೀರೆ ಕೃಷ್ಣಾಜಿನಗಳನ್ನು ಧರಿಸಿಕೊಂಡು ಬೇಡ. ಈ ಮಡಿಯ ವೇಷವು ಅಪವಿತ್ರವಾಗುವುದು ಬೇಡ' ಎಂದು ಹೇಳಿದಳು.

ಅಗಸ್ತ್ಯರು 'ಸುಂದರಿ! ನಿನ್ನ ತಂದೆಗೆ ಇದ್ದಂತೆ ನಿನ್ನಲ್ಲಿಯೂ ಹಣವಿಲ್ಲ. ನನ್ನಲ್ಲಿಯೂ ಹಣವಿಲ್ಲವಲ್ಲಾ!' ಎಂದರು.

ಅದಕ್ಕೆ ಲೋಪಾಮುದ್ರೆಯು 'ನೀವು ಜೀವಲೋಕದಲ್ಲಿರುವ ಸಮಸ್ತ ವಸ್ತುವನ್ನೂ ಕ್ಷಣಮಾತ್ರದಿಂದಲೇ ತಪಸ್ಸಾಮರ್ಥ್ಯದಿಂದ ಸಂಪಾದಿಸಲು ಸಮರ್ಥರಾಗಿರುವಿರಿ' ಎಂದಳು.

ಅಗಸ್ತ್ಯರು 'ನೀನು ಹೇಳಿದ ಮಾತು ಸತ್ಯ. ಆದರೆ ಅದರಿಂದ ತಪಸ್ಸು ಬಹಳ ವ್ಯರ್ಥವಾಗುವುದು. ತಪಸ್ಸು ನಾಶವಾಗದ ರೀತಿಯನ್ನು ಹೇಳು' ಎಂದರು.

ಅದಕ್ಕೆ ಲೋಪಾಮುದ್ರೆಯು 'ನನ್ನ ಋತು ಕಾಲವು ಸ್ವಲ್ಪದಿವಸ ಮಾತ್ರವೇ ಇದೆ. ಈ ಮಡಿವೇಷದಿಂದ ನಾನು ನಿಮ್ಮನ್ನು ಸಮ್ಮತಿಸಲಾರೆನು. ನಿಮ್ಮ ಧರ್ಮಕ್ಕೆ ಲೋಪವುಂಟು ಮಾಡಲಿಕ್ಕೂ ನನಗೆ ಇಚ್ಛೆಯಿಲ್ಲ. ಆದುದರಿಂದ ನೀವು ಹೇಗೆ ಬೇಕಾದರೂ ಸಂಪಾದಿಸಿರಿ' ಎಂದಳು.

ಅಗಸ್ತ್ಯರು 'ಸುಂದರಿ! ನೀನು ಹೀಗೆ ಬುದ್ಧಿಯಲ್ಲಿ ನಿಶ್ಚಯಿಸಿಕೊಂಡಿರುವ ಪಕ್ಷದಲ್ಲಿ ಹಾಗೆಯೇ ಆಗಲಿ. ನಾನು ಸಂಪಾದಿಸಿಕೊಂಡು ಬರಲಿಕ್ಕೆ ಹೋಗುತ್ತೇನೆ. ನೀನು ಇಲ್ಲೇ ಇರು' ಎಂದು ಹೇಳಿಹೋದರು.

ತರುವಾಯ ಅಗಸ್ತ್ಯರು ರಾಜರಲ್ಲಿ ಅಧಿಕನೆಂದು ಪ್ರಸಿದ್ಧನಾದ ಶ್ರುತರ್ವ ಎಂಬ ರಾಜನ ಬಳಿಗೆ ಹಣವನ್ನು ಯಾಚಿಸಲಿಕ್ಕೆ ಹೋದರು. ರಾಜನು ತನ್ನ ಮನೆಗೆ ಅಗಸ್ತ್ಯರು ಬರುತ್ತಿರುವರೆಂದು ತಿಳಿದು ಮಂತ್ರಿಯಿಂದ ಸಹಿತನಾಗಿ ಹೋಗಿ ಸತ್ಕರಿಸಿ ಕರೆದುಕೊಂಡು ಬಂದನು. ಅವರಿಗೆ ಅರ್ಘ್ಯಾದಿ ಉಪಚಾರವನ್ನು ಮಾಡಿ ಕೈಮುಗಿದುಕೊಂಡು ಬಂದ ಕಾರಣವನ್ನು ಕೇಳಿದನು. ಅದಕ್ಕೆ ಅಗಸ್ತ್ಯರು 'ರಾಜನೇ! ನಾನು ಹಣವನ್ನು ಅಪೇಕ್ಷಿಸಿ ಬಂದಿರುವೆನು. ಒಬ್ಬರಿಗೂ ಹಿಂಸೆಯಿಲ್ಲದೆ ನನಗೆ ಹಣವನ್ನು ಕೊಡು' ಎಂದು ಕೇಳಿದರು. ರಾಜನು ರಾಜ್ಯದ ಆಯವ್ಯಯಗಳನ್ನು ತೋರಿಸಿ ಉಳಿಯುವ ಹಣವನ್ನು ತಾವು ತೆಗೆದುಕೊಳ್ಳಬೇಕು ಎಂದನು. ಅಗಸ್ತ್ಯರು ನೋಡಿ ಆಯವ್ಯಯಗಳು ಸರಿಯಾಗಿದೆ. ತಾನು ಹಣವನ್ನು ತೆಗೆದುಕೊಂಡರೆ ಜನರಿಗೆ ಉಪದ್ರವಾಗುವುದು ಎಂದು ಕೊಂಡು ಶ್ರುತರ್ವನನ್ನೂ ಕರೆದುಕೊಂಡು ಬ್ರಧ್ನಶ್ವ ಎಂಬ ರಾಜನಿದ್ದಲ್ಲಿಗೆ ಹೋದರು. ಆ ರಾಜನು ಅವರಿಬ್ಬರನ್ನೂ ಕರಕೊಂಡು

ಬಂದು ಸತ್ಕರಿಸಿ ಬಂದ ಕಾರಣವನ್ನು ಕೇಳಿದರು. ಅಗಸ್ತ್ಯರು 'ನಾವಿಬ್ಬರೂ ಹಣಕ್ಕಾಗಿ ಬಂದಿರುವೆವು. ಇನ್ನೊಬ್ಬರಿಗೆ ಹಿಂಸೆಯಿಲ್ಲದೆ ನಮಗೆ ಹಣವನ್ನು ಕೊಡು' ಎಂದರು. ಅವನು ರಾಜ್ಯದ ಲೆಕ್ಕವನ್ನೆಲ್ಲಾ ತೋರಿಸಿದನು. 'ನೀವೇ ನೋಡಿ ಉಳಿದ ಹಣವನ್ನು ತೆಗೆದುಕೊಳ್ಳಿ' ಎಂದನು. ಅಲ್ಲಿಯೂ ಬರುವ ಹಣವೂ ವೆಚ್ಚವೂ ಸರಿಯಾಗಿತ್ತು. ತಾವು ಹಣವನ್ನು ತೆಗೆದುಕೊಂಡರೆ ಜನರಿಗೆ ಉಪದ್ರವವಾಗುವುದೆಂದು ತಿಳಿದುಕೊಂಡು ಅಗಸ್ತ್ಯರು ಶ್ರುತರ್ವನೂ ಬ್ರಧ್ನಶ್ವನೂ ತ್ರಸದಸ್ಯು ಎಂಬ ಹಣವಂತನಾದ ರಾಜನ ಬಳಿಗೆ ಹೋದರು. ಆ ರಾಜನು ಇವರಿಬ್ಬರನ್ನೂ ಸತ್ಕರಿಸಿ ಬಂದಕಾರ್ಯವನ್ನು ತಿಳಿದು ಲಾಭನಷ್ಟಗಳನ್ನು ತಿಳಿಸಿದನು. ಅಲ್ಲಿಯೂ ಲಾಭನಷ್ಟಗಳು ಸರಿಯಾಗಿ ಇರುವುದನ್ನು ನೋಡಿ ಅಗಸ್ತ್ಯರು ಇಲ್ಲಿಯೂ ಹಣವನ್ನು ತೆಗೆದುಕೊಂಡರೆ ಜನರಿಗೆ ಉಪದ್ರವಾಗುವುದೆಂದು ತಿಳಿದುಕೊಂಡು ಬೇಡವೆಂದು ಹೇಳಿದರು. ಜನರಿಗೆ ಉಪದ್ರವಾಗುವುದೆಂದು ತಿಳಿದುಕೊಂಡು ಬೇಡವೆಂದು ಹೇಳಿದರು. ಆಗ ಮೂರು ರಾಜರೂ ಪರಸ್ಪರ ಮುಖವನ್ನು ನೋಡಿಕೊಂಡು ಇಲ್ವಲ ಎಂಬ ದೈತ್ಯನು ಹಣವಂತನಾಗಿರುವನು. ಅವನ ಬಳಿಗೆ ಹೋಗಿ ಹಣವನ್ನು ಕೇಳುವ ಎಂದರು. ತರುವಾಯ ಎಲ್ಲರಿಗೂ ಆ ದೈತ್ಯನ ಬಳಿಗೆ ಹೋಗಿ ಯಾಚಿಸುವುದೇ ಉಚಿತವೆಂದು ತೋರಿತು.

ಇಲ್ವಲನು ಅಗಸ್ತ್ಯರಿಂದ ಸಹಿತರಾಗಿ ಮೂರು ಜನರಾಜರು ತನ್ನ ನಗರಕ್ಕೆ ಬರುತ್ತಿರುವುದನ್ನು ತಿಳಿದು ಮಂತ್ರಿಗಳಿಂದ ಸಹಿತನಾಗಿ ಹೋಗಿ ಸತ್ಕರಿಸಿದನು. ತರುವಾಯ ತನ್ನ ಸಂಪ್ರದಾಯದಂತೆ ವಾತಾಪಿಯನ್ನು ಕುರಿಯನ್ನಾಗಿ ಮಾಡಿ ಬೇಯಿಸಿ ಅಡಿಗೆ ಮಾಡಿಸಿ ಆತಿಥ್ಯವನ್ನು ಮಾಡಿದನು. ಈರೀತಿಯಾಗಿ ಕುರಿಯ ರೂಪವನ್ನು ವಾತಾಪಿಯನ್ನು ಬೇಯಿಸಿ ಅಡಿಗೆ ಮಾಡಿಸಿದ್ದನ್ನು ನೋಡಿ ರಾಜರೆಲ್ಲರೂ ವಿಷಾದವನ್ನು ಹೊಂದಿದರು. ಜ್ಞಾನಶೂನ್ಯರಾದರು. ಆಗ ಅಗಸ್ತ್ಯರು ರಾಜರೊಡನೆ 'ನೀವು ವಿಷಾದವನ್ನು ಹೊಂದುವುದು ಬೇಡ. ನಾನೇ ಆ ಮಹಾದೈತ್ಯನನ್ನು ತಿನ್ನುವೆನು' ಎಂದು ಹೇಳಿದರು. ತರುವಾಯ ಮೊದಲಿನ ಎಲೆಯಲ್ಲಿ ಅಗಸ್ತ್ಯರು ಕೂತರು. ಇಲ್ವಲನು ನಗುತ್ತಾ ಅಗಸ್ತ್ಯರಿಗೆ ಬಡಿಸಿದನು. ಅಗಸ್ತ್ಯರು ನನಗೆ ತುಂಬಾ ಹಸಿವೆಯಾಗುತ್ತದೆ ಎಂದು ಹೇಳಿಕೊಂಡು ವಾತಾಪಿಯನ್ನೆಲ್ಲಾ ತಾನೇ ತಿಂದುಬಿಟ್ಟರು. ಆಗಸ್ತ್ಯರು ಭೋಜನವನ್ನು ಮಾಡಿದ ಮೇಲೆ ಇಲ್ವಲನು 'ವಾತಾಪೇ! ನಿನ್ನ ಬಲತೇಜಸ್ಸುಗಳನ್ನು ತೋರಿಸುತ್ತಾ ಎದ್ದು ಬಾ' ಎಂದು ಕೂಗಿದನು. ಆಗ ವಾತಾಪಿಯು ಅಗಸ್ತ್ಯರ ಹೊಟ್ಟೆಯನ್ನು ಸೀಳಲಿಕ್ಕೆ ವೇಗವನ್ನು ವಹಿಸಿದನು. ಅದನ್ನು

ಮಹಾತಪಸ್ವಿಗಳಾದ ಅಗಸ್ತ್ಯರು ತಿಳಿದರು. 'ವಾತಾಪಿಯೇ! ಲೋಕದ ಶಾಂತಿಗಾಗಿ ನಾನು ನಿನ್ನನ್ನು ಜೀರ್ಣಮಾಡಿರುವೆನು' ಎಂದು ಹೇಳಿ ತನ್ನ ಕೈಯಿಂದ ಹೊಟ್ಟೆಯ ಮೇಲೆ ಬಡಿದುಕೊಂಡರು. ತೇಜಸ್ಸಿನಿಂದ ಜ್ವಲಿಸುವಂತೆ ತೋರಿಸಿಕೊಂಡು ಹೀಗೆಯೇ ಮೂರು ಸಲ ಬಡೆದರು.

ತರುವಾಯ ಮೇಘದಂತೆ ಗರ್ಜನೆ ಮಾಡುತ್ತಾ ಅಧೋವಾಯುವು (ಹೂಸು) ಹೊರಟುಹೋಯಿತು. ಇಲ್ವಲನು ವಾತಾಪೇ! ಹೊರಗೆ ಬಾ ಹೊರಗೆ ಬಾ. ಎಂದು ಪುನಃ ಪುನಃ ಹೇಳಿದನು. ಆಗ ಅಗಸ್ತ್ಯರು ನೆಗುತ್ತಾ ವಾತಾಪಿಗೆ ಹೊರಗೆ ಬರಲಿಕ್ಕೆ ಎಲ್ಲಿ ಶಕ್ತಿಯಿದೆ? ಅವನು ನನ್ನ ಹೊಟ್ಟೆಯಲ್ಲಿ ಜೀರ್ಣನಾಗಿರುವನು ಎಂದು ಹೇಳಿದರು. ಇಲ್ವಲನು, ವಾತಾಪಿಯು ಜೀರ್ಣನಾದದ್ದನ್ನು ತಿಳಿದು ತುಂಬಾ ವಿಷಾದವನ್ನು ಹೊಂದಿದನು. ತರುವಾಯ ಮಂತ್ರಿಗಳಿಂದ ಕೂಡಿಕೊಂಡು ಕೈಮುಗಿದುಕೊಂಡು 'ನೀವು ಯಾಕೆ ಬಂದಿರುವಿರಿ? ನನ್ನಿಂದ ನಿಮಗೆ ಏನಾಗಬೇಕಾಗಿದೆ?' ಎಂದು ಕೇಳಿದನು. ಆಗ ಅಗಸ್ತ್ಯರು ನೆಗುತ್ತಾ ಇಲ್ವಲನೊಡನೆ 'ಅಸುರನೇ! ನೀನು ಮಹಾಹಣವಂತನೆಂದು ನಾವು ತಿಳಿದಿದ್ದೇವೆ. ಈ ಮೂರು ರಾಜರೂ ತುಂಬಾ ಹಣವಂತರಲ್ಲ. ನನಗೂ ತುಂಬಾ ಹಣದ ಆಸೆಯಿದೆ. ಯಥಾಶಕ್ತಿ ಒಬ್ಬರನ್ನು ಹಿಂಸಿಸದೆ ನಮಗೆ ಹಣವನ್ನು ಕೊಡು' ಎಂದು ಹೇಳಿದರು. ಅದನ್ನು ಕೇಳಿ ಇಲ್ವಲನು ಮುನಿಗಳನ್ನು ಅವಮಾನ ಮಾಡಿ ನಾನು ನಿಮಗೆ ಎಷ್ಟು ಕೊಡಬೇಕೆಂದು ಯೋಚಿಸಿದ್ದೇನೋ ಅದನ್ನು ಹೇಳಿದರೆ ನಾನು ಕೊಡುವೆನು ಎಂದನು.

ಅದಕ್ಕೆ ಅಗಸ್ತ್ಯರು 'ಅಸುರನೇ! ಈ ರಾಜರಿಗೆ ಒಬ್ಬೊಬ್ಬರಿಗೆ ಹತ್ತುಸಾವಿರ ದನಗಳನ್ನೂ, ಹತ್ತು ಸಾವಿರ ಬಂಗಾರದ ನಾಣ್ಯಗಳನ್ನೂ, ಕೊಡಬೇಕೆಂದು ಯೋಚಿಸಿದ್ದಿ. ನನಗೆ ಇಪ್ಪತ್ತು ಸಾವಿರ ದನಗಳನ್ನೂ, ಇಪ್ಪತ್ತು ಸಾವಿರ ಬಂಗಾರದ ನಾಣ್ಯಗಳನ್ನೂ, ಒಂದು ಬಂಗಾರದ ರಥವನ್ನೂ, ಮನೋವೇಗವುಳ್ಳ ಕುದುರೆ ಗಳನ್ನೂ, ಕೊಡಬೇಕೆಂದು ಯೋಚಿಸಿರುವಿ? ಎಂದು ಹೇಳಿದರು.

ಇಲ್ವಲನು 'ದನಗಳನ್ನೂ ಬಂಗಾರದ ನಾಣ್ಯಗಳನ್ನೂ ನೀವು ಹೇಳಿದ್ದು ಸರಿ. ಬಂಗಾರದ ರಥವು ಮಾತ್ರ ಇಲ್ಲವೇ ಇಲ್ಲವಲ್ಲಾ' ಎಂದನು.

ಅಗಸ್ತ್ಯರು 'ನಾನು ಇಷ್ಟರವರೆಗೆ ಸುಳ್ಳು ಹೇಳಿದ್ದೇ ಇಲ್ಲ. ವಿಚಾರಿಸಿ ನೋಡು. ನಿಶ್ಚಯವಾಗಿಯೂ ಬಂಗಾರದ ರಥವಿದೆ' ಎಂದರು.

ಅಷ್ಟರಲ್ಲಿ ಬಂಗಾರದ ರಥವು ಎದುರಿಗೆ ಬಂದು ಬಿಟ್ಟಿತು. ತರುವಾಯ ಇಲ್ವಲನು ಮನಸ್ಸಿನಲ್ಲಿ ವ್ಯಥೆಯುಳ್ಳವನಾಗಿ ತುಂಬಾ ಹಣವನ್ನು ಕೊಟ್ಟನು. ಆ

ಬಂಗಾರದ ರಥಕ್ಕೆ ಕಟ್ಟಿದ ವಿವಾಜಿ ಸುವಾಜಿ ಎಂಬ ಎರಡು ಕುದುರೆಗಳು ಎಲ್ಲ ಹಣವನ್ನೂ ಹೊತ್ತುಕೊಂಡು ಅಗಸ್ತ್ಯರ ಆಶ್ರಮಕ್ಕೆ ಹೋದವು. ಮಾತ್ರವಲ್ಲದೆ ಆ ರಾಜರನ್ನೂ ಅಗಸ್ತ್ಯರನ್ನು ಎತ್ತಿಕೊಂಡು ಹೋದವು. ಇಲ್ವಲನು ಅಗಸ್ತ್ಯರ ಹಿಂದೆಯೇ ಹೋಗಿ ಕೊಲ್ಲಬೇಕೆಂದು ಯೋಚಿಸಿದನು. ಅಗಸ್ತ್ಯರು ಅವನನ್ನು ಹುಂಕಾರದಿಂದ ಭಸ್ಮವನ್ನಾಗಿ ಮಾಡಿದರು. ತರುವಾಯ ಆ ರಾಜರು ಅಗಸ್ತ್ಯರಿಂದ ಅನುಜ್ಞೆಯನ್ನು ಪಡೆದು ತಮ್ಮ ದೇಶಕ್ಕೆ ಹೋದರು. ಅಗಸ್ತ್ಯರು ಲೋಪಾಮುದ್ರೆಯ ಇಚ್ಛೆಯಂತೆ ಮಾಡಿದರು.

ಲೋಪಾಮುದ್ರೆಯು ಪತಿಯೊಡನೆ ನನ್ನ ಇಚ್ಛೆಯಂತೆ ತಾವು ಮಾಡಿದ್ದೀರಿ. ಆದುದರಿಂದ ತಮ್ಮ ಇಚ್ಛೆಯಂತೆ ಉತ್ತಮ ಪುತ್ರನನ್ನು ಪಡೆಯಿರಿ ಎಂದಳು.

ಅದಕ್ಕೆ 'ಸುಂದರಿ! ನಿನ್ನ ಸದಾಚಾರದಿಂದ ಸಂತುಷ್ಟನಾದೆನು. ಮಗುವಿನ ವಿಚಾರವನ್ನು ನಿನ್ನೊಡನೆ ಹೇಳುತ್ತೇನೆ. ನಿನಗೆ ಸಾವಿರ ಮಕ್ಕಳಾಗಬಹುದೋ? ಆ ಸಾವಿರಕ್ಕೆ ಸಮಾನ ನೂರು ಮಕ್ಕಳು ಆಗಬಹುದೋ? ಆ ನೂರಕ್ಕ ಸಮಾನರಾದ ಹತ್ತು ಮಕ್ಕಳಗಾಬಹುದೋ? ಅಥವಾ ಆ ಹತ್ತಕ್ಕೆ ಸಮಾನನಾದ ಅಂದರೆ ಸಾವಿರ ಮಕ್ಕಳಿಗೆ ಸಮಾನನಾದ ಒಬ್ಬ ಮಗನಾಗಬಹುದೋ' ಎಂದು ಅಗಸ್ತ್ಯರು ಕೇಳಿದರು.

ಲೋಪಾಮುದ್ರೆಯು 'ಸಾವಿರ ಮಕ್ಕಳಿಗೆ ಸಮಾನನಾದ ಒಬ್ಬ ಮಗನೇ ಆಗಲಿ. ಅನೇಕ ಅಯೋಗ್ಯ ಮಕ್ಕಳಿಗಿಂತ ಯೋಗ್ಯನಾದ ಒಬ್ಬನೇ ಲೇಸು' ಎಂದು ಹೇಳಿದಳು. ಅಗಸ್ತ್ಯರು ಹಾಗೆಯೇ ಆಗಲಿ ಎಂದರು. ತರುವಾಯ ಲೋಪಾ ಮುದ್ರೆಯು ಅಗಸ್ತ್ಯರಿಂದ ಗರ್ಭವನ್ನು ಧರಿಸಿದಳು. ಅಗಸ್ತ್ಯರು ವನಕ್ಕೆ ಹೋದರು. ಅಗಸ್ತ್ಯರು ವನಕ್ಕೆ ಹೋದಮೇಲೆ ಗರ್ಭವು ಏಳು ವರ್ಷಕಾಲ ಬೆಳೆಯಿತು. ಏಳನೇ ವರ್ಷ ಕಳೆಯಲು ಪ್ರಭಾವದಿಂದ ಜ್ವಲಿಸುವಂತೆ ಇರುವ ದೃಢಸ್ಯು ಎಂಬ ಮುನಿಯು ವೇದಗಳನ್ನು ಉಚ್ಚರಿಸುತ್ತಾ ಉದರದಿಂದ ಹೊರಗೆ ಬಂದರು. ಆ ಅಗಸ್ತ್ಯರ ಮಗನು ಮಹಾತೇಜಸ್ವಿಯಾಗಿದ್ದರು. ಅವರು ಬಾಲಕನಾಗಿರುವಾಗಲೇ ತಂದೆಯ ಮನೆಯಲ್ಲಿ ತೇಜಸ್ವಿಯಾಗಿದ್ದುಕೊಂಡು ಕಟ್ಟಿಗೆಯನ್ನು ಹೊತ್ತುತಂದರು. ಅದರಿಂದ ಅವರಿಗೆ ಇಧ್ಮವಾಹ ಎಂಬ ಹೆಸರನ್ನು ಹೊಂದಿದರು. ತರುವಾಯ ಅಗಸ್ತ್ಯರ ಪಿತೃಗಳು ಉತ್ತಮಲೋಕಗಳನ್ನು ಹೊಂದಿದರು.



# ಅಗಸ್ತ್ಯರ ಸಮುದ್ರಪಾನ [1]

ಇಂದ್ರದೇವರು ವಜ್ರಾಯುಧದಿಂದ ವೃತ್ರಾಸುರನನ್ನು ಸಂಹರಿಸಿದರು. ಎಲ್ಲಾ ದೇವತೆಗಳೂ ಸಾರಿ ದೈತ್ಯರನ್ನೆಲ್ಲಾ ಬಡಿಯಲು ಅವರು ಭಯದಿಂದ ಸಮುದ್ರವನ್ನು ಪ್ರವೇಶಿಸಿದರು. ಸಮುದ್ರದಲ್ಲಿ ಪ್ರವೇಶಮಾಡಿ ಆ ದೈತ್ಯರೆಲ್ಲರೂ ಮೂರು ಲೋಕಗಳನ್ನೂ ನಾಶಮಾಡಲಿಕ್ಕೆ ಯೋಚನೆ ಮಾಡಿದರು. ಒಬ್ಬೊಬ್ಬರು ಒಂದೊಂದು ಯೋಚನೆಯನ್ನು ಹೇಳಿದರು. ಕೊನೆಗೆ ಅವರು 'ಯಾರು ವಿದ್ಯಾವಂತರು ತಪಸ್ವಿಗಳು ಇರುವರೋ ಅವರನ್ನು ಮೊದಲು ಸಂಹರಿಸಬೇಕು. ತಪಸ್ಸಿನಿಂದ ಲೋಕಗಳು ಧರಿಸಲ್ಪಡುತ್ತವೆ. ಆದುದರಿಂದ ತಪಸ್ಸನ್ನು ನಾಶಮಾಡಲಿಕ್ಕೆ ಮೊದಲು ಪ್ರಯತ್ನ ಮಾಡಬೇಕು. ಆದುದರಿಂದ ಮೊದಲು ಭೂಮಿಗೆ ಹೋಗಿ ಯಾರು ತಪಸ್ಸು ಮಾಡುತ್ತಿರುವರೋ ಯಾರು ಧರ್ಮವನ್ನು ತಿಳಿದವರಾಗಿರುವರೋ ಅವರನ್ನು ಮೊದಲು ಕೊಲ್ಲಬೇಕು. ಅವರನ್ನು ಕೊಂದರೆ ಜಗತ್ತೆಲ್ಲಾ ನಾಶವನ್ನು ಹೊಂದುವುದು! ಈರೀತಿಯಾಗಿ ಯೋಚಿಸಿ ಆ ದುಷ್ಟರು ಸಮುದ್ರವೆಂಬ ದುರ್ಗಪ್ರದೇಶದಲ್ಲಿ ಆಶ್ರಯಿಸಿಕೊಂಡು ಇದ್ದರು.

ಈರೀತಿಯಾಗಿ ಆ ಕಾಲೇಯ ಎಂಬ ರಾಕ್ಷಸರು ಸಮುದ್ರದಲ್ಲಿ ಆಶ್ರಯಿಸಿ ಇದ್ದುಕೊಂಡು ರಾತ್ರಿಯಲ್ಲಿ ಕೋಪದಿಂದ ಬಂದು ಆಶ್ರಮಗಳಲ್ಲಿ ಪುಣ್ಯಕ್ಷೇತ್ರಗಳಲ್ಲಿ ಇರುವ ಮುನಿಗಳನ್ನೆಲ್ಲಾ ತಿಂದು ಹಾಕುತ್ತಿದ್ದರು. ವಸಿಷ್ಠರ ಮತ್ತು ಚ್ಯವನರ ಭರದ್ವಾಜರ ಆಶ್ರಮದಲ್ಲಿ ಇದ್ದ ಬಹುಋಷಿಗಳನ್ನು ಕೊಂದು ಹಾಕಿದರು. ಈರೀತಿಯಾಗಿ ಕ್ರಮದಿಂದ ರಾತ್ರಿಯಲ್ಲಿ ಬಂದು ಎಲ್ಲಾ ಮುನಿಗಳನ್ನೂ ತಿನ್ನುತ್ತಾ ಬಂದರು. ಮನುಷ್ಯರಿಗೆ ಅವರು ಬರುವುದೇ ಗೊತ್ತಾಗಲಿಲ್ಲ. ಭೂಮಿಯಲ್ಲೆಲ್ಲಾ ಮುನಿಗಳ ಹೆಣಗಳು ಬಿದ್ದವು. ಮುನಿಗಳು ಕಮಂಡಲುಗಳು ಅಲ್ಲಲ್ಲಿ ಬಿದ್ದಿದ್ದವು. ಸ್ರುವಗಳು ಅಲ್ಲಲ್ಲಿ ಮುರಿದು ಬಿದ್ದವು. ವೇದಾಧ್ಯಯನವನ್ನು ಮಾಡುವವರು ಇಲ್ಲ. ಯಜ್ಞಗಳು ಮಾಡುವವರು ಇಲ್ಲ. ಕಾಲೇಯರಿಂದ ಪೀಡಿತವಾಗಿ ಜಗತ್ತೇ ಉತ್ಸಾಹರಹಿತವಾಯಿತು. ಈರೀತಿಯಾಗಿ ಕ್ಷೀಣರಾಗುತ್ತಾ ಎಷ್ಟೋ ಜನರು ಭಯದಿಂದ ತಾವು ಬದುಕಿದ್ದರೆ ಸಾಕೆಂದು ದಿಕ್ಕುದಿಕ್ಕುಗಳಿಗೆ ಓಡಿಹೋಗುತ್ತಿದ್ದರು. ಕೆಲವು ಜನರು ಗುಹೆಯನ್ನು ಪ್ರವೇಶಿಸಿದರು. ಕೆಲವು ಮಹಾಧನುರ್ಧಾರಿಗಳು ದಾನವರನ್ನು ಹುಡುಕಿ ನೋಡಿದರು. ಆದರೆ ಸಮುದ್ರದ ಒಳಗೆ ಇದ್ದ ಅವರನ್ನು

1. ಮ.ಭಾ.ವ.ತ. ಅ.102, 105

ಕಂಡುಹಿಡಿಯಲಿಕ್ಕೆ ಆಯಿತು. ಇದರಿಂದ ಶ್ರಮವನ್ನು ಹೊಂದಿದರು. ಕೊನೆಗೆ ಅವರೂ ನಾಶವನ್ನು ಹೊಂದಿದರು. ಈರೀತಿಯಾಗಿ ಜಗತ್ತಿನಲ್ಲಿ ಯಾಗಾದಿಗಳು ನಡೆಯದೆ ಇರಲು ದೇವತೆಗಳು ದುಃಖವನ್ನು ಹೊಂದಿದರು. ಇಂದ್ರದೇವರಿಂದ ಸಭಯದಿಂದ ಯೋಚನೆ ಮಾಡಿದರು. ಕೊನೆಗೆ ವೈಕುಂಠಕ್ಕೆ ಹೋಗಿ ಭಗವಂತ ನೊಡನೆ ನಾನಾವಿಧವಾಗಿ ಸ್ತೋತ್ರವನ್ನು ಮಾಡಿ ಬಂದ ಆಪತ್ತನ್ನು ತಿಳಿಸಿದರು.

ದೇವತೆಗಳ ಪ್ರಾರ್ಥನೆಯನ್ನು ಕೇಳಿ ಭಗವಂತನು 'ದೇವತೆಗಳೇ ಪ್ರಜೆಗಳ ನಾಶಕ್ಕೆ ಕಾರಣವನ್ನು ನಾನು ತಿಳಿದಿರುವೆನು. ಅದನ್ನು ನಿಮಗೂ ಹೇಳುತ್ತೇನೆ. ಕೇಳಿರಿ. ಕಾಲೇಯ ಎಂದು ಹೆಸರುಳ್ಳ ಪರಮಕ್ರೂರರಾದ ವೃತ್ರಾಸುರನನ್ನು ಆಶ್ರಯಿಸಿ ಲೋಕಕ್ಕೆ ಉಪದ್ರ ಕೊಡುತ್ತಿದ್ದರು. ಇಂದ್ರನು ವೃತ್ರಾಸುರನನ್ನು ಸಂಹರಿಸಲು ಅವರು ಅಂಜಿಕೆಯಿಂದ ಸಮುದ್ರವನ್ನು ಪ್ರವೇಶಿಸಿದರು. ಅವರು ಘೋರವಾದ ಸಮುದ್ರ ದಲ್ಲಿ ಪ್ರವೇಶಿಸಿ ರಾತ್ರಿಯಲ್ಲಿ ಹೊರಗೆ ಬಂದು ಋಷಿಗಳನ್ನು ಸಂಹರಿಸುತ್ತಿರುವರು. ಅವರು ಸಮುದ್ರದಲ್ಲಿ ಆಶ್ರಯಿಸಿಕೊಂಡಿರುವುದರಿಂದ ಅವರನ್ನು ಸಂಹರಿಸಲಿಕ್ಕೆ ಆಗಲಾರದು. ಅದಕ್ಕಾಗಿ ಸಮುದ್ರದ ನೀರನ್ನು ಬತ್ತಿಸುವ ವಿಷಯದಲ್ಲಿ ಪ್ರಯತ್ನವನ್ನು ಮಾಡಿರಿ' ಎಂದು ಹೇಳಿದನು.

ತರುವಾಯ ದೇವತೆಗಳು ಬ್ರಹ್ಮದೇವರ ಬಳಿಗೆ ಬಂದು 'ಕಾಲೇಯರು ಸರ್ವಲೋಕಗಳನ್ನೂ ನಾಶಮಾಡಲಿಕ್ಕೆ ನಿಶ್ಚಯಿಸಿದ್ದಾರೆಂದು ಎಲ್ಲಾ ವಿಷಯಗಳನ್ನೂ ತಿಳಿಸಿದರು. ಆಗ ಬ್ರಹ್ಮದೇವರು 'ದೇವತೆಗಳೇ! ಕಾಲಪ್ರೇರಿತರಾಗಿ ಆ ಕಾಲೇಯರು ಮಾನವರೇ ಮೊದಲಾದವರನ್ನು ಸಂಹರಿಸುವುದು ನನಗೆ ತಿಳಿದಿರುವುದು. ಅವರು ಸಾಯುವ ಕಾಲವು ಸಮೀಪಿಸಿತು. ಸಮುದ್ರದ ನೀರನ್ನು ಬತ್ತಿಸಲಿಕ್ಕೆ ಉಪಾಯವನ್ನು ಹೇಳುವೆನು. ಅಗಸ್ತ್ಯರೆಂಬ ಪ್ರಸಿದ್ಧರಾದ ಋಷಿಗಳು ಇದ್ದಾರೆ. ಅವರ ಬಳಿಗೆ ಹೋಗಿ ಈ ಕಾರ್ಯವನ್ನು ಹೇಳಿರಿ. ಅವರು ಒಂದೇ ಕ್ಷಣದಲ್ಲಿ ಸಮುದ್ರದ ನೀರನ್ನೆಲ್ಲಾ ಕುಡಿಯಲು ಸಮರ್ಥರು. ಸಮುದ್ರದ ನೀರು ಬತ್ತಿಹೋದಮೇಲೆ ನೀವು ಆ ದೈತ್ಯರನ್ನು ಸಂಹರಿಸಿರಿ' ಎಂದು ಹೇಳಿದರು. ಈ ರೀತಿಯಾಗಿ ಬ್ರಹ್ಮದೇವರ ಮಾತನ್ನು ಕೇಳಿ ದೇವತೆಗಳು ಅಗಸ್ತ್ಯರ ಆಶ್ರಮಕ್ಕೆ ಹೋಗಿ ಅಲ್ಲಿ ಕೂತಿದ್ದ ಮಹಾತಪಸ್ವಿಯಾದ ಅವರನ್ನು 'ಪೂರ್ವದಲ್ಲಿ ನಹುಷರಾಜನಿಂದ ಪೀಡಿತವಾದ ಲೋಕವನ್ನು ನಹುಷನಿಗೆ ಶಾಪವನ್ನು ಕೊಟ್ಟು ರಕ್ಷಿಸಿದರು. ಸೂರ್ಯಸಂಚಾರವನ್ನು ತಡೆಯಲಿಕ್ಕೆ ಹೊರಟ ವಿಂಧ್ಯ ಪರ್ವತವು ನಿಮ್ಮ ಆಜ್ಞೆಯನ್ನು ಸ್ವೀಕರಿಸಿ ಬೆಳೆಯದೆ ಇದೆ. ಈಗ ಭಯವುಳ್ಳ

ನಮಗೆ ನೀವೇ ಗತಿ' ಎಂದು ಹೇಳಿ ಸ್ತೋತ್ರಮಾಡಿ ಎಲ್ಲಾ ವಿಷಯವನ್ನೂ ಹೇಳಿಕೊಂಡರು.

ಆಗ ಅಗಸ್ತ್ಯರು ದೇವತೆಗಳ ಮಾತನ್ನು ಕೇಳಿ 'ಆಗಲಿ. ನಾನು ಲೋಕದ ಸುಖಕ್ಕೆ ಕಾರಣವಾದ ಕಾರ್ಯವಾದ ಸಮುದ್ರಪಾನವನ್ನು ಮಾಡುವೆನು' ಎಂದರು. ತರುವಾಯ ಋಷಿಗಳಿಂದಲೂ ದೇವತೆಗಳಿಂದಲೂ ಸಹಿತರಾಗಿ ಸಮುದ್ರಕ್ಕೆ ಹೋದರು. ಮನುಷ್ಯರೇ ಮೊದಲಾದ ಎಲ್ಲರೂ ಈ ಆಶ್ಚರ್ಯಕರವಾದ ವಿಷಯವನ್ನು ನೋಡುವುದಕ್ಕಾಗಿ ಅಲ್ಲಿಗೆ ಬಂದರು. ಪೂಜ್ಯರಾದ ಅಗಸ್ತ್ಯರು ಸಮುದ್ರವನ್ನು ಹೊಂದುವವರಾಗಿ ಬಂದಿರುವ ಎಲ್ಲಾ ದೇವತೆಗಳೊಡನೆಯೂ ಮುನಿಗಳೊಡನೆಯೂ 'ನಾನು ಲೋಕ ಹಿತಕ್ಕಾಗಿ ಸಮುದ್ರಪಾವನ್ನು ಮಾಡುವೆನು. ನೀವು ಮಾಡಬೇಕಾದ ಕಾರ್ಯವನ್ನು ಬೇಗನೇ ಮಾಡಿರಿ' ಎಂದು ಹೇಳಿ ಎಲ್ಲರೂ ನೋಡುವಂತೆ ಸಮುದ್ರದ ನೀರನ್ನೆಲ್ಲಾ ಕುಡಿದರು. ಇಂದ್ರಾದಿದೇವತೆಗಳು ಇದನ್ನು ನೋಡಿ ಆಶ್ಚರ್ಯವನ್ನು ಹೊಂದಿದರು. 'ನೀವೇ ನಮ್ಮ ರಕ್ಷಕರು. ನಿಮ್ಮ ಅನುಗ್ರಹದಿಂದ ದೇವತೆಗಳಿಂದ ಸಹಿತವಾದ ಜಗತ್ತು ನಾಶವನ್ನು ಹೊಂದುವುದಿಲ್ಲ' ಎಂದು ಹೇಳಿದರು. ಈರೀತಿಯಾಗಿ ದೇವತೆಗಳು ಸ್ತೋತ್ರಮಾಡುತ್ತಿರಲು ಗಂಧರ್ವರು ಗಾಯನಮಾಡುತ್ತಿರಲು ದಿವ್ಯಪುಷ್ಪದ ಮಳೆಯು ಸುರಿಯುತ್ತಿರಲು ಅಗಸ್ತ್ಯರು ಸಮುದ್ರದಲ್ಲಿ ನೀರಿನಲ್ಲದಂತೆ ಮಾಡಿಬಿಟ್ಟರು.

ತರುವಾಯ ಎಲ್ಲಾ ದೇವತೆಗಳೂ ಸಂತೋಷವುಳ್ಳವರಾಗಿ ಉತ್ತಮ ಆಯುಧ ಗಳನ್ನು ಹಿಡಿದುಕೊಂಡು ಅಲ್ಲಿದ್ದ ದೈತ್ಯರನ್ನೆಲ್ಲಾ ಬಡಿಯಲಿಕ್ಕೆ ಆರಂಭಿಸಿದರು. ಮಹಾಬಲವುಳ್ಳ ವೇಗವುಳ್ಳ ಗರ್ಜನೆ ಮಾಡುತ್ತಾ ಒಂದು ಮುಹೂರ್ತಕಾಲ ಯುದ್ಧವನ್ನು ಮಾಡಿದರು. ಆದೈತ್ಯರು ಮೊದಲೇ ಋಷಿಗಳ ತಪಸ್ಸಿನಿಂದ ದಗ್ಧರಾಗಿದ್ದ ವರು ದೇವತೆಗಳಿಂದ ಸಾಯುವವರಾದರು. ಉಳಿದ ಕೆಲವು ಕಾಲೇಯರು ಭೂಮಿಯನ್ನು ಸೀಳಿಕೊಂಡು ಪಾತಾಳಕ್ಕೆ ಓಡಿಹೋದರು. ತರುವಾಯ ದೇವತೆಗಳು ಮೃತರಾದ ರಾಕ್ಷಸರನ್ನು ನೋಡಿ ಅಗಸ್ತ್ಯರನ್ನು ನಾನಾವಿಧವಾಗಿ ಸ್ತೋತ್ರಮಾಡಿ 'ನಿಮ್ಮ ಅನುಗ್ರಹದಿಂದ ಕಾಲೇಯರು ಮೃತರಾದರು. ಇನ್ನು ಮುಂದೆ ಪೂರ್ವದಂತೆ ಸಮುದ್ರದಲ್ಲಿ ನೀರನ್ನು ತುಂಬಿಸಿರಿ' ಎಂದರು. ಅದಕ್ಕೆ ಅವರು ಅದು ಜೀರ್ಣವಾಗಿ ಹೋಯಿತು. ಸಮುದ್ರದಲ್ಲಿ ನೀರನ್ನು ತುಂಬಿಸಲಿಕ್ಕೆ ಬೇರೆ ಪ್ರಯತ್ನವನ್ನು ಮಾಡಿರಿ ಎಂದರು. ಈರೀತಿಯಾಗಿ ಹೇಳಿದ ಅವರ ಮಾತನ್ನು ಕೇಳಿ ದೇವತೆಗಳು ಆಶ್ಚರ್ಯಉಳ್ಳವರಾಗಿಯೂ ವಿಷಾದವುಳ್ಳವರಾಗಿಯೂ ಆದರು.

ಕಂಡುಹಿಡಿಯಲಿಕ್ಕೆ ಆಯಿತು. ಇದರಿಂದ ಶ್ರಮವನ್ನು ಹೊಂದಿದರು. ಕೊನೆಗೆ ಅವರೂ ನಾಶವನ್ನು ಹೊಂದಿದರು. ಈರೀತಿಯಾಗಿ ಜಗತ್ತಿನಲ್ಲಿ ಯಾಗಾದಿಗಳು ನಡೆಯದೆ ಇರಲು ದೇವತೆಗಳು ದುಃಖವನ್ನು ಹೊಂದಿದರು. ಇಂದ್ರದೇವರಿಂದ ಸಭಯದಿಂದ ಯೋಚನೆ ಮಾಡಿದರು. ಕೊನೆಗೆ ವೈಕುಂಠಕ್ಕೆ ಹೋಗಿ ಭಗವಂತ ನೊಡನೆ ನಾನಾವಿಧವಾಗಿ ಸ್ತೋತ್ರವನ್ನು ಮಾಡಿ ಬಂದ ಆಪತ್ತನ್ನು ತಿಳಿಸಿದರು.

ದೇವತೆಗಳ ಪ್ರಾರ್ಥನೆಯನ್ನು ಕೇಳಿ ಭಗವಂತನು 'ದೇವತೆಗಳೇ ಪ್ರಜೆಗಳ ನಾಶಕ್ಕೆ ಕಾರಣವನ್ನು ನಾನು ತಿಳಿದಿರುವೆನು. ಅದನ್ನು ನಿಮಗೂ ಹೇಳುತ್ತೇನೆ. ಕೇಳಿರಿ. ಕಾಲೇಯ ಎಂದು ಹೆಸರುಳ್ಳ ಪರಮಕ್ರೂರರಾದ ವೃತ್ರಾಸುರನನ್ನು ಆಶ್ರಯಿಸಿ ಲೋಕಕ್ಕೆ ಉಪದ್ರ ಕೊಡುತ್ತಿದ್ದರು. ಇಂದ್ರನು ವೃತ್ರಾಸುರನನ್ನು ಸಂಹರಿಸಲು ಅವರು ಅಂಜಿಕೆಯಿಂದ ಸಮುದ್ರವನ್ನು ಪ್ರವೇಶಿಸಿದರು. ಅವರು ಘೋರವಾದ ಸಮುದ್ರ ದಲ್ಲಿ ಪ್ರವೇಶಿಸಿ ರಾತ್ರಿಯಲ್ಲಿ ಹೊರಗೆ ಬಂದು ಋಷಿಗಳನ್ನು ಸಂಹರಿಸುತ್ತಿರುವರು. ಅವರು ಸಮುದ್ರದಲ್ಲಿ ಆಶ್ರಯಿಸಿಕೊಂಡಿರುವುದರಿಂದ ಅವರನ್ನು ಸಂಹರಿಸಲಿಕ್ಕೆ ಆಗಲಾರದು. ಅದಕ್ಕಾಗಿ ಸಮುದ್ರದ ನೀರನ್ನು ಬತ್ತಿಸುವ ವಿಷಯದಲ್ಲಿ ಪ್ರಯತ್ನವನ್ನು ಮಾಡಿರಿ' ಎಂದು ಹೇಳಿದನು.

ತರುವಾಯ ದೇವತೆಗಳು ಬ್ರಹ್ಮದೇವರ ಬಳಿಗೆ ಬಂದು 'ಕಾಲೇಯರು ಸರ್ವಲೋಕಗಳನ್ನೂ ನಾಶಮಾಡಲಿಕ್ಕೆ ನಿಶ್ಚಯಿಸಿದ್ದಾರೆಂದು ಎಲ್ಲಾ ವಿಷಯಗಳನ್ನೂ ತಿಳಿಸಿದರು. ಆಗ ಬ್ರಹ್ಮದೇವರು 'ದೇವತೆಗಳೇ! ಕಾಲಪ್ರೇರಿತರಾಗಿ ಆ ಕಾಲೇಯರು ಮಾನವರೇ ಮೊದಲಾದವರನ್ನು ಸಂಹರಿಸುವುದು ನನಗೆ ತಿಳಿದಿರುವುದು. ಅವರು ಸಾಯುವ ಕಾಲವು ಸಮೀಪಿಸಿತು. ಸಮುದ್ರದ ನೀರನ್ನು ಬತ್ತಿಸಲಿಕ್ಕೆ ಉಪಾಯವನ್ನು ಹೇಳುವೆನು. ಅಗಸ್ತ್ಯರೆಂಬ ಪ್ರಸಿದ್ಧರಾದ ಋಷಿಗಳು ಇದ್ದಾರೆ. ಅವರ ಬಳಿಗೆ ಹೋಗಿ ಈ ಕಾರ್ಯವನ್ನು ಹೇಳಿರಿ. ಅವರು ಒಂದೇ ಕ್ಷಣದಲ್ಲಿ ಸಮುದ್ರದ ನೀರನ್ನೆಲ್ಲಾ ಕುಡಿಯಲು ಸಮರ್ಥರು. ಸಮುದ್ರದ ನೀರು ಬತ್ತಿಹೋದಮೇಲೆ ನೀವು ಆ ದೈತ್ಯರನ್ನು ಸಂಹರಿಸಿರಿ' ಎಂದು ಹೇಳಿದರು. ಈ ರೀತಿಯಾಗಿ ಬ್ರಹ್ಮದೇವರ ಮಾತನ್ನು ಕೇಳಿ ದೇವತೆಗಳು ಅಗಸ್ತ್ಯರ ಆಶ್ರಮಕ್ಕೆ ಹೋಗಿ ಅಲ್ಲಿ ಕೂತಿದ್ದ ಮಹಾತಪಸ್ವಿಯಾದ ಅವರನ್ನು 'ಪೂರ್ವದಲ್ಲಿ ನಹುಷರಾಜನಿಂದ ಪೀಡಿತವಾದ ಲೋಕವನ್ನು ನಹುಷನಿಗೆ ಶಾಪವನ್ನು ಕೊಟ್ಟು ರಕ್ಷಿಸಿದರು. ಸೂರ್ಯಸಂಚಾರವನ್ನು ತಡೆಯಲಿಕ್ಕೆ ಹೊರಟ ವಿಂಧ್ಯ ಪರ್ವತವು ನಿಮ್ಮ ಆಜ್ಞೆಯನ್ನು ಸ್ವೀಕರಿಸಿ ಬೆಳೆಯದೆ ಇದೆ. ಈಗ ಭಯವುಳ್ಳ

ನಮಗೆ ನೀವೇ ಗತಿ' ಎಂದು ಹೇಳಿ ಸ್ತೋತ್ರಮಾಡಿ ಎಲ್ಲಾ ವಿಷಯವನ್ನೂ ಹೇಳಿಕೊಂಡರು.

ಆಗ ಅಗಸ್ತ್ಯರು ದೇವತೆಗಳ ಮಾತನ್ನು ಕೇಳಿ 'ಆಗಲಿ. ನಾನು ಲೋಕದ ಸುಖಕ್ಕೆ ಕಾರಣವಾದ ಕಾರ್ಯವಾದ ಸಮುದ್ರಪಾನವನ್ನು ಮಾಡುವೆನು' ಎಂದರು. ತರುವಾಯ ಋಷಿಗಳಿಂದಲೂ ದೇವತೆಗಳಿಂದಲೂ ಸಹಿತರಾಗಿ ಸಮುದ್ರಕ್ಕೆ ಹೋದರು. ಮನುಷ್ಯರೇ ಮೊದಲಾದ ಎಲ್ಲರೂ ಈ ಆಶ್ಚರ್ಯಕರವಾದ ವಿಷಯವನ್ನು ನೋಡುವುದಕ್ಕಾಗಿ ಅಲ್ಲಿಗೆ ಬಂದರು. ಪೂಜ್ಯರಾದ ಅಗಸ್ತ್ಯರು ಸಮುದ್ರವನ್ನು ಹೊಂದುವವರಾಗಿ ಬಂದಿರುವ ಎಲ್ಲಾ ದೇವತೆಗಳೊಡನೆಯೂ ಮುನಿಗಳೊಡನೆಯೂ 'ನಾನು ಲೋಕ ಹಿತಕ್ಕಾಗಿ ಸಮುದ್ರಪಾವನ್ನು ಮಾಡುವೆನು. ನೀವು ಮಾಡಬೇಕಾದ ಕಾರ್ಯವನ್ನು ಬೇಗನೇ ಮಾಡಿರಿ' ಎಂದು ಹೇಳಿ ಎಲ್ಲರೂ ನೋಡುವಂತೆ ಸಮುದ್ರದ ನೀರನ್ನೆಲ್ಲಾ ಕುಡಿದರು. ಇಂದ್ರಾದಿದೇವತೆಗಳು ಇದನ್ನು ನೋಡಿ ಆಶ್ಚರ್ಯವನ್ನು ಹೊಂದಿದರು. 'ನೀವೇ ನಮ್ಮ ರಕ್ಷಕರು. ನಿಮ್ಮ ಅನುಗ್ರಹದಿಂದ ದೇವತೆಗಳಿಂದ ಸಹಿತವಾದ ಜಗತ್ತು ನಾಶವನ್ನು ಹೊಂದುವುದಿಲ್ಲ' ಎಂದು ಹೇಳಿದರು. ಈರೀತಿಯಾಗಿ ದೇವತೆಗಳು ಸ್ತೋತ್ರಮಾಡುತ್ತಿರಲು ಗಂಧರ್ವರು ಗಾಯನಮಾಡುತ್ತಿರಲು ದಿವ್ಯಪುಷ್ಪದ ಮಳೆಯು ಸುರಿಯುತ್ತಿರಲು ಅಗಸ್ತ್ಯರು ಸಮುದ್ರದಲ್ಲಿ ನೀರಿನಲ್ಲದಂತೆ ಮಾಡಿಬಿಟ್ಟರು.

ತರುವಾಯ ಎಲ್ಲಾ ದೇವತೆಗಳೂ ಸಂತೋಷವುಳ್ಳವರಾಗಿ ಉತ್ತಮ ಆಯುಧ ಗಳನ್ನು ಹಿಡಿದುಕೊಂಡು ಅಲ್ಲಿದ್ದ ದೈತ್ಯರನ್ನೆಲ್ಲಾ ಬಡಿಯಲಿಕ್ಕೆ ಆರಂಭಿಸಿದರು. ಮಹಾಬಲವುಳ್ಳ ವೇಗವುಳ್ಳ ಗರ್ಜನೆ ಮಾಡುತ್ತಾ ಒಂದು ಮುಹೂರ್ತಕಾಲ ಯುದ್ಧವನ್ನು ಮಾಡಿದರು. ಆದೈತ್ಯರು ಮೊದಲೇ ಋಷಿಗಳ ತಪಸ್ಸಿನಿಂದ ದಗ್ಧರಾಗಿದ್ದ ವರು ದೇವತೆಗಳಿಂದ ಸಾಯುವವರಾದರು. ಉಳಿದ ಕೆಲವು ಕಾಲೇಯರು ಭೂಮಿಯನ್ನು ಸೀಳಿಕೊಂಡು ಪಾತಾಳಕ್ಕೆ ಓಡಿಹೋದರು. ತರುವಾಯ ದೇವತೆಗಳು ಮೃತರಾದ ರಾಕ್ಷಸರನ್ನು ನೋಡಿ ಅಗಸ್ತ್ಯರನ್ನು ನಾನಾವಿಧವಾಗಿ ಸ್ತೋತ್ರಮಾಡಿ 'ನಿಮ್ಮ ಅನುಗ್ರಹದಿಂದ ಕಾಲೇಯರು ಮೃತರಾದರು. ಇನ್ನು ಮುಂದೆ ಪೂರ್ವದಂತೆ ಸಮುದ್ರದಲ್ಲಿ ನೀರನ್ನು ತುಂಬಿಸಿರಿ' ಎಂದರು. ಅದಕ್ಕೆ ಅವರು ಅದು ಜೀರ್ಣವಾಗಿ ಹೋಯಿತು. ಸಮುದ್ರದಲ್ಲಿ ನೀರನ್ನು ತುಂಬಿಸಲಿಕ್ಕೆ ಬೇರೆ ಪ್ರಯತ್ನವನ್ನು ಮಾಡಿರಿ ಎಂದರು. ಈರೀತಿಯಾಗಿ ಹೇಳಿದ ಅವರ ಮಾತನ್ನು ಕೇಳಿ ದೇವತೆಗಳು ಆಶ್ಚರ್ಯಉಳ್ಳವರಾಗಿಯೂ ವಿಷಾದವುಳ್ಳವರಾಗಿಯೂ ಆದರು.

ತರುವಾಯ ಅಗಸ್ತ್ಯರಿಗೆ ನಮಸ್ಕರಿಸಿ ಎಲ್ಲರೂ ಹೊರಟುಹೋದರು. ದೇವತೆಗಳು ಬ್ರಹ್ಮದೇವರಿದ್ದಲ್ಲಿಗೆ ಬಂದು ನಮಸ್ಕರಿಸಿ ಸಮುದ್ರಕ್ಕೆ ನೀರನ್ನು ತುಂಬಿಸಬೇಕೆಂದು ಕೈಮುಗಿದುಕೊಂಡು ಹೇಳಿದರು. ಅದಕ್ಕೆ ಬ್ರಹ್ಮದೇವರು 'ನೀವೀಗ ಹೊರಟುಹೋಗಿರಿ. ಬಹುಕಾಲದ ಮೇಲೆ ಭಗೀರಥನು ಸಮುದ್ರವನ್ನು ನೀರಿನಿಂದ ತುಂಬಿಸುವನು' ಎಂದು ಹೇಳಿದರು. ಬ್ರಹ್ಮದೇವರ ಮಾತನ್ನು ಕೇಳಿ ದೇವತೆಗಳು ಆ ಕಾಲವನ್ನು ನಿರೀಕ್ಷಿಸುತ್ತಾ ಹೊರಟುಹೋದರು.



# ಅಗಸ್ತ್ಯರು ವಿಂಧ್ಯಪರ್ವತವನ್ನು ತಡೆದದ್ದು [1]

ಸೂರ್ಯನು ಉದಯಾಸ್ತಮಾನ ಕಾಲಗಳಲ್ಲಿ ಪರ್ವತಶ್ರೇಷ್ಠವಾದ ಮೇರುವಿಗೆ ಪ್ರದಕ್ಷಿಣೆ ಬರುತ್ತಿರುವನು. ಇದನ್ನು ವಿಂಧ್ಯಪರ್ವತವು ನೋಡಿ ಸೂರ್ಯದೇವ ರೊಡನೆ 'ನಿತ್ಯವೂ ನೀನು ಮೇರುಪರ್ವತಕ್ಕೆ ಹೋಗಿ ಪ್ರದಕ್ಷಿಣೆ ಬರುವಿಯೋ ಅದೇ ರೀತಿಯಾಗಿ ನನಗೂ ಪ್ರದಕ್ಷಿಣೆ ಬಾ' ಎಂದಿತು. ಅದಕ್ಕೆ ಸೂರ್ಯದೇವರು 'ಪರ್ವತವೇ! ನಾನು ನನ್ನ ಇಚ್ಛೆಯಿಂದ ಈ ಮೇರುಪರ್ವತಕ್ಕೆ ಪ್ರದಕ್ಷಿಣೆ ಬರುವುದಲ್ಲ. ಈ ಜಗತ್ತನ್ನು ಸೃಷ್ಟಿ ಮಾಡಿರುವ ಭಗವಂತನು ಈ ಮಾರ್ಗವನ್ನು ಹೇಳಿರುವನು. ಈ ಮಾರ್ಗದಿಂದ ನಾನು ಹೋಗುತ್ತಿರುವೆನು' ಎಂದರು. ಈರೀತಿಯಾಗಿ ಹೇಳಲು ಕೂಡಲೇ ವಿಂಧ್ಯಪರ್ವತವು ಸೂರ್ಯಚಂದ್ರರ ಸಂಚಾರವನ್ನು ನಿಲ್ಲಿಸಬೇಕೆಂದು ಬೆಳೆಯಲಿಕ್ಕೆ ಆರಂಭಿಸಿತು.

ತರುವಾಯ ಇಂದ್ರಾದಿದೇವತೆಗಳೆಲ್ಲಾ ಒಂದು ಉಪಾಯದಿಂದ ಆ ಪರ್ವತಹತ್ತಿರ ಹಾಗೆ ಮಾಡಬಾರದು ಎಂದು ಹೇಳಿದರು. ಆದರೆ ಆ ಪರ್ವತವು ಹಾಗೆ ಅವರ ಮಾತನ್ನು ಕೇಳಲಿಲ್ಲ. ತರುವಾಯ ಭಗವಂತನ ಸಂಕಲ್ಪವನ್ನು ತಿಳಿದ ದೇವತೆಗಳು ಭಗವಂತನ ಅನುಗ್ರಹಕ್ಕೆ ಪಾತ್ರರಾದ ಆಶ್ರಮದಲ್ಲಿ ಇದ್ದ ಅತ್ಯದ್ಭುತ ವೀರ್ಯದಿಂದ ಪ್ರಕಾಶಮಾನರಾದ ಅಗಸ್ತ್ಯರ ಬಳಿಗೆ ಹೋಗಿ 'ಶೈಲರಾಜನಾದ ವಿಂಧ್ಯಪರ್ವತವು ಕೋಪಿಸಿಕೊಂಡು ಸೂರ್ಯಚಂದ್ರ ನಕ್ಷತ್ರಗಳ ಮಾರ್ಗವನ್ನು ತಡೆಯುತ್ತಾ ಬೆಳೆಯುತ್ತಿದೆ. ಆ ಪರ್ವತವನ್ನು ತಡೆಯಲಿಕ್ಕೆ ನೀವೊಬ್ಬರು ಹೊರತು ಮತ್ತೆ ಯಾರೂ ಸಮರ್ಥರಿಲ್ಲ' ಎಂದು ಹೇಳಿಕೊಂಡರು. (ಇಂದ್ರಾದಿ ದೇವತೆಗಳು

1. ಮ.ಭಾ.ವ.ಪ. ಅ.104

ಈರೀತಿಯಾಗಿ ಹೇಳಿದ್ದರಿಂದ ಅಗಸ್ತ್ಯರು ಇಂದ್ರದೇವರಿಗಿಂತಲೂ ಉತ್ತಮರು ಎಂದು ಭಾವಿಸಬಾರದು. ಭಗವಂತನು ತಾತ್ಕಾಲಿಕ ಕೃಪೆಯಿಂದ ಒಬ್ಬೊಬ್ಬರಿಗೆ ಒಂದೊಂದು ಕಾಲದಲ್ಲಿ ಕೀರ್ತಿಯನ್ನು ಕೊಡಬೇಕೆಂದು ಅವರಿಂದ ಮಹಾಕಾರ್ಯವನ್ನು ಮಾಡಿಸಲಿಕ್ಕೆ ಇಚ್ಛಿಸಿದನು. ಭಗವಂತನ ಅನುಗ್ರಹದಿಂದ ಆವನ ಸಂಕಲ್ಪವನ್ನು ತಿಳಿದವರಾಗಿ ದೇವತೆಗಳು ಹಾಗೆ ಮಾಡುವರು ಎಂದು ತಿಳಿದುಕೊಳ್ಳಬೇಕು.)

ಅಗಸ್ತ್ಯರು ದೇವತೆಗಳ ಆ ಮಾತನ್ನು ಕೇಳಿ ತನ್ನ ಪತ್ನಿಯಿಂದ ಸಹಿತರಾಗಿ ವಿಂಧ್ಯಪರ್ವತದ ಬಳಿಗೆ ಹೋಗಿ 'ಪರ್ವತೋತ್ತಮನೇ! ನೀನೀಗ ನನಗೆ ದಾರಿಯನ್ನು ಬಿಡಬೇಕೆಂದು ಅಪೇಕ್ಷಿಸುತ್ತೇನೆ. ಒಂದು ಕಾರ್ಯಕ್ಕಾಗಿ ನಾನೀಗ ದಕ್ಷಿಣದಿಕ್ಕಿಗೆ ಹೋಗುತ್ತೇನೆ. ನಾನು ಹಿಂದೆ ತಿರುಗಿಬರುವವರೆಗೆ ಹೀಗೆಯೇ ಇರು. ನಾನು ಬಂದಮೇಲೆ ಬೇಕಾದರೆ ದೊಡ್ಡದಾಗಿ ಬೆಳೆಯತಕ್ಕವನಾಗು' ಎಂದು ಹೇಳಿ ಹೋಗಿ ಈಗಲೂ ಅಗಸ್ತ್ಯರು ದಕ್ಷಿಣ ದಿಕ್ಕಿನಿಂದ ಬರಲೇ ಇಲ್ಲ. ವಿಂಧ್ಯಪರ್ವತವೂ ಅವರ ಭಯದಿಂದ ಬೆಳೆಯದೆ ಚಿಕ್ಕದಾಗಿಯೇ ಇರುತ್ತಿರುವುದು.



## ಚಂಡಿಯ ಕಥೆ [1]

ಮಾಹಿಷ್ಮತೀನಗರದಿಂದ ಮುಂದೆ ಹೊರಟ ಕುದುರೆಯು ಒಂದು ದೊಡ್ಡ ವನದಲ್ಲಿ ಹೋಯಿತು. ಅಲ್ಲಿ ಹತ್ತು ಮೈಲು ದೊಡ್ಡದಾಗಿರುವ ಒಂದು ದೊಡ್ಡ ಕಲ್ಲನ್ನು ನೋಡಿ ಕುದುರೆಯು ಅದರಲ್ಲಿ ಬೆನ್ನು ತುರಿಸಿಕೊಳ್ಳಲಿಕ್ಕೆ ಆರಂಭಿಸಿತು. ಅದರ ಬೆನ್ನು ಕಲ್ಲಿಗೆ ಅಂಟಿಕೊಂಡಿತು. ಕಲ್ಲಿನಿಂದ ಬಿಡಿಸಿಕೊಂಡು ಬರಲಿಕ್ಕೆ ಕುದುರೆಯಿಂದ ಆಗಲಿಲ್ಲ. ಆಗದೆ ಜನರು ಹೋಗಿ ಅರ್ಜುನನೊಡನೆ ಹೇಳಿದರು. ಅರ್ಜುನನು ಅದನ್ನು ಕೇಳಿ ಪ್ರದ್ಯುಮ್ನನಿಂದ ಸಹಿತನಾಗಿ ಬಂದು ಕುದುರೆಯನ್ನು ನೋಡಿದನು. ಕುದುರೆಯನ್ನು ಬಿಡಿಸಿರಿ ಎಂದು ಹೇಳಿದನು. ಜನರು ಹೋಗಿ ಕುದುರೆಗೆ ಚಾಟು ವಾರಿಯಿಂದ ಬಡೆದರು. ಮುಷ್ಟಿಯಿಂದ ಬಡೆದರು. ಕುದುರೆಯನ್ನು ಬಿಡಿಸಲಿಕ್ಕೆ ಸಾಧ್ಯವಾಗಲಿಲ್ಲ. ಕುದುರೆಯು ಕದಲಲೇ ಇಲ್ಲ.

ತರುವಾಯ ಆ ಶಿಲೆಯ ವಿಷಯವನ್ನು ತಿಳಿಯುವುದಕ್ಕೋಸ್ಕರ ತಿಳಿದವರು ಯಾರು ಇದ್ದಾರೆ? ಎಂದು ಹುಡುಕಿಕೊಂಡು ಬರುವುದಕ್ಕಾಗಿ ಚಾರರನ್ನು ಕಳುಹಿಸಿ

1. ಜೈ.ಭಾ.ಅ.116

ದನು. ತರುವಾಯ ಚಾರರು ಹುಡುಕಿಕೊಂಡು ಹೋಗಿ ಹತ್ತಿರದಲ್ಲೇ ಇದ್ದ ಸೌಭರಿಋಷಿಗಳನ್ನು ನೋಡಿ ಅರ್ಜುನನ ಹತ್ತಿರ ಬಂದು ಹೇಳಿದರು. ಆಗ ಅರ್ಜುನನು ಯೌವನಾಶ್ವ ವೃಷಕೇತು ಸಾತ್ಯಕಿ ಪ್ರದ್ಯುಮ್ನ ಇವರಿಂದ ಸಹಿತನಾಗಿ ಬಂದು ಶಿಷ್ಯರಿಗೆ ವೇದಪಾಠವನ್ನು ಹೇಳುತ್ತಿದ್ದ ಸೌಭರಿ ಋಷಿಗಳನ್ನು ನೋಡಿ ನಮಸ್ಕರಿಸಿ, ಋಷಿಗಳೇ! ನಾನು ಧರ್ಮರಾಜನ ತಮ್ಮನು. ಧರ್ಮರಾಜರು ಅಶ್ವಮೇಧಯಾಗವನ್ನು ಮಾಡುತ್ತಾರೆ. ನಾವು ಯುದ್ಧದಲ್ಲಿ ಅನೇಕ ಪರಾಕ್ರಮಶಾಲಿ ಗಳಾದ ಕೌರವರನ್ನು ಸಂಹರಿಸಿದೆವು. ಆ ಪಾಪ ಪರಿಹಾರಕ್ಕಾಗಿ ಯಾಗವನ್ನು ಮಾಡುವುದು. ಅದಕ್ಕಾಗಿ ಬಿಟ್ಟಿದ್ದ ಕುದುರೆಯನ್ನು ರಕ್ಷಿಸುತ್ತಾ ನಾನು ಬರುತ್ತಾ ಇದ್ದೇನೆ. ಕುದುರೆಯು ಇಲ್ಲಿಯೇ ಒಂದು ಕಲ್ಲಿನಲ್ಲಿ ಸಿಕ್ಕಿ ಬಿಡಿಸಿಕೊಂಡು ಬರಲಿಕ್ಕೆ ಆಗುವುದಿಲ್ಲ. ಅದಕ್ಕೇನು ಕಾರಣವೆಂಬುದನ್ನು ತಾವು ಹೇಳಬೇಕು ಎಂದನು.

ಅದಕ್ಕೆ ಸೌಭರಿ ಋಷಿಗಳು ನಕ್ಕು, ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನೇ ನಿಮ್ಮ ಬಳಿಯಲ್ಲಿರುವಾಗ ಅಶ್ವಮೇಧಯಾಗವು ಏಕೆ? ಆಗಲಿ. ಇದೂ ಪರಮಾತ್ಮನ ಇಚ್ಛೆಯಿಂದಲೇ ನಡೆದಿರುವುದು. ನಿನಗೆ ಕುದುರೆಯು ಸಿಕ್ಕಿಬಿದ್ದ ಆ ಕಲ್ಲಿನ ವಿಷಯ ವನ್ನು ಹೇಳುತ್ತೇನೆ.

ಅರ್ಜುನ! ಪೂರ್ವದಲ್ಲಿ ಈ ಕಲ್ಲು ಚಂಡೀ ಎಂಬ ಬ್ರಾಹ್ಮಣಸ್ತ್ರೀಯು. ಪೂರ್ವ ದಲ್ಲಿ ಉದ್ದಾಲಕರು ಎಂಬ ಬ್ರಾಹ್ಮಣರು ಇದ್ದರು. ಅವರು ಚಂಡಿ ಎಂಬ ಕನ್ಯೆಯನ್ನು ಮದುವೆ ಮಾಡಿಕೊಂಡರು. ಮದುವೆಯ ಸಮಯದಲ್ಲಿ ಬ್ರಾಹ್ಮಣರು ಅಗ್ನಿಯ ಸಮೀಪದಲ್ಲಿ ಕನ್ಯೆಯೊಡನೆ ಅಮ್ಮ! ನೀನು ಗಂಡನು ಹೇಳಿದಂತೆ ಯಾವಾಗಲೂ ನಡೆಯಬೇಕು ಎಂದಳು. ಆ ಮಾತನ್ನು ಕೇಳಿ ಚಂಡಿಯು ಬ್ರಾಹ್ಮಣರೇ! ನಾನು ಸತ್ಯವನ್ನು ಹೇಳುತ್ತೇನೆ. ನಾನು ಗಂಡನ ಮಾತನ್ನು ಯಾವಾಗಲೂ ಕೇಳಲಾರೆನು ಎಂದು ಹೇಳಿದಳು. ಅದನ್ನು ಕೇಳಿ ಆಶ್ಚರ್ಯಪಡುತ್ತಿರುವ ಉದ್ದಾಲಕರನ್ನು ನೋಡಿ ಬ್ರಾಹ್ಮಣರು 'ಚಿಕ್ಕಹುಡುಗಿಯು ಹೇಳುತ್ತಾಳೆ. ಆಶ್ಚರ್ಯಪಡುವುದುಬೇಡ' ಎಂದು ಹೇಳಿದರು. ತರುವಾಯ ಉದ್ದಾಲಕರು ಚಂಡಿಯನ್ನು ಕರೆದುಕೊಂಡು ಮನೆಗೆ ಹೋದರು. ಚಿಕ್ಕಹುಡುಗಿಯೆಂದು ಮನೆಯ ಕೆಲಸವೊಂದನ್ನು ಹೇಳಲಿಲ್ಲ. ತಾನೇ ಅಗ್ನಿಹೋತ್ರಕ್ಕೆ ಬೇಕಾದ ಕೆಲಸವನ್ನು ಮಾಡುತ್ತಿದ್ದರು. ಕೆಲವು ದಿವಸದ ಮೇಲೆ ಚಂಡಿಯು ಪ್ರೌಢಳಾದಳು.

ತರುವಾಯ ಉದ್ದಾಲಕರು ಪತ್ನಿಯೊಡನೆ ಅಗ್ನಿ ಶುಶ್ರೂಷಾ ಮಾಡು. ನಿನಗೆ ಒಳ್ಳೇ ಮಕ್ಕಳಾಗುವರು ಎಂದರು. ಅದಕ್ಕೆ ಚಂಡಿಯು ಕೋಪದಿಂದ ಕೆಣ್ಣುಕೆಂಪಾಗಿ

ಮಾಡಿಕೊಂಡು ನಾನು ಅಗ್ನಿ ಶುಶ್ರೂಷಾ ಮಾಡಲಾರೆನು. ನನಗೆ ಮಕ್ಕಳಿಂದ ಪ್ರಯೋಜನವಿಲ್ಲ ಎಂದಳು. ತರುವಾಯ ಆ ತಂಬಿಗೆಯನ್ನು ಸ್ವಲ್ಪ ತೆಗೆದುಕೊಂಡು ಬಾ ಎಂದನು. ಆಗ ಅವಳು ಎರಡು ಕೈಗಳಿಂದ ತಂಬಿಗೆಯನ್ನು ಹಿಡಿದು ಕೆಳಗೆ ಹಾಕಿ ಒಡೆದು ಹಾಕಿದಳು. ಉದ್ದಾಲಕರು ಆಶ್ಚರ್ಯ ಪಟ್ಟರು. ರಾತ್ರಿಯಲ್ಲಿ ಮಲಗಿರುವಾಗ ನಿನ್ನ ಹತ್ತಿರ ಒಂದು ಕೆಲಸವನ್ನೂ ಹೇಳುವುದಿಲ್ಲ. ನೀನು ಸಮೀಪದಲ್ಲಿ ಮಲಗು ಎಂದರು. ಅದಕ್ಕೆ ಆಗಲೇ ಎದ್ದು ಮನೆಯ ಹೊರಗೆ ಹೋಗಿ ನಿಂತಳು. ಉದ್ದಾಲಕರಿಗೆ ಈರೀತಿಯಾಗಿ ತನ್ನ ಹೆಂಡತಿಯ ವರ್ತನೆಯನ್ನು ನೋಡಿ ಏನು ಮಾಡಬೇಕೆಂದು ತೋರದಾಯಿತು. ಸಂಧ್ಯಾವಂದನೆ ಇತ್ಯಾದಿ ಕಾರ್ಯಗಳನ್ನೂ ಮಾಡಲಿಕ್ಕೆ ತೋರದಂತಾಯಿತು.

ಒಂದು ದಿವಸ ಅವರ ಮನೆಗೆ ಕೌಂಡನ್ಯರೆಂಬ ಮುನಿಗಳು ಬಂದರು. ತೀರ್ಥಯಾತ್ರಾ ಮಾಡುವ ಕಾರಣದಿಂದ ಶಿಷ್ಯರಿಂದ ಸಹಿತರಾಗಿ ಬಂದಿದ್ದರು. ಉದ್ದಾಲಕರು ಅರ್ಘ್ಯಾದಿಗಳಿಂದ ಪೂಜೆಯನ್ನು ಮಾಡಿದರು. ಕೌಂಡಿನ್ಯರು ಸುಖವಾಗಿ ಕೂತುಕೊಂಡು ಉದ್ದಾಲಕರೊಡನೆ ನೀವು ಏಕೆ ಇಷ್ಟು ಕೃಶರಾಗಿರುವಿರಿ ಎಂದು ಕೇಳಿದರು. ಅದಕ್ಕೆ ಉದ್ದಾಲಕರು ನನಗೆ ಗಂಡು ಮಕ್ಕಳಿಲ್ಲ, ಹೆಣ್ಣು ಮಗಳು ಇಲ್ಲ. ಹೆಂಡತಿಯು ಬಹು ದುಷ್ಟಳಾಗಿದ್ದಾಳೆ. ಆ ದುಷ್ಟೆಯ ಹತ್ತಿರ ನಾನು ಏನು ಹೇಳುತ್ತೇನೋ ಅದನ್ನು ಅವಳು ಮಾಡುವುದೇ ಇಲ್ಲ. ವಿಪರೀತವಾಗಿಯೇ ಮಾಡುತ್ತಾಳೆ. ಅವಳು ನನ್ನ ಮಾತು ಕೇಳುವುದೇ ಬೇಡ. ಆದರೆ ನಾಳೆ ನನ್ನ ತಂದೆಯ ಶ್ರಾದ್ಧವು ಬಂದಿದೆ. ಏನು ಮಾಡಬೇಕೆಂದು ತಿಳಿಯಲಿಲ್ಲ. ಅದರಿಂದ ನಾನು ತುಂಬಾ ಕೃಶನಾಗಿದ್ದೇನೆ. ನೀವು ನನಗೆ ಏನಾದರೂ ಉಪಾಯವನ್ನು ಹೇಳಬೇಕು ಎಂದರು.

ಅದನ್ನು ಕೇಳಿ ಕೌಂಡಿನ್ಯರು ನಗುತ್ತಾ ಉದ್ದಾಲಕರ ಕಿವಿಯಲ್ಲಿ 'ಹಾಗಾದರೆ ಕಮಂಡಲುವನ್ನು ತರಬೇಡ. ಅಗ್ನಿ ಶುಶ್ರೂಷಾ ಮಾಡಬೇಡ. ಇತ್ಯಾದಿ ರೂಪವಾಗಿ ವಿಪರೀತವಾಗಿಯೇ ಹೇಳಿರಿ. ಆಗ ನಿಮ್ಮ ಕಾರ್ಯವು ಸಿದ್ಧಿಸುವುದು ಎಂದು ಹೇಳಿ ಹೊರಟುಹೋದರು. ಮತ್ತು ಇಲ್ಲಿಂದ ಇಪ್ಪತ್ತು ಮೈಲು ದೂರದಲ್ಲಿರುವ ಗೌತಮರ ತೀರ್ಥಕ್ಕೆ ಹೋಗಿ ನಾಳೆ ಬರುತ್ತೇನೆ. ಶ್ರಾದ್ಧವನ್ನು ಆರಂಭಿಸಿರಿ ಎಂದು ಹೇಳಿ ಹೊರಟುಹೋದರು.

ತರುವಾಯ ಉದ್ದಾಲಕರು ಚಂಡಿಯೊಡನೆ 'ನಾಳೆ ಬೆಳಿಗ್ಗೆ ಕೌಂಡಿನ್ಯರು ಮನೆಗೆ ಬರುತ್ತಾರೆ. ಅವರನ್ನು ನಾನು ಮನೆಯಿಂದ ಹೊರಗೆ ಮಾಡುತ್ತೇನೆ. ಅವರಿಗೆ ನಾನು ಅನ್ನವನ್ನು ಹಾಕುವುದಿಲ್ಲ, ವಸ್ತ್ರವನ್ನು ಕೊಡುವುದಿಲ್ಲ ಎಂದು ಹೇಳಿದರು.

ಅದಕ್ಕೆ ಚಂಡಿಯು ನಾನು ಕೌಂಡಿನ್ಯರಿಗೆ ಭೋಜನ ಮಾಡಿಸುತ್ತೇನೆ. ಪೂಜಾ ಮಾಡುತ್ತೇನೆ. ವಸ್ತ್ರವನ್ನು ಕೊಡುತ್ತೇನೆ ಎಂದಳು. ಈ ಮಾತನ್ನು ಕೇಳಿ ಉದ್ದಾಲಕರು ಮನಸ್ಸಿನಲ್ಲೇ ಸಂತೋಷಪಟ್ಟರು. ಹೊರಗೆ ತೋರಿಸಲಿಲ್ಲ. ಇದೇ ಉಪಾಯ ದಿಂದಲೇ ಕಾರ್ಯವನ್ನು ಸಾಧನೆ ಮಾಡಿಕೊಳ್ಳುವೆನು ಎಂದರು. ರಾತ್ರಿಯು ಪತ್ನಿಯೊಡನೆ ಚಂಡಿ! ನೀನು ನನ್ನ ಹಾಸಿಗೆಯಿಂದ ದೂರ ಮಲಗಬೇಕು ಎಂದರು. ಅದಕ್ಕೆ ಚಂಡಿಯು ಅವರ ಹಾಸಿಗೆಯಲ್ಲೇ ಮಲಗಿದಳು. ಉದ್ದಾಲಕರು ಚಂಡಿ 'ನಾಳೆ ನನ್ನ ತಂದೆಯ ಶ್ರಾದ್ಧವಾಗುತ್ತದೆ. ನಾನು ನಾಳೆ ಶ್ರಾದ್ಧವನ್ನು ಮಾಡಲಾರೆನು ಎಂದರು. ಅದಕ್ಕೆ ನಾಳೆ ಶ್ರಾದ್ಧವನ್ನು ಮಾಡಿಯೇ ಆಗಬೇಕು. ನನ್ನ ಮಾವನಿಗೆ ತೃಪ್ತಿಯುಂಟಾಗು ವಂತೆ ಮಾಡುವೆನು ಎಂದಳು.

ಉದ್ದಾಲಕರು ರಾತ್ರಿಯಲ್ಲಿ ನಾನು ಬ್ರಾಹ್ಮಣರನ್ನು ಆಮಂತ್ರಣಾ ಮಾಡಲಿಕ್ಕೆ ಹೋಗಲಾರೆನು. ಅಥವಾ ಕಣ್ಣು ಕಾಲು ಮೂಗು ಇಲ್ಲದ ಮೂರ್ಖರಾದ ಚಾಡಿಖೋರರಾದ ಅವೈಷ್ಣವರಾದ ದ್ಯೂತದಲ್ಲಿ ಆಸಕ್ತರಾದ ರೋಗಿಷ್ಠರಾದ ವೃಷಲೀಪತಿಗಳಾದ ಬ್ರಾಹ್ಮಣರನ್ನು ಕರೆದು ಬರುತ್ತೇನೆ ಎಂದರು. ಅದಕ್ಕೆ ಚಂಡಿಯು ನಾನು ವೇದಶಾಸ್ತ್ರಪಾರಂಗತರಾದ ಸತ್ಕುಲಪ್ರಸೂತರಾದ ಮಕ್ಕಳು ಮೊಮ್ಮಕ್ಕಳು ಪತ್ನಿಯರಿಂದ ಸಹಿತರಾದ ಬ್ರಾಹ್ಮಣಶ್ರೇಷ್ಠರನ್ನೇ ರಾತ್ರಿ ಕರೆದುಬರುತ್ತೇನೆ. ನಿಮ್ಮ ಮಾತು ಸತ್ಯವಾಗಲಿಕ್ಕೆ ಬಿಡಲಾರೆನು ಎಂದಳು.

ಉದ್ದಾಲಕರು ಚಂಡಿ! ಮನೆಯಲ್ಲಿ ಶ್ರಾದ್ಧವನ್ನು ಮಾಡುವ ಪಕ್ಷದಲ್ಲಿ ಶ್ರಾದ್ಧಕ್ಕೆ ಅನುಪಯುಕ್ತವಾದ ಕಡಲೆ ಹುರುಳಿ ಮೊಚ್ಚೆಕೊಟ್ಟೆ ಹಿಂಗು ಬದನೆಕಾಯಿ ಸೋರೆಕಾಯಿ ನುಗ್ಗೆಕಾಯಿ ಇವುಗಳೇ ಮೊದಲಾದ ನಿಷಿದ್ಧ ಪದಾರ್ಥಗಳಿಂದಲೇ ಶ್ರಾದ್ಧಮಾಡುವೆನು. ಶ್ರದ್ಧೆಯಿಲ್ಲದೆ ಮಾಡುವೆನು ಎಂದರು.

ಅದಕ್ಕೆ ಚಂಡಿಯು ಹಾ! ನಾನು ಎಷ್ಟು ಮಾತ್ರಕ್ಕೂ ಬಿಡಲಾರೆನು. ಒಳ್ಳೆಯ ಗೋಧಿ ಒಳ್ಳೆಯ ಅಕ್ಕಿ ಹೆಸರುಬೇಳೆ ಉದ್ದು ಇವುಗಳನ್ನು ತಂದು ಒಳ್ಳೇ ಅಡಿಗೆ ಮಾಡುವೆನು. ಒಳ್ಳೇ ಪಾಯಸ ಮಾಡುವೆನು. ಮಂಡಿಗೆ ಮೋದಕ ಪೇಣಿ ಇವು ಗಳನ್ನು ಮಾಡುವೆನು. ಮಲ್ಲಿಗೆ ಹೂವಿನಂತೆ ಇರುವ ಒಳ್ಳೇ ಅನ್ನವನ್ನು ಮಾಡುವೆನು. ಒಳ್ಳೇ ದನದ ತುಪ್ಪ ಹಾಲು ಸಕ್ಕರೆ ಬಾಳೆಹಣ್ಣು ಮಾವಿನಹಣ್ಣು ಇವುಗಳನ್ನು ತರುವೆನು. ಒಳ್ಳೇ ಶೀಕರಣೆಯನ್ನು ಮಾಡುವೆನು. ಸರಿಯಾದ ಕುಪಪ ಕಾಲದಲ್ಲಿ ಶ್ರದ್ಧೆಯಿಂದ ಶ್ರಾದ್ಧವು ನಡೆಯಬೇಕು. ಒಳ್ಳೆಯ ವಸ್ತ್ರವನ್ನು ಬ್ರಾಹ್ಮಣರಿಗೆ ಕೊಡ

ಬೇಕು. ತುಂಬಾ ದಕ್ಷಿಣೆಯನ್ನು ಕೊಡಬೇಕು. ಬ್ರಾಹ್ಮಣರಿಗೆ ಗೋದಾನ ಮಾಡಬೇಕು ಎಂದಳು.

ಉದ್ದಾಲಕರು ನೀನು ಹಾಗೆ ಬಲಾತ್ಕಾರ ಮಾಡುವುದಾದರೆ ನಾನು ಬ್ರಾಹ್ಮಣರಿಗೆ ಕಪ್ಪಾದ ವಸ್ತ್ರವನ್ನು ಕೊಡುವೆನು. ಹಾಳು ಎಣ್ಣೆಯಿಂದ ದೀಪವನ್ನಿಡುವೆನು. ಮನೆಯನ್ನೆಲ್ಲಾ ಕೊಳಕಾಗಿ ಇಡುವೆನು ಎಂದರು.

ಚಂಡಿಯು ಹಾ! ನೀವು ಹಾಗೆ ಮಾಡಲಿಕ್ಕೆ ಎಷ್ಟು ಮಾತ್ರಕ್ಕೂ ಬಿಡಲಾರೆನು. ಮನೆಯನ್ನು ಚೊಕ್ಕಟವಾಗಿ ಮಾಡುವೆನು. ಎಳ್ಳೆಣ್ಣೆಯಿಂದಲೇ ದೀಪವಿಡುವೆನು. ಬೆಳ್ಳಗಿರುವ ಒಳ್ಳೇ ವಸ್ತ್ರಗಳನ್ನೇ ಬ್ರಾಹ್ಮಣರಿಗೆ ಕೊಡುವೆನು ಎಂದಳು.

ಉದ್ದಾಲಕರು ಮನಸ್ಸಿನಲ್ಲಿಯೇ ಸಂತೋಷಪಡುತ್ತಾ ಹೋದರು. ಹೊರಗೆ ಮಾತ್ರ ತೋರಿಸಲಿಲ್ಲ. ಯಾವುದು ಬೇಕಾದರೂ ಅದಕ್ಕೆ ವಿಪರೀತವನ್ನೇ ಹೇಳುತ್ತಾ ಕಾರ್ಯಸಾಧನೆಯನ್ನು ಮಾಡಿದರು. ವಿಧಿಪ್ರಕಾರವಾಗಿ ಶ್ರಾದ್ಧವು ನಡೆಯಿತು. ಬ್ರಾಹ್ಮಣರಿಗೆ ಭೋಜನ ದಕ್ಷಿಣೆಯನ್ನೆಲ್ಲಾ ಚೆನ್ನಾಗಿ ಕೊಟ್ಟರು. ಕೊನೆಗೆ ತಾನೂ ಭೋಜನ ಮಾಡಿದರು. ಚಂಡಿಯೂ ಭೋಜನ ಮಾಡಿದಳು. ರಾತ್ರಿಯಲ್ಲಿ ಮಾತ್ರ ಮರೆತುಹೋಗಿ ಪಿಂಡಗಳನ್ನು ತೆಗೆದುಕೊಂಡು ಹೋಗಿ ಗಂಗಾಜಲದಲ್ಲಿ ಹಾಕು ಎಂದರು. ಕೂಡಲೇ ಚಂಡಿಯು ಹೋಗಿ ಗೋಮಯವನ್ನು ಹಾಕುತ್ತಿದ್ದ ಪ್ರದೇಶಕ್ಕೆ ಹಾಕಿಬಿಟ್ಟಳು. ಇದರಿಂದ ಉದ್ದಾಲಕರಿಗೆ ಬಹುಕೋಪವು ಬಂದಿತು. ದುಷ್ಟಳೇ ನನ್ನ ಆಜ್ಞೆಯಿಂದ ನೀನು ಕಲ್ಲಾಗಿ ಬಿದ್ದಿರು. ಬಹುಕಾಲ ಕಲ್ಲಾಗಿದ್ದು ಆಮೇಲೆ ಒಂದು ಕುದುರೆಯ ಸ್ಪರ್ಶದಿಂದ ಸ್ತ್ರೀರೂಪವನ್ನು ಹೊಂದುವಿ ಎಂದು ಶಾಪವನ್ನು ಕೊಟ್ಟರು. ಅರ್ಜುನ! ಅದೇ ಕಲ್ಲನ್ನೇ ನಿನ್ನ ಕುದುರೆಯು ಸ್ಪರ್ಶ ಮಾಡಿತು. ನೀನು ಹೋಗಿ ಆ ಚಂಡಿಯನ್ನು ಶಾಪದಿಂದ ಬಿಡಿಸು' ಎಂದು ಹೇಳಿದರು.

ತರುವಾಯ ಕುದುರೆಯು ಮುಂದೆ ಹೋಯಿತು. ಚಂಡಿಯು ಶಾಪದಿಂದ ಬಿಡಲ್ಪಟ್ಟಳು. ಆಮೇಲೆ ಚಂಡಿಯು ಗಂಡನ ಮಾತಿನಂತೆಯೇ ನಡೆಯುತ್ತಾ ಇದ್ದಳು. ಉದ್ದಾಲಕರು ತನ್ನ ಪತ್ನಿಯಿಂದ ಸಹಿತರಾಗಿ ಸೌಖ್ಯದಿಂದ ಇದ್ದರು.



# ಶಂಖಲಿಖಿತರ ಕಥಾ [1]

ಶಂಖ ಲಿಖಿತ ಎಂಬ ಒಳ್ಳೇ ವ್ರತಾನುಷ್ಠಾನದಲ್ಲಿ ಆಸಕ್ತರಾದ ಇಬ್ಬರು ಋಷಿಗಳು ಇದ್ದರು. ಬಾಹುದಾನದಿಯ ತೀರದಲ್ಲಿ ಅವರಿಬ್ಬರ ಆಶ್ರಮಗಳು ಇದ್ದವು. ಆಶ್ರಮಗಳು ನಿತ್ಯಪುಷ್ಪಫಲಗಳಿಂದ ಕೂಡಿದ ಮರಗಳಿಂದ ಯುಕ್ತಗಳಾಗಿದ್ದವು. ಒಂದುದಿನದಲ್ಲಿ ಲಿಖಿತರು ಶಂಕರ ಆಶ್ರಮಕ್ಕೆ ಹೋದರು. ದೈವೇಚ್ಛೆಯಿಂದ ಆಗ ಶಂಖರು ಆಶ್ರಮದಿಂದ ಹೊರಗೆ ಹೋಗಿದ್ದರು. ಲಿಖಿತರು ಅಣ್ಣನ ಆಶ್ರಮದಲ್ಲಿ ಸಂಚರಿಸುತ್ತಾ ಹಣ್ಣುಗಳನ್ನೆಲ್ಲಾ ಉದುರಿಸಿದರು. ಆ ಹಣ್ಣುಗಳನ್ನು ತಿನ್ನುತ್ತಾ ಕೂತುಕೊಂಡರು. ಈರೀತಿಯಾಗಿ ಹಣ್ಣನ್ನು ತಿನ್ನುತ್ತಿರಲು ಶಂಖರು ಆಶ್ರಮಕ್ಕೆ ಬಂದರು. ಹಣ್ಣನ್ನು ತಿನ್ನುತ್ತ ಇದ್ದ ತಮ್ಮನನ್ನು ನೋಡಿ ಈ ಹಣ್ಣುಗಳನ್ನು ಎಲ್ಲಿಂದ ತಂದು ತಿನ್ನುತ್ತಿರುವಿ ಎಂದು ಕೇಳಿದರು. ಆಗ ಲಿಖಿತರು ಬಂದು ನಮಸ್ಕರಿಸಿ ನಗುತ್ತಾ ಇಲ್ಲಿಯೇ ಹಣ್ಣುಗಳನ್ನು ಕೊಯಿದೆನು ಎಂದರು.

ಆಗ ಶಂಖರಿಗೆ ಬಹುರೋಷವುಂಟಾಯಿತು. 'ತಮ್ಮ! ನೀನು ನನ್ನ ಆಶ್ರಮದಲ್ಲಿ ಕಳವು ಮಾಡಿದ್ದಿ. ರಾಜನಿದ್ದಲ್ಲಿಗೆ ಹೋಗು. ನೀನು ಮಾಡಿದ ಕಾರ್ಯವನ್ನು ಹೇಳಿಕೊ. ರಾಜನೊಡನೆ 'ರಾಜನೇ ನಾನು ಅಣ್ಣನು ಕೊಡದೆ ಹಣ್ಣನ್ನು ಕೊಯಿದು ತಿಂದಿರುವೆನು. ಆದರಿಂದ ನಾನು ಕಳ್ಳನು. ನೀನು ಮಾಡುವ ಧರ್ಮವನ್ನು ಮಾಡು' ಎಂದು ತಿಳಿಸು. ಶೀಘ್ರವಾಗಿ ಕಳ್ಳನಾದ ನನಗೆ ಶಿಕ್ಷಾಮಾಡು ಎಂದು ಹೇಳು' ಎಂದು ಶಂಖರು ಲಿಖಿತರ ಹತ್ತಿರ ಹೇಳಿದರು.

ತರುವಾಯ ಲಿಖಿತರು ಸುದ್ಯುಮ್ನ ಎಂದು ಹೆಸರುಳ್ಳ ರಾಜನ ಸಮೀಪಕ್ಕೆ ಹೋದರು. ಸುದ್ಯುಮ್ನ ರಾಜನು ಲಿಖಿತರು ಬರುತ್ತಾ ಇದ್ದಾರೆ ಎಂಬ ವರ್ತಮಾನ ವನ್ನು ತಿಳಿದು ಮಂತ್ರಿಗಳಿಂದ ಸಹಿತನಾಗಿ ಕಾಲು ನಡೆಯಿಂದಲೇ ಎದುರುಕೊಂಡು ಬಂದನು. ರಾಜನು ಧರ್ಮಜ್ಞಾನಿಗಳಾದ ಲಿಖಿತರೊಡನೆ ಪೂಜ್ಯರು ಬಂದಿರುವ ಕಾರಣವೇನು? ಅವಶ್ಯವಾಗಿ ಅದನ್ನು ನಾನು ಮಾಡಿಯೇ ಮಾಡುತ್ತೇನೆ ಎಂದರು.

ಆಗ ಲಿಖಿತರು 'ರಾಜನೇ! ನಾನು ಅಣ್ಣನ ಆಶ್ರಮದಲ್ಲಿ ಅಣ್ಣನಿಗೆ ತಿಳಿಸದೆ ಹಣ್ಣುಗಳನ್ನು ತಿಂದಿರುವೆನು. ಅಣ್ಣನು ಕೊಡದೆ ನಾನೇ ಕೊಯಿದು ತಿಂದಿರುವೆನು. ಬೇಗನೇ ನನಗೆ ಶಿಕ್ಷಾ ಮಾಡು' ಎಂದರು.

ಅದಕ್ಕೆ ಸುದ್ಯುಮ್ನನು 'ರಾಜನು ಶಿಕ್ಷಾಮಾಡಲಿಕ್ಕೆ ಪ್ರಮಾಣವಾಗಿದ್ದರೆ

1. ಮ.ಭಾ.ಶಾಂ.ಪ. ಅ.23

ಹಾಗೆಯೇ ಅವನಿಗೆ ಕ್ಷಮಾ ಮಾಡಲಿಕ್ಕೂ ಅಧಿಕಾರವಿರುವುದು. ನೀವು ನನ್ನ ಅನುಜ್ಞೆಯಿಂದಲೇ ಶುದ್ಧರಾಗಿರುವಿರಿ. ಬೇರೆ ತಮಗೆ ಏನು ಬೇಕಾಗಿದೆ. ತಮ್ಮ ಆಜ್ಞೆಯಂತೆ ನಾನು ನಡೆಯುತ್ತೇನೆ' ಎಂದನು.

ಅದಕ್ಕೆ ಲಿಖಿತರು 'ನಾನು ಮಾಡಿದ ಅಪರಾಧಕ್ಕೆ ಶಿಕ್ಷೆಯನ್ನೇ ಮಾಡಬೇಕು. ನನಗೆ ಬೇರೊಂದು ಬೇಡ ಎಂದರು. ತರುವಾಯ ರಾಜನು ಲಿಖಿತರ ಎರಡು ಕೈಗಳನ್ನೂ ಕತ್ತರಿಸಿದನು. ಈರೀತಿಯಾಗಿ ಲಿಖಿತರು ಶಿಕ್ಷೆಯನ್ನು ಹೊಂದಿ ಅಣ್ಣನ ಹತ್ತಿರಹೋಗಿ 'ಶಿಕ್ಷೆಯನ್ನು ಹೊಂದಿ ಬಂದಿರುವ ದುರ್ಬುದ್ಧಿಯುಳ್ಳ ನನ್ನ ಅಪರಾಧ ವನ್ನು ಕ್ಷಮಿಸಬೇಕು' ಎಂದರು.

ಆಗ ಶಂಖರು ನಾನು ನಿನ್ನ ಮೇಲೆ ಕೋಪಿಸಿಕೊಂಡಿಲ್ಲ. ನೀನು ನನ್ನನ್ನು ದೂಷಿಸಲಿಲ್ಲ. ಧರ್ಮವನ್ನು ಅತಿಕ್ರಮಿಸಿದಿ. ಅದಕ್ಕಾಗಿ ಈ ಪ್ರಾಯಶ್ಚಿತ್ತವನ್ನು ಮಾಡಿಸಿದೆನು. ನೀನು ಬೇಗನೆ ಬಾಹುದಾನದಿಗೆ ಹೋಗಿ ಸ್ನಾನಮಾಡಿ ದೇವರ್ಷಿಪಿತೃಗಳಿಗೆ ತರ್ಪಣವನ್ನು ಮಾಡು. ಅಧರ್ಮದಲ್ಲಿ ಮನಸ್ಸಿಡಬೇಡ. ಕದ್ದುಕೊಳ್ಳುವುದು ಮಹಾಪಾಪವು. ಅದು ಬ್ರಹ್ಮ ಹತ್ಯೆಗೆ ಸಮಾನವಾದದ್ದು. ಸರ್ವಪಾಪಿಗಳಿಗೂ ಶರೀರಶಿಕ್ಷೆಯೇ ವಿಹಿತವಾಗಿದೆ. ಕದ್ದುಕೊಂಡವರಿಗೆ ವಿಶೇಷವಾಗಿ ಬೇರೆ ಶಿಕ್ಷೆಯೇ ಇಲ್ಲ. ಬ್ರಾಹ್ಮಣನೋ ಕ್ಷತ್ರಿಯನೋ ವೈಶ್ಯನೋ ಶೂದ್ರನೋ ಬುದ್ಧಿಪೂರ್ವಕವಾಗಿ ಪಾಪವನ್ನು ಮಾಡಿದರೆ ಅವರನ್ನು ಸಂಹರಿಸಬೇಕು. ಪಾಪವನ್ನು ಮಾಡಿದ ಜನರು ರಾಜರಿಂದ ಶಿಕ್ಷೆಯನ್ನು ಹೊಂದಿ ಶುದ್ಧವಾಗಿ ಸ್ವರ್ಗಕ್ಕೆ ಪುಣ್ಯವಂತರು ಹೊಂದುವಂತೆ ಹೊಂದುವರು. ನೀನು ರಾಜನಿಂದ ಶಿಕ್ಷೆಯನ್ನು ಹೊಂದಿದಕಾರಣ ನಮ್ಮ ಕುಲವು ಉದ್ಧೃತವಾಯಿತು' ಎಂದು ಹೇಳಿದರು.

ಅಣ್ಣನ ಆಜ್ಞೆಯನ್ನು ಕೇಳಿ ಲಿಖಿತರು ಬಾಹುದಾನದಿಯಲ್ಲಿ ಸ್ನಾನಮಾಡಿ ಆಚಮನಾದಿಗಳನ್ನು ಮಾಡಲಿಕ್ಕೆ ಉದ್ಯುಕ್ತರಾದರು. ಅಷ್ಟರಲ್ಲಿಯೇ ಅವರಿಗೆ ಎರಡುಕೈಗಳು ಉದ್ಭವಿಸಿದವು. ಲಿಖಿತರು ಆಶ್ಚರ್ಯವುಳ್ಳವರಾಗಿ ಅವುಗಳನ್ನು ಅಣ್ಣನಿಗೆ ಬಂದು ತೋರಿಸಿದರು. ಆಗ ಅಣ್ಣನು ನಾನು ನನ್ನ ತಪಸ್ಸಿನ ಸಾಮರ್ಥ್ಯದಿಂದ ಕೈಉಂಟಾಗುವಂತೆ ಮಾಡಿದೆನು ಎಂದರು.

ಅದಕ್ಕೆ ತಮಗೆ ಈ ಪ್ರಕಾರವಾದ ತಪಸ್ಸಿನ ವೀರ್ಯರಿವಿರುವಾಗ ತಾವೇ ನನ್ನನ್ನು ಯಾವ ಪವಿತ್ರನನ್ನಾಗಿ ಮಾಡಿಲ್ಲ. ರಾಜನಿದ್ದಲ್ಲಿಗೆ ಯಾಕೆ ಕಳುಹಿಸೋಣ ವಾಯಿ ಎಂದು ಕೇಳಿವರು.

ಶಂಖರು ನಾನು ಹೀಗೆ ತಾನೇ ಮಾಡಬೇಕು. ನಾನು ಶಿಕ್ಷಾ ಮಾಡುವವನಲ್ಲ, ಶಿಕ್ಷಾ ಮಾಡುವ ಅಧಿಕಾರಿಯು ರಾಜನು. ರಾಜನಿಂದ ಶಿಕ್ಷೆಯನ್ನು ಹೊಂದಿ ಪಿತೃಗಳಿಂದ ಕೂಡಿಕೊಂಡು ಶುದ್ಧನಾದಿ ಎಂದು ಹೇಳಿದರು.



## ನಾರದಪರ್ವತರ ಕಥೆ [1]

ಒಂದು ಸಮಯದಲ್ಲಿ ಸೋದರಮಾವನಾದ ನಾರದರೂ ಸೋದರ ಅಳಿಯನಾದ ಪರ್ವತರೂ ಇಬ್ಬರೂ ದೇವಲೋಕದಿಂದ ಮನುಷ್ಯಲೋಕಕ್ಕೆ ಬಂದು ವಿಹಾರ ಮಾಡಬೇಕೆಂದು ಅಪೇಕ್ಷಿಸಿದರು. ಇಬ್ಬರೂ ತಪಸ್ವಿಗಳೂ ಮಾನುಷ ಭೋಗವನ್ನು ಅನುಭವಿಸುತ್ತಾ ಸಂಚರಿಸಿದರು. ಇಬ್ಬರೂ ಪರಸ್ಪರ ಪ್ರೀತಿಯುಳ್ಳವರು. ಇಬ್ಬರೂ ಪರಸ್ಪರ ತಮ್ಮ ಮನಸ್ಸಿನಲ್ಲಿ ಉಂಟಾದ ಶುಭವಾದ ಅಥವಾ ಅಶುಭವಾದ ಸಂಕಲ್ಪವನ್ನು ಪರಸ್ಪರ ಹೇಳಿಕೊಳ್ಳಬೇಕು ಎಂದು ಪ್ರತಿಜ್ಞೆ ಮಾಡಿಕೊಂಡವರಾಗಿ ಶ್ವೇತರಾಜನ ಮಗನಾದ ಸೃಂಜಯ ರಾಜನ ಮನೆಗೆ ಬಂದು ರಾಜನ್! ನಾವು ಕೆಲವು ಸಮಯ ನಿನ್ನ ಹಿತಕ್ಕೋಸ್ಕರ ನಿನ್ನ ಮನೆಯಲ್ಲಿ ವಾಸಮಾಡುತ್ತೇವೆ. ನೀನು ಅನುಕೂಲ ಮಾಡು ಎಂದು ಹೇಳಿದರು. ರಾಜನು ಹಾಗೆಯೇ ಆಗಲಿ ಎಂದು ಹೇಳಿ ಅವರಿಬ್ಬರನ್ನೂ ಸತ್ಕರಿಸಿ ವಾಸಮಾಡಿಸಿದನು. ಒಂದುದಿವಸ ರಾಜನು ಪರಮಪ್ರೀತಿ ಉಳ್ಳವನಾಗಿ ತಪಸ್ವಿಗಳಾದ ಅವರಿಬ್ಬರೊಡನೆ ಇವಳು ನನ್ನ ಮಗಳು. ದೇವತೆಯಂತೆ ರೂಪವುಳ್ಳವಳು. ನಿಮ್ಮಿಬ್ಬರ ಸೇವೆಯನ್ನು ಮಾಡುವಳು ಎಂದು ಹೇಳಿದನು. ಅದಕ್ಕೆ ಹಾಗೆಯೇ ಆಗಲಿ ಎಂದರು. ರಾಜನು ಮಗಳೊಡನೆ ಈ ಬ್ರಾಹ್ಮಣರನ್ನು ದೇವರಂತೆಯೂ ತಂದೆಯಂತೆಯೂ ಸೇವಿಸು ಎಂದು ಹೇಳಿದನು. ಅದೇ ರೀತಿಯಾಗಿ ರಾಜಪುತ್ರಿಯು ಇಬ್ಬರನ್ನೂ ಸೇವಿಸಿದಳು.

ಅವಳ ಉಪಚಾರದಿಂದ ಸೌಂದರ್ಯದಿಂದ ನಾರದರಿಗೆ ಅವಳಲ್ಲಿ ಕಾಮವು ಉಂಟಾಯಿತು. ಕ್ರಮದಿಂದ ಅದು ಅಭಿವೃದ್ಧವಾಯಿತು. ಆದರೆ ಲಜ್ಜೆಯಿಂದ ನನ್ನ ಮನಸ್ಸಿನ ಅಭಿಪ್ರಾಯವನ್ನು ಸೋದರ ಅಳಿಯನಾದ ಪರ್ವತನಿಗೆ ತಿಳಿಸಲಿಲ್ಲ. ಪರ್ವತರು ತಪಃಸಾಮರ್ಥ್ಯದಿಂದಲೂ ನಾರದರ ಚೇಷ್ಟೆಗಳಿಂದಲೂ ನಾರದರ ಮನೆಯ(ಮನಸ್ಸಿನ) ಅಭಿಪ್ರಾಯವನ್ನು ಪರ್ವತರು ತಿಳಿದರು. ನಾವಿಬ್ಬರೂ ಪ್ರತಿಜ್ಞಾ

1. ಮ.ಭಾ.ಶಾಂ.ಪ. ಅಪ. ಅ.30

ಮಾಡಿಯೂ ಕೂಡ ನಿಮ್ಮ ಮನಸ್ಸಿನ ಸಂಕಲ್ಪವನ್ನು ಹೇಳದೆ ಇದ್ದಕಾರಣ ನಾನು ನಿಮಗೆ ಶಪಿಸುವೆನು. ಸುಕುಮಾರಿಯಾದ ಈ ಕುಮಾರಿಯಲ್ಲಿ ನಿಮಗೆ ಉಂಟಾದ ಕಾಮವನ್ನು ನನ್ನೊಡನೆ ತಿಳಿಸಲಿಲ್ಲ. ನೀವು ಬ್ರಹ್ಮಚಾರಿಯಾಗಿ ತಪಸ್ವಿಯಾಗಿ ಬ್ರಾಹ್ಮಣನಾಗಿಯೂ ಇದ್ದುಕೊಂಡು ಪ್ರತಿಜ್ಞೆಯನ್ನು ಮೀರಿದ ಕಾರಣ ನಾನು ಶಾಪಕೊಡುವೆನು. ಈ ಸುಕುಮಾರಿಯು ನಿಮಗೆ ಹೆಂಡತಿಯಾಗುವಳು. ಆದರೆ ಮದುವೆಯಾದ(ವರ್ಷ) ಆರಂಭಿಸಿ ಆಕನ್ಯೆಯೂ ಎಲ್ಲ ಜನರೂ ನಿಮ್ಮ ಮುಖವನ್ನು ಕಪಿಯ ಮುಖದಂತೆ ಇರುವುದನ್ನು ನೋಡುವರು ಎಂದರು. ಆಗ ನಾರದರು ಕೋಪದಿಂದ ತನ್ನ ಸೋದರ ಅಳಿಯನಾದ ಪರ್ವತರಿಗೆ ನೀನು ತಪಸ್ಸು ಬ್ರಹ್ಮಚರ್ಯ ಸತ್ಯ ಇಂದ್ರಿಯನಿಗ್ರಹ ಎಲ್ಲಾ ಇದ್ದರೂ ಸ್ವರ್ಗಕ್ಕೆ ಹೋಗುವುದು ಬೇಡ ಎಂದು ಶಾಪವನ್ನು ಕೊಟ್ಟರು. ಈರೀತಿಯಾಗಿ ಇಬ್ಬರೂ ಪರಸ್ಪರವಾಗಿ ಕೋಪದಿಂದ ಶಾಪವನ್ನು ಕೊಟ್ಟುಕೊಂಡು ಹೊರಟುಹೋದರು.

ಪರ್ವತರು ತನ್ನ ತೇಜಸ್ಸಿನಿಂದ ಎಲ್ಲರಿಂದಲೂ ಸತ್ಕೃತರಾಗಿ ಸಮಸ್ತ ಭೂಮಿಯನ್ನೂ ಸಂಚರಿಸಿದರು. ಸೃಂಜಯ ಮಗಳಾದ ಆ ಕನ್ಯೆಯನ್ನು ನಾರದರು ಮದುವೆ ಮಾಡಿಕೊಂಡರು. ಮದುವೆಯಾದ ಕೂಡಲೇ ನಾರದರು ಕಪಿಯಂತೆ ಮುಖವುಳ್ಳವರಾದರು. ಆದರೆ ರಾಜಪುತ್ರಿಯು ಅವರನ್ನು ಅವಮಾನ ಮಾಡಲಿಲ್ಲ. ಪ್ರೀತಿಉಳ್ಳವಳಾಗಿಯೇ ಇದ್ದಳು. ಅವರನ್ನೇ ಸೇವಿಸಿದಳು. ಮನಸ್ಸಿನಿಂದಲೂ ಇನ್ನೊಬ್ಬರನ್ನು ಭಾವಿಸಲಿಲ್ಲ. ಒಂದುದಿನ ಪರ್ವತರು ಒಬ್ಬರೂ ಇಲ್ಲದಿರುವ ವನದಲ್ಲಿ ಸಂಚರಿಸುತ್ತಾ ಇದ್ದರು. ಅಲ್ಲಿ ನಾರದರನ್ನು ನೋಡಿದರು. ತರುವಾಯ ಪರ್ವತರು ನಾರದರಿಗೆ ನಮಸ್ಕರಿಸಿ ನಾನು ಸ್ವರ್ಗಕ್ಕೆ ಹೋಗುವಂತೆ ತಾವು ಅನುಗ್ರಹಿಸಬೇಕು ಎಂದರು. ಕೈಮುಗಿದುಕೊಂಡಿರುವ ಪರ್ವತರೊಡನೆ ನಾರದರು ನೀನು ಮೊದಲು ನನಗೆ ಕೋತಿಯ ಮುಖವಾಗುವಂತೆ ಶಾಪಕೊಟ್ಟೆ. ಅದಕ್ಕೆ ನಾನು ನಿನಗೂ ಶಾಪವನ್ನು ಕೊಟ್ಟೆನು. ನಿನಗೆ ಸ್ವರ್ಗದಲ್ಲಿ ವಾಸವಾಗಲಾರದೆಂದು ಶಪಿಸಿದೆನು ಎಂದು ಹೇಳಿ ಅವರಿಬ್ಬರೂ ತಮ್ಮ ಶಾಪವನ್ನು ಪರಿಹಾರ ಮಾಡಿ ಕೊಂಡರು. ರಾಜಪುತ್ರಿಯು ದೇವತೆಯಂತೆ ರೂಪವುಳ್ಳ ನಾರದರನ್ನು ನೋಡಿ ಪರಪುರುಷ ಎಂಬ ಸಂದೇಹದಿಂದ ಓಡಿಹೋದಳು. ಆಗ ಪರ್ವತರು ಅವಳೊಡನೆ ಇವರೇ ನಿನ್ನ ಪತಿಯಾದ ನಾರದರು. ನೀನು ಸಂದೇಹಪಡುವುದು ಬೇಡ ಎಂದು ನಾನಾ ವಿಧವಾಗಿ ಹೇಳಲು ಶಾಪದ ವಿಷಯವನ್ನೂ ಕೇಳಿ ಪೂರ್ವದಂತೆ ಆದಳು. ತರುವಾಯ ಪರ್ವತರು ಸ್ವರ್ಗಕ್ಕೆ ಹೋದರು. ನಾರದರು ಮನೆಗೆ ಹೋದರು.

# ಯವಕ್ರೀತ ಉಪಾಖ್ಯಾನ [1]

ಭರದ್ವಾಜರು ರೈಭ್ಯರು ಎಂದು ಇಬ್ಬರು ಋಷಿಗಳು ಇದ್ದರು. ಅವರಿಬ್ಬರೂ ಪರಸ್ಪರ ಮಿತ್ರರಾಗಿದ್ದರು. ರೈಭ್ಯರಿಗೆ ಅರ್ವಾವಸು ಪರಾವಸು ಎಂಬ ಇಬ್ಬರು ಮಕ್ಕಳಿದ್ದರು. ಭರದ್ವಾಜರಿಗೆ ಯವಕ್ರೀತ ಎಂಬ ಒಬ್ಬನೇ ಮಗನು. ರೈಭ್ಯರೂ ಅವರ ಮಕ್ಕಳೂ ವಿದ್ಯಾವಂತರು. ಭರದ್ವಾಜರು ಓದಿಕೊಂಡವರಲ್ಲ, ಆದರೆ ತಪಸ್ವಿಗಳಾಗಿದ್ದರು. ರೈಭ್ಯರಿಗೂ ಭರದ್ವಾಜರಿಗೂ ಪರಸ್ಪರ ಪ್ರೀತಿಯಿತ್ತು. ಎಲ್ಲರೂ ರೈಭ್ಯರನ್ನು ವಿದ್ಯಾವಂತರೆಂದು ಸತ್ಕರಿಸುತ್ತಿದ್ದರು. ಭರದ್ವಾಜರು ಬರೇ ತಪಸ್ಸು ಮಾಡುವವರು ವಿದ್ಯಾವಂತರಲ್ಲ ಎಂದು ಅಷ್ಟು ಆದರಿಸುತ್ತಿರಲಿಲ್ಲ. ಯವಕ್ರೀತನು ಜನರು ತಪಸ್ವಿಯಾದ ತನ್ನ ತಂದೆಯನ್ನು ಆದರಿಸದೆ ಇರುವುದನ್ನು ರೈಭ್ಯರನ್ನೂ ಅವರ ಮಕ್ಕಳನ್ನೂ ವಿದ್ಯಾವಂತರೆಂದು ಆದರಿಸುವುದನ್ನು ನೋಡಿ ತುಂಬಾ ಸಂತಾಪ ಹೊಂದಿದನು. ಕೋಪಿಸಿಕೊಂಡನು.

ತನಗೆ ವೇದಗಳ ಜ್ಞಾನವು ಬರಬೇಕೆಂದು ಘೋರವಾದ ತಪಸ್ಸನ್ನು ಮಾಡಿದನು. ಜ್ವಲಿಸುವ ಅಗ್ನಿಯಲ್ಲಿ ತನ್ನ ದೇಹಕ್ಕೆ ತಾಪಕ್ಕೆ ಉಂಟುಮಾಡುತ್ತಾ ಇಂದ್ರದೇವರಿಗೆ ಸಂತಾಪವನ್ನು ಉಂಟುಮಾಡಿದನು. ಇಂದ್ರದೇವರು ಯವಕ್ರೀತರ ಬಳಿಗೆ ಬಂದು ಯಾಕೆ ತಪಸ್ಸು ಮಾಡುತ್ತಿರುವಿ? ಎಂದು ಕೇಳಿದರು. ಅದಕ್ಕೆ ಅವನು 'ಬ್ರಾಹ್ಮಣರಿಗೆ ಅಧ್ಯಯನ ಮಾಡದೆಯೇ ವೇದಗಳು ತಿಳಿಯಲಿ ಎಂದು ಮಹಾ ತಪಸ್ಸು ಮಾಡುತ್ತಿರುವೆನು. ಗುರುಗಳ ಮುಖದಿಂದ ಅಧ್ಯಯನ ಮಾಡಲಿಕ್ಕೆ ಬಹಳ ಸಮಯವಾಗುವುದು. ಆದುದರಿಂದ ತಪಸ್ಸಿನಿಂದಲೇ ಎಲ್ಲಾ ಜ್ಞಾನಗಳನ್ನೂ ಹೊಂದಲು ಅಪೇಕ್ಷಿಸುತ್ತೇನೆ' ಎಂದನು. ಅದಕ್ಕೆ 'ಇದು ಸರಿಯಾದ ಮಾರ್ಗವಲ್ಲ. ಸುಮ್ಮನೆ ಶ್ರಮಪಡುವಿ? ಗುರುಗಳ ಮುಖದಿಂದ ಅಧ್ಯಯನಮಾಡು. ಹೋಗು' ಎಂದು ಇಂದ್ರದೇವರು ಹೇಳಿದರು. ಈರೀತಿಯಾಗಿ ಹೇಳಿ ಇಂದ್ರದೇವರು ಹೊರಟುಹೋದರು. ಯವಕ್ರೀತನು ಪುನಃ ಘೋರವಾದ ತಪಸ್ಸನ್ನು ಮಾಡಿ ಇಂದ್ರದೇವರನ್ನು ಸಂತಾಪಗೊಳಿಸಿದನು. ಆಗ ಇಂದ್ರದೇವರು ಬಂದು 'ಸಾಧ್ಯ ವಾಗದ ಕಾರ್ಯವನ್ನು ಆರಂಭಿಸಿರುವೆ. ನಿನಗೂ ನಿನ್ನ ತಂದೆಗೂ ವೇದಗಳು ತೋರಲಾರವು' ಎಂದು ಹೇಳಿದರು. ಯವಕ್ರೀತನು 'ನನ್ನ ಅಭೀಷ್ಟವನ್ನು ಕೊಡದೆ ಇದ್ದರೆ ನಾನು ಇನ್ನೂ ಭಯಂಕರವಾದ ತವಸ್ಸನ್ನು ಆರಂಭಿಸುವೆನು. ನನ್ನ ಅಂಗಗಳನ್ನು ಕತ್ತರಿಸಿ ಅಗ್ನಿಯಲ್ಲಿ ಹೋಮ ಮಾಡುವೆನು' ಎಂದನು.

1. ಮ.ಭಾ.ವ.ಪ. ಅ.135-138

ತರುವಾಯ ಬುದ್ಧಿವಂತರಾದ ಇಂದ್ರದೇವರು ಯುವಕ್ರೀತನ ಮನಸ್ಸಿನ ಅಭಿಪ್ರಾಯವನ್ನು ನಿಲ್ಲಿಸುವುದಕ್ಕೋಸ್ಕರ ಅನೇಕ ನೂರು ವರ್ಷಗಳಾದ ದುರ್ಬಲನಾದ ಕ್ಷಯರೋಗದಿಂದ ಒಬ್ಬ ಮುದುಕಬ್ರಾಹ್ಮಣನ ರೂಪವನ್ನು ಧರಿಸಿ ಯವಕ್ರೀತನು ಸ್ನಾನಹೋಗುವ ಸ್ಥಳದಲ್ಲಿ ಗಂಗೆಯಲ್ಲಿ ಉಸುಬಿನಿಂದ (ಹೊಯಿಗೆಯಿಂದ) ಸೇತುವೆಯನ್ನು ಕಟ್ಟುವೆನೆಂದು ಆರಂಭಿಸಿದರು. ಯವಕ್ರೀತನ ಎದುರಲ್ಲಿ ಗಂಗೆಗೆ ಉಸುಬನ್ನು ತುಂಬಿಸಲಿಕ್ಕೆ ಆರಂಭಿಸಿದರು. ಯವಕ್ರೀತನು ಗಂಗೆಯಲ್ಲಿ ಸೇತುವೆಯನ್ನು ಕಟ್ಟಲಿಕ್ಕೆ ಪ್ರಯತ್ನಮಾಡುವುದನ್ನು ನೋಡಿ ನಗುತ್ತಾ ಪೂಜ್ಯರೇ ಏನು ಮಾಡುತ್ತಿರುವಿರಿ. ವ್ಯರ್ಥವಾಗಿ ಮಹಾಪ್ರಯತ್ನವನ್ನು ಮಾಡುತ್ತಿರುವಿರಲ್ಲಾ ಎಂದನು.

ಅದಕ್ಕೆ ಬ್ರಾಹ್ಮಣರೂಪಿಯಾದ ಇಂದ್ರದೇವರು ಗಂಗೆಯಲ್ಲಿ ಸೇತುವನ್ನು ಕಟ್ಟುತ್ತಾ ಇದ್ದೇನೆ. ಜನರು ದಾಟಲಿಕ್ಕೆ ಶ್ರಮಪಡುತ್ತಿದ್ದಾರೆ. ಸುಖವಾಗಿ ಸೇತುವೆಯ ಮೇಲೆ ನಡೆದುಕೊಂಡು ಜನರು ಹೋಗುವರು ಅಂದರು.

ಯವಕ್ರೀತನು ಈ ಮಹಾಪ್ರವಾಹದಲ್ಲಿ ಸೇತುವನ್ನು ಕಟ್ಟಲಿಕ್ಕೆ ಆಗಲಾರದು. ಈ ಸಾಧ್ಯವಾಗದ ಕಾರ್ಯವನ್ನು ಬಿಟ್ಟುಬಿಡಿ. ಸಾಧ್ಯವಾದ ಕಾರ್ಯವನ್ನು ಮಾಡಿರಿ ಎಂದನು.

ಅದಕ್ಕೆ ಇಂದ್ರದೇವರು ನೀನು ಹೇಗೆ ಸಾಧ್ಯವಾಗದ ಕಾರ್ಯವಾದ ವೇದಗಳಿಗೋಸ್ಕರ ತಪಸ್ಸು ಮಾಡುವಿಯೋ ಹಾಗೆಯೇ ನಾನೂ ಮಾಡುವೆನು ಎಂದರು.

ಯವಕ್ರೀತನು ಇಂದ್ರದೇವರೆಂದು ತಿಳಿದು 'ದೇವೇಂದ್ರ, ನನ್ನ ಕಾರ್ಯವು ಅಶಕ್ಯವಾಗಿದ್ದರೆ ನನಗೆ ಶಕ್ಯವಾದದ್ದನ್ನೇ ಮಾಡಿ. ನಾನು ವಿದ್ಯಾವಂತನಾಗುವಂತೆ ಬೇರೆ ವರಗಳನ್ನು ಕೊಡಿ' ಎಂದನು.

ಇಂದ್ರದೇವರು ನಿನಗೂ ನಿನ್ನ ತಂದೆಗೂ ವೇದಗಳೆಲ್ಲವೂ ತಿಳಿಯಲಿ. ನಿನಗೆ ಬೇಕಾದ ಅಭೀಷ್ಟವು ಸಿದ್ಧವಾಗಲಿ ಎಂದು ಹೇಳಿದರು. ಯವಕ್ರೀತನು ಅಭೀಷ್ಟವನ್ನು ಹೊಂದಿ ತಂದೆಯ ಬಳಿಗೆ ಹೋಗಿ 'ನಿಮಗೂ ನನಗೂ ವೇದಗಳೆಲ್ಲ ತಿಳಿಯುವುವು. ನಾವು ಎಲ್ಲರಿಂದ ಶ್ರೇಷ್ಠರಾಗುವೆವು' ಎಂದನು.

ಆಗ ಭರದ್ವಾಜರು 'ಮಗನೇ! ನೀನು ಬೇಕಾದ ವರಗಳನ್ನು ಪಡೆದು ಅಹಂಕಾರವನ್ನು ಹೊಂದುವಿ. ಅಹಂಕಾರವುಳ್ಳವರು ಬೇಗನೆ ನಾಶವನ್ನು ಹೊಂದುವರು. ರೈಭ್ಯರೂ ಅವರ ಮಕ್ಕಳೂ ಮಹಾಸಮರ್ಥರು. ಅವರ ಬಳಿಗೆ ಎಷ್ಟು ಮಾತ್ರಕ್ಕೂ ಹೋಗಬೇಡ. ಆ ರೈಭ್ಯರು ಕೋಪಿಸಿಕೊಂಡರೆ ನಿನ್ನನ್ನು ಪೀಡಿಸಲಿಕ್ಕೆ ಸಮರ್ಥರು. ಅವರು ಮಹಾತಪಸ್ವಿಗಳು. ಕೋಪ ಸ್ವಭಾವದವರು ಎಂದರು.

ಅದಕ್ಕೆ ಯವಕ್ರೀತನು 'ತಂದೆಯೇ! ನೀವು ಸಂತಾಪವನ್ನು ಹೊಂದುವುದು ಬೇಡ. ನಾನು ರೈಭ್ಯರಿಗೆ ಒಂದು ಅಪರಾಧವನ್ನೂ ಮಾಡುವುದಿಲ್ಲ. ನನಗೆ ನಿಮ್ಮಂತೆ ರೈಭ್ಯರೂ ಬಹುಮಾನಕ್ಕೆ ಅರ್ಹರು' ಎಂದು ತಂದೆಯ ಹತ್ತಿರ ಹೇಳಿ ಯಾರ ಅಂಜಿಕೆಯೂ ಇಲ್ಲದೆ ಇತರ ಋಷಿಗಳನ್ನು ತಿರಸ್ಕರಿಸುತ್ತಾ ಸಂತೋಷಪಡುತ್ತಿದ್ದನು.

ಹೀಗೆಯೇ ಸಂಚರಿಸುತ್ತಾ ವಸಂತಮಾಸದಲ್ಲಿ ಒಂದುದಿನ ರೈಭ್ಯರ ಆಶ್ರಮಕ್ಕೆ ಹೋದನು. ಅಲ್ಲಿ ಮನೋಹರವಾದ ಆಶ್ರಮದಲ್ಲಿ ಸುಂದರಿಯಾದ ರೈಭ್ಯರ ಸೊಸೆಯನ್ನು ನೋಡಿ ಮೋಹಿತನಾಗಿ ಬಲಾತ್ಕಾರದಿಂದ ಭೋಗಿಸಿದನು. ಆಮೇಲೆ ಆಶ್ರಮಕ್ಕೆ ಬಂದು ಅಳುತ್ತಾ ಇದ್ದ ತನ್ನ ಸೊಸೆ ಪರಾವಸುವಿನ ಹೆಂಡತಿಯನ್ನು ನೋಡಿದರು. ಸಮಾಧಾನಪಡಿಸಿ ಏನಾಯಿತೆಂದು ಕೇಳಿದರು. ಅವಳು ನಡೆದ ವಿಷಯವನ್ನೆಲ್ಲಾ ಹೇಳಿದಳು. ಅದನ್ನು ಕೇಳಿ ರೈಭ್ಯರಿಗೆ ಯವಕ್ರೀತನ ಮೇಲೆ ಬಹು ಕೋಪವು ಬಂದಿತು. ಕೋಪಸ್ವಭಾವದವರಾದ ರೈಭ್ಯರು ಆಗ ಮಹಾಕ್ರೋಧ ವುಳ್ಳವರಾಗಿ ತನ್ನ ಒಂದು ಜಟೆಯನ್ನು ಕಿತ್ತು ಬೆಂಕಿಯಲ್ಲಿ ಹೋಮಿಸಿದರು. ಆಗ ಜಟೆಯಿಂದ ಒಂದು ರಾಕ್ಷಸಿಯು ಉಂಟಾದಳು. ಮತ್ತೊಂದು ಜಟೆಯನ್ನು ಕಿತ್ತು ಪುನಃ ಹೋಮಮಾಡಿದು. ಆಗ ಒಬ್ಬ ಭಯಂಕರ ರಾಕ್ಷಸನು ಉಂಟಾದನು. ಅವರಿಬ್ಬರೂ ರೈಭ್ಯನೊಡನೆ ನಾವು ಏನು ಮಾಡಲಿ ಎಂದು ಕೇಳಿದರು. ಅದಕ್ಕೆ ರೈಭ್ಯನು ಯವಕ್ರೀತನನ್ನು ಕೊಂದು ಹಾಕಿರಿ ಎಂದರು.

ಅವರು ಹಾಗೆಯೇ ಆಗಲಿ ಎಂದು ಹೇಳಿ ಅವರಿಬ್ಬರೂ ಹೋದರು. ರಾಕ್ಷಸಿಯು ಹೋಗಿ ಮೋಹಗೊಳಿಸಿ ಯವಕ್ರೀತನ ಕಮಂಡಲುವನ್ನು ಅಪಹರಿಸಿ ದಳು. ತರುವಾಯ ಕಮಂಡಲು ರಹಿತನಾದ ಉಚ್ಛಿಷ್ಟನಾದ (ಮೈಲಿಗೆಯಾದ) ಯವಕ್ರೀತನನ್ನು ರಾಕ್ಷಸನು ಶೂಲವನ್ನು ಎತ್ತಿಕೊಂಡು ಅಟ್ಟಿಸಿಹೋದನು. ಶೂಲವನ್ನು ಹಿಡಿದುಕೊಂಡು ತನ್ನನ್ನು ಕೊಲ್ಲಲಿಕ್ಕೆ ಬರುತ್ತಿರುವ ರಾಕ್ಷಸನನ್ನು ನೋಡಿ ಯವಕ್ರೀತನು ಕೂಡಲೇ ಎದ್ದು ಸರೋವರವಿದ್ದಲ್ಲಿಗೆ ಹೋದನು. ಆ ಸರೋವರ ದಲ್ಲಿ ನೀರೇ ಇರಲಿಲ್ಲ. ಎಲ್ಲಾ ನದಿಗಳಿಗೂ ಹೋದನು. ನದಿಗಳೆಲ್ಲವೂ ಬತ್ತಿ ಹೋಗಿದ್ದವು. ಭಯಂಕರವಾದ ರಾಕ್ಷಸನು ಶೂಲವನ್ನು ಹಿಡಿದುಕೊಂಡು ಹಿಂದಿ ನಿಂದಲೇ ಕೊಲ್ಲಲಿಕ್ಕೆ ಬರುತ್ತಿದ್ದನು. ತರುವಾಯ ಅಂಜಿಕೆಯಿಂದ ತಂದೆಯು ಅಗ್ನಿಹೋತ್ರಮಾಡುವ ಮನೆಗೆ ಪ್ರವೇಶಿಸಿದನು. ಪ್ರವೇಶಿಸುವಾಗ ಅಲ್ಲಿ ರಕ್ಷಣೆ ಮಾಡುತ್ತಿರುವ ಕುರುಡನಾದ ಶೂದ್ರನು ಹಿಡಿದು ನಿಲ್ಲಿಸಿಬಿಟ್ಟನು. ಶೂದ್ರನು ಹಿಡಿದು ನಿಲ್ಲಿಸಿರುವ ಯವಕ್ರೀತನ ಬಳಿಗೆ ಬಂದು ರಾಕ್ಷಸನು ಶೂಲದಿಂದ ಕುಕ್ಕಿದನು. ಅವನು

ಎದೆಯು ಸೀಳಿಹೋಗಿ ಸತ್ತುಬಿದ್ದನು. ರಾಕ್ಷಸನು ಯವಕ್ರೀತನನ್ನು ಕೊಂದು ರೈಭ್ಯರ ಅನುಜ್ಞೆಯನ್ನು ಪಡೆದು ಆ ರಾಕ್ಷಸಿಯೊಡನೆ ವಾಸಮಾಡುತ್ತಾ ಇದ್ದನು.

ತರುವಾಯ ಭರದ್ವಾಜರು ನಿತ್ಯವೂ ಮಾಡುವ ಬ್ರಹ್ಮಯಜ್ಞವನ್ನು ಮಾಡಿ ಸಮಿಧೆಗಳನ್ನು ಹಿಡಿದುಕೊಂಡು ತನ್ನ ಆಶ್ರಮಕ್ಕೆ ಬಂದರು. ಪೂರ್ವದಲ್ಲಿ ಅವರು ಬರುವಾಗ ಅಗ್ನಿಗಳು ಎದುರುಗೊಳ್ಳುತ್ತಿದ್ದವು. ಈಗ ಮಗನು ಸತ್ತು ಸೂತಕವಿದ್ದ ಪ್ರಯುಕ್ತ ಅಗ್ನಿಗಳು ಎದುರುಗೊಳ್ಳಲಿಲ್ಲ. ಈ ವಿಕಾರವನ್ನು ನೋಡಿ ಭರದ್ವಾಜರು ಅಲ್ಲಿ ಕೂತಿರುವ ದ್ವಾರಪಾಲಕನಾದ ಶೂದ್ರನೊಡನೆ ಪೂರ್ವದಂತೆ ಅಗ್ನಿಗಳು ಏಕೆ ನನ್ನನ್ನು ನೋಡಿ ಸಂತೋಷಪಡುವುದಿಲ್ಲ? ನೀನೂ ಕೂಡ ಪೂರ್ವದಂತೆ ಇಲ್ಲವಲ್ಲಾ. ಅಲ್ಪಬುದ್ಧಿಯುಳ್ಳ ನನ್ನ ಮಗನು ರೈಭ್ಯರ ಆಶ್ರಮಕ್ಕೆ ಹೋಗಿಲ್ಲವಲ್ಲಾ! ಬೇಗನೇ ಹೇಳು' ಎಂದರು.

ಅದಕ್ಕೆ ಶೂದ್ರನು ಅಲ್ಪಬುದ್ಧಿಯುಳ್ಳ ನಿಮ್ಮ ಮಗನು ನಿಶ್ಚಯವಾಗಿಯೂ ರೈಭ್ಯರ ಆಶ್ರಮಕ್ಕೆ ಹೋಗಿರಬೇಕು. ಆದುದರಿಂದ ದೊಡ್ಡ ರಾಕ್ಷಸನಿಂದ ಬಡಿಯಲ್ಪಟ್ಟು ಸತ್ತು ಬಿದ್ದಿದ್ದಾನೆ. ಶೂಲಹಿಡಿದುಕೊಂಡು ಆ ರಾಕ್ಷಸನು ಓಡಿಸಿಕೊಂಡು ಬಂದನು. ಅಗ್ನಿಹೋತ್ರ ಮನೆಗೆ ನಿಮ್ಮ ಮಗನು ಪ್ರವೇಶಿಸುವಾಗ ನಾನು ಹಿಡಿದು ನಿಲ್ಲಿಸಿದೆನು. ಆಗ ಆ ರಾಕ್ಷಸನು ವೇಗದಿಂದ ಬಂದು ಶೂಲದಿಂದ ಬಡೆದನು.

ಭರದ್ವಾಜರು ಶೂದ್ರನ ಮಾತನ್ನು ಕೇಳಿ ಮೃತನಾದ ಮಗನನ್ನು ಹಿಡಿದು ಕೊಂಡು ತುಂಬಾ ವಿಲಾಪವನ್ನು ಮಾಡಿ 'ಮುದುಕನಾದ ನನಗೆ ಒಬ್ಬನೇ ಮಗ'ನೆಂದು ತಿಳಿದೂ ಕೂಡ ಆ ರೈಭ್ಯನು ಕೋಪವಶನಾಗಿ ನನ್ನ ಮಗನನ್ನು ಕೊಂದು ಬಿಟ್ಟನಲ್ಲಾ! ನಾನು ಬೇಡವೆಂದರೂ ನನ್ನ ಮಗನು ಯಮನಂತಿರುವ ಅವನ ಆಶ್ರಮಕ್ಕೆ ಹೋದನೇ? ರೈಭ್ಯರಿಂದಾಗಿ ಪುತ್ರಶೋಕವನ್ನು ಹೊಂದಿ ದೇಹವನ್ನು ಪರಿತ್ಯಾಗ ಮಾಡುವೆನು. ನಾನು ಹೇಗೆ ಪುತ್ರಶೋಕದಿಂದ ದೇಹಪರಿತ್ಯಾಗ ಮಾಡುವೆನೋ ಅದೇ ರೀತಿಯಾಗಿ ರೈಭ್ಯರನ್ನು ಜ್ಯೇಷ್ಠಪುತ್ರನು ಸಂಹರಿಸಲಿ' ಎಂದು ಬಹಳವಾಗಿ ವಿಲಾಪವನ್ನು ಮಾಡಿ ಮಗನ ದೇಹವನ್ನು ಸುಟ್ಟರು. ತಾನೂ ಅಗ್ನಿಯಲ್ಲಿ ಪ್ರವೇಶಿಸಿದರು.

ಈ ಸಮಯದಲ್ಲಿ ರೈಭ್ಯರ ಶಿಷ್ಯನಾದ ಬೃಹದ್ದ್ಯುಮ್ನ ಎಂಬ ರಾಜನು ಸತ್ರಯಾಗವನ್ನು ಮಾಡಿದನು. ಆ ರಾಜನು ರೈಭ್ಯರ ಮಕ್ಕಳಾದ ಅರ್ವಾವಸು ಪರಾವಸುಗಳನ್ನು ಸತ್ರಯಾಗದಲ್ಲಿ ಸಹಾಯಕ್ಕಾಗಿ ಕೇಳಿಕೊಂಡನು. ಅವರಿಬ್ಬರೂ ತಂದೆಯ ಅನುಮತಿಯನ್ನು ಪಡೆದು ಹೋದರು. ಆಶ್ರಮದಲ್ಲಿ ರೈಭ್ಯರೂ ಪರವಾಸು

ವಿನ ಹೆಂಡತಿಯೂ ಇದ್ದರು. ಸತ್ರಯಾಗಕ್ಕೆ ಹೋದ ಪರಾವಸುವು ಒಂದುದಿನ ತಂದೆಯನ್ನು ನೋಡಬೇಕೆಂದು ಆಶ್ರಮಕ್ಕೆ ಬಂದನು. ಆಗ ರಾತ್ರಿಕಾಲವಾಗಿತ್ತು. ನಿದ್ದೆಯ ಕಣ್ಣುಳ್ಳವನಾಗಿದ್ದನು. ಆಗ ಕೃಷ್ಣಾಜಿನವನ್ನು ಹೊದ್ದುಕೊಂಡು ಸಂಚರಿಸುತ್ತಾ ಇದ್ದ ತಂದೆಯನ್ನು ನೋಡಿ ತನ್ನನ್ನು ಕೊಲ್ಲಲಿಕ್ಕೆ ಬರುವುದೆಂದು ತಿಳಿದುಕೊಂಡು ಕೊಂದುಬಿಟ್ಟನು. ಆಮೇಲೆ ತಂದೆಗೆ ಉತ್ತರಕ್ರಿಯೆಯನ್ನು ಮಾಡಿ, ಸತ್ರಯಾಗಕ್ಕೆ ಹೋಗಿ ತನ್ನ ಸಹೋದರನಾದ ಅರ್ವಾವಸುವಿನೊಡನೆ 'ನೀನೊಬ್ಬನೇ ಈ ಯಾಗವನ್ನು ಮಾಡಲಿಕ್ಕೆ ಶಕ್ತನಲ್ಲ. ನಾನು ಮೃಗವೆಂದು ತಿಳಿದುಕೊಂಡು ತಂದೆಯನ್ನು ಕೊಂದುಬಿಟ್ಟೆನು. ನೀನು ನನಗಾಗಿ ಬ್ರಹ್ಮಹತ್ಯಾಪರಿಹಾರಕವಾದ ವ್ರತವನ್ನು ಮಾಡು. ನಾನೊಬ್ಬನೇ ಈ ಯಾಗವನ್ನು ಪೂರಯಿಸಲಿಕ್ಕೆ ಸಮರ್ಥನಾಗಿದ್ದೇನೆ' ಎಂದನು.

ಆಗ ಅರ್ವಾವಸುವು 'ನೀವು ಬೃಹದ್ಧ್ಯುಮ್ನರಾಜನ ಯಾಗವನ್ನು ಮಾಡಿರಿ. ನಿಮಗೋಸ್ಕರ ನಾನು ಬ್ರಹ್ಮಹತ್ಯಾಪರಿಹಾರಕವ ವ್ರತವನ್ನು ಮಾಡುವೆನು' ಎಂದು ಹೇಳಿ ಬ್ರಹ್ಮಹತ್ಯೆಯ ದೋಷವನ್ನು ಪರಿಹಾರಮಾಡಿಕೊಂಡು ಸತ್ರಯಾಗಕ್ಕೆ ಬಂದನು. ಪರಾವಸುವು ಬರುತ್ತಿರುವ ಅರ್ವಾವಸುವನ್ನು ನೋಡಿ 'ಇವನು ಬ್ರಹ್ಮಹತ್ಯಾ ಮಾಡಿದವನು. ಯಜ್ಞವನ್ನು ನೋಡಲಿಕ್ಕೆ ಬರಬಾರದು. ಬ್ರಹ್ಮಹತ್ಯೆಯನ್ನು ಮಾಡಿದವನು ಯಜ್ಞವನ್ನು ನೋಡಿದರೂ ಅದು ಕೆಟ್ಟು ಹೋಗುವುದು' ಎಂದನು. ಆದನ್ನು ಕೇಳಿ ರಾಜನು ದೂತರ ಹತ್ತಿರ ಹೇಳಿದನು. ದೂತರು ಹೋಗಿ ಅರ್ವಾವಸುವನ್ನು ಹೊರಗೆ ತಳ್ಳಿದರು (ದೂಡಿದರು). ಆಗ ಅರ್ವಾಸುವು ನಾನು ಬ್ರಹ್ಮಹತ್ಯೆಯನ್ನು ಮಾಡಿದವನಲ್ಲ. ನನ್ನ ಅಣ್ಣನೇ ಮಾಡಿದವನು. ನಾನು ಅದನ್ನು ಪರಿಹಾರಮಾಡಿ ಬಂದಿದ್ದೇನೆ ಎಂದು ಹೇಳಿದರೂ ದೂತರು ಕೇಳದೆ ಅವನನ್ನು ದೂರಕ್ಕೆ ತಳ್ಳಿದರು. ಒಂದೂ ಮಾತಾಡದೆ ವನಕ್ಕೆ ಹೋದರು. ವನದಲ್ಲಿ ಸೂರ್ಯ ದೇವರನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದರು. ಸೂರ್ಯದೇವರು ಪ್ರತ್ಯಕ್ಷರಾದರು. ಎಲ್ಲಾ ದೇವತೆಗಳೂ ಅರ್ವಾವಸುವು ಮಾಡಿದ ಕರ್ಮದಿಂದ ಅರ್ವಾವಸುವನ್ನು ಅಂಗೀಕರಿಸಿದರು. ಪರಾವಸುವನ್ನು ಯಜ್ಞದಿಂದ ನಿರಾಕರಿಸಿ ದರು. ಅಗ್ನ್ಯಾದಿದೇವತೆಗಳು ಅರ್ವಾವಸುವಿಗೆ ವರವನ್ನು ಕೊಟ್ಟರು. ಆಗ ಅರ್ವಾವಸುವು ತಂದೆಯು ಬದುಕಬೇಕೆಂದೂ ಅಣ್ಣನಿಗೆ ದೋಷ ಬರಬಾರ ದೆಂದೂ, ತಂದೆಗೆ ತನ್ನನ್ನು ಕೊಂದ ಸ್ಮರಣೆಯಿರಬಾರದೆಂದೂ ಭರದ್ವಾಜರೂ ಯವಕ್ರೀತನೂ ಬದುಕಬೇಕೆಂದೂ ಸೂರ್ಯದೇವರನ್ನು ಹೇಳುವ ವೇದಮಂತ್ರದ ಸಂಪ್ರದಾಯವು ತಿಳಿಯುವಂತೆಯೂ ವರವನ್ನು ಕೇಳಿಕೊಂಡನು. ಹಾಗೆಯೇ ಆಗಲಿ

ಎಂದು ದೇವತೆಗಳು ವರವನ್ನು ಕೊಟ್ಟರು. ಆಗ ಎಲ್ಲರೂ ಬದುಕಿದರು. ಆಗ ಯವಕ್ರೀತನು ಅಗ್ನಿ ಮೊದಲಾದ ದೇವತೆಗಳೊಡನೆ ನಾನು ವೇದಗಳನ್ನು ತಿಳಿದವನಾಗಿದ್ದೇನೆ. ವ್ರತಗಳನ್ನು ಮಾಡಿದವನಾಗಿದ್ದೇನೆ. ಹೀಗಿರುವಾಗ ನನ್ನನ್ನು ರೈಭ್ಯರು ಹಾಗೆ ಕೊಲ್ಲಲಿಕ್ಕೆ ಹೇಗೆ ಸಮರ್ಥರಾದರು? ಎಂದು ಕೇಳಿದನು.

ಅದಕ್ಕೆ ದೇವತೆಗಳು 'ಯವಕ್ರೀತ! ಹಾಗೆ ಕೇಳಬೇಡ. ನಿನಗೆ ಗುರುಗಳ ಮುಖದಿಂದ ಅಧ್ಯಯನಮಾಡದೆ ವೇದಗಳು ಬಂದಿವೆ. ರೈಭ್ಯರು ಶ್ರಮಪಟ್ಟು ತನ್ನ ಸೇವೆಯಿಂದ ಗುರುಗಳನ್ನು ಸಂತೋಷಪಡಿಸಿ ಬಹುಕಾಲ ಅಧ್ಯಯನ ಮಾಡಿರುವರು. ಆದುದರಿಂದ ಅವರಿಗೆ ಸಾಮರ್ಥ್ಯವು' ಎಂದರು. ಈರೀತಿಯಾಗಿ ಹೇಳಿ ದೇವತೆಗಳು ಹೊರಟುಹೋದರು. ಆಮೇಲೆ ಯವಕ್ರೀತನು ನಾಲ್ವತ್ತೆಂಟುವರ್ಷ ಬ್ರಹ್ಮಚರ್ಯ ಅನುಷ್ಠಾನಮಾಡಿ ವೇದಾಭ್ಯಾಸ ಮಾಡಿದರು.



## ಋಷ್ಯಶೃಂಗರ ಕಥೆ [1]

ಪೂರ್ವದಲ್ಲಿ ಮಹಾತಪಸ್ವಿಯಾದ ವಿಭಾಂಡಕರೆಂಬ ಋಷಿಗಳು ಇದ್ದರು. ಅವರು ಬಾಲಕರಾಗಿರುವಾಗಲೇ ಮುದುಕರಂತೆ ಜ್ಞಾನಿಗಳಾಗಿದ್ದರು. ಒಂದು ದೊಡ್ಡ ಮಡುವಿನ ಸಮೀಪದಲ್ಲಿ ತಪಸ್ಸು ಮಾಡುತ್ತಿದ್ದರು. ಬಹುಕಾಲ ತಪಸ್ಸು ಮಾಡಿ ತುಂಬಾ ಶ್ರಮವುಳ್ಳವರಾಗಿದ್ದರು. ಅಕಸ್ಮಾತ್ ಊರ್ವಶಿಯೆಂಬ ಅಪ್ಸರಸ್ತ್ರೀಯನ್ನು ನೋಡಿದರು. ಇದರಿಂದ ಅವರು ನೀರಿನಲ್ಲಿ ಆಚಮನ ಮಾಡುತ್ತಿರಲು ವೀರ್ಯವು ಬಿದ್ದಿತು. ಆಗ ನೀರಡಿಕೆಯಿಂದ ನೀರು ಕುಡಿಯಲಿಕ್ಕೆ ಅಲ್ಲಿಗೆ ಬಂದಿದ್ದ ಒಂದು ಜಿಂಕೆಯು ನೀರಿನ ಸಹಿತವಾಗಿ ಆ ವೀರ್ಯವನ್ನು ಕೂಡಿಯಿತು. ಇದರಿಂದ ಆ ಹೆಣ್ಣು ಜಿಂಕೆಯು ಗರ್ಭಿಣಿಯಾಯಿತು. ಒಬ್ಬಳು ದೇವಕನ್ಯೆಯು 'ನೀನು ಜಿಂಕೆಯಾಗಿ ಹುಟ್ಟಿ ಒಬ್ಬ ಮುನಿಪುತ್ರನನ್ನು ಹಡೆದು ಆಮೇಲೆ ಜಿಂಕೆ ಜನ್ಮದಿಂದ ಬಿಡುಗಡೆ ಹೊಂದುವಿ' ಎಂದು ಬ್ರಹ್ಮದೇವರ ಶಾಪದಿಂದ ಜಿಂಕೆಯಾಗಿ ಹುಟ್ಟಿದ್ದಳು. ದೈವೇಚ್ಛೆಯಿಂದ ಆ ಹೆಣ್ಣು ಜಿಂಕೆಯು ಗಂಡುಮಗುವನ್ನು ಹಡೆಯಿತು. ಮಗುವಿಗೆ ತಲೆಯಲ್ಲಿ ಕೊಂಬು ಇತ್ತು. ಇದರಿಂದ ಋಷ್ಯಶೃಂಗ ಎಂದು ಹೆಸರಾಯಿತು. ಋಷ್ಯಶೃಂಗರು ತಂದೆಯನ್ನು ಬಿಟ್ಟು ಯಾವ ಮನುಷ್ಯರನ್ನು ನೋಡಿದ್ದೇ ಇಲ್ಲ. ಅದರಿಂದ ಅವರ ಮನಸ್ಸು ಯಾವಾಗಲೂ ಬ್ರಹ್ಮಚರ್ಯದಲ್ಲಿಯೇ ಇದ್ದಿತು.

1. ಮ.ಭಾ.ವ.ಪ. ಅ.132-134

ಇದೇ ಸಮಯದಲ್ಲಿ ದಶರಥನಿಗೆ ಮಿತ್ರನಾದ ರೋಮಪಾದರಾಜನು ಅಂಗದೇಶವನ್ನು ಆಳುತ್ತಿದ್ದನು. ಒಂದು ಸಂದರ್ಭದಲ್ಲಿ ಆ ರಾಜನು ಬ್ರಾಹ್ಮಣರಿಗೆ ಯಾವುದೋ ಒಂದು ಪದಾರ್ಥವನ್ನು ಕೊಡುತ್ತೇನೆ ಎಂದು ಪ್ರತಿಜ್ಞಾಮಾಡಿ ನಾನು ಕೊಡುತ್ತೇನೆ ಎಂದು ಹೇಳಲೇ ಇಲ್ಲವೆಂದು ಬಿಟ್ಟನು. ಇದರಿಂದ ಬ್ರಾಹ್ಮಣರು ಅವನನ್ನು ಬಿಟ್ಟುಬಿಟ್ಟರು. ಪುರೋಹಿತರದ್ದೂ ಒಂದು ಅಪರಾಧವು ಏರ್ಪಟ್ಟಿತು. ಇದರಿಂದ ಅವನ ರಾಜ್ಯದಲ್ಲಿ ಮಳೆಯೇ ಬರಲಿಲ್ಲ. ಪ್ರಜೆಗಳಿಗೆಲ್ಲಾ ಬಹಳ ಶ್ರಮವು ಏರ್ಪಟ್ಟಿತು. ಇಂದ್ರದೇವರಿಂದ ಮಳೆ ಸುರಿಸಲು ಸಮರ್ಥರಾದ ತಪಸ್ವಿಗಳಾದ ಋಷಿಗಳೊಡನೆ 'ಹೇಗೆ ಮಳೆಯು ಬರುವುದು? ಆ ಉಪಾಯವನ್ನು ಹೇಳಿರಿ' ಎಂದು ಕೇಳಿದನು.

ಆಗ ಋಷಿಗಳು ತಮ್ಮ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಅವರಲ್ಲಿ ಒಬ್ಬ ಮುನಿವರರು 'ರಾಜನೇ! ಬ್ರಾಹ್ಮಣರು ನಿನ್ನ ಮೇಲೆ ಕೋಪಿಸಿಕೊಂಡಿರುವರು. ಅದಕ್ಕೆ ಪ್ರಾಯಶ್ಚಿತ್ತವನ್ನು ಮಾಡಕೊ. ಜಿಂಕೆಯ ಹೊಟ್ಟೆಯಲ್ಲಿ ಹುಟ್ಟಿರುವ ಸ್ತ್ರೀಯರ ವಿಷಯವನ್ನೇ ತಿಳಿಯದಿರುವ ಮುನಿಪುತ್ರರಾದ ಋಷ್ಯಶೃಂಗರನ್ನು ತರಿಸು. ಆ ಮಹಾ ತಪಸ್ವಿಗಳು ನಿನ್ನ ರಾಜ್ಯಕ್ಕೆ ಬಂದರೆ ಇಂದ್ರದೇವರು ಮಳೆಸುರಿಸುವರು. ಸಂದೇಹವೇ ಇಲ್ಲ' ಎಂದರು. ಇದನ್ನು ಕೇಳಿ ರಾಜನು ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಬ್ರಾಹ್ಮಣರ ಪ್ರಸಾದವನ್ನು ಸಂಪಾದಿಸಿ ಬರಲು ರಾಜನನ್ನು ಎಲ್ಲಾ ಪ್ರಜೆಗಳೂ ಅಂಗೀಕಾರ ಮಾಡಿದರು.

ತರುವಾಯ ರಾಜನು ಮಂತ್ರಿಗಳನ್ನು ಕರೆದು ಋಷ್ಯಶೃಂಗರನ್ನು ರಾಜ್ಯಕ್ಕೆ ತರಿಸುವ ವಿಷಯವನ್ನು ಯೋಚಿಸಿದನು. ರಾಜನು ಶಾಸ್ತ್ರವನ್ನು ತಿಳಿದವರಾದ ಮಂತ್ರಿಗಳೊಡನೆ ಅವರನ್ನು ತರಿಸುವ ಉಪಾಯವನ್ನು ನಿಶ್ಚಯಿಸಿದನು. ತರುವಾಯ ಕೆಲವು ವೇಶ್ಯಾಸ್ತ್ರೀಯರನ್ನು ತರಿಸಿ 'ನೀವು ಹೋಗಿ ಋಷಿಪುತ್ರರಾದ ಋಷ್ಯಶೃಂಗರನ್ನು ಮೋಹಗೊಳಿಸಿ ನನ್ನ ದೇಶಕ್ಕೆ ಕರಕೊಂಡು ಬರಬೇಕು' ಎಂದು ಹೇಳಿದನು. ಆಗ ಅವರು ರಾಜನ ಭಯವುಳ್ಳವರಾಗಿಯೂ ಋಷಿ ಶಾಪಭಯವುಳ್ಳವರಾಗಿಯೂ ವಿಷಾದವುಳ್ಳವರಾಗಿ ಈ ಕಾರ್ಯವು ನಮ್ಮಿಂದ ಶಕ್ಯವಲ್ಲ ಎಂದರು. ಅವರಲ್ಲಿ ಒಬ್ಬ ಮುದುಕಿಯಾದ ವೇಶ್ಯೆಯು 'ಮಹಾರಾಜರೇ! ನಾನು ಆ ತಪಸ್ವಿಗಳನ್ನು ಕರತರಲಕ್ಕೆ ಪ್ರಯತ್ನಿಸುವೆನು. ನನಗೆ ಬೇಕಾದ ಸೌಕರ್ಯಗಳನ್ನು ಮಾಡಿಕೊಡಬೇಕು. ಹಾಗೆ ಮಾಡಿದರೆ ಋಷ್ಯಶೃಂಗರನ್ನು ಇಲ್ಲಿಗೆ ಕರೆತರಲು ಸಮರ್ಥಳಾಗುವೆನು' ಎಂದು ಹೇಳಿದಳು. ರೋಮಪಾದ ರಾಜನು ಅವಳು ಹೇಳಿದಂತೆ ಸೌಕರ್ಯವನ್ನೆಲ್ಲಾ

ಮಾಡಿಕೊಟ್ಟನು. ಬೇಕಾದಷ್ಟು ಹಣವನ್ನೂ ನಾನಾವಿಧ ರತ್ನಗಳನ್ನು ಕೊಟ್ಟನು. ತರುವಾಯ ಆ ಮುದಿವೇಶ್ಯೆಯು ರೂಪವತಿಯರಾದ ಯುವತಿಯರಾದ ಕೆಲವು ಸ್ತ್ರೀಯರನ್ನು ಕರೆದುಕೊಂಡು ವನಕ್ಕೆ ಹೋದಳು.

ಆ ಮುದಿವೇಶ್ಯೆಯು ರಾಜನ ಕಾರ್ಯದ ಸಿದ್ಧಿಗೋಸ್ಕರ ದೋಣಿಯಲ್ಲಿಯೇ ಕೃತ್ರಿಮಗಳಾದ ನಾನಾಪುಷ್ಪಫಲಗಳುಳ್ಳ ಮರಗಳನ್ನು ಇಟ್ಟು ಆಶ್ರಮವನ್ನು ಮಾಡಿದಳು. ವಿಭಾಂಡಕರ ಆಶ್ರಮದ ಸಮೀಪದಲ್ಲಿಯೇ ಆ ದೋಣಿಯನ್ನು ಕಟ್ಟಿದಳು. ತರುವಾಯ ಚಾರಕರಿಂದ ವಿಭಾಂಡಕರು ಆಶ್ರಮದಿಂದ ಹೊರಗೆ ಹೋದ ವಿಷಯವನ್ನು ತಿಳಿದುಕೊಂಡಳು. ಆ ಸಮಯವನ್ನು ನೋಡಿ ಬುದ್ಧಿವಂತಳಾದ ತನ್ನ ಮಗಳಿಗೆ ಮಾಡಬೇಕಾದ ಕಾರ್ಯವನ್ನು ತಿಳಿಸಿ ಕಳುಹಿಸಿದಳು. ಸಮರ್ಥಳಾದ ಅವಳು ಆ ಆಶ್ರಮಕ್ಕೆ ಹೋಗಿ ಋಷ್ಯಶೃಂಗರನ್ನು ನೋಡಿದಳು. 'ಮುನಿಗಳೇ ನಿಮ್ಮ ತಪಸ್ಸು ಸರಿಯಾಗಿ ನಡೆಯುವುದೇ? ಗೆಡ್ಡೆ ಹಣ್ಣುಗಳು ಸರಿಯಾಗಿ ಸಿಗುವುವೇ? ಆಶ್ರಮದಲ್ಲಿ ಸೌಖ್ಯದಿಂದ ಇದ್ದೀರಾ? ನಿಮ್ಮನ್ನು ನೋಡುವುದಕ್ಕಾಗಿಯೇ ನಾನು ಬಂದಿರುವೆನು. ನಿಮ್ಮ ತಂದೆಯು ಸೌಖ್ಯದಿಂದ ಇದ್ದಾರೋ? ನಿಮ್ಮ ಅಧ್ಯಯನವು ಚೆನ್ನಾಗಿ ನಡೆಯುತ್ತದೆಯೋ?' ಇತ್ಯಾದಿಗಳು ಕೇಳಿದಳು.

ಋಷ್ಯಶೃಂಗರು ಹೆಂಗಸರನ್ನು ನೋಡಿದವರೇ ಅಲ್ಲ. ಆದುದರಿಂದ ಅವರು 'ನೀನು ಜ್ಯೋತಿಸ್ಸಿನಂತೆ ಪ್ರಕಾಶಿಸುವಿ. ನಿನಗೆ ನಾನು ನಮಸ್ಕಾರ ಮಾಡಬೇಕೆಂದು ತೋರುತ್ತದೆ. ನಿನಗೆ ಪಾದ್ಯವನ್ನು ಕೊಡುತ್ತೇನೆ. ಗೆಡ್ಡೆ ಹಣ್ಣುಗಳನ್ನು ಕೊಡುತ್ತೇನೆ. ನಿನ್ನ ಆಶ್ರಮವೆಲ್ಲಿ ಇದೆ? ಬ್ರಾಹ್ಮಣನೇ! ನೀನು ದೇವತೆಯಂತೆ ಏನು ವ್ರತವನ್ನು ಮಾಡುವಿ? ಈ ಕೃಷ್ಣಾಜಿನ ಹಾಸಿರುವ ದರ್ಭೆಯ ಆಸನದಲ್ಲಿ ಕುತುಕೊ' ಎಂದರು.

ಆಗ ವೇಶ್ಯೆಯು 'ನನ್ನ ಆಶ್ರಮವು ಈ ಪರ್ವತದ ಆಚೆ ಮೂವತ್ತುಮೈಲು ದೂರದಲ್ಲಿ ಇದೆ. ನಮ್ಮ ಧರ್ಮವು ನಮಗೆ ಒಬ್ಬರೂ ನಮಸ್ಕಾರವನ್ನು ಮಾಡಬಾರದು. ನಾವು ಪಾದ್ಯವನ್ನೂ ಸ್ವೀಕರಿಸಲಾರೆವು. ನೀನು ನನಗೆ ನಮಸ್ಕಾರ ಮಾಡಬಾರದು. ನಾನು ನಿನಗೆ ನಮಸ್ಕಾರ ಮಾಡಬೇಕು. ನಮ್ಮ ವ್ರತವು ಹೀಗೆ ಇದೆ. ನಿನ್ನನ್ನು ನಾನು ಆಲಿಂಗಿಸಬೇಕು' ಎಂದಳು.

ಋಷ್ಯಶೃಂಗರು 'ನಿನಗೆ ಒಳ್ಳೇ ಹಣ್ಣುಗಳನ್ನು ಅಂದರೆ ಗೇರುಬೀಜದ ಹಣ್ಣು ನೆಲ್ಲಿಕಾಯಿ ಇತ್ಯಾದಿಗಳನ್ನು ಕೊಡುತ್ತೇನೆ' ಎಂದು ಹೇಳಿಕೊಟ್ಟರು. ವೇಶ್ಯೆಯ ಆ ಹಣ್ಣುಗಳನ್ನೆಲ್ಲಾ ಬಿಟ್ಟು ಬಿಟ್ಟು ಸುಂದರಗಳಾದ ರಸಭರಿತಗಳಾದ ಮೋದಕ ಭಕ್ಷ್ಯಗಳನ್ನು ಕೊಟ್ಟಳು. ಒಳ್ಳೇ ಸುವಾಸನೆಯುಳ್ಳ ಹೂಗಳನ್ನೂ ವಿಚಿತ್ರ ವಸ್ತುಗಳನ್ನೂ

ಕೊಟ್ಟಳು. ಒಳ್ಳೇ ಪಾನೀಯಗಳನ್ನು ಕೊಟ್ಟಳು. ಆಡಿದಳು. ನೆಗಾಡಿದಳು. ಅವರ ಎದುರಲ್ಲೇ ಚೆಂಡಿನಿಂದ ಆಡಿದಳು. ಅನೇಕಬಾರಿ ಋಷ್ಯಶೃಂಗರನ್ನು ಆಲಿಂಗನ ಮಾಡಿದಳು. ಪುಷ್ಪವುಳ್ಳ ಮರಗಳ ಕೊಂಬೆಗಳನ್ನು ಹಿಡಿದು ಬಗ್ಗಿಸುತ್ತಾ ಲಜ್ಜಾವುಳ್ಳವ ರಂತೆ ತೋರಿಸಿದಳು. ಋಷ್ಯಶೃಂಗರಿಗೆ ಮನಸ್ಸಿನಲ್ಲಿ ವಿಕಾರವುಂಟಾಯಿತೆಂದು ತಿಳಿದು ಪುನಃ ಪುನಃ ಆಲಿಂಗಿಸಿ ನನಗೆ ಅಗ್ನಿಹೋತ್ರ ಮಾಡಲಿಕ್ಕೆ ಸಮಯವಾಯಿತು ಎಂದು ಹೇಳುತ್ತಾ ಹೊರಟುಹೋದಳು.

ಅವಳು ಹೋದಮೇಲೆ ಋಷ್ಯಶೃಂಗರಿಗೆ ಅವಳ ಮೇಲೇ ಮನಸ್ಸು ಆಸಕ್ತವಾಯಿತು. ಅವಳನ್ನೇ ಯೋಚಿಸುತ್ತಾ ಶ್ವಾಸಬಿಡುತ್ತಾ ದುಃಖದಿಂದ ಕೂತಿದ್ದರು. ಒಂದು ಮುಹೂರ್ತವಾಗಲು ವಿಭಾಂಡಕರು ಬಂದರು. ಬಂದು ಯೋಚನೆ ಮಾಡುತ್ತಾ ದೀರ್ಘಶ್ವಾಸಬಿಡುತ್ತಾ ಮೇಲೆ ನೋಡುತ್ತಾ ಕೂತಿರುವ ಋಷ್ಯಶೃಂಗರನ್ನು ನೋಡಿದರು.

'ಮಗ' ಯಾಕೆ ಸಮಿಧೆಗಳನ್ನು ಮಾಡಿ ಇಡಲಿಲ್ಲ' ಅಗ್ನಿಹೋತ್ರವನ್ನು ಮಾಡಿದಿಯಾ? ಸ್ರುಕ್ ಸ್ರುವಗಳನ್ನು ತೊಳೆದಿಯಾ? ದನಕ್ಕೆ ಕರುವನ್ನು ಬಿಟ್ಟಿಯಾ? ಯಾರು ಇಲ್ಲಿಗೆ ಬಂದರು? ಈ ಪುಷ್ಪಗಳು ಎಲ್ಲಿಂದ ಬಂದವು? ಏನು ಯೋಚನೆ ಮಾಡುತ್ತಿದ್ದಿ?' ಎಂದು ಕೇಳಿದರು.

ಋಷ್ಯಶೃಂಗರು 'ಇಲ್ಲಿಗೆ ಜಡೆಹಾಕಿಕೊಂಡಿರುವ ಒಬ್ಬ ಬ್ರಹ್ಮಚಾರಿಯು ಇಲ್ಲಿಗೆ ಬಂದನು. ಅವನು ತುಂಬಾ ಉದ್ದವೂ ಅಲ್ಲ, ತುಂಬಾ ಗಿಡ್ಡವೂ ಅಲ್ಲ, ಬಂಗಾರದಂತೆ ಹೊಳೆಯುತ್ತಾ ಇದ್ದನು. ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ಅವನ ನೀಲವಾದ ಜಟೆಗಳು ವಾಸನೆಯಾಗಿ ಇದ್ದವು. ಬಂಗಾರದ ಹಗ್ಗದಿಂದ ಕಟ್ಟಿದ್ದನು. ಅವನ ಕುತ್ತಿಗೆ ಯಲ್ಲಿಯೂ ಮಿಂಚಿನಂತೆ ಹೊಳೆಯುತ್ತಿತ್ತು. ಅವನ ಕುತ್ತಿಗೆಯ ಕೆಳಗೆ ರೋಮವಿಲ್ಲದೆ ಇರುವ ಸುಂದರಗಳಾದ ಎರಡು ಪಿಂಡಗಳು ಇದ್ದವು. ಚಿಕ್ಕ ಹೊಟ್ಟೆ ಅವನ ನಾರು ವಸ್ತ್ರದ ಒಳಗೆ ಬಂಗಾರದ ಒಡ್ಯಾಣವು ಪ್ರಕಾಶಿಸುತ್ತಿತ್ತು. ಇನ್ನೊಂದು ಆಶ್ಚರ್ಯ ಅವನು ನಡೆಯುವಾಗ ಅವನ ಕಾಲಿನಲ್ಲಿ ಏನೋ ಕೂಗುತ್ತಿತ್ತು. ಅವನ ಕೈಯಲ್ಲಿಯೂ ಜಪದ ಮಾಲಿಕೆಯಂತೆ ಆಭರಣಗಳಿವೆ. ಅವನ ಮುಖವೂ ಸುಂದರವಾಗಿವೆ. ಅವನ ಮಾತು ಕಿವಿಗೆ ಮನೋಹರವಾಗಿದೆ. ಕೋಕಿಲೆಯ ಧ್ವನಿಯಂತೆ ಅವನ ಧ್ವನಿ. ಅದನ್ನು ಕೇಳಿ ನನ್ನ ಮನಸ್ಸಿನಲ್ಲಿ ವ್ಯಥೆಯುಂಟಾಯಿತು. ಹಣೆಯ ಹತ್ತಿರ ತಲೆಯಲ್ಲಿ ಎರಡು ಭಾಗವಾಗಿರುವಂತೆ ಇದೆ. ಕಿವಿಯಲ್ಲಿ ಚಕ್ರವಾಕ ಪಕ್ಷಿಗಳಂತೆ ಇವೆ. ಬಲಕೈಯಿಂದ ಗುಂಡಗಿರುವ ಒಂದು ಹಣ್ಣನ್ನು ಬಡಿಯುತ್ತಿದ್ದನು. ಅದು ಮೇಲೆ

ಮೇಲೆ ಹಾರುತ್ತಿತ್ತು. ದೇವತೆಗಳ ಮಂಗನಂತೆ ಇದ್ದ ಅವನನ್ನು ನೋಡಿ ನನಗೆ ತುಂಬಾ ಪ್ರೀತಿಯೂ ಸಂತೋಷವೂ ಆಯಿತು. ಅವನು ನನ್ನನ್ನು ಆಲಿಂಗನ ಮಾಡಿದನು. ಅವನು ನನ್ನ ಜಟೆಯನ್ನು ಹಿಡಿದು ಮುಖವನ್ನು ಬಗ್ಗಿಸಿ ನನ್ನ ಮುಖದ ಹತ್ತಿರ ತನ್ನ ಮುಖವನ್ನು ಇಟ್ಟು ಏನೋ ಶಬ್ದ ಮಾಡಿದನು. ಆಗ ನನಗೆ ಬಹಳ ಸಂತೋಷವಾಯಿತು. ಅವನು ನಾನು ಪಾದ್ಯವನ್ನು ಕೊಟ್ಟರೆ ಬೇಡವೆಂದನು. ನಾನು ಕೊಟ್ಟ ಹಣ್ಣನ್ನು ತೆಗೆದುಕೊಳ್ಳಲಿಲ್ಲ. ನನ್ನ ವ್ರತವು ಹಾಗೆ ಇದೆ ಎಂದನು. ಅವನೇ ನನಗೆ ಬೇರೆ ಹಣ್ಣುಗಳನ್ನು ಕೊಟ್ಟನು. ನಾನು ಅವುಗಳನ್ನು ತಿಂದೆನು. ಅವು ನಮ್ಮ ಹಣ್ಣಿನಂತೆ ಇರಲಿಲ್ಲ. ತುಂಬಾ ರುಚಿಕರವಾಗಿ ಇತ್ತು. ಅವುಗಳಿಗೆ ನಮ್ಮ ಹಣ್ಣುಗಳಂತೆ ತೊಗಲೂ ಇರಲಿಲ್ಲ. ನನಗೆ ಅವನು ಕೊಟ್ಟ ನೀರು ರುಚಿಯಾಗಿತ್ತು. ಅದನ್ನು ಕುಡಿದ ಕೂಡಲೇ ನನಗೆ ಬಹಳ ಸಂತೋಷವಾಯಿತು. ಭೂಮಿಯೆಲ್ಲಾ ತಿರುಗಿದಂತೆ ತೋರಿತು. ಅವನೇ ಈ ಸುವಾಸನೆಯುಳ್ಳ ಹೂಗಳನ್ನು ಇಲ್ಲಿ ಚೆಲ್ಲಿ ಹೊರಟು ಹೋದನು. ಅವನು ಹೋದಮೇಲೆ ನನಗೆ ತುಂಬಾ ದುಃಖವಾಯಿತು. ಮೈಯೆಲ್ಲಾ ಉರಿಯುವಂತೆ ಆಗುತ್ತದೆ. ಅವನ ಹತ್ತಿರವೇ ಹೋಗಬೇಕೆಂದು ನನಗೆ ತೋರುತ್ತದೆ. ನಾನು ಅವನ ಹತ್ತಿರವೇ ಹೋಗುತ್ತೇನೆ. ಅವನ ಒಟ್ಟಿಗೇನೇ ತಪಸ್ಸು ಮಾಡುತ್ತೇನೆ. ಅವನನ್ನು ನೋಡದೆ ಇದ್ದರೆ ನನಗೆ ದುಃಖವಾಗುತ್ತದೆ' ಎಂದು ಹೇಳಿದಳು.

ಆಗ ವಿಭಾಂಡಕರು 'ಮಗ! ರಾಕ್ಷಸರು ಹಾಗೆ ಸುಂದರವಾಗಿ ಅದ್ಭುತವಾದ ರೂಪವನ್ನು ಧರಿಸಿಕೊಂಡು ಬಂದು ನಮ್ಮ ತಪಸ್ಸಿಗೆ ವಿಘ್ನವನ್ನು ಮಾಡುತ್ತಾರೆ. ನಾನಾ ವಿಧವಾಗಿ ಆಸೆ ತೋರಿಸುತ್ತಾರೆ. ಮುನಿಗಳನ್ನು ಉತ್ತಮಲೋಕಗಳಿಂದ ತಪ್ಪಿಸುತ್ತಾರೆ. ಮುನಿಗಳನ್ನು ಅವರನ್ನು ಸೇವಿಸಬಾರದು. ಆ ರಾಕ್ಷಸರು ಪಾಪಿಗಳು ಮುನಿಗಳಿಗೆ ವಿಘ್ನವನ್ನು ಮಾಡಿ ಸಂತೋಷಪಡುತ್ತಾರೆ. ಅವರು ಕೊಡತಕ್ಕ ನೀರನ್ನು ಕುಡಿಯಬಾರದು. ಈ ಹೂವನ್ನು ಮುನಿಗಳು ಧರಿಸಬಾರದು. ಅವರೆಲ್ಲಾ ರಾಕ್ಷಸರು' ಎಂದು ಮಗನ ಹತ್ತಿರ ಹೇಳಿ ಯಾವ ಹೆಂಗಸು ಬಂದಿರುವಳು ಎಂದು ಹುಡುಕುತ್ತಾ ಹೋದರು. ಮೂರುದಿನ ಹುಡುಕಿದರು. ಸಿಗಲೇ ಇಲ್ಲ. ಆಮೇಲೆ ಮತ್ತೊಂದು ದಿನ ವಿಭಾಂಡಕರು ಹಣ್ಣುಗಳನ್ನು ತರಲಿಕ್ಕೆ ವನಕ್ಕೆ ಹೋದರು. ಆಗ ಪುನಃ ಆ ವೇಶ್ಯೆಯು ಋಷ್ಯಶೃಂಗರಿಗೆ ಆಸೆ ತೋರಿಸಲಿಕ್ಕೆ ಬಂದಳು. ಋಷ್ಯಶೃಂಗರು ಅವಳನ್ನು ನೋಡಿದ ಕೂಡಲೇ ಎದ್ದುನಿಂತರು. ನನ್ನ ತಂದೆಯು ಬರುವ ಪೂರ್ವದಲ್ಲಿಯೇ ನಿನ್ನ ಆಶ್ರಮಕ್ಕೆ ಹೋಗುವ ಎಂದನು. ತರುವಾಯ ಋಷ್ಯಶೃಂಗರನ್ನು ಕರಕೊಂಡು ಹೋಗಿ ಆಶ್ರಮದಂತೆ ಇರುವ ದೋಣಿಯಲ್ಲಿ ಕೂತುಕೊಳ್ಳಿಸಿಕೊಂಡು ಅಂಗದೇಶಕ್ಕೆ ಕರಕೊಂಡು

ಹೋದಳು. ಅಂಗರಾಜನು ಋಷ್ಯಶೃಂಗರನ್ನು ಅಂತಃಪುರಕ್ಕೆ ಕರೆದುಕೊಂಡು ಹೋದನು. ಅಷ್ಟರಲ್ಲೇ ಮೇಘಗಳೆಲ್ಲ ಬಂದು ಬೇಕಾದಷ್ಟು ಮಳೆಯು ಸುರಿಯಿತು. ರೋಮಪಾದನು ತನ್ನ ಅಭಿಲಾಷೆಯನ್ನು ಪೂರಯಿಸಿಕೊಂಡವನಾಗಿ ತನ್ನ ಮಗಳಾದ ಶಾಂತೆಯನ್ನು ಋಷ್ಯಶೃಂಗರಿಗೆ ಮದುವೆಮಾಡಿದನು.

ತರುವಾಯ ವಿಭಾಂಡಕರ ಕೋಪವನ್ನು ಶಾಂತಮಾಡುವುದಕ್ಕೋಸ್ಕರ ಬರುವ ದಾರಿಯಲ್ಲೆಲ್ಲಾ ಗೋವುಗಳನ್ನು ಇಟ್ಟನು. ಜನರನ್ನು ನಿಲ್ಲಿಸಿದನು. ವಿಭಾಂಡಕರು ಬರುತ್ತಾ ನಿಮ್ಮ ಹತ್ತಿರ ಕೇಳಿದರೆ ಅವರಿಗೆ ಕೈಮುಗಿದು ಇವೆಲ್ಲ ನಿಮ್ಮ ಮಗನ ದನಗಳು. ನಿಮಗೆ ನಾವು ಯಾವ ಪ್ರಿಯಕಾರ್ಯವನ್ನು ಮಾಡಲಿ? ನಾವೆಲ್ಲರೂ ನಿಮ್ಮ ಆಜ್ಞೆಯಂತೆ ಇರುವ ಭೃತ್ಯರು ಎನ್ನಬೇಕು ಎಂದು ಹೇಳಿದನು.

ಮಹಾಕೋಪವುಳ್ಳವರಾದ ವಿಭಾಂಡಕರು ಹಣ್ಣುಗಳನ್ನು ಹಿಡಿದುಕೊಂಡು ಆಶ್ರಮಕ್ಕೆ ಬರುವಾಗ ಮಗನನ್ನು ನೋಡಲಿಲ್ಲ. ಎಷ್ಟು ಹುಡುಕಿದರು ಸಿಗಲಿಲ್ಲ. ಬಹುಕೋಪವುಳ್ಳವರಾದರು. ಅಂಗರಾಜನೇ ಹೀಗೆ ಮಾಡಿರಬಹುದೆಂದು ತಿಳಿದು ಕೊಂಡು ರಾಜನನ್ನು ರಾಜ್ಯಸಹಿತವಾಗಿ ಸುಟ್ಟುಹಾಕುವೆನೆಂದು ಚಂಪಾನಗರಿಗೆ ಹೋದರು. ಶ್ರಮವನ್ನು ಹಸಿವೆ ಉಳ್ಳವರಾದ ವಿಭಾಂಡಕರು ದಾರಿಯಲ್ಲಿ ದನಗಳನ್ನು ಗೋಪಾಲರನ್ನು ನೋಡಿದರು. ಗೋಪಾಲರಿಂದ ಶಾಸ್ತ್ರದಲ್ಲಿ ಹೇಳಿದಂತೆ ಪೂಜಿಸಲ್ಪಟ್ಟವರಾಗಿ ಆರಾತ್ರಿ ಅಲ್ಲೇ ವಾಸಮಾಡಿದರು. ಈರೀತಿ ಸತ್ಕಾರವನ್ನು ಹೊಂದಿ ಸಂತೋಷವುಳ್ಳವರಾಗಿ ನೀವು ಯಾರ ಗೋಪಾಲರು ಎಂದು ಕೇಳಿದರು. ಆಗ ಅವರು ಇದೆಲ್ಲಾ ನಿಮ್ಮ ಮಗನ ಸೊತ್ತು ಎಂದು ಹೇಳಿದರು.

ಹೀಗೇ ಅಲ್ಲಲ್ಲಿ ಪೂಜಿಸಲ್ಪಡುತ್ತಾ ಮಧುರ ಮಾತುಗಳನ್ನು ಕೇಳುತ್ತಾ ಬಹಳವಾಗಿ ಶಾಂತವಾದ ಕೋಪವುಳ್ಳವರಾದರು. ಊರಲ್ಲಿರುವ ಅಂಗರಾಜನ ಸಮೀಪಕ್ಕೆ ಬಂದರು. ಅಲ್ಲಿ ರಾಜನಿಂದ ಸತ್ಕೃತರಾಗಿ ಸ್ವರ್ಗದಲ್ಲಿ ದೇವೇಂದ್ರನಂತೆ ಅಲ್ಲಿ ಇದ್ದ ಮಗನನ್ನು ನೋಡಿದರು. ಮಿಂಚಿನಂತೆ ಹೊಳೆಯುತ್ತಿರುವ ಸೊಸೆಯಾದ ಶಾಂತೆಯನ್ನೂ ನೋಡಿದರು. ಮಗನ ಗ್ರಾಮಗಳನ್ನು ದನಗಳನ್ನೂ ಸೊಸೆಯಾದ ಶಾಂತೆಯನ್ನು ನೋಡಿ ವಿಭಾಂಡಕರ ಕೋಪವು ಸಂಪೂರ್ಣವಾಗಿ ಶಾಂತವಾಯಿತು. ತರುವಾಯ ವಿಭಾಂಡಕರು ಸೂರ್ಯನಂತೆಯೂ ಅಗ್ನಿಯಂತೆಯೂ ಪ್ರಭಾವವುಳ್ಳವರು ಮಗನನ್ನು ಅಲ್ಲಿಯೇ ಬಿಟ್ಟು ಮಗನು ಹುಟ್ಟಿದ ಮೇಲೆ ರಾಜನಿಗೆ ಬೇಕಾದ ಪ್ರಿಯಕಾರ್ಯಗಳನ್ನು ಮಾಡಿ ವನಕ್ಕೇನೇ ಬಂದು ಬಿಡು ಎಂದು ಹೇಳಿ ಹೊರಟುಹೋದನು.

ಅದೇ ರೀತಿಯಾಗಿ ಕೊನೆಗೆ ಋಷ್ಯಶೃಂಗರು ತಂದೆಯು ಇದ್ದ ವನಕ್ಕೇನೇ ಹೋದರು. ಶಾಂತೆಯೂ ಅಲ್ಲಿಗೆ ಹೋಗಿ ಚಂದ್ರನಿಗೆ ರೋಹಿಣಿಯಂತೆಯೂ, ವಸಿಷ್ಠರಿಗೆ ಅರುಂಧತಿಯಂತೆಯೂ, ಅಗಸ್ತ್ಯರಿಗೆ ಲೋಪಾಮುದ್ರೆಯಂತೆಯೂ, ನಳ ನಿಗೆ ದಮಯಂತಿಯಂತೆಯೂ, ಇಂದ್ರದೇವರಿಗೆ ಶಚೀದೇವಿಯಂತೆಯೂ, ಮುದ್ಗಲರಿಂದ ಇಂದ್ರಸೇನೆಯಂತೆಯೂ, ಋಷ್ಯಶೃಂಗರಿಗೆ ಅನುಕೂಲಳಾಗಿ ಇದ್ದುಕೊಂಡು ಪ್ರೀತಿಯಿಂದ ಸೇವಾಮಾಡುತ್ತಾ ಇದ್ದಳು.



## ಮಂದಪಾಲ [1]

ಮಂದಪಾಲ ಎಂದು ಪ್ರಸಿದ್ಧರಾದ ಒಬ್ಬ ಋಷಿಗಳು ಇದ್ದರು. ಅವರು ಬ್ರಹ್ಮಚರ್ಯವನ್ನೇ ಅನುಷ್ಠಾನ ಮಾಡಿ ವೇದಾಧ್ಯಯನವನ್ನು ಮಾಡಿ ತಪಸ್ಸನ್ನು ಮಾಡಿದರು. ಅವರು ಬಹಳ ತಪಸ್ಸನ್ನು ಮಾಡಿ ಕೊನೆಗೆ ದೇಹವನ್ನು ಪರಿತ್ಯಾಗ ಮಾಡಿ ಪಿತೃಲೋಕಕ್ಕೆ ಹೋದರು. ಆದರೆ ಅವರಿಗೆ ಅಲ್ಲಿ ತನ್ನ ತಪಸ್ಸಿನ ಫಲರೂಪವಾದ ಸ್ಥಾನವನ್ನು ಹೊಂದದೆ ಯಮಧರ್ಮರಾಜನ ಸಮೀಪದಲ್ಲಿರುವ ದೇವತೆಗಳೊಡನೆ 'ನಾನು ತಪಸ್ಸಿನಿಂದ ಸಂಪಾದಿಸಿದ ಲೋಕಗಳನ್ನು ಹೊಂದಲಿಕ್ಕೆ ಏಕೆ ಪ್ರತಿಬಂಧಕವುಂಟಾಗಿದೆ? ನಾನು ಯಾವ ಕಾರ್ಯವನ್ನು ಮಾಡಿಲ್ಲ. ಯಾವ ಕಾರ್ಯವನ್ನು ಮಾಡಿದರೆ ನಾನು ತಪಸ್ಸಿನ ಫಲವನ್ನು ಹೊಂದುವೆನು ಎಂದು ಕೇಳಿದರು.

ಆದಕ್ಕೆ ದೇವತೆಗಳು 'ಲೋಕದಲ್ಲಿ ಹುಟ್ಟುವ ಮನುಷ್ಯರು ಕ್ರಿಯೆಗಳಿಂದಲೂ ಬ್ರಹ್ಮಚರ್ಯದಿಂದಲೂ ಪ್ರಜೆಯಿಂದಲೂ ಋಣವುಳ್ಳವರಾಗಿ ಹುಟ್ಟುವರು. ಆ ಋಣವನ್ನು ಯಜ್ಞ ತಪಸ್ಸು ಮಕ್ಕಳಿಂದ ಪರಿಹರಿಸಿಕೊಳ್ಳಬೇಕು. ನೀವು ತಪಸ್ಸು ಮಾಡಿದ್ದೀರಿ. ಯಜ್ಞವನ್ನು ಮಾಡಿದ್ದೀರಿ. ಆದರೆ ನಿಮಗೆ ಮಕ್ಕಳಿಲ್ಲ. ಆದುದರಿಂದ ನೀವು ಮಕ್ಕಳನ್ನು ಪಡೆಯುವ ಸಲುವಾಗಿ ತಡೆಯು ಏರ್ಪಟ್ಟಿದೆ. ಮಕ್ಕಳನ್ನು ಪಡೆಯಿರಿ. ಉತ್ತಮ ಲೋಕವನ್ನು ಹೊಂದುವಿರಿ. ಪುತ್ ಎಂಬ ಹೆಸರುಳ್ಳ ನರಕ ದಿಂದ ರಕ್ಷಿಸುವ ಕಾರಣವೇ ಮಗನಿಗೆ ಪುತ್ರ ಎಂದು ಹೆಸರು ಬಂದಿರುವುದು' ಎಂದರು.

1. ಮ.ಭ.ಆಪ.ಅ.228-232 ಮ.ತಾ.ನಿ. ಅ.20-24; ಋ. X-142

ದೇವತೆಗಳ ಮಾತನ್ನು ಕೇಳಿ ಮಂದಪಾಲ ಋಷಿಗಳು ಯಾವ ಜಾತಿಯಲ್ಲಿ ಬೇಗನೆ ಬಹುಮಕ್ಕಳಾಗುವುವು ಎಂದು ಯೋಚಿಸಿದರು. ತರುವಾಯ ಪಕ್ಷಿಜಾತಿ ಗಳಲ್ಲಿ ಬೇಗನೇ ಬಹುಮಕ್ಕಳಾಗುವುವು ಎಂದು ಯೋಚಿಸಿ, ತಾನು ಗುಬ್ಬಿಪಕ್ಷಿಯ ರೂಪವನ್ನು ಧರಿಸಿ, ಜರಿತಾ ಎಂದು ಹೆಸರುಳ್ಳ ಹೆಣ್ಣು ಗುಬ್ಬಿ ಪಕ್ಷಿಯನ್ನು ಹೊಂದಿತು. ಆ ಜರಿತೆಯಲ್ಲಿ ಬ್ರಹ್ಮಜ್ಞಾನಿಗಳಾದ ನಾಲ್ಕು ಮಕ್ಕಳನ್ನು ಪಡೆದು, ಆ ಪಕ್ಷಿಯನ್ನು ಬಿಟ್ಟು ಲಪಿತಾ ಎಂದು ಹೆಸರುಳ್ಳ ಮತ್ತೊಂದು ಹೆಣ್ಣು ಗುಬ್ಬಿಪಕ್ಷಿಯನ್ನು ಹೊಂದಿದರು. ಜರಿತಾ ಪಕ್ಷಿಯು ಗಂಡನು ಬಿಟ್ಟು ಹೋದ ತನ್ನ ಮಕ್ಕಳನ್ನು ಖಾಂಡವವನದಲ್ಲಿಯೇ ರಕ್ಷಣೆ ಮಾಡುತ್ತಾ ಇತ್ತು. ಅದೇ ವನದಲ್ಲಿ ಮಂದಪಾಲರು ಲಪಿತಾ ಎಂಬ ಪಕ್ಷಿಯೊಡನೆ ಇದ್ದುಕೊಂಡು ಖಾಂಡವವನವನ್ನು ಸುಡಲಿಕ್ಕೆ ಬರುತ್ತಿರುವ ಅಗ್ನಿದೇವರನ್ನು ನೋಡಿದರು. ಮಂದಪಾಲರು ಅಗ್ನಿದೇವರ ಸಂಕಲ್ಪವನ್ನು ತಿಳಿದು ತನ್ನ ನಾಲ್ಕು ಮಕ್ಕಳು ಚಿಕ್ಕವರಾಗಿರುವುದನ್ನು ತಿಳಿದುಕೊಂಡು ಮಕ್ಕಳ ವಿಷಯವಾಗಿ ಭಯವುಳ್ಳವರಾಗಿ ಅಗ್ನಿದೇವರನ್ನು ಬಹಳವಾಗಿ ಸ್ತೋತ್ರಮಾಡಿದರು. ಇದರಿಂದ ಅಗ್ನಿದೇವರು ಸಂತುಷ್ಟರಾಗಿ ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದರು. ಆಗ ಮಂದಪಾಲರು 'ನೀವು ಖಾಂಡವವನವನ್ನು ಸುಡುವಾಗ ನನ್ನ ಮಕ್ಕಳನ್ನು ಬಿಡಬೇಕು' ಎಂದರು. ಅಗ್ನಿದೇವರು ಹಾಗೆಯೇ ಮಾಡುವೆನು ಎಂದು ಪ್ರತಿಜ್ಞೆಯನ್ನು ಮಾಡಿ ಖಾಂಡವವನವನ್ನು ಸುಡಲಿಕ್ಕೆ ಆರಂಭಿಸಿದರು.

ವನದಲ್ಲಿ ಬೆಂಕಿ ಉರಿಯುತ್ತಿರಲು ಅದನ್ನು ನೋಡಿ ಮಂದಪಾಲರ ನಾಲ್ಕು ಮಕ್ಕಳು ತುಂಬಾ ಭಯವನ್ನು ಹೊಂದಿದವು. ತಾಯಿಯಾದ ಜರಿತೆಯೂ ತುಂಬಾ ವಿಲಾಪವನ್ನು ಮಾಡಿದಳು. 'ಈ ಅಗ್ನಿಯು ಕಾಡನ್ನು ಸುಡುತ್ತಾ ಹತ್ತಿರವೇ ಬರುತ್ತಿದೆ. ಮಕ್ಕಳಿಗೆ ಇನ್ನೂ ರೆಕ್ಕೆಗಳೇ ಬಂದಿಲ್ಲ. ಹಾರಿ ಹೋಗಲಿಕ್ಕೆ ಸಮರ್ಥಗಳಾಗಿಲ್ಲ. ಇವುಗಳನ್ನು ಎತ್ತಿಕೊಂಡು ಹಾರಿಹೋಗಲು ನನಗೆ ಸಾಮರ್ಥ್ಯವಿಲ್ಲ. ಮಕ್ಕಳನ್ನು ಬಿಟ್ಟುಹೋಗಲಿಕ್ಕೂ ಮನಸ್ಸು ಬರಲಾರದು. ನನ್ನ ಎದೆಯು ಒಡೆದುಹೋಗುವಂತೆ ಇದೆ. ಮಕ್ಕಳೇ! ನಾನು ಏನು ಮಾಡಲಿ? ನಿಮ್ಮನ್ನು ಹೇಗೆ ಬಿಟ್ಟುಹೋಗಲಿ? ಏನು ಯೋಚನೆ ಮಾಡಿದರೂ ಈ ಆಪತ್ತಿನಿಂದ ಬಿಡಿಸುವ ಉಪಾಯವು ತಿಳಿಯಲಿಲ್ಲ. ನಿಮ್ಮನ್ನು ಆಲಂಗಿಸಿಕೊಂಡು ನಾನೂ ಪ್ರಾಣಬಿಡುವೆನು. ನಮ್ಮ ತಂದೆಯು ದಯೆಯಿಲ್ಲದೆ ನಿಮ್ಮನ್ನು ಬಿಟ್ಟುಹೋದರು' ಎಂದು ಹೇಳಿದಳು.

ಅದಕ್ಕೆ ಮಕ್ಕಳು 'ಅಮ್ಮ! ನೀನು ನಮ್ಮ ಮೇಲಿನ ಸ್ನೇಹವನ್ನು ಅಗ್ನಿಯಿಲ್ಲದ ಸ್ಥಳಕ್ಕೆ ಹಾರಿಹೋಗು. ನಾವು ಸತ್ತರೂ ನಿನಗೆ ಬೇರೆ ಮಕ್ಕಳಾಗಬಹುದು. ನೀನೂ ಸತ್ತರೆ

ನಮ್ಮ ವಂಶವೇ ಇಲ್ಲವೆಂದಾಗುವುದು. ಆದುದರಿಂದ ಸರ್ವವಿನಾಶಕ್ಕೋಸ್ಕರ ನಮ್ಮ ಮೇಲೆ ಸ್ನೇಹವನ್ನು ಮಾಡಬೇಡ. ಮಕ್ಕಳಿಂದ ಉತ್ತಮಲೋಕವನ್ನು ಹೊಂದ ಬೇಕೆಂದಿರುವ ನಮ್ಮ ತಂದೆಯ ಅಭಿಪ್ರಾಯವನ್ನು ವ್ಯರ್ಥಮಾಡಬಾರದು'' ಎಂದವು.

ಆಗ ಜರಿತೆಯು ಈ ಮರದ ಬುಡದಲ್ಲಿ ನೆಲದಲ್ಲಿ ಒಂದು ಇಲಿಯ ಬಿಲವಿರುವುದು. ಅದರ ಒಳಗೆ ನೀವು ಪ್ರವೇಶಿಸಿರಿ. ಅಲ್ಲಿ ನಿಮಗೆ ಬೆಂಕಿಯ ಭಯವಿರಲಾರದು. ನಾನು ಬಿಲದ್ವಾರವನ್ನು ಉಸುಬಿನಿಂದ ಮುಚ್ಚುತ್ತೇನೆ. ಹೀಗೆ ಮಾಡಿದರೆ ನಿಮಗೆ ಬೆಂಕಿಯ ಬಾಧೆಯು ಉಂಟಾಗಲಾರದು. ಬೆಂಕಿಯೆಲ್ಲಾ ಆರಿಹೋದಮೇಲೆ ಉಸುಬನ್ನು ತೆಗೆದುಹಾಕಲು ಬರುವೆನು ಎಂದಿತು.

ಆಗ ಮಕ್ಕಳು ರೆಕ್ಕೆಯಿಲ್ಲದೆ ಮಾಂಸಪಿಂಡದಂತೆ ಇರುವ ನಮ್ಮನ್ನು ಇಲಿಯು ತಿಂದು ಹಾಕುವುದು. ಈ ಅಂಜಿಕೆಯಿಂದ ಬಿಲದೊಳಗೆ ಪ್ರವೇಶಿಸಲಿಕ್ಕೆ ನಮಗೆ ಮನಸ್ಸು ಬರಲಾರದು. ನಮ್ಮನ್ನು ಬೆಂಕಿಯು ಹೇಗೆ ಸುಡಲಾರದು. ಇಲಿಯು ನಮ್ಮನ್ನು ಹೇಗೆ ಕೊಲ್ಲಲಾರದು? ನಮ್ಮ ತಂದೆಯ ಅಭಿಪ್ರಾಯವು ಹೇಗೆ ವ್ಯರ್ಥವಾಗ ಲಾರದು. ತಾಯಿಯು ಹೇಗೆ ಬದುಕುವಳು? ಬಿಲದೊಳಗೆ ಪ್ರವೇಶಿಸಿದರೆ ನಮಗೆ ಇಲಿಯಿಂದ ಮರಣವು ಏರ್ಪಡುವುದು. ಮೇಲೆ ಇದ್ದರೆ ಬೆಂಕಿಯಿಂದ ನಾಶ ವುಂಟಾಗುವುದು. ಇಲಿಯಿಂದ ಸಾಯುವುದು ಶ್ಲಾಘ್ಯವಲ್ಲ. ಅದಕ್ಕಿಂತ ಅಗ್ನಿಯಿಂದ ಸಾಯುವುದೇ ಶ್ರೇಷ್ಠವು. ಅಗ್ನಿಯಿಂದ ಸತ್ತರೆ ಬ್ರಹ್ಮಲೋಕವುಂಟಾಗುವುದು' ಎಂದವು.

ಜರಿತೆಯು 'ಈ ಬಿಲದಿಂದ ಹೊರಗೆ ಬಂದಿದ್ದ ಇಲಿಯನ್ನು ಒಂದು ಹದ್ದು ಪಕ್ಷಿಯು ತನ್ನ ಕಾಲುಗಳಿಂದ ಹಿಡಿದುಕೊಂಡು ಹಾರಿಹೋಯಿತು. ಆದುದರಿಂದ ನಿಮಗೆ ಅಲ್ಲಿ ಭಯವಿಲ್ಲ' ಎಂದಿತು.

ಮಕ್ಕಳು 'ಹದ್ದುಪಕ್ಷಿಯು ಇಲಿಯನ್ನು ಎತ್ತಿಕೊಂಡು ಹೋದದ್ದನ್ನು ನಾನು ನೋಡಲಿಲ್ಲ. ಇನ್ನೋ ಎಷ್ಟೋ ಇಲಿಗಳು ಬಿಲದೊಳಗೆ ಇರಬಹುದು. ಅವು ಗಳಿಂದಲೂ ನಮಗೆ ಭಯವಿದ್ದೇ ಇದೆ. ಒಳ್ಳೇ ಗಾಳಿ ಬೀಸುತ್ತಿದೆ. ಆದುದರಿಂದ ಬೆಂಕಿಯು ಇಲ್ಲಿಗೆ ಬಾರದೆ ತಿರುಗಿ ಹೋದರೂ ಹೋಗಬಹುದು. ಬಿಲದೊಳಗೆ ಪ್ರವೇಶಿಸಿದರೆ ನಿಶ್ಚಯವಾಗಿಯೂ ಮರಣವುಂಟಾಗುವುದು. ಮೇಲೆ ಇದ್ದರೆ ಒಂದು ಪಕ್ಷಕ್ಕೆ ಇಲ್ಲಿಗೆ ಬೆಂಕಿಯು ಬರದಿದ್ದರೆ ನಾವು ಬದುಕಿದರೂ ಬದುಕಬಹುದು. ನಿಶ್ಚಿತವಾದ ಮರಣಕ್ಕಿಂತ ಸಂದಿಗ್ಧವಾದ ಮರಣವೇ ಲೇಸು ಅಮ್ಮ! ನೀನು ಆಕಾಶದಲ್ಲಿ ಹಾರಿಹೋಗು ನೀನು ಬೇರೆ ಮಕ್ಕಳನ್ನು ಹೊಂದುವಿ! ಎಂದವು.

ಅದಕ್ಕೆ ಜರಿತೆಯು 'ಹದ್ದು ಪಕ್ಷಿಯು ವೇಗದಿಂದ ಇಲಿಯನ್ನು ಎತ್ತಿಕೊಂಡು ಹೋಗುವುದನ್ನು ನೋಡಿದ್ದೇನೆ. ನಾನು ಹದ್ದಿನ ಹಿಂದೆಯೇ ಆಶೀರ್ವಾದವನ್ನು ಮಾಡುತ್ತಾ ಹೋದೆನು. ಆ ಹದ್ದು ಇಲಿಯನ್ನು ತಿಂದು ಹಾಕಿದ ಮೇಲೆ ಇಲ್ಲಿಗೆ ಬಂದೆನು. ಆದುದರಿಂದ ನಿನಗೆ ಭಯವು ಬೇಡ. ಬಿಲದೊಳಗೆ ಪ್ರವೇಶಿಸಿರಿ' ಎಂದಿತು.

ಮಕ್ಕಳು 'ಅಮ್ಮ! ನಾವು ಹದ್ದು ಇಲಿಯನ್ನು ಎತ್ತಿಕೊಂಡು ಹೋದದ್ದನ್ನು ನೋಡಿಲ್ಲ. ಆದುದರಿಂದ ನಾವು ಬಿಲದೊಳಗೆ ಪ್ರವೇಶ ಮಾಡಲಾರೆವು' ಎಂದವು.

ಜರಿತೆಯು 'ನಾನು ನೋಡಿದ್ದೇನೆ. ನಿಮಗೆ ಭಯವಿಲ್ಲ. ನನ್ನ ಮಾತಿನಂತೆ ಮಾಡಿರಿ' ಎಂದಿತು.

ಅದಕ್ಕೆ ಮಕ್ಕಳು 'ಯಾಕಮ್ಮ ಹೀಗೆ ಸುಳ್ಳು ಉಪಚಾರದಿಂದ ನಮ್ಮನ್ನು ಸಮಾಧಾನಪಡಿಸುವಿ? ನಾವು ನಿನಗೊಂದು ಉಪಕಾರವನ್ನು ಮಾಡಿಲ್ಲ. ಈ ಹಿಂದೆ ನಮ್ಮನ್ನು ನೀನು ತಿಳಿದವಳಲ್ಲ. ನೀನು ಯಾರೋ! ನಾವು ಯಾರೋ! ನೀನು ಯುವತಿಯಾಗಿದ್ದಿ. ಪತಿಯನ್ನು ಅನುಸರಿಸಿ ಒಳ್ಳೇ ಮಕ್ಕಳನ್ನು ಪಡೆಯುವಿ. ನಾವು ಅಗ್ನಿಯನ್ನು ಪ್ರವೇಶಿಸಿ ಒಳ್ಳೆ ಲೋಕವನ್ನು ಹೊಂದುವೆವು. ಅಥವಾ ಅಗ್ನಿಯು ನಮ್ಮನ್ನು ಸುಡದಿದ್ದರೆ ಆಮೇಲೆ ನಾವಿದ್ದಲ್ಲಿಗೆ ಬರತಕ್ಕವಳಾಗು' ಎಂದವು.

ಈರೀತಿಯಾಗಿ ಮಕ್ಕಳು ಹೇಳಲು ಜರಿತೆಯು ಸರಿ ಎಂದು ಹೇಳಿ ಬೆಂಕಿಯಿಲ್ಲದೆ ಇರುವ ಸ್ಥಳಕ್ಕೆ ಹಾರಿಹೋಯಿತು. ಆಮೇಲೆ ಆ ಶಿಶುಗಳು ಇರುವ ಸ್ಥಳಕ್ಕೆ ಅಗ್ನಿಯು ಜ್ವಲಿಸುತ್ತಾ ಬಂದಿತು. ಆಗ ಜರಿತಾರಿ, ಸಾರಿಸೃಕ್ಕ, ಸ್ತಂಬಮಿತ್ರ, ದ್ರೋಣ ಎಂಬ ನಾಲ್ಕು ಶಿಶುಗಳೂ ಅಗ್ನಿದೇವರನ್ನು ಸ್ತೋತ್ರ ಮಾಡಿದವು. ಕೊನೆಗೆ ದ್ರೋಣ ಎಂಬ ಪಕ್ಷಿಯು ಸ್ತೋತ್ರಮಾಡಲು ಅಗ್ನಿದೇವರು 'ದ್ರೋಣ! ನೀನು ಋಷಿಯಾಗಿದ್ದಿ. ವೇದಮಂತ್ರವನ್ನು ಹೇಳಿದಿ. ನಾನು ಸಂತುಷ್ಟನಾದೆನು. ನಿಮಗೆ ಭಯವಿಲ್ಲ. ನಿಮ್ಮ ತಂದೆಯಾದ ಮಂದಪಾಲರು ಮೊದಲೇ ನಿಮ್ಮನ್ನು ಬಿಟ್ಟುಬಿಡಬೇಕೆಂದು ಕೇಳಿಕೊಂಡಿದ್ದಾರೆ. ಅವರು ಹೇಳಿದ ಮಾತು, ನೀನು ಈಗ ಹೇಳಿದ ಸ್ತೋತ್ರ ಎರಡೂ ನನಗೆ ಶ್ಲಾಘ್ಯವಾಗಿದೆ. ನೀನು ಮಾಡಿದ ಸ್ತೋತ್ರದಿಂದ ಸಂತುಷ್ಟನಾಗಿದ್ದೇನೆ. ನಿನಗೆ ಏನು ಪ್ರಿಯವನ್ನು ಮಾಡಲಿ ಎಂದು ಕೇಳಿದರು.

ಅದಕ್ಕೆ ದ್ರೋಣನು ಇಲ್ಲಿ ಬೆಕ್ಕುಗಳು ನಮ್ಮನ್ನು ಅತ್ಯಂತ ಭಯಪಡಿಸುತ್ತಾ ಇವೆ. ಅವುಗಳನ್ನು ಸುಟ್ಟುಹಾಕಿರಿ' ಎಂದಿತು.

ಅಗ್ನಿದೇವರು ಹಾಗೆಯೇ ಆಗಲಿ ಎಂದು ಹೇಳಿ ಆ ಬೆಕ್ಕುಗಳನ್ನು ಸುಟ್ಟು ಖಾಂಡವವನವನ್ನು ಸುಟ್ಟರು.

ಮಂದಪಾಲನು ಅಗ್ನಿದೇವರ ಹತ್ತಿರ ಹೇಳಿದರೂ, ಮಕ್ಕಳ ವಿಷಯವಾಗಿ ತುಂಬಾ ದುಃಖವನ್ನು ಹೊಂದಿದನು. ಮಕ್ಕಳಿಗೋಸ್ಕರ ಸಂತಾಪವನ್ನು ಹೊಂದುತ್ತಾ ಲಪಿತೆಯೊಡನೆ 'ಗಾಳಿಯು ಬೀಸುತ್ತಾ ಇದೆ. ಬೆಂಕಿಯು ಉರಿಯುತ್ತಾ ಇದೆ. ನನ್ನ ಮಕ್ಕಳು ಹಾರಿಹೋಗಲಿಕ್ಕೆ ಅಸಮರ್ಥಗಳಾಗಿವೆ. ಅವುಗಳನ್ನು ತಾಯಿಯು ಹೇಗೆ ರಕ್ಷಣೆ ಮಾಡುತ್ತಾಳೋ! ಹಾರಿಹೋಗಲಿಕ್ಕೆ ಅಶಕ್ತಳಾದ ಮಕ್ಕಳನ್ನು ನೋಡುತ್ತಾ ಮಕ್ಕಳನ್ನು ರಕ್ಷಿಸಲಿಕ್ಕೆ ಅಶಕ್ತಳಾಗಿ ಏನು ಮಾಡುತ್ತಾಳೋ?' ಈಪ್ರಕಾರವಾಗಿ ವಿಲಾಪ ವನ್ನು ಮಾಡಿದರು. ಅದಕ್ಕೆ ಲಪಿತೆಯು ಅಸೂಯೆಯಿಂದ ನಿಮಗೆ ಮಕ್ಕಳಮೇಲೆ ಯೋಚನೆಯಲ್ಲ. ಅವರು ಋಷಿಗಳು ಎಂದು ಹೇಳಿದ್ದೀರಿ. ಅವರು ತೇಜಸ್ವಿಗಳು. ಅವರಿಗೆ ಬೆಂಕಿಯಿಂದ ಭಯವಿಲ್ಲ. ನನ್ನ ಎದುರಲ್ಲೇ ಅಗ್ನಿದೇವರೊಡನೆ ಮಕ್ಕಳನ್ನು ರಕ್ಷಿಸುವಂತೆ ಪ್ರಾರ್ಥಿಸಿದ್ದೀರಿ. ಅಗ್ನಿದೇವರು ಹಾಗೆಯೇ ಆಗಲಿ ಎಂದಿದ್ದಾರೆ. ಲೋಕಪಾಲಕರಾದ ಅಗ್ನಿದೇವರು ತಾನು ಹೇಳಿದ ಮಾತಿಗೆ ಮೀರಲಾರರು. ನನ್ನ ಅಮಿತ್ರಳಾದ ಜರಿತೆಯ ಯೋಚನೆಯೇ ನಿಮಗೆ ಹೆಚ್ಚಾಗಿದೆ. ಅವಳ ಮೇಲೆ ಸ್ನೇಹವಿದ್ದ ಮೇಲೆ ಇಲ್ಲಿ ಸ್ನೇಹವಿಲ್ಲದೆ ಏಕೆ ಇದ್ದೀರಿ? ಜರಿತೆಯಿದ್ದಲ್ಲಿಗೇ ಹೋಗಿರಿ. ನಾನೊಬ್ಬಳೇ ಗಂಡನಿಲ್ಲದವಳಂತೆ ಸಂಚಾರಮಾಡುತ್ತಾ ಇರುತ್ತೇನೆ ಎಂದಳು.

ಅದಕ್ಕೆ ಮಂದಪಾಲರು 'ನೀನು ಹೇಳುವಂತೆ ನನ್ನ ಅಭಿಪ್ರಾಯವಲ್ಲ. ಮಕ್ಕಳ ವಿಷಯವೇ ಸಂತಾಪವನ್ನು ಪಡುತ್ತೇನೆ. ಈಗ ಇರುವ ಮಕ್ಕಳನ್ನು ಬಿಟ್ಟು ಮುಂದೆ ಮಕ್ಕಳು ಹುಟ್ಟುವರೆಂದು ಹೇಗೆ ಆಸೆಪಡಲಿ. ಅಗ್ನಿಯು ಜ್ವಲಿಸುತ್ತಾ ಬರುತ್ತಿದೆ. ನನ್ನ ಮನಸ್ಸಿನಲ್ಲಿ ತುಂಬಾ ಸಂತಾಪವಾಗುತ್ತಾ ಇದೆ ಎಂದರು.

ಗಂಡನ ಮಾತನ್ನು ಕೇಳಿ ಲಪಿತೆಯೂ ದುಃಖಪಟ್ಟು ಗಂಡನಿಗೆ ಸಮಾಧಾನ ಹೇಳಿದಳು. ಅಗ್ನಿಯು ಆ ಸ್ಥಳದಿಂದ ಹೊರಟುಹೋದ ಮೇಲೆ ಮಕ್ಕಳ ಮೇಲೆ ಪ್ರೇಮವುಳ್ಳ ಜರಿತೆಯು ಮಕ್ಕಳಿದ್ದಲ್ಲಿಗೆ ಓಡಿಬಂದಳು. ಅಗ್ನಿಯ ಪೀಡೆಯಿಲ್ಲದೆ ಸುಖದಿಂದ ಇರುವ ಮಕ್ಕಳನ್ನು ನೋಡಿ ಸಂತೋಷದಿಂದ ಕಣ್ಣೀರನ್ನು ಸುರಿಸಿದಳು.

ತರುವಾಯ ಅಲ್ಲಿಗೆ ಮಂದಪಾಲರೂ ಬಂದರು. ಆದರೆ ಮಕ್ಕಳು ಅವರನ್ನು ನೋಡಿ ಅಷ್ಟು ಸಂತೋಷಪಡಲಿಲ್ಲ. ತಾವು ದೊಡ್ಡವರಾದ ಪ್ರಯುಕ್ತ ತಪಸ್ವಿಯಾದ ಪ್ರಯುಕ್ತವೂ ನಿಮಗೆ ನಮಸ್ಕರಿಸುವೆವು ಎಂದು ಹೇಳಿದವು. ಈಪ್ರಕಾರವಾಗಿ ಹೇಳಿದ ಮಕ್ಕಳನ್ನು ಮಂದಪಾಲರು ಆಲಿಂಗನ ಮಾಡಿ ಶಿರಸಾ ಆಘ್ರಾಣನಮಾಡಿದರು.

ಮಕ್ಕಳನ್ನು ಜರಿತೆಯನ್ನೂ ಕುರಿತು ಪುನಃಪುನಃ ಮಾತಾಡಿಸಿದರೂ ಅವರು ಮಾತಾಡಲೇ ಇಲ್ಲ. ಮಂದಪಾಲರು 'ಜರಿತೆಯೊಡನೆ, 'ನಿನ್ನ ಜ್ಯೇಷ್ಠಪುತ್ರನು ಯಾರು? ಅವನ ತಮ್ಮನು ಯಾರು? ಮಧ್ಯಮನು ಯಾರು? ಚಿಕ್ಕವನು ಯಾರು? ಏಕೆ ನೀನೂ ನನ್ನೊಡನೆ ಮಾತನಾಡುವುದಿಲ್ಲ?' ಎಂದು ಹೇಳಿ ಮಂದಪಾಲರು ತನ್ನ ಪತ್ನಿಯಾದ ಜರಿತೆಯನ್ನು ಮುಟ್ಟಿದರು.

ಆದಕ್ಕೆ ಜರಿತೆಯು 'ನಿಮಗೆ ಜ್ಯೇಷ್ಠನು ಯಾಕೆ? ಕನಿಷ್ಠನು ಯಾಕೆ? ಅಧಮಳಾದ ನನ್ನನ್ನು ಬಿಟ್ಟು ಯಾವ ಸುಂದರಿಯಾದ ಲಪಿತೆಯ ಬಳಿಗೆ ಹೋಗಿದ್ದಿರೋ ಅಲ್ಲಿಗೇ ಹೋಗಿರಿ' ಎಂದಳು. ತರುವಾಯ ಮಂದಪಾಲರು ಹೆಂಡತಿಯನ್ನು ಸಮಾಧಾನಪಡಿಸಿದರು. ಮಕ್ಕಳೂ ತಂದೆಯನ್ನು ಆದರಿಸಿದವು. ಮಂದಪಾಲರು ನಿಮ್ಮನ್ನು ಸುಡಬಾರದು ಎಂದು ಅಗ್ನಿದೇವರ ಹತ್ತಿರ ಪ್ರಾರ್ಥಿಸಿಕೊಂಡಿರುವೆನು. ಅಗ್ನಿದೇವರು ಹಾಗೆಯೇ ಆಗಲಿ ಎಂದು ಒಪ್ಪಿಕೊಂಡರು. ಆದುದರಿಂದ ಅಗ್ನಿದೇವರ ಮಾತನ್ನು ಕೇಳಿ, ನಿಮ್ಮ ತಾಯಿಯ ಧರ್ಮಜ್ಞತೆಯನ್ನೂ, ನಿಮ್ಮ ವೀರ್ಯವನ್ನೂ ತಿಳಿದು ನಾನು ಮೊದಲು ಇಲ್ಲಿಗೆ ಬರಲಿಲ್ಲ. ನೀವು ನನ್ನ ವಿಷಯವಾಗಿ ಮನಸ್ಸಿನಲ್ಲಿ ಸಂತಾಪವನ್ನು ಹೊಂದಬಾರದು. ಅಗ್ನಿದೇವರೂ ನೀವು ಋಷಿಗಳು ಎಂದು ತಿಳಿಸಿರುವರು. ನೀವು ವೇದವನ್ನೂ ತಿಳಿದಿರುವಿರಿ. ಎಂದು ಸಮಾಧಾನಪಡಿಸಿ ಪತ್ನಿಯನ್ನೂ ಮಕ್ಕಳನ್ನೂ ಕರೆದುಕೊಂಡು ಅಲ್ಲಿಂದ ಬೇರೆ ಸ್ಥಳಕ್ಕೆ ಹೊರಟುಹೋದರು.



# ಸುಕನ್ಯಾ[1]

ನಮ್ಮ ಒಂದು ವರ್ಷವು ದೇವತೆಗಳಿಗೆ ಒಂದು ದಿವಸವು. ಹೀಗಿರುವ ದೇವತೆಗಳ ಹನ್ನೆರಡು ಸಾವಿರ ವರ್ಷಗಳಾದ ನಾಲ್ಕು ಯುಗಗಳಾದುವುವು. ಕೃತ, ತ್ರೇತಾ, ದ್ವಾಪರ, ಕಲಿ ಎಂದು ನಾಲ್ಕು ಯುಗಗಳು. ಅವುಗಳಲ್ಲಿ ಕೃತಯುಗವು ನಾಲ್ಕು ಸಾವಿರದ ಎಂಟುನೂರು ವರ್ಷಗಳು. ಅಂದರೆ ನಮ್ಮ ರೀತಿಯಿಂದ 17,28,000 ಹದಿನೇಳು ಲಕ್ಷದ ಇಪ್ಪತ್ತೆಂಟು ಸಾವಿರ ವರ್ಷಗಳು. ತ್ರೇತಾಯುಗವು ದೇವತೆಗಳ ಲೆಕ್ಕದಲ್ಲಿ ಮೂರು ಸಾವಿರದ ಆರುನೂರು ವರ್ಷಗಳು. ನಮ್ಮ ರೀತಿ 12,96,000. ಹದಿನೆರಡು ಲಕ್ಷದ ತೊಂಭತ್ತಾರು ಸಾವಿರ ವರ್ಷಗಳು. ದ್ವಾಪರಯುಗವು 2400

1. ಮ.ಭಾ.ವ.ಪ. ಅ.121-14. ಭಾಗ. IX-4

ವರ್ಷಗಳು. ನಮ್ಮ ರೀತಿಯಿಂದ 8,64,000 ಎಂಟು ಲಕ್ಷದ ಅರುವತ್ತನಾಲ್ಕು ಸಾವಿರದ ನಾಲ್ಕು ನೂರು ವರ್ಷಗಳು. ಕಲಿಯುಗವು ಸಾವಿರದ ಇನ್ನೂರು ವರ್ಷಗಳು. ನಮ್ಮ ರೀತಿಯಿಂದ 4,32,000 ನಾಲ್ಕು ಲಕ್ಷದ ಮೂವತ್ತೆರಡು ಸಾವಿರ ವರ್ಷಗಳು. ನಮ್ಮ ರೀತಿಯಿಂದಲೇ ಒಟ್ಟಿಗೆ ನಾಲ್ಕು ಯುಗಗಳಿಗೆ 43,20,000 ನಲ್ವತ್ತಮೂರು ಲಕ್ಷದ ಇಪ್ಪತ್ತು ಸಾವಿರ ವರ್ಷಗಳು. ಇಂತಹ ನಾಲ್ಕು ಯುಗಗಳು ಸಾವಿರ ಸಲವಾದರೆ ಬ್ರಹ್ಮದೇವರಿಗೆ ಒಂದು ಹಗಲಾಗುವುದು. ಅಷ್ಟೇ ರಾತ್ರಿಯೂ ಈರೀತಿಯಿಂದ ಬ್ರಹ್ಮದೇವರಿಗೆ ನೂರು ವರ್ಷಗಳು. ಬ್ರಹ್ಮದೇವರ ನೂರು ವರ್ಷಕ್ಕೆ ಪರ ಎಂದು ಹೆಸರು. ಐವತ್ತು ವರ್ಷಕ್ಕೆ ಪರಾರ್ಧವೆಂದು ಹೆಸರು. ಬ್ರಹ್ಮದೇವರ ಮೊದಲಿನ ಐವತ್ತುವರ್ಷಕ್ಕೆ ಪ್ರಥಮ ಪರಾರ್ಧ ಎಂದು ಹೆಸರು. ಈಗ ಬ್ರಹ್ಮ ದೇವರಿಗೆ ಮೊದಲಿನ ಪರಾರ್ಧವು ಮುಗಿದಿದೆ. ಅಂದರೆ ಈಗ ಐವತ್ತೊಂದನೆಯ ವರ್ಷವು. ಆದುದರಿಂದಲೇ ಇದು ದ್ವಿತೀಯ ಪರಾರ್ಧವು.

ಬ್ರಹ್ಮದೇವರ ಐವತ್ತೊಂದನೆಯ ವರ್ಷದ ಮೊದಲಿನ ಹಗಲಿನಲ್ಲಿ ಆರು ಮನ್ವಂತರಗಳು ಕಳೆದು ಈಗ ಏಳನೆಯ ಮನ್ವಂತರವು ನಡೆಯುತ್ತಿರುವುದು. ಈ ಮನ್ವಂತರಕ್ಕೆ ವೈವಸ್ವತ ಮನುವು ಅಧಿಪತಿಯು. ಇವರಿಗೆ ಸರಿಯಾದ ಹೆಸರು ಶ್ರಾದ್ಧದೇವ ಎಂದು. ಇವರು ಸೂರ್ಯದೇವರ ಮಗನು. ಸೂರ್ಯದೇವರಿಗೆ ವಿವಸ್ವಾನ್ ಎಂದು ಹೆಸರಿರುವ ಪ್ರಯುಕ್ತ ಇವರಿಗೆ ವೈವಸ್ವತ ಎಂದು ಹೆಸರಾಯಿತು. ಈ ವೈವಸ್ವತಮನುವಿಗೆ ಹತ್ತು ಜನ ಮಕ್ಕಳು. ಅವರಲ್ಲಿ ಶರ್ಯಾತಿ ಎಂಬವನೊಬ್ಬನು ಶರ್ಯಾತಿರಾಜನಿಗೆ ಸುಕನ್ಯಾ ಎಂಬ ಒಬ್ಬ ಮಗಳಿದ್ದಳು. ಒಂದು ದಿವಸ ಶರ್ಯಾತಿರಾಜನು ತನ್ನ ಮಗಳನ್ನು ಸೈನ್ಯವನ್ನೂ ಕರೆದುಕೊಂಡು ಚ್ಯವನ ಋಷಿಗಳು ತಪಸ್ಸು ಮಾಡುತ್ತಿದ್ದ ಕಾಡಿಗೆ ಹೋದನು. ಅಲ್ಲಿ ಸುಕನ್ಯೆಯು ಸಂಚರಿಸುತ್ತಾ ಒಂದು ದೊಡ್ಡ ಹುತ್ತವನ್ನು ನೋಡಿದಳು. ಅಂದರೆ ಚ್ಯವನ ಋಷಿಗಳು ತಪಸ್ಸು ಮಾಡುತ್ತಿರುವಾಗ ಅವರ ಮೈಯ ಮೇಲೆ ಹುತ್ತವು ಬೆಳೆದುಹೋಗಿತ್ತು. ಅವರ ಎರಡು ಕಣ್ಣುಗಳು ಮಾತ್ರ ಹೊರಗೆ ಕಾಣಿಸುತ್ತಿದ್ದವು. ಸುಕನ್ಯೆಯು ಆ ಕಣ್ಣುಗಳನ್ನು ನೋಡಿ ಏನೋ ಕಾಣಿಸುತ್ತದೆ ಎಂದು ಮುಳ್ಳಿನಿಂದ ಕುಕ್ಕಿದಳು. ಕೂಡಲೇ ರಕ್ತವು ಸುರಿಯಿತು. ಆಗಲೇ ಎಲ್ಲಾ ಸೈನಿಕರಿಗೂ ಮಲಮೂತ್ರ ಬಂಧನೆಯಾಗಿ ಎಲ್ಲರೂ ಬಹು ಶ್ರಮಪಟ್ಟರು.

ಆಗ ಶರ್ಯಾತಿರಾಜನು ತನ್ನ ಜನರೊಡನೆ ನೀವು ಯಾರಾದರೂ ಪೂಜ್ಯರಾದ ಚ್ಯವನರಿಗೆ ಅಪರಾಧ ಮಾಡಿದಿರಾ? ಎಂದು ಕೇಳಿದನು. ಎಲ್ಲರೂ ನಾವೊಂದೂ

ಮಾಡಿಲ್ಲವೆಂದರು. ಸುಕನ್ಯೆಯು ಮಾತ್ರ ನಾನು ಹುತ್ತದಲ್ಲಿ ಎರಡು ಜ್ಯೋತಿಸ್ಸನ್ನು ನೋಡಿ ತಿಳಿಯದೆ ಮುಳ್ಳಿನಿಂದ ಕುಕ್ಕಿದೆನು ಎಂದಳು. ಕೂಡಲೆ ಶರ್ಯಾತಿರಾಜನು ಹುತ್ತದ ಬಳಿಗೆ ಕೂತಿರುವ ಚ್ಯವನರೊಡನೆ ತುಂಬಾ ಪ್ರಾರ್ಥಿಸಿ, ಅವರ ಅಭಿಪ್ರಾಯ ದಂತೆ ತನ್ನ ಮಗಳಾದ ಸುಕನ್ಯೆಯನ್ನು ಮುದುಕರಾದ ಅವರಿಗೆ ಮದುವೆ ಮಾಡಿಕೊಟ್ಟು ಸೈನ್ಯ ಸಹಿತವಾಗಿ ಊರಿಗೆ ಹೋದನು.

ಸುಕನ್ಯೆಯು ಕೋಪಶೀಲರಾದ ಚ್ಯವನಋಷಿಗಳ ಅಭಿಪ್ರಾಯವನ್ನು ತಿಳಿದು ಕೊಂಡು ಚೆನ್ನಾಗಿ ಅವರನ್ನು ಸೇವಿಸುತ್ತಾ ಇದ್ದಳು. ಹೀಗಿರಲು ಒಂದು ದಿವಸದಲ್ಲಿ ದೇವವೈದ್ಯರಾದ ಅಶ್ವಿನೀದೇವತೆಗಳು ಚ್ಯವನಋಷಿಗಳ ಆಶ್ರಮಕ್ಕೆ ಬಂದರು. ಅಷ್ಟರವರೆಗೆ ಅಶ್ವಿನೀದೇವತೆಗಳಿಗೆ ವೈದ್ಯರೆಂದು ಯಾಗದಲ್ಲಿ ಆಹುತಿಯನ್ನು ಕೊಡು ತ್ತಿದ್ದಿಲ್ಲ. ಚ್ಯವನಋಷಿಗಳು ಅಶ್ವಿನಿದೇವತೆಗಳ ಹತ್ತಿರ ನಿಮಗೆ ನಾನು ಯಜ್ಞದಲ್ಲಿ ಆಹುತಿಯನ್ನು ಕೊಡುತ್ತೇನೆ. ನನಗೆ ನೀವು ಸಂದರವಾದ ರೂಪವನ್ನು ಉಂಟು ಮಾಡಿರಿ ಎಂದರು. ಆಗ ಅವರು ಒಂದು ಸರೋವರದಲ್ಲಿ ಮುಳುಗುವಂತೆ ಹೇಳಿದರು. ಹಾಗೆಯೇ ಆಗಲಿ ಎಂದು ಚ್ಯವನಋಷಿಗಳು ಆ ಸರೋವರದಲ್ಲಿ ಮುಳುಗಲು, ಅಶ್ವಿನೀದೇವತೆಗಳೂ ಆ ಸರೋವರದಲ್ಲಿ ಮುಳುಗಿದರು. ತರುವಾಯ ಮೂರು ಜನರೂ ಒಂದೇ ರೂಪದಿಂದ ಮೇಲೆ ಬಂದು ಸುಕನ್ಯೆಯ ಎದುರಲ್ಲಿ ನಿಂತರು. ಸುಕನ್ಯೆಯು ತನ್ನ ಪತಿಯು ಯಾರು ಎಂದು ತಿಳಿಯದೆ ಅಶ್ವಿನೀದೇವತೆಗಳನ್ನೇ ಪ್ರಾರ್ಥಿಸಿದಳು. ಅಶ್ವಿನೀದೇವತೆಗಳು ಸುಕನ್ಯೆಯ ಪಾತಿವ್ರತ್ಯ ದಿಂದ ಸಂತೋಷಪಟ್ಟವರಾಗಿ ಚ್ಯವನರನ್ನು ತೋರಿಸಿ ತಾನು ಹೊರಟುಹೋದರು.

ತರುವಾಯ ಶರ್ಯಾತಿರಾಜನು ಸೋಮಯಾಗವನ್ನು ಮಾಡಬೇಕೆಂದು, ಅಳಿಯನಾದ ಚ್ಯವನಋಷಿಗಳನ್ನು ಕರೆದುಕೊಂಡು ಹೋಗಬೇಕೆಂದು ಆಶ್ರಮಕ್ಕೆ ಬಂದನು. ಆಗ ಚ್ಯವನರ ಬಳಿಯಲ್ಲಿ ಸುಕನ್ಯೆಯನ್ನು ನೋಡಿದನು. ಸುಕನ್ಯೆಯು ಎದ್ದು ತಂದೆಗೆ ನಮಸ್ಕಾರ ಮಾಡಿದಳು. ರಾಜನು ಚ್ಯವನರ ಸುಂದರ ರೂಪವನ್ನು ನೋಡಿ ಯಾರೋ ಪರಪುರುಷನೊಡನೆ ಮಗಳು ಕೂಡಿರುವಳೆಂದು ತಿಳಿದುಕೊಂಡು ಕೋಪಿಸಿಕೊಂಡು, ನಮಸ್ಕಾರಮಾಡಿದ ಮಗಳಿಗೆ ಆಶೀರ್ವಾದವನ್ನೂ ಕೂಡ ಮಾಡಲಿಲ್ಲ. 'ಯಾಕಮ್ಮಾ ನಿನ್ನ ಬುದ್ಧಿಯು ಹೀಗೆ ಕೆಟ್ಟುಹೋಯಿತು. ಮುದುಕನಾದ ಗಂಡನನ್ನು ಏನೋ ಮಾಡಿ ದಾರಿಯಲ್ಲಿ ಹೋಗುತ್ತಿರುವ ಯಾರೋ ಪರಪುರುಷನಿಂದ ವಿಹರಿಸುಪಿಯಲ್ಲಾ! ಗಂಡನ ಕುಲವನ್ನೂ ನನ್ನ ಕುಲವನ್ನೂ ಕೆಡಿಸಿದೆಯಲ್ಲಾ! ನಿನಗೆ ಏಕೆ ಈರೀತಿಯ ಬುದ್ಧಿಯು ಬಂದಿತು?' ಎಂದು ಹೇಳಿದನು.

ಆಗ ಸುಕನ್ಯೆಯು ನಗುತ್ತಾ 'ಅಪ್ಪ! ನಿಮ್ಮ ಅಳಿಯಂದಿರೇ ಇವರು' ಎಂದು ಹೇಳುತ್ತಾ ಚ್ಯವನರಿಗೆ ಸುಂದರವಾದ ರೂಪವು ಬಂದಿರುವ ಕಾರಣವನ್ನೆಲ್ಲಾ ಹೇಳಿದಳು. ರಾಜನು ಅದನ್ನು ಕೇಳಿ ಬಹು ಸಂತೋಷವನ್ನು ಹೊಂದಿದನು. ತರುವಾಯ ರಾಜನು ಅಳಿಯನನ್ನೂ ಮಗಳನ್ನೂ ಊರಿಗೆ ಕರೆದುಕೊಂಡು ಹೋದನು. ಅಲ್ಲಿ ಯಾಗವು ನಡೆಯಿತು. ಯಾಗದಲ್ಲಿ ಚ್ಯವನಋಷಿಗಳು ಅಶ್ವಿನೀ ದೇವತೆಗಳಿಗೆ ಆಹುತಿಯನ್ನು ಕೊಟ್ಟರು. ಆಗ ಇಂದ್ರದೇವರು ಅದನ್ನು ತಡೆಯಲಿಕ್ಕೆ ವಜ್ರಾಯುಧವನ್ನು ಎತ್ತಿಕೊಂಡು ಬಂದರು. ಆಗ ಚ್ಯವನಋಷಿಗಳು ವಜ್ರವನ್ನು ಎತ್ತಿದ ಇಂದ್ರದೇವರ ಕೈಯನ್ನು ಹಾಗೆಯೇ ನಿಲ್ಲಿಸಿಬಿಟ್ಟರು. (ಇದರಿಂದ ಚ್ಯವನಋಷಿಗಳು ಇಂದ್ರದೇವರಿಗಿಂತ ಉತ್ತಮರೆಂದು ತಿಳಿಯಬಾರದು. ಚ್ಯವನಋಷಿಗಳಿಗಿಂತ ಇಂದ್ರ ದೇವರೇ ಉತ್ತಮರು. ಆದರೂ ಬ್ರಾಹ್ಮಣರಿಗೆ ಗೌರವರನ್ನು ಕೊಡಬೇಕೆಂದು ಪರಮಾತ್ಮನ ಆಜ್ಞೆಯಿರುವುದಿರಂದ ಆ ಆಜ್ಞೆಗೆ ಒಳಗಾಗಿ ಇಂದ್ರದೇವರು ತಾವು ಸ್ತಬ್ಧರಾದಂತೆ ಆದರು.) ತರುವಾಯ ಅಶ್ವಿನೀದೇವತೆಗಳಿಗೆ ಆಹುತಿಯನ್ನು ದೇವತೆ ಗಳೆಲ್ಲಾ ಅಂಗೀಕರಿಸಿದರು. ತರುವಾಯ ಚ್ಯವನರು ಸುಕನ್ಯೆಯೊಡನೆ ಸಂತೋಷ ದಿಂದ ಇದ್ದರು.



## ಸೌಭರಿ ಋಷಿಗಳು [1]

ಸೌಭರಿ ಎಂಬ ಒಬ್ಬ ಋಷಿಗಳು ಇದ್ದರು. ಅವರು ನೀರಿನಲ್ಲಿ ಮುಳುಗಿ ಕೊಂಡು ತಪಸ್ಸು ಮಾಡುತ್ತಾ ಇದ್ದರು. ನೀರಿನಲ್ಲಿ ಒಂದು ಮೀನಿನ ರಾಜನು ತನ್ನ ಹೆಂಡತಿ ಮಕ್ಕಳೊಡನೆ ವಿಹಾರವನ್ನು ಮಾಡುವುದನ್ನು (ನೋಡಿ) ಮುದುಕರಾದ ಆ ಋಷಿ ಗಳಿಗೆ ತಾನೂ ಮದುವೆಮಾಡಿಕೊಂಡು ಸುಖಪಡಬೇಕೆಂದು ಆಸೆಯುಂಟಾಯಿತು. ನೀರಿನಿಂದ ಮೇಲೆ ಬಂದರು. ಮಾಂಧಾತ ರಾಜನಿಗೆ ಐವತ್ತು ಹೆಣ್ಣುಮಕ್ಕಳಿದ್ದಾರೆಂದು ತಿಳಿದು ಅವನ ಹತ್ತಿರ ಒಂದು ಕನ್ಯೆಯನ್ನು ಕೇಳುವ ಎಂದು ಹೋದರು. ನಡುಗುತ್ತಿರುವ ಹಣ್ಣುಮುದುಕರಾದ ಇವರು ರಾಜನೊಡನೆ ರಾಜನ್! ನನಗೆ ಸಂಸಾರಸುಖವನ್ನು ಅನುಭವಿಸಬೇಕೆಂಬ ಆಸೆಯುಂಟಾಯಿತು. ನಿನಗೆ ಐವತ್ತು ಹೆಣ್ಣು ಮಕ್ಕಳಿದ್ದಾರೆ. ಅವರಲ್ಲಿ ಒಬ್ಬಳನ್ನು ನನಗೆ ಮದುವೆ ಮಾಡಿಕೊಡು ಎಂದರು.

---
1. ಭಾಗ - IX-7

ಅದನ್ನು ಕೇಳಿ ರಾಜನಿಗೆ ದುಃಖವುಂಟಾಯಿತು. ನವಯೌವನವುಳ್ಳ ತನ್ನ ಹೆಣ್ಣುಮಕ್ಕಳನ್ನು ಈ ಹಣ್ಣುಮುದುಕನಿಗೆ ಕೊಡಲಿಕ್ಕೆ ಮನಸ್ಸು ಬರಲಿಲ್ಲ. ಕೊಡುವುದಿಲ್ಲವೆಂದರೆ ಋಷಿಗಳು ತಪಸ್ಸಿನ ಸಾಮರ್ಥ್ಯದಿಂದ ಶಾಪಕೊಡುವರೆಂಬ ಅಂಜಿಕೆ. ಏನು ಮಾಡಲಿ ಎಂದು ಯೋಚಿಸಿ ಕೊನೆಗೆ 'ಪೂಜ್ಯರೇ! ನಮ್ಮ ಸಂಪ್ರದಾಯ ಹೆಣ್ಣುಮಕ್ಕಳೇ. ವರನನ್ನು ಆರಿಸಿಕೊಳ್ಳುವುದು. ಆದುದರಿಂದ ತಾವು ಅಂತಃಪುರಕ್ಕೆ ಹೋಗೋಣವಾಗಲಿ. ಯಾವ ಹೆಣ್ಣುಮಗಳು ನಿಮ್ಮನ್ನು ವರಿಸುವಳೋ ಅವಳನ್ನು ನಾನು ತಮಗೆ ಮದುವೆಮಾಡಿಕೊಡುವೆನು' ಎಂದರು. ತನ್ನ ಸಾರಿಥಿಯೊಡನೆ ಋಷಿಗಳನ್ನು ಅಂತಃಪುರಕ್ಕೆ ಕಳುಹಿಸಿದನು.

ಸೌಭರಿ ಋಷಿಗಳು 'ಈ ರಾಜನು ನಾನು ಹಣ್ಣು ಮುದುಕನಾದ ಕಾರಣ ಯಾವ ಹೆಣ್ಣುಮಕ್ಕಳೂ ನನ್ನನ್ನು ಅಪೇಕ್ಷಿಸಲಾರರು ಎಂದು ಈ ಉಪಾಯವನ್ನು ಮಾಡಿರುವನು. ನಾನು ಯೋಗಸಾಮರ್ಥ್ಯದಿಂದ ಎಂತಹವರಿಗೂ ಮನೋಹರವಾದ ರೂಪವನ್ನು ಧರಿಸುವೆನು' ಎಂದು ಹೇಳಿಕೊಂಡು ಅಂತಃಪುರಕ್ಕೆ ಹೋದರು. ಅಂತಃಪುರಕ್ಕೆ ಪ್ರವೇಶಿಸುವ ಮಾತ್ರ ಅಲ್ಲಿಂದ ಐವತ್ತು ರಾಜಪುತ್ರಿಯರೂ ನನಗೆ ನನಗೆ ಎಂದು ಎಲ್ಲರೂ ವಿವಾದ ಮಾಡಲಿಕ್ಕೆ ಆರಂಭಿಸಿದರು ಸಾರಥಿಯು ಬಂದು ರಾಜನೊಡನೆ ಈ ವಿಷಯವನ್ನು ತಿಳಿಸಲು, ರಾಜನು ತಾನು ಹೇಳಿದ ಮಾತಿನಂತೆ ಐವತ್ತು ಜನ ಹೆಣ್ಣುಮಕ್ಕಳನ್ನೂ ಋಷಿಗಳಿಗೆ ಮದುವೆ ಮಾಡಿಕೊಟ್ಟನು. ಋಷಿಗಳು ತನ್ನ ಪತ್ನಿಯರನ್ನು ಕರೆದುಕೊಂಡು ಕಾಡಿಗೆ ಹೋದರು.

ಸೌಭರಿ ಋಷಿಗಳು ತನ್ನ ಯೋಗಸಾಮರ್ಥ್ಯದಿಂದ ಕಾಡಿನಲ್ಲಿ ಬಹುಸುಂದರಗಳಾದ ಸಕಲಸೌಕರ್ಯದಿಂದ ಕೂಡಿದ ಐವತ್ತು ಮನೆಗಳನ್ನು ನಿರ್ಮಾಣ ಮಾಡಿದರು. ತನ್ನ ಜ್ಞಾನಸಾಮರ್ಥ್ಯದಿಂದ ತನಗೆ ಮುಂದೆ ಐವತ್ತು ಜನ್ಮಗಳು ಬರುವುದಿದೆಯೆಂದು ತಿಳಿದವರಾಗಿ, ಆ ಪ್ರಾರಬ್ಧಕರ್ಮವನ್ನು ಪರಿಹಾರ ಮಾಡಿಕೊಳ್ಳುವುದಕ್ಕಾಗಿ ಐವತ್ತು ದೇಹಗಳನ್ನು ಧರಿಸಿ ತನ್ನ ಐವತ್ತು ಪತ್ನಿಗಳೊಡನೆ ವಿಹಾರ ಮಾಡುತ್ತಿದ್ದರು.

ಮಾಂಧಾತರಾಜನು ತನ್ನ ಮಕ್ಕಳನ್ನು ಮುದುಕನಿಗೆ ಮದುವೆ ಮಾಡಿ ಕೊಟ್ಟನು. ಅವರು ಏನು ಕಷ್ಟಪಡುತ್ತಾರೋ ಏನೋ ಎಂದುಕೊಂಡು ಒಮ್ಮೆ ಹೆಣ್ಣುಮಕ್ಕಳನ್ನು ನೋಡಿಕೊಂಡು ಹೋಗುವ ಎಂದು ಕಾಡಿಗೆ ಹೋದನು. ಅಲ್ಲಿ ಬಹುಸೌಕರ್ಯದಿಂದ ಕೂಡಿದ ಅತ್ಯುದ್ಭುತಗಳಾದ ಐವತ್ತು ಮನೆಗಳನ್ನು ನೋಡಿ ತುಂಬಾ ಆಶ್ಚರ್ಯಪಟ್ಟನು. ಒಂದು ಮನೆಯ ಒಳಗೆ ಪ್ರವೇಶಿಸಿ ಮಗಳನ್ನು ನೋಡಿದನು.

ಮಗಳ ಹತ್ತಿರ ಕ್ಷೇಮವನ್ನು ಅಮ್ಮಾ! ನಿನಗೆ ತಾಯಿಯ ಮನೆಯು ಜ್ಞಾಪಕ್ಕೆ ಬರುವುದೋ ಎಂದು ಕೇಳಿದರು. ಅದಕ್ಕೆ ಆ ಮಗಳು ಅಪ್ಪ ಮಕ್ಕಳಿಗೆ ತಾಯಿಯ ಮನೆಯ ಸ್ಮರಣೆ ಬಾರದೆ ಇರುವುದೇ. ಆದರೆ ನನಗೆ ಇಲ್ಲಿ ಯಾವುದಕ್ಕೂ ಕಡಿಮೆಯಿಲ್ಲ ಸರ್ವಸಮೃದ್ಧಿಯೂ ಇದೆ. ಆದರೆ ಒಂದು ಮಾತ್ರ ನನಗೆ ದುಃಖವೆನಿಸುತ್ತದೆ. ಅದೇನೆಂದರೆ ನಿಮ್ಮ ಅಳಿಯಂದಿರು ನನ್ನ ಮನೆಯನ್ನು ಬಿಟ್ಟು ಹೋಗುವುದೇ ಇಲ್ಲ. ಇಲ್ಲಿಯೇ ಯಾವಾಗಲೂ ಇರುತ್ತಾರೆ. ಅವರು ಇಲ್ಲಿಯೇ ಇದ್ದರೆ ನನ್ನ ಅಕ್ಕತಂಗಿಯರಿಗೆ ಗತಿಯೇನು. ಇಷ್ಟು ಮಾತ್ರ ವ್ಯಸನವಾಗುತ್ತದೆ ಎಂದು ಹೇಳಿದಳು. ಅದನ್ನು ಕೇಳಿ ತಂದೆಯು ಸಂತೋಷದಿಂದ ಮಗಳನ್ನು ಆಲಿಂಗಿಸಿ ಇನ್ನೊಂದು ಮನೆಗೆ ಹೋದನು. ಅಲ್ಲಿಯ ಮಗಳೂ ಹೀಗೆಯೇ ಎಲ್ಲವನ್ನೂ ಹೇಳಿ ತನ್ನ ಮನೆಯಲ್ಲಿಯೇ ಸರ್ವದಾ ಯಜಮಾನರು ಇರುವರು ಎಂದಳು. ಹೀಗೆಯೇ ಐವತ್ತು ಹೆಣ್ಣು ಮಕ್ಕಳೂ ಹೇಳಲು, ಋಷಿಗಳು ಯೋಗಸಾಮರ್ಥ್ಯದಿಂದ ಐವತ್ತು ದೇಹವನ್ನು ಧರಿಸಿರುವರೆಂದು ತಿಳಿದು ರಾಜನು ಏಕಾಂತದಲ್ಲಿ ಋಷಿಗಳನ್ನು ನೋಡಿ ನಮಸ್ಕರಿಸಿ ಅನುಜ್ಞೆಯನ್ನು ಪಡೆದು ಹೊರಟುಹೋದನು. ಅವರ ಗಾರ್ಹಸ್ಥ್ಯವನ್ನು ನೋಡಿ ಆಶ್ಚರ್ಯಪಟ್ಟನು.

ತರುವಾಯ ಸೌಭರಿಋಷಿಗಳು ಅಷ್ಟು ಪತ್ನಿಯರಲ್ಲಿಯೂ ಅನೇಕ ಮಕ್ಕಳನ್ನು ಪಡೆದು, ತರುವಾಯ ವಿರಕ್ತರಾಗಿ ಪತ್ನಿಯರೊಡನೆ ತಪಸ್ಸುಮಾಡಿ ಉತ್ತಮ ಲೋಕವನ್ನು ಹೊಂದಿದರು.



## ವಾಲಖಿಲ್ಯರ ಮಹಿಮಾ [1]

ಒಂದು ಸಮಯದಲ್ಲಿ ಕಶ್ಯಪರು ಯಾಗವನ್ನು ಮಾಡುತ್ತಿದ್ದರು. ಆಗ ಅವರಿಗೆ ದೇವತೆಗಳೂ ಗಂಧರ್ವರೂ ಸಹಾಯವನ್ನು ಮಾಡುತ್ತಿದ್ದರು. ಆಗ ಇಂದ್ರದೇವರು ಕಶ್ಯಪರಿಂದ ಕಟ್ಟಿಗೆಯನ್ನು ತರಲಿಕ್ಕೆ ಆಜ್ಞಪ್ತರಾಗಿ ಕಟ್ಟಿಗೆಯನ್ನು ತಂದರು. ವಾಲಖಿಲ್ಯ ಮುನಿಗಳೂ ಇತರರ ದೇವತೆಗಳೂ ಕೆಲಸವನ್ನು ಮಾಡುತ್ತಿದ್ದರು. ಇಂದ್ರದೇವರು ತನ್ನ ಸಾಮರ್ಥ್ಯಕ್ಕೆ ಸರಿಯಾಗಿ ದೊಡ್ಡ ಬೆಟ್ಟದಷ್ಟು ದೊಡ್ಡ ಕಟ್ಟಿಗೆಯ ರಾಶಿಯನ್ನು ಎತ್ತಿಕೊಂಡು ಅನಾಯಾಸವಾಗಿ ಬರುತ್ತಿದ್ದರು.

1. ಮ.ಭಾ.ಆಪ. ಅ.30

ಇಂದ್ರದೇವರು ಬರುವಾಗ ದಾರಿಯಲ್ಲಿ ಹೆಬ್ಬೆಟ್ಟಿನ ಮಧ್ಯದಷ್ಟು ದೊಡ್ಡ ಶರೀರವುಳ್ಳ ತುಂಬಾ ಕೃಶರಾದ ಆಹಾರರಹಿತರಾದ ಅಲ್ಪಸಾಮರ್ಥ್ಯವುಳ್ಳವರಾದ ದನದ ಹೆಜ್ಜೆಯಷ್ಟು ತಗ್ಗಾದ ಪ್ರದೇಶದಲ್ಲಿ ನೀರು ತುಂಬಿದ್ದರೆ ಅದರಲ್ಲಿಯೂ ಮುಳುಗಿ ದುಃಖಪಡುವ ಒಂದು ಪಲಾಶದ ಕಡ್ಡಿಯನ್ನು ಹಿಡಿದುಕೊಂಡು ಬರುತ್ತಿರುವ ವಾಲಖಿಲ್ಯ ಎಂಬ ಋಷಿಗಳನ್ನು ನೋಡಿದರು. ಇಂದ್ರದೇವರು ಅಷ್ಟು ಚಿಕ್ಕ ಆಕಾರವುಳ್ಳ ಋಷಿಗಳನ್ನು ನೋಡಿ ಆಶ್ಚರ್ಯವುಳ್ಳವರಾದರು. ಆ ವಾಲಖಿಲ್ಯ ರನ್ನು ಅವಮಾನಮಾಡಿ ಅಪಹಾಸ ಮಾಡುತ್ತಾ ಶೀಘ್ರವಾಗಿ ಹೋದರು.

ಆಗ ವಾಲಖಿಲ್ಯರು ಅತ್ಯಂತ ರೋಷವುಳ್ಳವರಾಗಿ ಇಂದ್ರದೇವರ ಮೇಲೆ ತುಂಬಾ ಕೋಪವುಳ್ಳವರಾಗಿ ಇಂದ್ರದೇವರಿಗೆ ಭಯವನ್ನು ಉಂಟುಮಾಡುವ ಕಾರ್ಯವನ್ನು ಆರಂಭಿಸಿದರು. 'ಇಚ್ಛಾನುಸಾರವಾಗಿ ಪರಾಕ್ರಮವುಳ್ಳ ಇಂದ್ರ ದೇವರಿಗೆ ಭಯವನ್ನುಂಟುಮಾಡುವ ಬೇರೊಬ್ಬ ಇಂದ್ರನು ಎಲ್ಲಾ ದೇವತೆಗಳಿಗೂ ಬರಲಿ. ಶೌರ್ಯದಲ್ಲಿಯೂ ಪರಿಶ್ರಮದಲ್ಲಿಯೂ ಇಂದ್ರದೇವರಿಂದ ನೂರುಪಾಲು ಅಧಿಕನಾದವನು ಕ್ರೂರನಾದವನು ನಮ್ಮ ತಪಸ್ಸಿನ ಫಲದಿಂದ ಹುಟ್ಟಲಿ' ಎಂದು ಅಭಿಪ್ರಾಯದಿಂದ ನಾನಾವಿಧ ಮಂತ್ರಗಳಿಂದ ವಿಧಿಪ್ರಕಾರವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿದರು. ಈ ವಿಷಯವನ್ನು ತಿಳಿದು ಇಂದ್ರದೇವರು ಅತ್ಯಂತ ದುಃಖವುಳ್ಳವರಾಗಿ ಕಶ್ಯಪರನ್ನು ಮರೆಹೊಂದಿದನು.

ಕಶ್ಯಪರು ವಾಲಖಿಲ್ಯರಿದ್ದಲ್ಲಿಗೆ ಹೋಗಿ ನೀವು ಇಷ್ಟು ದೊಡ್ಡ ಹೋಮವನ್ನು ಮಾಡುತ್ತಿರುವಿರಿ ಎಂದು ಕೇಳಿದರು. ಅದಕ್ಕೆ ವಾಲಖ್ಯರು ಐಶ್ವಯಮತ್ತನಾದ ಮೂರ್ಖನಾದ ದೇವೇಂದ್ರನು ನಮಗೆ ಅವಮಾನ ಮಾಡಿದನು. ಅವನನ್ನು ಹಿಂಸಿಸಲಿಕ್ಕೆ ನಾವು ಉದ್ಯೋಗ ಮಾಡುತ್ತೇವೆ ಎಂದರು.

ಅದಕ್ಕೆ ಕಶ್ಯಪರು ಅವರನ್ನು ಸಮಾಧಾನಪಡಿಸಿ ಈ ಇಂದ್ರನು ಬ್ರಹ್ಮದೇವರ ಆಜ್ಞೆಯಿಂದ ಮೂರುಲೋಕಕ್ಕೂ ಇಂದ್ರನಾಗಿದ್ದಾನೆ. ನೀವೂ ಇಂದ್ರನು ಬೇಕೆಂದು ಪ್ರಯತ್ನಮಾಡುತ್ತಿರುವಿರಿ. ತಾವು ಉತ್ತಮರು ಬ್ರಹ್ಮದೇವರ ಮಾತನ್ನು ಸುಳ್ಳು ಮಾಡಬಾರದು. ನಿಮ್ಮ ಸಂಕಲ್ಪ ವ್ಯರ್ಥವಾಗಬೇಕೆಂಬುದೂ ನನ್ನ ಅಭಿಪ್ರಾಯವಲ್ಲ. ನಿಮ್ಮ ತಪೋಬಲದಿಂದ ಹುಟ್ಟುವವನು ಅತಿ ಬಲವುಳ್ಳವನಾಗಿ ಪಕ್ಷಿಗಳಿಗೆ ಇಂದ್ರನಾಗಲಿ. ನಮ್ಮ ಇಂದ್ರನು ನಿಮ್ಮ ಹತ್ತಿರ ಬೇಡಿಕೊಳ್ಳುತ್ತಾನೆ. ನೀವು ಅವನಿಗೆ ಪರಮಾನುಗ್ರಹದಲ್ಲಿ ಮಾಡಬೇಕು ಎಂದು ಹೇಳಿದರು.

ಈರೀತಿಯಾಗಿ ಕಶ್ಯಪರು ಹೇಳಲು ಕಶ್ಯಪರನ್ನು ಸತ್ಕರಿಸಿ ಅವರೊಡನೆ

'ನಾವೆಲ್ಲರೂ ಇಂದ್ರನು ಆಗಲಿ ಎದು ಆರಂಭಿಸಿದ್ದೇವೆ. ನಿಮಗೆ ಮಗನಾಗಬೇಕೆಂಬ ಅಭಿಪ್ರಾಯವಿದೆ. ಆದುದರಿಂದ ನಾವು ಮಾಡಿರುವ ಈ ಹೋಮದ ಫಲವನ್ನು ನೀವೇ ಸ್ವೀಕಾರಮಾಡಿರಿ. ಹೇಗೆ ಯುಕ್ತವೋ ಹಾಗೆ ನೀವೇ ಮಾಡಿರಿ' ಎಂದರು.

ಈ ಸಮಯದಲ್ಲಿಯ ವಿನತಾದೇವಿಯು ತನಗೆ ಮಗನಾಗಬೇಕೆಂದು ತಪಸ್ಸು ಮಾಡಿ, ಋತುಸ್ನಾತಳಾಗಿ ಪತಿಯನ್ನು ಸೇವಿಸಿದಳು. ಆಗ ಕಶ್ಯಪರು ವಿನತೆಯೊಡನೆ 'ದೇವಿ! ನಿನ್ನ ಅಭಿಪ್ರಾಯವು ಸಫಲವಾಗುತ್ತದೆ. ನಿನಗೆ ಇಬ್ಬರು ಮಕ್ಕಳು ಹುಟ್ಟುವರು. ವಾಲಖಿಲ್ಯರ ತಪಸ್ಸಿನಿಂದ ನನ್ನ ಸಂಕಲ್ಪದಿಂದ ಮೂರುಲೋಕದಲ್ಲಿಯೂ ಪ್ರಸಿದ್ಧರಾದ ಇಬ್ಬರು ಮಕ್ಕಳು ಹುಟ್ಟುವರು. ಜಾಗ್ರತೆಯಿಂದ ಗರ್ಭವನ್ನು ಧರಿಸು. ಅವರಲ್ಲಿ ಒಬ್ಬನು ಪಕ್ಷಿಗಳಿಗೆಲ್ಲಾ ಇಂದ್ರನಾಗುವನು ಎಂದು ಹೇಳಿದರು.

ತರುವಾಯ ಕಶ್ಯಪರು ಇಂದ್ರದೇವರೊಡನೆ ಪ್ರೀತಿಯಿಂದ ನಿನಗೆ ಇಬ್ಬರು ಸಹೋದರರು ಸಹಾಯಕರಾಗಿಯೇ ಆಗುವರು. ನಿನಗೆ ಅವರಿಂದ ಭಯವು ಬೇಡ. ನೀನೇ ಇಂದ್ರನಾಗಿರುವಿ. ಆದರೆ ನೀನು ಈ ಪ್ರಕಾರ ಜ್ಞಾನಿಗಳಾದ ಋಷಿಗಳನ್ನು ಅವಮಾನ ಮಾಡಬಾರದು ಎಂದರು.

ಈರೀತಿ ಹೇಳಲು ಇಂದ್ರದೇವರು ಭಯರಹಿತರಾಗಿ ಸ್ವರ್ಗಕ್ಕೆ ಹೋದರು. ವಿನತಾದೇವಿಯೂ ಕೃತಾರ್ಥಳಾದಳು. ಅರುಣ ಗರುಡ ಎಂಬ ಇಬ್ಬರು ಮಕ್ಕಳನ್ನು ಹಡೆದಳು. ಅಂಗಹೀನನಾದ ಅರುಣನು ಸೂರ್ಯದೇವರಿಗೆ ಸಾರಥಿಯಾದನು. ಗರುಡದೇವರನ್ನು ಪಕ್ಷಿಗಳಿಗೆ ಇಂದ್ರನನ್ನಾಗಿ ಅಭಿಷೇಕ ಮಾಡಿದರು.



## ಕಚದೇವಯಾನಿಯರ ಕಥಾ [1]

ತ್ರಿಲೋಕಾಧಿಪತ್ಯ ವಿಷಯದಲ್ಲಿ ದೇವತೆಗಳಿಗೂ ಅಸುರರಿಗೂ ಜಗಳವು ಏರ್ಪಟ್ಟಿತು. ದೇವತೆಗಳು ಬೃಹಸ್ಪತ್ಯಾಚಾರ್ಯರನ್ನು ಗುರುಗಳನ್ನಾಗಿ ಸ್ವೀಕರಿಸಿದರು. ಅಸುರರು ಶುಕ್ರಾಚಾರ್ಯರನ್ನು ಗುರುಗಳನ್ನಾಗಿ ಅಂಗೀಕರಿಸಿದರು. ಬೃಹಸ್ಪತ್ಯಾಚಾರ್ಯರು ಶುಕ್ರಾಚಾರ್ಯರೂ ಇಬ್ಬರೂ ಪರಸ್ಪರ ಸ್ಪರ್ಧೆಯುಳ್ಳವರಾಗಿದ್ದರು. ತರುವಾಯ ದೇವತೆಗಳು ಯುದ್ಧದಲ್ಲಿ ಅಸುರರನ್ನು ಸಂಹಾರಮಾಡಿದರು. ಅವರನ್ನು ಶುಕ್ರಾಚಾರ್ಯರು ಮೃತಸಂಜೀವಿನೀ ವಿದ್ಯೆಯ ಬಲದಿಂದ ಬದುಕಿಸಿದರು. ಆದರೆ

1. ಮ.ಭಾ.ಆಪ. ಅ.75-77

ಅಸುರರು ಯಾವ ದೇವತೆಗಳನ್ನು ಯುದ್ಧದಲ್ಲಿ ಕೊಂದರೋ ಅವರನ್ನು ಬೃಹಸ್ಪತ್ಯಾಚಾರ್ಯರು ಬದುಕಿಸಲಿಲ್ಲ. ಏಕೆಂದರೆ ಅವರಿಗೆ ಆ ವಿದ್ಯೆಯು ಗೊತ್ತಿರಲಿಲ್ಲ. ಇದರಿಂದ ದೇವತೆಗಳೆಲ್ಲಾ ವಿಷಾದವನ್ನು ಹೊಂದಿದರು. ಅವರು ಶುಕ್ರಾಚಾರ್ಯರಿಂದ ಭಯವುಳ್ಳವರಾಗಿ ಬೃಹಸ್ಪತ್ಯಾಚಾರ್ಯರ ಜ್ಯೇಷ್ಠಪುತ್ರನಾದ ಕಚನ ಹತ್ತಿರ ಹೋಗಿ 'ನೀನು ನಮಗೆ ಸಹಾಯವನ್ನು ಮಾಡಬೇಕು. ಶುಕ್ರಾಚಾರ್ಯರಲ್ಲಿ ಇರುವ ಮೃತಸಂಜೀವಿನೀ ವಿದ್ಯೆಯನ್ನು ಪಡೆಯಬೇಕು. ವೃಷಪರ್ವನ ಸಮೀಪದಲ್ಲಿ ಅವರನ್ನು ನೋಡಬಹುದು. ಅಲ್ಲಿ ಇದ್ದುಕೊಂಡು ರಾಕ್ಷಸರನ್ನು ಕಾಯುತ್ತಾ ಇದ್ದಾರೆ. ನೀನು ಪೂರ್ವ ವಯಸ್ಸುಳ್ಳವನಾದ ಪ್ರಯುಕ್ತ ಆ ಶುಕ್ರಾಚಾರ್ಯರನ್ನೂ ಅವರ ಮಗಳಾದ ದೇವಯಾನಿಯನ್ನೂ ಸಂತೋಷಪಡಿಸಲು ಸಮರ್ಥನು. ನಿನ್ನ ಸ್ವಭಾವ ದಾಕ್ಷಿಣ್ಯಾದಿಗುಣಗಳಿಂದ ದೇವಯಾನಿಯು ಸಂತುಷ್ಟಳಾದರೆ ನೀನು ಆ ವಿದ್ಯೆಯನ್ನು ಹೊಂದುವಿ' ಎಂದರು.

ಕಚನು ದೇವತೆಗಳೊಡನೆ ಹಾಗೆಯೇ ಆಗಲಿ ಎಂದು ಹೇಳಿ ಹೋದನು. ಅವನು ಅಸುರರ ಪಟ್ಟಣದಲ್ಲಿ ಶುಕ್ರಾಚಾರ್ಯರನ್ನು ನೋಡಿ 'ನಾನು ಅಂಗೀರಸ ಋಷಿಗಳ ಮೊಮ್ಮಗನು. ಬೃಹಸ್ಪತ್ಯಾಚಾರ್ಯ ಮಗನು. ಹೆಸರು ಕಚ ಎಂದು. ನನ್ನನ್ನು ತಾವು ಶಿಷ್ಯನನ್ನಾಗಿ ಸ್ವೀಕರಿಸಬೇಕು. ನಾನು ತಮ್ಮಲ್ಲಿ ಬ್ರಹ್ಮಚರ್ಯ ಅನುಷ್ಠಾನ ಮಾಡುತ್ತೇನೆ' ಎಂದನು.

ಆಗ ಶುಕ್ರಾಚಾರ್ಯರು 'ಸ್ವಾಗತ. ನಿನ್ನ ಮಾತನ್ನು ಅಂಗೀಕರಿಸುತ್ತೇನೆ. ನಿನ್ನನ್ನು ಸತ್ಕರಿಸುತ್ತೇನೆ. ನಿನ್ನ ಸತ್ಕಾರದಿಂದ ಬೃಹಸ್ಪಚ್ಯಾಚಾರ್ಯರು ಸತ್ಕೃತರಾಗಲಿ' ಎಂದರು.

ಕಚನು ಹಾಗೆಯೇ ಆಗಲಿ ಎಂದು ಶುಕ್ರಾಚಾರ್ಯರನ್ನು ಸೇವಾಮಾಡಿದನು. ದೇವಯಾನಿಯನ್ನು ಸಂತೋಷಪಡಿಸಿದನು. ನವಯುವತಿಯಾದ ದೇವಯಾನಿಯನ್ನು ಗಾಯನ ನರ್ತನ ಇತ್ಯಾದಿಗಳಿಂದ ಸಂತೋಷಪಡಿಸಿದನು. ಅವಳಿಗೆ ಪುಷ್ಪ ಫಲ ಇತ್ಯಾದಿಗಳನ್ನು ತಂದುಕೊಟ್ಟೂ ಸಂತೋಷಪಡಿಸಿದನು. ದೇವಯಾನಿಯೂ ಗಾಯನ ಮಾಡುತ್ತಾ ಅವನನ್ನು ಸಂತೋಷಪಡಿಸುತ್ತಾ ಇದ್ದಳು. ಹೀಗೆಯೇ ಐನೂರು ವರ್ಷಗಳು ಕಳೆದವು.

ದಾನವರು ಕಚನು ಬಂದಿರುವ ವಿಷಯವನ್ನು ತಿಳಿದರು. ಒಂದು ದಿನ ಕಾಡಿನಲ್ಲಿ ಗೋವನ್ನು ರಕ್ಷಣೆ ಮಾಡುತ್ತಿರುವಾಗ ನೋಡಿ ಬೃಹಸ್ಪತ್ಯಾಚಾರ್ಯರ ಮೇಲಿನ ದ್ವೇಷದಿಂದ ಮತ್ತು ಮೃತಸಂಜೀವಿನೀವಿದ್ಯಾ ಇನ್ನೊಬ್ಬರಿಗೆ ಹೋಗಬಾರದು ಎಂಬ ಅಭಿಪ್ರಾಯದಿಂದಲೂ ಕಚನನ್ನು ಕೊಂದು ತುಂಡುತುಂಡು ಮಾಡಿ

ತೋಳಗಳಿಗೆ ಹಾಕಿದರು. ಸಾಯಂಕಾಲವಾಗಲು ದನಗಳು ಪಾಲಕರಿಲ್ಲದೆ ತಮ್ಮ ಮನೆಗೆ ಬಂದವು. ದೇವಯಾನಿಯು ಕಚನಿಲ್ಲದೆ ದನಗಳು ಮಾತ್ರ ಬಂದಿರುವುದನ್ನು ನೋಡಿ ತಂದೆಯೊಡನೆ 'ನೀವು ಅಗ್ನಿಹೋತ್ರವನ್ನು ಮಾಡಿಯಾಯಿತು. ಸೂರ್ಯನು ಮುಳುಗಿದನು. ದನಗಳು ಮಾತ್ರ ಬಂದವು. ಕಚನು ಬರಲಿಲ್ಲ. ನಿಶ್ಚಯವಾಗಿಯೂ ಕಚನನ್ನು ಯಾರೋ ಕೊಂದಿರಬೇಕು. ಅವನಿಲ್ಲದೆ ನಾನು ಬದುಕಲಾರೆನು ಎಂದಳು.

ಅದಕ್ಕೆ ಶುಕ್ರಾಚಾರ್ಯರು 'ಸತ್ತವನು ಬಾ ಎಂದು ಹೇಳಿ ಬದುಕಿಸುವೆನು' ಎಂದು ಹೇಳಿದರು. ತರುವಾಯ ಅವರು ಸಂಜೀವಿನೀ ವಿದ್ಯೆಯನ್ನು ಪ್ರಯೋಗಿಸಿ ಕಚನನ್ನು ಕರೆದರು. ಆಗ ಕಚನು ತೋಳಗಳ ದೇಹಗಳನ್ನು ಸೀಳಿಕೊಂಡು ಸಂತೋಷದಿಂದ ಬಂದನು. ಕಚ! ಯಾಕೆ ಇಷ್ಟು ಸಾವಕಾಶಮಾಡಿದಿ ಎಂದು ದೇವ ಯಾನಿಯು ಕೇಳಿದಳು. ಕಚನು 'ಸಮಿಧೆಗಳನ್ನು ದರ್ಭೆಗಳನ್ನೂ ಹಿಡಿದುಕೊಂಡು ಬರುತ್ತಾ ಇದ್ದೆನು. ಶ್ರಮವುಂಟಾಗಿ ಒಂದು ಆಲದಮರದ ಬುಡದಲ್ಲಿ ಕೂತಿದ್ದೆನು. ಗೋವುಗಳೆಲ್ಲವೂ ಮರದ ನೆರಳಿನಲ್ಲಿ ಇದ್ದವು. ಅಲ್ಲಿ ಅಸುರರು ನನ್ನನ್ನು ನೋಡಿ ನೀನು ಯಾರು? ಎಂದು ಕೇಳಿದರು. ಆಗ ನಾನು ಬೃಹಸ್ಪತ್ಯಾಚಾರ್ಯರ ಮಗ ಕಚನು, ಎಂದೆನು. ಆ ಕ್ಷಣ ಅವರು ನನ್ನನ್ನು ತುಂಡು ತುಂಡಾಗಿ ಮಾಡಿ ತೋಳಗಳಿಗೆ ಹಾಕಿ ಹೋದರು. ಪೂಜ್ಯರು ನಿನ್ನ ತಂದೆಯವರು ವಿದ್ಯಾಸಾಮರ್ಥ್ಯದಿಂದ ನನ್ನನ್ನು ಕೂಗಲು ಕಷ್ಟದಿಂದ ಬದುಕಿಬಂದೆನು. ನಾನು ಸತ್ತೇ ಹೋಗಿದ್ದೆನು ಎಂದನು.

ಮತ್ತೊಂದುದಿನ ದೇವಯಾನಿಯು ಕಚನೊಡನೆ ಪುಷ್ಪವನ್ನು ತರಲಿಕ್ಕೆ ಹೇಳಿದಳು. ಕಚನು ಕಾಡಿಗೆ ಹೋದನು. ಅವನನ್ನು ದಾನವರು ನೋಡಿದರು. ಪುನಃ ಅವನನ್ನು ಕೊಂದು ಅರೆದು ಸಮುದ್ರದ ನೀರಿನಲ್ಲಿ ಮಿಶ್ರಮಾಡಿದರು. ಕಚನು ಬಹಳ ಸಮಯವಾದರೂ ಬಾರದೆ ಇರಲು ದೇವಯಾನಿಯು ತಂದೆಯ ಹತ್ತಿರ ತಿಳಿಸಿದಳು. ಶುಕ್ರಾಚಾರ್ಯರು ವಿದ್ಯಾಸಾಮರ್ಥ್ಯದಿಂದ ಕೂಗಿದರು. ಕಚನು ಬಂದು ನಡೆದ ವಿಷಯವನ್ನು ಹೇಳಿದನು. ಆಮೇಲೆ ದೈತ್ಯರು ಮೂರನೇ ಬಾರಿ ಕಚನನ್ನು ಸಂಹರಿಸಿ ಅವನನ್ನು ಸುಟ್ಟು ಆ ಭಸ್ಮವನ್ನು ಮದ್ಯದಲ್ಲಿ ಸೇರಿಸಿ ಆ ಮದ್ಯವನ್ನು ಶುಕ್ರಾಚಾರ್ಯರಿಗೆ ಕುಡಿಯಲಿಕ್ಕೆ ಕೊಟ್ಟರು. ಸಾಯಂಕಾಲವಾಗಲು ಕಚನು ಬಾರದೆ ದನಗಳು ಮಾತ್ರ ಬರಲು ದೇವಯಾನಿಯು ತಂದೆಯೊಡನೆ ಪುಷ್ಪವನ್ನು ತರಬೇಕೆಂದು ಕಚನೊಡನೆ ನಾನು ಹೇಳಿದ್ದೆನು. ಕಚನು ಬರಲಿಲ್ಲ. ಅವನು ನಿಶ್ಚಯವಾಗಿಯೂ ಸತ್ತಿರಬೇಕು. ಅವನಿಲ್ಲದೆ ನಾನು ನಿಶ್ಚಯವಾಗಿಯೂ ಬದುಕಲಾರೆನು ಎಂದಳು.

ಶುಕ್ರಾಚಾರ್ಯರು ಬೃಹಸ್ಪತಿ ಆಚಾರ್ಯರ ಮಗನಾದ ಕಚನು ನಿಶ್ಚಯ

ವಾಗಿಯೂ ಸತ್ತುಹೋದನು. ಸಂಜೀವಿನೀ ವಿದ್ಯೆಯಿಂದ ಅವನನ್ನು ಬದುಕಿಸಿದರೂ ಅವನನ್ನು ಕೊಲ್ಲುತ್ತಲೇ ಇದ್ದಾರೆ. ಏನು ಮಾಡಲಿ. ದೇವಯಾನಿ! ನೀನು ಅವನಿ ಗೋಸ್ಕರ ದುಃಖಪಡಬೇಡ. ಎಲ್ಲಾ ಜಗತ್ತೇ ನಿನ್ನ ವಶವಾಗಿದೆ. ಅವನನ್ನು ಎಷ್ಟು ಸಲ ಬದುಕಿಸಿದರೂ ಅವನು ಸಾಯುತ್ತಲೇ ಇದ್ದಾನೆ. ಆದುದರಿಂದ ಅವನನ್ನು ಬದುಕಿಸ ಲಿಕ್ಕೆ ಸಾಧ್ಯವಿಲ್ಲ.

ದೇವಯಾನಿಯು 'ಆ ಕಚನು ಆಂಗೀರ ಋಷಿಗಳ ಮೊಮ್ಮಗನು. ಬೃಹಸ್ಪತ್ಯಾಚಾರ್ಯರ ಮಗನು. ಅವನನ್ನು ಕುರಿತು ನಾನು ಹೇಗೆ ದುಃಖಿಸದಿರಲಿ. ಅವನು ಒಳ್ಳೇ ಬ್ರಹ್ಮಚಾರಿ. ತಪಸ್ವಿ. ಸರ್ವದಾ ಕೆಲಸ ಮಾಡುತ್ತಲೇ ಇರುವನು. ಕಚನು ನನಗೆ ತುಂಬಾಬೇಕಾದವನು. ಕಚನಿಲ್ಲದೆ ನಾನು ಊಟಮಾಡರಾರೆನು' ಎಂದಳು.

ಶುಕ್ರಾಚಾರ್ಯರು 'ಅಸುರರು ಸುಮ್ಮನೆ ನನ್ನನ್ನು ದ್ವೇಷಿಸುತ್ತಾರೆ. ವ್ಯರ್ಥವಾಗಿ ನಿರಪರಾಧಿಯಾದ ನನ್ನ ಶಿಷ್ಯನನ್ನು ಕೊಲ್ಲುತ್ತಾರೆ. ಈ ಪಾಪದಿಂದ ಅವರ ನಾಶವೇ ಆಗುವುದು. ಬ್ರಹ್ಮಹತ್ಯೆಯು ಇಂದ್ರದೇವರನ್ನೂ ಸುಟ್ಟುಹಾಕುವುದು' ಎಂದರು. ತರುವಾಯ ದೇವಯಾನಿಯಿಂದ ಪ್ರೇರಿತರಾಗಿ ಕೋಪದಿಂದ ಪುನಃ ಕಚನನ್ನು ಕೂಗಿದರು. ಕಚನಿಗೆ ಸಂಜೀವಿನೀ ವಿದ್ಯೆಯ ಸಾಮರ್ಥ್ಯದಿಂದ ಜ್ಞಾನವುಳ್ಳವನಾಗಿ ಗುರುಗಳಿಂದ ಭಯವುಳ್ಳವನಾಗಿ ಶುಕ್ರಾಚಾರ್ಯರ ಹೊಟ್ಟೆಯೊಳಗಿನಿಂದಲೇ 'ಪೂಜ್ಯರು ಪ್ರಸನ್ನರಾಗಬೇಕು ನಾನು ಕಚ. ನಮಸ್ಕರಿಸುತ್ತೇನೆ. ನಾನು ನಿಮ್ಮ ಹೊಟ್ಟೆಯಲ್ಲಿ ಇದ್ದೇನೆ. ನಿಮ್ಮ ಮಗನಂತೆ ನನ್ನನ್ನು ಭಾವನಾಮಾಡಬೇಕು ಎಂದನು. ಶುಕ್ರಾಚಾರ್ಯರು ನೀನು ಯಾವ ಮಾರ್ಗದಿಂದ ನನ್ನ ಹೊಟ್ಟೆಯಲ್ಲಿ ಪ್ರವೇಶಿಸಿದಿ? ಹೇಳು. ಈ ಕ್ಷಣವೇ ಅಸುರರನ್ನೆಲ್ಲಾ ನಾಶಮಾಡಿ ದೇವತೆಗಳ ಪಕ್ಷಕ್ಕೆ ಹೋಗುತ್ತೇನೆ' ಎಂದರು.

ಕಚನು ತಮ್ಮ ಅನುಗ್ರಹದಿಂದ ನನಗಿನ್ನೂ ಸ್ಮೃತಿಯಿದೆ: ಅಸುರರು ನನ್ನನ್ನು ಕೊಂದು ಸುಟ್ಟು ಭಸ್ಮವನ್ನು ಮದ್ಯದಲ್ಲಿ ಬೆರೆಸಿ ತಮಗೆ ಕೊಟ್ಟಿದ್ದಾರೆ ಎಂದನು.

ಶುಕ್ರಾಚಾರ್ಯರು 'ದೇವಯಾನಿ! ಈಗ ಏನು ಮಾಡಲಿ! ನಾನು ಸತ್ತರೆ ಕಚನು ಬದುಕಬಹುದು. ಕಚನು ನನ್ನ ಹೊಟ್ಟೆಯೊಳಗೆ ಇದ್ದಾನೆ. ನನ್ನ ಹೊಟ್ಟೆಯನ್ನು ಸೀಳಿಕೊಂಡು ಅವನು ಬರಬೇಕು' ಎಂದರು.

ದೇವಯಾನಿಯು 'ನನಗೆ ಎರಡೂ ದುಃಖಕರಗಳೇ, ಕಚನು ಸತ್ತರೆ ನನಗೆ ಸುಖವಿಲ್ಲ. ನಿಮ್ಮ ನಾಶವಾದರೆ ನಾನು ಬದುಕಲಾರೆನು' ಎಂದಳು.

ಶುಕ್ರಾಚಾರ್ಯರು 'ಕಚ! ನಿನ್ನ ಕಾರ್ಯಸಿದ್ಧಿಯಾಯಿತು. ಭಕ್ತನಾದ ನಿನ್ನಲ್ಲಿ ದೇವಯಾನಿಯು ಪ್ರೀತಿಯುಳ್ಳವಳಾಗಿದ್ದಾಳೆ. ನೀನು ಸಂಜೀವಿನೀ ವಿದ್ಯೆಯನ್ನು ಹೊಂದು. ನೀನು ಕಚರೂಪದಿಂದ ಬಂದ ಇಂದ್ರನಲ್ಲವಷ್ಟೆ! ಬ್ರಾಹ್ಮಣನಾಗದಿದ್ದರೆ ಬೇರೆ ಯಾರೂ ನನ್ನ ಉದರದಿಂದ ಬದುಕಿ ಹೋಗಲಿಕ್ಕೆ ಆಗಲಾರದು. ಆದುದ ರಿಂದ ನೀನು ಬ್ರಾಹ್ಮಣನೇ. ಮೃತಸಂಜೀವಿನೀ ವಿದ್ಯೆಯನ್ನು ಹೊಂದು. ನೀನು ನನ್ನ ಉದರವನ್ನು ಭೇದಿಸಿಕೊಂಡು ಹೊರಗೆ ಬಂದಮೇಲೆ ಧರ್ಮದೃಷ್ಟಿಯುಳ್ಳವನಾಗು. ಅಂದರೆ ನನ್ನನ್ನು ಬದುಕಿಸು ಎಂದು ಹೇಳಿ ಮೃತಸಂಜೀವಿನೀ ವಿದ್ಯೆಯನ್ನು ಉಪದೇಶಿಸಿದರು. ಕಚನು ಗುರುಗಳಿಂದ ವಿದ್ಯೆಯನ್ನು ಪಡೆದು ಗುರುಗಳ ಹೊಟ್ಟೆಯನ್ನು ಸೀಳಿಕೊಂಡು ಹೊರಗೆ ಬಂದನು. ಹೊಟ್ಟೆ ಸೀಳಿಹೋಗಿ ಬಿದ್ದಿರುವ ತೇಜೋರಾಶಿಯಾದ ಮೃತರಾದ ಶುಕ್ರಾಚಾರ್ಯರನ್ನು ಎಬ್ಬಿಸಿದನು.

ಶುಕ್ರಾಚಾರ್ಯರು ಮದ್ಯಪಾನ ಮಾಡಿದ್ದರಿಂದ ಈ ಅನರ್ಥವು ಏರ್ಪಟ್ಟಿತೆಂದು ಮದ್ಯಪಾನದ ಮೇಲೆ ಕೋಪವುಳ್ಳವರಾಗಿ ಬ್ರಾಹ್ಮಣರಿಗೆ ಹಿತವನ್ನು ಮಾಡಲಿಚ್ಛೆಯುಳ್ಳವರಾಗಿ 'ಇನ್ನು ಮುಂದೆ ಯಾವ ಬ್ರಾಹ್ಮಣನು ಮದ್ಯಪಾನವನ್ನು ಮಾಡುವನೋ ಅವನು ಧರ್ಮರಹಿತನಾಗಲಿ. ಬ್ರಹ್ಮಹತ್ಯಾ ಮಾಡಿದ ದೋಷ ವುಳ್ಳವನಾಗಲಿ. ನಿಂದ್ಯನಾಗಲಿ. ನಾನು ಹೇಳಿರುವ ಬ್ರಾಹ್ಮಣ ಧರ್ಮಮರ್ಯಾದೆ ಯನ್ನು ಎಲ್ಲಾ ಬ್ರಾಹ್ಮಣರೂ ದೇವತೆಗಳೂ ಕೇಳಬೇಕು' ಎಂದರು. ಈ ರೀತಿಯಾಗಿ ಹೇಳಿ ದಾನವರೊಡನೆ 'ಮಡ್ಡರಾದ ಅಸುರರೇ! ಕಚನು ಸಿದ್ಧನಾಗಿ ನನ್ನ ಸಮೀಪದಲ್ಲಿ ವಾಸಿಸುತ್ತಿದ್ದಾನೆ. ಮೃತಸಂಜೀವಿನೀ ವಿದ್ಯೆಯನ್ನು ಹೊಂದಿ ಮಹಾ ಸಮರ್ಥ ನಾಗಿದ್ದಾನೆ ಎಂದರು. ಅದನ್ನು ಕೇಳಿ ದಾನವರು ಆಶ್ಚರ್ಯವನ್ನೂ ಹೊಂದಿ ತಮ್ಮ ಮನೆಗೆ ಹೋದರು. ಕಚನು ಸಾವಿರವರ್ಷಕಾಲ ಶುಕ್ರಾಚಾರ್ಯರ ಬಳಿ ಸೇವಾ ಮಾಡಿ ವಿದ್ಯೆಯನ್ನು ಪಡೆದು ಅನುಜ್ಞೆಯನ್ನು ಹೊಂದಿ ಸ್ವರ್ಗಕ್ಕೆ ಹೋಗಲಿಕ್ಕೆ ಹೊರಟನು.

ಆ ಸಮಯದಲ್ಲಿ ದೇವಯಾನಿಯು ಬಂದು ನನ್ನನ್ನು ಮದುವೆ ಮಾಡಿಕೊಳ್ಳ ಬೇಕೆಂದು ತುಂಬಾ ಹೇಳಿಕೊಂಡಳು. ಆಗ ಕಚನು ಸುಂದರಿ! ನಿನ್ನ ತಂದೆಯು ನನಗೆ ಹೇಗೆ ಪೂಜ್ಯರೋ ಹಾಗೆಯೇ ನೀನೂ ನನಗೆ ಬಹುಮಾನಕ್ಕೆ ಅರ್ಹಳು. ನೀನು ನನಗೆ ಗುರುಪುತ್ರಿ. ಆದುದರಿಂದ ನೀನು ಈ ಮಾತನ್ನು ಹೇಳಬಾರದು ಎಂದನು. ಆಗ ದೇವಯಾನಿಯು 'ಕಚ! ನೀನು ನನಗೆ ಅತ್ಯಂತಪೂಜ್ಯನು. ನಿನ್ನನ್ನು ಅಸುರರು ಸಂಹಾರ ಮಾಡುವಾಗ ನಿನ್ನ ಮೇಲೆ ಬಹಳ ಪ್ರೀತಿಯುಂಟಾಗಿತ್ತು. ಆಗ ಆರಂಭಿಸಿ

ವಾಗಿಯೂ ಸತ್ತುಹೋದನು. ಸಂಜೀವಿನೀ ವಿದ್ಯೆಯಿಂದ ಅವನನ್ನು ಬದುಕಿಸಿದರೂ ಅವನನ್ನು ಕೊಲ್ಲುತ್ತಲೇ ಇದ್ದಾರೆ. ಏನು ಮಾಡಲಿ. ದೇವಯಾನಿ! ನೀನು ಅವನಿಗೋಸ್ಕರ ದುಃಖಪಡಬೇಡ. ಎಲ್ಲಾ ಜಗತ್ತೇ ನಿನ್ನ ವಶವಾಗಿದೆ. ಅವನನ್ನು ಎಷ್ಟು ಸಲ ಬದುಕಿಸಿದರೂ ಅವನು ಸಾಯುತ್ತಲೇ ಇದ್ದಾನೆ. ಆದುದರಿಂದ ಅವನನ್ನು ಬದುಕಿಸಲಿಕ್ಕೆ ಸಾಧ್ಯವಿಲ್ಲ.

ದೇವಯಾನಿಯು 'ಆ ಕಚನು ಆಂಗೀರ ಋಷಿಗಳ ಮೊಮ್ಮಗನು. ಬೃಹಸ್ಪತ್ಯಾಚಾರ್ಯರ ಮಗನು. ಅವನನ್ನು ಕುರಿತು ನಾನು ಹೇಗೆ ದುಃಖಿಸದಿರಲಿ. ಅವನು ಒಳ್ಳೇ ಬ್ರಹ್ಮಚಾರಿ. ತಪಸ್ವಿ. ಸರ್ವದಾ ಕೆಲಸ ಮಾಡುತ್ತಲೇ ಇರುವನು. ಕಚನು ನನಗೆ ತುಂಬಾಬೇಕಾದವನು. ಕಚನಿಲ್ಲದೆ ನಾನು ಊಟಮಾಡರಾರೆನು' ಎಂದಳು.

ಶುಕ್ರಾಚಾರ್ಯರು 'ಅಸುರರು ಸುಮ್ಮನೆ ನನ್ನನ್ನು ದ್ವೇಷಿಸುತ್ತಾರೆ. ವ್ಯರ್ಥವಾಗಿ ನಿರಪರಾಧಿಯಾದ ನನ್ನ ಶಿಷ್ಯನನ್ನು ಕೊಲ್ಲುತ್ತಾರೆ. ಈ ಪಾಪದಿಂದ ಅವರ ನಾಶವೇ ಆಗುವುದು. ಬ್ರಹ್ಮಹತ್ಯೆಯು ಇಂದ್ರದೇವರನ್ನೂ ಸುಟ್ಟುಹಾಕುವುದು' ಎಂದರು. ತರುವಾಯ ದೇವಯಾನಿಯಿಂದ ಪ್ರೇರಿತರಾಗಿ ಕೋಪದಿಂದ ಪುನಃ ಕಚನನ್ನು ಕೂಗಿದರು. ಕಚನಿಗೆ ಸಂಜೀವಿನೀ ವಿದ್ಯೆಯ ಸಾಮರ್ಥ್ಯದಿಂದ ಜ್ಞಾನವುಳ್ಳವನಾಗಿ ಗುರುಗಳಿಂದ ಭಯವುಳ್ಳವನಾಗಿ ಶುಕ್ರಾಚಾರ್ಯರ ಹೊಟ್ಟೆಯೊಳಗಿನಿಂದಲೇ 'ಪೂಜ್ಯರು ಪ್ರಸನ್ನರಾಗಬೇಕು ನಾನು ಕಚ. ನಮಸ್ಕರಿಸುತ್ತೇನೆ. ನಾನು ನಿಮ್ಮ ಹೊಟ್ಟೆಯಲ್ಲಿ ಇದ್ದೇನೆ. ನಿಮ್ಮ ಮಗನಂತೆ ನನ್ನನ್ನು ಭಾವನಾಮಾಡಬೇಕು ಎಂದನು. ಶುಕ್ರಾಚಾರ್ಯರು ನೀನು ಯಾವ ಮಾರ್ಗದಿಂದ ನನ್ನ ಹೊಟ್ಟೆಯಲ್ಲಿ ಪ್ರವೇಶಿಸಿದಿ? ಹೇಳು. ಈ ಕ್ಷಣವೇ ಅಸುರರನ್ನೆಲ್ಲಾ ನಾಶಮಾಡಿ ದೇವತೆಗಳ ಪಕ್ಷಕ್ಕೆ ಹೋಗುತ್ತೇನೆ' ಎಂದರು.

ಕಚನು ತಮ್ಮ ಅನುಗ್ರಹದಿಂದ ನನಗಿನ್ನೂ ಸ್ಮೃತಿಯಿದೆ. ಅಸುರರು ನನ್ನನ್ನು ಕೊಂದು ಸುಟ್ಟು ಭಸ್ಮವನ್ನು ಮದ್ಯದಲ್ಲಿ ಬೆರೆಸಿ ತಮಗೆ ಕೊಟ್ಟಿದ್ದಾರೆ ಎಂದನು.

ಶುಕ್ರಾಚಾರ್ಯರು 'ದೇವಯಾನಿ! ಈಗ ಏನು ಮಾಡಲಿ! ನಾನು ಸತ್ತರೆ ಕಚನು ಬದುಕಬಹುದು. ಕಚನು ನನ್ನ ಹೊಟ್ಟೆಯೊಳಗೆ ಇದ್ದಾನೆ. ನನ್ನ ಹೊಟ್ಟೆಯನ್ನು ಸೀಳಿಕೊಂಡು ಅವನು ಬರಬೇಕು' ಎಂದರು.

ದೇವಯಾನಿಯು 'ನನಗೆ ಎರಡೂ ದುಃಖಕರಗಳೇ, ಕಚನು ಸತ್ತರೆ ನನಗೆ ಸುಖವಿಲ್ಲ, ನಿಮ್ಮ ನಾಶವಾದರೆ ನಾನು ಬದುಕಲಾರೆನು' ಎಂದಳು.

ಶುಕ್ರಾಚಾರ್ಯರು 'ಕಚ! ನಿನ್ನ ಕಾರ್ಯಸಿದ್ಧಿಯಾಯಿತು. ಭಕ್ತನಾದ ನಿನ್ನಲ್ಲಿ ದೇವಯಾನಿಯು ಪ್ರೀತಿಯುಳ್ಳವಳಾಗಿದ್ದಾಳೆ. ನೀನು ಸಂಜೀವಿನೀ ವಿದ್ಯೆಯನ್ನು ಹೊಂದು. ನೀನು ಕಚರೂಪದಿಂದ ಬಂದ ಇಂದ್ರನಲ್ಲವಷ್ಟೆ! ಬ್ರಾಹ್ಮಣನಾಗದಿದ್ದರೆ ಬೇರೆ ಯಾರೂ ನನ್ನ ಉದರದಿಂದ ಬದುಕಿ ಹೋಗಲಿಕ್ಕೆ ಆಗಲಾರದು. ಆದುದ ರಿಂದ ನೀನು ಬ್ರಾಹ್ಮಣನೇ. ಮೃತಸಂಜೀವಿನೀ ವಿದ್ಯೆಯನ್ನು ಹೊಂದು. ನೀನು ನನ್ನ ಉದರವನ್ನು ಭೇದಿಸಿಕೊಂಡು ಹೊರಗೆ ಬಂದಮೇಲೆ ಧರ್ಮದೃಷ್ಟಿಯುಳ್ಳವನಾಗು. ಅಂದರೆ ನನ್ನನ್ನು ಬದುಕಿಸು ಎಂದು ಹೇಳಿ ಮೃತಸಂಜೀವಿನೀ ವಿದ್ಯೆಯನ್ನು ಉಪದೇಶಿಸಿದರು. ಕಚನು ಗುರುಗಳಿಂದ ವಿದ್ಯೆಯನ್ನು ಪಡೆದು ಗುರುಗಳ ಹೊಟ್ಟೆಯನ್ನು ಸೀಳಿಕೊಂಡು ಹೊರಗೆ ಬಂದನು. ಹೊಟ್ಟೆ ಸೀಳಿಹೋಗಿ ಬಿದ್ದಿರುವ ತೇಜೋರಾಶಿಯಾದ ಮೃತರಾದ ಶುಕ್ರಾಚಾರ್ಯರನ್ನು ಎಬ್ಬಿಸಿದನು.

ಶುಕ್ರಾಚಾರ್ಯರು ಮದ್ಯಪಾನ ಮಾಡಿದ್ದರಿಂದ ಈ ಅನರ್ಥವು ಏರ್ಪಟ್ಟಿತೆಂದು ಮದ್ಯಪಾನದ ಮೇಲೆ ಕೋಪವುಳ್ಳವರಾಗಿ ಬ್ರಾಹ್ಮಣರಿಗೆ ಹಿತವನ್ನು ಮಾಡಲಿಚ್ಛಾಉಳ್ಳವರಾಗಿ 'ಇನ್ನು ಮುಂದೆ ಯಾವ ಬ್ರಾಹ್ಮಣನು ಮದ್ಯಪಾನವನ್ನು ಮಾಡುವನೋ ಅವನು ಧರ್ಮರಹಿತನಾಗಲಿ. ಬ್ರಹ್ಮಹತ್ಯಾ ಮಾಡಿದ ದೋಷ ವುಳ್ಳವನಾಗಲಿ. ನಿಂದ್ಯನಾಗಲಿ. ನಾನು ಹೇಳಿರುವ ಬ್ರಾಹ್ಮಣ ಧರ್ಮಮರ್ಯಾದೆ ಯನ್ನು ಎಲ್ಲಾ ಬ್ರಾಹ್ಮಣರೂ ದೇವತೆಗಳೂ ಕೇಳಬೇಕು' ಎಂದರು. ಈ ರೀತಿಯಾಗಿ ಹೇಳಿ ದಾನವರೊಡನೆ 'ಮಡ್ಡರಾದ ಅಸುರರೇ! ಕಚನು ಸಿದ್ಧನಾಗಿ ನನ್ನ ಸಮೀಪದಲ್ಲಿ ವಾಸಿಸುತ್ತಿದ್ದಾನೆ. ಮೃತಸಂಜೀವಿನೀ ವಿದ್ಯೆಯನ್ನು ಹೊಂದಿ ಮಹಾ ಸಮರ್ಥ ನಾಗಿದ್ದಾನೆ ಎಂದರು. ಅದನ್ನು ಕೇಳಿ ದಾನವರು ಆಶ್ಚರ್ಯವನ್ನೂ ಹೊಂದಿ ತಮ್ಮ ಮನೆಗೆ ಹೋದರು. ಕಚನು ಸಾವಿರವರ್ಷಕಾಲ ಶುಕ್ರಾಚಾರ್ಯರ ಬಳಿ ಸೇವಾ ಮಾಡಿ ವಿದ್ಯೆಯನ್ನು ಪಡೆದು ಅನುಜ್ಞೆಯನ್ನು ಹೊಂದಿ ಸ್ವರ್ಗಕ್ಕೆ ಹೋಗಲಿಕ್ಕೆ ಹೊರಟನು.

ಆ ಸಮಯದಲ್ಲಿ ದೇವಯಾನಿಯು ಬಂದು ನನ್ನನ್ನು ಮದುವೆ ಮಾಡಿಕೊಳ್ಳ ಬೇಕೆಂದು ತುಂಬಾ ಹೇಳಿಕೊಂಡಳು. ಆಗ ಕಚನು ಸುಂದರಿ! ನಿನ್ನ ತಂದೆಯು ನನಗೆ ಹೇಗೆ ಪೂಜ್ಯರೋ ಹಾಗೆಯೇ ನೀನೂ ನನಗೆ ಬಹುಮಾನಕ್ಕೆ ಅರ್ಹಳು. ನೀನು ನನಗೆ ಗುರುಪುತ್ರಿ. ಆದುದರಿಂದ ನೀನು ಈ ಮಾತನ್ನು ಹೇಳಬಾರದು ಎಂದನು. ಆಗ ದೇವಯಾನಿಯು 'ಕಚ! ನೀನು ನನಗೆ ಅತ್ಯಂತಪೂಜ್ಯನು. ನಿನ್ನನ್ನು ಅಸುರರು ಸಂಹಾರ ಮಾಡುವಾಗ ನಿನ್ನ ಮೇಲೆ ಬಹಳ ಪ್ರೀತಿಯುಂಟಾಗಿತ್ತು. ಆಗ ಆರಂಭಿಸಿ

ನಿನ್ನ ಮೇಲೆ ನನಗೆ ಇದ್ದ ಪ್ರೇಮವನ್ನು ಜ್ಞಾಪಿಸಿಕೊ. ನಿನ್ನ ಭಕ್ತಳಾದ ನನ್ನನ್ನು ಕೈಬಿಡಬಾರದು' ಎಂದಳು. ಕಚನು 'ದೇವಯಾನಿ! ಅಯೋಗ್ಯ ಕಾರ್ಯದಲ್ಲಿ ನೀನು ನನ್ನನ್ನು ಪ್ರೇರಿಸಬಾರದು. ಸುಂದರಿ! ಪ್ರಸನ್ನಳಾಗು. ನೀನು ನನಗೆ ಅತ್ಯಂತ ಪೂಜ್ಯಳು' ಎಂದನು. ಮತ್ತು ಸುಂದರಿ! ನೀನು ಯಾವ ಶುಕ್ರಾಚಾರ್ಯರ ಉದರದಲ್ಲಿ ವಾಸಿಸಿದ್ದಿಯೋ ಅದೇ ಉದರದಲ್ಲಿ ನಾನು ವಾಸಿಸಿರುವೆನು. ನೀನು ನನ್ನ ಸಹೋದರಿಯು. ನಾನು ಸುಖವಾಗಿ ವಾಸಮಾಡಿದೆನು. ನನಗೆ ಕೋಪವಿಲ್ಲ, ನಾನು ಹೋಗಿಬರುತ್ತೇನೆ. ನನಗೆ ಕ್ಷೇಮವನ್ನು ಬಯಸು. ಧರ್ಮಕ್ಕೆ ವಿರೋಧವಿಲ್ಲದ ರೀತಿಯಿಂದ ನನ್ನನ್ನು ಆದಾವ ಕಾಲದಲ್ಲಿ ಸ್ಮರಿಸು. ನಿತ್ಯವೂ ತಂದೆಯನ್ನು ಜಾಗ್ರತೆ ಯಿಂದ ಸೇವಿಸುತ್ತಾ ಇರು' ಎಂದನು.

ದೇವಯಾನಿಯು 'ಕಚ! ನಾನು ಧರ್ಮಕಾಮವಿಷಯದಲ್ಲಿ ನಾನು ಪ್ರಾರ್ಥಿಸಿ ಕೊಂಡರೂ ನಿರಾಕರಣೆ ಮಾಡಿದಿಯಾದ ಕಾರಣ ನಿನಗೆ ಅಭ್ಯಾಸ ಮಾಡಿದ ಈ ವಿದ್ಯೆಯು ಫಲಿಸದೇ ಹೋಗಲಿ' ಎಂದು ಶಾಪವನ್ನು ಕೊಟ್ಟಳು.

ಕಚನು 'ಗುರುಪುತ್ರಿಯೆಂಬ ಅಭಿಪ್ರಾಯದಿಂದ ಗುರುಗಳ ಅನುಜ್ಞೆಯಿಲ್ಲ ದಿರುವುದರಿಂದಲೂ ನಾನು ನಿನ್ನನ್ನು ನಿರಾಕರಣೆ ಮಾಡಿದೆನಲ್ಲದೆ ಮತ್ತೆ ಯಾವ ದೋಷದಿಂದಲೂ ಅಲ್ಲ. ನೀನು ಬೇಕಾದಂತೆ ಶಾಪವನ್ನು ಕೊಡು. ಧರ್ಮವನ್ನು ಹೇಳಿದ ನನ್ನನ್ನು ನೀನು ಕಾಮದಿಂದ ಶಪಿಸಿದಿ. ಧರ್ಮದಿಂದ ಅಲ್ಲ, ಆದುದರಿಂದ ನಿನ್ನ ಕಾಮವು ಸಿದ್ಧಿಸುವುದಿಲ್ಲ. ಅಂದರೆ ನಿನ್ನನ್ನು ಯಾವ ಋಷಿಪುತ್ರನೂ ಮದುವೆ ಮಾಡಿಕೊಳ್ಳಲಾರನು. ನನಗೆ ವಿದ್ಯೆಯು ಫಲಿಸದೆ ಇದ್ದರೂ ನಾನು ಯಾರಿಗೆ ಉಪದೇಶಿಸುವೆನೋ ಅವನಿಗೆ ಫಲಿಸುವುದು ಎಂದು ಹೇಳಿ ಸ್ವರ್ಗಕ್ಕೆ ಹೊರಟು ಹೋದನು. ಬಂದಿರುವ ಕಚನನ್ನು ನೋಡಿ ಇಂದ್ರಾದಿದೇವತೆಗಳು ಬೃಹಸ್ಪತ್ಯಾ ಚಾರ್ಯರನ್ನು ಸತ್ಕರಿಸಿ ಕಚನೊಡನೆ ನೀನು ನಮಗೆ ಹಿತಕಕವಾದ ಅದ್ಭುತವಾದ ಕರ್ಮವನ್ನು ಮಾಡಿದಿಯಾದ ಕಾರಣ ನಿನ್ನ ಕೀರ್ತಿಯು ಯಾವಾಗಲೂ ಇರುವುದು ಎಂದು ಹೇಳಿದರು.

ತರುವಾಯ ದೇವತೆಗಳು ಕಚನಿಂದ ಸಂಜೀವಿನೀ ವಿದ್ಯೆಯನ್ನು ಹೊಂದಿ ಕೃತಾರ್ಥರಾದರು.



# ಸತ್ಯಕಾಮನ ಕಥೆ [1]

ಜಬಾಲಾ ಎನ್ನುವವಳಿಗೆ ಸತ್ಯಕಾಮ ಎಂಬ ಮಗನಿದ್ದನು. ಸತ್ಯಕಾಮನು ತಾಯಿಯೊಡನೆ ನಾನು ಹೋಗಿ ಉಪನಯನ ಮಾಡಿಸಿಕೊಂಡು ಗುರುಕುಲವಾಸವನ್ನು ಮಾಡಿಕೊಂಡು ಬರುವೆನು. ನನ್ನ ಗೋತ್ರವು ಯಾವುದು ಹೇಳು ಎಂದು ಕೇಳಿದನು. ಅದಕ್ಕೆ ತಾಯಿಯು 'ಮಗು! ನಾನು ಯೌವನದಲ್ಲಿ ಪತಿಯಗೃಹದಲ್ಲಿ ಬಹಳ ಕಾರ್ಯದಲ್ಲಿ ಆಸಕ್ತಳಾಗಿದ್ದೆನು. ನಿನ್ನನ್ನು ಹಡೆದೆನು. ನಿನ್ನ ಗೋತ್ರವು ಯಾವುದು? ಎಂದು ನನಗೆ ತಿಳಿಯಲಾರದು. ನಾನು ಜಬಾಲಾ. ನೀನು ಸತ್ಯಕಾಮ. ಇಷ್ಟು ತಾನೇ ನನಗೆ ತಿಳಿಯುವುದು. ಇದನ್ನೇ ಯಾರಾದರೂ ದೊಡ್ಡವರ ಹತ್ತಿರ ಹೇಳು ಎಂದಳು.

ಸತ್ಯಕಾಮನು ಹಾರಿದ್ರುಮತ ಗೌತಮ ಎಂಬ ಋಷಿಗಳ ಬಳಿಗೆ ಹೋಗಿ ನಾನು ತಮ್ಮಲ್ಲಿ ಗುರುಕುಲವಾಸ ಮಾಡುವೆನು. ತಮ್ಮ ಶಿಷ್ಯನಾಗುವೆ ಎಂದನು. ಆಗ ಗೌತಮರು ಸೌಮ್ಯ ನಿನ್ನ ಗೋತ್ರವು ಯಾವುದು ಎಂದು ಕೇಳಿದರು. ಸತ್ಯಕಾಮನು ಪೂಜ್ಯರೇ ನನಗೆ ಗೋತ್ರವು ತಿಳಿಯದು. ನನ್ನ ತಾಯಿಯ ಹತ್ತಿರ ಕೇಳಿದ್ದಕ್ಕೆ ಅವಳೂ ಕೂಡ ಗೋತ್ರವು ತಿಳಿಯದು. ನನ್ನ ಹೆಸರು ಜಬಾಲಾ. ನಿನ್ನ ಹೆಸರು ಸತ್ಯಕಾಮ. ಇಷ್ಟೇ ಹೇಳು ಎಂದಳು' ಎಂದನು.

ಆದಕ್ಕೆ ಗೌತಮರು 'ಸರಿ. ಬ್ರಾಹ್ಮಣನಲ್ಲದಿದ್ದವನು ಈರೀತಿ ಸತ್ಯವನ್ನು ಹೇಳಲಾರನು. ಯಾರಾದರೂ ಕೇಳಿಕೊಂಡುಬಂದು ಯಾವುದಾದರೂ ಗೋತ್ರ ವನ್ನು ಹೇಳುತ್ತಿದ್ದನು. ನೀನು ಸತ್ಯವನ್ನು ಹೇಳಿದಿ. ಆದುದರಿಂದ ಬ್ರಾಹ್ಮಣನಾಗಿದ್ದಿ. ಸಮಿಧೆಯನ್ನು ತೆಗೆದುಕೊಂಡು ಬಾ. ನಿನಗೆ ಉಪನಯನವನ್ನು ಮಾಡುವೆನು' ಎಂದು ಹೇಳಿ ಸತ್ಯಕಾಮನಿಗೆ ಉಪನಯನವನ್ನು ಮಾಡಿದರು. ಆಮೇಲೆ ಕೃಶವಾಗಿರುವ ನಾಲ್ನೂರು ಗೋವುಗಳನ್ನು ಕೊಟ್ಟು ಇವುಗಳನ್ನು ಮೇಯಿಸುತ್ತಾ ಕಾಡಿಗೆ ಕರಕೊಂಡು ಹೋಗು. ಇವುಗಳು ಕರುಹಾಕಿ ಸಾವಿರವಾಗುವವರೆಗೆ ಬರಬೇಡ' ಎಂದರು. ಸತ್ಯಕಾಮನು ಹಾಗೆಯೇ ಆಗಲಿ ಎಂದು ಹೇಳಿ ಗೋವು ಗಳನ್ನು ಕರಕೊಂಡು ಬಹುದೂರ ಕಾಡಿಗೆ ಹೋಗಿ ಹಾಗೆಯೇ ಕಾಡಿನಲ್ಲಿಯೇ ಇದ್ದನು. ಬಹುವರ್ಷಗಳು ಕಳೆದವು. ಸಾವಿರ ಗೋವುಗಳಾದವು.

ಆಗ ವಾಯುದೇವರು ಒಂದು ಎತ್ತಿನಲ್ಲಿ ಪ್ರವಿಷ್ಟರಾಗಿ ಸತ್ಯಕಾಮ! ಎಂದು

1. ಛಾ.ಉಪ.ಅ.4. ಖಂ.4-9

ಕರೆದರು. ಸತ್ಯಕಾಮನು ಪೂಜ್ಯರೇ ಎಂದನು. ಆಗ ವಾಯುದೇವರು ಎತ್ತಿನೊಳಗಿದ್ದುಕೊಂಡೇ ಸತ್ಯಕಾಮ! ನಿನ್ನ ಗುರುಗಳ ವಚನದಂತೆ ನಾವು ಸಹಸ್ರವಾದೆವು. ನಮ್ಮನ್ನು ಗುರುಗಳ ಮನೆಗೆ ಕರಕೊಂಡು ಹೋಗು. ನಿನಗೆ ವಾಸುದೇವ ಎಂಬ ದೇವರ ಒಂದು ರೂಪವನ್ನು ಉಪದೇಶಿಸುವೆನು ಎಂದು ಹೇಳಿ ಉಪದೇಶ ಮಾಡಿದರು. ನಿನಗೆ ಅಗ್ನಿದೇವರು ದೇವರ ಇನ್ನೊಂದು ರೂಪವನ್ನು ಹೇಳುವರು ಎಂದರು.

ಮರುದಿನ ಸತ್ಯಕಾಮನು ಗುರುಗಳ ಮನೆಯ ಕಡೆಗೆ ದನಗಳನ್ನು ಕರಕೊಂಡು ಬಂದನು. ಮಧ್ಯೇಮಾರ್ಗದಲ್ಲಿ ಸಾಯಂಕಾಲವಾಯಿತು. ಅಲ್ಲಿಯೇ ದನಗಳನ್ನೆಲ್ಲ ನಿಲ್ಲಿಸಿ, ತಾನು ಸಂಧ್ಯಾವಂದನೆ ಮಾಡಿ ಅಗ್ನಿಕಾರ್ಯವನ್ನು ಮಾಡಿ ಅಗ್ನಿಯ ಸಮೀಪದಲ್ಲಿ ಕೂತುಕೊಂಡರು. ಆಗ ಅಗ್ನಿದೇವರು 'ಸತ್ಯಕಾಮ' ಎಂದು ಕರೆದು ದೇವರ ಸಂಕರ್ಷಣ ಎಂಬ ರೂಪವನ್ನು ಉಪದೇಶಿಸಿ, ನಿನಗೆ ಇನ್ನು ಒಂದು ಹಂಸವು ಉಪದೇಶ ಮಾಡುವುದು ಎಂದರು.

ಹಾಗೆಯೇ ಮರುದಿನ ದನಗಳನ್ನು ಕರಕೊಂಡು ಬಂದನು. ದಾರಿಯಲ್ಲಿ ಸಾಯಂಕಾಲವಾಗಲು ದನಗಳನ್ನು ನಿಲ್ಲಿಸಿ, ತಾನು ಅಗ್ನಿಕಾರ್ಯವನ್ನು ಮಾಡಿ ಕೂತುಕೊಂಡನು. ಆಗ ಹಂಸಪಕ್ಷಿಯ ರೂಪದಿಂದ ಬ್ರಹ್ಮದೇವರು ಬಂದು ಪ್ರದ್ಯುಮ್ನ ಎಂಬ ಪರಮಾತ್ಮನ ರೂಪವನ್ನು ಉಪದೇಶಿಸಿ, ನಿನಗೆ ನೀರಿನ ಕಾಗೆಯು ಉಪದೇಶಿಸುವುದು ಎಂದು ಹೇಳಿ ಹಾರಿಹೋದರು.

ಮರುದಿವಸವೂ ದನಗಳನ್ನು ಕರಕೊಂಡು ಬಂದರು. ದಾರಿಯಲ್ಲಿ ಸಾಯಂಕಾಲವಾಯಿತು. ದನಗಳನ್ನು ನಿಲ್ಲಿಸಿ ಅಗ್ನಿಕಾರ್ಯವನ್ನು ಮಾಡಿ ಕೂತುಕೊಂಡರು. ಆಗ ವರುಣದೇವರು ನೀರಿನ ಕಾಗೆಯರೂಪದಿಂದ ಬಂದು ಅನಿರುದ್ಧ ಎಂಬ ದೇವರ ರೂಪವನ್ನು ಉಪದೇಶಿಸಿದರು.

ಆಮೇಲೆ ಮರುದಿನ ಸತ್ಯಕಾಮನು ಗುರುಗಳ ಮನೆಗೆ ಬಂದನು. ಗುರುಗಳಿಗೆ ನಮಸ್ಕರಿಸಿದನು. ಗುರುಗಳು ಸತ್ಯಕಾಮ! ಬ್ರಹ್ಮಜ್ಞಾನಿಯಂತೆ ಕಾಣಿಸುವಿ. ಯಾರು ನಿನಗೆ ಉಪದೇಶಿಸಿದರು ಎಂದರು.

ಸತ್ಯಕಾಮನು ಮನುಷ್ಯರಿಂದ ಇತರರು ಎಂದರೆ ದೇವತೆಗಳು ಉಪದೇಶಿಸಿದರು. ಆದರೆ ನಾನು ಅವರನ್ನು ಗುರುಗಳನ್ನಾಗಿ ಸ್ವೀಕರಿಸಿಲ್ಲ. ಮಾತ್ರವಲ್ಲದೆ ಸ್ವಲ್ಪಸ್ವಲ್ಪ ಮಾತ್ರ ಉಪದೇಶಿಸಿದರು. ಸಂಪೂರ್ಣ ಅನುಗ್ರಹ ಮಾಡಿಲ್ಲ. ಅವರು

ಆಚಾರ್ಯ ಬುದ್ಧಿಯಿಂದ ಉಪದೇಶಿಸಿಲ್ಲ. ಆದುದರಿಂದ ಗುರುಗಳಾದ ತಾವೇ ನನಗೆ ಉಪದೇಶಿಸಬೇಕು. ತಮ್ಮಂತಹ ಗುರುಗಳ ಹತ್ತಿರ ಓದಿಕೊಂಡು ವಿದ್ಯೆಯೇ ಸ್ಥಿರವಾಗಿಯೂ ಸಫಲವಾಗಿಯೂ ಆಗುವುದು ಎಂದು ತಮ್ಮಂತ ದೊಡ್ಡವರ ಬಾಯಿಯಿಂದ ಕೇಳಿದ್ದೇನೆ. ಆದುದರಿಂದ ತಾವು ನನಗೆ ಉಪದೇಶಿಸಬೇಕು ಎಂದರು.

ಆಗ ಗೌತಮರು ನನಗಿಂತ ದೊಡ್ಡವರಾದ ದೇವತೆಗಳಿಂದ ಉಪದೇಶವನ್ನು ಹೊಂದಿದ್ದಿ. ಆದರಿಂದ ಒಂದು ಹಾನಿಯಿಲ್ಲ. ಎಂದು ಹೇಳಿ ತಾನೂ ಉಪದೇಶ ಮಾಡಿ ಅನುಗ್ರಹಿಸಿ ಮನೆಗೆ ಕಳುಹಿಸಿದನು.



## ಉಪಕೋಸಲನ ಕಥೆ [1]

ಉಪಕೋಸಲ ಎಂಬ ಬ್ರಹ್ಮಚಾರಿಯು ಸತ್ಯಕಾಮರ ಸಮೀಪದಲ್ಲಿ ಬಂದು ಗುರುಕುಲವಾಸ ಮಾಡುತ್ತಿದ್ದನು. ಅವರು ಹನ್ನೆರಡು ವರ್ಷಕಾಲ ಅಗ್ನಿಸೇವಾ ಮಾಡುತ್ತಿದ್ದನು. ಅಂದರೆ ಸತ್ಯಕಾಮರು ಯಾಗಮಾಡಲಿಕ್ಕೆ ಬೇಕಾದ ದಕ್ಷಿಣಾಗ್ನಿ ಗಾರ್ಹಪತ್ಯ ಆಹವನೀಯ ಎಂದು ಹೆಸರುಳ್ಳ ಮೂರು ಅಗ್ನಿಗಳನ್ನೂ ಬೇಕಾದ ಸಮಿಧೆ ಇತ್ಯಾದಿಗಳನ್ನು ಹಾಕುತ್ತಾ ಸೇವಿಸಿದರು.

ಸತ್ಯಕಾಮರು ಇತರ ಶಿಷ್ಯರಿಗೆಲ್ಲಾ ಬ್ರಹ್ಮೋಪದೇಶವನ್ನು ಮಾಡಿ ಅವರವರ ಮನೆಗೆ ಹೋಗಲಿಕ್ಕೆ ಆಜ್ಞಾಮಾಡಿದರು. ಆದರೆ ಉಪಕೋಸಲನಿಗೆ ಮಾತ್ರ ಉಪದೇಶವನ್ನೇ ಮಾಡಲಿಲ್ಲ.

ಇದನ್ನು ನೋಡಿ ಗುರುಪತ್ನಿಗೆ ಕರುಣೆಯುಂಟಾಯಿತು. ಗುರುಪತ್ನಿಯು ಗಂಡನಾದ ಸತ್ಯಕಾಮರೊಡನೆ 'ಪಾಪ ಈ ಬ್ರಹ್ಮಚಾರಿಯು ಬಹುಕಾಲ ನಿಮ್ಮ ಅಗ್ನಿಗಳ ಸೇವಾ ಮಾಡುತ್ತಾ ಇದ್ದಾನೆ. ಆ ಅಗ್ನಿಗಳೂ ನಿಮ್ಮೊಡನೆ ಈ ಬ್ರಹ್ಮಚಾರಿಗೆ ಉಪದೇಶ ಮಾಡಲು ಹೇಳಿಲ್ಲ. ನಾನಾದರೂ ಹೇಳುತ್ತೇನೆ. ಇವನಿಗೆ ಸ್ವಲ್ಪ ಉಪದೇಶ ಮಾಡಿರಿ' ಎಂದಳು. ಅದಕ್ಕೆ ಸತ್ಯಕಾಮರು ಒಂದು ಉತ್ತರವನ್ನು ಕೊಡದೆ ಮನೆಯನ್ನೇ ಬಿಟ್ಟು ಎಲ್ಲಿಯೋ ಹೊರಟುಹೋದರು.

ಇದರಿಂದ ಉಪಕೋಸಲನಿಗೆ ಮನಸ್ಸಿನಲ್ಲಿ ತುಂಬಾ ದುಃಖವಾಯಿತು. ತಾನು

1. ಛಾ.ಉಪ. ಅ.4. ಖಂ.10

ಊಟಮಾಡುವುದಿಲ್ಲವೆಂದು ಉಪವಾಸದಿಂದ ಕೂತುಕೊಂಡನು. ಆಗ ಗುರುಪತ್ನಿಯು 'ಬ್ರಹ್ಮಚಾರಿ! ಊಟಮಾಡಪ್ಪ! ಯಾಕೆ ಉಪವಾಸ ಮಾಡುವೆ' ಎಂದರು. ಅದಕ್ಕೆ ಉಪಕೋಸಲನು ನನ್ನಲ್ಲಿ ನಾನಾ ದುಃಖಗಳಿವೆ, ನಾನೂ ಊಟ ಮಾಡಲಾರೆನು ಎಂದರು.

ತರುವಾಯ ಅಗ್ನಿಗಳು ಎಲ್ಲಾ ಒಟ್ಟಿಗೆ ಸೇರಿಯೂ ಪ್ರತ್ಯೇಕ ಪ್ರತ್ಯೇಕವಾಗಿಯೂ ತಮ್ಮ ಅಂತರ್ಯಾಮಿಯಾದ ಪರಮಾತ್ಮನನ್ನು ವ್ಯಾಪ್ತನಾದ ಭಗವದ್ರೂಪವನ್ನೂ ಉಪದೇಶಿಸಿದರು. ಕೊನೆಗೆ ನಿನಗೆ ಇನ್ನು ಗುರುಗಳು ಉಪದೇಶಿಸುವರು ಎಂದರು.

ಆಮೇಲೆ ಸತ್ಯಕಾಮರು ಬಂದರು. ಉಪಕೋಸಲ! ಎಂದು ಕರೆದರು. ಪೂಜ್ಯರೇ ಎಂದು ಉಪಕೋಸಲನು ಪ್ರತ್ಯುತ್ತರವನ್ನು ಕೊಟ್ಟನು.

ಸತ್ಯಕಾಮರು ಉಪಕೋಸಲ! ನಿನ್ನ ಮುಖವು ಬ್ರಹ್ಮಜ್ಞಾನಿಯ ಮುಖದಂತೆ ಶೋಭಿಸುತ್ತದೆ. ಯಾರು ನಿನಗೆ ಉಪದೇಶಿಸಿದರು ಎಂದು ಕೇಳಿದರು.

ಅದಕ್ಕೆ ಉಪಕೋಸಲನು 'ಮತ್ತೆ ಯಾರು ಉಪದೇಶಿಸಬೇಕು? ಮನುಷ್ಯರೂ ಅಸುರರೂ ದೇವರನ್ನು ಅಪಲಾಪ ಮಾಡುವವರು. ಆದುದರಿಂದ ಅವರು ಉಪದೇಶಿಸಲಿಕ್ಕೆ ಶಕ್ತರಲ್ಲ. ದೇವತೆಗಳೇ ಉಪದೇಶಿಸಿದರು ಎಂದು ಅಗ್ನಿದೇವತೆಗಳು ಉಪದೇಶಿಸಿದ ವಿಷಯ ಹೇಳಿದರು.

ಸತ್ಯಕಾಮರು ಅವರು ಏನು ಉಪದೇಶಿಸಿದರು? ಹೇಳು ಎಂದರು. ಉಪಕೋಸಲನು ಅಗ್ನಿಗಳು ಉಪದೇಶಿಸಿದ್ದನ್ನೆಲ್ಲಾ ಹೇಳಿದನು. ಸತ್ಯಕಾಮರು ಸರಿ. ನಿಮಗೆ ಇನ್ನು ಉಪದೇಶ ಮಾಡುತ್ತೇನೆ ಎಂದು ಹೇಳಿ ಅವನಿಗೆ ಯೋಗ್ಯವಾದ ವಿಷಯವನ್ನು ಉಪದೇಶಿಸಿ ಅನುಗ್ರಹಮಾಡಿ ಕಳುಹಿಸಿಕೊಟ್ಟರು.



## ಮೃಕಂಡು ಋಷಿಗಳ ಕಥೆ [1]

ತರುವಾಯ ಮೃಗಶೃಂಗಮುನಿಗಳು ಮದುವೆಯಾಗಬೇಕೆಂದು ಇಚ್ಛಿಸಿದರು. ಉಚಥ್ಯರು ಕುತ್ಸರ ಮಗನಾದ ಮೃಗಶೃಂಗಮುನಿಗಳಿಗೆ ತನ್ನ ಮಗಳನ್ನು ಮದುವೆಮಾಡಿಕೊಡಲಿಕ್ಕೆ ಇಚ್ಛಿಸಿದರು. ಅನೇಕ ಬ್ರಾಹ್ಮಣರನ್ನು ಆಹ್ವಾನ ಮಾಡಿ ಶುಭಮುಹೂರ್ತದಲ್ಲಿ ವಿಧಿಪ್ರಕಾರವಾಗಿ ಮದುವೆಮಾಡಿದರು.

ಉಚಥ್ಯರ ಮಗಳಾದ ಸುವೃತ್ತೆಯ ವಿವಾಹೋತ್ಸವವನ್ನು ನೋಡಿ ಕಮಲಾ ವಿಮಲಾ ಸುರಸಾ ಎಂದು ಹೆಸರುಳ್ಳ ಅವಳ ಸಖಿಯರೂ 'ಈ ದಿನವೇ ನಮ್ಮ ಪ್ರಾಣಿಗ್ರಹಣವನ್ನು ಮಾಡಬೇಕು. ಇಲ್ಲದಿದ್ದರೆ ನಿಮಗೆ ಶಾಪವು ಬರುವುದು' ಎಂದು ಮೃಗಶೃಂಗಮುನಿಗಳೊಡನೆ ಹೇಳಿದರು. ಅವರ ಮಾತನ್ನು ಕೇಳಿ ಮೃಗಶೃಂಗ ಮುನಿಗಳು ಏಕಕಾಲದಲ್ಲಿ ಎಲ್ಲರನ್ನು ಮದುವೆಮಾಡಿಕೊಳ್ಳುವುದು ಸರಿಯೋ ಅಲ್ಲವೋ ಎಂದು ಯೋಚನೆ ಮಾಡಿದರು. ಆಗ ಋಷಿಗಳ ಮಧ್ಯದಲ್ಲಿ ವೇದವ್ಯಾಸ ದೇವರು 'ನೀನು ಇವರ ಪಾಣಿಗ್ರಹಣವನ್ನು ಮಾಡಿಕೊ. ಇದರಿಂದ ನಿನಗೆ ದೋಷವು ಬರಲಾರದು. ಪೂರ್ವದಲ್ಲಿ ಸೌಭರಿಋಷಿಯು ಒಂದೇ ದಿವಸದಲ್ಲಿ ಮಾಂಧಾತರಾಜನ ಐವತ್ತು ಜನ ಹೆಣ್ಣುಮಕ್ಕಳನ್ನು ಮದುವೆಯಾಗಿರುವನು. ಚಂದ್ರನು ಇಪ್ಪತ್ತೇಳು ಜನ ದಕ್ಷ ಪ್ರಜೇಶ್ವರರ ಹೆಣ್ಣುಮಕ್ಕಳನ್ನು ಮದುವೆಯಾಗಿರು ವನು' ಎಂದು ಹೇಳಿದರು. ಈರೀತಿಯಾಗಿ ವೇದವ್ಯಾಸದೇವರ ಮಾತನ್ನು ಕೇಳಿ ಮೃಗಶೃಂಗಮುನಿಗಳು ಕ್ರಮದಿಂದ ಆ ಮೂರು ಜನರನ್ನು ಮದುವೆಯಾದರು. ಮದುವೆಯಾದ ಮೇಲೆ ಬಂದಿರುವ ಮುನಿಗಳಿಗೆಲ್ಲಾ ಬಹುಮಾನ ಮಾಡಿದರು. ಅವರೆಲ್ಲರೂ ಆಶೀರ್ವಾದ ಮಾಡಿ ತಮ್ಮ ಆಶ್ರಮಗಳಿಗೆ ಹೋದರು.

ಮೃಗಶೃಂಗಮುನಿಗಳು ಶಾಸ್ತ್ರದಲ್ಲಿ ಹೇಳಿದ ರೀತಿಯಿಂದ ಮದುವೆಯಾಗಿ ಗೃಹಸ್ಥಧರ್ಮವನ್ನು ಅನುಷ್ಠಾನ ಮಾಡುತ್ತಿದ್ದರು. ಸುವೃತ್ತಾ ಕಮಲಾ ವಿಮಲಾ ಸುರಸಾ ಎಂಬ ನಾಲ್ಕು ಜನ ಪತ್ನಿಯರೂ ಪತಿವ್ರತೆಯರಾಗಿ ಇದ್ದುಕೊಂಡು ಪತಿಯ ಸೇವೆಯನ್ನು ಮಾಡುತ್ತಿದ್ದರು. ಮೃಗಶೃಂಗಮುನಿಗಳು ಅವರೊಡನೆ ಸುಖವಾಗಿ ಇದ್ದರು. ಕಾಲಕ್ರಮದಿಂದ ಸುವೃತ್ತೆಯು ಗರ್ಭಿಣಿಯಾಗಿ ಗಂಡುಕೂಸನ್ನು ಹಡೆ ದಳು. ತ್ರಿಕಾಲವನ್ನು ತಿಳಿದವರಾದ ಮೃಗಶೃಂಗಮುನಿಗಳು ಮುಂದಿನ ಕರ್ಮವನ್ನು ಅನುಸರಿಸಿ ಮಗನಿಗೆ ಮೃಕಂಡು ಎಂಬ ನಾಮಕರಣವನ್ನು ಮಾಡಿದರು. ಮೃಗಗಳು ಬಂದು ಮೃಕಂಡ ಋಷಿಗಳ ದೇಹದಲ್ಲಿ ತುರಿಸಿಕೊಳ್ಳುವುದಾದ ಕಾರಣವು ಮೃಕಂಡು ಎಂಬ ಹೆಸರನ್ನು ಇಟ್ಟರು. ಮೃಕಂಡು ಋಷಿಗಳು ಬೆಳೆದವರಾಗಿ ತಂದೆಯಿಂದ ಉಪನಯನವನ್ನು ಹೊಂದಿ ವೇದಾಧ್ಯಯನವನ್ನು ಮಾಡಿದರು. ಆಮೇಲೆ ಮುದ್ಗಲರ ಮಗಳಾದ ಮರುದ್ವತಿಯನ್ನು ಮದುವೆಯಾದರು.

ಕಮಲೆಯೂ ಗರ್ಭಿಣಿಯಾಗಿ ಉತ್ತಮನೆಂಬ ಮಗನನ್ನು ಹಡೆದಳು. ಅವನೂ ವೇದಾಧ್ಯಯನ ವನ್ನು ಮಾಡಿ ಕಣ್ವಋಷಿಗಳ ಮಗಳಾದ ಕಾಂತಾಲಕಾ ಎಂಬ ಹೆಣ್ಣನ್ನು ಮದುವೆಯಾದನು.

ವಿಮಲೆಯು ಸುಮತಿಯೆಂಬ ಮಗನನ್ನು ಹಡೆದಳು. ಸುಮತಿಯು ವೇದಾಧ್ಯಯನವನ್ನು ಮಾಡಿ ಸತ್ಯಾ ಎಂದು ಹೆಸರುಳ್ಳ ಕನ್ಯೆಯನ್ನು ಮದುವೆಯಾದನು.

ಸುರಸೆಯು ಸುವ್ರತ ಎಂದು ಹೆಸರುಳ್ಳ ಮಗನನ್ನು ಹಡೆದಳು. ಸುವ್ರತನು ವೇದಾದಿಗಳನ್ನು ಅಧ್ಯಯನ ಮಾಡಿ ಪೃಥು ಎಂಬುವನ ಮಗಳಾದ ಪ್ರಿಯಂವದೆಯನ್ನು ಮದುವೆಯಾದನು. ಮೃಗಶೃಂಗಮುನಿಗಳು ಎಲ್ಲರಿಂದ ಯಜ್ಞಗಳನ್ನು ಮಾಡಿಸಿದರು. ಅವರೆಲ್ಲರೂ ತಂದೆಯ ಸೇವೆಯನ್ನು ಮಾಡುತ್ತಾ ಇದ್ದರು. ಮೃಗಶೃಂಗಮುನಿಗಳು ಶುಭಲಕ್ಷಣವುಳ್ಳ ಸೊಸೆಯರಿಂದರೂ ಶಾಸ್ತ್ರಪಾರಂಗತರಾದ ಮಕ್ಕಳಿಂದಲೂ ಉತ್ತಮಗುಣವುಳ್ಳ ಹೆಂಡತಿಯರಿಂದಲೂ ಕೂಡಿಕೊಂಡು ಗೃಹಸ್ಥ ಧರ್ಮವನ್ನು ಅನುಷ್ಠಾನ ಮಾಡುತ್ತಿದ್ದರು. ಸುಮತಿಗೂ ಉತ್ತಮನಿಗೂ ಸುವ್ರತನಿಗೆ ಅನೇಕ ವೇದಶಾಸ್ತ್ರಪಾರಂಗತರಾದ ಅನೇಕ ಮಕ್ಕಳು ಹುಟ್ಟಿದರು. ತರುವಾಯ ಮೃಗಶೃಂಗ ಮುನಿಗಳು ಹೆಂಡತಿಯರಿಂದಲೂ ಸೊಸೆಯರಿಂದಲೂ ಮಕ್ಕಳಿಂದಲೂ ಮೊಮ್ಮಕ್ಕಳಿಂದಲೂ ಸಹಿತರಾಗಿ ಮಾಘಮಾಸದಲ್ಲಿ ಪ್ರಾತಃ ಸ್ನಾನವನ್ನು ಮಾಡುತ್ತಿದ್ದರು. ಈರೀತಿಯಾಗಿ ಸಂಸಾರಸೌಭಾಗ್ಯವನ್ನು ಅನುಭವಿಸಿ ಪತ್ನಿಯರನ್ನು ಮಕ್ಕಳಲ್ಲಿ ಒಪ್ಪಿಸಿ ತಪಸ್ಸನ್ನು ಮಾಡಲಿಕ್ಕೆ ತಪೋವನಕ್ಕೆ ಹೋದರು. ಅಲ್ಲಿ ತಪಸ್ಸನ್ನು ಮಾಡಿ ದೇಹವನ್ನು ಪರಿತ್ಯಜಿಸಿ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮದೇವರಿಂದ ಸತ್ಕೃತರಾಗಿ ತನ್ನ ತಪಸ್ಸಿನಿಂದ ಸಂಪಾದಿತಗಳಾದ ಅನೇಕ ಲೋಕಗಳನ್ನು ಅನುಭವಿಸುವವರಾಗಿ ಪ್ರಲಯವು ಮುಗಿದ ಮೇಲೆ ಶ್ವೇತವರಾಹ ಕಲ್ಪದಲ್ಲಿ ಋಭು ಎಂಬ ಹೆಸರಿನಿಂದ ಬ್ರಹ್ಮದೇವರ ಮಗನಾಗಿ ಹುಟ್ಟಿ ನಿದಾಘ ಎನ್ನುವವನಿಗೆ ಹಿತೋಪದೇಶವನ್ನು ಮಾಡಿದರು.

ಅವರ ನಾಲ್ಕು ಜನ ಹೆಂಡತಿಯರೂ ಉತ್ತಮ ಸದಾಚಾರವುಳ್ಳವರಾಗಿ ಅನೇಕ ವ್ರತಗಳನ್ನು ಮಾಡುತ್ತಾ ಮಕ್ಕಳ ಬಳಿಯಲ್ಲಿ ಇದ್ದರು. ಕೊನೆಯ ಸಮಯದಲ್ಲಿ ತಲೆಬೆಳ್ಳಗಾಗಿ ಬೆನ್ನು ಬಾಗಿ ಹಲ್ಲು ಉದುರಿಹೋಗಿ ಕಣ್ಣುಕಿವಿಗಳು ಹೋಗಿ ತುಂಬಾ ಮುದುಕಿಯರಾದರು. ಮೃಕಂಡುಮುನಿಗಳು ಅವರನ್ನು ನೋಡಿ ಪತ್ನಿಯಾದ ಮರುದ್ವತಿಯಲ್ಲಿ ಮಕ್ಕಳೂ ಹುಟ್ಟದೆ ಇರಲು 'ಕಾಶಿಯಲ್ಲಿ ರುದ್ರದೇವರು ಭಕ್ತರ ಕಿವಿಯಲ್ಲಿ ತಾರಕಮಂತ್ರವನ್ನು ಜಪಿಸುವರು. ಅಂತಹ ಕಾಶಿಗೆ ನಾನು ಪತ್ನಿಯಿಂದಲೂ ತಾಯಿಯರಿಂದಲೂ ಸಹಿತನಾಗಿ ಹೋಗುವೆನು' ಎಂದು ಯೋಚಿಸಿದರು. ತರುವಾಯ ಅವರಿದ್ದ ದೇಶದ ರಾಷ್ಟ್ರವರ್ಧನ ಎಂಬ ರಾಜನು ಕಾಶಿಯಾತ್ರೆಗಾಗಿ ಬಹುಸೈನಿಕರಿಂದ ಕೂಡಿಕೊಂಡು ಮೆಲ್ಲನೆ ಹೋದರು.

ಮೃಕಂಡು ಋಷಿಗಳೂ ಹೋದರು–'ಯಾರು ತಂದೆತಾಯಿಗಳಿಂದಲೂ ಬಿಡಲ್ಪಟ್ಟಿರುವವರೋ, ಯಾರಿಗೆ ಬೇರೆ ಗತಿಯಿಲ್ಲವೋ, ಯಾರು ಮುದಿತನದಿಂದ ಪೀಡಿತರಾಗಿರುವರೋ, ರೋಗಗಳಿಂದ ಪೀಡಿತರಾಗಿರುವರೋ, ಪದೇಪದೇ ಆಪತ್ತನ್ನು ಹೊಂದುವರೋ, ಸಂಸಾರದಲ್ಲಿ ಕಷ್ಟಪಡುವರೋ, ಯಾರಿಗೆ ಬಂಧು ಜನರ ಮಧ್ಯದಲ್ಲಿ ಅವಮಾನವಾಗುತ್ತಿರುವದೋ, ಅವರೆಲ್ಲರಿಗೂ ಕಾಶಿಯೇ ಗತಿಯು' ಇತ್ಯಾದಿರೀತಿಯಾಗಿ ತಾಯಿಯರ ಮಾರ್ಗಾಯಾಸ ಪರಿಹಾರಕ್ಕಾಗಿ ಹೇಳುತ್ತಾ ಮೃಕಂಡುಮುನಿಗಳು ತಾಯಿಯರಿಂದ ಕೂಡಿಕೊಂಡು ಮೆಲ್ಲನೆ ಕಾಶಿಗೆ ಹೋಗಿ ಸೇರಿದರು. ಮಣಿಕರ್ಣಿಯಲ್ಲಿ ಸಚೇಲಸ್ನಾನವನ್ನು ಮಾಡಿ ಸಂಧ್ಯಾ ವಂದನಾದಿ ಗಳನ್ನು ಮಾಡಿದರು. ದೇವರ್ಷಿಪಿತೃಗಳಿಗೆ ತರ್ಪಣವನ್ನು ಮಾಡಿದರು. ಅಲ್ಲಿರುವವರಿಗೆ ವೈಭವದಿಂದ ಭೋಜನ ಮಾಡಿಸಿದರು. ಢುಂಢಿವಿನಾಯಕನಿಗೆ ಸಿಂಧೂರವನ್ನು ಹಚ್ಚಿದರು. ಮೋದಕಗಳನ್ನು ಸಮರ್ಪಿಸಿದರು. ಕ್ಷೇತ್ರದೊಳಗೆ ಪ್ರವೇಶಿಸಿದರು. ಎಲ್ಲಾ ಆವರಣ ದೇವತೆಗಳನ್ನು ಪೂಜಿಸಿದರು.

ತರುವಾಯ ವಿಶ್ವೇಶ್ವರನನ್ನು ನಮಸ್ಕರಿಸಿ ಸ್ತೋತ್ರಮಾಡಿ ವಿಧಿಪ್ರಕಾರವಾಗಿ ತಾಯಿಯರಿಂದ ಸಹಿತರಾಗಿ ಕ್ಷೇತ್ರ ಉಪವಾಸ ಮಾಡಿದರು. ವಿಶ್ವನಾಥ ಸನ್ನಿಧಾನ ದಲ್ಲಿ ರಾತ್ರಿಯಲ್ಲಿ ಜಾಗರವನ್ನು ಮಾಡಿ ಬೆಳಿಗ್ಗೆ ಸ್ನಾನ ಮಾಡಿ ಮಣಿಕರ್ಣಿಯಲ್ಲಿ ಸ್ನಾನಮಾಡಿ ಆಹ್ನಿಕವನ್ನು ಮಾಡಿ ವೇದವೇದಾಂಗ ಶಾಸ್ತ್ರಪಾರಂಗತರಾದ ಬ್ರಾಹ್ಮಣರಿಂದ ಕೂಡಿಕೊಂಡು ಸರ್ವಸಿದ್ಧಿಪ್ರದವಾದ ತನ್ನ ಹೆಸರಿನಿಂದ ಪ್ರಸಿದ್ಧವಾದ ಲಿಂಗವನ್ನು ಪ್ರತಿಷ್ಠಾ ಮಾಡಿದರು. ತರುವಾಯ ಅವರ ತಾಯಿಯರೂ ತಮ್ಮ ಹೆಸರಿನಿಂದ ಪ್ರಸಿದ್ಧಗಳಾದ ಲಿಂಗಗಳನ್ನು ಪ್ರತಿಷ್ಠಾ ಮಾಡಿದರು. ಢುಂಢಿವಿನಾಯಕನ ಮುಂಭಾಗದಲ್ಲಿ ಪ್ರತಿಷ್ಠಿಸಿದ ಮೃಕಂಡ್ವೀಶ್ವರನ ದರ್ಶನದಿಂದ ಸರ್ವಕಾರ್ಯಗಳೂ ಸಿದ್ಧಿಸುವುವು. ಆ ಲಿಂಗದ ಮುಂದೆ ಇರುವ ಸುವೃತ್ತೇಶ್ವರನ ದರ್ಶನದಿಂದ ವಿಘ್ನಪರಿಹಾರಕವಾಗುವುದು. ಅದರ ಪೂರ್ವದಲ್ಲಿ ಕಮಲೆಯು ಪ್ರತಿಷ್ಠಾಮಾಡಿದ ಲಿಂಗದ ದರ್ಶನದಿಂದ ಸರ್ವಾಭೀಷ್ಟವನ್ನೂ ಹೊಂದುವನು. ದೇಹಲೀವಿಘ್ನರಾಜನ ಸಮೀಪದಲ್ಲಿರುವ ವಿಮಲೇಶ್ವರನ ದರ್ಶನದಿಂದ ಜ್ಞಾನವನ್ನು ಹೊಂದುವನು. ಅದರ ಈಶಾನ್ಯದಿಕ್ಕಿನಲ್ಲಿ ಇರುವ ಸುರಸೇಶ್ವರನ ದರ್ಶನದಿಂದ ಸುರಸಾಮ್ರಾಜ್ಯವನ್ನು ಹೊಂದುವನು. ಮಣಿಕರ್ಣಿಯು ಪಶ್ಚಿಮದಲ್ಲಿ ಮರುದ್ವತಿಯಾದ ಪೂಜಿತವಾದ ಲಿಂಗವನ್ನು ನೋಡಿ ಕ್ರಮದಿಂದ ಪುನಃ ಹುಟ್ಟಲಾರನು.

ಈರೀತಿಯಾಗಿ ಕಾಶಿಯಲ್ಲಿ ಲಿಂಗಗಳನ್ನು ಪ್ರತಿಷ್ಠಾಮಾಡಿ ಒಂದು ವರ್ಷ

ಅಲ್ಲಿಯೇ ವಾಸಮಾಡಿದರು. ಒಂದು ವರ್ಷವೂ ಪ್ರತಿದಿನವೂ ತೀರ್ಥಯಾತ್ರೆಯನ್ನು ಮಾಡಿದರು. ಒಂದುದಿನ ಮಣಿಕರ್ಣಿಯಲ್ಲಿ ಮಾಧ್ಯಂದಿನ ಸ್ನಾನವನ್ನು ಮಾಡಿ ಮೃಕಂಡು ಋಷಿಗಳ ತಾಯಿಯರು ಶಿವಾಲಯಕ್ಕೆ ಪ್ರದಕ್ಷಿಣೆ ಬಂದು, ಶ್ರಮದಿಂದ ಬಿದ್ದುಬಿಟ್ಟರು. ಕರುಣಾಶೀಲರಾದ ರುದ್ರದೇವರು ಬೇಗನೇ ಬಂದು ಕೈಗಳಿಂದ ಅವರ ತಲೆಯನ್ನು ಎತ್ತಿ ಅವರ ಕಿವಿಯಲ್ಲಿ ತಾರಕಮಂತ್ರವನ್ನು ಜಪಿಸಿದರು. ತರುವಾಯ ಮೃಕಂಡುಮುನಿಗಳು ಮೃತರಾದ ತಾಯಿಯರಿಗೆ ಉತ್ತರಕ್ರಿಯೆಯನ್ನು ಮಾಡಿ ಕಾಶಿಯಲ್ಲಿಯೇ ಬಹುಕಾಲ ವಾಸಮಾಡಿದರು.



## ಮಾರ್ಕಂಡೇಯರು [1]

ಪೂರ್ವದಲ್ಲಿ ಮೃಕಂಡು ಎಂಬ ಋಷಿಗಳು ಇದ್ದರು. ಅವರ ಮಗನೇ ಮಾರ್ಕಂಡೇಯರು. ಸರಿಯಾದ ವಯಸ್ಸಿನಲ್ಲಿ ಉಪನಯನವಾಗಿತ್ತು. ಅವರು ಬ್ರಹ್ಮಚರ್ಯವ್ರತವುಳ್ಳವರಾಗಿ ಗುರುಗಳಲ್ಲಿ ಹೋಗಿ ಅಧ್ಯಯನ ಮಾಡುತ್ತಿದ್ದರು. ಎರಡು ಹೊತ್ತು ಭಿಕ್ಷಾ ಬೇಡಿಕೊಂಡು ಬಂದು ಗುರುಗಳಿಗೆ ಒಪ್ಪಿಸುವರು. ಗುರುಗಳು ಆಜ್ಞಾ ಕೊಟ್ಟರೆ ಊಟ ಮಾಡುವರು. ಇಲ್ಲದಿದ್ದರೆ ಊಟ ಮಾಡಲಾರರು. ಹೀಗೆಯೇ ಬಹುಕಾಲ ಇದ್ದರು. ಭಗವಂತನನ್ನು ತಪಸ್ಸು ಮಾಡುತ್ತಿದ್ದರು. ಹೀಗೆಯೇ ತಪಸ್ಸು ಮಾಡುತ್ತಾ ಆರು ಮನ್ವಂತರ ಕಾಲವು ಕಳೆದುಹೋಯಿತು.

ಏಳನೇ ಮನ್ವಂತರದಲ್ಲಿ ಇಂದ್ರದೇವರು ಮಾರ್ಕಂಡೇಯರು ತಪಸ್ಸು ಮಾಡುವುದನ್ನು ನೋಡಿ ಅವರ ಕೀರ್ತಿಗಾಗಿ ತಪಸ್ಸಿಗೆ ವಿಘ್ನಮಾಡಲಿಕ್ಕೆ ಕಾಮನಿಗೆ ಆಜ್ಞಾಪಿಸಿದರು. ಕಾಮನು ವಸಂತನೇ ಮೊದಲಾದ ತನ್ನ ಸಹಾಯಕರನ್ನು ಕರೆದುಕೊಂಡು ಮಾರ್ಕಂಡೇಯರ ಆಶ್ರಮಕ್ಕೆ ಹೋದರು. ಹಿಮವತ್ಪರ್ವತದ ಉತ್ತರ ಪಾರ್ಶ್ವದಲ್ಲಿ ಅವರ ಆಶ್ರಮ. ಅಲ್ಲಿ ಪುಷ್ಪಭದ್ರಾ ಎಂಬ ನದಿಯು ಹರಿಯುವುದು. ಚಿತ್ರಾ ಎಂಬ ಶಿಲೆಯಿರುವುದು. ಅಲ್ಲಿಗೆ ಕಾಮನು ಹೋದನು. ವಸಂತನು ವೃಕ್ಷಗಳಲ್ಲಿ ಪುಷ್ಪಗಳೆಲ್ಲಾ ಉಂಟುಮಾಡಿದನು. ಅಪ್ಸರ ಸ್ತ್ರೀಯರು ಎಲ್ಲರೂ ಹಾಡುಹೇಳಿದರು. ವಾದ್ಯ ಬಾರಿಸಿದರು. ನರ್ತನ ಮಾಡಿದರು. ಪುಂಜಕಸ್ಥಲೀ ಎಂಬ ಅಪ್ಸರಸ್ತ್ರೀಯು ತೆಳ್ಳಗೆ ಇರುವ ಸೀರೆಯನ್ನು ಉಟ್ಟುಕೊಂಡು ಚೆಂಡಿನಿಂದ ಆಡುತ್ತಾ

1. ಮ.ಭಾ. ವ.ಪ. ಅ.188, 189. ಭಾಗ. XII ಅ. 7-9

ಮಾರ್ಕಂಡೇಯರ ಎದುರಾಗಿ ಹೋದಳು. ಆಗ ಗಾಳಿಬಂದು ಆ ವಸ್ತ್ರವೂ ಬಿಚ್ಚಿ ಹಾರಿಹೋಯಿತು. ಇದನ್ನು ನೋಡಿ ಮನ್ಮಥನು ಮಾರ್ಕಂಡೇಯರು ತನ್ನ ವಶರಾಗುವರೆಂದು ಪುಷ್ಪಬಾಣಗಳನ್ನು ಬಿಟ್ಟನು. ಆದರೆ ಎಲ್ಲರೂ ವ್ಯರ್ಥವಾಯಿತು. ಚಿಕ್ಕ ಹುಡುಗರು ಮಲಗಿದ ಹಾವನ್ನು ಎಬ್ಬಿಸಿ ಹೆದರಿ ಓಡಿಹೋಗುವಂತೆ ಎಲ್ಲರೂ ಆ ಮಾರ್ಕಂಡೇಯರ ತೇಜಸ್ಸಿನಿಂದ ಓಡಿಹೋಗಿ ಇಂದ್ರದೇವರ ಹತ್ತಿರ ಹೋಗಿ ತಿಳಿಸಿದರು. ಇಂದ್ರದೇವರು ಇದನ್ನು ಕೇಳಿ ತುಂಬಾ ಆಶ್ಚರ್ಯವನ್ನು ಹೊಂದಿದರು.

ಹೀಗೆಯೇ ಮಾರ್ಕಂಡೇಯರು ತಪಸ್ಸು ಮಾಡುತ್ತಿರುವಾಗ ನರನಾರಾಯಣರು ಅನುಗ್ರಹಮಾಡಲಿಕ್ಕೆ ಬಂದರು. ಮಾರ್ಕಂಡೇಯರು ಅವರನ್ನು ನೋಡಿ ನಮಸ್ಕಾರಮಾಡಿ ಸ್ತೋತ್ರಮಾಡಿದರು. ನಾರಾಯಣದೇವರು ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದರು. ಆಗ ಮಾರ್ಕಂಡೇಯರು ತಮ್ಮ ದರ್ಶನವನ್ನು ಕೊಟ್ಟದ್ದೇ ವರವಾಯಿತು. ಆದರೂ ನಿಮ್ಮ ಅಚಿಂತ್ಯಮಹಿಮೆಯನ್ನು ನೋಡಬೇಕೆಂದು ಆಸೆಯಿದೆ ಎಂದರು. ಆಗ ನಾರಾಯಣದೇವರು ಮಂದಹಾಸ ಉಳ್ಳವರಾಗಿ ಹಾಗೆಯೇ ಆಗಲಿ ಎಂದು ಹೇಳಿ ಹೊರಟುಹೋದರು.

ಮಾರ್ಕಂಡೇಯರು ಭಗವಂತನಲ್ಲಿ ಧ್ಯಾನ ಮಾಡುತ್ತಾ ಇದ್ದರು. ಕೆಲವು ಸಮಯ ಭಕ್ತಿಯಿಂದ ಭಗವಂತನ ಪೂಜೆಯನ್ನು ಮರೆತು ಬಿಡುವರು. ಈರೀತಿಯಾಗಿ ಇರುವಾಗ ಸಂಧ್ಯಾವಂದನೆ ಮಾಡುತ್ತಾ ಇರುವಾಗ ದೊಡ್ಡಗಾಳಿಯು ಬಂದಿತು. ಭಯಂಕರವಾಗಿ ಶಬ್ದವನ್ನು ಮಾಡುತ್ತಾ ಗಾಳಿ ಬರಲು ಮೇಘಗಳು ಬಂದವು. ಮಿಂಚು ಬಂದಿತು. ಮೇಘಗರ್ಜನೆಯುಂಟಾಯಿತು. ಮೋಡ ಮಳೆಯುಂಟಾಯಿತು. ನಾಲ್ಕು ಸಮುದ್ರಗಳೂ ಉಕ್ಕಿ ಬಂದವು. ಭೂಮಿಯು ನೀರಿನಿಂದ ಮುಳುಗಿತು. ಮೂರುಲೋಕಗಳೂ ಮುಳುಗಿದವು. ಕತ್ತಲೆಯು ತುಂಬಿತು. ಆ ನೀರಿನಲ್ಲಿ ಮಾರ್ಕಂಡೇಯರು ಮುಳುಗುತ್ತಾ ತೇಲುತ್ತಾ ಹೋದರು. ಅಲ್ಲಲ್ಲಿ ಮೀನು ಇತ್ಯಾದಿ ನೀರಿನ ಪ್ರಾಣಿಗಳು ಕಚ್ಚುತ್ತಿದ್ದವು. ಹಸಿವೆ ದಾಹ ಸುಖ ದುಃಖ ಇವುಗಳನ್ನೆಲ್ಲಾ ಅನುಭವಿಸುತ್ತಾ ಅನೇಕ ಸಾವಿರ ವರ್ಷಗಳನ್ನು ಕಳೆದರು.

ಒಂದು ದಿವಸ ಅವರು ಸಂಚರಿಸುತ್ತಾ ಒಂದು ಸ್ಥಳಲ್ಲಿ ಒಂದು ಆಲದ ಗಿಡವನ್ನು ನೋಡಿದರು. ಅದರ ಪೂರ್ವೋತ್ತರ ಕೊಂಬೆಯಲ್ಲಿ ಒಂದು ಎಲೆಯಲ್ಲಿ ಮಲಗಿರುವ ಸರ್ವಾಂಗಸುಂದರವಾದ ಎರಡು ಕೈಗಳಿಂದ ಕಾಲನ್ನು ಹಿಡಿದುಕೊಂಡು ಬಾಯಿಯಲ್ಲಿ ಇಟ್ಟುಕೊಂಡಿರುವ ಒಂದು ಶಿಶುವನ್ನು ನೋಡಿದರು. ಆ ಮಗುವನ್ನು ನೋಡಿ ಮಾರ್ಕಂಡೇಯರು ಅತ್ಯಂತ ಆಶ್ಚರ್ಯವುಳ್ಳವರಾಗಿ ಆ ಮಗುವನ್ನು

ಯಾರೆಂದು ಕೇಳುವುದಕ್ಕಾಗಿ ಹತ್ತಿರ ಹೋದರು. ಅಷ್ಟರಲ್ಲಿ ಆ ಮಗುವಿನ ಶ್ವಾಸಗಾಳಿಯಿಂದ ಮೂಗಿನ ದ್ವಾರದಿಂದ ಒಂದು ಸೊಳ್ಳೆಯಂತೆ ಮಗುವಿನ ಹೊಟ್ಟೆಯೊಳಗೆ ಪ್ರವೇಶಿಸಿದರು. ಅಲ್ಲಿ ಸಮಸ್ತ ಜಗತ್ತನ್ನೂ ತನ್ನ ಆಶ್ರಮವನ್ನೂ ಪುಷ್ಪಭದ್ರಾ ನದಿಯನ್ನೂ ಋಷಿಗಳನ್ನೂ ನೋಡಿದರು. ಆಶ್ಚರ್ಯಪಟ್ಟರು. ಆಮೇಲೆ ಮಗುವು ಶ್ವಾಸಬಿಡುವಾಗ ಮಾರ್ಕಂಡೇಯರು ಹೊರಗೆ ಬಂದು ಸಮುದಲ್ಲಿ ಬಿದ್ದರು. ಮಂದಹಾಸ ಮಾಡುತ್ತಾ ಇರುವ ಆ ಮಗುವನ್ನು ನೋಡಿದರು. ತಾನು ಧ್ಯಾನಮಾಡುತ್ತಾ ಇದ್ದ ಭಗವಂತನೇ ಶಿಶುವು ಎಂದು ತಿಳಿದು ಆ ಭಗವಂತನನ್ನು ಆಲಿಂಗನ ಮಾಡಬೇಕೆಂದು ಹತ್ತಿರ ಹೋದರು. ಆಗಲೇ ಪರಮಾತ್ಮನು ಮರೆ ಯಾದನು. ಆಗಲೇ ಆಲದ ಗಿಡವೂ ಆ ಸಮುದ್ರ ನೀರೂ ಎಲ್ಲವೂ ಮರೆಯಾದವು. ತಾನು ಪೂರ್ವದಂತೆಯೇ ತನ್ನ ಆಶ್ರಮದಲ್ಲಿ ಕೂತಿದ್ದರು.

ಮಾರ್ಕಂಡೇಯರು ಇದು ಭಗವಂತನ ಅಚಿಂತ್ಯಶಕ್ತಿಯೆಂದು ತಿಳಿದು ಭಗವಂತನನ್ನೇ ಮರೆಹೊಂದಿದರು. ಆ ಸಂದರ್ಭದಲ್ಲಿ ರುದ್ರದೇವರು ಪಾರ್ವತಿ ಯಿಂದ ಸಹಿತರಾಗಿ ತನ್ನ ಗಣಗಳಿಂದ ಕೂಡಿಕೊಂಡು ಹೋಗುತ್ತಾ ಇದ್ದರು. ಆಗ ಪಾರ್ವತೀದೇವಿಯು ರುದ್ರದೇವರೊಡನೆ ಮಾರ್ಕಂಡೇಯರಿಗೆ ವರವನ್ನು ಕೊಡು ವಂತೆ ಹೇಳಿದರು. ರುದ್ರದೇವರು ಯೋಗಸಾಮರ್ಥ್ಯದಿಂದ ಧ್ಯಾನ ಮಾಡುತ್ತಿದ್ದ ಮಾರ್ಕಂಡೇಯರ ಹೃದಯವನ್ನು ಪ್ರವೇಶಿಸಿದರು. ಕೂಡಲೇ ಮಾರ್ಕಂಡೇಯರು ಧ್ಯಾನವನ್ನು ಬಿಟ್ಟು ಎದ್ದು ರುದ್ರದೇವರಿಗೆ ನಮಸ್ಕಾರ ಮಾಡಿ ಎಲ್ಲರಿಗೂ ಸ್ವಾಗತೋಪ ಚಾರವನ್ನು ಮಾಡಿದರು. ರುದ್ರದೇವರನ್ನು ಸ್ತೋತ್ರಮಾಡಿದರು. ರುದ್ರದೇವರು ಬೇಕಾದ ವರಗಳನ್ನು ಕೇಳಿಕೊಳ್ಳಲಿಕ್ಕೆ ಹೇಳಿದರು. ಅದಕ್ಕೆ ಮಾರ್ಕಂಡೇಯರು ಭಗವಂತನಲ್ಲಿಯೂ ಭಗವದ್ಭಕ್ತರಲ್ಲಿಯೂ ತಮ್ಮಲ್ಲಿಯೂ ಭಕ್ತಿ ಉಂಟಾಗುವಂತೆ ಅನುಗ್ರಹಿಸಬೇಕೆಂದರು. ರುದ್ರದೇವರು ಮಾರ್ಕಂಡೇಯ ರೊಡನೆ ನಿನ್ನ ಅಭೀಷ್ಟವೆಲ್ಲಾ ಸಿದ್ಧಿಸುತ್ತದೆ. ನೀನು ಪರಮಾತ್ಮನಲ್ಲಿ ಭಕ್ತನಾಗಿಯೇ ಇದ್ದು, ಒಂದು ಕಲ್ಪ ಪರ್ಯಂತ ನಿನ್ನ ಕೀರ್ತಿಯಿರುವುದು. ನಿನಗೆ ಜರಾ ಮರಣ ಬರಲಾರದು. ತ್ರಿಕಾಲಜ್ಞಾನವೂ ಉಂಟಾಗುವುದು. ಪುರಾಣ ಪ್ರವರ್ತಕ ಆಚಾರ್ಯನಾಗುವಿ ಎಂದು ವರಕೊಟ್ಟು ಹೊರಟುಹೋದರು. ಮಾರ್ಕಂಡೇಯರು ಸಂತೋಷದಿಂದ ಚಿರಂಜೀವಿಯಾಗಿ ಸಂಚರಿಸುತ್ತಾ ಇದ್ದರು.



# ಮಾರ್ಕಂಡೇಯರ ಕಥೆ [1]

ಮಕ್ಕಳಿಲ್ಲದೆ ಇದ್ದ ಮೃಕಂಡು ಋಷಿಗಳು ಪತ್ನಿಯಿಂದ ಸಹಿತರಾಗಿ ತಪಸ್ಸನ್ನು ಮಾಡಿ ರುದ್ರದೇವರನ್ನು ಸಂತೋಷಪಡಿಸಿದರು. ರುದ್ರದೇವರು ಸಂತುಷ್ಟರಾಗಿ ಪತ್ನಿಯಿಂದ ಸಹಿತರಾದ ಮೃಕಂಡು ಋಷಿಗಳೊಡನೆ ಬೇಕಾದ ವರಗಳನ್ನು ಕೇಳುವಂತೆ ಹೇಳಿದರು. ಆಗ ಮೃಕಂಡು ಋಷಿಗಳು 'ನನಗೆ ಮಕ್ಕಳಿಲ್ಲ, ತಮ್ಮ ಅನುಗ್ರಹದಿಂದ ಪುತ್ರನನ್ನು ಅಪೇಕ್ಷಿಸುವೆನು' ಎಂದರು. ಅದಕ್ಕೆ ರುದ್ರದೇವರು 'ಗುಣಹೀನನಾದ ಬಹುಕಾಲ ಬದುಕುವ ಮಗನನ್ನು ಅಪೇಕ್ಷಿಸುವಿಯಾ? ಗುಣವಂತನಾದ ಸರ್ವಜ್ಞನಾದ ಹದಿನಾರು ವರ್ಷದ ಮಗನನ್ನು ಬಯಸುವಿಯಾ?' ಎಂದು ಕೇಳಿದರು. ಮೃಕಂಡು ಋಷಿಗಳು 'ಗುಣಹೀನನಾದ ಮಗನನ್ನು ಅಪೇಕ್ಷಿಸುವುದಿಲ್ಲ. ಅಲ್ಪಾಯುಷ್ಯವುಳ್ಳವನಾಗಿದ್ದರೂ ಸರ್ವಜ್ಞನಾದ ಮಗನೇ ಇರಲಿ' ಎಂದು ಹೇಳಿದರು.

ಆಗ ರುದ್ರದೇವರು 'ನಿನಗೆ ಹದಿನಾರು ವರ್ಷ ಆಯುಷ್ಯವುಳ್ಳ ಧರ್ಮಿಷ್ಠನಾದ ಸರ್ವಜ್ಞನಾದ ಗುಣವಂತನಾದ ಕೀರ್ತಿವಂತನಾದ ಮಗನು ಹುಟ್ಟುವನು' ಎಂದು ವರವನ್ನು ಕೊಟ್ಟು ಹೊರಟುಹೋದರು. ಮೃಕುಂಡ ಋಷಿಗಳೂ ವರವನ್ನು ಪಡೆಯುವವರಾಗಿ ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ತನ್ನ ಆಶ್ರಮವನ್ನು ಹೊಂದಿದರು. ಅವರ ಪತ್ನಿಯಾದ ಮರುದ್ವತಿಯು ಗರ್ಭಿಣಿಯಾದಳು. ಕಾಲಕ್ರಮದಿಂದ ಅವಳಲ್ಲಿ ಸೂರ್ಯನಂತೆ ಪ್ರಕಾಶಮಾನನಾದ ಮಗನು ಹುಟ್ಟಿದನು. ಆ ಸಮಯದಲ್ಲಿ ದೇವಲೋಕದ ನಗಾರಿಯನ್ನು ಬಡಿದರು. ಮಂಗಲಕರವಾದ ಮಾತು ಎಲ್ಲಾ ಸ್ಥಳದಲ್ಲಿಯೂ ಕೇಳಿಸಿತು. ತಿಲೋತ್ತಮೆಯೇ ಮೊದಲಾದ ಅಪ್ಸರಸ್ತ್ರೀಯರೂ ದೇವೇಂದ್ರನೇ ಮೊದಲಾದ ದೇವತೆಗಳೂ ಅನೇಕ ಋಷಿಗಳೂ ವೇದವ್ಯಾಸ ದೇವರೂ ಅಲ್ಲಿಗೆ ಬಂದರು. ವೇದವ್ಯಾಸದೇವರೇ ಅವರಿಗೆ ಜಾತಕರ್ಮವನ್ನು ಮಾಡಿದರು. ತರುವಾಯ ಮೃಕುಂಡುಮುನಿಗಳು ಹನ್ನೊಂದನೇ ದಿನದಲ್ಲಿ ವೇದೋಕ್ತನಾನಾ ಮಂತ್ರಗಳಿಂದ ಆಶೀರ್ವಾದವನ್ನು ಮಾಡಿ ಮಾರ್ಕಂಡೇಯ ಎಂದು ನಾಮಕರಣವನ್ನು ಮಾಡಿದರು. 'ಮಗುವಿಗೆ ಏನು ರೂಪ! ಏನು ತೇಜಸ್ಸು! ಏನು ಮರುದ್ವತಿಯ ಭಾಗ್ಯವು!' ಎಂದು ಹೇಳುತ್ತಾ ಊರಿನ ಜನರು ಸಂತೋಷಪಟ್ಟರು. ಎಲ್ಲಾ ಸಂಸ್ಕಾರಗಳನ್ನು ಚೆನ್ನಾಗಿ ಮಾಡಿ ಐದನೇ ವರ್ಷದಲ್ಲಿಯೇ

---

1. ಮ.ಭಾ.ವ.ಪ.ಅ-130. (ಪು.ನಾ.ಚೂ) ಬೃ.ಸ್ತೋ.ರ-54. ಪುಟ. 127

ಉಪನಯನವನ್ನು ಮಾಡಿದರು. ವೇದಾಧ್ಯಯನ ಮಾಡಿಸಿದರು. ಮಾರ್ಕಂಡೇಯರು ಸಕಲವಿದ್ಯೆ ಯನ್ನು ಹೊಂದಿದರು. ವಿನಯಾದಿಗುಣಗಳುಳ್ಳವರಾಗಿದ್ದರು. ಭಿಕ್ಷಾನ್ನವನ್ನು ಭೋಜನ ಮಾಡುತ್ತಿದ್ದರು. ತಂದೆತಾಯಿಗಳ ಸೇವೆಯನ್ನು ಮಾಡುತ್ತಿದ್ದರು. ಮಾರ್ಕಂಡೇಯರಿಗೆ ಹದಿನಾರನೇ ವರ್ಷವು ಬರಲು ಮೃಕಂಡಋಷಿಗಳು ಶೋಕದಿಂದ ವಿಲಾಪವನ್ನು ಮಾಡಿದರು. ಮಾರ್ಕಂಡೇಯರು ಅಳುತ್ತಿದ್ದ ದುಃಖದಿಂದ ಇದ್ದ ತಂದೆಯನ್ನು ನೋಡಿ 'ನೀವು ದುಃಖಿಸಲಿಕ್ಕೆ ಕಾರಣವೇನೆಂದು' ಕೇಳಿದರು.

ಮೃಕಂಡು ಋಷಿಗಳು 'ಮಗುವೇ! ನಿನಗೋಸ್ಕರವೇ ದುಃಖಪಡುವೆನು. ರುದ್ರದೇವರು ನಿನಗೆ ಹದಿನಾರುವರ್ಷ ಆಯುಷ್ಯವನ್ನು ಕೊಟ್ಟಿರುವರು. ಆ ಕಾಲವು ಈಗ ಬಂದು ಬಿಟ್ಟಿತು. ಆದುದರಿಂದ ದುಃಖಿಸುವೆನು' ಎಂದು ಹೇಳಿದರು. ತಂದೆಯು ಹೇಳಿದ ಮಾತನ್ನು ಕೇಳಿ ಮಾರ್ಕಂಡೇಯರು 'ನನ್ನ ನಿಮಿತ್ತವಾಗಿ ನೀವು ಶೋಕವನ್ನು ಯಾವಾಗಲೂ ಮಾಡುವುದು ಬೇಡ. ನಾನು ಅಭೀಷ್ಟವನ್ನು ಕೊಡುವ ರುದ್ರದೇವರನ್ನು ಆರಾಧಿಸಿ ನನಗೆ ಮರಣವು ಬಾರದಂತೆ ಮಾಡಿಕೊಳ್ಳಲಿಕ್ಕೆ ಪ್ರಯತ್ನ ಮಾಡುವೆನು' ಈರೀತಿಯಾಗಿ ಹೇಳಿದರು. ಆ ಮಾತನ್ನು ಕೇಳಿ ತಂದೆತಾಯಿಗಳು ಸರ್ವಶೋಕವನ್ನು ಪರಿತ್ಯಜಿಸಿ ಸಂತೋಷವುಳ್ಳವರಾಗಿ 'ನಮ್ಮ ಶೋಕನಾಶಕ್ಕಾಗಿ ರುದ್ರದೇವರನ್ನು ಆರಾಧಿಸುವೆನೆಂದು ಉತ್ತಮವಾದ ಉಪಾಯವನ್ನು ಹೇಳಿದಿ. ರುದ್ರದೇವರನ್ನು ಮರೆಹೊಂದು. ಅದಕ್ಕಿಂತ ಬೇರೆಯಾದ ಹಿತವಿಲ್ಲ. ಪೂರ್ವದಲ್ಲಿ ರುದ್ರದೇವರು ಯಮಪಾಶಕ್ಕೆ ಸಿಕ್ಕಿದ್ದ ಶ್ವೇತಕೇತುವನ್ನು ಯಮದೇವರು ರಕ್ಷಿಸಿದರು. ಶಿಲಾದನ ಮಗನಾದ ಮೃತ್ಯುಗ್ರಸ್ತನಾದ ಎಂಟು ವರ್ಷದ ಬಾಲಕನಾದ ನಂದಿಯನ್ನು ತನ್ನ ಲೋಕಕ್ಕೆ ಕರಕೊಂಡು ಹೋದರು. ಕ್ಷೀರಸಮುದ್ರಮಥನ ಸಮಯದಲ್ಲಿ ಉಂಟಾದ (ವಾಯುದೇವರು ಪಾನಮಾಡಲಿಕ್ಕೆ ಕೊಟ್ಟ) ಕಾಲಕೂಟವಿಷವನ್ನು ಪಾನಮಾಡಿದರು. ಅಹಂಕಾರಿಯಾದ ಜಲಂಧರನನ್ನು ಸಂಹರಿಸಿದರು. ತ್ರಿಪುರಾಸುರರನ್ನು ಸಂಹಸಿರಿವರು. ಅಂಧಕಾಸುರನನ್ನು ಸಂಹರಿಸಿರುವರು. ಕಾಮನನ್ನು ತನ್ನ ದೃಷ್ಟಿಯಿಂದ ಭಸ್ಮವನ್ನಾಗಿ ಮಾಡಿದರು. ಅಂತಹ ರುದ್ರದೇವರನ್ನು ಮರೆಹೊಂದು' ಎಂದು ಹೇಳಿದರು.

ತರುವಾಯ ಮಾರ್ಕಂಡೇಯರು ತಂದೆತಾಯಿಗಳ ಅನುಜ್ಞೆ ಯನ್ನು ಪಡೆದು ದಕ್ಷಿಣಸಮುದ್ರದ ತೀರದಲ್ಲಿ ತನ್ನ ಹೆಸರುಳ್ಳ ಲಿಂಗವನ್ನು ಪ್ರತಿಷ್ಠಾಮಾಡಿ ಪ್ರತಿನಿತ್ಯವೂ ಮೂರು ಹೊತ್ತು ಸ್ನಾನಮಾಡಿ ರುದ್ರದೇವರನ್ನು ಪೂಜಿಸುತ್ತಿದ್ದರು. ಪೂಜೆಯಾದ

ಮೇಲೆ ಸ್ತೋತ್ರವನ್ನು ಮಾಡಿ ನರ್ತನವನ್ನು ಮಾಡುತ್ತಿದ್ದರು. ಒಂದು ದಿವಸದಲ್ಲಿ ಮಾಡಿದ ಪೂಜಾಸ್ತೋತ್ರಗಳಿಂದಲೇ ರುದ್ರದೇವರು ಸಂತುಷ್ಟರಾದರು. ಆದಿನದಲ್ಲಿ ಪೂಜೆಯನ್ನು ಮಾಡಿ ಸ್ತೋತ್ರಮಾಡಲಿಕ್ಕೆ ಉದ್ಯುಕ್ತರಾದ ಮಾರ್ಕಂಡೇಯರ ಬಳಿಗೆ ಅವರನ್ನು ಕರೆದುಕೊಂಡು ಹೋಗುವುದಕ್ಕಾಗಿ ಕೆಂಪಾದಕಣ್ಣುಗಳುಳ್ಳ ಹಾವುಗಳೂ ಚೇಳುಗಳೂ ರೋಮವಾಗಿ ಉಳ್ಳ ಕೋರೆ ಹಲ್ಲುಗಳಿಂದ ಭಯಂಕರವಾದ ಮುಖವುಳ್ಳ ಕಪ್ಪಾದ ಬಣ್ಣವುಳ್ಳ ಯಮದೇವರು ಮೃತ್ಯುದೇವತೆಯಿಂದ ಸಹಿತರಾಗಿ ಅಲ್ಲಿಗೆ ಬಂದು ಮಾರ್ಕಂಡೇಯರ ಕುತ್ತಿಗೆಗೆ ಪಾಶವನ್ನು ಹಾಕಿದರು. ಆಗ ಮಾರ್ಕಂ ಡೇಯರು 'ಕಾಲನೇ! ಸ್ವಲ್ಪ ಹೊತ್ತು ತಾಳು. ರುದ್ರದೇವರ ಮಹಾಸ್ತೋತ್ರವನ್ನು ಮುಗಿಸಿಬಿಡುತ್ತೇನೆ. ರುದ್ರದೇವರ ಸ್ತೋತ್ರವನ್ನು ಮುಗಿಸದೆ ನಾನು ಎಲ್ಲಿಗೂ ಹೋಗಲಾರೆನು. ಮಲಗಲಾರೆನು. ಭೋಜನ ಮಾಡಲಾರೆನು. ಹೀಗೆ ನನ್ನ ವ್ರತವಿರುವುದು. ನನಗೆ ಲೋಕದಲ್ಲಿ ರುದ್ರದೇವರ ಸ್ತೋತ್ರವು ಎಷ್ಟು ಪ್ರಿಯವೋ ಅಷ್ಟು ನನ್ನ ಜೀವನವೂ ಹೆಂಡತಿಯೂ ರಾಜ್ಯವೂ ಸುಖವು ನನಗೆ ಪ್ರಿಯವಾದದ್ದು ಅಲ್ಲ. ನಾನು ಹೇಳಿದ ಈ ಮಾತು ಸತ್ಯವಾದದ್ದು. ಈ ಸತ್ಯದಿಂದ ಯಾವಾಗಲೂ ರುದ್ರದೇವರು ಸಂತುಷ್ಟರಾಗಲಿ' ಎಂದು ಹೇಳಿದರು.

ಅದಕ್ಕೆ ಯಮದೇವರು 'ನೀನು ದೊಡ್ಡವರು ಹೇಳಿದ ಮಾತನ್ನು ಕೇಳಿಲ್ಲವೆದು ಕಾಣುತ್ತದೆ. ಯಾವ ಮೂರ್ಖನು ಪೂರ್ವವಯಸ್ಸಿನಲ್ಲಿ ಧರ್ಮವನ್ನು ಮಾಡುವು ದಿಲ್ಲವೋ ಅವನು ಮುದುಕನಾದಾಗ ದುಃಖವನ್ನು ಹೊಂದುವನು. ನಾಲ್ಕು ತಿಂಗಳು ಮಳೆ ಕಾಲದಲ್ಲಿ ಸುಖದಿಂದ ಇರುವಂತೆ ಇತರ ಎಂಟು ತಿಂಗಳಲ್ಲಿ ಸಾಧನೆಯನ್ನು ಮಾಡಬೇಕು. ರಾತ್ರಿಯಲ್ಲಿ ಸುಖದಿಂದ ಇರಲುಬೇಕಾದ ಕಾರ್ಯವನ್ನು ಹಗಲಿ ನಲ್ಲಿಯೇ ಮಾಡಬೇಕು. ಸತ್ತಮೇಲೆ ಸುಖದಿಂದ ಇರುವಂತೆ ಬದುಕಿರುವಾಗಲೇ ಮಾಡಬೇಕು. ನಾಳೆ ಮಾಡುವ ಕಾರ್ಯವನ್ನು ಈ ದಿನವೇ ಮಾಡಬೇಕು. ಮಧ್ಯಾಹ್ನ ಮಾಡಬೇಕಾದ ಕಾರ್ಯವನ್ನು ಬೆಳಿಗ್ಗೆಯೇ ಮಾಡಬೇಕು. ಇವನು ಮಾಡಬೇಕಾದ ದ್ದನ್ನು ಮಾಡಿಯಾಯಿತೋ ಇಲ್ಲವೋ ಎಂದು ಕಾಲವು ನಿರೀಕ್ಷಿಸುವುದಿಲ್ಲ. ಇದನ್ನು ಮಾಡಿಯಾಯಿತು. ಇದನ್ನು ಮಾಡಬೇಕು ಎಂದು ಯೋಚಿಸುತ್ತಿರುವವನನ್ನು ಯಮನು ವಶಮಾಡಿಕೊಳ್ಳುವನು. ಕಾಲವು ಬಾರದೆ ಇದ್ದರೆ ನೂರಾರು ಬಾಣಗಳಿಂದ ಬಡೆಯಲ್ಪಟ್ಟರೂ ಸಾಯಲಾರನು. ಕಾಲವು ಬಂದರೆ ದರ್ಭೆಯಿಂದ ಕೊನೆಯಿಂದ ಮುಟ್ಟಲ್ಪಟ್ಟರೂ, ಸಾಯುವನು. ಬದುಕಲಾರನು. ಸಾವಿರಾರು ಚಕ್ರವರ್ತಿಗಳನ್ನು ನಾನು ವಶಮಾಡಿಕೊಂಡಿರುವೆನು' ಎಂದು ಹೇಳಿದರು.

ಅದನ್ನು ಕೇಳಿ ಯಮದೇವರೊಡನೆ ಮಾರ್ಕಂಡೇಯರು 'ರುದ್ರದೇವರ ಸ್ತೋತ್ರದಲ್ಲಿ ಆಸಕ್ತರಾದವರಿಗೆ ಯಾರು ವಿಘ್ನವನ್ನು ಮಾಡುವರೋ ಅವರು ಬೇಗನೇ ನಾಶವನ್ನು ಹೊಂದುವರು. ಆದುದರಿಂದ ನನಗೆ ವಿಘ್ನಮಾಡಬಾರದೆಂದು ನಿಷೇಧಿಸುತ್ತಿದ್ದೇನೆ. ಹೇಗೆ ರಾಜಭೃತ್ಯರಿಗೆ ರಾಜನೇ ಶಿಕ್ಷಿಸುವವನೋ ಹಾಗೆಯೇ ಶಿವಭಕ್ತರನ್ನು ಶಿಕ್ಷಿಸುವವರು ರುದ್ರದೇವರೇ. ರುದ್ರದೇವರ ಭಕ್ತರಿಗೆ ಯಾವ ಆಪತ್ತು ಬರಲಾರದು' ಎಂದು ಹೇಳಿದರು.

ಅದನ್ನು ಕೇಳಿ ಯಮದೇವರು ಮೂರುಲೋಕಗಳನ್ನು ನುಂಗುವಂತೆ ರೋಷವುಳ್ಳವರಾಗಿ 'ನನ್ನ ಬಲಪರಾಕ್ರಮವನ್ನು ನೋಡು. ನೀನು ಯಾವ ರುದ್ರದೇವರ ದಾಸನೋ ಆ ರುದ್ರದೇವರು ಬಂದು ಈಗ ನಿನ್ನಲ್ಲಿ ರಕ್ಷಿಸಲಿ' ಎಂದು ಮಾರ್ಕಂಡೇಯರನ್ನು ಬಲಾತ್ಕಾರದಿಂದ ಹಿಡಿಯಲಿಕ್ಕೆ ಬಂದರು. ಅಷ್ಟರಲ್ಲಿಯೇ ಆಲಿಂಗದಿಂದ ರುದ್ರದೇವರು ಮೇಘದಂತೆ ಗರ್ಜನೆ ಮಾಡುತ್ತಾ ಹುಂಕಾರ ಮಾಡುತ್ತಾ ಮೇಲೆ ಬಂದವರಾಗಿ ಯಮದೇವರ ಎದೆಗೆ ಕಾಲಿನಿಂದ ಒದೆದರು. ಯಮದೇವರು ದೂರಕ್ಕೆ ಹೋಗಿಬಿದ್ದರು. ತರುವಾಯ ಮಾರ್ಕಂಡೇಯರು ರುದ್ರದೇವರನ್ನು ವಿಶೇಷವಾಗಿ ಸ್ತೋತ್ರಮಾಡಿದರು. ರುದ್ರದೇವರು ಮಾರ್ಕಂಡೇಯರಿಗೆ ಬಹುಪ್ರಲಯಕಾಲದವರೆಗೆ ಆಯುಷ್ಯವನ್ನು ಕೊಟ್ಟು ಅಂತರ್ಧಾನವನ್ನು ಹೊಂದಿದರು. ತರುವಾಯ ಮಾರ್ಕಂಡೇಯರು ಆಶ್ರಮಕ್ಕೆ ಬಂದು ತಂದೆತಾಯಿಗಳಿಗೆ ನಮಸ್ಕರಿಸಿ ಅವರ ಅನುಜ್ಞೆಯನ್ನು ಪಡೆದರು ಭೂಮಿಯಲ್ಲಿ ಸಂಚರಿಸುತ್ತಿದ್ದರು. ಯಮದೇವರು ರುದ್ರದೇವರನ್ನು ಸ್ತೋತ್ರಮಾಡಿ ಹೊರಟುಹೋದರು. ಈರೀತಿಯಾಗಿ ಮೃಗಶೃಂಗಮುನಿಗಳಿಗೆ ಮಾಘಸ್ನಾನದ ಪ್ರಭಾವದಿಂದ ಮಹಾಭಾಗ್ಯವುಳ್ಳ ಸಂತಾನವುಂಟಾಯಿತು.



# ಉಪಸ್ತಿ ಋಷಿಗಳು [1]

ಪೂರ್ವದಲ್ಲಿ ಉಪಸ್ತಿ ಎಂಬ ಋಷಿಗಳು ಇದ್ದರು. ಅವರು ಯಾವಾಗಲೂ ಒಂದು ಚಕ್ರವನ್ನು ಆಶ್ರಯಿಸಿಕೊಂಡೇ ಇರುವರು. ಆದುದರಿಂದ ಚಕ್ರಾಯಣ ಎಂದೂ ಕರೆಯುತ್ತಿದ್ದರು. ಅವರು ಯುವತಿಯಾದ ತನ್ನ ಪತ್ನಿಯೊಡನೆ ಕುರುದೇಶದಲ್ಲಿ ವಾಸಮಾಡುತ್ತಿದ್ದರು. ಒಂದು ಸಮಯದಲ್ಲಿ ಕುರುದೇಶದಲ್ಲಿ ಕಲ್ಲುಮಳೆಯು ಬಂದಿತು. ಇದರಿಂದ ಜನರಿಗೆ ಆಹಾರವು ಸಿಗುವುದು ದುರ್ಲಭವಾಯಿತು. ಹಣವಂತರಾದ ಆನೆಯ ಅಧಿಪತಿಗಳು ಇರುವ ಗ್ರಾಮದಲ್ಲಿ ವಾಸಮಾಡುತ್ತಿದ್ದರು. ಒಂದುದಿನ ಚಾಕ್ರಾಯಣರಿಗೆ ತುಂಬಾ ಹಸಿವೆಯಾಯಿತು. ಜ್ಞಾನಿಗಳಾದ ಅವರು ಒಬ್ಬ ಹಣವಂತನಾದ ಆನೆಯ ಯಜಮಾನನು ಬೇಯಿಸಿದ ಹುರುಳಿಯನ್ನು ಪಾತ್ರೆಯಲ್ಲಿ ಇಟ್ಟುಕೊಂಡು ತಿನ್ನುತ್ತಿರುವುದನ್ನು ನೋಡಿದರು.

ಅದನ್ನು ನೋಡಿ ಹಸಿವೆಯನ್ನು ತಾಳಲಾರದೆ ನನಗೊಂದಿಷ್ಟು ಹುರುಳಿಯನ್ನು ಕೊಡು ಎಂದು ಯಾಚಿಸಿದರು. ಅದಕ್ಕೆ ಆ ಧನಿಕನು ಒಳಗೆ ಬೇರೆ ಹುರುಳಿಯು ಇಲ್ಲ. ನಾನು ತಿನ್ನುತ್ತಾ ಇರುವುದ ಮಾತ್ರವೇ ಇದೆ ಎಂದನು. ಅದಕ್ಕೆ ಚಾಕ್ರಾಯಣರು ಸರಿ ಇದರಲ್ಲೇ ನನಗೆ ಸ್ವಲ್ಪ ಕೊಡು ಎಂದರು. ಅದಕ್ಕೆ ಆ ಧನಿಕನು ಒಂದಿಷ್ಟು ಹುರುಳಿಯನ್ನು ಕೊಟ್ಟು ಈ ನೀರನ್ನು ಕುಡಿಯಿರಿ ಎಂದು ತಾನು ಕುಡಿಯುತ್ತಾ ನೀರಿನಲ್ಲೂ ಸ್ವಲ್ಪವನ್ನು ಕೊಟ್ಟನು. ಚಾಕ್ರಾಯಣರು ಆ ಹುರುಳಿಯನ್ನು ತೆಗೆದುಕೊಂಡರು. ನೀರನ್ನು ಮಾತ್ರ ಇದು ಎಂಜಲು ನಾನು ಕುಡಿಯಲಾರೆನು ಎಂದರು. ಅದಕ್ಕೆ ಧನಿಕನು ಸ್ವಾಮೀ! ನಾನು ಹುರುಳಿಯನ್ನು ಎಂಜಲು ಮಾಡಿಯೇ ತಿನ್ನುತ್ತಿದ್ದೆನಲ್ಲಾ, ಅದು ಎಂಜಲಲ್ಲವೇ? ನೀರು ಮಾತ್ರ ಎಂಜಲಾಯಿತೋ ಎಂದನು. ಅದಕ್ಕೆ ಅವರು ಅಪರೋಕ್ಷಜ್ಞಾನಿಗಳು ಪ್ರಾಣಹೋಗುವ ಸಮಯದಲ್ಲಿ ಎಂಜಲು ಇತ್ಯಾದಿ ವಿಚಾರ ಮಾಡಬೇಕಾಗಿಲ್ಲ ಎಂಬ ತತ್ವವನ್ನು ತಿಳಿದವರಾದ ಪ್ರಯುಕ್ತ 'ನಾನು ಈ ಎಂಜಲು ಹುರುಳಿಯನ್ನು ತಿನ್ನದೆ ಇದ್ದರೆ ನನ್ನ ಪ್ರಾಣವು ಉಳಿಯುತ್ತಿರಲಿಲ್ಲ. ಆದುದರಿಂದ ತಿಂದೆನು. ನೀರು ಈಗ ಸರ್ವತ್ರ ಮಳೆಬಂದಿರುವ ಪ್ರಯುಕ್ತ ಎಲ್ಲಿಯೂ ಸಿಗುವುದು. ಆದುದರಿಂದ ವ್ಯರ್ಥವಾಗಿ ಎಂಜಲು ನೀರನ್ನು ಕುಡಿಯಲಾರೆನು ಎಂದರು.

ಚಾಕ್ರಾಯಣರು ಈರೀತಿ ಆ ಎಂಜಲು ಹುರುಳಿಯನ್ನೇ ಸ್ವಲ್ಪ ತಿಂದು ಇನ್ನು ಸ್ವಲ್ಪವನ್ನು ತನ್ನ ಪತ್ನಿಗೆಂದು ತೆಗೆದುಕೊಂಡು ಹೋದರು. ಆದರೆ ಅವರ ಪತ್ನಿಯು

1. ಛಾ. ಉಪ. ಅ.1. ಖಂ.11

ಯಾರನ್ನೋ ಯಾಚಿಸಿ ತನ್ನ ಉದರ ಪೂರ್ತಿಯನ್ನು ಮಾಡಿಕೊಂಡಿದ್ದಳು. ಆದುದರಿಂದ ಅವಳು ಆ ಹುರುಳಿಯನ್ನು ಮರುದಿವಸಕ್ಕೆಂದು ಒಳಗೆ ಇಟ್ಟಳು.

ಮರುದಿವಸ ಚಾಕ್ರಾಯಣರು ಹಾಸಿಗೆಯಿಂದ ಎದ್ದವರಾಗಿ ಹೆಂಡತಿಯೊಡನೆ ನನಗೆ ತುಂಬಾ ಹಸಿವೆಯಾಗುತ್ತದೆ. ಒಂದಿಷ್ಟು ಆಹಾರವನ್ನು ಹೊಂದಿದರೆ ಅದನ್ನು ತಿಂದು ಬದುಕಿ ಹಣವನ್ನು ಸಂಪಾದಿಸಬಹುದು. ರಾಜನೊಬ್ಬನು ದೊಡ್ಡ ಯಾಗವನ್ನು ಮಾಡುತ್ತಿರುವನು. ಸರ್ವಪೌರೋಹಿತ್ಯವನ್ನು ನನಗೇ ಕೊಡುವನು ಎಂದರು. ಅವರ ಪತ್ನಿಯು ತಾನು ಒಳಗೆ ಇಟ್ಟಿದ್ದ ಹುರುಳಿಯನ್ನು ಕೊಟ್ಟಳು. ಚಾಕ್ರಾಯಣರು ಆ ಹುರುಳಿಯನ್ನು ತಿಂದು ರಾಜನು ಮಾಡುತ್ತಿದ್ದ ಯಾಗಕ್ಕೆ ಹೋದರು. ಅಲ್ಲಿ ಸಾಮಗಾಯನ ಮಾಡುತ್ತಿದ್ದ ಋಷಿಗಳ ಬಳಿಗೆ ಹೋಗಿ ಒಬ್ಬೊಬ್ಬರ ಹತ್ತಿರ ಒಂದೊಂದು ಪ್ರಶ್ನೆಮಾಡಿ ಈ ಪ್ರಶ್ನೆಗೆ ಉತ್ತರವನ್ನು ಹೇಳದೆ ನೀವು ಸಾಮಗಾಯನ ಮಾಡಿದರೆ ನಿಮ್ಮ ತಲೆಯು ಬಿದ್ದುಹೋಗುವುದು ಎಂದರು. ಅವರೆಲ್ಲರೂ ಭಯದಿಂದ ಸುಮ್ಮನೆ ಕೂತುಕೊಂಡರು.

ಆಗ ರಾಜನು ಬಂದು ತಾವು ದೊಡ್ಡವರು ಯಾರು ಎಂದು ತಿಳಿಯಲು ಬಯಸುವೆನು ಎಂದನು. ಚಾಕ್ರಾಯಣರು ನಾನು ಉಷಸ್ತಿ ಚಾಕ್ರಾಯಣ ಎಂದರು. ಅದಕ್ಕೆ ರಾಜನು ನಾನು ತಮ್ಮಿಂದಲೇ ಈ ಯಾಗವನ್ನು ಮಾಡಿಸಬೇಕೆಂದಿದ್ದೆನು. ತಾವು ಸಿಗಲಿಲ್ಲ ಎಂದು ಇವರನ್ನೆಲ್ಲಾ ಹೇಳಿದೆನು. ತಾವೇ ಈ ಕಾರ್ಯವನ್ನು ಮಾಡಿಸಬೇಕು ಎಂದನು.

ಅದಕ್ಕೆ ಚಾಕ್ರಾಯಣರು ರಾಜ! ನೀನು ಹೇಳಿದ ಬ್ರಾಹ್ಮಣರೇ ಯಾಗವನ್ನು ಮಾಡಿಸಲಿ. ಅವರಿಗೆಲ್ಲಾ ಕೊಡುವ ದಕ್ಷಿಣೆಯನ್ನು ಮಾತ್ರ ನನಗೆ ಕೊಟ್ಟು ಬಿಡು ಎಂದರು ರಾಜನು ಹಾಗೆಯೇ ಆಗಲಿ ಎಂದನು.

ಅನಂತರ ಚಾಕ್ರಾಯಣರ ಹತ್ತಿರ ಆ ಸಾಮಗಾಯನಮಾಡಿ ಇವರ ಪ್ರಶ್ನೆಯಿಂದ ನಿರುತ್ತರರಾಗಿದ್ದ ಋಷಿಗಳು ಬಂದು ಅವರು ಕೇಳಿ ತಮಗೆ ತಿಳಿಯದೆ ವಿಷಯವನ್ನು ಕೇಳಿ ತಿಳಿದುಕೊಂಡು ಸಾಮಗಾಯನವನ್ನು ಮಾಡಿ ಆ ಯಾಗವನ್ನು ಮುಗಿಸಿದರು.



# ರೈಕ್ವರು [1]

ಜನಶ್ರುತ ಎಂಬ ರಾಜನ ಮಗನಾದ ಪೌತ್ರಾಯಣ ಎಂಬ ಒಬ್ಬ ರಾಜನಿದ್ದನು. ಅವನು ದೇವಬ್ರಾಹ್ಮಣರಲ್ಲಿ ವಿಶ್ವಾಸವುಳ್ಳವನಾಗಿದ್ದನು. ಬ್ರಾಹ್ಮಣರಿಗೆ ತುಂಬಾ ದಾನ ಮಾಡುತ್ತಿದ್ದನು. ಬಹಳ ಶಾಸ್ತ್ರಗಳನ್ನು ಓದಿಕೊಂಡವನಾಗಿದ್ದನು. ಅವನು ದಾರಿಯಾಗಿ ಹೋಗುವ ಜನರು ಊಟ ಮಾಡಲಿ ಎಂದು ಅನೇಕ ಸ್ಥಳಗಳಲ್ಲಿ ಅನ್ನದ ಛತ್ರಗಳನ್ನು ಇಡಿಸಿದ್ದನು.

ಆ ರಾಜನು ಒಂದು ದಿನ ಉಪ್ಪರಿಗೆಯಲ್ಲಿ ಹಾಸಿಗೆಯಲ್ಲಿ ಮಲಗಿದ್ದನು. ಆ ಸಮಯದಲ್ಲಿ ಆಕಾಶಮಾರ್ಗದಲ್ಲಿ ಹಂಸಪಕ್ಷಿಗಳು ಹಾರಿಹೋಗುತ್ತಿದ್ದವು. ಆಗ ಒಂದು ಹಂಸವು ರಾಜನು ಮಲಗಿರುವ ಸ್ಥಳದಲ್ಲಿ ಮೇಲೆ ಆಕಾಶದಲ್ಲಿ ಹಾರಿ ಹೋಗುವುದನ್ನು ನೋಡಿ ಮತ್ತೊಂದು ಹಂಸವು 'ಎಲಾ ಕುರುಡ! ಪೌತ್ರಾಯಣ ರಾಜನು ಉಪ್ಪರಿಗೆಯಲ್ಲಿ ಮಲಗಿದ್ದಾನೆ. ಅವನ ತೇಜಸ್ಸು ಸ್ವರ್ಗಪರ್ಯಂತ ಹೋಗುತ್ತದೆ. ನೀನು ಆ ತೇಜಸ್ಸನ್ನು ಮುಟ್ಟದಿಯಾದರೆ ನಿನ್ನನ್ನು ಸುಟ್ಟು ಹಾಕುವುದು' ಎಂದಿತು.

ಅದಕ್ಕೆ ಪೂರ್ವದ ಹಂಸವು 'ಎಲಾ! ಈ ಉಪ್ಪರಿಗೆಯಲ್ಲಿ ಮಲಗಿರುವ ರಾಜನು ಏನು ಪ್ರಭಾವವುಳ್ಳವನೆಂದು ತಿಳಿದುಕೊಂಡು ಬಂಡಿಯ ಹತ್ತಿರ ಕೂತಿರುವ ರೈಕ್ವರಿಗೆ ಹೇಳುವಂತೆ ಹೇಳುವಿ ಎಂದು ಹೇಳಿತು.

ಮತ್ತೊಂದು ಹಂಸವು ರೈಕ್ವರು ಯಾರು? ಅವರ ಮಹಿಮೆಯು ಹೇಗಿರುವುದು ಎಂದು ಕೇಳಿತು.

ಪೂರ್ವಹಂಸವು ಆ ರೈಕ್ವರು ಸಂವರ್ಗವಿದ್ಯೆಯನ್ನು ತಿಳಿದಿರುವರು. ಆದುದರಿಂದ ಜನರು ಮಾಡುವ ಪುಣ್ಯಕರ್ಮದ ಫಲವೆಲ್ಲವೂ ಅವರ ಯೋಗ್ಯತಾನುಸಾರವಾಗಿ ಅವರಿಗೆ ಬಂದು ಸೇರುವುದು. ತಿಳಿಯಬೇಕಾದ ವಿಷಯವನ್ನೆಲ್ಲಾ ತಿಳಿದಿರುವರು ಎಂದು ಹೇಳಿತು. ಈರೀತಿಯಾಗಿ ಹೇಳಿಕೊಂಡು ಆ ಹಂಸಪಕ್ಷಿಗಳು ಹಾರಿಹೋದವು.

ಉಪ್ಪರಿಗೆಯಲ್ಲಿ ಮಲಗಿರುವ ಆ ಪೌತ್ರಾಯಣರಾಜನು ಆ ಮಾತನ್ನೆಲ್ಲಾ ಕೇಳುತ್ತಿದ್ದನು. ಮರುದಿನ ಹಾಸಿಗೆಯಿಂದ ಎದ್ದಕೂಡಲೇ ಸಾರಥಿಯನ್ನು ಕರೆದು ರೈಕ್ವರನ್ನು ಹುಡುಕಿಕೊಂಡು ಬಾ ಎಂದನು. ಸಾರಥಿಯು ಎಲ್ಲಿಯೇ ಎಲ್ಲಿಯೋ

1. ಛಾ.ಉಪ. ಅ.4

ಹೋಗಿ ಹುಡುಕಿ ನನಗೆ ಸಿಗಲಿಲ್ಲವೆಂದು ಹೇಳಿದನು. ಆಗ ರಾಜನು ಎಲ್ಲಾ ಬ್ರಾಹ್ಮಣರನ್ನು ಹುಡುಕಬೇಕಾದ ಸ್ಥಳಕ್ಕೆ ಹೋಗಿ ಹುಡುಕು ಎಂದನು.

ತರುವಾಯ ಸಾರಥಿಯು ಹುಡುಕುತ್ತಾ ಹೋಗಿ ಒಂದು ಸ್ಥಳದಲ್ಲಿ ಬಂಡಿಯ ಕೆಳಗೆ ಮೈತುರಿಸಿಕೊಂಡು ಕೂತಿದ್ದ ಒಬ್ಬ ಬ್ರಾಹ್ಮಣರನ್ನು ನೋಡಿ ನೀವೆಯೋ ರೈಕ್ವರು ಎಂದು ಕೇಳಿದನು. ಅದಕ್ಕೆ ಅವರು ಹೌದು ಎಂದರು. ಸಾರಥಿಯು ರಾಜನಿದ್ದಲ್ಲಿಗೆ ಬಂದು ತಾನು ರೈಕ್ವರನ್ನು ನೋಡಿ ಬಂದಿರುವುದಾಗಿ ತಿಳಿಸಿದನು.

ಆಗ ರಾಜನು ಆರುನೂರು ದನಗಳನ್ನೂ ಒಂದು ಬಂಗಾರದ ಸರವನ್ನೂ ಗಂಡುಕುದುರೆಯಿಂದ ಹೆಣ್ಣುಕತ್ತೆಗಳಲ್ಲಿ ಹುಟ್ಟಿರುವ ಅಶ್ವತರೀ ಎಂಬ ಜಾತಿಯ ಕುದುರೆಗಳು ಸೆಳೆಯುವ ರಥವನ್ನೂ ತೆಗೆದುಕೊಂಡು ಹೋಗಿ ರೈಕ್ವರೇ! ಈ ದನಗಳನ್ನು ಬಂಗಾರದ ಸರವನ್ನು ರಥವನ್ನೂ ತೆಗೆದುಕೊಂಡು ನೀವು ತಿಳಿದುಕೊಂಡಿರುವ ದೇವತೆಯನ್ನು ನನಗೆ ಉಪದೇಶಿಸಿರಿ ಎಂದನು.

ಅದಕ್ಕೆ ರೈಕ್ವರು ರಾಜನು ಹಂಸಪಕ್ಷಿಯು ತನಗೆ ಮಾಡಿದ ಅನಾದರದಿಂದ ಶೋಕಾಧಿಕ್ಯದಿಂದ ಬಂದಿರುವ ಪ್ರಯುಕ್ತ ಅವನನ್ನು ಶೂದ್ರ ಎಂದು ಕರೆದು 'ಶೂದ್ರ! ರಥ ಬಂಗಾರದ ಸರ ಎಲ್ಲ ನಿನಗೇ ಇರಲಿ ಎಂದರು.

ಆಮೇಲೆ ರಾಜನು ಸಾವಿರ ದನಗಳನ್ನೂ ಬಂಗಾರದ ಸರವನ್ನೂ ರಥವನ್ನೂ ತೆಗೆದುಕೊಂಡು ಬಂದು, ತನ್ನ ಮಗಳನ್ನೂ ಮದುವೆ ಮಾಡಿಕೊಡಲಕ್ಕೆ ಕರೆದುಕೊಂಡು ಬಂದು ರೈಕ್ವರೇ ಈ ದನಗಳನ್ನೂ ಬಂಗಾರದ ಸರವನ್ನೂ ರಥವನ್ನೂ ತೆಗೆದುಕೊಳ್ಳಬೇಕು. ಈ ನನ್ನ ಮಗಳನ್ನೂ ಪತ್ನಿಯಾಗಿ ಸ್ವೀಕರಿಸಬೇಕು. ನನಗೆ ಉಪದೇಶ ಮಾಡಬೇಕು ಎಂದನು. ರೈಕ್ವರು ರಾಜಪುತ್ರಿಯ ಮುಖವನ್ನು ನೋಡಿ ರಾಜನೊಡನೆ ನನ್ನ ಶುಶ್ರೂಷಾ ಮಾಡದೆ ಬರೇ ಹಣವನ್ನು ಕೊಟ್ಟು ಉಪದೇಶವನ್ನು ಹೊಂದಬೇಕೆಂದು ಯೋಚಿಸಿದಿಯಾ? ಎಂದರು.

ರಾಜನು ರೈಕ್ವರಿಗೆ ಅನೇಕ ಗ್ರಾಮಗಳನ್ನು ಕೊಟ್ಟನು. ಆ ಗ್ರಾಮಗಳು ಮಹಾವೃಷ ಎಂಬ ದೇಶದಲ್ಲಿ ರೈಕ್ವಪರ್ಣ ಎಂದು ಪ್ರಸಿದ್ಧಗಳಾಗಿವೆ. ಆ ರಾಜನಿಗೋಸ್ಕರ ರೈಕ್ವರು ಆ ಗ್ರಾಮಗಳಲ್ಲಿ ವಾಸಮಾಡಿದರು. ರಾಜನಿಗೆ ಸಂವರ್ಗ ಎಂದು ಹೆಸರುಳ್ಳ ವಾಯುದೇವರ ಮಹಿಮೆಯನ್ನು ಉಪದೇಶಿಸಿದರು.



# ಯಾಜ್ಞವಲ್ಕ್ಯರು [1]

ಪೂರ್ವದಲ್ಲಿ ಯಾಜ್ಞವಲ್ಕ್ಯರು ಎಂಬ ಋಷಿಗಳು ಇದ್ದರು. ಅವರಿಗೆ ಇಬ್ಬರು ಹೆಂಡತಿಯರು. ಒಬ್ಬಳ ಹೆಸರು ಮೈತ್ರೇಯೀ ಎಂದು. ಮತ್ತೊಬ್ಬಳ ಹೆಸರು ಕಾತ್ಯಾಯನೀ ಎಂದು. ಅವರಲ್ಲಿ ಮೈತ್ರೇಯಿಯು ತತ್ವಜ್ಞಾನವುಳ್ಳವಳಾಗಿದ್ದಳು. ಕಾತ್ಯಾಯನಿಯು ಸ್ತ್ರೀಸ್ವಭಾವದಂತೆ ಬರೇ ಸಂಸಾರದಲ್ಲಿ ಜ್ಞಾನವುಳ್ಳವಳಾಗಿದ್ದಳು.

ಒಂದುದಿನ ಯಾಜ್ಞವಲ್ಕ್ಯರು ಮೈತ್ರೇಯಿ! ನಾನು ಸನ್ಯಾಸ ಸ್ವೀಕಾರ ಮಾಡಲಿರುವೆನು. ನನ್ನ ಸೊತ್ತಿನಲ್ಲಿ ನಿನಗೂ ಕಾತ್ಯಾಯನಿಗೂ ವಿಭಾಗ ಮಾಡಿಕೊಡುವೆನು ಎಂದರು. ಅದಕ್ಕೆ ಮೈತ್ರೇಯಿಯು ತಾವು ಕೊಟ್ಟ ಹಣದಿಂದ ಅಥವಾ ಸಮಸ್ತ ಭೂಮಿಯಿಂದ ಮೋಕ್ಷವನ್ನು ಹೊಂದಲಿಕ್ಕೆ ಸಾಧ್ಯವೋ? ಎಂದಳು. ಅದಕ್ಕೆ ಯಾಜ್ಞವಲ್ಕ್ಯರು ಮೋಕ್ಷವನ್ನು ಹೊಂದಲಿಕ್ಕೆ ಆಗಲಾರದು. ಲೋಕದಲ್ಲಿರುವ ಜನರಂತೆ ಸುಖದಿಂದ ಇರಬಹುದಷ್ಟೆ ಎಂದರು. ಮೋಕ್ಷವನ್ನು ಹೊಂದಲಿಕ್ಕೆ ಆಗಲಾರದು ಎಂದರು.

ಅದಕ್ಕೆ ಮೈತ್ರೇಯಿಯು ಯಾವ ಧನದಿಂದ ಮೋಕ್ಷವನ್ನು ಹೊಂದಲು ಆಗಲಾರದೋ ಆ ಹಣದಿಂದ ನಾನೇನು ಮಾಡಲಿ? ತಾವು ತಿಳಿದಿರುವ ಮೋಕ್ಷೋಪಾಯವನ್ನು ನನಗೆ ಹೇಳಿರಿ ಎಂದಳು.

ಆಗ ಯಾಜ್ಞವಲ್ಕ್ಯರು ಮೈತ್ರೇಯಿ ನನಗೆ ತುಂಬಾ ಪ್ರಿಯಳಾಗಿದ್ದಿ. ಪ್ರಿಯವನ್ನು ಮಾತಾಡುವಿ. ನಿನಗೆ ನಾನು ಉಪದೇಶಿಸುವೆನು. ಕೇಳು. ಯಾರೊಬ್ಬರೂ ತಾವು ಇನ್ನೊಬ್ಬರಿಗೆ ಪ್ರಿಯರಾಗಬೇಕೆಂದು ಅಪೇಕ್ಷಿಸಿದರೆ ಪ್ರಿಯರಾಗಲಾರರು. ಪರಮಾತ್ಮನಿಗೆ ಇಚ್ಛಾ ಬಂದರೆ ಮಾತ್ರ ಪ್ರಿಯರಾಗಬಹುದು. ಅಂತಹ ಭಗವಂತನನ್ನು ತಿಳಿಯಬೇಕು. ಎಂದು ವಿಸ್ತಾರವಾಗಿ ಭಗವತ್ತತ್ವವನ್ನು ಉಪದೇಶಿಸಿದರು.

ಒಂದು ಸಮಯದಲ್ಲಿ ವಿದೇಹರಾಜನಾದ ಜನಕನು ಬ್ರಾಹ್ಮಣರಿಗೆ ಬಹುದಕ್ಷಿಣೆಯನ್ನು ಕೊಟ್ಟು ಯಜ್ಞ ಮಾಡಿದನು. ಆ ಯಾಗಕ್ಕೆ ಕುರುಪಾಂಚಾಲದೇಶದ ಬ್ರಾಹ್ಮಣರು ಬಂದಿದ್ದರು. ಅವರನ್ನೆಲ್ಲಾ ನೋಡಿ ಜನಕರಾಜನಿಗೆ ಈ ಬ್ರಾಹ್ಮಣರಲ್ಲಿ ಯಾರು ಜ್ಞಾನಿ ಶ್ರೇಷ್ಠರು ಎಂದು ತಿಳಿದುಕೊಳ್ಳಬೇಕೆಂದು ಆಸೆಯಾಯಿತು. ರಾಜನು ಯಜ್ಞಶಾಲೆಯ ಸಮೀಪದಲ್ಲಿ ಸಾವಿರ ದನಗಳನ್ನು ನಿಲ್ಲಿಸಿದನು. ಒಂದೊಂದು ದನದ ಕೊಂಬಿಗೂ ಬಂಗಾರ ಕಟ್ಟಿಸಿದನು. ಪಂಡಿತರನ್ನೆಲ್ಲಾ ಕರೆದು ನಿಮ್ಮಲ್ಲಿ ಯಾರು

1. ಬೃ.ಉ.ಅ.3

ಶ್ರೇಷ್ಠರೋ ಅವರು ಈ ದನಗಳನ್ನು ತೆಗೆದುಕೊಂಡು ಹೋಗಬಹುದು ಎಂದು ರಾಜನು ತಿಳಿಸಿದನು. ಆಗ ಅಲ್ಲಿರುವ ಯಾವ ಬ್ರಾಹ್ಮಣನಿಗೂ ಆ ಗೋವನ್ನು ತೆಗೆದುಕೊಂಡು ಹೋಗಲಿಕ್ಕೆ ಧೈರ್ಯವು ಸಾಕಾಗಲಿಲ್ಲ. ಯಾಜ್ಞವಲ್ಕ್ಯರು ತನ್ನ ಶಿಷ್ಯನನ್ನು ಕೂಗಿ ಸೋಮಶ್ರವ ನೀನು ಈ ದನಗಳನ್ನು ಕಲೆದುಕೊಂಡು ನಮ್ಮ ಮನೆಗೆ ಹೋಗು' ಎಂದರು. ಆಗ ಉಳಿದ ಬ್ರಾಹ್ಮಣರಿಗೆಲ್ಲಾ ಕೋಪವುಂಟಾಯಿತು. ನಾವೆಲ್ಲರೂ ಇರುವಾಗ ಇವರೊಬ್ಬರು ಹೇಗೆ ಬ್ರಹ್ಮಜ್ಞಾನಿಗಳು? ಎಂದು ಹೇಳಿಕೊಳ್ಳು ವರು ಎಂದುಕೊಂಡರು. ಜನಕರಾಜನ ಪುರೋಹಿತರಾದ ಅಶ್ವಲ ಎನ್ನುವವರು 'ಯಾಜ್ಞವಲ್ಕ್ಯರೇ! ನಮ್ಮ ಮಧ್ಯದಲ್ಲಿ ನೀವೇ ಬ್ರಹ್ಮಜ್ಞಾನಿಗಳೋ?' ಎಂದು ಕೇಳಿದರು. ಅದಕ್ಕೆ ಯಾಜ್ಞವಲ್ಕ್ಯರು ನಾವು ಬ್ರಹ್ಮಜ್ಞಾನಿಗಳಿಗೆ ನಮಸ್ಕಾರವನ್ನು ಮಾಡುವೆವು. ನಮಗೆ ಗೋವುಗಳು ಬೇಕಾಗಿವೆ ಎಂದರು.

ಅನಂತರ ಯಾಜ್ಞವಲ್ಕ್ಯರೊಡನೆ ಅಶ್ವಲರು ಅನೇಕ ಪ್ರಶ್ನೆಗಳನ್ನು ಕೇಳಿದರು. ಅದಕ್ಕೆಲ್ಲಾ ಯಾಜ್ಞವಲ್ಕ್ಯರು ಉತ್ತರವನ್ನೂ ಹೇಳಿದರು. ಆಮೇಲೆ ಜಾರತ್ಕವ ಎಂಬ ಋಷಿಗಳೂ ಭುಜ್ಯುಋಷಿಗಳೂ ಉಷಸ್ತಋಷಿಗಳೂ, ಕಹೋಳಋಷಿಗಳೂ, ಗಾರ್ಗಿಯೂ, ಉದ್ದಾಲಕರೂ ಪ್ರತ್ಯೇಕಪ್ರತ್ಯೇಕ ಪ್ರಶ್ನೆಯನ್ನು ಮಾಡಿ ನಿರುತ್ತರ ರಾದರು. ತರುವಾಯ ಪುನಃ ಗಾರ್ಗಿಯು ಸಭ್ಯರ ಅನುಜ್ಞೆಯಿಂದ ಪ್ರಶ್ನೆಯನ್ನು ಮಾಡಿ ನಿರುತ್ತರಳಾಗಿ ಬ್ರಾಹ್ಮಣರೇ ನೀವೆಲ್ಲಾ ಯಜ್ಞವಲ್ಕ್ಯರೇ(ರಿಗೆ) ನಮಸ್ಕರಿಸಿರಿ. ಅವರನ್ನು ನಿಮ್ಮಿಂದ ಯಾರಿಂದಲೂ ಜಯಿಸಲಿಕ್ಕೆ ಆಗಲಾರದು ಎಂದಳು.

ಆಮೇಲೆ ವಿದಗ್ಧಶಾಕಲ್ಯರು ಬಹುಪ್ರಶ್ನೆ ಮಾಡಿದರು. ಯಾಜ್ಞವಲ್ಕ್ಯರು ಅದಕ್ಕೆಲ್ಲಾ ಉತ್ತರವನ್ನು ಹೇಳಿದರು. ಮತ್ತೂ ಅವರು ಪ್ರಶ್ನೆ ಮಾಡಲು ಯಾಜ್ಞವಲ್ಕ್ಯರು ಬ್ರಾಹ್ಮಣರಿಂದ ಪ್ರೇರಿತರಾಗಿ ನೀವು ಸುಮ್ಮನೆ ಪ್ರಶ್ನೆ ಮಾಡುವಿರಿ. ನನ್ನ ಕೋಪದಿಂದ ನಿಮಗೆ ಕ್ಷೇಮವಾಗಲಾರದು' ಎಂದರು. ಆದರೂ ವಿದಗ್ಧ್ರಶಾಕಲ್ಯರು ಬಿಡದೆ ಮತ್ತು ಮತ್ತೂ ಪ್ರಶ್ನೆಗಳನ್ನು ಕೇಳಲಿಕ್ಕೆ ಆರಂಭಿಸಿದರು. ಯಾಜ್ಞವಲ್ಕ್ಯರು ಆ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ, ನಾನು ಕೇಳುವ ಪ್ರಶ್ನೆಗೆ ಉತ್ತರವನ್ನು ಹೇಳದಿದ್ದರೆ ನಿನ್ನ ತಲೆಯು ಬಿದ್ದು ಹೋಗುವುದು ಎಂದು ಹೇಳಿ ಪ್ರಶ್ನೆಯನ್ನು ಕೇಳಿದರು. ಅದಕ್ಕೆ ಉತ್ತರವನ್ನು ಹೇಳಲು ವಿದಗ್ಧಶಾಕಲ್ಯರಿಗೆ ತಿಳಿಯಲಿಲ್ಲ. ಅವರ ತಲೆಯು ಸೀಳಿ ಕೆಳಗೆ ಬಿದ್ದಿತು. ಕಳ್ಳರು ಅದನ್ನು ಬೆಳ್ಳಿ ಎಂದು ತಿಳಿದುಕೊಂಡು ತೆಗೆದುಕೊಂಡು ಹೋದರು.

ಆಮೇಲೆ ಎಲ್ಲಾ ಬ್ರಾಹ್ಮಣರೊಡನೆ ಯಾಜ್ಞವಲ್ಕ್ಯರು ಪ್ರಶ್ನೆ ಮಾಡಲು

ವಿದಗ್ಧಶಾಕಲ್ಯರು ಅವಸ್ಥೆಯನ್ನು ನೋಡಿದ ಬ್ರಾಹ್ಮಣರು ಭಯವುಳ್ಳವರಾಗಿ ಒಂದು ಉತ್ತರವನ್ನೂ ಕೊಡದಿರಲು, ಯಾಜ್ಞವಲ್ಕ್ಯರು ತನ್ನ ಪ್ರಶ್ನೆಗೆ ಉತ್ತರವನ್ನು ಹೇಳಿದರು.

ತರುವಾಯ ಯಾಜ್ಞವಲ್ಕ್ಯರು ಜನಕರಾಜನಿಗೆ ವಿಶೇಷವಾಗಿ ತತ್ವೋಪದೇಶ ಮಾಡಿ ಹೊರಟುಹೋದರು.



## ಮಾಂಡವ್ಯರು [1]

ಮಾಂಡವ್ಯರು ಎಂಬ ಒಬ್ಬ ಋಷಿಗಳು ಇದ್ದರು. ಅವರ ತಮ್ಮ ಆಶ್ರಮದ ದ್ವಾರದಲ್ಲಿ ಒಂದು ಮರದ ಬುಡದಲ್ಲಿ ಕೈಯನ್ನು ಮೇಲೆ ಎತ್ತಿಕೊಂಡು ಮೌನದಿಂದ ತಪಸ್ಸು ಮಾಡುತ್ತಾ ನಿಂತಿದ್ದರು. ಅವರು ಬಹುಕಾಲ ಹೀಗೆಯೇ ತಪಸ್ಸು ಮಾಡುತ್ತಾ ಇರುವ ಸಮಯದಲ್ಲಿ ಕೆಲವು(ಕಳ್ಳರು) ಕೆಲವು ಪದಾರ್ಥಗಳನ್ನು ಕದ್ದುಕೊಂಡು ಬಂದರು. ಆಗ ಕಳ್ಳರು ರಾಜಭಟರನ್ನು ನೋಡಿ ಅಂಜಿಕೊಂಡು ಅಲ್ಲಿಯೇ ಒಂದು ಸ್ಥಳದಲ್ಲಿ ಆ ಪದಾರ್ಥಗಳನ್ನು ಮರೆಯಲ್ಲಿಟ್ಟು ತಾವೂ ಮರೆಯಾಗಿ ಕೂತುಕೊಂಡರು. ಈರೀತಿಯಾಗಿ ಕಳ್ಳರು ಮರೆಯಾಗಿ ಕೂತುಕೊಂಡಿರಲು ರಾಜಭಟರು ಅಲ್ಲಿಗೆ ಬಂದು ಮಾಂಡವ್ಯರನ್ನು ನೋಡಿ ಕಳ್ಳರು ಎಲ್ಲಿಗೆ ಹೋದರು? ಎಂದು ಕೇಳಿದರು. ಯಾವ ಮಾರ್ಗದಿಂದ ಕಳ್ಳರು ಹೋದರು? ಆ ಮಾರ್ಗದಿಂದ ನಾವು ಬೇಗನೆ ಹೋಗುವೆವು ಎಂದು ಕೇಳಿದರು. ಆಗ ಮೌನವ್ರತವುಳ್ಳ ಮಾಂಡವ್ಯರು ಒಂದು ಮಾತನ್ನು ಆಡಲಿಲ್ಲ. ತರುವಾಯ ರಾಜಭಟರು ಅಲ್ಲಿಯೇ ಹುಡುಕುತ್ತಾ ಇರುವಾಗ ಆಶ್ರಮದಲ್ಲಿ ಅಡಗಿಕೂತಿರುವ ಕಳ್ಳರನ್ನೂ ಅವರು ಕದ್ದುಕೊಂಡು ತಂದಿರುವ ಸೊತ್ತನ್ನೂ ನೋಡಿದರು. ರಾಜಭಟರಿಗೆ ಮಾಂಡವ್ಯರ ಮೇಲೆಯೂ ಕಳ್ಳರಿಗೆ ಸೇರಿದವರೆಂದು ಸಂದೇಹವುಂಟಾಯಿತು. ಕಳ್ಳರೊಡನೆ ಅವರನ್ನೂ ತಟ್ಟಿ ಎಳೆದು ಕೊಂಡು ಹೋಗಿ ರಾಜನೊಡನೆ ತಿಳಿಸಿದರು. ರಾಜನು ಎಲ್ಲರನ್ನೂ ಕೊಲ್ಲಿರಿ ಎಂದು ಆಜ್ಞಾ ಮಾಡಿದನು. ರಾಜಭಟರು ಮಾಂಡವ್ಯರನ್ನು ಮಹಾನುಭಾವರು ಎಂದು ತಿಳಿಯದೆ, ಶೂಲದಲ್ಲಿ ಕೂತುಕೊಳ್ಳಿಸಿ ಹಣವನ್ನು ಹಿಡಿದುಕೊಂಡು ರಾಜನಿದ್ದಲ್ಲಿಗೆ ಹೋದರು. ಮಾಂಡವ್ಯರು ಶೂಲದಲ್ಲಿಯೇ ಇದ್ದುಕೊಂಡು ಬಹುದಿವಸ ಉಪವಾಸ ದಿಂದಲೇ ಬದುಕಿದ್ದರು. ಶೂಲದಲ್ಲಿ ಕೂತುಕೊಂಡೇ ಅವರು ತಪಸ್ಸು

1. ಮ.ಭಾ. ಆಪ. ಅ-106, 107

ಮಾಡಿಕೊಂಡಿರಲು ತಪಸ್ಸು ಮಾಡುತ್ತಿದ್ದ ಮುನಿಗಳು ಅತ್ಯಂತ ಸಂತಾಪವನ್ನು ಹೊಂದಿದರು. ಆ ಮುನಿಗಳು ರಾತ್ರಿಯಲ್ಲಿ ಪಕ್ಷಿಯ ರೂಪದಿಂದ ಅವರಿದ್ದಲ್ಲಿಗೆ ಬಂದು ತಮ್ಮ ಸ್ವರೂಪವನ್ನು ತಿಳಿಸಿ, ಪೂಜ್ಯರೇ ನೀವು ಏನು ಪಾಪವನ್ನು ಮಾಡಿದಿರಿ. ಯಾವುದರಿಂದ ಈರೀತಿಯಾಗಿ ಶೂಲಾರೋಪದಿಂದ ಮಹಾದುಃಖವುಂಟಾಯಿತು ಎಂದು ಕೇಳಿದರು.

ಆಗ ಋಷಿಗಳು ನಾನು ಯಾರಮೇಲೆ ದೋಷವನ್ನು ಹೇಳಲಿ? ನಾನು ಮಾಡಿದ ಪಾಪದ ಫಲವನ್ನೇ ಅನುಭವಿಸುತ್ತಿರುವೆನು ಎಂದರು. ಬಹುದಿವಸ ವಾದರೂ ಶೂಲದಲ್ಲೇ ಕೂತುಕೊಂಡು ತಪಸ್ಸು ಮಾಡುತ್ತಿರುವ ಮುನಿಗಳನ್ನು ನೋಡಿ ಭೃತ್ಯರು ಹೋಗಿ ರಾಜನೊಡನೆ ತಿಳಿಸಿದರು. ರಾಜನು ಮಂತ್ರಿಗಳೊಡನೆ ಅಲ್ಲಿಗೆ ಬಂದು ಶೂಲದ ಮೇಲೆ ಕೂತಿರುವ ಮಾಂಡವ್ಯರನ್ನು ಪ್ರಾರ್ಥನಾ ಮಾಡಿಕೊಂಡನು. ಮಹರ್ಷಿಗಳೇ! ನಾನು ತಿಳಿಯದೆ ತಮಗೆ ಅಪರಾಧವನ್ನು ಮಾಡಿ ದೆನು. ಕ್ಷಮಿಸಬೇಕು. ನನ್ನ ಮೇಲೆ ಕೋಪಿಸಿಗೊಳ್ಳಬಾರದು ಎಂದು ಕೇಳಿಕೊಂಡನು.

ಈ ರೀತಿಯಾಗಿ ರಾಜನು ಪ್ರಾರ್ಥಿಸಲು ಮಾಂಡವ್ಯರು ರಾಜನಿಗೆ ಅನುಗ್ರಹ ಮಾಡಿದರು. ತರುವಾಯ ರಾಜನು ಮಾಂಡವ್ಯರನ್ನು ಶೂಲದಿಂದ ಕೆಳಗೆ ಇಳಿಸಿದನು. ಶೂಲಕ್ಕೆ ಹೊರಗೆ ಸೆಳೆದರು. ಸೆಳೆಯಲಿಕ್ಕೆ ಸಾಧ್ಯವಾಗದೆ ಬುಡದಲ್ಲಿ ಕತ್ತರಿಸಿದರು. ಉಳಿದಭಾಗವು ಅವರ ದೇಹದಲ್ಲೇ ಇದ್ದಿತು. ಕುತ್ತಿಗೆಯಲ್ಲಿ ಶೂಲದ ಒಂದು ಭಾಗವು ಇದ್ದಿತು. ಅದು ಪುಷ್ಪದ ಬುಟ್ಟಿಯಲ್ಲಿ ಇಡಲಿಕ್ಕೆ ಆಯಿತು ಎಂದು ಕೊಂಡು ಹಾಗೆಯೇ ಸಂಚರಿಸುತ್ತಿದ್ದರು. ಶೂಲದ ತುದಿಯಭಾಗಕ್ಕೆ ಅಣೀ ಎಂದು ಹೆಸರು. ಅದು ಕುತ್ತಿಗೆಯಲ್ಲಿ ಇದ್ದಪ್ರಯುಕ್ತ ಅವರನ್ನು ಅಣೀಮಾಂಡವ್ಯರೆಂದೇ ಕೂಗಿದರು.

ಮಾಂಡವ್ಯರು ಯಮಲೋಕಕ್ಕೆ ಹೋಗಿ, ಆಸನದಲ್ಲಿ ಕೂತಿದ್ದ ಯಮದೇವರನ್ನು ನೋಡಿದರು. ನಾನು ತಿಳಿಯದೆ ಏನು ಪಾಪವನ್ನು ಮಾಡಿದೆನು! ನನಗೇಕೆ ಈರೀತಿಯಾಗಿ ಶೂಲಾರೋಪವು ಉಂಟಾಯಿತು? ಬೇಗನೆ ಹೇಳು. ತನ್ನ ತಪಸ್ಸಿನ ಬಲವನ್ನು ನೋಡು ಎಂದರು.

ಮಾಂಡವ್ಯರು ತಾನು ವಸಿಷ್ಠರಿಗೆ ಸಮಾನರಾಗಬೇಕೆಂದು ತಪಸ್ಸು ಮಾಡಿದ್ದರು. ಈರೀತಿ ತನಗೆ ಅಯೋಗ್ಯವಾದ ಫಲವನ್ನು ಅಪೇಕ್ಷಿಸಿಕೊಂಡು ತಪಸ್ಸು ಮಾಡಿದ ಪ್ರಯುಕ್ತ ಮಾಂಡವ್ಯರಾಗಿ ಶೂಲಾರೋಪವು ಏರ್ಪಟ್ಟಿತು. ಆದರೆ ಯಮದೇವರು ಮಾಂಡವ್ಯರಿಂದ ಶಾಪವನ್ನು ಹೊಂದಬೇಕೆಂಬ ಅಭಿಪ್ರಾಯದಿಂದಲೇ ಪತಂಗಗಳ ಬಾಲಕ್ಕೆ ಮುಳ್ಳನ್ನು ಕುಕ್ಕಿದಿರಿ. ಅದರಿಂದ ಈ ಫಲವು ಉಂಟಾಯಿತು. ಹೇಗೆ ದಾನವು

ಮಾಡಿದರೆ ಅದು ಮಹಾಫಲಕ್ಕೆ ಕಾರಣವಾಗುವುದೂ ಪಾಪವೂ ಕೂಡ ಬಹು ದುಃಖಕ್ಕೆ ಕಾರಣವಾಗುವುದು ಎಂದರು. ನಾನು ಯಾವ ಸಮಯದಲ್ಲಿ ಹಾಗೆ ಮಾಡಿದೆನು? ಎಂದು ಮಾಂಡವ್ಯರು ಕೇಳಲು ಬಾಲ್ಯದಲ್ಲಿ ಮಾಡಿದ್ದು ಎಂದು ಯಮದೇವರು ಹೇಳಿದರು.

ಅದಕ್ಕೆ ಮಾಂಡವ್ಯರು 'ಬಾಲಕನು ಹನ್ನೆರಡು ವರ್ಷದವರೆಗೆ ಮಾಡುವ ಕಾರ್ಯವು ಅವನಿಗೆ ಪಾಪವಾಗಲಾರದು. ಏಕೆಂದರೆ ಅವನಿಗೆ ಜ್ಞಾನವಿರುವುದಿಲ್ಲ. ನಾನು ಮಾಡಿದ ಸ್ವಲ್ಪ ಅಪರಾಧಕ್ಕೆ ದೊಡ್ಡ ಶಿಕ್ಷೆಯನ್ನು ಮಾಡಿದಿ. ಸರ್ವಪ್ರಾಣಿಗಳ ಸಂಹಾರಕ್ಕಿಂತಲೂ ಬ್ರಹ್ಮಹತ್ಯೆಯು ಅಧಿಕವಾದದ್ದು. ಆದುದರಿಂದ ನೀನು ಶೂದ್ರ ನಾಗಿ ಹುಟ್ಟುವಿ. ಲೋಕದಲ್ಲಿ ನಾನು ಮರ್ಯಾದೆಯನ್ನು ಸ್ಥಾಪಿಸುವೆನು. ಇನ್ನು ಮುಂದೆ ಹದಿನಾಲ್ಕು ವರ್ಷದವರೆಗೆ ಮಾಡಿದ್ದು ಪಾಪವಾಗಲಾರದು. ಆಮೇಲೆ ಮಾಡಿದ್ದು ಪಾಪವಾಗುವುದು ಎಂದರು. ಈಪ್ರಕಾರವಾಗಿ ಮಾಂಡವ್ಯರ ಶಾಪದಿಂದ ಯಮದೇವರು ವಿದುರನಾಗಿ ಹುಟ್ಟಿದರು.



## ಬಾಲಧಿ ಋಷಿಗಳ ಕಥೆ [1]

ಪೂರ್ವದಲ್ಲಿ ಬಾಲಧಿ ಎಂಬ ಋಷಿಗಳು ಇದ್ದರು. ಅವರು ಪುತ್ರಶೋಕದಿಂದ ಕೂಡಿದವರಾಗಿ ತಪಸ್ಸು ಮಾಡಿದರು. ದೇವತೆಗಳು ಪ್ರತ್ಯಕ್ಷರಾಗಿ ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದರು. ಅದಕ್ಕೆ ಬಾಲಧಿಋಷಿಗಳು ತನಗೆ ಮರಣವಿಲ್ಲದ ಮಗ ನನ್ನು ಕೊಡಬೇಕೆಂದು ಕೇಳಿಕೊಂಡರು. ಅದಕ್ಕೆ ದೇವತೆಗಳು ಮನುಷ್ಯ ನಾದವನು ಮರಣವಿಲ್ಲದೆ ಇದ್ದವನು ಇಲ್ಲವೇ ಇಲ್ಲ. ಏನಾದರೂ ನಿಮಿತ್ತದಿಂದ ಆಯುಷ್ಯ ವುಳ್ಳವನಾದ ಮಗನು ಆಗಬಹುದು' ಎಂದರು.

ಅದಕ್ಕೆ ಬಾಲಧಿಋಷಿಗಳು ಈ ಪರ್ವತಗಳು ಇರುವ ಪರ್ಯಂತ ನನ್ನ ಮಗನು ಬದುಕಲಿ ಎಂದು ಕೇಳಿಕೊಂಡರು. ದೇವತೆಗಳು ಹಾಗೆಯೇ ಆಗಲಿ ಎಂದರು.

ತರುವಾಯ ಬಾಲಧಿಋಷಿಗಳಿಗೆ ಮೇಧಾವಿ ಎಂಬ ಮಗನು ಹುಟ್ಟಿದನು. ಅವನು ಈ ಪ್ರಕಾರವಾಗಿ ವರವನ್ನು ಪಡೆದ ಪ್ರಯುಕ್ತ ಅಹಂಕಾರದಿಂದ ಋಷಿ ಗಳಿಗೆಲ್ಲಾ ಅವಮಾನಮಾಡುತ್ತಾ ಇದ್ದನು. ಹಾಗೆಯೇ ಭೂಮಿಯಲ್ಲಿ ಸಂಚರಿಸುತ್ತಾ

1. ಮ.ಭಾ.ವ.ಪ. ಅ.137 (ಪು.ನಾ.ಚೂ)

ಇದ್ದನು. ಒಂದುದಿನ ಜ್ಞಾನಿಗಳಾದ ಧನುಷಾಕ್ಷ ಎಂಬ ಋಷಿಗಳ ಬಳಿಗೆ ಹೋದನು. ಆ ಋಷಿಗಳಿಗೂ ಅವಮಾನ ಮಾಡಿದನು. ಆಗ ಆ ಋಷಿಗಳು ಕೋಪವುಳ್ಳವರಾಗಿ ಭಸ್ಮವಾಗು ಎಂದು ಶಾಪಕೊಟ್ಟರು. ಆದರೆ ಮೇಧಾವಿಯು ಭಸ್ಮನಾಗಲಿಲ್ಲ. ಆರೋಗ್ಯದಿಂದ ಇರುವುದನ್ನು ನೋಡಿ ಯೋಚಿಸಿ ಅದರ ಕಾರಣವನ್ನು ತಿಳಿದು ತಾನು ಕೋಣದ ರೂಪವನ್ನು ಧರಿಸಿ ಆ ಪರ್ವತಗಳನ್ನು ಪುಡಿಪುಡಿ ಮಾಡಿದರು. ಈರೀತಿಯಾಗಿ ಪರ್ವತಗಳನ್ನು ಪುಡಿ ಮಾಡಲು ಕೂಡಲೇ ಮೇಧಾವಿಯು ಪ್ರಾಣಬಿಟ್ಟನು. ಸತ್ತುಹೋದ ಮಗನನ್ನು ಎತ್ತಿಕೊಂಡು ಬಾಲಋಷಿಗಳು ವಿಲಾಪವನ್ನು ಮಾಡಿದರು. ಅಳುತ್ತಾ ಇರುವ ಆ ಮುನಿಗಳೊಡನೆ ಇತರ ಋಷಿಗಳು 'ದೈವೇಚ್ಛೆಯನ್ನು ಮೀರಲಿಕ್ಕೆ ಒಬ್ಬರಿಗೂ ಆಗಲಾರದು. ಧನುಷಾಕ್ಷ ಋಷಿಗಳು ಪರ್ವತಗಳನ್ನೇ ಪುಡಿ ಮಾಡಿದರು' ಎಂದು ಸಮಾಧಾನಪಡಿಸಿದರು.



## ಅಷ್ಟಾವಕ್ರರ ಕಥೆ [1]

ಉದ್ದಾಲಕ ಎಂಬ ಋಷಿಗಳಿಗೆ ಕಹೋಳ ಎಂಬ ಶಿಷ್ಯರಿದ್ದರು. ಅವರು ಬಹುಕಾಲ ಗುರುಗಳ ಸೇವೆಯನ್ನು ಮಾಡುತ್ತಾ ವೇದಗಳ ಅಧ್ಯಯನವನ್ನು ಮಾಡಿದರು. ಅವರನ್ನು ನೋಡಿ ಎಲ್ಲಾ ಬ್ರಾಹ್ಮಣರೂ ಇತರ ಶಿಷ್ಯರೂ ತಿರಸ್ಕಾರ ಮಾಡಿದರು. ಅದನ್ನು ನೋಡಿ ಗುರುಗಳು ಇತರ ಶಿಷ್ಯರೂ ತಿರಸ್ಕಾರ ಮಾಡಿದರು. ಅದನ್ನು ನೋಡಿ ಗುರುಗಳು ಆಗಲೇ ಪಾಠ ಹೇಳಿದರು. ತನ್ನ ಮಗಳಾದ ಸುಜಾತೆಯನ್ನು ಮದುವೆ ಮಾಡಿಕೊಟ್ಟರು. ಸುಜಾತೆಯಲ್ಲಿ ಅಗ್ನಿಯಂತೆ ಇರುವ ಗರ್ಭವುಂಟಾಯಿತು. ಗರ್ಭದಲ್ಲಿ ಇದ್ದ ಮಗುವು ತಂದೆಯೇ! ಎಲ್ಲಾ ರಾತ್ರಿ ಅಧ್ಯಯನ ಮಾಡುತ್ತೀರಿ. ಆದರೂ ನಿಮಗೆ ಇನ್ನೂ ವೇದವು ಬರುವುದಿಲ್ಲವಲ್ಲಾ. ಎಂದು ಅಪಹಾಸಮಾಡಿತು. ಇತರ ಶಿಷ್ಯರ ಮಧ್ಯದಲ್ಲಿ ಗರ್ಭದಲ್ಲಿದ್ದ ಆ ಮಗುವು ಈರೀತಿಯಾಗಿ ನಿಂದಾಮಾಡಲು ಕಹೋಳನು ಕೋಪಿಸಿಕೊಂಡು ನೀನು ವಕ್ರವಾಗಿ ಮಾತಾಡಿದಿಯಾದ ಕಾರಣ ಎಂಟು ಸ್ಥಳದಲ್ಲಿ ವಕ್ರವಾಗಿ ಆಗು ಎಂದು ಶಾಪ ಕೊಟ್ಟರು. ಹಾಗೆಯೇ ಮಗುವು ಎಂಟು ಸ್ಥಳದಲ್ಲಿ ವಕ್ರವಾಯಿತು. ಆದುದರಿಂದ ಮಗುವಿಗೆ ಅಷ್ಟಾವಕ್ರ ಎಂದು ಹೆಸರು. ಉದ್ದಾಲಕರ ಮಗನಾದ ಶ್ವೇತಕೇತುವು

1. ಮ.ಭಾ.ವ.ಪ. ಅ. 132-134

ಅಷ್ಟಾವಕ್ರರಿಗೆ ಸಮಾನ ವಯಸ್ಸಿನವರು ಸೋದರಮಾವನು. ಅಷ್ಟಾವಕ್ರರು ಹುಟ್ಟುವ ಮೊದಲುಗರ್ಭದಲ್ಲಿರುವಾಗ ಏಕಾಂತದಲ್ಲಿ ಗಂಡನೊಡನೆ ನನಗೆ ಹಣವಿಲ್ಲ. ನನಗೆ ಈಗ ಹತ್ತು ತಿಂಗಳಾಯಿತು. ಸ್ವಲ್ಪವೂ ಹಣವಿಲ್ಲದೆ ಏನು ಮಾಡುವುದು? ನಮಗೆ ಒಬ್ಬರೂ ಹಣವನ್ನು ಕೊಡುವವರಿಲ್ಲ. ನಾನು ಈ ಆಪತ್ತನ್ನು ಹೇಗೆ ಪರಿಹರಿಸಿ ಕೊಳ್ಳಲಿ' ಎಂದಳು.

ಈರೀತಿಯಾಗಿ ಹೆಂಡತಿಯೂ ಹೇಳಲು ಕಹೋಳರು ಹಣಕ್ಕೋಸ್ಕರ ಜನಕ ರಾಜನಿದ್ದಲ್ಲಿಗೆ ಹೋದರು. ಅಲ್ಲಿ ಇದ್ದ ವಂದಿ ಎಂಬ ವಿದ್ವಾಂಸನು ವಾದಮಾಡಿ ಜಯಿಸಿ ನೀರಿನಲ್ಲಿ ಮುಳುಗಿಸಿಬಿಟ್ಟನು. ಉದ್ದಾಲಕನು ಈರೀತಿಯಾಗಿ ಸೂತ ಜಾತಿಯವನಾದ ವಂದಿಯಿಂದ ಕಹೋಳರು ಮುಳುಗಿಸಲ್ಪಟ್ಟದ್ದನ್ನು ಕೇಳಿ ಮಗಳಾದ ಸುಜಾತೆಯೊಡನೆ ಈ ವಿಷಯವನ್ನು ಅಷ್ಟಾವಕ್ರನಿಗೆ ತಿಳಿಸಬಾರದು ಎಂದರು. ಹಾಗೆ ಅಷ್ಟಾವಕ್ರರು ಹುಟ್ಟಿದ ಮೇಲೆಯೂ ಈ ವಿಷಯವನ್ನು ತಿಳಿಸಲೇ ಇಲ್ಲ. ಅಷ್ಟಾವಕ್ರರು ತನ್ನ ತಂದೆಯೆಲ್ಲಿ ಎಂದು ಕೇಳಲೂ ಇಲ್ಲ. ಉದ್ದಾಲಕರೇ ತಂದೆಯೆಂದು ಶ್ವೇತಕೇತುವು ಅಣ್ಣನೆಂದು ತಿಳಿದುಕೊಂಡಿದ್ದರು. ತರುವಾಯ ಹನ್ನೆರಡು ವರ್ಷದಲ್ಲಿ ಶ್ವೇತಕೇತುವು ತಂದೆಯ ತೊಡೆಯಲ್ಲಿ ಕೂತಿರುವ ಅಷ್ಟಾವಕ್ರರನ್ನು ಅಳುತ್ತಿರುವಂತೆ ಕೈಹಿಡಿದು ಸೆಳೆದು ಹಾಕಿದನು. ಇದು ನಿನ್ನ ತಂದೆಯ ತೊಡೆಯಲ್ಲ ಎಂದನು. ಅದನ್ನು ಕೇಳಿ ಅಷ್ಟಾವಕ್ರರಿಗೆ ಮನಸ್ಸಿನಲ್ಲಿ ತುಂಬಾ ದುಃಖವಾಯಿತು. ತರುವಾಯ ಅವರು ಮನೆಗೆ ಹೋಗಿ ತಾಯಿಯೊಡನೆ ನನ್ನ ತಂದೆಯು ಎಲ್ಲಿಗೆ ಹೋಗಿದ್ದಾರೆ ಎಂದು ಕೇಳಿದರು. ಆಗ ಸುಜಾತೆಯು ಬಹಳ ದುಃಖವುಳ್ಳವಳಾಗಿ ಹೇಳದಿದ್ದರೆ ಶಾಪ ಕೊಡುವರೆಂಬ ಭಯದಿಂದ ಸತ್ಯವಾದ ವಿಷಯವನ್ನೆಲ್ಲಾ ಹೇಳಿದರು. ಎಲ್ಲಾ ವಿಷಯ ವನ್ನೂ ತಿಳಿದು ಅಷ್ಟಾವಕ್ರರು ರಾತ್ರಿಯಲ್ಲಿ ಶ್ವೇತಕೇತುವಿನೊಡನೆ 'ನಾವು ಜನಕರಾಜನ ಯಜ್ಞಕ್ಕೆ ಹೋಗುವ. ಆ ಯಜ್ಞವು ಬಹು ಆಶ್ಚರ್ಯಕರವಾಗಿದೆಯೆಂದು ಕೇಳುತ್ತೇವೆ. ಅಲ್ಲಿ ಬ್ರಾಹ್ಮಣರ ವಿವಾದವನ್ನು ಕೇಳುವ. ಒಳ್ಳೇ ಅನ್ನವನ್ನು ಭೋಜನ ಮಾಡುವ. ನಮಗೆ ಒಳ್ಳೇ ಪಾಂಡಿತ್ಯವುಂಟಾಗುವುದು. ಅಲ್ಲಿಯ ವೇದಘೋಷವು ಕೇಳಲಿಕ್ಕೆ ಚೆನ್ನಾಗಿರುವುದು ಎಂದು ಹೇಳಿದರು. ತರುವಾಯ ಅವರಿಬ್ಬರು ಸೋದರಮಾವ ಸೋದರ ಅಳಿಯಂದಿರು ಜನಕರಾಜನ ಯಾಗಕ್ಕೆ ಹೋದರು.

ಹೋಗುವಾಗ ದಾರಿಯಲ್ಲಿ ರಾಜನು ಸಿಕ್ಕಿದನು. ನನಗೆ ದಾರಿಯನ್ನು ಬಿಟ್ಟುಕೊಡು ಎಂದನು. ಆಗ ಅಷ್ಟಾವಕ್ರರು 'ಕುರುಡನಿಗೂ ಕಿವುಡನಿಗೂ ಹೆಂಗಸ ರಿಗೂ ಭಾರವನ್ನು ಹೊತ್ತವನಿಗೂ ದಾರಿಯನ್ನು ಬಿಟ್ಟುಕೊಡಬೇಕು. ರಾಜನಿಗೆ

ಬ್ರಾಹ್ಮಣರು ಹೊರತು ಇತರರು ದಾರಿಬಿಡಬೇಕು. ಬ್ರಾಹ್ಮಣನಿಗೆ ರಾಜನೇ ದಾರಿಯನ್ನು ಬಿಡಬೇಕು' ಎಂದರು.

ರಾಜನು 'ಸರಿ. ನಿನಗೆ ನಾನೇ ದಾರಿಯನ್ನು ಬಿಟ್ಟಿದ್ದೇನೆ. ಯಾವ ಮಾರ್ಗದಿಂದ ಇಚ್ಛಿಸುವಿಯೋ ಆ ಮಾರ್ಗದಿಂದ ಹೋಗು. ಇಂದ್ರದೇವರೂ ಬ್ರಾಹ್ಮಣರಿಗೆ ನಮಸ್ಕರಿಸುವರು' ಎಂದು ಹೇಳಿ ದಾರಿಯನ್ನು ಬಿಟ್ಟನು.

ತರುವಾಯ ಅಷ್ಟಾವಕ್ರರು ತನ್ನ ಸೋದರಮಾವನಾದ ಶ್ವೇತಕೇತುವಿನಿಂದ ಕೂಡಿಕೊಂಡು ಯಜ್ಞಶಾಲೆಗೆ ಹೋಗಲು ದ್ವಾರಪಾಲಕನು ಒಳಗೆ ಹೋಗದಂತೆ ತಡೆದನು. ಆಗ ಅಷ್ಟಾವಕ್ರರು 'ನಾವು ಯಜ್ಞವನ್ನು ನೋಡಲು ಬಂದಿದ್ದೇವೆ. ನಮಗೆ ನೋಡಬೇಕೆಂದು ತುಂಬಾ ಕುತೂಹಲವಿದೆ. ನಾವು ಅತಿಥಿಗಳು ಬಂದಿದ್ದೇವೆ. ನಿನ್ನ ಆಜ್ಞೆಯನ್ನು ಅಪೇಕ್ಷಿಸುತ್ತೇವೆ. ಜನಕ ಮಹಾರಾಜನ ಯಾಗವನ್ನು ನೋಡಬೇಕು ಎಂಬ ಆಸೆಯಿಂದ ಬಂದಿದ್ದೇವೆ. ಜನಕರಾಜನನ್ನು ನೋಡಬೇಕೆಂದೂ ಬಂದಿದ್ದೇವೆ. ಕೋಪಿಸಿಕೊಳ್ಳಬೇಡ. ಆ ವಂದಿಯ ಹತ್ತಿರ ನನ್ನನ್ನು ಕರಕೊಂಡು ಹೋಗು' ಎಂದರು.

ಅದಕ್ಕೆ ದ್ವಾರಪಾಲಕನು 'ನಾವು ವಂದಿಯ ಆಜ್ಞೆಯಂತೆ ಇರುವವರು. ಇಲ್ಲಿ ಹುಡುಗರೆಲ್ಲಾ ಪ್ರವೇಶಮಾಡಬಾರದು. ವೃದ್ಧರಾದ ಪಂಡಿತರಾದ ಬ್ರಾಹ್ಮಣಶ್ರೇಷ್ಠರು ಪ್ರವೇಶಿಸಬೇಕು' ಎಂದನು.

ಅಷ್ಟಾವಕ್ರರು 'ವೃದ್ಧರಿಗೆ ಪ್ರವೇಶವಿದ್ದರೆ ನಾವು ಪ್ರವೇಶಿಸಬಹುದು. ನಾವು ವೃದ್ಧರೇ. ವೇದಪ್ರಭಾವವುಳ್ಳವರು. ವೇದಾಂತಶಾಸ್ತ್ರದಲ್ಲಿ ನಿಶ್ಚಯವುಳ್ಳವರು. ಬಾಲ ಎಂದು ತಿರಸ್ಕಾರಮಾಡಬಾರದು. ಅಗ್ನಿಯು ಚಿಕ್ಕದಾಗಿದ್ದರೂ ಮುಟ್ಟಿದರೆ ಸುಡುತ್ತದೆ' ಎಂದರು. ಮತ್ತೂ ದ್ವಾರಪಾಲಕನೊಡನೆ ವಿವಾದವನ್ನು ಮಾಡಿ 'ತಲೆಬೆಳ್ಳಗಾದ ಪ್ರಯುಕ್ತ ವೃದ್ಧ ಎಂದು ಹೇಳಲಾಗದು. ಬಾಲಕನಾದರೂ ಯಾರು ಜ್ಞಾನಿಯೋ ಅವನೇ ವೃದ್ಧನೆನಿಸಿಕೊಳ್ಳುವನು. ನಾನು ರಾಜಸಭೆಯಲ್ಲಿ ವಂದಿಯನ್ನು ನೋಡಲಿಕ್ಕೆ ಬಂದಿರುವೆನು. ರಾಜನ ಹತ್ತಿರ ನನ್ನನ್ನು ತಿಳಿಸು. ಈಗಲೇ ಪಂಡಿತರೊಡನೆ ಮಾತಾಡುವುದನ್ನು ವಾದದಲ್ಲಿ ವಂದಿಯನ್ನು ಜಯಿಸುವುದನ್ನೂ ನೋಡು' ಎಂದರು.

ದ್ವಾರಪಾಲಕನು ವಿನಯವುಳ್ಳ ಪಂಡಿತರಿಗೆ ಪ್ರವೇಶಿಸಲಿಕ್ಕೆ ಯೋಗ್ಯವಾದ ಯಾಗಶಾಲೆಯನ್ನು ಹತ್ತುವರ್ಷದ ಬಾಲಕನಾದ ನೀನು ಹೇಗೆ ಪ್ರವೇಶಿಸುವೆ? ನೀನು

ಒಳಗೆ ಪ್ರವೇಶಿಸುವಂತೆ ಉಪಾಯವನ್ನು ಹೇಳುವೆನು. ನೀನೂ ಪ್ರಯತ್ನಪಡು. ನೀನು ಮಹಾರಾಜರನ್ನು ಸ್ತೋತ್ರಮಾಡು. ಆಗ ರಾಜರು ಪ್ರೀತರಾಗಿ ನಿನಗೆ ಒಳಗೆ ಬರಲಿಕ್ಕೆ ಅನುಜ್ಞೆಯನ್ನು ಕೊಡುವರು. ನಿನ್ನ ಇಷ್ಟವನ್ನು ಕೊಡುವರು' ಎಂದನು.

ಆಗ ಅಷ್ಟಾವಕ್ರರು 'ಮಹಾರಾಜನೇ! ಜನಕವಂಶದಲ್ಲಿ ಶ್ರೇಷ್ಠನಾದವನೇ! ನೀನು ಚಕ್ರವರ್ತಿಯಾಗಿರುವಿ. ನೀನೊಬ್ಬ ಯಜ್ಞವನ್ನು ಮಾಡುವವನು. ಪೂರ್ವದಲ್ಲಿ ಯಯಾತಿಯ ರಾಜನೊಬ್ಬನು ಯಜ್ಞವನ್ನು ಮಾಡುವವರಲ್ಲಿ ಶ್ರೇಷ್ಠನಿದ್ದನು. ಈಗಿನ ಕಾಲದಲ್ಲಿ ನೀನು ಶ್ರೇಷ್ಠನಿದ್ದೀಯ. ಪೂರ್ವಾಗ್ರಹ ಸಂಶಯ ಪೀಡಿತನಾದ ವಂದಿಯು ಪಂಡಿತರನ್ನು ವಾದದಲ್ಲಿ ನಿಗ್ರಹಿಸಿ ಅನಂತರ ನಿನ್ನಿಂದ ನಿಯುಕ್ತರಾದ ಆಪ್ತಪುರುಷರಿಂದ ಸಮುದ್ರದ ನೀರಿನಲ್ಲಿ ಮುಳುಗಿಸುತ್ತಾನೆ ಎಂದು ಕೇಳಿದ್ದೇವೆ.

ಅದಕ್ಕೆ ರಾಜನು 'ವಂದಿಯ ವಾಕ್ಯಸಾಮರ್ಥ್ಯವನ್ನು ತಿಳಿಯದೆ ವಂದಿಯನ್ನು ಜಯಿಸುವೆನೆಂದು ಹೇಳುವಿ. ಎಷ್ಟೋ ಬ್ರಾಹ್ಮಣರು ವಂದಿಯ ಸಾಮರ್ಥ್ಯವನ್ನು ತಿಳಿಯದೆ ವಂದಿಯನ್ನು ಜಯಿಸಲು ಬಂದು ಸೂರ್ಯನಿಂದ ನಕ್ಷತ್ರಗಳಂತೆ ಪ್ರಕಾಶ ಹೀನರಾದರು. ನಿನಗೆ ಜಯಿಸಬೇಕೆಂದು ಆಸೆಯು ಬಲವಾಗಿದೆ. ಆ ವಂದಿಯನ್ನು ನಾಶವನ್ನು ಹೊಂದುವಿ ಎಂದನು.

ಅಷ್ಟಾವಕ್ರರು 'ನನ್ನಂತೆ ಇರುವವರಿಂದ ಅವನು ವಿವಾದವನ್ನು ಮಾಡಿಲ್ಲ. ಆದುದರಿಂದ ಸಿಂಹದಂತೆ ತನ್ನನ್ನು ತಿಳಿದುಕೊಂಡು ಅಂಜಿಕೆಯಿಲ್ಲದೆ ಮಾತನಾಡು ವನು. ನನ್ನನ್ನು ಹೊಂದಿ ಮುರಿದುಹೋದ ಚಕ್ರವುಳ್ಳ ಬಂಡಿಯಂತೆ ಕೆಳಗೆ ಮಲಗುವನು' ಎಂದರು. ತರುವಾಯ ರಾಜನೊಡನೆ ಸ್ವಲ್ಪ ವಿವಾದವಾಯಿತು. ಕೊನೆಗೆ ರಾಜನು ತನ್ನ ಕೇಳಿದ ಪ್ರಶ್ನೆಗಳಿಗೆಲ್ಲಾ ಅಷ್ಟಾವಕ್ರರು ಉತ್ತರವನ್ನು ಹೇಳಿದ್ದನ್ನು ನೋಡಿ 'ದೇವತೆಯಂತೆ ಸಾಮರ್ಥ್ಯವುಳ್ಳವನೇ! ನಾನು ನಿನ್ನನ್ನು ಮನುಷ್ಯನೆಂದು ತಿಳಿಯುವುದಿಲ್ಲ. ನೀನು ಬಾಲಕನಲ್ಲ. ನೀನು ವೃದ್ಧನೆಂದೇ ತಿಳಿದಿರುವೆನು. ವಚನ ದಲ್ಲಿ ನಿನಗೆ ಸಮಾನರೊಬ್ಬರೂ ಇಲ್ಲ. ನಿನಗೆ ಒಳಗೆ ಪ್ರವೇಶಕ್ಕೆ ಅನುಮತಿಯನ್ನು ಕೊಡುತ್ತೇನೆ' ಎಂದನು.

ಅಷ್ಟಾವಕ್ರರು ಒಳಗೆ ಪ್ರವೇಶಿಸಿ 'ಎಲೋ ವಂದಿಯೇ! ನನ್ನಿಂದ ನೀನು ತಪ್ಪಿಸಿಕೊಳ್ಳಲಿಕ್ಕೆ ಆಗಲಾರದು. ನನ್ನ ಹತ್ತಿರ ವಾದಮಾಡಿ ನೀರಿನಲ್ಲಿ ಮುಳುಗುವಿ. ನನ್ನೊಡನೆ ವಾದ ಮಾಡಲಿಕ್ಕೆ ಸಿದ್ಧನಾಗಿರು' ಎಂದರು.

ವಂದಿಯು 'ಮಲಗಿರುವ ಹುಲಿಯನ್ನು ಎಬ್ಬಿಸಬೇಡ. ಮಲಗಿರುವ ಹಾವನ್ನು ಕಾಲಿನಿಂದ ಒದೆದರೆ ಅದು ಕಚ್ಚದೆ ಬಿಡದು. ದುರ್ಬಲನಾದ ಪುರುಷನು ಕೈಯಿಂದ

ಪರ್ವತವನ್ನು ಒಡೆದು ಅವನ ಕೈಯೇ ಸೀಳಿಹೋಗುವುದಲ್ಲದೆ ಪರ್ವತದಲ್ಲಿ ಗಾಯವಾಗಲಾರದು' ಎಂದನು.

ಅಷ್ಟಾವಕ್ರರು 'ಹೇಗೆ ಎಲ್ಲಾ ಪರ್ವತಗಳೂ ಮೈನಾಕಪರ್ವತಕ್ಕಿಂತ ಹೀನ ಗಳೋ ಹಾಗೇ ರಾಜರೂ ಜನಕ ರಾಜನಿಗಿಂತ ಕಡಿಮೆಯಾಗುವರು. ಮಹಾರಾಜನೇ ದೇವತೆಗಳಲ್ಲಿ ಇಂದ್ರದೇವರಂತೆಯೂ ನದಿಗಳಲ್ಲಿ ಗಂಗೆಯಂತೆಯೂ ರಾಜರಲ್ಲಿ ನೀನೊಬ್ಬ ಶ್ರೇಷ್ಠನು. ವಂದಿಯನ್ನು ನನ್ನ ಹತ್ತಿರ ಕರೆದುಕೊಂಡು ಬಾ' ಎಂಗು ಗರ್ಜಿಸಿದರು. ತರುವಾಯ ಕೋಪವುಳ್ಳವರಾಗಿ ವಂದಿಯೊಡನೆ ನಾನು ಹೇಳಿದ್ದಕ್ಕೆ ನೀನು ಉತ್ತರವನ್ನು ಹೇಳು. ನಿನ್ನ ವಾಕ್ಯಕ್ಕೆ ನಾನು ಉತ್ತರವನ್ನು ಹೇಳುತ್ತೇನೆ' ಎಂದರು.

ತರುವಾಯ ವಂದಿಗೂ ಅಷ್ಟಾವಕ್ರರಿಗೂ ಉತ್ತರ ಪ್ರತ್ಯುತ್ತರಗಳು ನಡೆದು ಕೊನೆಗೆ ವಂದಿಯು ಉತ್ತರವಿಲ್ಲದವನಾದನು. ಧ್ಯಾನ ಮಾಡುತ್ತಾ ಮುಖವನ್ನು ತಗ್ಗಿಸಿ ಕೂತನು. ಅಷ್ಟಾವಕ್ರರು ಹೇಳುತ್ತಲೇ ಇದ್ದರು. ಬ್ರಾಹ್ಮಣರೆಲ್ಲರೂ ಅಷ್ಟಾವಕ್ರರನ್ನು ಪೂಜಿಸಿ ಕೈಮುಗಿದರು.

ಅಷ್ಟಾವಕ್ರರು 'ಇವನು ಪೂರ್ವದಲ್ಲಿ ಬ್ರಾಹ್ಮಣರನ್ನೆಲ್ಲ ವಾದದಲ್ಲಿ ಜಯಿಸಿ ನೀರಿನಲ್ಲಿ ಮುಳುಗಿಸಿದ್ದಾನೆ. ಇವನಿಗೂ ಅದೇ ಗತಿಯಾಗಬೇಕು. ಇವನನ್ನು ಹಿಡಿದು ಬೇಗನೇ ಮುಳುಗಿಸಬೇಕು' ಎಂದರು.

ಆದಕ್ಕೆ ವಂದಿಯು 'ನಾನು ವರುಣದೇವರ ಮಗನು ಜನಕರಾಜನೇ! ವರುಣ ಲೋಕದಲ್ಲಿ ನಿನ್ನ ಸತ್ರಯಾಗದಂತೆ ಹನ್ನೆರಡು ವರ್ಷಕಾಲ ಸತ್ರಯಾಗವಾಗುತ್ತಿದೆ. ಅದಕ್ಕೋಸ್ಕರ ನೀನು ಬ್ರಾಹ್ಮಣಶ್ರೇಷ್ಠರನ್ನು ಅಲ್ಲಿಗೆ ಕೊಟ್ಟು ಕಳುಹಿಸಿದ್ದೇನೆ. ಅವರೆಲ್ಲರೂ ವರುಣದೇವರ ಯಜ್ಞವನ್ನು ನೋಡಲಿಕ್ಕೆ ಹೋದವರು. ಪುನಃ ಇಲ್ಲಿಗೆ ಬರುವರು. ನಾವು ಪೂಜ್ಯನಾದ ಅಷ್ಟಾವಕ್ರನನ್ನು ಪೂಜಿಸುತ್ತೇನೆ. ನಾನು ಅವನಿಂದಾಗಿ ಈಗ ನೀರಿನಲ್ಲಿ ಮುಳುಗಿ ತಂದೆಯ ಹತ್ತಿರ ಹೋಗುವೆನು' ಎಂದರು.

ಅಷ್ಟಾವಕ್ರರು 'ಕುತರ್ಕಗಳಿಂದ ಪಂಡಿತರನ್ನು ಜಯಿಸಿದ ಈ ವಂದಿಯನ್ನು ನಾನು ಜಯಿಸಿದ್ದೇನೆ. ರಾಜನೇ! ಏನು ನಾನು ಹೇಳುತ್ತಿರುವ ಮಾತು ಕಿವಿಗೆ ಬೀಳಲಿಲ್ಲವೇ? ಅಥವಾ ಸ್ತೋತ್ರಗಳು ನಿನಗೆ ಭ್ರಾಂತಿ ಉಂಟು ಮಾಡಿವೆಯೋ? ಯಾಕೆ ನನ್ನ ಮಾತನ್ನು ಕೇಳುವುದಿಲ್ಲವೆ' ಎಂದರು.

ರಾಜನು 'ದಿವ್ಯವಾದ ನಿನ್ನ ಮಾತುಗಳನ್ನು ಕೇಳುತ್ತಲೇ ಇದ್ದೇನೆ. ದಿವ್ಯವುಳ್ಳವ

ನಾಗಿದ್ದಿ. ನೀನು ವಂದಿಯನ್ನು ವಾದದಲ್ಲಿ ಜಯಿಸಿ ನಿನ್ನ ಇಷ್ಟಪ್ರಕಾರವಾಗಿ ವಂದಿಯನ್ನು ನಿನ್ನ ವಶಧಲ್ಲಿ ಬಿಟ್ಟಿದ್ದೇನೆ' ಎಂದರು.

ಅಷ್ಟಾವಕ್ರರು 'ಇವನು ಬದುಕಿ ಯಾವ ಪ್ರಯೋಜನವೂ ಇಲ್ಲ. ಇನ್ನು ಇವನ ತಂದೆ ವರುಣದೇವರು ಎಂದು ಹೇಳಿಕೊಂಡಿಲ್ಲವೇ? ಆದರೆ ಆಗಲಿ. ಇವನನ್ನು ನೀರಿನಲ್ಲಿ ಮುಳುಗಿಸಿಬಿಡಿರಿ' ಎಂದರು.

ಅದಕ್ಕೆ ವಂದಿಯು 'ನಾನು ವರುಣದೇವರ ಮಗನು. ನೀರಿನಲ್ಲಿ ಮುಳುಗಿದರೆ ನನಗೆ ಭಯವಿಲ್ಲ. ಬಹುಕಾಲ ಕಾಣಿಸದೆ ಹೋದ ಕಹೋಳರನ್ನು ಇದೇ ಮುಹೂರ್ತಲ್ಲೇ ಅಷ್ಟಾವಕ್ರರು ನೋಡುವರು ಎಂದನು.

ತರುವಾಯ ವಂದಿಯು ನೀರಿನಲ್ಲಿ ಮುಳುಗಿಸಿದ್ದ ಬ್ರಾಹ್ಮಣರೆಲ್ಲರೂ ವರುಣ ದೇವರಿಂದ ಪೂಜಿಸಲ್ಪಟ್ಟವರಾಗಿ ಜನಕರಾಜನ ಸಮೀಪಕ್ಕೆ ಬಂದರು. ಕಹೋಳರೂ ಬಂದರು. ಕಹೋಳರು ಜನಕರಾಜನೊಡನೆ 'ಇದಕ್ಕೋಸ್ಕರವೇ ಜನರು ಮಕ್ಕಳನ್ನು ಅಪೇಕ್ಷಿಸುವರು. ನನ್ನಿಂದ ಮಾಡಲಿಕ್ಕೆ ಅಶಕ್ಯವಾದ ಕಾರ್ಯವನ್ನು ನನ್ನ ಮಗನು ಮಾಡಿದನು? ಎಂದು ಹೇಳಿದರು.

ಆಗ ವಂದಿಯು 'ರಾಜನೇ! ಯಮದೇವರೇ ನಿನ್ನ ಶತ್ರುಗಳ ತಲೆಗಳನ್ನು ತೀಕ್ಷ್ಣವಾದ ಪರಶುವಿನಿಂದ ಕಡಿಯಲಿ. ನಿನ್ನ ಯಜ್ಞದಲ್ಲಿ ಉತ್ತಮವಾದ ಸಾಮವನ್ನು ಗಾನಮಾಡುತ್ತಿರುವರು. ಈ ಸತ್ರಯಾಗದಲ್ಲಿ ಚೆನ್ನಾಗಿ ಸೋಮಪಾನವನ್ನು ಮಾಡು ತ್ತಿರುವರು. ದೇವತೆಗಳೆಲ್ಲಾ ಪ್ರತ್ಯಕ್ಷವಾಗಿ ಸಂತೋಷದಿಂದ ಹವಿರ್ಭಾಗಗಳನ್ನು ಸ್ವೀಕರಿಸಿರುವರು? ಎಂದನು.

ತರುವಾಯ ಎಲ್ಲಾ ಬ್ರಾಹ್ಮಣರೂ ಪ್ರಕಾಶಮಾನರಾಗಿ ನೀರಿನಿಂದ ಎದ್ದುಬರಲು ವಂದಿಯು ಜನಕರಾಜನ ಆನುಜ್ಞೆಯನ್ನು ಹೊಂದಿ ಸಮುದ್ರದ ನೀರಿನಲ್ಲಿ ಮುಳುಗಿ ಹೋದನು. ಅಷ್ಟಾವಕ್ರರು ತಂದೆಯನ್ನು ಪೂಜಿಸಿ, ಬ್ರಾಹ್ಮಣರಿಂದ ಪೂಜಿಸಲ್ಪಟ್ಟವ ರಾಗಿ ವಂದಿಯನ್ನು ಜಯಿಸಿ ಸೋದರಮಾವನಾದ ಶ್ವೇತಕೇತುವಿನಿಂದ ಕೂಡಿ ಕೊಂಡು ಆಶ್ರಮಕ್ಕೆ ಬಂದರು. ತರುವಾಯ ಕಹೋಳರು ತನ್ನ ಪತ್ನಿಯನ್ನು ಸಮೀಪ ದಲ್ಲಿ ಅಷ್ಟಾವಕ್ರರೊಡನೆ 'ಈ ಮಧುವಿಲಾ ಎಂಬ ನದಿಯಲ್ಲಿ ಸ್ನಾನಮಾಡು' ಎಂದರು. ಅಷ್ಟಾವಕ್ರರು ಹಾಗೆ ಸ್ನಾನಮಾಡಲು ಅವರ ಮೈಯಲ್ಲಿದ್ದ ವಕ್ರತೆಯು ಹೋಗಿ ದೇಹವು ಸರಿಯಾಯಿತು. ಇದರಿಂದ ಆ ನದಿಗೆ ಸಮಂಗಾ ಎಂದು ಹೆಸರಾಯಿತು.



# ಬಕಋಷಿಗಳ ಕಥೆ [1]

ಪೂರ್ವದಲ್ಲಿ ಭಯಂಕರವಾದ ದೇವಾಸುರ ಯುದ್ಧ ನಡೆದಮೇಲೆ ಇಂದ್ರದೇವರು ಮೂರುಲೋಕಗಳಿಗೂ ಅಧಿಪತಿಯಾದರು. ಸರಿಯಾಗಿ ಆಗ ಮಳೆಯು ಬರುತ್ತಿತ್ತು. ಪ್ರಜೆಗಳೆಲ್ಲರೂ ರೋಗರಹಿತರಾಗಿ ಧರ್ಮಿಷ್ಠರಾಗಿದ್ದರು. ಜನರೆಲ್ಲರೂ ತಮ್ಮ ತಮ್ಮ ಧರ್ಮದಲ್ಲಿ ಸಂತೋಷದಿಂದ ಇದ್ದರು. ಜನರೆಲ್ಲರೂ ಸಂತೋಷದಿಂದ ಇರುವುದನ್ನು ನೋಡಿ ಇಂದ್ರದೇವರೂ ಸಂತೋಷವನ್ನು ಹೊಂದಿದರು. ಐರಾವತದ ಮೇಲೆ ಕೂತುಕೊಂಡು ಸಂತೋಷದಿಂದ ಇರುವ ಜನರನ್ನೂ ನಾನಾ ಆಶ್ರಮಗಳನ್ನೂ ನದಿಗಳನ್ನೂ ಊರುಗಳನ್ನೂ ನೋಡುತ್ತಾ ಹೋದರು. ಪೂರ್ವದಲ್ಲಿ ಸಮುದ್ರತೀರದಲ್ಲಿ ಇದ್ದ ಅತಿ ಮನೋಹರವಾದ ಆಶ್ರಮವನ್ನು ನೋಡಿದರು. ಆ ಆಶ್ರಮದಲ್ಲಿ ಇದ್ದ ಬಹುಕಾಲದಿಂದ ಬದುಕಿದ್ದ ಬಕಋಷಿಯನ್ನು ನೋಡಿದರು. ಬಕಋಷಿಗಳು ಇಂದ್ರದೇವರನ್ನು ನೋಡಿ ಅತಿಸಂತೋಷವನ್ನು ಹೊಂದಿದರು. ಕೂತುಕೊಳ್ಳಲಿಕ್ಕೆ ಆಸನವನ್ನು ಕೊಟ್ಟು ಹಣ್ಣುಗಳನ್ನು ಕೊಟ್ಟು ಸತ್ಕಾರ ಮಾಡಿದರು. ಇಂದ್ರದೇವರು ಸುಖವಾಗಿ ಕೂತುಕೊಂಡು ಬಕಋಷಿಗಳೊಡನೆ 'ಪೂಜ್ಯರೇ! ನೀವು ಹುಟ್ಟಿ ನೂರು ವರ್ಷಗಳಾದವು. ಬಹುಕಾಲ ಬದುಕಿರುವವರಿಗೆ ಏನು ದುಃಖವು ಇದೆಯೆಂಬುದನ್ನು ಹೇಳಿರಿ' ಎಂದರು.

ಅದಕ್ಕೆ ಬಕಋಷಿಗಳು 'ನಮಗೆ ಬೇಡದೆ ಇದ್ದದ್ದು ಬಂದು ಸೇರುತ್ತದೆ. ಬೇಕಾದದ್ದು ತಪ್ಪಿಹೋಗುತ್ತದೆ. ಅಯೋಗ್ಯರ ಸಹವಾಸವು ಬರುತ್ತದೆ. ಹೆಂಡತಿ ಮಕ್ಕಳ ಮಿತ್ರರ ಬಂಧುಗಳ ಎಲ್ಲರ ವಿಯೋಗವು ಏರ್ಪಡುವುದು. ಎಂದರೆ ಇವನು ಬಹುಕಾಲ ಬದುಕಿದ್ದರೆ ಅಲ್ಪ ಆಯುಷ್ಯವುಳ್ಳ ಹೆಂಡತಿ ಮಕ್ಕಳು ಎಲ್ಲಾ ಇವನ ಎದುರಲ್ಲೇ ಸಾಯುವರು. ಈ ದುಃಖವನ್ನು ಅವನು ಅನುಭವಿಸಬೇಕಾಗುತ್ತದೆ. ದುಷ್ಟಕುಲದಲ್ಲಿ ಒಳ್ಳೇ ಕುಲದಲ್ಲಿ ಹುಟ್ಟಿದವರಂತೆ ಮೆರೆಯುತ್ತಾರೆ. ಒಳ್ಳೇ ಕುಲದಲ್ಲಿ ಹುಟ್ಟಿದವರು ಕ್ಷಯವನ್ನು ಹೊಂದುತ್ತಾರೆ. ದೇವತೆಗಳು ಮಾನವರು ಗಂಧರ್ವರು ಎಲ್ಲರೂ ವಿಪರೀತವನ್ನು ಹೊಂದುತ್ತಾರೆ. ಒಳ್ಳೇ ವಂಶದಲ್ಲಿ ಹುಟ್ಟಿದವರು ನೀಚರ ವಶದಲ್ಲಿ ಇದ್ದು ಕಷ್ಟಪಡುತ್ತಾರೆ. ಹಣವಂತರಿಂದ ದರಿದ್ರರು ಅವಮಾನವನ್ನು ಹೊಂದುತ್ತಾರೆ. ಒಂದೂ ತಿಳಿಯದೆ ಇದ್ದ ಮೂರ್ಖರು ಸಂತೋಷದಿಂದ ಇರುತ್ತಾರೆ. ಒಳ್ಳೇ ಓದಿಕೊಂಡು ಇದ್ದ ಪಂಡಿತರು ದುಃಖಪಡುತ್ತಾರೆ.

---

1. ಮ.ಭಾ.ವ.ಪ ಅ.193

ಮನುಷ್ಯಲೋಕದಲ್ಲಿ ಬಹುದುಃಖವಿದೆ. ಇದನ್ನೆಲ್ಲಾ ಬಹುಕಾಲ ಬದುಕಿದವರು ನೋಡಬೇಕಾಗುತ್ತದೆ. ಈ ದುಃಖವು ಬಹುಕಾಲ ಬದುಕಿದವರಿಗೆ ಇರುತ್ತದೆ' ಎಂದರು.

ಇಂದ್ರದೇವರು 'ಸುಖವೇನಿದೆ ಎಂಬುದನ್ನು ಹೇಳಿರಿ' ಎಂದು ಕೇಳಿದರು. ಅದಕ್ಕೆ ಬಕಋಷಿಗಳು. ಎಂಟುದಿವಸಕ್ಕೆ ಒಂದು ಬಾರಿಯೋ ಹನ್ನೆರಡು ದಿವಸಕ್ಕೆ ಒಂದು ಬಾರಿಯೋ ದುಷ್ಟಮಿತ್ರರನ್ನು ಆಶ್ರಯಿಸದೆ ತನ್ನ ಮನೆಯಲ್ಲಿಯೇ ಒಂದಿಷ್ಟು ಕಾಯಿಪಲ್ಯವನ್ನಾದರೂ ಬೇಯಿಸಿ ತಿನ್ನುತ್ತಾನೋ ಅವನಿಗಿರುವ ಸುಖಕ್ಕಿಂತ ಹೆಚ್ಚು ಸುಖವು ಯಾರಿಗೆ ಇದೆ? ಇಂತಹವರು ಎಷ್ಟು ಹೊತ್ತಿಗೆ ಅನ್ನಹಾಕುವರು ಎಂದು ಕಾಯಬೇಕಾಗಿಲ್ಲ, ಇವನ್ನು ತುಂಬಾ ಹೆಚ್ಚಾಗಿ ಊಟಮಾಡುತ್ತಾನೆ ಎಂದು ಹೇಳುವವರಿಲ್ಲ, ಇನ್ನೊಬ್ಬರ ಮನೆಗೆ ಹೋದರಷ್ಟೆ ಅವರು ಅನ್ನವನ್ನು ಹಾಕುವ ಸಮಯವನ್ನು ಕಾಯಬೇಕು. ಇವನು ತುಂಬಾ ಊಟ ಮಾಡುತ್ತಾನೆಂದು ಅವರು ಹೇಳಬೇಕು. ತನ್ನ ಮನೆಯಲ್ಲಿಯೇ ಇದ್ದುಬಿಟ್ಟರೆ ಇದಕ್ಕೆ ಅವಕಾಶವೇ ಇಲ್ಲ. ಆದುದರಿಂದ ತನ್ನ ಮನೆಯಲ್ಲಿಯೇ ಒಂದಿಷ್ಟು ಕಾಯಿಪಲ್ಯವನ್ನಾದರೂ ಬೇಯಿಸಿ ತಿಂದು ಜೀವಿಸುವವನಿಗೆ ಸುಖವೇ ಇರುತ್ತದೆ. ಒಬ್ಬರನ್ನೂ ಆಶ್ರಯಿಸದೆ ತನ್ನ ಸಾಮರ್ಥ್ಯದಿಂದಲೇ ಸಂಪಾದಿಸಿದ ಕಾಯಿಪಲ್ಯವನ್ನಾದರೂ ಒಬ್ಬರಿಗೆ ದೈನ್ಯವನ್ನು ತೋರಿಸದೆ ತನ್ನ ಮನೆಯಲ್ಲಿಯೇ ಭೋಜನಮಾಡುವುದೇ ಸುಖದಾಯಕವಾದದ್ದು. ಇನ್ನೊಬ್ಬರ ಮನೆಯಲ್ಲಿ ಅವಮಾನವನ್ನು ಹೊಂದಿ ರುಚಿಕರವಾದ ಅನ್ನವನ್ನು ಭೋಜನಮಾಡಿದರೂ ಅದು ಶ್ರೇಷ್ಠವಲ್ಲ. ಯಾವಾತನು ನಾಯಿಯಂತೆ ಆಸೆ ಯುಳ್ಳವನಾಗಿ ಪರಾನ್ನವನ್ನು ಊಟಮಾಡಬೇಕೆಂದು ಅಪೇಕ್ಷಿಸುವನೋ ದುರಾತ್ಮ ನಾದ ಅವನ ಭೋಜನಕ್ಕೆ ಧಿಕ್ಕಾರವಿರಲಿ. ಯಾವಾತನು ಅತಿಥಿಗಳಿಗೆ ಭೃತ್ಯಗಳಿಗೆ ಪಿತೃಗಳಿಗೆ ಭೋಜನ ಮಾಡಿಸಿ ಉಳಿದದ್ದನ್ನು ಭೋಜನ ಮಾಡುವವನೋ ಅದಕ್ಕಿಂತ ಹೆಚ್ಚಿನ ಸುಖವೇನಿದೆ? ನಿತ್ಯವೂ ಅತಿಥಿಗಳಿಗೆ ಭೋಜನಮಾಡಿಸಿ ಉಳಿದ ಅನ್ನವನ್ನು ಭೋಜನ ಮಾಡುವುದಕ್ಕಿಂತ ಪವಿತ್ರವಾದದ್ದು ರುಚಿಕರವಾದದ್ದು ಮತ್ತೊಂದು ಇರುವುದಿಲ್ಲ. ಅತಿಥಿ ಬ್ರಾಹ್ಮಣನು ಎಷ್ಟು ಅನ್ನದ ತುತ್ತುಗಳನ್ನು ಭೋಜನ ಮಾಡುವನೋ ಅಷ್ಟು ಸಾವಿರ ಗೋವುಗಳನ್ನು ದಾನ ಮಾಡಿದ ಫಲವನ್ನು ಅನ್ನಹಾಕಿದವನು ಹೊಂದುವನು. ಅವನು ಯೌವನದಲ್ಲಿ ಮಾಡಿದ ಪಾಪವೆಲ್ಲಾ ನಾಶವನ್ನು ಹೊಂದುವುದು. ದಕ್ಷಿಣೆಯನ್ನು ಪಡೆದು ಭೋಜನಮಾಡಿದ ಬ್ರಾಹ್ಮಣನ ಕೈಯನೀರು ಮೈಮೇಲೆ ಬಿದ್ದರೆ ಪಾಪಪರಿಹಾರವಾಗುವುದು' ಇತ್ಯಾದಿ

ವಿಷಯಗಳನ್ನು ಹೇಳಿದರು. ಆಮೇಲೆ ಇಂದ್ರದೇವರು ಬಕಋಷಿಗಳೊಡನೆ ಹೋಗಿ ಬರುತ್ತೇನೆ ಎಂದು ಹೇಳಿಕೊಂಡು ಹೊರಟುಹೋದರು.



## ತಾರ್ಕ್ಷ್ಯ ಸರಸ್ವತಿಯರ ಸಂವಾದ [1]

ತಾರ್ಕ್ಷ್ಯ ಎಂಬ ಮುನಿಗಳು ಸರಸ್ವತಿದೇವಿಯರೊಡನೆ 'ದೇವಿ! ಪುರುಷನಿಗೆ ಯಾವುದು ಶ್ರೇಯಸ್ಸು? ಹೇಗೆ ಮಾಡಿದರೆ ತನ್ನ ಧರ್ಮದಿಂದ ತಪ್ಪಿ ಹೋಗ ಲಾರನು? ಸುಂದರಿ ದೇವಿ. ಅದನ್ನು ನನಗೆ ಹೇಳಿ. ನಾನು ಹೇಗೆ ಅಗ್ನಿಯಲ್ಲಿ ಹೋಮ ಮಾಡಬೇಕು? ನಾನು ಹೇಗೆ ಉತ್ತಮಲೋಕಗಳನ್ನು ಹೊಂದುವೆನು?' ಎಂದು ಕೇಳಿದರು.

ಆದಕ್ಕೆ ಸರಸ್ವತೀದೇವಿಯರು 'ಯಾರು ಭಗವಂತನನ್ನು ತಿಳಿಯುವನೋ ಶುದ್ಧವಾಗಿ ಮರೆಯದೆ ವೇದಾಧ್ಯಯನವನ್ನು ಮಾಡುತ್ತಿರುವನೋ ಅವನು ದೇವತೆ ಗಳ ಲೋಕಕ್ಕೆ ಹೋಗುವನು. ದೇವತೆಗಳ ಪ್ರೀತಿಯನ್ನು ಪಡೆಯುವನು. ಆ ದೇವಲೋಕದಲ್ಲಿ ಸುಖವನ್ನು ಉಂಟುಮಾಡುವ ದೊಡ್ಡ ಸರೋವರಗಳಿವೆ. ಅವುಗಳಲ್ಲಿ ಕಮಲಪುಷ್ಪಗಳಿವೆ. ಮೀನುಗಳಿವೆ. ಅಲ್ಲಿ ಕೆಸರು ಇರುವುದಿಲ್ಲ. ಬಂಗಾರದ ಕಮಲಗಳು ಇರುತ್ತವೆ. ಇಳಿಯಲಿಕ್ಕೆ ಒಳ್ಳೇ ಸ್ಥಳಗಳಿರುತ್ತವೆ. ಒಳ್ಳೇ ನೀರಿರುತ್ತದೆ. ಅವುಗಳ ತೀರಗಳಲ್ಲಿ ಪುಣ್ಯಮಾಡಿದವರು ಅಪ್ಸರಸ್ತ್ರೀಯರಿಂದ ಪೂಜಿತರಾಗಿ ಸಂತೋಷಪಡುತ್ತಾರೆ. ಆ ಅಪ್ಸರಸ್ತ್ರೀಯರು ಒಳ್ಳೇ ಸುವಾಸನೆಯುಳ್ಳವ ರಾಗಿರುತ್ತಾರೆ. ಬೇಕಾದ ಅಲಂಕಾರ ಮಾಡಿಕೊಂಡಿರುತ್ತಾರೆ. ಬಂಗಾರದಂತೆ ಹೊಳೆಯುತ್ತಾರೆ. ಅವರೊಡನೆ ಪುಣ್ಯಮಾಡಿದವರು ಅತಿ ಸಂತೋಷದಿಂದ ಇರುತ್ತಾರೆ. ಗೋದಾನ ಮಾಡಿದವರೂ ಇಂತಹ ಉತ್ತಮಲೋಕವನ್ನೇ ಹೊಂದು ತ್ತಾರೆ. ಎತ್ತನ್ನು ದಾನಮಾಡಿದವರು ಸೂರ್ಯಲೋಕವನ್ನು ಹೊಂದುತ್ತಾರೆ. ವಸ್ತ್ರದಾನವನ್ನು ಮಾಡಿದವರು ಚಂದ್ರಲೋಕವನ್ನು ಹೊಂದುವರು.

ಒಳ್ಳೇ ಕಾಂತಿಯುಳ್ಳ ಸುಂದರವಾದ ಕರುವಿನಿಂದ ಕೂಡಿರುವ ತುಂಬಾ ಹಾಲುಕೊಡುವ ದನವನ್ನು ದಾನಮಾಡಿರೆ ಆ ದನದ ಮೈಯಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಕಾಲ ದೇವಲೋಕದಲ್ಲಿ ಇರುತ್ತಾರೆ. ಗದ್ದೆಯಲ್ಲಿ

1. ಮ.ಭಾ.ವಪ. ಅ.186

ಉಳಲಿಕ್ಕೆ ಸಮರ್ಥವಾದ ಭಾರವನ್ನು ಹೊರಲಿಕ್ಕೂ ಸಮರ್ಥವಾದ ಯೌವನವುಳ್ಳ ಬಲಿಷ್ಠವಾದ ಎತ್ತನ್ನು ದಾನಮಾಡಿದರೆ ಹತ್ತು ದನಗಳನ್ನು ದಾನಮಾಡಿ ಫಲವನ್ನು ಹೊಂದುವನು. ಕಪಿಲಬಣ್ಣದ ದನಕ್ಕೆ ವಸ್ತ್ರವನ್ನು ಹೊದಿಸಿ ಹಾಲು ಕರೆಯಲಿಕ್ಕೆ ಕಂಚಿನಪಾತ್ರೆಯಿಂದ ಸಹಿತವಾಗಿ ಬಹುದಕ್ಷಿಣೆ ಸಹಿತವಾಗಿ ದಾನಮಾಡಿದರೆ ಆ ದನದ ಮೇಲೆ ಎಷ್ಟು ರೋಮಗಳಿವೆಯೋ ಅಷ್ಟು ಗೋದಾನಮಾಡಿದ ಫಲವನ್ನು ಹೊಂದುತ್ತಾನೆ. ಮಕ್ಕಳನ್ನೂ ಮೊಮ್ಮಕ್ಕಳನ್ನೂ ಏಳು ತಲೆಯಪರ್ಯಂತ ಎಲ್ಲರನ್ನೂ ಉದ್ಧಾರ ಮಾಡುತ್ತಾನೆ. ಇದೇರೀತಿ ಎಳ್ಳಿನ ರಾಶಿಯಿಂದ ದನದ ಆಕಾರವನ್ನು ಮಾಡಿ ಬಂಗಾರದ ಕೊಂಬು ಮಾಡಿ ವಸ್ತ್ರವನ್ನು ಹೊದಿಸಿ ಕಂಚಿನಪಾತ್ರೆಯಿಂದ ಸಹಿತವಾಗಿ ದಕ್ಷಿಣೆಯಿಂದ ಸಹಿತವಾಗಿ ದಾನಮಾಡಿದರೆ ಅವನು ವಸುಗಳ ಲೋಕವನ್ನು ಹೊಂದುವನು. ತನ್ನ ಪಾಪಕರ್ಮಗಳಿಂದ ದಾನವರಿಂದ ಕೂಡಿದ ಮಹಾಕತ್ತಲೆಯುಳ್ಳ ನರಕದಲ್ಲಿ ಹೋಗಿ ಬೀಳುವ ಪುರುಷನನ್ನು ಅವನು ದನವನ್ನು ದಾನ ಮಾಡಿದ್ದರೆ ಆ ದನವು ಸಮುದ್ರದಲ್ಲಿ ಅನುಕೂಲವಾದ ಗಾಳಿಯಿಂದ ಕೂಡಿದ ನಾವೆಯು ಉದ್ಧಾರಮಾಡುವಂತೆ ಉದ್ಧಾರ ಮಾಡುವುದು. ಎಂದರೆ ಅವನು ನರಕಕ್ಕೆ ಹೋಗದಂತೆ ಮಾಡುವುದು. ಯಾರು ಗೃಹ್ಯಸೂಕ್ತದಲ್ಲಿ ಹೇಳಿದ ರೀತಿಯಾಗಿ ಕನ್ಯಾದಾನವನ್ನು ಮಾಡುತ್ತಾನೋ ಭೂಮಿದಾನವನ್ನು ಮಾಡುತ್ತಾನೋ ಅವನು ಇಂದ್ರಲೋಕವನ್ನು ಹೊಂದುವನು. ಯಾರು ಏಳು ವರ್ಷಕಾಲ ಉತ್ತಮ ಆಚಾರ ವುಳ್ಳವನಾಗಿ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಾನೋ ಅವನು ಏಳು ತಲೆ ಪೂರ್ವಿಕರನ್ನೂ ಏಳು ತಲೆ ಆಮೇಲಿನವರನ್ನು ಉದ್ಧರಿಸುವನು ಎಂದು ಹೇಳಿದರು.

ಆಗ ತಾರ್ಕ್ಷ್ಯರು 'ದೇವಿ! ಅಗ್ನಿಹೋತ್ರ ಮಾಡುವವರು ಹೇಗೆ ಇರಬೇಕು. ನಿಮ್ಮ ಉಪೇದೇಶದಿಂದ ನಾನು ತಿಳಿದುಕೊಳ್ಳುವೆನು' ಎಂದು ಹೇಳಿದರು. ಅದಕ್ಕೆ ಸರಸ್ವತೀದೇವಿಯರು 'ಅಗ್ನಿಹೋತ್ರ ಮಾಡುವವನೂ ಅನಾಚಾರವುಳ್ಳವನಾಗ ಬಾರದು. ಕೈಗಳನ್ನು ತೊಳೆದುಕೊಳ್ಳಬೇಕು. ಪರಮಾತ್ಮನ ಜ್ಞಾನವುಳ್ಳವನಾಗಬೇಕು. ಅಗ್ನಿಹೋತ್ರದ ಆಹುತಿಯನ್ನು ಸ್ವೀಕರಿಸುವ ದೇವತೆಗಳು ಜ್ಞಾನಪ್ರಿಯರು ಶುದ್ಧಿಯನ್ನು ಅಪೇಕ್ಷಿಸುವವರು ಶ್ರದ್ದೆಯಿಲ್ಲದೆ ಕೊಟ್ಟ ಆಹುತಿಯನ್ನು ಅವರು ಸ್ವೀಕರಿಸುವುದಿಲ್ಲ. ಶ್ರೋತ್ರಿಯನಾಗದೆ ಇದ್ದ ಬ್ರಾಹ್ಮಣನು ಅಗ್ನಿಹೋತ್ರವನ್ನು ಮಾಡಬಾರದು. ಅವನು ಮಾಡಿದ್ದು ವ್ಯರ್ಥವಾಗುತ್ತದೆ. ಯಾರು ಶ್ರದ್ಧಾಉಳ್ಳವರಾಗಿ ಸತ್ಯವ್ರತವುಳ್ಳವರಾಗಿ ಹೋಮಮಾಡಿ ಶೇಷವನ್ನು ಭೋಜನಮಾಡುತ್ತಾರೋ ಪವಿತ್ರವಾದ ಗೋವುಗಳ ಲೋಕವನ್ನು ಹೊಂದುತ್ತಾರೆ. ದೇವರನ್ನು ನೋಡುತ್ತಾರೆ' ಎಂದು ಹೇಳಿದರು.

ತರುವಾಯ ತಾರ್ಕ್ಷ್ಯಮುನಿಗಳು ಸರಸ್ವತೀದೇವಿಯರೊಡನೆ ಮೋಕ್ಷದ ಸ್ವರೂಪವನ್ನು ಕೇಳಿದರು. ಅದಕ್ಕೆ ಸರಸ್ವತೀದೇವಿಯರು 'ವೇದಜ್ಞಾನಿಗಳಾದವರು ಎಂದರೆ ವೇದಗಳಿಂದ ಪರಮಾತ್ಮನನ್ನು ತಿಳಿದವರು. ವೇದಾಧ್ಯಯನದಾನ ಇತರ ಪುಣ್ಯ ಮೊದಲಾದವನ್ನು ಭಗವತ್ಪ್ರೀತ್ಯುದ್ದೇಶದಿಂದ ಮಾಡಿದವರು ತಪಸ್ವಿಗಳು ಆದವರು ಈ ಮೋಕ್ಷವನ್ನು ಹೊಂದುವರು. ಆ ಮೋಕ್ಷದಲ್ಲಿ ಮಧ್ಯದಲ್ಲಿ ಸುವಾಸನೆಯುಳ್ಳ ವೇತಸ ಎಂಬ ಮರವಿರುವುದು. ಅದಕ್ಕೆ ಸಾವಿರಕೊಂಬೆಗಳು. ಅದು ಅತಿದೊಡ್ಡದಾಗಿರುವುದು. ಅದರ ಬುಡದಿಂದ ಪವಿತ್ರಗಳಾದ ಸಿಹಿನೀರುಳ್ಳ ನದಿಗಳು ಹರಿಯುತ್ತವೆ. ಅದರ ಒಂದೊಂದು ಕೊಂಬೆಯಿಂದಲೂ ಸಕ್ಕರೆಯಿಂದ ಕೂಡಿದ ಅಪ್ಪಗಳನ್ನು ಸೆಳೆದುಕೊಂಡು ಬರುವ ಮಾಂಸಶಾಕೆಗಳಿಂದ ಕೂಡಿದ ಯಾವಾಗಲೂ ಪಾಯಸವೆಂಬ ಕೆಸರಿನಿಂದ ಕೂಡಿದ ನದಿಗಳು ಹರಿಯುತ್ತಾ ಇರುತ್ತವೆ. ಅಲ್ಲಿ ಅಗ್ನಿ ಇಂದ್ರಾದಿ ದೇವತೆಗಳು ಯಜ್ಞಗಳನ್ನು ಮಾಡುತ್ತಾ ಇರುತ್ತಾರೆ. ಅಂತಹ ಮೋಕ್ಷಸ್ಥಾನವು ಪರಮಶ್ರೇಷ್ಠವಾದದ್ದು ಎಂದು ಹೇಳಿದರು.



## ವತ್ಸನಾಭನ ಕಥೆ [1]

ಕೃತಘ್ನರಾದವರಿಗೆ ತಂದೆತಾಯಿಗಳ ಮಾತನ್ನು ಕೇಳದೆ ಇದ್ದವರಿಗೆ ಶಾಶ್ವತವಾದ ನರಕವುಂಟಾಯಿತು. ಅವರು ಪಶುಪಕ್ಷ್ಯಾದಿಗಳು ಆಗಿ ಹುಟ್ಟಿದರು. ಅವರಿಗೆ ಮಾನುಷ್ಯವು ಬರಲಾರದು. ಈ ವಿಷಯದಲ್ಲಿ ಒಂದು ಇತಿಹಾಸವು.

ಪೂರ್ವದಲ್ಲಿ ವತ್ಸನಾಭ ಎಂಬ ಋಷಿಗಳು ಇದ್ದರು. ಅವರು ಬಹುಕಾಲ ತಪಸ್ಸು ಮಾಡುತ್ತಿದ್ದರು. ಹಾಗೆ ತಪಸ್ಸು ಮಾಡುತ್ತಾ ಅವರ ಮೇಲೆ ಹುತ್ತವು ಬೆಳೆಯಿತು. ಹಾಗೆಯೇ ತಪಸ್ಸು ಮಾಡುತ್ತಿದ್ದರು. ಅವರು ತಪಸ್ಸು ಮಾಡುತ್ತಿರಲು ಇಂದ್ರದೇವರು ಏಳು ದಿವಸ ಮಳೆಯನ್ನು ಸುರಿಸಿದರು. ಆದರೂ ಆ ಋಷಿಗಳು ಕಣ್ಣುಮುಚ್ಚಿಕೊಂಡು ಆ ಮಳೆಯನ್ನು ಸಹಿಸಿದರು. ಗಾಳಿಯಿಂದ ಸಹಿತವಾದ ಮಳೆಯು ಸುರಿಯುತ್ತಿರಲು ಅದರ ಮೇಲೆ ದೊಡ್ಡದಾಗಿ ಬೆಳೆದುಹೋದ ಹುತ್ತದ ಶಿಖರವು ಪಿಡಿಗಿನಿಂದ ಸೀಳಿಹೋಗಿ ಬಿದ್ದಿತು. ಮಳೆಯಿಂದ ಆ ಮುನಿಗಳು ಬಡಿಯಲ್ಪಡುತ್ತಿರಲು ಧರ್ಮದೇವತೆಗಳಿಗೆ ಕೃಪೆಯುಂಟಾಯಿತು. ಆಗ ದೇವತೆಯು ಒಂದು ದೊಡ್ಡ

1. ಮ.ಭಾ. ಅನು.ಪ.ಅ.12. ದಾಕ್ಷಿಪಾಠ. P.E. by Vettam 1993, p.840

ಕೋಣದ ರೂಪವನ್ನು ಧರಿಸಿ ತಪಸ್ಸು ಮಾಡುತ್ತಿದ್ದ ವತ್ಸನಾಭನ ಮೇಲಿನ ಪ್ರದೇಶದಲ್ಲಿ ನಿಂತುಕೊಂಡು ವತ್ಸನಾಭನ ಮೇಲೆ ಮಳೆ ಬೀಳದಂತೆ ಮಾಡಿತು. ಗಾಳಿಮಳೆಯು ನಿಂತುಹೋದಮೇಲೆ ಕೋಣದ ರೂಪವುಳ್ಳ ಆ ಧರ್ಮ ದೇವತೆಯು ಅಲ್ಲಿಂದ ಸ್ವಲ್ಪ ದೂರಹೋಗಿ ನಿಂತುಕೊಂಡಿತು. ಮಳೆಯು ನಿಂತು ಹೋದಮೇಲೆ ಆ ಮಹಾತಪಸ್ವಿಯಾದ ವತ್ಸನಾಭನು ಕಣ್ಣುತೆರೆದು ಎಲ್ಲಾ ಸ್ಥಳಗಳಲ್ಲಿಯೂ ನೀರು ತುಂಬಿರುವುದನ್ನು ನೋಡಿ ಸಂತೋಷವನ್ನು ಹೊಂದಿದನು. ಇಷ್ಟು ಮಳೆಯು ಸುರಿಯುವಾಗ ನನ್ನ ತಲೆಯ ಮೇಲೆ ನೀರು ಬೀಳದಂತೆ ಮಾಡಿದ್ದು ಯಾರಿರಬಹುದು? ಎಂದು ಯೋಚಿಸಿದನು. ತರುವಾಯ ಹತ್ತಿರದಲ್ಲೇ ನಿಂತಿರುವ ಕೋಣವನ್ನು ನೋಡಿ ಇದೇ ನನ್ನನ್ನು ಮಳೆಯಿಂದ ರಕ್ಷಿಸಿತು. ಪಶುಪ್ರಾಣಿಯಾದರೂ, ಇದಕ್ಕೆ ಧರ್ಮದಲ್ಲಿ ಎಷ್ಟು ಪ್ರೇಮವಿದೆ?' ಎಂದುಕೊಂಡರು. ಆಮೇಲೆ 'ಈ ಕೋಣವು ಎಷ್ಟು ಪುಷ್ಟವಾಗಿದೆ. ಇದರ ಮೈಯಲ್ಲಿ ಎಷ್ಟು ಮಾಂಸವಿದೆ? ಕೊಂದು ತಿಂದರೇನು' ಎಂಬ ಯೋಚನೆಯುಂಟಾಯಿತು. ಆಮೇಲೆ ಪುನಃ 'ಕೃತಘ್ನರಾದವರು ಅಂದರೆ ಉಪಕಾರ ಸ್ಮರಣೆಯಿಲ್ಲದವರು ನರಕವನ್ನು ಹೊಂದುವರು. ಕೃತಘ್ನರಿಗೆ ಪ್ರಾಣಬಿಡುವುದು ಹೊರತು ಬೇರೆ ಪ್ರಾಯಶ್ಚಿತ್ತವಿರುವುದಿಲ್ಲ. ತಂದೆತಾಯಿಗಳನ್ನು ರಕ್ಷಣೆ ಮಾಡದವರಿಗೆ ಗುರುಗಳಿಗೆ ದಕ್ಷಿಣೆಯನ್ನು ಕೊಡದೆ ಇದ್ದವರಿಗೆ ಉಪಕಾರಸ್ಮರಣೆಯಿಲ್ಲದೆ ಇದ್ದವರಿಗೆ ಸಾಯುವುದೇ ಪ್ರಾಯಶ್ಚಿತ್ತವು. ಆದುದರಿಂದ ನಾನೀಗ ಕೋಣವನ್ನು ಕೊಂದು ತಿನ್ನಬೇಕೆಂದು ಯೋಚನೆ ಮಾಡಿದ ಕಾರಣ ಕೃತಘ್ನನಾದೆನು. ಆದುದರಿಂದ ನಾನೀಗ ಪ್ರಾಣಬಿಡುವುದೇ ಪ್ರಾಯಶ್ಚಿತ್ತವು' ಎಂದು ಯೋಚಿಸಿ ಮೇರುಪರ್ವತಕ್ಕೆ ಹೋಗಿ ಅಲ್ಲಿಂದ ಕೆಳಗೆ ಬಿದ್ದು ಪ್ರಾಣಬಿಡುವುದು ಎಂದು ಆರಂಭಿಸುವಷ್ಟರಲ್ಲಿ ಧರ್ಮದೇವತೆಯು ಬಂದು ಕೈಹಿಡಿದನು. ವತ್ಸನಾಭ! ಮಹಾನುಭಾವ! ನೀನು ಬಹುನೂರು ವರ್ಷ ಆಯುಷ್ಯವುಳ್ಳವನು. ನಿನ್ನ ದೇಹಾಭಿಮಾನತ್ಯಾಗದಿಂದ ಸಂತುಷ್ಟನಾದೆನು. ನಿನ್ನ ಮನಸ್ಸು ಧರ್ಮಯುಕ್ತವಾಗಿದೆ. ಸಾಯಬೇಡ. ಹೊರಟುಹೋಗು' ಎಂದು ಹೇಳಿ ಕಳುಹಿಸಿದನು.



# ಗೌತಮಿಯ ಕಥೆ [1]

ಪೂರ್ವದಲ್ಲಿ ಗೌತಮಿಯೆಂಬ ಮುದುಕಿಯು ಇದ್ದಳು. ಅವಳ ಮಗನನ್ನು ಒಂದು ಹಾವು ಕಚ್ಚಿತು. ಇದರಿಂದ ಅವರ ಮಗನು ಸತ್ತುಬಿದ್ದನು. ಆ ಸಮಯದಲ್ಲಿ ಅರ್ಜುನಕ ಎಂದು ಹೆಸರುಳ್ಳ ಒಬ್ಬ ಬೇಡನು ಒಂದು ಹಾವನ್ನು ಚರ್ಮದ ಹಗ್ಗದಿಂದ ಕಟ್ಟಿಕೊಂಡು ಬಂದು ಗೌತಮಿಯೊಡನೆ 'ಮಹಾನುಭಾವಳೇ! ಇದೇ ನೀಚಸರ್ಪವು ನಿನ್ನ ಮಗನನ್ನು ಕೊಂದಿತು. ಮಹಾನುಭಾವಳೇ! ಹೇಳು. ಇದನ್ನು ಹೇಗೆ ಸಂಹರಿಸಲಿ? ಬೆಂಕಿಯಲ್ಲಿ ಹಾಕಲೋ? ಅಥವಾ ಕತ್ತಿಯಿಂದ ಚೂರು ಚೂರಾಗಿ ಖಂಡಿಸಲೋ? ಮಗುವನ್ನು ಕೊಂದು ಈ ಪಾಪಿಯು ಬಹುಕಾಲ ಬದುಕಿರಬಾರದು' ಎಂದನು.

ಅದಕ್ಕೆ ಗೌತಮಿಯು 'ಅರ್ಜುನ! ನಿನಗೆ ಬುದ್ಧಿಯಿಲ್ಲ. ಈ ಸರ್ಪವನ್ನು ಬಿಟ್ಟುಬಿಡು. ಇದನ್ನು ಕೊಲ್ಲುವುದು ಬೇಡ. ಅಧರ್ಮವನ್ನು ಮಾಡಬಾರದು. ನೀನು ಈ ಸರ್ಪವನ್ನು ಕೊಂದರೆ ನನ್ನ ಮಗನು ಬದುಕಲಾರನು. ಇದು ಬದುಕಿದ್ದರೆ ನನಗೇನು ಬಾಧಕವಿದೆ? ಇದನ್ನು ಬಿಟ್ಟುಬಿಟ್ಟರೆ ಎಲ್ಲರೂ ಸಾಯುವರೇ?' ಎಂದಳು. ಬೇಡನು ಈ ನೀಚನನ್ನು ಅವಶ್ಯವಾಗಿ ಕೊಲ್ಲುವೆನೆಂದನು. ಗೌತಮಿಯು 'ನಮ್ಮಂತ ವರಿಗೆ ದುಃಖವು ಇಲ್ಲ. ಸಜ್ಜನರು ಯಾವಾಗಲೂ ಧರ್ಮದಲ್ಲಿ ಮನಸ್ಸುಳ್ಳವರು. ಇದನ್ನು ಕೊಂದರೆ ಇದರ ಮಗುವು ದುಃಖವನ್ನು ಹೊಂದುವುದು. ಆದುದರಿಂದ ಈ ಸರ್ಪವನ್ನು ಕೊಲ್ಲಲಿಕ್ಕೆ ನಾನು ಒಪ್ಪಲಾರೆನು. ಬ್ರಾಹ್ಮಣರಿಗೆ ಕೋಪವಿಲ್ಲ. ಕೋಪ ದಿಂದ ದುಃಖವು ಅವರಿಗೆ ಹೇಗೆ ಬರಬೇಕು? ಮೃದು ಸ್ವಭಾವದಿಂದ ಈ ಸರ್ಪ ವನ್ನು ಬಿಟ್ಟುಬಿಡು' ಎಂದಳು.

ಬೇಡನು 'ಇದನ್ನು ಕೊಂದರೇ ಲಾಭವಿದೆ' ಎಂದನು. ಅನೇಕ ವಿಧವಾಗಿ ಬೇಡನು ಗೌತಮಿಯೊಡನೆ ಸರ್ಪವನ್ನು ಕೊಲ್ಲುವ ವಿಷಯವಾಗಿ ಹೇಳಿದರೂ ಗೌತಮಿಯು ಕೇಳಲೇ ಇಲ್ಲ. ಆಗ ಸರ್ಪವು ಹಗ್ಗದಿಂದ ಕಟ್ಟಿ ಪ್ರಯುಕ್ತ ಶ್ರಮವುಳ್ಳ ದ್ದಾಗಿ ದೀರ್ಘಾಶ್ವಾಸವನ್ನು ಬಿಡುತ್ತಾ 'ಮೂರ್ಖನಾದ ಅರ್ಜುನಕನೇ! ನನ್ನ ಅಪರಾಧವಿಲ್ಲ. ನಾನು ಸ್ವತಂತ್ರನಾಗಿ ಬಾಲಕನನ್ನು ಕಚ್ಚಲಿಲ್ಲ. ಮೃತ್ಯುವಿನಿಂದ ಪ್ರೇರಿತ ನಾಗಿ ಕಚ್ಚಿದೆನು. ನಾನು ಕೋಪದಿಂದಾಗಲೀ ನನ್ನ ಇಚ್ಛೆಯಿಂದಾಗಲೀ ಕಚ್ಚಿದ್ದಲ್ಲ. ಆದುದರಿಂದ ಏನಾದರೂ ತಪ್ಪಿದ್ದರೆ ಅದು ಮೃತ್ಯುವಿನ ತಪ್ಪು ನನ್ನ ತಪ್ಪಲ್ಲ' ಎಂದಿತು.

1. ಮ.ಭಾ. ಅನುಪ. ಅ.1

ಆದಕ್ಕೆ ಅರ್ಜುನಕನು 'ಇನ್ನೊಬ್ಬರ ವಶನಾಗಿ ನೀನು ಮಾಡಿದ್ದರೆ ನೀನೂ ಅಪರಾಧಿಯಷ್ಟೆ. ಒಂದು ಗಡಿಗೆ ಮಾಡಲಿಕ್ಕೆ ಕೋಲು ಚಕ್ರ ಗಡಿಗೆ ಮಾಡುವವನು ಎಲ್ಲರೂ ಕಾರಣರು. ಅದರಂತೆ ನೀನೂ ಮೃತ್ಯುವಿನಂತೆ ಕೊಲ್ಲಲಿಕ್ಕೆ ಕಾರಣನು. ಅಪರಾಧಿಯಾಗಿರುವಿ. ಆದುದರಿಂದ ಕೊಲ್ಲುವುದು ನ್ಯಾಯವು' ಎಂದನು.

ಸರ್ಪವು 'ಗಡಿಗೆ ಮಾಡುವವನಿಂದ ಪ್ರೇರಿತಗಳಾಗಿ ದಂಡಚಕ್ರಾದಿಗಳು ಕಾರಣವಾಗುವುವು. ಅವುಗಳಿಗೆ ಸ್ವಾತಂತ್ರ್ಯವಿಲ್ಲ. ಹಾಗೆಯೇ ಮೃತ್ಯುವಿನಿಂದ ಪ್ರೇರಿತನಾಗಿ ನಾನು ಕಚ್ಚಿದೆನು. ನನ್ನ ತಪ್ಪಿಲ್ಲ. ಯಜ್ಞದಲ್ಲಿ ಯಜಮಾನನಿಂದ ಪ್ರೇರಿತರಾಗಿ ಋತ್ವಿಕ್ಕುಗಳು ಹೋಮಮಾಡುವರು. ಆದರೆ ಅದರ ಫಲವು ಯಜಮಾನನಿಗೆ ಮಾತ್ರ ಸೇರುವಿದಲ್ಲವೇ?' ಎಂದಿತು.

ಈರೀತಿಯಾಗಿ ಸರ್ಪವು ಹೇಳುತ್ತಿರಲು ಮೃತ್ಯುವು ಬಂದಿತು. ಅದು ಸರ್ಪದೊಡನೆ 'ಸರ್ಪನೇ! ನಾನು ಕಾಲನಿಂದ ಪ್ರೇರಿತನಾಗಿ ನಿನಗೆ ಪ್ರೇರಿಸಿದೆನು. ಆದುದರಿಂದ ಈ ಮಗುವು ಸಾಯಲಿಕ್ಕೆ ನಾನು ಕಾರಣನಲ್ಲ' ಎಂದಿತು.

ಆಗ ಸರ್ಪವು 'ಮೃತ್ಯುವೇ! ನೀನು ದೋಷಿಯೋ ಅಲ್ಲವೋ ಅದನ್ನು ನಾನು ಹೇಳಲಿಲ್ಲ. ನೀನು ನನ್ನನ್ನು ಪ್ರೇರಿಸಿದಿ ಎಂದಿಷ್ಟೇ ನಾನು ಹೇಳುವೆನು. ಕಾಲಕ್ಕೆ ದೋಷವಿದೆಯೋ ಅಥವಾ ಅದಕ್ಕೂ ದೋಷವಿಲ್ಲವೋ! ಅದನ್ನು ನಾವು ಪರೀಕ್ಷೆ ಮಾಡಬೇಕಾಗಿಲ್ಲ. ಅದರಲ್ಲಿ ನಾವು ಅಧಿಕಾರಿಗಳಲ್ಲ. ನನಗೆ ದೋಷವಿಲ್ಲ ಎಂದು ಇಷ್ಟುತಾನೆ ನಾನು ಹೇಳುವೆನು' ಎಂದಿತು. ಬೇಡನೊಡನೆ 'ಅರ್ಜುನಕನೇ! ಕೇಳಿದಿಯಲ್ಲ ಮತೃತ್ಯುವಿನ ಮಾತನ್ನು. ನಿರಪರಾಧಿಯಾದ ನನ್ನನ್ನು ಪಾಶದಿಂದ ಬಂಧಿಸಿಡುವುದು ಸರಿಯಲ್ಲ' ಎಂದಿತು.

ಬೇಡನು 'ಸರ್ಪನೇ! ಮೃತ್ಯುವಿನ ಮಾತನ್ನೂ ಕೇಳಿದೆನು. ನಿನ್ನ ಮಾತನ್ನೂ ಕೇಳಿದೆನು. ಇದರಿಂದ ನಿನ್ನಲ್ಲಿ ದೋಷವಿಲ್ಲ ಎಂದಾಗಲಾರದು. ಮೃತ್ಯು ನೀನು ಇಬ್ಬರೂ ಈ ಮಗುವು ಸಾಯಲಿಕ್ಕೆ ಕಾರಣರಾಗಿರುವಿರಿ. ನೀವಿಬ್ಬರೂ ಕಾರಣರು. ಕಾರಣವಿಲ್ಲದೆ ಕಾರ್ಯವುಂಟಾಗಲಾರದು. ಮೃತ್ಯುವಿಗೂ ಧಿಕ್ಕಾರವಿರಲಿ. ಪಾಪಿಯಾದ ನಿನ್ನನ್ನೂ ಕೊಲ್ಲುವೆನು' ಎಂದನು.

ಆದಕ್ಕೆ ಮೃತ್ಯುವು 'ನಾವಿಬ್ಬರೂ ಕಾಲದ ವಶರಾಗಿ ಮಾಡಿದೆವು. ನೀನು ಸರಿಯಾಗಿ ವಿಚಾರಮಾಡುವವನಾದರೆ ನಮ್ಮಲ್ಲಿ ದೋಷವನ್ನು ತಿಳಿಯಬಾರದು' ಎಂದಿತು.

ಆಗ ಕಾಲವು (ಕಾಲಾಭಿಮಾನಿಯು) ಬಂದು ಸರ್ಪ ಮೃತ್ಯು ಬೇಡರೊಡನೆ 'ಬೇಡನೆ! ಈ ಮಗುವು ಸಾಯಲಿಕ್ಕೆ ಈ ಸರ್ಪವಾಗಲೀ ಈ ಮೃತ್ಯುವಾಗಲೀ ನಾನಾಗಲೀ ಕಾರಣರಲ್ಲ. ನಾವೇ ಪ್ರೇರಕರಲ್ಲ. ಈ ಮಗುವು ಮಾಡಿದ ಕರ್ಮವು ನಮಗೆ ಪ್ರೇರಕವು. ಇವನ ಕರ್ಮದಿಂದಲೇ ಇವನು ಸತ್ತನು. ಇವನು ಸಾಯಲಿಕ್ಕೆ ಇವನ ಕರ್ಮವೇ ಕಾರಣವು. ನಾವು ಎಲ್ಲರೂ ಕರ್ಮದಿಂದ ಪ್ರೇರಿತರು. ಆದುದರಿಂದ ಈ ಮಗುವು ಸಾಯಲಿಕ್ಕೆ ಸರ್ಪವೋ ಮೃತ್ಯುವೋ ನಾನೋ ಬ್ರಾಹ್ಮಣಿಯೋ ಒಬ್ಬರೂ ಕಾರಣರಲ್ಲ. ಈ ಮಗುವೇ ಪೂರ್ವದಲ್ಲಿ ಅಂತಹ ಕರ್ಮವನ್ನು ಮಾಡಿರುವ ಪ್ರಯುಕ್ತ ಕಾರಣವು' ಎಂದು ಹೇಳಿತು.

ಆಗ ಗೌತಮಿಯು 'ಕಾಲವಾಗಲೀ ಸರ್ಪವಾಗಲೀ ಮೃತ್ಯುವಾಗಲೀ ಕಾರಣರಲ್ಲ. ಈ ಮಗುವು ತನ್ನ ಕರ್ಮದಿಂದ ಮರಣವನ್ನು ಹೊಂದಿದನು. ನನ್ನ ಮಗನು ಸಾಯಲಿಕ್ಕೆ ಬೇಕಾದ ಕರ್ಮವನ್ನು ನಾನೂ ಮಾಡಿರುವೆನು. ಆದುದರಿಂದ ಕಾಲ ಮೃತ್ಯು ಎಲ್ಲರೂ ಹೋಗಲಿ. ಈ ಸರ್ಪವನ್ನು ಬಿಟ್ಟುಬಿಡು ಎಂದಳು. ತರುವಾಯ ಗೌತಮಿಯೂ ದುಃಖವನ್ನು ಬಿಟ್ಟು ಬಿಟ್ಟಳು. ಬೇಡನು ಸರ್ಪವನ್ನು ಬಿಟ್ಟುಹೋದನು. ಮೃತ್ಯು ಕಾಲರೂ ಹೋದರು. ಆದುದರಿಂದ ಅವರವರು ಮಾಡಿದ ಪೂರ್ವಕರ್ಮವು ಸುಖದುಃಖಗಳಿಗೆ ಕಾರಣವು.



## ಉದಂಕರ ಕಥೆ [1]

ಉದಂಕರು ಮಹಾತಪಸ್ವಿಯಾಗಿದ್ದರು. ಗುರುಭಕ್ತರಾಗಿದ್ದರು. ಅವರು ಮಾಡುವ ಗುರುಸೇವೆಯನ್ನು ನೋಡಿ ಎಲ್ಲ ಶಿಷ್ಯರಿಗೂ ಉದಕರಂತೆ ಗುರುಸೇವೆಯನ್ನು ಮಾಡಬೇಕು ಎಂದು ತೋರುತ್ತಿತ್ತು. ಅವರ ಗುರುಗಳು ಗೌತಮರು. ಗೌತಮರಿಗೆ ಬಹಳ ಶಿಷ್ಯರಿದ್ದರೂ ಉದಂಕರ ಮೇಲೇ ವಿಶೇಷ ಪ್ರೀತಿಯಿದ್ದಿತು. ಉದಂಕರ ಇಂದ್ರಿಯ ನಿಗ್ರಹ ಶೌಚ ಅವರು ಮಾಡುವ ಉಪಚಾರ ಇವುಗಳಿಂದ ಅತ್ಯಂತ ಸಂತೋಷವನ್ನು ಹೊಂದಿದ್ದರು. ಸಾವಿರಾರು ಶಿಷ್ಯರು ಗೌತಮರ ಶಿಷ್ಯಸೇವೆಯನ್ನು ಮಾಡಿ ವಿದ್ಯೆಯನ್ನು ಹೊಂದಿ ಅವರಿಂದ ಅನುಜ್ಞೆಯನ್ನು ಪಡೆದು ಹೊರಟು ಹೋದರು. ಗೌತಮರು ಉದಂಕರ ಮೇಲೆ ಇರುವ ಪ್ರೀತಿಯಿಂದ ಅವರಿಗೆ

1. ಆಶ್ವ.ಪ. ಅ.56-58

ಅನುಜ್ಞೆಯನ್ನು ಕೊಡಲೇ ಇಲ್ಲ. ಕ್ರಮದಿಂದ ಉದಂಕರಿಗೆ ಮುದಿತನವು ಬಂದಿತು. ಅದನ್ನು ಅವರು ತಿಳಿಯಲೇ ಇಲ್ಲ. ಒಂದು ದಿವಸ ಅವರು ಕಾಡಿಗೆ ಕಟ್ಟಿಗೆಯನ್ನು ತರಲಿಕ್ಕೆ ಹೋದರು. ದೊಡ್ಡ ಕಟ್ಟಿಗೆಯ ಹೊರೆಯನ್ನು ಕಟ್ಟಿಕೊಂಡು ಹೊತ್ತುಕೊಂಡು ಬಂದರು. ಅದು ಬಹಳ ಭಾರವಾಗಿತ್ತು. ಅವರು ಬಹುಶ್ರಮದಿಂದ ಬಂದು ಆ ಕಟ್ಟಿಗೆ ಯನ್ನು ಕೆಳಗೆ ಹಾಕಿದರು. ಆಗ ಆ ಕಟ್ಟಿಗೆಯಲ್ಲಿ ಒಂದು ಕೂದಲು ಸಿಕ್ಕಿಕೊಂಡಿತ್ತು. ಅದು ಬೆಳ್ಳಿಯಂತೆ ಬೆಳ್ಳಗಾಗಿ ಇತ್ತು. ಕಟ್ಟಿಗೆಯನ್ನು ಹೊತ್ತುಕೊಂಡು ಬಂದ ಶ್ರಮದಿಂದಲೂ ಹಸಿವೆಯ ಶ್ರಮದಿಂದಲೂ ಇದ್ದ ಅವರು ತನ್ನ ತಲೆಕೂದಲು ಬೆಳ್ಳಗೆ ಇರುವುದನ್ನು ನೋಡಿ ತಾನು ಮುದುಕನಾದನೆಂದು ಗಟ್ಟಿಯಾಗಿ ಅಳಲಿಕ್ಕೆ ಆರಂಭಿ ಸಿದರು. ಆಗ ಸುಂದರಿಯಾದ ಗುರುಪುತ್ರಿಯು ತಂದೆಯ ಆಜ್ಞೆಯಿಂದ ಅವರಿಗೆ ಶಿರಸಾ ನಮಸ್ಕರಿಸಿ ಕಣ್ಣೀರನ್ನು ಕೈಯಲ್ಲಿ ಹಿಡಿದಳು. ಆ ಕಣ್ಣೀರಿನ ಹಸಿಯಿಂದ ಗುರುಪುತ್ರಿಯ ಕೈಯು ಸುಟ್ಟುಹೋಯಿತು. ಭೂಮಿಯು ಆ ಕಣ್ಣೀರನ್ನು ಧರಿಸಲಿಕ್ಕೆ ಸಮರ್ಥಳಾಗಿರಲಿಲ್ಲ. ಗೌತಮರು ಪ್ರೀತಿಯುಕ್ತವಾದ ಮನಸ್ಸುಳ್ಳವರಾಗಿ ಉದಂಕ ರೊಡನೆ 'ವತ್ಸ! ನಿನಗೆ ಇಷ್ಟು ಶೋಕವೇಕೆ ಉಂಟಾಯಿತು? ಇದ್ದಾನು ಸಾರವಾಗಿ ಹೇಳು. ನಿನ್ನ ಮುಖದಿಂದ ಕೇಳಬೇಕು ಎಂದು ಇಚ್ಛೆಯುಳ್ಳವನಾಗಿದ್ದೇನೆ' ಎಂದರು.

ಉದಂಕರು 'ನಿಮಗೆ ಪ್ರಿಯ ಮಾಡಬೇಕೆಂಬ ಅಭಿಪ್ರಾಯದಿಂದ ನಿಮ್ಮ ಮೇಲಿನ ಭಕ್ತಿಯಿಂದ ನನಗೆ ಮುದಿತನವು ಬಂದಿದ್ದು ತಿಳಿಯಲೇ ಇಲ್ಲ. ನಾನು ಒಂದು ಸುಖವನ್ನು ಅನುಭವಿಸಲಿಲ್ಲ. ನೂರುವರ್ಷಕಾಲ ವಾಸ ಮಾಡಿದರೂ ನನಗೆ ತಾವೂ ಅನುಜ್ಞೆಯನ್ನು ಕೊಡಲಿಲ್ಲ. ನನ್ನ ಮೇಲೆ ಬಂದ ಸಾವಿರಾರು ಶಿಷ್ಯರು ತಮ್ಮಿಂದ ಅನುಜ್ಞೆಯನ್ನು ಪಡೆದುಹೋದರು' ಎಂದರು.

ಗೌತಮರು 'ನಿನ್ನ ಮೇಲೆ ಇರುವ ಪ್ರೇಮದಿಂದ ನೀನು ಮಾಡಿರುವ ಸೇವೆಯಿಂದ ನನಗೂ ಕಾಲವು ಹೋದದ್ದೇ ತಿಳಿಯಲಿಲ್ಲ. ನಿನಗೆ ಈಗ ಮನೆಗೆ ಹೋಗಬೇಕೆಂಬ ಅಭಿಪ್ರಾಯವಿದ್ದರೆ ನನ್ನ ಅನುಜ್ಞೆಯನ್ನು ತೆಗೆದುಕೊಂಡು ಹೊರಟು ಹೋಗು' ಎಂದರು.

ಉದಂಕರು 'ಗುರುದಕ್ಷಿಣೆಯನ್ನಾಗಿ ಯಾವುದನ್ನು ಕೊಡಲಿ? ತಮಗೆ ದಕ್ಷಿಣೆ ಯನ್ನು ಕೊಟ್ಟು ತಮ್ಮ ಅನುಜ್ಞೆಯನ್ನು ಪಡೆದು ನಾನು ಹೋಗುವೆನು' ಎಂದರು.

ಅದಕ್ಕೆ ಗೌತಮರು 'ಗುರುಗಳ ಸಂತೋಷವೇ ಅವರಿಗೆ ಕೊಡುವ ದಕ್ಷಿಣೆ ಯೆಂದು ಸಜ್ಜನರು ಹೇಳುವರು. ನೀನು ಮಾಡಿದ ಸೇವೆಯಿಂದಲೇ ನಾನು ಸಂತೋಷವನ್ನು ಹೊಂದಿರುವೆನು. ನಾನು ನಿನ್ನ ಮೇಲೆ ಎಷ್ಟು ಸಂತೋಷಪಟ್ಟಿದ್ದೇನೆ.

ಕೇಳು. ನೀನೀಗ ಹದಿನಾರು ವರ್ಷದವನಾಗುವ ಪಕ್ಷದಲ್ಲಿ ನನ್ನ ಮಗಳನ್ನೇ ನಿನಗೆ ಮದುವೆ ಮಾಡಿಕೊಡುತ್ತಿದ್ದೆನು. ನನ್ನ ಮಗಳು ಹೊರತು ನಿನ್ನ ತೇಜಸ್ಸನ್ನು ಧರಿಸಲಿಕ್ಕೆ ಸಮರ್ಥರಾದ ಸ್ತ್ರೀಯರು ಮತ್ತೊಬ್ಬರಿಲ್ಲ' ಎಂದು ಹೇಳಿದರು.

ತರುವಾಯ ಉದಂಕರು ಹದಿನಾರುವರ್ಷದ ಯುವಕರಾಗಿ ಗುರುಪುತ್ರಿಯನ್ನು ಮದುವೆಮಾಡಿಕೊಂಡರು. ಗುರುಗಳ ಅನುಜ್ಞೆಯನ್ನು ಪಡೆದು ಗುರುಪತ್ನಿಯೊಡನೆ 'ನಿಮಗೆ ನಾನೇನು ಗುರುದಕ್ಷಿಣೆ ಕೊಡಲಿ' ಎಂದು ಕೇಳಿದರು. 'ಲೋಕದಲ್ಲಿ ಯಾವ ದುರ್ಲಭವಾದ ರತ್ನವನ್ನು ತಪಸ್ಸಾಮರ್ಥ್ಯದಿಂದ ತಂದುಕೊಡಬಲ್ಲೆನು' ಎಂದರು.

ಆದಕ್ಕೆ ಗುರುಪತ್ನಿಯು 'ಬ್ರಾಹ್ಮಣ! ನಿನ್ನ ಭಕ್ತಿಯಿಂದಲೇ ಸಂತುಷ್ಟಳಾಗಿದ್ದೇನೆ. ಇಷ್ಟೇ ಸಾಕು. ನಿನಗೆ ಮಂಗಳವಾಗಲಿ. ನಿನ್ನ ಇಚ್ಛಾನುಸಾರವಾಗಿ ಹೋಗಿ ಬಾ' ಎಂದಳು.

ಉದಂಕರು ಮತ್ತೂ 'ಹಾಗಲ್ಲಮ್ಮ! ಏನಾದರೂ ಆಜ್ಞೆಯನ್ನು ಮಾಡು. ನಿನಗೆ ಪ್ರಿಯವನ್ನು ಮಾಡಬೇಕು' ಎಂದರು.

ಆಗ ಗುರುಪತ್ನಿಯಾದ ಅಹಲ್ಯೆಯು 'ಸೌದಾಸರಾಜನ ಪತ್ನಿಯು ಧರಿಸಿರುವ ತೋಡನ್ನು (ಬೆಂಡೋಲೆಯನ್ನು) ತಂದುಕೊಡು. ಹಾಗೆ ಮಾಡಿದರೆ ಗುರುದಕ್ಷಿಣೆ ಯನ್ನು ಕೊಟ್ಟಂತೆ ಆಗುವುದು' ಎಂದಳು.

ಉದಂಕರು ಹಾಗೆಯೇ ಆಗಲಿ ಎಂದು ಗುರುಪತ್ನಿಯ ಹತ್ತಿರ ಪ್ರತಿಜ್ಞಾ ಮಾಡಿ ಗುರುಪತ್ನಿಯ ಪ್ರೀತಿಗೋಸ್ಕರ ತೋಡನ್ನು ತರುವುದಕ್ಕಾಗಿ ಮಾನುಷ ಭಕ್ಷಕನಾದ ಸೌದಾಸರಾಜನ ಹತ್ತಿರ ಕೇಳಲಿಕ್ಕೆ ಹೋದರು. ತರುವಾಯ ಗೌತಮರು ಹೆಂಡತಿ ಯೊಡನೆ ಉದಂಕನೇನು ಕಾಣಸುವುದಿಲ್ಲ ಎಂದು ಕೇಳಲು ಅಹಲ್ಯೆಯು ಅವರು ತೋಡನ್ನು ತರಲಿಕ್ಕೆ ಹೋಗಿರುವುದನ್ನು ತಿಳಿಸಿದಳು. ಆಗ ಗೌತಮರು 'ನೀನು ಮಾಡಿದ ಕಾರ್ಯವು ಸರಿಯಾಗಿಲ್ಲ. ಆ ರಾಜನು ಶಾಪಗ್ರಸ್ತನಾಗಿರುವನು. ಹೋದ ಈ ಬ್ರಾಹ್ಮಣನನ್ನು ಸಂಹರಿಸುವನು' ಎಂದರು.

ಅಹಲ್ಯೆಯು 'ನಾನು ಈ ವಿಷಯವನ್ನು ತಿಳಿಯದೆ ಬ್ರಾಹ್ಮಣನನ್ನು ಅಲ್ಲಿಗೆ ಕಳುಹಿಸಿದೆನು. ನಿಮ್ಮ ಅನುಗ್ರಹದಿಂದ ಅವನಿಗೆ ಒಂದು ಭಯವೂ ಉಂಟಾಗಲಾರದು' ಎಂದಳು. ಗೌತಮರು ಸರಿಯೆಂದರು. ಉದಂಕರು ಹೋಗಿ ಒಬ್ಬರೂ ಇಲ್ಲದಿರುವ ಅರಣ್ಯದಲ್ಲಿ ಸೌದಾಸರಾಜನನ್ನು ನೋಡಿದರು.

ಉದಂಕರು ಘೋರವಾಗಿ ಕಾಣಸುವ ದೀರ್ಘವಾದ ಮೀಸೆಯುಳ್ಳ ಮನುಷ್ಯರ

ರಕ್ತದಿಂದ ಕೂಡಿದ ಆ ರಾಜನನ್ನು ನೋಡಿ ವ್ಯಥೆಯನ್ನು ಹೊಂದಲಿಲ್ಲ. ರಾಜನು ಎದ್ದು ಯಮದೇವರಂತೆ ಭಯವನ್ನುಂಟುಮಾಡುತ್ತಾ 'ದೈವೇಚ್ಛೆಯಿಂದ ಹಗಲಿನ ಆರನೇಭಾಗದಲ್ಲಿ (ಅಂದರೆ ಹಗಲನ್ನು ಎಂಟು ಭಾಗಮಾಡಿ ಆದರ ಆರನೇ ಭಾಗದಲ್ಲಿ ಮೂರುಗಂಟೆಯ ಸಮಯದಲ್ಲಿ) ಆಹಾರವನ್ನು ಹುಡುಕುವ ಸಮಯ ದಲ್ಲಿ ಬಂದು ಸೇರಿದಿ' ಎಂದನು.

ಉದಂಕರು 'ರಾಜನೇ! ನಾನು ಗುರುದಕ್ಷಿಣೆಗಾಗಿ ಇಲ್ಲಿಗೆ ಬಂದಿರುವೆನು. ಗುರುದಕ್ಷಿಣೆಗಾಗಿ ಬಂದಿರುವವನನ್ನು ಹಿಂಸಾಮಾಡಬಾರದು ಎನ್ನುವರು ಎಂದರು.

ಆರನೇಕಾಲದಲ್ಲಿ ನನಗೆ ಆಹಾರವು ವಿಹಿತವಾದದ್ದು. ಈಗ ಹಸಿವೆಯಿಂದ ಕೂಡಿದ ನಾನು ನಿನ್ನನ್ನು ಬಿಡಲಿಕ್ಕೆ ಆಗಲಾರದು ಎಂದನು.

ಮಹಾರಾಜನೇ! ಹಾಗೇ ಆಗಲಿ. ಆದರೆ ಒಂದು ಪ್ರತಿಜ್ಞೆಯನ್ನು ಮಾಡುವೆನು. ಗುರುದಕ್ಷಿಣೆಯನ್ನು ಕೊಟ್ಟು ನಿನ್ನ ಬಳಿಗೇನೇ ಬರುವೆನು. ನಾನು ಗುರುಗಳಿಗೆ ಕೊಡುತ್ತೇನೆ ಎಂದು ಪ್ರತಿಜ್ಞಾಮಾಡಿದ ವಸ್ತುವು ನಿನ್ನಲ್ಲಿ ಇದೆ. ನೀನು ಯಾವಾಗಲೂ ಬ್ರಾಹ್ಮಣಶ್ರೇಷ್ಠರಿಗೆ ರತ್ನಗಳನ್ನು ಕೊಡುವಿ. ನೀನು ದಾನ ಮಾಡಲಿಕ್ಕೆ ಯೋಗ್ಯನು. ನಾನು ದಾನವನ್ನು ಹೊಂದಲಿಕ್ಕೆ ಯೋಗ್ಯನು. ನಿನ್ನ ಅಧೀನವಾಗಿರುವ ವಸ್ತುವನ್ನು ಗುರುಗಳಿಗೆ ಸಮರ್ಪಿಸಿ ಆಮೇಲೆ ಪುನಃ ನಿನ್ನ ಸಮಯಕ್ಕೆ ಬಂದು ಸೇರುವೆನು. ಸತ್ಯವಾಗಿಯೂ ಪ್ರತಿಜ್ಞೆ ಮಾಡುತ್ತೇನೆ. ಸುಳ್ಳು ಹೇಳುವುದಿಲ್ಲ. ನಾನು ಇಷ್ಟರವರೆಗೆ ಯಾವಾಗಲೂ ಸುಳ್ಳು ಹೇಳಿದ್ದು ಇಲ್ಲ' ಎಂದರು.

ನಿನ್ನ ಗುರುಗಳಿಗೆ ಕೊಡಬೇಕಾದ ವಸ್ತುವು ನನ್ನ ಅಧೀನವಾಗಿದ್ದರೆ ಅದು ನಿನಗೆ ಸಿಕ್ಕಿದಂತೆಯೇ. ಅದು ಯಾವುದು ಎಂದು ಹೇಳು' ಎಂದನು.

ನಾನು ನಿನ್ನ ಪತ್ನಿಯ ಕಿವಿಯ ತೋಡುಗಳನ್ನು ಬೇಡಲಿಕ್ಕೆ ಬಂದಿರುವೆನೆಂದು ಉದಂಕರು ಹೇಳಿದರು. ರಾಜನು ಅವು ನನ್ನ ಹೆಂಡತಿಗೆ ಯೋಗ್ಯಗಳಾದವು. ಬೇರೆ ಯಾವುದನ್ನಾದರೂ ಕೇಳು' ಎಂದರು.

ಉದಂಕರು 'ಬೇರೆ ನೆಪವನ್ನು ಹೇಳಬೇಡ. ನನ್ನ ಮಾತನ್ನು ಕೇಳುವ ಪಕ್ಷದಲ್ಲಿ ಆ ತೋಡುಗಳನ್ನೇ ಕೊಡು. ಸತ್ಯಮಾತುಳ್ಳವನಾಗು' ಎಂದರು.

ರಾಜನು 'ಸರಿ ಹಾಗಾದರೆ ನೀನು ಹೋಗಿ ನನ್ನ ಪತ್ನಿಯ ಹತ್ತಿರ ತೋಡನ್ನು ಕೇಳು. ನಾನು ಕೇಳಿದೆನೆಂದು ಹೇಳಿದರೆ ಅವಳು ಕೊಡುವಳು ಎಂದನು.

ಉದಂಕರು 'ನಾನು ಎಲ್ಲಿ ನಿನ್ನ ಪತ್ನಿಯನ್ನು ನೋಡಬಹುದು? ನೀನೇ ಯಾಕೆ ಪತ್ನಿಯ ಬಳಿಗೆ ಹೋಗುವುದಿಲ್ಲ?' ಎಂದರು.

ಅವಳನ್ನು ನೀನೀಗ ಒಂದು ಕಾಡಿನಲ್ಲಿರುವ ನೀರು ಬೀಳುವ ಸ್ಥಳದ ಹತ್ತಿರ ನೋಡಬಹುದು. ಈ ಆರನೇ ಕಾಲದಲ್ಲಿ ನಾನು ಅವಳನ್ನು ನೋಡಲಾಗದು' ಎಂದು ರಾಜನು ಹೇಳಿದನು.

ಉದಂಕರು ಹಾಗೆಯೇ ಹೋಗಿ ರಾಜಪತ್ನಿಯಾದ ಮದಯಂತಿಯನ್ನು ನೋಡಿ ತನ್ನ ಪ್ರಯೋಜನವನ್ನು ಕೇಳಿಕೊಂಡರು. ಸೌದಾಸರಾಜನು ಹೇಳಿದನು ಎಂದರು. ಅದಕ್ಕೆ ಮದಯಂತಿಯು 'ನೀವು ಹೇಳುವ ಮಾತು ಸತ್ಯವು. ನೀವು ಸುಳ್ಳು ಹೇಳಲಾರಿರಿ. ಆದರೂ ನನಗೊಂದು ಗುರುತನ್ನು ತಂದುಕೊಡಬೇಕು' ಎಂದಳು. 'ಈ ದಿವ್ಯ ತೋಡುಗಳನ್ನು ದೇವತೆಗಳೂ ಯಕ್ಷರೂ ಋಷಿಗಳೂ ಆವಾವ ಉಪಾಯದಿಂದ ಅಪಹಾರ ಮಾಡುವ ಎಂದು ಸಮಯವನ್ನು ನೋಡುತ್ತಾ ಇರುತ್ತಾರೆ. ಇದನ್ನು ಭೂಮಿಯಲ್ಲಿ ಇಟ್ಟುಬಿಟ್ಟರೆ ಹಾವುಗಳು ತೆಗೆದುಕೊಂಡು ಹೋಗುವುವು. ನಿದ್ರೆಯನ್ನು ಉಂಟುಮಾಡಿ ದೇವತೆಗಳೂ ಯಕ್ಷರೂ ಅಪಹರಿಸ ಬಹುದು. ದೇವತೆಗಳು ರಾಕ್ಷಸರು ಸರ್ಪರು ಇವರಿಂದ ಜಾಗ್ರತೆಯಿಂದ ಕಾಪಾಡುತ್ತಾ ಇದ್ದೇನೆ. ಈ ತೋಡು ರಾತ್ರಿ ಹಗಲೂ ಕೂಡ ಬಂಗಾರವನ್ನು ಸುರಿಸುತ್ತಾ ಇರುತ್ತದೆ. ರಾತ್ರಿಯಲ್ಲಿ ನಕ್ಷತ್ರಗಳ ಕಾಂತಿಯನ್ನು ಮೀರಿ ಇರುತ್ತದೆ. ಇವುಗಳನ್ನು ಧರಿಸಿದರೆ ಹಸಿವೆಯಾಗಲಾರದು. ನೀರಡಿಕೆಯಾಗಲಾರದು. ವಿಷ ಅಗ್ನಿ ದುಷ್ಟಮೃಗಗಳ ಭಯವಿಲ್ಲ. ಇದು ಚಿಕ್ಕವರಿಗೆ ಚಿಕ್ಕದಾಗುತ್ತದೆ. ದೊಡ್ಡವರಿಗೆ ದೊಡ್ಡದಾಗುತ್ತದೆ. ಈರೀತಿಯಾಗಿ ನನ್ನ ತೋಡುಗಳು ಮೂರುಲೋಕಗಳಲ್ಲಿಯೂ ಪ್ರಸಿದ್ಧಗಳು. ಆದುದರಿಂದ ನೀವು ರಾಜರ ಒಂದು ಗುರುತನ್ನು ತನ್ನಿರಿ ಎಂದಳು.

ಉದಂಕರು ಮಿತ್ರಸಹ ಎಂದು ಹೆಸರುಳ್ಳ ಸೌದಾಸರಾಜನ ಬಳಿಗೆ ಬಂದು ಗುರುತನ್ನು ಕೇಳಿದನು. ಅವನು ಗುರುತನ್ನು ಕೊಟ್ಟನು. ಅಂದರೆ ನೀನು 'ಈ ಗತಿಯು ಕ್ಷೇಮಕರವಾಗಿಲ್ಲ. ಬೇರೆ ಗತಿಯಿಲ್ಲ. ಈ ನನ್ನ ಅಭಿಪ್ರಾಯವನ್ನು ನಿನ್ನ ಮಣಿಮಯ ತೋಡುಗಳನ್ನು ಕೊಡು' ಎಂದು ನಾನು ಹೇಳಿದ ಮಾತನ್ನು ಹೋಗಿ ಹೇಳಿರಿ' ಎಂದನು. ಅದೇ ಪ್ರಕಾರವಾಗಿ ಹೋಗಿ ಹೇಳಲು ಮದಯಂತಿಯು ತೋಡುಗಳನ್ನು ಕೊಟ್ಟಳು. ಉದಂಕರು ತೋಡನ್ನು ಪಡೆದು ಇದೇನು ರಹಸ್ಯವಚನವು. ಇದನ್ನು ಕೇಳಬೇಕೆಂದು ಅಭಿಪ್ರಾಯವುಳ್ಳವನಾಗಿದ್ದೇನೆ ಎಂದರು.

ಅದಕ್ಕೆ ರಾಜನು 'ಸ್ವಭಾವದಿಂದ ಕ್ಷತ್ರಿಯರು ಬ್ರಾಹ್ಮಣರನ್ನು ಪೂಜಿಸುವರು. ಬ್ರಾಹ್ಮಣರಿಂದಲೂ ಎಷ್ಟೋ ದೋಷಗಳು ಬರುತ್ತವೆ. ನಾನು ಬ್ರಾಹ್ಮಣರಿಗೆ ನಮಸ್ಕಾರ ಮಾಡಿಕೊಂಡು ಇದ್ದವನು ಬ್ರಾಹ್ಮಣರಿಂದ ದೋಷವನ್ನು ಹೊಂದಿರು

ವೆನು. ಮದಯಂತಿಯ ಸಹಾಯವುಳ್ಳವನಾಗಿ ಬೇರೆ ಗತಿಯನ್ನು ತಿಳಿಯಲಿಲ್ಲ. ಸ್ವರ್ಗಕ್ಕೆ ಹೋಗಲಿಕ್ಕೂ ಇಲ್ಲಿಯೇ ಇರಲಿಕ್ಕೂ ಎರಡಕ್ಕೂ ಮಾರ್ಗವಿಲ್ಲದಾಗಿದೆ. ವಿಶೇಷವಾಗಿ ಬ್ರಾಹ್ಮಣರ ವಿರೋಧವನ್ನು ಮಾಡಿದ ಕ್ಷತ್ರಿಯನು ಈ ಲೋಕದಲ್ಲಿ ಇರಲಿಕ್ಕೂ ಆಗಲಾರದು. ಸತ್ತು ಸುಖವನ್ನು ಹೊಂದಲಿಕ್ಕೂ ಆಗಲಾರದು. ಪ್ರಕೃತ ನಿನಗೆ ಇಷ್ಟಗಳಾದ ತೋಡುಗಳು ಸಿಕ್ಕಿದವು. ನೀನು ಮಾಡಿದ ಪ್ರತಿಜ್ಞೆಯನ್ನು ಸಫಲ ವನ್ನಾಗಿ ಮಾಡು.

ಉದಂಕರು 'ರಾಜನೇ! ನಾನು ಹಾಗೆಯೇ ಮಾಡುತ್ತೇನೆ. ಪುನಃ ನಿನ್ನ ವಶ ಬರುತ್ತೇನೆ. ನಿನ್ನ ಹತ್ತಿರವೇ ಒಂದು ಪ್ರಶ್ನೆಯನ್ನು ಕೇಳಬೇಕು ಎಂದಿದ್ದೇನೆ' ಎಂದರು.

ರಾಜನು 'ಬೇಕಾದಂತೆ ಕೇಳು. ನಿನ್ನ ಸಂದೇಹವನ್ನು ಪರಿಹರಿಸುವೆನು. ವಿಚಾರಮಾಡಬೇಕಾಗಿಲ್ಲ' ಎಂದನು.

ಉದಂಕರು 'ಮಿತ್ರರ ವಿಷಮನಾದವನು ಕಳ್ಳನೆಂದು ಹೇಳುವರು. ರಾಜನೇ! ನೀನೀಗ ನನಗೆ ಮಿತ್ರನಾಗಿರುವಿ. ನನಗೆ ನೀನು ಒಳ್ಳೆಯ ಯೋಚನೆಯನ್ನು ಹೇಳು. ಈಗ ಇಲ್ಲಿ ನನ್ನ ಅಭೀಷ್ಟವು ಸಿದ್ಧಿಸಿತು. ನೀನೋ ಮನುಷ್ಯರನ್ನು ತಿನ್ನುವವನು. ನಾನು ಗುರುಗಳ ದಕ್ಷಿಣೆಯನ್ನು ಕೊಟ್ಟು ಇಲ್ಲಿಗೆ ಬರುವುದು ಯೋಗ್ಯವೋ ಅಲ್ಲವೋ ಹೇಳು' ಎಂದರು.

ರಾಜನು 'ಬ್ರಾಹ್ಮಣೋತ್ತಮ! ನಿನ್ನ ಹತ್ತಿರ ಸರಿಯಾಗಿ ಹೇಳುವುದಾದರೆ ನೀನು ಪುನಃ ನಾನಿದ್ದಲ್ಲಿಗೆ ಬರಬಾರದು. ಹೀಗೆ ಮಾಡಿದರೇನೇ ನಿನಗೆ ಶ್ರೇಯಸ್ಸು ಆಗುವು ದೆಂದು ತಿಳಿಯುತ್ತೇನೆ. ನೀನು ಪುನಃ ಇಲ್ಲಿಗೆ ಬಂದರೆ ನಿನಗೆ ಮೃತ್ಯುವು ತಪ್ಪಿದ್ದಲ್ಲ' ಎಂದನು.

ಉದಂಕರು 'ಸರಿ. ನಾನು ಹೋಗಿಬರುತ್ತೇನೆ' ಎಂದು ಹೇಳಿ ದಿವ್ಯವಾದ ತೋಡನ್ನು ಹಿಡಿದುಕೊಂಡು ಗುರುಪತ್ನಿಯಾದ ಅಹಲ್ಯೆಗೆ ಪ್ರಿಯವನ್ನು ಮಾಡ ಬೇಕೆಂದು ಬಹುವೇಗದಿಂದ ಗೌತಮರ ಆಶ್ರಮವನ್ನು ಕುರಿತುಬಂದರು.

ಮದಯಂತಿಯು ಈ ತೋಡಿನ ಮೇಲೆ ಬಹುಜನರು ಆಸೆಯಿಟ್ಟಿರುವರೆಂದು ಹೇಳಿದುದನ್ನು ಜ್ಞಾಪಿಸಿಕೊಂಡು ಕೃಷ್ಣಾಜಿನದಲ್ಲಿ ಕಟ್ಟಿ ಹಿಡಿದುಕೊಂಡು ಹೋದರು. ದಾರಿಯಲ್ಲಿ ಅವರಿಗೆ ಹಸಿವೆಯಾಯಿತು. ಹಣ್ಣುಗಳಿಂದ ತುಂಬಿದ ಬಿಲ್ವದ ಮರವನ್ನು ನೋಡಿದರು. ತೋಡನ್ನು ಕಟ್ಟಿದ್ದ ಕೃಷ್ಣಾಜಿನವನ್ನು ಮರದ ಕೊಂಬೆಯಲ್ಲಿಟ್ಟು ಬಿಲ್ವಹಣ್ಣುಗಳನ್ನು ಕೆಳಗೆ ಉದುರಿಸಿದರು. ಯಾವ ಕೃಷ್ಣಾಜಿನದಲ್ಲಿ ತೋಡನ್ನು

ಕಟ್ಟಿದ್ದರೋ ಆ ಕೃಷ್ಣಾಜಿನದ ಮೇಲೆಯೇ ಹಣ್ಣುಗಳು ಬಿದ್ದವು. ಹಣ್ಣುಗಳು ಬಿದ್ದು ಕೃಷ್ಣಾಜಿನದ ಗಂಟು ಬಿಚ್ಚಿಹೋಯಿತು. ತೋಡಿನಿಂದ ಸಹಿತವಾಗಿ ಕೃಷ್ಣಾಜಿನವು ಕೆಳಗೆ ಬಿದ್ದಿತು. ಗಂಟು ಬಿಚ್ಚಿಹೋಗಿ ಕೃಷ್ಣಾಜಿನವು ಕೆಳಗೆ ಬೀಳಲು ಆ ತೋಡುಗಳನ್ನು ಐರಾವತಕುಲದಲ್ಲಿ ಹುಟ್ಟಿದ್ದ ಒಂದು ಸರ್ಪವು ನೋಡಿತು. ಕೂಡಲೇ ಅದು ತೋಡುಗಳನ್ನು ಕಟ್ಟಿಕೊಂಡು ಹುತ್ತದ ಒಳಗೆ ಹೋಯಿತು. ಹಾವು ತೋಡುಗಳನ್ನು ಕಟ್ಟಿಕೊಂಡು ಹೋಗುವುದನ್ನು ನೋಡಿ ಕೂಡಲೇ ಉದಂಕರು ದುಃಖವುಳ್ಳವರಾಗಿ ಕೋಪವುಳ್ಳವರಾಗಿ ಮರದಿಂದ ಕೆಳಗೆ ಹಾರಿದರು. ಕೋಲನ್ನು ಹಿಡಿದುಕೊಂಡು ಹೋಗಿ ಹುತ್ತವನ್ನು ತೋಡಿದರು. ಇಪ್ಪತ್ತೈದು ದಿವಸಗಳ ಪರ್ಯಂತ ಕೋಪದಿಂದ ಕೂಡಿದವರಾಗಿ ಆ ಹುತ್ತವನ್ನು ಅಗೆದರು. ಅವರ ಅಸಹ್ಯವಾದ ವೇಗವನ್ನು ಸಹಿಸದೆ ಭೂಮಿಯು ನಡುಗಿತು. ನಾಗಲೋಕಕ್ಕೆ ಹೋಗಲಿಕ್ಕೆ ಮಾರ್ಗವನ್ನು ಮಾಡ ಬೇಕೆಂದು ತೋಡುತ್ತಿರುವಾಗ ರಥದಲ್ಲಿ ಕೂತುಕೊಂಡು ಇಂದ್ರದೇವರು ಅಲ್ಲಿಗೆ ಬಂದರು. ಅವರು ಬ್ರಾಹ್ಮಣನನ್ನು ನೋಡಿ ತಾನೂ ಬ್ರಾಹ್ಮಣರೂಪವನ್ನು ಧರಿಸಿ ಕೊಂಡು ಬಂದು ಅವರ ದುಃಖದಿಂದ ತಾನೂ ದುಃಖವುಳ್ಳವರಾಗಿ ನಿನಗೆ ಈ ಕಾರ್ಯವನ್ನು ಮಾಡಲಿಕ್ಕೆ ಆಗಲಾರದು. ಇಲ್ಲಿಂದ ನಾಗಲೋಕಕ್ಕೆ ಸಾವಿರ ಯೋಜನಗಳು. ಬರೇ ನಿನ್ನ ಕೋಲಿನಿಂದ ಈ ಕಾರ್ಯವಾಗುವಂತೆ ತೋರುವುದಿಲ್ಲ' ಎಂದರು. ಅದಕ್ಕೆ 'ಪೂಜ್ಯರೇ! ನಾಗಲೋಕದಲ್ಲಿ ನಾನು ತೋಡುಗಳನ್ನು ಹೊಂದ ಲಿಕ್ಕೆ ಸಾಧ್ಯವಾಗದಿರುವ ಪಕ್ಷದಲ್ಲಿ ನೀವು ನೋಡುವಂತೆ ನಾನು ಪ್ರಾಣಗಳನ್ನೇ ಬಿಟ್ಟುಬಿಡುತ್ತೇನೆ' ಎಂದರು.

ಇಂದ್ರದೇವರು ಉದಂಕರನ್ನು ಆ ನಿಶ್ಚಯದಿಂದ ತಿರಿಗಿಸಲಿಕ್ಕೆ ಸಾಧ್ಯವಾಗದೆ ಇರಲು ಅವರ ಕೈಯಲ್ಲಿದ್ದ ಕೋಲಿನಲ್ಲಿ ವಜ್ರಾಸ್ತ್ರವನ್ನು ಸೇರಿಸಿದರು. ತರುವಾಯ ವಜ್ರಪ್ರಹಾರದಿಂದ ಸೀಳಿಹೋಗಿ ಭೂಮಿಯು ಪಾತಾಳಕ್ಕೆ ಹೋಗಲಿಕ್ಕೆ ದಾರಿಯನ್ನು ಬಿಟ್ಟಿತು. ಉದಂಕರು ಆ ಮಾರ್ಗದಿಂದ ನಾಗಲೋಕಕ್ಕೆ ಹೋದರು. ದಿವ್ಯ ಅಲಂಕಾರದಿಂದ ಕೂಡಿದಾಗ ಲೋಕವನ್ನು ನೋಡಿದರು. ಅಂತಹ ನಾಗಲೋಕ ವನ್ನು ನೋಡಿ ಉದಂಕರು ದೈನ್ಯವನ್ನು ಹೊಂದಿದವರಾಗಿ ಅಲ್ಲಿಂದ ತೋಡನ್ನು ತೆಗೆದುಕೊಂಡು ಹೋಗುವ ವಿಷಯದಲ್ಲಿ ನಿರಾಶರಾದರು. ಅಲ್ಲಿ ಬಿಳಿಬಾಲವುಳ್ಳ ಕಪ್ಪಾದ ಒಂದು ಕುದುರೆಯು ಇದ್ದಿತು. ಅದರ ಮುಖವೂ ಕಣ್ಣುಗಳೂ ಕೆಂಪಾಗಿ ಜ್ವಲಿಸುತ್ತಿದ್ದವು. ಆ ಕುದುರೆಯು ಉದಂಕರೊಡನೆ ನನ್ನ ಪೃಷ್ಠಭಾಗವನ್ನು ಬಾಯಿಯಿಂದ ಊದು. ಐರಾವತನ ಮಗನಾದ ಸರ್ಪನು ನಿನ್ನ ತೋಡುಗಳನ್ನು

ತಂದಿರುವನು. ನೀನು ಪೃಷ್ಠಭಾಗವನ್ನು ಊದು. ಆಗ ತೋಡನ್ನು ಹೊಂದುವಿ. ಈ ಕಾರ್ಯದಲ್ಲಿ ಜುಗುಪ್ಸೆಯನ್ನು ಹೊಂದಬೇಡ. ನಿನ್ನ ಗುರುಗಳಾದ ಗೌತಮರ ಮನೆಯಲ್ಲಿ ಇರುವಾಗ ಇದೇ ಕಾರ್ಯವನ್ನು ಮಾಡುತ್ತಾ ಇದ್ದಿ' ಎಂದಿತು.

ಉದಂಕರು 'ನನ್ನ ಗುರುಗಳ ಆಶ್ರಮದಲ್ಲಿ ನಿನ್ನನ್ನು ಏನು ಎಂದು ನಾನು ತಿಳಿದುಕೊಳ್ಳಲಿ? ನಾನು ಹೇಗೆ ಈ ಕಾರ್ಯವನ್ನು ಮಾಡಿರುವೆನು? ಅದನ್ನು ಕೇಳಲು ಇಚ್ಛಿಸುವೆನು' ಎಂದರು.

ಆಗ ಕುದುರೆಯು 'ನಿನ್ನ ಗುರುಗಳಿಗೆ ನಾನು ಗುರುವು. ನಾನೇ ಅಗ್ನಿಯು. ನೀನು ಯಾವಾಗಲೂ ಗುರುಗಳಿಗಾಗಿ ನನ್ನನ್ನು ಪೂಜಿಸುತ್ತಾ ಇದ್ದಿ. ಆದುದರಿಂದ ನಿನಗೆ ನಾನು ಶ್ರೇಯಸ್ಸನ್ನು ಉಂಟುಮಾಡುತ್ತೇನೆ. ನಾನು ಹೇಳಿದಂತೆ ಬೇಗನೇ ಮಾಡು' ಎಂದು ಹೇಳಲು ಉದಂಕರು ಹಾಗೆಯೇ ಮಾಡಿದರು. ಅಗ್ನಿಯು ಪ್ರೀತಿಯುಳ್ಳವರಾಗಿ ಜ್ವಲಿಸಿದರು. ಆ ಕುದುರೆಯನ್ನು ಊದಲು ಕುದುರೆಯ ರೋಮ ಕೂಪಗಳಿಂದ ಹೊಗೆಯು ಉಂಟಾಯಿತು. ನಾಗಲೋಕವೆಲ್ಲಾ ಹೊಗೆಯಿಂದ ತುಂಬಿಹೋಯಿತು. ಐರಾವತನ ಮನೆಯಲ್ಲಿ ಎಲ್ಲಾ ಹಾಹಾಕಾರವುಂಟಾಯಿತು. ವಾಸುಕಿಯೇ ಮೊದಲಾದ ಎಲ್ಲರ ಮನೆಗಳೂ ಹೊಗೆಯಿಂದ ತುಂಬಿಹೋಗಿ ಪ್ರಕಾಶಿಸಲೇ ಇಲ್ಲ. ಹಿಮದಿಂದ ಮುಚ್ಚಿಹೋದ ವನಗಿರಿಗಳಂತೆ ಕಂಡವು. ಸರ್ಪಗಳೆಲ್ಲವೂ ಹೊಗೆಯಿಂದ ಕೆಂಪಾದ ಕಣ್ಣುಗಳುಳ್ಳವಾಗಿ ಉದಂಕರ ನಿಶ್ಚಯವನ್ನು ತಿಳಿಯಲಿಕ್ಕೆ ಬಂದವು. ಅವರ ನಿಶ್ಚಯವನ್ನು ತಿಳಿದ ಎಲ್ಲವೂ ಹೊಗೆಯಿಂದ ಕೆಂಪಾದ ಕಣ್ಣುಗಳುಳ್ಳವಾಗಿ ಉದಂಕರನ್ನು ಪೂಜಿಸಿದವು. ಮುದುಕರೂ ಮಕ್ಕಳೂ ಎಲ್ಲರನ್ನೂ ಮುಂದೆ ಮಾಡಿಕೊಂಡು ಬಂದು ಪ್ರಸನ್ನರಾಗಬೇಕು ಎಂದು ಹೇಳಿ ಉದ್ದಕ್ಕೆ ನಮಸ್ಕಾರ ಮಾಡಿದವು. ಅರ್ಘ್ಯಪಾದ್ಯಾದಿ ಪೂಜೆಯನ್ನು ಮಾಡಿ ದಿವ್ಯ ತೋಡುಗಳನ್ನು ಕೊಟ್ಟವು. ತರುವಾಯ ಪ್ರತಾಪಶಾಲಿಯಾದ ಉದಂಕರು ಸರ್ಪಗಳಿಂದ ಪೂಜಿತರಾಗಿ ಅಗ್ನಿದೇವರಿಗೆ ಪ್ರದಕ್ಷಿಣೆಯಾಗಿ ಬಂದು ಗುರುಗಳ ಮನೆಗೆ ಹೋದರು. ಅವರು ಬೇಗನೇ ಗೌತಮ ಮನೆಗೆ ಹೋಗಿ ಗುರುಪತ್ನಿಗೆ ದಿವ್ಯಕುಂಡಲಗಳನ್ನು ಕೊಟ್ಟರು. ಗುರುಗಳ ಸಮೀಪದಲ್ಲಿ ವಾಸುಕಿಯೇ ಮೊದಲಾದ ಸರ್ಪಗಳು ಮಾಡಿದ ಕಾರ್ಯಗಳನ್ನು ಹೇಳಿದರು. ಈರೀತಿಯಿಂದ ಮಹಾನುಭಾವರಾದ ಉದಂಕರು ಮೂರುಲೋಕಗಳನ್ನು ನಡುಗಿಸಿ ತೋಡುಗಳನ್ನು ತಂದುಕೊಟ್ಟರು. ಉದಂಕರು ಇಂತಹ ಪ್ರಭಾವವುಳ್ಳವರಾಗಿದ್ದರು.



# ಉಂಭವೃತ್ತಿಬ್ರಾಹ್ಮಣನ ಕಥೆ [1]

ಕುರುಕ್ಷೇತ್ರದಲ್ಲಿ ಉಂಭವೃತ್ತಿಯ ಬ್ರಾಹ್ಮಣನು ಇದ್ದನು. ಗದ್ದೆಯ ಯಜಮಾನರು ನೆಲ್ಲನ್ನೆಲ್ಲಾ ತೆಗೆದುಕೊಂಡು ಹೋದಮೇಲೆ ಅಲ್ಲಿ ಬಿದ್ದಿರುವ ನೆಲ್ಲುಗಳನ್ನು ಆರಿಸಿ ಕೊಂಡು ಬಂದು ಜೀವಿಸುವ ವೃತ್ತಿಗೆ ಉಂಭವೃತ್ತಿಯೆಂದು ಹೆಸರು. ಇದಕ್ಕೇ ಪೋತವೃತ್ತಿಯೆಂದೂ ಹೇಳುವರು. ಇದು ಬ್ರಾಹ್ಮಣರಿಗೆ ಅತ್ಯಂತ ವಿಹಿತವಾದ ವೃತ್ತಿಯು. ಆ ಬ್ರಾಹ್ಮಣನು ಅವನ ಹೆಂಡತಿಯು ಅವನ ಮಗನು ಸೊಸೆಯು ಇಷ್ಟು ಜನರು ಆ ಬ್ರಾಹ್ಮಣನ ಮನೆಯಲ್ಲಿ ಇದ್ದರು. ನಿತ್ಯವೂ ಅವರೊಡನೆ ಸಾಯಂಕಾಲ ದಲ್ಲಿ ಭೋಜನ ಮಾಡುತ್ತಿದ್ದನು. ಒಂದು ಸಮಯದಲ್ಲಿ ದುರ್ಭಿಕ್ಷೆಯುಂಟಾಯಿತು. ಇದರಿಂದ ಬ್ರಾಹ್ಮಣನಿಗೆ ಧಾನ್ಯಗಳು ಸಿಗಲಿಲ್ಲ. ಸರಿಯಾದ ಕಾಲದಲ್ಲಿ ಭೋಜನವನ್ನು ಮಾಡಲಿಕ್ಕೆ ಸಾಧ್ಯವಾಗಲಿಲ್ಲ.

ಎಲ್ಲರೂ ಹಸಿವೆಯಿಂದ ಪೀಡಿತರಾದರು. ಆ ಬ್ರಾಹ್ಮಣನು ಹಸಿವೆದಾಹದಿಂದ ಕೂಡಿದವನಾಗಿ ಹಾಗೆಯೇ ತಪಸ್ಸನ್ನು ಮಾಡುತ್ತಿದ್ದನು. ಬರೇ ನೀರಿನಿಂದಲೇ ಕೆಲವು ದಿವಸ ಕಳೆಯಬೇಕಾಯಿತು. ಒಂದು ದಿವಸದಲ್ಲಿ ಒಂದು ಪಡಿ ಯುವ ಧಾನ್ಯವನ್ನು ಸಂಪಾದಿಸಿದನು. ಅದನ್ನು ಹಿಟ್ಟು ಮಾಡಿದರು. ಎಲ್ಲರೂ ಆಹ್ನಿಕವನ್ನು ಮಾಡಿ ಆ ಹಿಟ್ಟನ್ನು ನಾಲ್ಕು ಭಾಗಮಾಡಿ ನಾಲ್ಕು ಜನರು ಹಂಚಿಕೊಂಡರು. ಅವರು ಭೋಜನ ಮಾಡಬೇಕೆಂದು ಯೋಚಿಸುವಾಗ ಒಬ್ಬ ಅತಿಥಿ ಬ್ರಾಹ್ಮಣನು ಬಂದನು. ಆಗ ಬ್ರಾಹ್ಮಣನು ಅತಿಥಿಗಳಿಗೆ ಸತ್ಕಾರವನ್ನು ಮಾಡಿ 'ತಾವು ಮನೆಗೆ ಬಂದ ಪ್ರಯುಕ್ತ ನಾನು ಪರಮ ಧನ್ಯನಾದೆನು. ಸರಿಯಾದ ಕಾಲದಲ್ಲಿ ಬಂದು ಸೇರಿದಿರಿ. ತಮಗೆ ಸ್ವಾಗತವು. ನಮ್ಮ ಪರ್ಣಶಾಲೆಯನ್ನು ಪ್ರವೇಶಿಸಬೇಕು. ಯಾರ ಮನೆಗಳಲ್ಲಿ ತಮ್ಮಂತೆ ಇರುವ ಅತಿಥಿಗಳು ಬಂದು ವಿಶ್ರಾಂತಿಯನ್ನು ಹೊಂದುವರೋ ಅವರೇ ಸರಿಯಾದ ಗೃಹಸ್ಥರು. ಯಾರಿಗೆ ಅತಿಥಿ ಸತ್ಕಾರದಿಂದ ದಿವಸವು ಕಳೆಯುವವೋ ಅವರು ದರಿದ್ರರಾಗಿದ್ದರೂ ಪರಮಧನ್ಯರು. ಸಜ್ಜನರ ಮನೆಯಲ್ಲಿ ಬಂದ ಅತಿಥಿಗಳಿಗೆ ಹುಲ್ಲಿನ ಚಾಪೆಯೂ ಒಳ್ಳೆ ಸ್ಥಳವೂ ನೀರೂ ಒಳ್ಳೆಯ ಮಾತು ಇಷ್ಟಕ್ಕೆ ಯಾವಾಗಲೂ ಹಾನಿಯಿಲ್ಲ. ಶ್ರಮಪಟ್ಟು ಬಂದವನಿಗೆ ಆಶ್ರಯವನ್ನು ಕೊಡಬೇಕು. ನೀರಡಿಕೆಯಾಗಿ ಬಂದವನಿಗೆ ನೀರನ್ನು ಕೊಡಬೇಕು. ಹಸಿವೆಯುಳ್ಳವನಿಗೆ ಭೋಜನವನ್ನು ಕೊಡ ಬೇಕು. ಬಂದ ಅತಿಥಿಗಳನ್ನು ಒಳ್ಳೇ ದೃಷ್ಟಿಯಿಂದ ನೋಡಬೇಕು. ಒಳ್ಳೆಯ ಮನಸ್ಸನ್ನಿಡಬೇಕು. ಒಳ್ಳೇ ಮಾತನ್ನು ಆಡಬೇಕು. ಬರುವಾಗ ಎದ್ದು ನಿಲ್ಲಬೇಕು.

ಹೋಗುವಾಗ ಹಿಂದೆಯೇ ಹೋಗಬೇಕು. ಈ ರೀತಿಯಾಗಿ ಹೇಳಿ ಬ್ರಾಹ್ಮಣನು ತನ್ನ ಭಾಗವಾದ ಹಿಟ್ಟನ್ನು ಅತಿಥಿ ಬ್ರಾಹ್ಮಣನಿಗೆ ಹಾಕಿದನು. ಆದರೆ ಅತಿಥಿಗಳಿಗೆ ತೃಪ್ತಿ ಯಾದಂತೆ ಕಾಣಿಸಲಿಲ್ಲ. ಆಗ ಅವನ ಹೆಂಡತಿಯಾದವಳು ಹಸಿವೆಯಿಂದ ಕೃಶಳಾದವಳು ತುಂಬಾ ಮುದುಕಿಯಾದವಳು ಎಲುಬು ಚರ್ಮ ಮಾತ್ರ ಇರತಕ್ಕವಳು ನಡುಗುತ್ತಾ ಗಂಡನೊಡನೆ 'ಸ್ವಾಮಿನ್! ನನ್ನ ಭಾಗವನ್ನೂ ಅತಿಥಿಗಳಿಗೆ ಹಾಕಿರಿ. ವಿಚಾರಮಾಡಬೇಡಿರಿ. ಅತಿಥಿಗಳಿಗೆ ಅನ್ನಹಾಕಿದ್ದರಿಂದ ನಾನೂ ಕೃತಾರ್ಥ ಳಾಗುವೆನು' ಎಂದಳು.

ಅದಕ್ಕೆ ಬ್ರಾಹ್ಮಣನು 'ಕೀಟ ಪತಂಗ ಮೃಗಗಳೂ ಕೂಡ ತಮ್ಮ ಸ್ತ್ರೀಯರನ್ನು ರಕ್ಷಿಸುತ್ತವೆ. ಧರ್ಮಾರ್ಥಕಾರ್ಯಗಳು ಶುಶ್ರೂಷಾ ಸಂತಾನ ಪಿತೃಗಳಿಗೂ ತನಗೂ ಸ್ವರ್ಗ ಇವುಗಳೆಲ್ಲಾ ಸ್ತ್ರೀಯರ ಅಧೀನವು. ಆದುದರಿಂದ ನೀನು ಹಿಟ್ಟನ್ನು ಭೋಜನ ಮಾಡು. ನಿನಗೆ ದೋಷವಿಲ್ಲ. ನನ್ನಿಂದ ಅನುಜ್ಞೆಯಿಂದ ಪಡೆಯುವವಳಾಗಿ ಭೋಜನ ಮಾಡು. ಯಾವಾತನು ತನ್ನ ಪತ್ನಿಯನ್ನು ಪೋಷಿಸುವುದಿಲ್ಲವೋ ಅವನು ಮಹಾ ಅಪಕೀರ್ತಿಯನ್ನು ಹೊಂದುವನು. ನರಕವನ್ನೂ ಹೊಂದುವನು' ಎಂದು ಹೇಳಿದನು. ಅದಕ್ಕೆ ಅವನ ಹೆಂಡತಿಯು ದಂಪತಿಗಳು ಸಹಧರ್ಮವನ್ನು ಮಾಡಬೇಕು. ಆದುದರಿಂದ ನನಗೆ ಮಹಾಧರ್ಮವನ್ನು ಮಾಡಲಿಕ್ಕೆ ವಿಘ್ನವನ್ನು ಮಾಡಬಾರದು. ಸ್ತ್ರೀಗೆ ಪತಿಯೇ ಧರ್ಮವು. ಪತಿಯೇ ದೇವತೆಯು. ಪತಿಯೇ ಬಂಧುವು. ಪತಿಯೇ ಗತಿಯು. ಸ್ತ್ರೀಗೆ ಪತಿಯು ಸಂತುಷ್ಟರಾದರೆ ಮಾತ್ರ ಧರ್ಮದ ಅರ್ಥ ಕಾಮ ಕೀರ್ತಿ ಸ್ವರ್ಗ ಎಲ್ಲವೂ ಉಂಟಾಗುವುವು. ಕರ್ಮದಿಂದ ಮನಸ್ಸಿ ನಿಂದಲೂ ವಾಗಿಂದ್ರಿಯದಿಂದಲೂ ಯಾರು ಪತಿಯನ್ನು ಅತಿಕ್ರಮಿಸುವುದಿಲ್ಲವೋ ಅವಳನ್ನು ದೇವತೆಗಳೂ ಪೂಜಿಸುವರು. ತಾವು ಭೋಜನವನ್ನು ಮಾಡದೆ ನಾನು ಭೋಜನ ಮಾಡಿದ್ದೇ ಇಲ್ಲ. ನನ್ನ ಈ ವ್ರತವನ್ನು ತಿಳಿದುಕೊಂಡು ನನ್ನ ಹಿಟ್ಟನ್ನು ತಾವು ಅತಿಥಿಗಳಿಗೆ ಕೊಡಬೇಕು' ಎಂದಳು. ಆಗ ಬ್ರಾಹ್ಮಣನು ಆಗಲಿ ಎಂದು ಹೇಳಿ ಅತಿಥಿಗೆ ತನ್ನ ಹೆಂಡತಿಯ ಭಾಗದ ಹಿಟ್ಟನ್ನೂ ಕೊಟ್ಟನು. ಆದರೂ ಅತಿಥಿಗೆ ತೃಪ್ತಿಯುಂಟಾಗಲಿಲ್ಲ.

ಅದನ್ನು ನೋಡಿ ಮಗನು ವಿನಯದಿಂದ ತಂದೆಯ ಬಳಿಗೆ ಬಂದು 'ಅತಿಥಿಯ ತೃಪ್ತಿಗೋಸ್ಕರ ನನ್ನ ಭಾಗದ ಹಿಟ್ಟನ್ನು ಕೊಡಿರಿ. ಯಾರ ಮನೆಗೆ ಆಸೆಯಿಂದ ಬಂದ ಅತಿಥಿಯು ನಿರಾಶನಾಗಿ ಹೋದರೆ ಆ ಗೃಹಸ್ಥನು ಬದುಕಿ ಏನು ಪ್ರಯೋಜನವು?

ಭಗವಂತನನ್ನು ಉದ್ದೇಶಿಸಿ ತಮ್ಮನ್ನು ಪೀಡಿಸಿಯಾದರೂ ಅತಿಥಿ ಸತ್ಕಾರವನ್ನು ಮಾಡಿದರೆ ಅಂತವರನ್ನು ದೇವತೆಗಳೂ ಸತ್ಕಾರ ಮಾಡುವರು. ಯಾರ ಮನೆಯಿಂದ ಅತಿಥಿಗಳು ಆಶಾಭಂಗವುಳ್ಳವರಾಗಿ ಹಿಂದಿರುಗಿ ಹೋಗುವರೋ ಅಂತಹ ದುಷ್ಟರು ಹಣ ಸಂಪಾದಿಸಿ ಏನು ಉಪಯೋಗವಿದೆ? ಆದುದರಿಂದ ನನ್ನ ಭಾಗವನ್ನೂ ಅತಿಥಿಗಳಿಗೆ ಕೊಡಬೇಕು. ಕುಟುಂಬವನ್ನು ಪೀಡಿಸಿಯಾದರೂ ಲೋಭವನ್ನು ಬಿಟ್ಟು ಅತಿಥಿಗೆ ಯಾರು ಅನ್ನವನ್ನು ಹಾಕುವನೋ ಅವನು ಉತ್ತಮವಾದ ಗತಿಯನ್ನು ಹೊಂದುವನು' ಎಂದು ಹೇಳಿದನು.

ಅದನ್ನು ಕೇಳಿದ ತಂದೆಯು 'ನಿನಗೆ ನೂರು ವರ್ಷವಾದರೂ ನನಗೆ ನೀನು ಬಾಲಕನೆಂದೇ ಅಭಿಪ್ರಾಯ. ಬಾಲಕರಿಗೆ ಹಸಿವೆಯು ಹೆಚ್ಚಿಗೆ. ಆದುದರಿಂದ ನೀನು ಭೋಜನ ಮಾಡು. ಮಗನಿಂದ ಲೋಕಗಳನ್ನು ಜಯಿಸುವನೆಂದು ವೇದವು ಹೇಳುವುದು. ನೀನು ಬದುಕಿದ್ದರೆ ನಮಗೆ ಎಲ್ಲಾ ಲೋಕಗಳೂ ಹಿತಕರವಾಗಿರು ವುವು. ಆದುದರಿಂದ ನಾನು ನಿನ್ನನ್ನು ಅವಶ್ಯವಾಗಿ ರಕ್ಷಿಸಬೇಕು. ನನಗೆ ನೀನು ಮಗನಿರುವ ಪ್ರಯುಕ್ತ ನಾನು ಮೃತ್ಯುವಿನಿಂದ ಭಯವನ್ನು ಹೊಂದುವುದಿಲ್ಲ. ಅನೇಕವಾಗಿ ಜನರು ಪಾಪಮಾಡುವುದರಿಂದ ಮರಣದಿಂದ ಭಯಪಡುತ್ತಾರೆ. ಪುಣ್ಯವಂತರು ಪ್ರಿಯ ಅತಿಥಿಯನ್ನು ನಿರೀಕ್ಷಿಸುವಂತೆ ಮರಣವನ್ನು ನಿರೀಕ್ಷಿಸುವರು' ಎಂದು ಹೇಳಿದನು.

ಅದಕ್ಕೆ ಮಗನು ಪೂರ್ವವಯಸ್ಸಿನಲ್ಲಿ ತಂದೆಯು ಮಗನನ್ನು ರಕ್ಷಿಸುವನು. ಉತ್ತರ ವಯಸ್ಸಿನಲ್ಲಿ ತಂದೆಯನ್ನು ಮಗನು ರಕ್ಷಿಸುವನು. ಆದುದರಿಂದ ನನ್ನ ಹಿಟ್ಟನ್ನು ಕೊಡಿರಿ ಎಂದನು.

ಆಗ ಬ್ರಾಹ್ಮಣನು ಮಗನ ಭಾಗವನ್ನೂ ಅತಿಥಿಗೆ ಕೊಟ್ಟನು. ಆಗಲೂ ಅತಿಥಿಗೆ ತೃಪ್ತಿಯಾದಂತೆ ಕಾಣಿಸಲಿಲ್ಲ. ತರುವಾಯ ಸೊಸೆಯು ಬಂದು ಸಂತೋಷದಿಂದ ವಿನಯದಿಂದ ಮಾವನೊಡನೆ ನನ್ನ ಭಾಗವನ್ನು ಅತಿಥಿಗಳಿಗೆ ಹಾಕಬೇಕು ಎಂದಳು.

ಆಗ ಬ್ರಾಹ್ಮಣನು 'ಅಮ್ಮ ನೀನು ಚಿಕ್ಕ ಹುಡುಗಿ ಪತಿವ್ರತೆಯು. ನಿಯಮದಿಂದ ಸಿಕ್ಕಿಹೋಗಿದ್ದಿ. ಸಂತಾನಕ್ಕೆ ಕಾರಣಳು. ನಿನ್ನನ್ನು ಸರ್ವದಾ ನಾನು ರಕ್ಷಿಸಬೇಕು. ದೊಡ್ಡವರ ಸೇವೆಯಲ್ಲಿ ಆಸಕ್ತಳಾದವಳು. ನಿನ್ನ ಮುಖವು ಹಸಿವೆಯಿಂದ ಬಾಡಿ ಹೋಗಿರುವುದು ಕಂಡರೆ ನನ್ನ ಮನಸ್ಸಿಗೆ ತುಂಬಾ ಕಷ್ಟವಾಗುತ್ತದೆ ಎಂದನು.

ಅದಕ್ಕೆ ಸೊಸೆಯು 'ತಾವು ನನ್ನ ಸ್ವಾಮಿಗೆ ಸ್ವಾಮಿಯಾಗಿದ್ದೀರಿ. ನನ್ನ ದೇವರಿಗೆ ದೇವರು. ನನ್ನ ಗುರುವಿಗೆ ಗುರುಗಳು. ತಾವು ಹೀಗೆ ಹೇಳಬಾರದು. ನಾನು ದಯೆಗೆ

ಪಾತ್ರಳೆಂದೋ ದೃಢಭಕ್ತಿಯುಳ್ಳವಳೆಂದೋ ತಿಳಿದುಕೊಂಡು ನನ್ನ ಭಾಗದ ಹಿಟ್ಟನ್ನು ಅತಿಥಿಗಳಿಗೆ ಹಾಕಿ, ದೀನಳಾದ ನನ್ನನ್ನು ಉದ್ಧರಿಸಬೇಕು' ಎಂದಳು.

ತರುವಾಯ ಬ್ರಾಹ್ಮಣನು ಸೊಸೆಯ ಭಾಗದ ಹಿಟ್ಟನ್ನು ಹಾಕಿದನು. ಅತಿಥಿಯು ಸಂತೋಷದಿಂದ ಎಲ್ಲವನ್ನೂ ಭೋಜನ ಮಾಡಿದನು. ಇದರಿಂದ ಬ್ರಾಹ್ಮಣನು ಸ್ವಲ್ಪವೂ ದುಃಖಪಡಲಿಲ್ಲ. ಪರಮಾನುಗ್ರಹವಾಯಿತು ಎಂದು ತಿಳಿದುಕೊಂಡು ಸಂತೋಷವನ್ನು ಹೊಂದಿದನು.

ಶುದ್ಧವಾದ ಅಭಿಪ್ರಾಯವುಳ್ಳ ಬ್ರಾಹ್ಮಣನನ್ನು ನೋಡಿ ಅತಿಥಿಯು ಸಂತೋಷವುಳ್ಳವನಾಗಿ 'ನಾನು ಧರ್ಮದೇವತೆಯು ಬ್ರಾಹ್ಮಣರೂಪದಿಂದ ನಿನ್ನನ್ನು ಪರೀಕ್ಷಿಸಲಿಕ್ಕೆ ಬಂದೆನು. ನೀನು ಉಂಛವೃತ್ತಿಯಿಂದ ಸಂಪಾದಿಸಿದ ಸಮಸ್ತವನ್ನೂ ಶುದ್ಧಭಾವದಿಂದ ನನಗೆ ಕೊಟ್ಟಿರುವಿ. ಆದುದರಿಂದ ನೀನು ಬ್ರಹ್ಮಲೋಕವನ್ನು ಹೊಂದು. ಸ್ವರ್ಗದಲ್ಲಿರುವ ಎಲ್ಲಾ ದೇವತೆಗಳೂ ಬ್ರಹ್ಮರ್ಷಿಗಳೂ ಆಶ್ಚರ್ಯಯುಕ್ತವಾದ ಮನಸ್ಸುಳ್ಳವರಾಗಿ ನೀನು ಮಾಡಿದ ಈ ದಾನವನ್ನು ಹೊಗಳಲಿ. ಶ್ರದ್ಧೆಯಿಂದ ಹಿಟ್ಟನ್ನು ದಾನಮಾಡಿದ್ದರಿಂದ ನಿನ್ನ ಕೀರ್ತಿಯು ಪ್ರಸಿದ್ಧವಾಗಲಿ. ನೀನು ಅಗ್ನಿಹೋತ್ರ ಮಾಡಿದ್ದು ಸಾರ್ಥಕವಾಯಿತು. ವೇದಾಧ್ಯಯನ ಮಾಡಿದ್ದೂ ತಪಸ್ಸು ಮಾಡಿದ್ದೂ ಸಾರ್ಥಕವಾಯಿತು''. ಈಪ್ರಕಾರ ಹೇಳಿದನು. ಆ ಸಮಯದಲ್ಲಿ ಆ ಬ್ರಾಹ್ಮಣನ ಮೇಲೆ ಆಕಾಶದಿಂದ ಹೂವಿನ ಮಳೆಯು ಬಂದಿತು. ತರುವಾಯ ವಿಮಾನವು ಬಂದಿತು. ಬ್ರಾಹ್ಮಣನು ಪತ್ನೀಪುತ್ರಸೊಸೆಯಂದಿರಿಂದ ಕೂಡಿಕೊಂಡು ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದನು.



## ಕೃತಘ್ನ ಬ್ರಾಹ್ಮಣನ ಕಥೆ [1]

ಮಧ್ಯದೇಶದಲ್ಲಿ ಒಬ್ಬ ಬ್ರಾಹ್ಮಣನು ಇದ್ದನು. ಅವನು ಕಪ್ಪಗೆ ಇದ್ದನು. ಅವನು ವೇದಾಧ್ಯಯನವನ್ನು ಮಾಡಿಲ್ಲ. ವೇದೋಕ್ತಕರ್ಮಾನುಷ್ಠಾನವನ್ನು ಮಾಡಿದವನಲ್ಲ. ಅವನು ಒಂದು ಸಮಯದಲ್ಲಿ ಹಣದ ಆಸೆಯಿಂದ ಕಳ್ಳರು ಇರುವ ಗ್ರಾಮಕ್ಕೆ ಹೋದನು. ಅಲ್ಲಿ ಹಣವಂತನಾದ ಒಬ್ಬ ಬೇಡನಿದ್ದನು. ಅವನು ಸತ್ಯವಂತನಾಗಿಯೂ ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನಾಗಿಯೂ ದಾನದಲ್ಲಿ

1. ಮ.ಭಾ.ಶಾಂ.ಪ. ಅ.168-173

ಆಸಕ್ತನಾಗಿಯೂ ಇದ್ದನು. ಅವನ ಮನೆಗೆ ಹೋಗಿ ಆ ಬ್ರಾಹ್ಮಣನು ಹಣವನ್ನು ಬೇಡಿದನು. ವಾಸಮಾಡಲಿಕ್ಕೆ ಆಶ್ರಯವನ್ನೂ ಒಂದು ವರ್ಷಕ್ಕೆ ಬೇಕಾದ ಭಿಕ್ಷೆಯನ್ನೂ ಕೇಳಿದನು. ಬೇಡನು ಆ ಬ್ರಾಹ್ಮಣನಿಗೆ ಹೊಸವಸ್ತ್ರವನ್ನು ಗಂಡನಿಲ್ಲದ ಒಂದು ಸ್ತ್ರೀಯನ್ನೂ ಕೊಟ್ಟನು. ಆ ಗೌತಮ ಎಂಬ ಬ್ರಾಹ್ಮಣನು ಬಹು ಸಂತೋಷ ವುಳ್ಳವನಾಗಿ ಅವನು ಕೊಟ್ಟಮನೆಯಲ್ಲಿ ಸ್ತ್ರೀಯೊಡನೆ ಸಂತೋಷದಿಂದ ಇದ್ದನು. ಕುಟುಂಬಕ್ಕೋಸ್ಕರ ಅವನು ಆ ಬೇಡನಿಗೆ ಸಹಾಯವನ್ನು ಮಾಡಿದನು. ಒಂದು ವರ್ಷಕಾಲ ಅಲ್ಲಿ ವಾಸಮಾಡಿದನು. ಬಾಣಬಿಡಲಿಕ್ಕೆ ಅಭ್ಯಾಸ ಮಾಡಿದನು. ಬೇಡ ರಂತೆ ಅವನೂ ವನದಲ್ಲಿ ಇರುವ ಹಂಸಪಕ್ಷಿಗಳನ್ನು ಕೊಲ್ಲುತ್ತಿದ್ದನು. ದಯಾಹೀನ ನಾಗಿ ಪ್ರಾಣಿಗಳನ್ನು ಕೊಲ್ಲುವುದರಲ್ಲಿ ಸಮರ್ಥನಾಗಿ ಯಾವಾಗಲೂ ಪ್ರಾಣಿಗಳನ್ನು ಕೊಲ್ಲುತ್ತಾ ಬೇಡರ ಸಹವಾಸದಿಂದ ಬೇಡನಂತೆಯೇ ಆದನು. ಆಪ್ರಕಾರವಾಗಿ ಬೇಡರಗ್ರಾಮದಲ್ಲಿ ಬಹುಪಕ್ಷಿಗಳನ್ನು ಕೊಲ್ಲುತ್ತಾ ಅನೇಕ ಮಾಸ ವಾಸಮಾಡಿದನು.

ಒಂದು ದಿನ ಜಟಾ ಬೆಳೆಸಿಕೊಂಡು ನಾರುವಸ್ತ್ರವನ್ನು ಉಟ್ಟುಕೊಂಡು ಕೃಷ್ಣಾಜಿನವನ್ನು ಧರಿಸಕೊಂಡು ವೇದಾಧ್ಯಯನ ಮಾಡಿದ ಶುದ್ಧನಾದ, ವೇದಶಾಸ್ತ್ರ ಗಳಲ್ಲಿ ಪಾರಂಗತನಾದ ಆ ಗೌತಮ ಎಂಬ ಬ್ರಾಹ್ಮಣನ ಮಿತ್ರನಾದ ಒಬ್ಬ ಬ್ರಾಹ್ಮಣನು ಗೌತಮನು ವಾಸಮಾಡಿರುವ ಗ್ರಾಮಕ್ಕೆ ಬಂದನು. ಅವನು ಬೇಡರುಳ್ಳ ಗ್ರಾಮದಲ್ಲಿ ಎಲ್ಲ ಕಡೆ ಸಂಚರಿಸಿದನು. ತರುವಾಯ ಆ ಗೌತಮನ ಮನೆಗೆ ಪ್ರವೇಶಿಸಿದನು. ತರುವಾಯ ಹೊರಗೆ ಹೋಗಿರುವ ಗೌತಮನೂ ಬಂದನು. ಬ್ರಾಹ್ಮಣನು ಹಂಸ ಪಕ್ಷಿಗಳ ದೇಹವನ್ನು ಹಿಡಿದುಕೊಂಡು ಕೈಯಲ್ಲಿ ಧನುಸ್ಸನ್ನೂ ಇತರ ಆಯುಧಗಳನ್ನು ಹಿಡಿದುಕೊಂಡು ಮೈಯೆಲ್ಲಾ ರಕ್ತವುಳ್ಳವನಾಗಿ ದೊಡ್ಡ ದೈತ್ಯನಂತೆ ಮನೆಗೆ ಬಂದಿರುವ ಗೌತಮನನ್ನು ನೋಡಿದನು. ಅವನಿಗೇ ನಾಚಿಕೆಯಾಯಿತು. ಅವನ ಗುರುತು ಹಿಡಿದು 'ಗೌತಮ ನೀನು ಏನು ಮಾಡುತ್ತಿರುವಿ? ಬ್ರಾಹ್ಮಣಕುಲದಲ್ಲಿ ಹುಟ್ಟಿದವನು. ಬೇಡರ ವೃತ್ತಿಯನ್ನು ಹೇಗೆ ಕೈಕೊಂಡೆ? ನಿನ್ನ ಪೂರ್ವಿಕರಾದ ವೇದಶಾಸ್ತ್ರಪಾರಂಗತರಾದ ಜ್ಞಾತಿಗಳನ್ನು ಜ್ಞಾಪಿಸಿಕೊಳ್ಳು. ಅವರ ವಂಶದಲ್ಲಿ ಕುಲಗೇಡಿಯಾದ ನೀನು ಹೇಗೆ ಹುಟ್ಟಿದಿ? ಈ ವಾಸಸ್ಥಳವನ್ನು ಬಿಟ್ಟುಬಿಡು ಎಂದನು.

ಅದಕ್ಕೆ ಗೌತಮನು ದುಃಖದಿಂದ ದೀರ್ಘಶ್ವಾಸವನ್ನು ಬಿಟ್ಟು ಬ್ರಾಹ್ಮಣಶ್ರೇಷ್ಠ! ನಾನು ದರಿದ್ರನಾಗಿರುವೆನು. ವೇದವನ್ನೂ ತಿಳಿದಿಲ್ಲ. ಹಣಕ್ಕೋಸ್ಕರ ಇಲ್ಲಿಗೆ ಬಂದಿರುವೆನು. ನಿನ್ನ ದರ್ಶನದಿಂದ ನಾನು ಕೃತಾರ್ಥನಾದೆನು. ನಾಳೆ ನಾವಿಬ್ಬರೂ ದಾರಿ ನಡೆದುಕೊಂಡು ಹೋಗುವ. ಈ ರಾತ್ರಿ ಇಲ್ಲಿಯೇ ವಾಸಮಾಡು ಎಂದನು.

ಆಬ್ರಾಹ್ಮಣನು ಜುಗುಪ್ಸಾಲುಳ್ಳವನಾಗಿ ಹಸಿವೆಯಾಗಿದ್ದರೂ ಗೌತಮನು ಹೇಳಿದರೂ ಒಂದನ್ನು ಮುಟ್ಟದೆ ಭೋಜನವನ್ನೂ ಮಾಡದೆ ಇದ್ದನು.

ಆ ರಾತ್ರಿಯು ಕಳೆಯಲು ಮನೆಗೆ ಬಂದಿದ್ದ ಬ್ರಾಹ್ಮಣಶ್ರೇಷ್ಠನು ಹೊರಟು ಹೋಗಲು ಗೌತಮನು ಮನೆಯಿಂದ ಹೊರಟು ಹಣಕ್ಕೋಸ್ಕರ ಅಲ್ಲಲ್ಲಿ ಸಂಚರಿಸಿದನು. ದಾರಿಯಲ್ಲಿ ವ್ಯಾಪಾರಕ್ಕೆ ಹೋಗುವ ವರ್ತಕರ ಗುಂಪನ್ನು ನೋಡಿ ಆ ಗುಂಪಿನ ಒಟ್ಟಿಗೆ ಹೋದನು. ಆ ಗುಂಪು ಒಂದು ಪರ್ವತದ ಪ್ರದೇಶದಲ್ಲಿ ಹೋಗುತ್ತಿರುವಾಗ ಒಂದು ಮದಹಿಡಿದ ಆನೆಯು ಬಂದು ಎಲ್ಲರನ್ನೂ ಕೊಂದಿತು. ಆ ಗೌತಮನಾದರೋ ಓಡಿಹೋಗಿ ಬಿಟ್ಟನು. ಯಾವ ದಿಕ್ಕಿಗೆ ಹೋಗಬೇಕೆಂದು ತಿಳಿಯದೆ ಬದುಕಿದರೆ ಸಾಕು ಎಂದು ಉತ್ತರದಿಕ್ಕಿಗೆ ಓಡಿದನು. ಬಹುದೂರ ಒಬ್ಬನೇ ಸಂಚರಿಸುತ್ತಾ ಹೋಗಿ ಸಮುದ್ರದ ಸಮೀಪದಲ್ಲಿ ಪುಷ್ಪಯುಕ್ತಗಳಾದ ನಾನಾಮರ ಗಳಿಂದ ಅಲಂಕೃತವಾದ ನಂದನವನದಂತೆ ಇರುವ ಯಕ್ಷಕಿನ್ನರರಿಂದ ಸೇವಿತವಾದ ವನವನ್ನು ನೋಡಿದನು. ಪಕ್ಷಿಗಳು ಸುಂದರವಾಗಿ ಗಾಯನಮಾಡುತ್ತಾ ಇದ್ದವು. ಗೌತಮನು ಆ ಮನೋಹರವಾದ ಪಕ್ಷಿಗಳ ಗಾನಗಳನ್ನು ಕೇಳುತ್ತಾ ಸಂತೋಷವನ್ನು ಹೊಂದಿದನು.

ಹೀಗೆಯೇ ನೋಡುತ್ತಾ ಸ್ವರ್ಗದಂತೆ ಇರುವ ಮನೋಹರವಾದ ಆ ಸ್ಥಳದಲ್ಲಿ ಒಂದು ದೊಡ್ಡ ಆಲದ ಮರವನ್ನು ನೋಡಿದನು. ಆ ಮರವು ಅನೇಕ ಕೊಂಬೆ ಗಳಿಂದ ದೊಡ್ಡ ಕೊಡೆಯಂತೆ ಇತ್ತು. ಗೌತಮನು ಆ ಸುಂದರವಾದ ಮರವನ್ನು ನೋಡಿ ಅದರ ಕೆಳಗೆ ಕೂತುಕೊಂಡನು. ಅಲ್ಲಿ ಪುಷ್ಪಗಳಿಂದ ಸುವಾಸನೆಯುಳ್ಳ ಗಾಳಿಯು ಬೀಸಿತು. ಅಲ್ಲಿಯೇ ಸುಖದಿಂದ ಮಲಗಿದನು. ಸೂರ್ಯನೂ ಮುಳುಗಿ ದನು. ತರುವಾಯ ಸಂಧ್ಯಾಕಾಲವು ಬರಲು ನಾಡೀಜಂಘ ಎಂದು ಪ್ರಸಿದ್ಧವಾದ ಒಂದು ಶ್ರೇಷ್ಠ ಕೊಕ್ಕರೆಯು ಬ್ರಹ್ಮಲೋಕದಿಂದ ಬಂದಿತು. ಆ ಕೊಕ್ಕರೆಯು ಕಾಶ್ಯಪರಿಗೆ ದೇವಕನ್ಯೆಯಲ್ಲಿ ಹುಟ್ಟಿದ ಮಗನು. ರಾಜಧರ್ಮ ಎಂದು ಪ್ರಸಿದ್ಧನಾದ ವನು ಮೈಯಲ್ಲಿ ಎಲ್ಲಾ ಬಂಗಾರದ ಆಭರಣಗಳನ್ನು ಧರಿಸಿಕೊಂಡು ಬಂದಿತು. ಬಂದಿರುವ ಆ ಕೊಕ್ಕರೆಯನ್ನು ನೋಡಿ ಆಶ್ಚರ್ಯಪಟ್ಟನು. ಹಸಿವೆದಾಹ ದಿಂದ ಪೀಡಿತನಾಗಿ ಆ ಪಕ್ಷಿಯನ್ನು ಕೊಲ್ಲಬೇಕೆಂದು ಯೋಚಿಸಿದನು.

ಆಗ ಆ ರಾಜಧರ್ಮನು 'ಬ್ರಾಹ್ಮಣ! ದೈವೇಚ್ಛೆಯಿಂದ ನನ್ನ ಮನೆಗೆ ಬಂದಿರುವಿ. ಸಂಧ್ಯಾಕಾಲವಾಯಿತು. ನನಗೆ ಅತಿಥಿಯಾಗಿ ಬಂದಿರುವಿ. ನನ್ನ ಸತ್ಕಾರವನ್ನು ಸ್ವೀಕಾರಮಾಡಿಕೊಂಡು ಹೋಗುವಿ' ಎಂದನು.

ಆ ಪಕ್ಷಿಯ ಮಾತನ್ನು ಕೇಳಿ ಗೌತಮನು ಆಶ್ಚರ್ಯಪಟ್ಟನು. ಆ ರಾಜಧರ್ಮನನ್ನೇ ನೋಡಿದನು. ಆಗ ರಾಜಧರ್ಮನು 'ಬ್ರಾಹ್ಮಣಶ್ರೇಷ್ಠ! ನಾನು ಕಾಶ್ಯಪರ ಮಗನು. ನನ್ನ ತಾಯಿಯು ದಾಕ್ಷಾಯಿಣಿಯು. ನೀನು ಗುಣವಂತನಾಗಿ ರುವೆ. ನಿನಗೆ ಸ್ವಾಗತವು' ಎಂದಿತು.

ಈರೀತಿಯಾಗಿ ರಾಜಧರ್ಮನು ಹೇಳಿ ಗಂಗೆಯಲ್ಲಿ ಸಂಚರಿಸುವ ದೊಡ್ಡ ಮೀನುಗಳನ್ನು ಕೊಟ್ಟನು. ಬೆಂಕಿ ಮಾಡಿಕೊಟ್ಟನು. ಗೌತಮನು ಅದನ್ನು ಭೋಜನ ಮಾಡಿದ ಮೇಲೆ ಶ್ರಮಪರಿಹಾರಕ್ಕಾಗಿ ತನ್ನ ರೆಕ್ಕೆಗಳಿಂದ ಬೀಸಿತು. ನೀನು ಯಾವ ಗೋತ್ರದವನು ಎಂದು ಕೇಳಿತು. ಗೌತಮನು ನಾನು ಗೌತಮ ಎಂಬ ಬ್ರಾಹ್ಮಣನು ಎಂದು ಹೇಳಿಕೊಂಡನು. ತರುವಾಯ ದಿವ್ಯಪುಷ್ಪಗಳಿಂದ ಕೂಡಿದ ಎಲೆಯ ಹಾಸಿಗೆಯನ್ನು ಮಾಡಿಕೊಟ್ಟಿತು. ತರುವಾಯ ಹಾಸಿಗೆಯಲ್ಲಿ ಕೂತಿರುವ ಗೌತಮ ನೊಡನೆ ನೀನು ಯಾವ ಕಾರಣದಿಂದ ಬಂದಿರುವಿ ಎಂದು ರಾಜಧರ್ಮನು ಕೇಳಿದನು. ಅದಕ್ಕೆ ಗೌತಮನು ನಾನು ಅತ್ಯಂತ ದರಿದ್ರನು. ಹಣಕ್ಕೋಸ್ಕರ ಸಮುದ್ರದ ಬಳಿಗೆ ಹೋಗುವೆನು ಎಂದನು. ಅದಕ್ಕೆ ರಾಜಧರ್ಮನು ನೀನು ಕಾರ್ಯಸಿದ್ಧಿಉಳ್ಳವನಾಗಿ ಹಣಸಹಿತನಾಗಿಯೇ ಮನೆಗೆ ಹೋಗುವಿ ಎಂದಿತು. ನಾನು ನಿನಗೆ ಮಿತ್ರನಾಗಿರುವೆನು. ಆದುದರಿಂದ ನಿನಗೆ ಹಣ ಬರುವಂತೆ ಮಾಡುವೆನು ಎಂದು ಹೇಳಿತು.

ತರುವಾಯ ರಾಜಧರ್ಮನು ಬೆಳಿಗ್ಗೆ ಗೌತಮನೊಡನೆ ಕುಶಲ ಪ್ರಶ್ನೆಯನ್ನು ಮಾಡಿ ನೀನು ಇದೇ ಮಾರ್ಗದಿಂದ ಹೋಗು. ನಿನ್ನ ಕಾರ್ಯವಾಗುವುದು. ಇಲ್ಲಿಂದ ಮೂವತ್ತು ಮೈಲು ದೂರ ಹೋಗಲು ನನ್ನ ಮಿತ್ರನಾದ ಮಹಾಬಲಿಷ್ಠನಾದ ವಿರೂಪಾಕ್ಷ ಎಂದು ಪ್ರಸಿದ್ಧನಾದ ರಾಕ್ಷಸ ಶ್ರೇಷ್ಠನು ಸಿಗುವನು. ನೀನು ಅವನ ಬಳಿಗೆ ಹೋಗು. ಅವನು ನನ್ನ ವಾಕ್ಯದಿಂದ ಪ್ರೇರಿತನಾಗಿ ನಿನಗೆ ಬೇಕಾದ ಅಭೀಷ್ಟವನ್ನು ಕೊಡುವನು ಎಂದು ಹೇಳಿತು. ತರುವಾಯ ಗೌತಮನು ಅಮೃತದಂತೆ ಇರುವ ಹಣ್ಣುಗಳನ್ನು ತಿಂದು ಅಲ್ಲಿಂದ ಬೇಗನೇ ಹೋದನು. ಮನುವ್ರಜ ಎಂದು ಪ್ರಸಿದ್ಧವಾದ ಪರ್ವತಗಳ ತೋರಣವುಳ್ಳ ಪರ್ವತಗಳ ಪ್ರಾಕಾರವುಳ್ಳ ನಗರವನ್ನು ನೋಡಿದನು. ಅವನು ಬರುವಾಗಲೇ ರಾಜಧರ್ಮನಿಂದ ಕಳುಹಲ್ಪಟ್ಟವನು ಎಂದು ಆ ರಾಕ್ಷಸರಾಜನಿಗೆ ತಿಳಿಯಿತು. ತನ್ನ ಭೃತ್ಯರೊಡನೆ ಬೇಗನೆ ಗೌತಮನನ್ನು ಕರಕೊಂಡು ಬನ್ನಿರಿ ಎಂದನು. ರಾಕ್ಷಸಭೃತ್ಯರು ಗೌತಮ ಗೌತಮ ಎಂದು ಕರೆಯುತ್ತಲೇ ಬಂದರು. 'ಬ್ರಾಹ್ಮಣ ಬೇಗನೆ ಬಾ. ನಮ್ಮ ರಾಜನು ನಿನ್ನನ್ನು ನೋಡಲು

ಇಚ್ಛಿಸುವನು. ಪರಾಕ್ರಮಶಾಲಿಯಾದ ರಾಕ್ಷಸರಾಜನಾದ ವಿರೂಪಾಕ್ಷನು ನಿನ್ನನ್ನು ನೋಡಲು ಬಯಸುವನು ಎಂದು ರಾಕ್ಷಸಭೃತ್ಯರು ಹೇಳಿದರು. ತರುವಾಯ ಗೌತಮನು ಹಣವನ್ನು ಅಪೇಕ್ಷಿಸಿಕೊಂಡು ಬೇಗನೆ ಅವರೊಡನೆ ಹೋದನು.

ತರುವಾಯ ಗೌತಮನು ಆ ರಾಕ್ಷಸರಾಜನಿಂದ ಸತ್ಕೃತನಾಗಿ ಅವನು ಕೊಟ್ಟ ಆಸನದಲ್ಲಿ ಕೂತುಕೊಂಡನು. ಬ್ರಾಹ್ಮಣ! ನೀನು ಯಾವ ಗೋತ್ರದವನು. ಏನು ಓದಿಕೊಂಡಿರುವಿ? ಎಂದು ರಾಕ್ಷಸರಾಜನು ಕೇಳಲು ಬ್ರಾಹ್ಮಣನು ಗೋತ್ರವನ್ನು ಮಾತ್ರ ಹೇಳಿಕೊಂಡನು. ಬ್ರಹ್ಮತೇಜಸ್ಸಿನಿಂದ ಹೀನನಾದ ವೇದಾಧ್ಯಯನ ಮಾಡದೆ ಇರುವ ಆ ಬ್ರಾಹ್ಮಣನೊಡನೆ ನಿನ್ನ ವಾಸಸ್ಥಾನವು ಯಾವುದು ನಿನ್ನ ಹೆಂಡತಿಯು ಯಾವ ಗೋತ್ರದ ಬ್ರಾಹ್ಮಣಿಯು. ಸತ್ಯಹೇಳು. ಭಯಪಡಬೇಡ. ಸುಖವಾಗಿ ವಿಶ್ರಾಂತಿಯನ್ನು ಹೊಂದು ಎಂದು ಹೇಳಿದನು.

ಅದಕ್ಕೆ ಬ್ರಾಹ್ಮಣನು ಮಧ್ಯದೇಶದಲ್ಲಿ ಹುಟ್ಟಿದೆನು. ಬೇಡರ ಗ್ರಾಮದಲ್ಲಿ ವಾಸಮಾಡುತ್ತೇನೆ. ಶೂದ್ರಸ್ತ್ರೀಯು ನನ್ನ ಹೆಂಡತಿಯು ಎಂದು ಹೇಳಿದನು.

ಆಗ ರಾಕ್ಷಸನು 'ಏನು ಮಾಡಲಿ. ಇವನು ಜನ್ಮದಿಂದ ಬ್ರಾಹ್ಮಣನು. ಆ ಮಹಾನುಭಾವನಾದ ರಾಜಧರ್ಮದ ಮಿತ್ರನು. ಅವನಿಂದ ಕಳುಹಿಸಲ್ಪಟ್ಟಿದ್ದಾನೆ. ರಾಜಧರ್ಮನು ನನಗೆ ತುಂಬಾ ಮಿತ್ರನಾಗಿದ್ದಾನೆ. ಅವನಿಗೆ ಪ್ರಿಯವನ್ನು ಮಾಡುತ್ತೇನೆ. ಈದಿನ ಕಾರ್ತಿಕ ಹುಣ್ಣಿಮೆ. 2 ಸಾವಿರ ಬ್ರಾಹ್ಮಣರನ್ನು ನಾನು ಭೋಜನ ಮಾಡಿಸುತ್ತೇನೆ. ಅವರೊಡನೆ ಈ ಬ್ರಾಹ್ಮಣನೂ ಭೋಜನ ಮಾಡಲಿ. ಈದಿನ ಒಳ್ಳೇ ದಿವಸ. ಅತಿಥಿಯು ಬಂದಿದ್ದಾನೆ. ಇವನಿಗೆ ಹಣಕೊಡಬೇಕೆಂದು ಸಂಕಲ್ಪಿಸಿಯೂ ಆಯಿತು' ಎಂದು ಹೇಳಿಕೊಂಡನು.

ತರುವಾಯ ಸಾವಿರಬ್ರಾಹ್ಮಣರು ಗಂಧವನ್ನು ಹಚ್ಚಿಕೊಂಡು ಪಟ್ಟೆಯನ್ನು ಉಟ್ಟುಕೊಂಡು ಅಲಂಕಾರಮಾಡಿಕೊಂಡು ಬಂದರು. ರಾಕ್ಷಸರಾಜನು ಅವರನ್ನೆಲ್ಲಾ ಬರಬೇಕು ಎಂದನು. ಅವರಿಗೆಲ್ಲಾ ದರ್ಭೆಯ ಆಸನಗಳು ಹಾಕಲ್ಪಟ್ಟಿದ್ದವು. ಅಲ್ಲಿ ಬ್ರಾಹ್ಮಣರು ಕೂತುಕೊಂಡರು. ಎಳ್ಳು ದರ್ಭೆ ನೀರು ಇವುಗಳಿಂದ ಅವರನ್ನು ಪೂಜಿಸಿದನು. ಎಲ್ಲಾ ಬ್ರಾಹ್ಮಣರಿಗೂ ವಜ್ರಖಚಿತಗಳಾದ ಬಂಗಾರದ ಪಾತ್ರೆಗಳನ್ನು ಹಾಕಿದರು. ಇದೇರೀತಿಯಾಗಿ ಆಷಾಢ ಹುಣ್ಣಿಮೆಯಲ್ಲಿಯೂ ಮಾಘಮಾಸದ ಹುಣ್ಣಿಮೆಯಲ್ಲಿಯೂ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಿದ್ದನು. ವಿಶೇಷವಾಗಿ ಕಾರ್ತಿಕಮಾಸದ ಹುಣ್ಣಿಮೆಯಲ್ಲಿ ಭೋಜನ ಮಾಡಿಸುತ್ತಿದ್ದನು. ಬಂಗಾರ, ಬೆಳ್ಳಿ, ರತ್ನಗಳು, ಮುತ್ತುಗಳು, ವಜ್ರಗಳು, ವೈಢೂರ್ಯ, ಕೃಷ್ಣಾಜಿನ, ರತ್ನವುಳ್ಳ ಪಾತ್ರೆಗಳು

ಇವುಗಳನ್ನೆಲ್ಲಾ ವಿರೂಪಾಕ್ಷನು ಬ್ರಾಹ್ಮಣರಿಗೆ ದಕ್ಷಿಣೆಕೊಟ್ಟನು. 'ಈ ರತ್ನಗಳನ್ನು ನಿಮಗೆ ಬೇಕಾದಷ್ಟು ತೆಗೆದುಕೊಳ್ಳಿರಿ. ನೀವು ನೀವು ಊಟಮಾಡಿದ ಬಂಗಾರದ ಪಾತ್ರೆಗಳನ್ನೂ ನೀವು ತೆಗೆದುಕೊಂಡು ಹೋಗಿರಿ ಎಂದು ಆ ರಾಕ್ಷಸರಾಜನು ಹೇಳಲು ಹಾಗೆಯೇ ಮಾಡಿದರು. ತರುವಾಯ ರಾಕ್ಷಸರಾಜನು ನಾನಾದೇಶಗಳಿಂದ ಬಂದಿರುವ ಆ ಬ್ರಾಹ್ಮಣರನ್ನು ಬಹುಮಾನಿಸಿ 'ಈ ಒಂದು ದಿವಸ ಮಾತ್ರ ನಿಮಗೆ ಇಲ್ಲಿ ರಾಕ್ಷಸಭಯವಿರಲಾರದು. ಆದುದರಿಂದ ಸಂತೋಷದಿಂದ ಬೇಗನೇ ಮನೆಗೆ ಹೋಗಿ ಸೇರಿರಿ' ಎಂದನು. ಬ್ರಾಹ್ಮಣರೆಲ್ಲರೂ ಓಡಿಹೋದರು. ಗೌತಮನು ಬಂಗಾರದ ದೊಡ್ಡ ಮೂಟೆಯನ್ನು ಹಿಡಿದುಕೊಂಡು ಪೂರ್ವದ ಆಲದಮರದ ಬುಡಕ್ಕೆ ಬಂದು ಕೂತುಕೊಂಡನು. ತುಂಬಾ ಶ್ರಮಪಟ್ಟಿದ್ದನು. ಹಸಿವೆವುಳ್ಳವನಾಗಿದ್ದನು.

ಆಗ ರಾಜಧರ್ಮನು ಬಂದು ಗೌತಮನೊಡನೆ ಬರಬೇಕು ಎಂದು ಹೇಳಿದನು. ತನ್ನ ರೆಕ್ಕೆಗಳಿಂದ ಬೀಸಿದನು. ಭೋಜನವನ್ನು ಮಾಡಿಸಿದನು. ತರುವಾಯ ಅವರಿಬ್ಬರೂ ತುಂಬಾ ಮಾತಾಡಿಕೊಂಡರು. ತರುವಾಯ ರಾತ್ರಿಯಲ್ಲಿ ರಾಜಧರ್ಮನೊಡನೆ ಗೌತಮನು ಮಲಗಿಕೊಂಡು 'ನಾನು ಲೋಭಮೋಹದಿಂದ ಬಹಳ ಬಂಗಾರದ ರಾಶಿಯನ್ನು ಹಿಡಿದುಕೊಂಡು ಬಂದಿರುವೆನು. ಬಹುದೂರ ಹೋಗಬೇಕಾಗಿದೆ. ದಾರಿಯಲ್ಲಿ ಹೋಗುವಾಗ ಆಹಾರವೊಂದೂ ಇಲ್ಲವಲ್ಲಾ! ಏನು ಮಾಡಲಿ' ಎಂದು ಯೋಚನೆ ಮಾಡಿದನು. ಕೊನೆಗೆ ಕೃತಘ್ನನಾದ ಆ ಬ್ರಾಹ್ಮಣನು 'ತುಂಬಾ ಮಾಂಸದಿಂದ ಪುಷ್ಟನಾದ ಈ ಬಕರಾಜನು ನನ್ನ ಪಾರ್ಶ್ವದಲ್ಲಿಯೇ ಮಲಗಿರುವನು. ಇವನನ್ನು ಕೊಂದು ಇವನ ಮಾಂಸವನ್ನು ಹಿಡಿದುಕೊಂಡು ಹೋಗುವೆನು' ಎಂದು ಮನಸ್ಸಿನಲ್ಲಿ ಅಂದುಕೊಂಡನು.

ರಾಜಧರ್ಮನು ಬ್ರಾಹ್ಮಣನ ರಕ್ಷಣೋಸ್ಕರ ಹತ್ತಿರವೇ ದೊಡ್ಡ ಬೆಂಕಿಯ ರಾಶಿಯನ್ನು ಮಾಡಿದ್ದನು. ತಾನೂ ಅವನ ಹತ್ತಿರವೇ ಮಲಗಿದ್ದನು. ಕೃತಘ್ನನಾದ ಆ ಬ್ರಾಹ್ಮಣನು ಅವನನ್ನು ಕೊಲ್ಲಲುವುದಕ್ಕಾಗಿ ಜಾಗರದಿಂದ ಇದ್ದನು. ರಾಜಧರ್ಮನಿಗೆ ನಿದ್ದೆ ಬರಲು ಆ ಬ್ರಾಹ್ಮಣನು ಉರಿಯುವ ಬೆಂಕಿಯ ಕೊಳ್ಳಿಯನ್ನು ತೆಗೆದು ಅದರಿಂದ ಬಡೆದು ಆ ಬಕರಾಜನನ್ನು ಕೊಂದು ಅದರ ರೆಕ್ಕೆಯನ್ನೂ ರೋಮವನ್ನೂ ಕಿತ್ತುತೆಗೆದು ಬೆಂಕಿಯಲ್ಲಿ ಬೇಯಿಸಿ ಅದನ್ನೂ ಬಂಗಾರದ ರಾಶಿಯನ್ನೂ ಹಿಡಿದುಕೊಂಡು ಬ್ರಾಹ್ಮಣನು ಬೇಗನೇ ಹೋದನು.

ತರುವಾಯ ಎರಡು ದಿವಸವಾಗಲು ವಿರೂಪಾಕ್ಷನು ರಾಜಧರ್ಮನನ್ನು

ಕಾಣದೆ ಮಗನೊಡನೆ 'ಮಗ! ಮಿತ್ರನಾದ ರಾಜಧರ್ಮನು ಕಾಣುತ್ತಿಲ್ಲವಲ್ಲ! ಅವನು ಯಾವಾಗಲೂ ಬೆಳಿಗ್ಗೆ ಬ್ರಹ್ಮದೇವರಿಗೆ ನಮಸ್ಕಾರಮಾಡಲಿಕ್ಕೆ ಹೋಗುವನು. ನನ್ನನ್ನು ನೋಡದೆ ಹೋಗಲಾರನು. ಎರಡು ದಿವಸವೂ ಇಲ್ಲಿಗೆ ಬರಲೇ ಇಲ್ಲ. ಅದರಿಂದ ನನಗೆ ಮನಸ್ಸಿನಲ್ಲಿ ಸಂಶಯವು ಉಂಟಾಗುತ್ತದೆ. ಅವನ ಮಿತ್ರನಾದ ಆ ಬ್ರಾಹ್ಮಣನನ್ನು ಪರೀಕ್ಷಿಸಬೇಕು. ಅವನು ವೇದವನ್ನು ಓದಿಕೊಂಡವನಲ್ಲ. ಬ್ರಹ್ಮ ತೇಜಸ್ಸೇ ಅವನಲ್ಲಿ ಇಲ್ಲ. ಅವನ ಚೇಷ್ಟೆಗಳಿಂದಲೇ ಅವನು ದುರಾಚಾರಿ ದುರ್ಬುದ್ಧಿ ಯುಳ್ಳವನು. ಕೃಪಾರಹಿತನು ದುಷ್ಟನು ಎಂದು ತಿಳಿದಿದೆ. ಆ ಅಧರ್ಮನು ನನ್ನ ಮಿತ್ರನನ್ನು ಕೊಂದಿರಬಹುದು. ಗೌತಮರು ಅವನಿದ್ದಲ್ಲಿಗೇ ಹೋಗಿದ್ದಾರೆ. ಅದರಿಂದ ನನ್ನ ಮನಸ್ಸಿಗೆ ಭಯವುಂಟಾಗುತ್ತದೆ. ಮಗ! ನೀನು ಬೇಗನೇ ಆ ರಾಜಧರ್ಮನ ಮನೆಗೆ ಹೋಗಿ ಅವನು ಬದುಕಿದ್ದಾನೋ ಇಲ್ಲವೋ ನೋಡು' ಎಂದು ಹೇಳಿದನು.

ಅನಂತರದಲ್ಲಿ ವಿರೂಪಾಕ್ಷನ ಮಗನು ರಾಕ್ಷಸರಿಂದ ಕೂಡಿಕೊಂಡು ಆ ಆಲದಮರದ ಬುಡಕ್ಕೆ ಹೋಗಿ ರಾಜಧರ್ಮನು ಸತ್ತಿರುವುದನ್ನು ನೋಡಿದನು. ವಿರೂಪಾಕ್ಷನ ಮಗನು ಬಹಳ ಅಳುವವನಾಗಿ ರೋಷದಿಂದ ಆ ಗೌತಮನನ್ನು ಹಿಡಿಯುವುದಕ್ಕೋಸ್ಕರ ಹೋದನು. ಕ್ರೋಧಯುಕ್ತರಾದ ರಾಕ್ಷಸರು ಹೋಗಿ ಗೌತಮನನ್ನು ಹಿಡಿದರು. ರಾಜಧರ್ಮನ ದೇಹವೂ ಅವನ ಕೈಯಲ್ಲಿ ಸಿಕ್ಕಿತು. ತರುವಾಯ ರಾಕ್ಷಸರು ಕಣ್ಣುಕೆಂಪಗೆ ಮಾಡಿಕೊಂಡು ಗೌತಮನನ್ನು ಕೊಲ್ಲಬೇಕು ಎಂದು ಅಭಿಪ್ರಾಯವುಳ್ಳವರಾಗಿ ತಮ್ಮ ರಾಜನ ಮುಂದೆ ರಾಜಧರ್ಮನ ದೇಹವನ್ನು ಇಟ್ಟರು. ಅದನ್ನು ನೋಡಿ ವಿರೂಪಾಕ್ಷನೂ ಅವನ ಮಂತ್ರಿಗಳೂ ಪರಿವಾರದವರೂ ಬಹಳ ದುಃಖಪಟ್ಟರು. ರಾಜಧರ್ಮನು ಸತ್ತನೆಂದು ವಿರೂಪಾಕ್ಷನ ಮನೆಯಲ್ಲಿ ಹೆಂಗಸರೂ ಬಹಳ ಅತ್ತರು. ತರುವಾಯ ವಿರೂಪಾಕ್ಷನು ತನ್ನ ಮಗನೊಡನೆ ಈ ಪಾಪಿಯನ್ನು ಕೊಂದುಹಾಕು ಎಂದು ಹೇಳಿದನು.

ಆಗ ಎಲ್ಲಾ ರಾಕ್ಷಸರೂ 'ನಾವೆಲ್ಲರೂ ಈ ಪಾಪಿಯ ಮಾಂಸವನ್ನು ತಿನ್ನೋಣ. ಇವನು ಪಾಪಿಯಾಗಿದ್ದಾನೆ. ಕೃತಘ್ನನಾಗಿದ್ದಾನೆ. ಇವನನ್ನು ಅವಶ್ಯವಾಗಿ ಕೊಂದೇ ಹಾಕಬೇಕು' ಎಂದರು.

ಅದಕ್ಕೆ ವಿರೂಪಾಕ್ಷನು **'ನಾನು ಕೃತಘ್ನನಾದ ಈ ಪಾಪಿಯನ್ನು ತಿನ್ನಲಾರೆನು. ಮಿತ್ರದ್ರೋಹಿಯಾದ ಈ ಪುರುಷಾಧಮನನ್ನು ದಾಸರಿಗೆ ಕೊಡಿರಿ'** ಎಂದನು.

ತರುವಾಯ ದಾಸರಾದ ಎಲ್ಲಾ ರಾಕ್ಷಸರನ್ನು ಕರೆದು ಹೇಳಲು ಅವರೆಲ್ಲರೂ ಆ

ಕೃತಘ್ನನನ್ನು ತಿನ್ನಲಿಕ್ಕೆ ಇಚ್ಛಿಸಲಿಲ್ಲ. ಎಲ್ಲರೂ ಶಿರಸಾ ನಮಸ್ಕಾರ ಮಾಡಿ ನಮಗೆ ಈ ಪಾಪವನ್ನು ಕೊಡಬಾರದು ಎಂದು ಪ್ರಾರ್ಥಿಸಿದರು.

ಆಮೇಲೆ ವಿರೂಪಾಕ್ಷನು 'ಭೃತ್ಯರೊಡನೆ ಈ ಪಾಪಿಯನ್ನುಕೊಲ್ಲಿರಿ. ಅಥವಾ ಸುಟ್ಟುಹಾಕಿರಿ. ಎಳೆದುಕೊಂಡು ಹೋಗಿರಿ. ನನ್ನ ಕಣ್ಣೆದುರಿನಿಂದ ಕರೆದುಕೊಂಡು ಹೋಗಿರಿ' ಎಂದನು.

ತರುವಾಯ ಆ ಭೃತ್ಯರು ರೋಷದಿಂದ ಅವನನ್ನು ತುಂಡುತುಂಡುಮಾಡಿ ಮಾಂಸವನ್ನು ತಿನ್ನುವ ಪ್ರಾಣಿಗಳಿಗೆ ಹಾಕಿದರು. ಮಾಂಸ ತಿನ್ನುವ ಪ್ರಾಣಿಗಳೂ ಆ ಕೃತಘ್ನನ ಮಾಂಸವನ್ನು ತಿನ್ನಲಿಲ್ಲ. ಬ್ರಹ್ಮಹತ್ಯಾ, ಕಳ್ಳತನ ಗುರುಸ್ತ್ರೀಗಮನ ಬ್ರಾಹ್ಮಣರ ಸೊತ್ತಿನ ಅಪಹಾರ ಇತ್ಯಾದಿ ಪಾಪಮಾಡಿದರೂ ಪ್ರಾಯಶ್ಚಿತ್ತವು ವಿಹಿತವಾಗಿದೆ. ಕೃತಘ್ನನಿಗೆ ಪ್ರಾಯಶ್ಚಿತ್ತವೇ ಇಲ್ಲ. ಮಿತ್ರದ್ರೋಹಿಯಾದ ಕೃತಘ್ನನಾದ ಪುರುಷನ ದೇಹವನ್ನು ಮಾಂಸವನ್ನು ತಿನ್ನುವ ಪ್ರಾಣಿಗಳೂ ಕ್ರಿಮಿಗಳೂ ಕೂಡ ಮುಟ್ಟಲಾರವು.

ಅನಂತರದಲ್ಲಿ ವಿರೂಪಾಕ್ಷನು ಗಂಧದ ಚೆಕ್ಕೆ ಇತ್ಯಾದಿಗಳನ್ನು ಹಾಕಿ ರಾಜಧರ್ಮನ ದೇಹಕ್ಕೆ ಸಂಸ್ಕಾರವನ್ನು ಮಾಡಿಸಿದನು. ಆಗ ಇಂದ್ರದೇವರು ರಾಜಧರ್ಮನ ದೇಹದಮೇಲೆ ಅಮೃತವನ್ನು ಸುರಿಸಿದರು. ರಾಜಧರ್ಮನು ಬದುಕಿದನು. ರಾಜರ್ಧಮನು ಇಂದ್ರದೇವರೊಡನೆ ನನ್ನ ಪ್ರಿಯಮಿತ್ರನಾದ ಗೌತಮನೆಲ್ಲಿ? ಅವನನ್ನು ಆಡಿಸಬೇಕು ಎಂದನು. ತರುವಾಯ ಇಂದ್ರದೇವರು ಗೌತಮನನ್ನು ಬದುಕಿಸಿ ಹೋದರು. ರಾಜಧರ್ಮನು ತನ್ನ ಮನೆಗೆ ಹೋದನು. ಪುರುಷಾಧಮನಾದ ಗೌತಮನು ತನ್ನ ಮೂಟೆಯನ್ನು ಹೊತ್ತುಕೊಂಡು ತನ್ನ ಮನೆಗೆ ಹೋದನು. ತರುವಾಯ ಅವನು ದೇವತೆಗಳ ಶಾಪದಿಂದ ಬೇಡನಾಗಿಯೂ ಹುಟ್ಟಿದನು.

ವಿರೂಪಾಕ್ಷನು ರಾಜಧರ್ಮನ ದೇಹವನ್ನು ಅಗ್ನಿಯಲ್ಲಿ ಸುಡುತ್ತಿರುವಾಗ ಚಿತೆಯ ಸಮೀಪದಲ್ಲಿ ಸುರಭಿಯೆಂಬ ದನವಿತ್ತು. ಅದರ ಬಾಯಿಯ ನೊರೆಯು ಗಾಳಿಯಿಂದ ಚಿತೆಗೆ ಹೋಗಿ ಬಿದ್ದಿತು. ಆಗ ಇಂದ್ರದೇವರು ವಿರೂಪಾಕ್ಷನ ಪುರಕ್ಕೆ ಹೋದರು. ಆಗ ಇಂದ್ರದೇವರ ಹತ್ತಿರ ವಿರೂಪಾಕ್ಷನು ನನ್ನ ಮಿತ್ರನಾದ ಕಾಶ್ಯಪರ ಮಗನಾದ ರಾಜಧರ್ಮನನ್ನು ಬದುಕಿಸಬೇಕೆಂದು ಪ್ರಾರ್ಥಿಸಿದನು. ಇಂದ್ರದೇವರು ಅದರಿಂದ ಅವನನ್ನು ಬದುಕಿಸಿದರು. ಇಂದ್ರದೇವರು ವಿರೂಪಾಕ್ಷನೊಡನೆ ಒಂದುದಿನ ಬ್ರಹ್ಮದೇವರು ರಾಜಧರ್ಮನೊಡನೆ ರೋಷದಿಂದ ನೀನು ನಿತ್ಯವೂ ನನ್ನ ಸಭೆಗೆ ಬಾರದೆ ಇದ್ದಕಾರಣ ಧರ್ಮಶೀಲನಾದ ಬಕಪಕ್ಷಿಯಾಗುವಿ. ನಿನ್ನ ವಾಸಸ್ಥಳಕ್ಕೆ

ಬೇಡರ ಗ್ರಾಮದಲ್ಲಿ ವಾಸಿಸುವ ಶೂದ್ರಸ್ತ್ರೀಪತಿಯಿಂದ ಕೃತಘ್ನನಾದ ಬ್ರಾಹ್ಮಣನು ಬಂದು ಯಾವಾಗ ನಿನ್ನನ್ನು ಕೊಲ್ಲುವನೋ ಆಗ ನಿನಗೆ ಶಾಪಬಿಡುಗಡೆಯಾಗುವುದು ಎಂದು ಹೇಳಿದರು. ಆದುದರಿಂದ ಈಗ ಅವನು ಬ್ರಹ್ಮಲೋಕಕ್ಕೆ ಹೋಗಿರುವನು ಎಂದು ಹೇಳಿ ಹೊರಟುಹೋದರು. ಈರೀತಿಯಾಗಿ ಕೃತಘ್ನರಿಗೆ ಪ್ರಾಯಶ್ಚಿತ್ತವೇ ಇರುವುದಿಲ್ಲ.



## ಪತಿವ್ರತಾಸ್ತ್ರೀಯ ಕಥೆ [1]

ಪೂರ್ವದಲ್ಲಿ ಕೌಶಿಕ ಎಂಬ ಹೆಸರುಳ್ಳ ಒಬ್ಬ ಬ್ರಾಹ್ಮಣರು ಇದ್ದರು. ಅವರು ತಪಸ್ವಿಗಳು. ಧರ್ಮಿಷ್ಠರು. ಅಂಗಶಾಸ್ತ್ರಗಳನ್ನೂ ಉಪನಿಷತ್ತುಗಳನ್ನೂ ವೇದಗಳನ್ನೂ ಅಧ್ಯಯನ ಮಾಡಿದ್ದರು. ಒಂದು ದಿನದಲ್ಲಿ ಅವರು ಕಾಡಿನಲ್ಲಿ ಒಂದು ಮರದ ಬುಡದಲ್ಲಿ ವೇದಪಾರಾಯಣ ಮಾಡುತ್ತಾ ಕುಳಿತಿದ್ದರು. ಆ ಸಮಯದಲ್ಲಿ ಆ ಮರದಲ್ಲಿ ಇವರು ಕೂತಿರುವ ಮೇಲಿನ ಭಾಗದಲ್ಲಿ ಬಲಾಕ ಎಂಬ ಒಂದು ಪಕ್ಷಿಯು ಬಂದು ಕೂತಿತು. ಆ ಪಕ್ಷಿಯು ಆ ಬ್ರಾಹ್ಮಣರ ಮೇಲೆ ಮಲವನ್ನು ಹಾಕಿತು. ಆಗ ಈ ಬ್ರಾಹ್ಮಣರು ಕೋಪವುಳ್ಳವರಾಗಿ ಬಲಾಕಾಪಕ್ಷಿಯನ್ನೇ ಸ್ವಲ್ಪ ಹೊತ್ತು ನೋಡಿದರು. ಹಾಗೆ ನೋಡಲು ಆ ಪಕ್ಷಿಯು ಕೆಳಗೆ ಬಿದ್ದು ಪ್ರಾಣಬಿಟ್ಟಿತು. ಈರೀತಿಯಾಗಿ ಸತ್ತು ಕೆಳಗೆ ಬಿದ್ದ ಆ ಪಕ್ಷಿಯನ್ನು ನೋಡಿ ಕೌಶಿಕರಿಗೆ ದಯೆಯುಂಟಾಯಿತು. ಅದರಿಂದ ತುಂಬಾ ದುಃಖಪಟ್ಟರು. ನಾನು ರಾಗದ್ವೇಷವುಳ್ಳವನಾಗಿ ದೊಡ್ಡ ಅನ್ಯಾಯವನ್ನು ಮಾಡಿದೆನಲ್ಲಾ ಎಂದು ಅನೇಕಸಲ ಹೇಳಿಕೊಂಡರು. ತರುವಾಯ ಭಿಕ್ಷಾ ಕೇಳುವುದಕ್ಕಾಗಿ ಗ್ರಾಮಕ್ಕೆ ಹೋದರು. ಗ್ರಾಮದಲ್ಲಿ ಶುದ್ಧರಾದವರ ಮನೆಗೇ ಭಿಕ್ಷೆ ಹೋಗುವವರು ಆ ದಿವಸ ತನಗೆ ಪರಿಚಯವುಳ್ಳ ಒಂದು ಮನೆಗೆ ಹೋಗಿ ಭಿಕ್ಷೆಯನ್ನು ಕೊಡಿ ಎಂದು ಹೇಳಿದರು. ಆಗ ಆ ಮನೆಯ ಹೆಂಗಸು ಪಾತ್ರೆಯನ್ನು ತೊಳೆಯುತ್ತಿದ್ದಳು. ಅವಳು ಭಿಕ್ಷೆಯೆಂಬ ಮಾತನ್ನು ಕೇಳಿ 'ಸ್ವಲ್ಪ ಇರಿ ಈಗ ಬರುತ್ತೇನೆ' ಎಂದು ಹೇಳಿದಳು. ಕೌಶಿಕರು ಹಾಗೆಯೇ ಹೊರಗೆ ನಿಂತಿದ್ದರು. ಆ ಸಮಯದಲ್ಲಿಯೇ ಆ ಹೆಂಗಸಿನ ಗಂಡನು ಮನೆಗೆ ಬಂದು ಸೇರಿದನು. ಅವಳು ಗಂಡನನ್ನು ಕಾಲು ತೊಳೆಯಲಿಕ್ಕೆ ನೀರು ಕೊಟ್ಟಳು. ಗಂಡನಿಗೆ ಆಹಾರವನ್ನು

---

1. ಮ.ಭಾ. ವ.ಪ. ಅ. 205, 206

ಕೊಟ್ಟಳು. ನಾನಾಭಕ್ಷ್ಯಗಳನ್ನು ಕೊಟ್ಟಳು. ಒಳ್ಳೇ ಉಪಚಾರದ ಮಾತನ್ನು ಹೇಳಿದಳು. ಅವಳು ಯಾವಾಗಲೂ ಗಂಡನು ತಿಂದು ಉಳಿದದ್ದನ್ನೇ ಮತ್ತು ಅವನ ಎಂಜಲನ್ನೇ ತಿನ್ನುತ್ತಿದ್ದಳು. ಗಂಡನನ್ನು ದೇವತೆಯಂತೆ ಭಾವನೆ ಮಾಡಿಕೊಂಡಿದ್ದಳು. ಗಂಡನ ಮನಸ್ಸಿನಂತೆ ನಡೆಯುತ್ತಿದ್ದಳು. ಗಂಡನನ್ನು ಮನಸ್ಸಿನಿಂದಲೂ ಮೀರಿದವಳಲ್ಲ. ಗಂಡನು ತಿನ್ನದೇ ಇದ್ದದ್ದನ್ನು ತಿನ್ನಲಾರಳು. ಗಂಡನು ಕುಡಿಯದೆ ಇದ್ದದ್ದನ್ನು ಕುಡಿಯ ಲಾರಳು. ಸರ್ವಪ್ರಕಾರದಿಂದ ಗಂಡನನ್ನೇ ಸೇವಿಸುತ್ತಾ ಇದ್ದಳು. ಸದಾಚಾರವುಳ್ಳ ವಳು. ಶುದ್ಧವಾಗಿದ್ದಳು. ಮನೆಯ ಕೆಲಸವನ್ನೆಲ್ಲಾ ಮಾಡಲಿಕ್ಕೆ ಸಮರ್ಥಳಾಗಿದ್ದಳು. ಕುಟುಂಬಕ್ಕೆ ಹಿತವನ್ನೇ ಇಚ್ಛಿಸುವಳು. ಗಂಡನಿಗೆ ಹಿತವಾದದ್ದನ್ನೇ ತಾನು ಮಾಡು ತ್ತಿದ್ದಳು. ದೇವತೆಗಳ ಸೇವಾ ಮಾಡುವಳು. ಅತಿಥಿಗಳಿಗೆ ಉಪಚಾರ ಮಾಡುತ್ತಿದ್ದಳು. ಭೃತ್ಯರಿಗೆ ಅನ್ನಹಾಕುವಳು. ಅತ್ತೆ ಮಾವಂದಿರ ಸೇವೆಯನ್ನು ಮಾಡುತ್ತಾ ಇದ್ದಳು. ಇಂದ್ರಿಯನಿಗ್ರಹವುಳ್ಳವಳು. ಆ ಸುಂದರಿಯು ಮನೆಗೆ ಬಂದ ಗಂಡನ ಸೇವಾ ಮಾಡುತ್ತಾ ಭಿಕ್ಷೆಗೆ ಬಂದ ಬ್ರಾಹ್ಮಣನನ್ನು ಹೊರಗೆ ನಿಲ್ಲಿಸಿದ್ದನ್ನು ಸ್ಮರಿಸಿಕೊಂಡಳು. ಕೂಡಲೇ ಲಜ್ಜಾಉಳ್ಳವಳಾಗಿ ಆ ಪತಿವ್ರತೆಯು ಆ ಬ್ರಾಹ್ಮಣನಿಗೆ ಭಿಕ್ಷೆ ಹಿಡಿದು ಕೊಂಡು ಹೊರಗೆ ಹೋದಳು.

ಆಗ ಕೌಶಿಕರು ಕೋಪದಿಂದ ಆ ಹೆಂಗಸನ್ನು ನೋಡುತ್ತಾ 'ಏನಮ್ಮ ಎಷ್ಟು ಹೊತ್ತು ನನ್ನನ್ನು ಕಾಯಿಸಿದೆ? ಬೇಗನೆ ನನ್ನನ್ನು ಕಳುಹಿಸಲಿಲ್ಲವಲ್ಲಾ!' ಎಂದರು.

ಕೌಶಿಕರು ಕೋಪದಿಂದ ಜ್ವಲಿಸುವುದನ್ನು ನೋಡಿ ಆ ಹೆಂಗಸು ಸಮಾಧಾನ ಪಡಿಸುತ್ತಾ 'ಸ್ವಾಮಿ! ಕೋಪಿಸಿಕೊಳ್ಳಬಾರದು. ಹೆಂಗಸರ ಸ್ವಭಾವವೇ ಸಾವಕಾಶ ಮಾಡುವುದು. ತಾವು ಕ್ಷಮಿಸಬೇಕು. ನನ್ನ ಮೇಲೆ ನೀವು ದಯೆಯನ್ನು ತೋರಿಸ ಬೇಕು. ನನ್ನ ಪತಿಯು ಬಂದರು. ನನಗೆ ಪತಿಯು ಉತ್ತಮದೇವತೆಯು. ಅವರು ಹಸಿವೆಯಿಂದ ಬಂದರು. ಅವರಿಗೆ ಉಪಚಾರವನ್ನು ಮಾಡಿಬಂದೆನು' ಎಂದಳು.

ಕೌಶಿಕರು 'ನಿನಗೆ ಬ್ರಾಹ್ಮಣರು ದೊಡ್ಡವರಲ್ಲ. ಗಂಡನೇ ದೊಡ್ಡವ ನಾದನಲ್ಲವೇ? ಗೃಹಸ್ಥಧರ್ಮದಲ್ಲಿ ಇದ್ದುಕೊಂಡು ನೀನು ಬ್ರಾಹ್ಮಣರನ್ನು ಅವಮಾನ ಮಾಡುತ್ತಿರುವಿ. ಬ್ರಾಹ್ಮಣರಿಗೆ ಇಂದ್ರದೇವರೇ ನಮಸ್ಕರಿಸುವರು. ಮನುಷ್ಯರನ್ನು ಏನು ಹೇಳಬೇಕು? ನೀನು ತುಂಬಾ ಅಹಂಕಾರವುಳ್ಳವಳಾಗಿದ್ದೀಯೆ! ನಿನಗೆ ಸ್ವಲ್ಪವೂ ಬುದ್ಧಿಯಿಲ್ಲ. ದೊಡ್ಡವರ ಹತ್ತಿರ ಕೇಳಿಯೂ ತಿಳಿದುಕೊಂಡಿಲ್ಲ. ಬ್ರಾಹ್ಮಣರು ಬೆಂಕಿಯಂತೆ ಇರುವವರು. ಅವರಿಗೆ ಅವಮಾನ ಮಾಡಿದರೆ ಬೇಗನೆ ಸಮಸ್ತಭೂಮಿಯನ್ನೇ ಸುಟ್ಟುಹಾಕುವರು' ಎಂದು ಹೇಳಿದರು.

ಅದಕ್ಕೆ ಆ ಪತಿವ್ರತಾಸ್ತ್ರೀಯು ಹೇಳಿದಳು. 'ಬ್ರಾಹ್ಮಣರು ದೇವತೆಗಳಿಗೆ ಸಮಾನರು. ಅವರನ್ನು ನಾನು ಅವಮಾನ ಮಾಡುವುದಿಲ್ಲ. ನನ್ನ ಈ ಅಪರಾಧವನ್ನು ನೀವು ಕ್ಷಮಿಸಬೇಕು. ನಾನು ಬ್ರಾಹ್ಮಣರ ತೇಜಸ್ಸನ್ನೂ ಮಹಾಭಾಗ್ಯವನ್ನೂ ತಿಳಿದುಕೊಂಡೇ ಇದ್ದೇನೆ. ಬ್ರಾಹ್ಮಣರ ಕೋಪದಿಂದ ಸಮುದ್ರದ ನೀರು ಕುಡಿಯಲಿಕ್ಕೆ ಆಗದಂತೆ ಉಪ್ಪು ಆಯಿತು. ಋಷಿಗಳ ಕ್ರೋಧಾಗ್ನಿಯು ಸಮುದ್ರದಲ್ಲಿ ಇನ್ನೂ ಶಾಂತವಾಗಿಲ್ಲ. ಬ್ರಾಹ್ಮಣರನ್ನು ತಿರಸ್ಕಾರ ಮಾಡಿ ದುಷ್ಟನಾದ ವಾತಾಪಿಯು ಅಗಸ್ತ್ಯ ಋಷಿಗಳನ್ನು ಹೊಂದಿ ಜೀರ್ಣವಾಗಿ ಹೋದನು. ಬ್ರಾಹ್ಮಣರು ಬಹುಪ್ರಭಾವ ವುಳ್ಳವರೆಂದು ಕೇಳಿದ್ದೇನೆ. ಅವರ ಕೋಪವೂ ಅನುಗ್ರಹವೂ ಎರಡೂ ವ್ಯರ್ಥವಾಗಲಾರದು. ಪ್ರಕೃತ ನಿಮ್ಮನ್ನು ಕಾಯಿಸಿದಕ್ಕೆ ನೀವು ನನ್ನನ್ನು ಕ್ಷಮಿಸಬೇಕು. **ನನಗೆ ಪತಿಯ ಸೇವೆಗೆ ಅವಿರುದ್ಧವಾಗಿ ಎಲ್ಲ ಧರ್ಮಗಳನ್ನೂ ಮಾಡುವೆನು. ಪತಿಯ ಸೇವೆಯ ಫಲವು ಹೇಗೆ ಇದೆಯೆಂದು ನೋಡಿರಿ. ನೀವು ಕಾಡಿನಲ್ಲಿ ಕೋಪದಿಂದ ಒಂದು ಬಲಾಕಾ ಎಂಬ ಪಕ್ಷಿಯನ್ನು ಸುಟ್ಟು ಹಾಕಿರುವಿರಿ. ಪತಿಸೇವೆಯ ಬಲದಿಂದ ಇಲ್ಲಿಯೇ ಇರುವ ನನಗೆ ಅದು ತಿಳಿದಿದೆ. ನನ್ನನ್ನು ನೋಡಿ ಕೋಪಿಸಬೇಡಿರಿ. ಪತಿವ್ರತೆಯಾದ ನಾನು ಬಲಾಕಪಕ್ಷಿಯಂತೆ ನಿಮ್ಮ ಕ್ರೋಧದೃಷ್ಟಿಯಿಂದ ಸಾಯಲಾರೆನು. ಯಾರು ಕೋಪವನ್ನು ಮೋಹವನ್ನು ಜಯಿಸುವನೋ ಅವನನ್ನೇ ಬ್ರಾಹ್ಮಣ ಎಂದು ದೇವತೆಗಳು ತಿಳಿಯುವರು. ನೀವು ಸರಿಯಾಗಿ ಧರ್ಮವನ್ನು ತಿಳಿದಿಲ್ಲ ಎಂದು ನನಗೆ ತೋರುತ್ತದೆ. ನಿಮಗೆ ಸರಿಯಾದ ಧರ್ಮವು ತಿಳಿಯದೆ ಇದ್ದರೆ ಮಿಥಿಲಾನಗರಿಯಲ್ಲಿ ಇರುವ ಧರ್ಮವ್ಯಾಧನ ಬಳಿಗೆ ಹೋಗಿ ಕೇಳಿ.** ಅವನು ತಂದೆತಾಯಿಗಳ ಸೇವೆಯನ್ನು ಮಾಡುತ್ತಾ ಸತ್ಯವಚನ ಉಳ್ಳವನಾಗಿ ಮಿಥಿಲಾಪಟ್ಟಣದಲ್ಲಿ ಇದ್ದಾನೆ. ಅಲ್ಲಿಗೆ ಹೋಗಿರಿ. ಅವನು ನಿಮ್ಮ ಮನಸ್ಸಿನ ಸಂಶಯವನ್ನು ಪರಿಹರಿಸುವನು. ನಾನು ಹೇಳಿದ ಮಾತು ಹೆಚ್ಚು ಕಡಿಮೆಯಾಗಿದ್ದರೆ ಕ್ಷಮಿಸಿರಿ. ಧರ್ಮವನ್ನು ತಿಳಿದವರು ಹೆಂಗಸರನ್ನು ಸಂಹರಿಸಲಾರರು'.

ಈರೀತಿಯಾಗಿ ಆ ಪತಿವ್ರತಾಸ್ತ್ರೀಯು ಹೇಳಲು ಕೌಶಿಕರು 'ಅಮ್ಮ! ನನಗೆ ಸಂತೋಷವಾಯಿತು. ನಿನಗೆ ಮಂಗಳವಾಗಲಿ. ನನ್ನ ಕೋಪವು ಹೋಯಿತು. ನಿನ್ನ ನಿಂದಾವಚನವು ನನ್ನ ಶ್ರೇಯಸ್ಸಿಗೆ ಕಾರಣವಾಯಿತು. ನಿನಗೆ ಕ್ಷೇಮವಾಗಲಿ ನಾನು ಹೋಗಿ ಬರುವೆನು. ನೀನು ಪರಮ ಧನ್ಯಳಾಗಿರುವಿ! ಎಂದುಹೇಳಿ ಆ ಪತಿವ್ರತಾ ಸ್ತ್ರೀಯ ಅನುಜ್ಞೆಯನ್ನು ಪಡೆದು ತನ್ನನ್ನೇ ತನ್ನ ಮನಸ್ಸಿನಲ್ಲಿ ನಿಂದಾಮಾಡಿಕೊಳ್ಳುತ್ತಾ ತನ್ನ ಮನೆಗೆ ಹೋದರು.

# ಧರ್ಮವ್ಯಾಧನ ಕಥೆ [1]

ಪತಿವ್ರತಾಸ್ತ್ರೀಯು ಹೇಳಿದ ಆಶ್ಚರ್ಯಕರವಾದ ಮಾತನ್ನೆಲ್ಲಾ ಯೋಚಿಸುತ್ತಾ ಕೌಶಿಕರು ತನ್ನನ್ನೇ ನಿಂದಿಸಿಕೊಂಡು ತಾನು ಅಪರಾಧವನ್ನು ಮಾಡಿದವರಂತೆ ತಿಳಿದುಕೊಂಡರು. ಕೌಶಿಕರು ಧರ್ಮದ ಸೂಕ್ಷ್ಮಗತಿಯನ್ನು ಯೋಚಿಸಿದವರಾಗಿ ನಾನು ಮಿಥಿಲಾಪಟ್ಟಣಕ್ಕೇ ಹೋಗುತ್ತೇನೆ. ಧರ್ಮವನ್ನು ತಿಳಿದ ಧರ್ಮವ್ಯಾಧನು ಅಲ್ಲಿರುವನಂತೆ. ವನದಲ್ಲಿ ನಾನು ಬಲಾಕಪಕ್ಷಿಯನ್ನು ಸಂಹರಿಸಿದ ವಿಷಯವನ್ನು ಹೇಳಿದಪ್ರಯುಕ್ತ ನನಗೆ ಆ ಸ್ತ್ರೀಯ ಮಾತಿನಲ್ಲಿ ನಂಬಿಕೆಯಾಗಿದೆ ಎಂದು ಹೇಳಿಕೊಂಡು ಕುತೂಹಲದಿಂದ ಅನೇಕ ಅರಣ್ಯಗಳನ್ನೂ ಗ್ರಾಮಗಳನ್ನೂ ನಗರಗಳನ್ನೂ ದಾಟಿ ಜನಕರಾಜನಿಂದ ಸುರಕ್ಷಿತವಾದ ಅನೇಕ ರಥಗಳಿಂದಲೂ ಕುದುರೆಗಳಿಂದಲೂ ಆನೆಗಳಿಂದಲೂ ಕೂಡಿರುವ ಸಂತುಷ್ಟರಾದ ಪುಷ್ಟರಾದ ಜನರಿಂದ ತುಂಬಿರುವ ಮಿಥಿಲಾಪಟ್ಟಣಕ್ಕೆ ಹೋದರು. ಅಲ್ಲಿ ಧರ್ಮವ್ಯಾಧನು ಎಲ್ಲಿ ಎಂದು ಕೇಳಲು ಬ್ರಾಹ್ಮಣರು ಅವನು ಇರುವ ಸ್ಥಳವನ್ನು ಹೇಳಿದರು. ಅಲ್ಲಿಗೆ ಹೋದರು. ಅಲ್ಲಿ ಧರ್ಮವ್ಯಾದನು ಎಮ್ಮೆಯ ಜಿಂಕೆಯ ಮಾಂಸವನ್ನು ಮಾರುತ್ತಾ ಇದ್ದನು. ವ್ಯಾಪಾರಮಾಡುವ ಜನರು ಬಹಳವಿದ್ದುದರಿಂದ ಕೌಶಿಕರು ಒಂದು ಏಕಾಂತ ಸ್ಥಳದಲ್ಲಿ ನಿಂತುಕೊಂಡರು.

ಧರ್ಮವ್ಯಾಧನು ಬ್ರಾಹ್ಮಣರು ಬಂದಿರುವುದನ್ನು ನೋಡಿ ಸಂಭ್ರಮದಿಂದ ಕೌಶಿಕರು ಏಕಾಂತದಲ್ಲಿ ಇರುವ ಸ್ಥಳಕ್ಕೆ ಬಂದನು. ಬ್ರಾಹ್ಮಣ ಶ್ರೇಷ್ಠರೇ! ನಿಮಗೆ ನಮಸ್ಕರಿಸುವೆನು. ನಾನು ಬೇಡನು. ನಿಮಗೆ ನಾನು ಏನು ಮಾಡಲಿ? ಆಜ್ಞೆಯನ್ನು ಮಾಡಿರಿ. ಆ ಪತಿವ್ರತಾ ಸ್ತ್ರೀಯು ನಿಮ್ಮ ಹತ್ತಿರ ಮಿಥಿಲಾನಗರಿಗೆ ಹೋಗು ಎಂದು ಹೇಳಿದಳು. ನೀವು ಇಲ್ಲಿಗೆ ಯಾಕೆ ಬಂದಿರುವಿರಿ ಎಂಬ ವಿಷಯವನ್ನೂ ನಾನು ತಿಳಿದಿರುವೆನು? ಎಂದು ಹೇಳಿದನು. ಬೇಡನ ಮಾತನ್ನು ಕೇಳಿ ಕೌಶಿಕರು ಅತ್ಯಂತ ಆಶ್ಚರ್ಯವುಳ್ಳವರಾಗಿ 'ಬಲಾಕಪಕ್ಷಿಯನ್ನು ನಾನು ಕೊಂದಿರುವ ವಿಷಯವನ್ನು ಆ ಪತಿವ್ರತೆಯು ಹೇಳಿರುವುದು ಒಂದು ಆಶ್ಚರ್ಯ. ಪತಿವ್ರತಾಸ್ತ್ರೀಯು ಅಲ್ಲಿ ಹೇಳಿದ್ದನ್ನು ಇಲ್ಲಿ ಇವನು ತಿಳಿದಿರುವುದು ಎರಡನೇ ಆಶ್ಚರ್ಯವು! ಎಂದು ಯೋಚಿಸಿದನು. ಬೇಡನು ಇದು ನಿಮಗೆ ಯೋಗ್ಯಸ್ಥಳವಲ್ಲ, ಮನೆಗೆ ಹೋಗುವ ಎಂದನು. ಕೌಶಿಕರು ಸಂತೋಷದಿಂದ ಹಾಗೇ ಆಗಲಿ ಎಂದರು. ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು

1. ಮ.ಭಾ.ವ.ಪ. ಅ.207-209

ಧರ್ಮವ್ಯಾಧನು ಮನೆಗೆ ಹೋದನು. ಮನೆಗೆ ಹೋಗಿ ಒಳ್ಳೇ ಆಸನದಲ್ಲಿ ಕೂತುಕೊಳ್ಳಿಸಿದನು.

ತರುವಾಯ ಕೌಶಿಕರು ಬೇಡನೊಡನೆ ನೀನು ಮಾಡುವ ಕಾರ್ಯವು ನಿನಗೆ ಯೋಗ್ಯವಾಗಿ ಕಾಣಿಸುವುದಿಲ್ಲ. ಮಾಂಸ ಮಾರುವುದು ಘೋರವಾದ ಕಾರ್ಯವಲ್ಲವೇ? ನಿನಗೆ ಇಂತಹ ಕಾರ್ಯವನ್ನು ಮಾಡುವ ಸಂದರ್ಭ ಬಂದಿದೆ ಎಂದು ತುಂಬಾ ಪಶ್ಚಾತ್ತಾಪವನ್ನು ಹೊಂದುತ್ತೇನೆ ಎಂದರು.

ಆದಕ್ಕೆ ಬೇಡನು 'ಇದು ನಮ್ಮ ವಂಶಪರಂಪರೆಯಿಂದ ಬಂದ ಧರ್ಮವು. ನನ್ನ ಧರ್ಮದಲ್ಲಿ ಇರುವ ನನ್ನ ಮೇಲೆ ಕೋಪಿಸಿಕೊಳ್ಳಬಾರದು. ದೇವರಿಂದ ವಿಹಿತ ವಾದ ಈ ಧರ್ಮವನ್ನು ಮಾಡುತ್ತಿದ್ದೇನೆ. ಪ್ರಯತ್ನಪೂರ್ವಕವಾಗಿ ತಂದೆತಾಯಿ ಗಳನ್ನು ರಕ್ಷಿಸುತ್ತೇನೆ. ಅವರ ಸೇವೆಯನ್ನು ಮಾಡುತ್ತೇನೆ. ಸತ್ಯವನ್ನೇ ಹೇಳುತ್ತೇನೆ. ಒಬ್ಬರ ಮೇಲೆ ಅಸೂಯೆಯನ್ನು ಹೊಂದುವುದಿಲ್ಲ. ನನಗೆ ಶಕ್ತಿಯಿದ್ದಷ್ಟು ದಾನ ಮಾಡುತ್ತೇನೆ. ದೇವತೆಗಳನ್ನೂ ಅತಿಥಿಗಳನ್ನೂ ಭೃತ್ಯರನ್ನೂ ಸತ್ಕರಿಸಿ ಉಳಿದದ್ದ ರಿಂದಲೇ ಜೀವನ ಮಾಡುತ್ತೇನೆ. ಬ್ರಾಹ್ಮಣರೇ ಮೊದಲಾದವರಿಗೆ ಒಂದೊಂದು ಧರ್ಮವು ವಿಹಿತವಾಗಿದೆ. ಅದೇರೀತಿ ಮಾಂಸವನ್ನು ಮಾರುವುದು ನನ್ನ ಧರ್ಮವು. ರಾಜರು ಅವರವರು ಅವರವರ ಧರ್ಮವನ್ನು ಮಾಡುವಂತೆ ನೋಡಿಕೊಳ್ಳುತ್ತಾರೆ. ತಮ್ಮ ಧರ್ಮವನ್ನು ಮಾಡದಿದ್ದರೆ ಸಂಹಾರಮಾಡುವರು. ಈ ಜನಕರಾಜನ ದೇಶದಲ್ಲಿ ಒಬ್ಬರೂ ವಿರುದ್ಧಧರ್ಮವನ್ನು ಮಾಡುವವರಿಲ್ಲ. ಎಲ್ಲರೂ ಅವರವರ ಧರ್ಮಗಳನ್ನೂ ಮಾಡುತ್ತಾ ಇರುವರು. ಜನಕರಾಜನು ತನ್ನ ಮಗನಾದರೂ ತಪ್ಪು ಮಾಡಿದರೆ ಶಿಕ್ಷಿಸುವನು. ನಾನು ಮಾಂಸವನ್ನು ಮಾರುವೆನೇ ಹೊರತು ಪ್ರಾಣಿಗಳನ್ನು ಕೊಲ್ಲುವುದಿಲ್ಲ. ಇನ್ನೊಬ್ಬರು ಕೊಂದು ತಂದುಕೊಟ್ಟ ಮಾಂಸವನ್ನು ಮಾರುವೆನು. ನಾನು ಮಾಂಸವನ್ನು ತಿನ್ನುವುದಿಲ್ಲ. ಋತುಕಾಲದಲ್ಲಿಯೇ ಸ್ತ್ರೀಗಮನವನ್ನು ಮಾಡುವೆನು. ಸಾಯಂಕಾಲವೇ ಭೋಜನ ಮಾಡುವೆನು' ಎಂದು ಹೇಳಿ ಅನೇಕ ಧರ್ಮಗಳನ್ನು ಹೇಳಿ 'ಅವರವರಿಗೆ ವಿಹಿತವಾದ ಕರ್ಮವನ್ನು ಮಾಡಬೇಕು. ಧಾನ್ಯಗಳು ಇತ್ಯಾದಿಗಳೆಲ್ಲಾ ಪ್ರಾಣಿಗಳೇ ಇವುಗಳ ಉಪಯೋಗದಿಂದಲೂ ಹಿಂಸೆಯಾಗುವುದು. ಶಿಬಿರಾಜನು ತನ್ನ ಮಾಂಸವನ್ನು ಕೊಟ್ಟು ಸ್ವರ್ಗಕ್ಕೆ ಹೋದನು. ರಂತೀದೇವನು ಅನೇಕ ಗೋವುಗಳನ್ನು ಕೊಂದು ಯಾಗವನ್ನು ಮಾಡಿ ಕೀರ್ತಿಯನ್ನು ಹೊಂದಿದನು. ಬ್ರಾಹ್ಮಣರು ಪಶುಗಳನ್ನು ಕೊಂದು ಚಾತುರ್ಮಾಸ್ಯಯಾಗವನ್ನು ಮಾಡುವರು. ಇದರಿಂದ ಆ ಪಶುಗಳು ಸ್ವರ್ಗವನ್ನು ಹೊಂದುವುವು.

ದೇವತಾಪಿತೃಗಳಿಗೆ ಉಪಯೋಗಿಸಿ ಮಾಂಸವನ್ನು ಭಕ್ಷಣೆ ಮಾಡಿದರೆ ಮಾಂಸಭಕ್ಷಣೆ ಮಾಡಿ ದೋಷವಿರುವುದಿಲ್ಲ. (ಇದು ಕಲಿಯುಗಕ್ಕೆ ನಿಷಿದ್ಧ. ಬೇರೆ ಯುಗಗಳಲ್ಲಿ ಹೇಳಿದ್ದು) ಆದುದರಿಂದ ನಾವು ಬೇಡನಾದ ನನಗೆ ವಿಹಿತವಾದ ಧರ್ಮವೆಂದು ಮಾಂಸವನ್ನು ಮಾರುತ್ತಾ ಇದ್ದೇನೆ. ನಾನು ಧರ್ಮ ಮಾಡುತ್ತೇನೆ. ಸತ್ಯವನ್ನೇ ಹೇಳುತ್ತೇನೆ. ಗುರುಗಳ ಸೇವೆಯನ್ನು ಮಾಡುತ್ತೇನೆ. ಬ್ರಾಹ್ಮಣರ ಪೂಜೆಯನ್ನು ಮಾಡುತ್ತೇನೆ. ನಾನು ಅಹಂಕಾರ ಪಡುವುದಿಲ್ಲ. ಒಬ್ಬರನ್ನು ನಿಂದಿಸಿ ಮಾತಾಡುವುದಿಲ್ಲ. ಯಾವ ಕಾರ್ಯವನ್ನು ಮಾಡಲಿಕ್ಕೆ ಹೋದರೂ ಹಿಂಸೆಯು ತಪ್ಪಿದ್ದಲ್ಲ. ಆದುದರಿಂದ ಯಾರಿಗೆ ಯಾವ ಕಾರ್ಯವು ಶಾಸ್ತ್ರವಿಹಿತವಾಗಿದೆಯೋ ಅದನ್ನು ಮಾಡಬೇಕು. ಕೃಷಿ ಮಾಡುವುದು ಒಳ್ಳೆಯದು ಎಂದು ಕೆಲವರು ಹೇಳುವಿರಿ? ನೆಲ್ಲು (ಭತ್ತ) ಬೇಳೆ ಎಲ್ಲಾ ಜೀವರೇ ಅಷ್ಟೇ! ಅವುಗಳನ್ನೂ ಊಟ ಮಾಡಿದರೆ ಹಿಂಸೆಯಾಗುವುದಿಲ್ಲವೇ? ನೀರಿನಲ್ಲಿ ಎಷ್ಟೋ ಪ್ರಾಣಿಗಳು ಇರುವುವು. ನೀರು ಕುಡಿಯುವಾಗ ಸಾಯುವುವು. ಲೋಕದಲ್ಲಿ ಒಬ್ಬ ಪ್ರಾಣಿಯನ್ನು ತಿಂದೇ ಮತ್ತೊಂದು ಪ್ರಾಣಿಯು ಬದುಕುವುದು. ಚಿಕ್ಕಮೀನುಗಳನ್ನು ದೊಡ್ಡಮೀನುಗಳು ತಿನ್ನುವುವು. ಅಷ್ಟೇಕೆ? ನಾನು ನಡೆಯುವಾಗ ಇರುವೆ ಇತ್ಯಾದಿ ಎಷ್ಟೋ ಪ್ರಾಣಿಗಳು ಸಾಯುತ್ತವೆ. ನಾವು ಕೂತಿರುವಾಗ ಮಲಗಿರುವಾಗ ಎಷ್ಟೋ ಸೊಳ್ಳೆ ಮೊದಲಾದ ಪ್ರಾಣಿಗಳು ಸಾಯುವುವು. ಇದಕ್ಕೆಲ್ಲಾ ಏನು ಹೇಳುವಿರಿ? ಆದುದರಿಂದ ವಿಚಾರಮಾಡಿದರೆ ಒಬ್ಬನೂ ಹಿಂಸಾಮಾಡದೆ ಇಲ್ಲ. ಅಹಿಂಸೆಯಲ್ಲಿ ಆಸಕ್ತರಾದ ಯತಿಗಳೂ ಹಿಂಸೆಯನ್ನು ಮಾಡುವರು. ಆದರೆ ಪ್ರಯತ್ನಮಾಡುವುದರಿಂದ ಸ್ವಲ್ಪ ಹಿಂಸೆಯು ಕಡಿಮೆಯಾಗುವುದಷ್ಟೆ. ಆದುದರಿಂದ ಅವರವರಿಗೆ ಶಾಸ್ತ್ರದಲ್ಲಿ ಹೇಳಿದ ಕರ್ಮವನ್ನು ಮಾಡುವವನು ಕೀರ್ತಿಯನ್ನು ಹೊಂದುವವನು' ಎಂದು ಹೇಳಿದನು.

ತರುವಾಯ ಬೇಡನು ಪೌರುಷಕ್ಕಿಂತ ದೈವವು ಶ್ರೇಷ್ಠವು ಎಂದು ಹೇಳಿ ಪುಣ್ಯದಿಂದ ಸುಖವಾಗುವುದೆಂದೂ ಪಾಪಮಾಡುವುದರಿಂದ ದುಃಖವುಂಟಾಗುವುದೆಂದೂ ತಿಳಿಸಿದನು. ಇನ್ನೂ ಅನೇಕ ಧರ್ಮಗಳನ್ನು ಹೇಳಿ 'ಬ್ರಾಹ್ಮಣಶ್ರೇಷ್ಠರೇ! ನಾನು ಸಿದ್ಧಿಯನ್ನು ಹೊಂದಲಿಕ್ಕೆ ಕಾರಣವಾದ ಪ್ರತ್ಯಕ್ಷ ಧರ್ಮವನ್ನು ತೋರಿಸುತ್ತೇನೆ. ಏಳಿರಿ. ಒಳಗೆ ಬನ್ನಿರಿ. ನನ್ನ ತಂದೆತಾಯಿಗಳನ್ನು ನೀವು ನೋಡಬೇಕು' ಎಂದು ಹೇಳಿ ಒಳಗೆ ಕರೆದುಕೊಂಡು ಹೋದನು. ಸುಣ್ಣಹಚ್ಚಿ ಬೆಳ್ಳಗೆ ಇರುವ ಸುಂದರವಾದ ದೇವರಮನೆಯಂತೆ ಇರುವ ಕೋಣೆಗೆ ಕರೆದುಕೊಂಡು ಹೋದನು. ಅಲ್ಲಿ ಆ ಬೇಡನ ತಂದೆ–ತಾಯಿಗಳು ಬಿಳಿಯಾದ ವಸ್ತ್ರವನ್ನು ಧರಿಸಿ ಭೋಜನ ಮಾಡಿ

ಬೇಡನಿಂದ ಸತ್ಕೃತರಾಗಿ ಸುಖದಿಂದ ಕೂತಿದ್ದರು. ಕೌಶಿಕರು ಅವರನ್ನು ನೋಡಿದರು. ಬೇಡನು ಹೋಗಿ ಅವರ ಪಾದಗಳಲ್ಲಿ ತಲೆಯನ್ನಿಟ್ಟು ಉದ್ದಕ್ಕೆ ನಮಸ್ಕಾರ ಮಾಡಿದನು. ಆಗ ಆ ಮುದುಕನು 'ಮಗನೇ ಏಳು ಏಳು. ಧರ್ಮವು ನಿನ್ನನ್ನು ಕಾಪಾಡಲಿ. ನಾನು ಸಂತೋಷಪಟ್ಟೆವು. ನೀನು ದೀರ್ಘಾಯುಷ್ಯವನ್ನು ಹೊಂದು. ಸತ್ಪುತ್ರನಾದ ನಿನ್ನಿಂದ ನಾವು ಯಾವಾಗಲೂ ಸತ್ಕೃತರಾಗಿದ್ದೇವೆ. ನೀನು ನಮ್ಮನ್ನು ದೇವತೆಗಳನ್ನು ಪೂಜಿಸುವಂತೆ ಪೂಜಿಸಿರುವೆ. ನೀನು ಈರೀತಿಯಾಗಿ ನಮ್ಮನ್ನು ಪೂಜಿಸುವುದರಿಂದ ನಿನ್ನ ತಾತ ಮುತ್ತಾತ ಎಲ್ಲರೂ ನಿನ್ನ ಮೇಲೆ ಪ್ರೀತರಾಗಿರುವರು. ಮನಸ್ಸಿನಿಂದ ಬಾಯಿಯಿಂದ ದೇಹದಿಂದ ಯಾವಾಗಲೂ ಸೇವೆಯನ್ನು ಮಾಡುತ್ತಿರುವಿ. ನಮ್ಮ ಸೇವೆಯ ಹೊರತು ನಿನ್ನ ಮನಸ್ಸು ಬೇರೆ ವಿಷಯದಲ್ಲಿಯೇ ಹೋಗುವುದಿಲ್ಲ. ಪರಶುರಾಮ ದೇವರು ಲೋಕದ ಜನರಿಗೆ ತಿಳಿಯುವುದಕ್ಕಾಗಿ ಹೇಗೆ ವಯಸ್ಸಾದ ತಂದೆತಾಯಿಗಳನ್ನು ಸೇವಿಸಿದರೋ ಹಾಗೇ ನೀನು ನಮ್ಮ ಸೇವೆಯನ್ನು ಮಾಡುತ್ತಿರುವಿ' ಎಂದರು.

ಆಮೇಲೆ ಧರ್ಮವ್ಯಾಧನು ತಂದೆತಾಯಿಗಳೊಡನೆ ಕೌಶಿಕರು ಬಂದಿರುವ ವಿಷಯವನ್ನು ತಿಳಿಸಿದನು. ಆಗ ಅವರು ಕೌಶಿಕರನ್ನು ಬರಬೇಕು ಎಂದು ಹೇಳಿ ಸತ್ಕಾರವನ್ನು ಮಾಡಿದರು. ಕೌಶಿಕರು ಅವರ ಸತ್ಕಾರವನ್ನು ಸ್ವೀಕರಿಸಿ, ಮಗನಿಂದಲೂ ಭೃತ್ಯರಿಂದಲೂ ಸಹಿತರಾಗಿ ಸುಖವಾಗಿ ಇರುವಿರಾ? ಎಂದು ಪ್ರಶ್ನೆ ಮಾಡಿದರು.

'ನಾವು ಎಲ್ಲರೂ ಮನೆಯಲ್ಲಿ ಸುಖವಾಗಿಯೇ ಇರುವೆವು. ನೀವು ಇಲ್ಲಿಗೆ ವಿಘ್ನವಿಲ್ಲದೆ ಬಂದು ಸೇರಿದಿರಾ?' ಎಂದು ಅವರು ಕೇಳಿದರು.

ಕೌಶಿಕರು ಹೌದು ಎಂದರು. ಆಮೇಲೆ ಧರ್ಮವ್ಯಾಧನು 'ನನಗೆ ತಂದೆತಾಯಿಗಳು ದೇವತೆಗಳಂತೆ. ದೇವತೆಗಳಿಗೆ ಮಾಡುವ ಪೂಜೆಯ್ನು ನಾನು ತಂದೆತಾಯಿಗಳಿಗೆ ಮಾಡುತ್ತಿರುವೆನು. ಬ್ರಾಹ್ಮಣರು ಹೇಗೆ ದೇವತೆಗಳಿಗೆ ಪೂಜಿಸು ವರೋ ಹಾಗೆ ನಾನು ತಂದೆತಾಯಿಗಳಿಗೆ ಪೂಜಿಸುತ್ತಿರುವೆನು. ಈ ತಂದೆತಾಯಿಗಳಿ ಗೋಸ್ಕರವೇ ನಾನು ಬದುಕಿರುವುದು. ಇವರಿಗೋಸ್ಕರವೇ ನನ್ನ ಹೆಂಡತಿ ಮಕ್ಕಳು. ನಾನು ನನ್ನ ಹೆಂಡತಿ ಮಕ್ಕಳೂ ಎಲ್ಲರೂ ಇವರ ಸೇವೆಯನ್ನು ಮಾಡುವೆವು. ನಾನೇ ಇವರಿಗೆ ನಿತ್ಯವೂ ಸ್ನಾನ ಮಾಡಿಸುತ್ತೇನೆ. ಇವರ ಕಾಲು ತೊಳೆಯುತ್ತೇನೆ. ನಾನೇ ಇವರಿಗೆ ಆಹಾರವನ್ನು ಕೊಡುವೆನು. ಇವರಿಗೆ ಅನುಕೂಲ ಮಾತುಗಳನ್ನೇ ಹೇಳು ವೆನು. ಅಧರ್ಮಕಾರ್ಯವಾಗಿದ್ದರೂ ಇವರಿಗೆ ಪ್ರಿಯವಾಗಿ ದ್ದರೆ ಮಾಡುವೆನು. ಇವರನ್ನು ಸೇವಿಸುವುದೇ ಧರ್ಮವೆಂದು ತಿಳಿದಿದ್ದೇನೆ. ಜನರಿಗೆ ತಂದೆ ತಾಯಿ ಅಗ್ನಿ

ಭಗವಂತನು ಪಾಠಹೇಳಿದವರು ಈ ಐದು ಜನರೂ ಗುರುಗಳು. ಇವರಲ್ಲಿ ಸರಿಯಾಗಿ ನಡಕೊಳ್ಳಬೇಕು. ಇವರನ್ನು ಪೂಜಿಸುವುದರಿಂದ ಅಗ್ನಿಸೇವಾ ಮಾಡಿದ ಫಲವೂ ಬರುವುದು. ಗೃಹಸ್ಥ ಧರ್ಮದಲ್ಲಿ ಇರುವವನಿಗೆ ಇದೇ ಧರ್ಮವು.

ತಂದೆತಾಯಿಗಳ ಸೇವೆಯೆಂಬ ತಪಸ್ಸನ್ನು ಮಾಡಿದ್ದರಿಂದ ನನಗೆ ಉಂಟಾಗಿರುವ ದಿವ್ಯದೃಷ್ಟಿಯ ಫಲವನ್ನು ನೋಡಿರಿ. ಆ ಪತಿವ್ರತಾಸ್ತ್ರೀಯರು ಮಿಥಿಲಾಪಟ್ಟಣದಲ್ಲಿ ಇರುವ ಧರ್ಮವ್ಯಾಧನು ನಿನಗೆ ಧರ್ಮವನ್ನು ಹೇಳುವನು ಎಂದು ಯಾಕೆ ಹೇಳಿಕಳುಹಿಸಿದಳೋ ನನಗೆ ತಿಳಿದಿದೆ' ಎಂದನು.

ಕೌಶಿಕರು ಸತ್ಯವಚನವುಳ್ಳ ಉತ್ತಮಸ್ವಭಾವವುಳ್ಳ ಆ ಪತಿವ್ರತಾ ಸ್ತ್ರೀಯ ಮಾತನ್ನು ಸ್ಮರಿಸಿ ನೀನು ಗುಣವಂತನೆಂದು ನಾನು ತಿಳಿದಿರುವೆನು ಎಂದು ಹೇಳಿದರು.

ಧರ್ಮವ್ಯಾಧನು ಕೌಶಿಕರೊಡನೆ 'ನಿಮ್ಮನ್ನು ಆ ಪತಿವ್ರತಾಸ್ತ್ರೀಯು ಯಾವುದಕ್ಕಾಗಿ ಇಲ್ಲಿಗೆ ಕಳುಹಿಸಿದಳೋ ಆ ವಿಷಯವು ಅವಳಿಗೇ ತಿಳಿದಿರುತ್ತೆ. ಅವಳು ಸರಿಯಾದ ಜ್ಞಾನವುಳ್ಳವಳು. ನಿಮಗೆ ಅನುಗ್ರಹ ಮಾಡಬೇಕೆಂದು ನಾನೀಗ ನನ್ನ ತಂದೆತಾಯಿಗಳನ್ನು ತೋರಿಸಿದ್ದು. ನೀವು ತಂದೆಯನ್ನಾಗಲೀ ತಾಯಿಯನ್ನಾಗಲೀ ಸೇವಿಸಲಿಲ್ಲ. ಅವರ ಅನುಜ್ಞೆಯನ್ನು ಪಡೆಯದೆ ವೇದಾಧ್ಯಯನವನ್ನು ಮಾಡ ಬೇಕೆಂದು ಬಂದಿರುವಿರಿ. ನಿಮ್ಮ ತಂದೆತಾಯಿಗಳು ನಿಮ್ಮ ದುಃಖದಿಂದ ಕುರುಡರಂತೆ ಆಗಿದ್ದಾರೆ. ಅವರನ್ನು ಸಂತೋಷಪಡಿಸಲಿಕ್ಕೆ ಬೇಗನೇ ಹೋಗಿರಿ. ಧರ್ಮವನ್ನು ಬಿಡಬೇಡಿರಿ. ನೀವು ತಪಸ್ವಿಗಳು. ಧರ್ಮದಲ್ಲಿ ಆಸಕ್ತರಾಗಿರುವಿರಿ. ತಂದೆತಾಯಿಗಳ ಸೇವೆಯನ್ನು ಮಾಡದಿದ್ದರೆ ಎಲ್ಲವೂ ವ್ಯರ್ಥವಾಗುವುದು. ಆದುದರಿಂದ ಬೇಗನೆ ಹೋಗಿರಿ. ನಿಮಗೆ ನಾನು ಶ್ರೇಯಸ್ಸನ್ನು ಹೇಳುವೆನು' ಎಂದು ಹೇಳಿದನು.

ಕೌಶಿಕರು 'ದೈವೇಚ್ಛೆಯಿಂದ ನಾನು ಇಲ್ಲಿಗೆ ಬಂದೆನು. ನಿನ್ನ ಸಹವಾಸವು ಏರ್ಪಟ್ಟಿತು. ನಾನು ನಿನ್ನ ಮೇಲೆ ತುಂಬಾ ಸಂತೋಷವುಳ್ಳವನಾದೆನು. ನರಕಕ್ಕೆ ಹೋಗಿ ಬೀಳತಕ್ಕವನನ್ನು ನಿನ್ನಿಂದ ಉದ್ಧೃತನಾದೆನು. ಯಯಾತಿರಾಜನು ಸಜ್ಜನರಾದ ತನ್ನ ಮೊಮ್ಮಕ್ಕಳಿಂದ ಉದ್ಧೃತನಾದಂತೆ ನಿನ್ನಿಂದ ನಾನು ಉದ್ಧೃತ ನಾದೆನು. ನಿನ್ನ ಮಾತಿನಂತೆ ತಂದೆತಾಯಿಗಳ ಸೇವೆಯನ್ನು ಮಾಡುವೆನು. ನೀನು ಶೂದ್ರನೆಂದು ನಾನು ತಿಳಿಯಲಾರೆನು. ನೀನು ಶೂದ್ರನಾಗಲಿಕ್ಕೆ ಏನೋ ಕಾರಣವಿರ ಬೇಕು. ನೀನು ಯಾವ ಕರ್ಮದಿಂದ ಶೂದ್ರನಾಗಿ ಹುಟ್ಟಿರುವಿ ಎಂಬುದನ್ನು ತಿಳಿಯಲಿಕ್ಕೆ ಆಸೆ ಉಳ್ಳವನಾಗಿದ್ದೇನೆ' ಎಂದರು.

ಬೇಡನು 'ಬ್ರಾಹ್ಮಣರ ಮಾತನ್ನು ನಾನು ಮೀರಲಾರೆನು. ನೀವು ಕೇಳಿದ್ದಕ್ಕೆ ಹೇಳುತ್ತೇನೆ. ನನ್ನ ಪೂರ್ವಜನ್ಮದ ಚರಿತ್ರೆಯನ್ನು ಹೇಳುತ್ತೇನೆ. ನಾನು ಪೂರ್ವಜನ್ಮದಲ್ಲಿ ಬ್ರಾಹ್ಮಣಶ್ರೇಷ್ಠರ ಮಗನಾದ ಬ್ರಾಹ್ಮಣನಾಗಿದ್ದೆನು. ವೇದಗಳ ಅಧ್ಯಯನವನ್ನು ಮಾಡಿದೆನು. ಅಂಗಶಾಸ್ತ್ರಗಳಲ್ಲಿ ಪಾರಂಗತನಾಗಿದ್ದೆನು. ನಾನು ಮಾಡಿದ ದೋಷಗಳಿಂದಲೇ ಈ ಅವಸ್ಥೆಯನ್ನು ಹೊಂದಿದೆನು. ಧನುರ್ವೇದದಲ್ಲಿ ಪಾರಂಗತನಾದ ಒಬ್ಬ ರಾಜನು ನನಗೆ ಮಿತ್ರನಾಗಿದ್ದನು. ಅವನ ಸಹವಾಸದಿಂದ ನಾನೂ ಕೂಡ ಧನುರ್ವಿದ್ಯೆಯಲ್ಲಿ ಶ್ರೇಷ್ಠನಾದೆನು. ಒಂದು ದಿವಸ ರಾಜನು ಸೈನಿಕರಿಂದಲೂ ಮಂತ್ರಿಗಳಿಂದಲೂ ಕೂಡಿಕೊಂಡು ಮೃಗಬೇಟೆಗೆ ಹೋದನು. ನಾನೂ ಹೋದೆನು. ನಾನು ಅನೇಕ ಆಶ್ರಮದ ಮೃಗಗಳನ್ನು ಸಂಹರಿಸಿದೆನು. ಒಂದು ಘೋರವಾದ ಬಾಣವನ್ನು ಬಿಟ್ಟೆನು. ಆ ಬಾಣವು ಒಬ್ಬ ಋಷಿಗಳಿಗೆ ಹೋಗಿ ತಾಗಿತು. ಅವರು ಭೂಮಿಯಲ್ಲಿ ಬಿದ್ದು ಬಿಟ್ಟು ಪ್ರತಿಧ್ವನಿ ಬರುವಂತೆ ಗಟ್ಟಿಯಾಗಿ ''ನಾನೂ ಒಬ್ಬರಿಗೂ ಅಪರಾಧ ಮಾಡಿಲ್ಲವಲ್ಲಾ! ಯಾರು ಈರೀತಿ ಪಾಪಕಾರ್ಯವನ್ನು ಮಾಡಿದರು ಎಂದು ಕೂಗಿಕೊಂಡರು. ನಾನು ಮೃಗವೆಂಬ ಭಾವನೆಯಿಂದ ಬಡಿದವನು ಅಲ್ಲಿಗೆ ಹೋಗಿ ನನ್ನ ಬಾಣದಿಂದ ಬಡಿಯಲ್ಪಟ್ಟ ಉಗ್ರತಪಸ್ಸುಳ್ಳ ಕೂಗುತ್ತಾ ಭೂಮಿಯಲ್ಲಿ ಬಿದ್ದಿದ್ದ ಮುನಿಗಳನ್ನು ನೋಡಿದೆನು. ಇಂತಹ ಅಕೃತ್ಯವನ್ನು ಮಾಡಿದ್ದರಿಂದ ನನ್ನ ಮನಸ್ಸು ತುಂಬಾ ದಃಖವನ್ನು ಹೊಂದಿತು. ನಾನು ತಿಳಿಯದೆ ಮಾಡಿದೆನು. ಆದುದರಿಂದ ನನ್ನನ್ನು ಕ್ಷಮಿಸಬೇಕು ಎಂದು ಕೇಳಿಕೊಂಡೆನು.

ಆಗ ಮುನಿಗಳು ಕೋಪವುಳ್ಳವರಾಗಿ 'ಕ್ರೂರನೇ! ನೀನು ಶೂದ್ರಯೋನಿಯಲ್ಲಿ ಬೇಡನಾಗಿ ಹುಟ್ಟುವಿ' ಎಂದು ಶಾಪವನ್ನು ಕೊಟ್ಟರು. 'ನಾನು ತಿಳಿಯದೆ ಮಾಡಿದ ಕಾರ್ಯವಿದು. ಆದುದರಿಂದ ನೀವು ಕ್ಷಮಿಸಬೇಕು' ಎಂದು ನಾನು ತುಂಬಾ ಕೇಳಿಕೊಂಡೆನು. ನಾನು ಕೊಟ್ಟ ಶಾಪವು ಬೇರೆ ವಿಧವಾಗಲಾರದು. ಅದು ಹಾಗೆಯೇ ಆಗಬೇಕು. ಆದರೆ ನೀನು ತುಂಬಾ ಕೇಳಿಕೊಳ್ಳುವ ಪ್ರಯುಕ್ತ ಸ್ವಲ್ಪ ಅನುಗ್ರಹಮಾಡುತ್ತೇನೆ. ಶೂದ್ರಯೋನಿಯಲ್ಲಿ ನೀನು ಧರ್ಮವನ್ನು ತಿಳಿದವನಾಗಿರುವಿ. ತಂದೆತಾಯಿಗಳ ಸೇವೆಯನ್ನು ಮಾಡಿ ಅದರಿಂದ ಉತ್ತಮವಾದ ಸಿದ್ಧಿಯನ್ನು ಹೊಂದುವಿ. ನಿನಗೆ ಪೂರ್ವಜನ್ಮಸ್ಮರಣೆಯೂ ಇರುವುದು. ಸ್ವರ್ಗವನ್ನು ಹೊಂದುವಿ. ಶಾಪವು ಮುಗಿದ ಮೇಲೆ ಪುನಃ ಬ್ರಾಹ್ಮಣನಾಗಿ ಹುಟ್ಟುವಿ' ಎಂದು ಹೇಳಿದರು. ಆಮೇಲೆ ನಾನು ಬಾಣವನ್ನು ಕಿತ್ತಿತೆಗೆದನು. ಅವರನ್ನು ಆಶ್ರಮಕ್ಕೆ ಎತ್ತಿಕೊಂಡು ಹೋದೆನು. ಅವರು ಸಾಯಲಿಲ್ಲ. ಈರೀತಿಯಾಗಿ ಎಲ್ಲವನ್ನೂ ಹೇಳಿರುವೆನು. ಇನ್ನು ಮುಂದೆ ನಾನು ಸ್ವರ್ಗವನ್ನು ಹೊಂದುವೆನು' ಎಂದು ಹೇಳಿದನು.

**ಕೌಶಿಕರು** 'ಹೀಗೆ ಪುರುಷರು ಸುಖವನ್ನು ದುಃಖವನ್ನು ಹೊಂದುವರು. ಮನಸ್ಸಿನಲ್ಲಿ ನೊಂದುಕೊಳ್ಳಬೇಡ. ಕೆಲವು ಸಮಯ ಸಹಿಸಿಕೊಂಡಿರು. ಆಮೇಲೆ ಬ್ರಾಹ್ಮಣನಾಗುವಿ. ಬ್ರಾಹ್ಮಣನಾಗಿ ಹುಟ್ಟಿದವನಾದರೂ ದುಷ್ಟಕಾರ್ಯಗಳನ್ನು ಮಾಡಿದರೆ ಶೂದ್ರನಿಗೆ ಸಮಾನನಾಗುವನು. ಶೂದ್ರನಾದಲೂ ಒಳ್ಳೆ ಧರ್ಮದಲ್ಲಿ ಇದ್ದರೆ ಅವನು ಬ್ರಾಹ್ಮಣನಿಗೆ ಸಮಾನನು ಎಂದು ನಾನು ತಿಳಿಯುವೆನು. ಪೂರ್ವಕರ್ಮದೋಷದಿಂದ ಇಂತಹ ಕ್ರೂರವಾದ ಜನ್ಮವನ್ನು ಹೊಂದಿರುವಿ. ನಿನ್ನ ದೋಷವೆಲ್ಲವೂ ಪರಿಹಾರವಾಯಿತು ಎಂದು ನನ್ನ ಅಭಿಪ್ರಾಯ' ಎಂದು ಹೇಳಿದರು.

ವ್ಯಾಧನು 'ದುಃಖಪಟ್ಟು ಏನು ಪ್ರಯೋಜನವಿದೆ? ಮೂರ್ಖರು ಅಸಂತೋಷ ವನ್ನು ಹೊಂದುವವರು. ಪಂಡಿತರು ಸಂತೋಷದಿಂದಲೇ ಇರುವರು. ನಾನು ದುಃಖವನ್ನು ಹೊಂದಲಾರೆನು. ಕಾಲವನ್ನು ನಿರೀಕ್ಷಿಸುತ್ತಾ ಇರುವೆನು' ಎಂದನು.

**ಕೌಶಿಕರು 'ನೀನು ಮಹಾಜ್ಞಾನಿಯಾಗಿದ್ದಿ. ಪಾಪರಹಿತನಾಗಿದ್ದಿ. ಜ್ಞಾನವೃದ್ಧ ನಾಗಿದ್ದಿ. ನಾನು ಹೋಗಿ ಬರುತ್ತೇನೆ. ನಿನಗೆ ಮಂಗಳವಾಗಲಿ.** ನಿನ್ನ ಧರ್ಮವು ನಿನ್ನನ್ನು ರಕ್ಷಿಸಲಿ. ಧರ್ಮದಲ್ಲಿ ಜಾಗತ್ರೆಯಿಂದ ಇರು' ಎಂದು ಹೇಳಿದರು. ಬೇಡನು ಕೈಮುಗಿದು ಹಾಗೆಯೇ ಆಗಲಿ' ಎಂದನು. **ಕೌಶಿಕರು ಆ ಬೇಡನಿಗೆ ಪ್ರದಕ್ಷಿಣೆ ಬಂದು ಹೊರಟರು.** ಮನೆಗೆ ಬರುವವರಾಗಿ ತಂದೆತಾಯಿಗಳ ಸೇವೆಯನ್ನು ಮಾಡಿದರು. ಕುರುಡರಾದ ತಂದೆತಾಯಿಗಳ ಸೇವೆಯನ್ನು ಮಾಡಿ ಸುಖವಾಗಿದ್ದರು.



## ಕುಚೇಲನ ಕಥೆ [1]

ಶ್ರೀಕೃಷ್ಣಪರಮಾತ್ಮನಿಗೆ ಮಿತ್ರನಾದ ಒಬ್ಬ ಬ್ರಾಹ್ಮಣನಿದ್ದನು. ಅವನ ಹೆಸರು ಕುಚೇಲ ಎಂದು. ಅವನಿಗೇನೇ ಆಮೇಲೆ ಸುಧಾಮ ಎಂದು ಹೆಸರು ಬರುವುದು. ಕುಚೇಲನು ತುಂಬಾ ಬಡವನು. ವೈರಾಗ್ಯವುಳ್ಳವನಾಗಿದ್ದನು. ಜಿತೇಂದ್ರಿಯನಾಗಿದ್ದನು. ದೈವೇಚ್ಛೆಯಿಂದ ದೊರೆಯುವ ಪದಾರ್ಥದಿಂದಲೇ ಜೀವನವನ್ನು ನಡೆಸುತ್ತಿದ್ದನು. ಒಂದು ದಿನದಲ್ಲಿ ಆ ಬ್ರಾಹ್ಮಣನ ಪತ್ನಿಯು ಹಸಿವೆಯಿಂದ ಕೃಶಳಾಗಿದ್ದಳು. ಮುಖವು ಬಾಡಿಹೋಗಿತ್ತು. ಪತಿವ್ರತೆಯಾದ ಅವಳು ಹಸಿವೆಯಿಂದ ನಡುಗುತ್ತಾ ದರಿದ್ರನಾದ ತನ್ನ ಪತಿಯ ಬಳಿಗೆ ಬಂದು 'ಪೂಜ್ಯರೇ! ತಮಗೆ ಸಾಕ್ಷಾತ್‌ಲಕ್ಷ್ಮೀದೇವಿಗೆ ಪತಿಯಾದ

1. ಭಾಗ. X ಅ.98, 99

ಬ್ರಾಹ್ಮಣರಿಗೆ ರಕ್ಷಕನಾದ ಯಾದವಶ್ರೇಷ್ಠನಾದ ಶ್ರೀಭಗವಂತನು ಮಿತ್ರನಷ್ಟೆ! ಸಜ್ಜನರಿಗೆ ಆಶ್ರಯನಾದ ಆ ಭಗವಂತನ ಬಳಿಗೆ ನೀವು ಹೋಗಿರಿ. ಕುಟುಂಬಿಯಾದ ಶ್ರಮಪಡುತ್ತಿರುವ ನಿಮಗೆ ಆ ಭಗವಂತಬೇಕಾದ ಹಣವನ್ನು ಕೊಡುವನು. ಯಾದವರಿಗೆಲ್ಲಾ ಪ್ರಭುವಾದ ಆ ಮಹಾಮಹಿಮನು ಈಗ ದ್ವಾರಕಾಪಟ್ಟಣದಲ್ಲಿ ಇರುವನು. ತನ್ನ ಪಾದದ್ವಯವನ್ನು ಸ್ಮರಿಸುವವರಿಗೆ ತನ್ನನ್ನೇ ಕೊಡುವನು. ಹಣವನ್ನಾಗಲೀ ಇತರ ಇಷ್ಟ ಪದಾರ್ಥಗಳನ್ನಾಗಲೀ ಕೊಡದೆ ಇರುವನೇ!' ಎಂದು ಹೇಳಿಕೊಂಡಳು.

ಈರೀತಿಯಾಗಿ ಆ ಪತಿವ್ರತೆಯು ಅನೇಕಬಾರಿ ಪ್ರಾರ್ಥಿಸಲು ಕುಚೇಲನು ಉತ್ತಮಕೀರ್ತಿಯುಳ್ಳ ಭಗವಂತನ ದರ್ಶನವಾಗುವುದೇ ಪರಮಲಾಭವು ಎಂದು ಕೊಂಡು ಭಗವಂತನಿದ್ದಲ್ಲಿಗೆ ಹೋಗಲು ಮನಸ್ಸು ಮಾಡಿದನು. ಕಲ್ಯಾಣಿ! ಭಗವಂತ ನಿದ್ದಲ್ಲಿಗೆ ಹೋಗುವಾಗ ಕಾಣಿಕೆಯಾಗಿ ತೆಗೆದುಕೊಂಡು ಹೋಗಲು ಏನಾದರೂ ಮನೆಯಲ್ಲಿ ಇದ್ದರೆ ಕೊಡು' ಎಂದನು. ಅವಳು ಬ್ರಾಹ್ಮಣರ ಮನೆಯಲ್ಲಿ ಬೇಡಿ ನಾಲ್ಕು ಹಿಡಿ ಅವಲಕ್ಕಿಯನ್ನು ತಂದು ಹರಕುವಸ್ತ್ರದ ತುಂಡಿನಲ್ಲಿ ಕಟ್ಟಿ ಗಂಡನ ಕೈಯಲ್ಲಿ ಕೊಟ್ಟಳು. ಬ್ರಾಹ್ಮಣಶ್ರೇಷ್ಠನು ಅದನ್ನು ಹಿಡಿದುಕೊಂಡು ಹೋದನು. ಭಗವಂತನ ದರ್ಶನವು ಹೇಗೆ ನನಗೆ ಆಗುವುದು ಎಂದು ಯೋಚಿಸುತ್ತಾ ದ್ವಾಪಕಾಪುರಕ್ಕೆ ಹೋದನು. ಅಲ್ಲಿ ಅನೇಕ ಗೋಪುರಗಳನ್ನು ದಾಟಿ ಯಾದವರ ಅನೇಕ ಮನೆಗಳನ್ನು ನೋಡುತ್ತಾ ಬಂದು ಭಗವಂತನ ಹದಿನಾರು ಸಾವಿರ ನೂರ ಎಂಟು ಸ್ತ್ರೀಯರ ಮನೆಗಳ ಮಧ್ಯದಲ್ಲಿ ಒಂದು ಮನೆಯನ್ನು ಮುಕ್ತನಾದವನು ಭಗವಂತನನ್ನು ಪ್ರವೇಶಿಸುವಂತೆ ಪ್ರವೇಶಿಸಿದನು.

ಆಗ ಶ್ರೀಕೃಷ್ಣ ಪರಮಾತ್ಮನು ತನ್ನ ಪತ್ನಿಯೊಡನೆ ಮಂಚದಲ್ಲಿ ಕೂತಿದ್ದನು. ದೂರದಲ್ಲೇ ಬ್ರಾಹ್ಮಣನನ್ನು ಕೂಡಲೇ ಎದ್ದು ಬಂದು ಮಿತ್ರನಾದ ಆ ಬ್ರಾಹ್ಮಣನನ್ನು ಎರಡು ಕೈಗಳಿಂದ ಹಿಡಿದು ಆಲಂಗಿಸಿದನು. ಭಗವಂತನು ಕಣ್ಣುಗಳಲ್ಲಿ ಆನಂದ ಬಾಷ್ಪಗಳನ್ನು ಸುರಿಸಿದನು. ತರುವಾಯ ಬ್ರಾಹ್ಮಣನನ್ನು ಮಂಚದಲ್ಲಿ ಕೂತುಕೊಳ್ಳಿಸಿ ಪಾದಗಳನ್ನು ತೊಳೆದು ಆ ನೀರನ್ನು ತಲೆಯಮೇಲೆ ಹಾಕಿಕೊಂಡನು. ದಿವ್ಯವಾದ ಗಂಧವನ್ನು ಹಚ್ಚಿದನು. ಒಳ್ಳೇ ಧೂಪದೀಪಗಳನ್ನು ಇಟ್ಟನು. ತಾಂಬೂಲ ಇತ್ಯಾದಿ ಗಳನ್ನು ಕೊಟ್ಟು ಬರಬೇಕು ಎಂದನು. ಹರಕುವಸ್ತ್ರವನ್ನು ಧರಿಸಿರುವ ಕಡ್ಡಿಯಂತೆ ಸಪುರವಾಗಿರುವ ಎಲುಬು ಚರ್ಮಮಾತ್ರವುಳ್ಳ ಆ ಬ್ರಾಹ್ಮಣನಿಗೆ ಭಗವಂತನ ಅಭಿಪ್ರಾಯದಂತೆ ಪರಮಾತ್ಮನ ಪತ್ನಿಯಾದ ಶೈಬ್ಯಾದೇವಿಯು ಚಾಮರದಿಂದ

ಬೀಸಿದರು. ಅಂತಃಪುರದಲ್ಲಿ ಇದ್ದ ಜನರೆಲ್ಲರೂ ಈರೀತಿಯಾಗಿ ಆ ಬ್ರಾಹ್ಮಣನಿಗೆ ಭಗವಂತನು ಸತ್ಕರಿಸುವುದನ್ನು ನೋಡಿ ಆಶ್ಚರ್ಯವನ್ನು ಹೊಂದಿದರು. ದರಿದ್ರ ನಾದ ಯಾಚಕನಾದ ನಿಂದ್ಯನಾದ ಅಧಮನಾದ ಈ ಬ್ರಾಹ್ಮಮನು ಏನು ಪುಣ್ಯ ಮಾಡಿರುವನೋ' ಮೂರು ಲೋಕಗಳಿಗೂ ಗುರುವಾದ ಪರಮಾತ್ಮನು ಅವನನ್ನು ಸತ್ಕರಿಸುತ್ತಿರುವನು. ಮಂಚದಲ್ಲಿ ಕೂತಿರುವ ಶ್ರೀದೇವಿಯನ್ನೂ ಬಿಟ್ಟು ಈ ಬ್ರಾಹ್ಮಣನನ್ನು ಆಲಿಂಗನ ಮಾಡಿರುವನು. ಎಂದು ಜನರೆಲ್ಲರೂ ಹೇಳಿಕೊಂಡರು. ತರುವಾಯ ಬ್ರಾಹ್ಮಣನೂ ಕೃಷ್ಣಪರಮಾತ್ಮನೂ ತಾವು ಗುರುಕುಲವಾಸ ಮಾಡಿದ ಕಥೆಯನ್ನು ಹೇಳಿಕೊಂಡರು.

ಭಗವಂತನು ಸರ್ವಜ್ಞನಾದರೂ ಲೋಕದ ಜನರಂತೆ 'ಪೂಜ್ಯರೇ! ನೀವು ಗುರುಗಳಿಗೆ ದಕ್ಷಿಣೆಕೊಟ್ಟು ಗುರುಕುಲ ವಾಸವನ್ನು ಮುಗಿಸಿಕೊಂಡು ಹೋದವರು. ಸರಿಯಾದ ಕನ್ಯೆಯನ್ನು ನೋಡಿ ಮದುವೆಯಾಗಿರುವಿರಾ? ನಿಮಗೆ ಅನೇಕವಾಗಿ ವಿಷಯದಲ್ಲಿ ಮನಸ್ಸು ಆಸಕ್ತವಾಗಿಲ್ಲ. ಅದು ನನಗೆ ತಿಳಿದಿರುವುದು. ಆದರೂ ತಮ್ಮ ಪ್ರಾರಬ್ಧಕರ್ಮವನ್ನು ಕಳೆದುಕೊಳ್ಳುವುದಕ್ಕಾಗಿ ವಿಷಯವನ್ನು ಭೋಗಿಸುವುದು ಉಂಟು. ನಮ್ಮ ಗುರುಕುಲವಾಸದ ಸ್ಮರಣೆಯು ನಿಮಗೆ ಇದೆಯೇ? ಗುರು ಗಳಿಂದಲೇ ಜ್ಞಾನವು ಬರಬೇಕು. ಒಂದು ದಿವಸ ನಮ್ಮ ಗುರುಪತ್ನಿಗಳು ಕಟ್ಟಿಗೆಯನ್ನು ತರಲಿಕ್ಕೆ ಹೇಳಿದ್ದರು. ನಾವು ಕಟ್ಟಿಗೆಗಾಗಿ ಕಾಡಿಗೆ ಹೋಗಿರುವ ಸಮಯ ಒಳ್ಳೇ ಗಾಳಿ ಮಳೆಗಳು ಬಂದವು. ಸೂರ್ಯನೂ ಮುಳುಗಿದನು. ಮಳೆಯಿಂದ ಎತ್ತರ ತಗ್ಗುಪ್ರದೇಶಗಳೂ ತಿಳಿಯಲಿಲ್ಲ. ನಾವು ಗಾಳಿಮಳೆಗೆ ಸಿಕ್ಕಿ ಶ್ರಮಪಡುವವರಾಗಿ ದಿಕ್ಕು ತಿಳಿಯದೆ ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದುಕೊಂಡು ತಿರುಗುತ್ತಿದ್ದೆವು. ಇದನ್ನು ತಿಳಿದು ಸೂರ್ಯೋದಯವಾಗಲು ನಮ್ಮ ಗುರುಗಳಾದ ಸಾಂದೀಪನಿ ಆಚಾರ್ಯರು ಶಿಷ್ಯರಾದ ನಮ್ಮನ್ನು ಹುಡುಕುತ್ತಾ ಕಾಣದೆ ಅಳುತ್ತಾ ಬಂದರು. ನಮ್ಮನ್ನು ನೋಡಿ 'ಆಹಾ ಮಕ್ಕಳೇ! ನನಗೋಸ್ಕರ ನೀವು ತುಂಬಾ ದುಃಖವನ್ನು ಹೊಂದಿದಿರಿ. ಜನರಿಗೆಲ್ಲಾ ದೇಹದ ಮೇಲೆ ಹೆಚ್ಚಾದ ಪ್ರೀತಿಯಿರುವುದು. ನೀವು ನನಗಾಗಿ ದೇಹದ ಮೇಲಿನ ಅಭಿಮಾನವನ್ನು ಬಿಟ್ಟು ಸೇವಿಸಿರುವಿರಿ. ನಿಮ್ಮ ಮೇಲೆ ನಾನು ಸಂತುಷ್ಟನಾಗಿರುವೆನು. ನಿಮ್ಮ ಮನಸ್ಸಿನ ಅಭಿಲಾಷೆಯು ಸಂಪೂರ್ಣವಾಗಲಿ. ನಿಮಗೆಲ್ಲಾ ವೇದಗಳೂ ಹೊಳೆಯಲಿ ಎಂದು ಅನುಗ್ರಹಿಸಿದರು. ಈರೀತಿಯಾಗಿ ನಾವು ಗುರುಗಳ ಮನೆಯಲ್ಲಿ ಇರುವಾಗ ಅನೇಕ ವಿಷಯಗಳು ನಡೆದವು. ಗುರುಗಳ ಅನುಗ್ರಹದಿಂದಲೇ ಪುರುಷನು ಕೃತಾರ್ಥನಾಗುವನು' ಎಂದು ಹೇಳಿದನು.

ಅದಕ್ಕೆ ಬ್ರಾಹ್ಮಣನು 'ಸತ್ಯಕಾಮನಾದ ನಿನ್ನೊಡನೆ ಗುರುಕುಲವಾಸವನ್ನು ಮಾಡಿದ ನಮಗೆ ಏನು ಕಡಿಮೆ? ನೀನೇ ವೇದಗಳಿಂದ ಮುಖ್ಯಪ್ರತಿಪಾದ್ಯನು. ನೀನು ಗುರುಕುಲವಾಸ ಮಾಡಿದ್ದು ಕೇವಲ ಜನರ ಶಿಕ್ಷೆಗೋಸ್ಕರವೇ' ಎಂದು ಹೇಳಿದನು.

ಈರೀತಿಯಾಗಿ ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನಾದ ಸರ್ವರ ಮನಸ್ಸಿನ ಅಭಿಪ್ರಾಯವನ್ನು ತಿಳಿದವನಾದ ಶ್ರೀಪರಮಾತ್ಮನು ಬ್ರಾಹ್ಮಣನೊಡನೆ ಮಾತಾಡುತ್ತಾ ನಗುತ್ತಾ 'ಪೂಜ್ಯರೇ! ನೀವು ಬರುವಾಗ ಮನೆಯಿಂದ ಏನು ಕಾಣಿಕೆಯನ್ನು ತಂದಿರುವಿರಿ' ಭಕ್ತರು ಸ್ವಲ್ಪವನ್ನು ತಂದರೂ ಅದು ನನಗೆ ಮಹತ್ತೇ ಆಗುವುದು. ಭಕ್ತಿಯಿಲ್ಲದೆ ಇರುವವರು ಹೆಚ್ಚಿಗೆ ತಂದುಕೊಟ್ಟರೇ ಅದು ಸ್ವಲ್ಪವೇ ಆಗುವುದು. ಅನಿಷಿದ್ಧವಾದ ಒಂದು ಎಲೆಯನ್ನೋ ಪುಷ್ಪವನ್ನೋ ಹಣ್ಣನ್ನೋ ಅಥವಾ ಒಂದಿಷ್ಟು ನೀರನ್ನೋ ನನಗೆ ಭಕ್ತಿಯಿಂದ ಕೊಟ್ಟರೆ ಭಕ್ತಿಯಿಂದ ಕೊಟ್ಟ ಅದನ್ನು ನಾನು ಸ್ವೀಕರಿಸುವೆನು' ಎಂದು ಹೇಳಿದನು.

ಆಗ 'ಬ್ರಾಹ್ಮಣನು ನಾಚಿಕೆಯುಳ್ಳವನಾಗಿ ಮುಖವನ್ನು ತಗ್ಗಿಸಿಕೊಂಡು ತಂದಿರುವ ಅವಲಕ್ಕಿಯನ್ನು ಕೊಡಲಿಲ್ಲ. ಸರ್ವರ ಮನಸ್ಸಿನ ಅಭಿಪ್ರಾಯವನ್ನೂ ತಿಳಿದವನಾದ ಭಗವಂತನು 'ಇವನು ಸಂಪತ್ತು ಬೇಕು ಎಂದು ನನ್ನನ್ನು ಭಜನೆ ಮಾಡಿಲ್ಲ. ಪತಿವ್ರತೆಯಾದ ಹೆಂಡತಿಗೆ ಪ್ರಿಯವನ್ನು ಮಾಡಬೇಕೆಂದು ಬಂದಿರುವನು. ಇವನಿಗೆ ನಾನು ದೇವತೆಗಳಿಗೂ ದುರ್ಲಭವಾದ ಸಂಪತ್ತನ್ನು ಕೊಡುವೆನು' ಎಂದು ಮನಸ್ಸಿನಲ್ಲಿ ಹೇಳಿಕೊಂಡು 'ಇದೇನು ವಸ್ತ್ರದಲ್ಲಿ ಕಟ್ಟಿ ತಂದಿರುವಿರಿ' ಎಂದು ಹೇಳುತ್ತಾ ಆ ಅವಲಕ್ಕಿಯ ಗಂಟನ್ನು ಎಳೆದುಕೊಂಡನು. ಅವಲಕ್ಕಿಯ ಗಂಟಿನಿಂದ ಒಂದು ಮುಷ್ಟಿ ಅವಲಕ್ಕಿಯನ್ನು ತಿಂದವನಾಗಿ ಇನ್ನೊಂದು ಮುಷ್ಟಿಯನ್ನು ತೆಗೆದನು. ಆಗ ಬೇಗನೇ ರುಕ್ಮಿಣೀದೇವರು ಬಂದು ನೀವು ಇಷ್ಟು ತಿಂದದ್ದೇ ಈ ಬ್ರಾಹ್ಮಣನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿ ಸರ್ವಸಂಪತ್ತುಗಳನ್ನು ಕೊಡಲಿಕ್ಕೆ ಸಾಕು ಎಂದು ಹೇಳುತ್ತಾ ಕೈ ಹಿಡಿದರು. ಬ್ರಾಹ್ಮಣನು ಆ ರಾತ್ರಿ ಭಗವಂತನ ಊಟ ತಿಂಡಿಗಳನ್ನು ಮಾಡಿ ಸುಖವಾಗಿ ವಾಸಮಾಡಿದನು. ತನ್ನನ್ನು ಇಂದ್ರನಂತೆ ತಿಳಿದುಕೊಂಡನು.

ಮರುದಿವಸವಾಗಲು ತನ್ನ ಮನೆಗೆ ಹೊರಟನು. ಪರಮಾತ್ಮನು ನಮಸ್ಕರಿಸಿದನು. ಬಹುದೂರ ಹಿಂದೆ ಬಂದು ಕಳುಹಿಸಿಕೊಟ್ಟನು. ದೇವರಾಗಿ ಕುಚೇಲನಿಗೆ ಹಣವನ್ನು ಕೊಡಲಿಲ್ಲ. ತಾನಾಗಿ ಕುಚೇಲನು ಯಾಚಿಸಲಿಲ್ಲ. ಲಜ್ಜೆಯನ್ನು ಹೊಂದುತ್ತಾ ದೊಡ್ಡವರ ದರ್ಶನವಾಯಿತೆಂದು ಎಂದೇ ಸಂತೋಷಪಡುತ್ತಾ

ಬೀಸಿದರು. ಅಂತಃಪುರದಲ್ಲಿ ಇದ್ದ ಜನರೆಲ್ಲರೂ ಈರೀತಿಯಾಗಿ ಆ ಬ್ರಾಹ್ಮಣನಿಗೆ ಭಗವಂತನು ಸತ್ಕರಿಸುವುದನ್ನು ನೋಡಿ ಆಶ್ಚರ್ಯವನ್ನು ಹೊಂದಿದರು. ದರಿದ್ರ ನಾದ ಯಾಚಕನಾದ ನಿಂದ್ಯನಾದ ಅಧಮನಾದ ಈ ಬ್ರಾಹ್ಮಮನು ಏನು ಪುಣ್ಯಮಾಡಿರುವನೋ' ಮೂರು ಲೋಕಗಳಿಗೂ ಗುರುವಾದ ಪರಮಾತ್ಮನು ಅವನನ್ನು ಸತ್ಕರಿಸುತ್ತಿರುವನು. ಮಂಚದಲ್ಲಿ ಕೂತಿರುವ ಶ್ರೀದೇವಿಯನ್ನೂ ಬಿಟ್ಟು ಈ ಬ್ರಾಹ್ಮಣನನ್ನು ಆಲಿಂಗನ ಮಾಡಿರುವನು. ಎಂದು ಜನರೆಲ್ಲರೂ ಹೇಳಿಕೊಂಡರು. ತರುವಾಯ ಬ್ರಾಹ್ಮಣನೂ ಕೃಷ್ಣಪರಮಾತ್ಮನೂ ತಾವು ಗುರುಕುಲವಾಸ ಮಾಡಿದ ಕಥೆಯನ್ನು ಹೇಳಿಕೊಂಡರು.

ಭಗವಂತನು ಸರ್ವಜ್ಞನಾದರೂ ಲೋಕದ ಜನರಂತೆ 'ಪೂಜ್ಯರೇ! ನೀವು ಗುರುಗಳಿಗೆ ದಕ್ಷಿಣೆಕೊಟ್ಟು ಗುರುಕುಲ ವಾಸವನ್ನು ಮುಗಿಸಿಕೊಂಡು ಹೋದವರು. ಸರಿಯಾದ ಕನ್ಯೆಯನ್ನು ನೋಡಿ ಮದುವೆಯಾಗಿರುವಿರಾ? ನಿಮಗೆ ಅನೇಕವಾಗಿ ವಿಷಯದಲ್ಲಿ ಮನಸ್ಸು ಆಸಕ್ತವಾಗಿಲ್ಲ. ಅದು ನನಗೆ ತಿಳಿದಿರುವುದು. ಆದರೂ ತಮ್ಮ ಪ್ರಾರಬ್ಧಕರ್ಮವನ್ನು ಕಳೆದುಕೊಳ್ಳುವುದಕ್ಕಾಗಿ ವಿಷಯವನ್ನು ಭೋಗಿಸುವುದು ಉಂಟು. ನಮ್ಮ ಗುರುಕುಲವಾಸದ ಸ್ಮರಣೆಯು ನಿಮಗೆ ಇದೆಯೇ? ಗುರು ಗಳಿಂದಲೇ ಜ್ಞಾನವು ಬರಬೇಕು. ಒಂದು ದಿವಸ ನಮ್ಮ ಗುರುಪತ್ನಿಗಳು ಕಟ್ಟಿಗೆಯನ್ನು ತರಲಿಕ್ಕೆ ಹೇಳಿದ್ದರು. ನಾವು ಕಟ್ಟಿಗೆಗಾಗಿ ಕಾಡಿಗೆ ಹೋಗಿರುವ ಸಮಯ ಒಳ್ಳೇ ಗಾಳಿ ಮಳೆಗಳು ಬಂದವು. ಸೂರ್ಯನೂ ಮುಳುಗಿದನು. ಮಳೆಯಿಂದ ಎತ್ತರ ತಗ್ಗುಪ್ರದೇಶಗಳೂ ತಿಳಿಯಲಿಲ್ಲ. ನಾವು ಗಾಳಿಮಳೆಗೆ ಸಿಕ್ಕಿ ಶ್ರಮಪಡುವವರಾಗಿ ದಿಕ್ಕು ತಿಳಿಯದೆ ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದುಕೊಂಡು ತಿರುಗುತ್ತಿದ್ದೆವು. ಇದನ್ನು ತಿಳಿದು ಸೂರ್ಯೋದಯವಾಗಲು ನಮ್ಮ ಗುರುಗಳಾದ ಸಾಂದೀಪನಿ ಆಚಾರ್ಯರು ಶಿಷ್ಯರಾದ ನಮ್ಮನ್ನು ಹುಡುಕುತ್ತಾ ಕಾಣದೆ ಅಳುತ್ತಾ ಬಂದರು. ನಮ್ಮನ್ನು ನೋಡಿ 'ಆಹಾ ಮಕ್ಕಳೇ! ನನಗೋಸ್ಕರ ನೀವು ತುಂಬಾ ದುಃಖವನ್ನು ಹೊಂದಿದಿರಿ. ಜನರಿಗೆಲ್ಲಾ ದೇಹದ ಮೇಲೆ ಹೆಚ್ಚಾದ ಪ್ರೀತಿಯಿರುವುದು. ನೀವು ನನಗಾಗಿ ದೇಹದ ಮೇಲಿನ ಅಭಿಮಾನವನ್ನು ಬಿಟ್ಟು ಸೇವಿಸಿರುವಿರಿ. ನಿಮ್ಮ ಮೇಲೆ ನಾನು ಸಂತುಷ್ಟನಾಗಿರುವೆನು. ನಿಮ್ಮ ಮನಸ್ಸಿನ ಅಭಿಲಾಷೆಯು ಸಂಪೂರ್ಣವಾಗಲಿ. ನಿಮಗೆಲ್ಲಾ ವೇದಗಳೂ ಹೊಳೆಯಲಿ ಎಂದು ಅನುಗ್ರಹಿಸಿದರು. ಈರೀತಿಯಾಗಿ ನಾವು ಗುರುಗಳ ಮನೆಯಲ್ಲಿ ಇರುವಾಗ ಅನೇಕ ವಿಷಯಗಳು ನಡೆದವು. ಗುರುಗಳ ಅನುಗ್ರಹದಿಂದಲೇ ಪುರುಷನು ಕೃತಾರ್ಥನಾಗುವನು' ಎಂದು ಹೇಳಿದನು.

ಆದಕ್ಕೆ ಬ್ರಾಹ್ಮಣನು 'ಸತ್ಯಕಾಮನಾದ ನಿನ್ನೊಡನೆ ಗುರುಕುಲವಾಸವನ್ನು ಮಾಡಿದ ನಮಗೆ ಏನು ಕಡಿಮೆ? ನೀನೇ ವೇದಗಳಿಂದ ಮುಖ್ಯಪ್ರತಿಪಾದ್ಯನು. ನೀನು ಗುರುಕುಲವಾಸ ಮಾಡಿದ್ದು ಕೇವಲ ಜನರ ಶಿಕ್ಷೆಗೋಸ್ಕರವೇ' ಎಂದು ಹೇಳಿದನು.

ಈರೀತಿಯಾಗಿ ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನಾದ ಸರ್ವರ ಮನಸ್ಸಿನ ಅಭಿಪ್ರಾಯವನ್ನು ತಿಳಿದವನಾದ ಶ್ರೀಪರಮಾತ್ಮನು ಬ್ರಾಹ್ಮಣನೊಡನೆ ಮಾತಾಡುತ್ತಾ ನಗುತ್ತಾ 'ಪೂಜ್ಯರೇ! ನೀವು ಬರುವಾಗ ಮನೆಯಿಂದ ಏನು ಕಾಣಿಕೆಯನ್ನು ತಂದಿರುವಿರಿ' ಭಕ್ತರು ಸ್ವಲ್ಪವನ್ನು ತಂದರೂ ಅದು ನನಗೆ ಮಹತ್ತೇ ಆಗುವುದು. ಭಕ್ತಿಯಿಲ್ಲದೆ ಇರುವವರು ಹೆಚ್ಚಿಗೆ ತಂದುಕೊಟ್ಟರೇ ಅದು ಸ್ವಲ್ಪವೇ ಆಗುವುದು. ಅನಿಷಿದ್ಧವಾದ ಒಂದು ಎಲೆಯನ್ನೋ ಪುಷ್ಪವನ್ನೋ ಹಣ್ಣನ್ನೋ ಅಥವಾ ಒಂದಿಷ್ಟು ನೀರನ್ನೋ ನನಗೆ ಭಕ್ತಿಯಿಂದ ಕೊಟ್ಟರೆ ಭಕ್ತಿಯಿಂದ ಕೊಟ್ಟ ಅದನ್ನು ನಾನು ಸ್ವೀಕರಿಸುವೆನು' ಎಂದು ಹೇಳಿದನು.

ಆಗ 'ಬ್ರಾಹ್ಮಣನು ನಾಚಿಕೆಯುಳ್ಳವನಾಗಿ ಮುಖವನ್ನು ತಗ್ಗಿಸಿಕೊಂಡು ತಂದಿರುವ ಅವಲಕ್ಕಿಯನ್ನು ಕೊಡಲಿಲ್ಲ. ಸರ್ವರ ಮನಸ್ಸಿನ ಅಭಿಪ್ರಾಯವನ್ನೂ ತಿಳಿದವನಾದ ಭಗವಂತನು 'ಇವನು ಸಂಪತ್ತು ಬೇಕು ಎಂದು ನನ್ನನ್ನು ಭಜನೆ ಮಾಡಿಲ್ಲ. ಪತಿವ್ರತೆಯಾದ ಹೆಂಡತಿಗೆ ಪ್ರಿಯವನ್ನು ಮಾಡಬೇಕೆಂದು ಬಂದಿರುವನು. ಇವನಿಗೆ ನಾನು ದೇವತೆಗಳಿಗೂ ದುರ್ಲಭವಾದ ಸಂಪತ್ತನ್ನು ಕೊಡುವೆನು' ಎಂದು ಮನಸ್ಸಿನಲ್ಲಿ ಹೇಳಿಕೊಂಡು 'ಇದೇನು ವಸ್ತ್ರದಲ್ಲಿ ಕಟ್ಟಿ ತಂದಿರುವಿರಿ' ಎಂದು ಹೇಳುತ್ತಾ ಆ ಅವಲಕ್ಕಿಯ ಗಂಟನ್ನು ಎಳೆದುಕೊಂಡನು. ಅವಲಕ್ಕಿಯ ಗಂಟಿನಿಂದ ಒಂದು ಮುಷ್ಟಿ ಅವಲಕ್ಕಿಯನ್ನು ತಿಂದವನಾಗಿ ಇನ್ನೊಂದು ಮುಷ್ಟಿಯನ್ನು ತೆಗೆದನು. ಆಗ ಬೇಗನೇ ರುಕ್ಮಿಣೀದೇವರು ಬಂದು ನೀವು ಇಷ್ಟು ತಿಂದದ್ದೇ ಈ ಬ್ರಾಹ್ಮಣನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿ ಸರ್ವಸಂಪತ್ತುಗಳನ್ನು ಕೊಡಲಿಕ್ಕೆ ಸಾಕು ಎಂದು ಹೇಳುತ್ತಾ ಕೈ ಹಿಡಿದರು. ಬ್ರಾಹ್ಮಣನು ಆ ರಾತ್ರಿ ಭಗವಂತನ ಊಟ ತಿಂಡಿಗಳನ್ನು ಮಾಡಿ ಸುಖವಾಗಿ ವಾಸಮಾಡಿದನು. ತನ್ನನ್ನು ಇಂದ್ರನಂತೆ ತಿಳಿದುಕೊಂಡನು.

ಮರುದಿವಸವಾಗಲು ತನ್ನ ಮನೆಗೆ ಹೊರಟನು. ಪರಮಾತ್ಮನು ನಮಸ್ಕರಿಸಿದನು. ಬಹುದೂರ ಹಿಂದೆ ಬಂದು ಕಳುಹಿಸಿಕೊಟ್ಟನು. ದೇವರಾಗಿ ಕುಚೇಲನಿಗೆ ಹಣವನ್ನು ಕೊಡಲಿಲ್ಲ. ತಾನಾಗಿ ಕುಚೇಲನು ಯಾಚಿಸಲಿಲ್ಲ. ಲಜ್ಜೆಯನ್ನು ಹೊಂದುತ್ತಾ ದೊಡ್ಡವರ ದರ್ಶನವಾಯಿತೆಂದು ಎಂದೇ ಸಂತೋಷಪಡುತ್ತಾ

ಹೋದನು. ಹೋಗುವಾಗ ಬ್ರಾಹ್ಮಣನು 'ಭಗವಂತನಿಗೆ ಬ್ರಾಹ್ಮಣರಲ್ಲಿ ಏನು ಪ್ರೇಮ! ಅತಿದರಿದ್ರ ಬ್ರಾಹ್ಮಣನಾದ ನನ್ನನ್ನು ಸಾಕ್ಷಾಲ್ಲಕ್ಷ್ಮೀದೇವಿಯರನ್ನು ಧರಿಸಿರುವ ಎದೆಯಿಂದ ಆಲಿಂಗನೆ ಮಾಡಿದನು. ಪಾಪಿಯಾದ ದರಿದ್ರನಾದ ನಾನು ಎಲ್ಲಿ? ಆ ಶ್ರೀನಿವಾಸನೆಲ್ಲಿ? ಬ್ರಾಹ್ಮಣ ಎಂದು ನನ್ನನ್ನು ಎರಡು ಕೈಗಳಿಂದಲೂ ಕಟ್ಟಿಗೊಂಡನಲ್ಲಾ! ಅಣ್ಣತಮ್ಮಂದಿರನ್ನು ಕೂತುಕೊಳ್ಳಿಸುವಂತೆ ಹೆಂಡತಿಯು ಕೂತಿದ್ದ ಮಂಚದಲ್ಲಿ ನನ್ನನ್ನು ಕೂತುಕೊಳ್ಳಿಸಿದನಲ್ಲಾ! ತನ್ನ ಪತ್ನಿಯೊಡನೆ ನನಗೆ ಬೀಸಲಿಕ್ಕೆ ಹೇಳಿದನಲ್ಲಾ! ದೇವತೆಗಳಿಗೆಲ್ಲಾ ದೇವತೆಯಾದ ಬ್ರಾಹ್ಮಣರಲ್ಲಿ ಪ್ರೇಮವುಳ್ಳ ಪರಮಾತ್ಮನು ನನ್ನ ಕಾಲನ್ನು ಒತ್ತಿದನಲ್ಲಾ! ಸ್ವರ್ಗಕ್ಕೂ ಮೋಕ್ಷಕ್ಕೂ ಈಲೋಕದ ಸಂಪತ್ತಿಗೂ ಆ ಭಗವಂತಪಾದಗಳ ಪೂಜೆಯೇ ಮೂಲಕಾರಣವು. ಇಷ್ಟರವರೆಗೆ ದರಿದ್ರನಾದ ಈ ಬ್ರಾಹ್ಮಣನಿಗೆ ಈ ಹಣವನ್ನು ಕೊಟ್ಟುಬಿಟ್ಟರೆ ಮದವುಳ್ಳವನಾಗಿ ತನ್ನನ್ನು ಸ್ಮರಿಸಲಾರನು ಎಂದು ಕರುಣೆಯುಳ್ಳವನಾಗಿ ಭಗವಂತನು ನನಗೆ ಸ್ವಲ್ಪವೂ ಹಣವನ್ನು ಕೊಡಲಿಲ್ಲ' ಎಂದು ಯೋಚಿಸುತ್ತಾ ತನ್ನ ಮನೆಯ ಬಳಿಗೆ ಬಂದನು.

ಸೂರ್ಯಚಂದ್ರರಂತೆ ಪ್ರಕಾಶಮಾನಗಳಾದ ವಿಮಾನಗಳಿಂದ ಸುತ್ತಲೂ ಕೂಡಿರುವ ವಿಚಿತ್ರ ಉಪವನಗಳಿಂದ ಕೂಡಿರುವ ಅಲಂಕೃತರಾದ ಸ್ತ್ರೀಪುರುಷರಿಂದ ಕೂಡಿ ದೊಡ್ಡ ಮನೆಯನ್ನು ನೋಡಿ ಇದು ಯಾವ ಸ್ಥಾನವು ಹೇಗೆ ಉಂಟಾಯಿತು? ಎಂದು ಯೋಚನೆ ಮಾಡುತ್ತಿದ್ದನು. ಆಗ ದೇವತೆಗಳಂತೆ ಪ್ರಕಾಶಮಾನರಾದ ಹೆಂಗಸರೂ ಗಂಡಸರೂ ಮಹತ್ತಾದ ವಾದ್ಯಘೋಷದಿಂದ ಬ್ರಾಹ್ಮಣನನ್ನು ಕರಕೊಂಡು ಬಂದರು. ಪತಿಯು ಬಂದಿರುವುದನ್ನು ಕೇಳಿ ಪರಮಸಂತೋಷದಿಂದ ಶ್ರೀದೇವಿಯಂತೆ ಪರಮರೂಪವತಿಯಾಗಿ ಬೇಗನೇ ಮನೆಯಿಂದ ಹೊರಗೆ ಬಂದಳು. ಪತಿವ್ರತೆಯು ಗಂಡನನ್ನು ನೋಡಿ ಕಣ್ಣಲ್ಲಿ ಆನಂದಬಾಷ್ಪವನ್ನು ಸುರಿಸುತ್ತಾ ಕಣ್ಣನ್ನು ಮುಚ್ಚಿ ನಮಸ್ಕರಿಸಿದಳು. ಮನಸ್ಸಿನಿಂದಲೇ ಆಲಂಗಿಸಿದಳು. ಬ್ರಾಹ್ಮಣನು ಬಂಗಾರದ ಸರಗಳನ್ನು ಧರಿಸಿರುವ ದಾಸಿಯರ ಮಧ್ಯದಲ್ಲಿ ವಿಮಾನದಲ್ಲಿ ಸಂಚರಿಸುವ ದೇವತಾಸ್ತ್ರೀಯಂತೆ ಪ್ರಕಾಶಿಸುತ್ತಿರುವ ತನ್ನ ಹೆಂಡತಿಯನ್ನು ನೋಡಿ ಆಶ್ಚರ್ಯಪಟ್ಟನು. ಪ್ರೀತಳಾದ ಅವಳೊಡನೆ ತಾನು ಮನೆಯೊಳಗೆ ಹೋದನು. ನೂರಾರು ರತ್ನದ ಕಂಬಗಳು ಇವೆ. ಇಂದ್ರದೇವರ ಮನೆಯಂತೆ ಇದೆ. ಹಾಲಿನ ನೊರೆಯಂತೆ ಇರುವ ಹಾಸಿಗೆಗಳು ಆನೆಯ ದಂತಗಳಿಂದ ಮಾಡಿರುವ ಬಂಗಾರ ಕಟ್ಟಿದ ಮಂಚಗಳು ಬಂಗಾರದ ಹಿಡಿಯುಳ್ಳ ಚಾಮರಗಳು ಬಂಗಾರದ ಆಸನಗಳು ಹೂವಿನ ಮಾಲೆಗಳು ವಸ್ತ್ರಗಳು ಆಭರಣಗಳು ಮುತ್ತಿನ ಸರಗಳು ಅಲ್ಲಲ್ಲಿ

ಜೋಲುತ್ತಿರುವುವು. ಸ್ಫಟಿಕಮಣಿಯ ಗೋಡೆಗಳು ಮರಕತರತ್ನದ ಗೋಟೆಗಳು ರತ್ನಮಯದೀಪಗಳೂ ಸ್ತ್ರೀರತ್ನಗಳೂ ಪ್ರಕಾಶಿಸುತ್ತಾರೆ.

ಬ್ರಾಹ್ಮಣನು ಈ ಪ್ರಕಾರವಾದ ಸಂಪತ್ತನ್ನು ನೋಡಿ ಸಂಭ್ರಮರಹಿತನಾಗಿ ಇದೆಲ್ಲವೂ ಭಗವಂತನು ಕೊಟ್ಟ ಸಂಪತ್ತು ಎಂದು ತಿಳಿದುಕೊಂಡನು. ಅತ್ಯಂತ ದೌರ್ಭಾಗ್ಯಶಾಲಿಯಾದ ಪರಮ ದರಿದ್ರನಾದ ನನಗೆ ಇಷ್ಟು ಸಂಪತ್ತು ಬರಲಿಕ್ಕೆ ಕಾರಣವು ಆ ಭಗವಂತನ ದರ್ಶನವಲ್ಲದೆ ಬೇರೆ ಕಾರಣವಲ್ಲ. ಭಕ್ತರು ಸ್ವಲ್ಪ ಕೊಟ್ಟರೂ ಮಹಾತೇಜಸ್ವಿಯಾದ ಯಾದವರಿಗೆ ಪ್ರಭುವಾದ ನನ್ನ ಮಿತ್ರನಾದ ಭಗವಂತನು ಎದುರಲ್ಲಿ ಮಾತಾಡದೆ ಹಿಂದಿನಿಂದ ಅಕ್ಷಯವಾದ ಧನವನ್ನು ಕೊಡುವನು. ಭಕ್ತರು ಸ್ವಲ್ಪ ಕೊಟ್ಟರೂ ಅದನ್ನು ಬಹಳವಾಗಿ ಭಾವಿಸುವನು. ನಾನು ತೆಗೆದುಕೊಂಡು ಹೋಗಿರುವ ಒಂದು ಮುಷ್ಟಿ ಅವಲಕ್ಕಿಯನ್ನು ಆ ಮಹಾನುಭಾವನು ಪ್ರೀತಿಯಿಂದ ಸ್ವೀಕರಿಸಿದನು. ನನಗೆ ಒಂದೊಂದು ಜನ್ಮದಲ್ಲಿಯೂ ಆ ಭಗವಂತ ಮೈತ್ರಿಯೂ ದಾಸ್ಯವೂ ಉಂಟಾಗಲಿ. ಆ ಭಗವಂತನ ಭಕ್ತರ ಸಹವಾಸವು ಏರ್ಪಡಲಿ. ಸರ್ವಜ್ಞನಾದ ಭಗವಂತನು ದೀರ್ಘಜ್ಞಾನ ರಹಿತನಾದ ಎಂದರೆ ಸಂಪತ್ತು ಬಂದು ಬಿಟ್ಟರೆ ಅಹಂಕಾರವನ್ನು ಹೊಂದುವ ಅವಸ್ಥೆಯುಳ್ಳ ಭಕ್ತನಿಗೆ ವಿಚಿತ್ರಗಳಾದ ಸಂಪತ್ತನ್ನು ಕೊಡುವುದಿಲ್ಲ. ಏಕೆಂದರೆ ಅವನು ಕೆಟ್ಟುಹೋಗ ಬಾರದೆಂದು ಅವನ ಅಭಿಪ್ರಾಯವು' ಈ ಪ್ರಕಾರವಾಗಿಯೆಲ್ಲಾ ಯೋಚಿಸುತ್ತಾ ಆ ಬ್ರಾಹ್ಮಣನು ಅಹಂಕಾರ ಮಮಕಾರಗಳನ್ನು ಬಿಟ್ಟು ಪತ್ನಿಯಿಂದ ಸಹಿತನಾಗಿ ದೇವರು ಕೊಟ್ಟ ವಿಷಯಗಳನ್ನು ಅನುಭವಿಸಿದನು. ಈರೀತಿಯಾಗಿ ಆಬ್ರಾಹ್ಮಣನು ಭಗವಂತನ ದರ್ಶನಮಾಡಿ ಅವನ ಧ್ಯಾನವನ್ನು ಮಾಡಿ ಬೇಗನೆ ಅವನ ಲೋಕವನ್ನು ಹೊಂದಿದನು.



## ಶೂದ್ರತಪಸ್ವಿ ಬ್ರಾಹ್ಮಣರ ಕಥೆ [1]

ಅನಧಿಕಾರಿಗಳಿಗೆ ಉಪದೇಶ ಮಾಡಬಾರದು. ಹಾಗೆ ಮಾಡುವುದರಿಂದ ಉಪದೇಶ ಮಾಡಿದವರಿಗೆ ಹಾನಿಯುಂಟಾಗುವುದು. ಅದಕ್ಕೊಂದು ಉದಾಹರಣೆಯು.

ಪೂರ್ವದಲ್ಲಿ ಹಿಮವತ್ಪರ್ವತದ ಸಮೀಪದಲ್ಲಿ ನಾನಾ ವೃಕ್ಷಗಳಿಂದ ಕೂಡಿದ ನಾನಾ ತಪಸ್ವಿಗಳಿಂದ ಕೂಡಿದ ಪವಿತ್ರವಾದ ತಪೋವನವಿತ್ತು. ಅಲ್ಲಿ ಯಾವಾಗಲೂ

1. ಮ.ಭಾ.ಅನು.ಪ. ಅ.10

ತಪಸ್ಸು ನಡೆಯುತ್ತಿರುವುದು. ವೇದಾಧ್ಯಯನ ಮಾಡುವ ಶಬ್ದವು ಕೇಳಿಸುತ್ತಿರುವುದು. ಅನೇಕ ಯತಿಗಳು ಅಲ್ಲಿ ಇದ್ದರು. ಆ ಸ್ಥಳಕ್ಕೆ ಒಬ್ಬ ಶೂದ್ರನು ಬಂದು ಮುನಿಗಳಿಂದ ಸತ್ಕೃತನಾದನು. ನಾನಾದೀಕ್ಷೆಯಿಂದ ಕೂಡಿದ ಆ ಬ್ರಾಹ್ಮಣರನ್ನು ನೋಡಿ ಬಹು ಸಂತೋಷವನ್ನು ಹೊಂದಿದನು. ತರುವಾಯ ಅವನಿಗೂ ತಪಸ್ಸು ಮಾಡಬೇಕೆಂದು ಬುದ್ಧಿಯುಂಟಾಯಿತು. ತರುವಾಯ ಕುಲಪತಿ ಅಂದರೆ ಶಿಷ್ಯರಿಗೆಲ್ಲಾ ಅನ್ನಾದಿಗಳನ್ನು ಹಾಕಿ ಪಾಠಹೇಳುತ್ತಿದ್ದ ಋಷಿಗಳ ಬಳಿಗೆ ಬಂದು ನನಗೆ ಸನ್ಯಾಸಿಯಾಗಬೇಕೆಂದು ಅಭಿಪ್ರಾಯವಿದೆ. ನನಗೂ ನಿಮ್ಮ ಮುಖದಿಂದ ಉಪದೇಶವನ್ನು ಹೊಂದಬೇಕೆಂಬ ಆಸೆಯಿದೆ. ನಾನು ಜಾತಿಯಲ್ಲಿ ಶೂದ್ರನು ನನಗೆ ಅನುಗ್ರಹವನ್ನು ಮಾಡಿ ಉಪದೇಶಿಸಬೇಕು' ಎಂದು ಹೇಳಿದನು.

ಅದಕ್ಕೆ ಆ ಕುಲಪತಿಯು 'ಶೂದ್ರನಾದವನು ಸನ್ಯಾಸಿಯಾಗಿ ಇರಲು ಸಾಧ್ಯವಲ್ಲ. ಉಪದೇಶಕ್ಕೂ ಯೋಗ್ಯನಲ್ಲ. ನಿನಗೆ ಅಭಿಪ್ರಾಯವಿದ್ದರೆ ಇಲ್ಲಿ ಸೇವಾ ಮಾಡುತ್ತಾ ಇರು. ಸೇವೆಯಿಂದಲೇ ಉತ್ತಮ ಲೋಕವನ್ನು ಹೊಂದುವಿ' ಎಂದರು.

ಈರೀತಿಯಾಗಿ ಹೇಳಲು ಶೂದ್ರನು 'ನಾನು ಏನು ಮಾಡಲಿ? ಧರ್ಮವನ್ನು ತಿಳಿದುಕೊಳ್ಳಬೇಕೆಂದು ತುಂಬಾ ಆಸೆಯಿದೆ. ಆಗಲಿ. ಹೀಗೆ ಮಾಡುವೆನು ಎಂದು ಹೇಳಿ ಅಲ್ಲಿಂದ ಸ್ವಲ್ಪದೂರ ಹೋಗಿ ಅಲ್ಲಿ ಒಂದು ಆಶ್ರಮವನ್ನು ಮಾಡಿಕೊಂಡನು. ಅಲ್ಲಿಯೇ ಕಟ್ಟೆ ಒಂದು ದೇವಾಲಯ ಇತ್ಯಾದಿಗಳನ್ನು ಮಾಡಿ ತಾನು ನಿಯಮದಿಂದ ಇರಲಿಕ್ಕೆ ಆರಂಭಿಸಿದನು. ನಿತ್ಯವೂ ಸ್ನಾನ ಮಾಡುವನು. ದೇವಾಲಯದಲ್ಲಿ ಪೂಜಾ ಮಾಡುತ್ತಿದ್ದನು. ಹಣ್ಣು ಮಾತ್ರ ಆಹಾರವುಳ್ಳವನಾಗಿ ಜಿತೇಂದ್ರಿಯನಾಗಿದ್ದನು. ಫಲಗಳಿಂದ ಬಂದ ಅತಿಥಿಗಳಿಗೆ ಪೂಜಿಸುತ್ತಿದ್ದನು. ಈರೀತಿಯಾಗಿ ಬಹುಕಾಲವು ಕಳೆಯಿತು. ಒಂದು ದಿವಸದಲ್ಲಿ ಅದೇ ಕುಲಪತಿಯು ಅಲ್ಲಿಗೆ ಬಂದರು. ಅವರನ್ನು ಶೂದ್ರನು ಸತ್ಕರಿಸಿದನು. ಅನುಕೂಲ ಮಾತುಗಳನ್ನು ಆಡಿದನು. ಇದೇ ರೀತಿಯಾಗಿ ಕುಲಪತಿಯು ಅನೇಕಬಾರಿ ಶೂದ್ರನ ಆಶ್ರಮಕ್ಕೆ ಹೋದರು. ಒಂದು ದಿವಸ ಶೂದ್ರನು ಅವರ ಹತ್ತಿರ ನಾನು ಶ್ರಾದ್ಧವನ್ನು ಮಾಡುತ್ತೇನೆ. ನೋಡಿರಿ ಎಂದು ಹೇಳಿ ಆ ಋಷಿಗಳಿಗೆ ಪಾದವನ್ನು ತೊಳೆದನು. ಕೂರ್ಚೆಗಳನ್ನು ತಪ್ಪು ತಪ್ಪಾಗಿ ಇಟ್ಟನು. ಆಗ ಕುಲಪತಿಯು ಹಾಗಲ್ಲ ಹೀಗೆ ಮಾಡು ಎಂದೆಲ್ಲಾ ಹೇಳಿಕೊಟ್ಟರು. ಈರೀತಿಯಾಗಿ ಸಮಸ್ತ ಹವ್ಯಕವ್ಯಗಳ ವಿಧಿಯನ್ನೂ ಶೂದ್ರನಿಗೆ ಉಪದೇಶಿಸಿದರು. ಪಿತೃಕಾರ್ಯವು ಮುಗಿದ ಮೇಲೆ ಶೂದ್ರನ ಅನುಜ್ಞೆಯನ್ನು ಪಡೆದು ಹೋದರು.

ತರುವಾಯ ಬಹುಕಾಲದ ಮೇಲೆ ಶೂದ್ರನು ಮರಣವನ್ನು ಹೊಂದಿದನು.

ಅವನು ಬ್ರಾಹ್ಮಣರಿಂದ ಉಪದೇಶವನ್ನು ಪಡೆದ ಪುಣ್ಯದಿಂದ ಮಹಾರಾಜನ ವಂಶದಲ್ಲಿ ಹುಟ್ಟಿದನು. ಕಾಲಕ್ರಮದಿಂದ ಆ ಕುಲಪತಿಯೂ ಮರಣವನ್ನು ಹೊಂದಿ ಆ ಮಹಾರಾಜನ ಪುರೋಹಿತರಿಗೆ ಮಗನಾಗಿ ಹುಟ್ಟಿದರು. ಕಾಲಕ್ರಮದಿಂದ ಇಬ್ಬರೂ ದೊಡ್ಡವರಾದರು. ತಂದೆಯ ಮರಣಾನಂತರದಲ್ಲಿ ಆ ರಾಜಪುತ್ರನು ಪಟ್ಟಾಭಿಷಿಕ್ತನಾದನು. ಪುರೋಹಿತರ ಮಗನು ಪೌರೋಹಿತ್ಯದಲ್ಲಿ ಅಭಿಷಿಕ್ತನಾದನು. ರಾಜನು ಪುರೋಹಿತರನ್ನು ಮುಂದೆ ಮಾಡಿಕೊಂಡ ಧರ್ಮದಿಂದ ಪ್ರಜೆಗಳನ್ನು ಪರಿಪಾಲಿಸುತ್ತಾ ಇದ್ದನು. ನಿತ್ಯವೂ ಧರ್ಮಕಾರ್ಯಗಳಲ್ಲಿ ಪುಣ್ಯಾಹವಾಚನೆಯನ್ನು ಮಾಡಿಸುವಾಗ ರಾಜನು ಪುರೋಹಿತರನ್ನು ಅಪಹಾಸಮಾಡುತ್ತಾ ನಗುತ್ತಿದ್ದನು. ಈ ರೀತಿಯಾಗಿ ತಾನು ಪುರೋಹಿತ ಮಾಡಿಸುವಾಗಲೆಲ್ಲಾ ರಾಜನು ತನ್ನನ್ನು ನೋಡಿ ನಗುತ್ತಾ ಅಪಹಾಸ ಮಾಡುವುದನ್ನು ನೋಡಿ ಪುರೋಹಿತನಿಗೆ ಕೋಪವು ಬಂದಿತು.

ಒಂದು ದಿವಸ ಒಬ್ಬರೂ ಇಲ್ಲದಿರುವ ಸಮಯದಲ್ಲಿ ಪುರೋಹಿತನು ರಾಜನೊಡನೆ ಅನೇಕ ಅನುಕೂಲ ಕಥೆಗಳನ್ನು ಆಡಿದ ಮೇಲೆ 'ನೀವು ನನಗೊಂದು ವರವನ್ನು ಕೊಡಬೇಕೆಂದು ಇಚ್ಛಿಸುವೆನು' ಎಂದನು.

ರಾಜನು 'ಬ್ರಾಹ್ಮಣೋತ್ತಮ! ನಿಮಗೆ ಒಂದೇಕೆ ನೂರು ವರಗಳನ್ನೂ ಕೊಡುವೆನು. ನಿಮ್ಮ ಮೇಲಿರುವ ಸ್ನೇಹದಿಂದಲೂ ಬಹುಮಾನದಿಂದಲೂ ನಿಮಗೆ ನಾನು ಕೊಡದೆ ಇರುವ ವಸ್ತುವೇ ಇಲ್ಲ' ಎಂದನು.

ಪುರೋಹಿತನು 'ನಾನು ಪೌರೋಹಿತ್ಯವನ್ನು ಮಾಡಿಸುವಾಗಲೆಲ್ಲಾ ನೀವು ನನ್ನನ್ನು ನೋಡಿ ನಗುತ್ತಾ ನನಗೆ ಅಪಹಾಸ ಮಾಡುವುದು ಯಾಕೆ? ನೀವು ನನ್ನನ್ನು ನೋಡಿ ನಗುವುದರಿಂದ ನನಗೆ ತುಂಬಾ ಅವಮಾನವಾಗುತ್ತದೆ. ಆಣೆಯಿಟ್ಟು ಕೇಳುತ್ತೇನೆ. ಅದರ ಕಾರಣವನ್ನು ಹೇಳಬೇಕು. ಕಾರಣವಿಲ್ಲದೆ ನೀವು ನಗಲಾರಿರಿ. ಆ ಕಾರಣವನ್ನು ಕೇಳಬೇಕೆಂದು ನನಗೆ ತುಂಬಾ ಆಸೆಯಿದೆ' ಎಂದು ಹೇಳಿದನು.

ಆದಕ್ಕೆ ರಾಜನು 'ನೀವು ಇಷ್ಟು ಕೇಳುವಾಗ ಹೇಳಬಾರದಾದ ವಿಷಯ ವಾಗಿದ್ದರೂ ನಿಮ್ಮ ಹತ್ತಿರ ಅವಶ್ಯವಾಗಿ ನಾನು ಹೇಳಬೇಕಾಗಿದೆ. ಮನಸ್ಸಿಟ್ಟು ಕೇಳಿರಿ. ಪೂರ್ವಜನ್ಮದ ವಿಷಯವನ್ನು ಹೇಳುತ್ತೇನೆ. ನನಗೆ ಪೂರ್ವಜನ್ಮದ ಸ್ಮರಣೆಯಿದೆ. ಪೂರ್ವಜನ್ಮದಲ್ಲಿ ನಾನು ಒಬ್ಬ ಶೂದ್ರನಾಗಿದ್ದೆನು. ನೀವು ಒಬ್ಬ ತಪಸ್ವಿಗಳಾಗಿದ್ದಿರಿ. ನೀವು ನನ್ನ ಮೇಲೆ ದಯೆಯಿಂದ ಪಿತೃಕಾರ್ಯದಲ್ಲಿ ಉಪದೇಶವನ್ನು ಮಾಡಿದಿರಿ. ಈರೀತಿಯಾಗಿ ಶೂದ್ರನಿಗೆ ಹವ್ಯಕವ್ಯಗಳಲ್ಲಿ ಉಪದೇಶ ಮಾಡಿದ ದೋಷದಿಂದ ಪುರೋಹಿತರಾಗಿ ಹುಟ್ಟಿದ್ದೀರಿ. ನಿಮ್ಮಿಂದ ಉಪದೇಶವನ್ನು ಹೊಂದಿದ ಪುಣ್ಯದಿಂದ

ನಾನು ರಾಜನಾಗಿ ಹುಟ್ಟಿದ್ದೇನೆ. ಶೂದ್ರನಾಗಿರುವಾಗ ನನಗೆ ನೀವು ಉಪದೇಶ ಮಾಡಿದ ಫಲವು ನಿಮಗೆ ಪರಿಣಮಿಸಿತು ಎಂದು ನಿಮ್ಮನ್ನು ನೋಡುವಾಗಲೆಲ್ಲಾ ನನಗೆ ನಗು ಬರುವುದು. ನಿಮ್ಮನ್ನು ಅವಮಾನ ಮಾಡಬೇಕೆಂಬ ಅಭಿಪ್ರಾಯವಿಲ್ಲ. ನೀವು ನನ್ನ ಗುರುಗಳು. ಈರೀತಿಯಾಗಿ ವಿಪರೀತ ಫಲವುಂಟಾ ಯಿತು ಎಂದು ಮನಸ್ಸಿನಲ್ಲೇ ಸಂತಾಪವುಂಟಾಗಿದೆ. ನನಗೆ ಪೂರ್ವಜನ್ಮದ ಸ್ಮರಣೆಯಿದೆ. ಆದುದರಿಂದ ನಗುತ್ತೇನೆ. ನೀವು ಪೂರ್ವಜನ್ಮದಲ್ಲಿ ಮಾಡಿದ ಉಗ್ರವಾದ ತಪಸ್ಸನ್ನು ಶೂದ್ರನಾದ ನನಗೆ ಉಪದೇಶ ಮಾಡಿ ನಾಶಮಾಡಿ ಕೊಂಡಿರುವಿರಿ. ನೀವು ಈ ಪೌರೋಹಿತ್ಯವನ್ನೇ ಮಾಡಿಸುತ್ತಾ ಇದ್ದರೆ ಇನ್ನೂ ಅಧಮವಾದ ಗತಿಯನ್ನು ಹೊಂದುವಿರಿ. ಬೇಕಾದ ಹಣವನ್ನು ತೆಗೆದುಕೊಂಡು ಹೋಗಿರಿ. ಪವಿತ್ರರಾಗಿರಿ' ಎಂದನು.

ತರುವಾಯ ಬ್ರಾಹ್ಮಣನು ರಾಜನ ಅನುಜ್ಞೆಯನ್ನು ಪಡೆದುಹೋಗಿ ಬ್ರಾಹ್ಮಣ ರಿಗೆ ಅನೇಕ ದಾನಗಳನ್ನು ಮಾಡಿದನು. ಭೂಮಿಯನ್ನೂ ಗ್ರಾಮಗಳನ್ನೂ ದಾನಮಾಡಿ ದನು. ಬ್ರಾಹ್ಮಣರು ಹೇಳಿದಂತೆ ಅನೇಕ ಕೃಚ್ಛ್ರವ್ರತ ಇತ್ಯಾದಿ ವ್ರತಗಳನ್ನು ಮಾಡಿದನು. ಅನೇಕ ತೀರ್ಥಯಾತ್ರೆಯನ್ನು ಮಾಡಿದನು. ಅನೇಕ ಗೋದಾನಗಳನ್ನು ಮಾಡಿದನು. ಪವಿತ್ರವಾದ ಮನಸ್ಸುಳ್ಳವನಾಗಿ ಪೂರ್ವಜನ್ಮದಲ್ಲಿ ತಪಸ್ಸು ಮಾಡುತ್ತಿದ್ದ ಆಶ್ರಮಕ್ಕೇ ಹೋಗಿ ತಪಸ್ಸು ಮಾಡಿ ಸಿದ್ಧಿಯನ್ನು ಹೊಂದಿದನು.



## ಮತಂಗನ ಕಥೆ [1]

ಒಬ್ಬ ಬ್ರಾಹ್ಮಣನಿಗೆ ಮತಂಗ ಎಂಬ ಮಗನಿದ್ದನು. ಒಂದು ದಿನ ತಂದೆಯು ತಾನು ಯಾಗವನ್ನು ಮಾಡಬೇಕೆಂದು ಯಾಗಕ್ಕೆ ಬೇಕಾದ ಸಾಮಗ್ರಿಗಳನ್ನು ತರುವುದಕ್ಕಾಗಿ ಕಳುಹಿಸಿದನು. ಅವನು ರಥಕ್ಕೆ ಕತ್ತೆಗಳನ್ನು ಕಟ್ಟಿ ಬಹುವೇಗದಿಂದ ರಥವನ್ನು ಓಡಿಸುತ್ತಾ ಹೋದನು. ಹೋಗುವಾಗ ಅವನು ರಥವನ್ನು ಸೆಳೆಯುತ್ತಾ ಇದ್ದ ಒಂದು ಕತ್ತೆಗೆ ಮೂಗಿಗೆ ಬಾರುಕೋಲಿನಿಂದ ಸುಮ್ಮನೆ ಬಡಿದು ಗಾಯಮಾಡಿದನು. ಆ ಕತ್ತೆಯ ಒಟ್ಟಿಗೇನೇ ರಥವನ್ನು ಸೆಳೆಯುತ್ತಿದ್ದ ಅದರ ತಾಯಿಯಾದ ಕತ್ತೆಯು 'ತನ್ನ ಮಗುವಿನ ಮುಖದಲ್ಲಿ ಆದ ಬಹಳ ಗಾಯಗಳನ್ನು ನೋಡಿ ಮಗುವಿನ ಮೇಲಿನ

1. ಮ.ಭಾ. ಅನು.ಪ. ಅ.27-29

ಕರುಣೆಯಿಂದ ಸಹಿಸಲಾರದೆ ಮಗುವಿನೊಡನೆ 'ಮಗ! ದುಃಖಪಡಬೇಡ. ನಿನ್ನನ್ನು ಬಡಿಯುವವನು ಚಂಡಾಲನು. ಬ್ರಾಹ್ಮಣನಲ್ಲ. ಬ್ರಾಹ್ಮಣನಾದರೆ ಕ್ರೂರನಾಗಿರುವುದಿಲ್ಲ. ಅವನು ಎಲ್ಲರಿಗೂ ಮಿತ್ರನಾದವನು. ಅವನು ಎಲ್ಲರಿಗೂ ಉಪದೇಶಿಸುವವನು. ಅವನು ಹೊಡಿಯುವನೇ? ಇವನು ಚಂಡಾಲನು. ದುಷ್ಟಸ್ವಭಾವವುಳ್ಳವನು. ನನ್ನ ಮಗುವಿನ ಮೇಲೆ ಸ್ವಲ್ಪವೂ ದಯೆಯನ್ನು ತೋರಿಸುವುದಿಲ್ಲ' ಎಂದು ಹೇಳಿ ಸುಮ್ಮನೆ ಆಯಿತು.

ಈ ಮಾತನ್ನು ಕೇಳಿ ಮತಂಗನು ರಥದಿಂದ ಕೆಳಗೆ ಇಳಿದು ಕತ್ತೆಯೊಡನೆ 'ಕತ್ತೆಯೇ! ಹೇಳು. ನನ್ನ ತಾಯಿಯು ಯಾರಿಂದ ದೂಷಿಸಲ್ಪಟ್ಟಳು. ನಾನು ಚಂಡಾಲನೆಂದು ನೀನು ಹೇಗೆ ತಿಳಿದಿ? ಬೇಗನೇ ಹೇಳು. ನಾನು ಹೇಗೆ ಚಂಡಾಲನಾದೆನು. ಬ್ರಾಹ್ಮಣ್ಯವು ಹೇಗೆ ನಷ್ಟವಾಯಿತು. ಎಲ್ಲವನ್ನೂ ಸತ್ಯವಾಗಿ ಹೇಳು' ಎಂದು ಕೇಳಿದನು.

ಅದಕ್ಕೆ ಕತ್ತೆಯು 'ಮದವುಳ್ಳವಳಾದ ಬ್ರಾಹ್ಮಣಸ್ತ್ರೀಯಲ್ಲಿ ನೀನು ಒಬ್ಬ ಕ್ಷೌರಮಾಡುವವನಿಂದ ಹುಟ್ಟಿರುವಿ. ಆದುದರಿಂದ ನೀನು ಚಂಡಾಲನಾಗಿರುವಿ. ಬ್ರಾಹ್ಮಣ್ಯವು ನಷ್ಟವಾಗಿದೆ' ಎಂದಿತು. ಅದನ್ನು ಕೇಳಿ ಮತಂಗನು ತನ್ನ ಮನೆಗೆ ಹಿಂತಿರುಗಿ ಹೋದನು. ಆಗ ತಂದೆಯು ಮಗನನ್ನು ನೋಡಿ 'ಮತಂಗ! ಯಜ್ಞಕ್ಕೆ ಬೇಕಾದ ವಸ್ತುಗಳನ್ನು ತಾರದೆ ಯಾಕೆ ಹಿಂದೆ ಬಂದಿ' ಎಂದು ಕೇಳಿದನು. 'ನಿನಗೆ ಸೌಖ್ಯವಿಲ್ಲವೇ' ಎಂದೂ ಕೇಳಿದನು.

ಅದಕ್ಕೆ ಮತಂಗನು ಹೊಲೆಯನಾಗಿ ಹುಟ್ಟಿದವನಿಗೆ ಸೌಖಯವೆಲ್ಲಿಂದ ಬರಬೇಕು? ತಂದೆಯೇ! ಕತ್ತೆಯು ನಾನು ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನೆಂದು ತಿಳಿಸುತ್ತಾ ಇದೆ. ಆದುದರಿಂದ ನಾನು ಮಹಾತಪಸ್ಸನ್ನು ಮಾಡುತ್ತೇನೆ' ಎಂದು ಹೇಳಿ ಕಾಡಿಗೆ ಹೋಗಿ ಭಯಂಕರವಾದ ತಪಸ್ಸನ್ನು ಮಾಡಿದನು. ತನ್ನ ತಪಸ್ಸಿನಿಂದ ದೇವತೆಗಳನ್ನೆಲ್ಲಾ ಸಂತಾಪ ಪಡಿಸಿದನು. ತರುವಾಯ ಇಂದ್ರದೇವರು ಪ್ರತ್ಯಕ್ಷರಾಗಿ ಬಂದು ವರವನ್ನು ಕೇಳಿಕೊ ಎಂದರು. ಮತಂಗನು ನನಗೆ ಬ್ರಾಹ್ಮಣ್ಯವನ್ನು ಕೊಡಬೇಕೆಂದು ಕೇಳಿದನು. ಇಂದ್ರದೇವರು 'ಮತಂಗ! ಬ್ರಾಹ್ಮಣ್ಯವು ಪರಮಶ್ರೇಷ್ಠವಾದದ್ದು. ದುರ್ಲಭವಾದದ್ದು. ಚಂಡಾಲನಾಗಿ ಹುಟ್ಟಿರುವ ನಿನ್ನಿಂದ ಅದನ್ನು ಹೊಂದಲಿಕ್ಕೆ ಆಗಲಾರದು. ಅದನ್ನು ಅಪೇಕ್ಷಿಸಿದರೆ ಅನರ್ಥವನ್ನು ಹೊಂದುವಿ' ಎಂದು ಹೇಳಿಹೋದರು.

ಮತಂಗನು ಮತ್ತೂ ಕಠಿಣವಾದ ತಪಸ್ಸು ಮಾಡಿದನು. ಆಗ ಇಂದ್ರದೇವರು

'ಮತಂಗ! ಬ್ರಾಹ್ಮಣ್ಯವು ಸುಲಭವಲ್ಲ. ಬಹುಜನ್ಮಗಳಲ್ಲಿ ಕ್ರಮದಿಂದ ಪುಣ್ಯಗಳನ್ನು ಮಾಡಿ ಬಹುಜನ್ಮದ ಮೇಲೆ ಬ್ರಾಹ್ಮಣ್ಯವು ಬರಬೇಕಲ್ಲದೆ ನಿನಗೆ ಬರಲಾರದು' ಎಂದು ಹೇಳಿ ಹೋದರು.

ಆದರೂ ಮತಂಗನು ಬಿಡದೆ ಸಾವಿರ ವರ್ಷ ಕಠಿಣ ತಪಸ್ಸು ಮಾಡಿದನು. ಆಗಲೂ ಇಂದ್ರದೇವರು ಬಂದು 'ಚಂಡಾಲನಾಗಿ ಹುಟ್ಟಿರುವ ನೀನು ಬ್ರಾಹ್ಮಣ್ಯವನ್ನು ಹೊಂದಲಾಗದು. ಬೇರೆ ಏನು ಬೇಕಾದರೂ ವರವನ್ನು ಕೇಳಿಕೊ' ಎಂದರು. ಆಮೇಲೆಯೂ ಮತಂಗನು ತುಂಬಾ ಕಠಿಣವಾದ ತಪಸ್ಸು ಮಾಡಿದನು. ನೂರು ವರ್ಷ ಅಂಗುಷ್ಠದಲ್ಲಿಯೇ ನಿಂತುಕೊಂಡು ತಪಸ್ಸು ಮಾಡಿದನು. ದೇಹದಲ್ಲಿ ಚರ್ಮ ಎಲುಬು ಮಾತ್ರ ಉಳಿದು ಕೊನೆಗೆ ಕೆಳಗೆ ಬಿದ್ದುಬಿಟ್ಟನು. ಬೀಳುವ ಅವನನ್ನು ಇಂದ್ರದೇವರು ಓಡಿಬಂದು ಎತ್ತಿ ಹಿಡಿದರು. 'ಮತಂಗ! ನಿನಗೆ ಬ್ರಾಹ್ಮಣ್ಯವು ಸಿಗಲಾರದು. ಸುಮ್ಮನೆ ಶ್ರಮವನ್ನು ಹೊಂದಬೇಡ. ಬೇರೆ ಯಾವುದಾದರೂ ವರವನ್ನು ಕೇಳಿಕೊ' ಎಂದರು.

ಅದಕ್ಕೆ ಮತಂಗನು 'ಮಹೇಂದ್ರ! ದುಃಖದಿಂದ ಕೂಡಿರುವ ನನ್ನನ್ನು ಪುನಃ ಪುನಃ ಏಕೆ ದುಃಖಪಡಿಸುವಿರಿ? ತಾಯಿಯ ದೋಷದಿಂದ ನಾನು ಈ ದೋಷವನ್ನು ಹೊಂದಿರುವೆನು. ಈಗ ಅಹಿಂಸಾ ಇಂದ್ರಿಯನಿಗ್ರಹ ಇತ್ಯಾದಿ ಎಲ್ಲ ಗುಣಗಳುಳ್ಳವ ನಾಗಿರುವೆನು ನಾನು. ಏಕೆ ಬ್ರಾಹ್ಮಣನಾಗಲು ಅರ್ಹನಲ್ಲ! ದೈವೇಚ್ಛೆಯು ಪ್ರಬಲ ವಾಗಿರುವುದು. ನಾನು ಯಾವುದನ್ನು ಹೊಂದಬೇಕೆಂದು ಬಯಸುವೆನೋ ಅದನ್ನು ಹೊಂದಲು ಸಾಧ್ಯವಾಗದೆ ಇದೆ. ಹೀಗಿರಲು ನಾನು ಮಾಡಿದ ಪುಣ್ಯವೇನಾದರೂ ಇದ್ದರೆ ನಾನು ನಿಮ್ಮ ಅನುಗ್ರಹಕ್ಕೆ ಪಾತ್ರನಾಗಿದ್ದರೆ ಏನಾದರೂ ವರವನ್ನು ಕೊಡಿರಿ' ಎಂದನು.

ಆಗ ಇಂದ್ರದೇವರು 'ಬೇಕಾದ ವರವನ್ನು ಕೇಳಿಕೊ' ಎಂದರು. ಅದಕ್ಕೆ ಮತಂಗನು 'ನಾನು ಇಚ್ಛಾನುಸಾರವಾಗಿ ಆಕಾಶದಲ್ಲಿ ಸಂಚರಿಸುತ್ತಾ ಇರಬೇಕು. ಬ್ರಾಹ್ಮಣ ಕ್ಷತ್ರಿಯರಿಗೆ ವಿರೋಧ ಮಾಡದೆ ಸಂಚರಿಸುತ್ತಾ ಇರಬೇಕು. ನನಗೆ ಅಕ್ಷಯ ವಾದ ಕೀರ್ತಿಯುಂಟಾಗಬೇಕು. ನಿಮಗೆ ಶಿರಸ್ಸಿನಿಂದ ನಮಸ್ಕರಿಸಿ ಕೇಳಿಕೊಳ್ಳುತ್ತೇನೆ' ಎಂದನು.

ಇಂದ್ರದೇವರು 'ಛಂದೋದೇವನೆಂದು ಪ್ರಸಿದ್ಧನಾಗಿ ಸ್ತ್ರೀಯರಿಂದ ಪೂಜಿಸಲ್ಪಡುವಿ. ನಿನಗೆ ಮೂರುಲೋಕದಲ್ಲಿ ಮಹಾಕೀರ್ತಿಯುಂಟಾಗುವುದು' ಎಂದು ವರವನ್ನು ಕೊಟ್ಟು ಮರೆಯಾಗಿ ಹೋದರು. ಮತಂಗನೂ ಪ್ರಾಣಬಿಟ್ಟು

ಉತ್ತಮ ಸ್ಥಾನವನ್ನು ಹೊಂದಿದನ. ಆದುದರಿಂದ ಬ್ರಾಹ್ಮಣ್ಯವು ಅತ್ಯಂತ ದುಲರ್ಭವಾದದ್ದು.



## ತಾರಣನು [1]

ಪೂರ್ವದಲ್ಲಿ ತಾರಣ ಎಂಬ ಬ್ರಾಹ್ಮಣನಿದ್ದನು. ಅವನು ವಿಷ್ಣುಭಕ್ತನಾಗಿದ್ದನು. ವೇದವೇದಾಂಗಶಾಸ್ತ್ರಗಳಲ್ಲಿ ಪಾರಂಗತನಾಗಿದ್ದನು. ಕೃಷಿಮಾಡಿ ಜೀವಿಸುತ್ತಿದ್ದನು. ತುಂಬಾ ದರಿದ್ರನಾಗಿದ್ದನು. ಕಾಂಚೀಪಟ್ಟಣದಲ್ಲಿ ವಾಸಮಾಡುತ್ತಿದ್ದನು. ಅವನು ಮನೆಯಲ್ಲಿ ವಾಸಮಾಡಿಕೊಂಡಿರುವಾಗ ಒಂದು ದಿವಸದಲ್ಲಿ ತಂದೆಯ ಶ್ರಾದ್ಧದಿವಸವು ಬಂದಿತು. ತಾರಣನು ಪರಮದರಿದ್ರನಾಗಿದ್ದ ಪ್ರಯುಕ್ತ ದೈನ್ಯದಿಂದ ಪತ್ನಿಯೊಡನೆ 'ನಾಳೆಯ ದಿನದಲ್ಲಿ ತಂದೆಯ ಶ್ರಾದ್ಧದ ದಿವಸವು. ತಂದೆಯ ಶ್ರಾದ್ಧವನ್ನು ಬಿಟ್ಟರೆ ಕೋಟಿ ಜನ್ಮಗಳಲ್ಲಿ ಹೊಲೆಯನಾಗಿ ಹುಟ್ಟುವನೆಂದು ಶಾಸ್ತ್ರವು ಹೇಳುತ್ತಿದೆ. ನಾಳೆ ಬ್ರಾಹ್ಮಣ ಭೋಜನವನ್ನು ಮಾಡಿಸಲಿಕ್ಕೆ ಪಾತ್ರೆಗಳಲ್ಲಿ ಏನಾದರೂ ಸಾಮಾನು ಇದೆಯೋ ಎಂದು ನೋಡು. ನಾವು ಭೋಜನ ಮಾಡುವ ಅನಿಷಿದ್ಧ ಪದಾರ್ಥದಿಂದ ಪಿತೃಗಳನ್ನು ತೃಪ್ತಿಪಡಿಸಬೇಕೆಂದು ಜ್ಞಾನಿಗಳು ಹೇಳುವರು. ನಮ್ಮ ಶಕ್ತಿಯಿದ್ದಷ್ಟು ಮಾಡಲೇಬೇಕು. ಶಕ್ತಿವಂಚನೆಯನ್ನು ಮಾಡಬಾರದು. ಎಂದರೆ ಹಣವಿದ್ದು ಅದಕ್ಕೆ ಸರಿಯಾದ ವೈಭವದಿಂದ ಮಾಡದೆ ಇರಬಾರದು. ನಾವು ತುಂಬಾ ಬಡವರಾಗಿರುವೆವು. ನಮ್ಮ ಶಕ್ತಿಯನ್ನು ಅನುಸರಿಸಿ ನಾವು ಮಾಡುವ' ಎಂದು ಹೇಳಿದನು.

ಅವನ ಹೆಂಡತಿಯು ಮನೆಯ ಒಳಗೆ ಹೋಗಿ ಪಾತ್ರೆಗಳಲ್ಲಿ ಎಲ್ಲಾ ಹುಡುಕಿದಳು. ಯಾವ ಪಾತ್ರೆಯಲ್ಲಿಯೂ ಏನೇನು ಸಾಮಾನೂ ಉಳಿದಿಲ್ಲ. ಒಂದು ಪಾತ್ರೆಯಲ್ಲಿ ಮಾತ್ರ ಒಂದು ಪಡಿ ಸಾಸಿವೆಯು ಇದ್ದಿತು. ಅದನ್ನೇ ತಂದು ಗಂಡನ ಮುಂದೆ ಇಟ್ಟಳು. 'ಸ್ವಾಮಿ! ಇಷ್ಟು ಸಾಸಿವೆ ಮಾತ್ರವೇ ಇದೆ. ಬೇರೊಂದು ಸಾಮಾನೂ ಒಳಗೆ ಇಲ್ಲ' ಎಂದಳು. ಆಗ ತಾರಣನು ಕಣ್ಣೀರು ಸುರಿಸುತ್ತಾ ಬಹುಹೊತ್ತು ಅಳುತ್ತಾ ಕೂತುಕೊಂಡನು. ಹಣವಿಲ್ಲದ ಪಾಪಿಯಾದ ನಾನು ಜೀವಿಸುವುದನ್ನು ಸುಡಲಿ' ಎಂದು ಹೇಳುತ್ತಾ ಬಹುಹೊತ್ತು ಅಳುತ್ತಾ ಇದ್ದನು. ಆಗ ಧರ್ಮವನ್ನು ತಿಳಿದವಳಾದ

1. ಕುಚೇಲನ ಹಿಂದಿನ ಜನ್ಮ. ಪುರಾಣಭಾರತ ಕೋಶ. ಕ.ಪು.ಪ್ರಾ.ಪು. 247

ಸುಮನಾ ಎಂಬ ಹೆಸರುಳ್ಳ ಅವನ ಹೆಂಡತಿಯು ಮುನಿಗಳಿಗೆ ಸಮ್ಮತಗಳಾದ ಮಾತುಗಳಿಂದ ಸಮಾಧಾನಪಡಿಸಿದಳು. 'ನೀವು ಧರ್ಮವನ್ನು ತಿಳಿದವರಾಗಿ ಏಕೆ ಇಷ್ಟು ದುಃಖವನ್ನು ಹೊಂದುವಿರಿ? ನಾವು ಪೂರ್ವಜನ್ಮದಲ್ಲಿ ದಾನಮಾಡಿಲ್ಲ. ಈಗ ಹೇಗೆ ಸಿಗುವುದು. ದಾನವನ್ನು ಮಾಡಿದ್ದರೂ ಕೂಡ ಅದು ಯಾವ ಕಾಲದಲ್ಲಿ ಮಾಡಿರುವೆವೋ ಆ ಕಾಲದಲ್ಲಿ ಮಾತ್ರ ಅದು ಸಿಗುವುದು. ನಮ್ಮ ಇಚ್ಛೆಯಂತೆ ಸಿಗಲಾರದು. ದೇಶ ಕಾಲ ಕರ್ಮ ಭಕ್ತಿ ಇತ್ಯಾದಿಗಳನ್ನು ನೋಡಿ ಭಗವಂತನೇ ಫಲವನ್ನು ಕೊಡುವನು. ಇದು ಪರಮಾತ್ಮನ ಸಂಕಲ್ಪವು. ಪರಮಾತ್ಮನ ಸಂಕಲ್ಪವನ್ನು ಬ್ರಹ್ಮಾದಿದೇವತೆಗಳೂ ಮೀರಲಿಕ್ಕೆ ಆಗಲಾರದು. ಲೋಕರೀತಿಯನ್ನು ಅನುಸರಿಸಿ ಶ್ರೀರಾಮದೇವರು ವನವಾಸದಲ್ಲಿ ಇರುವುದಾಗ ಒಂದು ದಿವಸದಲ್ಲಿ ಲಕ್ಷಣನು ವನದಲ್ಲಿ ಎಲ್ಲಾ ಹುಡುಕಿ ಹಣ್ಣು ಸಿಗದೆ ಬಂದು ರಾಮದೇವರೊಡನೆ ತಿಳಿಸಲು 'ಲಕ್ಷಣ! ಆಹಾರದಿಂದ ತುಂಬಿರುವ ಈ ಭೂಮಿಯಲ್ಲಿ ನಾವು ಎಲ್ಲಿ ಆಹಾರವು ಸಿಗುವುದೆಂದು ಹುಡುಕುತ್ತಿರುವೆವು. ನಾವು ಜನ್ಮಾಂತರಲ್ಲಿ ಬ್ರಾಹ್ಮಣರ ಮುಖದಲ್ಲಿ ಕೊಡಲಿಲ್ಲ' ಎಂದು ಹೇಳಿದರು. ದೇವರಿಗೆ ದಾನಮಾಡಬೇಕೆಂಬ ವಿಧಿಯಿಲ್ಲ. ಅವನಿಗೆ ಸಿಗದಿರುವ ವಸ್ತುವೂ ಇಲ್ಲ. ಆದರೆ ಲೋಕದಲ್ಲಿ ದಾನ ಮಾಡಬೇಕೆಂಬು ದನ್ನು ಈ ಮಾತಿನಿಂದ ರಾಮದೇವರು ತಿಳಿಸಿದಿರುವರು. ಆದುದರಿಂದ ನೀವು ಮನಸ್ಸಿಗೆ ಸಮಾಧಾನ ತಂದುಕೊಳ್ಳಿರಿ. ದುಃಖವನ್ನು ಬಿಡಿರಿ' ಎಂದು ಹೆಂಡತಿಯು ಹೇಳಿದ ಮಾತನ್ನು ಕೇಳಿ ತಾರಣನು ಎದ್ದು ಬ್ರಾಹ್ಮಣರ ಮನೆಗೆ ಹೋಗಿ ಮರುದಿನ ಮಾಡುವ ತನ್ನ ತಂದೆಯ ಶ್ರಾದ್ಧಕ್ಕೆ ಕರೆದುಬಂದನು.

ಮರುದಿವಸ ಆ ಒಂದು ಪುಡಿ ಸಾಸಿವೆಯನ್ನೇ ಚೆನ್ನಾಗಿ ಅರೆದು ಉಂಡೆ ಉಂಡೆಯನ್ನಾಗಿ ಮಾಡಿದಳು. ಸುಮನೆಯು ಬ್ರಾಹ್ಮಣರ ಎಲೆಗೆ ಆ ಸಾಸಿವೆಯ ಉಂಡೆಗಳನ್ನೇ ಹಾಕಿದಳು. ಭಗವಂತನನ್ನು ಸ್ಮರಿಸುತ್ತಾ ತಾರಣ ಬ್ರಾಹ್ಮಣನು ಪಿಂಡ ಪ್ರದಾವನ್ನು ಮಾಡಿದನು. ಸರ್ವಸಾಕ್ಷಿಯಾದ ಭಗವಂತನು ತಾರಣ ಬ್ರಾಹ್ಮಣನು ಶಕ್ತಿವಂಚನೆಯಿಲ್ಲದೆ ಮಾಡಿದ ಈ ಕಾರ್ಯದಿಂದ ಸಂತುಷ್ಟನಾಗಿ ಆ ಸಾಸಿವೆಯ ಉಂಡೆಗದ್ದರಿಂದಲೇ ಬ್ರಾಹ್ಮಣರಿಗೆ ಅಮೃತವನ್ನು ಕುಡಿದರೆ ಏನು ಸಂತೋಷ ವುಂಟಾಗಬಹುದೋ ಅಷ್ಟು ಸಂತೋಷವನ್ನು ಉಂಟುಮಾಡಿದನು. ಆ ಸಮಯ ದಲ್ಲಿ ಕ್ಷೀರಸಮುದ್ರದಲ್ಲಿ ಮಲಗಿರುವ ಶ್ರೀನಾರಾಯಣನು ತಾರಣಬ್ರಾಹ್ಮಣನ ಮೇಲೆ ಕರುಣೆಯಿಂದ ಮಂದಹಾಸವನ್ನು ಮಾಡಿದನು. ಆಗ ಭಗವಂತನ ಪರಮಾನು ಗ್ರಹಕ್ಕೆ ಪಾತ್ರರಾದ ಪ್ರಯುಕ್ತ ಭಗವತ್ಸಂಕಲ್ಪವನ್ನು ತಿಳಿದವರಾದ ರಮಾದೇವಿಯರು

ಲೋಕಜನರ ಸ್ವಭಾವವನ್ನು ತಿಳಿಸುತ್ತಾ ತಿಳಿಯದಂತೆ ನೀವು ಏಕೆ ನಗುತ್ತಿರುವಿರಿ ಎಂದು ಕೇಳಿದರು. ಅದಕ್ಕೆ ಭಗವಂತನು ತಾರಣನ ಅವಸ್ಥೆಯನ್ನು ಹೇಳಿದನು. ಅದನ್ನು ಕೇಳಿ ರಮಾದೇವಿಯರು ಭಗವಂತನಿಗೆ ನಮಸ್ಕರಿಸಿ 'ಬ್ರಹ್ಮಾದಿದೇವತೆಗಳು ನನ್ನ ಕೃಪೆಯನ್ನು ಅಪೇಕ್ಷಿಸುವರು. ನಾನು ನನ್ನ ಇಚ್ಛಾನುಸಾರವಾಗಿ ಬ್ರಹ್ಮರುದ್ರಾದಿ ಪದವಿಗಳನ್ನು ಕೊಡುವೆನು. ಹಾಗಿರುವ ಸರ್ವದೇವತೆಗಳಿಂದ ವಂದ್ಯಳಾದ ಸರ್ವರಿಗೂ ಅಭೀಷ್ಟವನ್ನು ಕೊಡುವವಳಾದ ನಾನು ನಿಮ್ಮ ಅನುಗ್ರಹವನ್ನು ಅಪೇಕ್ಷಿಸುತ್ತಾ ಸರ್ವಕಾಲದಲ್ಲಿ ಸೇವಿಸುತ್ತಿರುವೆನು. ಇಂತಹ ಮಹಾನುಭಾವರ ಭಕ್ತನಾದ ಆ ಬ್ರಾಹ್ಮಣನಿಗೆ ದಾರಿದ್ರ್ಯವು ಯುಕ್ತವಲ್ಲ. ನನಗೆ ಆಜ್ಞಾಪಿಸಬೇಕು. ಆ ತಾರಣನಿಗೆ ಅನುಗ್ರಹಿಸಲಿಕ್ಕೆ ಅವನ ಮನೆಗೆ ಹೋಗುವೆನು' ಎಂದರು.

ಆಗ ಭಗವಂತನು 'ಕೆಲವು ಜೀವರು ಸ್ವಲ್ಪ ಸಂಪತ್ತು ಬಂದು ಬಿಟ್ಟರೆ ಬಹು ಅಹಂಕಾರವನ್ನು ಹೊಂದುವರು. ಅಂತಹ ಜನರಿಗೆ ಭಕ್ತರಾದವರಿಗೆ ನಾನು ಹಣವನ್ನು ಕೊಡುವುದಿಲ್ಲ. ಆ ರೀತಿಯಾಗಿ ಅಹಂಕಾರವನ್ನು ಪಡೆಯದೆ ಇರುವ ಭಕ್ತರಿಗೆ ಪ್ರಹ್ಲಾದಾದಿಗಳಿಗೆ ನಾನು ಸಂಪತ್ತನ್ನು ಕೊಟ್ಟಿರುವೆನು. ಪ್ರಕೃತ ತಾರಣನು ನನ್ನ ಭಕ್ತನಾಗಿದ್ದರೂ ಹಣವು ಬಂದುಬಿಟ್ಟರೆ ಅಹಂಕಾರವನ್ನು ಹೊಂದುವನು. ಬ್ರಾಹ್ಮಣರ ಅವಮಾನವನ್ನು ಮಾಡುವನು. ಇದರಿಂದ ಅನರ್ಥವನ್ನು ಹೊಂದುವನು. ಆದಕಾರಣ ನಾನು ತಾರಣನಿಗೆ ಸಂಪತ್ತನ್ನು ಕೊಡುವುದಿಲ್ಲ' ಎಂದು ಹೇಳಿದನು.

ರಮಾದೇವಿಯರು ಭಗವತ್ಸಂಕಲ್ಪಾನುಸಾರವಾಗಿ 'ಭಗವಂತನೇ! ನನಗೆ ತಾರಣನ ಅವಸ್ಥೆಯನ್ನು ಕೇಳಿ ಅತ್ಯಂತ ಕೃಪೆಯುಂಟಾಗುತ್ತದೆ. ನಿಮ್ಮ ಭಕ್ತನು ಶ್ರಮಪಡಬಾರದು. ನನಗೆ ಆಜ್ಞೆಯನ್ನು ಕೊಡಬೇಕು' ಎಂದು ಹೇಳಿದರು. ತರುವಾಯ ಪರಮಾತ್ಮನು ಹಾಗೆಯೇ ಆಗಲಿ ಎಂದು ಸಂಪತ್ತಿಗೆ ಅಭಿಮಾನಿನಿಯ ರಾದ ರಮಾದೇವಿಯರೊಡನೆ ತಾರಣಬ್ರಾಹ್ಮಣನಿಗೆ ಅನುಗ್ರಹಿಸಲು ಹೇಳಿದರು.

ಇಲ್ಲಿ ತಾರಣನ ಮನೆಯಲ್ಲಿ ಶ್ರಾದ್ಧಕ್ಕೆ ಬಂದ ಬ್ರಾಹ್ಮಣರು ಸಾಸಿವೆಯ ಪಿಂಡಗಳನ್ನು ಭೋಜನಮಾಡಿ, ತಾರಣನು ಕೊಟ್ಟಿರುವ ತುಳಸೀದಳರೂಪವಾದ ದಕ್ಷಿಣೆಯನ್ನು ತೆಗೆದು ತಾರಣನ ಶಕ್ತಿಯನ್ನು ತಿಳಿದವರಾದ ಕಾರಣವೂ ಭಗವದಿಚ್ಛೆ ಯಿಂದಲೂ ಸಂತೋಷವುಳ್ಳವರಾಗಿಯೇ ತಮ್ಮ ಮನೆಗೆ ಹೋದರು. ಪಿತೃಗಳೂ ಸಂತುಷ್ಟರಾದರು. ತಾರಣನೂ ಪತ್ನೀಸಹಿತನಾಗಿ ಪಿತೃಶೇಷವಾದ ಸಾಸಿವೆಪಿಂಡ ಗಳನ್ನೇ ಭುಂಜಿಸಿ ರಾತ್ರಿಯಲ್ಲಿ ದೇವರ ಮನೆಯ ಹತ್ತಿರ ಮಲಗಿದ್ದನು. ಸ್ವಪ್ನದಲ್ಲಿ ಬಿಳಿಯಾದ ವಸ್ತ್ರವನ್ನು ಧರಿಸಿಕೊಂಡು ಒಬ್ಬ ಬ್ರಾಹ್ಮಣನು ಕಾಣಿಸಿಕೊಂಡು 'ಮಗು

ತಾರಣ! ಯಾಕೆ ಇಲ್ಲಿ ಮಲಗಿರುವಿ? ಇಲ್ಲಿಯೇ ಭೂಮಿಯನ್ನು ತೋಡಿ ನೋಡು. ತುಂಬಾ ಶ್ರಮಪಟ್ಟವನಾಗಿರುವಿ. ಸುಖವಾಗಿ ಇರು ಎಂದು ಹೇಳಿದನು. ತಾರಣನಿಗೆ ಎಚ್ಚರಿಕೆಯಾಯಿತು. ತನ್ನ ಹೆಂಡತಿಯೊಡನೆ ಎಲ್ಲವನ್ನೂ ಹೇಳಿಕೊಂಡನು. ಆಗ ಅವಳು 'ಸ್ವಪ್ನದಲ್ಲಿ ದೇವತೆಯೋ ಬ್ರಾಹ್ಮಣನೋ ಒಂದು ವಿಷಯವನ್ನು ಹೇಳಿದರೆ ಅದು ಸತ್ಯವೇ ಆಗುವುದು ಎಂದು ಹೇಳುವರು. ಆದುದರಿಂದ ನೀವು ಭೂಮಿಯನ್ನು ತೋಡಿ ನೋಡಿರಿ' ಎಂದು ಹೇಳಿದಳು. ತಾರಣನು ಹಾಗೇ ಮಾಡಿದನು. ಧನದಿಂದ ತುಂಬಿದ್ದ ಕೊಪ್ಪರಿಗೆಯನ್ನು ಹೊಂದಿದನು. ಬಹುಸಂತೋಷಪಟ್ಟನು.

ತರುವಾಯ ತಾರಣನ ಮನೆಯಲ್ಲಿ ಬಹಳ ಐಶ್ವರ್ಯವು ಬಂದಿತು. ಅವನ ಮನೆಯು ಇಂದ್ರದೇವರ ಅಮರಾವತಿಯಂತೆ ಶೋಭಿಸಿತು. ಸದ್ಧರ್ಮವುಳ್ಳ ಅವನ ಹೆಂಡತಿಯಾದ ಸುಮನೆಯೂ ಸರ್ವಾಭರಣಗಳಿಂದ ಅಲಂಕೃತಳಾಗಿ ಆಕಾಶದಲ್ಲಿ ಮಿಂಚಿನಂತೆ ಪ್ರಕಾಶಿಸಿದಳು. ತಾರಣನಿಗೆ ಹಣವು ಬಂದಂತೆಯೇ ಅಹಂಕಾರವೂ ಬಂದಿತು. ಮನೆಗೆ ಬಂದ ಬ್ರಾಹ್ಮಣರಿಗೆ ಅವಮಾನವನ್ನು ಮಾಡಿ ಕೆಟ್ಟ ಮಾತುಗಳನ್ನು ಆಡಲಿಕ್ಕೆ ಆರಂಭಿಸಿದನು. ಹೆಂಡತಿಯು ಹಾಗೆ ಮಾಡಬಾರದೆಂದು ಹೇಳಿದರೂ ಕೇಳಲಾರನು. ಬ್ರಾಹ್ಮಣರು ಬಂದರೆ ಬಾಯಿಯಿಂದ ಬನ್ನಿ ಎಂದು ಹೇಳಲಾರನು. ಎದ್ದು ನಿಲ್ಲಲಾರನು. ಕೈಮುಗಿಯಲಾರನು. ದಾನವನ್ನು ಮಾಡಲಾರನು. ದಾನವನ್ನು ಯಾವಾಗಲಾದರೂ ಮಾಡಿದರೂ ಕೂಡ ಅವಮಾನ ಮಾಡಿ ಕೆಟ್ಟ ಮಾತುಗಳನ್ನು ಆಡಿ ಸ್ವಲ್ಪ ಮಾತ್ರ ಕೊಡುವನು. ಬ್ರಾಹ್ಮಣರು ಮನೆಗೆ ಬಂದಲ್ಲಿ ಅವರಿಗೆ ಅನ್ನವನ್ನು ಹಾಕುವ ಪಕ್ಷದಲ್ಲಿ ಅವರಿಗೆ ಕದನ್ನವನ್ನು ಹಾಕಿ ತಾನು ಮಾತ್ರ ಪಂಕ್ತಿಯಲ್ಲೇ ಕೂತುಕೊಂಡು ಒಳ್ಳೇ ಅನ್ನವನ್ನು ಭೋಜನ ಮಾಡುವನು.

ಈರೀತಿಯಾಗಿ ತಾರಣನು ಸದಾಚಾರವನ್ನು ಬಿಟ್ಟು ಮದಾಂಧನಾಗಿ ಬಹಳ ದುರ್ಬುದ್ಧಿಯುಳ್ಳವನಾದನು. ಇದೇ ರೀತಿಯಾಗಿ ಒಂದು ವರ್ಷವು ಕಳೆಯಿತು. ಎರಡನೇ ವರ್ಷದಲ್ಲಿ ತಂದೆಯ ಶ್ರಾದ್ಧದ ದಿವಸವು ಬಂದಿತು. ತಾರಣನು 'ಹೋದ ವರ್ಷದಲ್ಲಿ ಸಾಸಿವೆಯಿಂದ ಶ್ರಾದ್ಧವನ್ನು ಮಾಡಿದ್ದರಿಂದ ಇಷ್ಟು ಹಣವು ಬಂದಿತು. ಈ ವರ್ಷವೂ ಸಾಸಿವೆಯಿಂದಲೇ ಶ್ರಾದ್ಧವನ್ನು ಮಾಡಿದರೆ ಇನ್ನಷ್ಟು ಹಣವು ಬರಲಾರದು' ಎಂದು ಮನಸ್ಸಿನಲ್ಲೇ ಹೇಳಿಕೊಂಡು ಹೆಂಡತಿಯೊಡನೆ 'ನಾಳೆ ತಂದೆಯ ಶ್ರಾದ್ಧವು ನಡೆಯಬೇಕು. ಹೋದ ವರ್ಷದಂತೆ ಈ ವರ್ಷವೂ ಕೂಡ ಸಾಸಿವೆಯಿಂದಲೇ ಶ್ರಾದ್ಧವನ್ನು ಮಾಡಬೇಕು. ಸಾಸಿವೆಯನ್ನು ಚೆನ್ನಾಗಿ ಅರೆದು ಪಿಂಡಗಳನ್ನು ಮಾಡಿಡು' ಎಂದು ಹೇಳಿದನು. 'ಹೋದವರ್ಷದಲ್ಲಿ ಸಾಸಿವೆಯ

ಪಿಂಡಗಳನ್ನು ಮಾಡಿದ್ದರಿಂದ ಇಷ್ಟು ಸಂಪತ್ತು ಬಂದಿತು. ಈ ವರ್ಷವೂ ಸಾಸಿವೆಯಿಂದಲೇ ಪಿಂಡಹಾಕಿದರೆ ಮತ್ತಷ್ಟು ಸಂಪತ್ತು ಬರುವುದು' ಎಂದೂ ಹೇಳಿದನು.

ಆಗ ಸುಮನೆಯು 'ಸ್ವಾಮಿ! ಕ್ಷಮಿಸಬೇಕು. ತಾವು ಹೇಳುವ ಮಾತು ಸರಿಯಲ್ಲವೆಂದು ಕಾಣುತ್ತದೆ. ಹಣವಿದ್ದು ವಂಚನೆ ಮಾಡಿದರೆ ಅದರಿಂದ ವಿಪರೀತವಾಗುವುದು. ಅದರಿಂದ ಪುಣ್ಯವು ಹೋಗುವುದು. ಆಯುಷ್ಯವು ಹೋಗು ವುದು. ಹಣವು ಹೋಗುವುದು. ವಂಶವು ನಾಶವನ್ನು ಹೊಂದುವುದು. ಶ್ರಾದ್ಧದಿನ ದಲ್ಲಿ ನಾನಾವಿಧ ಪಕ್ವಾನ್ನಗಳನ್ನೂ ನಾನಾ ಭಕ್ಷ್ಯಗಳನ್ನೂ ಒಳ್ಳೇ ಅನ್ನವನ್ನೂ ಮಾಡಬೇಕು. ಸುವಾಸನೆಯುಳ್ಳ ತುಪ್ಪವನ್ನು ಬಡಿಸಬೇಕು. ಹಾಲಿನ ಪಾಯಸವನ್ನೂ ಉದ್ದಿನ ಒಡೆಗಳನ್ನೂ ಇನ್ನೂ ಪಿತೃಗಳಿಗೆ ಪ್ರಿಯವಾದದ್ದನ್ನೆಲ್ಲಾ ಮಾಡಬೇಕು. ಶ್ರಾದ್ಧ ದಿವಸ ಶಕ್ತಿಯನ್ನು ಮೀರಿ ಮಾಡಬೇಕು. ಇದರಿಂದ ಅಕ್ಷಯವಾದ ಫಲವುಂಟಾಗು ವುದು. ಲೋಕದಲ್ಲಿ ಎಲ್ಲರೂ ಶ್ರಾದ್ಧದ ದಿವಸದಲ್ಲಿ ಶ್ರೇಷ್ಠವಾದ ಅಡಿಗೆಯನ್ನೇ ಮಾಡಿಸುವರು. ನಾವೂ ಹಾಗೆಯೇ ಮಾಡಬೇಕು' ಇತ್ಯಾದಿ ರೀತಿಯಾಗಿ ಬಹಳವಾಗಿ ಹೇಳಿದಳು.

ಈ ಮಾತನ್ನು ಕೇಳಿದ ತಾರಣನಿಗೆ ಕೋಪದಿಂದ ಮೂರ್ಛೆಯು ಬರುವಂತೆ ಆಯಿತು. 'ಹೆಂಗಸರಿಗೆ ಸಲಿಗೆ ಬಿಟ್ಟರೆ ಬಹುಮಾತು ಹೊರಡುವುದು. ಗಂಡನು ಹೇಳಿದಂತೆ ಹೆಂಡತಿಯು ಮಾಡಬೇಕಾದದ್ದು. ಅದು ಧರ್ಮವೋ ಅಧರ್ಮವೋ ಎಂದು ನೋಡಬಾರದು' ಎಂದು ಹೇಳಿದನು. ಸುಮನೆಯು ಗಂಡನ ಆಗ್ರಹವನ್ನು ನೋಡಿ ಮನಸ್ಸಿನಲ್ಲೇ ತುಂಬಾನೊಂದುಕೊಂಡಳು. ಹಾಗೆಯೇ ಬ್ರಾಹ್ಮಣರು ಎಷ್ಟು ಜನರು ಬರುವರೆಂದು ಎಣಿಸಿಕೊಂಡು ಸಾಸಿವೆಕಾಳಿನ ಪಿಂಡಗಳನ್ನು ಮಾಡಿದಳು. ಶ್ರಾದ್ಧಕ್ಕೆ ಬಂದಿರುವ ಬ್ರಾಹ್ಮಣರು ಹಣವಂತನಾದ ಇವನು ಅತ್ಯುತ್ತಮವಾದ ಅಡಿಗೆಯನ್ನು ಮಾಡಿಸಿರುವನು ಎಂದು ತಿಳಿದುಕೊಂಡು ಬಂದವರು ಎಲೆಯಲ್ಲಿ ಬಡಿಸಿದ ಸಾಸಿವೆಯ ಪಿಂಡವನ್ನು ನೋಡಿ ಅತ್ಯಾಶ್ಚರ್ಯವನ್ನು ಹೊಂದಿದರು. ಖೇದವನ್ನು ಹೊಂದಿದರು. ಆಮೇಲೆ ಭೋಜನವನ್ನು ಮಾಡಿರಿ ಎಂದು ಯಜಮಾನನು ಹೇಳಲು ಸಾಸಿವೆಯ ಪಿಂಡವನ್ನು ಬಾಯಿಯಲ್ಲಿ ಇಟ್ಟುಕೊಂಡರು. ಅದರಿಂದ ಬಹುಕಾರವಾಗಿ ಅವರು ಕೋಪದಿಂದ ತಾರಣನಿಗೆ ಕೈಶಾಪವನ್ನು ಕೊಟ್ಟು ಹೊರಟುಹೋದರು. ಆಸಮಯದಲ್ಲಿ ಕ್ಷೀರಸಮುದ್ರದಲ್ಲಿ ಇದ್ದ ಭಗವಂತನು ನಗತಕ್ಕವನಾದನು. 'ಲಕ್ಷ್ಮೀ! ತಾರಣನು ದುರ್ವಿನಯನವನ್ನು ನೋಡಿದಿಯಾ?

ಬ್ರಾಹ್ಮಣರಿಗೆ ಸಾಸಿವೆಯ ಪಿಂಡವನ್ನು ಮಾಡಿಸಿ ಬಡಿಸಿದನು. ಇದರಿಂದ ಬ್ರಾಹ್ಮಣರ ನಾಲಿಗೆಯು ಸುಟ್ಟುಹೋಗಿ ಶಾಪಕೊಟ್ಟಿರುವರು. ಬ್ರಾಹ್ಮಣರು ನನ್ನ ಮುಖದಿಂದ ಹುಟ್ಟಿದವರು. ನನ್ನ ಮುಖದ ಸನ್ನಿಧಾನವುಳ್ಳವರು. ಅವರ ಅನುಗ್ರಹದಿಂದ ನನ್ನ ಅನುಗ್ರಹವು ಏರ್ಪಡುವುದು. ಹಾಗೆಯೇ ಅವರ ಕೋಪದಿಂದ ನನ್ನ ಕೋಪವೂ ಉಂಟಾಗುವುದು. ಅವರು ಕೊಟ್ಟ ಶಾಪವು ನನ್ನ ಶಾಪವೇ. ಅದು ಸತ್ಯವಾಗಲೇ ಬೇಕು. ಆದುದರಿಂದ ನೀನು ಸಂಪತ್ತಿನಿಂದ ಸಹ ಅವನ ಮನೆಯಿಂದ ಬಂದು ಬಿಡು. ಆಮೇಲೆ ಅವನು ಪಶ್ಚಾತ್ತಾಪವೇ. ಅದು ಸತ್ಯವಾಗಲೇ ಬೇಕು. ಆದುದರಿಂದ ನೀನು ಸಂಪತ್ತಿನಿಂದ ಸಹ ಅವನ ಮನೆಯಿಂದ ಬಂದು ಬಿಡು. ಆಮೇಲೆ ಅವನು ಪಶ್ಚಾತ್ತಾಪವನ್ನು ಹೊಂದಿ ಹೆಂಡತಿಯ ಮಾತನ್ನು ಸ್ಮರಿಸುವನು' ಎಂದು ಹೇಳಿದನು.

ಭಗವಂತನ ಆಜ್ಞೆಯಿಂದ ರಮಾದೇವಿಯರು ಬಂದು ಬಿಟ್ಟರು. ತಾರಣನು ಪೂರ್ವದಂತೆಯೇ ದರಿದ್ರನಾದನು. ಕಳ್ಳರು ರಾತ್ರಿಯಲ್ಲಿ ಹಣವನ್ನು ಅಪರಿಸಿದರು. ಹಗಲಲ್ಲೇ ಬಂದು ದನಗಳನ್ನೆಲ್ಲಾ ಅಪಹರಿಸಿದರು. ಆಮೇಲೆ ತಾರಣನು ಹೆಂಡತಿಯೊಡನೆ ಗಟ್ಟಿಯಾಗಿ ಅಳಲು ಆರಂಭಿಸಿದನು. 'ದೇವರು ನನಗೆ ಸ್ವಪ್ನದಲ್ಲಿ ತೋರಿಸುವಂತೆ ಹಣವನ್ನು ತೋರಿಸಿದನು. ದುರ್ವಿನಯವುಳ್ಳ ಮೂರ್ಖನಾದ ಹಿತವನ್ನು ತಿಳಿಯದಿರುವ ಹೆಂಡತಿಯು ಹೇಳಿದ ಒಳ್ಳೇ ಮಾತುಗಳನ್ನೂ ಕೇಳದೆ ನನಗೆ ವಜ್ರವು ಕೆಳಗೆ ಬಿದ್ದಂತೆ ಮಹಾ ಆಪತ್ತು ಬಂದು ಸೇರಿತು. ಬಹು ಬ್ರಾಹ್ಮಣರನ್ನು ಅವಮಾನ ಮಾಡಿದೆನು. ದಾರಿದ್ರ್ಯವು ಬಂತು ಎಂದಾದರೂ ಅಷ್ಟು ದುಃಖವು ನನಗಿರುವುದಿಲ್ಲ, ಆಯುಷ್ಯವಿದ್ದಷ್ಟು ದಿನ ಎಲ್ಲಿಯಾದರೂ ಅನ್ನವು ಸಿಗಬಹುದು. ಬ್ರಾಹ್ಮಣರಿಗೆ ಅವಮಾನ ಮಾಡಿದ ಪಾಪವನ್ನು ಹೇಗೆ ಕಳೆದುಕೊಳ್ಳಲಿ? ಸುಮನ! ನೀನು ನನಗೆ ತುಂಬಾ ಪ್ರಿಯಳಾಗಿದ್ದಿ. ನಿನ್ನ ಬುದ್ಧಿಯೂ ಶ್ರೇಷ್ಠವಾಗಿದೆ. ಇನ್ನು ಮುಂದೆ ನೀನು ಹೇಳಿದಂತೆ ನಾನು ಮಾಡುವೆನು' ಎಂದು ಹೇಳಿದನು. ಅದನ್ನು ಕೇಳಿ ಸುಮನೆಯು 'ನಮ್ಮ ಆಯುಷ್ಯವು ವ್ಯರ್ಥವಾಗಿ ಹೋಯಿತು. ರಾತ್ರಿಯಲ್ಲಿಯೂ ಹಗಲಲ್ಲಿಯೂ ಹಣದ ಧ್ಯಾನವನ್ನೇ ಮಾಡಿದೆವಲ್ಲದೆ ದೇವರ ಧ್ಯಾನವನ್ನು ಮಾಡಲಿಲ್ಲ, ನಮ್ಮ ಹಣವೆಲ್ಲ ಕಳ್ಳರೆ ಕದ್ದುಕೊಂಡು ಹೋದರಲ್ಲದೆ ನಾನು ಒಬ್ಬ ಸತ್ಪಾತ್ರರಿಗೂ ಕೊಡಲಿಲ್ಲ, ಹಣವನ್ನು ಸಂಪಾದಿಸಲಿಕ್ಕೆ ಛಳಿಮಳೆಗಾಳಿಗಳನ್ನು ಸಹಿಸಿದೆವಲ್ಲದೆ ತಪಸ್ಸನ್ನು ಮಾಡಲಿಲ್ಲ. ಆದುದರಿಂದ ನಾವು ಬೇಗನೆ ಕಾಡಿಗೆ ಹೋಗುವ. ಹರಿಯನ್ನು ಆಶ್ರಯಿಸುವ. ಸಂಸಾರವನ್ನು ದಾಟುವ' ಎಂದು ಹೇಳಿ ಉಳಿದ ಮನೆ ಇತ್ಯಾದಿಗಳನ್ನೆಲ್ಲಾ ಬ್ರಾಹ್ಮಣರಿಗೆ ಕೊಟ್ಟು ಮುನಿಶ್ರೇಷ್ಠರು ತಪಸ್ಸು

ಮಾಡುತ್ತಿರುವ ಅರಣ್ಯಕ್ಕೆ ಹೋದರು. ತಾರಣನು ಪತ್ನೀಸಹಿತನಾಗಿ ಋಷಿಗಳನ್ನು ಉದ್ದಕ್ಕೆ ನಮಸ್ಕರಿಸಿದನು. ಪಾಪಸಮುದ್ರದಲ್ಲಿ ಮುಳುಗಿಸುವ ನನ್ನನ್ನು ಉದ್ಧರಿಸ ಬೇಕೆಂದು ಹೇಳಿಕೊಂಡನು.

ತರುವಾಯ ಜ್ಞಾನಿಗಳಾದ ಮುನಿಗಳು ಅಭಯಪ್ರದಾನವನ್ನು ಮಾಡಿದರು. 'ನಮ್ಮೊಡನೆ ಸುಖವಾಗಿ ವನದಲ್ಲಿ ಇರು. ಪರಮಾತ್ಮನನ್ನು ಭಜಿಸು. ಅವನ ಅನುಗ್ರಹದಿಂದ ನಿನ್ನ ಪಾಪಗಳೆಲ್ಲವೂ ನಾಶವನ್ನು ಹೊಂದುವುವು. ನಾರಾಯಣ ಅಷ್ಟಾಕ್ಷರ ಮಂತ್ರವನ್ನು ನಿನಗೆ ಉಪದೇಶಿಸುವೆವು. ಉದಯಿಸಿಕೊಂಡುಬರುವ ಸೂರ್ಯನಂತೆ ಇರುವ ಜ್ಞಾನಾನಂದ ರೂಪಿಯಾದ ನಾಲ್ಕು ಕೈಗಳುಳ್ಳ ಪದ್ಮ ಗದಾ ಶಂಖ ಚಕ್ರಗಳನ್ನು ಕೈಗಳಲ್ಲಿ ಧರಿಸಿರುವ ಶ್ರೀಭೂದೇವಿಯರಿಂದ ಆಲಿಂಗಿತನಾದ ಆ ನಾರಾಯಣನನ್ನು ಧ್ಯಾನಮಾಡುತ್ತಾ ನಿತ್ಯವೂ ಮೂರು ಹೊತ್ತು ನಾರಾಯಣ ಮಂತ್ರವನ್ನು ಜಪಿಸು. ನೀನು ಬೇಗನೇ ಸಿದ್ಧಿಯನ್ನು ಹೊಂದುವಿ. ಪತಿವ್ರತೆಯಾದ ನಿನ್ನ ಸೇವೆಯನ್ನು ಮಾಡುತ್ತಿರುವ ನಿನ್ನ ಹೆಂಡತಿಯು ನಿನ್ನ ಪುಣ್ಯದ ಅರ್ಧಭಾಗವನ್ನು ಅಪಹಾರ ಮಾಡುವಳು. ನೀನು ಪತ್ನೀಸಹಿತನಾಗಿ ಪುಣ್ಯಕರ್ಮಗಳನ್ನು ಭಗವಂತ ನನ್ನು ಆರಾಧಿಸಿ ವಿಷ್ಣುಲೋಕವನ್ನು ಹೊಂದುವಿ. ಅಲ್ಲಿ ಬಹುಕಾಲ ಸುಖವನ್ನು ಅನುಭವಿಸಿ ದ್ವಾಪರಯುಗದ ಅಂತ್ಯದಲ್ಲಿ ಸುದಾಮ ಎಂಬ ಹೆಸರಿನಿಂದ ಶ್ರೀಕೃಷ್ಣ ಪರಮಾತ್ಮನ ಮಿತ್ರನಾಗಿ ಹುಟ್ಟುವಿ. ಭಗವಂತನ ಅನುಗ್ರಹದಿಂದ ಬೇಕಾದ ಸಂಪತ್ತನ್ನು ಅನುಭವಿಸಿ ಈ ಪತ್ನಿಯಿಂದಲೇ ಕೂಡಿಕೊಂಡು ಪುನಃ ಹಿಂತಿರುಗಿಬಾರದೆ ಇರುವ ಮೋಕ್ಷವನ್ನು ಹೊಂದುವಿ' ಎಂದು ಹೇಳಿದರು. ತಾರಣನು ಈರೀತಿಯಾಗಿ ಮುನಿಗಳು ಹೇಳಿದ ಮಾತುಗಳನ್ನು ಕೇಳಿ ಸಂತೋಷವನ್ನು ಹೊಂದಿ ಪತ್ನಿಯೊಡನೆ ಕಠಿಣವಾದ ತಪಸ್ಸನ್ನು ಮಾಡಿ ಮರಣಕಾಲವು ಸಮೀಪಿಸಲು ಭಗವಂತನ ಪಾದಕಮಲವನ್ನು ಸ್ಮರಿಸುತ್ತಾ ಪ್ರಾಣಬಿಟ್ಟನು. ತರುವಾಯ ವಿಷ್ಣುದೂತರು ಅವನನ್ನು ಕರೆದುಕೊಂಡು ಹೋಗಲಿಕ್ಕೆ ವಿಮಾನದಲ್ಲಿ ಕೂತುಕೊಂಡು ಬಂದರು. ತಾರಣನು ಪತ್ನೀಸಹಿತನಾಗಿ ವಿಮಾನದಲ್ಲಿ ಕೂತುಕೊಂಡು ವಿಷ್ಣುಲೋಕಕ್ಕೆ ಹೋದನು. ಅಲ್ಲಿ ಬಹುಕಾಲ ಇದ್ದು ಆಮೇಲೆ ಸುದಾಮನಾಗಿ ಹುಟ್ಟಿ ಶ್ರೀಕೃಷ್ಣಪರಮಾತ್ಮನ ಅನುಗ್ರಹದಿಂದ ಮೋಕ್ಷವನ್ನು ಹೊಂದಿದನು.



# ಸುಶೀಲೋಪಾಖ್ಯಾನ [1]

ಪೂರ್ವದಲ್ಲಿ ಬಾಹ್ಲಿಕದೇಶದಲ್ಲಿ ಬಹುಧಾನ್ಯವೆಂಬ ಅಗ್ರಹಾರವು ಇದ್ದಿತು. ಅಲ್ಲಿ ಬ್ರಹ್ಮಶರ್ಮ ಎಂಬ ಬ್ರಾಹ್ಮಣನಿದ್ದನು. ಅವನು ಬಹಳ ಓದಿದ್ದನು. ಅವನಿಗೆ ಬಹು ಮಕ್ಕಳಿದ್ದರು. ಶ್ರೌತಸ್ಮಾರ್ತಧರ್ಮಗಳ ಕ್ರಮವನ್ನೆಲ್ಲಾ ತಿಳಿದವನಾಗಿದ್ದನು. ಕೃಷಿಯನ್ನು ಮಾಡುತ್ತಿದ್ದನು. ಮಜ್ಜಿಗೆ ವಸ್ತ್ರ ಇತ್ಯಾದಿಗಳನ್ನು ಮಾರುತ್ತಿದ್ದನು. ಮಾರಬಾರದ ವಸ್ತುಗಳನ್ನು ಮಾರುತ್ತಿದ್ದನು. ಹಣವನ್ನು ಸಂಗ್ರಹಿಸುತ್ತಿದ್ದನು. ಪರಾನ್ನಭೋಜನ ಮಾಡುತ್ತಿದ್ದನು. ಮನೆಯಲ್ಲಿ ಅನೇಕವಾಗಿ ಭೋಜನ ಮಾಡಿದ್ದೇ ಇಲ್ಲ, ಎಲ್ಲರ ಮನೆಯಲ್ಲಿಯೂ ಭೋಜನ ಮಾಡುತ್ತಿದ್ದನು. ಉಪಾಸನ ಮಾಡುತ್ತಿರಲಿಲ್ಲ. ಸರಿಯಾಗಿ ಸ್ನಾನವನ್ನು ಮಾಡಲಾರನು. ದರ್ಭೆಸಮಿಧೆಗಳನ್ನು ಕೈಯಲ್ಲಿ ಹಿಡಿದುಕೊಂಡು ಗ್ರಾಮದಿಂದ ಗ್ರಾಮಕ್ಕೆ ಹೋಗುತ್ತಿದ್ದನು. ಶ್ರಾದ್ಧಭೋಜನದಲ್ಲಿಯೇ ಆಸಕ್ತನಾಗಿದ್ದನು. 'ಇವನು ಶ್ರಾದ್ಧದ ಕ್ರಮವನ್ನು ತಿಳಿದವನು. ಬಹಳವಾಗಿ ಓದಿಕೊಂಡವನು' ಎಂದು ಎಲ್ಲಾ ಜನರೂ ಅವನನ್ನೂ ಊಟಕ್ಕೆ ಹೇಳುತ್ತಿದ್ದರು. ಹೇಳದಿದ್ದರೂ ತಾನೇ ಬಲಾತ್ಕಾರವಾಗಿ ಶ್ರಾದ್ಧದ ಮನೆಗೆ ಹೋಗುತ್ತಾ ಊಟಮಾಡುತ್ತಿದ್ದನು. ಶ್ರಾದ್ಧವೆಲ್ಲಿ ನಡೆಯುತ್ತದೆ ಎಂದು ವಿಚಾರಿಸಿಕೊಂಡು ಗ್ರಾಮದಿಂದ ಗ್ರಾಮಕ್ಕೆ ಹೋಗುತ್ತಿದ್ದನು. ಸೂತಕದವರ ಮನೆಯಲ್ಲಿಯೂ ಊಟ ಮಾಡುತ್ತಿದ್ದನು. ಶಾಸ್ತ್ರವನ್ನು ತಿಳಿದವನಾದರೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಿದ್ದಿಲ್ಲ. ಎಲ್ಲಿ ಶ್ರಾದ್ಧವು ನಡೆಯುತ್ತದೆ? ಎಲ್ಲಿ ಅನ್ನವು ಸಿಗುತ್ತದೆ? ಎಲ್ಲಿ ಹಣವು ಸಿಗುತ್ತದೆ? ಎಂದು ಊರೆಲ್ಲಾ ತಿರುಗುತ್ತಲೇ ಇರುವನು. ಮನೆಯಲ್ಲಿ ಮಕ್ಕಳು ಸರಿಯಾಗಿ ಊಟ ಮಾಡುವುದನ್ನು ಕಂಡರೆ ಬೈಯುತ್ತಿದ್ದನು. ತಾನು ಯಾವಾಗಲಾದರೂ ಮನೆಯಲ್ಲಿ ಊಟಮಾಡುವ ಸಂದರ್ಭದಲ್ಲಿ ಬರೀ ಅನ್ನವನ್ನು ಮಾತ್ರ ಊಟಮಾಡುತ್ತಿದ್ದನು. ಅವನಿಗೆ ಸುಶೀಲಾ ಎಂಬ ಹೆಸರುಳ್ಳ ಹೆಂಡತಿಯಿದ್ದಳು. ಅವಳು ಗಂಡನ ಸೇವೆಯಲ್ಲಿ ಆಸಕ್ತಳಾಗಿದ್ದಳು. ಗಂಡನು ಮನೆ ಬಿಟ್ಟು ಹೋದರೆ ಅಲ್ಪಭೋಜನ ಮಾಡುವಳು. ಗಂಡನು ಬೈದರೂ ತಾನು ಕೋಪಿಸಿಕೊಳ್ಳುತ್ತಿದ್ದಿಲ್ಲ. ಅವನ ಭಯದಿಂದ ಹೆಚ್ಚು ಹಣವನ್ನು ಖರ್ಚು ಮಾಡದೆ ಹಣ ಸಂಗ್ರಹ ಮಾಡುತ್ತಿದ್ದಳು.

ಒಂದು ದಿವಸದಲ್ಲಿ ಸುಶೀಲೆಯು ಸಮಯವನ್ನು ನೋಡಿ ಗಂಡನೊಡನೆ 'ಸ್ವಾಮಿ! ನಮ್ಮ ದೇಹವು ನೀರಿನ ಮೇಲಿನ ಗುಳ್ಳೆಯಂತೆ ಕ್ಷಣಿಕವಾದದ್ದು.

1. ಆಗ್ನೇಯ ಪುರಾಣ

ಈದಿನವೋ ನಾಳೆಯೋ ಅಥವಾ ನಾಡದೋ ಬಿದ್ದು ಹೋಗುತ್ತದೆ. ಧರ್ಮಕಾರ್ಯ ವನ್ನು ಮಾಡದೆ ಇದ್ದರೆ ನರಕಕ್ಕೆ ಹೋಗಬೇಕಾಗುವುದು. ರಾಜರಿಂದ ಕಳ್ಳರಿಂದ ಭಯಕ್ಕೆ ಕಾರಣವಾದ ಈ ಹಣಗಳಿಂದ ಏನು ಉಪಯೋಗವಿದೆ? ನೀವು ಯಾಕೆ ಬೇರೆಬೇರೆ ಮನೆಗಳಿಗೆ ಹೋಗಿ ಊಟಮಾಡುವಿರಿ? ನೀವು ಮನೆಯಲ್ಲಿಯೇ ಇರಿ. ಮನೆಯಲ್ಲಿ ಮಕ್ಕಳು ಅನಾಥರಾಗಿ ಲಾಲನೆ ಮಾಡುವವರು ಇಲ್ಲದಾಗಿದ್ದಾರೆ. ನಾನೂ ಕೂಡ ನೀವು ಮನೆಯಲ್ಲಿಯೇ ಇಲ್ಲದೆ ಜೀವನ್ಮೃತಳಂತೆ ಆಗಿದ್ದೇನೆ. ಎಲ್ಲಾ ಆಶ್ರಮಗಳಲ್ಲಿಯೂ ಗೃಹಸ್ಥಾಶ್ರಮವು ಶ್ರೇಷ್ಠವಾಗಿದೆ. ಹೆಂಡತಿಯು ಅನುಕೂಲ ಳಾಗಿರುವಾಗ ಗೃಹಸ್ಥನು ಮನೆಯಲ್ಲಿಯೇ ಧರ್ಮಾನುಷ್ಠಾನ ಮಾಡುತ್ತಾ ಇರಬೇಕು. ಅವಳು ಅನುಕೂಲಳಾಗಿ ಇಲ್ಲದಿದ್ದರೆ ಪರಿತ್ಯಾಗ ಮಾಡಬೇಕು. ಈ ಮಕ್ಕಳು ಶೂದ್ರಪ್ರಾಯರಾಗಿದ್ದಾರೆ. ವೇದಶಾಸ್ತ್ರರಹಿತರಾಗಿದ್ದಾರೆ. ಕುಲಾಚಾರ ರಹಿತರಾಗು ವರು. ನೀವು ಮನೆಯಲ್ಲಿ ಇದ್ದುಕೊಂಡು, ಉಪದೇಶ ಮಾಡಬೇಕು. ಈ ಮನೆಯೂ ನಾನು ಹೆಂಡತಿಯೂ ಈ ಹಣವೂ ನಿಮ್ಮ ಒಟ್ಟಿಗೆ ಬರುವವರಲ್ಲ, ಕೊನೆಗೆ ನಿಮ್ಮ ಒಟ್ಟಿಗೆ ಬರುವುದು ನೀವು ಮಾಡಿದ ಧರ್ಮವೇ. ಆದುದರಿಂದ ಧರ್ಮವನ್ನು ನೋಡಿರಿ. ಮನೆ ಹೆಂಡತಿ ಮಕ್ಕಳನ್ನು ನೋಡಬೇಡಿರಿ. ಬೇರೆ ಊರಿಗೆ ಹೋಗುವವರು ಬುತ್ತಿಯನ್ನು ಹಿಡಿದುಕೊಂಡು ಹೋಗುವರೋ ಹಾಗೆಯೇ ಪರಲೋಕಕ್ಕೆ ಹೋಗುವಾಗ ಬುತ್ತಿಯಾದ ಧರ್ಮವನ್ನು ಮಾಡಬೇಕು. ಯಮ ಲೋಕಕ್ಕೆ ಹೋಗುವಾಗ ಬುತ್ತಿಯಾಗುವಂತೆ ಬ್ರಾಹ್ಮಣರ ಮುಖದಲ್ಲಿ ಅನ್ನವನ್ನು ಹಾಕಿರಿ. ತುಲಾಮಾಸದಲ್ಲಿ ಕಾವೇರಿಸ್ನಾನವನ್ನು ಮಾಡಿರಿ. ಇನ್ನೂ ಶ್ರೇಷ್ಠವಾದ ಧರ್ಮವನ್ನು ಮಾಡಿರಿ. ಸತ್ಪಾತ್ರರು ಬಂದಿರುವಾಗ ಹಣವನ್ನು ದಾನಮಾಡಿರಿ. ಅನ್ನವನ್ನು ದಾನಮಾಡಿರಿ. ಗೃಹದಾನವನ್ನು ಮಾಡಿರಿ. ಜನ್ಮಾಂತರದಲ್ಲಿ ಮಾಡಿದ ಪುಣ್ಯದಿಂದ ಹೆಂಡತಿಯು ಅನುಕೂಲಳಾಗಿ ಬರುವಳು.

ಮನೆಗೆ ಬಂದಿರುವ ಸತ್ಪಾತ್ರರಿಗೆ ಅನ್ನ ಧನ ಇತ್ಯಾದಿಗಳನ್ನು ಯಾರು ಲೋಭದಿಂದ ಇಲ್ಲ ಇಲ್ಲ ಎಂದು ಹೇಳುತ್ತಾನೋ ಅವನಿಗೆ ದೇವತೆಗಳು 'ನಿನಗೆ ಬಹುದುಃಖವು ಇದೆಯೆಂದು ಹೇಳುವರು. ನಿಮ್ಮ ಪೂರ್ವಜನ್ಮದ ಪುಣ್ಯಗಳಿಂದಲೂ ನನ್ನ ಪೂರ್ವಜನ್ಮದ ಪುಣ್ಯಗಳಿಂದಲೂ ನಾನು ನಿಮಗೆ ಅನುಕೂಲಳಾಗಿ ಇರುವೆನು. ಬೇಕಾದಂತೆ ಧರ್ಮವನ್ನು ಮಾಡಿ. ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ರಕ್ಷಣೆ ಮಾಡುವುದು ಧರ್ಮವೇ. ನೀವು ಮಾಡಿದ ಪಾಪವನ್ನು ನೀವೇ ಅನುಭವಿಸಬೇಕು. ನಾವು ಅನುಭವಿಸಲಿಕ್ಕೆ ಬರಲಾರೆವು. ಬ್ರಾಹ್ಮಣರಿಗೆ ಒಂದು

ದಾನವನ್ನು ಮಾಡದೆ ಇದ್ದರೂ ಸಮಯಬಂದರೆ ದರಿದ್ರರಾಗುವಿರಿ. ಕಣ್ಣು ಕಿವಿ ಕಾಲುಗಳು ದೃಢವಾಗಿರುವಾಗಲೇ ಧರ್ಮವನ್ನು ಮಾಡಿರಿ' ಎಂದು ಉಪದೇಶ ಮಾಡಿದಳು.

ದೈವೇಚ್ಛೆಯಿಂದ ಸುಶೀಲೆಯ ಉಪದೇಶವು ಬ್ರಹ್ಮಶರ್ಮನ ಮನಸ್ಸಿಗೆ ನಾಟಿತು. ಹೆಂಡತಿಯು 'ಕಲ್ಯಾಣಿ! ನೀವು ಹೇಳಿದ್ದೆಲ್ಲಾ ತಿಳಿಯಿತು. ದೈವವು ಪ್ರಬಲ ವಾದದ್ದು. ನಾನು ಇಷ್ಟು ಸಮಯವನ್ನು ವ್ಯರ್ಥವಾಗಿ ಕಳೆದೆನು. ಇನ್ನು ಮುಂದೆ ಯಾದರೂ ನನಗೆ ನರಕವು ಬಾರದಂತೆ ನಾನು ಏನು ಮಾಡಲಿ? ನಾನು ಸ್ನಾನದಾನ ಇತ್ಯಾದಿ ಒಂದು ಸತ್ಕರ್ಮವನ್ನು ಮಾಡದೆ ಜನ್ಮವನ್ನು ವ್ಯರ್ಥವಾಡಿಕೊಂಡೆನು? ಎಂದನು.

ಸುಶೀಲೆಯು 'ಬೆಳಿಗ್ಗೆ ಬೇಗನೆ ಎದ್ದು ಸ್ನಾನಮಾಡಿ ಸಂಧ್ಯಾವಂದನೆ ಮಾಡಿರಿ. ಪಂಚಮಹಾಯಜ್ಞಗಳನ್ನು ಮಾಡಿರಿ. ಅನ್ನದಾನಾದಿಗಳನ್ನು ಮಾಡಿರಿ. ಧರ್ಮಕ್ಕೆ ಭಾವಿಯನ್ನು ಕಟ್ಟಿಸಿರಿ. ಅಶ್ವತ್ಥಮರಗಳನ್ನು ನೆಟ್ಟು ಬೆಳೆಸಬೇಕು. ಅಂತವನ ಮನೆಯಲ್ಲಿ ಸಂಪತ್ತೂ ಮಕ್ಕಳೂ ಅಭಿವೃದ್ಧಿಯನ್ನು ಹೊಂದುವುವು. ಪ್ರತಿನಿತ್ಯವೂ ಅಶ್ವತ್ಥಕ್ಕೆ ಏಳು ಪ್ರದಕ್ಷಿಣೆ ಬಂದರೆ ಸಂಪೂರ್ಣಭೂಮಿಗೆ ಪ್ರದಕ್ಷಿಣೆ ಬಂದ ಪುಣ್ಯವು ಬರುವುದು. ಅಶ್ವತ್ಥದಲ್ಲಿ ತ್ರಿಮೂರ್ತಿಗಳೂ ಇತರ ದೇವತೆಗಳೂ ಸನ್ನಿಹಿತರಾಗಿರುವರು. ಧೂಪದೀಪ ಪುಷ್ಪಾದಿಗಳಿಂದ ಅಶ್ವತ್ಥವನ್ನು ಪೂಜಿಸುವವನು ಹಣವಂತನಾಗುವನು. ಮಧ್ಯಾಹ್ನದಲ್ಲಿ ಸಾಯಂಕಾಲದಲ್ಲಿ ರಾತ್ರಿಯಲ್ಲಿ ಶುಕ್ರವಾರ ಮಂಗಳವಾರಗಳಲ್ಲಿ ಅಶ್ವತ್ಥಸೇವೆಯನ್ನು ಮಾಡಬಾರದು. ಶ್ರಾದ್ಧಮಾಡಲಿಕ್ಕೆ ಯೋಗ್ಯವಾದ ದಿನ ಗಳಲ್ಲಿಯೂ ಶನಿವಾರದಲ್ಲಿಯೂ ಅಶ್ವತ್ಥವೃಕ್ಷಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡ ಬೇಕು. ಶ್ರೀಸೂಕ್ತ ಪುರುಷಸೂಕ್ತ ಇತ್ಯಾದಿ ಮಂತ್ರಗಳನ್ನು ಹೇಳುತ್ತಾ ಪಿತೃಗಳನ್ನು ಸ್ಮರಿಸುತ್ತಾ ನೀರನ್ನು ಎರೆಚಬೇಕು. ಆಗ ಗಯಾಶ್ರಾದ್ಧ ಮಾಡಿದ ಫಲವು ಬರುವುದು. ಪಿತೃಗಳ ಋಣಪರಿಹಾರವಾಗುವುದು. ಪ್ರಾತಃಕಾಲ ಮಧ್ಯಾಹ್ನ ಕಾಲಗಳಲ್ಲಿ ಆಲಿಂಗನ ಮಾಡಿದರೆ ವ್ಯಾಧಿಮೃತ್ಯುಗಳ ಪರಿಹಾರವಾಗುವುದು. ಗುರುವಾರ ಅಭಿಷೇಕ ಮಾಡಿದವನಿಗೆ ಕಣ್ಣಿನರೋಗ ಪರಿಹಾರವಾಗುವುದು. ಗುರುವಾರ ಅಭಿಷೇಕ ಮಾಡಿದವನು. ಒಳ್ಳೇ ಕನ್ಯೆಯನ್ನು ಹೊಂದುವನು. ಶನಿವಾರ ಅಶ್ವತ್ಥವೃಕ್ಷವನ್ನು ಸೇವಿಸಿ ಅಭೀಷ್ಟವನ್ನು ಹೊಂದುವನು' ಇತ್ಯಾದಿ ವಿಷಯಗಳನ್ನು ಹೇಳಿದಳು.

ಬ್ರಹ್ಮಶರ್ಮನು ಈಪ್ರಕಾರವಾಗಿ ಹೆಂಡತಿಯ ಮಾತನ್ನು ಕೇಳಿ ಹಾಗೆಯೇ ಎಲ್ಲವನ್ನೂ ಮಾಡಿದನು. ಅವನ ಪತ್ನಿಯಾದ ಸುಶೀಲೆಯು ಗಂಡನ ಸೇವೆಯನ್ನು

ಮಾಡುತ್ತಾ ಇದ್ದಳು. ಗಂಡನು ಕೋಪಿಸಿದರೆ ತಾನು ಪ್ರತಿಕೋಪಿಸದೆ ಮುಗುಳು ನಗುತ್ತಾ ಇರುವಳು. ಬೆದರಿಸಿದರೆ ಭಯವನ್ನು ಹೊಂದುವಳು. ಸಂತೋಷದಲ್ಲಿರುವಾಗ ಸಮೀಪಕ್ಕೆ ಬರುವಳು. ಗಂಡನು ಭೋಜನಮಾಡಿದ ಮೇಲೆ ಭೋಜನ ಮಾಡುವಳು. ಬ್ರಾಹ್ಮಣರಿಗೆ ನಮಸ್ಕರಿಸಿ ಗಂಡನಿಗೆ ಆಯುಷ್ಯ ಆರೋಗ್ಯ ಹೆಚ್ಚಲಿ ಎಂದು ಪ್ರಾರ್ಥಿಸುವಳು. ಗಂಡನಿಗೆ ಇಷ್ಟವಾದ ಪದಾರ್ಥಗಳನ್ನೇ ಅಡಿಗೆ ಮಾಡಿ ಬಡಿಸುವಳು. ಗಂಡನು ಊಟಮಾಡಿ ಊಟ ಮಾಡು ಎಂದ ಮೇಲೆ ಊಟ ಮಾಡುವಳು. ಕರೆದರೆ ಹತ್ತಿರ ಬರುವಳು. ಅಪ್ರಿಯವನ್ನು ಹೇಳಿದರೂ ಗಂಡನಿಗೆ ಪ್ರತ್ಯುತ್ತರವನ್ನು ಕೊಡಲಾರಳು. ಮಲಗಿರುವ ಗಂಡನ ಪಾದಗಳನ್ನು ಒತ್ತುವಳು. ಗಂಡನಿಗೆ ನಿದ್ರೆಯು ಬಂದಮೇಲೆ ನಿದ್ರೆಯನ್ನು ಮಾಡುವಳು. ಗಂಡನು ಏಳುವ ಮೊದಲೇ ಎದ್ದು ಮನೆಯ ಶುದ್ಧಿಯನ್ನೆಲ್ಲಾ ಮಾಡುವಳು. ಗಂಡನಿಗೆ ಆಯುಷ್ಯವು ಹೆಚ್ಚಲಿ ಎಂದು ಪ್ರಾತಃಸ್ನಾನವನ್ನು ಮಾಡುವಳು. ಋತುಕಾಲದಲ್ಲಿ ಮೂರುದಿನ ಮೌನದಿಂದ ಒಂದು ಬದಿಯಲ್ಲಿ ಕೂತಿರುವಳು. ನಾಲ್ಕನೇ ದಿನದಲ್ಲಿ ಸ್ನಾನಮಾಡಿ ಶುದ್ಧಳಾಗಿ ಅರಸಿನಕುಂಕುಮವನ್ನು ಹಚ್ಚಿಕೊಂಡು ಪತಿಪಾದಾಬ್ಜವನ್ನು ಸ್ಮರಿಸಿ ಇನ್ನೊಬ್ಬರನ್ನು ನೋಡದೇ ಬರುವಳು. ನಿತ್ಯವೂ ಗುರುಗಳಿಗೆ ವೃದ್ಧರಿಗೆ ಬ್ರಾಹ್ಮಣರಿಗೆ ನಮಸ್ಕರಿಸುವಳು. ಗಂಡನ ಅನುಜ್ಞೆಯಿಂದ ದರಿದ್ರರಿಗೆ ಸಹಾಯ ಮಾಡುವಳು.

ಈ ರೀತಿಯಾಗಿ ಇರುವ ಸುಶೀಲೆಯು ಒಂದು ದಿನದಲ್ಲಿ ಮಧ್ಯಾಹ್ನದಲ್ಲಿ ಭಿಕ್ಷುಕರಿಗೆ ಭಿಕ್ಷೆಯನ್ನು ಹಾಕಿ ಅತಿಥಿಗಳನ್ನು ಭೋಜನ ಮಾಡಿಸಿ ಗಂಡನಿಗೆ ಬಡಿಸುತ್ತಿದ್ದಳು. ಈ ಸಮಯದಲ್ಲಿ ಯಮದೇವರಿಂದ ಆಜ್ಞಪ್ತರಾದ ಯಮದೂತರು ಬ್ರಹ್ಮಶರ್ಮನನ್ನು ಕರೆದುಕೊಂಡು ಹೋಗುವುದಕ್ಕಾಗಿ ಮನೆಗೆ ಬಂದಿದ್ದರು. ಅವರು ಸುಶೀಲೆಯ ಪಾತಿವ್ರತ್ಯಪ್ರಭಾವದಿಂದ ಅವಳ ತೇಜಸ್ಸಿನಿಂದ ಸಂತಪ್ತರಾಗಿ ಓಡಿದರು. ಯಮದೇವರ ಬಳಿಗೆ ಹೋಗಿ 'ನಾವು ಬ್ರಹ್ಮಶರ್ಮನ ಮನೆಗೆ ಹೋಗಲಿಕ್ಕೆ ಸಮರ್ಥರಲ್ಲ. ಅಲ್ಲಿಗೆ ಹೋಗಿ ಸುಶೀಲೆಯ ತೇಜಸ್ಸಿನಿಂದ ಸಂತಪ್ತರಾಗಿ ಓಡಿ ಬಂದಿರುವೆವು' ಎಂದು ಹೇಳಿದರು. ಈ ಮಾತನ್ನು ಕೇಳಿ ಯಮದೇವರು ಚಿತ್ರಗುಪ್ತನೊಡನೆ ಬ್ರಹ್ಮಶರ್ಮನು ದುಷ್ಟಭೋಜನಾದಿಗಳಿಂದ ಕ್ಷೀಣವಾದ ಆಯುಷ್ಯವುಳ್ಳವನಾಗಿದ್ದಾನೆ. ಅವನನ್ನು ಕರತರಲು ಹೋದ ದೂತರು ಸುಶೀಲೆಯ ತೇಜಸ್ಸಿನಿಂದ ಸಂತಪ್ತರಾಗಿ ಓಡಿ ಬಂದಿರುವರು. ಚಿತ್ರಗುಪ್ತ! ನೀನೇ ಬೇಗನೆ ಹೋಗಿ ಅವನನ್ನು ಕರೆದುಕೊಂಡು ಬಾ' ಎಂದರು. ಈರೀತಿಯಾಗಿ ಯಮದೇವರು ಹೇಳಲು ಚಿತ್ರಗುಪ್ತನೂ ಬ್ರಹ್ಮಶರ್ಮನ ಮನೆಗೆ ಹೋಗಿ ಸ್ವಲ್ಪ ಭಯವುಳ್ಳವನಾಗಿ ಸುಶೀಲೆಯು

ಸ್ವಲ್ಪ ದೂರದಲ್ಲಿರುವಾಗ ಬ್ರಹ್ಮಶರ್ಮನ ಬಳಿಗೆ ಹೋಗಿ ನಿಂತನು. ಆ ಸಮಯದಲ್ಲಿ ಸುಶೀಲೆಯು ಬಡಿಸಿದ ಯಾವುದೋ ಒಂದು ಪದಾರ್ಥವು ರುಚಿಕರವಾಗಿದ್ದ ಕಾರಣ ಇದನ್ನು ರಾತ್ರಿಗೆ ಇಟ್ಟುಬಿಡು ಎಂದು ಹೇಳಿದನು. ಆ ಮಾತನ್ನು ಕೇಳಿ ಚಿತ್ರಗುಪ್ತನು ಗಟ್ಟಿಯಾಗಿ ನಗಾಡಿದನು. ಸುಶೀಲೆಯು ನಗುವ ಶಬ್ದವನ್ನು ಕೇಳಿ ಯಾರು ನಗುತ್ತಿರುವವರು ಎಂದು ನೋಡಿದಳು. ಯಾರೂ ಕಾಣಿಸಲಿಲ್ಲ, ಇದೇನು? ನಗುವ ಶಬ್ದವು ಕೇಳಿಸುತ್ತದೆ. ಯಾರೂ ಕಾಣಿಸುವುದಿಲ್ಲವಲ್ಲಾ' ಎಂದು ಆಶ್ಚರ್ಯಪಟ್ಟಳು. ನಾನು ಪತಿವ್ರತೆಯಾಗಿದ್ದರೆ ಯಾರು ನಗುವರು ಒಂದು ತಿಳಿಯಬೇಕು ಎಂದು ನಾನಾ ವಿಧವಾಗಿ ಪ್ರತಿಜ್ಞೆ ಮಾಡಿ ಹೇಳಿದಳು. ಈರೀತಿಯಾಗಿ, ಅನೇಕವಾಗಿ ಶಪಥಮಾಡಿ ಹೇಳಿದ ಮಾತನ್ನು ಕೇಳಿ ಸುಶೀಲೆಯ ಮುಂಭಾಗದಲ್ಲಿ ಮಂದಹಾಸವನ್ನು ಮಾಡುತ್ತಾ ಕಾಣಿಸಿಕೊಂಡನು. ದಿವ್ಯಾಭರಣಗಳಿಂದ ಅಲಂಕೃತನಾದ ಪ್ರಕಾಶಮಾನನಾದ ಚಿತ್ರಗುಪ್ತನನ್ನು ನೋಡಿ ಸುಶೀಲೆಯು 'ಇವನು ಯಾರಿರಬಹುದು? ಅಗ್ನಿಯೇ ಇಂದ್ರನೋ' ಇತ್ಯಾದಿ ರೀತಿಯಾಗಿ ಯೋಚಿಸಿದಳು.

ತರುವಾಯ ಪಾತಿವ್ರತ್ಯಪ್ರಭಾವದಿಂದ ಚಿತ್ರಗುಪ್ತನು ತನ್ನ ಗಂಡನನ್ನು ಕರೆದುಕೊಂಡು ಹೋಗಲಿಕ್ಕೆ ಬಂದಿರುವನೆಂದು ತಿಳಿದು ಚಿತ್ರಗುಪ್ತನಿಗೆ ನಮಸ್ಕಾರ ಮಾಡಿದಳು– ಆಗ ಚಿತ್ರಗುಪ್ತನು ನಮಸ್ಕಾರ ಮಾಡುತ್ತಿರುವ ಬಂಗಾರದಂತೆ ಪ್ರಕಾಶಿಸುವ ಸುಶೀಲೆಯನ್ನು ನೋಡಿ ದೀರ್ಘಸೌಮಂಗಲ್ಯವು ಬರುವಂತೆ ಆಶೀರ್ವಾದ ಮಾಡಿದನು. ಮಂಗಲಕರವಾದ ಅವನ ಮಾತನ್ನು ಕೇಳಿ ನನಗೆ ಸೌಮಂಗಲ್ಯವು ಬಂದಿತು ಎಂದು ಸಂತೋಷವುಳ್ಳವನಾಗಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದಳು. 'ದೇವ! ನಿಮ್ಮ ಮಾತು ಸತ್ಯವಾಗಬೇಕು' ನೀವು ನನಗೆ ಕೊಟ್ಟಿರುವ ಸೌಮಂಗಲ್ಯವನ್ನು ಈಗ ಪರಿಪಾಲಿಸಿರಿ' ಎಂದು ಹೇಳಿದಳು. ಅದನ್ನು ಕೇಳಿ ಚಿತ್ರಗುಪ್ತನು ಸ್ವಲ್ಪ ಲಜ್ಜೆಯುಳ್ಳವನಾಗಿ 'ನಿನ್ನ ಗಂಡನನ್ನು ಕರೆದುಕೊಂಡು ಹೋಗಲಿಕ್ಕೆ ಬಂದಿರುವೆನು. ನಮಸ್ಕಾರವನ್ನು ಮಾಡಿದ ನಿನ್ನನ್ನು ನೋಡಿ ಆಶೀರ್ವಾದವನ್ನು ಮಾಡಿದೆನು. ನಮಸ್ಕಾರ ಮಾಡಿದವರಿಗೆ ಆಶೀರ್ವಾದವನ್ನು ಮಾಡದೆ ಇದ್ದರೆ ಆಶೀರ್ವಾದ ಮಾಡದೆ ಇದ್ದವನ ಆಯುಷ್ಯವು ಕ್ಷೀಣವಾಗುವುದು. ಉಪನಯನವಾದವನು ಎಂದರೆ ಬ್ರಹ್ಮಚಾರಿಯು ನಮಸ್ಕರಿಸಿದರೆ ಆಯುಷ್ಯವಂತನಾಗು, ಬುದ್ಧಿವಂತನಾಗು ಎಂದು ಆಶೀರ್ವದಿಸಬೇಕು. ಗೃಹಸ್ಥನು ನಮಸ್ಕರಿಸಿದರೂ ಆಯುಷ್ಯವಂತನಾಗು ಎಂದೇ ಆಶೀರ್ವದಿಸಬೇಕು. ಕನ್ಯೆಯು ನಮಸ್ಕರಿಸಿದರೆ ಒಳ್ಳೇ ಗಂಡನನ್ನು ಹೊಂದು ಎಂದು ಆಶೀರ್ವಾದ ಮಾಡಬೇಕು. ಮದುವೆಯಾದವಳು

ನಮಸ್ಕರಿಸಿದರೆ ಸೌಮಂಗಲ್ಯವನ್ನು ಹೊಂದುವಂತೆ ಆಶೀರ್ವದಿಸಬೇಕು. ವಿಧವೆಯು ನಮಸ್ಕರಿಸಿದರೆ ಜ್ಞಾನವುಳ್ಳವಳಾಗು ಎಂದು ಆಶೀರ್ವದಿಸಬೇಕು.

ಈರೀತಿಯಾಗಿ ಆಶೀರ್ವಾದ ಮಾಡುವ ಕ್ರಮವನ್ನು ತಿಳಿದುಕೊಂಡವನೇ ಕ್ಷೇಮಿಯಾಗುವನು. ಆದುದರಿಂದ ನಾನು ನಮಸ್ಕರಿಸಿದ ನಿನಗೆ ಆಶೀರ್ವಾದ ಮಾಡಿದೆನು. ನಾನು ನಿನಗೆ ಸೌಮಂಗ್ಯವನ್ನು ಕೊಟ್ಟಿರುವೆನು. ನಿನ್ನ ಗಂಡನು ದೀರ್ಘಾಯುಷ್ಯವುಳ್ಳವ ನಾಗುವನು. ನನ್ನ ಆಶೀರ್ವಾದವು ಸತ್ಯವಾಗುವಂತೆ ಉಪಾಯವನ್ನು ಹೇಳುವೆನು. ನೀನು ತುಲಾಮಾಸದಲ್ಲಿ ಕಾವೇರಿಯಲ್ಲಿ ಪತಿಯ ದೀರ್ಘಾಯುಷ್ಯಕ್ಕಾಗಿ ಸ್ನಾನ ಮಾಡಿರುವಿ. ಅದರ ಫಲವನ್ನು ಕೊಡು. ನೀನು ದುಃಖಪಡಬೇಡ. ನಿನ್ನ ಗಂಡನನ್ನು ಯಮದೇವರಿಗೆ ತೋರಿಸಿ ಆಮೇಲೆ ಇಲ್ಲಿಯೇ ತಂದುಬಿಡುವೆನು' ಎಂದನು.

ಸುಶೀಲೆಯು 'ನೀವು ಕಾರಣವಿಲ್ಲದೆ ಯಾಕೆ ನಗಾಡಿದಿರಿ? ಅದನ್ನು ಹೇಳಬೇಕು' ಎಂದಳು.

ಚಿತ್ರಗುಪ್ತನು 'ಪಾಪದಿಂದ ಆಯುಷ್ಯವು ಕ್ಷೀಣವಾಗಿದೆ. ಆದರಿಂದ ನಿನ್ನ ಗಂಡನನ್ನು ಕರೆದುಕೊಂಡು ಹೋಗಲಿಕ್ಕೆ ನಾನು ಬಂದಿರುವೆನು. ಇನ್ನೊಂದು ಕ್ಷಣದಲ್ಲಿ ಸಾಯುವನು. ಇದನ್ನು ತಿಳಿಯದೆ ತಾನು ಬಹುಕಾಲ ಇರುವಂತೆ ತಿಳಿದುಕೊಂಡು ನನಗೆ ರುಚಿಕರವಾದ ವಸ್ತುವನ್ನು ರಾತ್ರಿಗೆ ಇಡುವಂತೆ ಹೇಳಿದನು. ಅದನ್ನು ಕೇಳಿ ನಗಾಡಿದನು. ಲೋಕದ ಜನರೆಲ್ಲರೂ 'ಇವರು ನನ್ನ ಮಕ್ಕಳು. ಇವರನ್ನು ನಾನು ರಕ್ಷಿಸಬೇಕು. ಈ ಮನೆಯನ್ನು ನಾನು ಕಟ್ಟಿಸಬೇಕು. ನಿಂದ್ಯವಾದ ಕರ್ಮವನ್ನು ಮಾಡಿಯಾದರೂ ಈ ನನ್ನ ಹೆಂಡತಿಯನ್ನು ರಕ್ಷಿಸಬೇಕು. ನಾನು ಮನೆಯಲ್ಲಿ ಸುಮ್ಮನೆ ಇದ್ದರೆ ಇವರಿಗೆಲ್ಲಾ ಏನು ಗತಿ?' ಈರೀತಿಯಾಗಿ ಸಂಸಾರದಲ್ಲಿ ಮೋಹದಿಂದ ಬದ್ಧರಾಗಿರುವರು. ನಡೆಯಲಿಕ್ಕೆ ಆಗದ ಮುದುಕನಾಗಿರುವ ಕಾಲದಲ್ಲಿ ಸದಾಚಾರವನ್ನು ಬಿಡುವನು. ಕಣ್ಣುಕಿವಿಗಳು ಬಿದ್ದು ಹೋಗುವುವು. ರೋಗವು ಬರುವುದು. ಆಗ ಅಳುವನು. ಮಗ! ಮಗ! ನನಗೆ ಭಯವಾಗುತ್ತದೆ. ನನ್ನನ್ನು ರಕ್ಷಿಸು ಎಂದು ಹೇಳುವನು. ಆಗ ಬಂಧುಗಳು ಮೂಢ! ಯಾಕೆ ಕೂಗುವಿ? ಸುಮ್ಮನೆ ಇರು ಎಂದು ನಿಂದಿಸುವರು. ಆಗ ಇವನು ನಾನು ಪರಲೋಕಕ್ಕೆ ಹಿತವಾದ ಒಂದು ಕಾರ್ಯವನ್ನೂ ಮಾಡಲಿಲ್ಲವಲ್ಲಾ! ನಾನು ಎಲ್ಲಿಗೆ ಹೋಗಬೇಕೋ? ಭಿಕ್ಷುಕರು ಮನೆಗೆ ಬಂದಾಗ ಲೋಭದಿಂದ ಅನ್ನವಿಲ್ಲ ಹೋಗು ಹೋಗು ಎಂದು ತಿರಸ್ಕರಿಸಿದೆನು. ಇನ್ನಾದರೂ ಸ್ವಲ್ಪ ಪುಣ್ಯಸಂಗ್ರಹವನ್ನು ಮಾಡಬೇಕು.

ಈರೀತಿಯಾಗಿ ಹೇಳುತ್ತಾ ಇರುವನು. ಧರ್ಮವನ್ನು ಮಾಡಲಿಕ್ಕೆ ಅಶಕ್ತನಾದ ಬಂಧುಗಳಿಂದ ಪರಿತ್ಯಾಗಮಾಡಲ್ಪಟ್ಟ ದುಃಖವುಳ್ಳ ಈ ಪುರುಷನನ್ನು ಇಲಿಯನ್ನು ಬೆಕ್ಕು ಹಿಡಿಯುವಂತೆ ಯಮದೇವರು ಹಿಡಿಯುವರು. ಆದುದರಿಂದ ಜನರು ಸಂಸಾರದಲ್ಲಿ ಅಭಿಮಾನವನ್ನು ಬಿಟ್ಟು ಧರ್ಮವನ್ನು ಸಂಗ್ರಹಿಸಬೇಕು. ಸುಂದರಿ! ನೀನು ಕೊಟ್ಟ ಕಾವೇರಿಸ್ನಾನದ ಪುಣ್ಯದಿಂದಲೂ ನನ್ನ ಅನುಗ್ರಹದಿಂದಲೂ ನಿನ್ನ ಗಂಡನು ದೀರ್ಘಾಯುಷ್ಯವುಳ್ಳವನಾಗುವನು. ಒಂದು ಝಾಮದವರೆಗೆ ಇವನ ದೇಹವನ್ನು ನೋಡಿಕೊಂಡಿರು. 'ನಿನ್ನ ಗಂಡನನ್ನು ತಂದುಬಿಡುವೆನು' ಎಂದು ಹೇಳಿದನು.

ಈರೀತಿಯಾಗಿ ಸುಶೀಲೆಯೂ ಚಿತ್ರಗುಪ್ತನೂ ಮಾತಾಡಿಕೊಂಡದ್ದು ಬ್ರಹ್ಮಶರ್ಮನಿಗೆ ಕೇಳಿಸಿರಲಿಲ್ಲ. 'ನನಗೆ ಬೇಗನೇ ಅನ್ನ ಹಾಕು. ಕೃಷಿ ಮಾಡಲಿಕ್ಕೆ ಹೋಗಬೇಕಾಗಿದೆ' ಎಂದು ಅವಸರದಿಂದ ಹೇಳಿದನು. ಆಗ ಅನ್ನವು ಗಂಟಲಿಗೆ ಸಿಕ್ಕಿಕೊಂಡಿತು ಎಂಬ ನೆಪವನ್ನು ಮಾಡಿಕೊಂಡು ಆ ಬ್ರಾಹ್ಮಣಜೀವನನ್ನು ಹಿಡಿದು ಕೊಂಡು ಯಮಲೋಕವನ್ನು ಕುರಿತು ಚಿತ್ರಗುಪ್ತನು ಹೋದನು. ಆಗ ಇಬ್ಬರು ಸಾಲಗಾರರಾದ ಚರ್ಮಹೊಲಿಯುವವರು (ಸಮೆಗಾರರು) ಬಂದರು. ಬ್ರಹ್ಮ ಶರ್ಮನೊಡನೆ 'ದುಷ್ಟನೇ! ಎಲ್ಲಿಗೆ ಹೋಗುವಿ? ಈಗ ನಮ್ಮ ಕೈಗೆ ಸಿಕ್ಕಿದಿ. ಇವನು ಪೂರ್ವದಲ್ಲಿ ನಮ್ಮ ಕೈಯಲ್ಲಿ ಬೊಟ್ಟನ್ನು ತೆಗೆದುಕೊಂಡು ಅದರ ಕ್ರಯವನ್ನು ಕೊಡಲಿಲ್ಲ. ಎಲಾ! ಆ ಮೆಟ್ಟುಗಳನ್ನು ನಮಗೀಗ ಕೊಡು. ಇಲ್ಲದಿದ್ದರೆ ನಿನಗೆ ಹೋಗಲಿಕ್ಕೆ ಆಗಲಾರದು' ಎಂದರು.

ಆದಕ್ಕೆ ಚಿತ್ರಗುಪ್ತನು 'ಆ ಮೆಟ್ಟಿನ ಕ್ರಯವನ್ನು ನಾನು ಕೊಡುವೆನು. ಈ ಬ್ರಾಹ್ಮಣನು ಮುಂದೆ ಹೋಗಲಿ. ನೀವು ನಿಮ್ಮ ಹಣವನ್ನು ತೆಗೆದುಕೊಂಡು ಹೋಗಿರಿ' ಎಂದನು. ಆಗ ಆ ಚರ್ಮ ಹೊಲಿಯುವವರು ಚಿತ್ರಗುಪ್ತನೊಡನೆ ವಿನಯದಿಂದ 'ಸ್ವಾಮೀ! ನಾವು ಪೂರ್ವದಲ್ಲಿ ಹಸಿವೆ ಪರಿಹಾರ ಮಾಡಿಕೊಳ್ಳುವುದ ಕ್ಕಾಗಿ ಈ ಬ್ರಾಹ್ಮಣನಿಗೆ ಮೆಟ್ಟನ್ನು ಮಾರಿದೆವು. ಇವನು ಅದರ ಕ್ರಯವನ್ನು ಕೊಡಲೇ ಇಲ್ಲ. ನಮ್ಮನ್ನು ನೋಡಿದ ಕೂಡಲೇ ಶಪಿಸುತ್ತಿದ್ದನು. ನಾವು ಹೀನ ಜಾತಿಯವರಾದ ಕಾರಣ ಮನೆಯ ಹೊರಗೆ ಸುಮ್ಮನೆ ಇದ್ದೆವು. ನಮಗೆ ಈಗ ಮೆಟ್ಟಿನ ಕ್ರಯವು ಬೇಡ. ಆ ಮೆಟ್ಟಿಗೆ ಸಮಾನವಾದ ಚರ್ಮವನ್ನು ಕೊಡಲಿ. ಗೋವನ್ನು ಬ್ರಾಹ್ಮಣರನ್ನು ಸ್ತ್ರೀಯರನ್ನು ಕೊಂದವನಿಗೆ ಪ್ರಾಯಶ್ಚಿತ್ತವಿದೆ. ಸಾಲಗಾರನಿಗೆ ಬೇರೆ ಪ್ರಾಯಶ್ಚಿತ್ತವಿಲ್ಲ. ಸಾಲವನ್ನು ತಿರುಗಿಸಿ ಕೊಡುವುದೇ ಪ್ರಾಯಶ್ಚಿತ್ತವು. ತಿರುಗಿಸಿಕೊಡದೆ ಇದ್ದರೆ

ನರಕಗಳನ್ನೇ ಹೊಂದುವನು. ಈಗ ಇವನ ಮಕ್ಕಳಾಗಿ ನಾವು ಇವನ ಮನೆಯ್ಯಲ್ಲಿ ಹಣವನ್ನು ಅನುಭವಿಸುತ್ತಿರುವೆವು' ಎಂದು ಹೇಳಿ ಕೋಪದಿಂದ ಬ್ರಾಹ್ಮಣನನ್ನು ಹೊಡೆಯಲು ಹೋದರು. ಈ ಸಮಯದಲ್ಲಿ ಅಲ್ಲಿಗೆ ಇಬ್ಬರು ಬ್ರಹ್ಮಚಾರಿಗಳು ಬಂದು ಚರ್ಮ ಹೊಲಿಯುವವರೊಡನೆ 'ಈ ಬ್ರಾಹ್ಮಣನು ನಮಗೆ ಪೂರ್ವದಲ್ಲಿ ಉಪಕಾರ ಮಾಡಿರುವನು. ಅದಕ್ಕೆ ನಾವು ಪ್ರತ್ಯುಪಕಾರ ಮಾಡಲಿರುವೆವು. ಈ ಬ್ರಾಹ್ಮಣನು ನಿಮಗೆ ಏನು ಕೊಡಬೇಕು. ಹೇಳಿರು. ನಾವು ಕೊಡುವೆವು' ಎಂದರು.

ಆಗ ಚರ್ಮ ಹೊಲಿಯುವವರು 'ಇವನು ನಮ್ಮ ಬಳಿಯಲ್ಲಿ ಮೆಟ್ಟನ್ನು ಕ್ರಯಕ್ಕೆ ಪಡೆದ ಅದರ ಕ್ರಯವನ್ನು ನಮಗೆ ಕೊಡಲಿಲ್ಲ. ಅದರ ಕ್ರಯವು ನಮಗೀಗ ಬೇಕಾಗಿಲ್ಲ. ನಮಗೆ ಆ ಮೆಟ್ಟಿನಷ್ಟೇ ಚರ್ಮವು ಬೇಕು' ಎಂದರು. ಅದಕ್ಕೆ ಬ್ರಹ್ಮಚಾರಿಗಳು 'ನಾವು ಚರ್ಮವನ್ನು ಕೊಡುತ್ತೇವೆ. ಈ ಬ್ರಾಹ್ಮಣನು ಋಣಪರಿಹಾರ ವಾಗಿ ಹೊರಟುಹೋಗಲಿ' ಎಂದು. ಚರ್ಮ ಹೊಲಿಯುವವರು 'ಹಾಗಾದರೆ ಕೊಡಿ' ಎಂದರು. ಬ್ರಹ್ಮಚಾರಿಗಳು ಮೈಯಿಂದ ಚರ್ಮವನ್ನು ಸುಲಿದು ತೂಕ ಮಾಡಿ ಮೆಟ್ಟಿನಷ್ಟು ಚರ್ಮವನ್ನು ಕೊಟ್ಟರು. ಬ್ರಾಹ್ಮಣನೊಡನೆ ನೀನು ಹೊರಟುಹೋಗು ಎಂದರು. ಬ್ರಹ್ಮಶರ್ಮನು ಆ ಬ್ರಹ್ಮಚಾರಿಗಳನ್ನು ನೋಡಿ ಆಶ್ಚರ್ಯವುಳ್ಳವನಾಗಿ 'ನೀವು ಯಾರು? ಎಲ್ಲಿನವರು? ಹೇಗೆ ಬಂದಿರುವಿರಿ? ನಿಷ್ಕಾರಣವಾಗಿ ನನ್ನಲ್ಲಿ ಸ್ನೇಹವನ್ನು ಮಾಡಿದಿರಿ. ದಯಾಶೀಲರಾದ ನಿಮಗೆ ಪೂರ್ವದಲ್ಲಿ ನಾನೇನು ಉಪಕಾರವನ್ನು ಮಾಡಿರುವೆನು' ಎಂದು ಕೇಳಿದರು.

ಅದಕ್ಕೆ ಬ್ರಹ್ಮಚಾರಿಗಳು 'ನಾವು ನಿನ್ನಿಂದ ಪೂರ್ವದಲ್ಲಿ ಅಭಿವೃದ್ಧರಾದ ಅಶ್ವತ್ಥಮರಗಳು. ನಿತ್ಯವೂ ನಮಗೆ ನೀರನ್ನು ಹಾಕಿ ನಮ್ಮನ್ನು ರಕ್ಷಿಸಿರಿ. ಸೇವಿಸಿದಿ. ಪಾಪನಾಶವನ್ನು ಮಾಡಬೇಕೆಂದು ನಮಗೆ ನೀರನ್ನು ಹಾಕಿ ಶನಿವಾರದಲ್ಲಿ ಏಳು ಪ್ರದಕ್ಷಿಣೆಗಳನ್ನು ಮಾಡಿರುವಿ. ಅದನ್ನ ಸ್ಮರಿಸಿಕೊಂಡು ಈಗ ನಿನ್ನನ್ನು ರಕ್ಷಣೆ ಮಾಡಲಿಕ್ಕೆ ಬಂದಿರುವೆವು. ನಿನ್ನ ಸಾಲಗಾರರಿಗೆ ನಮ್ಮ ಚರ್ಮವನ್ನು ತೆಗೆದುಕೊಟ್ಟಿರುವೆವು. ನೀನು ಭೂಮಿಗೆ ಬಂದಮೇಲೆ ನದೀತೀರದಲ್ಲಿ ಚರ್ಮವನ್ನು ಸುಲಿದಿರುವ ನಮ್ಮನ್ನು ನೋಡಬಹುದು' ಎಂದು ಹೇಳಿ ಮರೆಯಾದರು. ಚಿತ್ರಗುಪ್ತನು ಬ್ರಹ್ಮಶರ್ಮ ನೊಡನೆ 'ಅಶ್ವತ್ಥವೃಕ್ಷಗಳನ್ನು ಬೆಳೆಸಿ ಸೇವಾಮಾಡಿದ ಪುಣ್ಯದ ಫಲವನ್ನು ನೋಡಿದಿಯಾ? ಅಶ್ವತ್ಥ ಸೇವನೆಯಿಂದ ನೀನು ಮಾಡಿದ ಪಾಪಗಳೆಲ್ಲಾ ನಾಶವನ್ನು ಹೊಂದಿದವು. ಕಾವೇರೀ ಸ್ನಾನದ ಪುಣ್ಯದಿಂದ ಪುನಃ ಆಯುಷ್ಯವುಳ್ಳವನಾಗಿರುವೆ. ಇನ್ನು ಮುಂದೆ ಭೂಮಿಗೆ ಹೋಗಿ ಪುಣ್ಯವನ್ನು ಮಾಡು. ಈಗ ಯಮದೇವರ

ಸಂತೋಷಕ್ಕಾಗಿಯೂ ನಾನು ಕೊಟ್ಟ ಆಯುಷ್ಯವು ಸಿದ್ಧಿಸುವುದಕ್ಕಾಗಿಯೂ ನಿನಗೊಂದು ಯಮದೇವರ ಸ್ತೋತ್ರವನ್ನು ಉಪದೇಶಿಸುವೆನು' ಎಂದು ಹೇಳಿ ಯಮಸೋತ್ರವನ್ನು ಉಪದೇಶಿಸಿ 'ನಾನು ಯಮದೇವರ ಬಳಿಗೆ ಕರೆದುಕೊಂಡು ಹೋಗುವೆನು. ಯಮದೇವರನ್ನು ನೋಡಿದ ಕೂಡಲೇ ಉದ್ದಕ್ಕೆ ನಮಸ್ಕಾರಮಾಡಿ ಈ ಸ್ತೋತ್ರವನ್ನು ಹೇಳು. ಆಗ ಯಮದೇವರು ಸಂತೋಷವುಳ್ಳವರಾಗಿ ನಿನಗೆ ಆಯುಷ್ಯವನ್ನು ಕೊಡುವರು. ನಿನಗೆ ದೀರ್ಘಾಯುಷ್ಯವಾಗಲಿ ಎಂದು ಆಶೀರ್ವಾದ ಮಾಡುವರು' ಎಂದು ಹೇಳುತ್ತಾ ಬ್ರಹ್ಮಶರ್ಮನನ್ನು ಯಮದೇವರ ಬಳಿಗೆ ಕರೆದುಕೊಂಡು ಹೋದನು. ಬ್ರಹ್ಮಶರ್ಮನು ಯಮದೇವರ ಬಳಿಗೆ ಕರೆದುಕೊಂಡು ಹೋದನು. ಬ್ರಹ್ಮಶರ್ಮನು ಸಂಯಮನೀಪುರದಲ್ಲಿ ಸಭೆಯಲ್ಲಿ ಸಿಂಹಾಸನದಲ್ಲಿ ಕೂತಿರುವ ಯಮದೇವರನ್ನು ದೂರದಲ್ಲಿಯೇ ನೋಡಿ ಹತ್ತಿರ ಹೋಗಿ ಉದ್ದಕ್ಕೆ ನಮಸ್ಕಾರ ಮಾಡಿ ಚಿತ್ರಗುಪ್ತನು ಉಪದೇಶಿಸಿರುವ ಸ್ತೋತ್ರವನ್ನು ಹೇಳಿ ಪುನಃ ಪುನಃ ನಮಸ್ಕಾರ ಮಾಡಿದನು.

ಆಗ ಯಮದೇವರ ಗಂಭೀರವಾದ ಧ್ವನಿಯಿಂದ ಆಯುಷ್ಯವಂತನಾಗು ಎಂದು ಆಶೀರ್ವದಿಸಿದರು. ಚಿತ್ರಗುಪ್ತನು ಯಮದೇವರೊಡನೆ ಎಲ್ಲಾ ವಿಷಯ ವನ್ನೂ ತಿಳಿಸಿದನು. ಆಗ ಯಮದೇವರು ಸಂತೋಷದಿಂದ ಬ್ರಹ್ಮಶರ್ಮನೊಡನೆ 'ನೀನು ಮಾಡಿದ ಸ್ತೋತ್ರದಿಂದ ಸಂತೋಷವುಳ್ಳವನಾಗಿ ದೀರ್ಘಾಯುಷ್ಯವನ್ನು ಕೊಟ್ಟಿರುವೆನು. ಬೇಗನೇ ಮನೆಗೆ ಹೋಗು. ಪಾಪದಲ್ಲಿ ಮನಸ್ಸು ಇಡಬೇಡ. ನೀನು ಮಾಡಿದ ಸ್ತೋತ್ರವನ್ನು ಹೇಳುವವರಿಗೆ ರೋಗವು ಪರಿಹಾರವಾಗಿ ಆಯುಷ್ಯವು ಹೆಚ್ಚುವುದು. ಈ ಸ್ತೋತ್ರವನ್ನು ಹೇಳಿದರೂ ಕೇಳಿದರೂ ಆಯುಷ್ಯವು ಹೆಚ್ಚುವು ದಲ್ಲದೆ ಸಂಪತ್ತು ಉಂಟಾಗುವುದು' ಎಂದರು.

ಬ್ರಹ್ಮಶರ್ಮನು 'ಯಾವ ಪುಣ್ಯದ ಪ್ರಭಾವದಿಂದ ನನಗೆ ಈಗ ದೀರ್ಘಾ ಯುಷ್ಯವು ಬಂದಿತು. ಯಾವ ಪಾಪದ ಫಲದಿಂದ ನನ್ನ ಆಯುಷ್ಯವು ನಷ್ಟವಾಯಿತು. ತಾವು ಹೇಳಬೇಕು. ತಮಗೆ ತಿಳಿಯದ ವಿಷಯವಿಲ್ಲ' ಎಂದು ಕೇಳಿದನು.

ಯಮದೇವರು– 'ನೀನು ಪೂರ್ವಜನ್ಮದಲ್ಲಿ ರೋಗಿಷ್ಠನಾದ ಪರದೇಶಿಯಾದ ಒಬ್ಬ ದರಿದ್ರಬ್ರಾಹ್ಮಣನನ್ನು ಮನೆಯಲ್ಲಿ ಇಟ್ಟುಕೊಂಡು ಔಷಧವನ್ನು ಕೊಟ್ಟು ರಕ್ಷಣೆ ಮಾಡಿದಿ. ಆ ಪುಣ್ಯದಿಂದ ನಿನಗೀಗ ದೀರ್ಘಾಯುಷ್ಯವು ಬಂದಿತು. ಮತ್ತು ನೀನು ಪರಾನ್ನವನ್ನು ಭೋಜನ ಮಾಡಿದ್ದರಿಂದಲೂ ಔಪಾಸನವನ್ನು ಬಿಟ್ಟಿರುವ ಕಾರಣ ದಿಂದಲೂ ತಿನ್ನಬಾರದ ವಸ್ತುವನ್ನು ತಿಂದ ಕಾರಣದಿಂದಲೂ ಆಯುಷ್ಯವು

ಕ್ಷೀಣವಾಯಿತು. ಆದುದರಿಂದ ಸದಾಚಾರವುಳ್ಳವನಾಗಿ ಶಾಸ್ತ್ರದಲ್ಲಿ ಹೇಳಿದಂತೆ ನಡೆಯಬೇಕು. ಇಲ್ಲದಿದ್ದರೆ ನರಕವುಂಟಾಗುವುದು. ಬ್ರಾಹ್ಮಣ! ಬೇಗನೇ ಮನೆಗೆ ಹೋಗು. ನಿನ್ನ ಬಂಧುಗಳೆಲ್ಲರೂ ದುಃಖಪಡುತ್ತಿರುವರು' ಎಂದು ಹೇಳಲು ಬ್ರಾಹ್ಮಣನು ವಿನಯದಿಂದ ಯಮದೇವರಿಗೆ ನಮಸ್ಕರಿಸಿ ಯಮದೂತರಿಂದ ಬೇಗನೆ ಮನೆಗೆ ಕರೆದುಕೊಂಡು ಹೋಗಲ್ಪಟ್ಟನು. ಮನೆಯಲ್ಲಿ ಬ್ರಹ್ಮಶರ್ಮನು ನಿದ್ದೆ ಮಾಡಿದವನು ಎಚ್ಚತ್ತಂತೆ ಎದ್ದನು. ಸುಶೀಲೆಯು ಸತ್ತು ಪುನಃ ಬದುಕಿದ ಗಂಡನನ್ನು ನೋಡಿ ಆನಂದಬಾಷ್ಪವನ್ನು ಸುರಿಸುತ್ತಾ ಗಟ್ಟಿಯಾಗಿ ಆಲಿಂಗನ ಮಾಡಿದಳು. ಅವನಿಗೆ ನಮಸ್ಕರಿಸಿ ನೋಡುತ್ತಾ ಪುನಃ ಸ್ನೇಹದಿಂದ ಕುತೂಹಲದಿಂದ ಯಮಲೋಕದ ವೃತ್ತಾಂತವನ್ನು ಕೇಳಿದಳು. ಬ್ರಹ್ಮಶರ್ಮನು ಸುಶೀಲೆಯೊಡನೆ ಯಮಲೋಕದ ವೃತ್ತಾಂತವನ್ನು ತನ್ನ ವೃತ್ತಾಂತವನ್ನೂ ಹೇಳಿದನು. ಯಮದೇವರ ವೃತ್ತಾಂತವನ್ನೂ ಯಮದೇವರು ಹೇಳಿದ ಮಾತನ್ನೂ ಆಶ್ವತ್ಥಮರ ಋಣಾನು ಬಂಧನ್ನೂ ಕೇಳಿ ಸುಶೀಲೆಯು ಆಶ್ಚರ್ಯದಿಂದ ಸ್ತೋತ್ರ ಮಾಡಿದಳು. ಆ ಸಮಯವನ್ನು ಆರಂಭಿಸಿ ಸುಶೀಲೆಯು ನಿತ್ಯವೂ ಗಂಡನ ಹಿತವನ್ನು ಅಪೇಕ್ಷಿಸಿ ಕಾವೇರೀಸ್ನಾನಮಾಡುತ್ತಾ ಅಶ್ವತ್ಥಸೇವೆಯನ್ನು ಮಾಡುತ್ತಾ ಶುದ್ಧವಾದ ಮನಸ್ಸಿನಿಂದ ಗಂಡನ ಸೇವೆಯನ್ನು ಮಾಡುತ್ತಾ ಇದ್ದಳು. ಕ್ರಮದಿಂದ ಸುಶೀಲೆಯು ಪೂರ್ವ ಕರ್ಮಾನುಸಾರವಾಗಿ ಮರಣವನ್ನು ಹೊಂದಿದವಳಾಗಿ ಪತಿವ್ರತೆಯಾದ ಪ್ರಯುಕ್ತ ವಿಮಾನದಲ್ಲಿ ಕೂತುಕೊಂಡು ಬ್ರಹ್ಮಲೋಕಕ್ಕೆ ಹೋದಳು. ಈರೀತಿಯಾದ ಸುಶೀಲೋಪಾಖ್ಯಾನವು ಪರಮಪವಿತ್ರವಾದದ್ದು. ಇದನ್ನು ಹೇಳುವವರಿಗೂ ಕೇಳುವವರಿಗೂ ಸರ್ವಪಾಪಪರಿಹಾರವಾಗುವುದು.



## ಚಂದ್ರಕಾಂತೆಯ ಕಥೆ [1]

ಪೂರ್ವದಲ್ಲಿ ಋಷಭಾದ್ರಿಯ ಬಳಿಯಲ್ಲಿ ಕೃತಮಾಲಾನದಿಯ ತೀರದಲ್ಲಿ ಮನೋಹರವಾದ ಮಥುರಾ ಎಂಬ ಪಟ್ಟಣವಿದ್ದಿತು. ಅದರಲ್ಲಿ ಸದಾಚಾರ ಸಂಪನ್ನನಾದ ವೇದವೇದಾಂಗಶಾಸ್ತ್ರಸಂಪನ್ನನಾದ ವೇದರಾಶಿ ಎಂಬ ಹೆಸರುಳ್ಳ ಬ್ರಾಹ್ಮಣನಿದ್ದನು. ಅವನಿಗೆ ಪತಿವ್ರತೆಯಾದ ಚಂದ್ರಕಾಂತೆಯೆಂಬ ಹೆಂಡತಿಯಿದ್ದಳು. ಅವಳು ಯಾವಾಗಲೂ ಗಂಡನ ಸೇವೆಯನ್ನು ಭಕ್ತಿಯಿಂದ ಮಾಡುತ್ತಿದ್ದಳು.

ಹೀಗಿರಲು ಒಂದು ಸಮಯದಲ್ಲಿ ಇವಳಿಗೆ ವಿದ್ಯಾವಲ್ಲಿ ಎಂಬ ಒಬ್ಬ

ವ್ಯಭಿಚಾರಿಣಿಸ್ತ್ರೀಯ ಸಹವಾಸವು ಏರ್ಪಟ್ಟಿತು. ವಿದ್ಯಾವಲ್ಲಿಯು ತುಂಬಾ ದುಷ್ಟಳು. ತನ್ನ ಗಂಡನನ್ನೇ ಕೊಂದಿದ್ದಳು. ಎಲ್ಲಾ ಪತಿವ್ರತಾಸ್ತ್ರೀಯರಿಗೆ ಉಪದೇಶಿಸುತ್ತಾ ಅವರನ್ನು ಕೆಡಿಸುತ್ತಾ ಇದ್ದಳು. ತನ್ನಂತೆ ಇರುವವರನ್ನು ನೋಡಿ ಸಂತೋಷಪಡುತ್ತಾ ಇದ್ದಳು. ಒಂದು ದಿವಸದಲ್ಲಿ ಅವಳು ಯಾರೂ ಇಲ್ಲದಿರುವ ಸಮಯವನ್ನು ನೋಡಿ ಚಂದ್ರಕಾಂತೆಯೊಡನೆ 'ಚಂದ್ರಕಾಂತೆ! ನಿನ್ನೊಡನೆ ಒಂದು ರಹಸ್ಯವನ್ನು ಮಾತಾಡುತ್ತೇನೆ ಕೇಳು. ನಿನಗೆ ನಾನು ಪ್ರಿಯಮಾಡುವವಳು. ನಿನ್ನ ಗಂಡನು ನೀನು ಹೇಳಿದಂತೆ ಕೇಳುತ್ತಾನೋ ಇಲ್ಲವೋ? ಸ್ತ್ರೀಯರಿಗೆ ಯೌವನವು. ಬಹುಕಾಲವಿರಲಾರದು. ಯೌವನದಲ್ಲಿಯೇ ಸುಖವನ್ನು ಅನುಭವಿಸಬೇಕು. ನಿನಗೆ ಬೇಕಾಗಿದ್ದರೆ ಎಂದರೆ ನಿನ್ನ ಗಂಡನು ನಿನ್ನ ವಶನಾಗಿರದಿದ್ದರೆ ಬೇರೆ ಪುರುಷರನ್ನು ಕರೆದುಕೊಂಡು ಬಿಡುತ್ತೇನೆ' ಎಂದು ಹೇಳಿದಳು.

ಪತಿವ್ರತೆಯಾದ ಚಂದ್ರಕಾಂತೆಗೆ ಈ ಮಾತು ಕೇಳಿ ಸಹಿಸಲಾಗದಾಯಿತು. ಕೋಪವುಂಟಾಯಿತು. ಲಜ್ಜಾವುಂಟಾಯಿತು. 'ಏನಮ್ಮ! ಇಂತಹ ಕೆಟ್ಟ ಮಾತುಗಳನ್ನು ಆಡುವಿ? ನಮ್ಮ ಪತಿಗಳು ಒಳ್ಳೇ ಓದಿಕೊಂಡವರು. ಶಾಸ್ತ್ರದಲ್ಲಿ ಹೇಳಿದಂತೆ ಇರುವವರು. ಅವರು ಶಾಸ್ತ್ರದಲ್ಲಿ ನಿಷಿದ್ಧದಿವಸಗಳನ್ನು ಬಿಟ್ಟು ನನ್ನನ್ನು ಸಂತೋಷಪಡಿಸುವರು' ಎಂದು ಹೇಳಿದಳು. ಆಗ ವಿದ್ಯಾವಲ್ಲಿಯು ಚಂದ್ರಕಾಂತೆಯನ್ನು ತನ್ನ ವಶಮಾಡಿಕೊಳ್ಳುವವಳಾಗಿ 'ಅಮಂಗಳೆಯೇ! ನಾನು ಹೇಳುವ ಮಂಗಲಕರವಾದ ಮಾತನ್ನು ಕೇಳು. ಎಲ್ಲರಿಗೂ ತಮಗೆ ತಾವು ಪ್ರಿಯರಾಗಿರುವರು. ಇಂತಹ ಒಳ್ಳೇ ಯೌವನದಲ್ಲಿ ಸೌಖ್ಯವನ್ನು ಅನುಭವಿಸುವುದನ್ನು ಬಿಡುವುದುಂಟೆ? ಸುಮ್ಮನೆ ಇದ್ದರೂ ರೋಗವು ಬಂದೇ ಬರುವುದು. ನಿನ್ನ ಗಂಡನ ಸ್ವಭಾವವು ನಿನಗೆ ತಿಳಿಯದು. ನಿನಗೆ ಪಾಪ ಕಪಟವು ತಿಳಿಯದು. ನಿನ್ನ ಗಂಡನೂ ನಿನ್ನಂತೆಯೇ ಎಂದು ತಿಳಿದಿರುವಿ. ಹಾಗೆ ಅಲ್ಲ. ಅವನು ಮಹಾಕಪಟಿಯು. ಅವನು ಒಬ್ಬ ದಾಸಿಯೊಡನೆ ರಾತ್ರಿ ಹಗಲು ವಿಹರಿಸುತ್ತಿರುವನು. ನಿನಗೆ ವಂಚನೆ ಮಾಡುತ್ತಿರುವನು. ಆ ದಾಸಿಯು ನನಗೆ ಬೇಕಾದವಳಾದ ಕಾರಣ ನನ್ನೊಡನೆ ಎಲ್ಲಾ ವಿಷಯವನ್ನೂ ತಿಳಿಸಿರುವಳು. ನಿನ್ನ ದುಃಖವೇ ನನಗೆ ದುಃಖ. ನಿನ್ನ ಸುಖವೇ ನನ್ನ ಸುಖ. ಅಷ್ಟು ಪ್ರೇಮವಿರುವ ಪ್ರಯುಕ್ತವೇ ನಿನ್ನೊಡನೆ ಇಷ್ಟು ಹೇಳಲಿಕ್ಕೆ ಕಾರಣವಾಯಿತು' ಈ ಪ್ರಕಾರವಾಗಿಯೆಲ್ಲಾ ತುಂಬಾ ಹೇಳಿದಳು.

ಆಗ ಚಂದ್ರಕಾಂತೆಯು 'ಪತಿಯು ವಂಚಕನಾಗಿರಲೀ ಅವಂಚಕನಾಗಿರಲೀ ಕೋಪಿಸಿಕೊಳ್ಳುವವನಾಗಿರಲೀ ಶಾಂತನಾಗಿರಲೀ ಮೂರ್ಖನಾಗಿರಲೀ ಗಂಡನೇ

ಹೆಂಡತಿಗೆ ದೇವತೆಯು. ಹೆಂಗಸರಿಗೆ ಗಂಡನಲ್ಲಿ ಭಕ್ತಿಯನ್ನು ಮಾಡದೆ ಬೇರೆ ಏನು ಧರ್ಮವಿದೆ? ಸ್ವರ್ಗವನ್ನು ಅಪೇಕ್ಷಿಸುವ ಹೆಂಗಸರಿಗೆ ಪತಿಯೇ ಸ್ವಾಮಿಯು. ಗಂಡನನ್ನು ನಿಂದಿಸುವ ಹೆಂಗಸು ನಾಯಿಯಾಗುವಳು' ಎಂದು ಹೇಳಿದಳು. ದುಷ್ಟೆಯಾದ ವಿದ್ಯಾವಲ್ಲಿಯು ಆದರೂ ಬಿಡಲಿಲ್ಲ. 'ಏನೇ ಹೀಗೆ ಹೇಳುವಿ? ಊರ್ವಶೀ ಮೇನಕಾ ರಂಭಾ ಘೃತಾಚೀ ಪುಂಜಕಸ್ಥಳೀ ಇತ್ಯಾದಿ ದೇವಲೋಕದ ಸ್ತ್ರೀಯರಿಲ್ಲವೇ? ಅವರು ವ್ಯಭಿಚಾರಿಣಿಯರಲ್ಲವೇ? ಎಲ್ಲರಿಗೂ ನರಕವು ಬಂದೇ ಬರುವುದು. ಸ್ವರ್ಗವು ಎಲ್ಲಿ ಸಿಗುವುದು? ಅದೆಲ್ಲಾ ಸುಮ್ಮನೆ ಹೇಳುವುದು. ಪಾಪ ಮಾಡಿರಲಿ ಮಾಡದೆ ಇರಲಿ. ನರಕವು ಬಂದೇ ಬರುವುದು. ನನಗೆಲ್ಲಾ ಪುಣ್ಯ ಪಾಪಿಗಳು ನಿಶ್ಚಯವು ಇದೆ. ನಾನು ನೋಡು ಗಂಡನನ್ನು ಕೊಂದು ಸ್ವತಂತ್ರ ಳಾಗಿರುತ್ತೇನೆ. ಈಗ ನನಗೊಂದು ಭಯವೂ ಇಲ್ಲ. ಸ್ವಾತಂತ್ರ್ಯವಿದ್ದರೇನೇ ಸುಖ ವುಂಟಾಗುವುದು. ತಪಸ್ಸು ಮಾಡಬಹುದು. ಪುಣ್ಯ ಮಾಡಬಹುದು. ಇನ್ನೊಬ್ಬರ ಅಧೀನದಲ್ಲಿ ಇರುವವನಿಗೆ ಏನು ಸುಖವಿದೆ?' ಇತ್ಯಾದಿ ನಾನಾವಿಧವಾಗಿ ವಿದ್ಯಾ ವಲ್ಲಿಯು ದೃಷ್ಟಾಂತಗಳನ್ನು ತೋರಿಸಿ ದುರುಪದೇಶವನ್ನು ಮಾಡಲು ಚಂದ್ರ ಕಾಂತೆಯು ಪೂರ್ವದುಷ್ಕರ್ಮದಿಂದ ಸ್ತ್ರೀಸ್ವಭಾವದಿಂದಲೂ ಈ ಲೋಕದ ಸುಖವನ್ನು ಅಪೇಕ್ಷಿಸುವವಳಾಗಿ ಮೊದಲು ರಹಸ್ಯವಾಗಿ ವ್ಯಭಿಚಾರಿಣಿಯಾದಳು. ಆಮೇಲೆ ಅಂಜಿಕೆಯಿಲ್ಲದೆ ಪ್ರಸಿದ್ಧವಾಗಿಯೇ ವ್ಯಭಿಚಾರಿಣಿಯಾದಳು. ಗಂಡನಾದ ವೇದರಾಶಿ ಬ್ರಾಹ್ಮಣನು ಮೊದಲು ಅವಳ ಮೇಲೆ ಸಂದೇಹವುಳ್ಳವನಾಗಿ ಹತ್ತು ದಿವಸ ಅವಳ ಬಳಿಯಲ್ಲೇ ಇದ್ದು ಪರೀಕ್ಷಿಸಿ ಅವರು ಕೆಟ್ಟು ಹೋಗಿರುವಳು ಎಂದು ತಿಳಿದು ಅವಳನ್ನು ಮನೆಯಿಂದ ಹೊರಗೆ ಮಾಡಿದನು. ಅವಳ ಸಹವಾಸದಿಂದ ತನಗುಂಟಾದ ಪಾಪ ಪರಿಹಾರ ಮಾಡುವುದಕ್ಕೋಸ್ಕರ ಕಾವೇರಿ ತೀರಕ್ಕೆ ಹೋಗಿ ವಾಸ ಮಾಡಿದನು. ತನ್ನ ಪತಿವ್ರತೆಯಾಗಿದ್ದ ಹೆಂಡತಿಗೂ ಇಂತಹ ದುರ್ಬುದ್ಧಿಯು ಬಂದಿತಲ್ಲಾ ಎಂದು ಆಶ್ಚರ್ಯಪಟ್ಟನು.

ತರುವಾಯ ಚಂದ್ರಕಾಂತೆಯು ಇಚ್ಛಾನುಸಾರವಾಗಿ ಪುರುಷರನ್ನು ಕರೆದು ವಿಹರಿಸುತ್ತಿದ್ದಳು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬ ಜಾತಿ ವ್ಯತ್ಯಾಸವನ್ನೇ ನೋಡಲಿಲ್ಲ. ಎಷ್ಟೋ ಚಂಡಾಲರೂ ಕೂಡ ಬಂದು ಅವಳೊಡನೆ ವಿಹಾರ ಮಾಡಿದರು. ದೇವತೆಗಳೇ ನೋಡಿ ಆಶ್ಚರ್ಯಪಟ್ಟರು. ತರುವಾಯ ಆ ಊರಿನ ರಾಜನಾದ ಇಂದ್ರದ್ಯುಮ್ನನು ಇವಳ ವೃತ್ತಾಂತವನ್ನು ತಿಳಿದು ಈ ಪಾಪಿಯು ತನ್ನ ರಾಜ್ಯದಲ್ಲಿ ಇದ್ದರೆ ತನಗೇ ಮಹಾಪಾಪವು ಬರುವುದು ಎಂದು ತಿಳಿದುಕೊಂಡು ತನ್ನ

ರಾಜ್ಯದಿಂದ ಹೊರಡಿಸಿದನು. ಮಾನಕೆಟ್ಟವಳಾದ ಚಂದ್ರಕಾಂತೆಯು ತನ್ನ ಸರ್ವಸ್ವವನ್ನೂ ರಾಜನು ಅಪಹರಿಸಲು ಕಾವೇರಿತೀರಕ್ಕೆ ಹೋಗಿ ಅಲ್ಲಿ ವಾಸಮಾಡಲಿಕ್ಕೆ ಆರಂಭಿಸಿದಳು. ಆಗ ಅವಳಿಗೆ ಸೋತುಹೋದ ಎಷ್ಟೋ ಪುರುಷರು ಕಳ್ಳತನ ಮಾಡಿ ಬಹು ಹಣವನ್ನು ತಂದುಕೊಟ್ಟರು. ಈರೀತಿಯಾಗಿ ಸ್ವಲ್ಪ ಕಾಲವು ಕಳೆಯಲು ಚಂದ್ರಕಾಂತೆ ಮಹಾಪಾಪದಿಂದ ಮಹಾರೋಗವು ಬಂದು ಸೇರಿತು. ಆ ಮಹಾರೋಗದಿಂದಲೇ ಮರಣವನ್ನು ಹೊಂದಿದಳು.

ಒಂದು ಮನ್ವಂತರದವರೆಗೆ ಭಯಂಕರಗಳಾದ ಇಪ್ಪತ್ತೊಂದು ನರಕಗಳನ್ನು ಅನುಭವಿಸಿ ಆಮೇಲೆ ನಿಚುಲಾ ಎಂಬ ಪಟ್ಟಣದಲ್ಲಿ ದಾಸಿಯ ಮಗಳಾಗಿ ಹುಟ್ಟಿದಳು. ಆಗಲೂ ವ್ಯಭಿಚಾರಿಣಿ ಯಾಗಿಯೇ ಇದ್ದಳು. ಅವಳಿಗೆ ಪೂರ್ವದ ಪತಿದ್ರೋಹ ಎಂಬ ಪಾಪದಿಂದ ಗ್ರಂಥಿ ರೋಗವೆಂಬ ರೋಗವುಂಟಾಯಿತು. ಕೈಕಾಲು ಬೆರಳು ಇತ್ಯಾದಿಗಳ ಸಂದುಗಳಲ್ಲಿ ಯೆಲ್ಲಾ ಕೃಮಿಗಳು ಬರುತ್ತಿದ್ದವು. ಬೆರಳುಗಳು ತುಂಡಾಗಿ ಬೀಳುತ್ತಿದ್ದವು. ವಿಚಿತ್ರ ವೇದನೆಯಿಂದ ರಾತ್ರಿ ಹಗಲೂ ಹಾಹಾ ಎಂದು ಕೂಗುತ್ತಲೇ ಇದ್ದಳು. ಹೀಗೆ ಬಹು ಕಷ್ಟಪಡುತ್ತಾ ಒಂದು ದಿವಸ ಪೂರ್ವಪುಣ್ಯದಿಂದ ಕಾವೇರಿ ತೀರಕ್ಕೆ ಬಂದಳು. ಶ್ರೀರಂಗನಾಥನ ಸನ್ನಿಧಾನದಲ್ಲಿ ಕಾವೇರಿಯಲ್ಲಿ ಸ್ನಾನಮಾಡುತ್ತಾ ಕಾವೇರಿಯ ಮಹಿಮೆಯನ್ನು ಕೇಳುತ್ತಾ ಇರುವ ಜನರನ್ನೆಲ್ಲಾ ನೋಡಿದಳು. ಅವಳೂ ಕೂಡ ದೈವೇಚ್ಛೆಯಿಂದ ತನ್ನ ದೇಹದ ಸಂತಾಪವನ್ನು ಪರಿಹರಿಸಿಕೊಳ್ಳುವುದಕ್ಕೆ ಕಾವೇರಿಯಲ್ಲಿ ಮುಳುಗಿದಳು. ಕಾವೇರಿಯ ಮಹಿಮೆಯನ್ನು ಬ್ರಾಹ್ಮಣರು ಹೇಳುತ್ತಿರಲು ಒಂದು ಶ್ಲೋಕವನ್ನು ಕೇಳಿದಳು. ಇದರಿಂದ ಶಾಂತರಾದ ದೇವದೂತರು ಬಂದು ಅವಳನ್ನು ವಿಮಾನದಲ್ಲಿ ಕೂತುಕೊಳ್ಳಿಸಿಕೊಂಡು ಹೋದರು. ಈರೀತಿಯಾಗಿ ಪಾಪಿಯಾದ ಚಂದ್ರಕಾಂತೆಯು ಕಾವೇರಿಯಲ್ಲಿ ಸ್ನಾನಮಾಡಿದ್ದರಿಂದ ದಿವ್ಯವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದಳು. ಆದುದರಿಂದ ಕಾವೇರಿಯಲ್ಲಿ ಸ್ನಾನಮಾಡುವುದು ಅತ್ಯಂತ ಪ್ರಶಸ್ತವಾದದ್ದು. ವಿದ್ಯಾವಲ್ಲಿಯನ್ನು ಯಮಲೋಕದ ನಾಯಿಗಳು ಬಂದು ಕುತ್ತಿಗೆಯನ್ನು ಕಚ್ಚಿಕೊಂಡು ಎಳೆದುಕೊಂಡು ಹೋದವು. ಅವರು ಒಂದು ಬ್ರಹ್ಮಕಲ್ಪದವರೆಗೆ ರೌರವಾದಿ ನರಕಗಳನ್ನು ಅನುಭವಿಸಿ ಇನ್ನೂರು ಜನ್ಮಗಳಲ್ಲಿ ನಾಯಿಯಾಗಿ ಹುಟ್ಟಿದಳು. ಮೂರುಜನ್ಮಗಳಲ್ಲಿ ಹಂದಿಯಾಗಿ ಹುಟ್ಟಿದಳು.

ತರುವಾಯ ಭೀಷ್ಮಾಚಾರ್ಯರಿಗೂ ಪರಶುರಾಮ ದೇವರಿಗೂ ಯುದ್ಧವು ಸಂಭವಿಸಲಿಕ್ಕೆ ಕಾರಣಳಾದ ಕಾಶಿರಾಜನ ಮಗಳಾದ ಅಂಬೆಯಲ್ಲಿ ಆವಿಷ್ಟಳಾಗಿ ಹುಟ್ಟಿದಳು.



# ವೇದರಾಶಿ ಬ್ರಾಹ್ಮಣನ ಕಥೆ [1]

ವೇದರಾಶಿ ಬ್ರಾಹ್ಮಣನು ಕಾವೇರಿತೀರದಲ್ಲಿ ವಾಸಮಾಡುತ್ತಾ ತುಲಾಮಾಸದಲ್ಲಿ ಕಾವೇರಿಯಲ್ಲಿ ಸ್ನಾನ ಮಾಡುತ್ತಾ ಇದ್ದನು. ಪರಮಾತ್ಮನಲ್ಲಿ ಭಕ್ತಿಯನ್ನು ಮಾಡುತ್ತಾ ಇದ್ದನು. ಕಾಲಕ್ರಮದಿಂದ ಮರಣವನ್ನು ಹೊಂದಿದನು. ಕಾವೇರೀ ಸ್ನಾನದ ಪುಣ್ಯದಿಂದ ಪಾಪರಹಿತನಾಗಿ ಸೂರ್ಯನಂತೆ ಪ್ರಕಾಶಿಸುವವನಾಗಿ ಪ್ರಕಾಶಮಾನ ವಾದ ವಿಮಾನದಲ್ಲಿ ಕೂತುಕೊಂಡು ಹೋದನು. ಶಾಂತವಾದ ರೂಪವುಳ್ಳ ಯಮದೂತರು ಅವನನ್ನು ಯಮಲೋಕಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಹೋಗುವಾಗ ದಾರಿಯಲ್ಲಿ ವೇದರಾಶಿಯು ಪುಣ್ಯಪಾಪ ಫಲವನ್ನು ಅನುಭವಿಸುವ ಜನರನ್ನು ನೋಡಿದನು. ಘೋರವಾದ ಪಾಪವನ್ನು ಮಾಡಿ ದುಃಖವನ್ನು ಅನುಭವಿಸುತ್ತಿರುವವರನ್ನು ಪುಣ್ಯಮಾಡಿ ಸುಖದಿಂದ ಹೋಗುತ್ತಿರುವ ಜನರನ್ನೂ ನೋಡಿದನು. ಆಶ್ಚರ್ಯಪಟ್ಟನು.

ವೇದರಾಶಿಯು ಯಮದೂತರೊಡನೆ 'ನನಗೆ ಎಲ್ಲರನ್ನೂ ಚೆನ್ನಾಗಿ ನೋಡಬೇಕು. ಮಾರ್ಗಮಧ್ಯದಲ್ಲಿಯೇ ನನ್ನನ್ನು ಕರೆದು ಕೊಂಡು ಹೋಗಬೇಕು' ಎಂದು ಕೇಳಿಕೊಂಡನು. ಯಮದೂತರು ಹಾಗೆಯೇ ಮಾರ್ಗದಲ್ಲಿ ಜನರನ್ನು ತೋರಿಸಿದರು. ಕೆಲವು ಪ್ರದೇಶದಲ್ಲಿ ಹಾಹಾಕಾರವು ಕೇಳಿಸುತ್ತಾ ಇತ್ತು. ಕೆಲವು ಸ್ಥಳಗಳಲ್ಲಿ ಉಪಚಾರ ಮಾತುಗಳೂ ಕೇಳಿಸುತ್ತಿದ್ದವು. 'ಮೊಸರಿದೆ. ತುಪ್ಪವಿದೆ. ಮಜ್ಜಿಗೆಯಿದೆ. ತೆಗೆದುಕೊಳ್ಳಿರಿ' ಎಂಬ ಮಾತು ಕೇಳಿಸು ತ್ತಿದ್ದವು. ಅಲ್ಲಿ ಸುಂದರವಾದ ನಾನಾ ಆಕಾರವುಳ್ಳ ಜನರನ್ನು ನೋಡಿದನು. 'ಒಳ್ಳೆಯ ಅನ್ನವನ್ನು ಊಟಮಾಡಿರಿ. ನೆರಳಿನಲ್ಲಿ ಕೂತುಕೊಳ್ಳಿರಿ. ಮೆಲ್ಲಮೆಲ್ಲಗೆ ಹೋಗಿರಿ. ದಿವ್ಯವಾದ ಪಾನಕವನ್ನು ಕುಡಿಯಿರಿ. ರಸಾಯನವನ್ನು ಕುಡಿಯಿರಿ. ಯಾಲಕ್ಕಿ ಪಚ್ಚಕರ್ಪೂರ ಮೊದಲಾದುವು ಗಳಿಂದ ವಾಸನೆಯುಳ್ಳ ನೀರಿದೆ. ಬಾಳೆಹಣ್ಣು ಹಲಸಿನಹಣ್ಣುಗಳನ್ನು ಸ್ವೀಕರಿಸಿರಿ. ಈ ಒಳ್ಳೇ ಗಂಧವನ್ನು ಹಚ್ಚಿಕೊಂಡು ಹೋಗಿರಿ. ನೀವು ಪೂರ್ವದಲ್ಲಿ ಹಸಿವೆಯಿಂದ ಬಂದ ಬ್ರಾಹ್ಮಣರಿಗೆ ಬೇಕಾದ ದಾನಗಳನ್ನು ಮಾಡಿರುವಿರಿ. ಆದುದರಿಂದ ಅವುಗಳೆಲ್ಲಾ ನಿಮಗೀಗ ದೊರಕಿವೆ. ಯಾರಿಗೂ ಕೂಡ ದಾನ ಮಾಡದ ವಸ್ತುವು ಸಿಗಲಾರದು. ಆದುದರಿಂದ ಎಲ್ಲರೂ ಶಕ್ತಿಯನ್ನು ಅನುಸರಿಸಿ ದಾನವನ್ನು ಮಾಡಬೇಕು. ದಾನ ಮಾಡದೆ ಇದ್ದವನ್ನು ಸ್ವರ್ಗವನ್ನು ಹೊಂದಲಿಕ್ಕೆ ಆಗಲಾರದು. ನರಕವನ್ನೇ ಹೊಂದುವನು' ಇತ್ಯಾದಿ ರೀತಿಯಾಗಿ ಪುಣ್ಯಮಾಡಿದವರನ್ನು ನೋಡಿ

ಹೇಳುತ್ತಿದ್ದರು. ಮತ್ತೂ ಸ್ತ್ರೀಯರೊಡನೆ 'ಪತಿವ್ರತಾಸ್ತ್ರೀಯರೇ! ನೀವು ಅರುಂಧತೀ ದೇವಿಯಂತೆ ಗಂಡನಿಗೆ ಅನುಕೂಲರಾಗಿ ಇದ್ದಿರಿ. ಪುಣ್ಯಾಪಾಪಗಳು ಪರಲೋಕಕ್ಕೆ ಹೋಗುವಾಗ ಬುತ್ತಿಯಾಗಿರುವುದು ಎಂದು ತಿಳಿದುಕೊಂಡು ಇದ್ದಿರಿ. ಸದಾಚಾರ ಸಂಪನ್ನರಾಗಿ ಪತಿಗಳಿಗೆ ಪ್ರಿಯರಾಗಿ ಇದ್ದಿರಿ. ಗಂಡನು ರೋಗಿಷ್ಠನಾಗಿದ್ದರೂ ಸಾಲಗಾರನಾಗಿದ್ದರೂ ಪತಿಯಲ್ಲಿ ಭಕ್ತಿಯನ್ನು ಕಡಿಮೆ ಮಾಡಿಲ್ಲ, ಆದುದರಿಂದ ಈಗ ಸ್ವರ್ಗಕ್ಕೆ ಹೋಗುತ್ತಿರುವಿರಿ' ಎಂಬ ಉಪಚಾರದ ಮಾತೂ ಕೇಳಿಸುತ್ತಿತ್ತು. ಯಮದೂತರಿಂದ ಸತ್ಕೃತರಾಗಿ ವಿಮಾನದಲ್ಲಿ ಕೂತುಕೊಂಡು ಪುಣ್ಯವಂತರು ದಿವ್ಯವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋಗುತ್ತಿದ್ದರು. ಮತ್ತೊಂದು ಸ್ಥಳದಲ್ಲಿ ಪಾಪಮಾಡಿದವರು ಅಳುತ್ತಾ ಇದ್ದರು. ಕೋರೆಹಲ್ಲಿನಿಂದ ಭಯಂಕರವಾದ ಯಮದೂತರು ಮುದ್ಗರ ಗದಾವನಿಕೆ ಭಿಂಡಿಪಾಲ ಕತ್ತಿ ಎಂಬ ಆಯುಧಗಳಿಂದ ಕಡಿ ಬಡಿ ಹೊಡಿ ಸೀಳು ಎನ್ನುತ್ತಾ ಬಡಿಯುತ್ತಿದ್ದರು. ಬೆದರಿಸುತ್ತಾ ಇದ್ದರು.

ಕೆಲವು ಸ್ಥಳದಲ್ಲಿ ಮುಳ್ಳಿನಿಂದ ಕೂಡಿದ ಮಾರ್ಗದಲ್ಲಿಯೂ ಬಿಸಿಯಾದ ಉಸುಬುಳ್ಳ ಮಾರ್ಗದಲ್ಲಿಯೂ ಬಿಸಿಯಾದ ಕಬ್ಬಿಣದ ಮೇಲೆಯೂ ಎಳೆದು ಕೊಂಡು ಹೋಗುತ್ತಿದ್ದರು. ಕೆಲವರನ್ನು ಎತ್ತರದಿಂದ ತಗ್ಗಿಗೆ ತಲೆಕೆಳಗಾಗಿ ದೂಡು ತ್ತಿದ್ದರು. ಹಸಿವೆ ಬಾಯಾರಿಕೆ ಉಳ್ಳವರಾಗಿ ಬೆಂಕಿಯಿಂದ ಸುಡಲ್ಪಟ್ಟವರಾಗಿ ಕೆಲವರು ಹೋಗುತ್ತಿದ್ದರು. ನಿಷಿದ್ಧಕರ್ಮವನ್ನು ಮಾಡಿದವರೂ, ಸದಾಚಾರವನ್ನು ಬಿಟ್ಟವರೂ, ಸಜ್ಜನರನ್ನು ತಿರಸ್ಕರಿಸಿದವರೂ, ಡಾಂಭಿಕರಾದವರೂ, ಸ್ನಾನ ಔಪಾಸನವನ್ನು ಬಿಟ್ಟವರೂ, ವೇದಶಾಸ್ತ್ರಗಳನ್ನು ಬಿಟ್ಟವರೂ, ದೇವರ ಪೂಜೆಯನ್ನು ತಂದೆ ತಾಯಿಗಳ ಶ್ರಾದ್ಧವನ್ನೂ ಬಿಟ್ಟವರೂ, ಇನ್ನೊಬ್ಬರ ಜೀವನವನ್ನು ಕೆಡಿಸಿದರು. ಇನ್ನೊಬ್ಬರಲ್ಲಿ ದೋಷವನ್ನೇ ಕಂಡುಹಿಡಿಯುವವರೂ ಮಾಡಬಾರದ ವಸ್ತುಗಳನ್ನು ಮಾರಿದವರೂ ಭಗವಂತನನ್ನು ರುದ್ರದೇವರನ್ನೂ ಶಾಸ್ತ್ರೋಪದೇಶ ಮಾಡುವ ಬ್ರಾಹ್ಮಣರನ್ನು ನಿಂದಿಸುವವರೂ ಇಷ್ಟು ಹಣವನ್ನು ಕೊಟ್ಟರೆ ಇಷ್ಟು ಹೊತ್ತು ಪಾಠಹೇಳುವೆನು ಎಂದು ಹಣವನ್ನು ಕ್ಲಪ್ತಮಾಡಿಕೊಂಡು ಪಾಠ ಹೇಳುವವರೂ, ಹೆಂಡತಿ ಮಕ್ಕಳನ್ನೂ ಹಿಂಸಿಸುವವರೂ, ವ್ರತವನ್ನು ಮಾಡದೆ ಇದ್ದವರೂ, ಇನ್ನೊಬ್ಬರ ಮನೆಯಲ್ಲಿಯೇ ನಿತ್ಯವೂ ಭೋಜನ ಮಾಡುವವರೂ, ಇನ್ನೊಬ್ಬರ ಸೊತ್ತನ್ನು ಅಪಹರಿಸಿದವರೂ, ಪಂಕ್ತಿಭೇದವನ್ನು ಮಾಡುವವರೂ, ದನಕ್ಕೆ ಹೊಟ್ಟೆ ತುಂಬಾ ಆಹಾರವನ್ನು ಹಾಕದೆ ಹಾಲು ಕರೆಯುವವರೂ, ಸಂಧ್ಯಾವಂದನೆಯನ್ನು ಮಾಡದೆ ಇದ್ದವರೂ, ತಂದೆತಾಯಿಗಳನ್ನು ಗದರಿಸುವವರೂ, ದೇವಬ್ರಾಹ್ಮಣರನ್ನು ನಿಂದಿಸುವವರೂಸ

ಇದೇ ರೀತಿಯಾಗಿ ಅನೇಕ ವಿಧಗಳಾದ ಪಾಪಗಳನ್ನು ಮಾಡಿದವರು ಯಮದೂತ ರಿಂದ ಪೀಡಿತರಾಗಿ ಕೂಗುತ್ತಾ ಇದ್ದರು. ನಮಗೆ ಸ್ವಲ್ಪ ಅನ್ನವನ್ನು ಹಾಕಿರಿ. ನೀರು ಕೊಡಿರಿ. ಸ್ವಲ್ಪಮೆಲ್ಲನೆ ಕರೆದುಕೊಂಡು ಹೋಗಿರಿ ಎಂಬ ಶಬ್ದವು ಗಟ್ಟಿಯಾಗಿ ಕೇಳಿಸುತ್ತಿತ್ತು. ನಮ್ಮನ್ನು ಸ್ವಲ್ಪ ಹಿಂಸಾ ಮಾಡಬೇಡಿರಿ ಎಂದು ಹೇಳುವರು. ಆಗ ಯಮದೂತರು ಅವರನ್ನು ಮೇಲೆ ಎತ್ತಿ ಕಲ್ಲಿನ ಮೇಲೆ ಬಡಿಯುವರು. ಆಗ ಅವರ ಮೈಯೆಲ್ಲಾ ಸೀಳಿಸೀಳಿ ಹೋಗುವುದು. ಗರಗಸದಿಂದ ಸೀಳುವರು. ಮೈಮೇಲೆಲ್ಲಾ ಗಾಯಮಾಡಿ ಅದರಲ್ಲಿ ಉಪ್ಪುನೀರನ್ನು ಹಾಕುವರು. ಗಾಯಗಳಿಗೆಲ್ಲಾ ಗೂಟದಿಂದ ಬಡಿಯುವರು. ಸೂಜಿಯನ್ನು ಕುಕ್ಕುತ್ತಿದ್ದರು.

ಈರೀತಿಯಾಗಿ ಪಾಪ ಮಾಡಿದವರು ನಾನಾ ವಿಧವಾಗಿ ಹಿಂಸೆಯನ್ನು ಅನುಭವಿಸುತ್ತಿದ್ದರು. ಅದನ್ನು ನೋಡಿ ವೇದರಾಶಿಗೆ ಅವರ ಮೇಲೆ ಕೃಪೆಯುಂಟಾ ಯಿತು. ಇವರಿಗೆಲ್ಲಾ ತುಲಾಮಾಸದಲ್ಲಿ ಮೂರು ದಿನ ಕಾವೇರಿ ಸ್ನಾನ ಮಾಡಿದ ಪುಣ್ಯವನ್ನು ಕೊಡುವೆನೆಂದನು. ತರುವಾಯ ಭಗವಂತನನ್ನು ಧ್ಯಾನಿಸಿ ತುಲಾಮಾಸ ದಲ್ಲಿ ಮೂರುದಿನ ಕಾವೇರಿ ಸ್ನಾನಮಾಡಿದ ಪುಣ್ಯವನ್ನು ಈ ಪಾಪಿಗಳಿಗೆಲ್ಲಾ ಕೊಟ್ಟಿರುವೆನು. ಇದಕ್ಕೆ ಎಲ್ಲಾ ಲೋಕಗಳು ಸಾಕ್ಷಿಗಳು ಎಂದು ಪುನಃ ಪುನಃ ಗಟ್ಟಿಯಾಗಿ ಹೇಳಿದನು. ಆಗ ಅಲ್ಲಿದ್ದ ಪಾಪಿಗಳೆಲ್ಲರೂ ಯಮಪಾಶದಿಂದ ರಹಿತರಾಗಿ ಸಂತೋಷವುಳ್ಳವರಾಗಿ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದರು.

ಆಗ ಯಮದೂತರು ವೇದರಾಶಿಯೊಡನೆ ತಮ್ಮ ತಮ್ಮ ಪಾಪಕ್ಕೆ ಅನುಸಾರ ವಾಗಿ ಜನರು ಇಲ್ಲಿ ಫಲವನ್ನು ಅನುಭವಿಸುವರು. ನೀನು ಯಮದೇವರ ಆಜ್ಞೆಯನ್ನು ಮೀರಿದಿಯಲ್ಲಾ! ಯಮದೇವರು ಉದಾಸೀನರು. ಅವರವರ ಪಾಪಪರಿಹಾರಕ್ಕಾಗಿ ಪಾಪಿಗಳನ್ನು ನಮ್ಮಿಂದ ರೌರವಾದಿ ನರಕದಲ್ಲಿ ಹಾಕಿಸುವರು. ಆಮೇಲೆ ಅದರಿಂದ ಶುದ್ಧರಾಗಿ ಭೂಮಿಯಲ್ಲಿ ಹುಟ್ಟುವರು. ಆಮೇಲೆ ಪುನಃ ಪೂರ್ವಕರ್ಮಾನುಸಾರ ವಾಗಿ ಪಾಪವನ್ನು ಮಾಡುವರು. ಇನ್ನು ನಾವು ಬೇಗನೇ ಹೋಗುವ' ಎಂದು ಹೇಳಿ ವೇದರಾಶಿಯಲ್ಲಿ ಯಮಲೋಕಕ್ಕೆ ಕರೆದುಕೊಂಡು ಹೋದರು. ಯಮಲೋಕ ದಲ್ಲಿಯೂ ನಾನಾವಿಧ ನರಕದಲ್ಲಿ ಪೀಡಿತರಾದ ಜನರನ್ನು ಅವರ ಮುಖದಿಂದ ಅವರು ಮಾಡಿರುವ ನಾನಾವಿಧ ಪಾಪಗಳನ್ನು ಕೇಳಿ ಕರುಣೆಯುಳ್ಳವನಾಗಿ ಅವರ ಸಮೀಪದಲ್ಲಿ ಭಕ್ತಿಯಿಂದ ಗಟ್ಟಿಯಾಗಿ ಭಗವಂತನ ನಾಮವನ್ನು ಉಚ್ಚಾರಣೆ ಮಾಡಿದನು. ಅದನ್ನು ಕೇಳಿ ಆ ಪಾಪಿಗಳೂ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದರು. ಇದನ್ನು ಕೇಳಿ ಯಮದೇವರು ಅತ್ಯಂತ ಕೋಪಿಸಿಕೊಂಡರು.

ಹಲ್ಲುಗಳನ್ನು ಕಟಕಟ ಮಾಡಿ ಕೋಣದ ಮೇಲೆ ಕೂತುಕೊಂಡು ಕಾಲದಂಡವನ್ನು ಹಿಡಿದುಕೊಂಡು ಕ್ಷಯಾದಿರೋಗಾಭಿಮಾನಿ ಗಳಿಂದ ಸಹಿತರಾಗಿ ಬಂದರು. ಆ ಸಮಯದಲ್ಲಿ ವೇದರಾಶಿಯು ವಿಷ್ಣುಕವಚವೆಂಬ ಮಂತ್ರವನ್ನು ಜಪಿಸಿದನು. ಇದರಿಂದ ಯಮದೂತರೆಲ್ಲರೂ ಅವನನ್ನು ನೋಡುವ ಮಾತ್ರದಿಂದಲೇ ಓಡಿ ಹೋದರು. ಚಿತ್ರಗುಪ್ತನನ್ನೂ ಯಮದೇವರನ್ನೂ ಬಿಟ್ಟು ಮತ್ತೆಲ್ಲರೂ ಹಿಂದಿರುಗಿ ನೋಡದೆ ಓಡಿಹೋದರು.

ತರುವಾಯ ಯಮದೇವರು ಶಾಂತರಾಗಿ ರಥದಲ್ಲಿ ಕಾಣಿಸಿಕೊಂಡರು. ನರಕಗಳು ಶೂನ್ಯಗಳಾಗಿರುವುದನ್ನೂ ತನ್ನ ದೂತರನ್ನು ಓಡಿಹೋಗುವವರನ್ನು ನೋಡಿ ವಿಷ್ಣುಭಕ್ತನಾದ ಆ ಬ್ರಾಹ್ಮಣನನ್ನು ನೋಡಿ ಸ್ತೋತ್ರಮಾಡಿದರು. ಅವರು ರಥದಿಂದ ಕೆಳಗಿಳಿದು ವೇದರಾಶಿ ಬ್ರಾಹ್ಮಣನಿಗೆ ಅರ್ಘ್ಯ ಪಾದ್ಯಗಳನ್ನು ಕೊಟ್ಟು ಸತ್ಕರಿಸಿದರು. ವಿಷ್ಣುಭಕ್ತನಾದ ನಿನ್ನನ್ನು ನೋಡಿ ನಾನು ಧನ್ಯನಾದೆನು. ನಿನ್ನ ಸದಾಚಾರದಿಂದ ಉಂಟಾದ ಪುಣ್ಯದ ಪ್ರಭಾವದಿಂದ ನಿನ್ನ ವಿಷ್ಣುಭಕ್ತಿಯಿಂದ ನಾನು ನಿನ್ನ ವಶನಾಗಿರುವೆನು. ಸ್ನೇಹಯುಕ್ತವಾದ ದೃಷ್ಟಿಯಿಂದ ನನ್ನನ್ನು ನೋಡು. ಅವರವರ ಪಾಪದ ಫಲವನ್ನು ಅನುಭವಿಸಲಿಕ್ಕೆ ಪಾಪಿಗಳನ್ನು ನರಕದಲ್ಲಿ ಹಾಕಿರುವುದು. ಭಕ್ತಿಪೂರ್ವಕವಾಗಿ ಭಗವಂತನನ್ನು ಕೀರ್ತನೆ ಮಾಡುವುದು ಸರ್ವಪಾಪ ಪರಿಹಾರಕವಾದದ್ದು. ನೀನು ಭಕ್ತಿಯಿಂದ ಭಗವಂತನ ಸಂಕೀರ್ತನೆಯನ್ನು ಮಾಡಿ ಪಾಪಿಗಳನ್ನು ಉದ್ಧರಿಸಿದಿ. ಇದನ್ನು ರಹಸ್ಯವಾಗಿ ಇಡು. ಇದನ್ನು ಪ್ರಸಿದ್ಧಪಡಿಸಿದರೆ ನನ್ನ ಅಧಿಕಾರವು ವ್ಯರ್ಥವಾಗುವುದು'.

ಈ ಪ್ರಕಾರವಾಗಿ ಹೇಳಿದವರಾಗಿ ಕಲಿಯುಗದಲ್ಲಿ ಜನರಿಗೆ ಪರಮಾತ್ಮನ ಕೀರ್ತನೆಯಲ್ಲಿ ವಿಶ್ವಾಸವು ಬರದೆ ಹೋಗಲಿ ಎಂದು ಶಪಿಸಿದರು. ಮತ್ತೂ 'ಯಾರು ಭಕ್ತಿಯಿಂದ ಭಗವಂತನನ್ನು ಸ್ಮರಿಸುವರೋ ಕೀರ್ತನೆ ಮಾಡುವರೋ ಅವರು ನನ್ನ ಸಮೀಪಕ್ಕೋ ನನ್ನ ದೂತರ ಸಹವಾಸಕ್ಕೋ ಬರಲಾರರು. ಪರಮಾತ್ಮನ ಕೀರ್ತನೆಯಿಂದ ಭಯಪಡುವೆನು. ಈಗ ನೀನು ನೋಡಿದ ಈ ಭಯಂಕರವಾದ ರೂಪವನ್ನು ಪಾಪಿಗಳು ನೋಡುವರು. ನಿನ್ನಂತೆ ಇರುವವರಿಗೆ ನಾನು ಪ್ರಸನ್ನನಾಗಿರುವೆನು. ಕೋಟಿ ಸೂರ್ಯರಂತೆ ಪ್ರಕಾಶಿಸುವ ಈ ವಿಮಾನದಲ್ಲಿ ಕೂತುಕೊಂಡು ಉತ್ತಮಲೋಕಕ್ಕೆ ಹೋಗು' ಎಂದು ಹೇಳಿದರು. ಈರೀತಿಯಾಗಿ ಪರಮಾತ್ಮನ ಭಕ್ತರಾದ ಯಮದೇವರಿಂದ ಪರಮಾತ್ಮನ ಮೇಲಿನ ಭಕ್ತಿಯಿಂದ ಸತ್ಕೃತನಾಗಿ ವಿಮಾನದಲ್ಲಿ ಕೂತುಕೊಂಡು ಎಲ್ಲರಿಂದಲೂ ಸ್ತೋತ್ರ ಮಾಡಲ್ಪಡುತ್ತಾ

ಹೊರಟುಹೋದನು. ಯಮದೇವರು ತನ್ನ ದೂತರನ್ನು ಸಮಾಧಾನಪಡಿಸುತ್ತಾ ಪರಮಾತ್ಮನ ಕೀರ್ತನೆಯ ಮಹಿಮೆಯನ್ನೂ ತುಲಾಮಾಸದ ಕಾವೇರಿ ಸ್ನಾನದ ಮಹಿಮೆಯನ್ನು ವರ್ಣಿಸುತ್ತಾ ತನ್ನ ಸ್ಥಾನಕ್ಕೆ ಹೊರಟುಹೋದನು.



## ಸುಮತಿಯ ಕಥೆ [1]

ಮಹಾರಾಷ್ಟ್ರದೇಶದಲ್ಲಿ ಆಸ್ತಿಕರಾದ ವೇದವೇದಾಂಗ ಪಾರಂಗತನಾದ ಯಜ್ಞದೇವ ನೆಂಬ ಬ್ರಾಹ್ಮಣನಿದ್ದನು. ಅವನಿಗೆ ಸುಮತಿಯೆಂಬ ಮಗನಿದ್ದನು. ಸುಮತಿಯು ತಂದೆ ಯನ್ನು ಪ್ರತಿವ್ರತೆಯಾದ ಹೆಂಡತಿಯನ್ನು ಬಿಟ್ಟು ವಿಟಪುರುಷರೊಡನೆ ಸೇರಿಕೊಂಡು ಉತ್ಕಲದೇಶಕ್ಕೆ ಹೋದನು. ಅಲ್ಲಿ ಒಬ್ಬ ಬೇಡರ ಸ್ತ್ರೀಯು ಎಲ್ಲ ಯುವಕರ ಹಣವನ್ನು ಮೋಹಗೊಳಿಸಿ ಅಪಹರಿಸುತ್ತಿದ್ದಳು. ಒಂದುದಿನ ಬ್ರಾಹ್ಮಣಾಧಮನಾದ ಸುಮತಿಯು ಅವಳ ಮನೆಗೆ ಹೋದನು. ಆಮೇಲೆ ಅವರ ಸಹವಾಸದಲ್ಲಿಯೇ ಇದ್ದವನಾಗಿ ಅಲ್ಲಿ ಇಲ್ಲಿ ಹೋಗಿ ಕದ್ದುಕೊಂಡು ಬಹು ಹಣವನ್ನು ತಂದು ಅವಳೊಡನೆ ವಿಹರಿಸು ತ್ತಿದ್ದನು. ಅವಳೊಡನೆ ಒಂದೇ ಪಾತ್ರೆಯಲ್ಲಿ ಮಧ್ಯವನ್ನು ಕುಡಿಯುತ್ತಿದ್ದನು. ಹೀಗೆ ಬಹುಕಾಲ ಆ ಬೇಡ ಸ್ತ್ರೀಯ ಸಹವಾಸದಲ್ಲಿಯೇ ಇದ್ದವನಾಗಿ ತನ್ನ ಹೆಂಡತಿಯನ್ನು ಸ್ಮರಿಸಲೇ ಇಲ್ಲ. ಅವನು ಒಂದು ದಿನದಲ್ಲಿ ಬೇಡರಿಂದ ಕೂಡಿಕೊಂಡು ಒಂದು ಬ್ರಾಹ್ಮಣನ ಮನೆಗೆ ಕದ್ದು ಕೊಳ್ಳಲಿಕ್ಕೆ ಹೋದನು. ಬೇಡರ ವೇಷವುಳ್ಳ ಅವನು ಮನೆಯ ಯಜಮಾನನಾದ ಬ್ರಾಹ್ಮಣನನ್ನು ಕತ್ತಿಯಿಂದ ಕೊಂದು ಬಹು ಹಣವನ್ನು ತೆಗೆದುಕೊಂಡು ಬೇಡಸ್ತ್ರೀಯ ಮನೆಗೆ ಹೋದನು.

ಆಗ ಅವನ ಹಿಂದೆಯೇ ಭಯಂಕರವಾದ ಬ್ರಹ್ಮಹತ್ಯಾಭಿಮಾನಿಯು ಕಪ್ಪುವಸ್ತ್ರ ವನ್ನು ಧರಿಸಿಕೊಂಡು ಭಯಂಕರಳಾಗಿ ಕೆಂಪಾದ ಕೂದಲುಳ್ಳವರಾಗಿ ಅಟ್ಟಹಾಸ ಮಾಡುತ್ತಾ ಗರ್ಜನೆ ಮಾಡುತ್ತಾ ಭೂಮಿ ಸ್ವರ್ಗಗಳನ್ನು ನಡುಗುವಂತೆ ಮಾಡುತ್ತಾ ಅಟ್ಟಿಸಿಕೊಂಡು ಹೋದಳು. ಅವನು ಎಲ್ಲೆಲ್ಲಿಯೋ ಸುತ್ತಿಕೊಂಡು ತನ್ನ ಗ್ರಾಮಕ್ಕೆ ಹೋದನು. ಅವನ ಹಿಂದೆಯೇ ಬ್ರಹ್ಮಹತ್ಯೆಯೂ ಹೋಯಿತು. ತನ್ನ ಮನೆಯ ಒಳಗೆ ಹೋದನು. ಬ್ರಹ್ಮಹತ್ಯೆಯೂ ಹೋಯಿತು. ಸುಮತಿಯು ನನ್ನನ್ನು ರಕ್ಷಿಸಬೇಕೆಂದು ತಂದೆಯನ್ನು ಮರೆಹೊಂದಿದನು. ತಂದೆಯು ಭಯಪಡಬೇಡ ಎಂದು ಹೇಳಿ

1. ಸ್ಕಾಂ

ರಕ್ಷಿಸಲಿಕ್ಕೆ ಉದ್ಯುಕ್ತನಾದ. ಆಗ ಬ್ರಹ್ಮಹತ್ಯೆಯು ಸುಮತಿಯ ತಂದೆಯೊಡನೆ 'ಯಜ್ಞದೇವ! ಇವನನ್ನು ಸೇರಿಸಿಕೊಳ್ಳಬೇಡ. ಇವನು ಸುರಾಪಾನ ಮಾಡಿದವನು. ಕದ್ದುಕೊಂಡವನು. ಬ್ರಹ್ಮಹತ್ಯೆಯನ್ನು ಮಾಡಿದವನು. ಮಾತೃದ್ರೋಹಿಯು. ಪಿತೃ ದ್ರೋಹಿಯು. ಧರ್ಮಪತ್ನಿಯ ಪರಿತ್ಯಾಗ ಮಾಡಿದವನು. ಬೇಡರ ಸ್ತ್ರೀಯ ಸಂಸರ್ಗ ಮಾಡಿದವನು. ಈ ದುರಾತ್ಮನನ್ನು ಬಿಟ್ಟುಬಿಡು. ಇವನನ್ನು ಸೇರಿಸಿಕೊಂಡೆ ಯಾದರೆ ನಿನ್ನ ಹೆಂಡತಿಯನ್ನೂ ಇವನ ಹೆಂಡತಿಯನ್ನೂ ನಿನ್ನನ್ನೂ ಈ ನಿನ್ನ ಮಗನನ್ನೂ ತಿಂದು ಹಾಕುವೆನು. ನಿನ್ನ ವಂಶವನ್ನೇ ತಿಂದುಹಾಕುವೆನು. ಆದುದರಿಂದ ಇವನನ್ನು ಬಿಟ್ಟು ಬಿಡು. ಇವನನ್ನು ನೀನು ಬಿಟ್ಟು ಬಿಡುವಿಯಾದರೆ ನಿಮ್ಮನ್ನೆಲ್ಲಾ ನಾನು ತಿನ್ನಲಾರೆನು. ಒಬ್ಬನಿಗೋಸ್ಕರ ವಂಶವನ್ನು ನಾಶಮಾಡಿಕೊಳ್ಳಬೇಡ' ಎಂದಿತು.

ಯಜ್ಞದೇವನು 'ಸುತಸ್ನೇಹವು ನನ್ನನ್ನು ಪೀಡಿಸುತ್ತದೆ. ಇವನನ್ನು ನಾನು ಹೇಗೆ ಪರಿತ್ಯಜಿಸಲಿ?' ಎಂದನು.

ಅದಕ್ಕೆ ಬ್ರಹ್ಮಹತ್ಯೆಯು 'ಇವನು ಪತಿತನಾಗಿದ್ದಾನೆ. ವರ್ಣಾಶ್ರಮಭ್ರಷ್ಟನಾಗಿ ದ್ದಾನೆ. ಈ ಮಗನಲ್ಲಿ ಸ್ನೇಹವನ್ನು ಮಾಡಬೇಡ. ಇವನನ್ನು ನೋಡುವುದೇ ಪಾಪಕರವಾದದ್ದು' ಎಂದು ಹೇಳಿ ಯಜ್ಞದೇವನು ನೋಡುತ್ತಿರುವಂತೆ ಕೈಯಿಂದ ಸುಮತಿಯನ್ನು ಒಂದು ಬಲವಾಗಿ ಬಡೆಯಿತು. ಸುಮತಿಯು ತಾತ ತಾತ ಎಂದು ಹೇಳಿ ಅಳಲಿಕ್ಕೆ ಆರಂಭಿಸಿದನು. ಆಗ ಸುಮತಿಯ ತಂದೆಯೂ ತಾಯಿಯೂ ಹೆಂಡತಿಯೂ ಅಳುವವರಾದರು. ಆ ಸಮಯದಲ್ಲಿ ದೈವೇಚ್ಛೆಯಿಂದ ಅಲ್ಲಿಗೆ ರುದ್ರ ದೇವರ ಅಂಶಭೂತರಾದ ದುರ್ವಾಸರು ಅಲ್ಲಿಗೆ ಬಂದರು. ಯಜ್ಞದೇವನು ಅವರನ್ನು ನೋಡ ನಮಸ್ಕರಿಸಿ ಮಗನಿಗಾಗಿ ಅವರನ್ನೇ ಮರೆಹೊಂದಿದನು. 'ಪೂಜ್ಯರೇ! ನಿರ್ಭಾಗ್ಯರಾದ ನಮಗೆ ತಮ್ಮಂತವರ ದರ್ಶನವೇ ದುರ್ಲಭವಾದದ್ದು. ನನ್ನ ಮಗನು ಬ್ರಹ್ಮಹತ್ಯೆಯನ್ನು ಮಾಡಿದನು. ಸುರಾಪಾನ ಮಾಡಿದನು. ಕದ್ದುಕೊಂಡನು. ಇವನನ್ನು ಬಡಿಯಲಿಕ್ಕೆ ಬ್ರಹ್ಮಹತ್ಯೆಯು ಬಂದಿದೆ. ನನ್ನ ಮಗನು ಪಾಪದಿಂದ ಹೇಗೆ ಬಿಡುಗಡೆಯನ್ನು ಹೊಂದುವನು? ಘೋರವಾದ ಬ್ರಹ್ಮಹತ್ಯೆಯು ಹೇಗೆ ಬೇಗನೇ ನಾಶವನ್ನು ಹೊಂದುವುದು? ಆ ಉಪಾಯವನ್ನು ಬೇಗನೇ ತಾವು ಹೇಳಬೇಕು. ನನ್ನ ಮಗನ ಮೇಲೆ ದಯೆಯನ್ನು ತೋರಿಸಬೇಕು. ಇವನೊಬ್ಬನೇ ನನಗೆ ಮಗನು. ಬೇರೆಯಿಲ್ಲ. ಇವನು ಮೃತನಾದರೆ ನನ್ನ ವಂಶವೇ ನಾಶವನ್ನು ಹೊಂದುತ್ತದೆ. ಆಮೇಲೆ ಪಿತೃಗಳಿಗೆ ಪಿಂಡವನ್ನು ಹಾಕುವವರು ಇಲ್ಲವೆಂದಾಗು ವುದು. ಆದುದರಿಂದ ನೀವು ನಮ್ಮಲ್ಲಿ ದಯೆಯನ್ನು ಮಾಡಬೇಕು' ಎಂದು ಯಜ್ಞ

ದೇವನು ದುರ್ವಾಸರೊಡನೆ ಕೇಳಿಕೊಂಡನು. ದುರ್ವಾಸರು ಬಹಳ ಸಮಯದ ವರೆಗೆ ಯೋಚನೆ ಮಾಡಿದವರಾಗಿ 'ಯಜ್ಞದೇವ! ನಿನ್ನ ಮಗನು ಅತಿಕ್ರೂರ ಪಾಪವನ್ನು ಮಾಡಿರುವನು. ಇವನ ಪಾಪಕ್ಕೆ ಎಷ್ಟು ಪ್ರಾಯಶ್ಚಿತ್ತ ಮಾಡಿದರೂ ಸಾಲದು. ಆದರೂ ನಿನ್ನ ಮಗನ ಪಾಪಪರಿಹಾರಕ್ಕೆ ಒಂದು ಪ್ರಾಯಶ್ಚಿತ್ತವನ್ನು ಹೇಳುವೆನು. ಪರಮಪವಿತ್ರವಾದ ವೇಂಕಟಾಚಲದಲ್ಲಿ ಸ್ವಾಮಿ ಪುಷ್ಕರಿಣಿಯೆಂಬ ಮಂಗಳದಾಯಕವಾದ ಸರೋವರವಿದೆ. ಆ ಸರೋವರದಲ್ಲಿ ನಿನ್ನ ಮಗನು ಸ್ನಾನ ಮಾಡುವ ಪಕ್ಷದಲ್ಲಿ ಕೂಡಲೇ ಪಾಪವು ಪರಿಹೃತವಾಗುವುದು' ಎಂದು ಹೇಳಿದರು.

ಅದನ್ನು ಕೇಳಿ ಯಜ್ಞದೇವನು ಮಗನಾದ ಸುಮತಿಯನ್ನು ಕರೆದುಕೊಂಡು ಸ್ವಾಮಿ ಪುಷ್ಕರಣಿಗೆ ಹೋಗಿ ಬ್ರಹ್ಮಹತ್ಯೆಯಿಂದ ಪೀಡಿತನಾದ ಮಗನನ್ನು ಪುಷ್ಕರಿಣಿ ಯಲ್ಲಿ ಸ್ನಾನ ಮಾಡಿಸಿದನು. ಆಗ 'ಯಜ್ಞದೇವ! ನಿನ್ನ ಮಗನು ಸ್ವಾಮಿ ಪುಷ್ಕರಿಣೀ ಸ್ನಾನದಿಂದ ಪವಿತ್ರನಾದನು. ಸಂಶಯಪಡಬೇಡ' ಎಂದು ಅಶರೀರವಾಣಿಯು ಕೇಳಿಸಿತು. ಈರೀತಿಯಾಗಿ ಸ್ವಾಮಿ ಪುಷ್ಕರಿಣಿಯ ಮಹಿಮೆಯಿರುವುದು.[1]



## ದೃಢಮತಿಯ ಕಥೆ [2]

ಹಿಮವತ್ಪರ್ವತದ ಪಾರ್ಶ್ವದಲ್ಲಿ ಒಂದು ಆಶ್ರಮವಿದ್ದಿತು. ಅಲ್ಲಿ ಅನೇಕ ಯತಿಗಳೂ ಇತರರೂ ತಪಸ್ಸು ಮಾಡುತ್ತಿದ್ದರು. ಎಲ್ಲರೂ ವೇದಾಧ್ಯಯನ ಮಾಡಿದವರು. ಬ್ರಹ್ಮಚಾರಿಗಳೂ ಗೃಹಸ್ಥಾಶ್ರಮಿಗಳೂ ವಾನಪ್ರಸ್ಥರೂ ಎಲ್ಲರೂ ಇದ್ದರು. ಅಲ್ಲಿ ದೃಢಮತಿ ಎಂದು ಹೆಸರುಳ್ಳ ಒಬ್ಬ ಶೂದ್ರನು ಸಂತೋಷದಿಂದ ಬ್ರಾಹ್ಮಣರ ಸಮೀಪಕ್ಕೆ ಹೋದನು. ಆಶ್ರಮಕ್ಕೆ ಬರಲು ಋಷಿಗಳು ಸತ್ಕರಿಸಿದರು. ಶೂದ್ರನು ಋಷಿಗಳಿಗೆಲ್ಲಾ ಉದ್ದಕ್ಕೆ ನಮಸ್ಕರಿಸಿದನು. ನಾನಾ ಯಜ್ಞಗಳನ್ನು ಮಾಡುತ್ತಿದ್ದ ಆ ಮುನಿಗಳನ್ನು ನೋಡಿ ಶೂದ್ರನಿಗೆ ತಾನು ತಪಸ್ಸು ಮಾಡಬೇಕೆಂಬ ಬುದ್ಧಿಯುಂಟಾ ಯಿತು. ಯಾಗವನ್ನು ಮಾಡಬೇಕೆಂಬ ಅಭಿಲಾಷೆಯೂ ಉಂಟಾಯಿತು. ಕುಲಪತಿ ಯೆಂಬ ಮುನಿಗಳೊಡನೆ ತನಗೆ ಯಾಗವನ್ನು ಮಾಡುವ ಕ್ರಮವನ್ನು ಹೇಳಿಕೊಡ ಬೇಕೆಂದು ಕೇಳಿಕೊಂಡನು.

---

1. ಈ ಕಥೆಯು ತೀರ್ಥಕ್ಷೇತ್ರ ಪರಿಚ್ಛೇದದಲ್ಲೂ ಓದುವುದು ಸೂಕ್ತ. (ಸದಾಚಾರತಂರಗದಲ್ಲಿ)

2. ಸ್ಕಾಂದ

ಆದಕ್ಕೆ ಕುಲಪತಿಯು 'ಹೀನಜಾತಿಯಲ್ಲಿ ಹುಟ್ಟಿದ ಶೂದ್ರನು ಯಾಗದಲ್ಲಿ ದೀಕ್ಷಿತನಾಗಲಿಕ್ಕೆ ಆಗಲಾರದು. ನನ್ನ ಮಾತನ್ನು ಕೇಳುವಿಯಾದರೆ ಬ್ರಾಹ್ಮಣರ ಸೇವೆಯನ್ನು ಮಾಡುತ್ತಿರು. ಶೂದ್ರನಿಗೆ ಯಾವಾಗಲೂ ಉಪದೇಶವನ್ನೇ ಮಾಡಬಾರದು. ಉಪದೇಶವನ್ನು ಮಾಡಿದವನಿಗೆ ಬಹಳ ದೋಷವುಂಟಾಗುತ್ತದೆ. ಬ್ರಾಹ್ಮಣನು ಶೂದ್ರನಿಗೆ ಅಧ್ಯಯನ ಮಾಡಿಸಬಾರದು. ಯಜ್ಞಮಾಡಿಸಬಾರದು. ವ್ಯಾಕರಣಾದಿಶಾಸ್ತ್ರವನ್ನು ಅವನಿಗೆ ಪಾಠ ಹೇಳಬಾರದು. ಕಾವ್ಯ ನಾಟಕ ಅಲಂಕಾರ ಶಾಸ್ತ್ರ ಪುರಾಣ ಇತಿಹಾಸ ಇವುಗಳನ್ನೂ ಕೂಡ ಶೂದ್ರನಿಗೆ ಪಾಠ ಹೇಳಬಾರದು. ಶೂದ್ರನಿಗೆ ಇವುಗಳನ್ನು ಒಬ್ಬ ಬ್ರಾಹ್ಮಣನು ಪಾಠ ಹೇಳಿದರು ಬ್ರಾಹ್ಮಣರು ಅವನನ್ನು ಗ್ರಾಮದಿಂದ ಬಿಟ್ಟು ಬಿಡುವರು. ಶೂದ್ರರಿಗೆ ಪಾಠ ಹೇಳುವ ಬ್ರಾಹ್ಮಣನನ್ನು ಚಂಡಾಲನಂತೆ ದೂರ ಬಿಡಬೇಕು. ಸಂಸ್ಕೃತ ಓದಿಕೊಂಡ ಶೂದ್ರನನ್ನೂ ದೂರ ದಿಂದ ಬಿಡಬೇಕು. ಆದುದರಿಂದ ನೀನು ಶ್ರದ್ಧೆಯಿಂದ ಬ್ರಾಹ್ಮಣರ ಸೇವೆಯನ್ನು ಮಾಡು. ಶೂದ್ರರಿಗೆ ದ್ವಿಜರ ಸೇವೆಯೇ ಧರ್ಮವೆಂದು ಮನುಸ್ಮೃತಿ ಮೊದಲಾದ ಧರ್ಮಶಾಸ್ತ್ರಗಳಲ್ಲಿ ಹೇಳಿದೆ. ನೀನು ಸ್ವಾಭಾವಿಕ ಧರ್ಮವನ್ನು ಬಿಡುವುದು ಸರಿಯಲ್ಲ' ಎಂದು ಹೇಳಿದರು.

ಈ ರೀತಿಯಾಗಿ ಅವರು ಹೇಳಲು ಶೂದ್ರನು 'ನಾನು ಏನು ಮಾಡಲಿ? ನನಗೆ ಯಾಗವನ್ನು ಮಾಡಬೇಕೆಂಬ ಆಸೆಯು ಪ್ರಬಲವಾಗಿದೆ. ಹೇಗೆ ಮಾಡಿದರೆ ನನಗೆ ಜ್ಞಾನವು ಬರುವುದು? ನಾನು ಪ್ರಯತ್ನ ಮಾಡುವೆನು' ಎಂದು ಯೋಚಿಸಿಕೊಂಡು ಅಲ್ಲಿಂದ ಸ್ವಲ್ಪ ದೂರಕ್ಕೆ ಹೋಗಿ ಒಂದು ಆಶ್ರಮವನ್ನು ಮಾಡಿಕೊಂಡನು. ಅಲ್ಲಿಯೇ ಒಂದು ದೇವಾಲಯವನ್ನು ಸರೋವರವನ್ನು ಪುಷ್ಪದ ತೋಟವನ್ನು ಮಾಡಿ ಕೊಂಡನು. ಅಲ್ಲಿ ಅಭಿಷೇಕ ಉಪವಾಸ ನಿಯಮಗಳನ್ನು ಮಾಡಲಿಕ್ಕೆ ಆರಂಭಿಸಿದನು. ದೇವರ ಪೂಜೆ ಮಾಡಿದನು. ಫಲಾಹಾರವನ್ನು ಮಾಡಿದನು. ಬಂದ ಆತಿಥಿಗಳಿಗೆ ಗೆಡ್ಡೆ ಹಣ್ಣು ಪುಷ್ಪಗಳಿಂದ ಸತ್ಕಾರ ಮಾಡಿದನು. ಹೀಗೆಯೇ ಬಹು ಸಮಯವು ಕಳೆದುಹೋಯಿತು.

ಒಂದು ದಿವಸದಲ್ಲಿ ಆ ಶೂದ್ರನ ಆಶ್ರಮಕ್ಕೆ ಗರ್ಗಕುಲದಲ್ಲಿ ಹುಟ್ಟಿದ ಸತ್ಯವಾದಿಯಾದ ಜಿತೇಂದ್ರಿಯನಾದ ಸುಮತಿಯೆಂಬ ಬ್ರಾಹ್ಮಣನು ಹೋದನು. ಆಗ ಶೂದ್ರನು 'ಬರಬೇಕು' ಎಂದು ಹೇಳಿ ಗೆಡ್ಡೆ ಹಣ್ಣುಗಳನ್ನು ಕೊಟ್ಟು ಸಂತೋಷಪಡಿಸಿ ಅನೇಕ ಪುಣ್ಯಕಥೆಗಳನ್ನು ಹೇಳುತ್ತಾ ಕುಶಲ ಪ್ರಶ್ನೆಯನ್ನು ಮಾಡಿದನು. ಈ ರೀತಿಯಾಗಿ ಶೂದ್ರನಿಂದ ಸತ್ಕೃತನಾಗಿ ಸುಮತಿಯು ಅವನ ಉಪಚಾರವನ್ನು

ಸ್ವೀಕರಿಸಿ ಆಶೀರ್ವಾದ ಮಾಡಿ ಹೋಗಿಬರುತ್ತೇನೆ ಎಂದು ಹೇಳಿ ತನ್ನ ಆಶ್ರಮಕ್ಕೆ ಹೋದನು. ಈರೀತಿಯಾಗಿಯೇ ಪ್ರತಿನಿತ್ಯವೂ ಸುಮತಿಯು ಶೂದ್ರನ ಮೇಲಿನ ಸ್ನೇಹದಿಂದ ಅಲ್ಲಿಗೆ ಹೋಗಲಿಕ್ಕೆ ಆರಂಭಿಸಿದನು. ಆ ಬ್ರಾಹ್ಮಣನಿಗೆ ಬಹುಕಾಲ ಶೂದ್ರನ ಸ್ನೇಹವು ಏರ್ಪಟ್ಟಿತು. ಇದರಿಂದ ಶೂದ್ರನ ವಶನಾಗಿ ಅವನು ಹೇಳಿದ ಯಾವ ಮಾತನ್ನೂ ಮೀರದೆ ಹೋದನು.

ಒಂದು ದಿವಸದಲ್ಲಿ ತನ್ನ ಮೇಲಿನ ಸ್ನೇಹದಿಂದ ವಶನಾಗಿ ಬಂದಿರುವ ಆ ಸುಮತಿಯನ್ನು ನೋಡಿ ಶೂದ್ರನು ಹವ್ಯಕವ್ಯದ ವಿಧಾನವನ್ನು ನನಗೆ ನೀವು ಹೇಳಬೇಕು. ನೀವೇ ನನಗೆ ಗುರುಗಳು ಎಂದನು. ಸುಮತಿಯು ಎಲ್ಲವನ್ನೂ ಉಪದೇಶಿಸಿದನು. ಶೂದ್ರನಿಂದ ಶ್ರಾದ್ಧವನ್ನು ಮಾಡಿಸಿದನು. ತರುವಾಯ ಇದನ್ನು ತಿಳಿದು ಇತರ ಬ್ರಾಹ್ಮಣರು ಸುಮತಿಯನ್ನು ತಮ್ಮೊಳಗೆ ಸೇರಿಸಿಕೊಳ್ಳಲಿಲ್ಲ. ಕಾಲಕ್ರಮ ದಿಂದ ಸುಮತಿಯು ಪ್ರಾಣವನ್ನು ಬಿಟ್ಟನು. ಯಮದೂತರು ಅವನನ್ನು ಎಳೆದು ಕೊಂಡು ಹೋಗಿ ನರಕದಲ್ಲಿ ಹಾಕಿದರು. ಅನೇಕ ನರಕಗಳನ್ನು ಅನುಭವಿಸಿ ಮರಗಿಡಗಳಾಗಿ ಹುಟ್ಟಿದನು. ಆಮೇಲೆ ಕತ್ತೆಯಾಗಿ ಹುಟ್ಟಿದನು. ಹಂದಿಯಾದನು. ನಾಯಿಯಾದನು. ಕಾಗೆಯಾದನು. ಚಂಡಾಲನಾದನು. ಶೂದ್ರನಾದನು. ಆಮೇಲೆ ವೈಶ್ಯನಾಗಿ, ಕ್ಷತ್ರಿಯನಾಗಿ, ಬ್ರಾಹ್ಮಣನಾಗಿ ಹುಟ್ಟಿದನು. ಬ್ರಾಹ್ಮಣನಾಗಿ ಹುಟ್ಟಿರುವಾಗ ತಂದೆಯು ಎಂಟನೇ ವರ್ಷದಲ್ಲಿಯೇ ಉಪನಯನವನ್ನು ಮಾಡಿದನು. ಸ್ವಲ್ಪ ಸಮಯ ಆಚಾರವಂತನಾಗಿದ್ದನು.

ಒಂದು ದಿನದಲ್ಲಿ ಕಾಡಿಗೆ ಹೋಗಿರಲು ಅವನನ್ನು ಒಂದು ಬ್ರಹ್ಮರಾಕ್ಷಸನು ಹಿಡಿಯಿತು. ಅಳುತ್ತಾ ಕೂಗುತ್ತಾ ನಗುತ್ತಾ ಮನೆಗೆ ಬಂದನು. ಹಾಹಾ ಎಂದು ಹೇಳುತ್ತಾ ವೈದಿಕ ಕರ್ಮವನ್ನೆಲ್ಲಾ ಬಿಟ್ಟುಬಿಟ್ಟನು. ಈ ಪ್ರಕಾರವಾದ ಮಗನನ್ನು ನೋಡಿ ತಂದೆಯು ತುಂಬಾ ದುಃಖವನ್ನು ಹೊಂದಿದನು. ಮಗನನ್ನು ಕರೆದುಕೊಂಡು ಅಗಸ್ತ್ಯರ ಬಳಿಗೆ ಹೋದನು. ಸುವರ್ಣಮುಖರೀನದಿಯ ತೀರ್ಥದಲ್ಲಿ ತಪಸ್ಸು ಮಾಡುತ್ತಿದ್ದ ಆ ಅಗಸ್ತ್ಯರನ್ನು ಭಕ್ತಿಯಿಂದ ಮರೆಹೊಂದಿದನು. ತನ್ನ ಮಗನಿಗೆ ಬಂದ ಕಷ್ಟವನ್ನು ಹೇಳಿಕೊಂಡನು. 'ಪೂಜ್ಯರೇ! ನನ್ನ ಮಗನನ್ನು ಬ್ರಹ್ಮರಾಕ್ಷಸನು ಹಿಡಿದಿ ದ್ದಾನೆ. ನನ್ನ ಮಗನನ್ನು ರಕ್ಷಿಸಬೇಕು' ಎಂದು ಹೇಳಿಕೊಂಡನು. ಆಗ ಅಗಸ್ತ್ಯರು ಧ್ಯಾನ ಮಾಡಿದವರಾಗಿ ಬಹುಹೊತ್ತು ಯೋಚಿಸಿ 'ನಿನ್ನ ಮಗನು ಪೂರ್ವದಲ್ಲಿ ಬ್ರಾಹ್ಮಣ ನಾಗಿದ್ದನು. ಇವನ ಹೆಸರು ಸುಮತಿಯೆಂದು ಇದ್ದಿತು. ಆಗ ಇವನು ಶೂದ್ರನಿಗೆ ವೈದಿಕ ಕರ್ಮಗಳನ್ನು ಉಪದೇಶಿಸಿದನು. ಇದರಿಂದ ನರಕಗಳನ್ನು ಅನುಭವಿಸಿ

ನಾನಾ ಯೋನಿಗಳಲ್ಲಿ ಹುಟ್ಟಿ ಕೊನೆಗೆ ಕರ್ಮಶೇಷದಿಂದ ಬ್ರಾಹ್ಮಣನಾಗಿ ಹುಟ್ಟಿರುವನು. ಇವನು ಪೂರ್ವದಲ್ಲಿ ಮಾಡಿದ ಪಾಪದಿಂದ ಯಮದೇವರಿಂದ ಕಳುಹಿಸಲ್ಪಟ್ಟ ಕ್ರೂರನಾದ ಬ್ರಹ್ಮರಾಕ್ಷಸನು ಇವನನ್ನು ಹಿಡಿದಿರುವನು. ಈ ಬ್ರಹ್ಮ ರಾಕ್ಷಸನನ್ನು ಬಿಡಿಸಲಿಕ್ಕೆ ಉಪಾಯವನ್ನು ಹೇಳುತ್ತೇನೆ. ಸುವರ್ಣಮುಖರೀನದಿಯ ತೀರದಲ್ಲಿ ಪವಿತ್ರವಾದ ವೇಂಕಟಾಚಲವಿದೆ. ಅದರಲ್ಲಿ ಪಾಪವಿನಾಶನವೆಂಬ ತೀರ್ಥ ವಿದೆ. ಆ ತೀರ್ಥವು ಭೂತಪ್ರೇತ ಪಿಶಾಚ ಪೇತಾಳ ಬ್ರಹ್ಮರಾಕ್ಷಸರನ್ನು ನಾನಾ ಮಹಾ ರೋಗಗಳನ್ನು ಪರಿಹರಿಸುವುದು. ನಿನ್ನ ಮಗನನ್ನು ಕರೆದುಕೊಂಡು ಅಲ್ಲಿಗೆ ಹೋಗು. ಆ ಪಾಪ ವಿನಾಶನ ತೀರ್ಥದಲ್ಲಿ ಮಗನನ್ನು ಸ್ನಾನ ಮಾಡಿಸು. ಅಲ್ಲಿ ಮೂರುದಿನ ಸ್ನಾನ ಮಾಡುವುದರಿಂದ ಬ್ರಹ್ಮರಾಕ್ಷಸನ ನಾಶವಾಗುವುದು. ಬೇರೆ ಉಪಾಯವಿರುವು ದಿಲ್ಲ. ಆದುದರಿಂದ ಬೇಗನೇ ವೇಂಕಟಾಚಲಕ್ಕೆ ಹೋಗು. ಪಾಪವಿನಾಶಿನಿಯಲ್ಲಿ ಮಗನಿಗೆ ಸ್ನಾನ ಮಾಡಿದಸು. ಸಾವಕಾಶ ಮಾಡಬೇಡ' ಎಂದು ಹೇಳಿದರು.

ತರುವಾಯ ತಂದೆಯು ಮಗನನ್ನು ಪಾಪವಿನಾಶಿನಿಗೆ ಕರೆದುಕೊಂಡು ಹೋಗಿ ಸ್ನಾನ ಮಾಡಿಸಿದನು. ಮೂರು ದಿವಸ ಸಂಕಲ್ಪಪೂರ್ವಕವಾಗಿ ತಂದೆಯೂ ಸ್ನಾನ ಮಾಡಿದನು. ಇದರಿಂದ ಮಗನ ಬ್ರಹ್ಮರಾಕ್ಷಸನು ಬಿಟ್ಟುಹೋದನು. ಮಗನು ಆರೋಗ್ಯವುಳ್ಳವನಾದನು. ಬೇಕಾದ ಸಂಪತ್ತು ಉಳ್ಳವನಾಗಿ ಬೇಕಾದ ಭೋಗ ಗಳನ್ನು ಅನುಭವಿಸಿ ಕೊನೆಗೆ ಕ್ರಮದಿಂದ ಮೋಕ್ಷವನ್ನು ಹೊಂದಿದನು. ಅವನ ತಂದೆಯೂ ಪಾಪವಿನಾಶಿನಿಯಲ್ಲಿ ಸ್ನಾನವನ್ನು ಮಾಡಿದ ಪುಣ್ಯದಿಂದ ಕ್ರಮದಿಂದ ಮೋಕ್ಷವನ್ನು ಹೊಂದಿದನು.

ಆ ಸುಮತಿಯೆಂಬ ಬ್ರಾಹ್ಮಣನಿಂದ ಉಪದೇಶವನ್ನು ಹೊಂದಿದ ಶೂದ್ರನೂ ನರಕಗಳನ್ನು ಹೊಂದಿ ಅನೇಕ ದುಷ್ಟಯೋನಿಗಳನ್ನು ಹೊಂದಿ ಆಮೇಲೆ ಹದ್ದುಪಕ್ಷಿಯಾದನು. ವೇಂಕಟಾಚಲದಲ್ಲಿಯೇ ಹುಟ್ಟಿದ್ದನು. ಒಂದು ದಿನದಲ್ಲಿ ಆ ಹದ್ದು ಪಾಪವಿನಾಶದಲ್ಲಿ ನೀರನ್ನು ಕುಡಿಯಿತು. ತನ್ನ ಮೈಯಮೇಲೆ ನೀರನ್ನು ಹಾಕಿಕೊಂಡಿತು. ಆಗಲೇ ಆ ದೇಹವನ್ನು ಬಿಟ್ಟು ದಿವ್ಯದೇಹವನ್ನು ಧರಿಸಿ ಸರ್ವಾಭರಣಗಳಿಂದ ಅಲಂಕೃತವಾಗಿ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದನು. ಈರೀತಿಯಾಗಿ ಪಾಪವಿನಾಶಿನಿತೀರ್ಥದ ಮಹಿಮೆಯು ಇರುವುದು.

ಇದನ್ನು ತೀರ್ಥಕ್ಷೇತ್ರ ಪರಿಚ್ಛೇದದಲ್ಲೂ ಓದುವುದು.(ಸದಾಚಾರ ತರಂಗ)



# ಭದ್ರಮತಿಯ ಕಥೆ [1]

ಪೂರ್ವದಲ್ಲಿ ಭದ್ರಮತಿಯೆಂಬ ಬ್ರಾಹ್ಮಣನಿದ್ದನು. ಅವನು ವೇದಶಾಸ್ತ್ರ ಪಾರಂಗತನಾಗಿದ್ದನು. ದರಿದ್ರನಾಗಿದ್ದನು. ಜೀವನೋಪಾಯ ರಹಿತನಾಗಿದ್ದನು. ಅವನು ಎಲ್ಲಾ ಶಾಸ್ತ್ರಗಳನ್ನೂ ಓದಿದ್ದನು. ಎಲ್ಲಾ ಪುರಾಣಗಳನ್ನೂ ಧರ್ಮಶಾಸ್ತ್ರ ಗಳನ್ನೂ ಓದಿದ್ದನು. ಅವನಿಗೆ ಆರುಜನ ಹೆಂಡತಿಯರಿದ್ದರು. ಕೃತಾ ಸಿಂಧು ಯಶೋವತೀ ಕಾಮಿನೀ ಮಾಲಿನೀ ಎಂದು ಹೆಸರು. ಆ ಆರು ಹೆಂಡತಿಯರಲ್ಲಿ ಅವನಿಗೆ ಇನ್ನೂರು ಮಕ್ಕಳು ಇದ್ದರು. ಭದ್ರಮತಿಯೋ ಪರಮ ದರಿದ್ರನು. ಅವನ ಮಕ್ಕಳೆಲ್ಲರೂ ಅನ್ನವಿಲ್ಲದೆ ಹಸಿವೆಯಿಂದ ಬಳಲುತ್ತಿದ್ದರು. ಭದ್ರಮತಿಯು ಹಸಿವೆ ಯಿಂದ ಶ್ರಮಪಡುತ್ತಿರುವ ಹೆಂಡತಿಯರನ್ನು ಮಕ್ಕಳನ್ನು ನೋಡಿ ವಿಲಾಪವನ್ನು ಮಾಡಿದನು. ತನ್ನ ದಾರಿದ್ರ್ಯವನ್ನು ಎಣಿಸಿಕೊಂಡು ತುಂಬಾ ದುಃಖವನ್ನು ಹೊಂದಿದನು.

ತರುವಾಯ ಅವನ ಹೆಂಡತಿಯರಲ್ಲಿ ಪತಿವ್ರತೆಯಾದ ಕಾಮಿನಿಯು 'ಪ್ರಿಯರೇ! ಋಷಿಸಮೂಹದಿಂದ ಸೇವಿತವಾದ ಸುವರ್ಣಮುಖರೀನದಿಯ ತೀರ ದಲ್ಲಿ ಪವಿತ್ರವಾದ ವೇಂಕಟಾಲವಿದೆ. ಆ ಪರ್ವತದಲ್ಲಿ ಪಾಪವನ್ನೆಲ್ಲಾ ಪರಿಹರಿಸುವ ಪಾಪವಿನಾಶಿನಿ ಎಂಬ ತೀರ್ಥವಿದೆ. ಅಲ್ಲಿ ನೀವು ಪತ್ನೀಪುತ್ರರಿಂದ ಸಹಿತರಾಗಿ ಸ್ನಾನಮಾಡಿರಿ. ನಾನು ಚಿಕ್ಕವಳಾಗಿರುವಾಗ ನನ್ನ ತಂದೆಯ ಬಳಿಯಲ್ಲಿ ನಾರದರು ಆ ತೀರ್ಥದ ಮಹಿಮೆಯನ್ನು ಹೇಳಿರುವರು. 'ಮಹಾಪವಿತ್ರವಾದ ವೇಂಕಟಾಚಲದಲ್ಲಿ ಸರ್ವದುಃಖವನ್ನೂ ಪರಿಹರಿಸುವ ಸರ್ವಸಂಪತ್ ಪ್ರದಾಯಕವಾದ ಸಂಕಲ್ಪ ಪೂರ್ವಕವಾಗಿ ಸ್ನಾನ ಮಾಡಬೇಕು. ಭೂಮಿದಾನದಲ್ಲಿ ಮಾಡುವೆನೆಂದು ಸಂಕಲ್ಪ ಮಾಡಬೇಕು. ದಾನಗಳಲ್ಲಿ ಶ್ರೇಷ್ಠವಾದದ್ದು ಭೂಮಿದಾನವು. ಅಲ್ಲಿ ಭೂಮಿದಾನ ವನ್ನು ಮಾಡಿದರೆ ಸರ್ವಾಭೀಷ್ಟವನ್ನು ಹೊಂದುವನು' ಎಂದು ನಾರದರು ಹೇಳಿದ ಮಾತನ್ನು ಕೇಳಿ ನನ್ನ ತಂದೆಯು ಸಂತೋಷದಿಂದ ಶೇಷಾಚಲಕ್ಕೆ ಹೋಗಿ ಭೂದಾನವನ್ನು ಮಾಡಿ ಸರ್ವಸೌಭಾಗ್ಯವನ್ನು ಹೊಂದಿ ಕೊನೆಗೆ ವಿಷ್ಣುಲೋಕಕ್ಕೆ ಹೋದರು. ಹಾಗೆಯೇ ನೀವೂ ಕೂಡ ಅಲ್ಲಿಗೆ ಹೋಗಿ ಭೂಮಿದಾನವನ್ನು ಮಾಡಿರಿ' ಎಂದು ಹೇಳಿ ವಿಶೇಷವಾಗಿ ಭೂಮಿದಾನದ ಫಲವನ್ನು ಹೊಗಳಿದಳು.

ತರುವಾಯ ಭದ್ರಮತಿಯು ವೇಂಕಟಾಚಲಕ್ಕೆ ಹೊರಟನು. ಪತ್ನಿಯರಿಂದ

1. ಸ್ಕಾಂ

ಸಹಿತನಾಗಿ ಸುಶಾಲಿ ಎಂಬ ನಗರಿಗೆ ಹೋದನು. ಅಲ್ಲಿ ಹಣವಂತನಾದ ಸುಘೋಷ ಎಂಬ ಬ್ರಾಹ್ಮಣನೊಡನೆ ಐದು ಮೊಳ ವಿಶಾಲವಾದ ಭೂಮಿಯನ್ನು ಬೇಡಿದನು. ಧರ್ಮಿಷ್ಟನಾದ ಸುಘೋಷನು ಕುಟುಂಬಿಯಾದ ಆ ಬ್ರಾಹ್ಮಣನನ್ನು ನೋಡಿ ಪ್ರೀತಿಯುಳ್ಳವನಾಗಿ 'ಭದ್ರಮತಿಯೇ! ನಾನು ಕೃತಾರ್ಥನಾಗಿರುವೆನು. ನನ್ನ ಜನ್ಮವು ಸಫಲವಾಯಿತು. ನೀನು ಭೂಮಿಯನ್ನು ದಾನವಾಗಿ ತೆಗೆದುಕೊಳ್ಳುವುದರಿಂದ ನನ್ನ ವಂಶವೇ ದೋಷರಹಿತವಾಯಿತು' ಎಂದು ಉಪಚಾರದ ಮಾತನ್ನು ಆಡಿ ಐದು ಮೊಳ ವಿಶಾಲವಾದ ಭೂಮಿಯನ್ನು ದಾನ ಮಾಡಿದನು. ಈರೀತಿಯಾಗಿ ವಿಷ್ಣುಭಕ್ತನಾದ ಶ್ರೋತ್ರಿಯನಾದ ಕುಟುಂಬಿಯಿಂದ ಭದ್ರಮತಿಗೆ ಭೂಮಿಯನ್ನು ದಾನಮಾಡಿದ ಪುಣ್ಯದಿಂದ ಸುಘೋಷನು ಉತ್ತಮಲೋಕವನ್ನು ಹೊಂದಿದನು.

ಭದ್ರಮತಿಯು ಹೆಂಡತೀ ಮಕ್ಕಳಿಂದ ಸಹಿತನಾಗಿ ವೇಂಕಟಾಚಲಕ್ಕೆ ಹೋಗಿ ಹೆಂಡತಿ ಮಕ್ಕಳಿಂದ ಕೂಡಿಕೊಂಡು ಸ್ವಾಮಿಪುಷ್ಕರಿಣಿಯಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನ ಮಾಡಿ ಪಶ್ಚಿಮತೀರದಲ್ಲಿ ಇರುವ ವರಾಹದೇವರಿಗೆ ನಮಸ್ಕರಿಸಿ ಶ್ರೀನಿವಾಸದೇವರ ದರ್ಶನ ಮಾಡಿಕೊಂಡು ಅಲ್ಲಿಂದ ಪಾಪನಾಶನಿಗೆ ಹೋದನು. ಅಲ್ಲಿ ಸ್ನಾನಮಾಡಿ ಒಬ್ಬ ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ಭೂಮಿದಾನವನ್ನು ಮಾಡಿದನು. ಆಗ ಶಂಖಚಕ್ರಗದಾಧಾರಿಯಾಗಿ ಶ್ರೀನಿವಾಸದೇವರು ಪ್ರತ್ಯಕ್ಷರಾದರು. ಭದ್ರಮತಿಯು ಶ್ರೀನಿವಾಸದೇವರನ್ನು ಭಕ್ತಿಯಿಂದ ಸ್ತೋತ್ರಮಾಡಿದನು. ಭಕ್ತವತ್ಸಲರಾದ ಶ್ರೀನಿವಾಸದೇವರು 'ಬ್ರಾಹ್ಮಣ! ನಿನ್ನ ಸ್ತೋತ್ರದಿಂದ ನಾನು ಸಂತುಷ್ಟನಾಗಿರುವೆನು. ನೀನು ಸರ್ವಭೋಗಗಳಿಂದ ಕೂಡಿಕೊಂಡು ಮಕ್ಕಳು ಮೊಮ್ಮಕ್ಕಳುಗಳಿಂದ ಕೂಡಿಕೊಂಡು ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಕೊನೆಗೆ ಮೋಕ್ಷವನ್ನು ಹೊಂದು' ಎಂದು ಹೇಳಿ ಅಂತರ್ಧಾನವನ್ನು ಹೊಂದಿದರು. ಬ್ರಾಹ್ಮಣನು ಸುಖದಿಂದ ಇದ್ದನು.



# ಪುಣ್ಯಶೀಲನ ಕಥೆ [1]

ಪೂರ್ವದಲ್ಲಿ ಗೋದಾವರೀ ತೀರದಲ್ಲಿ ಪುಣ್ಯಶೀಲನೆಂಬ ಬ್ರಾಹ್ಮಣನಿದ್ದನು. ಅವನು ಸತ್ಯವನ್ನೇ ಹೇಳುವನು. ಪ್ರಾಣಿಗಳಲ್ಲಿ ದಯೆಯುಳ್ಳವನಾಗಿದ್ದನು. ದೇವ ಬ್ರಾಹ್ಮಣರನ್ನು ಪೂಜಿಸುತ್ತಿದ್ದನು. ತಂದೆತಾಯಿಗಳ ಹಿತದಲ್ಲಿ ಆಸಕ್ತನಾಗಿದ್ದನು. ಗುರುಭಕ್ತಿಯುಳ್ಳವನಾಗಿದ್ದನು. ಬ್ರಾಹ್ಮಣಭಕ್ತನಾಗಿದ್ದನು. ಈಪ್ರಕಾರವಾಗಿ ಇದ್ದ ಪುಣ್ಯಶೀಲನ ಮನೆಗೆ ವೇದವೇದಾಂಗಪಾರಂಗತನಾದ ಒಬ್ಬ ಬ್ರಾಹ್ಮಣನು ಬಂದನು. ಪುಣ್ಯಶೀಲನು ತಂದೆಯ ಶ್ರಾದ್ಧದಲ್ಲಿ ಅವನನ್ನು ಬ್ರಾಹ್ಮಣನನ್ನಾಗಿ ನಿಮಂತ್ರಿಸಿ ಶ್ರಾದ್ಧಮಾಡಿದನು. ಸ್ವಲ್ಪ ಸಮಯವು ಹೋದಮೇಲೆ ಪುಣ್ಯಶೀಲನ ಮುಖವು ಕತ್ತೆಯ ಮುಖದಂತೆ ಆಯಿತು. ಇದರಿಂದ ಪುಣ್ಯಶೀಲನು ಖೇದವುಳ್ಳವನಾದನು. ಋಷಿಸಂಘದಿಂದ ಸೇವಿತವಾದ ಅಗಸ್ತ್ಯಋಷಿಗಳ ಬಳಿಗೆ ಹೋಗಿ ದುಃಖದಿಂದ ನಮಸ್ಕಾರ ಮಾಡಿದನು. ತನ್ನ ಮುಖವು ಕತ್ತೆಯಂತೆ ಆಗಲು ಕಾರಣವನ್ನು ಕೇಳಿದನು. ಆಗ ಅಗಸ್ತ್ಯರು 'ಪುಣ್ಯಶೀಲ! ನೀನು ವಂಧ್ಯಾಪತಿಯನ್ನು ಅಂದರೆ ಮಕ್ಕಳುಗಳನ್ನು ಹಡೆಯದೆ ಇದ್ದ ಸ್ತ್ರೀಯ ಗಂಡನನ್ನು ಕೂತುಕೊಳ್ಳಿಸಿ ಶ್ರಾದ್ಧವನ್ನು ಮಾಡಿರುವಿ. ಆ ಮಹಾದೋಷದಿಂದ ನಿನ್ನ ಮುಖವು ಕತ್ತೆಯಂತೆ ಆಯಿತು. ಲೋಕದಲ್ಲಿ ಹವ್ಯಕವ್ಯಗಳಲ್ಲಿ ವಂಧ್ಯಾಪತಿಯನ್ನು ಹೇಳಿದರೆ ಕತ್ತೆಯಂತೆ ಮುಖವಾಗುವುದು. ಸುವರ್ಣಮುಖರೀತೀರದಲ್ಲಿರುವ ವೇಂಕಟಾಚಲದಲ್ಲಿ ಆಕಾಶಗಂಗೆಯೆಂಬ ತೀರ್ಥದಲ್ಲಿ ಸ್ನಾನವನ್ನು ಮಾಡಿದರೆ ನಿನ್ನ ಮುಖವು ಪೂರ್ವದಂತೆಯೇ ಆಗುತ್ತದೆ' ಎಂದು ಹೇಳಿದರು.

ತರುವಾಯ ಪುಣ್ಯಶೀಲನು ಅಗಸ್ತ್ಯರನ್ನು ನಮಸ್ಕರಿಸಿ ವೇಂಕಟಾಚಲಕ್ಕೆ ಹೋಗಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ ಆಕಾಶಗಂಗೆಗೆ ಹೋಗಿ ಅಲ್ಲಿ ಸ್ನಾನವನ್ನು ಮಾಡಿ ಸುಂದರವಾದ ಮುಖವನ್ನು ಪಡೆದನು.



1. ಸ್ಕಾಂ.

# ಕಾಶ್ಯಪಬ್ರಾಹ್ಮಣನ ಕಥೆ [1]

ಪರೀಕ್ಷಿದ್ರಾಜನನ್ನು ತಕ್ಷಕನು ಕಚ್ಚಿ ಕೊಲ್ಲಲಿ ಎಂದು ಶೃಂಗಿ ಎಂಬ ಋಷಿಪುತ್ರನು ಶಾಪಕೊಟ್ಟಂತೆ ತಕ್ಷಕನು ಪರೀಕ್ಷಿದ್ರಾಜನನ್ನು ಕೊಲ್ಲಲು ಹೋಗುತ್ತಿರಲು ಕಾಶ್ಯಪ ಎಂಬ ಬ್ರಾಹ್ಮಣನು ತನ್ನ ಮಂತ್ರದ ಸಾಮರ್ಥ್ಯದಿಂದ ಬದುಕಿಸುವೆನೆಂದು ಹೋಗುತ್ತಿದ್ದನ್ನು ತಿಳಿದು ತಕ್ಷಕನು ಬೇಕಾದಷ್ಟು ಹಣವನ್ನು ಕೊಟ್ಟು ಕಳುಹಿಸಿ, ಹೋಗಿ ಪರೀಕ್ಷಿದ್ರಾಜನನ್ನು ಕೊಂದನು.

ಆಮೇಲೆ ಆ ಕಾಶ್ಯಪನು ಎಲ್ಲಿಗೆ ಹೋದರೂ ಅವನನ್ನು ಶಿಷ್ಟರು ನಿಂದಿಸತೊಡಗಿದರು. ಎಲ್ಲಿ ಹೋದರೂ ಅವನನ್ನು ತಿರಸ್ಕರಿಸಿದರು. ಇದರಿಂದ ಕಾಶ್ಯಪನು ದುಃಖವುಳ್ಳವನಾಗಿ ಶಾಕಲ್ಯ ಋಷಿಗಳನ್ನು ಮರೆಹೊಂದಿದನು. ಅವರೊಡನೆ 'ಪೂಜ್ಯರೇ! ನಾನು ಬ್ರಹ್ಮಹತ್ಯೆಯನ್ನೂ ಸುರಾಪಾನವನ್ನು ಗುರು ಸ್ತ್ರೀಗಮನವನ್ನೋ ಅಥವಾ ಇನ್ನು ಯಾವ ಮಹಾಪಾಪವನ್ನೂ ಮಾಡಿಲ್ಲ. ಆದರೂ ಜನರು ನನ್ನನ್ನು ವ್ಯರ್ಥವಾಗಿ ನಿಂದಿಸುವರಲ್ಲಾ! ನನ್ನಲ್ಲಿ ಏನು ದೋಷವಿದೆಯೆಂದು ತಿಳಿದಿದ್ದರೆ ನನಗೆ ಹೇಳಬೇಕು' ಎಂದು ಕೇಳಿಕೊಂಡನು.

ಆಗ ಶಾಕಲ್ಯರು ಒಂದು ಕ್ಷಣಧ್ಯಾನ ಮಾಡಿ 'ನೀನು ಪರೀಕ್ಷಿದ್ರಾಜನನ್ನು ರಕ್ಷಿಸಲಿಕ್ಕೆ ಹೋದವನು ಅರ್ಧದಾರಿ ಯಲ್ಲಿ ತಕ್ಷಕನ ಮಾತನ್ನು ಕೇಳಿ ರಕ್ಷಿಸದೆ ಬಂದಿರುವಿ. ವಿಷರೋಗಾದಿಗಳಿಂದ ಪೀಡಿತನಾದವನನ್ನು ಸಮರ್ಥನಾಗಿದ್ದರೂ ಯಾರು ರಕ್ಷಿಸುವುದಿಲ್ಲವೋ ಅವನು ಬ್ರಹ್ಮಹತ್ಯೆಯನ್ನು ಹೊಂದುವನು. ಕ್ರೋಧಲೋಭಮೋಹ ಇತ್ಯಾದಿಗಳಿಂದ ಯಾರು ರಕ್ಷಿಸುವುದಿಲ್ಲವೋ ಅವನು ಬ್ರಹ್ಮಹತ್ಯಾ ಸುರಾಪಾನ ಇತ್ಯಾದಿಗಳನ್ನು ಮಾಡಿದ ಪಾಪವನ್ನು ಹೊಂದುವನು. ಅಂತವನ ಪಂಕ್ತಿಯಲ್ಲಿ ಊಟಮಾಡಬಾರದು. ಅಂತವನೊಡನೆ ಮಾತಾಡಿ ದರೆಯೋ ಅತಿಪಾಪವು ಬರುವುದು. ನೀನು ವಿಷ್ಣುಭಕ್ತನಾದ ಮಹಾಯೋಗಿಯಾದ ಪರೀಕ್ಷಿದ್ರಾಜನನ್ನು ತಕ್ಷಕನ ಮಾತಿನಿಂದ ರಕ್ಷಿಸಲಿಲ್ಲವಾದ ಕಾರಣ ನಿಂದ್ಯನಾಗಿರುವಿ. ಇದರ ಪರಿಹಾರವನ್ನು ಹೇಳುವೆನು. ಬೇಗನೇ ಪರಿಹಾರ ಮಾಡಿಕೊ. ವೇಂಕಟಾಚಲದಲ್ಲಿ ಸ್ವಾಮಿ ಪುಷ್ಕರಿಣಿಯೆಂಬ ಪರಮ ಪವಿತ್ರವಾದ ಸರೋವರ ವಿರುವುದು. ಅಲ್ಲಿ ಹೋಗಿ ಸ್ನಾನಮಾಡಿ ವರಾಹದೇವರನ್ನು ನೋಡಿ, ಶ್ರೀನಿವಾಸ ದೇವರನ್ನು ನೋಡಿದಿಯಾದರೆ ಪಾಪವು ಪರಿಹೃತವಾಗುವುದು' ಎಂದರು.

1. ಭಾಗ. XII-5

ಹಾಗೆಯೇ ಕಾಶ್ಯಪನು ವೇಂಕಟಾಚಲಕ್ಕೆ ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನಮಾಡಿ ಸೌಖ್ಯದಿಂದ ಇದ್ದನು.



## ಚಿರಾಯುವಿನ ಕಥೆಯು [1]

ಪೂರ್ವದಲ್ಲಿ ಕುರುದೇಶದಲ್ಲಿ ಶ್ರುತಕೀರ್ತಿ ಎಂದು ಪ್ರಸಿದ್ಧರಾದ ರಾಜನಿದ್ದನು. ಅವನು ಸಮಸ್ತ ವಿದ್ಯೆಗಳಲ್ಲಿಯೂ ಪಂಡಿತನಾಗಿದ್ದನು. ಧನುರ್ವಿದ್ಯೆಯಲ್ಲಿ ಪಾರಂಗತನಾಗಿದ್ದನು. ಅವನಿಗೆ ಮಕ್ಕಳು ಇರಲಿಲ್ಲ. ಬಹಳ ಯೋಚಿಸಿದನು. ಕೊನೆಗೆ ದೇವಿಯನ್ನು ಆರಾಧಿಸಿದನು. ಅವನು ಮಾಡಿದ ಕಠಿಣವಾದ ತಪಸ್ಸಿನಿಂದ ಪ್ರಸಿದ್ಧಳಾದ ದೇವಿಯು ಬೇಕಾದ ವರವನ್ನು ಕೇಳುವಂತೆ ಹೇಳಿದಳು. ಅದಕ್ಕೆ ರಾಜನು 'ತಾಯಿ! ನೀನು ಪ್ರಸನ್ನಳಾಗಿರುವುದಾದರೆ ನನಗೆ ಉತ್ತಮವಾದ ಮಗನನ್ನು ಕೊಡು. ನಿನ್ನ ಅನುಗ್ರಹದಿಂದ ನನಗೆ ಬೇರೆ ಯಾವುದೂ ಕಡಿಮೆಯಿಲ್ಲ' ಎಂದು ಹೇಳಿಕೊಂಡನು. ರಾಜನ ಮಾತನ್ನು ಕೇಳಿ ದೇವಿಯು ಮುಗುಳುನಗೆಯುಳ್ಳವಳಾಗಿ 'ರಾಜನೇ! ನೀನು ದುರ್ಲಭವಾದ ವರವನ್ನು ಕೇಳಿಕೊಂಡಿರುವಿ. ಆದರೂ ನಿನ್ನ ಮೇಲೆ ಇರುವ ಕೃಪಾಪರವಶಳಾಗಿ ಕೊಡುವೆನು. ನಿನಗೆ ಗುಣವಂತನಾದ ಮಗನು ಬೇಕಾದರೆ ಅವನು ಹದಿನಾರೇ ವರ್ಷ ಜೀವಿಸುವನು. ರೂಪದಿಂದಲೂ ವಿದ್ಯೆಯಿಂದಲೂ ಹೀನನಾದ ಮಗನಾಗಿದ್ದರೆ ಬಹುಕಾಲ ಬದುಕುವನು ಎಂದು ಹೇಳಿದರು.

ಈ ಮಾತನ್ನು ಕೇಳಿ ರಾಜನು ಯೋಚಿಸಿದನು. ಪತ್ನಿಯೊಡನೆ ಯೋಚನೆ ಮಾಡಿ ಗುಣವಂತನಾದ ಸರ್ವಲಕ್ಷಣಯುಕ್ತನಾದ ಹದಿನಾರು ವರ್ಷ ಆಯುಷ್ಯವುಳ್ಳ ಮಗನನ್ನೇ ಕೇಳಿಕೊಂಡನು. ತರುವಾಯ ದೇವಿಯು 'ನನ್ನ ಆಲಯದ ದ್ವಾರದಲ್ಲಿ ಮಾವಿನ ಮರವೊಂದು ಇರುವುದು. ನನ್ನ ಆಜ್ಞೆಯಿಂದ ಅದರ ಒಂದು ಹಣ್ಣನ್ನು ನಿನ್ನ ಹೆಂಡತಿಗೆ ತಿನ್ನಲಿಕ್ಕೆ ಕೊಡು. ಆಗ ಅವಳು ಗರ್ಭಿಣಿಯಾಗುವಳು' ಎಂದು ಹೇಳಿದರು. ಸಂತುಷ್ಟನಾದ ರಾಜನು ಹಾಗೆಯೇ ಮಾಡಿದನು. ರಾಜಪತ್ನಿಯು ಗರ್ಭಿಣಿಯಾದಳು. ಹತ್ತನೇ ತಿಂಗಳಲ್ಲಿ ಅತಿಸುಂದರವಾದ ಮಗನನ್ನು ಹಡೆದಳು. ರಾಜನು ಸಂತೋಷದಿಂದ ಮತ್ತು ಶೋಕದಿಂದ ಕೂಡಿದವನಾಗಿ ಜಾತಕರ್ಮಾದಿ

1. ಇದನ್ನು ಸದಾಚಾರತರಂಗದ ವ್ರತ ಪರಿಚ್ಛೇದದಲ್ಲೂ ಸೇರಿಸಿ ಓದಬಹುದು.

ಗಳನ್ನು ಮಾಡಿದನು. ಅವನಿಗೆ ಚಿರಾಯು ಎಂದು ಹೆಸರನ್ನು ಇಟ್ಟನು. ಕ್ರಮದಿಂದ ಮಗನಿಗೆ ಹದಿನಾರು ವರ್ಷವಾಗುತ್ತಿರಲು ರಾಜನು ಪತ್ನೀ ಸಹಿತನಾಗಿ ಏನು ಮಾಡಲೆಂದು ಯೋಚಿಸಿದನು. 'ಇವನು ಬಹುಶ್ರಮದಿಂದ ಹುಟ್ಟಿದ ಮಗನು. ಇವನು ನಮ್ಮ ಹತ್ತಿರದಲ್ಲಿಯೇ ಸಾಯುವುದನ್ನು ಹೇಗೆ ನೋಡಲಿ' ಎಂದು ವಿಚಾರಮಾಡಿ ಅವನನ್ನು ಅವನ ಸೋದರ ಮಾವನೊಡನೆ ಕಾಶಿಗೆ ಕಳುಹಿಸಿದನು. ರಾಜಪತ್ನಿಯು ತನ್ನ ಸಹೋದರನೊಡನೆ ಹಾಗೆ ಪ್ರಾರ್ಥಿಸಿದಳು. 'ನನ್ನ ಮಗನನ್ನು ಕರೆದುಕೊಂಡು ಕಾಶಿಗೆ ಹೋಗು. ನಾನು ಪೂರ್ವದಲ್ಲಿ ಮಕ್ಕಳಾಗಬೇಕೆಂದು ರುದ್ರದೇವರೊಡನೆ ಪ್ರಾರ್ಥಿಸಿಕೊಂಡು ಇರುವೆನು. ಅಲ್ಲಿಯ ಯಾತ್ರೆಗಾಗಿ ನನ್ನ ಮಗನನ್ನು ಕಳುಹಿಸುತ್ತೇನೆ. ಆದುದರಿಂದ ನನ್ನ ಮಗನನ್ನು ಕರೆದುಕೊಂಡು ಹೋಗಬೇಕು. ನನ್ನ ಮಗನನ್ನು ಪ್ರಯತ್ನಪೂರ್ವಕವಾಗಿ ರಕ್ಷಿಸಬೇಕು' ಎಂದು ರಾಣಿಯು ಸಹೋದರನೊಡನೆ ಹೇಳಿಕೊಂಡಳು. ಅದನ್ನು ಕೇಳಿ ಅವನು ತನ್ನ ಸೋದರಿಯ ಮಗನನ್ನು ಕರೆದುಕೊಂಡು ಹೋದನು. ಕೆಲವು ದಿವಸ ಹೋಗುತ್ತಾ ದಾರಿಯಲ್ಲಿ ಆನಂದನಗರಕ್ಕೆ ಹೋದನು. ಆ ದೇಶಕ್ಕೆ ವೀರಸೇನನೆಂಬ ರಾಜ ನಿದ್ದನು. ಅವನಿಗೆ ಮಂಗಳಗೌರಿ ಎಂದು ಹೆಸರುಳ್ಳ ಲಕ್ಷಣಭರಿತಳಾದ ಮಗಳಿದ್ದಳು. ಅವಳು ರೂಪಲಾವಣ್ಯವತಿಯಾಗಿದ್ದಳು. ಯೌವನಉಳ್ಳವ ಳಾಗಿದ್ದಳು. ಅವಳು ಸಖಿಯರಿಂದ ಸಹಿತಳಾಗಿ ಮನೋಹರವಾದ ಉಪವನಕ್ಕೆ ಬಂದಿದ್ದಳು.

ಆಗ ಆ ಉಪವನಕ್ಕೆ ಚಿರಾಯುವೂ ಅವನ ಸೋದರಮಾವನು ಬಂದು ಸೇರಿದ್ದರು. ಆಡುತ್ತಿದ್ದ ಆ ಕನ್ಯೆಯನ್ನು ನೋಡುತ್ತಾ ವಿಶ್ರಾಂತಿ ಹೊಂದಿದರು. ಅಲ್ಲಿ ಕನ್ಯೆಯರು ವಿನೋದದಿಂದ ಕ್ರೀಡೆಯನ್ನು ಮಾಡುತ್ತಿರುವಾಗ ಒಬ್ಬಳು ಕೋಪದಿಂದ ರಾಜಪುತ್ರಿಯನ್ನು ಬೋಳಿ ಎಂದು ಕೆಟ್ಟಮಾತನ್ನು ಆಡಿದಳು. ಆ ಕೆಟ್ಟಮಾತನ್ನು ಕೇಳಿ ರಾಜಪುತ್ರಿಯು 'ನೀನು ಅಯೋಗ್ಯ ಮಾತನ್ನು ಆಡುವಿ. ನನ್ನ ವಂಶದಲ್ಲಿಯೇ ನೀನು ಹೇಳಿದಂತೆ ಆದವರು ಇಲ್ಲ. ನಾನು ಮಂಗಳಗೌರೀವ್ರತವನ್ನು ಮಾಡಿ ಮಂಗಳ ಗೌರೀದೇವಿಯ ಅನುಗ್ರಹವನ್ನು ಪಡೆದಿರುವೆನು. ಅದರಿಂದ ಮದುವೆಯ ಸಮಯ ದಲ್ಲಿ ನಾನು ಯಾರ ತಲೆಯಮೇಲೆ ಮಂತ್ರಾಕ್ಷತೆಯನ್ನು ಹಾಕುವೆನೋ ಅವನು ಅಲ್ಪಾಯುಷ್ಯವುಳ್ಳವನಾಗಿದ್ದರೂ ಚಿರಾಯುವಾಗುವನು' ಎಂದು ಹೇಳಿದಳು. ತರುವಾಯ ಕನ್ಯೆಯರು ತಮ್ಮ ತಮ್ಮ ಮನೆಗೆ ಹೋದರು. ವೀರಸೇನರಾಜನು ಆ ದಿನವೇ ಬಾಹ್ಲಿಕದೇಶದ ರಾಜನಾದ ದೃಢ. ವರ್ಮನ ಮಗನಾದ ಸುಕೇತು ಎನ್ನುವವನಿಗೆ ಮಗಳನ್ನು ಕೊಟ್ಟು ಮದುವೆ ಮಾಡುವುದೆಂದು ನಿಶ್ಚಯಿಸಿದ್ದನು.

ಆದರೆ ಸುಕೇತುವು ವಿದ್ಯಾಹೀನನಾಗಿಯೂ ಕುರೂಪಿಯಾಗಿಯೂ ಕಿವುಡನಾಗಿಯೂ ಇದ್ದನು. ಆದುದರಿಂದ ವರನ ಕಡೆಯವರು 'ಈಗ ಯಾರಾದರೂ ಒಬ್ಬ ಸುಂದರನಾದ ವರನನ್ನು ಕರೆದುಕೊಂಡು ಹೋಗುವ. ಮದುವೆಯಾದ ಮೇಲೆ ಸುಕೇತುವು ಅಲ್ಲಿಗೆ ಹೋಗಲಿ' ಎಂದು ಮಾತಾಡಿಕೊಂಡರು. ಅವರು ಚಿರಾಯುವನ್ನು ನೋಡಿ ಅವನ ಸೋದರಮಾವನೊಡನೆ 'ನಮಗೀಗ ಈ ಬಾಲಕ ನನ್ನು ಕೊಡಬೇಕು. ಇವನಿಂದ ನಮ್ಮ ಕಾರ್ಯಸಿದ್ಧಿಯಾಗುವುದು. ಪರೋಪಕಾರಕ್ಕೆ ಸಮಾನವಾದ ಧರ್ಮವು ಇರುವುದಿಲ್ಲ' ಎಂದು ಹೇಳಿದರು. ಅದನ್ನು ಕೇಳಿ ಸೋದರಮಾವನು ಪೂರ್ವದಲ್ಲಿ ರಾಜಪುತ್ರಿಯು ಉದ್ಯಾನದಲ್ಲಿ ಹೇಳಿದ್ದ ಮಾತನ್ನು ಕೇಳಿದ್ದ ಕಾರಣ ಮನಸ್ಸಿನಲ್ಲಿಯೇ ಸಂತೋಷವನ್ನು ಹೊಂದಿದನು. ಆದರೂ ಎದುರಲ್ಲಿ ಅವರೊಡನೆ 'ನೀವು ಹೇಗೆ ಯಾಚನೆ ಮಾಡುವಿರಿ? ವಸ್ತ್ರಾಲಂಕಾರವನ್ನು ಯಾಚನೆ ಮಾಡುವುದಿದೆ. ವರನನ್ನು ಯಾರಾದರೂ ಯಾಚಿಸುವರೇ? ಆದರೂ ನಿಮ್ಮ ಮೇಲೆ ಗೌರವದಿಂದ ಕೊಡುವೆನು' ಎಂದು ಹೇಳಿದನು.

ತರುವಾಯ ಅವರು ಚಿರಾಯುವನ್ನು ಕರೆದುಕೊಂಡು ಹೋಗಿ ಮದುವೆಯ ಕಾರ್ಯವನ್ನು ಮುಗಿಸಿದರು. ಸಪ್ತಪದಿಯೇ ಮೊದಲಾದದ್ದು ಮುಗಿದಮೇಲೆ ರಾತ್ರಿಯಲ್ಲಿ ಚಿರಾಯುವು ಸಂತೋಷದಿಂದ ಮಂಗಳಗೌರಿಯ ಬಳಿಯಲ್ಲಿ ಮಲಗಿದನು. ಆ ದಿನದಲ್ಲಿ ಚಿರಾಯುವಿಗೆ ಸಂಪೂರ್ಣ ಹದಿನಾರು ವರ್ಷಗಳು ಆಗಿದ್ದವು. ಮಧ್ಯರಾತ್ರಿ ಸಮಯದಲ್ಲಿ ಅವನು ಮಲಗಿದ್ದಲ್ಲಿಗೆ ದೊಡ್ಡ ಸರ್ಪವು ಬಂದಿತು. ಆ ಸಮಯದಲ್ಲಿ ದೈವೇಚ್ಛೆಯಿಂದ ಮಂಗಳಗೌರಿಗೆ ಎಚ್ಚರಿಕೆಯಾಯಿತು. ಅವಳು ಆ ದೊಡ್ಡ ಹಾವನ್ನು ನೋಡಿ ಭಯದಿಂದ ನಡುಗಿಹೋದಳು. ಆದರೂ ಧೈರ್ಯವನ್ನು ತಂದುಕೊಂಡು ಅವಳು ಆ ಸರ್ಪಕ್ಕೆ ಷೋಡಶೋಪಚಾರವನ್ನು ಮಾಡಿದಳು. ಕುಡಿಯಲಿಕ್ಕೆ ಬಹಳ ಹಾಲನ್ನು ಕೊಟ್ಟಳು. ದೈನ್ಯಯುಕ್ತವಾದ ವಾಣಿಯಿಂದ ಆ ಸರ್ಪದೊಡನೆ ಯಾಚಿಸಿಕೊಂಡಳು. ನಾನು ಉತ್ತಮವಾದ ವ್ರತವನ್ನು ಮಾಡುತ್ತಿರುವೆನು. ನನ್ನ ಗಂಡನು ಅದರಿಂದ ಬಹಳ ಕಾಲ ಬದುಕುವಂತೆ ಮಾಡು' ಎಂದು ಹೇಳಿದಳು. ಆ ಸಮಯದಲ್ಲಿ ಆ ಸರ್ಪವು ಒಂದು ಗಡಿಗೆಯ ಒಳಗೆ ಪ್ರವೇಶಿಸಿತು. ಆಗ ಅವಳು ಗಡಿಗೆಯ ಬಾಯಿಯನ್ನು ತನ್ನ ಕುಪ್ಪಸದಿಂದ ಕಟ್ಟಿಬಿಟ್ಟಳು. ಆ ಸಮಯದಲ್ಲಿ ಚಿರಾಯುವಿಗೆ ಎಚ್ಚರವಾಯಿತು. ತನಗೆ ಹಸಿವೆ ಯಾಗುತ್ತದೆ ಎಂದನು. ಆಗ ಅವಳು ತಾಯಿಯ ಬಳಿಗೆ ಲಡ್ಡಿಗೆ ಮೊದಲಾದವನ್ನು ತರಿಸಿಕೊಟ್ಟಳು. ಚಿರಾಯುವು ಅವನ್ನು ತಿಂದು ಕೈತೊಳೆದುಕೊಂಡನು. ಕೈಯನ್ನು

ತೊಳೆಯುವಾಗ ಅವನ ಕೈಯ ಉಂಗುರವು ಕೆಳಗೆ ಬಿದ್ದಿತು. ಆಮೇಲೆ ಅವನು ತಾಂಬೂಲವನ್ನು ಭಕ್ಷಿಸಿ ಹಾಗೆಯೇ ಮಲಗಿದನು. ತರುವಾಯ ಮಂಗಳಗೌರಿಯು ಹಾವು ಹೊಕ್ಕಿರುವ ಗಡಿಗೆಯನ್ನು ಹೊರಗೆ ಹಾಕಲು ಹೋದಳು. ಗಡಿಗೆಯೊಳಗೆ ಹಾವು ಇಲ್ಲದೆ ಒಂದು ಪ್ರಕಾಶಮಾನವಾದ ಮುತ್ತಿನ ಸರವಿರುವುದನ್ನು ನೋಡಿ ಆ ಸರವನ್ನು ಕುತ್ತಿಗೆಯಲ್ಲಿ ಹಾಕಿಕೊಂಡಳು. ಸ್ವಲ್ಪ ರಾತ್ರಿಯಿರುತ್ತಿರಲು ಚಿರಾಯುವಿನ ಸೋದರಮಾವನು ಬಂದು ಚಿರಾಯುವನ್ನು ಕರೆದುಕೊಂಡು ಹೋದನು.

ತರುವಾಯ ವರನ ಕಡೆಯವರು ಅಲ್ಲಿಗೆ ಸುಕೇತುವನ್ನು ತಂದುಬಿಟ್ಟರು. ಮಂಗಳಗೌರಿಯು ಸುಕೇತುವನ್ನು ನೋಡಿ ಇವನು ನನ್ನ ಗಂಡನಲ್ಲವೆಂದುಬಿಟ್ಟಳು. ಅದನ್ನು ಕೇಳಿ ವರನ ಕಡೆಯವರು 'ಇದೇಕೆ ಹೀಗೆ ಹೇಳುತ್ತಿರುವಿ? ಯಾಕೆ ಅಲ್ಲವೆಂದು ಹೇಳುತ್ತಿರುವಿ?' ಎಂದು ಕೇಳಿದರು. ಅದಕ್ಕೆ ಅವಳು 'ರಾತ್ರಿಯಲ್ಲಿ ನನ್ನ ಗಂಡನು ನನಗೆ ಉಂಗುರವನ್ನು ಕೊಟ್ಟಿರುವರು. ಅದು ಈಗ ನನ್ನ ಕೈಯಲ್ಲಿಯೇ ಇರುವುದು. ಅದು ಇವನಿಗೆ ಆಗುತ್ತದೋ ನೋಡಿರಿ. ಪತಿಯು ರಾತ್ರಿಯಲ್ಲಿ ಒಂದು ಮುತ್ತಿನಸರವನ್ನು ಕೊಟ್ಟಿರುವರು. ಅದನ್ನು ಹೇಗೆ ಇರುವುದೆಂದು ಇವನು ಹೇಳಲಿ. ಮತ್ತು ರಾತ್ರಿಯಲ್ಲಿ ನನ್ನ ತೊಡೆಯಲ್ಲಿ ನನ್ನ ಪತಿಯ ಕುಂಕುಮದಿಂದ ಪಾದದ ಚಿಹ್ನೆಯಿದೆ. ಅದನ್ನು ನೋಡಿರಿ. ರಾತ್ರಿಯಲ್ಲಿ ನಾನು ಏನು ಮಾತಾಡಿದೆನು? ಏನು ತಿನ್ನಲಿಕ್ಕೆ ಕೊಟ್ಟಿರುವೆನು? ಅದೆಲ್ಲವನ್ನು ಇವನು ಹೇಳಲಿ' ಎಂದು ಹೇಳಿದಳು. ಅದನ್ನು ಕೇಳಿ ಜನರೆಲ್ಲರೂ 'ಸರಿ ಸರಿ' ಎಂದರು. ಸುಕೇತುನಿಗೆ ಒಂದನ್ನೂ ಹೇಳಲಿಕ್ಕೆ ತಿಳಿಯಲಿಲ್ಲ. ತರುವಾಯ ಎಲ್ಲರೂ ಇವನು ವರನಲ್ಲವೆಂದು ನಿಷೇಧಿಸಿದರು. ತರುವಾಯ ವರನ ಕಡೆಯವರು ಅವನನ್ನು ಕರೆದುಕೊಂಡು ಹೊರಟುಹೋದರು.

ತರುವಾಯ ವೀರಸೇನನು ವರನನ್ನು ಕಂಡುಹಿಡುಯುವುದಕ್ಕಾಗಿ ಅನ್ನ ಪಾನಾದಿಗಳ ಛತ್ರವನ್ನು ಮಾಡಿಸಿದನು. ವರನ ಕಡೆಯವರು ತಮ್ಮ ವರನು ಕುರೂಪಿ ಯಾಗಿದ್ದ ಕಾರಣ ಯಾರೋ ಒಬ್ಬ ಸುಂದರ ವರನನ್ನು ಕರೆದುಕೊಂಡು ಬಂದಿದ್ದರು ಎಂದು ವರ್ತಮಾನವು ರಾಜನಿಗೆ ಗೊತ್ತಾಯಿತು. ಆ ವರನನ್ನು ಛತ್ರಕ್ಕೆ ಬಂದರೆ ತನ್ನ ಮಗಳು ಕಂಡುಹಿಡಿಯಲಿ ಎಂದು ಅಲ್ಲಿಯೇ ಮಳಿಗೆಯಲ್ಲಿ ಪರದೆಯ ಮರೆಯಲ್ಲಿ ಮಗಳನ್ನು ಇರಿಸಿದನು.

ಈರೀತಿಯಾಗಿ ಬಹುಸಮಯವು ಕಳೆದುಹೋಗಲು ಚಿರಾಯುವು ಸೋದರ ಮಾವನಿಂದ ಸಹಿತನಾಗಿ ಕಾಶಿಯಾತ್ರೆಯನ್ನು ಮುಗಿಸಿ ಇಲ್ಲಿ ಏನು ನಡೆಯುತೆಂದು ನೋಡುವುದಕ್ಕಾಗಿ ಛತ್ರಕ್ಕೆ ಬಂದು ಸೇರಿದನು. ಆಗ ಪರದೆಯ ಮರೆಯಿಂದ

ಮಂಗಳಗೌರಿಯು ಅವನನ್ನು ನೋಡಿ ತನ್ನ ಗಂಡನೆಂದು ತಿಳಿಯುವವಳಾಗಿ ಪರಮಸಂತೋಷದಿಂದ ತನ್ನ ಗಂಡನು ಬಂದಿರುವನೆಂದು ತಂದೆತಾಯಿಗಳ ಹತ್ತಿರ ಹೇಳಿ ಪೂರ್ವದ ಪರಿಚಯವೆಲ್ಲವನ್ನು ಹೇಳಿದಳು.

ತರುವಾಯ ರಾಜನು ಸಂತೋಷದಿಂದ ಮಗಳನ್ನು ಚಿರಾಯುವಿಗೆ ಕೊಟ್ಟು ಬಹಳ ಉತ್ಸವವನ್ನು ಮಾಡಿದನು. ವಸ್ತ್ರ ಆಭರಣ ಸೇನೆ ಆನೆ ಕುದುರೆ ಮೊದಲಾದವನ್ನು ಅಳಿಯನಿಗೆ ಕೊಟ್ಟನು. ಮಗಳಿಂದ ಸಹ ಅಳಿಯನನ್ನು ಕಳುಹಿಸಿದನು. ಚಿರಾಯುವು ಪತ್ನಿಯಿಂದಲೂ ಸೋದರಮಾವನಿಂದಲೂ ಸಹಿತ ನಾಗಿ ಸೇನಾಸಹಿತನಾಗಿ ತನ್ನ ಪುರಕ್ಕೆ ಬಂದು ಸೇರಿದನು. ಜನರು ಬಂದು ಶುತಕೀರ್ತಿ ಮತ್ತು ಅವನ ಹೆಂಡತಿಯರೊಡನೆ ನಿಮ್ಮ ಮಗನು ಬರುತ್ತಿರುವನು ಎಂದು ಹೇಳಿದರು. ಆದರೆ ಅವರು ಆ ಮಾತನ್ನು ನಂಬಲೇ ಇಲ್ಲ. ತರುವಾಯ ಚಿರಾಯುವೇ ತಂದೆತಾಯಿಗಳು ಅವನನ್ನು ಎಬ್ಬಿಸಿ ಶಿರಸ್ಸಿನಲ್ಲಿ ಮೂಸಿ ಪರಮಸಂತೋಷವನ್ನು ಹೊಂದಿದರು. ಮಂಗಳಗೌರಿಯೂ ಅತ್ತೆಮಾವಂದಿರಿಗೆ ನಮಸ್ಕರಿಸಿದಳು. ಅತ್ತೆಯು ಸೊಸೆಯನ್ನು ತೊಡೆಯಮೇಲೆ ಕೂತುಕೊಳ್ಳಿಸಿಕೊಂಡು ವರ್ತಮಾನವನ್ನು ಕೇಳಿದಳು. ಆಗ ಮಂಗಳಗೌರಿಯು ಅತ್ತೆಯೊಡನೆ ಮಂಗಳಗೌರೀ ವ್ರತದ ಮಹಿಮೆಯನ್ನು ಹೇಳಿ ನಡೆದ ವೃತ್ತಾಂತವೆಲ್ಲವನ್ನು ಹೇಳಿದಳು. ಎಲ್ಲರೂ ಸಂತೋಷದಿಂದ ಇದ್ದರು.



## ಕಲಹೋಪಾಖ್ಯಾನವು [1]

ಪೂರ್ವದಲ್ಲಿ ಕರವೀರಪುರದಲ್ಲಿ ಧರ್ಮವನ್ನು ತಿಳಿದವನಾದ ಧರ್ಮದತ್ತನೆಂಬ ಬ್ರಾಹ್ಮಣನಿದ್ದನು. ಅವನು ವಿಷ್ಣುಪ್ರೀತಿಕರಗಳಾದ ವ್ರತಗಳನ್ನು ಮಾಡುತ್ತಿದ್ದನು. ನಿತ್ಯವೂ ವಿಷ್ಣುಪೂಜೆಯಲ್ಲಿ ಆಸಕ್ತನಾಗಿದ್ದನು. ದ್ವಾದಶಾಕ್ಷರ ಮಂತ್ರವನ್ನು ಜಪಿಸುತ್ತಿದ್ದನು. ಅತಿಥಿಗಳಲ್ಲಿ ಪ್ರೀತಿಯುಳ್ಳವನಾಗಿದ್ದನು. ಒಂದು ದಿವಸದಲ್ಲಿ ಕಾರ್ತಿಕಮಾಸದಲ್ಲಿ ಅವನು ಮೂರುಗಂಟೆ ರಾತ್ರಿಯಲ್ಲಿಯೇ ಪಶ್ಚಿಮ ಜಾಗರಪೂಜೆಗಾಗಿ ಪೂಜಾಸಾಮಗ್ರಿಯನ್ನು ಹಿಡಿದುಕೊಂಡು ದೇವಾಲಯಕ್ಕೆ ಹೋಗುತ್ತಿದ್ದನು. ಹೋಗುವಾಗ ದಾರಿಯಲ್ಲಿ ಭಯಂಕರವಾದ ಧ್ವನಿಯುಳ್ಳ

1. ಪ.ಪು. ಕಾರ್ತೀಕಮಾಸ ಮಾಹಾತ್ಮೆಯಲ್ಲಿ ಓದುವುದು. (ಸದಾಚಾರ ತರಂಗದಲ್ಲಿಯೂ)

ವಕ್ರವಾದ ಕೋರೆಹಲ್ಲುಉಳ್ಳ ಚಂಚಲವಾದ ನಾಲಿಗೆಯುಳ್ಳ ಕೆಂಪಾದ ಕಣ್ಣುಳ್ಳ ದಿಗಂಬರಳಾದ ಒಣಗಿದ ಮಾಂಸವುಳ್ಳ ಜೋಲುವ ತುಟಿಗಳುಳ್ಳ ರಾಕ್ಷಸಿಯೊಬ್ಬಳು ಕಾಣಿಸಿಕೊಂಡಳು. ಅವಳನ್ನು ನೋಡಿ ಧರ್ಮದತ್ತನು ಭಯದಿಂದ ನಡುಗಿಹೋದನು. ಪೂಜಾಸಾಮಗ್ರಿಗಳಿಂದ ನೀರುಗಳಿಂದಲೂ ರೋಷದಿಂದ ಅವಳನ್ನು ಬಡಿದನು. ಪರಮಾತ್ಮನ ನಾಮವನ್ನು ಸ್ಮರಿಸಿ ತುಲಸೀಸಹಿತವಾದ ನೀರನ್ನು ಅವಳ ಮೇಲೆ ಎರಚಲು ಅವಳ ಪಾಪವು ಪರಿಹೃತವಾಯಿತು. ಅವಳು ತನ್ನ ಪೂರ್ವಕರ್ಮವನ್ನು ತಿಳಿದವಳಾಗಿ ಆ ಬ್ರಾಹ್ಮಣನಿಗೆ ಉದ್ದಕ್ಕೆ ನಮಸ್ಕರಿಸಿದಳು. 'ಬ್ರಾಹ್ಮಣ! ನಾನು ಪೂರ್ವಕರ್ಮದಿಂದ ಇಂತಹ ಅವಸ್ಥೆಯನ್ನು ಹೊಂದಿರುವೆನು. ಇನ್ನು ಮುಂದೆ ಉತ್ತಮಗತಿಯನ್ನು ನಾನು ಹೇಗೆ ಹೊಂದಲಿ?' ಎಂದು ಹೇಳಿದಳು. ತನ್ನ ಮುಂಭಾಗದಲ್ಲಿ ನಮಸ್ಕಾರಮಾಡಿ ತನ್ನ ಪಾಪವು ಹೇಳಿಕೊಳ್ಳುತ್ತಿದ್ದ ಅವಳನ್ನು ನೋಡಿ ಆ ಬ್ರಾಹ್ಮಣನು ಆಶ್ಚರ್ಯವುಳ್ಳವನಾಗಿ 'ನೀನು ಪೂರ್ವದಲ್ಲಿ ಯಾರು? ಯಾವ ಕರ್ಮವನ್ನು ಮಾಡಿರುವಿ? ಹೇಗೆ ಈ ಅವಸ್ಥೆಯನ್ನು ಹೊಂದಿರುವಿ?' ಎಂದು ಕೇಳಿದನು.

ಅದಕ್ಕೆ ರಾಕ್ಷಸಿಯು 'ಪೂರ್ವದಲ್ಲಿ ಸೌರಾಷ್ಟ್ರನಗರದಲ್ಲಿ ಭಿಕ್ಷು ಎಂಬ ಬ್ರಾಹ್ಮಣನಿದ್ದನು. ನಾನು ಅವನ ಹೆಂಡತಿಯಾಗಿದ್ದೆನು. ನನ್ನ ಕಲಹಾ ಎಂದು. ನಾನು ಅತಿ ದುಷ್ಟಳಾಗಿದ್ದೆನು. ಒಂದು ದಿವಸದಲ್ಲಿಯೂ ನಾನು ಗಂಡನ ಮಾತಿನಿಂದ ಶುಭಕಾರ್ಯವನ್ನು ಮಾಡಿದವಳಲ್ಲ. ಅವನ ಮಾತನ್ನೆಲ್ಲಾ ಮೀರುತ್ತಿದ್ದೆನು. ಅವನಿಗೆ ಒಂದು ದಿವಸದಲ್ಲಿಯೂ ಸರಿಯಾಗಿ ಅಡಿಗೆಯನ್ನು ಮಾಡಿಹಾಕಲಿಲ್ಲ. ನಿತ್ಯವೂ ನಾನು ಅವನೊಡನೆ ಜಗಳವಾಡುತ್ತಿದ್ದೆನು. ಇದರಿಂದ ಅವನು ಬೇಸತ್ತು ಬೇರೆ ಒಂದು ಮದುವೆಯನ್ನು ಮಾಡಿಕೊಳ್ಳಲಿಕ್ಕೆ ಅಭಿಪ್ರಾಯಪಟ್ಟನು. ಆಗ ನಾನು ವಿಷವನ್ನು ತಿಂದು ಪ್ರಾಣಬಿಟ್ಟೆನು. ಆಗ ಯಮದೂತರು ಬಂದು ನನ್ನನ್ನು ಕಟ್ಟಿ ಎಳೆದುಕೊಂಡು ಹೋದರು. ಯಮದೇವರು ನನ್ನನ್ನು ನೋಡಿ ಚಿತ್ರಗುಪ್ತನೊಡನೆ 'ಚಿತ್ರಗುಪ್ತ! ಇವಳು ಏನು ಕರ್ಮವನ್ನು ಮಾಡಿರುವಳು? ನೋಡು. ಇವಳು ಶುಭಕರ್ಮದ ಫಲವನ್ನೋ ಅಶುಭಕರ್ಮದ ಫಲವನ್ನೋ ಅನುಭವಿಸಲಿ' ಎಂದು ಹೇಳಿದರು. ಆಗ ಚಿತ್ರಗುಪ್ತನು ನನ್ನನ್ನು ಬೆದರಿಸುತ್ತಾ 'ಇವಳು ಒಂದು ಪುಣ್ಯವನ್ನು ಮಾಡಿದವಳಲ್ಲ. ತಾನು ರುಚಿಕರವಾದ ಅನ್ನವನ್ನು ಊಟಮಾಡಿ ಗಂಡನಿಗೆ ಹಾಕುತ್ತಿರಲಿಲ್ಲ. ಅದರಿಂದ ವಲ್ಗುಲೀ ಎಂಬ ಪ್ರಾಣಿಯಾಗಿ ತನ್ನ ಮಲವನ್ನೇ ತಿನ್ನುತ್ತಾ ಇರಲಿ. ಇವಳು ನಿತ್ಯವೂ ಗಂಡನಲ್ಲಿ ದ್ವೇಷ ಮಾಡಿರುವಳು. ಗಂಡನೊಡನೆ ಜಗಳವಾಡಿರುವಳು.

ಆದುದರಿಂದ ಇವಳು ಮಲವನ್ನು ತಿನ್ನುವ ಹಂದಿಯಾಗಲಿ. ನಿತ್ಯವೂ ಅಡಿಗೆಮಾಡಿದ ಪಾತ್ರೆಯಲ್ಲಿಯೇ ತಿನ್ನುತ್ತಿದ್ದಳು. ಆದುದರಿಂದ ತನ್ನ ಕೂಸನ್ನೇ ತಿನ್ನುವ ಬೆಕ್ಕು ಆಗಲಿ. ತನ್ನ ಗಂಡನನ್ನು ಕುರಿತು ಆತ್ಮಹತ್ಯೆಯನ್ನು ಮಾಡಿಕೊಂಡಿರುವಳು. ಆದುದರಿಂದ ಇವಳು ಪ್ರೇತಶರೀರದಲ್ಲಿ ಇರಲಿ. ಇವಳನ್ನು ಭಟರು ಮರುದೇಶಕ್ಕೆ ಕರೆದುಕೊಂಡು ಹೋಗಲಿ. ಅಲ್ಲಿ ಇವಳು ಪ್ರೇತಳಾಗಿ ಇರಲಿ' ಎಂದು ಹೇಳಿದನು. ನಾನು ಐನೂರು ವರ್ಷಗಳಿಂದ ಪ್ರೇತದೇಹದಲ್ಲಿ ಇರುವೆನು. ನಿತ್ಯವೂ ಪೂರ್ವಕರ್ಮದಿಂದ ಹಸಿವೆ ದಾಹಗಳಿಂದ ಪೀಡಿತಳಾಗಿರುವೆನು. ಕೊನೆಗೆ ಹಸಿವೆಯಿಂದ ಒಬ್ಬ ವೈಶ್ಯನನ್ನು ಹಿಡಿದೆನು. ಅವನು ಕೃಷ್ಣವೇಣೀಸಂಗಮದಲ್ಲಿ ಬಂದು ವಾಸಮಾಡಿದನು. ಆಗ ಶಿವವಿಷ್ಣುದೂತರು ಬಂದು ನನ್ನನ್ನು ಬಲಾತ್ಕಾರದಿಂದ ಅವನ ದೇಹದಿಂದ ಹೊರಡಿಸಿಬಿಟ್ಟರು.

ತರುವಾಯ ಹಸಿವೆಯಿಂದ ನಾನು ಬರುತ್ತಿರುವಾಗ ನಿನ್ನನ್ನು ನೋಡಿದೆನು. ನಿನ್ನ ಕೈಯಲ್ಲಿ ಇದ್ದ ತುಲಸೀಸಹಿತ ನೀರಿನಿಂದ ನನ್ನ ಪಾಪಪರಿಹೃತವಾಯಿತು. ನಾನು ಇನ್ನು ಮೂರು ಜನ್ಮದಿಂದಲೂ ಈ ಜನ್ಮದಿಂದಲೂ ಹೇಗೆ ಬಿಡುಗಡೆಯನ್ನು ಹೊಂದುವೆನು?' ಎಂದು ಕೇಳಿದಳು. ಅದನ್ನು ಕೇಳಿ ಧರ್ಮದತ್ತನು 'ತೀರ್ಥ ದಾನವ್ರತಾದಿಗಳಿಂದ ಪಾಪಗಳು ನಷ್ಟವಾಗುವುವು. ಆದರೆ ಪ್ರೇತದಲ್ಲಿ ಇರುವ ನಿನಗೆ ವ್ರತಾದಿಗಳಿಗೆ ಅಧಿಕಾರವು ಇರುವುದಿಲ್ಲ. ನಿನ್ನ ಶ್ರಮವನ್ನು ನೋಡಿ ನನ್ನ ಮನಸ್ಸಿಗೆ ಬಹಳ ದುಃಖವಾಗುತ್ತದೆ. ನಿನ್ನನ್ನು ಉದ್ಧಾರ ಮಾಡದೆ ಇರಲು ಮನಸ್ಸು ಕೇಳುವುದಿಲ್ಲ. ನಿನಗೆ ಇನ್ನೂ ಮೂರು ಜನ್ಮಗಳಿಗೆ ಕಾರಣವಾದ ಅತಿ ಉಗ್ರವಾದ ಪಾಪವಿರುವುದು. ಬೇರೆ ಯಾವ ಸಾಧನದಿಂದಲೂ ಆ ಪಾಪವು ಹೋಗಲಾರದು. ಈ ಪ್ರೇತತ್ವವೂ ಹೋಗಲಾರದು. ಆದುದರಿಂದ ಜನ್ಮವನ್ನು ಆರಂಭಿಸಿ ನಾನು ಮಾಡಿದ ಕಾರ್ತಿಕವ್ರತದ ಪುಣ್ಯದಲ್ಲಿ ಅರ್ಧಭಾಗವನ್ನು ಕೊಡುತ್ತೇನೆ. ಆದರಿಂದ ಉತ್ತಮವಾದ ಗತಿಯನ್ನು ಹೊಂದು. ಕಾರ್ತಿಕವ್ರತ ಪುಣ್ಯಕ್ಕೆ ಸಮಾನವಾದ ಪುಣ್ಯವು ಇನ್ನೊಂದು ಇರುವುದಿಲ್ಲ. ಯಜ್ಞದಾನವ್ರತಗಳೂ ಅದಕ್ಕೆ ಸಮಾನವಾಗಲಾರವು! ಎಂದು ಹೇಳಿ ದ್ವಾದಶಾಕ್ಷರ ಮಂತ್ರವನ್ನು ಜಪಿಸುತ್ತಾ ತುಲಸೀಮಿಶ್ರ ನೀರಿನಿಂದ ಅವಳಿಗೆ ಅಭಿಷೇಕ ಮಾಡಿದನು.

ಆಗ ಅವಳು ಪ್ರೇತತ್ವವನ್ನು ಕಳೆದುಕೊಂಡು ಅಗ್ನಿಯ ಜ್ವಾಲೆಯಂತೆ ಪ್ರಕಾಶಿಸಿದಳು. ದಿವ್ಯರೂಪವುಳ್ಳವಳಾಗಿ ಆ ಬ್ರಾಹ್ಮಣನಿಗೆ ಭೂಮಿಯಲ್ಲಿ ಉದ್ದಕ್ಕೆ ನಮಸ್ಕರಿಸಿದಳು. 'ಬ್ರಾಹ್ಮಣಶ್ರೇಷ್ಠನೇ! ನಾನು ನಿನ್ನ ಅನುಗ್ರಹದಿಂದ ನರಕದಿಂದ

ಬಿಡುಗಡೆಯನ್ನು ಹೊಂದಿದೆನು. ಪಾಪಸಮುದ್ರದಲ್ಲಿ ಮುಳುಗುತ್ತಿದ್ದ ನನಗೆ ನೀನು ದೋಣಿಯಂತೆ ಉದ್ಧಾರಕನಾದಿ ಎಂದು ಹೇಳಿದಳು. ಈರೀತಿಯಾಗಿ ಅವಳು ಹೇಳುತ್ತಿರುವಾಗಲೇ ಪ್ರಕಾಶಮಾನವಾದ ಒಂದು ವಿಮಾನವು ಆಕಾಶದಲ್ಲಿ ಕೆಳಗೆ ಬಂದಿತು. ಅದರಲ್ಲಿ ಪುಣ್ಯಶೀಲ ಸುಶೀಲ ಎಂಬ ಇಬ್ಬರು ವಿಷ್ಣುದೂತರು ಇದ್ದರು. ಅವರು ಅವಳನ್ನು ವಿಮಾನದಲ್ಲಿ ಕೂತುಕೊಳ್ಳಿಸಿದರು. ಧರ್ಮದತ್ತನು ಆ ವಿಮಾನವನ್ನು ನೋಡಿ ಆಶ್ಚರ್ಯವುಳ್ಳವನಾಗಿ ವಿಷ್ಣುದೂತರಿಗೆ ಭೂಮಿಯಲ್ಲಿ ಉದ್ದಕ್ಕೆ ನಮಸ್ಕರಿಸಿದನು.

ಆಗ ವಿಷ್ಣುದೂತರು ಅವನನ್ನು ಎಬ್ಬಿಸುವವರಾಗಿ 'ಬ್ರಾಹ್ಮಣಶ್ರೇಷ್ಠ! ನೀನು ಉತ್ತಮವಾದ ಕಾರ್ಯವನ್ನು ಮಾಡಿರುವಿ. ಸರ್ವಕಾಲದಲ್ಲಿಯೂ ವಿಷ್ಣುವಿಗೆ ಪ್ರಿಯವಾದ ವ್ರತದಲ್ಲಿ ಆಸಕ್ತನಾಗಿರುವಿ. ನೀನು ಬಾಲ್ಯದಿಂದ ಮಾಡಿರುವ ಕಾರ್ತಿಕವ್ರತದ ಪುಣ್ಯದಲ್ಲಿ ಅರ್ಧವನ್ನು ಇವಳಿಗೆ ದಾನಮಾಡಿದ ಕಾರಣ ನಿನಗೆ ಎರಡು ಪಾಲು ಪುಣ್ಯವು ಬಂದಿರುವುದು. ನೀನು ಕೊಟ್ಟ ಪುಣ್ಯದಿಂದ ಇವಳು ನೂರಾರು ಜನ್ಮಗಳಲ್ಲಿ ಮಾಡಿದ್ದ ಪಾಪವು ಪರಿಹೃತವಾಯಿತು. ನೀನು ಕೊಟ್ಟ ಸ್ನಾನದ ಪುಣ್ಯದಿಂದ ಇವಳ ಪಾಪವು ಪರಿಹೃತವಾಯಿತು. ನೀನು ಕೊಟ್ಟ ಏಕಾದಶೀ ಜಾಗರದ ಪಶ್ಚಿಮಜಾಗರದ ಪುಣ್ಯದಿಂದ ಇವಳು ಈ ವಿಮಾನವನ್ನು ಏರಿರುವಳು. ಇವಳನ್ನು ವೈಕುಂಠಕ್ಕೆ ಕರಕೊಂಡು ಹೋಗುವೆವು. ನೀನು ಕೊಟ್ಟ ದೀಪದಾನದ ಪುಣ್ಯದಿಂದ ಇಂತಹ ಪ್ರಕಾಶಮಾನವಾದ ದಿವ್ಯರೂಪವನ್ನು ಹೊಂದಿರುವಳು. ನೀನು ಕೊಟ್ಟ ತುಲಸೀಪೂಜೆಯ ಪುಣ್ಯದಿಂದ ಪರಮಾತ್ಮನ ಸಾನ್ನಿಧ್ಯವನ್ನು ಹೊಂದಿರುವಳು. ನೀನೂ ಈ ಜನ್ಮವು ಮುಗಿದಮೇಲೆ ನಿನ್ನ ಇಬ್ಬರು ಪತ್ನಿಯರಿಂದ ಸಹಿತನಾಗಿ ವೈಕುಂಠಕ್ಕೆ ಹೋಗುವಿ. ನಿನ್ನಂತೆ ಯಾರು ಭಕ್ತಿಯಿಂದ ಪರಮಾತ್ಮನನ್ನು ಆರಾಧಿಸು ವರೋ ಅವರು ಧನ್ಯರು. ಕೃತಕೃತ್ಯರು. ಅವರ ಜನ್ಮವು ಸಫಲವು. ಭಗವಂತನನ್ನು ಚೆನ್ನಾಗಿ ಆರಾಧಿಸಿದರೆ ಯಾವ ಫಲವನ್ನು ಕೊಡಲಾರನು'? ಉತ್ತಾನ ಪಾದರಾಜನ ಮಗನಿಗೆ ಧ್ರುವಲೋಕವನ್ನೇ ಕೊಟ್ಟಿರುವನು. ಅವನ ನಾಮವನ್ನು ಭಕ್ತಿಯಿಂದ ಸ್ಮರಿಸುವುದರಿಂದಲೇ ಉತ್ತಮವಾದ ಗತಿಯು ಉಂಟಾಗುವುದು. ಮೊಸಳೆಗೆ ಸಿಕ್ಕಿದ ಗಜೇಂದ್ರನು ಭಗವಂತನ ಸ್ಮರಣೆಯಿಂದಲೇ ಬಿಡುಗಡೆಯನ್ನು ಹೊಂದಿದನು. ನೀನು ಭಗವಂತನನ್ನು ಚೆನ್ನಾಗಿ ಪೂಜಿಸಿರುವಿ. ನಿನಗೂ ಪರಮಾತ್ಮನು ತನ್ನ ಸಾನ್ನಿಧ್ಯ ವನ್ನು ಕೊಡುವನು. ನೀನು ಭಗವಂತನ ಸನ್ನಿಧಾನದಲ್ಲಿ ಇಬ್ಬರು ಪತ್ನಿಯರಿಂದ ಕೂಡಿಕೊಂಡು ಬಹುಸಾವಿರ ವರ್ಷ ಭೋಗಗಳನ್ನು ಅನುಭವಿಸುವವನಾಗಿ ಪುಣ್ಯವು

ಕ್ಷಯವನ್ನು ಹೊಂದಲು ಭೂಮಿಯಲ್ಲಿ ಸೂರ್ಯವಂಶದಲ್ಲಿ ದಶರಥ ಎಂಬ ಹೆಸರುಳ್ಳ ರಾಜನಾಗಿ ಹುಟ್ಟುವಿ. ನಿನ್ನ ಇಬ್ಬರು ಹೆಂಡತಿಯರೂ ನಿನಗೆ ಹೆಂಡತಿಯರಾಗುವರು. ಇವಳೂ ಮೂರನೆಯದಾಗಿ ನಿನಗೆ ಹೆಂಡತಿಯಾಗುವಳು. ಅಲ್ಲಿ ಪರಮಾತ್ಮನು ನಿನಗೆ ಮಗನಾಗಿ ಅವತರಿಸುವನು. ನೀನು ಪರಮ ಧನ್ಯನಾಗಿರುವಿ. ನೀನು ಕೊಟ್ಟ ಪುಣ್ಯದಿಂದ ಇವಳನ್ನು ಭಗವಂತನ ಲೋಕಕ್ಕೆ ಕರಕೊಂಡು ಹೋಗುವೆವು' ಎಂದು ಹೇಳಿ ಪರಮಾತ್ಮನಲ್ಲಿ ಮಾಡುವ ಭಕ್ತಿಯೇ ಅವನ ಸಂತೋಷಕ್ಕೆ ಕಾರಣವೆಂಬ ವಿಷಯದಲ್ಲಿ ಚೋಲರಾಜ ಮತ್ತು ವಿಷ್ಣುದಾಸ ಎಂಬ ಬ್ರಾಹ್ಮಣರ ಚರಿತ್ರೆಯನ್ನು ಹೇಳಿ ಕಲಹೆಯನ್ನು ಕರೆದುಕೊಂಡು ವೈಕುಂಠಕ್ಕೆ ಹೋದರು. ಧರ್ಮದತ್ತನು ಕಾರ್ತಿಕವ್ರತದಲ್ಲಿ ವಿಶ್ವಾಸವುಳ್ಳವನಾಗಿ ಆ ವ್ರತವನ್ನು ಮಾಡುತ್ತಿದ್ದು ಕೊನೆಗೆ ಪತ್ನಿಯರಿಂದ ಸಹಿತನಾಗಿ ಭಗವಂತನ ಲೋಕಕ್ಕೆ ಹೋದನು.



## ಪುಂಡರೀಕನ ಕಥೆಯು [1]

ಭೀಷ್ಮಾಚಾರ್ಯರು ಧರ್ಮರಾಜನನ್ನು ಕುರಿತು ಹೇಳಿದರು. ಪೂರ್ವದಲ್ಲಿ ಪುಂಡರೀಕ ಎಂದು ಹೆಸರುಳ್ಳ ವೇದವನ್ನು ಓದಿಕೊಂಡ ಬ್ರಾಹ್ಮಣನಿದ್ದನು. ಅವನು ಬ್ರಹ್ಮಚರ್ಯ ಆಶ್ರಮದಲ್ಲಿ ಇದ್ದುಕೊಂಡು ಯಾವಾಗಲೂ ಗುರುಗಳ ವಶನಾಗಿದ್ದನು. ಇಂದ್ರಿಯಗಳನ್ನು ಜಯಿಸಿದ್ದನು. ಕೋಪವನ್ನು ಜಯಿಸಿದ್ದನು. ಯಾವಾಗಲೂ ಸಂಧ್ಯಾವಂದನೆಯನ್ನು ಮಾಡುತ್ತಿದ್ದನು. ವೇದಗಳಲ್ಲಿ ವೇದಾಂಗ ಶಾಸ್ತ್ರಗಳಲ್ಲಿಯೂ ಇತರ ಶಾಸ್ತ್ರಗಳಲ್ಲಿಯೂ ಪಂಡಿತನಾಗಿದ್ದನು. ಸಾಯಂಕಾಲದಲ್ಲಿಯೂ ಪ್ರಾತಃಕಾಲ ದಲ್ಲಿಯೂ ಹೋಮವನ್ನು ಮಾಡುತ್ತಿದ್ದನು. ವಿಷ್ಣುವನ್ನು ಧ್ಯಾನಮಾಡುತ್ತಾ ಆರಾಧಿಸು ತ್ತಿದ್ದನು. ಗುರುಗಳಿಗೆ ಬೇಕಾದ ನೀರು ಕಟ್ಟಿಗೆ ಫಲಪುಷ್ಪಗಳನ್ನು ತಂದುಕೊಟ್ಟು ಸಂತೋಷಪಡಿಸುತ್ತಿದ್ದನು. ತಂದೆತಾಯಿಗಳ ಸೇವೆಯನ್ನು ಮಾಡುತ್ತಿದ್ದನು. ಭಿಕ್ಷಾನ್ನ ವನ್ನು ಭೋಜನ ಮಾಡುತ್ತಿದ್ದನು. ಅವನಿಗೆ ತರುವಾಯ ವೈರಾಗ್ಯವುಂಟಾಯಿತು.

ಆಗ ಅವನು ತಂದೆತಾಯಿಗಳನ್ನು ಸಹೋದರರನ್ನೂ, ಮಿತ್ರರನ್ನೂ, ಸೋದರ ಮಾವಂದಿರನ್ನೂ, ಸಖಿ ಸಂಬಂಧಿಗಳನ್ನೂ, ಧನದಾನ್ಯ ಸಮೃದ್ಧವಾದ ಮನೆಯನ್ನೂ, ಬೇಕಾದಂತೆ ಬೆಳಸಾಗುವ ಗದ್ದೆಗಳನ್ನೂ ಪರಿತ್ಯಜಿಸಿ ಆಸೆಯನ್ನೇ ಪರಿತ್ಯಜಿಸಿ

ಮಹಾಸುಖವುಳ್ಳವನಾಗಿ ಗೆಡ್ಡೆಹಣ್ಣುಗಳನ್ನು ತಿನ್ನುತ್ತಾ ಭೂಮಿಯಲ್ಲಿ ಸಂಚರಿಸು ತ್ತಿದ್ದನು. ಗಂಗಾದಿತೀರ್ಥಗಳಿಗೆ ಹೋದನು. ಒಂದು ಸಮಯದಲ್ಲಿ ಪೂರ್ವಕರ್ಮ ದಿಂದ ಪ್ರೇರಿತನಾಗಿ ಸಾಲಗ್ರಾಮಕ್ಷೇತ್ರಕ್ಕೆ ಬಂದನು. ಅನೇಕ ಮುನಿಗಳು ಸೇವಿಸು ತ್ತಿರುವ ಪುರಾಣ ಪ್ರಸಿದ್ಧವಾದ ಆ ಕ್ಷೇತ್ರದಲ್ಲಿ ದೇವಹ್ರದದಲ್ಲಿಯೂ ಸರಸ್ವತಿಯಲ್ಲಿಯೂ ಇನ್ನು ಅಲ್ಲಿ ಇದ್ದ ಅನೇಕತೀರ್ಥಗಳಲ್ಲಿಯೂ ಸ್ನಾನ ಮಾಡಿದನು. ಆ ಕ್ಷೇತ್ರದ ಮತ್ತು ಅಲ್ಲಿಯ ನದಿಗಳ ಪ್ರಭಾವದಿಂದ ಪ್ರಸನ್ನವಾದ ಮನಸ್ಸುಳ್ಳವನಾದನು. ಅವನು ಧ್ಯಾನ ಮಾಡುತ್ತಾ ಅಲ್ಲಿಯೇ ವಾಸಮಾಡಿದನು. ಬಹುದಿವಸ ಅಲ್ಲಿಯೇ ವಾಸಮಾಡಿದನು. ರಾಗದ್ವೇಷರಹಿತನಾಗಿ ಅನೇಕ ನಿಯಮಗಳುಳ್ಳವನಾಗಿ ಭಗವಂತನನ್ನು ಆರಾಧಿಸಿದನು.

ತರುವಾಯ ಭಗವಂತನು ಅವನಲ್ಲಿ ಸಂತೋಷವುಳ್ಳವನಾದನು. ಒಂದು ದಿವಸದಲ್ಲಿ ಆದೇಶಕ್ಕೆ ಮಹಾತೇಜಸ್ವಿ ಯಾದ ಸೂರ್ಯನಂತೆ ಕಾಣಿಸುವ ವಿಷ್ಣುಭಕ್ತ ರಾದ ವಿಷ್ಣುಭಕ್ತರ ಹಿತದಲ್ಲಿ ಆಸಕ್ತರಾದ ನಾರದರು ಬಂದರು. ಪುಂಡರೀಕನು ನಾರದರನ್ನು ನೋಡಿ ಕೈಮುಗಿದು ಅರ್ಘ್ಯವನ್ನು ಕೊಟ್ಟು ನಮಸ್ಕರಿಸಿದನು. 'ಅದ್ಭುತಾಕಾರವುಳ್ಳ ಸುಂದರವಾದ ವೇಷವುಳ್ಳ ಕೈಯಲ್ಲಿ ವೀಣೆಯನ್ನು ಹಿಡಿದು ಕೊಂಡು ಬಂದಿರುವ ಈ ಮಹಾನುಭಾವರು ಯಾರು? ಸೂರ್ಯನಿರಬಹುದೇ? ಅಗ್ನಿಯಿರಬಹುದೇ? ಇಂದ್ರನಿರಬಹುದೇ? ಅಥವಾ ವರುಣನಿರಬಹುದೇ?' ಎಂದು ಯೋಚನೆ ಮಾಡಿ ಆಮೇಲೆ ಪುಂಡರೀಕನು 'ನೀವು ಬಂದಿರುವವರೂ ಯಾರು? ಎಲ್ಲಿಂದ ಬಂದಿರುವರು? ನಿಮ್ಮ ದರ್ಶನವು ಅನೇಕವಾಗಿ ಭೂಮಿಯಲ್ಲಿರುವವರಿಗೆ ಪರಮದುರ್ಲಭವು. ತಮಗೆ ಸಮಾನನಾದ ಪುರುಷನನ್ನು ನಾನು ಯಾವಾಗಲೂ ನೋಡಿದ್ದಿಲ್ಲ. ತಾವು ನಾನು ಕೇಳಿದ ವಿಷಯವನ್ನೆಲ್ಲಾ ಹೇಳುವವರಾಗಬೇಕು' ಎಂದು ಕೇಳಿಕೊಂಡರು.

ಆಗ ನಾರದರು 'ನಾನು ನಾರದನು. ನಿನ್ನನ್ನು ನೋಡುವ ಕುತೂಹಲದಿಂದ ಬಂದಿರುವೆನು. ಭಗವದ್ಭಕ್ತನು ಚಂಡಾಲನಾಗಿದ್ದರೂ ತನ್ನನ್ನು ಸ್ಮರಿಸಿದವರನ್ನು ಮಾತಾಡಿದವರನ್ನು ಪೂಜಿಸಿದವರನ್ನು ಪವಿತ್ರೀಕರಿಸುವನು. ನಾನು ಶಂಖಚಕ್ರ ಗದಾಧಾರಿಯಾದ ಮೂರುಲೋಕಕ್ಕೆ ಜ್ಞಾನಪ್ರದನಾದ ದೇವತೆಗಳೆಲ್ಲರಿಗೂ ಪ್ರಭುವಾದ ಶ್ರೀಭಗವಂತನ ದಾಸನು' ಎಂದು ಹೇಳಿದರು. ಅದನ್ನು ಕೇಳಿ ಪುಂಡರೀಕನು ಅತ್ಯಂತ ಭಕ್ತಿಯುಳ್ಳವನಾಗಿ ನಾರದರ ದರ್ಶನದಿಂದ ಅತ್ಯಂತ ಆಶ್ಚರ್ಯವುಳ್ಳವನಾಗಿ 'ನಾನು ಜನರ ಮಧ್ಯದಲ್ಲಿ ಪರಮಧನ್ಯನಾದೆನು.

ದೇವತೆಗಳಿಂದೂ ಪೂಜ್ಯನಾದೆನು. ನನ್ನ ತಂದೆ ತಾಯಿಗಳು ಕೃತಾರ್ಥರಾದರು. ನನ್ನ ಜನ್ಮವು ಸಫಲವಾಯಿತು. ತಮ್ಮ ಭಕ್ತನಾದ ನನ್ನಲ್ಲಿ ಅನುಗ್ರಹಿಸಬೇಕು. ಪರಮ ರಹಸ್ಯವಾದ ವಿಷಯವನ್ನು ಹೇಳಬೇಕು. ನಾನು ಏನು ಮಾಡಬೇಕಾದದ್ದು ಎಂದು ತಿಳಿಸಬೇಕು. ಹಾಗೆಯೇ ನಡೆದುಕೊಳ್ಳುವೆನು. ನೀವು ಎಲ್ಲರಿಗೂ ಆಶ್ರಯರಾಗಿರುವಿರಿ' ಎಂದು ಹೇಳಿದನು.

ಆಗ ನಾರದರು 'ಅನೇಕರು ಅನೇಕ ಪ್ರಕಾರವಾಗಿ ಹೇಳುತ್ತಿರುವರು. ಆದರೂ ಬ್ರಹ್ಮದೇವರು ನನ್ನೊಡನೆ ಹೇಳಿದ ವಿಷಯವನ್ನು ತಿಳಿಸುತ್ತೇನೆ. ಒಂದು ಸಮಯದಲ್ಲಿ ನಾನು ಬ್ರಹ್ಮಲೋಕದಲ್ಲಿ ಇದ್ದ ಬ್ರಹ್ಮದೇವರೊಡನೆ ನಮಸ್ಕರಿಸಿ 'ಉತ್ತಮವಾದ ಜ್ಞಾನವು ಯಾವುದು? ಉತ್ತಮವಾದ ಉಪಾಯವು ಯಾವುದು?' ಎಂದು ಕೇಳಿದೆನು.

ಆಗ ಬ್ರಹ್ಮದೇವರು 'ನಾರದ! ನಾನು ಹೇಳುವ ಮಾತನ್ನು ಕೇಳು. ಯಾವಾತನು ಇಪ್ಪತ್ತೈದನೇ ತತ್ತ್ವವಾಗಿರುವನೋ ಅವನು ಸರ್ವರಿಗೂ ಸ್ವಾಮಿಯಾಗಿರುವನು. ಅವನಿಗೇ ನಾರಾಯಣನೆಂದು ಹೆಸರು. ಅವನೇ ಜಗತ್ತಿಗೆ ಆಶ್ರಯನು. ಯಾವಾಗಲೂ ಒಂದೇ ಪ್ರಕಾರವಾಗಿ ಇರುವವನು. ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಾದಿಗಳನ್ನು ಮಾಡುವವನು. ಅವನನ್ನು ಎಲ್ಲರೂ ಆರಾಧಿಸಬೇಕು. ಯಾರು ಫಲೇಚ್ಛಾರಹಿತರಾಗಿ ಅಲಂಬುದ್ಧಿಯುಳ್ಳವರಾಗಿ ಇಂದ್ರಿಯನಿಗ್ರಹವುಳ್ಳವರಾಗಿ ನಾನು ನನ್ನದು ಎಂಬ ಭಾವನಾರಹಿತರಾಗಿ ರಾಗದ್ವೇಷರಹಿತರಾಗಿ ಸರ್ವಸಂಗ ರಹಿತರಾಗಿ ಅವನನ್ನು ಧ್ಯಾನಮಾಡುವರೋ ಅವರೇ ಆ ಭಗವಂತನನ್ನು ನೋಡುವರು. ಅವರೇ ಎಲ್ಲವನ್ನೂ ಸರಿಯಾಗಿ ತಿಳಿಯುವರು. ಅವನನ್ನು ತಿಳಿಯುವುದೇ ಉತ್ತಮವಾದ ಜ್ಞಾನವು' ಎಂದು ಹೇಳಿದರು. ಮತ್ತು ಬ್ರಹ್ಮದೇವರೇ ಪೂರ್ವದಲ್ಲಿ ಇಂದ್ರಾದಿದೇವತೆಗಳಿಗೆ ಈ ರೀತಿಯಾಗಿ ಹಿತವನ್ನು ಉಪದೇಶಿಸಿರುವರು. 'ಎಲ್ಲಾ ಧರ್ಮಗಳನ್ನೂ ನಾರಾಯಣನ ಪ್ರೀತಿಗಾಗಿ ಮಾಡಬೇಕು. ಯಜ್ಞಗಳೆಲ್ಲವೂ ನಾರಾಯಣನ ಉದ್ದೇಶವಾಗಿ ಇರುವುವು. ಸಮಸ್ತವೇದಗಳೂ ಅಂಗಶಾಸ್ತ್ರಗಳೂ ಪೃಥಿವ್ಯಾದಿ ಪಂಚಭೂತಗಳೂ ಎಲ್ಲವೂ ನಾರಾಯಣನ ಅಧೀನಗಳು. ಜ್ಞಾನಿಗಳು ಎಲ್ಲಾ ಜಗತ್ತನ್ನೂ ನಾರಾಯಣನ ಅಧೀನವೆಂದು ತಿಳಿಯುವರು. ಆದರೆ ಪಾಪಿಗಳಾದ ಮನುಷ್ಯರು ಮೋಹಿತರಾಗಿ ಹಾಗೆ ತಿಳಿಯುವುದಿಲ್ಲ. ಅವನಲ್ಲಿಯೇ ಮನಸ್ಸುಳ್ಳ ಭಕ್ತನು ಮಾತ್ರ ಅವನನ್ನು ಸರಿಯಾಗಿ ತಿಳಿಯುವನು. ವಿಷ್ಣುವು ಸರ್ವರಿಗೂ ಸ್ವಾಮಿಯು. ಮೂರುಲೋಕಗಳಿಗೂ ರಕ್ಷಕನು—ಎಲ್ಲಾ ಜಗತ್ತು ಅವನಲ್ಲಿಯೇ

ಆಶ್ರಯಿಸಿಕೊಂಡಿರುವುದು. ಅವನಿಂದಲೇ ಉಂಟಾಗಿರು ವುದು. ಅವನೇ ರುದ್ರದೇವರಲ್ಲಿ ರುದ್ರ ಎಂದು ಹೆಸರುಳ್ಳವನಾಗಿ ಜಗತ್ತನ್ನು ಸಂಹರಿಸುವನು. ವಿಷ್ಣುವೆಂದು ಹೆಸರುಳ್ಳ ರೂಪದಿಂದ ರಕ್ಷಿಸುವನು. ನನ್ನಲ್ಲಿ ಬ್ರಹ್ಮ ಎಂದು ಹೆಸರಿನಿಂದ ಇರುವವನಾಗಿ ಸೃಷ್ಟಿ ಮಾಡುವನು. ಅವನನ್ನೇ ಮರೆ ಹೊಂದಬೇಕು. ಅವನೇ ನಮಗೆಲ್ಲರಿಗೂ ತಂದೆಯು' ಎಂದು ಬ್ರಹ್ಮದೇವರು ಉಪದೇಶಿಸಲು ದೇವತೆ ಗಳೆಲ್ಲರೂ ಶ್ರೀಭಗವಂತನಿಗೆ ನಮಸ್ಕರಿಸಿದರು. ಬ್ರಾಹ್ಮಣ ಶ್ರೇಷ್ಠನೇ! ಆದುದರಿಂದ ನೀನೂ ಆ ನಾರಾಯಣನನ್ನು ಭಜಿಸು. ಅವನನ್ನು ಹೊರತು ಯಾರು ಅಭೀಷ್ಟವನ್ನು ಕೊಡುವವನಿರುವನು? ಅವನನ್ನೇ ತಂದೆಯನ್ನಾಗಿಯೂ ತಾಯಿಯನ್ನಾಗಿಯೂ ಭಾವನೆಮಾಡು. ಅಗ್ನಿಕಾರ್ಯದಿಂದ ಭಿಕ್ಷೆಯಿಂದಲೂ ತಪಸ್ಸಿನಿಂದಲೂ ಅಧ್ಯಯನ ದಿಂದಲೂ ಅವನನ್ನೇ ಸಂತೋಷಪಡಿಸು. ಪೂರ್ವದಲ್ಲಿ ಅನೇಕರು ಅವನನ್ನು ಭಜಿಸಿ ಸದ್ಗತಿಯನ್ನು ಹೊಂದಿರುವರು. ಬ್ರಹ್ಮಚಾರಿಯಾಗಲೀ ಗೃಹಸ್ಥನಾಗಲೀ ವಾನಪ್ರಸ್ಥ ನಾಗಲೀ ಸಂನ್ಯಾಸಿಯಾಗಲೀ ಪರಮಾತ್ಮನ ಆರಾಧನೆ ಯನ್ನು ಬಿಟ್ಟು ಸದ್ಗತಿಯನ್ನು ಹೊಂದಲಾರನು. ಯಾರಿಗೆ ಸಾವಿರಾರು ಜನ್ಮಗಳಲ್ಲಿ ನಾನು ವಿಷ್ಣುಭಕ್ತರ ದಾಸನೆಂದು ಬುದ್ಧಿಯು ಬರುವುದೋ ಅವನು ಪರಮಾತ್ಮನ ಸಾಲೋಕ್ಯರೂಪವಾದ ಮೋಕ್ಷ ವನ್ನು ಹೊಂದುವನು'.

ಈರೀತಿಯಾಗಿ ಪರೋಪಕಾರದಲ್ಲಿ ಆಸಕ್ತರಾದ ನಾರದರು ಉಪದೇಶಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು. ತರುವಾಯ ಪುಂಡರೀಕನು ಭಗವಂತನನ್ನೇ ನಾನಾವಿಧವಾಗಿ ಅತ್ಯಂತ ಭಜನೆ ಮಾಡಿದನು. ಅವನನ್ನೇ ಧ್ಯಾನ ಮಾಡಿದನು. ಮತ್ತೆ ಯಾವುದರಲ್ಲಿಯೂ ಮನಸ್ಸನ್ನು ಇಡಲೇ ಇಲ್ಲ. ಇದರಿಂದ ಅವನಿಗೆ ಎಲ್ಲಾ ವಸ್ತುಗಳೂ ಅನುಕೂಲವಾದವು. ಅವನಿರುವ ಸ್ಥಳದಲ್ಲಿ ದುಷ್ಟಮೃಗಗಳು ಪರಸ್ಪರ ವೈರಭಾವವನ್ನು ಬಿಟ್ಟು ಸಂಚರಿಸುತ್ತಿದ್ದವು. ನೀರು ನಿರ್ಮಲವಾಗಿದ್ದಿತು. ಸುಖವಾಗಿ ಗಾಳಿಯು ಬೀಸುತ್ತಿತ್ತು. ಮರಗಳಲ್ಲಿ ಪುಷ್ಪಗಳು ತುಂಬಿಕೊಂಡಿದ್ದವು. ಭಗವಂತನು ಅನುಗ್ರಹಿಸಲು ಎಲ್ಲವೂ ಅನುಕೂಲವಾಗಿದ್ದವು. ಒಂದು ದಿನದಲ್ಲಿ ನಾನಾವಿಧ ಆಭರಣಗಳಿಂದ ಅಲಂಕೃತನಾದ ನಾನಾ ಆಯುಧಗಳನ್ನು ಧರಿಸಿಕೊಂಡಿದ್ದ ಶ್ರೀಭಗವಂತನು ಪ್ರತ್ಯಕ್ಷನಾದನು. ಸುತ್ತಲೂ ದೇವತೆಗಳೂ ಗಂಧರ್ವರೂ ಮುನಿ ಗಳೂ ಯಕ್ಷರೂ ಉರಗರೂ ಅಪ್ಸರಸ್ತ್ರೀಯರೂ ಸೇವಿಸುತ್ತಿದ್ದರು. ಚಾಮರವನ್ನು ಬೀಸುತ್ತಿದ್ದರು. ಭಗವಂತನನ್ನು ನೋಡಿ ಪುಂಡರೀಕನು ಕೈಮುಗಿದು ನಮಸ್ಕಾರ ಮಾಡಿ ಸಂತೋಷಯುಕ್ತವಾದ ಮನಸ್ಸಿನಿಂದ

ಅವನನ್ನು ಸ್ತೋತ್ರಮಾಡಿ ಅವನನ್ನೇ ನೋಡುತ್ತಾ ನಿಂತನು. ಆಗ ಭಗವಂತನು 'ವತ್ಸ! ಪುಂಡರೀಕ! ನಿನ್ನ ಮೇಲೆ ಪ್ರೀತಿಯುಳ್ಳವನಾಗಿರುವೆನು. ನಿನ್ನ ಮನಸ್ಸಿನಲ್ಲಿ ಇರುವ ಅಭೀಷ್ಟವನ್ನು ಕೇಳಿಕೋ' ಎಂದು ಹೇಳಿದನು. ಆಗ ಪುಂಡರೀಕನು 'ಭಗವಂತನು 'ಅತ್ಯಂತ ದುರ್ಬುದ್ಧಿಯುಳ್ಳ ನಾನು ಎಲ್ಲಿ? ಹಿತೈಷಿಗಳಾದ ನೀವು ಎಲ್ಲಿ? ನನಗೆ ಯಾವುದು ಹಿತವೋ ಅದನ್ನು ನೀವೇ ಆಜ್ಞಾಪಿಸಬೇಕು' ಎಂದು ಹೇಳಿದನು. ಆಗ ಭಗವಂತನು ಅತ್ಯಂತ ಪ್ರೀತಿಯುಳ್ಳವನಾಗಿ ಕೈಮುಗಿದು ನಿಂತಿದ್ದ ಪುಂಡರೀಕನೊಡನೆ 'ನಿನಗೆ ಕ್ಷೇಮವಾಗಲಿ. ನನ್ನೊಟ್ಟಿಗೇ ನೀನು ಬಾ' ಎಂದು ಹೇಳಿದನು. ಆಗ ದೇವಲೋಕದ ವಾದ್ಯಗಳ ಶಬ್ದವಾಯಿತು. ಹೂವಿನ ಮಳೆಯು ಸುರಿಯಿತು. ಬ್ರಹ್ಮಾದಿದೇವತೆಗಳು 'ಸರಿ. ಸರಿ' ಎಂದು ಹೇಳಿದರು. ಸಿದ್ಧರೂ ಗಂಧರ್ವರೂ ಕಿನ್ನರರೂ ಗಾನಮಾಡಿದರು.

ಸರ್ವಲೋಕ ನಮಸ್ಕೃತನಾದ ಪರಮಾತ್ಮನು ಗರುಡದೇವರ ಮೇಲೆ ಕೂತುಕೊಂಡು ಆ ಪುಂಡರೀಕನನ್ನು ಕರೆದುಕೊಂಡು ಹೋದನು. ಆದುದರಿಂದ ಎಲ್ಲರೂ ಆ ಪರಮಾತ್ಮನನ್ನು ಭಜಿಸಬೇಕು. ಆ ಪರಮಾತ್ಮನಲ್ಲಿ ಭಕ್ತಿಯಿಲ್ಲದೆ ಇದ್ದರೆ ನೂರು ಅಶ್ವಮೇಧಯಾಗಗಳನ್ನು ಮಾಡಿದರೂ ನೂರು ವಾಜಪೇಯಯಾಗಗಳನ್ನು ಮಾಡಿದರೂ ಉಪಯೋಗಕ್ಕೆ ಬೀಳಲಾರದು. ಒಂದುಬಾರಿ ಯಾರು ಭಕ್ತಿಯಿಂದ ಹರಿ ಎಂದು ಉಚ್ಚರಿಸುವನೋ ಅವನು ಮೋಕ್ಷಕ್ಕೆ ಹೋಗಲು ಗಂಟುಕಟ್ಟಿದಂತೆಯೇ ಸರಿ. ಯಾರ ಹೃದಯದಲ್ಲಿ ಯಾವಾಗಲೂ ಕನ್ನೈದಿಲೆ ಪುಷ್ಪದಂತೆ ನೀಲವರ್ಣ ವುಳ್ಳವನಾದ ಪರಮಾತ್ಮನು ಇರುವನೋ ಅವರಿಗೇ ಲಾಭವು. ಅವರಿಗೇ ಜಯವು. ಅವರಿಗೆ ಪರಾಜಯವು ಯಾಕೆ ಆಗುವುದು? ಈ ಕಥೆಯನ್ನು ಭಕ್ತಿಯಿಂದ ಹೇಳಿದವರೂ ಕೇಳಿದವರೂ ಕ್ರಮದಿಂದ ವಿಷ್ಣುಲೋಕವನ್ನು ಹೊಂದುವರು.

ಈರೀತಿಯಾಗಿ ಭಗವನ್ನಾಮದ ಮಹಿಮೆಯನ್ನು ಕೇಳಿದರೆ ಧರ್ಮ ಅರ್ಥ ಕಾಮ ಮೋಕ್ಷಗಳು ಉಂಟಾಗುವುವು. ಒಳ್ಳೇ ವಂಶದಲ್ಲಿ ಹುಟ್ಟಿರುವ ಭಗವಂತನಲ್ಲಿ ಭಕ್ತಿಯುಳ್ಳವನಾದ ಬ್ರಾಹ್ಮಣನು ಪರಮಾತ್ಮನ ಸನ್ನಿಧಾನಕ್ಕೆ ಪಾತ್ರನು. ಯಾರು ಬಾಯಿಯಲ್ಲಿ ಪರಮಾತ್ಮನ ನಾಮವನ್ನು ಉಚ್ಚರಿಸುತ್ತಾ ಮನಸ್ಸಿನಲ್ಲಿ ಅವನನ್ನು ಧ್ಯಾನಮಾಡುತ್ತಾ ಶಂಖಚಕ್ರಮುದ್ರೆಯನ್ನು ಧರಿಸಿದವನಾಗಿ ತುಲಸೀಮಾಲೆಯನ್ನೂ ಧರಿಸಿಕೊಂಡು ಇರುತ್ತಾನೋ ಅವನು ಜೀವನ್ಮುಕ್ತನಿಗೆ ಸಮಾನನು. ಅವನು ಬೇಕಾದ ಭೋಗಗಳನ್ನು ಅನುಭವಿಸಿ ಇಪ್ಪತ್ತೊಂದು ತಲೆಯವರಿಂದ ಕೂಡಿಕೊಂಡು ವಿಷ್ಣುಲೋಕದಲ್ಲಿ ವಾಸಿಸುವನು. ಭಕ್ತಿಯಿಂದ ಪರಮಾತ್ಮನು ಸಂತೋಷವನ್ನು

ಹೊಂದುವನು. ಕಲಿಯುಗದಲ್ಲಿ ಪರಮಾತ್ಮನನ್ನು ಗಾಯನ ಮಾಡುವುದು ಸಾಮಗಾಯನ ಮಾಡುವುದಕ್ಕೆ ಸಮಾನವಾದದ್ದು.



## ವಿಷ್ಣುಶರ್ಮನ ಕಥೆಯು[1]

ಪೂರ್ವದಲ್ಲಿ ಹಸ್ತಿನಾವತಿಯಲ್ಲಿ ಶಿವಶರ್ಮ ಎಂದು ಹೆಸರುಳ್ಳ ವೇದವೇದಾಂಗ ಶಾಸ್ತ್ರಪಾರಂಗತನಾದ ಬ್ರಾಹ್ಮಣನೊಬ್ಬನಿದ್ದನು. ಅವನಿಗೆ ಗುಣವತಿಯೆಂದು ಹೆಸರುಳ್ಳ ಗುಣವಂತಳಾದ ಹೆಂಡತಿಯಿದ್ದಳು. ಆ ದಂಪತಿಗಳಲ್ಲಿ ಇಂದ್ರದೇವರು ಮಗನಾಗಿ ಅವತರಿಸಿದರು. ಜ್ಯೋತಿಃಶಾಸ್ತ್ರವನ್ನು ತಿಳಿದವರು ಮಗುವು ಹುಟ್ಟಿದ ಲಗ್ನವನ್ನು ನೋಡಿ ಶಿವಶರ್ಮನೊಡನೆ 'ಶಿವಶರ್ಮನೇ! ನಿನ್ನ ಮಗನು ಭಗವದ್ಭಕ್ತನಾಗುವನು. ನಿನ್ನ ವಂಶವನ್ನು ಉದ್ಧರಿಸುವನು. ಹದಿಮೂರನೇ ವರ್ಷದಲ್ಲಿಯೇ ಸಾಂಗನಾಲ್ಕು ವೇದಗಳ ಅಧ್ಯಯನಮಾಡಿ ಜ್ಞಾನಿಯಾಗಿ ಮದುವೆ ಮಾಡಿಕೊಳ್ಳುವನು. ಮಗನನ್ನು ಪಡೆದು ವಾನಪ್ರಸ್ಥನಾಗುವನು. ತೀರ್ಥಗಳಲ್ಲಿ ಸಂಚರಿಸುತ್ತಾ ಸಂನ್ಯಾಸಗಳನ್ನು ಸ್ವೀಕರಿಸುವನು. ಇಂದ್ರದೇವರ ಖಾಂಡವವನದಲ್ಲಿ ಯಮುನಾನದಿಯಿದೆ. ಅದರ ತೀರದಲ್ಲಿ ಇಂದ್ರಪ್ರಸ್ಥವಿದೆ. ಅಲ್ಲಿ ಇವನು ದೇಹಪರಿತ್ಯಾಗವನ್ನು ಮಾಡುವನು' ಎಂದು ಹೇಳಿದರು. ಶಿವಶರ್ಮನು ಅವರು ಹೇಳಿದ ಮಾತನ್ನು ಕೇಳಿ ಮಗನಿಗೆ ವಿಷ್ಣುಶರ್ಮ ಎಂದು ನಾಮಕರಣವನ್ನು ಮಾಡಿದನು. ಜ್ಯೋತಿಷ್ಯ ಹೇಳಿದವರಿಗೆ ಬೇಕಾದ ಹಣವನ್ನು ಕೊಟ್ಟು ಕಳುಹಿಸಿದನು. ಮಗನ ವೃತ್ತಾಂತವನ್ನು ಕೇಳಿ ತಾನು ಪರಮಧನ್ಯನಾದೆನೆಂದು ಭಾವಿಸಿದನು. ಮಗುವಿಗೆ ಜಾತಕರ್ಮಾದಿಗಳನ್ನು ಮಾಡಿಸಿದನು. ಎಂಟನೇ ವರ್ಷದಲ್ಲಿ ಮಗನಿಗೆ ಉಪನಯನವನ್ನು ಮಾಡಿದನು. ಹನ್ನೆರಡನೇ ವರ್ಷದವರೆಗೆ ವೇದಾದಿಶಾಸ್ತ್ರಗಳನ್ನು ಅಭ್ಯಾಸಮಾಡಿಸಿ ಮದುವೆ ಮಾಡಿದನು.

ತರುವಾಯ ವಿಷ್ಣುಶರ್ಮನು ತನ್ನ ಹೆಂಡತಿಯಲ್ಲಿ ಮಗನನ್ನು ಪಡೆದು ತೀರ್ಥಯಾತ್ರೆಯನ್ನು ಮಾಡಬೇಕೆಂದು ಯೋಚಿಸಿದನು. ತಂದೆಯ ಸಮೀಪಕ್ಕೆ ಬಂದು 'ತಂದೆಯೇ! ನಾನು ವಾನಪ್ರಸ್ಥಾಶ್ರಮವನ್ನು ಹೊಂದಿ ಭಗವಂತನನ್ನು ಆರಾಧಿಸುವೆನು. ನನಗೆ ಅನುಜ್ಞೆಯನ್ನು ಕೊಡಿರಿ. ಸಂಸಾರವೆಲ್ಲವೂ ನಶ್ವರವಾದದ್ದು.

ಜ್ಞಾನಿಗಳು ಅದರಲ್ಲಿ ಆಸಕ್ತರಾಗಲಾರರು. ನಾವು ಶಾಸ್ತ್ರಗಳ ಅಧ್ಯಯನದಿಂದಲೂ ಸತ್ಪುತ್ರನನ್ನು ಪಡೆದದ್ದರಿಂದ ಋಷಿ ಋಣ ಪಿತೃಋಣಗಳನ್ನು ಪರಿಹರಿಸಿಕೊಂಡಿರುವೆನು. ಇನ್ನು ಮುಂದೆ ತೀರ್ಥಸಂಚಾರ ಮಾಡುತ್ತಾ ಭಗವಂತನನ್ನು ಸಂತೋಷಪಡಿಸಲು ಇಚ್ಛಿಸುತ್ತೇನೆ. ಆಮೇಲೆ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಒಂದು ತೀರ್ಥಶ್ರೇಷ್ಠದ ತೀರದಲ್ಲಿ ಪ್ರಾರಬ್ಧಕರ್ಮವಿರುವವರೆಗೆ ವಾಸ ಮಾಡಬೇಕೆಂದು ಅಭಿಪ್ರಾಯವುಳ್ಳವನಾಗಿರುವೆನು' ಎಂದು ಹೇಳಿದನು.

ಈರೀತಿಯಾಗಿ ಮಗನು ಹೇಳಿದ ಮಾತನ್ನು ಕೇಳಿ ಬುದ್ಧಿವಂತನಾದ ತಂದೆಯಾದ ಶಿವಶರ್ಮನು ಜ್ಯೋತಿಷ್ಕರು ಹೇಳಿದ ಮಾತನ್ನು ಸ್ಮರಿಸಿಕೊಂಡು 'ನನಗೂ ಈಗ ಸಂನ್ಯಾಸಾಶ್ರಮವನ್ನು ಸ್ವೀಕಾರ ಮಾಡುವ ಕಾಲವು ಬಂದಿದೆ. ನನಗೂ ಸಂಸಾರದಲ್ಲಿ ಆಸೆಯಿಲ್ಲ. ನಾನೂ ಮನೆಯನ್ನು ಬಿಟ್ಟುಬರುವೆನು. ನಿನ್ನ ತಮ್ಮನಾದ ಸುಶರ್ಮನು ಮನೆಯನ್ನು ನೋಡಿಕೊಳ್ಳುವನು. ನಾನು ಬರುವುದನ್ನು ತಿಳಿದರೆ ಪತಿವ್ರತೆಯಾದ ನಿನ್ನ ತಾಯಿಯು ನನ್ನನ್ನು ಅನುಸರಿಸಿ ಬಂದು ಬಿಡುವಳು. ಆದುದರಿಂದ ನಿನ್ನ ತಾಯಿಗೆ ತಿಳಿಯದಂತೆ ನಾವಿಬ್ಬರೂ ಭಗವಂತನನ್ನು ಸ್ಮರಿಸುತ್ತಾ ಮನೆಯನ್ನು ಬಿಟ್ಟು ಹೊರಟುಹೋಗುವ' ಎಂದು ಹೇಳಿದನು.

ತರುವಾಯ ಅವರಿಬ್ಬರೂ ಮಹಾಕತ್ತಲೆಯುಳ್ಳ ಮಧ್ಯರಾತ್ರಿಯಲ್ಲಿ ನಿದ್ರೆ ಮಾಡುತ್ತಿದ್ದ ಕುಟುಂಬವನ್ನು ಬಿಟ್ಟು ಮನೆಯಿಂದ ಹೊರಟುಹೋದರು. ಇಬ್ಬರೂ ಸೇರಿಕೊಂಡು ಸಂಚರಿಸುತ್ತಾ ಇಂದ್ರಪ್ರಸ್ಥಕ್ಕೆ ಬಂದರು. ಇಲ್ಲಿ ಬರಲು ವಿಷ್ಣುಶರ್ಮನು ಯಜ್ಞಸ್ತಂಭಗಳನ್ನು ನೋಡಿ ತಾನು ಪೂರ್ವದಲ್ಲಿ ಇಂದ್ರನಾಗಿರುವಾಗ ಮಾಡಿದ ಯಜ್ಞಗಳೆಲ್ಲವನ್ನೂ ಸ್ಮರಿಸಿಕೊಂಡನು. ತಂದೆಯೊಡನೆ 'ನಾನು ಪೂರ್ವಜನ್ಮದಲ್ಲಿ ಇಂದ್ರನಾಗಿದ್ದೆನು. ನಾನು ಇಲ್ಲಿ ಭಗವಂತನ ಪ್ರೀತಿಗಾಗಿ ಅನೇಕ ಯಜ್ಞಗಳನ್ನು ಮಾಡಿರುವೆನು. ಇಲ್ಲಿಯೇ ನನಗೆ ಭಕ್ತವತ್ಸಲನಾದ ಪರಮಾತ್ಮನು ಪ್ರಸನ್ನನಾಗಿರುವನು. ಇಲ್ಲಿಯೇ ಸಪ್ತಋಷಿಗಳಿಗೂ ಬ್ರಾಹ್ಮಣರಿಗೂ ಅನೇಕ ಪಡಿರತ್ನಗಳನ್ನು ದಾನಮಾಡಿ ಸಂತೋಷಪಡಿಸಿರುವೆನು. ಆ ಬ್ರಾಹ್ಮಣರು ನನಗೆ ವಿಷ್ಣುಭಕ್ತಿಯುಂಟಾಗುವಂತೆಯೂ ಮೋಕ್ಷಉಂಟಾಗುವಂತೆಯೂ ಆಶೀರ್ವದಿಸಿರುವರು. ಭಗವಂತನೇ ಮೊದಲಾದ ಎಲ್ಲರೂ ಇಲ್ಲಿ ತೀರ್ಥಗಳನ್ನು ನಿರ್ಮಿಸಿರುವರು. ಈ ಇಂದ್ರಪ್ರಸ್ಥವು ಸರ್ವತೀರ್ಥಮಯವಾಗಿ ಮಾಡಲ್ಪಟ್ಟಿತು. ಇಲ್ಲಿಯೇ ನಾನು ಮರಣವನ್ನು ಹೊಂದುವೆನೆಂದು ಮುನಿಗಳು ಹೇಳಿರುವರು. ಆಮೇಲೆ ನಾನು ಭಗವಂತನ ಲೋಕವನ್ನು ಹೊಂದುವೆನು. ಇದೆಲ್ಲ ನನ್ನ ಸ್ಮರಣೆಗೆ ಬರುತ್ತಿದೆ.

ಬ್ರಹ್ಮದೇವರು ಗಂಗಾಸರಸ್ವತಿಯರು ಇಲ್ಲಿಗೆ ಬರುವಂತೆ ಮಾಡಿರುವರು. ಆ ನದಿಗಳ ಸೇರಿದ ಸ್ಥಳವೇ ಪ್ರಯಾಗವು. ಪ್ರಯಾಗಕ್ಕಿಂತ ಪೂರ್ವದಲ್ಲಿ ರುದ್ರದೇವರ ಸನ್ನಿಧಾನವುಳ್ಳ ಕಾಶಿಯು. ಐವತ್ತೆರಡು ಮಾರು ದೂರದಲ್ಲಿ ಇದೆ. ಅಲ್ಲಿ ಸತ್ತವರು ಕ್ರಮದಿಂದ ಸಾಧನೆ ಮಾಡಿ ಮೋಕ್ಷವನ್ನು ಹೊಂದುವರು. ಅಲ್ಲಿಂದ ಪಶ್ಚಿಮದಲ್ಲಿ ಇಪ್ಪತ್ತೊಂದು ಮಾರು ದೂರದಲ್ಲಿ ರುದ್ರದೇವರಿಂದ ಸ್ಥಾಪಿತವಾದ ಶಿವಕಾಂಚಿಯಿದೆ. ಇದಕ್ಕೆ ಎರಡು ಮಾರು ದೂರದಲ್ಲಿ ಗೋಕರ್ಣವೆಂದು ಹೆಸರುಳ್ಳ ಕ್ಷೇತ್ರವಿದೆ. ಇದು ರುದ್ರದೇವರಿಗೆ ಅತ್ಯಂತ ಪ್ರಿಯವಾದದ್ದು. ಇದರ ಪಶ್ಚಿಮದಲ್ಲಿ ಎಪ್ಪತ್ತು ಮಾರು ದೂರದಲ್ಲಿ ಪವಿತ್ರವಾದ ದ್ವಾರವತಿಯಿದೆ. ಅದರ ಪೂರ್ವದಲ್ಲಿ ಹದಿನೆಂಟು ಮಾರು ದೂರದಲ್ಲಿ ಕೋಶಲಾ ತೀರ್ಥವಿದೆ. ಕೋಶಲೆಯ ಪಶ್ಚಿಮದಲ್ಲಿ ಹದಿನೆಂಟು ಮಾರು ದೂರದಲ್ಲಿ ಪವಿತ್ರವಾದ ಮಧುವನವಿದೆ. ಅದರ ಉತ್ತರದಲ್ಲಿ ಹನ್ನೊಂದು ಮಾರು ದೂರದಲ್ಲಿ ನರನಾರಾಯಣಾಶ್ರಮವಿದೆ. ಅದರ ದಕ್ಷಿಣದಲ್ಲಿ ಮೂವತ್ತು ಮಾರು ದೂರದಲ್ಲಿ ಹರಿದ್ವಾರವಿದೆ. ಅದಕ್ಕಿಂತ ಹನ್ನೆರಡು ಮಾರು ದೂರದಲ್ಲಿ ಪುಷ್ಕರ ತೀರ್ಥವಿದೆ. ಪ್ರಯಾಗಕ್ಕಿಂತ ನಾಲ್ಕು ಮೈಲುಗಳಲ್ಲಿ ಪೂರ್ವದಿಕ್ಕಿನಲ್ಲಿ ಸಪ್ತರ್ಷಿಗಳ ತೀರ್ಥಗಳಿರುವುವು. ಅಲ್ಲಿ ಮೃತರಾದವರು ಸದ್ಗತಿಯನ್ನು ಹೊಂದುವರು. ಪ್ರಯಾಗದಿಂದ ನಾಲ್ಕು ಮೈಲು ಪಶ್ಚಿಮದಲ್ಲಿ ಬೃಹಸ್ಪತ್ಯಾಚಾರ್ಯರು ಮಾಡಿದ ನಿಗಮೋದ್ಬೋದಕವೆಂಬ ತೀರ್ಥವಿದೆ. ಏಳು ಸಪ್ತರ್ಷಿಗಳ ತೀರ್ಥಗಳಿಗೂ ನಿಗಮೋದ್ಬೋದಕತೀರ್ಥಕ್ಕೂ ಮಧ್ಯದಲ್ಲಿ ದೇವತೆಗಳು ಇಂದ್ರವೃಕಕ್ಷೇತ್ರವೆಂದು ಸ್ಥಾಪಿಸಿರುವರು. ಪೂರ್ವಪಶ್ಚಿಮಗಳಲ್ಲಿ ಒಂದು ಯೋಜನ ವಿಸ್ತೃತವಾದ ಯಮುನಾ ನದಿಯ ದಕ್ಷಿಣತೀರದಲ್ಲಿ ನಾಲ್ಕು ಯೋಜನ ವಿಸ್ತೃತವಾದ ಪ್ರದೇಶವು ಇಂದ್ರಪ್ರಸ್ಥ ವೆಂದು ಹೇಳಲ್ಪಡುವುದು' ಎಂದು ಹೇಳಿದನು.

ಮಗನ ಮಾತನ್ನು ಕೇಳಿ ಶಿವಶರ್ಮನು ಸಂದೇಹವುಳ್ಳವನಾಗಿ ಮಗನೊಡನೆ 'ನಾನು ನಿನ್ನ ಮಾತನ್ನು ಹೇಗೆ ನಂಬಲಿ? ಇದೆಲ್ಲಾ ನಿನಗೆ ಹೇಗೆ ತಿಳಿಯಿತು? ನೀನು ಮನೆಯನ್ನು ಬಿಟ್ಟು ಹೋದವನಲ್ಲ. ನನ್ನಲ್ಲಿಯೇ ನೀನು ಸಾಂಗ ನಾಲ್ಕು ವೇದಗಳ ಅಧ್ಯಯನವನ್ನು ಮಾಡಿದಿ. ಪೂರ್ವಜನ್ಮದ ಜ್ಞಾನವು ನಿನಗೆ ಹೇಗೆ ಉಂಟಾಯಿತು?' ಎಂದು ಕೇಳಿದನು.

ಅದಕ್ಕೆ ವಿಷ್ಣುಶರ್ಮನು 'ನನಗೆ ಪೂರ್ವದಲ್ಲಿ ಋಷಿಗಳು ವರವನ್ನು ಕೊಟ್ಟಿರುವರು. ನಾನು ಅವರಿಂದಲೇ ಈ ತೀರ್ಥಗಳ ಮಹಿಮೆಯನ್ನು ಕೇಳಿದೆನು. ಅದು ಈಗ ಸ್ಮರಣೆಗೆ ಬಂದಿರುವುದು. ತಂದೆಯೇ! ನೀನು ನಿಗಮೋದ್ಬೋದಕ

ತೀರ್ಥದಲ್ಲಿ ಸ್ನಾನಮಾಡು. ನಿನಗೂ ಪೂರ್ವಜನ್ಮದ ಸ್ಮರಣೆಯುಂಟಾಗುವುದು. ನನ್ನ ಪೂರ್ವಜನ್ಮದ ವಿಷಯವೂ ನಿನಗೆ ತಿಳಿಯುವುದು' ಎಂದು ಹೇಳಿದನು.

ತರುವಾಯ ಶಿವಶರ್ಮನು ನಿಗಮೋದ್ಬೋದಕತೀರ್ಥದಲ್ಲಿ ಸ್ನಾನಮಾಡಲು ಉದ್ಯುಕ್ತನಾಗಲು ಒಬ್ಬ ಬೇಡನು ಅಲ್ಲಿಗೆ ಓಡಿಬಂದನು. ಅವನ ಹಿಂದೆಯೇ ಅವನನ್ನು ಅಟ್ಟಿಸಿಕೊಂಡು ಒಂದು ಸಿಂಹವೂ ಬಂದಿತು. ಆ ಬೇಡನು ಕೈಯಲ್ಲಿ ಕುಂತವೆಂಬ ಆಯುಧವನ್ನು ಹಿಡಿದುಕೊಂಡಿದ್ದನು. ಶಿವಶರ್ಮನೂ ವಿಷ್ಣು ಶರ್ಮನೂ ಆ ಸಿಂಹವನ್ನೂ ಬೇಡವನ್ನು ನೋಡಿ 'ಹಾಕೃಷ್ಣ! ಅಪಮೃತ್ಯುವಿನಿಂದ ಬಿಡಿಸು' ಎಂದು ಹೇಳುತ್ತಾ ಹತ್ತಿರದಲ್ಲಿ ಇದ್ದ ಮರವನ್ನು ಹತ್ತಿ ನೋಡುತ್ತಿದ್ದರು. ಆ ಬೇಡನು ತನ್ನ ಹಿಡಿಯಲಿಕ್ಕಾಗಿ ವೇಗದಿಂದ ಬರುತ್ತಿದ್ದ ಸಿಂಹವನ್ನು ನೋಡಿ ಭಯವುಳ್ಳವನಾಗಿ ಮರವನ್ನು ಹತ್ತಲಿಕ್ಕೆ ಹೋದನು. ಆಗ ಸಿಂಹವು ವೇಗದಿಂದ ಬಂದು ಮರವನ್ನು ಹತ್ತುತ್ತಿದ್ದ ಅವನ ಕಾಲನ್ನು ಹಿಡಿದು ಕೆಳಗೆ ಬೀಳಿಸಿ ಅವನ ಮೇಲೆ ನಿಂತುಕೊಂಡಿತು. ಕೆಳಗೆ ಬಿದ್ದಿದ ಬೇಡನು ಕೈಯಲ್ಲಿ ಇದ್ದ ಕುಂತದಿಂದ ಅದರ ಹೊಟ್ಟೆಯನ್ನು ಸೀಳಿದನು. ಕರಳನ್ನು ಹೊರಗೆ ಸೆಳೆದನು. ಆಗ ಸಿಂಹವು ಅತ್ಯಂತ ವ್ಯಥೆಯುಳ್ಳದ್ದಾಗಿ ಭಯಂಕರವಾಗಿ ಗರ್ಜಿಸಿ ಬೇಡನ ತಲೆಯನ್ನು ಚೆನ್ನಾಗಿ ಪುಡಿಮಾಡಿ ತಾನೂ ಪ್ರಾಣವನ್ನು ಬಿಟ್ಟಿತು.

ಈರೀತಿಯಾಗಿ ಅವರಿಬ್ಬರೂ ಪ್ರಾಣವನ್ನು ಬಿಡಲು ದೇವದೂತರಿಂದ ಸಹಿತವಾಗಿ ಎರಡು ವಿಮಾನಗಳು ಬಂದವು. ಆ ಸಿಂಹವೂ ಬೇಡನೂ ತಮ್ಮ ದೇಹಗಳನ್ನು ಪರಿತ್ಯಜಿಸಿ ದಿವ್ಯದೇಹವುಳ್ಳವರಾಗಿ ನಿಂತರು. ದೇವದೂತರು ವಿಮಾನದಿಂದ ಅವರಿದ್ದಲ್ಲಿಗೆ ಬಂದು 'ನಾವು ಪರಮಾತ್ಮನ ದೂತರು. ನಿಮ್ಮನ್ನು ವೈಕುಂಠಕ್ಕೆ ಕರೆದುಕೊಂಡು ಹೋಗಲಿಕ್ಕೆ ಬಂದಿರುವೆವು. ನಿಮ್ಮ ನಿಮ್ಮ ವಿಮಾನವನ್ನು ಏರಿಕೊಂಡು ವೈಕುಂಠಕ್ಕೆ ಬನ್ನಿರಿ' ಎಂದು ಹೇಳಿದರು.

ಆಗ ಸಿಂಹಜೀವನೂ ಬೇಡಜೀವನೂ ವಿಮಾನವನ್ನು ಏರಿದವರಾಗಿ ಆಶ್ಚರ್ಯವುಳ್ಳವರಾಗಿ 'ದೇವಶ್ರೇಷ್ಠರೇ! ನಿಮ್ಮ ದರ್ಶನದಿಂದ ನಮಗೆ ಸರಿಯಾದ ಜ್ಞಾನವು ಬಂದಿತು. ಈ ಜನ್ಮದಲ್ಲಿ ನಾವೊಂದೂ ಪುಣ್ಯವನ್ನು ಮಾಡಲಿಲ್ಲ. ನಮಗೆ ನಿಮ್ಮ ಅನುಗ್ರಹದಿಂದ ಪೂರ್ವಜನ್ಮದ ಸ್ಮರಣೆಯು ಬಂದಿರುವುದು. ನಾವು ಮಾಂಸವನ್ನು ತಿನ್ನುತ್ತಾ ಇರುತ್ತಿದ್ದವರು. ಕ್ರೂರವಾದ ಮನಸ್ಸುಳ್ಳವರು. ಪಾಪಕರವಾದ ವಂಶದಲ್ಲಿ ಹುಟ್ಟಿದವರು. ನೋಡುವ ಮಾತ್ರದಿಂದ ಭಯವನ್ನು ಉಂಟು ಮಾಡುವವರು. ಇಂತಹ ಮಹಾಪಾಪಿಗಳಾದ ನಮಗೆ ಯಾವ ಪುಣ್ಯದಿಂದ ನಿಮ್ಮ

ದರ್ಶನವಾಯಿತು? ಯಾವ ಪುಣ್ಯದಿಂದ ವೈಕುಂಠಲೋಕಕ್ಕೆ ಹೋಗುವೆವು?' ಎಂದು ಕೇಳಿದರು.

ಆಗ ದೇವದೂತರು 'ಬೃಹಸ್ಪತ್ಯಾಚಾರ್ಯರಿಂದ ವಿರಚಿತವಾದ ಈ ತೀರ್ಥದಲ್ಲಿ ಮರಣವನ್ನು ಹೊಂದಿದ ಕಾರಣ ನಿಮಗೆ ನಮ್ಮ ದರ್ಶನವಾಯಿತು. ವೈಕುಂಠಲೋಕ ಪ್ರಾಪ್ತಿಯಾಗುವುದು. ಇಂದ್ರಪ್ರಸ್ಥವೆಂದು ಹೆಸರುಳ್ಳ ಪರಮಪವಿತ್ರ ವಾದ ಇಂದ್ರದೇವರ ಕ್ಷೇತ್ರವಿದು. ಇಂದ್ರದೇವರು ಇಲ್ಲಿ ಬಹುಯಾಗಗಳನ್ನು ಮಾಡಿ ಬಹು ದಕ್ಷಿಣೆಗಳನ್ನು ಕೊಟ್ಟು ಭಗವಂತನನ್ನು ಸಂತೋಷಪಡಿಸಿರುವರು. ಆದರಿಂದ ಪರಮಾತ್ಮನು ವರವನ್ನು ಕೊಟ್ಟಿರುವನು. 'ದೇವೇಂದ್ರನೇ! ಈ ಕ್ಷೇತ್ರದಲ್ಲಿ ಯಾರು ದೇಹಪರಿತ್ಯಾಗ ಮಾಡುವರೋ ಅವರು ಹಿಂಸಕರಾಗಿದ್ದರೂ ಉತ್ತಮಲೋಕವನ್ನು ಹೊಂದುವರು' ಎಂದು ಭಗವಂತನ ವರವು ಎಂದು ಹೇಳಿ ದೇವದೂತರು ಅವರಿಬ್ಬರನ್ನೂ ಕರೆದುಕೊಂಡು ವೈಕುಂಠಲೋಕಕ್ಕೆ ಹೋದರು.



# ಮುನಿಪುತ್ರನು ವ್ಯಭಿಚಾರಿಣಿಯ ಮಗನಾಗಲು ಕಾರಣವು?

ಒಂದು ಸಮಯದಲ್ಲಿ ಎಲ್ಲರೂ ಜ್ಯೇಷ್ಠ ಶುಕ್ಲ ದಶಮಿಯಲ್ಲಿ ಹರಿದ್ವಾರದಲ್ಲಿ ಬಂದು ಸೇರಿದ್ದರು. ಅಲ್ಲಿ ಎಲ್ಲರೂ ತಾವು ಮಾಡುವ ಕಾರ್ಯಗಳನ್ನು ವಿಧಿಪ್ರಕಾರವಾಗಿ ಮಾಡಿ ಹಿಮವತ್ಪರ್ವತದ ಒಂದು ಕಲ್ಲಿನ ಮೇಲೆ ಕೂತುಕೊಂಡಿದ್ದರು. ಆಗ ಮುನಿಗಳ ಸಮೂಹದಲ್ಲಿ ತಾರೆಯ ಮಗನಾದ ಬುಧನು ಅಲ್ಲಿಗೆ ಬಂದನು. ಪರಮಸುಂದರನಾದ ಅವನು ಬಂದದ್ದನ್ನು ನೋಡಿ ಎಲ್ಲಾ ಮುನಿಗಳೂ ಎದ್ದುನಿಂತರು. ಅವನು ಎಲ್ಲಾ ಮುನಿಗಳಿಗೂ ನಮಸ್ಕರಿಸಿದನು.

ತರುವಾಯ ಎಲ್ಲರೂ ಪೂರ್ವರಂತೆ ಕೂತುಕೊಂಡರು. ಮುನಿಶ್ರೇಷ್ಠರು ಬುಧನದಲ್ಲಿ ತೋರಿಸಿದ ಆದರವನ್ನು ನೋಡಿ ಆ ಮುನಿಪುತ್ರನು ತನ್ನ ತಂದೆಯೊಡನೆ 'ಅದು ಯಾರೆಂದು' ಕೇಳಿದನು. ಅದಕ್ಕೆ ಅವನ ತಂದೆಯು 'ಬೃಹಸ್ಪತ್ಯಾಚಾರ್ಯರ ಪತ್ನಿಯಾದ ತಾರೆಯಲ್ಲಿ ಹುಟ್ಟಿದ ಚಂದ್ರವಂಶಕ್ಕೆ ಕಾರಣನಾದ ಬುಧನೇ ಇವನು' ಎಂದು ಹೇಳಿದನು.

ಮುನಿಪುತ್ರನು 'ತಂದೆಯೇ! ನೀವು ಹೇಳಿದ ಮಾತಿಗೆ ಸಂಬಂಧವೇ

ಇರುವುದಿಲ್ಲವಲ್ಲಾ! ಬೃಹಸ್ಪತ್ಯಾಚಾರ್ಯರ ಮಗನು ಚಂದ್ರವಂಶಕ್ಕೆ ಹೇಗೆ ಕಾರಣನಾಗುವೆನು? ಚಂದ್ರನು ಅತ್ರಿಋಷಿಗಳಿಂದ ಅನಸೂಯಾದೇವಿಯಲ್ಲಿ ಹುಟ್ಟಿದವನು. ಬೃಹಸ್ಪತ್ಯಾಚಾರ್ಯರ ಮಗನು ಅವನ ವಂಶಕ್ಕೆ ಹೇಗೆ ಕಾರಣನಾಗುವನು?' ಎಂದು ಕೇಳಿದನು.

ಅದಕ್ಕೆ ತಂದೆಯು 'ಪೂರ್ವದಲ್ಲಿ ಚಂದ್ರನು ಬಲಾತ್ಕಾರದಿಂದ ಬೃಹಸ್ಪತ್ಯಾಚಾರ್ಯರ ಪತ್ನಿಯಾದ ತಾರೆಯನ್ನು ಅಪಹರಿಸಿದನು. ಅವಳೊಡನೆ ವಿಹರಿಸಿದನು. ಅವನಿಂದ ಅವಳಲ್ಲಿ ಗರ್ಭವುಂಟಾಯಿತು. ತರುವಾಯ ಬೃಹಸ್ಪತ್ಯಾಚಾರ್ಯರು ತನ್ನ ಪತ್ನಿಯನ್ನು ಕೊಡುವಂತೆ ಕೇಳಿದರು. ಚಂದ್ರನು ಮದವುಳ್ಳವನಾಗಿ ಕೊಡಲಿಲ್ಲ. ಆಗ ಬೃಹಸ್ಪತ್ಯಾಚಾರ್ಯರು ಇಂದ್ರಾದಿದೇವತೆಗಳಿಂದ ಕೂಡಿಕೊಂಡು ಯುದ್ಧಕ್ಕೆ ಬಂದರು. ಆಗ ಚಂದ್ರನಿಗೆ ಸಹಾಯಕ್ಕಾಗಿ ಅಸುರರಿಂದ ಕೂಡಿಕೊಂಡು ಶುಕ್ರಾಚಾರ್ಯರು ಬಂದರು. ತರುವಾಯ ತಾರೆಯ ನಿಮಿತ್ತ ಭಯಂಕರವಾದ ಯುದ್ಧವನು ನಡೆಯಿತು. ಆ ಭಯಂಕರ ಯುದ್ಧದಲ್ಲಿ ಅನೇಕ ದೇವದಾನವರು ಹತರಾದರು. ಒಬ್ಬರಿಗೂ ಜಯವಾಗಲೀ ಪರಾಜಯವಾಗಲೀ ಏರ್ಪಡಲಿಲ್ಲ. ತರುವಾಯ ಬ್ರಹ್ಮದೇವರು ಬಂದು ಆ ಭಯಂಕರವಾದ ಯುದ್ಧವನ್ನು ನಿಲ್ಲಿಸಿದರು. ಚಂದ್ರನಿಗೆ ಬುದ್ಧಿ ಹೇಳಿ ತಾರೆಯನ್ನು ಬೃಹಸ್ಪತ್ಯಾಚಾರ್ಯರಿಗೆ ಕೊಡಿಸಿದರು. ಬೃಹಸ್ಪತ್ಯಾಚಾರ್ಯರು ಗರ್ಭಿಣಿಯಾಗಿದ್ದ ಅವಳನ್ನು ನೋಡಿ ದೇವದೈತ್ಯರ ಸಭೆಯಲ್ಲಿ ಬ್ರಹ್ಮದೇವರ ಮುಂಭಾಗದಲ್ಲಿ ತಾರೆಯೊಡನೆ 'ನೀನು ಯಾರ ಗರ್ಭವನ್ನು ಧರಿಸಿರುವೆ? ನನ್ನ ಗರ್ಭವನ್ನೋ? ಚಂದ್ರನ ಗರ್ಭವನ್ನೋ?' ಎಂದು ಕೇಳಿದರು. ಹೀಗೆ ಪುನಃ ಪುನಃ ಕೇಳಿದಾಗ ತಾರೆಯು ಲಜ್ಜಾವುಳ್ಳವಳಾಗಿ ಒಂದು ಮಾತನ್ನು ಆಡಲಿಲ್ಲ. ಆಗ ಅವಳ ಮಗನು ಹುಟ್ಟಿದವನಾಗಿ ಎಲ್ಲರ ಮುಂಭಾಗದಲ್ಲಿ ದೋಷದಿಂದ 'ದುಷ್ಟೆಯೇ! ನನ್ನ ತಂದೆಯನ್ನು ಯಾಕೆ ಹೇಳುವುದಿಲ್ಲ? ಲಜ್ಜೆಯನ್ನು ಬಿಟ್ಟು ಹೇಳು. ಇಲ್ಲದಿದ್ದರೆ ನನ್ನ ಶಾಪದ ವೈಭವವನ್ನು ನೋಡು' ಎಂದು ಹೇಳಿದನು. ಹೀಗೆ ಹೇಳಿ ಕೈಯಲ್ಲಿ ನೀರನ್ನು ಹಿಡಿದುಕೊಂಡು ಶಾಪವನ್ನು ಕೊಡಲು ಉದ್ಯುಕ್ತನಾದನು. ಅದನ್ನು ನೋಡಿ ತಾರೆಯು ಮೆಲ್ಲನೆ 'ನಿನ್ನ ತಂದೆಯು ಚಂದ್ರನು' ಎಂದು ಹೇಳಿದಳು.

ಈರೀತಿಯಾಗಿ ತಾರೆಯು ಹೇಳಲು ಚಂದ್ರನು ಸಂತೋಷದಿಂದ ತನ್ನ ಮಗನಾದ ಬುಧನನ್ನು ಕರೆದುಕೊಂಡು ತನ್ನ ಮನೆಗೆ ಹೋದನು. ಬೃಹಸ್ಪತ್ಯಾಚಾರ್ಯರು ತನ್ನ ಹೆಂಡತಿಯಾದ ತಾರೆಯನ್ನು ಕರೆದುಕೊಂಡು ತನ್ನ ಮನೆಗೆ

ಹೋದರು. ಬ್ರಹ್ಮದೇವರೂ ದೇವತೆಗಳೂ ದೈತ್ಯರೂ ತಮ್ಮ ತಮ್ಮ ಮನೆಗೆ ಹೋದರು. ಈರೀತಿಯಾಗಿ ಸಕಲವನ್ನೂ ಹೇಳಿರುವೆನು. ಈ ಬುಧನು ಬೃಹಸ್ಪತ್ಯಾಚಾರ್ಯರ ಹೆಂಡತಿಯಲ್ಲಿ ಹುಟ್ಟಿದವನು. ಚಂದ್ರನ ವಂಶಕ್ಕೆ ಕಾರಣನಾದವನು' ಎಂದು ಹೇಳಿದನು.

ತಂದೆಯ ಮಾತನ್ನು ಕೇಳಿ ಮುನಿಯ ಪುತ್ರನು ಗಟ್ಟಿಯಾಗಿ ನಗುವವನಾದನು. ಇವನು ವ್ಯಭಿಚಾರಿಣಿಯ ಮಗನು ಎಂದು ಹೇಳಿದನು. ಅದನ್ನು ಕೇಳಿ ತಂದೆಯು 'ಮಗ! ಹಾಗೆ ಹೇಳಬೇಡ. ಎಲ್ಲಾ ಪ್ರಾಣಿಗಳ ಮನಸ್ಸಿನಲ್ಲಿ ಅಭಿಪ್ರಾಯವನ್ನು ತಿಳಿದವನಾದ ಬುಧನು. ನಿನಗೆ ಶಾಪವನ್ನು ಕೊಡುವನು' ಎಂದನು.

ಈರೀತಿಯಾಗಿ ತಂದೆಯು ಹೇಳುತ್ತಿರಲು ಬುಧನು ಮುನಿಪುತ್ರನು ಹೇಳಿದ ಮಾತನ್ನು ತಿಳಿದು ಕೋಪಿಸಿಕೊಂಡು 'ನೀನೂ ವ್ಯಭಚಾರಿಣಿಯ ಮಗನಾಗಿ ಹುಟ್ಟು' ಎಂದು ಶಾಪವನ್ನು ಕೊಟ್ಟನು. ತಂದೆಯು ಬುಧನು ಕೊಟ್ಟ ಶಾಪವನ್ನು ಕೇಳಿ ಮಗನನ್ನು ಬುಧನ ಬಳಿಗೆ ಕರೆದುಕೊಂಡು ಹೋಗಿ ಅವನ ಕಾಲಿಗೆ ಬೀಳಿಸಿ 'ಕ್ಷಮಿಸಬೇಕು. ಈ ಚಿಕ್ಕ ಹುಡುಗನು ನಿಮ್ಮ ವೈಭವವನ್ನು ತಿಳಿದವನಲ್ಲ. ತಮ್ಮಂತವರು ಬಾಲಕನಲ್ಲಿ ಕೋಪಿಸಿಕೊಳ್ಳಬಾರದು. ಕ್ಷಮೆಯನ್ನು ಧರಿಸಿ ಇವನಲ್ಲಿ ಅನುಗ್ರಹ ಮಾಡಬೇಕು. ತಮ್ಮಂತಹ ಸಜ್ಜನರನ್ನು ಕ್ಷಮಾಗುಣವುಳ್ಳವರು' ಎಂದು ಪ್ರಾರ್ಥಿಸಿ ಕೊಂಡನು. ಅದಕ್ಕೆ ಬುಧನು 'ನಿನ್ನ ಈ ಮಗನು ಭೂಮಿಯಲ್ಲಿ ವ್ಯಭಿಚಾರಿಣಿಯ ಮಗನಾಗಿ ಹುಟ್ಟಿ ಆಮೇಲೆ ಉತ್ತಮಲೋಕವನ್ನು ಹೊಂದುವನು' ಎಂದು ಅನುಗ್ರಹಿಸಿದನು. ಈರೀತಿಯಾಗಿ ಬುಧನ ಶಾಪದಿಂದ ಆ ಮುನಿಪುತ್ರನು ವ್ಯಭಿಚಾರಿಣಿಯ ಮಗನಾಗಿ ಹುಟ್ಟಿದವನು ಆಮೇಲೆ ತನ್ನ ಪೂರ್ವ ಪಿತೃಗಳನ್ನು ಉದ್ಧಾರ ಮಾಡಿದನು. ಈರೀತಿಯಾಗಿ ಆ ಮಧುವನದ ಮಹಿಮೆಯಿರುವುದು.*



★ ಇದನ್ನು ಸದಾಚಾರತರಂಗದ ತೀರ್ಥಕ್ಷೇತ್ರ ಮಹಿಮೆಯಲ್ಲಿ ಓದುವುದು.

# ಫೇನಪನ ಕಥೆ [1]

ಭಾರ್ಗವವಂಶದಲ್ಲಿ ಸುಮಿತ್ರ ಎಂಬ ಬ್ರಾಹ್ಮಣನಿದ್ದನು. ಅವನು ಒಳ್ಳೇ ವೇದಾಧ್ಯಯನವನ್ನು ಮಾಡಿದ್ದನು. ಮಹಾತಪಸ್ಸನ್ನು ಮಾಡುತ್ತಿದ್ದನು. ವಾನಪ್ರಸ್ಥಾಶ್ರಮಿಯಾಗಿದ್ದನು. ತನ್ನ ವಿಹಿತಕರ್ಮದಲ್ಲಿ ಆಸಕ್ತನಾಗಿದ್ದನು. ವಿನಯವುಳ್ಳವನಾಗಿದ್ದನು. ಆಚಾರ ತತ್ವವನ್ನು ತಿಳಿದವನಾಗಿದ್ದನು. ಸರ್ವಧರ್ಮವನ್ನು ತಿಳಿದವನಾಗಿದ್ದನು. ಮೂರು ಹೊತ್ತೂ ಸ್ನಾನ ಮಾಡುತ್ತಿದ್ದರು. ಸಂಧ್ಯಾವಂದನೆಯನ್ನು ಮಾಡುತ್ತಿದ್ದನು. ಅಗ್ನಿಹೋತ್ರವನ್ನು ಮಾಡುತ್ತಿದ್ದನು. ಕ್ಷಮೆಯುಳ್ಳವನಾಗಿದ್ದನು. ಪಿತೃಗಳನ್ನು ದೇವತೆಗಳನ್ನೂ ಪೂಜಿಸುತ್ತಿದ್ದನು. ಅತಿಥಿಗಳನ್ನೂ ಪೂಜಿಸುತ್ತಿದ್ದನು. ದೇಹಧಾರಣೆಗೆ ಮಾತ್ರವೇ ಯಾವುದಾದರೂ ಸಿಕ್ಕಿದ್ದನ್ನು ಭೋಜನ ಮಾಡುತ್ತಿದ್ದನು.

ತ್ರಿಶಿಖರ ಎಂದು ಪ್ರಸಿದ್ಧವಾದ ಪರ್ವತವಿದೆ. ಅಲ್ಲಿಂದ ರುದ್ರದೇವರಿಂದ ನಿರ್ಮಿತವಾದ ಪುರಾಣಪ್ರಸಿದ್ಧವಾದ ಕುಲಜಾ ಎಂಬ ನದಿಯು ಹರಿದುಬರುತ್ತದೆ. ಆ ನದಿಯ ಪವಿತ್ರವೃಕ್ಷಾದಿಗಳಿಂದ ಕೂಡಿದ ಮೃಗಪಕ್ಷ್ಯಾದಿಗಳಿಂದ ಕೂಡಿದ ದರ್ಭೆಗಳು ಬೆಳೆದಿರುವ ತೀರದಲ್ಲಿ ಪೂರ್ವದಲ್ಲಿ ಭೃಗುವಂಶದವರ ಆಶ್ರಮವು ಇದ್ದಿತು. ಅಲ್ಲಿಯೇ ಸುಮಿತ್ರನೂ ಪೂರ್ವಿಕರಂತೆಯೇ ಸನ್ಮಾರ್ಗದಿಂದ ವಾಸಿಸುತ್ತಿದ್ದನು. ಆ ಸುಮಿತ್ರನಿಗೆ ಆಂಗೀರಸಗೋತ್ರದ ಬ್ರಾಹ್ಮಣನು ಒಬ್ಬನು ಭಾದ್ರಪದ ಮಾಸದ ಹುಣ್ಣಿಮೆಯದಿನ ಒಂದು ಗೋದಾನವನ್ನು ಮಾಡಿದನು. ಸುಮಿತ್ರನು ಪರಮಭಕ್ತಿಯಿಂದ ತಾಯಿಯನ್ನು ನೋಡಿಕೊಳ್ಳುವಂತೆ ಆ ದನವನ್ನು ನೋಡಿಕೊಳ್ಳುತ್ತಿದ್ದನು. ಅವನಿಂದ ಪೋಷಿಸಲ್ಪಟ್ಟ ಆ ದನವು ಚೆನ್ನಾಗಿ ಪುಷ್ಟವಾಗಿ ಬೆಳೆಯಿತು. ಯೌವನದಲ್ಲಿರುವ ಹೆಂಗಸಿನಂತೆ ಅತಿ ಸುಂದರಿಯಾಗಿ ಶೋಭಿಸಿತು. ಅದು ವೃಷಭವನ್ನು ಸೇರಿ ಆಮೇಲೆ ಗಂಡು ಹೆಣ್ಣು ಎರಡು ಕರುಗಳನ್ನು ಹಾಕಿತು. ಹೀಗೆಯೇ ತರುವಾಯ ಆ ಮಕ್ಕಳ ಸಂಬಂಧದಿಂದ ನೂರಾರು ದನಗಳೂ ಎತ್ತುಗಳೂ ಆದವು. ಸುಮಿತ್ರನ ಆಶ್ರಮವು ದನಗಳಿಂದಲೂ ಎತ್ತುಗಳಿಂದಲೂ ತುಂಬಿಹೋಯಿತು. ನಾನಾ ಬಣ್ಣದ ದನಗಳು. ಸುಮಿತ್ರನು ಕರುಗಳ ಮೇಲಿನ ಸ್ನೇಹದಿಂದ ದನದ ಹಾಲನ್ನು ಕರೆಯುತ್ತಿದ್ದಿಲ್ಲ. ಬಹುಹಾಲು ದನಗಳಿಗೆ ಇರುತ್ತಿದ್ದ ಕಾರಣ ಕರುಗಳು ತಾಯಿಯ ಹಾಲನ್ನು ಕುಡಿಯುವಾಗ ಅವುಗಳ ಬಾಯಿಯಿಂದ ಹಾಲಿನ ನೊರೆಯು ಬೀಳುತ್ತಿತ್ತು. ಹಸಿವೆ ಪರಿಹಾರಕ್ಕಾಗಿ ಆ ನೊರೆಗಳನ್ನು ಸುಮಿತ್ರನು

---

1. ಮ.ಭಾ.ಅ.ಪ. ಅ.120,121

ಕುಡಿಯುತ್ತಿದ್ದನು. ಇದರಿಂದ ಆ ಸುಮಿತ್ರನಿಗೆ ಫೇನಪ (ಅಂದರೆ ನೊರೆಯನ್ನು ಕುಡಿಯುವವನು) ಎಂದು ಹೆಸರಾಯಿತು.

ಒಂದು ದಿವಸದಲ್ಲಿ ಗೋಲೋಕದಿಂದ ಕೆಲವು ಗೋವುಗಳು ಭೂಲೋಕಕ್ಕೆ ಬಂದು ಸ್ತ್ರೀಯರ ವೇಷವನ್ನು ಧರಿಸಿಕೊಂಡು ಹಾಡು ಹೇಳುತ್ತಾ ಒಂದು ಸರೋವರದಲ್ಲಿ ಕ್ರೀಡಾಮಾಡುತ್ತಾ ಇದ್ದವು. ಅದನ್ನು ಫೇನಪನ ದನಗಳು ನೋಡಿ ಆಶ್ಚರ್ಯವುಳ್ಳವರಾಗಿ ಮನುಷ್ಯವಾಣಿಯಿಂದ ನೀವು ಯಾರು ಎಂದು ಕೇಳಿದರು.

ಅದಕ್ಕೆ ಆ ಸ್ತ್ರೀಯರು 'ನಾವು ಉತ್ತಮ ಪುಣ್ಯಕರ್ಮಗಳನ್ನು ಮಾಡಿರುವ ಗೋವುಗಳೇ. ನಾವು ಇಚ್ಛಾನುಸಾರವಾಗಿ ಸ್ತ್ರೀವೇಷವನ್ನು ಧರಿಸಿಕೊಂಡು ಆಟವಾಡುವೆವು' ಎಂದರು.

ಅದಕ್ಕೆ ಗೋವುಗಳು 'ಗೋವುಗಳಿಗೆ ಗೋವುಗಳೇ ಉತ್ತಮ ಆಶ್ರಯರು. ಗೋವುಗಳೇ ಪರಮಗತಿಯು. ನಮಗೆ ಪುಣ್ಯವಂತರ ಲೋಕಗಳು ಹೇಗೆ ಲಭಿಸುವುದೆಂದು ಹೇಳಿರಿ' ಎಂದು ಕೇಳಿದವು.

ಆಗ ಆ ಸ್ತ್ರೀಯರು 'ನಮ್ಮ ಕ್ಷೀರಾದಿ ಹವಿಸ್ಸನಿಂದ ಬ್ರಾಹ್ಮಣರು ತೃಪ್ತಿಯನ್ನು ಹೊಂದಿರುವರು. ಪಿತೃಗಳು ಸಂತೋಷಪಟ್ಟಿದ್ದಾರೆ. ಅಗ್ನಿಯೂ ಸಂತುಷ್ಟವಾಗಿದೆ. ನಮ್ಮ ಮಕ್ಕಳಿಂದ ಜನರ ಕೃಷಿಯೂ ಆಗುತ್ತದೆ. ನಮ್ಮ ಮಕ್ಕಳು ಗಾಡಿಯನ್ನು ಸೆಳೆದು ಜನರಿಗೆ ಉಪಕಾರವನ್ನು ಮಾಡುತ್ತಾರೆ. ಇದರಿಂದ ನಾವೂ ನಮ್ಮ ಮಕ್ಕಳೂ ಉತ್ತಮವಾದ ಗೋಲೋಕವನ್ನು ಹೊಂದಿರುವೆವು. ನೀವೆಲ್ಲರೂ ನಿಮ್ಮ ಸಂತಾನದಿಂದ ಸಹಿತರಾಗಿ ನರಕಕ್ಕೆ ಹೋಗುವಿರಿ ಎಂದು ದಿವ್ಯದೃಷ್ಟಿಯಿಂದ ನಾವು ತಿಳಿದಿರುವೆವು' ಎಂದರು.

ಆಗ ಗೋವುಗಳು 'ಗೋವುಗಳಿಗೆ ಗೋವುಗಳೇ ದೈವವು ಗೋವುಗಳೇ ಆಶ್ರಯಗಳು. ನೀವು ನಿಮ್ಮ ಪಕ್ಷದವರಾದ ನಮ್ಮನ್ನು ಉದ್ಧಾರಮಾಡಬೇಕು. ನಿಮ್ಮನ್ನೇ ಮರೆಹೊಂದಿರುವೆವು. ನಾವು ಏನು ಮಾಡಬೇಕು? ನಾವು ಹೇಗೆ ಇರಬೇಕು. ನಾವು ಹೇಗೆ ನಿಂದ್ಯರಾಗಲಾರೆವು ಹೇಗೆ ಗೋಲೋಕವನ್ನು ಹೊಂದುವೆವು' ಎಂದು ಕೇಳಿದವು.

ಆಗ ಸ್ತ್ರೀಯರು 'ರಂತಿದೇವನು ಸಾವಿರ ವರ್ಷ ಸತ್ರಯಾಗವನ್ನು ಮಾಡುವನು. ಆ ರಾಜನು ಮಾಡುವ ಯಾಗಕ್ಕೆ ನೀವು ಪಶುಗಳಾಗಿರಿ. ಅದರಲ್ಲಿ ನೀವು ಪಶುಗಳಾಗಿ ಸಂಸ್ಕೃತರಾಗಿ ಯಾಗದಲ್ಲಿ ಮೃತರಾದ ಪುಣ್ಯದಿಂದ ಗೋಲೋಕವನ್ನು ಹೊಂದುವಿರಿ' ಎಂದರು.

ಈರೀತಿಯಾಗಿ ಸ್ತ್ರೀಯರ ಮಾತನ್ನು ಕೇಳಿ ಗೋವುಗಳು ಸಂತೋಷಯುಕ್ತ ಮನಸ್ಸುಳ್ಳವರಾಗಿ ರಂತಿದೇವನ ಯಾಗಕ್ಕೆ ಹೋಗಲಿಕ್ಕೆ ಇಚ್ಛಿಸಿದವು. ಅತ್ಯಂತ ಕುತೂಹಲವನ್ನು ಹೊಂದಿದವು. 'ಆದರೆ ಫೇನಪನು ನಾವು ಯಾಗಕ್ಕೆ ಪಶುವಾಗಿ ಹೋಗಲಿಕ್ಕೆ ಸಮ್ಮತಿಸಿಲಾರನು. ರಾಜನ ಯಾಗವು ನಡೆಯುತ್ತಾ ಇದೆ. ನಾವೋ ಅವನ ಅನುಜ್ಞೆಯಿಲ್ಲದೆ ಹೋಗಲಿಕ್ಕೆ ಆಗಲಾರದು' ಎಂದು ಹೇಳಿಕೊಂಡವು. ಅಲ್ಲಿರುವ ಗೋವುಗಳು ತರುವಾಯ 'ಹಾಗಾದರೆ ಅವನನ್ನು ಕೊಲ್ಲಬೇಕು. ಅವನನ್ನು ಕೊಲ್ಲುವುದನ್ನು ನೀವೆಲ್ಲರೂ ಅಂಗೀಕರಿಸಬೇಕು. ಇಲ್ಲದಿದ್ದರೆ ನಾವು ಉತ್ತಮ ಲೋಕಗಳನ್ನು ಹೊಂದಲಿಕ್ಕೆ ಆಗಲಾರದು' ಎಂದು ಹೇಳಿಕೊಂಡವು. ಆದರೆ ಅಲ್ಲಿರುವ ದನಗಳ ಮಧ್ಯದಲ್ಲಿ ಒಂದು ದನವೂ ಕೂಡ ತನಗೆ ಸತ್ಕಾರವನ್ನೇ ಮಾಡುತ್ತಿರುವ ಫೇನಪನನ್ನು ಘೋರವಾದ ದೃಷ್ಟಿಯಿಂದ ನೋಡಲಿಕ್ಕೂ ಸಮರ್ಥ ವಾಗಿರಲಿಲ್ಲ. ತರುವಾಯ ಕಪಿಲ ಬಣ್ಣದ ಗೋವುಗಳು 'ನಾವು ಪುಣ್ಯವು ನಾಶವನ್ನು ಹೊಂದುವುದು ಎಂಬ ಯೋಚನೆಯನ್ನು ಬಿಟ್ಟು ಸುಮಿತ್ರನನ್ನು ಕೊಲ್ಲುವೆವು. ಇದರಲ್ಲಿ ಸಂದೇಹವುಬೇಡ. ಇದರಿಂದ ನಮಗೆ ಯಾವ ಶ್ರೇಯಸ್ಸನ್ನು ಉಂಟುಮಾಡುವಿರಿ' ಎಂದು ಕೇಳಿದವು.

ಆದಕ್ಕೆ ಉಳಿದ ಗೋವುಗಳು 'ನೀವು ಎಲ್ಲಾ ಬಣ್ಣದ ಗೋವುಗಳಲ್ಲಿ ಶ್ರೇಷ್ಠರಾಗಿರಿ. ನಿಮ್ಮಲ್ಲಿ ಒಬ್ಬಳನ್ನು ದಾನಮಾಡುವುದಿರಂದ ನೂರು ಗೋದಾನ ಮಾಡಿದ ಫಲವು ಬರಲಿ' ಎಂದವು.

ಈರೀತಿಯಾಗಿ ದನಗಳ ಮಾತನ್ನು ಕೇಳಿ ಕಪಿಲ ಗೋವುಗಳು ಸಂತೋಷಯುಕ್ತಗಳಾಗಿ ಎಲ್ಲವೂ ಕೂಡ ಸುಮಿತ್ರನನ್ನು ಸಂಹರಿಸುವ ವಿಷಯದಲ್ಲಿ ನಿಶ್ಚಯ ಮಾಡಿದವು.

ಇಚ್ಛಾನುಸಾರವಾಗಿ ಗೋಲೋಕದಿಂದ ಬಂದಿರುವ ಉಪಕಾರ ಸ್ಮರಣೆಯುಳ್ಳ ಗೋವುಗಳು ಸುಮಿತ್ರನ ಬಳಿಗೆ ಹೋಗಿ ಈ ಸುಮಿತ್ರನನ್ನು ಹೊಗಳಿ 'ನಾವು ಗೋಲೋಕದಿಂದ ಬಂದಿರುವೆವು. ನಾವು ದನಗಳಿಗೂ ಎತ್ತುಗಳಿಗೂ ತಾಯಿಯರು. ನಿನ್ನ ಮೇಲೆ ಪ್ರೀತಿಯುಳ್ಳವರಾಗಿರುವೆವು. ಬೇಕದ ವರವನ್ನು ಕೇಳಿಕೋ! ಗೋವು ಗಳಲ್ಲಿ ನೀನು ಉತ್ತಮವಾದ ಪ್ರೀತಿಯುಳ್ಳವನಾಗಿರುವಿ' ಎಂದವು.

ನೀವು ಗೋಮಾತೃಗಳು ನನಗೆ ವರಕೊಡಲಿಕ್ಕೆ ಸಿದ್ಧರಾಗಿರುವಿರಿ. ಇದರಿಂದ ನಾನು ಪ್ರೀತನಾದೆನು. ಅನುಗೃಹೀತನಾದೆನು. ನನಗೆ ಯಾವಾಗಲೂ ಗೋವುಗಳಲ್ಲಿ ಭಕ್ತಿಯಿರಬೇಕು ಗೋಹತ್ಯಾ ಮಾಡಿದವರೂ ಬ್ರಹ್ಮದ್ವೇಷಿಗಳೂ ಅನರ್ಥವನ್ನು ಹೊಂದಲಿ' ಎಂದು ಸುಮಿತ್ರನು ಹೇಳಿದನು.

ಗೋಮಾತೃಗಳು 'ನೀವು ನನಗೆ ಪ್ರಿಯವಾದ ಮಾತುಗಳು ಆಡುತ್ತಿರುವಿ. ಬಾ. ನಮ್ಮೊಡನೆ ಗೋಲೋಕಕ್ಕೆ ಹೋಗೋಣ' ಎಂದವು. ಸುಮಿತ್ರನು 'ನೀವು ನಿಮ್ಮ ಲೋಕವನ್ನು ಹೊಂದಿರಿ. ನಾನು ಬರಲಿಕ್ಕೆ ಉತ್ಸಾಹಿಯಾಗಿಲ್ಲ. ನನಗೆ ಅತ್ಯಂತ ಪ್ರಿಯಗಳಾದ ತಪಸ್ವಿನಿಯರಾದ ಗೋವುಗಳನ್ನು ಬಿಟ್ಟು ನಾನು ಬರಲಾರೆನು' ಎಂದನು. ತರುವಾಯ ಆ ಗೋಮಾತೃಗಳು ಸುಮಿತ್ರನ ಮಾತನ್ನು ಕೇಳಿ ಕಪಿಲಗೋವುಗಳ ಸುಮಿತ್ರನನ್ನು ಸಂಹರಿಸುವೆವು. ಎಂದು ಹೇಳಿ ಘೋರಪ್ರತಿಜ್ಞೆಯನ್ನೂ ಕೇಳಿ ಆ ಋಷಿಯ ಜೀವನನ್ನು ಎತ್ತಿಕೊಂಡು ಆಕಾಶಮಾರ್ಗದಲ್ಲಿ ಎತ್ತಿಕೊಂಡು ಹೋದವು. ಯೋಗಸಾಮರ್ಥ್ಯದಿಂದ ಜೀವನನ್ನು ಸೆಳೆದು ಸುಮಿತ್ರನ ದೇಹವನ್ನು ಅಲ್ಲಿಯೇ ಬಿಟ್ಟು ಹೋದವು. ಮಾತ್ರವಲ್ಲದೆ ಅವನೊಡನೆ ಕಪಿಲ ಗೋವುಗಳು ಪ್ರತಿಜ್ಞಾಮಾಡಿದ್ದನ್ನೂ ಹೇಳಿದವು.

ತರುವಾಯ ಕಪಿಲಗೋವುಗಳು ಬಂದು ಸುಮಿತ್ರನ ದೇಹವನ್ನು ತಾವು ಪ್ರತಿಜ್ಞೆಯನ್ನು ಮಾಡಿದಂತೆ ತಮ್ಮ ಕೊಂಬುಗಳಿಂದ ಪಾದಗಳಿಂದ ಕುಕ್ಕಿ ಚೂರು ಚೂರು ಮಾಡಿದವು' ಸುಮಿತ್ರನ ದೇಹವನ್ನು ಅನೇಕ ವಿಧವಾಗಿ ಚೂರು ಮಾಡಿ ಇತರ ದನಗಳು ಇರುವಲ್ಲಿಗೆ ಹೋದವು. ಅಲ್ಲಿಗೆ ಹೋಗಿ ಎಲ್ಲವನ್ನೂ ತಿಳಿಸಿದವು. ತರುವಾಯ ಗೋಮಾತೃಗಳು ಕಪಿಲಗೋವುಗಳಿಗೆ ಬ್ರಹ್ಮಘಾತಕರಾದ ನೀವು ಮಲವನ್ನು ತಿನ್ನುತ್ತಾ ಭೂಮಿಯಲ್ಲಿ ಸಂಚಾರ ಮಾಡುತ್ತಿರಿ ಎಂದು ಶಾಪವನ್ನು ಕೊಟ್ಟವು. ಈರೀತಿಯಾಗಿ ಉಪಕಾರಸ್ಮರಣೆಯಿದ್ದ ಗೋವುಗಳು ಉತ್ತಮ ಲೋಕವನ್ನು ಹೊಂದಿದವು. ಸುಮಿತ್ರನೂ ಗೋಲೋಕವನ್ನು ಹೊಂದಿದನು.



## ಮೇಧಾವಿ ಬ್ರಾಹ್ಮಣನ ಕಥೆಯು[1]

ವಿಂಧ್ಯಪರ್ವತದ ಉತ್ತರದಿಗ್ಭಾಗದಲ್ಲಿ ಮೇಧಾವಿ ಎಂದು ಹೆಸರುಳ್ಳ ಬ್ರಾಹ್ಮಣನಿದ್ದನು. ಅವನು ದೇವತಾದಿಗಳನ್ನು ಪೂಜಿಸುತ್ತಿದ್ದನು. ಅವನಿಗೆ ಚಂದ್ರಾವತಿಯೆಂದು ಹೆಸರುಳ್ಳ ಹೆಂಡತಿಯಿದ್ದಳು. ಅವಳು ಗೌತಮಕುಲದವಳು. ಪತಿವ್ರತೆಯಾಗಿದ್ದಳು. ಪತಿಸೇವೆಯಲ್ಲಿ ಆಸಕ್ತಳಾಗಿದ್ದಳು. ಮನೆಯ ಕೆಲಸವನ್ನು ಮಾಡುತ್ತಿದ್ದಳು. ಯಾವಾಗಲೂ ಪ್ರಿಯವಾಗಿಯೇ ಮಾತಾಡುತ್ತಿದ್ದಳು. ಮೇಧಾವಿಯು

1. ಜೈ.ಮಾ.ಮಾ.ಅ.8, 9

ಕೃಷಿಕರ್ಮದಲ್ಲಿ ಆಸಕ್ತನಾಗಿದ್ದನು. ಹಣವನ್ನು ಬಡ್ಡಿಗೆ ಹಾಕಿದ್ದನು. ಬಹುಸಮಯ ವಾದರೂ ಅವನಿಗೆ ಮಕ್ಕಳಾಗಲಿಲ್ಲ, ಬಹಳ ದುಃಖಪಡುತ್ತಿದ್ದನು. ಬಹಳವಾಗಿ ಯೋಚಿಸುತ್ತಿದ್ದನು. ಇದರಿಂದ ಅವನಿಗೆ ಕ್ಷಯರೋಗವು ಬಂದಿತು. ಅದಕ್ಕೆ ಮಣಿಮಂತ್ರ ಔಷಧಾದಿ ನಾನಾ ಉಪಾಯಗಳನ್ನು ಮಾಡಿದರೂ ವಾಸಿಯಾಗಲಿಲ್ಲ. ಆಮೇಲೆ ಭಯಂಕರವಾದ ಕುಷ್ಠರೋಗವು ಬಂದಿತು. ಬ್ರಾಹ್ಮಣನು ಬದುಕುವುದ ರಲ್ಲಿಯೇ ಆಸೆಯನ್ನು ಬಿಡಬೇಕಾಯಿತು. ತರುವಾಯ ದಂಪತಿಗಳು ತಮ್ಮ ಮನೆಯಿಂದ ಹೊರಟು ಗಂಗಾತೀರಕ್ಕೆ ಹೋದರು. ಅಲ್ಲಿ ತುಲಸೀವನವನ್ನು ನಿರ್ಮಾಣಮಾಡಿದರು. ಚಂದ್ರಾವತಿಯು ಪತಿಯಿಂದ ಸಹಿತಳಾಗಿ ಅಲ್ಲಿ ಬಹುದಿವಸ ಗಳನ್ನು ಕಳೆದಳು.

ತರುವಾಯ ಸರ್ವಪಾಪ ಪರಿಹಾರಕವಾದ ಜ್ಯೇಷ್ಠಮಾಸವು ಬಂದಿತು. ಆ ಮಾಸದಲ್ಲಿ ಪ್ರಾತಃಸ್ನಾನಾದಿ ವ್ರತವನ್ನು ಮಾಡಿದ್ದರಿಂದ ಅಲ್ಲಿಗೆ ನಾರದರು ಬಂದರು. ಚಂದ್ರಾವತಿಯು ನಾರದರಿಗೆ ನಮಸ್ಕರಿಸಿ ವಿಧಿಪ್ರಕಾರವಾಗಿ ಪೂಜಿಸಿ ಸಕಲವಾದ ತನ್ನ ಶೋಕದ ಕಾರಣವನ್ನು ಹೇಳಿಕೊಂಡಳು. ಆಗ ನಾರದರು ಸಂತುಷ್ಟರಾಗಿ 'ನಿನ್ನ ಗಂಡನು ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದನು. ಅಹಂಕಾರಿಯಾಗಿದ್ದನು. ಮದಾಂಧನಾಗಿ ಜ್ಯೇಷ್ಠಮಾಸದ ವ್ರತವನ್ನು ಅವಮಾನ ಮಾಡಿದನು. ಆ ಪಾಪದಿಂದ ಈಗ ಈ ಪ್ರಕಾರವಾಗಿರುವನು. ಆ ಪಾಪಪರಿಹಾರ ಕ್ಕಾಗಿ ಜ್ಯೇಷ್ಠಮಾಸದಲ್ಲಿ ಒಂದು ವ್ರತವನ್ನು ಮಾಡು. ಸುಖಸೌಭಾಗ್ಯ ಪ್ರದಾಯಕವಾದ ಗೌರೀಜಯಂತೀ ವ್ರತವನ್ನು ಮಾಡು' ಎಂದು ಹೇಳಿ ಅದನ್ನು ಮಾಡುವ ವಿಧಾನವನ್ನು ಹೇಳಿ ಹೊರಟು ಹೋದರು. ನಾರದರು ಹೊರಟುಹೋದ ಮೇಲೆ ಚಂದ್ರಾವತಿಯು ಗಂಡನಿಂದ ಸಹಿತಳಾಗಿ ಭಕ್ತಿಯುಕ್ತವಾದ ಮನಸ್ಸಿನಿಂದ ನಾರದರು ಉಪದೇಶಿಸಿದ ರೀತಿಯಿಂದ ಆ ವ್ರತವನ್ನು ಮಾಡಿದಳು. ಆ ವ್ರತವನ್ನು ಅನುಷ್ಠಾನ ಮಾಡುವ ಮಾತ್ರದಿಂದ ಮೆಲ್ಲಮೆಲ್ಲನೆ ಮೇಧಾವಿಯ ಆ ರೋಗವು ಪರಿಹಾರವಾಗುತ್ತಾ ಬಂದಿತು. ತರುವಾಯ ಮೇಧಾವಿಯು ಆ ವ್ರತಕ್ಕೆ ಉದ್ಯಾಪನವನ್ನು ಮಾಡಿದನು. ಪೂಜೆಯನ್ನು ಮಾಡಿದನು. ಬ್ರಾಹ್ಮಣರಿಗೆ ಭೋಜನ ಮಾಡಿಸಿದನು. ನಾನಾವಿಧ ಪಕ್ವಾನ್ನಗಳನ್ನು ಮಾಡಿಸಿದ್ದನು. ಬ್ರಾಹ್ಮಣರಿಗೆ ಗೋದಾನಗಳನ್ನು ಮಾಡಿದನು. ಬಹಳ ದಕ್ಷಿಣೆಯನ್ನು ಕೊಟ್ಟನು. ತಾನೂ ಪತ್ನಿಯಿಂದ ಬಂಧುಗಳಿಂದ ಸಹಿತನಾಗಿ ಪಾರಣೆಯನ್ನು ಮಾಡಿದನು.

ತರುವಾಯ ಬಂಧುಗಳಿಂದ ಕೂಡಿಕೊಂಡು ತನ್ನ ಮನೆಗೆ ಹೋದನು.

ಊರಿನ ಜನರೆಲ್ಲರೂ ಸೇರಿ ಸಂತೋಷದಿಂದ ದೊಡ್ಡ ಉತ್ಸವವನ್ನು ಮಾಡಿದರು. ಅವರೊಡನೆ ತನ್ನ ವೃತ್ತಾಂತವನ್ನು ಹೇಳಿಕೊಂಡನು. ಆ ವ್ರತದ ಮಹಿಮೆಯನ್ನು ಕೇಳಿ ಎಲ್ಲರೂ ಆಶ್ಚರ್ಯವನ್ನು ಹೊಂದಿದರು. ತರುವಾಯ ಆ ದಂಪತಿಗಳು ತಮಗೆ ಸಂತಾನವಾಗಬೇಕೆಂದು ಇನ್ನೊಂದು ಬಾರಿ ಆ ವ್ರತವನ್ನು ಮಾಡಿದರು. ಇದರಿಂದ ಅವರಿಗೆ ಮನ್ಮಥನಂತೆ ಸುಂದರನಾದ ಮಗನೊಬ್ಬನು ಹುಟ್ಟಿದನು. ಮೇಧಾವಿಯು ಮಗನಿಗೆ ಜಾತಕರ್ಮವನ್ನು ಮಾಡಿದನು. ಸಾವಿರಾರು ಗೋವುಗಳನ್ನು ದಾನಮಾಡಿದನು. ಬ್ರಾಹ್ಮಣರಿಗೆ ಹೆಚ್ಚಾಗಿ ಹಣವಸ್ತ್ರ ಅಲಂಕಾರಗಳನ್ನು ಕೊಟ್ಟರು. ಆಮೇಲೆ ಆ ಊರಿನ ಜನರೆಲ್ಲರೂ ಆ ವ್ರತದಲ್ಲಿ ನಂಬಿಕೆಯುಳ್ಳವರಾಗಿ ಅದನ್ನು ಮಾಡಿದರು. ಆ ವ್ರತದ ಪ್ರಭಾವದಿಂದ ಎಲ್ಲರೂ ಆಧಿವ್ಯಾಧಿರಹಿತರಾಗಿ ಸುಖದಿಂದ ಇದ್ದರು. ಆಮೇಲೆ ಆ ವ್ರತವು ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಿತು.



## ಶಿವಶರ್ಮನ ಪೂರ್ವವೃತ್ತಾಂತವು [1]

ಆಮೇಲೆ ಆಶ್ಚರ್ಯವುಳ್ಳವರಾಗಿ ತಂದೆ ಮಕ್ಕಳು ಮರದಿಂದ ಕೆಳಗೆ ಇಳಿಯುವವರಾಗಿ ಪಾಪಿಗಳಾದ ಅವರಿಬ್ಬರಿಗೂ ಉತ್ತಮಲೋಕ ಪ್ರಾಪ್ತಿಯಾದದ್ದನ್ನು ನೋಡಿ ಆಶ್ಚರ್ಯಪಟ್ಟರು. ತರುವಾಯ ಶಿವಶರ್ಮನು ದೇವದೂತರು ಹೇಳಿದ ಆ ತೀರ್ಥದ ಸ್ತುತಿಯನ್ನು ಕೇಳಿ ಮಗನಾದ ವಿಷ್ಣುಶರ್ಮನೊಡನೆ ಆ ತೀರ್ಥವನ್ನು ತುಂಬಾ ಹೊಗಳುವವನಾಗಿ ವಿಧಿಪ್ರಕಾರವಾಗಿ ಆ ತೀರ್ಥದಲ್ಲಿ ಸ್ನಾನ ಮಾಡುವವನಾಗಿ ನಾಮಧಾರಣೆಯನ್ನು ಮಾಡಿಕೊಂಡು ಸಂಧ್ಯಾವಂದನೆಯನ್ನು ಮಾಡಿದನು. ದೇವರ ಪೂಜೆಯನ್ನು ಮಾಡಿದನು. ಆಮೇಲೆ ಮಗನ ಬಳಿಗೆ ಬಂದು ಕೂತುಕೊಂಡು ಪೂರ್ವಜನ್ಮ ಸ್ಮರಣೆಯುಳ್ಳವನಾಗಿ, ಮಗನೊಡನೆ 'ವಿಷ್ಣುಶರ್ಮನೇ! ನಿನ್ನ ಮಾತು ಸುಳ್ಳಲ್ಲ. ಇಲ್ಲಿ ಸ್ನಾನ ಮಾಡಿದ್ದರಿಂದ ಪೂರ್ವಜನ್ಮದ ಕರ್ಮಗಳೆಲ್ಲವೂ ಸ್ಮರಣೆಗೆ ಬಂದಿದೆ. ನನ್ನ ಪೂರ್ವಚರಿತ್ರೆಯನ್ನು ಹೇಳುತ್ತೇನೆ. ಕೇಳು.

ಪೂರ್ವದಲ್ಲಿ ನಾನು ಹಣವಂತರಾದ ಧರ್ಮಿಷ್ಠರಾದ ವೈಶ್ಯರ ವಂಶದಲ್ಲಿ ಹುಟ್ಟಿದ್ದೆನು. ನನ್ನ ತಂದೆಯು ಶರಭ ಎಂದು ಹೆಸರುಳ್ಳವನು. ಕಾವ್ಯ ಕುಬ್ಜಪುರದಲ್ಲಿ ವಾಸಿಸುತ್ತಾ ವ್ಯಾಪಾರದಿಂದ ಬಹು ಹಮವನ್ನು ಸಂಪಾದಿಸಿದನು. ಅವನಿಗೆ ಬಹಳ

1. ಪ.

ವಯಸ್ಸಾದರೂ ಮಕ್ಕಳಾಗಲಿಲ್ಲ. ಮುದುಕನಾದನು. ಮಕ್ಕಳಿಲ್ಲವೆಂದೇ ಯೋಚನೆ ಮಾಡುತ್ತಿದ್ದನು. ರಾತ್ರಿಹಗಲೂ 'ಮಗನಿಲ್ಲದೆ ನಾನು ಸಂಪಾದಿಸಿದ ಬಹಳವಾದ ಹಣವು ವ್ಯರ್ಥವಾಗುವುದಲ್ಲಾ! ಹಣವಿದ್ದರೂ ಮಕ್ಕಳಿಲ್ಲದಿದ್ದರೆ ಅವನು ಪಿತೃಗಳಿಗೆ ಋಣಿಯಾಗುವವನಲ್ಲಾ!' ಎಂದು ಯೋಚಿಸುತ್ತಲೇ ಇದ್ದನು. ಹೀಗಿರುತ್ತಿರಲು ಒಂದು ದಿನದಲ್ಲಿ ಅತೀಂದ್ರಿಯ ಜ್ಞಾನಿಗಳಾದ ದೇವಲ ಎಂಬ ಋಷಿಗಳು ವರವನ್ನು ಕೊಡಲು ಬಂದರು. ಅವರಿಗೆ ನನ್ನ ತಂದೆಯು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಆಸನದಲ್ಲಿ ಕೂತುಕೊಳ್ಳಿಸಿ ಕುಶಲಪ್ರಶ್ನೆಯನ್ನು ಮಾಡಿ ಬರಲಿಕ್ಕೆ ಕಾರಣವನ್ನು ಕೇಳಿದನು. ಅವರು ಪರೀಕ್ಷಿಸುವುದಕ್ಕಾಗಿ ನನ್ನ ತಂದೆಯೊಡನೆ 'ವೈಶ್ಯ ಶ್ರೇಷ್ಠನೇ! ನೀನು ಧರ್ಮದಿಂದ ಬಹಳ ಹಣವನ್ನು ಸಂಪಾದಿಸಿರುವಿ. ಅದರಿಂದ ನಿತ್ಯನೈಮಿತ್ತಕ ಕರ್ಮಗಳನ್ನು ಮಾಡುತ್ತಿರುವಿ. ಹಣವಿದ್ದರೆ ರಾಜಸಭೆಯಲ್ಲಿಯೂ ಆದರವು ಲಭಿಸುವುದು. ಗೃಹಸ್ಥನು ಹಣವನ್ನು ಹೊಂದಿ ಬಹಳವಾದ ಪುಷ್ಟಿಯನ್ನು ಹೊಂದುವನು. ಹಣವಂತನನ್ನು ಬಂಧುಗಳೂ ಇತರರೂ ಬಿಡುವುದೇ ಇಲ್ಲ. ಗೃಹಸ್ಥರಿಗೆ ಹಣವಿದ್ದರೆ ಕೃಶತ್ವವು ಏರ್ಪಡುವುದು. ನಿನ್ನ ಮನೆಯಲ್ಲಿ ಬೇಕಾದ ಹಣವಿದೆ. ಆದರೂ ನೀನು ಇಷ್ಟು ಕೃಶನಾಗಿರುವುದೇಕೆ?' ಎಂದು ಕೇಳಿದರು.

ಅದಕ್ಕೆ ನನ್ನ ತಂದೆಯು 'ನಿಮ್ಮಂತವರು ತಂದೆಗಳಂತೆ ಹಿತೋಪದೇಶದಲ್ಲಿ ಆಸಕ್ತರಾದವರು. ನಿಮ್ಮಂತವರಲ್ಲಿ ಮಕ್ಕಳಂತೆ ಇರುವ ನಾವು ಮರೆಮಾಡುವುದೇನಿದೆ? ತಮ್ಮ ಅನುಗ್ರಹದಿಂದ ನನಗೆ ಬೇರೆ ಎಲ್ಲಾ ವಿಷಯದಲ್ಲಿಯೂ ಕ್ಷೇಮವಿದೆ. ಮುದಿತನದಲ್ಲಿಯೂ ಮಕ್ಕಳಾಗದೆ ಇರುವುದು ದುಃಖದಾಯಕವಾಗಿರುವುದು. ಆದುದರಿಂದ ನಾನು ಕೃಶನಾಗಿರುವೆನು. ನಾನು ಪಿತೃಋಣವನ್ನು ತೀರಿಸದ ಕಾರಣ ನರಕಕ್ಕೆ ಹೋಗುವೆನೆಂಬ ಭಯವುಂಟಾಗಿದೆ. ಆದುದರಿಂದ ನನಗೆ ಮಗನಾಗುವಂತೆ ತಾವು ಉಪಾಯವನ್ನು ಹೇಳಬೇಕು. ತಮ್ಮಂತವರಿಂದ ಮಾಡಲಿಕ್ಕೆ ಅಶಕ್ಯವಾದ ಕಾರ್ಯವಿಲ್ಲ' ಎಂದು ಹೇಳಿದನು.

ಆಮಾತನ್ನು ಕೇಳಿ ಅತೀಂದ್ರಿಯಜ್ಞಾನಿಗಳಾದ ದೇವಲರು ಒಂದು ಕ್ಷಣಹೊತ್ತು ಸ್ಥಿರವಾಗಿ ಧ್ಯಾನಮಾಡಿದರು. ತರುವಾಯ ನನ್ನ ತಂದೆಗೆ ಸಂತಾನದ ಪ್ರತಿಬಂಧಕ್ಕೆ ಕಾರಣವನ್ನು ತಿಳಿದುಕೊಂಡು 'ವೈಶ್ಯನೇ! ಪೂರ್ವದಲ್ಲಿ ನಿನ್ನ ಹೆಂಡತಿಯು ಸಖಿಯರ ಮುಂಭಾಗದಲ್ಲಿ ತನ್ನ ಗರ್ಭವುಂಟಾದರೆ ಭೋಜನ ಧೂಪ ದೀಪ ತಾಂಬೂಲ ನರ್ತನ ವಾದ್ಯ ಇತ್ಯಾದಿಗಳಿಂದ ಗೌರಿಯನ್ನು ಪೂಜಿಸುವೆನು' ಎಂದು ಹರಕೆ ಹೇಳಿಕೊಂಡಳು. ತರುವಾಯ ಅದೇ ತಿಂಗಳಲ್ಲಿಯೇ ನಿನ್ನ ಹೆಂಡತಿಗೆ

ಗರ್ಭವುಂಟಾಯಿತು. ಅದನ್ನು ತಿಳಿದು ಸಖಿಯರು ನಿನ್ನ ಹೆಂಡತಿಯೊಡನೆ 'ನಿನಗೆ ಗೌರೀದೇವಿಯು ಗರ್ಭವನ್ನು ಅನುಗ್ರಹಿಸಿದರು. ಆದುದರಿಂದ ಪ್ರತಿಜ್ಞೆಯನ್ನು ಮಾಡಿದಂತೆ ಗೌರೀಪೂಜೆಯನ್ನು ಮಾಡು. ಇಲ್ಲದಿದ್ದರೆ ಏನಾದರೂ ವಿಘ್ನವುಂಟಾಗಬಹುದು' ಎಂದು ಹೇಳಿದರು. ಆಗ ಅವಳು ಈ ವಿಷಯವನ್ನು ನಿನ್ನೊಡನೆ ತಿಳಿಸಿದಳು. ನೀನು ಹೆಂಡತಿಯು ಗರ್ಭಿಣಿಯಾದದ್ದನ್ನು ತಿಳಿದು ಬಹಳ ಸಂತೋಷವುಳ್ಳವನಾಗಿ ಗೌರೀಪೂಜೆಗೆ ಬೇಕಾದ ವಸ್ತುಗಳನ್ನು ತರಲಿಕ್ಕೆ ಭೃತ್ಯರಿಗೆ ಹೇಳಿದಿ. ಅವರು ಎಲ್ಲಾ ವಸ್ತುಗಳನ್ನು ತರಲು ನೀನು ಅವನ್ನು ಹೆಂಡತಿಗೆ ಒಪ್ಪಿಸಿದಿ. ತರುವಾಯ ನಿನ್ನ ಹೆಂಡತಿಯು ಸಖಿಯರನ್ನು ಕಂಡು 'ನೀವು ಈ ಸಾಮಗ್ರಿಯನ್ನು ಹಿಡಿದುಕೊಂಡು ಗೌರೀದೇವಾಲಯಕ್ಕೆ ಹೋಗಿ ಪೂಜೆ ಮುಗಿಸಿಕೊಂಡು ಬನ್ನಿರಿ. ನಮ್ಮ ವಂಶದಲ್ಲಿ ಗರ್ಭಿಣಿಯಾದವಳು ಮನೆಯನ್ನು ಬಿಟ್ಟುಬರುವ ಸಂಪ್ರದಾಯ ವಿಲ್ಲದ ಕಾರಣ ನಾನು ಬರುವುದಿಲ್ಲ. ನೀವೇ ಹೋಗಿರಿ' ಎಂದು ಹೇಳಿ ಕಳುಹಿಸಿದಳು.

ಅವರು ಹೋಗಿ ವಿಧಿಪ್ರಕಾರವಾಗಿ ಗೌರಿಗೆ ಪೂಜೆಯನ್ನು ಮಾಡಿ ಪ್ರಾರ್ಥಿಸಿಕೊಂಡರು. ಗೌರಿಯು ಆ ಪೂಜೆಯಿಂದ ಸಂತೋಷಪಟ್ಟಂತೆ ಅವರಿಗೆ ತಿಳಿಯಲಿಲ್ಲ. ಅವರು ಬಂದು ನೀನು ಮಾಡಿಸಿದ ಪೂಜೆಯಿಂದ ಗೌರಿಯು ಪ್ರೀತಳಾಗಲಿಲ್ಲ ಎಂದು ಹೇಳಿದರು. ಆಗ ನಿನ್ನ ಹೆಂಡತಿಯು 'ಗೌರಿಯು ಏಕೆ ಸಂತುಷ್ಟಳಾಗಲಿಲ್ಲ' ಎಲ್ಲಾ ಉಪಾಚರಗಳನ್ನು ಸರಿಯಾಗಿ ಮಾಡಿಸಿರುವೆನಲ್ಲಾ! ನಾನು ಹೋಗಲಿಕ್ಕೆ ಮಾತ್ರ ಆಗಲಿಲ್ಲ. ಇದರಿಂದ ಕೋಪಿಸಿಕೊಂಡಿರಬಹುದೇ? ಏನಾದರೂ ಇರಲಿ. ಹಡೆದಮೇಲೆ ನಾನೇ ಹೋಗಿ ಪೂಜೆಯನ್ನು ಮಾಡಿಸುವೆನು' ಎಂದು ಹೇಳಿಕೊಂಡು ಗರ್ಭವನ್ನು ಧರಿಸಿಕೊಂಡು ಇದ್ದಳು' ಎಂದು (ದೇವಲರು) ಹೇಳಲು ತನ್ನ ತಂದೆಯು 'ಮುನಿಗಳೇ! ತಮ್ಮ ಸೊಸೆಯಾದ ನನ್ನ ಪತ್ನಿಯು ಸರಿಯಾಗಿಯೇ ಪ್ರತಿಜ್ಞಾಮಾಡಿದಂತೆ ಪೂಜೆನ್ನು ಮಾಡಿಸಿರುವಳಲ್ಲಾ! ಗೌರೀದೇವಿಗೆ ಯಾಕೆ ತೃಪ್ತಿಯುಂಟಾಗಲಿಲ್ಲ?' ಎಂದು ಕೇಳಿದನು.

ಆದಕ್ಕೆ ದೇವಲಋಷಿಗಳು 'ವೈಶ್ಯನೇ! ಕೇಳು. ನಿನ್ನ ಪತಿಯ ಸಖಿಯರು ಗೌರೀದೇವಿಯನ್ನು ಪೂಜಿಸಿ ಬಂದ ಮೇಲೆ ಅಲ್ಲಿ ವಿಜಯಾ ಎಂದು ಹೆಸರುಳ್ಳ ಪಾರ್ವತೀದೇವಿಯ ಸಖಿಯು ಆ ಗೌರೀದೇವಿಯೊಡನೆ 'ದೇವಿ! ಆ ಮನುಷ್ಯ ಹೆಂಗಸರು ಬಂದು ನಿನಗೆ ಶ್ರದ್ಧೆಯಿಂದ ಪೂಜೆಯನ್ನು ಮಾಡಿದರಲ್ಲಾ! ಅದರಿಂದ ನಿನಗೆ ಸಂತೋಷವೇಕೆ ಆಗಲಿಲ್ಲ?' ಎಂದು ಕೇಳಿದಳು.

ಆಗ ಪಾರ್ವತಿಯು 'ಸಖಿ ವಿಜಯಳೇ! ಆ ವೈಶ್ಯನ ಹೆಂಡತಿಯು ಗರ್ಭಿಣಿಯಾದ ಕಾರಣ ಮನೆಯಿಂದ ಹೊರಗೆ ಬರಲಿಕ್ಕೆ ಅಶಕ್ತಳಾಗಿರುವುದನ್ನು ನಾನು ತಿಳಿದಿರುವೆನು. ಅವಳಿಂದ ಪ್ರೇರಿತರಾಗಿ ಅವಳ ಸಖಿಯರು ಅವಳಿಂದ ಪ್ರೇರಿತರಾಗಿ ಬಂದು ಪೂಜಿಸಿದರು. ಆದರೆ ನಾವು ಇನ್ನೊಬ್ಬರ ಕೈಯಿಂದ ಮಾಡಿಸಿದ ಪೂಜೆಯನ್ನು ಸ್ವೀಕರಿಸಲಾರೆವು. ಅವಳ ಗಂಡನೇ ಬಂದಿದ್ದರೆ ಆಗುತ್ತಿತ್ತು. ಅವಳು ಇಹಗೆ ಮಾಡಿದ ಕಾರಣ ನನ್ನ ಅವಮಾನವನ್ನು ಮಾಡಿದಂತೆ ಆಗಿ ಅವಳ ಗರ್ಭವು ಸ್ರವಿಸಿಹೋಗುವುದು. ಹೆಂಗಸಾದವಳು ಪೂಜೆಯನ್ನೋ, ವ್ರತವನನೋ ಮಾಡಲಿಕ್ಕೆ ಅಶಕ್ತಳಾದಾಗ ಗಂಡನಿಂದ ಮಾಡಿಸಿದರೆ ಅದಕ್ಕೆ ಭಂಗವು ಏರ್ಪಡಲಾರದು. ಅಥವಾ ಗಂಡನ ಆಜ್ಞೆಯನ್ನು ಪಡೆದು ಬ್ರಾಹ್ಮಣನ ಮುಖದಿಂದ ಮಾಡಿಸಬೇಕು. ವೈಶ್ಯನ ಹೆಂಡತಿಯು ತಾನೂ ಬರದೆ ತನ್ನ ಗಂಡನೂ ಬರದೆ ಸಖಿಯರಿಂದ ಪೂಜೆಯನ್ನು ಮಾಡಿಸಿದವಳಾದ ಕಾರಣ ಅವಳ ಗರ್ಭವು ವ್ಯರ್ಥವಾಗುವುದು. ಇನ್ನು ದಂಪತಿಗಳಿಬ್ಬರೂ ಶ್ರದ್ಧೆಯಿಂದ ಬಂದು ಪುನಃ ನನಗೆ ಪೂಜೆಯನ್ನು ಮಾಡಿಸಿದರೆ ಅವರಿಗೆ ಮಗನು ಹುಟ್ಟುವನು' ಎಂದು ಹೇಳಿದಳು.

ಈ ಪ್ರಕಾರವಾಗಿ ಗೌರೀದೇವಿಯು ಕೊಟ್ಟ ಶಾಪವು ನಿನಗಾಗಲೀ ನಿನ್ನ ಹೆಂಡತಿಗಾಗಲೀ ನಿನ್ನ ಹೆಂಡತಿಯ ಸಖಿಯರಿಗಾಗಲೀ ತಿಳಿಯಲಿಲ್ಲ. ಆದರಿಂದ ನಿನಗೆ ಮಗನಾಗಲಿಲ್ಲ. ನೀನು ಪತ್ನೀಸಹಿತನಾಗಿ ಗೌರೀದೇವಿಯನ್ನು ಆರಾಧಿಸು. ಆಗ ಅವಳು ಪ್ರಸನ್ನಳಾಗಿ ನಿನಗ ಮಗನನ್ನು ಕೊಡುವಳು' ಎಂದು ಹೇಳಿ ದಿಲೀಪರಾಜನು ವಸಿಷ್ಠರ ಉಪದೇಶದಿಂದ ಕಾಮಧೇನುವಿನ ಮಗಳಾದ ನಂದಿನಿಯನ್ನು ಸೇವಿಸಿ ರಘು ಎಂಬ ಮಗನನ್ನು ಪಡೆದ ಕಥೆಯನ್ನು ತಿಳಿಸಿದರು.



## ಶರಭನಿಗೆ ಸದ್ಗತಿ ಪ್ರಾಪ್ತಿಯು [1]

ಶಿವಶರ್ಮನು ತನ್ನ ಮಗನಾದ ವಿಷ್ಣುಶರ್ಮನೊಡನೆ ಹೇಳಿದನು. 'ವಿಷ್ಣುಶರ್ಮನೇ! ತರುವಾಯ ಶರಭನು ಪತ್ನಿಯಿಂದ ಸಹಿತನಾಗಿ ಪೂಜಾಸಾಮಗ್ರಿಯನ್ನು ಹಿಡಿದುಕೊಂಡು ಗೌರಿಯ ದೇವಾಲಯಕ್ಕೆ ಹೋದನು. ದಂಪತಿಗಳು ಶ್ರದ್ಧೆಯಿಂದ ಏಳು ದಿವಸಗಳಲ್ಲಿ ಗೌರೀದೇವಿಯನ್ನು ಪೂಜಿಸಿದರು. ಆಗ ಗೌರೀದೇವಿಯು

1. ಪ. ಈ ಕಥೆಯನ್ನು ಸದಾಚಾರ ತರಂಗ-3 ತೀರ್ಥಕ್ಷೇತ್ರ ಪರಿಚ್ಛೇದದಲ್ಲಿಯೂ ಸೇರಿಸಬಹುದು.

ಪ್ರತ್ಯಕ್ಷಳಾಗಿ 'ವೈಶ್ಯನೇ! ನಿನ್ನ ದೃಢವಾದ ಭಕ್ತಿಯಿಂದ ನಾನು ಸಂತುಷ್ಟಳಾಗಿರುವೆನು. ನಿನಗೆ ಮಗನನ್ನು ನಾನು ಕೊಡುವೆನು. ನೀನು ಬೇಗನೆ ಇಂದ್ರನ ಖಾಂಡವವನಕ್ಕೆ ಹೋಗು. ಅಲ್ಲಿ ಪವಿತ್ರವಾದ ಬೃಹಸ್ಪತಿಯು ಮಾಡಿರುವ ನಿಗಮೋದ್ಬೋದಕವೆಂಬ ತೀರ್ಥದಲ್ಲಿ ಸ್ನಾನಮಾಡು. ಅದರಿಂದ ನಿನಗೆ ಮಗನಾಗುವನು' ಎಂದು ಹೇಳಿದಳು. ಅದನ್ನು ಕೇಳಿ ನನ್ನ ತಂದೆಯಾದ ಶರಭನು ಪತ್ನೀಸಹಿತನಾಗಿ ಇಲ್ಲಿಗೆ ಬಂದು ಈ ತೀರ್ಥದಲ್ಲಿ ಸಾನ್ನವನ್ನು ಮಾಡಿದನು. ಬ್ರಾಹ್ಮಣರಿಗೆ ಗೋವುಗಳನ್ನು ದಾನ ಮಾಡಿದನು. ದೇವರ್ಷಿಪಿತೃಗಳಿಗೆ ತರ್ಪಣವನ್ನು ಬಿಟ್ಟನು. ಏಳುರಾತ್ರಿ ವಾಸಮಾಡಿ ತಮ್ಮ ಮನೆಗೆ ಹೋದರು. ಅದೇ ತಿಂಗಳಲ್ಲಿಯೇ ನನ್ನ ತಾಯಿಗೆ ಗರ್ಭವುಂಟಾಯಿತು. ಆಮೇಲೆ ನಾನು ಹುಟ್ಟಿದೆನು. ಈರೀತಿಯಾಗಿ ನಾನು ಹುಟ್ಟಿದ ಕಥೆಯನ್ನು ನನ್ನ ತಂದೆಯು ಮುಖದಿಂದಲೇ ಕೇಳಿದೆನು.

ಒಂದು ದಿನದಲ್ಲಿ ನನ್ನ ತಂದೆಯು ನಾನು ಗೃಹಕಾರ್ಯದಲ್ಲಿ ಸಮರ್ಥನಾಗಿರುವುದನ್ನು ತಿಳಿದು ಮನೆಯಲ್ಲಿ ವೈರಾಗ್ಯವುಳ್ಳವನಾಗಿ ನನ್ನೊಡನೆ ವೈರಾಗ್ಯಯುಕ್ತಗಳಾದ ಮಾತುಗಳನ್ನಾಡಿ ಮನೆಯನ್ನು ಬಿಟ್ಟು ತೀರ್ಥಯಾತ್ರೆಯನ್ನು ಮಾಡುತ್ತಾ ಹೋಗುವೆನೆಂದನು. ಆಗ ನಾನು ತಂದೆಯ ಮಾತನ್ನು ಕೇಳಿ ನೀವು ಮನೆಯನ್ನು ಬಿಟ್ಟು ಹೋದರೆ ನಮಗೆ ಅಪಕೀರ್ತಿ ಬರುವುದು. ಇಲ್ಲಿಯೇ ಮೂರು ಲೋಕಗಳನ್ನೂ ಪವಿತ್ರವನ್ನಾಗಿ ಮಾಡುವ ಗಂಗಾನದಿಯು ಹರಿಯುತ್ತಿದೆ. ಮಗಧ ದೇಶದಲ್ಲಿ ಪಾಪಿಯ ಎಲುಬಾದರೂ ಗಂಗೆಯಲ್ಲಿ ಬಿದ್ದರೆ ಅವನು ಸ್ವರ್ಗಕ್ಕೆ ಹೋಗುವನು. ಆದುದರಿಂದ ಮಹಾಮಹಿಮೆಯುಳ್ಳ ಗಂಗೆಯನ್ನು ಬಿಟ್ಟು ಹೋಗಬಾರದು' ಎಂದು ಹೇಳಿದೆನು. ನನ್ನ ಮಾತನ್ನು ಕೇಳಿ ತಂದೆಯು ಹಾಗೆಯೇ ವೈರಾಗ್ಯವುಳ್ಳವನಾಗಿ ಮನೆಯಲ್ಲಿಯೇ ಇದ್ದನು.

ನಿತ್ಯವೂ ಮೂರು ಹೊತ್ತು ಗಂಗೆಯಲ್ಲಿ ಸ್ನಾನಮಾಡುತ್ತಿದ್ದನು. ಎಲ್ಲಿ ಪುರಾಣವು ನಡೆಯುವುದೋ ಅಲ್ಲಿಗೆ ನಿತ್ಯವೂ ಹೋಗುವನು. ಒಂದು ದಿವಸದಲ್ಲಿ ಅವನು ಯಮುನೆಯ ಮಹಿಮೆಯನ್ನು ಕೇಳಿ ಈ ತೀರ್ಥವು ಎಲ್ಲಾ ತೀರ್ಥಗಳಿಂದಲೂ ಶ್ರೇಷ್ಠವಾದ ತೀರ್ಥವೆಂದು ಕೇಳಿದನು. ಪುರಾಣಿಕರು ಹೇಳಿದ ಈ ತೀರ್ಥದ ಮಹಿಮೆಯನ್ನು ಕೇಳಿ ನಾವಿಬ್ಬರೂ ಬಂದಂತೆ ಒಬ್ಬರಿಗೂ ತಿಳಿಯದಂತೆ ಈ ತೀರ್ಥಕ್ಕೆ ಬಂದನು. ಇಲ್ಲಿ ನಿಗಮೋದ್ಬೋಧಕತೀರ್ಥದಲ್ಲಿ ನಿತ್ಯವೂ ಮೂರು ಹೊತ್ತು ಸ್ನಾನ ಮಾಡುತ್ತಾ ಇದ್ದನು. ಒಂದು ದಿನದಲ್ಲಿ ಅವನಿಗೆ ಬಹಳವಾಗಿ ಜ್ವರವು ಬಂದಿತು. ಅದರಿಂದ ಮೂರ್ಛಿತನಾದನು. ಸ್ವಲ್ಪಹೊತ್ತು ಹಾಗೆಯೇ ಮೂರ್ಛೆಯಿಂದ

ಜ್ಞಾನಶೂನ್ಯ ನಾಗಿದ್ದನು. ಆಮೇಲೆ ಜ್ಞಾನಬಂದು 'ಬಹು ಕಷ್ಟವಾಯಿತಲ್ಲಾ! ಧಾರ್ಮಿಕನಾದ ನನ್ನ ಮಗನು ದೂರದಲ್ಲಿ ಇರುವನು. ನಾನು ಎಷ್ಟೋ ಪಾಪವನ್ನು ಮಾಡಿರುವೆನು. ಅದಕ್ಕೆ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಲಿಲ್ಲ. ನನಗೆ ಏನು ಗತಿಯಾಗುತ್ತದೋ! ಮಗನು ಬರುವನು. ಅವನಿಗೆ ಮನೆಯಲ್ಲಿ ರಹಸ್ಯವಾಗಿ ಇಟ್ಟಿದ್ದ ಹಣವನ್ನು ಕೊಡುವೆನೆಂದು ಯೋಚಿಸಿದ್ದೆನು. ಅವನೂ ಬರಲಿಲ್ಲ' ಎಂದು ಹೇಳಿ ಯೋಚಿಸುತ್ತಾ ಇದ್ದನು. ಅಷ್ಟರಲ್ಲಿ ಒಬ್ಬನು ದಾರಿಯಲ್ಲಿ ಹೋಗುವವನು ಮಳೆಯಿಂದ ಪೀಡಿತನಾಗಿ ಛಳಿಯಿಂದ ನಡುಗುತ್ತಾ ಆ ಪರ್ಣಶಾಲೆಗೆ ಪ್ರವೇಶಿಸಿದನು. ಅವನು ಅಲ್ಲಿ ಕೂತಿದ್ದ ನನ್ನ ತಂದೆಯನ್ನು ನೋಡಿ ಯಾರೋ ಮುನಿಯೆಂದು ತಿಳಿದುಕೊಂಡು ಹತ್ತಿರಹೋಗಿ ನಮಸ್ಕಾರವನ್ನು ಮಾಡಿದನು. 'ಮುನಿಗಳೇ! ಯಾಕೆ ಮಲಗಿರುವಿರಿ. ಸಂಧ್ಯಾಕಾಲವು ಸಮೀಪಿಸಿರುವುದು. ಸೂರ್ಯನು ಮುಳುಗುತ್ತಿರುವನು. ಇದು ನಿಮಗೆ ಮಲಗುವ ಸಮಯವಲ್ಲ' ಎಂದು ಹೇಳಿದನು. ಆಗ ಜ್ವರದಿಂದ ಸಂತಪ್ತನಾದ ನನ್ನ ತಂದೆಯು 'ದಾರಿಗನೇ! ನಾನು ಹೇಳುವ ಮಾತನ್ನು ಕೇಳಿ ಹಾಗೆಯೇ ಮಾಡು. ನಾನು ಮಾಡಿದ ಪುಣ್ಯದಿಂದಲೇ ನೀನು ಈಗ ಇಲ್ಲಿಗೆ ಬಂದು ಸೇರಿರುವಿ. ನಾನು ಶರಭ ಎಂದು ಹೆಸರುಳ್ಳ ವೈಶ್ಯನು. ನನ್ನ ಮನೆಯು ಕಾನ್ಯಕುಬ್ಜದಲ್ಲಿ ಇರುವುದು. ಹೆಂಡತಿ ಮಕ್ಕಳು ಮಿತ್ರರು ಬೇಡವೆಂದು ಹೇಳಿದರೂ ಕೇಳದೆ ನಾನು ಪುರಾಣಿಕರು ಹೇಳಿದ ಈ ತೀರ್ಥದ ಮಹಿಮೆಯನ್ನು ಕೇಳಿ ನಾನು ಇಲ್ಲಿಗೆ ಬಂದಿರುವೆನು. ಇಲ್ಲಿಗೆ ನಾನು ಬಂದು ಕೆಲವು ಮಾಸಗಳು ಕಳೆದುಹೋದವು. ನನಗೀಗ ಮೂರು ದಿವಸಗಳಿಂದ ಬಹಳವಾಗಿ ಜ್ವರವು ಬರುತ್ತಿರುವುದು. ಒಂದು ಸಲ ನನ್ನ ಪ್ರಾಣಗಳೂ ಹೋದವು. ಪುನಃ ಬಂದಿವೆ. ಏನೋ ಸ್ವಲ್ಪ ಆಯುಷ್ಯವು ನನಗೆ ಉಳಿದಿರುವುದು. ಆದುದರಿಂದಲೇ ಯಮಲೋಕವನ್ನು ನೋಡಿ ನಾನು ಪುನಃ ಇಲ್ಲಿಗೆ ಬಂದಿರುವೆನು. ನಾನು ಮಾಡಿದ ಪುಣ್ಯದಿಂದ ನೀನು ಇಲ್ಲಿಗೆ ಬಂದಿರುವಿ. ನನ್ನನ್ನು ನನ್ನ ಮನೆಗೆ ಕರೆದುಕೊಂಡು ಹೋಗಿ ಬಿಡು. ನಿನಗೆ ಬಹಳವಾಗಿ ಹಣವನ್ನು ಕೊಡುವೆನು. ಮನೆಗೆ ಹೋಗಿ ನಿನಗೆ ಬಹಳ ಹಣವನ್ನು ಕೊಡುವೆನು. ಇಲ್ಲಿಯೇ ಭೂಮಿಯನ್ನು ತೋಡಿ ಇಲ್ಲಿ ಇಟ್ಟಿರುವ ಸ್ವಲ್ಪ ಹಣವನ್ನು ತೆಗೆಯುವವನಾಗು' ಎಂದು ಹೇಳಿದನು.

ಈ ಮಾತನ್ನು ಕೇಳಿ ಹಣದಲ್ಲಿ ಆಸೆಯುಳ್ಳವನಾದ ಆ ದಾರಿಗನು 'ನೀನು ಹೇಳಿದಂತೆ ನಾನು ಮಾಡುವೆನು' ಎಂದು ಹೇಳಿ ಭೂಮಿಯನ್ನು ತೋಡಿ ಹಣವನ್ನು ತೆಗೆದು ಶರಭನ ಮುಂಭಾಗದಲ್ಲಿ ಇಟ್ಟನು. 'ವೈಶ್ಯಶ್ರೇಷ್ಠನೇ! ಭೂಮಿಯನ್ನು ತೋಡಿ

ತೆಗೆದ ನಿನ್ನ ಹಣವಿದು. ಇನ್ನು ನಿನ್ನನ್ನು ಊರಿಗೆ ಕರೆದುಕೊಂಡು ಹೋಗಲಿಕ್ಕೆ ಮೇನೆಯನ್ನು ಅದನ್ನು ಹೊತ್ತುಕೊಂಡು ಹೋಗುವವರನ್ನು ಕರದುಕೊಂಡು ಬರಬೇಕಾಗಿದೆ. ಅದಕ್ಕೆ ಬೇಗನೇ ಹಣವನ್ನು ಕೊಡು' ಎಂದು ಹೇಳಿದನು. ಆಗ ಶರಭನು ಮೂರು ಬಂಗಾರದ ನಾಣ್ಯಗಳನ್ನು ಕೊಟ್ಟನು. ದಾರಿಗನು ಅದನ್ನು ತೆಗೆದುಕೊಂಡು ಹೋಗಿ ಒಂದು ರಾತ್ರಿಯಲ್ಲಿ ಪಟ್ಟಣದಲ್ಲಿ ವಾಸಮಾಡಿ ಮರುದಿನದಲ್ಲಿ ಒಂದು ಬಂಗಾರದ ನಾಣ್ಯವನ್ನು ಕೊಟ್ಟು ಮೇನೆಯನ್ನೂ ಮೇನೆಯನ್ನು ಹೊರುವವರನ್ನು ಕರೆದುಕೊಂಡು ಬಂದನು. ಎರಡು ಬಂಗಾರದ ನಾಣ್ಯಗಳನ್ನು ಅವನೇ ಅಪಹರಿಸಿದನು. ತರುವಾಯ ದಾರಿಗನು ಶರಭನನ್ನು ಮೇನೆಯಲ್ಲಿ ಮಲಗಿಸಿ ಮೇನೆ ಹೊರುವವರನ್ನು ಅವಸರಪಡಿಸುತ್ತಾ ಕಾನ್ಯಕುಬ್ಜಕ್ಕಾಗಿ ಹೋದನು. ಆ ತೀರ್ಥದ ನೀರನ್ನು ಒಂದು ಪಾತ್ರೆಯಲ್ಲಿ ತುಂಬಿಸಿಕೊಂಡು ದಾರಿಯಲ್ಲಿ ಜ್ವರದಿಂದ ತಪ್ತನಾದ ಶರಭನಿಗೆ ಸ್ವಲ್ಪಸ್ವಲ್ಪವೇ ಕುಡಿಸುತ್ತಾ ಹೋಗುತ್ತಿದ್ದನು. ತರುವಾಯ ಮಧ್ಯದಲ್ಲಿ ಒಂದು ಸರೋವರದ ತೀರದಲ್ಲಿ ಇಳಿದು ಸ್ನಾನಮಾಡಿ ಭೋಜನ ಮಾಡಿ ಪುನಃ ಅಲ್ಲಿಂದ ಹೋದರು. ಸ್ವಲ್ಪ ದೂರ ಹೋಗಲು ಅವರಿಗೆಲ್ಲರಿಗೂ ನೀರಡಿಕೆಯಾಯಿತು. ಆಗ ಪಾತ್ರೆಯಲ್ಲಿ ಇದ್ದ ತೀರ್ಥದ ನೀರನ್ನು ಕುಡಿಯುತ್ತಾ ಶರಭನಿಗೆ ಕುಡಿಸುತ್ತಾ ಹೋದರು. ಅಷ್ಟರಲ್ಲಿ ಒಬ್ಬ ವಿಕಟ ಎಂದು ಹೆಸರುಳ್ಳ ಭಯಂಕರನಾದ ರಾಕ್ಷಸನು ಜನಸಂಚಾರ ರಹಿತವಾದ ಆ ಅರಣ್ಯದಲ್ಲಿ ಸಂಚರಿಸುತ್ತಿದ್ದವನು ಮೇನೆಯನ್ನು ಹೊತ್ತುಕೊಂಡು ಹೋಗುತ್ತಿರುವ ಜನರನ್ನು ಆ ದಾರಿಗನನ್ನು ನೋಡಿದನು. ಹಸಿವೆಯಿಂದ ಪೀಡಿತನಾಗಿದ್ದ ಆ ರಾಕ್ಷಸನು ಅವರನ್ನು ನೋಡುವ ಮಾತ್ರದಲ್ಲಿಯೇ ಬಾಯಿತೆರೆದುಕೊಂಡು ಅಲ್ಲಿಗೆ ವೇಗದಿಂದ ಬಂದವನಾಗಿ ಆ ದಾರಿಗನ ಮತ್ತು ಮೇನೆಯನ್ನು ಹೊತ್ತುಕೊಂಡು ಹೋಗುತ್ತಿದ್ದವರ ತಲೆ ಕೂದಲುಗಳನ್ನು ಹಿಡಿದುಕೊಂಡು ಆಕಾಶದಲ್ಲಿ ಗರಗರನೆ ತಿರುಗಿಸಿದನು. ಅದರಿಂದಲೇ ಅವರೆಲ್ಲರೂ ಪ್ರಾಣಬಿಟ್ಟರು. ಆಮೇಲೆ ಅವರನ್ನು ಭೂಮಿಯಲ್ಲಿ ಅಪ್ಪಳಿಸಿದನು. ಅವರ ಮಾಂಸವೆಲ್ಲವನ್ನು ತಿಂದು ರಕ್ತವನ್ನು ಕುಡಿದನು. ಆಮೇಲೆ ಶರಭನನ್ನು ನೋಡಿ ಈ ರೋಗಿಯು ನನ್ನನ್ನು ತಪ್ಪಿಸಿಕೊಂಡು ಎಲ್ಲಿಗೆ ಹೋಗುವನು? ಇಲ್ಲಿರುವ ನೀರನ್ನು ಕುಡಿದು ಆಮೇಲೆ ಇವನನ್ನು ತಿನ್ನುವೆನು' ಎಂದು ಯೋಚಿಸಿ ಪಾತ್ರೆಯಲ್ಲಿ ಇದ್ದ ತೀರ್ಥದ ನೀರನ್ನು ಕುಡಿದನು. ಆ ನೀರನ್ನು ಬಾಯಿಯಲ್ಲಿ ಹಾಕಿಕೊಳ್ಳುವ ಮಾತ್ರದಿಂದಲೇ ಪೂರ್ವಜನ್ಮದ ಸ್ಮರಣೆಯು ಬಂದಿತು. ತಾನು ಪೂರ್ವದಲ್ಲಿ ಮಾಡಿದ್ದ ಪಾಪವನ್ನು ಸ್ಮರಿಸಿಕೊಂಡು ಶರಭನ ಸಮೀಪಕ್ಕೆ ಬಂದು

ರಾಕ್ಷಸನು 'ಮನುಷ್ಯ ಶ್ರೇಷ್ಠನೇ! ನೀನು ಯಾರು? ಈ ಜನರು ಯಾರು? ಅವರನ್ನೆಲ್ಲಾ ನಾನು ತಿಂದು ಹಾಕಿದೆನು. ಇದು ಯಾವ ತೀರ್ಥದ ನೀರು. ಇದನ್ನು ಕುಡಿದದ್ದರಿಂದ ಪಾಪಿಯಾದ ನನಗೂ ಪೂರ್ವಜನ್ಮದ ಸ್ಮರಣೆಯು ಬಂದಿದೆ' ಎಂದು ಹೇಳಿದನು. ಅದಕ್ಕೆ ಶರಭನು 'ರಾಕ್ಷಸಶ್ರೇಷ್ಠನೇ! ನಾನೊಬ್ಬ ವೈಶ್ಯನು. ಕಾನ್ಯಕುಬ್ಜದಲ್ಲಿ ನನ್ನ ಮನೆಯಿರುವುದು. ನಾನು ತೀರ್ಥಯಾತ್ರೆಯನ್ನು ಮಾಡುತ್ತಾ ಇಂದ್ರಪ್ರಸ್ಥಕ್ಕೆ ಬಂದಿದ್ದೆನು. ಅಲ್ಲಿ ನನಗೆ ದೈವೇಚ್ಛೆಯಿಂದ ಜ್ವರವು ಬಂದಿತು. ಆದರಿಂದ ನನಗೆ ಮನೆಗೆ ಹೋಗಬೇಕೆಂದು ಬುದ್ಧಿಯುಂಟಾಯಿತು. ಮಳೆಯಿಂದ ಪೀಡಿತನಾದ ಒಬ್ಬ ದಾರಿಗನು ನನ್ನ ಬಳಿಗೆ ಬಂದನು. ಅವನನ್ನು ನಾನು ಪ್ರಾರ್ಥಿಸಲು ಅವನು ಬೇಗನೇ ಮೇನೆಯನ್ನು ತರಿಸಿ ಮೇನೆಯಲ್ಲಿ ನನ್ನನ್ನು ಇಟ್ಟುಕೊಂಡು ನನ್ನ ಮನೆಗೆ ಕರಕೊಂಡು ಹೋಗುತ್ತಿದ್ದನು. ಆ ದಾರಿಗನನ್ನು ಮೇನೆ ಹೊರುವವರನ್ನು ನೀನು ತಿಂದು ಹಾಕಿರುವಿ. ಇಂದ್ರದೇವರ ಖಾಂಡವವನದಲ್ಲಿ ಯಮುನಾ ನದಿಯಿದೆ. ಅದರ ತೀರದಲ್ಲಿ ಇಂದ್ರಪ್ರಸ್ಥವೆಂಬ ಉತ್ತಮವಾದ ತೀರ್ಥವಿದೆ. ಅಲ್ಲಿಯೇ ಬೃಹಸ್ಪತ್ಯಾಚಾರ್ಯರಿಂದ ರಚಿತವಾದ ನಿಗಮೋದ್ಬೋಧಕವೆಂಬ ತೀರ್ಥವಿದೆ. ಅದರ ನೀರು ಈ ಪಾತ್ರೆಯಲ್ಲಿರುವುದು. ಅದನ್ನು ನೀನು ಕುಡಿದವನಾದ ಕಾರಣ ನಿನಗೆ ಪೂರ್ವಸ್ಮರಣೆಯುಂಟಾಯಿತು. ರಾಕ್ಷಸನೇ ! ನಾನು ನಿನ್ನೊಡನೆ ಒಂದು ವಿಷಯವನ್ನು ಕೇಳುತ್ತೇನೆ. ನಿನಗೀಗ ಪೂರ್ವಸ್ಮರಣೆಯುಂಟಾಗಿದೆ. ನೀನು ಯಾವ ಪಾಪವನ್ನು ಮಾಡಿ ರಾಕ್ಷಸನಾಗಿರುವಿ?' ಎಂದು ಕೇಳಿದನು.

ಅದಕ್ಕೆ ರಾಕ್ಷಸನು 'ನಾನು ಪೂರ್ವದಲ್ಲಿ ವೇದಜ್ಞಾನಿಗಳಾದ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದ ಬ್ರಾಹ್ಮಣನಾಗಿದ್ದೆನು. ಆದರೆ ದುರಾಚಾರಿಯಾಗಿದ್ದೆನು. ಅಧರ್ಮಿಷ್ಠನಾಗಿದ್ದೆನು. ನಿತ್ಯವೂ ಚೀಟಾಟವನ್ನು ಆಡಿ ಬಹು ತಂದೆಯ ಹಣವನ್ನು ಹಾಳು ಮಾಡಿದೆನು. ಆಗ ನನ್ನ ತಂದೆಯು ನನ್ನ ವಿಷಯವನ್ನು ರಾಜನೊಡನೆ ತಿಳಿಸಿದನು. ಆಗ ರಾಜಭೃತ್ಯರು ನನ್ನನ್ನು ಊರಿನಿಂದ ಹೊರಗೆ ಮಾಡಿದರು. ಇದರಿಂದ ದರಿದ್ರನಾಗಿ ಒಂದು ಗ್ರಾಮದ ಬಳಿಗೆ ಹೋದೆನು. ಅಲ್ಲಿ ದೇವಕ ಎಂದು ಹೆಸರುಳ್ಳ ಒಬ್ಬ ನನ್ನ ಮಿತ್ರನಾದ ಬ್ರಾಹ್ಮಣನಿದ್ದನು. ಅವನು ನನ್ನನ್ನು ಮನೆಯಲ್ಲಿ ಬಹುದಿವಸ ಆದರಿಸಿದನು. ಅಲ್ಲಿ ನಾನು ವಾಸಮಾಡುತ್ತಾ ಒಂದು ದಿವಸದಲ್ಲಿ ಮಿತ್ರನು ಎಲ್ಲಿಗೋ ಹೋಗಿರಲು ಕಾಮಾತುರನಾಗಿ ರೂಪವತಿಯಾದ ಅವನ ಹೆಂಡತಿಯನ್ನು ಬಲಾತ್ಕಾರದಿಂದ ಭೋಗಿಸಿದೆನು. ಇದರಿಂದ ಅವಳು ಮಹಾವಿಷವನ್ನು ತಿಂದು ಪ್ರಾಣಬಿಟ್ಟಳು. ಅದನ್ನು ನೋಡಿ ನಾನು

ಮಧ್ಯರಾತ್ರಿಯಲ್ಲಿಯೇ ಆ ಮನೆಯನ್ನು ಬಿಟ್ಟು ಓಡಿದೆನು. ಕತ್ತಲೆಯಲ್ಲಿ ಓಡುತ್ತಿದ್ದ ನನ್ನನ್ನು ರಾಜಭೃತ್ಯರು ನೋಡಿ ಕಳ್ಳನೆಂದು ತಿಳಿದುಕೊಂಡು ಖಡ್ಗದಿಂದ ನನ್ನ ತಲೆಯನ್ನು ಕಡಿದುಹಾಕಿದರು. ಯಮದೂತರು ಮೃತನಾದ ನನ್ನನ್ನು ಯಾತನಾದೇಹದಲ್ಲಿ ಪ್ರವೇಶ ಮಾಡಿಸಿ ಯಮದೇವರ ಆಜ್ಞೆಯಿಂದ ಘೋರವಾದ ರೌರವ ಎಂಬ ನರಕದಲ್ಲಿ ಹಾಕಿದರು. ಅಲ್ಲಿ ಅರುವತ್ತು ಸಾವಿರ ವರ್ಷ ತೀವ್ರಯಾತನೆಯನ್ನು ಅನುಭವಿಸಿ ಅದೇ ಪಾಪದಿಂದ ರಾಕ್ಷಸತ್ವವನ್ನು ಹೊಂದಿದೆನು. ಈ ರಾಕ್ಷಸದೇಹದಿಂದ ಬಿಡುಗಡೆಯಾಗುವುದೋ ಆ ಉಪಾಯವನ್ನು ಈ ತೀರ್ಥದ ನೀರು ನನ್ನ ಬಾಯಿಗೆ ಬಂದು ಬೀಳಲಿಕ್ಕೆ ಕಾರಣವನ್ನು ಹೇಳುವೆನು. ನಾನು ಬ್ರಾಹ್ಮಣನಾಗಿರುವ ಜನ್ಮದಲ್ಲಿಯೇ ಮನಸ್ಸಿನಲ್ಲಿ ಇಚ್ಛೆಯಿಲ್ಲದಿದ್ದರೂ ಸಹವಾಸದಿಂದ ಏಕಾದಶೀ ಉಪವಾಸವನ್ನು ಮಾಡಿ ರಾತ್ರಿಯಲ್ಲಿ ಜಾಗರವನ್ನು ಮಾಡಿದೆನು. ದ್ವಾದಶಿಯಲ್ಲಿ ನಾನು ಸ್ನಾನಮಾಡಿ ಭೋಜನ ಮಾಡಲು ಉದ್ಯುಕ್ತನಾಗಲು ನನ್ನ ಮನೆಗೆ ಒಬ್ಬ ವೈಷ್ಣವನು ಬಂದನು. ಊಟಮಾಡುವ ಸಮಯದಲ್ಲಿ ಅವನು ಬಂದನೆಂದು ನಾನು ಕೋಪಿಸಿಕೊಂಡು ಕೆಟ್ಟಮಾತುಗಳನ್ನು ಆಡಿದೆನು. 'ದುರಾಚಾರಿಯೇ! ಡಾಂಭಿಕನೇ! ಹೆಂಗಸರಿರುವಲ್ಲಿಗೆ ಎಲ್ಲಿಗೆ ಬರುತ್ತಿರಿವಿ?' ಎಂದು ಕೇಳಿದೆನು. ಅಷ್ಟು ನಾನು ಹೇಳಲು ಬಹುಮಾನ ಮಾಡಿದರೂ ಅಪಮಾನ ಮಾಡಿದರೂ ಒಂದೇ ವಿಧವಾದ ಸ್ವಭಾವವುಳ್ಳ ಆ ಮಹಾನುಭಾವನು ಒಂದು ಮಾತಾಡದೆ ನನ್ನ ಮನೆಯಿಂದ ಹೊರಗೆ ಹೋದನು. ಆಗ ಎದುರಾಗಿ ಬರುತ್ತಿದ್ದ ಪತಿವ್ರತೆಯಾದ ನನ್ನ ಹೆಂಡತಿಯು ಅವನ ಕಾಲಿಗೆ ಬಿದ್ದು ಮನೆಗೆ ಕರೆದುಕೊಂಡು ಬಂದಳು. ನಾನು ಮೊದಲು ಅವಮಾನ ಮಾಡಿದ್ದರಿಂದಲೂ ಆ ಮಹಾನುಭಾವನಿಗೆ ಕೋಪವುಂಟಾಗಲಿಲ್ಲ. ನನ್ನ ಹೆಂಡತಿಯು ಬಹುಮಾನ ಮಾಡಿದ್ದರಿಂದ ಸಂತೋಷವೂ ಉಂಟಾಗಲಿಲ್ಲ. ಆಮೇಲೆ ಅವಳು ವಿಧಿಪ್ರಕಾರವಾಗಿ ಅವನನ್ನು ಪೂಜಿಸಿ ಆಸನದಲ್ಲಿ ಕೂತುಕೊಳ್ಳಿಸಿ, ನನ್ನೊಡನೆ ಅವರನ್ನು ಭೋಜನ ಮಾಡಿಸಿರಿ ಎಂದು ಹೇಳಿದಳು. ಈರೀತಿಯಾಗಿ ಹೆಂಡತಿಯು ನನ್ನೊಡನೆ ಹೇಳಲು ನಾನು ಮುಖವನ್ನು ಬಾಡಿಸಿಕೊಂಡು 'ಏಳಿರಿ! ಊಟಮಾಡಿರಿ' ಎಂದು ಹೇಳಿ ಹೆಂಡತಿ ಯಿಂದ ಪ್ರೇರಿತನಾಗಿ ಅವನ ಪಾದವನ್ನು ತೊಳೆದು ಆಸನದಲ್ಲಿ ಕೂತುಕೊಳ್ಳಿಸಿದೆನು. ಅವನಿಗೆ ಭೋಜನ ಮಾಡಿಸಿದೆನು. ಅವನು ಇಚ್ಛಾನುಸಾರವಾಗಿ ಭೋಜನ ಮಾಡಿ 'ರಾಮ, ರಾಮ, ಕೃಷ್ಣ ಹರೇ' ಎಂದು ಹೇಳುತ್ತಾ ಹೊರಟುಹೋದನು. ಈರೀತಿ ಯಾಗಿ ನನ್ನ ಹೆಂಡತಿಯಿಂದ ಪ್ರೇರಿತನಾಗಿ ನಾನು ಪೂರ್ವಜನ್ಮದಲ್ಲಿ ಈ ಪುಣ್ಯವನ್ನು

ಮಾಡಿದ್ದ ಕಾರಣ ನನ್ನ ಬಾಯಿಗೆ ಈ ತೀರ್ಥದ ನೀರು ಬಿದ್ದಿತು' ಎಂದನು.

ಈರೀತಿಯಾಗಿ ರಾಕ್ಷಸನು ಹೇಳುತ್ತಿರಲು ಆ ದಾರಿಗನೂ ಮೇನೆಯನ್ನು ಹೊರುತ್ತಿದ್ದವರೂ ದಿವ್ಯದೇಹವುಳ್ಳವರಾಗಿ 'ವೈಶ್ಯಶ್ರೇಷ್ಠನೇ! ನಾವು ಅಪಮೃತ್ಯುವನ್ನು ಹೊಂದಿದವರಾದರೂ ನಿನ್ನ ಅನುಗ್ರಹದಿಂದ ತೀರ್ಥದ ನೀರನ್ನು ಕುಡಿದು ದೇವದೇಹವನ್ನು ಹೊಂದಿರುವೆವು. ನಿನ್ನೊಡನೆ ಹಣದ ಆಸೆಯಿಂದ ಬಂದವರಾದ ಕಾರಣ ನಮಗೆ ಮರಣಕಾಲದಲ್ಲಿಯೂ ಹಣದ ಆಸೆಯು ಹೋಗಲಿಲ್ಲ. ಮರಣಕಾಲದಲ್ಲಿ ಆ ತೀರ್ಥಜಲವು ನಮ್ಮ ಹೊಟ್ಟೆಯಲ್ಲಿ ಇದ್ದ ಕಾರಣ ನಮಗೆ ಕುಬೇರನ ಸ್ನೇಹವು ಲಭಿಸಿದೆ. ನಾವು ನಿನಗೆ ನಮಸ್ಕರಿಸುವೆವು. ಕುಬೇರನ ಭೃತ್ಯರು ತಂದಿರುವ ವಿಮಾನಗಳಲ್ಲಿ ಕೂತುಕೊಂಡು ನಿಗಮೋದ್ಬೋಧಕತೀರ್ಥಕ್ಕೆ ಹೋಗು. ಇವನನ್ನು ಉದ್ಧಾರಮಾಡು' ಎಂದು ಹೇಳಿ ವಿಮಾನಗಳ ಗಂಟೆಗಳಿಂದ ಶಬ್ದಮಾಡುತ್ತಾ ಉತ್ತರದಿಕ್ಕಿಗೆ ಹೋದರು.

ತರುವಾಯ ಶರಭನು ರಾಕ್ಷಸನೊಡನೆ 'ಏಳು! ನನ್ನನ್ನು ಬೇಗನೇ ಆ ತೀರ್ಥಕ್ಕೆ ಕರಕೊಂಡು ಹೋಗು. ಜ್ವರದಿಂದ ಪೀಡಿತನಾದ ನನಗೆ ನಡೆದುಕೊಂಡು ಹೋಗಲಿಕ್ಕೆ ಆಗುವುದಿಲ್ಲ. ಇನ್ನೊಬ್ಬರು ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವವರು ಇಲ್ಲ' ಎಂದು ಹೇಳಿದನು.

ರಾಕ್ಷಸನು 'ಹಾಗೆಯೇ ಆಗಲಿ' ಎಂದು ಅವನನ್ನು ಸಮಾಧಾನಪಡಿಸಿ ಶರಭನನ್ನು ಹೆಗಲಲ್ಲಿ ಹೊತ್ತುಕೊಂಡು ಬೇಗನೇ ಆ ತೀರ್ಥಕ್ಕೆ ಹೋದನು. ಅಲ್ಲಿ ಶರಭನೂ ರಾಕ್ಷಸನೂ ನಿತ್ಯವೂ ಆ ತೀರ್ಥದಲ್ಲಿ ಸ್ನಾನ ಮಾಡುತ್ತಾ ಇದ್ದರು. ತರುವಾಯ ನಾನು ತಂದೆಗೆ ಬಹಳ ಜ್ವರವು ಬರುತ್ತಿರುವುದೆಂಬ ವಿಷಯವನ್ನು ತಿಳಿದು ತಾಯಿಯಿಂದ ಪ್ರೇರಿತನಾಗಿ ಈ ತೀರ್ಥಕ್ಕೆ ಬಂದೆನು. ಇಲ್ಲಿಗೆ ಬಂದು ಮಹಾಜ್ವರದಿಂದ ಪೀಡಿತನಾದ ತಂದೆಯನ್ನು ನೋಡಿ ಶಿರಸಾ ನಮಸ್ಕಾರವನ್ನು ಮಾಡಿದೆನು. ತಂದೆಯು ನನಗೆ ಆಶೀರ್ವಾದವನ್ನು ಮಾಡಿ 'ಮಗನೇ! ನೀನು ಇಷ್ಟು ದೂರಕ್ಕೆ ಯಾಕೆ ಬಂದಿರುವಿ? ಬಂದವನು ಇಲ್ಲಿಯೇ ಕೆಲವು ದಿವಸವಿರು. ನನ್ನ ಮಿತ್ರನಾದ ವಿಕಟ ಎಂಬ ರಾಕ್ಷಸನು ಬರುತ್ತಿರುವನು. ಏಳು. ಅವನ ಪಾದಗಳಿಗೆ ಉದ್ದಕ್ಕೆ ನಮಸ್ಕರಿಸು. ನೀನು ಭಯಪಡಬೇಕಾಗಿಲ್ಲ. ಅವನೀಗ ಯಾರನ್ನೂ ಹಿಂಸಿಸುವುದಿಲ್ಲ. ಈಗ ನನ್ನ ಬಳಿಯಲ್ಲಿಯೇ ಇರುತ್ತಿರುವನು' ಎಂದು ಹೇಳಿದನು. ಈರೀತಿಯಾಗಿ ಶರಭನು ಹೇಳಲು ನಾನು ಎದ್ದು ಆ ರಾಕ್ಷಸನ ಕಾಲುಗಳಿಗೆ ಉದ್ದಕ್ಕೆ ಬಿದ್ದೆನು. ಆಗ ಅವನು 'ಎಲಾ! ನೀನು ತಂದೆಯ ಜ್ವರಪೀಡೆಯನ್ನು ಕೇಳಿ ಇಲ್ಲಿಗೆ

ಬಂದಿರುವಿ. ಭಾಗ್ಯವಂತನಾಗಿರುವಿ. ಈ ತೀರ್ಥದಲ್ಲಿ ತಿಲೋದಕವನ್ನು ಬಿಟ್ಟು ತಂದೆಯ ಋಣವನ್ನು ಪರಿಹರಿಸಿಕೊಳ್ಳುವಿ. ಈ ತೀರ್ಥದಲ್ಲಿ ಸ್ನಾನಮಾಡಿ ನಿತ್ಯಕರ್ಮವನ್ನು ಮಾಡು. ಪೂರ್ವಜನ್ಮದ ಸ್ಮರಣೆಯು ಬರುವುದು' ಎಂದು ಹೇಳಿದನು. ಎಬ್ಬಿಸಿ ಗಾಢಾಲಿಂಗನವನ್ನು ಮಾಡಿದನು. 'ಮಿತ್ರಪುತ್ರನೇ' ಎಂದು ಸಂಬೋಧಿಸಿದನು.

ತರುವಾಯ ನಾನು ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಪೂರ್ವಜನ್ಮದಲ್ಲಿ ಮಾಡಿದ ಶುಭಾಶುಭದ ಸ್ಮರಣೆಯುಳ್ಳವನಾದೆನು. ತರುವಾಯ ತಂದೆಯ ಬಳಿಗೆ ಬಂದು ತಂದೆಯೊಡನೆ ಈ ರಾಕ್ಷಸನು ಧರ್ಮಬುದ್ಧಿಯುಳ್ಳವನಾಗಿರಲು ಕಾರಣ ವೇನೆಂದು ಕೇಳಿದೆನು. ತಂದೆಯು ಹೇಳಿದ ಆ ರಾಕ್ಷಸನ ವೃತ್ತಾಂತವನ್ನು ಆ ದಾರಿಗನ ಮೇನೆ ಹೊರುವವರ ವೃತ್ತಾಂತವನ್ನು ಕೇಳಿ ತೀರ್ಥವನ್ನು ಸ್ತೋತ್ರ ಮಾಡಿದೆನು. ತಂದೆಗೆ ಜ್ವರವು ಪರಿಹೃತವಾದ ಮೇಲೆ ಮನೆಗೆ ಹೋಗುವೆನೆಂದು ಅಲ್ಲಿಯೇ ಹತ್ತು ದಿವಸ ವಾಸಮಾಡಿದೆನು. ಹತ್ತುದಿವಸದ ಮಧ್ಯದಲ್ಲಿಯೇ ತೀರ್ಥದಲ್ಲಿ ನೀರಿನ ಮಧ್ಯದಲ್ಲಿ ನನ್ನ ತಂದೆಯು ಮರಣವನ್ನು ಹೊಂದಿದನು. ತರುವಾಯ ಗರುಡಾರೂಢನಾಗಿ ಪರಮಾತ್ಮನು ಅಲ್ಲಿಗೆ ಬಂದನು. ಬ್ರಹ್ಮಾದಿದೇವತೆಗಳೂ ಗಂಧರ್ವಾದಿಗಳೂ ಬಂದಿದ್ದರು. ಭಗವಂತನು ನನ್ನ ತಂದೆಗೆ ಸಾರೂಪ್ಯವನ್ನು ಕೊಟ್ಟು ವೈಕುಂಠಲೋಕಕ್ಕೆ ಕರೆದುಕೊಂಡು ಹೋದನು. ಆ ಪ್ರಕಾರವಾದ ತೀರ್ಥದ ಮಹಿಮೆಯನ್ನು ನೋಡಿ ನಾನು 'ಮನೆ ಹಣ ಇತ್ಯಾದಿಗಳ ಆಸೆಯಿಂದ ಹೋಗಬಾರದು. ತಂದೆಯು ಮಾಡಿದ ಆಶ್ರಮದಲ್ಲಿಯೇ ಸಾಯುವವರೆಗೆ ಇರಬೇಕು' ಎಂದು ಯೋಚಿಸಿ, ತಂದೆಗೆ ದಿನವಾರವನ್ನು ಮಾಡಿ ಆ ರಾಕ್ಷಸನಿಂದ ಸಹಿತನಾಗಿ ನಾನು ಅಲ್ಲಿಯೇ ಇದ್ದೆನು.



# ಶಿವಶರ್ಮನ ಕಥಾಶೇಷವು

ಒಂದು ದಿನದಲ್ಲಿ ಆ ಮಹಾತೀರ್ಥದಲ್ಲಿ ಕೆಸರಿನಲ್ಲಿ ಒಂದು ದನವು ಮುಳುಗಿ ಹೋದದ್ದನ್ನು ನೋಡಿ 'ಗೋವನ್ನು ರಕ್ಷಿಸಿದರೆ ಮಹಾಧರ್ಮವು ಬರುವುದು. ಗೋರಕ್ಷಣೆ ಮಾಡಿದವನಿಗೆ ಸ್ವರ್ಗವು ಉಂಟಾಗುವುದು' ಎಂದು ಯೋಚಿಸಿ ಅಲ್ಲಿಗೆ ಇಳಿದು ಹೋಗಲು ಒಂದು ನೀರಿನ ಆನೆಯು ಅವನ ಕಾಲನ್ನು ಹಿಡಿದು ನೀರಿನ ಮಧ್ಯಕ್ಕೆ ಎಳೆದುಕೊಂಡು ಹೋಯಿತು. ರಾಕ್ಷಸನು ಅಲ್ಲಿ ಪ್ರಾಣವನ್ನು ಬಿಟ್ಟನು. ಆಗಲೇ ದಿವ್ಯರೂಪವುಳ್ಳವನಾಗಿ ವಿಮಾನದಲ್ಲಿ ಕೂತುಕೊಂಡು ಇಂದ್ರಾದಿ ದೇವತೆಗಳಿಂದ ಕೂಡಿಕೊಂಡು ಸ್ವರ್ಗಕ್ಕೆ ಹೋಗುತ್ತಿದ್ದನು. ಅವನನ್ನು ನಾನು ನೋಡಿ 'ನೀನು ಮೋಕ್ಷಕ್ಕೆ ಕಾರಣವಾದ ಈ ತೀರ್ಥದಲ್ಲಿ ಮೃತನಾಗಿ ಸ್ವರ್ಗಕ್ಕೆ ಯಾಕೆ ಹೋಗುತ್ತಿರುವೆ?' ಎಂದು ಕೇಳಿದೆನು. ಅದಕ್ಕೆ ರಾಕ್ಷಸನು 'ನನಗೆ ಸ್ವರ್ಗದಲ್ಲಿ ಆಸೆಯಾಯಿತು. ಆದುದರಿಂದ ಸ್ವರ್ಗಕ್ಕೆ ಹೋಗುತ್ತಿರುವೆನು' ಎಂದು ಹೇಳಿ ಹೊರಟುಹೋದನು. ತರುವಾಯ ನಾನೊಬ್ಬನೇ ಭಗವಂತನನ್ನು ಪ್ರಾರ್ಥಿಸುತ್ತಾ ಅಲ್ಲಿ ವಾಸಮಾಡುತ್ತಿದ್ದೆನು' ಎಂದು ಶಿವಶರ್ಮನು ಹೇಳಿದನು.

ಅದನ್ನು ಕೇಳಿ ವಿಷ್ಣುಶರ್ಮನು 'ನೀನು ಇಲ್ಲಿಯೇ ವಾಸಮಾಡುತ್ತಿದ್ದು ಆ ಮಹಾತೀರ್ಥದಲ್ಲಿಯೇ ಪ್ರಾಣಗಳನ್ನು ಬಿಟ್ಟವನಾದರೆ ಪುನಃ ಜನ್ಮವನ್ನು ಹೇಗೆ ಹೊಂದಿರುವಿ ಎಂದು ಸಂದೇಹವು ಬರುತ್ತದೆ. ತೀರ್ಥಸ್ಥಳವನ್ನು ದಾಟಿಹೋಗಿ ಧನಲೋಭದಿಂದ ಯುಕ್ತನಾದ ಆ ದಾರಿಗನೂ ಮೇನೆ ಹೊರುವವರೂ ಕೂಡ ಮೋಕ್ಷವನ್ನು ಹೊಂದಿದರು. ಅವರು ಬರೇ ಈ ತೀರ್ಥದ ನೀರನ್ನು ಕುಡಿದ ಮಾತ್ರದಿಂದಲೇ ಉತ್ತಮಲೋಕವನ್ನು ಹೊಂದಿದರು. ಹಾಗೆಯೇ ರಾಕ್ಷಸನೂ ಈ ನೀರಿನಲ್ಲಿ ಮುಳುಗಿ ಸಾಯುವವನಾಗಿ ಸ್ವರ್ಗಕ್ಕೆ ಹೋದನು. ಆದುದರಿಂದ ನೀನು ಪುನಃ ಹುಟ್ಟಿರುವಿಯಾದ ಕಾರಣ ಈ ತೀರ್ಥದ ತೀರದಲ್ಲಿಯೇ ಮರಣವನ್ನು ಹೊಂದಿಲ್ಲವೆಂದು ಕಾಣುತ್ತದೆ' ಎಂದು ಹೇಳಿದನು.

ಆಗ ಶಿವಶರ್ಮನು 'ವಿಷ್ಣುಶರ್ಮನೇ! ನಾನು ಪುನಃ ಹುಟ್ಟಲಿಕ್ಕೆ ಕಾರಣವನ್ನು ಹೇಳುತ್ತೇನೆ. ಕೇಳು. ಒಂದು ದಿವಸದಲ್ಲಿ ನಾನು ಪರಮಾತ್ಮನನ್ನು ಪೂಜಿಸಿ ಧ್ಯಾನ ಮಾಡುತ್ತಿರಲು ದುರ್ವಾಸರು ನನ್ನ ಆಶ್ರಮಕ್ಕೆ ಬಂದರು. ಅವರು ಬಂದದ್ದು ತಿಳಿಯದೆ ನಾನು ಹಾಗೆಯೇ ಧ್ಯಾನ ಮಾಡುತ್ತಾ ಇದ್ದೆನು. ಇದರಿಂದ ಬಹಳವಾಗಿ

1. ಪ. ಇದೂ ತೀರ್ಥಕ್ಷೇತ್ರ ಮಹಿಮೆಯಲ್ಲಿ ಸೇರಲು ಅರ್ಹವಾಗಿದೆ.

ಕೋಪವುಳ್ಳವರಾಗಿ ನನ್ನನ್ನು ಎಬ್ಬಿಸಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು 'ನನ್ನನ್ನು ಅವಮಾನ ಮಾಡಿದಿಯಾದ ಕಾರಣ ನೀನು ಧ್ಯಾನ ಮಾಡುವಾಗ ನೀನು ಅಪೇಕ್ಷಿಸಿದ ಫಲವು ಈ ಜನ್ಮದಲ್ಲಿ ಸರ್ವಥಾ ಆಗದೆ ಇರಲಿ' ಎಂದು ಶಾಪವನ್ನು ಕೊಟ್ಟು ಹೊರಟುಹೋದರು. ಆಗ ನಾನು ಭಯವುಳ್ಳವನಾಗಿ ಅವರ ಎರಡು ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕ್ಷಮಾ ಕೇಳಿಕೊಂಡೆನು. ತರುವಾಯ ದುರ್ವಾಸರು ಶಾಂತರಾಗಿ 'ನೀನು ಬ್ರಾಹ್ಮಣಶ್ರೇಷ್ಠನಾಗಿ ಹುಟ್ಟಿ ಇಲ್ಲಿಯೇ ಮರಣವನ್ನು ಹೊಂದಿ ಆಮೇಲೆ ಮರಣವನ್ನು ಹೊಂದಲಾರೆ ಎಂದು ಅನುಗ್ರಹಿಸಿ ಆ ದಿನದಲ್ಲಿ ನನ್ನಿಂದ ಸತ್ಕೃತರಾಗಿ ವಾಸಮಾಡಿ ಹೊರಟುಹೋದರು. ತರುವಾಯ ಮುನಿಗಳ ಮಾತು ಸುಳ್ಳಾಗಲಾರದು ಎಂದು ಯೋಚಿಸಿ ನನಗೆ ಈ ಜನ್ಮದಲ್ಲಿ ಮೋಕ್ಷವಿಲ್ಲದಾಯಿತಲ್ಲಾ ಎಂದು ಪಶ್ಚಾತ್ತಾಪವನ್ನು ಪಡುತ್ತಾ ಮನೆಗೆ ಹೋದವನಾಗಿ ತಾಯಿಯೊಡನೆಯೂ ಬಂಧುಗಳೊಡನೆಯೂ ತಂದೆಯ ಮರಣವನ್ನು ತಿಳಿಸಿದೆನು. ಕೇಳಿ ಅವರೆಲ್ಲರೂ ದುಃಖವನ್ನು ಹೊಂದಿದರು. ನಾನು ವೈರಾಗ್ಯವುಳ್ಳವನಾಗಿ ಗಂಗಾತೀರದಲ್ಲಿ ಮರಣವನ್ನು ಹೊಂದಿದವನಾಗಿ ದುರ್ವಾಸಮುನಿಗಳ ಶಾಪದಿಂದ ವೈಷ್ಣವಕುಲದಲ್ಲಿ ಹುಟ್ಟಿದೆನು. ಇನ್ನು ಮುಂದೆ ಈ ತೀರ್ಥದಲ್ಲಿಯೇ ಮರಣವನ್ನು ಹೊಂದಿ ಉತ್ತಮಲೋಕವನ್ನು ಹೊಂದುವೆನು' ಎಂದು ಹೇಳಿದನು.

ತರುವಾಯ ಅವರಿಬ್ಬರೂ ಅಲ್ಲಿಯೇ ವಾಸಮಾಡುವವರಾಗಿ ಕೊನೆಗೆ ದೇಹಪರಿತ್ಯಾಗವನ್ನು ಮಾಡಿ ಪರಮಸಾರೂಪ್ಯವನ್ನು ಹೊಂದಿದರು. ಆದುದರಿಂದ **ನಿಗಮದ್ಬೋಧಕವೆಂಬ** ತೀರ್ಥವು ಅತ್ಯಂತ ಪ್ರಶಸ್ತವಾದದ್ದು.



## ವಿಮಲನ ಕಥೆಯು [1]

ಹಿಮವತ್ಪರ್ವತದ ಪ್ರದೇಶದಲ್ಲಿ ದೇವ ಋಷಿ ಪಿತೃ ಅಗ್ನಿಗಳನ್ನು ಪೂಜಿಸುವವನಾದ ಅತಿಥಿಪೂಜಕನಾದ ಪರಮಾತ್ಮನ ಪೂಜೆಯಲ್ಲಿ ಆಸಕ್ತನಾದ ವೇದವೇದಾಂಗ ಶಾಸ್ತ್ರಗಳನ್ನು ತಿಳಿದವನಾದ ಪರಮಾತ್ಮನ ಗುಣಗಳನ್ನು ಶ್ರವಣ ಮಾಡುವುದರಲ್ಲಿಯೇ ಆಸಕ್ತನಾಗಿದ್ದ ವಿಮಲ ಎಂದು ಹೆಸರುಳ್ಳ ಬ್ರಾಹ್ಮಣನೊಬ್ಬನಿದ್ದನು. ಅವನಿಗೆ ಮುದಿತನದಲ್ಲಿ ಪರಮಾತ್ಮನ ಅನುಗ್ರಹದಿಂದ ಒಬ್ಬ ಮಗನು ಹುಟ್ಟಿದನು. ಅವನಿಗೆ

1. ಪ.ಪು. ಉ.ಖಂ. ಅ.203, 204

ಹರಿದತ್ತ ಎಂದು ನಾಮಕರಣವನ್ನು ಮಾಡಿದನು. ಅವನಿಗೆ ತಂದೆಯು ವಿಧಿ ಪ್ರಕಾರವಾಗಿ ಚೌಲಾದಿಗಳನ್ನು ಮಾಡಿಸಿದನು. ಹರಿದತ್ತನು ಗುರುಗಳಿಂದ ವೇದಾಧ್ಯಯನವನ್ನು ಮಾಡಿದನು. ಆಮೇಲೆ ಗುರುಗಳಿಗೆ ದಕ್ಷಿಣೆಯನ್ನು ಕೊಟ್ಟು ವೈರಾಗ್ಯವುಳ್ಳವನಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಿದನು. ಅದನ್ನು ತಿಳಿದು ಅವನ ತಾಯಿಯು ದುಃಖದಿಂದ ಬಹಳವಾಗಿ ವಿಲಾಪವನ್ನು ಮಾಡಿ ಕೆಳಗೆ ಬಿದ್ದಳು. ಆಗ ಅಲ್ಲಿಗೆ ವಿಮಲನು ಬಂದನು. ಭೂಮಿಯಲ್ಲಿ ಬಿದ್ದಿದ್ದ ಹೆಂಡತಿಯನ್ನು ನೋಡಿ 'ಏನು! ಏನು?' ಎಂದು ಕೇಳಿದನು. 'ಯಾಕೆ ಇವಳು ಹೀಗೆ ಇಲ್ಲಿ ಬಿದ್ದಿರುವಳು?' ಎಂದು ಕೇಳಿದನು. ಆಗ ಅವಳ ಸಖಿಯರು 'ನಿಮ್ಮ ಮಗನು ವೇದಾಧ್ಯಯನ ಮಾಡಿ ಗುರುದಕ್ಷಿಣೆ ಕೊಟ್ಟು ಸನ್ಯಾಸವನ್ನು ಸ್ವೀಕರಿಸಿರುವನು. ಅವನ ವಿಯೋಗ ದುಃಖದಿಂದ ಇವಳು ಭೂಮಿಯಲ್ಲಿ ಬಿದ್ದಿರುವಳು' ಎಂದರು.

ಅದನ್ನು ಕೇಳಿ ಬುದ್ಧಿವಂತನಾದ ವಿಮಲನು ಹೆಂಡತಿಗೆ ಸಮಾಧಾನವನ್ನು ಹೇಳಿದನು. 'ಏಳು. ನನ್ನ ಮಾತನ್ನು ಕೇಳು. ಯಾಕೆ ಕೆಳಗೆ ಬಿದ್ದುಕೊಂಡು ಅಳುತ್ತಿರುವಿ? ಯಾವ ಮಗನು ನಮ್ಮ ವಂಶವನ್ನು ಉದ್ಧರಿಸುವವನಾಗುವನೋ ಅಂತಹ ಮಗನನ್ನು ಪಡೆದ ನೀನು ಪರಮಧನ್ಯಳು' ಇತ್ಯಾದಿ ರೀತಿಯಾಗಿ ಸಮಾಧಾನ ಮಾತನ್ನು ಹೇಳಲು ಅವನ ಹೆಂಡತಿಯು ಭೂಮಿಯಿಂದ ಏಳುವವಳಾಗಿ 'ಪ್ರಿಯರೇ! ನಾನೆಲ್ಲವನ್ನೂ ತಿಳಿದಿರುವೆನು. ಆದರೆ ಕುಲವನ್ನು ಉದ್ಧರಿಸುವ ಮಗನನ್ನು ಕಾಣೆನಷ್ಟೆ! ಮಗನಿದ್ದರೆ ಮಹಾತೀರ್ಥಕ್ಕೆ ಹೋಗಬೇಕಾಗಿಲ್ಲ. ಮನೆಯಲ್ಲಿಯೇ ಮೃತ್ಯುವುಂಟಾದರೂ ಎರಡು ಲೋಕಗಳಲ್ಲಿಯೂ ಸುಖ ವಿರುವುದು. ಆದುದರಿಂದ ಸತ್ಪುತ್ರರನ್ನು ಪಡೆಯಲಿಕ್ಕೆ ಪ್ರಯತ್ನವನ್ನು ಮಾಡಬೇಕು. ಸತ್ಪುತ್ರರು ತಂದೆಯರನ್ನು ಸಂಸಾರ ಸಮುದ್ರದಿಂದ ದಾಟಿಸುತ್ತಾರೆ. ಆದುದರಿಂದ ಕುಲವನ್ನು ಉದ್ಧರಿಸುವ ಉತ್ತಮ ಪುತ್ರನನ್ನು ಪಡೆಯುವುದಕ್ಕಾಗಿ ಬ್ರಹ್ಮದೇವರನ್ನು ಸೇವಿಸಿರಿ' ಎಂದು ಹೇಳಿದಳು.

ಅದನ್ನು ಕೇಳಿ ವಿಮಲನು 'ನಾನು ಮಗನನ್ನು ಪಡೆಯುವುದಕ್ಕಾಗಿ ಬ್ರಹ್ಮದೇವರ ಕ್ಷೇತ್ರವಾದ ಪ್ರಯಾಗಕ್ಕೆ ಹೋಗುವೆನು' ಎಂದು ಹೇಳಿ ಮನೆಯಿಂದ ಹೊರಟು ಹರಿದ್ವಾರಕ್ಕೆ ಹೋದನು. ಅಲ್ಲಿ ಸ್ನಾನಮಾಡಿ ಇಂದ್ರಪ್ರಸ್ಥಕ್ಕೆ ಹೋದನು. ಅವನು ಕೆಲವು ದಿವಸ ಸ್ನಾನ ಮಾಡಿಕೊಂಡು ಇದ್ದನು. ಒಂದು ದಿವಸದಲ್ಲಿ ಸಾಯಂಕಾಲದಲ್ಲಿ ಸ್ನಾನಮಾಡಿ ಭೋಜನ ಮಾಡಿ ರಾತ್ರಿಯಲ್ಲಿ ಯಮುನಾತೀರದಲ್ಲಿ ಮಲಗಿದ್ದನು. ಮಧ್ಯರಾತ್ರಿಯಲ್ಲಿ ಅವನು ಮಲಗಿರಲು ಬ್ರಹ್ಮದೇವರು ತೀರ್ಥಾಭಿಮಾನಿಗಳಿಂದ

ಕೋಪವುಳ್ಳವರಾಗಿ ನನ್ನನ್ನು ಎಬ್ಬಿಸಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು 'ನನ್ನನ್ನು ಅವಮಾನ ಮಾಡಿದಿಯಾದ ಕಾರಣ ನೀನು ಧ್ಯಾನ ಮಾಡುವಾಗ ನೀನು ಅಪೇಕ್ಷಿಸಿದ ಫಲವು ಈ ಜನ್ಮದಲ್ಲಿ ಸರ್ವಥಾ ಆಗದೆ ಇರಲಿ' ಎಂದು ಶಾಪವನ್ನು ಕೊಟ್ಟು ಹೊರಟುಹೋದರು. ಆಗ ನಾನು ಭಯವುಳ್ಳವನಾಗಿ ಅವರ ಎರಡು ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕ್ಷಮಾ ಕೇಳಿಕೊಂಡೆನು. ತರುವಾಯ ದುರ್ವಾಸರು ಶಾಂತರಾಗಿ 'ನೀನು ಬ್ರಾಹ್ಮಣಶ್ರೇಷ್ಠನಾಗಿ ಹುಟ್ಟಿ ಇಲ್ಲಿಯೇ ಮರಣವನ್ನು ಹೊಂದಿ ಆಮೇಲೆ ಮರಣವನ್ನು ಹೊಂದಲಾರೆ ಎಂದು ಅನುಗ್ರಹಿಸಿ ಆ ದಿನದಲ್ಲಿ ನನ್ನಿಂದ ಸತ್ಕೃತರಾಗಿ ವಾಸಮಾಡಿ ಹೊರಟುಹೋದರು. ತರುವಾಯ ಮುನಿಗಳ ಮಾತು ಸುಳ್ಳಾಗಲಾರದು ಎಂದು ಯೋಚಿಸಿ ನನಗೆ ಈ ಜನ್ಮದಲ್ಲಿ ಮೋಕ್ಷವಿಲ್ಲದಾಯಿತಲ್ಲಾ ಎಂದು ಪಶ್ಚಾತ್ತಾಪವನ್ನು ಪಡುತ್ತಾ ಮನೆಗೆ ಹೋದವನಾಗಿ ತಾಯಿಯೊಡನೆಯೂ ಬಂಧುಗಳೊಡನೆಯೂ ತಂದೆಯ ಮರಣವನ್ನು ತಿಳಿಸಿದೆನು. ಕೇಳಿ ಅವರೆಲ್ಲರೂ ದುಃಖವನ್ನು ಹೊಂದಿದರು. ನಾನು ವೈರಾಗ್ಯವುಳ್ಳವನಾಗಿ ಗಂಗಾತೀರದಲ್ಲಿ ಮರಣವನ್ನು ಹೊಂದಿದವನಾಗಿ ದುರ್ವಾಸಮುನಿಗಳ ಶಾಪದಿಂದ ವೈಷ್ಣವಕುಲದಲ್ಲಿ ಹುಟ್ಟಿದೆನು. ಇನ್ನು ಮುಂದೆ ಈ ತೀರ್ಥದಲ್ಲಿಯೇ ಮರಣವನ್ನು ಹೊಂದಿ ಉತ್ತಮಲೋಕವನ್ನು ಹೊಂದುವೆನು' ಎಂದು ಹೇಳಿದನು.

ತರುವಾಯ ಅವರಿಬ್ಬರೂ ಅಲ್ಲಿಯೇ ವಾಸಮಾಡುವವರಾಗಿ ಕೊನೆಗೆ ದೇಹಪರಿತ್ಯಾಗವನ್ನು ಮಾಡಿ ಪರಮಸಾರೂಪ್ಯವನ್ನು ಹೊಂದಿದರು. ಆದುದರಿಂದ **ನಿಗಮದ್ಬೋಧಕ**ವೆಂಬ ತೀರ್ಥವು ಅತ್ಯಂತ ಪ್ರಶಸ್ತವಾದದ್ದು.



## ವಿಮಲನ ಕಥೆಯು [1]

ಹಿಮವತ್ಪರ್ವತದ ಪ್ರದೇಶದಲ್ಲಿ ದೇವ ಋಷಿ ಪಿತೃ ಅಗ್ನಿಗಳನ್ನು ಪೂಜಿಸುವವನಾದ ಅತಿಥಿಪೂಜಕನಾದ ಪರಮಾತ್ಮನ ಪೂಜೆಯಲ್ಲಿ ಆಸಕ್ತನಾದ ವೇದವೇದಾಂಗ ಶಾಸ್ತ್ರಗಳನ್ನು ತಿಳಿದವನಾದ ಪರಮಾತ್ಮನ ಗುಣಗಳನ್ನು ಶ್ರವಣ ಮಾಡುವುದರಲ್ಲಿಯೇ ಆಸಕ್ತನಾಗಿದ್ದ ವಿಮಲ ಎಂದು ಹೆಸರುಳ್ಳ ಬ್ರಾಹ್ಮಣನೊಬ್ಬನಿದ್ದನು. ಅವನಿಗೆ ಮುದಿತನದಲ್ಲಿ ಪರಮಾತ್ಮನ ಅನುಗ್ರಹದಿಂದ ಒಬ್ಬ ಮಗನು ಹುಟ್ಟಿದನು. ಅವನಿಗೆ

1. ಪ.ಪು. ಉ.ಖಂ. ಅ.203, 204

ಹರಿದತ್ತ ಎಂದು ನಾಮಕರಣವನ್ನು ಮಾಡಿದನು. ಅವನಿಗೆ ತಂದೆಯು ವಿಧಿ ಪ್ರಕಾರವಾಗಿ ಚೌಲಾದಿಗಳನ್ನು ಮಾಡಿಸಿದನು. ಹರಿದತ್ತನು ಗುರುಗಳಿಂದ ವೇದಾಧ್ಯಯನವನ್ನು ಮಾಡಿದನು. ಆಮೇಲೆ ಗುರುಗಳಿಗೆ ದಕ್ಷಿಣೆಯನ್ನು ಕೊಟ್ಟು ವೈರಾಗ್ಯವುಳ್ಳವನಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಿದನು. ಅದನ್ನು ತಿಳಿದು ಅವನ ತಾಯಿಯು ದುಃಖದಿಂದ ಬಹಳವಾಗಿ ವಿಲಾಪವನ್ನು ಮಾಡಿ ಕೆಳಗೆ ಬಿದ್ದಳು. ಆಗ ಅಲ್ಲಿಗೆ ವಿಮಲನು ಬಂದನು. ಭೂಮಿಯಲ್ಲಿ ಬಿದ್ದಿದ್ದ ಹೆಂಡತಿಯನ್ನು ನೋಡಿ 'ಏನು! ಏನು?' ಎಂದು ಕೇಳಿದನು. 'ಯಾಕೆ ಇವಳು ಹೀಗೆ ಇಲ್ಲಿ ಬಿದ್ದಿರುವಳು?' ಎಂದು ಕೇಳಿದನು. ಆಗ ಅವಳ ಸಖಿಯರು 'ನಿಮ್ಮ ಮಗನು ವೇದಾಧ್ಯಯನ ಮಾಡಿ ಗುರುದಕ್ಷಿಣೆ ಕೊಟ್ಟು ಸನ್ಯಾಸವನ್ನು ಸ್ವೀಕರಿಸಿರುವನು. ಅವನ ವಿಯೋಗ ದುಃಖದಿಂದ ಇವಳು ಭೂಮಿಯಲ್ಲಿ ಬಿದ್ದಿರುವಳು' ಎಂದರು.

ಅದನ್ನು ಕೇಳಿ ಬುದ್ಧಿವಂತನಾದ ವಿಮಲನು ಹೆಂಡತಿಗೆ ಸಮಾಧಾನವನ್ನು ಹೇಳಿದನು. 'ಏಳು. ನನ್ನ ಮಾತನ್ನು ಕೇಳು. ಯಾಕೆ ಕೆಳಗೆ ಬಿದ್ದುಕೊಂಡು ಅಳುತ್ತಿರುವಿ? ಯಾವ ಮಗನು ನಮ್ಮ ವಂಶವನ್ನು ಉದ್ಧರಿಸುವವನಾಗುವನೋ ಅಂತಹ ಮಗನನ್ನು ಪಡೆದ ನೀನು ಪರಮಧನ್ಯಳು' ಇತ್ಯಾದಿ ರೀತಿಯಾಗಿ ಸಮಾಧಾನ ಮಾತನ್ನು ಹೇಳಲು ಅವನ ಹೆಂಡತಿಯು ಭೂಮಿಯಿಂದ ಏಳುವವಳಾಗಿ 'ಪ್ರಿಯರೇ! ನಾನೆಲ್ಲವನ್ನೂ ತಿಳಿದಿರುವೆನು. ಆದರೆ ಕುಲವನ್ನು ಉದ್ಧರಿಸುವ ಮಗನನ್ನು ಕಾಣೆನಷ್ಟೆ! ಮಗನಿದ್ದರೆ ಮಹಾತೀರ್ಥಕ್ಕೆ ಹೋಗಬೇಕಾಗಿಲ್ಲ. ಮನೆಯಲ್ಲಿಯೇ ಮೃತ್ಯುವುಂಟಾದರೂ ಎರಡು ಲೋಕಗಳಲ್ಲಿಯೂ ಸುಖ ವಿರುವುದು. ಆದುದರಿಂದ ಸತ್ಪುತ್ರರನ್ನು ಪಡೆಯಲಿಕ್ಕೆ ಪ್ರಯತ್ನವನ್ನು ಮಾಡಬೇಕು. ಸತ್ಪುತ್ರರು ತಂದೆಯರನ್ನು ಸಂಸಾರ ಸಮುದ್ರದಿಂದ ದಾಟಿಸುತ್ತಾರೆ. ಆದುದರಿಂದ ಕುಲವನ್ನು ಉದ್ಧರಿಸುವ ಉತ್ತಮ ಪುತ್ರನನ್ನು ಪಡೆಯುವುದಕ್ಕಾಗಿ ಬ್ರಹ್ಮದೇವರನ್ನು ಸೇವಿಸಿರಿ' ಎಂದು ಹೇಳಿದಳು.

ಅದನ್ನು ಕೇಳಿ ವಿಮಲನು 'ನಾನು ಮಗನನ್ನು ಪಡೆಯುವುದಕ್ಕಾಗಿ ಬ್ರಹ್ಮದೇವರ ಕ್ಷೇತ್ರವಾದ ಪ್ರಯಾಗಕ್ಕೆ ಹೋಗುವೆನು' ಎಂದು ಹೇಳಿ ಮನೆಯಿಂದ ಹೊರಟು ಹರಿದ್ವಾರಕ್ಕೆ ಹೋದನು. ಅಲ್ಲಿ ಸ್ನಾನಮಾಡಿ ಇಂದ್ರಪ್ರಸ್ಥಕ್ಕೆ ಹೋದನು. ಅವನು ಕೆಲವು ದಿವಸ ಸ್ನಾನ ಮಾಡಿಕೊಂಡು ಇದ್ದನು. ಒಂದು ದಿವಸದಲ್ಲಿ ಸಾಯಂಕಾಲದಲ್ಲಿ ಸ್ನಾನಮಾಡಿ ಭೋಜನ ಮಾಡಿ ರಾತ್ರಿಯಲ್ಲಿ ಯಮುನಾತೀರದಲ್ಲಿ ಮಲಗಿದ್ದನು. ಮಧ್ಯರಾತ್ರಿಯಲ್ಲಿ ಅವನು ಮಲಗಿರಲು ಬ್ರಹ್ಮದೇವರು ತೀರ್ಥಾಭಿಮಾನಿಗಳಿಂದ

ಅನುಸರಿಸಲ್ಪಟ್ಟವರಾಗಿ ಹಂಸದ ಮೇಲೆ ಕೂತುಕೊಂಡು ವಿಮಲನ ಸಮೀಪಕ್ಕೆ ಬಂದು ಎಬ್ಬಿಸಿ 'ನಿನ್ನ ಮನಸ್ಸಿನ ಅಭಿಲಾಷೆಯನ್ನು ನಾನು ತಿಳಿದಿರುವೆನು. ಆದರೆ ಅದನ್ನು ಪೂರೈಸಲು ಸಾಧ್ಯವಿಲ್ಲ. ಯಾಕೆಂದರೆ ಹೇಳುತ್ತೇನೆ. ಒಂದು ಸಮಯದಲ್ಲಿ ಮೇರುಪರ್ವತದ ಶಿಖರದಲ್ಲಿ ನನ್ನಿಂದಲೂ ರುದ್ರನಿಂದಲೂ ಸಹಿತರಾಗಿ ಎಲ್ಲಾ ದೇವತೆಗಳೂ ಪರಮಾತ್ಮನನ್ನು ಸ್ತುತಿಸಿದರು. ಆಗ ಪರಮಾತ್ಮನು ಪ್ರಸನ್ನನಾಗಿ ವರವನ್ನು ಕೇಳಿಕೊಳ್ಳಿರಿ ಎಂದು ಹೇಳಿದನು.

ತರುವಾಯ ದೇವತೆಗಳು ತಮತಮಗೆ ಬೇಕಾದ ವರವನ್ನು ಪರಮಾತ್ಮನಿಂದ ಪಡೆಯುವವರಾಗಿ ತಮ್ಮತಮ್ಮ ಸ್ಥಾನಕ್ಕೆ ಹೋದರು. ನಾನು ಭಗವಂತನೊಡನೆ 'ಪ್ರಯಾಗವೆಂಬ ಹೆಸರುಳ್ಳ ನನ್ನ ಕ್ಷೇತ್ರವು ಸರ್ವಾಭೀಷ್ಟಪ್ರದವಾಗಿರುವುದು. ಅದಕ್ಕೆ ಎರಡನೆಯದಾದ ಅದಕ್ಕೆ ನೂರುಪಾಲು ಅಧಿಕವಾದ ತೀರ್ಥವು ಇಂದ್ರಪ್ರಸ್ಥದಲ್ಲಿ ಆಗಲಿ' ಎಂದು ಹೇಳಿದನು. ಅದನ್ನು ಕೇಳಿ ಪರಮಾತ್ಮನು 'ಇಂದ್ರನ ಖಾಂಡವವನದಲ್ಲಿ ಇಂದ್ರಪ್ರಸ್ಥವೆಂಬ ಕ್ಷೇತ್ರವಿದೆ. ಅದು ಯಮುನಾತೀರದಲ್ಲಿ ಇದೆ. ಅಲ್ಲಿ ಮೃತರಾದವರು ಉತ್ತಮಗತಿಯನ್ನು ಹೊಂದು ವರು. ಅಲ್ಲಿಯೇ ದ್ವಾರಕಾಪುರಿಯನ್ನು ಮಾಡಿರುವೆನು. ಸಮುದ್ರದ ಮಧ್ಯದಲ್ಲಿ ಇರುವ ದ್ವಾರಕೆಗಿಂತ ನೂರುಪಾಲು ಅಧಿಕವಾಗಿರುವುದು. ಯಾವ ಮನುಷ್ಯನು ಆ ತೀರ್ಥವನ್ನು ಮೀರಿ ಬೇರೆ ತೀರ್ಥಗಳಿಗೆ ಹೋದರೆ ಅವನು ತೀರ್ಥದ ಫಲವನ್ನು ಹೊಂದಲಾರನು. ಇಂದ್ರಪ್ರಸ್ಥವು ಸರ್ವತೀರ್ಥಗಳ ಫಲವನ್ನು ಉಂಟು ಮಾಡುವುದು. ಯಾವಾತನು ಇತರ ತೀರ್ಥಗಳಲ್ಲಿ ಮುಳುಗಿ ನಾನಾ ಕರ್ಮಗಳನ್ನು ಮಾಡಿ ಇಲ್ಲಿಗೆ ಬಂದರೆ ಅವುಗಳ ಎಲ್ಲವುಗಳ ಫಲವನ್ನು ಹೊಂದುವನು' ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು. ನಾನೂ ವೈಕುಂಠದ ಕೆಳಗೆ ಇರುವ ನನ್ನ ಲೋಕಕ್ಕೆ ಹೋದೆನು. ನನ್ನ ಪ್ರಯಾಗಕ್ಕಿಂತ ಕಾಶಿಯು ನೂರುಪಾಲು ಅಧಿಕ ವಾದದ್ದು. ಕಾಶಿಗಿಂತ ನಿಗಮೋದ್ಬೋದಕ ತೀರ್ಥವು ನೂರುಪಾಲು ಅಧಿಕವಾಗುವುದು. ತೀರ್ಥಸಪ್ತಕವೂ ಈ ತೀರ್ಥವೂ ನಿಗಮೋದ್ಬೋಧಕತೀರ್ಥವೂ ಸಮಾನಗಳಾಗಿರುವುವು. ಈ ಮೂರು ತೀರ್ಥಗಳನ್ನೂ ಸೇವಿಸಿಯೇ ಪ್ರಯಾಗಕ್ಕೆ ಹೋದರೆ ಅವನಿಗೆ ಅಭೀಷ್ಟವನ್ನು ಕೊಡುವೆನು. ಇಲ್ಲದಿದ್ದರೆ ಕೊಡಲಾರೆನು. ನೀನು ಇಲ್ಲಿಗೆ ಬಂದು ಸರ್ವಫಲಪ್ರದವಾದ ದ್ವಾರಕಾತೀರ್ಥದಲ್ಲಿ ಸ್ನಾನಮಾಡು. ಈ ತೀರ್ಥವು ನಿನಗೆ ಕುಲವನ್ನು ಉದ್ಧರಿಸುವ ಮಗನನ್ನು ಕೊಡುತ್ತದೆ. ಇಲ್ಲಿ ಸ್ನಾನ ಮಾಡುವುದರಿಂದ ಪರಮಾತ್ಮನು ಸಂತುಷ್ಟನಾಗುವನು' ಎಂದು ಹೇಳಿ ಬ್ರಹ್ಮದೇವರು ಮರೆಯಾಗಿ

ಹೋದರು. ವಿಮಲನು ಆ ತೀರ್ಥದಲ್ಲಿ ಸ್ನಾನ ಮಾಡಿದೇವರ್ಷಿ ಪಿತೃ ತರ್ಪಣವನ್ನು ಮಾಡಿದನು. 'ದ್ವಾರಕೆ! ನನಗೆ ವಂಶವನ್ನು ಉದ್ಧರಿಸುವ ಮಗನನ್ನು ಕೊಡು. ನಿನಗೆ ನಮಸ್ಕಾರವು' ಎಂದು ಹೇಳಲು ಅಶರೀರವಾಣಿಯು 'ನಿನಗೆ ಈ ತೀರ್ಥದ ಅನುಗ್ರಹದಿಂದ ವಂಶವನ್ನು ಉದ್ಧರಿಸುವ ಮಗನು ಹುಟ್ಟುವನು. ಬೇಗನೇ ಮನೆಗೆ ಹೋಗು' ಎಂದು ಹೇಳಿದ್ದು ಕೇಳಿಸಿತು.

ಅದನ್ನು ಕೇಳಿ ವಿಮಲನು ದ್ವಾರಕಾತೀರ್ಥದ ನೀರನ್ನು ಕಮಂಡಲುವಿನಲ್ಲಿ ತುಂಬಿಸಿಕೊಂಡು ಹೋದನು. ದಾರಿಯಲ್ಲಿ ಸರ್ವತೀರ್ಥಯಾತ್ರೆ ಮಾಡಿ ಮನೆಗೆ ಹೋಗುತ್ತಿದ್ದ ತನ್ನ ಮಿತ್ರನಾದ ಮಲಯಾಚಲ ಕೇತನ ಎಂಬ ಬ್ರಾಹ್ಮಣನನ್ನು ಹೊಂದಿದನು. ಅವನೊಡನೆ ವಿಮಲನು ತನ್ನ ವೃತ್ತಾಂತವನ್ನು ಹೇಳಿಕೊಂಡನು. ಬ್ರಹ್ಮದೇವರ ಸಂವಾದವನ್ನು ದ್ವಾರಕಾತೀರ್ಥದಲ್ಲಿ ಕೇಳಿಸಿದ ಅಶರೀರವಾಣಿಯನ್ನು ವಿಮಲನ ಮುಖದಿಂದ ಕೇಳಿ ಆ ಬ್ರಾಹ್ಮಣನು ಆಶ್ಚರ್ಯವನ್ನು ಹೊಂದಿದನು. ಆಮೇಲೆ ಅವನು 'ಮಿತ್ರನೇ! ನನ್ನ ಮಾತನ್ನು ಕೇಳು. ಭಾರತ ಕ್ಷೇತ್ರದಲ್ಲಿ ಇರುವ ತೀರ್ಥಗಳಲ್ಲಿ ಇರುವ ತೀರ್ಥಗಳನ್ನೆಲ್ಲಾ ಸಂಚರಿಸಿದೆನು. ಅವುಗಳ ಎಲ್ಲವುಗಳ ಫಲವನ್ನು ಹೊಂದಲಿಕ್ಕೆ ಇಚ್ಛಿಸುತ್ತೇನೆ. ನೀನು ಹೇಳಿದ ಆ ಉತ್ತಮವಾದ ತೀರ್ಥಕ್ಕೆ ನನ್ನನ್ನು ಕರೆದುಕೊಂಡು ಹೋಗಿ ತೋರಿಸು. ಯಾರು ಭೂಮಿಯಲ್ಲಿ ಉಪಕಾರವನ್ನು ಮಾಡುವವರೋ ಅವರೇ ಮಿತ್ರರು. ಅವರಿಗೆ ತಂದೆ ತಾಯಿ ಮಕ್ಕಳೂ ಸಮಾನ ರಾಗಲಾರರು. ಹಣರಹಿತನಾದ ಪುರುಷರನ್ನು ಎಲ್ಲಾ ಬಂಧುಗಳೂ ಬಿಟ್ಟುಬಿಡುತ್ತಾರೆ. ಮಿತ್ರನು ಮಾತ್ರ ಬಿಡುವುದಿಲ್ಲ. ಅವನೂ ಇವನ ದುಃಖದಿಂದ ದುಃಖವುಳ್ಳ ವನಾಗುತ್ತಾನೆ. ಆದುದರಿಂದ ನೀನು ನನ್ನ ಮಿತ್ರನು. ನನಗೆ ಉಪಕಾರವನ್ನು ಮಾಡು. ದ್ವಾರಕಾ ಎಂಬ ತೀರ್ಥವನ್ನು ತೋರಿಸು' ಎಂದು ಹೇಳಿದನು.

ತರುವಾಯ ವಿಮಲನು ಆ ಬ್ರಾಹ್ಮಣನನ್ನು ಕರಕೊಂಡು ದ್ವಾರಕಾತೀರ್ಥಕ್ಕೆ ಬಂದನು. ಅಲ್ಲಿ ಇಬ್ಬರೂ ಪರಮಾತ್ಮನಲ್ಲಿ ಭಕ್ತಿ ಉಂಟಾಗಲಿ ಎಂಬ ಅಭಿಪ್ರಾಯದಿಂದ ಅಲ್ಲಿ ಸ್ನಾನಮಾಡಿದರು. ಆಗಲೂ ಅಶರೀರವಾಣಿಯು 'ಬ್ರಾಹ್ಮಣಶ್ರೇಷ್ಠರೇ! ಕೇಳಿರಿ. ಇದು ಮಂಗಳಕರವಾದ ಭಗವಂತನ ತೀರ್ಥವು. ಈ ತೀರ್ಥದ ಅನುಗ್ರಹದಿಂದ ನಿಮಗೆ ವಿಷ್ಣುಭಕ್ತಿಯು ಉಂಟಾಗುವುದು' ಎಂದು ಕೇಳಿಸಿತು.

ಬ್ರಾಹ್ಮಣರಿಬ್ಬರೂ ಅಶರೀರವಾಣಿಯನ್ನು ಕೇಳಿ ಪರಸ್ಪರವಾಗಿ ಭಗವಂತನ ಅನುಗ್ರಹವುಂಟಾಯಿತು ಎಂದು ಹೇಳಿಕೊಂಡರು. ಅಲ್ಲಿ ವಿಧಿಪ್ರಕಾರವಾಗಿ

ಸ್ನಾನಮಾಡಿ ಪರಮಾತ್ಮನಲ್ಲಿ ಉತ್ತಮವಾದ ಭಕ್ತಿಯನ್ನು ಹೊಂದಿ ತೀರ್ಥಕ್ಕೆ ನಮಸ್ಕರಿಸಿ ಪರಸ್ಪರವಾಗಿ ಮಾತಾಡುತ್ತಾ ಹೋದರು.

ಆ ಬ್ರಾಹ್ಮಣರಿಬ್ಬರೂ ಹೇಗೆ ನಮಗೆ ದಾರಿಯಲ್ಲಿ ಸಮಾಗಮವು ಏರ್ಪಟ್ಟಿತೋ ಹಾಗೆಯೇ ಭೂಮಿಯಲ್ಲಿ ಹೆಂಡತಿ ಮಕ್ಕಳು ಮೊದಲಾದವರ ಸಮಾಗಮವು ಉಂಟಾಗುವುದು. ನಾವು ಈಗ ಹೇಗೆ ಒಬ್ಬರನ್ನೊಬ್ಬರು ಬಿಟ್ಟುಹೋಗವವೋ ಹಾಗೆಯೇ ಕಾಲಕ್ರಮದಿಂದ ಹೆಂಡತಿ ಮಕ್ಕಳೂ ನಮ್ಮನ್ನು ಬಿಟ್ಟು ಹೋಗುವರು' ಎಂದು ಮಾತಾಡುತ್ತಾ ಹೋದರು. ಆಮೇಲೆ ವಿಮಲನ ಮಿತ್ರನು 'ನಾನು ನಿನ್ನ ದಾಸನು. ನನ್ನ ಸ್ಮರಣೆಯು ಯಾವಾಗಲೂ ಇರಲಿ. ನನಗೇನಾದರೂ ವೃತ್ತಾಂತವಿದ್ದರೆ ಹೇಳಿ ಕಳುಹಿಸಬೇಕು' ಎಂದು ಹೇಳಿ ಹೊರಟುಹೋದನು. ಅವನು ಹೋಗುತ್ತಾ ಕಾಂಪಿಲ್ಯನಗರದ ಹೆಂಗಸರು ರಾಕ್ಷಸಿಯರಾಗಿ ವಾಸಮಾಡುತ್ತಿದ್ದ ಮರುಪ್ರದೇಶದಕ್ಕೆ ಹೋದನು. ವಿಮಲನು ಮನೆಗೆ ಹೋಗಿ ಸೇರಿ ಉತ್ತಮ ಮಗನನ್ನು ಹೊಂದಿ ಸುಖದಿಂದ ಇದ್ದನು.



## ಕಾಂಪಿಲ್ಯನಗರದ ಸ್ತ್ರೀಯರಿಗೆ ರಾಕ್ಷಸಜನ್ಮ ನಿವೃತ್ತಿ [1]

ವಿಮಲನು ಮಿತ್ರನು ಬರುತ್ತಿರುವುದನ್ನು ನೋಡಿ ಮರುಭೂಮಿಯಲ್ಲಿ ಹಸಿವೆ ದಾಹದಿಂದ ಪೀಡಿತರಾಗಿ ಇದ್ದ ರಾಕ್ಷಸಿಯರು 'ಈ ದಾರಿಗನು ಕೈಯಲ್ಲಿ ನೀರಿನ ಪಾತ್ರೆಯನ್ನು ಹಿಡಿದುಕೊಂಡು ಬರುತ್ತಿರುವನು. ನಮಗೆ ಸ್ವಲ್ಪವಾದರೂ ಹಸಿವೆ ದಾಹಗಳ ಶಾಂತಿಯು ಆಗುವುದು. ನಾವು ಇವನನ್ನು ತಿಂದುಹಾಕುವ. ಇವನ ಕೈಯಲ್ಲಿರುವ ನೀರನ್ನು ಕುಡಿಯುವ. ನಾವು ನೂರು ವರ್ಷಗಳಿಂದ ಹಸಿವೆ ದಾಹಗಳಿಂದ ಶ್ರಮಪಡುತ್ತಿರುವೆವು' ಎಂದುಕೊಂಡರು.

ಒಬ್ಬಳು ರಾಕ್ಷಸಿಯು 'ನಾನು ಮೊದಲು ಈತನ ಬಿಸಿಯಾದ ಮಾಂಸದ ತುಂಡನ್ನು ತಿಂದು ರಕ್ತವನ್ನು ಕುಡಿಯುವೆನು. ಸ್ವಲ್ಪ ಜೀವನವನ್ನು ಹೊಂದುವೆನು' ಎಂದಳು. ಇನ್ನೊಬ್ಬಳು 'ಇವನಲ್ಲಿ ಎಷ್ಟು ರಕ್ತವಿದೆ. ವ್ಯಾಘಾನನೆಯೆಂದು ಹೆಸರುಳ್ಳ ನನಗೊಬ್ಬಳಿಗೇ ಕುಡಿಯಲಿಕ್ಕೆ ಸಾಲದಲ್ಲಾ!' ಎಂದಳು. ರಥಚಕ್ರಾ ಎಂದು ಹೆಸರುಳ್ಳ ರಾಕ್ಷಸಿಯು 'ನಾನು ಇವನ ತಲೆಯಿಂದ ಕಿವಿಗೆ ತೋಡು ಮಾಡಿಕೊಳ್ಳುವೆನು. ಇವನ

1. ದ್ವಾರಕಾತೀರ್ಥ ಮಹಿಮೆ-ಸದಾಚಾರ ತಂರಗ-3ರಲ್ಲೂ ಇದನ್ನು ಸೇರಿಸುವುದು.

ಕರಳಿನಿಂದ ಡಾಬನ್ನು ಮಾಡಿಕೊಳ್ಳುವೆನು' ಎಂದಳು. ಮತ್ತೊಬ್ಬಳು 'ಇವನ ಹದಿನಾರು ಹಲ್ಲುಗಳನ್ನು ತೆಗೆದು ಅದರಿಂದ ನಾನು ಪಗಡೆ ಆಟವಾಡುವೆನು' ಎಂದು ಹೇಳಿಕೊಂಡಳು.

ಈಪ್ರಕಾರವಾಗಿ ಹೇಳಿ ಅವರೆಲ್ಲರೂ ಬಾಯಿಯನ್ನು ತೆರೆದುಕೊಂಡು ಚಂಚಲವಾದ ನಾಲಿಗೆಯುಳ್ಳವರಾಗಿ ಕೈಯೆತ್ತಿಕೊಂಡು ಬ್ರಾಹ್ಮಣನ ಸಮೀಪಕ್ಕೆ ಓಡಿಬಂದರು. ಓಡಿಬರುತ್ತಿದ್ದ ಆ ರಾಕ್ಷಸಿಯರನ್ನು ನೋಡಿ ಆ ಬ್ರಾಹ್ಮಣನು ಭಯಪರವಶನಾಗಿ ವೇದದಲ್ಲಿ ಹೇಳಿದ ಮಂತ್ರವನ್ನು ಹೇಳಿ ತನ್ನ ರಕ್ಷೆಯನ್ನು ಮಾಡಿಕೊಂಡನು. ಆ ರಾಕ್ಷಸಿಯರು ಬಂದು ಆ ಬ್ರಾಹ್ಮಣನ ಮಂತ್ರದಿಂದಲೂ ತೇಜಸ್ಸಿನಿಂದಲೂ ನಿರಾಕೃತರಾಗಿ ದೂರದಲ್ಲಿ ನಿಂತುಕೊಂಡರು. 'ನೀನು ಯಾರು? ಎಲ್ಲಿಂದ ಬಂದಿರುವಿ? ನಿನ್ನ ದರ್ಶನದಿಂದ ನಮ್ಮ ಮನಸ್ಸು ಪ್ರಸನ್ನವಾಗಿರುವುದು. ನಿನ್ನ ಪಾದಸ್ಪರ್ಶವನ್ನು ಮಾಡಿದರೆ ಏನು ಫಲವುಂಟಾಗುವುದೋ ತಿಳಿಯಲಿಲ್ಲ. ಆದುದರಿಂದ ನಿನ್ನ ಪಾದವನ್ನು ನಮ್ಮ ಶಿರಸ್ಸುಗಳಲ್ಲಿ ಇಡುವವನಾಗು' ಎಂದು ಹೇಳಿದರು. ಅದನ್ನು ಕೇಳಿ ಆ ಬ್ರಾಹ್ಮಣನು 'ನಾನು ಪವಿತ್ರತೀರ್ಥಗಳಲ್ಲಿ ಸಂಚರಿಸಿ ಈಗ ಪುಷ್ಕರಕ್ಕೆ ಹೋಗುತ್ತಿರುವೆನು. ನಿಮಗೆ ಏನು ಬೇಕಾಗಿದೆ? ಅದನ್ನು ಹೇಳಿದರೆ ನನಗೆ ಶಕ್ತಿಯಿದ್ದರೆ ಅದನ್ನು ಕೊಡುತ್ತೇನೆ' ಎಂದು ಹೇಳಿದನು.

ರಾಕ್ಷಸಿಯರು 'ಬ್ರಾಹ್ಮಣನೇ! ನೀನು ಯಾವ ಯಾವ ತೀರ್ಥಗಳಲ್ಲಿ ಸ್ನಾನ ಮಾಡಿರುವಿ? ಹೇಳು. ನಮ್ಮನ್ನು ಅತಿದುಃಖಪ್ರದವಾದ ಈ ದುಷ್ಟಜನ್ಮದಿಂದ ಬಿಡಿಸು' ಎಂದು ಹೇಳಿದರು.

ಆಗ ಬ್ರಾಹ್ಮಣನು 'ನಾನು ಮೊದಲು ನನ್ನ ಆಶ್ರಮದಿಂದ ಅವಂತೀಪುರಿಗೆ ಹೋದೆನು. ಅಲ್ಲಿಂದ ಹರಿಪುರಿಗೆ ಹೋಗಿ ಅಲ್ಲಿಂದ ದ್ವಾರಕಾನಗರಕ್ಕೆ ಹೋಗಿ ಸೋಮಾದ್ಭವಾನದಿಯಲ್ಲಿ ಸ್ನಾನಮಾಡಿದೆನು. ಅಲ್ಲಿಂದ ಸಮುದ್ರತೀರದಲ್ಲಿರುವ ಪ್ರಭಾಸಕ್ಕೆ ತೀರ್ಥಕ್ಕೆ ಬಂದೆನು. ಅಲ್ಲಿಂದ ಧನುಷ್ಕೋಟಿಗೆ ಹೋಗಿ ಸ್ನಾನ ಮಾಡಿದೆನು. ಅಲ್ಲಿಂದ ಕಿಷ್ಕಿಂಧೆಗೆ ಹೋದೆನು. ಅಲ್ಲಿಂದ ನರ್ಮದಾನದಿಯ ತೀರದಲ್ಲಿರುವ ಸರಸ್ವತೀಮಂದಿರಕ್ಕೆ ಹೋದೆನು. ಅಲ್ಲಿ ಭಾರತೀದೇವಿಯು ಸೇವಿತ ರಾಗಿ ಇರುವರು. ಅವರಿಗೆ ನಮಸ್ಕರಿಸಿ ಶಿವಕಾಂಚೀ ವಿಷ್ಣುಕಾಂಚಿಗಳಿಗೆ ಹೋದೆನು. ಅಲ್ಲಿಂದ ಉತ್ಕಲಕ್ಕೆ ಹೋದೆನು. ಅಲ್ಲಿ ಪರಮಾತ್ಮನು ಸನ್ನಿಹಿತನಾಗಿರುವನು. ಅವನನ್ನು ವಿಧಿಪ್ರಕಾರವಾಗಿ ಪೂಜಿಸಿ ನೈವೇದ್ಯವನ್ನು ಭಕ್ಷಿಸಿ ಗಂಗಾಸಾಗರಸಂಗಮಕ್ಕೆ ಹೋದೆನು. ಅಲ್ಲಿ ಸ್ನಾನ ಮಾಡಿ ದೇವರ್ಷಿ ಪಿತೃಗಳಿಗೆ ತರ್ಪಣವನ್ನು ಕೊಟ್ಟು ಎಲ್ಲಿ

ಗಂಗೆಯ ನೂರು ಮುಖವುಳ್ಳವಳಾದಳೋ ಅಲ್ಲಿಗೆ ಹೋದೆನು. ಅಲ್ಲಿಂದ ಗಯೆಗೆ ಹೋಗಿ ಪಿಂಡಪ್ರಧಾನವನ್ನು ಮಾಡಿ ಕೋಶಲೆಗೆ ಹೋದೆನು. ಅಲ್ಲಿ ಗೋಪ್ರತಾರ ಎಂಬ ತೀರ್ಥವಿದೆ. ಅಲ್ಲಿ ಸ್ನಾನವನ್ನು ಮಾಡಿದೆನು. ಅಲ್ಲಿಂದ ಕಾಶಿಗೆ ಬಂದು ವಿಶ್ವೇಶ್ವರನನ್ನು ಬಿಂದುಮಾಧವನನ್ನೂ ನಮಸ್ಕರಿಸಿ ಮಣಿಕರ್ಣಿಕೆಯಲ್ಲಿಯೂ ಜ್ಞಾನವಾಪಿಯಲ್ಲಿಯೂ ಭಕ್ತಿಯಿಂದ ಸ್ನಾನಮಾಡಿ ಮೂರುರಾತ್ರಿ ಅಲ್ಲಿ ವಾಸಮಾಡಿ ಪ್ರಯಾಗಕ್ಕೆ ಬಂದೆನು. ಪುಷ್ಯ ಶುಕ್ಲ ಚತುರ್ದಶೀದಿನದಲ್ಲಿ ಅಲ್ಲಿಗೆ ಬಂದೆನು. ಮಾಘಮಾಸದಲ್ಲಿ ಎಲ್ಲಾ ಅರುಣೋದಯಕಾಲದಲ್ಲಿ ಅಲ್ಲಿ ಸ್ನಾನವನ್ನು ಮಾಡಿ ಗೋಮತೀ ತೀರದಲ್ಲಿ ನೈಮಿಷಾರಣ್ಯಕ್ಕೆ ಬಂದೆನು. ಅಲ್ಲಿಂದ ಮಥುರೆಗೆ ಬಂದೆನು. ಅಲ್ಲಿ ವಿಶ್ರಾಂತಿ ತೀರ್ಥವೂ ಅದರ ಬಳಿಯಲ್ಲಿ ಪವಿತ್ರವಾದ ಅಸಿಕುಂಡವೆಂಬ ತೀರ್ಥವೂ ಇರುವುದು. ಮತ್ತು ಕೃಷ್ಣ ಗಂಗಾಉದ್ಧವ ಅಕ್ರೂರ ಕೇಶಿ ಕಾಲಯ ಎಂದು ಹೆಸರುಳ್ಳ ತೀರ್ಥಗಳನ್ನು ಧರಿಸಿಕೊಂಡಿರುವ ಮಹಾಪವಿತ್ರವಾದ ಸರ್ವ ಪುರುಷಾರ್ಥಗಳನ್ನು ಕೊಡುವ ಯಮುನಾನದಿಯು ಹರಿಯುತ್ತಿದೆ. ಅದರ ಎರಡು ತೀರಗಳಲ್ಲಿಯೂ ಹನ್ನೆರಡು ತೀರ್ಥಗಳು ಇವೆ. ಅಲ್ಲಿ ಸ್ನಾನ ಮಾಡಿ ಜಲಪಾನ ಮಾಡಿದರೆ ಪುನಃ ಹುಟ್ಟುವುದಿಲ್ಲ.

ತರುವಾಯ ಪರಮಾತ್ಮನ ಪಾದಕಮಲದಿಂದ ಉದ್ಭವಿಸಿದ ಗಂಗೆಯು ಇರುವ ಹಸ್ತಿನಾವತಿಗೆ ಹೋದೆನು. ಅಲ್ಲಿಂದ ಹಿಮವತ್ಪರ್ವತದಲ್ಲಿ ಇರುವ ಬದರಿಕಾಶ್ರಮಕ್ಕೆ ಹೋದೆನು. ಭಗವಂತನ ದರ್ಶನವನ್ನು ಮಾಡಿ ಕೇದಾರಕ್ಕೆ ಬಂದೆನು. ಅಲ್ಲಿ ವಿಶ್ವೇಶನನ್ನು ಪೂಜಿಸಿ ಹಂಸೋದಕವನ್ನು ಪಾನಮಾಡಿ ಮಹಾಪವಿತ್ರವಾದ ಗಂಗಾತೀರಲ್ಲಿ ಇರುವ ಹರಿದ್ವಾರಕ್ಕೆ ಬಂದೆನು. ಅಲ್ಲಿ ಸ್ನಾನ ಮಾಡಿ ಪೂರ್ವಾಭಿಮುಖವಾಗಿ ಹರಿಯುತ್ತಿರುವ ಸರಸ್ವತಿಯುಳ್ಳ ಕುರುಕ್ಷೇತ್ರಕ್ಕೆ ಬಂದೆನು. ಅಲ್ಲಿಂದ ಪುಷ್ಕರತೀರ್ಥಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ ವಿಮಲನೆಂಬ ಮಿತ್ರನು ನನಗೆ ಸಿಕ್ಕಿದನು. ಅವನು ಇಂದ್ರಪ್ರಸ್ಥವೆಂಬ ತೀರ್ಥದಿಂದ ಬರುತ್ತಿದ್ದನು. ಅವನು ಪುನಃ ನನ್ನನ್ನು ಇಲ್ಲಿಗೇ ಕರಕೊಂಡು ಹೋದೆನು. ಅಲ್ಲಿ ದ್ವಾರಕಾ ಎಂದು ಹೆಸರುಳ್ಳ ವಿಷ್ಣುವಿನಿಂದ ರಚಿತವಾದ ತೀರ್ಥವಿದೆ. ಅಲ್ಲಿ ನಾನೂ ನನ್ನ ಆ ಮಿತ್ರನೂ ವಿಷ್ಣುಭಕ್ತಿಯುಂಟಾಗಲಿ ಎಂದು ಪ್ರಾರ್ಥಿಸಿಕೊಂಡು ಸ್ನಾನ ಮಾಡಿದೆವು. ಅಲ್ಲಿ ಭಗವಂತನ ಅಶರೀರವಾಣಿಯನ್ನು ಕೇಳಿ ನಾವಿಬ್ಬರೂ ಭಗವಂತನಲ್ಲಿ ಭಕ್ತಿಯನ್ನು ಪಡೆದು ಬಂದೆವು. ಈಗ ಪುಷ್ಕರವನ್ನು ಕುರಿತು ಹೋಗುತ್ತಿರುವೆನು. ಕಮಂಡಲು ವಿನಲ್ಲಿ ದ್ವಾರಕಾತೀರ್ಥದ ನೀರನ್ನು ತೆಗೆದುಕೊಂಡು ಹೋಗುತ್ತಿರುವೆನು. ನೀವು

ಕೇಳಿದ ವಿಷಯವೆಲ್ಲವನ್ನೂ ಹೇಳಿದೆನು. ನಿಮ್ಮ ಈ ದುರವಸ್ಥೆಯನ್ನು ನೋಡಿ ನನಗೆ ಕೃಪೆಯುಂಟಾಗುತ್ತಿದೆ. ನಿಮಗೆ ನಾನು ಏನು ಮಾಡಲಿ?' ಎಂದು ಹೇಳಿ 'ನಿಮಗೆಲ್ಲರಿಗೂ ಜ್ಞಾನವು ಬರಲಿ' ಎಂದು ಹೇಳಿ ಆ ತೀರ್ಥದ ನೀರನ್ನು ಆ ರಾಕ್ಷಸಿಯರ ಮೇಲೆ ಎರಚಿದನು. ಆ ರಾಕ್ಷಸಿಯರು ಆ ನೀರಿನ ಸ್ಪರ್ಶದಿಂದ ರಾಕ್ಷಸದೇಹ ಪ್ರಾಪ್ತಿಗೆ ಕಾರಣವನ್ನು ತಿಳಿದವರಾಗಿ ಆ ದೇಹವನ್ನು ಪರಿತ್ಯಜಿಸಿದರು. ದೇವತಾದೇಹವನ್ನು ಹೊಂದಿದರು. ನೂರಾರು ವಿಮಾನಗಳು ಆಗ ಬಂದವು. ಅವರು ಅಪ್ಸರಸ್ತ್ರೀಯರಾಗಿ ಆ ವಿಮಾನಗಳನ್ನು ಏರಿದವರಾಗಿ ಆ ಬ್ರಾಹ್ಮಣನಿಗೆ ನಮಸ್ಕರಿಸಿ 'ಬ್ರಾಹ್ಮಣ ಶ್ರೇಷ್ಠನೇ! ದ್ವಾರಕಾತೀರ್ಥದ ನೀರಿನ ಸಂಗಮದಿಂದ ರಾಕ್ಷಸದೇಹದಿಂದ ರಹಿತರಾಗಿ ಸ್ವರ್ಗಕ್ಕೆ ಹೋಗುತ್ತಿರುವೆವು. ಇಂದ್ರಪ್ರಸ್ಥದ ಮಧ್ಯದಲ್ಲಿ ಇರುವ ದ್ವಾರಕಾತೀರ್ಥಕ್ಕೆ ಸಮಾನವಾದ ತೀರ್ಥವೇ ಇಲ್ಲ' ಎಂದು ಹೇಳಿ ಆ ಬ್ರಾಹ್ಮಣನಿಂದ ಅನುಜ್ಞೆಯನ್ನು ಹೊಂದಿದವರಾಗಿ ಪೂರ್ವದಿಕ್ಕಿಗೆ ಹೋದರು. ಈ ರೀತಿಯಿಂದ ದ್ವಾರಕಾತೀರ್ಥರ ಮಹಿಮೆಯನ್ನು ಕೇಳಿದರೆ ಮಹಾಫಲವು ಲಭಿಸುತ್ತದೆ.



## ಪುಷ್ಕರನ ಕಥೆ [1]

ನಂದಿಗ್ರಾಮದಲ್ಲಿ ಪುಷ್ಕರನೆಂಬ ಬ್ರಾಹ್ಮಣನು ವಾಸಿಸುತ್ತಿದ್ದನು. ಅವನು ವಿಹಿತವಾದ ಧರ್ಮವನ್ನು ಮಾಡುತ್ತಿದ್ದನು. ಸಮಸ್ತಪ್ರಾಣಿಗಳ ಹಿತದಲ್ಲಿ ಆಸಕ್ತನಾಗಿದ್ದನು. ಮಾಘಸ್ನಾನವನ್ನು ಮಾಡುತ್ತಿದ್ದನು. ನಿತ್ಯವೂ ವೇದಾಧ್ಯಯನವನ್ನು ಮಾಡುತ್ತಿದ್ದನು. ಸರಿಯಾದ ಕಾಲದಲ್ಲಿ ಪರಮಾತ್ಮನಲ್ಲಿಯೂ ಮನಸ್ಸುಳ್ಳವನಾಗಿ ಪರಮಾತ್ಮನ ಪೂಜೆಯನ್ನು ಮಾಡುತ್ತಿದ್ದನು. ಕುಟುಂಬ ಸಹಿತನಾಗಿ ಅಲ್ಲಿ ವಾಸಮಾಡುತ್ತಿದ್ದನು. ಅಗ್ನಿಹೋತ್ರವನ್ನು ಮಾಡುತ್ತಿದ್ದನು. ಯಾವಾಗಲೂ ಭಗವಂತನ ನಾಮಗಳನ್ನು ಉಚ್ಚರಿಸುತ್ತಿದ್ದನು. ಆ ಬ್ರಾಹ್ಮಣನಿಗೆ ದೇವತಾರಾಧನೆಯನ್ನು ಬಿಟ್ಟು ಬೇರೆ ವಿಷಯದಲ್ಲಿ ಮನಸ್ಸು ಹೋಗುತ್ತಲೇ ಇರಲಿಲ್ಲ. ಸ್ವಪ್ನದಲ್ಲಿಯೂ ಕೂಡ ಮನಸ್ಸು ಬೇರೆ ವಿಷಯದಲ್ಲಿ ಹೋಗುತ್ತಿರಲಿಲ್ಲ. ಒಂದು ದಿವಸದಲ್ಲಿ ಯಮದೇವರು ಭಯಂಕರವಾದ ತನ್ನ ದೂತರೊಡನೆ ನೀವು ಹೋಗಿ ನಂದಿಗ್ರಾಮದಲ್ಲಿ

1. ಪ.ಪು.

ವಾಸಮಾಡುತ್ತಿರುವ ಪುಷ್ಕರನನ್ನು ಕರೆದುಕೊಂಡು ಬನ್ನಿರಿ ಎಂದು ಆಜ್ಞೆಯನ್ನು ಮಾಡಿದರು. ದೂತರು ತಿಳಿಯದೆ ವಿಷ್ಣುಭಕ್ತನಾದ ಆ ಪುಷ್ಕರನೆಂಬ ಬ್ರಾಹ್ಮಣನನ್ನು ಯಮಲೋಕಕ್ಕೆ ಕರೆದುಕೊಂಡು ಬಂದರು. ಬರುತ್ತಿದ್ದ ಆ ಪುಷ್ಕರನನ್ನು ನೋಡಿ ಯಮದೇವರು ಭಯಪಟ್ಟಂತೆ ತೋರಿಸುತ್ತಾ ಎದ್ದು ಆಸನದಲ್ಲಿ ಕೂತುಕೊಳ್ಳಿಸಿ, ತನ್ನ ದೂತರೊಡನೆ 'ಅಲ್ಲಿ ಮತ್ತೊಬ್ಬನು ಪುಷ್ಕರ ಎಂದು ಹೆಸರು ಉಳ್ಳವನು ಇರುವನು. ಅವನನ್ನು ಕರೆದುಕೊಂಡು ಬರಬೇಕೆಂದು ನಾನು ನಿಮಗೆ ಹೇಳಿದೆನು. ನೀವು ಈ ಸರ್ವಧರ್ಮಗಳನ್ನು ತಿಳಿದವನಾದ ವಿಶೇಷವಾಗಿ ವಿಷ್ಣುಭಕ್ತನಾದ ಮಾಘಸ್ನಾನ ಮಾಡುವ ಉಪವಾಸ ಮಾಡುವ ಇವನನ್ನು ನನ್ನ ಸಮೀಪಕ್ಕೆ ಏಕೆ ಕರೆದುಕೊಂಡು ಬಂದಿರಿ?' ಎಂದು ಬೆದರಿಸಿದರು. ಪುಷ್ಕರನೊಡನೆ 'ನಿನ್ನ ಹೆಂಡತಿ ಮಕ್ಕಳು ಮೊದಲಾದವರು ಅತ್ಯಂತ ದುಃಖದಿಂದ ಅಳುತ್ತಿರುವರು. ಬೇಗನೇ ನೀನು ನಿನ್ನ ಮನೆಗೆ ಹೋಗು' ಎಂದು ಹೇಳಿದರು. ಆಗ ಪುಷ್ಕರನು 'ಪೂಜ್ಯರೇ! ಪಾಪಿಗಳು ಯಾತನಾದೇಹವುಳ್ಳವರಾಗಿ ದುಃಖವನ್ನು ಅನುಭವಿಸುತ್ತಿರುವ ನರಕಗಳನ್ನು ನೋಡ ಬೇಕೆಂದು ಅಪೇಕ್ಷಿಸುತ್ತೇನೆ ಎಂದು ಹೇಳಿದನು. ತರುವಾಯ ಯಮದೇವರು ಪುಷ್ಕರನಿಗೆ ರೌರವ ಮೊದಲಾದ ನಾನಾ ನರಕಗಳನ್ನು ತೋರಿಸಿದರು. ಅವುಗಳನ್ನು ನೋಡಿ ಅಲ್ಲಿ ನರಕಯಾತನೆಯನ್ನು ಅನುಭವಿಸುತ್ತಿದ್ದ ಜನರನ್ನು ನೋಡಿ ಪುಷ್ಕರನು ಅತ್ಯಂತ ದುಃಖವುಳ್ಳವನಾಗಿ 'ನೀವು ಪೂರ್ವಜನ್ಮದಲ್ಲಿ ಯಾಕೆ ಪುಣ್ಯವನ್ನು ಮಾಡಲಿಲ್ಲ? ಈಗ ಯಾಕೆ ಹೀಗೆ ನರಕಗಳಲ್ಲಿ ದುಃಖವನ್ನು ಅನುಭವಿಸುತ್ತಿರುವಿರಿ?' ಎಂದು ಕೇಳಿದನು.

ಆಗ ನರಕದಲ್ಲಿ ಇದ್ದ ಜನರು ಹೇಳಿಕೊಂಡರು. 'ನಾವು ಭೂಮಿಯಲ್ಲಿ ಸ್ವಲ್ಪವಾದರೂ ಪುಣ್ಯವನ್ನು ಮಾಡಲಿಲ್ಲ. ಆದುದರಿಂದ ಈರೀತಿಯಾಗಿ ದುಃಖವನ್ನು ಅನುಭವಿಸುತ್ತಿರುವೆವು. ನಾವು ಪರಸ್ತ್ರೀಯರಲ್ಲಿ ಆಸಕ್ತರಾಗಿದ್ದೆವು. ಪರರ ಸೊತ್ತನ್ನು ಅಪಹರಿಸಿರುವೆವು. ಇನ್ನೊಬ್ಬರ ಹಿಂಸೆಯಲ್ಲಿ ಆಸಕ್ತರಾಗಿದ್ದೆವು. ಇನ್ನೊಬರ ಮೇಲೆ ಅಪವಾದವನ್ನು ಹೇಳುತ್ತಿದ್ದೆವು. ಬ್ರಾಹ್ಮಣರನ್ನು ನಿಂದಿಸುತ್ತಿದ್ದೆವು. ಹಣವನ್ನು ತೆಗೆದುಕೊಂಡು ಅಂದರೆ ಇಷ್ಟು ಹೊತ್ತು ಪಾಠವನ್ನು ಹೇಳಬೇಕಾದರೆ ಇಷ್ಟು ಹಣವನ್ನು ಕೊಡಬೇಕೆಂದು ಮಾತಾಡಿಕೊಂಡು ಪಾಠ ಹೇಳಿಕೊಡುತ್ತಿದ್ದೆವು. ಹಾಗೆಯೇ ಪಾಠವನ್ನು ಕೇಳುತ್ತಿದ್ದೆವು. ಭೃತ್ಯರಿಗೆಲ್ಲರಿಗೂ ಭೋಜನ ಮಾಡಿಸದೇ ನಾವು ಭೋಜನ ಮಾಡುತ್ತಿದ್ದೆವು. ಮಾಘಮಾಸದಲ್ಲಿ ಸೂರ್ಯೋದಯ ಸಮಯದಲ್ಲಿ ಎಲ್ಲರೂ ಸ್ನಾನ ಮಾಡುತ್ತಿರಲು ನಾವು ಮಾತ್ರ ಮಾಘಸ್ನಾನವನ್ನು

ಮಾಡಿದವರಲ್ಲ. ಒಂದೇ ಪಂಕ್ತಿಯಲ್ಲಿ ಕೂತಿದ್ದ ಬ್ರಾಹ್ಮಣರಿಗೆ ಬೇರೆ ವಿಧವಾದ ಅಡಿಗೆಯನ್ನು ಹಾಕಿಸಿ ನಾವು ಮಾತ್ರ ರುಚಿಕರವಾದ ಅಡಿಗೆಯನ್ನು ಭೋಜನ ಮಾಡುತ್ತಿದ್ದೆವು. ನಿತ್ಯವೂ ಔಪಾಸನ ಹೋಮವನ್ನು ವೈಶ್ವದೇವವನ್ನು ಮಾಡುತ್ತಿರ ಲಿಲ್ಲ. ಸ್ನಾನಮಾಡದೇ ಭೋಜನವನ್ನು ಮಾಡುತ್ತಿದ್ದೆವು. ದನಗಳು ಬಿಸಿಲಿನಲ್ಲಿ ತುಂಬಾ ನೀರಡಿಕೆಯಾಗಿ ನೀರನ್ನು ಕುಡಿಯಲಿಕ್ಕೆ ಹೋಗುವಾಗ ವಿಘ್ನವನ್ನು ಮಾಡಿರುವೆವು. ದನಗಳಿಗೆ ಒಳ್ಳೇ ಹುಲ್ಲನ್ನು ಹಾಕದೆ ಹಾಲನ್ನು ಕರೆದಿರುವೆವು. ಒಬ್ಬರಿಗೂ ಉಪಕಾರವನ್ನು ಮಾಡದೆ ನಮ್ಮನ್ನೇ ನಾವು ಪೋಷಣೆ ಮಾಡಿ ಕೊಳ್ಳುತ್ತಿದ್ದೆವು. ಧರ್ಮಪತ್ನಿಯನ್ನು ಪರಿತ್ಯಜಿಸಿರುವೆವು. ವ್ರತಭ್ರಷ್ಟರಾಗಿರುವೆವು. ಪರಾನ್ನದಲ್ಲಿಯೇ ಆಸಕ್ತರಾಗಿದ್ದೆವು. ಪರ್ವಕಾಲದಲ್ಲಿಯೂ ಸ್ತ್ರೀಯರೊಡನೆ ವಿಹರಿಸುತ್ತಿದ್ದೆವು. ಬ್ರಾಹ್ಮಣರಿಗೆ ಕೊಡುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿ ಆಮೇಲೆ ಲೋಭದಿಂದ ಕೊಡಲಿಲ್ಲ. ಇನ್ನೊಬ್ಬರು ನಮ್ಮಲ್ಲಿ ನಂಬಿ ಇಡಲಿಕ್ಕೆ ಕೊಟ್ಟ ಸೊತ್ತನ್ನು ಅಪಹರಿಸಿರುವೆವು. ಮಿತ್ರದ್ರೋಹವನ್ನು ಮಾಡಿರುವೆವು. ಸುಳ್ಳು ಸಾಕ್ಷಿಯನ್ನು ಹೇಳಿರುವೆವು. ನಾವು ಬಹುಪಾಪಗಳನ್ನು ಮಾಡಿರುವೆವು. ಆದರಿಂದ ಈರೀತಿಯಾಗಿ ದುಃಖವನ್ನು ಅನುಭವಿಸುತ್ತಿರುವೆವು' ಎಂದು ಹೇಳಿದರು.

ಅದಕ್ಕೆ ಪುಷ್ಕರನು 'ನೀವು ಒಂದು ಬಾರಿಯಾದರೂ ಭಕ್ತಿಯಿಂದ ಪರಮಾತ್ಮನನ್ನು ಯಾಕೆ ಪೂಜಿಸಲಿಲ್ಲ. ಆದರಿಂದ ಈರೀತಿಯಾಗಿ ಭಯಂಕರವಾದ ಅವಸ್ಥೆಯನ್ನು ಹೊಂದಿರುವಿರಿ. ಸಮಸ್ತಲೋಕಗಳಿಗೂ ಸ್ವಾಮಿಯಾದ ಪರಮಾತ್ಮ ನನ್ನು ಪೂಜಿಸುವವರಿಗೆ ಮೋಕ್ಷವೇ ಉಂಟಾಗುವುದು. ಪಾಪಪರಿಹಾರವಾಗುವು ದೆಂದು ಹೇಳುವುದೇನಿದೆ? ನೀವು ಪರಮಾತ್ಮನಿಗೆ ಭಕ್ತಿಯಿಂದ ನಮಸ್ಕಾರವನ್ನು ಮಾಡಿಲ್ಲವೆಂದು ಕಾಣುತ್ತದೆ. ಆದರಿಂದಲೇ ಈ ಪ್ರಕಾರವಾದ ಅತ್ಯಂತ ಭಯಂಕರವಾದ ನರಕವನ್ನು ಹೊಂದಿರುವಿರಿ. ಇಲ್ಲಿ ಈಗ ನಿತ್ಯವೂ ಹಾಹಾಕಾರವನ್ನು ಮಾಡಿದರೆ ಏನು ಉಪಯೋಗವಿದೆ? ನಿತ್ಯವೂ ಸಮಸ್ತ ಪಾಪಗಳನ್ನು ಪರಿಹರಿಸುವ ಭಗವಂತನನ್ನು ಸ್ಮರಿಸಿರಿ. ನಾನೂ ಇಲ್ಲಿ ಪರಮಾತ್ಮನ ನಾಮಗಳನ್ನು ಭಕ್ತಿಯಿಂದ ಉಚ್ಚರಿಸುವೆನು. ಅವುಗಳು ನಿಮ್ಮ ನಿತ್ಯ ಶ್ರೇಯಸ್ಸಿಗೆ ಕಾರಣವಾಗುವುವು' ಎಂದು ಹೇಳಿದನು.

ಆಗ ನರಕದ ಜನರು 'ನಮ್ಮ ಪಾಪಗಳಿಂದ ಸಂತಪ್ತರಾದ ನಮಗೆ ನಿನ್ನ ದೇಹದ ಸಂಬಂಧವುಳ್ಳ ಗಾಳಿಯು ಬೀಸಿ ಸುಖವಾಗುತ್ತಿದೆ. ನಮಗೆ ಸುಖವಾಗುವಂತೆ ಇಲ್ಲಿಯೇ ಸ್ವಲ್ಪ ಹೊತ್ತು ಇರು. ನಿನ್ನನ್ನು ನೋಡಿದ್ದರಿಂದಲೇ ನಮಗೆ ಸಂತೋಷ

ವಾಯಿತು. ಪಾಪಿಗಳಾದ ನಮ್ಮಲ್ಲಿಯೂ ನೀನು ದಯೆಯನ್ನು ತೋರಿಸುವಿ. ಆಶ್ಚರ್ಯ' ಎಂದು ಹೇಳಿದರು.

ಆಗ ಯಮದೇವರು 'ಪುಷ್ಕರ! ಬೇಗನೇ ಮನೆಗೆ ಹೋಗು. ನರಕಗಳನ್ನು ನೋಡಿಯಾಯಿತಲ್ಲಾ! ನಿನ್ನ ಹೆಂಡತಿಯು ಮನೆಯಲ್ಲಿ ಅತ್ಯಂತ ಅಳುತ್ತಿರುವಳು' ಎಂದು ಹೇಳಿದರು.

ಅದಕ್ಕೆ ಪುಷ್ಕರನು 'ನರಕದ ಜನರು ಅಳುತ್ತಿರುವ ಶಬ್ದವನ್ನು ಕೇಳಿ ನಾನು ಹೇಗೆ ಮನೆಗೆ ಹೋಗಲಿ? ಹೋದರೆ ನಾನು ಏನು ಸುಖವನ್ನು ಹೊಂದುವೆನು? ದೂತರಿಂದ ಬಡೆಯಲ್ಪಟ್ಟವರಾಗಿ ಬೆಂಕಿಯಲ್ಲಿ ಬೀಳುವವರಾಗಿ ನನ್ನನ್ನು ರಕ್ಷಿಸು ರಕ್ಷಿಸು ಎಂದು ಅಳುತ್ತಿರುವ ಧ್ವನಿಯು ಕೇಳುತ್ತಿರುವುದು. ಸಮಸ್ತ ಪ್ರಾಣಿಗಳಿಗೂ ಸ್ವಾಮಿಯಾದ ಪರಮಾತ್ಮನನ್ನು ನಾನು ನಿತ್ಯವೂ ಆರಾಧಿಸುತ್ತಿರುವೆನು. ಆ ಸತ್ಯದಿಂದ ಆ ನರಕದ ಜನರು ಬಿಡುಗಡೆಯನ್ನು ಹೊಂದಲಿ. ಹೇಗೆ ಪರಮಾತ್ಮನು ಸರ್ವಸ್ಥಳಗಳಲ್ಲಿ ಇರುವನೋ, ಸಮಸ್ತವೂ ಆ ಪರಮಾತ್ಮನಲ್ಲಿ ಆಶ್ರಯಿಸಿಕೊಂಡು ಇರುವುದೋ ಆ ಸತ್ಯದಿಂದ ನರಕದ ಜನರು ಬಿಡುಗಡೆಯನ್ನು ಹೊಂದಲಿ. ಕೃಷ್ಣ! ಅಚ್ಯುತ! ಜಗನ್ನಾಥ! ಹರೇ! ವಿಷ್ಣೋ! ಜನಾರ್ದನ! ಈ ನರಕದಲ್ಲಿರುವ ಪಾಪಿಗಳೆಲ್ಲರನ್ನೂ ಉದ್ಧಾರಮಾಡು' ಎಂದು ಹೇಳಿದನು.

ಈರೀತಿಯಾಗಿ ಪುಷ್ಕರನು ಹೇಳಿದ ಭಗವನ್ನಾಮಗಳನ್ನು ಕೇಳಿ ನರಕದಲ್ಲಿ ಇದ್ದ ಜನರು ನರಕದಿಂದ ಬಿಡುಗಡೆ ಹೊಂದಿದವರಾಗಿ ಪುಷ್ಕರನೊಡನೆ ಪ್ರೀತಿಯಿಂದ 'ನಮ್ಮನ್ನು ನರಕದಿಂದ ಬಿಡಿಸಿದ ಕಾರಣ ನಿನ್ನ ಕೀರ್ತಿಯು ಹೆಚ್ಚಲಿ' ಎಂದು ಹೇಳಿ ಹೊರಟುಹೋದರು. ಯಮದೇವರು ಆಶ್ಚರ್ಯವುಳ್ಳವರಾಗಿ ಪುಷ್ಕರನ ಬಳಿಗೆ ಬಂದು ಬೇಕಾದ ವರವನ್ನು ಕೇಳಿಕೊಳ್ಳಲಿಕ್ಕೆ ಹೇಳಿದರು. 'ಧರ್ಮಿಷ್ಠನೇ! ಭೂಮಿಗೆ ಹೋಗಿ ಅಲ್ಲಿ ಯಾವಾಗಲೂ ಇರುವವನಾಗು. ನಿನಗೂ ನಿನ್ನ ಮಿತ್ರರಿಗೂ ನನ್ನ ಭಯವಿರಲಾರದು. ಯಾರು ನಿನ್ನ ಮಹಿಮೆಯನ್ನು ನಿತ್ಯವೂ ಸ್ಮರಿಸುವನೋ ಅವನಿಗೆ ನನ್ನ ಅನುಗ್ರಹದಿಂದ ಅಪಮೃತ್ಯು ಭಯವು ಉಂಟಾಗಲಾರದು' ಎಂದು ಹೇಳಿದರು. ಪುಷ್ಕರನು ಭೂಮಿಗೆ ಬಂದು ಭಗವಂತನನ್ನು ಪೂಜಿಸುತ್ತಾ ಇದ್ದನು. ಆದುದರಿಂದ ಭಗವಂತನ ನಾಮವು ಅತ್ಯಂತ ಫಲದಾಯಕವಾದದ್ದು.



# ಸುಭದ್ರಬ್ರಾಹ್ಮಣನ ಕಥೆ [1]

ಪೂರ್ವದಲ್ಲಿ ಸುಭದ್ರ ಎಂದು ಹೆಸರುಳ್ಳ ವೇದವನ್ನು ತಿಳಿದ ಬ್ರಾಹ್ಮಣನಿದ್ದನು. ಅವನು ಒಂದು ತೀರದಲ್ಲಿ ಗಂಗಾತೀರದಲ್ಲಿ ಕೂತಿದ್ದನು. ಆಗ ನೀರಿನಲ್ಲಿ ಸ್ವಲ್ಪವಾಗಿ ಮುಳುಗಿಕೊಂಡು ಇದ್ದ ಕೈಕಾಲುಗಳು ಇಲ್ಲದ ಅಟ್ಟೆಯನ್ನು ನೋಡಿದನು.[2] ಅದನ್ನು ನೋಡಿ ಸುಭದ್ರನಿಗೆ ತುಂಬಾ ಆಶ್ಚರ್ಯವಾಯಿತು. 'ಈ ಪ್ರಾಣಿಗೆ ಕೈಕಾಲುಗಳು ಇಲ್ಲವಲ್ಲಾ! ಇದು ಹೇಗೆ ಜೀವಿಸುವುದು? ಪ್ರಯತ್ನ ಮಾಡದೆ ಇದಕ್ಕೆ ಆಹಾರವು ಹೇಗೆ ಸಿಗುವುದು? ಆಹಾರವಿಲ್ಲದೆ ಹೇಗೆ ಬದುಕಲಿಕ್ಕೆ ಆಗುವುದು?' ಎಂದು ಯೋಚನೆ ಮಾಡುತ್ತಾ ಇದ್ದನು. ಅಷ್ಟರಲ್ಲಿಯೇ ನೀರಿನ ಪ್ರವಾಹದಲ್ಲಿ ಒಂದು ಕೀಟವು ನೀರಿನಲ್ಲಿ ತೇಲುತ್ತಾ ಅಟ್ಟೆಯ ಬಾಯಿಯ ಬಳಿಗೆ ಬಂದಿತು. ಅಟ್ಟೆಯು ಅದನ್ನು ನುಂಗಿಬಿಟ್ಟಿತು. ಅದನ್ನು ನೋಡಿ ಸುಭದ್ರನು ಆಶ್ಚರ್ಯವನ್ನು ಹೊಂದಿದನು. 'ಏನು ಆಶ್ಚರ್ಯ? ಜನರೆಲ್ಲರೂ ಮೋಹಿತರಾಗಿ ವ್ಯರ್ಥವಾಗಿ ಪ್ರಯತ್ನವನ್ನು ಮಾಡುವರು. ಭಗವಂತನೇ ಜೀವನವನ್ನು ಉಂಟುಮಾಡುವನು' ಎಂದು ಹೇಳುತ್ತಾ ಒಂದೂ ಪ್ರಯತ್ನವನ್ನು ಮಾಡದೆ ಪರಮಾತ್ಮನನ್ನು ಧ್ಯಾನಮಾಡುತ್ತಾ ಕಣ್ಣುಮುಚ್ಚಿ ಕೊಂಡು ಸುಖವಾಗಿ ಕೂತುಕೊಂಡನು. ಸಾಯಂಕಾಲವಾಗಲು ಧ್ಯಾನವನ್ನು ಬಿಟ್ಟು ಎದ್ದನು. ಅವನಿಗೆ ಒಂದು ಸ್ವಲ್ಪವೂ ಆಹಾರವು ಸಿಗಲಿಲ್ಲ. ಆಮೇಲೆ ಸಂಧ್ಯಾವಂದನೆಯನ್ನು ಮಾಡಿ ಹಾಗೆಯೇ ರಾತ್ರಿಯಲ್ಲಿಯೂ ಧ್ಯಾನ ಮಾಡುತ್ತಿದ್ದನು.

ಹೀಗೆಯೇ ಮೂರು ದಿವಸ ಮಾಡಿದನು. ನಾಲ್ಕನೇ ದಿನದಲ್ಲಿ ಪ್ರಾತಃಸ್ನಾನ ಮಾಡಿದನು. ತುಂಬಾ ಹಸಿವೆಯಾಯಿತು. 'ರಮಾನಾಥ! ಎಲ್ಲಿ ಇರುವಿ? ಎಲ್ಲಿ ಇರುವಿ?' ಎಂದು ಕೂಗಿಕೊಂಡನು. ಆಗ ದಯಾವಂತನಾದ ಪರಮಾತ್ಮನು ವೃದ್ಧಬ್ರಾಹ್ಮಣರೂಪದಿಂದ ಅವನ ಎದುರಲ್ಲಿ ಪ್ರತ್ಯಕ್ಷನಾದನು. 'ಮಗು! ಸುಭದ್ರ! ಯಾಕೆ ದುಃಖಪುಡಿವಿ? ದುಃಖಪಡಬೇಡ. ಸೃಷ್ಟಿ ಮಾಡುವ ಅಭಿಪ್ರಾಯವುಳ್ಳ ಭಗವಂತನು ಮೊದಲು ತನ್ನ ಮುಖ ಬಾಹು ತೊಡೆ ಪಾದಗಳಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರನ್ನು ಸೃಷ್ಟಿಮಾಡಿ ಎಲ್ಲರಿಗೂ ಒಂದೊಂದು ಜೀವನೋಪಾಯವನ್ನು ಉಂಟುಮಾಡಿದನು. ಬ್ರಾಹ್ಮಣಾದಿಗಳಿಗೆ ಪರಸ್ಪರ ಉಪಕಾರವಾಗುವಂತೆ ಜೀವನೋ ಪಾಯಗಳನ್ನು ಉಂಟುಮಾಡಿದನು. ಪಶುಪಕ್ಷಿ ಮೃಗಾದಿಗಳಿಗೂ ಕ್ರಿಮಿ ಕೀಟಾದಿ ಗಳಿಗೂ ಮುಖಪಾದಾದಿಗಳ ವ್ಯಾಪಾರದಿಂದ ಆಹಾರ ಸಿಕ್ಕುವಂತೆ ಮಾಡಿದನು.

1. ವಿ.ರ. (ವಿಷ್ಣುರಹಸ್ಯ). 2. ಜಲೂಕಾ

ಎತ್ತು ಒಂಟೆ ಆನೆ ಕುದುರೆ ಇತ್ಯಾದಿಗಳಿಗೆ ಓಡುವುದರಿಂದಲೂ ಯುದ್ಧದಿಂದಲೂ ಸಾಮಾನುಗಳನ್ನು ಹೊತ್ತುಕೊಂಡು ಹೋಗುವುದರಿಂದಲೂ ಜೀವನವನ್ನು ಕಲ್ಪಿಸಿದನು. ಮೃಗಾದಿಗಳಿಗೆ ಪರಸ್ಪರ ಒಂದಕ್ಕೆ ಮತ್ತೊಂದು ಆಹಾರವನ್ನಾಗಿ ಮಾಡಿದನು. ಕೆಲವು ಮೃಗಗಳಿಗೆ ಉಗುರು ಆಯುಧವಾಗಿರುವುದು ಕೆಲವಕ್ಕೆ ಕೋರೆಹಲ್ಲುಗಳು ಆಯುಧಗಳು. ಕೆಲವಕ್ಕೆ ಕೊಂಬುಗಳು ಆಯುಧಗಳು. ಕೆಲವು ಮೃಗಗಳು ಹುಲ್ಲುನೀರು ಇತ್ಯಾದಿಗಳಿಂದ ಬದುಕುವುವು. ಕೆಲವು ಪಾದವ್ಯಾಪಾರ ವುಳ್ಳವು. ಕೆಲವು ರೆಕ್ಕೆಯ ವ್ಯಾಪಾರವುಳ್ಳವುಗಳು. ಹೀಗೆಲ್ಲಾ ಇವುಗಳಿಗೆ ಶರೀರದಲ್ಲಿಯೇ ಸಾಧನಗಳನ್ನು ಉಂಟುಮಾಡಿ ನಾನಾ ಜಾತಿಯುಳ್ಳ ಮನುಷ್ಯರಿಗೂ ಜೀವನವನ್ನು ಕಲ್ಪಿಸಿರುವನು. ಕೈಕಾಲು ಇಲ್ಲದಿದ್ದವರಿಗೂ ಊಮೆ ಕುರುಡನೊಂಡಿ ಗಳಿಗೆ ಇನ್ನೂ ಅಶಕ್ತರಾದ ಜಂಗಮಗಳಿಗೂ ಸ್ಥಾವರಗಳಿಗೂ ಅವುಗಳು ಇದ್ದ ಸ್ಥಳದಲ್ಲಿಯೇ ಅವುಗಳಿಗೆ ಆಹಾರ ಸಿಗುವಂತೆ ಮಾಡುವನು. ಗರ್ಭದಲ್ಲಿ ಇರುವ ಮಕ್ಕಳಿಗೆ ಅಲ್ಲಿಯೇ ಆಹಾರವನ್ನು ಕಳುಹಿಸುವನು. ಭಗವಂತನು ಅವರವರ ಕರ್ಮಾನುಸಾರವಾಗಿ ಸುಖದಿಂದಲೂ ಶ್ರಮದಿಂದಲೋ ಆಹಾರವನ್ನು ಕೊಡುವನು. ಅಟ್ಟೆ ಮೊದಲಾದ ಪ್ರಾಣಿಗಳಿಗೆ ಶಕ್ತಿಯಿಲ್ಲದೆ ಇರುವ ಕಾರಣ ಅವುಗಳ ಬಾಯಿಗೇ ಆಹಾರವು ಬಂದು ಸೇರುವಂತೆ ಮಾಡುವನು. ಮುಖದ ಹತ್ತಿರ ಬಂದ ಪದಾರ್ಥಗಳನ್ನು ಅವುಗಳು ಮುಖದಿಂದ ಅಗಿದು ನುಂಗುವುವು. ಆಗಲೂ ಸ್ವಲ್ಪ ಪ್ರಯತ್ನ ಮಾಡುವುವು. ಇತರ ಪ್ರಯತ್ನ ಮಾಡಲಿಕ್ಕಿಲ್ಲ. ಕೈಕಾಲು ಕಿವಿ ಮೊದಲಾದ ಇಂದ್ರಿಯಗಳು ಸರಿಯಾಗಿ ಇದ್ದು ನಡೆಯಲಿಕ್ಕೂ ಮಾತಾಡಲಿಕ್ಕೂ ಕೆಲಸವನ್ನು ಮಾಡಲಿಕ್ಕೂ ಯಾರಿಗೆ ಶಕ್ತಿಯಿದೆಯೋ ಅವರು ತಮ್ಮ ಶಕ್ತಿಯನ್ನು ಅನುಸರಿಸಿ ಪ್ರಯತ್ನ ಮಾಡಿಯೇ ಆಹಾರವನ್ನು ಹೊಂದಬೇಕು. ಸುಭದ್ರ! ನೀನು ದೃಢವಾದ ದೇಹವುಳ್ಳವನಾಗಿರುವಿ. ನಾನಾ ವಿದ್ಯೆಗಳನ್ನು ತಿಳಿದವನಾಗಿರುವಿ. ನೀನು ನಿನ್ನ ಶಕ್ತಿಯನ್ನು ಅನುಸರಿಸಿ ಪ್ರಯತ್ನವನ್ನು ಮಾಡಿಯೇ ಆಹಾರವನ್ನು ಹೊಂದಬೇಕು. ಅದೃಷ್ಟವು ರಾಜನಂತೆ ಶ್ರೇಷ್ಠವಾದದ್ದು. ನಾನಾ ಪ್ರಯತ್ನಗಳು ದಾಸರಂತೆ. ರಾಜನು ದಾಸರು ಇಲ್ಲದೆ ಫಲವನ್ನು ಹೊಂದುವುದು ಕಾಣಿಸುವುದಿಲ್ಲವಷ್ಟೆ. ಈ ವಿಷಯದಲ್ಲಿ ಪುರಾತನವಾದ ಒಂದು ಇತಿಹಾಸವನ್ನು ಉದಾಹರಿಸುತ್ತಾರೆ.

ಪೂರ್ವದಲ್ಲಿ ಜಯಂತೀನಗರದಲ್ಲಿ ಸುರಾಮನೆಂಬ ರಾಜನು ರಾಜ್ಯಭಾರ ಮಾಡುತ್ತಿರುವಾಗ ವಿಚಿತ್ರ ಪ್ರಚಂಡ ಎಂಬ ಇಬ್ಬರು ಸ್ನೇಹಿತರು ಇದ್ದರು. ಒಂದು ದಿವಸದಲ್ಲಿ ಅವರಿಬ್ಬರಿಗೆ ವಿವಾದವುಂಟಾಯಿತು. ವಿಚಿತ್ರನು ಅದೃಷ್ಟವನ್ನು

ಶ್ರೇಷ್ಠವೆಂದನು. ತರುವಾಯ ಅವರು ಇದರ ನಿರ್ಣಯವನ್ನು ಮಾಡುವುಕ್ಕಾಗಿ ರಾಜನ ಬಳಿಗೆ ಹೋದರು. ರಾಜನು ಅವರ ವಿವಾದವನ್ನು ಕೇಳಿ ಕೋಪಗೊಂಡಂತೆ ತೋರಿಸಿ ರಾತ್ರಿಯಲ್ಲಿ ಇವರಿಬ್ಬರನ್ನು ಗ್ರಾಮದ ಹೊರಗೆ ಇರುವ ದೇವಾಲಯದ ಒಳಗೆ ಬಿಟ್ಟು ಬಾಗಿಲು ಹಾಕಿಕೊಂಡು ಬನ್ನಿರಿ' ಎಂದು ಹೇಳಿದನು. ರಾಜಭೃತ್ಯರು ಹಾಗೆಯೇ ಮಾಡಿ ಬಾಗಿಲುಗಳನ್ನು ಹಾಕಿಕೊಂಡು ಬಂದುಬಿಟ್ಟರು. ಅದೊಂದು ಶಿವಾಲಯವು. ಬಹು ಕತ್ತಲೆಯಿಂದ ಯುಕ್ತವಾಗಿದ್ದಿತು. ಅದೃಷ್ಟವು ಶ್ರೇಷ್ಠವೆಂದು ಹೇಳುವ ವಿಚಿತ್ರನು ನೆಲದ ಮೇಲೆ ಸುಮ್ಮನೆ ಮಲಗಿಕೊಂಡನು. ಪ್ರಯತ್ನವು ಶ್ರೇಷ್ಠವೆನ್ನುವ ಪ್ರಚಂಡನು ಮಾತ್ರ ಅಲ್ಲಿಯೂ ಪ್ರಯತ್ನ ಮಾಡುವುದನ್ನು ಬಿಡಲಿಲ್ಲ. ಆ ಮಹಾಕತ್ತಲೆಯಲ್ಲಿ ಮಹಾಪ್ರಯತ್ನ ಮಾಡಿ ಹುಡುಕುವವನಾಗಿ ನಾನಾ ವಿಧವಾದ ಅನ್ನದಿಂದ ತುಂಬಿದ ಪಾತ್ರೆಯನ್ನು ಹೊಂದಿದನು. ಪೂರ್ವದಿವಸದಲ್ಲಿ ಒಬ್ಬ ಹಣವಂತನು ನಾನಾ ವಿಧವಾದ ಅನ್ನವನ್ನು ಮಾಡಿಸಿ ಅದರಲ್ಲಿ ಪಂಚರತ್ನಗಳನ್ನು ಹಾಕಿ ನೈವೇದ್ಯ ಮಾಡಿಸಿ ಅಲ್ಲಿಯೇ ಬಿಟ್ಟು ಹೋಗಿದ್ದನು. ಹಸಿವೆಯಿಂದ ಶ್ರಮವುಳ್ಳವನಾಗಿದ್ದ ಪ್ರಚಂಡನು ಆ ಅನ್ನವನ್ನು ತಿನ್ನಲಿಕ್ಕೆ ಆರಂಭಿಸಿದನು. ವಿಚಿತ್ರನನ್ನು ನಿಂದಿಸಿದನು. 'ಮೂಢನೇ! ನೋಡು. ಯತ್ನವೇ ಶ್ರೇಷ್ಠವಾದದ್ದು. ಪ್ರಯತ್ನದಿಂದ ನನಗೆ ಸುಂದರವಾದ ಅನ್ನವು ಸಿಕ್ಕಿತು. ಪ್ರಯತ್ನಹೀನನಾದ ನೀನು ಹಸಿವೆಯಿಂದ ಬಳಲುತ್ತಾ ಸತ್ತವನಂತೆ ನೆಲದಲ್ಲಿ ಬಿದ್ದುಕೊಂಡಿರುವಿ' ಎಂದು ಪ್ರಚಂಡನು ಹೇಳಿದನು. ಅದಕ್ಕೆ ವಿಚಿತ್ರನು 'ಮೂಢನೇ! ನಿನಗೆ ತಿಳಿಯಲಾರದು. ನಿನಗೂ ಅದೃಷ್ಟವಿದ್ದ ಕಾರಣವೇ ಅನ್ನವು ಸಿಕ್ಕಿತು. ಇಲ್ಲದಿದ್ದರೆ ಸಿಗುತ್ತಿರಲಿಲ್ಲ. ಪ್ರಯತ್ನವು ಅದಕ್ಕೆ ಸಹಾಯಕವಾಯಿತಷ್ಟೆ. ಒಬ್ಬನು ಓಡುತ್ತಿರುವಾಗ ತಗ್ಗಿನಲ್ಲಿ ಬಿದ್ದುಬಿಡುತ್ತಾನೆ. ಒಬ್ಬನು ಓಡುತ್ತಾ ನಿಧಿಯನ್ನು ಹೊಂದುವನು. ಒಬ್ಬನು ಪ್ರಯತ್ನದಿಂದ ದುಃಖವನ್ನು ಹೊಂದುವನು. ಮತ್ತೊಬ್ಬನು ಪ್ರಯತ್ನದಿಂದ ಸುಖವನ್ನು ಹೊಂದುವನು. ಶ್ರೇಷ್ಠವಾದ ಅದೃಷ್ಟವೇ ಲಾಭ ಅಲಾಭಗಳಿಗೆ ಕಾರಣವಾದದ್ದು. ಅದೃಷ್ಟದಿಂದಲೇ ಮಳೆಯು ಸುರಿಯುತ್ತದೆ. ಅದೃಷ್ಟದಿಂದಲೇ ಸಾಯುತ್ತಾನೆ. ಅದೃಷ್ಟದಿಂದಲೇ ಹುಟ್ಟುತ್ತಾನೆ. ಹಣವು ಹೆಂಡತಿಯು ಮಕ್ಕಳು ಮನೆಯು ಎಲ್ಲವೂ ಅದೃಷ್ಟದಿಂದಲೇ ಉಂಟಾಗುತ್ತದೆ. ಅದೃಷ್ಟದಿಂದಲೇ ದುಃಖವನ್ನು ಹೊಂದುವನು. ಇವೆಲ್ಲವೂ ಪ್ರಯತ್ನದಿಂದ ಆಗುವುದಲ್ಲವಲ್ಲಾ. ಅದೃಷ್ಟದಿಂದಲೇ ಪ್ರಯತ್ನವೂ ಉಂಟಾಗುವುದು. ಪ್ರಯತ್ನವು ಒಂದು ಸಾಮಗ್ರಿಯಲ್ಲಿ ಸೇರಿದ್ದು. ಭಗವಂತನು ಆ ಪ್ರಯತ್ನವನ್ನು ಇಟ್ಟುಕೊಂಡೇ ಸುಖದುಃಖಾದಿಗಳನ್ನು ಕೊಡುವನು'

ಇತ್ಯಾದಿ ರೀತಿಯಿಂದ ಅದೃಷ್ಟವನ್ನು ಸ್ತೋತ್ರಮಾಡುತ್ತಲೇ ಇದ್ದನು. ಪ್ರಚಂಡನು ಅದನ್ನು ಕೇಳುತ್ತಾ ಭೋಜನ ಮಾಡುತ್ತಿರುವಾಗ ಪಂಚರತ್ನಗಳು ಬಾಯಿಗೆ ಬಂದವು. ಆಗ ಅವನು ಅದು ಬರೇ ಕಲ್ಲು ಎಂಬ ಬುದ್ಧಿಯಿಂದ ವಿಚಿತ್ರನ ಮೇಲೆ ಅದನ್ನು ಉಗುಳಿದನು. ವಿಚಿತ್ರನು ಅದನ್ನು ಅದೃಷ್ಟದಿಂದ ಸಿಕ್ಕಿತೆಂದು ತಿಳಿದುಕೊಂಡು ಅದನ್ನು ವಸ್ತ್ರದಲ್ಲಿ ಕಟ್ಟಿಕೊಂಡನು. ಪ್ರಚಂಡನು ಅನ್ನವನ್ನು ಊಟಮಾಡಿ ಅಲ್ಲಿಯೇ ಪಾತ್ರೆಯಲ್ಲಿ ಇದ್ದ ನೀರನ್ನು ಕುಡಿದು ಸುಖವಾಗಿ ಮಲಗಿಕೊಂಡನು. ಮರುದಿನ ಬೆಳಗಾಗಲು ರಾಜನು ಇಬ್ಬರನ್ನು ಕರೆಸಿದನು. ಆಗ ಪ್ರಚಂಡನು ಸಂತೋಷದಿಂದ ಇದ್ದನು. ವಿಚಿತ್ರನು ಉಪವಾಸದಿಂದ ಕೃಶನಾಗಿದ್ದನು. ರಾಜನು ರಾತ್ರಿಯಲ್ಲಿ ನಡೆದ ವಿಷಯವನ್ನು ಕೇಳಿದನು. ಆಗ ಪ್ರಚಂಡನು ನಗುತ್ತಾ ತಾನು ರಾತ್ರಿಯಲ್ಲಿ ಪ್ರಯತ್ನಮಾಡಿ ಅನ್ನವನ್ನು ಕಂಡುಹಿಡಿದು ಊಟಮಾಡಿ ಸುಖವಾಗಿ ನಿದ್ರೆ ಮಾಡಿದ ಕಥೆಯೆಲ್ಲವನ್ನು ವಿಸ್ತರಿಸಿ ಹೇಳಿದನು. ವಿಚಿತ್ರನು ತಾನು ವಸ್ತ್ರದಲ್ಲಿ ಕಟ್ಟಿಕೊಂಡಿದ್ದ ಪ್ರಚಂಡನು ತನ್ನ ಮೇಲೆ ಉಗುಳಿದ ಪಂಚರತ್ನಗಳನ್ನು ತೋರಿಸಿದನು. ರಾಜನು ಮಹಾಬೆಲೆ ಬಾಳುವ ಆರತ್ನಗಳನ್ನು ನೋಡಿ 'ಈಗ ನಿಮ್ಮ ವಿವಾದವು ಶಾಂತವಾಯಿತು' ಎಂದು ಹೇಳಿದನು. ರಾಜನು 'ಪ್ರಯತ್ನದಿಂದ ಆಗದೆ ಇರುವ ಕಾರ್ಯವೂ ಅದೃಷ್ಟದಿಂದ ಉಂಟಾಗುತ್ತದೆ. ಹುಟ್ಟಲಿಕ್ಕೂ ಸಾಯಲಿಕ್ಕೂ ದುಃಖವನ್ನು ಹೊಂದಲಿಕ್ಕೂ ನಿಧಿಯನ್ನು ಹೊಂದಲಿಕ್ಕೂ, ತನ್ನ ಸೊತ್ತು ಅಪಹೃತವಾಗಲಿಕ್ಕೂ ಒಬ್ಬರು ಪ್ರಯತ್ನವನ್ನು ಮಾಡುವುದಿಲ್ಲ. ಅದು ಕೇವಲ ಅದೃಷ್ಟದಿಂದಲೇ ಆಗುತ್ತದೆ. ಅದೃಷ್ಟವು ಅನುಕೂಲವಾಗಿದ್ದರೆ ಪ್ರಯತ್ನವು ಸಫಲವಾಗುತ್ತದೆ. ಇಲ್ಲದಿದ್ದರೆ ಪ್ರಯತ್ನವು ವ್ಯರ್ಥವಾಗುವುದು. ಪ್ರಯತ್ನವೂ ಅದೃಷ್ಟದಿಂದಲೇ ಆಗುವುದು. ಪ್ರಚಂಡನೇ! ಪ್ರಯತ್ನದಿಂದ ಹುಡುಕಿದ ನಿನಗೆ ಅನ್ನವು ಮಾತ್ರ ಸಿಕ್ಕಿತು. ಪಂಚರತ್ನ ಗಳನ್ನು ನೀನಾಗಿ ಬಿಟ್ಟು ಬಿಟ್ಟೆಯಲ್ಲಾ! ವಿಚಿತ್ರನಿಗೆ ಅದು ಪ್ರಯತ್ನ ಮಾಡದೇ ಸಿಕ್ಕಿತು. ಅದು ಅವನ ಅದೃಷ್ಟದಿಂದಲೇ ಸಿಕ್ಕಿತು. ಆದುದರಿಂದ ಪ್ರಯತ್ನಕ್ಕಿಂತ ಅದೃಷ್ಟವು ಪ್ರಬಲವಾದದ್ದು. ಆದರೂ ಪ್ರಯತ್ನವು ಸರ್ವತ್ರ ಅದೃಷ್ಟಕ್ಕೆ ಸಹಾಯಕವಾಗಿರು ವುದು' ಎಂದು ಹೇಳಿದನು. ತರುವಾಯ ಪ್ರಚಂಡನೂ ವಿಚಿತ್ರನೂ ರಾಜನು ಹೇಳಿದ ಮಾತನ್ನು ಕೇಳಿ ಸಂತೋಷದಿಂದ ತಮ್ಮ ತಮ್ಮ ಮನೆಗೆ ಹೋದರು. ಆದುದರಿಂದ ಸುಭದ್ರನೇ! ನೀನೂ ಕೂಡ ಶಕ್ತಿಯನ್ನು ಅನುಸರಿಸಿ ಆಲಸ್ಯವಿಲ್ಲದೆ ಪ್ರಯತ್ನ ಮಾಡಿದಿಯಾದರೆ ಅದೃಷ್ಟದಿಂದ ಹಣ ವಸ್ತ್ರ ಇತ್ಯಾದಿಗಳೆಲ್ಲವನ್ನೂ ಹೊಂದುವಿ' ಎಂದು ಹೇಳಿ (ಭಗವಂತನು) ಅಂತರ್ಧಾನವನ್ನು ಹೊಂದಿದನು. ತರುವಾಯ

ಸುಭದ್ರನು ತನ್ನ ಶಕ್ತಿಯನ್ನು ಅನುಸರಿಸಿ ಪ್ರಯತ್ನವನ್ನು ಮಾಡಿದವನಾಗಿ ಪೂರ್ವ ಕರ್ಮಾನುಸಾರವಾಗಿ ಧನಧಾನ್ಯಾದಿಗಳನ್ನು ಹೊಂದಿದನು. ಪೂರ್ವಾದೃಷ್ಟವಿದ್ದರೂ ಫಲವಾಗಬೇಕಾದರೆ ಸ್ವಲ್ಪ ಪ್ರಯತ್ನವನ್ನು ಮಾಡಬೇಕು. ಆದುದರಿಂದ ಭಗವಂತನ ಆಜ್ಞೆಯಿಂದ ತನ್ನ ಶಕ್ತಿಯನ್ನು ಅನುಸರಿಸಿ ಪ್ರಯತ್ನವನ್ನು ಮಾಡಲೇಬೇಕು.



## ಕಲ್ಯಾಣನ ಕಥೆಯು [1]

ಸ್ವರ್ಗಪ್ರಾಪ್ತಿಗಾಗಿ ಆಂಗಿರಸಕುಲದ ಋಷಿಗಳೆಲ್ಲರೂ ಕೂಡಿ ಒಂದು ಯಜ್ಞವನ್ನು ಪ್ರಾರಂಭಿಸಿದ್ದರು. ಸಾಯದೇ ಸ್ವರ್ಗವನ್ನು ಕಾಣಬೇಕು. ಯಾವುದಾದರೂ ಒಂದು ದಾರಿಯನ್ನು ಹುಡುಕಿ ತೆಗೆದು ಸದೇಹವಾಗಿಯೇ ಸ್ವರ್ಗಸೇರಬೇಕು ಎಂದು ಅವರು ಸಂಕಲ್ಪ ಮಾಡಿದ್ದರು. ಆದರೆ ಅವರಿಗೆ ಕೊನೆಗೂ ಜೀವಂತನು ಸ್ವರ್ಗಕ್ಕೆ ಹೋಗುವ ಮಾರ್ಗವು ಸಿಗಲಿಲ್ಲ. ಆಗ ಅವರು ಪುರುಚ್ಛೇಪ ಎಂಬ ಸಿದ್ಧ ಮುನಿಯ ಹತ್ತಿರ ಬಂದು ಸದೇಹನಾಗಿ ಸ್ವರ್ಗಕ್ಕೆ ಹೋಗುವ ಮಾರ್ಗವು ಯಾವುದೆಂದು ಕೇಳಿದರು. ಅದಕ್ಕೆ ಪುರುಚ್ಛೇಪರು ದೇವಯಾನದಿಂದ ನೀವು ಪ್ರಯಾಣ ಮಾಡಿದರೆ ಅಮರಾವತೀಗೇ ಹೋಗಿ ಸೇರಬಹುದು ಎಂದರು. ಮತ್ತು ಸ್ವರ್ಗಮಾರ್ಗವಾದ ಅಂತರಿಕ್ಷದಲ್ಲಿ ಬರುವ ವಿವಿಧ ಗ್ರಹನಕ್ಷತ್ರಗಳಿಂದ ನಿಬಿಡವಾದ ಜ್ಯೋತಿರ್ವಲಯಗಳಲ್ಲಿ ಹೋಗುವಾಗ ಅಲ್ಲಿಯ ಜ್ವಲಂತ ಗೋಲಕಗಳ ಝಳವು ತಾಗದ ಸುರಕ್ಷಿತ ಭಾಗಗಳನ್ನು ಹೇಳಿಕೊಟ್ಟರು. ಅದರಂತೆಯೇ ದಾರಿಯಲ್ಲಿ ಬೇರೆಬೇರೆ ತೇಜೋಮಂಡಲಗಳಲ್ಲಿ ವಾಸಿಸುವ ಆಕಾಶ ಮಾರ್ಗದಲ್ಲಿ ಮುಂದೆ ಹೋಗಬಹುದೆಂದೂ ಹೇಳಿದರು. ಮತ್ತೆ ನೆಲಬಿಟ್ಟು ಮೇಲೆ ಎದ್ದು ಮುಂದೆ ಆಕಾಶದಲ್ಲಿ ಹೋಗುವಂತೆ ಮಂತ್ರಗಳನ್ನೂ ಕಲಿಸಿದರು.

ಆದರೆ ಅವರು ಇಷ್ಟೆಲ್ಲಾ ತಿಳಿಸಿ ಹೇಳಿದರೂ ಈ ದೇವಯಾನದ ಮಾರ್ಗದಿಂದ ಮೊದಲು ಪ್ರಯಾಣ ಮಾಡುವ ಸಾಹಸಿಗಳಾರೂ ಸಿಗಲಿಲ್ಲ. ಆಂಗೀರಸರಿಗೂ ಧೈರ್ಯವಾಗಲಿಲ್ಲ. ಹೀಗಾಗಿ ಎಷ್ಟೋ ವರ್ಷ ಈ ವಿಚಾರವು ಹಾಗೆಯೇ ಉಳಿದುಹೋಯಿತು.

---

1. ಬೃಹದ್ದೇವತಾ ಬ್ರಾಹ್ಮಣ ಗ್ರಂಥಗಳು. ಈ ಕಥೆ ಅಂತರಿಕ್ಷಯಾನಕ್ಕೆ ಮಂತ್ರಸಿದ್ಧಿ ತಿಳಿಸುತ್ತಾ ಆಧುನಿಕ ಅಂತರಿಕ್ಷಯಾನಕ್ಕೆ ಇಂಬುಕೊಡುತ್ತದೆ.

ಆಮೇಲೆ ಕಲ್ಯಾಣ ಎಂಬ ಸಾಹಸಿ ಸಿದ್ಧಯುವಕನಿಗೆ ಈ ಸಮಾಚಾರವನ್ನು ಕೇಳಿ ಸದೇಹನಾಗಿ ಸ್ವರ್ಗಕ್ಕೆ ಹೋಗಿಯೇ ತೀರಬೇಕೆಂದು ಹುಚ್ಚುಹಿಡಿಯಿತು. ತಾನು ಈ ಅಂತರಿಕ್ಷ ಪ್ರಯಾಣದ ಸಾಹಸಕ್ಕೆ ಸಿದ್ಧನಿದ್ದೇನೆಂದು ಹೇಳಿದನು. ಆಗ ಅಂಗಿರಸಕುಲದ ತಾಪಸರೆಲ್ಲರೂ ಕೂಡಿ ಕಲ್ಯಾಣನಿಗೆ ನಾವು ನಿನಗೆ ದೇವಲೋಕಕ್ಕೆ ಶರೀರಸಹಿತವಾಗಿಯೇ ಹೋಗಬಹುದಾದ ದೇವಯಾನದ ಮಾರ್ಗ ಮಂತ್ರತಂತ್ರಗಳೆಲ್ಲವನ್ನೂ ಹೇಳಿಕೊಡುತ್ತೇವೆ. ಆದರೆ ಅಂತರಿಕ್ಷಲೋಕದ ಮೊದಲಿನ ಪ್ರಯಾಣಿಕನಾದ ನೀನು ಅಮರಾವತಿಗೆ ಹೋಗಿ ಅಲ್ಲಿ ಎಲ್ಲವನ್ನೂ ನೋಡಿಕೊಂಡು ತಿರುಗಿ ಇಲ್ಲಿಗೆ ಬಂದು ನಮ್ಮನ್ನೆಲ್ಲರನ್ನೂ ಕರೆದುಕೊಂಡು ಹೋಗಬೇಕು. ಸ್ವರ್ಗವನ್ನು ಕಂಡು ಅಲ್ಲಿಯ ಸುಖಕ್ಕೆ ಮನಸೋತು ನಮ್ಮನ್ನೆಲ್ಲರನ್ನೂ ಮರೆತು ಅಲ್ಲಿಯೇ ಕುಳಿತುಬಿಡಬಾರದು. ನಾನಂತೂ ಪಾರಾದೆನು. ಸ್ವರ್ಗವನ್ನು ಕಂಡೆನು ಎಂದು ಸ್ವಾರ್ಥದಿಂದ ಅಲ್ಲಿಯೇ ಇದ್ದುಬಿಡಬಾರದು. ಈ ಕರಾರಿಗೆ ನೀನು ಒಪ್ಪಿದರೆ ಮಾತ್ರ ನಾವು ನಿನಗೆ ಈ ಗಗನದಲ್ಲಿ ನಡೆದುಹೋಗುವ ರಹಸ್ಯವನ್ನು ಹೇಳಿಕೊಡುತ್ತೇವೆ ಎಂದರು.

ಅಂತರಿಕ್ಷ ಪ್ರಯಾಣಕ್ಕೆ ಬಹಳ ಉತ್ಕಂಠಿತನಾಗಿ ತುದಿಕಾಲಮೇಲೆ ನಿಂತಿದ್ದ ಕಲ್ಯಾಣನು ಅವರು ಹೇಳಿದ ಕರಾರುಗಳಿಗೆಲ್ಲಾ ಒಪ್ಪಿ ಪ್ರತಿಜ್ಞಾಪತ್ರಕ್ಕೆ ಸಹಿ ಹಾಕಿದನು. ಆಂಗೀರಸರು ಅವನನ್ನು ಏಕಾಂತದಲ್ಲಿ ಕರೆದುಕೊಂಡು ಹೋಗಿ ಆಕಾಶದಲ್ಲಿ ಹೋಗುವ ತಂತ್ರವನ್ನು ಅಲ್ಲಿ ಹೋಗುವ ಮಂತ್ರವನ್ನು ಮತ್ತು ಆ ಮಾರ್ಗದಲ್ಲಿ ನಡುವೆ ನಡುವೆ ಬರುವ ನಕ್ಷತ್ರ ನಿಲ್ದಾಣಗಳನ್ನು ಮತ್ತು ಊರಿನ ದಾರಿಯ ಮರುಮಾರ್ಗಗಳಲ್ಲಿ ಬರುವ ಚಂದ್ರಲೋಕದಂತೆ ಇರುವ ತಂಪಾದ ಸ್ಥಳಗಳನ್ನು ಹೇಳಿಕೊಟ್ಟರು.

ಅದೆಲ್ಲವನ್ನೂ ಕೇಳಿಕೊಂಡ ಕಲ್ಯಾಣನು ಒಂದು ಶುಭ ಮುಹೂರ್ತದಲ್ಲಿ ನಕ್ಷತ್ರಯಾತ್ರೆಗೆ ಸಿದ್ಧನಾದನು. ಮಹೇಂದ್ರಪರ್ವತದ ಎತ್ತರವಾದ ಒಂದು ಶಿಖರದ ಮೇಲೆ ಬೆಳಗ್ಗೆ ಆರುಗಂಟೆಗೆ ಕಲ್ಯಾಣನನ್ನು ಬೀಳ್ಕೊಡಲು ಆಂಗೀರಸಗೋತ್ರದವ ರೆಲ್ಲರೂ ರಹಸ್ಯವಾಗಿ ಸೇರಿದರು. ಸ್ನಾನ ಆಹ್ನಿಕಗಳನ್ನು ಮುಗಿಸಿ ಶುಚಿಯಾಗಿ ತುಲಸೀಮಾಲೆಯನ್ನು ಧರಿಸಿಕೊಂಡು ಬಂದ ಕಲ್ಯಾಣನು ಎಲ್ಲಾ ಋಷಿಗಳಿಗೂ ನಮಸ್ಕರಿಸಿದನು. ಆಂಗೀರಸರೆಲ್ಲರೂ ಅವನ ಅಮರಾವತಿಯ ಪ್ರಯಾಣಕ್ಕೆ ಶುಭಾಶಯಗಳನ್ನು ಕೋರಿ ಬೇಗನೇ ಸ್ವರ್ಗದ ಸಂದೇಶವನ್ನು ತಂದು ತಮ್ಮನ್ನು ಕರಕೊಂಡು ಹೋಗಬೇಕೆಂದೂ ಮುಂದಿನ ಹಿಮಸಂಪಾತದ ಮೊದಲು ತಾವೂ

ಸ್ವರ್ಗವನ್ನು ಸೇರಬೇಕೆಂದು ಮಾಡಿದ್ದೇವೆಂದೂ ತಿಳಿಸಿದರು. ಕಲ್ಯಾಣ ಮಿತ್ರನಾದ ಅತಿಷನು ಬಂದು ಗಗನಗಾಮಿಯಾದ ಮಿತ್ರನನ್ನು ಆಲಿಂಗಿಸಿ ಸ್ವರ್ಗದ ಚೆಲುವೆಯರನ್ನು ನೋಡಿ ನೆಲದ ಮೇಲಿನ ನೆಂಟರನ್ನು ಮರೆಯಬೇಡ ಎಂದು ಹೇಳಿ ನಗೆಯಾಡಿದನು.

ಕೊನೆಗೆ ಕಲ್ಯಾಣನು ಎಲ್ಲರಿಗೂ ಕೈಮುಗಿದು ನಿಮ್ಮೆಲ್ಲರ ಆಶೀರ್ವಾವು ನನ್ನ ಬೆನ್ನಿಗೆ ಭೀಮರಕ್ಷೆಯಾಗಿರಲಿ ಎಂದು ಬೇಡಿಕೊಂಡು ಮೇಲೆ ಹಾರಿದನು. ಪುರುಚ್ಛೇಪರು ಹೇಳಿದ ಮಂತ್ರಪ್ರಭಾವದಿಂದ ಅವನ ದೇಹವು ಕ್ಷಣಾರ್ಧದಲ್ಲಿಯೇ ನೆಲವನ್ನು ಬಿಟ್ಟು ಆಕಾಶಕ್ಕೆ ನೆಗೆದು ವಾಯುಮಂಡಲದಲ್ಲಿ ಪಕ್ಷಿಯಂತೆ ಹಾರ ತೊಡಗಿತು. ಚಿಕ್ಕನಕ್ಷತ್ರದಂತೆ ಹೊಳೆಯ ತೊಡಗಿತು. ಬರಬರುತ್ತಾ ಅದು ಚಿಕ್ಕದಾಗಿ ಕಾಣಿಸುತ್ತಾ ಆಮೇಲೆ ಕಣ್ಣಿಗೆ ಮರೆಯಾಯಿತು. ದೂರದ ನಕ್ಷತ್ರಲೋಕವನ್ನು ಸೇರಿದ ಕಲ್ಯಾಣನ ಸ್ಥಿತಿಗತಿಯೇ ವಿಚಿತ್ರವಾಯಿತು. ಪ್ರತೀಪಗಾಮಿಯಾದ ವಾಯುಲಹರಿಗಳ ಪ್ರತಿಕೂಲ ಪರಿಣಾಮದಿಂದ ಅವನು ದಿಗ್ಭ್ರಾಂತನಾದನು. ಮುಂದೆ ಹೋದ ಹೋದಂತೆ ಗಾಳಿಯ ಸುಳಿಯೂ ಮತ್ತು ಗ್ರಹಗೋಲಗಳ ಗುರುತ್ವ ಆಕರ್ಷಣ ಶಕ್ತಿಗಳಿಂದಲೂ ಅವನ ದೇಹವು ಬಾಣದಂತೆ ಮುಂದೆ ಹೋಗುತ್ತಿದ್ದರೂ ಅವನ ಮಿದುಳು ವಿಕೃತವಾಗಿದ್ದಿತು. ಆಂಗೀರಸರು ಹೇಳಿದ ಮಂತ್ರಗಳೆಲ್ಲವೂ ಮರೆತು ತಲೆಕೆಳಗಾಗಿ ಹೋಗಿದ್ದವು. ಹೀಗೆ ಹೊರಟರೆ ತಾನು ಇತ್ತ ಭೂಮಿಯೂ ಅಲ್ಲ ಅತ್ತ ಸ್ವರ್ಗವೂ ಅಲ್ಲದೆ ತ್ರಿಶಂಕುವಿನಂತೆ ಮಧ್ಯದಲ್ಲಿಯೇ ಯಾವಾಗಲೂ ತಿರುಗುತ್ತಾ ಇರಬೇಕಾಗುವುದೆಂದನಿಸಿತು. ಮನಸ್ಸಿನಲ್ಲಿ ಗಾಬರಿಯಾಗಿ ಮೈಯೆಲ್ಲವೂ ಬೆವತು ಹೋಯಿತು. ಕೆಳಗೆ ನೋಡಿದಾಗ ನೆಲದ ನಿಟ್ಟಿನಲ್ಲಿ ತುಂಡು ಮೇಘಗಳು ಸಾಲುಸಾಲಾಗಿ ತೇಲುತ್ತಾ ಹೊರಟ್ಟಿದ್ದು ಕಾಣಿಸಿತು. ಮತ್ತು ಕೆಲವು ಉರಿಯುವ ತೇಜಃಪಿಂಡವು ತಿರುಗುತ್ತಾ ಇರುವುದೂ ಕಾಣಿಸಿತು. ಮೇಲೆಯೆಲ್ಲಾ ಶೂನ್ಯವಾಗಿ ಕಾಣಿಸುತ್ತಿತ್ತು. ಆಮೇಲೆ ತಲೆಕೆಳಗಾಗಿ ಓಡುತ್ತಿರುವ ಇವನನ್ನು ನೋಡಿ ನಕ್ಷತ್ರಗಳು ನಗುತ್ತಿರುವಂತೆ ಕಾಣಿಸಿತು. ಭಯಪಟ್ಟ ಅವನಿಗೆ ಒಂದುಬಾರಿ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆನ್ನಿಸಿತು. ಆದರೆ ಈ ಓಟದಿಂದ ಒಂದು ನಿಮಿಷವಾದರೂ ನಿಲ್ಲಲಿಕ್ಕೆ ಅವಕಾಶವಾಗದ ಕಾರಣ ಸಾಯುವ ಉದ್ಯೋಗ ಮಾಡಲಿಕ್ಕೂ ಆಗಲಿಲ್ಲ. ಮೇಲಿನ ಗ್ರಹದಿಂದ ಗುರುತ್ವಾಕರ್ಷಣೆಯಿಂದ ಅವನ ದೇಹವು ಭರದಿಂದ ಮೇಲೆ ನುಗ್ಗುತ್ತಿತ್ತು. ಏನು ಮಾಡಬೇಕೋ ತಿಳಿಯದಂತಾಗಿ ಅವನು ಹುಚ್ಚನಂತೆ ಹಾಗೆ ಹೊರಟಾಗ ದಾರಿಯಲ್ಲಿ ಒಂದು ಶಾಂತವಾದ ತಂಪಾದ ಗ್ರಹವು ಬಂದಿತು. ಅಲ್ಲಿ

ಜೀವಿಗಳ ವಾಸವಿದ್ದ ಲಕ್ಷಣವೂ ಕಂಡುಬಂದಿತು. ಅದನ್ನು ನೋಡಿ ಕಲ್ಯಾಣನಿಗೆ ಜೀವವು ಬಂದಂತೆ ಆಯಿತು.

ಆ ಗಗನ ಗ್ರಹಮಂಡಲದ ಹೊರಗಿನ ಪಾರ್ಶ್ವದಲ್ಲಿ ಸುಂದರವಾದ ಉಪವನವೊಂದಿದ್ದಿತು. ಅಲ್ಲಿ ಎತ್ತರವಾದ ಗಿಡದ ಚಿಕ್ಕಕೊಂಬೆಯಲ್ಲಿ ಕಲ್ಯಾಣನ ಶರೀರವು ಸಿಕ್ಕಿಕೊಂಡಿತು. ಬಹಳ ವಿಲಕ್ಷಣವೇಗದಿಂದ ಓಡುತ್ತಿರುವ ತನ್ನ ಶರೀರಕ್ಕೆ ಆ ಗಿಡದ ಕೊಂಬೆಯೂ ಬಡಿದು ತನ್ನ ಎಲುಬೂ ಕೂಡ ಪುಡಿಪುಡಿಯಾಗಬಹುದೆಂದು ಕಲ್ಯಾಣನು ಯೋಚಿಸಿದ್ದನು. ಆದರೆ ಅಲ್ಲಲ್ಲಿ ನಡೆದದ್ದು ವಿಪರೀತವಾಗಿ ಅಲ್ಲಿಯ ಗಿಡಗಳು ನಮ್ಮಲ್ಲಿಯ ಗಿಡಗಳಂತೆ ಅಲ್ಲ. ಅವು ಜ್ಞಾನಪೂರ್ಣವಾಗಿಯೂ ಕರುಣಾಶಾಲಿಗಳಾಗಿಯೂ ಆಗಿದ್ದವು. ಭರದಿಂದ ಬಂದು ತಮ್ಮ ಮೇಲೆ ಅಪ್ಪಳಿಸಲಿರುವ ಆ ಪ್ರಾಣಿಗೆ ಪೆಟ್ಟುತಾಗಬಾರದೆಂದು ಆ ಗಿಡವು ತನ್ನ ಚಿಗುರು ಎಲೆಗಳಿಂದ ತುಂಬಿದ್ದ ಮೆತ್ತಗಿನ ಚಿಕ್ಕ ಕೊಂಬೆಯೊಂದನ್ನು ಮುಂದೆ ಚಾಚಿ ಕಲ್ಯಾಣನ ದೇಹವನ್ನು ಮೃದುವಾಗಿ ತನ್ನಲ್ಲಿ ತೆಗೆದುಕೊಂಡಿತು. ಆದರಿಂದ ಕಲ್ಯಾಣನಿಗೆ ಹಾಸಿಗೆಯ ಮೇಲೆ ಮಲಗಿಸಿದಂತೆ ಆಯಿತು. ಎಲ್ಲಿಯೂ ನೋವುಗಾಯಗಳು ಆಗಲಿಲ್ಲ. ಕೆಲವು ನಿಮಿಷದವರೆಗೆ ಆ ಕೊಂಬೆಯಲ್ಲಿ ವಾಸಮಾಡಿದ ಮೇಲೆ ಅದೇ ಗಿಡದ ಹಣ್ಣುಗಳನ್ನು ಆರಿಸಿ ತಿಂದನು. ಅಮೃತದಂತೆ ಇದ್ದ ಆ ಹಣ್ಣುಗಳನ್ನು ತಿಂದದ್ದರಿಂದ ಅವನ ಹಸಿವೆಯೂ ನೀರಡಿಕೆಯೂ ವಾಸಿಯಾಯಿತು. ಅವನಿಗೆ ತಾನು ಇಳಿದದ್ದೇ ಸ್ವರ್ಗವೆನಿಸಿತು. ಇದೇ ನಂದನವನವಿರಬಹುದು. ತಾನು ಅಂಟಿಕೊಂಡ ಮರವೇ ಕಲ್ಪವೃಕ್ಷವಿರಬಹುದು. ತಾನು ತಿಂದ ಹಣ್ಣೇ ಅಮೃತಫಲವಿರಬಹುದು ಎಂದು ಸಂಶಯವು ಉಂಟಾಯಿತು. ಇದನ್ನು ನಿಶ್ಚಯಿಸಿ ತಿಳಿಯಬೇಕೆಂದು ಅಲ್ಲಿ ಇಲ್ಲಿ ನೋಡುತ್ತಿರುವಲ್ಲಿ ಅದೇ ಮರದ ಇನ್ನೊಂದು ಕೊಂಬೆಯಲ್ಲಿ ಉಂಜಲನ್ನು ಕಟ್ಟಿದ್ದರು. ಅದರಲ್ಲಿ ಪರಮಸುಂದರಿಯೂ ಒಬ್ಬ ಅಪ್ಸರಸ್ತ್ರೀಯು ತನ್ನ ಪ್ರಿಯನೊಂದಿಗೆ ಕೂತುಕೊಂಡು ತೂಗಾಡುತ್ತಿದ್ದಳು. ಕಲ್ಯಾಣನಿಗೆ ಅದೇ ಸ್ವರ್ಗವೆನ್ನುವುದರಲ್ಲಿ ಸಂದೇಹವು ಉಳಿದಿರಲಿಲ್ಲ. ಅವನು ತಾನು ಗಿಡವನ್ನು ಬಿಟ್ಟು ಆ ದಂಪತಿಗಳು ಇದ್ದಲ್ಲಿಗೆ ನಡೆದನು. ಇವನು ಬಂದು ಎದುರುನಿಂತರೂ ಅವರು ಚುಂಬನ ಆಲಿಂಗನ ಮೊದಲಾದ ತಮ್ಮ ಲೀಲಾಪಹಾರಗಳನ್ನು ನಿಲ್ಲಿಸಲಿಲ್ಲ.

ಕಲ್ಯಾಣನು ಅವರ ಬಳಿಗೆ ಹೋಗಿ ಕೈಮುಗಿದು ಸಂಸ್ಕೃತಭಾಷೆಯಿಂದ 'ಸ್ವಾಮಿ! ಇದು ಸ್ವರ್ಗವೇ?' ಎಂದು ಕೇಳಿದನು.

ಆಗ ಆ ಪುರುಷನು ನಕ್ಕು 'ಎಲೋ ಮೂರ್ಖಮಾನವ! ಇಲ್ಲಿಂದ ಸ್ವರ್ಗವು

ಬಹುದೂರ. ನೀನು ಈಗ ಬಂದ ವೇಗದಿಂದಲೇ ಮುಂದೆ ಸಾಗಿದರೆ ಸ್ವರ್ಗವನ್ನು ಸೇರಲಿಕ್ಕೆ ನಾಲ್ಕು ಜನ್ಮವಾದರೂ ಸಾಲದು' ಎಂದನು.

ಆಗ ಕಲ್ಯಾಣನು 'ಸ್ವಾಮಿ! ತಾವು ಯಾರು?' ಎಂದು ಕೇಳಿದನು. ಅದಕ್ಕೆ ಅವನು ನಕ್ಕು 'ತಾನು ಊರ್ಣಾಯು ಎಂಬ ಗಂಧರ್ವನು. ಇವಳು ನನ್ನ ಪ್ರೇಯಸಿ ವಿಶ್ವಾಚಿಯೆಂಬ ಅಪ್ಸರೆಯು. ನಾನು ಇಂದೇ ಮುಂಜಾನೆ ಸ್ವರ್ಗದಿಂದ ಹೊರಟು ಇಲ್ಲಿಗೆ ವಿಹಾರಕ್ಕೆ ಬಂದಿದ್ದೇನೆ' ಎಂದನು.

ಆಗ ಕಲ್ಯಾಣನ ಬಾಯಿಯಲ್ಲಿ ನೀರು ಊರಿತು. 'ಸ್ವಾಮಿ! ತಾವು ಸ್ವರ್ಗದಿಂದ ತಾವು ಇಷ್ಟು ಬೇಗ ಹೇಗೆ ಬಂದಿರಿ?' ಎಂದು ಕೇಳಿದನು.

ಅದಕ್ಕೆ ಗಂಧರ್ವನು 'ಮಂತ್ರಪಠನದಿಂದ' ಎಂದನು.

ಕಲ್ಯಾಣನು 'ಅದು ಯಾವ ಮಂತ್ರ' ಎಂದು ಕೇಳಿದನು.

ಗಂಧರ್ವನು 'ಅದು ಸಾಮವೇದದಲ್ಲಿ ಇರುವ ಒಂದು ವಾಯುಸೂಕ್ತವು. ಅದನ್ನು ಸಾಮಗಾನಪದ್ಧತಿಯಿಂದ ಪಠಿಸಿದರೆ ಇಲ್ಲಿಂದ ನಾವು ಎರಡು ಘಳಿಗೆಗಳಲ್ಲಿ ಸ್ವರ್ಗವನ್ನು ಸೇರಬಹುದು' ಎಂದನು.

ಕಲ್ಯಾಣನು 'ದೇವಧುರ್ಯ! ನಾನು ತಮ್ಮ ಪಾದಗಳಿಗೆ ಅಡ್ಡಬೀಳುತ್ತೇನೆ. ನನಗೆ ಆ ಮಂತ್ರವನ್ನು ಕಲಿಸಬೇಕು' ಎಂದು ಬೇಡಿಕೊಂಡನು. ದಯಾಶೀಲನಾದ ಆ ಗಂಧರ್ವನು ವಾಯುಮಂಡಲದಲ್ಲಿ ಬೇಕಾದ ಕಡೆಗೆ ಇಚ್ಛಾನುಸಾರವಾಗಿ ಸಂಚಾರಮಾಡಲಿಕ್ಕೆ ಕಾರಣವಾದ ಆ ವಾಯುಸೂಕ್ತವನ್ನು ಸ್ನಾನಮಾಡಿ ಶುಚಿಯಾಗಿ ಶಾಂತಿಹಾಕಿ ನಿಂತುಕೊಂಡ ಕಲ್ಯಾಣನಿಗೆ ಉಪದೇಶಿಸಿದನು. ಅದನ್ನು ಕೇಳಿದ ಕಲ್ಯಾಣನಿಗೆ ಹೊಸಶಕ್ತಿಯೇ ಬಂದಂತೆ ಆಯಿತು. ಆ ಗಂಧರ್ವನಿಗೆ ನಮಸ್ಕಾರ ಮಾಡಿ ಸ್ವರ್ಗಕ್ಕೆ ಏರಬೇಕೆಂದು ಹೊರಟನು. ಆದರೆ ಆಗಲೇ ಅವನ ವಿಚಾರವು ಬದಲಾಯಿತು. ಸ್ವರ್ಗವಂತೂ ಇನ್ನು ನನ್ನ ಕೈಯಲ್ಲಿಯೇ ಸಿಕ್ಕಿದಂತೆ ಆಗಿರುವುದು. ಅದಕ್ಕೇಕೆ ಇಷ್ಟು ಅವಸರ? ಪುನಃ ಭೂಮಿಗೆ ಹೋಗಿ ಆ ಆಂಗಿರಸರೆಲ್ಲರನ್ನೂ ಕರೆದುಕೊಂಡೇ ಸ್ವರ್ಗಾರೋಹಣವನ್ನು ಮಾಡಿದರಾಯಿತು' ಎಂದು ಯೋಚಿಸಿ ಭೂಮಿಗೆ ತೆರಳಿದನು. ಅರ್ಧ ಗಂಟೆಯಲ್ಲಿಯೇ ಆ ವಾಯುಸೂಕ್ತದ ಪ್ರಭಾವದಿಂದ ಆತನು ನೆಲವನ್ನು ಮುಟ್ಟಿದನು. ನೆಲದಿಂದ ಹೊರಟು ನಾಲ್ಕು ವರ್ಷಗಳಲ್ಲಿ ಪುನಃ ಭೂಮಿಗೆ ಬಂದ ಅವನನ್ನು ಕಂಡು ಆಂಗಿರಸರೆಲ್ಲರಿಗೂ ಆಶ್ಚರ್ಯವಾಯಿತು. ನೀನು ಯಾವ ಲೋಕದಿಂದ ತಿರುಗಿಬಂದೆ ಎಂದು ಕೇಳಿದರು. ಕಲ್ಯಾಣನಿಗೆ ತಾನು ಇಳಿದು

ಬಂದ ಗ್ರಹದ ಹೆಸರೇ ಗೊತ್ತಿಲ್ಲ. ತನ್ನ ಅಜ್ಞಾನವನ್ನು ತೋರಿಸಬಾರದೆಂದು ನಾನು ವಾಯುಲೋಕದಿಂದ ಬಂದೆನು ಎಂದು ಹೇಳಿದನು. ಮತ್ತು 'ಅದು ಸ್ವರ್ಗಲೋಕಕ್ಕೆ ತೀರ ಸಮೀಪದಲ್ಲಿ ಇರುವುದು. ನಾನಿಳಿದ ವಾಯುಲೋಕದಿಂದ ಅಮರಾವತಿಗೆ ಎರಡು ಘಳಿಗೆಯ ದಾರಿಯು. ನಾನು ಹೇಳುವ ಈ ವಾಯುಸೂಕ್ತವನ್ನು ಸಾಮಗಾನದ ರೀತಿಯಿಂದ ಹೇಳಿಬಿಟ್ಟರೆ ಒಪ್ಪತ್ತಿನಲ್ಲಿಯೇ ಸ್ವರ್ಗವನ್ನು ಸೇರುವುದರಲ್ಲಿ ಸಂದೇಹವಿಲ್ಲ. ನಿಮ್ಮೆಲ್ಲರನ್ನೂ ಕರೆದುಕೊಂಡೇ ಹೋಗೋಣ ಎಂದು ನಾನು ಅಲ್ಲಿಯವರೆಗೆ ಹೋಗಿ ತಿರುಗಿ ಬಂದಿದ್ದೇನೆ' ಎಂದು ಹೇಳಿದನು. ಕಲ್ಯಾಣನು ಈ ಮಾತನ್ನು ಕೇಳಿ ಅಂಗೀರಸರಿಗೆಲ್ಲರೂ ಆಶ್ಚರ್ಯ ಆನಂದಗಳು ಆಗಿ ಉತ್ಸಾಹವು ಉಕ್ಕಿ ಬಂದಿತು.

ಕೂಡಲೇ ಅವರೆಲ್ಲರೂ ಸ್ವರ್ಗ ಗಮನಕ್ಕೆ ಉತ್ಸುಕರಾಗಿದ್ದರೂ ತಮ್ಮ ಅಂತರಿಕ್ಷದ ಪ್ರಯಾಣದ ಕನಸು ಇಷ್ಟು ಬೇಗನೇ ನನಸಾದೀತೆಂದು ಮನಸ್ಸಿನಲ್ಲಿಯೂ ಕೂಡ ಎಣಿಸಿರಲಿಲ್ಲ. ಅವರು ಎಲ್ಲರೂ ಅಲಕನಂದೆಯಲ್ಲಿ ಮಿಂದು ಭಕ್ತಿಯಿಂದ ಮೋಕ್ಷದಾತನಾದ ಮುಕುಂದನನ್ನು ವಂದಿಸಿ ವಾಯುದೇವರ ಧ್ಯಾನವನ್ನು ಮಾಡಿ ಅಂತರಿಕ್ಷ ಪ್ರಯಾಣಕ್ಕೆ ಸಿದ್ಧರಾಗಿ ಕಲ್ಯಾಣನ ಹತ್ತಿರ ಬಂದು ಶಾಂತಿಹಾಕಿ ನಮಸ್ಕರಿಸಿ 'ಆ ವಾಯುಸೂಕ್ತವನ್ನು ಹೇಳು. ಅದರ ದ್ರಷ್ಟಾ ಋಷಿಯೂ ದೇವತೆಯೂ ಯಾರೆಂದೂ ಯಾವ ಛಂದಸ್ಸೆಂದೂ ಹೇಳು' ಎಂದರು.

ಆಗ ಕಲ್ಯಾಣನ ಮನಸ್ಸಿನಲ್ಲಿ ದುರ್ಬುದ್ಧಿಯು ಉಂಟಾಗಿ ತಾನು ಇದರಿಂದ ಮಂತ್ರದ್ರಷ್ಟ್ರ ಋಷಿಯೆನಿಸಿಕೊಳ್ಳಬೇಕೆಂದು ಆಸೆಯುಂಟಾಯಿತು. ಅವನು 'ಈ ಮಂತ್ರವು ಜಗತೀಛಂದಸ್ಸಿನಲ್ಲಿ ಇದೆ. ವಾಯುವೇ ದೇವತೆಯು. ನಾನೇ ಇದಕ್ಕೆ ದ್ರಷ್ಟಾಋಷಿಯು ಎಂದು ಹೇಳಿಕೊಂಡನು. ಅದಕ್ಕೆ ಅಂಗಿರಸರು ಆಶ್ಚರ್ಯ ಗೊಂಡವರಾಗಿ 'ನಿಜವೇ' ಎಂದು ಕೇಳಿದರು ಅದಕ್ಕೆ ಕಲ್ಯಾಣನು 'ಸಂದೇಹವೇಕೆ? ಅಂತರಿಕ್ಷದಲ್ಲಿ ಹೋಗುತ್ತಿರುವಾಗ ಮೊದಲು ನನಗೆ ಈ ಸೂಕ್ತವು ಮನಸ್ಸಿಗೆ ಹೊಳೆಯಿತು' ಎಂದನು. ಆಗ ಅಂಗೀರಸರೆಲ್ಲರೂ ಅವನ ತಪಃಶಕ್ತಿಗೆ ತಲೆಬಾಗಿ ಅವನಿಂದ ಈ ಮಂತ್ರದ ಉಪದೇಶವನ್ನು ಪಡೆದರು.

ಆಮೇಲೆ ಎಲ್ಲರೂ ಹರಿವಾಯುಗಳ ಸ್ಮರಣೆಯನ್ನು ಮಾಡಿ ಅಂತರಿಕ್ಷಕ್ಕೆ ಹೊರಡಬೇಕೆಂದು ಆ ವಾಯುಸೂಕ್ತವನ್ನು ಪಠನ ಮಾಡಿದರು. ಅದರ ಪ್ರಭಾವ ದಿಂದ ಅವರೆಲ್ಲರೂ ಆಕಾಶಮಾರ್ಗದಲ್ಲಿ ಮನೋವೇಗದಿಂದ ಏರತೊಡಗಿದರು. ಕಲ್ಯಾಣನು ಎಲ್ಲರಿಂದಲೂ ಮುಂದೆ ಮಾರ್ಗದರ್ಶಿ ಮಹರ್ಷಿಯಾಗಿ ನಡೆದಿದ್ದನು.

ಆಂಗೀರಸರೆಲ್ಲರೂ ಅವನನ್ನು ಹಿಂಬಾಲಿಸಿ ವಾಯುಸ್ತುತಿಯನ್ನು ಪಠಿಸುತ್ತಾ ಹೋಗಿದ್ದರು.

ನಿಮಿಷ ನಿಮಿಷಕ್ಕೆ ಒಂದೊಂದು ತೇಜೋಗೋಲಕಗಳು ಎದುರಾಗುತ್ತಿದ್ದವು. ಅಲ್ಲಲ್ಲಿ ತಿರುಗುವ ಪ್ರಕಾಶಪುಂಜಗಳೂ ಜ್ಯೋತಿಃಪಿಂಡಗಳೂ ಮಿಂಚಿನ ಉಂಡೆ ಗಳಂತೆ ಇವರ ಎದುರು ದಿಕ್ಕಿನಿಂದ ಓಡಾಡುತ್ತಿರುವಂತೆ ಕಾಣಿಸುತ್ತಿದ್ದವು. ದಾರಿಯಲ್ಲಿ ಸಿಕ್ಕುವ ನಕ್ಷತ್ರಗಳಿಗೆ ಲೆಕ್ಕವೇ ಇರಲಿಲ್ಲ. ಇಷ್ಟು ವೇಗದಿಂದ ಓಡುತ್ತಲಿದ್ದರೂ ವಾಯುಸೂಕ್ತದ ಮಹಿಮೆಯಿಂದ ಅವರಿಗೆ ಯಾವ ತೊಂದರೆಯೂ ಆಗದೆ ಅನೇಕ ಲಕ್ಷೋಪಲಕ್ಷ ನಕ್ಷತ್ರಗ್ರಹಗೋಲಗಳನ್ನು ದಾಟುತ್ತಾ ಮೇಲೆಮೇಲೆ ಏರುತ್ತಾ ಸ್ವರ್ಗದ ಎಡೆಗೆ ಸಾಗುತ್ತಾ ಇದ್ದರು. ಸಾಯಂಕಾಲದ ಹೊತ್ತಿಗೆ ಅವರೆಲ್ಲರೂ ಅಮರಾವತಿಯ ಬಾಗಿಲಿಗೆ ಬಂದು ಇಳಿದರು.

ಆಗ ಕಲ್ಯಾಣನು ಮುಂದೆ ಬಂದು 'ಯಾರು ಇರುವಿರಿ? ಬೇಗನೇ ದಾರಿಯನ್ನು ಬಿಡಿರಿ. ಭೂಲೋಕದಿಂದ ಬ್ರಹ್ಮರ್ಷಿಗಳು ಬಂದಿದ್ದೇವೆ' ಎಂದನು.

ಕೂಡಲೇ ದೇವದೂತರು ಬಂದು ವಾಯುದೇವರ ಭಕ್ತರಾದ ಆಂಗಿರಸರಿಗೆ ಸ್ವಾಗತಮಾಡಿ ಒಳಗೆ ಬನ್ನಿರಿ ಎಂದು ಹೇಳಿ ಒಬ್ಬೊಬ್ಬರನ್ನು ಕೈಹಿಡಿದು ಅಮರಾವತಿಗೆ ಕರೆದುಕೊಂಡರು. ಕಲ್ಯಾಣನು ತಾನು ಆಢ್ಯತೆಯಿಂದ ಹಿಂದೆ ನಿಂತು ಒಬ್ಬೊಬ್ಬರನ್ನಾಗಿ ಹೆಸರನ್ನು ಹೇಳಿ ಒಳಗೆ ಬಿಡಿಸಿದನು. ಕೊನೆಗೆ ತಾನೂ ಒಳಗೆ ಹೋಗಬೇಕೆಂದು ಬಾಗಿಲ ಹೊಸ್ತಿಲಿನಲ್ಲಿ ಕಾಲನ್ನು ಇಡಲಿಕ್ಕೆ ಹೋದಾಗ ದೇವದೂತನು ಬಂಗಾರದ ಕೋಲನ್ನು ಅಡ್ಡಹಿಡಿದು 'ದೂರ ಸರಿ' ಎಂದನು. ಕಲ್ಯಾಣನು ಆಶ್ಚರ್ಯವುಳ್ಳವನಾಗಿ 'ಇದೇನು? ನಾನು ಕರೆದುಕೊಂಡು ಬಂದ ನನ್ನ ಶಿಷ್ಯರೆಲ್ಲರನ್ನೂ ಒಳಗೆ ಬಿಟ್ಟು ನನ್ನನ್ನು ಏಕೆ ಪ್ರತಿಬಂಧಿಸುವಿರಿ? ಅಯ್ಯೋ! ದೇವಲೋಕದಲ್ಲಿ ಇದೇನು ಅನ್ಯಾಯವು?' ಎಂದು ಕೂಗತೊಡಗಿದನು.

ಆಗ ದೇವದೂತನು ಶಾಂತನಾಗಿಯೇ 'ಕಲ್ಯಾಣ! ಸುಳ್ಳು ಹೇಳುವವರಿಗೆ ಸ್ವರ್ಗದಲ್ಲಿ ಪ್ರವೇಶವಿಲ್ಲ. ಆ ವಾಯುಸೂಕ್ತವನ್ನು ನೀನು ಊರ್ಣಾಯು ಎಂಬ ಗಂಧರ್ವನಿಂದ ಹೇಳಿಸಿಕೊಂಡು ಭೂಲೋಕದಲ್ಲಿ ನಾನೇ ಆ ಮಂತ್ರಕ್ಕೆ ದ್ರಷ್ಟಾಋಷಿಯೆಂದು ಹೇಳಿಕೊಂಡೆ. ಹೀಗೆ ಸುಳ್ಳು ಹೇಳಿದೆ. ಮತ್ತು ಇವರೆಲ್ಲರನ್ನೂ ಜೀವಂತರನ್ನಾಗಿ ನಾನೇ ಸ್ವರ್ಗಕ್ಕೆ ಕರೆದುಕೊಂಡು ಬಂದೆನೆಂಬ ಅಹಂಕಾರವು ನಿನ್ನಲ್ಲಿ ಉಂಟಾಗಿದೆ. ಇಂತಹ ದುರಭಿಮಾನಿಗಳಿಗೆ ದೇವಲೋಕದಲ್ಲಿ ಸ್ಥಾನವಿಲ್ಲ. ನಡೆ ಇಲ್ಲಿಂದ' ಎಂದು ಹೇಳಿ ಆಂಗಿರಸರನ್ನು ಕರೆದುಕೊಂಡು ಒಳಗೆ ಹೋದರು. ಆಗ

ಕಲ್ಯಾಣನು ಆಕ್ರೋಶಮಾಡಿ 'ಅಯ್ಯೋ! ಇದರಲ್ಲಿ ಸುಳ್ಳೇನಿದೆ? ನಾನೇ ಅಲ್ಲವೇ ಅವರನ್ನು ಇಲ್ಲಿಗೆ ಕರೆದುಕೊಂಡು ಬಂದದ್ದು. ನೀವೇ ದೇವತೆಗಳೇ ಸುಳ್ಳು ಹೇಳುತ್ತೀರಿ. ನೀವು ಹೇಗೆ ಸ್ವರ್ಗದಲ್ಲಿ ಇರುವಿರಿ? ಎಲೋ ಸ್ವಾರ್ಥಸಾಧುಗಳಾದ ಆಂಗೀರಸರೇ! ದುಷ್ಟರೇ! ನನ್ನನ್ನು ಬಿಟ್ಟು ನೀವಾದರೂ ಒಳಗೆ ಹೇಗೆ ಹೋಗುವಿರಿ? ಹೊರಗೆ ಬನ್ನಿ' ಎಂದು ಗಲಾಟೆ ಮಾಡತೊಡಗಿದನು. ಆಗ ದೇವದೂತನೊಬ್ಬನು ಬಂದು 'ದೇವನಿಂದೆಯನ್ನು ಋಷಿನಿಂದೆಯನ್ನೂ ಮಾಡುವ ಈ ಜಂತುವನ್ನು ಇಲ್ಲಿಂದ ದಬ್ಬಿಬಿಡಿರಿ' ಎಂದು ಹೇಳಿದನು. ಕೂಡಲೇ ಸ್ವರ್ಗದ ದೂತನೊಬ್ಬನು ಬಂದು ಅವನ ಕುತ್ತಿಗೆ ಹಿಡಿದು ತಳ್ಳಿದನು. ಕೂಡಲೇ ಕಲ್ಯಾಣನು ತಲೆಕೆಳಗಾಗಿ ಕೆಳಗೆ ಉರುಳಿಸಿದನು. ಪುನಃ ಭೂಮಿಗೆ ಬಂದು ಸೇರಿದನು.



## ಸ್ಮೃತಿಹರೆಯ ಕಥೆಯು[1]

ದುಃಸಹ ಎಂಬವನಿಗೆ ನಿರ್ಮಾಷ್ಟಿ ಎಂಬ ಹೆಸರುಳ್ಳ ದುಷ್ಟೆಯಾದ ಹೆಂಡತಿ ಯಿದ್ದಳು. ಆ ದಂಪತಿಗಳಿಗೆ ಸ್ಮೃತಿಹರಾ ಎಂದು ಹೆಸರುಳ್ಳ ಪರಮ ಸುಂದರಿಯಾದ ಮಗಳಿದ್ದಳು. ಅವಳ ಸೌಂದರ್ಯವನ್ನು ನೋಡಿ ತಂದೆತಾಯಿಗಳಿಗೇ ಆಶ್ಚರ್ಯ ವಾಯಿತು.

ಯೌವನವನ್ನು ಹೊಂದಿದ ಸ್ಮೃತಿಹರೆಗೆ ಯೋಗ್ಯ ವರನನ್ನು ಹುಡುಕಲು ದುಃಸಹನು ವಿಚಾರಮಾಡಿದನು. ಕೊನೆಗೆ ಶಿಬಿಪುತ್ರ ಔಶೀನಕನ ಸಭೆಗೂ ಹೋದನು. ಶಿಬಿಪುತ್ರನು ಧರ್ಮಶೀಲನಾಗಿಯೂ ಸುಂದರನಾಗಿಯೂ ಇದ್ದನು. ಅವನೇ ಯೋಗ್ಯವರನೆಂದು ನಿಶ್ಚಯಿಸಿ 'ನನಗೆ ಸುಂದರಿಯಾದ ಮಗಳಿರುವಳು. ತಾವು ಲಕ್ಷಣ ಪರೀಕ್ಷಕರನ್ನು ಕಳುಹಿಸಿ ಅವಳನ್ನು ಪರೀಕ್ಷಿಸಿ ವಿವಾಹವಾಗಬೇಕೆಂದು ಹೇಳಿಕೊಂಡನು.

ವಿಚಾರ ಮಾಡಿದ ಮೇಲೆ ಜ್ಯೋತಿಷ್ಯವಿದ್ಯೆಯಲ್ಲಿ ಪಂಡಿತರಾದ ಕೆಲವು ಬ್ರಾಹ್ಮಣರನ್ನು ದುಃಸಹನ ಮನೆಗೆ ರಾಜನು ಕಳುಹಿಸಿದನು. ಆ ಬ್ರಾಹ್ಮಣರು ಅಲ್ಲಿ ಅರ್ಘ್ಯಪಾದ್ಯಾದಿ ಸತ್ಕಾರವು ನಡೆದ ಮೇಲೆ ಪರೀಕ್ಷಾಗೃಹಕ್ಕೆ ನಡೆದರು. ಅಲ್ಲಿ ಬ್ರಾಹ್ಮಣರು ಸ್ಮೃತಿಹರೆಯ ಸೌಂದರ್ಯವನ್ನು ನೋಡಿ ಆಶ್ಚರ್ಯವುಳ್ಳವರಾದರು.

ಆಗಲೇ ಗಟ್ಟಿಯಾಗಿ ಸ್ಮೃತಿಹರೆಯು 'ಈ ವಟುವೃಂದವು ನನ್ನ ರೂಪವನ್ನು ಪರೀಕ್ಷಾ ಮಾಡುವುದೇ? ಎಂದು ಹಾಸ್ಯ ಮಾಡಿದಳು.

ಇದರಿಂದ ಅಪಮಾನವನ್ನು ಹೊಂದಿದ ಆ ಬ್ರಾಹ್ಮಣರು ರಾಜನ ಬಳಿಗೆ ಹೋಗಿ 'ಅವಳು ಮಹಾರಾಣಿಯಾಗಲಿಕ್ಕೆ ಯೋಗ್ಯಳಲ್ಲ' ಎಂದು ಅವಳ ಮೇಲಿನ ಕೋಪದಿಂದ ಹೇಳಿಬಿಟ್ಟರು. ಧರ್ಮಭೀರುವಾದ ಔಶೀನರರಾಜನು ದುಃಸಹನಿಗೆ 'ಸ್ಮೃತಿಹರೆಯು ರಾಜಪತ್ನಿಯಾಗಲಿಕ್ಕೆ ಅರ್ಹಳಲ್ಲ' ಎಂದು ಹೇಳಿಕಳುಹಿಸಿದನು.

ಅದನ್ನು ಕೇಳಿ ಸ್ಮೃತಿಹರೆಯು 'ರಾಜನಿಗೆ ಇಷ್ಟು ದರ್ಪವೇ? ಸ್ಮೃತಿಹರೆಯ ರೂಪವು ಅವನಿಗೆ ತುಚ್ಛವೆನಿಸಿತೇ? ನಾನು ನೋಡಿಬಿಡುತ್ತೇನೆ' ಎಂದು ಹೇಳಿದಳು.

ರಾಜನಾದ ಔಶೀನರನಿಗೆ ಬಾಲ್ಯಸ್ನೇಹಿತನೂ ಯೋಗ್ಯಸೇನಾಪತಿಯೂ ಆದ ಅಹಿಪಾರಕನು ಧರ್ಮಬುದ್ಧಿಯುಳ್ಳವನಾಗಿಯೂ ಕರ್ತವ್ಯದಕ್ಷನಾಗಿಯೂ ಇದ್ದನು. ರಾಜನಿಂದ ತಿರಸ್ಕೃತಳಾಗಿದ್ದ ಸ್ಮೃತಿಹರೆಯನ್ನು ಅಹಿಪಾರಕನು ಮದುವೆಯಾದನು. ರಾಜನಿಗೆ ಈ ವಿಷಯವು ತಿಳಿದಿರಲಿಲ್ಲ. ಅಹಿಪಾರಕನಿಗೂ ಈ ವಿಷಯವು ತಿಳಿದಿರಲಿಲ್ಲ. ಅವನು ಸ್ಮೃತಿಹರೆಯ ಸೌಂದರ್ಯದಿಂದ ಮುಗ್ಧನಾಗಿದ್ದನು.

ಒಂದುಸಲ ಶಿಬಿ ರಾಜ್ಯದಲ್ಲಿ ಕಾರ್ತಿಕ ಹುಣ್ಣಿಮೆಯ ಉತ್ಸವವಿದ್ದಿತು. ಆ ದಿನದಲ್ಲಿ ಸಂಧ್ಯಾಕಾಲದಲ್ಲಿ ಅಲಂಕೃತವಾದ ನಗರದಲ್ಲಿ ರಾಜನ ಸವಾರಿಯು ಬರುವುದಿತ್ತು. ಅಂದು ಅಹಿಪಾರಕನು ನಗರದಲ್ಲಿ ಇರಲಿಲ್ಲ. ರಾಜ್ಯದ ಸೀಮೆಯಲ್ಲಾದ ಆಕ್ರಮಣವನ್ನು ತಡೆಗಟ್ಟಲು ಶೀಘ್ರವೇ ಹೋಗಬೇಕಾದದ್ದರಿಂದ ಸ್ಮೃತಿಹರೆಯೊಡನೆ 'ಪ್ರಿಯೇ! ಇಂದಿನ ಉತ್ಸವದಲ್ಲಿ ರಾಜರು ಸವಾರಿ ಮಾಡುತ್ತಾ ನಮ್ಮ ಮನೆಯ ಬಾಗಿಲಿಗೆ ಬರುವರು. ನೀನು ಅವರ ದರ್ಶನದಿಂದ ದೂರವಿರು' ಎಂದು ಹೇಳಿದನು. ಅದಕ್ಕೆ ಅವರು 'ಅದೇಕೆ? ಏನು ಭಯ' ಎಂದಳು. ಅವನು 'ನಿನಗೆ ತಿಳಿಯದೆ? ನೀನು ರೂಪವು ಅಂತಹದು' ಎಂದನು. ಅದಕ್ಕವಳು 'ಔಶೀನರ ರಾಜನು ಕಾಮವನ್ನು ಜಯಿಸಿದ ನಿರ್ಮೋಹಿಯಾಗಿದ್ದಾನೆ' ಎಂದಳು. ಅವನು 'ರಾಜರ್ಷಿ ವಿಶ್ವಾಮಿತ್ರನು. ನಿರ್ಮೋಹಿಯಾಗಿದ್ದನು. ಆದರೂ ಅವನಿಗೆ ಪರಾಜಯವಾಯಿತು' ಎಂದನು. ಅದಕ್ಕವಳು 'ಇಲ್ಲ. ನಿಮ್ಮ ರಾಜನು ಅಜೇಯನಾಗಿರುವನು. ಪ್ರಭು ಭಕ್ತ ಸೇನಾಪತಿಯ ಧರ್ಮಪತ್ನಿಯು ನಾನು. ನಾನು ಅವಶ್ಯವಾಗಿ ನನ್ನ ಕರ್ತವ್ಯವನ್ನು ಪಾಲಿಸುತ್ತೇನೆ' ಎಂದಳು. ಅಹಿಪಾರಕನು ರಣಭೂಮಿಗೆ ನಡೆದನು.

ತರುವಾಯ ಸ್ಮೃತಿಹರೆಯು 'ನಮ್ಮ ದ್ವಾರದಲ್ಲಿ ರಾಜನು ಬಂದ ಕ್ಷಣವೇ ನನಗೆ ತಿಳಿಸಬೇಕು' ಎಂದು ಹೇಳಿ ತನ್ನನ್ನು ಅಲಂಕರಿಸಿಕೊಳ್ಳತೊಡಗಿದಳು.

ತರುವಾಯ ರಾಜನ ಸವಾರಿಯು ಅಹಿಪಾರಕನ ಮನೆಯ ಬಾಗಿಲಲ್ಲಿ ಬರುತ್ತಿತ್ತು. ಆಗ ದಾಸಿಯರು ಸ್ಮೃತಿಹರೆಗೆ ರಾಜನ ಆಗಮನವನ್ನು ದಾಸಿಯರು ತಿಳಿಸಿದರು. ಆಗ ಸ್ಮೃತಿಹರೆಯು ತನ್ನ ಕೈತುಂಬಾ ಅರಳಿದ ಪುಷ್ಪಗಳೊಡನೆ ಮೇಲುಪ್ಪರಿಗೆಯ ಮುಂಭಾಗದಲ್ಲಿ ಬಂದು ನಿಂತು ಅರಸರ ಮಸ್ತಕದ ಮೇಲೆ ಹೂವಿನ ಮಳೆಯನ್ನು ಸುರಿಸಿದಳು. ದಾಸಿಯು ಶಂಖವನ್ನು ಊದಿದಳು. ಆಗ ರಾಜನು ಕಣ್ಣೆತ್ತಿನೋಡಿದನು. ಅವನ ಮನಸ್ಸು ಮೋಹಿತವಾಯಿತು. 'ಈ ರಮಣಿಯು ಯಾರು?' ಎಂದು ಪರವಶನಾಗಿ ಕೇಳಿದನು.

ಆಗ ಪ್ರಧಾನ ಸಚಿವನು 'ಮಹಾರಾಜ! ಇವಳು ತಮ್ಮ ಅನನ್ಯ ಸೇವಕ ಅಹಿಪಾರಕರ ಪತ್ನಿಯು. ದುಃಸನಹ ಮಗಳು. ಸ್ಮೃತಿಹರೆಯು' ಎಂದನು.

ಆ ರಾಜನು 'ಸ್ಮೃತಿಹರೆಯೇ? ಇವಳ ತಂದೆಯು ಯಾಚಕನಾಗಿ ನನ್ನ ಮನೆಗೆ ಬಂದಿದ್ದನು. ಲಕ್ಷಣಶಾಸ್ತ್ರಪಂಡಿತರು. ಇವಳನ್ನು ಅರ್ಹಳಲ್ಲ ಎಂದು ಹೇಳಿದ್ದರು. ಇವಳೇ ಅವಳೋ?' ಎಂದು ಆಶ್ಚರ್ಯಚಕಿತನಾಗಿ ಹೇಳಿಕೊಂಡನು.

ತರುವಾಯ ರಾಜನು ಸಾರಥಿಯೊಡನೆ 'ಅರಮನೆಗೆ ರಥವನ್ನು ಬಿಡು' ಎಂದನು. ಮರುದಿನ ರಾಜದರ್ಬಾರು ನಡೆಯಲಿಲ್ಲ. ಅದೇ ರಾತ್ರಿಯಿಂದ ರಾಜನು ಹಾಸಿಗೆಯನ್ನು ಹಿಡಿದನು.

ಅಹಿಪಾರಕನು 'ರಾಜನು ಸ್ಮೃತಿಹರೆಯನ್ನು ನೋಡಿ ಭ್ರಾಂತನಾಗಿರುವನೆಂದು' ತಿಳಿದುಕೊಂಡನು. ಅವನಿಗೆ ಏನು ಮಾಡಬೇಕೆಂದು ತೋರಲಿಲ್ಲ. ರಾಜರ ಮನೆಯ ಬಾಗಿಲಿಗೆ ಹೋಗಿ 'ಮಹಾರಾಜ! ದರ್ಶನವನ್ನು ಕೊಡಿ' ಎಂದು ಪ್ರಾರ್ಥಿಸಿ ಕೊಂಡನು.

ರಾಜನು 'ಯಾರು' ಎಂದು ಒಳಗಿನಿಂದ ಕೇಳಿದನು.

ಅಹಿಪಾರಕನು 'ನಾನು ಅಹಿಪಾರಕನು' ಎಂದನು.

ರಾಜನು 'ಬೇಡ, ಬೇಡ. ಅಹಿಪಾರಕ! ನೀನು ಹಿಂದೆ ತಿರುಗಿ ಹೋಗು' ಎಂದು ಹೇಳಿದನು.

ಅಹಿಪಾರಕನು 'ನಾನು ಹೋಗುವುದಿಲ್ಲ ಪ್ರಭೋ! ರಾಜದರ್ಶನಕ್ಕಾಗಿ ಪ್ರಜೆಗಳು ಕಾದಿದ್ದಾರೆ' ಎಂದನು.

ರಾಜನು 'ಅಹಿಪಾರಕ1 ನಾನು ರಾಜನಲ್ಲ, ನನ್ನ ರಾಜಧರ್ಮವು ನಷ್ಟವಾಗಿರುವುದು' ಎಂದನು.

ಅಹಿಪಾರಕನು 'ಶಿಬಿರಾಜ್ಯದಲ್ಲಿ ರಾಜಧರ್ಮವು ನಷ್ಟವಾಗುವುದಿಲ್ಲ. ಬಾಗಿಲನ್ನು ತೆರೆಯಲೇಬೇಕು. ನಾನು ತಮ್ಮ ಪ್ರಜೆಯು ಮಾತ್ರವೇ ಅಲ್ಲ ಸೇವಕನೂ ಹೌದು. ಸೇವಕನು ರಾಜದರ್ಶನದಿಂದ ವಂಚಿತನಾಗುವನೇ?' ಎಂದನು.

ರಾಜನು 'ನಾನಿಂದು ಒಬ್ಬ ಸೇವಕನಿಂದಲೂ ಅಧಮನಾಗಿರುವೆನು' ಎಂದನು.

ಅಹಿಪಾರಕನು 'ತಾವು ನನಗೆ ರಾಜರು ಮಾತ್ರವೇ ಅಲ್ಲ. ಬಾಲ್ಯಸ್ನೇಹಿತರಿದ್ದೀರಿ. ಮಿತ್ರನು ಕೇವಲ ಸಂಪತ್ಕಾಲಕ್ಕೇ ಇರುವುದೇ? ಆಪತ್ಕಾಲದಲ್ಲಿ ಸಹಾಯಕನಾಗ ಬಾರದೇ?' ಎಂದನು.

ಬಾಗಿಲು ತೆರೆಯಿತು. ರಾಜನ ಮುಖವನ್ನು ನೋಡಿ ಅಹಿಪಾರಕನು ದುಃಖಿತನಾದನು. 'ಮಹಾರಾಜ! ಈ ದೈನ್ಯವು ತಮಗೆ ಶೋಭಿಸಲಾರದು. ಸ್ಮೃತಿಹರೆಯು ತಮ್ಮ ದಾಸಿಯಿದ್ದಾಳೆ. ತಮ್ಮ ಆದೇಶದೊಡನೆ ಅವಳು ತಮ್ಮ ಸೇವೆಯಲ್ಲಿ ನಿಯುಕ್ತಳಾಗುತ್ತಾಳೆ' ಎಂದನು.

ರಾಜನು ತೀಕ್ಷ್ಣದೃಷ್ಟಿಯಿಂದ ಅಹಿಪಾರಕನನ್ನು ನೋಡಿದನು. ಕಾಮಮೋಹಿತ ರಾಜನಲ್ಲಿ ವಿವೇಕವು ತುಂಬಿತ್ತು. 'ಅಹಿಪಾರಕ! ನಾನು ಸ್ಮೃತಿಹರೆಯ ರೂಪದಲ್ಲಿ ಮಗ್ನನಾಗಿರುವೆನೆಂದು ನಿನಗೆ ತಿಳಿಯಿತೇ? ಅಕಲಂಕ ಶಿಬಿಕುಲವನ್ನು ಕಲಂಕಗೊಳಿಸಿದ್ದೇನೆ. ಕುಲಧರ್ಮವು ಹೋದಮೇಲೆ ಇನ್ನೇನು ಉಳಿಯಿತು?' ಎಂದನು.

ಅಹಿಪಾರಕನು 'ರಾಜ್ಯದ ಯಾವುದೇ ವಸ್ತುವನ್ನೇ ಪರಿಗ್ರಹಿಸುವ ಅಧಿಕಾರವು ತಮಗಿದೆ. ಸ್ಮೃತಿಹರೆಯ ಪತಿಯಾದ ನಾನು ಸ್ವೇಚ್ಛೆಯಿಂದ ಶಾಸ್ತ್ರಾನುಸಾರವಾಗಿ ನನ್ನ ಪತ್ನಿಯನ್ನೇ ದಾನಮಾಡುತ್ತೇನೆ. ತಾವು ಪರಿಗ್ರಹಿಸಬೇಕು' ಎಂದನು.

ರಾಜನು 'ಶಿಬಿವಂಶದಲ್ಲಿ ಈವರೆಗೂ ದಾನನೀಡಿದೆ. ಸ್ವೀಕರಿಸಿಲ್ಲ. ಇದೆಂದೂ ಸಾಧ್ಯವಿಲ್ಲ. ನಾನು ಮರಣವನ್ನೇ ಹೊಂದುವೆನು. ಇಂತಹ ಕಾಮದ ಹಸಿವೆಗೆ ಆಶ್ರಯವನ್ನು ಕೊಡಲಾರೆನು. ರಾಜನ ಧರ್ಮವನ್ನೇ ಪ್ರಜೆಗಳು ಅನುಸರಿಸುವರು' ಎಂದರು.

ಹೀಗೆ ಹತ್ತುದಿನಗಳವರೆಗೆ ವಾಗ್ವಾದವು ನಡೆಯಿತು. ಪ್ರಜೆಗಳೆಲ್ಲರೂ 'ಮಹಾರಾಜರು ಸ್ವಸ್ಥರಾಗಲಿ' ಎಂದು ಭಗವಂತನನ್ನು ಪ್ರಾರ್ಥಿಸುತ್ತಿದ್ದರು. 'ಈ ಪಿಶಾಚಿಯೇ ಮಹಾರಾಜರ ಸರ್ವನಾಶವನ್ನು ಮಾಡಿದಳು' ಎಂದು ಅಹಿಪಾರಕನ ಮನೆಯ ಕಡೆ ನೋಡಿ ಮಾತಾಡುತ್ತಿದ್ದರು.

ಕೊನೆಗೆ ಉಶೀನರ ರಾಜನು ಮೃತನಾದನು. ಶವಯಾತ್ರೆಯು ರಸ್ತೆಯಲ್ಲಿ ಹೊರಟಿತು. ಬರೆ ತಲೆ, ಬರೀ ಪಾದದಿಂದ ಆಕಾಶಕ್ಕೆ ಮುಖಮಾಡಿ ಗಂಭೀರ ಶೋಕದಲ್ಲಿ ಮುಳುಗಿದ ನಾಗರಿಕರು ಮತ್ತು ಶಸ್ತ್ರಧಾರಿ ಸೈನಿಕರು ರಾಜ ಶವದೊಡನೆ ಸಾಗಿದ್ದಾರೆ.

ಸ್ಮಶಾನದಲ್ಲಿ ರಾಜೋಚಿತ ಮರ್ಯಾದೆಯಿಂದ ಪ್ರೇತಕಾರ್ಯವು ನಡೆಯಿತು. ಚಿತೆಯು ದಗದಗನೆ ಉರಿಯತೊಡಗಿತು.

ಭಯಪಟ್ಟ ಒಬ್ಬ ದಾಸಿಯು ಓಡುತ್ತಾ ಬಂದು ಸ್ಮೃತಿಹರೆಯೊಡನೆ ಸರ್ವನಾಶವಾಯಿತು ಎಂದು ತಿಳಿಸಿದಳು.

ರಾಜನ ಅಕಾಲಮೃತ್ಯುವಿಗೆ ಕಾರಣಳಾದ ಸ್ಮೃತಿಹರೆಯು ಹೃದಯಾಘಾತದಿಂದ ದುರ್ಬಲಳಾಗಿದ್ದಳು. ಏನೂ ತಿಳಿಯದೆ ಶೂನ್ಯದೃಷ್ಟಿಯಿಂದ ದಾಸಿಯನ್ನೇ ನೋಡುತ್ತಿದ್ದಳು.

ದಾಸಿಯು ದೀರ್ಘಶ್ವಾಸವನ್ನು ಬಿಡುತ್ತಾ 'ಪ್ರಭುಗಳ ಮೃತ್ಯುವಿನ ಆಘಾತವನ್ನು ತಾಳಲಾರದ ಸೇನಾಪತಿ ಅಹಿಪಾರಕರು ರಾಜರ ಚಿತೆಯನ್ನು ಏರಿ ಆತ್ಮವಿಸರ್ಜನೆ ಮಾಡಿಕೊಂಡರು. ಯಾರೂ ತಡೆಯಲಿಲ್ಲ' ಎಂದು.

ಸ್ಮೃತಿಹರೆಯು ಭಯಾನಕ ಚೀತ್ಕಾರದೊಡನೆ ಧರೆಗುರುಳಿದಳು. ಪತಿಯ ವಿಯೋಗದಿಂದ ಹುಚ್ಚು ಹಿಡಿದವಳಾದಳು. ಅವಳ ಸುಂದರ ದೇಹಕಾಂತಿಯು ಮಣ್ಣು ಹಿಡಿಯಿತು.



## ಪಿತೃಭಕ್ತ ಪುಂಡರೀಕನು

ಭೀಮಾನದಿಯ ತೀರದಲ್ಲಿ ಲೋಹದಂಡವೆಂಬ ಚಿಕ್ಕಹಳ್ಳಿಯಿದ್ದಿತು. ಅಲ್ಲಿ ಜ್ಞಾನವಂತನೆಂಬ ದೇವಭಕ್ತನಾದ ಸದಾಚಾರಸಂಪನ್ನನಾದ ಬ್ರಾಹ್ಮಣನು ವಾಸಮಾಡುತ್ತಿದ್ದನು. ಅವನಿಗೆ ಪತಿವ್ರತೆಯಾದ ದೇವಕಿಯೆಂದು ಹೆಸರುಳ್ಳ ಹೆಂಡತಿಯಿದ್ದಳು. ಆ ದಂಪತಿಗಳಿಗೆ ಎಷ್ಟೋ ದಿನ ಸಂತಾನವಾಗಲಿಲ್ಲ. ಅವರು ಅನೇಕ ವ್ರತೋಪವಾಸಗಳನ್ನು ಮಾಡುತ್ತಲೇ ಇದ್ದರು. ಒಂದುದಿನ ಮಧ್ಯಾಹ್ನದಲ್ಲಿ ಒಬ್ಬ ಯೋಗಿಗಳು ಮನೆಗೆ ಬಂದರು. ದಂಪತಿಗಳು ಅವರಿಗೆ ಆದರದಿಂದ ಸತ್ಕಾರವನ್ನು ಮಾಡಿದರು. ಅವರ ಸೇವೆಯಿಂದ ಸಂತುಷ್ಟರಾದ ಯೋಗಿಗಳು ಒಂದು

ಪೂರ್ಣವಾದ ಫಲವನ್ನು ಅಭಿಮಂತ್ರಿಸಿ ಆ ದಂಪತಿಗಳಿಗೆ ಕೊಟ್ಟರು. ಮತ್ತು ಅವರಿಗೆ ಸಂತಾನಗೋಪಾಲಕೃಷ್ಣಮಂತ್ರವನ್ನು ಉಪದೇಶಿಸಿದರು. ದಂಪತಿಗಳು ಯೋಗಿಗಳ ಆಜ್ಞೆಯಂತೆ ಫಲವನ್ನು ಭಕ್ಷಿಸಿ ಸಂತಾನಗೋಪಾಲಕೃಷ್ಣಮಂತ್ರವನ್ನು ಜಪಿಸುತ್ತಾ ಇದ್ದರು. ಒಂದು ವರ್ಷವಾಗುವಷ್ಟರಲ್ಲಿ ದೇವಕಿಯು ಸುಂದರವಾದ ಒಂದು ಗಂಡುಮಗುವನ್ನು ಹಡೆದಳು. ಮಗುವು ದಿನೇದಿನೇ ಬೆಳೆಯಿತು. ಆ ಮಗುವಿಗೆ ಯೋಗ್ಯ ವಯಸ್ಸಿನಲ್ಲಿ ಉಪನಯನವನ್ನು ಮಾಡಿ ಯೋಗ್ಯ ಗುರುಗಳೊಡನೆ ವಿದ್ಯಾಭ್ಯಾಸವನ್ನು ಮಾಡಿಸಿದರು. ಆ ಮಗುವಿಗೆ ಪುಂಡರೀಕ ಎಂದು ನಾಮಕರಣವನ್ನು ಮಾಡಿದ್ದರು. ಆ ಪುಂಡರೀಕನು ಕೆಲವು ದಿವಸಗಳಲ್ಲಿಯೇ ವೇದಶಾಸ್ತ್ರಸಾಹಿತ್ಯಗಳಲ್ಲಿ ಪಾರಂಗತನಾದನು.

ಕೆಲವು ಸಮಯದ ಮೇಲೆ ಪುಂಡರೀಕನು ಪೂರ್ವಕರ್ಮವಶದಿಂದ ಅಜಾಮಿಳನಂತೆ ದುರ್ಮಾರ್ಗಕ್ಕೆ ಇಳಿದನು. ಪತಿವ್ರತೆಯಾದ ಸುಂದರಿಯಾದ ತನ್ನ ಹೆಂಡತಿಯನ್ನು ಬಿಟ್ಟು ವೇಶ್ಯಾಸ್ತ್ರೀಯರ ವಶನಾದನು. ಇದನ್ನು ತಿಳಿದು ತಂದೆತಾಯಿಗಳು ಬೇಕಾದಷ್ಟು ಬುದ್ಧಿವಾದಗಳನ್ನು ಹೇಳಿದರು. ಆದರೆ ಮದಾಂಧನಾದ ಪುಂಡರೀಕನು ಅವರನ್ನೇ ಬೈದು ಬೆದರಿಸಿ ಸುಮ್ಮನೆ ಇರಿಸಿದನು. ಅವರಿಗೆ ಬಡೆಯಲಿಕ್ಕೇ ಆರಂಭಿಸಿದನು. ತಂದೆತಾಯಿಗಳು ತುಂಬಾ ನೊಂದುಕೊಂಡರು. ದೇವರನ್ನೇ ಸನ್ಮಾರ್ಗಕ್ಕೆ ತರಬೇಕೆಂದು ಪ್ರಾರ್ಥಿಸಿಕೊಂಡರು.

ಒಂದು ದಿವಸದಲ್ಲಿ ಮದ್ಯಪಾನವನ್ನು ಮಾಡಿ ವೇಶ್ಯೆಯರಲ್ಲಿ ಆಸಕ್ತನಾಗಿ ತಿರುಗುತ್ತಿರುವಾಗ ಅಲ್ಲಿ ಒಂದು ಯಾತ್ರಿಕರ ಸಮೂಹವು ಗಟ್ಟಿಯಾಗಿ ಹರಿನಾಮವನ್ನು ಉಚ್ಚರಿಸುತ್ತಾ ಬಂದಿತು. ಹರಿನಾಮವನ್ನು ಕೇಳಿ ಪುಂಡರೀಕನ ಮನಸ್ಸು ತಿರುಗಿತು. ಕೂಡಲೇ ಅವನು ವೇಶ್ಯೆಯರೆಲ್ಲರನ್ನು ಬಿಟ್ಟು ಹುಚ್ಚರಂತೆ ಆ ಯಾತ್ರಿಕರ ಬೆನ್ನು ಹಿಡಿದನು. ತಾನೂ ಕೂಡ ಲಜ್ಜೆಯನ್ನು ಬಿಟ್ಟು ಹರಿನಾಮವನ್ನು ಉಚ್ಚರಿಸಲಿಕ್ಕೆ ಆರಂಭಿಸಿದನು. ಇದನ್ನು ತಿಳಿದ ಪತಿವ್ರತೆಯಾದ ಅವನ ಪತ್ನಿಯೂ ಕೂಡ ಅವನ ಹಿಂದೆಯೇ ಹೊರಟುಹೋದಳು. ಹೀಗೆ ಪುಂಡರೀಕನು ಯಾತ್ರಿಕರೊಡನೆ ಕಾಶಿಗೆ ಹೋಗಿ ಸೇರಿದನು. ಆಗಲೂ ಅವನಿಗೆ ಕಾಮವಾಸನೆಯು ಬಿಟ್ಟಿಲ್ಲ. ತನ್ನ ಹತ್ತಿರವೇ ಇದ್ದ ಹೆಂಡತಿಯನ್ನು ನೋಡಿ ವಿಹಾರಮಾಡುವುದಕ್ಕಾಗಿ ಕಾಶಿಯಲ್ಲಿ ಏಕಾಂತಸ್ಥಳವನ್ನು ಹುಡುಕತೊಡಗಿದನು. ಎಲ್ಲಿ ನೋಡಿದರೂ ಯಾತ್ರಿಕರೂ ವಿದ್ವಾಂಸರೂ ವಿದ್ಯಾರ್ಥಿಗಳು ತುಂಬಿರುವ ಕಾಶಿಯಲ್ಲಿ ಅವನಿಗೆ ವಿಹಾರಕ್ಕೆ ಯೋಗ್ಯವಾದ ಯಾವಸ್ಥಳವೂ ಸಿಗಲಿಲ್ಲ.

ತರುವಾಯ ಕಾಶಿಯ ಬಳಿಯಲ್ಲಿ ಇರುವ ಹಳ್ಳಿಗಳಲ್ಲಿ ಎಲ್ಲಿಯಾದರೂ ಸರಿಯಾದ ಸ್ಥಳವು ಸಿಗುತ್ತದೋ ಎಂದು ನೋಡಿದನು. ಊರ ಹೊರಗೆ ಒಂದು ಅತ್ಯಂತ ರಮಣೀಯವಾದ ಆಶ್ರಮವಿದ್ದಿತು. ಅದು ತನಗೆ ವಿಹಾರಕ್ಕೆ ಅನುಕೂಲವಾದ ಸ್ಥಳವೆಂದು ತಿಳಿದುಕೊಂಡು ಪುಂಡರೀಕನು ಹೆಂಡತಿಯನ್ನು ಕರೆದುಕೊಂಡು ಅಲ್ಲಿಗೆ ಬಂದನು. ಆಶ್ರಮದ ಒಳಗೆ ಹೋದನು. ಅಲ್ಲಿ ಕುಕ್ಕುಟ ಎಂಬ ಮುನಿಗಳು ತಪಸ್ಸನ್ನು ಮಾಡುತ್ತಿದ್ದರು. ಅವರನ್ನು ನೋಡಿ ಪುಂಡರೀಕನಿಗೆ ನಿರಾಶೆಯಾಯಿತು. ಆದರೆ ಅವನ ಹೆಂಡತಿಯು ಮಾತ್ರ ಮುನಿಗಳ ದರ್ಶನದಿಂದ ಸಂತುಷ್ಟಳಾಗಿ ಅವರಿಗೆ ನಮಸ್ಕರಿಸಿದಳು. ಆಗ ಪುಂಡರೀಕನೂ ನಿರ್ವಾಹವಿಲ್ಲದೆ ವಂದಿಸಿದನು. ಆಗ ಮುನಿಗಳು ಕಣ್ಣುತೆರೆದು 'ನೀವು ಯಾರು? ಇಲ್ಲಿಗೆ ಬಂದಿರುವ ಕಾರಣವೇನು?' ಎಂದು ಕೇಳಿದರು. ಆಗ ಪುಂಡರೀಕನು ತನ್ನ ಕುಲಗೋತ್ರಗಳನ್ನು ಹೇಳಿ ಕಾಶಿಗೆ ಬಂದಿದ್ದೇನೆ ಎಂದು ಹೇಳಿ 'ಸ್ವಾಮಿ! ಇಲ್ಲಿಯೇ ಸಮೀಪದಲ್ಲಿ ಕಾಶಿಕ್ಷೇತ್ರವಿದ್ದು ಅಲ್ಲಿ ಗಂಗಾತೀರದಲ್ಲಿ ತಪಸ್ಸನ್ನು ಮಾಡುವುದನ್ನು ಬಿಟ್ಟು ತಾವು ಈ ಗ್ರಾಮದಲ್ಲಿ ಏಕೆ ತಪಸ್ಸನ್ನು ಮಾಡುತ್ತಿರುವಿರಿ?' ಎಂದು ಕೇಳಿದನು. ಅದಕ್ಕೆ ಆ ಮುನಿಗಳು ಆಶ್ಚರ್ಯವನ್ನು ವ್ಯಕ್ತಪಡಿಸಿ 'ಕಾಶಿಯು ಇಲ್ಲಿಗೆ ಸಮೀಪವೇ? ಇಲ್ಲಿಂದ ಗಂಗಾನದಿಗೆ ಎಷ್ಟುದೂರವಿದೆ?' ಎಂದು ಕೇಳಿದರು. ಅದನ್ನು ಕೇಳಿ ಪುಂಡರೀಕನಿಗೆ ನಗುವು ಬಂದಿತು.

ಪುಂಡರೀಕನು 'ಸ್ವಾಮಿ! ಕಾಶಿಯು ಸಮೀಪದಲ್ಲಿಯೇ ಇರುವುದು. ಇಷ್ಟು ಹತ್ತಿರವಿದ್ದರೂ ಕೂಡ ನೀವು ಅಲ್ಲಿಗೆ ಹೋಗಲೇ ಇಲ್ಲವಲ್ಲಾ!' ಎಂದನು. ಅದಕ್ಕೆ ಋಷಿಗಳು ಶಾಂತರಾಗಿ 'ಪುಂಡರೀಕ! ನೀನು ಹೇಳಿದ್ದೆಲ್ಲವೂ ನಿಜವು. ನನಗಾದರೂ ಕಾಶಿಗೆ ಹೋಗಿ ಗಂಗಾಸ್ನಾನ ಮಾಡಿ ವಿಶ್ವನಾಥನ ದರ್ಶನ ತೆಗೆದುಕೊಳ್ಳಬೇಕೆಂದು ಬಯಕೆ ಇದೆ. ಆದರೆ ಅದಕ್ಕಿಂತ ಪವಿತ್ರವಾದ ಒಂದು ಪುಣ್ಯಕಾರ್ಯವು ನನಗೆ ಮನೆಯಲ್ಲಿಯೇ ಇದ್ದುದರಿಂದ ಅದನ್ನು ಬಿಟ್ಟು ಅತ್ತ ಹೋಗಲು ಅವಕಾಶವೇ ಆಗಿಲ್ಲ. ಆ ನನ್ನ ಮನೆಯ ಮಹಾದೇವರನ್ನು ನಿನಗೆ ತೋರಿಸುತ್ತೇನೆ. ಬಾ. ಎಂದು ಹೇಳಿ ತಾವು ಕುಳಿತ ಆಶ್ರಮದ ಹಿಂದೆ ಇರುವ ಗುಡಿಸಿಲಿನಲ್ಲಿ ಇರುವ ತಮ್ಮ ಮುದುಕ ತಾಯಿತಂದೆಗಳ ಬಳಿಗೆ ಕರೆದುಕೊಂಡು ಹೋದರು.

ಕುಕ್ಕುಟ ಮುನಿಗಳು ಅಲ್ಲಿಗೆ ಹೋಗಿ ತಂದೆತಾಯಿಗಳ ಪಾದಗಳನ್ನು ಒತ್ತುತ್ತಾ 'ಪುಂಡರೀಕ! ಜಗತ್ತಿನಲ್ಲಿ ತಾಯಿತಂದೆಯ ಸೇವೆಯ ಹೊರತು ಅದಕ್ಕಿಂತ ಹೆಚ್ಚಿನ ಬೇರೆ ಧರ್ಮವಿಲ್ಲ. ಅವರಿಗೆ ಸ್ನಾನಮಾಡಿಸಿದರೆ ಗಂಗಾಸ್ನಾನಕ್ಕಿಂತ ಅಧಿಕವಾದ

/

ಫಲವು ಬರುವುದು. ಅವರ ಪಾದಸ್ಪರ್ಶದಿಂದ ವಿಶ್ವನಾಥನ ದರ್ಶನದ ಫಲವು ಬರುವುದು. ಅವರಿಬ್ಬರ ಸೇವೆಯೇ ನನ್ನ ಯಾತ್ರೆಯು. ಇವರ ಪೂಜೆಯೇ ನನ್ನ ದೇವರ ಪೂಜೆಯು' ಎಂದು ಹೇಳಿದನು.

ಅವರ ಮಾತನ್ನು ಕೇಳಿದ ಕೂಡಲೇ ಪುಂಡರೀಕನಿಗೆ ವೃದ್ಧರಾದ ತಂದೆತಾಯಿಗಳನ್ನು ಯಾವಾಗಲೂ ಸೇವಿಸದೆ ಪ್ರತಿನಿತ್ಯವೂ ಅವರನ್ನು ಬೈದು ಬಡಿದು ನಿಂದಿಸಿ ಬಂದುದು ತಪ್ಪಾಯಿತೆಂದು ತಿಳಿಯಿತು. ತಾನು ಮಾಡಿದ ತಪ್ಪಿನಿಂದ ಪಶ್ಚಾತ್ತಾಪವನ್ನು ಹೊಂದಿದನು. ಮನಸ್ಸಿಗೆ ಬಹಳ ನಾಚಿಕೆಯಾಯಿತು. ಕೂಡಲೇ ಅವನು ಕುಕ್ಕುಟಮುನಿಗಳಿಗೆ ನಮಸ್ಕಾರಮಾಡಿ ಹೆಂಡತಿಯೊಂದಿಗೆ ಊರಿಗೆ ಬಂದು ತಂದೆತಾಯಿಗಳ ಕಾಲಿಗೆ ಬಿದ್ದು 'ನಾನು ಮಾಡಿದ್ದು ತಪ್ಪಾಯಿತು. ಇಷ್ಟುದಿನ ನಿಮ್ಮನ್ನು ಸೇವಿಸಲಿಲ್ಲ. ಕಾಶಿಯಲ್ಲಿ ಕುಕ್ಕುಟಮುನಿಗಳಿಂದ ನಾನು ಬುದ್ಧಿಯನ್ನು ಪಡೆದೆನು. ನನ್ನ ಅಪರಾಧಗಳನ್ನು ಕ್ಷಮಿಸಿರಿ. ನಾನು ಇನ್ನು ನಿಮ್ಮ ಸೇವೆಯನ್ನು ಮಾಡುತ್ತಾ ಇಲ್ಲೇ ಇರುವೆನು' ಎಂದು ಹೇಳಿ ಅವರ ಪಾದಧೂಳಿಯನ್ನು ಮೈಗೆಲ್ಲಾ ಹಚ್ಚಿಕೊಂಡನು. ತಂದೆತಾಯಿಗಳಿಗೆ ಮಗನು ದಾರಿಗೆ ಬಂದುದನ್ನು ನೋಡಿ ಪರಮಾನಂದವಾಯಿತು. 'ಮಗು! ಇನ್ನಾದರೂ ಒಳ್ಳೇ ಮಾರ್ಗವನ್ನು ಹಿಡಿ. ನಮ್ಮ ಸೇವೆಯನ್ನು ಎಷ್ಟಾದರೂ ಮಾಡು. ಆದರೆ ಸಾಧುಸ್ವಭಾವದ ಈ ಮುದ್ದು ಸೊಸೆಯನ್ನು ಮಾತ್ರ ಕೈಬಿಡಬೇಡ' ಎಂದು ಕಣ್ಣೀರು ತುಂಬಿಸಿಕೊಂಡು ಹೇಳಿದರು.

ತರುವಾಯ ಪುಂಡರೀಕನು ಹಾಗೆಯೇ ಪತ್ನಿಯೊಂದಿಗೆ ಅನ್ಯೋನ್ಯವಾಗಿ ಇದ್ದುಕೊಂಡು ತಂದೆತಾಯಿಗಳ ಸೇವೆಯನ್ನು ಮಾಡುತ್ತಿದ್ದನು. ತಂದೆತಾಯಿಗಳನ್ನು ಬೆಳಿಗ್ಗೆ ಹೆಗಲಮೇಲೆ ಕೂತುಕೊಳ್ಳಿಸಿಕೊಂಡು ಹೋಗಿ ಚಂದ್ರಭಾಗಾನದಿಯಲ್ಲಿ ಸ್ನಾನವನ್ನು ಮಾಡಿಸಿ ಕರಕೊಂಡು ಬಂದು ಮನೆಯಲ್ಲಿ ಊಟಮಾಡಿಸಿ ಕೈತೊಳೆಸಿ ಹಾಸಿಗೆ ಹಾಸಿ ಮಲಗಿಸಿ ಕೈಕಾಲು ಒತ್ತುತ್ತ ಕೂತುಕೊಳ್ಳುತ್ತಿದ್ದನು. ಅವರಿಗೆ ಸ್ವಲ್ಪ ನಿದ್ದೆಯು ಬಂದ ಮೇಲೆ ತಾನು ಭೋಜನವನ್ನು ಮುಗಿಸಿ ಪುನಃ ಬಂದು ಅವರಿಗೆ ಗಾಳಿಹಾಕುತ್ತಾ ಕೂತುಕೊಳ್ಳುತ್ತಿದ್ದನು. ಸಾಯಂಕಾಲದಲ್ಲಿ ಉಪಹಾರ ಮಾಡಿದಮೇಲೆ ಹಾಸಿಗೆ ಹಾಸಿ ಮಲಗಿಸಿ ನಿದ್ದೆ ಬರುವ ತನಕ ಅವರ ಪಾದಗಳನ್ನು ಒತ್ತುತ್ತಾ ಇರುತ್ತಿದ್ದನು. ಅವರು ಮಲಗಿದ ಮೇಲೆ ಅವರ ಕಾಲಡಿಯಲ್ಲಿಯೇ ಮೆಲ್ಲನೇ ಮಲಗುತ್ತಿದ್ದನು. ಹೀಗೆ ಅವಿಚ್ಛಿನ್ನವಾಗಿ ತಂದೆತಾಯಿಗಳ ಸೇವೆಯನ್ನು ಮಾಡುತ್ತಿದ್ದನು.

ಒಂದು ಸಮಯದಲ್ಲಿ ತಂದೆತಾಯಿಗಳು ಕಾಶೀಯಾತ್ರೆಯನ್ನು ಮಾಡಬೇಕೆಂಬ

ತಮ್ಮ ಅಪೇಕ್ಷೆಯನ್ನು ವ್ಯಕ್ತಮಾಡಿದರು. ಅದಕ್ಕೆ ಪುಂಡರೀಕನು ಹಾಗೆಯೇ ಆಗಲಿ ಎಂದು ಎರಡು ಕಾವಡಿಯಲ್ಲಿ ಅವರಿಬ್ಬರನ್ನು ಕೂಡಿಕೊಂಡು ಹೆಗಲಮೇಲೆ ಹೊತ್ತುಕೊಂಡು ಕಾಶೀರಾಮೇಶ್ವರಯಾತ್ರೆಯನ್ನು ಪಾದಚಾರಿಯಾಗಿಯೇ ಕರೆದುಕೊಂಡು ಹೋದನು.

ಕಾಶಿಯ ಹತ್ತಿರ ಕುಕ್ಕುಟಮುನಿಗಳ ಆಶ್ರಮಕ್ಕೂ ಹೋಗಿದ್ದನು. ಅವರು ಪುಂಡರೀಕನ ಮಾತೃಪಿತೃಭಕ್ತಿಯನ್ನು ನೋಡಿ ಸಂತೋಷಪಟ್ಟು ಅವರಿಗೆಲ್ಲರಿಗೂ ಆದರೋಪಚಾರವನ್ನು ಮಾಡಿ 'ನೀನು ಇಂದಿನಿಂದ ಪುಂಡರೀಕನಲ್ಲ, ಪುಂಡರೀಕಮುನಿ' ಎಂದು ಪ್ರಶಂಶಿಸಿದರು. ಪುಂಡರೀಕನು ಅವರಿಗೆ ನಮಸ್ಕರಿಸಿ ತಮ್ಮ ಅನುಗ್ರಹದಿಂದ ನಾನೀಗ ಒಬ್ಬ ಮನುಷ್ಯನಾಗಿರುವೆನು' ಎಂದನು.

ತರುವಾಯ ಊರಿಗೆ ಸೇರಿ ತಂದೆತಾಯಿಗಳ ಸೇವೆಯನ್ನು ಮಾಡುತ್ತಲೇ ಇದ್ದನು. ಒಂದುದಿನ ತಂದೆತಾಯಿಗಳ ಸೇವೆಯನ್ನು ಮಾಡುತ್ತಿರಲು ಅವನಿಗೆ ಅನುಗ್ರಹಮಾಡಲಿಕ್ಕೆ ಬಾಲಗೋಪಾಲಕೃಷ್ಣನು ಇವನಿದ್ದಲ್ಲಿಗೇ ಬಂದನು. ಆಗ ಪುಂಡರೀಕನು ಸ್ವಲ್ಪಹೊತ್ತು ಇಟ್ಟಿಗೆ ಕಲ್ಲಿನಲ್ಲಿ ನಿಂತಿರಬೇಕೆಂದು ಒಂದು ಇಟ್ಟಿಗೆಕಲ್ಲನ್ನು ಕೊಟ್ಟನು. ಅವನ ಮಾತಾಪಿತೃಭಕ್ತಿಗೆ ಮೆಚ್ಚಿದ ಶ್ರೀಕೃಷ್ಣನು ಅವನನ್ನೇ ನೋಡುತ್ತಾ ಕಟಿಯಲ್ಲಿ ಕೈಯನ್ನು ಇಟ್ಟುಕೊಂಡು ಇಟ್ಟಿಗೆಯ ಮೇಲೆ ನಿಂತುಬಿಟ್ಟನು. ಅವನೇ ವಿಟ್ಠಲಮೂರ್ತಿಯೆಂದು ಪ್ರಸಿದ್ಧನಾದನು. ಪುಂಡರೀಕನು ಶ್ರೀಭಗವಂತನಿಗೆ ನಮಸ್ಕರಿಸಿ ಗದ್ಗದ ಸ್ವರದಿಂದ ಸ್ತೋತ್ರ ಮಾಡಿದನು. ಆ ಭಗವಂತನೇ ಈಗಲೂ ಪಂಡರಾಪುರದಲ್ಲಿ ಪಾಂಡುರಂಗವಿಟ್ಠಲನೆಂದು ಪ್ರಸಿದ್ಧನಾಗಿರುವನು.



## ಸುಮಂತುವಿನ ಕಥೆಯು [1]

ಪೂರ್ವದಲ್ಲಿ ತ್ರೇತಾಯುಗದಲ್ಲಿ ಮಾಹಿಷ್ಮತೀ ನಗರದಲ್ಲಿ ಸುಮಂತು ಎಂದು ಹೆಸರುಳ್ಳ ವೇದವೇದಾಂಗ ಪಾರಂಗತನಾದ ಧರ್ಮಿಷ್ಠನಾದ ಬ್ರಾಹ್ಮಣನಿದ್ದನು. ಅವನಿಗೆ ಗುಣಮತಿಯೆಂಬ ಹೆಂಡತಿಯಿದ್ದಳು. ದೇವಶರ್ಮನೆಂಬ ಬ್ರಾಹ್ಮಣನು ಮಗನಿದ್ದನು. ಸುಮಂತುವು ನಿತ್ಯವೂ ದೇವರ ಪೂಜೆಯನ್ನು ಮಾಡುತ್ತಿದ್ದನು. ಮನೆಗೆ ಬಂದ ಬ್ರಾಹ್ಮಣರಿಗೆ ಆತಿಥ್ಯವನ್ನು ಮಾಡುತ್ತಿದ್ದನು. ಅವನು ಒಂದು ದಿವಸದಲ್ಲಿ

1. ಪ.

ಸಮಿಧೆಗಳನ್ನು ತರಲಿಕ್ಕೆ ಕಾಡಿಗೆ ಹೋಗಿದ್ದನು. ಅವನಿಗೆ ತುಂಬಾ ನೀರಡಿಕೆ ಯಾಯಿತು. ಶ್ರಮವಾಯಿತು. ಅವನು ಅಲ್ಲಿಯೇ ಒಂದು ಮರದ ನೆರಳಿನಲ್ಲಿ ಇದ್ದ ಸರೋವರದಲ್ಲಿ ನೀರನ್ನು ಕುಡಿದು ಅಲ್ಲಿಯೇ ಶ್ರಮಪರಿಹಾರಕ್ಕಾಗಿ ಮಲಗಿ ಕೊಂಡನು. ಅವನು ಅಲ್ಲಿ ಮಲಗಿದ್ದರಿಂದ ಕಾಡಿನಲ್ಲಿ ಇದ್ದ ಎಷ್ಟೋ ಮೃಗಪಕ್ಷಿಗಳು ಆ ಸರೋವರದಲ್ಲಿ ನೀರನ್ನು ಕುಡಿಯಲಿಕ್ಕೆ ಬರಲು ಹೆದರಿ ನೀರಡಿಕೆಯಿಂದ ಪ್ರಾಣ ಬಿಟ್ಟವು. ಹೀಗೆ ತಿಳಿಯದೆಯೇ ಅವನಿಗೆ ಬಹಳ ಪಾಪವು ಉಂಟಾಯಿತು. ಸಾಯಂಕಾಲವಾಗಲು ಅವನು ನಿದ್ರೆಯಿಂದ ಎಚ್ಚೆತ್ತವನಾಗಿ ಮನೆಗೆ ಬಂದನು. ಸ್ವಲ್ಪದಿವಸದಲ್ಲಿಯೇ ಅವನು ಮರಣವನ್ನು ಹೊಂದಿದನು. ಅವನ ಹೆಂಡತಿಯು ಅಗ್ನಿಪ್ರವೇಶಮಾಡಿ ಸಹಗಮನ ಮಾಡಿದಳು. ಸುಮಂತುವು ತಿಳಿಯದೆ ತನಗೆ ಸಂಘಟಿಸಿದ ಪಾಪದಿಂದ ಬಹುನರಕಗಳನ್ನು ಅನುಭವಿಸಿ ಒಂದು ಮರಕುಟಿಗ ಪಕ್ಷಿಯಾಗಿ ಹುಟ್ಟಿದನು. ಅವನ ಹೆಂಡತಿಯೂ ಹಾಗೆಯೇ ಹುಟ್ಟಿದರು. ಎರಡು ಪಕ್ಷಿಗಳು ತಮ್ಮ ಪೂರ್ವದ ಮನೆಯ ಬಳಿಯ ಒಂದು ಮರದಲ್ಲಿ ಕೂತುಕೊಂಡು ಯಾವಾಗಲೂ ದುಃಖದಿಂದ ಕೂಗುತ್ತಿದ್ದರು. ಮಗನು ಎಷ್ಟು ಓಡಿಸಿದರೂ ಓಡಲಿಲ್ಲ. ಆಗ ಮಗನು ಕೋಪದಿಂದ ಆ ಪಕ್ಷಿಗಳು ಕೂತಿದ್ದ ಮರದ ಬಿಲಕ್ಕೆ ಬೆಂಕಿಕೊಟ್ಟನು. ಅದರಿಂದ ಆ ಎರಡು ಪಕ್ಷಿಗಳೂ ರೆಕ್ಕೆ ಸುಟ್ಟುಹೋಗಿ ಕೆಳಗೆ ಬಿದ್ದು ರಾತ್ರಿಯಲ್ಲಿ ಪರಸ್ಪರವಾಗಿ ತಮ್ಮ ದುಃಖವನ್ನು ಹೇಳಿಕೊಂಡವು. ಅದನ್ನು ಕೇಳಿ ಮಗನಿಗೆ ಅವರು ತನ್ನ ತಂದೆತಾಯಿಗಳೆಂದು ತಿಳಿಯಿತು. ಆಶ್ಚರ್ಯ ಮತ್ತು ದುಃಖವುಳ್ಳವನಾಗಿ ಋಷಿಗಳ ಬಳಿಗೆ ಹೋಗಿ ಎಲ್ಲವನ್ನೂ ತಿಳಿಸಿ ಅವರು ಹೇಳಿದ ರೀತಿಯಾಗಿ ಬಂದು ನೀರು ಸಿಗದೆ ಇರುವ ಸ್ಥಳದಲ್ಲಿ ಅರವಟ್ಟಿಗೆಯ ಏರ್ಪಡಿಸಿ ನೀರನ್ನು ದಾನ ಮಾಡಿದನು. ಅದರಿಂದ ಅವರಿಬ್ಬರೂ ಪಕ್ಷಿದೇಹವನ್ನು ಬಿಟ್ಟು ದಿವ್ಯದೇಹವುಳ್ಳವ ರಾಗಿ ವಿಮಾನದಲ್ಲಿ ಕೂತುಕೊಂಡು ಉತ್ತಮ ಲೋಕಕ್ಕೆ ಹೋದರು. ಆದುದರಿಂದ ಜಲದಾನವು ಪ್ರಶಸ್ತವಾದದ್ದು.



# ಶಿವಶರ್ಮನ ಕಥೆಯು [1]

ಮಾಹಿಷ್ಮತೀನಗರದಲ್ಲಿ ಶಿವಶರ್ಮ ಎಂದು ಹೆಸರುಳ್ಳ ವೈಶ್ಯನೊಬ್ಬನಿದ್ದನು. ಅವನು ಹಣವಂತನಾಗಿದ್ದನು. ವೈಶ್ಯವೃತ್ತಿಯನ್ನು ಮಾಡುತ್ತಿದ್ದನು. ಲೋಭದಿಂದ ಬಹುಹಣವನ್ನು ಸಂಪಾದಿಸುತ್ತಿದ್ದನು. ನ್ಯಾಯದಿಂದಲೋ ಅನ್ಯಾಯದಿಂದಲೋ ಹಣವನ್ನು ಸಂಪಾದಿಸುತ್ತಿದ್ದನು. ಆ ಹಣವನ್ನು ಮತ್ತೂ ಹೆಚ್ಚಿಸಲಿಕ್ಕೆ ಪ್ರಯತ್ನ ಮಾಡುತ್ತಿದ್ದನು. ಲೋಭದಿಂದ ಒಂದು ದಿನದಲ್ಲಿಯೂ ಅವನು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಲಿಲ್ಲ. ಆ ಪಾಪಿಯು ಒಂದು ದಿನದಲ್ಲಿಯೂ ಗೋವುಗಳಿಗೆ ಆಹಾರವನ್ನು ಹಾಕಿರಲಿಲ್ಲ. ತನ್ನ ಮನೆಯಲ್ಲಿ ಇರುವವರಿಗೆಯೇ ಸರಿಯಾಗಿ ಅನ್ನವನ್ನು ಹಾಕುತ್ತಿರಲಿಲ್ಲ. ಈರೀತಿಯಾಗಿ ಹಣದಲ್ಲಿ ಲೋಭದಿಂದ ಬಹುಕಾಲವನ್ನು ಕಳೆದನು. ಅವನು ಹೋಗುವಾಗ ಬರುವಾಗ ನಡೆಯುವಾಗ ನಿಲ್ಲುವಾಗ ಕೂತುಕೊಳ್ಳುವಾಗ ಹಣವನ್ನೇ ಯೋಚಿಸುತ್ತಿದ್ದನು. ಹೀಗಿರಲು ಒಂದು ದಿನದಲ್ಲಿ ದೈವೇಚ್ಛೆಯಿಂದ ಅವನ ಹಣವನ್ನು ಕಳ್ಳನು ಕದ್ದುಕೊಂಡು ಹೋದನು. ತರುವಾಯ ವೈಶ್ಯನು ತಾನು ಹಣವನ್ನು ಇಟ್ಟ ಸ್ಥಳಕ್ಕೆ ಹೋಗಿ ನೋಡಲು ಹಣವಲ್ಲಿ ಇರಲಿಲ್ಲ. ಅವನು ಹಾಹಾಕಾರವನ್ನು ಮಾಡಿದನು. 'ನಾನು ಎಲ್ಲಿಗೆ ಹೋಗಲಿ? ಏನನ್ನು ಮಾಡಲಿ? ಇನ್ನು ಮೇಲೆ ಹೇಗೆ ಜೀವಿಸಲಿ?' ಎಂದು ಹೇಳುತ್ತಾ ಶಿವಶರ್ಮನು ಹುಚ್ಚುಹಿಡಿದವನಂತೆ ಭೂಮಿಯಲ್ಲೆಲ್ಲಾ ಸಂಚರಿಸಿದನು. ದೈವಯೋಗದಿಂದ ಒಂದು ಸಮಯದಲ್ಲಿ ಗಂಗಾತೀರಕ್ಕೆ ಬಂದನು. ಅಲ್ಲಿ ಧರ್ಮಿಷ್ಠರಾದ ಜನರ ಸಮೂಹವನ್ನು ನೋಡಿದವನಾಗಿ ಅಲ್ಲಿ ತನ್ನ ಜೀವನಕ್ಕಾಗಿ ಪ್ರಯತ್ನ ಮಾಡಿದನು. ಏನೇನು ಮಾಡಿದರೂ ಅವನಿಗೆ ಹಣ ಸಂಪಾದನೆಯಾಗಲಿಲ್ಲ. ಕೊನೆಗೆ ತಾನು ಸಾಯುವುದೆಂದು ನಿಶ್ಚಯಿಸಿ ಗಂಗೆಯ ಬಳಿಗೆ ಹೋಗಿ ಕುತ್ತಿಗೆಗೆ ದೊಡ್ಡ ಕಲ್ಲನ್ನು ಕಟ್ಟಿಕೊಂಡು ನೀರಿನಲ್ಲಿ ಹಾರಲಿಕ್ಕೆ ಸಿದ್ಧನಾದನು. ಅದನ್ನು ಚಂದ್ರಶರ್ಮ ಎಂಬ ಮುನಿಗಳು ನೋಡಿದರು. ಆಗ ಅವರು ಆಶ್ಚರ್ಯವುಳ್ಳವರಾಗಿ 'ನೀನು ಯಾರು? ಯಾಕೆ ಗಂಗೆಯಲ್ಲಿ ಹಾರುವಿ? ನಿನಗೇನು ದುಃಖವುಂಟಾಯಿತು? ಯಾಕೆ ಆತ್ಮಹತ್ಯೆಯನ್ನು ಮಾಡಿಕೊಳ್ಳುವಿ?' ಎಂದು ಕೇಳಿದರು. ಆಗ ವೈಶ್ಯನು ಆ ಮುನಿಗಳನ್ನು ಸ್ತುತಿಸಿ 'ತಾನು ಹಣವಿಲ್ಲದ ಕಾರಣ ಪ್ರಾಣವನ್ನು ಬಿಡುವೆನೆಂದು ತನ್ನನ್ನು ರಕ್ಷಿಸಬೇಕೆಂದು ಹೇಳಿಕೊಂಡನು. ಆಗ ಮುನಿಗಳು ಅವನ ಮನಸ್ಸಿನ

1. ಸ್ಕಂ.ಪು. ಪುಷ್ಕ.ಮಾ.ಮಾ. ಅ.14

ಅಭಿಪ್ರಾಯವನ್ನು ತಿಳಿದು ಪುಷ್ಯಮಾಸದ ಹುಣ್ಣಿಮೆ ದಿನದಲ್ಲಿ ಸ್ನಾನದಾನಾದಿಗಳನ್ನು ಮಾಡಿದರೆ ಸಂಪತ್ತು ಬರುವುದೆಂದು ಹೇಳಿದರು. ತರುವಾಯ ವೈಶ್ಯನು ಹಾಗೆಯೇ ಮಾಡಿದನು. ಅದರಿಂದ ಅವನಿಗೆ ಬೇಕಾದಂತೆ ಹಣವು ಬಂದಿತು. ಆಮೇಲೆ ಅವನಿಗೆ ಧರ್ಮದಲ್ಲಿ ಬುದ್ಧಿಯುಂಟಾಯಿತು. ಆಮೇಲೆ ಪ್ರತಿವರ್ಷವೂ **ಪುಷ್ಯಮಾಸದ ಹುಣ್ಣಿಮೆಯ** ವ್ರತವನ್ನು ಮಾಡಿ ಕ್ರಮದಿಂದ ವಿಷ್ಣುಲೋಕವನ್ನು ಹೊಂದಿದನು.



## ದ್ರುಮಿಳ ಬ್ರಾಹ್ಮಣನ ಕಥೆಯು [1]

ಪೂರ್ವದಲ್ಲಿ ವಂಗದೇಶದಲ್ಲಿ ದ್ರುಮಿಳ ಎಂದು ಹೆಸರುಳ್ಳ ಬ್ರಾಹ್ಮಣನು ಇದ್ದನು. ಅವನು ಅತ್ಯಂತ ಧರ್ಮಿಷ್ಠನಾಗಿದ್ದನು. ವೇದವೇದಾಂಗಶಾಸ್ತ್ರದಲ್ಲಿ ಪಾರಂಗತನಾಗಿದ್ದನು. ಸರ್ವಸತ್ಕರ್ಮದಲ್ಲಿ ಆಸಕ್ತನಾಗಿದ್ದನು. ಅತಿಥಿಗಳನ್ನು ಸತ್ಕರಿಸುತ್ತಿದ್ದನು. ತಾಮ್ರಪರ್ಣಿನದಿಯ ತೀರದಲ್ಲಿ ವಾಸಮಾಡುತ್ತಿದ್ದನು. ಪ್ರತಿನಿತ್ಯವೂ ತಾಮ್ರಪರ್ಣಿಗೆ ಹೋಗಿ ಸ್ನಾನವನ್ನು ಮಾಡಿಕೊಂಡು ಅಲ್ಲಿ ಆಹ್ನಿಕವನ್ನು ಮಾಡಿ ಮನೆಗೆ ಬಂದು ಆಮೇಲಿನ ಕಾರ್ಯಗಳನ್ನು ಮಾಡುತ್ತಿದ್ದನು. ಒಂದು ಪುಷ್ಯಮಾಸದಲ್ಲಿ ತಾಮ್ರಪರ್ಣಿಗೆ ಹೋಗಿ ಸ್ನಾನ ಮಾಡಲಿಕ್ಕೆ ಉದ್ಯೋಗ ಮಾಡುತ್ತಿದ್ದನು. ಅಲ್ಲಿ ಇಬ್ಬರು ಕನ್ಯೆಯರನ್ನು ನೋಡಿದನು. ಅವರೊಡನೆ 'ನೀವು ಯಾರು? ಬೆಳಿಗ್ಗೆ ಏನು ಮಾಡುತ್ತಿರುವಿರಿ?' ಎಂದು ಕೇಳಿದನು. 'ನಾವು ಶಂಖಚೂಡ ಎಂದು ಹೆಸರುಳ್ಳ ನಾಗಶ್ರೇಷ್ಠನ ಕನ್ಯೆಯರು ನಾವು. ಆ ತಂದೆಯು ಉಪದೇಶ ಮಾಡಿದ ವ್ರತವನ್ನು ನಾವು ಮಾಡುತ್ತಿರುವೆವು. ಸತ್ಯಭಾಮಾದೇವಿಯರಿಂದ ಸಹಿತನಾದ ಶ್ರೀಕೃಷ್ಣನ ಪ್ರೀತಿಗಾಗಿ ಈ ವ್ರತವನ್ನು ಮಾಡುತ್ತಿರುವೆವು. ನೀನೂ ಈ ವ್ರತವನ್ನು ಮಾಡು. ಪುಷ್ಯಮಾಸದಲ್ಲಿ ಪ್ರಾತಃಸ್ನಾನವನ್ನು ಮಾಡಬೇಕು. ದೀಪದಾನವನ್ನು ಮಾಡಬೇಕು. ಇದರಿಂದ ದುರ್ಗತಿಯು ಪರಿಹೃತವಾಗುವುದು' ಹೀಗೆಂದು ಹೇಳಿ ಆ ಕನ್ಯೆಯರು ಮರೆಯಾಗಿ ಹೋದರು. ದ್ರುಮಿಳನು ಅಲ್ಲಿಯೇ ಮೂರು ದಿವಸ ವಾಸಮಾಡುವವನಾಗಿ ಪ್ರತಿನಿತ್ಯವೂ ಸ್ನಾನದಾನಾದಿಗಳನ್ನು ಮಾಡುತ್ತಿದ್ದನು. ಮೂರನೇ ದಿನದಲ್ಲಿ ಪ್ರಾತಃಸ್ನಾನವನ್ನು ಮಾಡಿ ಮನೆಗೆ ಹೋಗುತ್ತಿರುವಾಗ ದಾರಿಯ

1. ಸ್ಕಾಂ.ಪು.ಪುಷ್ಯ.ಮಾ.ಮಾ. .13

# ಶಿವಶರ್ಮನ ಕಥೆಯು [1]

ಮಾಹಿಷ್ಮತೀನಗರದಲ್ಲಿ ಶಿವಶರ್ಮ ಎಂದು ಹೆಸರುಳ್ಳ ವೈಶ್ಯನೊಬ್ಬನಿದ್ದನು. ಅವನು ಹಣವಂತನಾಗಿದ್ದನು. ವೈಶ್ಯವೃತ್ತಿಯನ್ನು ಮಾಡುತ್ತಿದ್ದನು. ಲೋಭದಿಂದ ಬಹುಹಣವನ್ನು ಸಂಪಾದಿಸುತ್ತಿದ್ದನು. ನ್ಯಾಯದಿಂದಲೋ ಅನ್ಯಾಯದಿಂದಲೋ ಹಣವನ್ನು ಸಂಪಾದಿಸುತ್ತಿದ್ದನು. ಆ ಹಣವನ್ನು ಮತ್ತೂ ಹೆಚ್ಚಿಸಲಿಕ್ಕೆ ಪ್ರಯತ್ನ ಮಾಡುತ್ತಿದ್ದನು. ಲೋಭದಿಂದ ಒಂದು ದಿನದಲ್ಲಿಯೂ ಅವನು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಲಿಲ್ಲ. ಆ ಪಾಪಿಯು ಒಂದು ದಿನದಲ್ಲಿಯೂ ಗೋವುಗಳಿಗೆ ಆಹಾರವನ್ನು ಹಾಕಿರಲಿಲ್ಲ. ತನ್ನ ಮನೆಯಲ್ಲಿ ಇರುವವರಿಗೆಯೇ ಸರಿಯಾಗಿ ಅನ್ನವನ್ನು ಹಾಕುತ್ತಿರಲಿಲ್ಲ. ಈರೀತಿಯಾಗಿ ಹಣದಲ್ಲಿ ಲೋಭದಿಂದ ಬಹುಕಾಲವನ್ನು ಕಳೆದನು. ಅವನು ಹೋಗುವಾಗ ಬರುವಾಗ ನಡೆಯುವಾಗ ನಿಲ್ಲುವಾಗ ಕೂತುಕೊಳ್ಳುವಾಗ ಹಣವನ್ನೇ ಯೋಚಿಸುತ್ತಿದ್ದನು. ಹೀಗಿರಲು ಒಂದು ದಿನದಲ್ಲಿ ದೈವೇಚ್ಛೆಯಿಂದ ಅವನ ಹಣವನ್ನು ಕಳ್ಳನು ಕದ್ದುಕೊಂಡು ಹೋದನು. ತರುವಾಯ ವೈಶ್ಯನು ತಾನು ಹಣವನ್ನು ಇಟ್ಟ ಸ್ಥಳಕ್ಕೆ ಹೋಗಿ ನೋಡಲು ಹಣವಲ್ಲಿ ಇರಲಿಲ್ಲ. ಅವನು ಹಾಹಾಕಾರವನ್ನು ಮಾಡಿದನು. 'ನಾನು ಎಲ್ಲಿಗೆ ಹೋಗಲಿ? ಏನನ್ನು ಮಾಡಲಿ? ಇನ್ನು ಮೇಲೆ ಹೇಗೆ ಜೀವಿಸಲಿ?' ಎಂದು ಹೇಳುತ್ತಾ ಶಿವಶರ್ಮನು ಹುಚ್ಚುಹಿಡಿದವನಂತೆ ಭೂಮಿಯಲ್ಲೆಲ್ಲಾ ಸಂಚರಿಸಿದನು. ದೈವಯೋಗದಿಂದ ಒಂದು ಸಮಯದಲ್ಲಿ ಗಂಗಾತೀರಕ್ಕೆ ಬಂದನು. ಅಲ್ಲಿ ಧರ್ಮಿಷ್ಠರಾದ ಜನರ ಸಮೂಹವನ್ನು ನೋಡಿದವನಾಗಿ ಅಲ್ಲಿ ತನ್ನ ಜೀವನಕ್ಕಾಗಿ ಪ್ರಯತ್ನ ಮಾಡಿದನು. ಏನೇನು ಮಾಡಿದರೂ ಅವನಿಗೆ ಹಣ ಸಂಪಾದನೆಯಾಗಲಿಲ್ಲ. ಕೊನೆಗೆ ತಾನು ಸಾಯುವುದೆಂದು ನಿಶ್ಚಯಿಸಿ ಗಂಗೆಯ ಬಳಿಗೆ ಹೋಗಿ ಕುತ್ತಿಗೆಗೆ ದೊಡ್ಡ ಕಲ್ಲನ್ನು ಕಟ್ಟಿಕೊಂಡು ನೀರಿನಲ್ಲಿ ಹಾರಲಿಕ್ಕೆ ಸಿದ್ಧನಾದನು. ಅದನ್ನು ಚಂದ್ರಶರ್ಮ ಎಂಬ ಮುನಿಗಳು ನೋಡಿದರು. ಆಗ ಅವರು ಆಶ್ಚರ್ಯವುಳ್ಳವರಾಗಿ 'ನೀನು ಯಾರು? ಯಾಕೆ ಗಂಗೆಯಲ್ಲಿ ಹಾರುವಿ? ನಿನಗೇನು ದುಃಖವುಂಟಾಯಿತು? ಯಾಕೆ ಆತ್ಮಹತ್ಯೆಯನ್ನು ಮಾಡಿಕೊಳ್ಳುವಿ?' ಎಂದು ಕೇಳಿದರು. ಆಗ ವೈಶ್ಯನು ಆ ಮುನಿಗಳನ್ನು ಸ್ತುತಿಸಿ 'ತಾನು ಹಣವಿಲ್ಲದ ಕಾರಣ ಪ್ರಾಣವನ್ನು ಬಿಡುವೆನೆಂದು ತನ್ನನ್ನು ರಕ್ಷಿಸಬೇಕೆಂದು ಹೇಳಿಕೊಂಡನು. ಆಗ ಮುನಿಗಳು ಅವನ ಮನಸ್ಸಿನ

---

1. ಸ್ಕಂ.ಪು. ಪುಷ್ಕ.ಮಾ.ಮಾ. ಅ.14

/

ಅಭಿಪ್ರಾಯವನ್ನು ತಿಳಿದು ಪುಷ್ಯಮಾಸದ ಹುಣ್ಣಿಮೆ ದಿನದಲ್ಲಿ ಸ್ನಾನದಾನಾದಿಗಳನ್ನು ಮಾಡಿದರೆ ಸಂಪತ್ತು ಬರುವುದೆಂದು ಹೇಳಿದರು. ತರುವಾಯ ವೈಶ್ಯನು ಹಾಗೆಯೇ ಮಾಡಿದನು. ಅದರಿಂದ ಅವನಿಗೆ ಬೇಕಾದಂತೆ ಹಣವು ಬಂದಿತು. ಆಮೇಲೆ ಅವನಿಗೆ ಧರ್ಮದಲ್ಲಿ ಬುದ್ಧಿಯುಂಟಾಯಿತು. ಆಮೇಲೆ ಪ್ರತಿವರ್ಷವೂ **ಪುಷ್ಯಮಾಸದ ಹುಣ್ಣಿಮೆಯ ವ್ರತವನ್ನು** ಮಾಡಿ ಕ್ರಮದಿಂದ ವಿಷ್ಣುಲೋಕವನ್ನು ಹೊಂದಿದನು.



## ದ್ರುಮಿಳ ಬ್ರಾಹ್ಮಣನ ಕಥೆಯು [1]

ಪೂರ್ವದಲ್ಲಿ ವಂಗದೇಶದಲ್ಲಿ ದ್ರುಮಿಳ ಎಂದು ಹೆಸರುಳ್ಳ ಬ್ರಾಹ್ಮಣನು ಇದ್ದನು. ಅವನು ಅತ್ಯಂತ ಧರ್ಮಿಷ್ಠನಾಗಿದ್ದನು. ವೇದವೇದಾಂಗಶಾಸ್ತ್ರದಲ್ಲಿ ಪಾರಂಗತನಾಗಿದ್ದನು. ಸರ್ವಸತ್ಕರ್ಮದಲ್ಲಿ ಆಸಕ್ತನಾಗಿದ್ದನು. ಅತಿಥಿಗಳನ್ನು ಸತ್ಕರಿಸುತ್ತಿದ್ದನು. ತಾಮ್ರಪರ್ಣಿನದಿಯ ತೀರದಲ್ಲಿ ವಾಸಮಾಡುತ್ತಿದ್ದನು. ಪ್ರತಿನಿತ್ಯವೂ ತಾಮ್ರಪರ್ಣಿಗೆ ಹೋಗಿ ಸ್ನಾನವನ್ನು ಮಾಡಿಕೊಂಡು ಅಲ್ಲಿ ಆಹ್ನಿಕವನ್ನು ಮಾಡಿ ಮನೆಗೆ ಬಂದು ಆಮೇಲಿನ ಕಾರ್ಯಗಳನ್ನು ಮಾಡುತ್ತಿದ್ದನು. ಒಂದು ಪುಷ್ಯಮಾಸದಲ್ಲಿ ತಾಮ್ರಪರ್ಣಿಗೆ ಹೋಗಿ ಸ್ನಾನ ಮಾಡಲಿಕ್ಕೆ ಉದ್ಯೋಗ ಮಾಡುತ್ತಿದ್ದನು. ಅಲ್ಲಿ ಇಬ್ಬರು ಕನ್ಯೆಯರನ್ನು ನೋಡಿದನು. ಅವರೊಡನೆ 'ನೀವು ಯಾರು? ಬೆಳಿಗ್ಗೆ ಏನು ಮಾಡುತ್ತಿರುವಿರಿ?' ಎಂದು ಕೇಳಿದನು. 'ನಾವು ಶಂಖಚೂಡ ಎಂದು ಹೆಸರುಳ್ಳ ನಾಗಶ್ರೇಷ್ಠನ ಕನ್ಯೆಯರು ನಾವು. ಆ ತಂದೆಯು ಉಪದೇಶ ಮಾಡಿದ ವ್ರತವನ್ನು ನಾವು ಮಾಡುತ್ತಿರುವೆವು. ಸತ್ಯಭಾಮಾದೇವಿಯರಿಂದ ಸಹಿತನಾದ ಶ್ರೀಕೃಷ್ಣನ ಪ್ರೀತಿಗಾಗಿ ಈ ವ್ರತವನ್ನು ಮಾಡುತ್ತಿರುವೆವು. ನೀನೂ ಈ ವ್ರತವನ್ನು ಮಾಡು. ಪುಷ್ಯಮಾಸದಲ್ಲಿ ಪ್ರಾತಃಸ್ನಾನವನ್ನು ಮಾಡಬೇಕು. ದೀಪದಾನವನ್ನು ಮಾಡಬೇಕು. ಇದರಿಂದ ದುರ್ಗತಿಯು ಪರಿಹೃತವಾಗುವುದು' ಹೀಗೆಂದು ಹೇಳಿ ಆ ಕನ್ಯೆಯರು ಮರೆಯಾಗಿ ಹೋದರು. ದ್ರುಮಿಳನು ಅಲ್ಲಿಯೇ ಮೂರು ದಿವಸ ವಾಸಮಾಡುವವನಾಗಿ ಪ್ರತಿನಿತ್ಯವೂ ಸ್ನಾನದಾನಾದಿಗಳನ್ನು ಮಾಡುತ್ತಿದ್ದನು. ಮೂರನೇ ದಿನದಲ್ಲಿ ಪ್ರಾತಃಸ್ನಾನವನ್ನು ಮಾಡಿ ಮನೆಗೆ ಹೋಗುತ್ತಿರುವಾಗ ದಾರಿಯ

1. ಸ್ಕಾಂ.ಪು.ಪುಷ್ಯ.ಮಾ.ಮಾ. .13

ಮಧ್ಯದಲ್ಲಿ ಮಲಗಿದ್ದ ಒಂದುವರೆ ಯೋಜನ ಉದ್ದವಾಗಿದ್ದ ಹೆಬ್ಬಾವನ್ನು ನೋಡಿದನು. ಅದು ದಾರಿಯಲ್ಲಿ ಅಡ್ಡವಾಗಿ ಮಲಗಿದ್ದ ಕಾರಣ ತಾನು ಮುಂದೆ ಹೋಗುವುದಕ್ಕಾಗಿ ಅದರ ಮೇಲೆ ಕಮಂಡಲುವಿನಲ್ಲಿ ಇದ್ದ ನೀರನ್ನು ಪ್ರೋಕ್ಷಿಸಿದನು. ನೀರು ಮೈಮೇಲೆ ಬಿದ್ದ ಕೂಡಲೇ ಹೆಬ್ಬಾವಿನ ದೇಹವು ಹಾಗೆಯೇ ಅಲ್ಲಿ ಬಿದ್ದಿತು. ಒಬ್ಬ ಗಂಧರ್ವನು ಬಂದು ಮಾತಾಡಿದನು. 'ಬ್ರಾಹ್ಮಣಶ್ರೇಷ್ಠನೇ! ನಾನು ನಿನ್ನಿಂದ ಧನ್ಯನಾದೆನು. ಕೃತಾರ್ಥನಾದೆನು. ಉದ್ಧೃತನಾದನು. ನಿನಗೆ ನಮಸ್ಕಾರವು. ಇನ್ನು ನಾನು ಗಂಧರ್ವಲೋಕಕ್ಕೆ ಹೋಗುವೆನು. ನನಗೆ ಆಜ್ಞಾಮಾಡುವವನಾಗು' ಎಂದು ಹೇಳಿದನು. ಆಗ ದ್ರುಮಿಳನು 'ನೀನು ಯಾರು? ಯಾವ ಕರ್ಮದಿಂದ ಈ ಅವಸ್ಥೆಯನ್ನು ಹೊಂದಿರುವಿ? ಈಗ ಹೇಗೆ ಈ ಘೋರರೂಪದಿಂದ ಬಿಡುಗಡೆಯನ್ನು ಹೊಂದಿರುವಿ?' ಎಂದು ಕೇಳಿದನು. ಆಗ ಗಂಧರ್ವನು ''ನನ್ನ ಪೂರ್ವಚರಿತ್ರೆಯನ್ನು ಕೇಳು. ನಾನು ದೇವಲನೆಂದು ಹೆಸರುಳ್ಳ ಗಂಧರ್ವನು. ರೂಪವಂತನು. ಗುಣವಂತನು. ನರ್ತನ ಗಾಯನದಿಂದ ಗರ್ವವುಳ್ಳವನಾಗಿದ್ದೆನು. ಒಂದು ದಿವಸ ನಾನು ಇರುವಲ್ಲಿಗೆ ಅಷ್ಟಾವಕ್ರರೆಂಬ ಮಹಾಮುನಿಗಳು ಬಂದಿದ್ದರು. ನಾನು ಅವರ ರೂಪವನ್ನು ನೋಡಿ ಅವರನ್ನು ಅಪಹಾಸ ಮಾಡಿದೆನು. ಅದರಿಂದ ಅವರು ಕೋಪವುಳ್ಳವರಾಗಿ 'ನೀನು ನನ್ನನ್ನು ನೋಡಿ ಅಪಹಾಸ ಮಾಡಿದಿಯಾದ ಕಾರಣ ಹೆಬ್ಬಾವು ಆಗುವಿ' ಎಂದು ಹೇಳಿ ಅಲ್ಲಿಂದ ಹೋಗಲಿಕ್ಕೆ ಹೊರಟರು. ಆಗ ನಾನು ಭಯಗ್ರಸ್ತನಾಗಿ ಅವರ ಪಾದವನ್ನು ಹಿಡಿದು ನಮಸ್ಕರಿಸಿ ಶಾಪದ ಕೊನೆಯನ್ನು ಹೇಳಬೇಕಾಗಿ ಪ್ರಾರ್ಥಿಸಿಕೊಂಡೆನು. ಆಗ ಅಷ್ಟಾವಕ್ರರು 'ನೀನು ಕಾವೇರಿಯ ತೀರದಲ್ಲಿ ಇರುವ ಅರಣ್ಯದಲ್ಲಿ ಹೆಬ್ಬಾವಾಗಿ ಸಂಚರಿಸುತ್ತಿರುವಿ. ಒಂದು ಸಮಯದಲ್ಲಿ ದ್ರುಮಿಳ ಎಂಬ ಬ್ರಾಹ್ಮಣನು ಅಲ್ಲಿಗೆ ಬರುವನು. ನೀನು ಅವನಿಗೆ ದಾರಿಯನ್ನು ತಡೆಯುವಿ. ಆಗ ಅವನು ನಿನ್ನ ಮೇಲೆ ನೀರನ್ನು ಪ್ರೋಕ್ಷಿಸುವನು. ಅದರಿಂದ ನೀನು ಪುಷ್ಯಮಾಸದಲ್ಲಿ ಸ್ನಾನಮಾಡಿದ ಫಲವನ್ನು ಹೊಂದುವಿ. ಆಗ ನಿನ್ನ ಆ ದುಷ್ಟರೂಪವನ್ನು ಬಿಟ್ಟು ನಿಜರೂಪವನ್ನು ಧರಿಸುವಿ. ಆಗ ನಿನಗೆ ಪೂರ್ವಸ್ಮರಣೆಯೂ ಬರುವುದು' ಎಂದು ಹೇಳಿಹೋದರು. ದ್ರುಮಿಳನೇ! ಈರೀತಿಯಾಗಿ ನಿನಗೆ ನನ್ನ ಚರಿತ್ರೆಯನ್ನು ತಿಳಿಸಿರುವೆನು. ಆ ಮುನಿಗಳ ಅನುಗ್ರಹದಿಂದ ನನಗೆ ಪರಮಮಂಗಳವಾಯಿತು. ಇನ್ನು ನನ್ನ ಸ್ಥಾನಕ್ಕೆ ಹೋಗುವೆನು. ಅನುಜ್ಞೆಯನ್ನು ಕೊಡುವವನಾಗು' ಎಂದು ಹೇಳಿದನು. ದ್ರುಮಿಳನು ಆಶ್ಚರ್ಯವುಳ್ಳವನಾಗಿ ಗಂಧರ್ವನಿಗೆ ಅನುಜ್ಞೆಯನ್ನು ಕೊಟ್ಟನು. ಗಂಧರ್ವನು

ಪುಷ್ಯಸ್ನಾನದ ಫಲದಿಂದ ಅಷ್ಟಾವಕ್ರರ ಅನುಗ್ರಹದಿಂದ ಉತ್ತಮವಾದ ವಿಮಾನವನ್ನು ಹೊಂದಿದವನಾಗಿ ತನ್ನ ಲೋಕಕ್ಕೆ ಹೋದನು. ದ್ರುಮಿಳನು ಅದನ್ನು ನೋಡಿ ಮನೆಗೆ ಬಂದು ವಂಗದೇಶದ ರಾಜನೊಡನೆ ಈ ವಿಷಯವೆಲ್ಲವನ್ನು ಹೇಳಿದನು. ಇದರಿಂದ ರಾಜನು ಆಶ್ಚರ್ಯವುಳ್ಳವನಾಗಿ ಎಲ್ಲಾ ಜನರಿಗೂ 'ಪುಷ್ಯಮಾಸದಲ್ಲಿ ಎಲ್ಲರೂ ಪ್ರಾತಃಸ್ನಾನವನ್ನು ಮಾಡಿ ದೀಪದಾನವನ್ನು ಮಾಡಬೇಕು' ಆಜ್ಞಾ ಮಾಡಿದನು. ತಾನೂ ಮಾಡಿದನು. ಜನರೆಲ್ಲರೂ ಹಾಗೆಯೇ ಮಾಡಿದರು. ಕೊನೆಗೆ ರಾಜನು ಅದರಿಂದ ಊರಜನರಿಂದ ಸಹಿತನಾಗಿ ವಿಷ್ಣುಲೋಕವನ್ನು ಹೊಂದಿದನು.



## ಪ್ರೇತತ್ವವನ್ನು ಕಳೆದುಕೊಂಡ ಬ್ರಾಹ್ಮಣನ ಕಥೆ[1]

ವೈಶ್ಯನ ಪಿತೃಗಳು ವೈಶ್ಯನೊಡನೆ ಹೇಳಿದರು— 'ನಾವು ನೋಡುತ್ತಿರುವಂತೆ ಒಬ್ಬ ಬ್ರಾಹ್ಮಣನನ್ನು ಅವನ ಮಗನು ಆಷಾಢಮಾಸದಲ್ಲಿ ಐದು ದಿನಗಳ ಪುಣ್ಯದಿಂದ ಘೋರವಾದ ಪ್ರೇತತ್ವದಿಂದ ಬಿಡಿಸಿದನು. ಆಮೇಲೆ ನಾವು ಈ ತಾಪೀನದಿಯ ತೀರವನ್ನು ಬಿಡದೆ ಇಲ್ಲಿಯೇ ವಾಸಮಾಡುತ್ತಿರುವೆವು. ಬೇರೆ ನೀರುಳ್ಳ ಪ್ರದೇಶಕ್ಕೂ ಹೋಗದೆ ಇರುವೆವು. ಇಲ್ಲಿಯೇ ನೀರಡಿಕೆಯಿಂದ ಸಂತಪ್ತರಾಗಿ ಸಂಚರಿಸುತ್ತಿದ್ದರುವೆವು. ನಾವು ಹೀಗೆ ಮೂಕರಾಗಿ ಸಂತಪ್ತರಾಗಿ ಸಂಚರಿಸುತ್ತಿರಲು ಅತ್ಯಂತ ದುಃಖವುಳ್ಳವನಾದ ಒಬ್ಬ ಬ್ರಾಹ್ಮಣನು ಬಂದು ಸೇರಿದನು. ಅವನಿಗೆ ಸೂಜಿಯಷ್ಟು ಚಿಕ್ಕದಾದ ಬಾಯಿದ್ದಿತು. ಹಸಿವೆ ದಾಹಗಳಿಂದ ಅತ್ಯಂತ ಪೀಡಿತನಾಗಿದ್ದನು. ನಾವು ಅವನೊಡನೆ ಸಂಜ್ಞೆಯಿಂದ ಇದ್ದ ಯಾವ ಪಾಪದ ಫಲವೆಂದು ಕೇಳಿದೆವು. ಅದಕ್ಕೆ ಅವನು ನಾನು ಗುರ್ಜರದೇಶದ ಬ್ರಾಹ್ಮಣನು. ನನ್ನ ಹೆಸರು ವೇದಶ್ರವ ಎಂದು. ನಾನು ಸುಳ್ಳು ಹೇಳುತ್ತಿದ್ದೆನು. ಅನಾಚಾರವುಳ್ಳವನಾಗಿದ್ದೆನು. ಲೋಭಿಯಾಗಿದ್ದೆನು. ಮೂರ್ಖನೂ ಜನರ ಎದುರಲ್ಲಿ ನಾನು ನಾಲ್ಕು ವೇದಗಳನ್ನು ಅಧ್ಯಯನ ಮಾಡಿದವನು ಅಗ್ನಿಹೋತ್ರ ಮಾಡುವವನು ಎಂದು ಹೇಳಿಕೊಳ್ಳುತ್ತಿದ್ದೆನು. ನಾನು ಲೋಭದಿಂದ ಮೋಹದಿಂದ ನಿಷಿದ್ಧಾನ್ನವನ್ನು ಭೋಜನ ಮಾಡುತ್ತಿದ್ದೆನು. ದ್ರವ್ಯಲೋಭದಿಂದ ಅಯೋಗ್ಯರ ಮನೆಯಲ್ಲಿ ಭೋಜನ ಮಾಡಿರುವೆನು. ಅಗಸರೇ ಮೊದಲಾದ ಶೂದ್ರರಿಗೂ ಶ್ರಾದ್ಧಾದಿಗಳನ್ನು ಮಾಡಿಸುತ್ತಾ ಇದ್ದೆನು. ಅವರ

1. ಆಷಾ.ಮಾ.ಮಾ. ಅ.1

ಅನ್ನದಿಂದ ಜೀವಿಸುತ್ತಿದ್ದೆನು. ಅವರಿಗೆ ದಿನ ವಾರ ಮಾಡಿಸುತ್ತಿದ್ದೆನು. ಎಮ್ಮೆ ಇತ್ಯಾದಿಗಳನ್ನು ದಾನ ತೆಗೆದುಕೊಳ್ಳುತ್ತಿದ್ದೆನು. ಹೀಗೆಯೇ ಯಾವಾಗಲೂ ದಾನ ತೆಗೆದುಕೊಳ್ಳುತ್ತಿದ್ದೆನು. ನಾನು ದಾನವನ್ನೋ ಹೋಮವನ್ನೋ ಮಾಡಿದ್ದೇ ಇಲ್ಲ. ಬ್ರಾಹ್ಮಣರನ್ನು ಪೂಜಿಸಲಿಲ್ಲ. ಸರಿಯಾದ ಕಾಲದಲ್ಲಿ ಶ್ರಾದ್ಧವನ್ನು ಮಾಡಲಿಲ್ಲ. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಿಲ್ಲ. ಸರಿಯಾದ ಮಾರ್ಗದಿಂದ ಹಣವನ್ನು ಸಂಪಾದಿಸಲಿಲ್ಲ. ದುಷ್ಟದಾನಗಳಿಂದ ಹಣವನ್ನು ಸಂಪಾದಿಸಿದೆನು. ನನ್ನನ್ನು ಪಾಪದಿಂದ ಶೋಧಿಸಿಕೊಳ್ಳಲಿಲ್ಲ. ಕೊನೆಗೆ ನಾನು ಮರಣವನ್ನು ಹೊಂದಿದೆನು. ಯಮದೂತರು ಸೆಳೆದುಕೊಂಡು ಹೋದರು. ಯಮದೇವರು ಯೋಚಿಸಿ ನನ್ನನ್ನು ನರಕದಲ್ಲಿ ಹಾಕಲಿಕ್ಕೆ ಹೇಳಿದರು. ದಯಾಹೀನರಾದ ಯಮದೂತರು ನನ್ನನ್ನು ಘೋರವಾದ ನರಕದಲ್ಲಿ ಹಾಕಿದರು. ಅಲ್ಲಿ ಇಪ್ಪತ್ತೈದು ವರ್ಷಗಳಾದವು. ತರುವಾಯ ಪ್ರಯಾಗದಲ್ಲಿ ತ್ರಿವೇಣೀಸಂಗಮದಲ್ಲಿ ಮಾಘಸ್ನಾನವನ್ನು ಮಾಡಲಿಕ್ಕೆ ಹೋಗುತ್ತಿದ್ದ ಜನರನ್ನು ನೋಡಿ ನನ್ನ ಮಗನೂ ಹೋಗಿ ಸ್ನಾನಮಾಡಿ ಆ ಪುಣ್ಯವನ್ನು ನನಗೆ ಕೊಟ್ಟನು. ಆ ಪುಣ್ಯದ ಪ್ರಭಾವದಿಂದ ನಾನು ನರಕದಿಂದ ಮೇಲಕ್ಕೆ ಬಂದೆನು. ಆಮೇಲೆ ಸೂಜಿಯಷ್ಟು ದೊಡ್ಡ ಬಾಯಿಯುಳ್ಳ ದೊಡ್ಡ ಹೊಟ್ಟೆಯುಳ್ಳ ಘೋರವಾದ ಪ್ರೇತದೇಹವನ್ನು ಹೊಂದಿದೆನು. ಅಲ್ಲಿ ಅಲ್ಲಿ ಬೇಕಾದಷ್ಟು ನೀರಿನ ಪ್ರದೇಶಗಳಿವೆ. ಆದರೆ ನೀರಡಿಕೆಯಾದಾಗ ಅಲ್ಲಿ ಎಲ್ಲಿಯೂ ನೀರನ್ನು ಕುಡಿಯಲಿಕ್ಕೆ ಆಗುವುದಿಲ್ಲ. ನನಗೆ ಒಂದು ತುತ್ತು ಅನ್ನವಾಗಲೀ ನೀರಾಗಲೀ ಸಿಗುವುದೇ ಇಲ್ಲ. ಹಾಗೆಯೇ ಸಿಕ್ಕಿದರೂ ಈ ಸೂಜಿಯಷ್ಟು ಚಿಕ್ಕ ಬಾಯಿಯಿಂದ ಸ್ವೀಕಾರ ಮಾಡಿ ಇಷ್ಟು ದೊಡ್ಡ ಹೊಟ್ಟೆಯನ್ನು ತುಂಬಿಸಿಕೊಳ್ಳಲಿಕ್ಕೆ ನೂರು ವರ್ಷವಾದರೂ ಸಾಲದು. ಆದುದರಿಂದ ಹಸಿವೆಯಿಂದಲೂ ದಾಹದಿಂದಲೂ ಪೀಡಿತನಾಗಿ ಒಂದು ಕ್ಷಣವೂ ಸುಖವನ್ನು ಹೊಂದುವುದಿಲ್ಲ. ಹೀಗೆಯೇ ಪ್ರೇತನಾಗಿ ನನಗೆ ಹನ್ನೆರಡು ವರ್ಷಗಳು ಕಳೆದವು. ಈರೀತಿಯಾಗಿ ನನ್ನ ಚರಿತ್ರೆಯನ್ನು ಹೇಳಿಕೊಂಡಿರುವೆನು. ದಿಗಂಬರರಾಗಿರುವ ಎಲುಬು ಮಾತ್ರ ಶರೀರವಾಗಿ ಉಳ್ಳ ಮೂಕರಾದ ತಲೆಬೋಳಿಸಿಕೊಂಡಿರುವ ಜೋಲುವ ತುಟಿಯುಳ್ಳ ಭಯಂಕರವಾದ ನೀವು ಯಾರು? ಯಾವ ಪಾಪದಿಂದ ಈ ದುರವಸ್ಥೆಯನ್ನು ಹೊಂದಿರುವಿರಿ? ಎಂದು ಕೇಳಿದನು. ಆಗ ನಾವು ಮೂಕರಾದ ಕಾರಣ ಹೇಳಲಿಕ್ಕೆ ಅಸಮರ್ಥರಾಗಿ ಸಂಜ್ಞೆಯಿಂದಲೇ ಪೂರ್ವಜನ್ಮದಲ್ಲಿ ವೇದಮಾರ್ಗವನ್ನು ಬಿಟ್ಟು ಪಾಷಂಡಮತವನ್ನು ಅನುಸರಿಸಿದ್ದೂ ಪಿತೃಗಳಿಗಾಗಿ ಪಿಂಡದಾನ ಸ್ನಾನಾದಿಗಳನ್ನು ಮಾಡದೆ ಇದ್ದದ್ದನ್ನು ದೇವರಪೂಜೆಯನ್ನು ಬ್ರಾಹ್ಮಣರ

/

ಪೂಜೆಯನ್ನು ಮಾಡದೆ ಇದ್ದದ್ದನ್ನು ತಿಳಿಸಿ ಈ ಪಾಪದಿಂದ ಈ ಭಯಂಕರವಾದ ಅವಸ್ಥೆಯನ್ನು ಅನುಭವಿಸುತ್ತಿರುವೆವು ಎಂದು ತಿಳಿಸಿದೆವು. ಅಷ್ಟರಲ್ಲಿ ಒಂದು ಜನರ ಗುಂಪು ತಾಪೀನದಿಯಲ್ಲಿ ಸ್ನಾನಮಾಡಲಿಕ್ಕೆ ಹೋಯಿತು. ನಾವು ದೂರದಲ್ಲಿ ನಿಂತಿದ್ದೆವು. ಆ ಗುಂಪಿನಲ್ಲಿ ಆ ಬ್ರಾಹ್ಮಣನ ಮಗನೂ ಇದ್ದನು. ಅವನು ಆಷಾಢಮಾಸದಲ್ಲಿ ಮೂವತ್ತು ದಿವಸವೂ ತಾಪೀನದಿಯಲ್ಲಿ ಪ್ರಾತಃಸ್ನಾನವನ್ನು ಮಾಡಿದನು. ಹುಣ್ಣಿಮೆಯ ದಿನದಲ್ಲಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದನು. ಆ ಬ್ರಾಹ್ಮಣರಿಂದ ಅನುಜ್ಞೆಯನ್ನು ಪಡೆದು ಆಷಾಢಮಾಸದ ಫಲವನ್ನು ಬ್ರಾಹ್ಮಣರ ಸನ್ನಿಧಾನದಲ್ಲಿ ತಂದೆಗೆ ಧಾರೆ ಎರೆದುಕೊಟ್ಟನು. ಅದರಿಂದ ಆ ಬ್ರಾಹ್ಮಣನ ಪ್ರೇತತ್ವವು ಹೊರಟುಹೋಯಿತು. ಅವನು ದಿವ್ಯದೇಹವುಳ್ಳವನಾಗಿ ದಿವ್ಯ ವಿಮಾನದಲ್ಲಿ ಕೂತುಕೊಂಡನು. ಅವನು ಮಗನ ಬಳಿಗೆ ಬಂದು 'ಮಗನೇ! ನೀನು ಉತ್ತಮನಾದ ಕಾರ್ಯವನ್ನು ಮಾಡಿರುವೆ. ಯಾರಿಗೆ ಪುಣ್ಯಕರ್ಮವನ್ನು ಮಾಡುವ ಸತ್ಪುತ್ರನಿರುವನೋ ಅವರು ಧನ್ಯರು. ಪುಣ್ಯವಂತರು. ಅವರಿಗೆ ಎರಡು ಲೋಕಗಳಲ್ಲಿಯೂ ಸುಖವಿರುವುದು. ಸುಪುತ್ರನು ಒಬ್ಬನು ಇದ್ದರೂ ಸಾಕು. ಯಾರು ಯಾವಾಗಲೂ ಪಿತೃಕರ್ಮದಿಂದ ಪಿತೃಗಳನ್ನು ಸಂತೋಷಪಡಿಸುವನೋ ಅವನ ಜೀವನವು ಸಫಲವು ಅವನ ಪೂರ್ವಿಕರು ಧನ್ಯರು. ಪ್ರತಿನಿತ್ಯವೂ ದೇವತೆಗಳೂ ಪಿತೃಗಳೂ ಮನುಷ್ಯರೂ ಋಷಿಗಳೂ ಭೂತಗಳೂ ಸತ್ಕಾರವನ್ನು ಅಪೇಕ್ಷಿಸುವರು. ಪ್ರತಿನಿತ್ಯವೂ ಇವರನ್ನು ಸತ್ಕರಿಸಿ ಯಾರು ಭೋಜನಮಾಡುವನೋ ಅವನು ಅತ್ಯಂತ ಶ್ರೇಷ್ಠನಾದವನು. ಅವನ ಪಿತೃಗಳು ಕೃತಾರ್ಥರಾಗುವರು. ಅವನ ಕುಲದಲ್ಲಿಯೇ ಪ್ರೇತಗಳು ಆಗಲಾರರು. ಅವನಿಗೆ ಮಕ್ಕಳೂ ಮೊಮ್ಮಕ್ಕಳೂ ಹಣವೂ ದೀರ್ಘಾಯುಷ್ಯವೂ ಆರೋಗ್ಯವೂ ಉಂಟಾಗುವುವು. ಯಾರು ಸದಾಚಾರವುಳ್ಳವನಾಗಿರುವನೋ ಅವನ ಸಂತಾನಕ್ಕೆ ವಿಚ್ಛೇದನವುಂಟಾಗಲಾರದು. ಆಷಾಢಮಾಸದಲ್ಲಿ ಐದು ದಿವಸಸ್ನಾನ ಮಾಡಿದ ಪುಣ್ಯದ ಪ್ರಭಾವದಿಂದ ನನಗೆ ಪ್ರೇತಭಾವವು ಹೋಗಿ ಅಕ್ಷಯವಾದ ವಿಷ್ಣುಲೋಕವು ಲಭಿಸಿರುವುದು ಎಂದು ಹೇಳಿ ನಾವು ನೋಡುತ್ತಿರುವಂತೆ ವಿಮಾನದಲ್ಲಿ ಕೂತುಕೊಂಡು ವಿಷ್ಣುಲೋಕಕ್ಕೆ ಹೋದನು. ಮಗನು ಈ ರೀತಿಯಾಗಿ ತಂದೆಯನ್ನು ಉದ್ಧರಿಸಿ ಆ ಜನರ ಗುಂಪಿನ ಒಟ್ಟಿಗೆ ಸಂತೋಷದಿಂದ ಬಂದಂತೆಯೇ ಹಿಂದೆ ತಿರುಗಿ ಮನೆಗೆ ಹೋದನು. ನಾವು ಮಾತ್ರ ನಮ್ಮನ್ನು ಯಾರು ಬಿಡಿಸುವರು ಎಂದು ಯೋಚಿಸುತ್ತಾ ಅಲ್ಲಿಯೇ ಇದ್ದೆವು.



# ಪಶುಕ್ರೀತ ಖರಕ್ರೀತರ ಕಥೆಯು [1]

ಪೂರ್ವದಲ್ಲಿ ಶುದ್ಧವಂಶದಲ್ಲಿ ಹುಟ್ಟಿದ ಪಶುಕ್ರೀತ ಖರಕ್ರೀತ ಎಂದು ಹೆಸರುಳ್ಳ ಇಬ್ಬರು ಬ್ರಾಹ್ಮಣರು ಇದ್ದರು. ಅವರಿಗೆ ಬಾಲ್ಯದಿಂದಲೇ ಪರಸ್ಪರವಾಗಿ ಸ್ನೇಹವು ಇದ್ದಿತು. ಇಬ್ಬರೂ ಒಂದೇ ಸ್ವಭಾವವುಳ್ಳವರಾಗಿದ್ದರು. ಅವರು ಪರಸ್ಪರ ಪ್ರೀತಿಯಿಂದ ಕೊಡುತ್ತಾ ತೆಗೆದುಕೊಳ್ಳುತ್ತಾ ಇದ್ದರು. ಒಟ್ಟಿಗೆ ಭೋಜನ ಮಾಡುತ್ತಾ ಇದ್ದರು. ರಹಸ್ಯವನ್ನು ಹೇಳುತ್ತಾ ಇದ್ದರು. ಅವರಿಗೆ ದಿನೇ ದಿನೇ ಪ್ರೀತಿಯು ಹೆಚ್ಚುತ್ತಾ ಇದ್ದಿತು. ಅವರು ಭ್ರಷ್ಟರ ಸಹವಾಸವನ್ನು ಮಾಡಿದರು. ಸ್ತ್ರೀಯರಲ್ಲಿ ಆಸಕ್ತರಾಗಿದ್ದರು. ನಾಸ್ತಿಕರ ಸಹವಾಸದಿಂದ ಅವರ ಪುಣ್ಯವೆಲ್ಲವೂ ನಷ್ಟವಾಯಿತು. ಅವರೂ ನಾಸ್ತಿಕರಾದರು. ಲೋಕದ್ವಯದಲ್ಲಿಯೂ ದುಃಖಕ್ಕೆ ಕಾರಣವಾದ ಮಹಾಮೋಹವನ್ನು ಹೊಂದಿದರು. ಪರಸ್ತ್ರೀಯರನ್ನೂ ಪರಧನವನ್ನೂ ಅಪಹರಿಸುತ್ತಿದ್ದರು. ಮದ್ಯಪಾನ ಮಾಡುತ್ತಿದ್ದರು. ಹೀಗೆ ಹೇಳುತ್ತಿದ್ದರು 'ಪುಣ್ಯವೂ ಇಲ್ಲ. ಪಾಪವೂ ಇಲ್ಲ. ಪರಲೋಕವೂ ಇಲ್ಲ. ಪರಲೋಕಕ್ಕಾಗಿ ಮಾಡುವ ಕಾರ್ಯಗಳು ಎಲ್ಲವೂ ವ್ಯರ್ಥಗಳು. ನಾವು ಯಾವುದನ್ನು ನೋಡುವೆವೋ ಅದು ಇದೆ. ಯಾವುದನ್ನು ನೋಡುವುದಲ್ಲವೋ ಅದು ಇಲ್ಲವೇ ಇಲ್ಲ. ನಾವು ಇಲ್ಲಿ ತಿನ್ನುವುದು, ಕುಡಿಯುವುದು, ಸುಖವನ್ನು ಅನುಭವಿಸುವುದು ಯಾವುದು ಇದೆಯೋ ಅದೇ ಸತ್ಯವಾದದ್ದು. ಮತ್ತೆಲ್ಲವೂ ಸುಳ್ಳು ಎಂದು ತಿಳಿಯಬೇಕು. ಸತ್ತಮೇಲೆ ಪುರುಷನು ಮೊದಲು ಮಾಡಿದ್ದನ್ನು ಬಂಧುಗಳನ್ನು ಸ್ಮರಿಸುತ್ತಾನೆ. ಸ್ವರ್ಗಕ್ಕೋ ನರಕಕ್ಕೋ ಹೋಗುತ್ತಾನೆ' ಎಂದು ಹೇಳುವುದೆಲ್ಲವೂ ವಂಚಕರ ಮಾತು ಧರ್ಮ ಅಧರ್ಮ ಎಂದು ಕಲ್ಪನೆ ಮಾಡಿದ್ದು ಬ್ರಾಹ್ಮಣರು ತಮ್ಮ ಜೀವನಕ್ಕಾಗಿ ಇರುವುದು. ತಮ್ಮ ಸ್ತ್ರೀಯರನ್ನು ದ್ರವ್ಯವನ್ನು ಇನ್ನೊಬ್ಬರು ಅಪಹರಿಸದಂತೆ ಮಾಡುವುದಕ್ಕಾಗಿ ನರಕವಿದೆಯೆಂದು ಹೇಳುತ್ತಾ ಬೆದರಿಸುವರು. ದೇಹದಿಂದ ಬೇರೆಯಾದ ಆತ್ಮನು ಇರುವುದಾದರೆ ದೇಹವು ಬಿದ್ದು ಹೋದ ಮೇಲೆ ಅವನು ಯಾಕೆ ಕಾಣಿಸುವುದಿಲ್ಲ? ಆದುದರಿಂದ ದೇಹದಿಂದ ಬೇರೆ ಜೀವವೇ ಇರುವುದಿಲ್ಲ. ಪ್ರತ್ಯಕ್ಷವನ್ನು ಬಿಟ್ಟು ಬೇರೆ ಪ್ರಮಾಣವೂ ಇರುವುದಿಲ್ಲ. ಎಲ್ಲರೂ ಮನುಷ್ಯರೂ ಒಂದೇ ವಿಧವಾಗಿ ಇರುವಾಗ ಬ್ರಾಹ್ಮಣ ಶೂದ್ರ ಎಂದು ಜಾತಿ ಭೇದವು ಎಲ್ಲಿಂದ ಬಂದಿತು? ಇದನ್ನು ತಿನ್ನಬಾರದು. ಇದನ್ನು ತಿನ್ನಬಹುದು ಎಂದು ಶಾಸ್ತ್ರವು ಹೇಳುವುದೇನಿದೆ? ಯಾರು ಯಾವುದು

1. ಸ್ಕಂ.ಪು.ಆಷಾ.ಮಾ.ಮಾ. ಅ.3

ಇಷ್ಟವಾಗಿರುವುದೋ ಅದನ್ನು ಅವನು ತಿನ್ನಬಹುದು. ಪರೋಪಕಾರವನ್ನು ಮಾಡಬೇಕು ಎಂದು ಶಾಸ್ತ್ರದ ನಿರ್ಣಯವಾಗಿದ್ದರೆ ಕಾಮಪೀಡಿತರಾದ ಪರಸ್ತ್ರೀಯರಿಗೆ ಯಾಕೆ ಉಪಕಾರ ಮಾಡಬಾರದು?' ಇತ್ಯಾದಿ ರೀತಿಯಾಗಿ ಕುಯುಕ್ತಿಗಳನ್ನು ಹೇಳಿ ಜನರನ್ನು ಮೋಹಗೊಳಿಸುತ್ತಿದ್ದರು. ವೈಷ್ಣವರ ಸಭೆಯಲ್ಲಿ ಹೋಗಿ ತಾವು ವೈಷ್ಣವರೆಂದು ಹೇಳಿಕೊಳ್ಳುತ್ತಿದ್ದರು. ರಾತ್ರಿಯಲ್ಲಿ ವೇಶ್ಯಾಸ್ತ್ರೀಯರ ಸಂಪರ್ಕವನ್ನು ಮಾಡುತ್ತಿದ್ದರು. ಮದ್ಯಪಾನವನ್ನೂ ಮಾಡುತ್ತಿದ್ದರು ಬೆಳಗಾಗಲು ಸ್ನಾನಮಾಡಿ ಬಿಳಿ ವಸ್ತ್ರವನ್ನು ಧರಿಸಿಕೊಂಡು ನಾಮ ಹಚ್ಚಿಕೊಂಡು ದರ್ಭೆಯ ಪವಿತ್ರವನ್ನು ಧರಿಸಿಕೊಂಡು ಮೌನದಿಂದ ಜಪಮಾಡುತ್ತಾ ಕೂತುಕೊಳ್ಳುವರು. ಈರೀತಿಯಾಗಿ ಜನರನ್ನು ಮೋಸಪಡಿಸುತ್ತಿದ್ದರು. ಯಾವಾಗಲೂ ಪಾಪವನ್ನು ಮಾಡುತ್ತಿದ್ದರು. ಗುರುಸ್ತ್ರೀಯರು ಸಹೋದರ ಪತ್ನಿಯರು ಚಂಡಾಲಸ್ತ್ರೀಯರು ಎಲ್ಲರ ಸಂಪರ್ಕವನ್ನು ಮಾಡುತ್ತಿದ್ದರು. ಮಹಾದಾನಗಳನ್ನು ತೆಗೆದುಕೊಳ್ಳುತ್ತಿದ್ದರು. ಮರೆಯಾಗಿ ಅಗಸರ ಮನೆಯಲ್ಲಿಯೂ ಭೋಜನ ಮಾಡುತ್ತಿದ್ದರು. ಆಗ ಕಲಿಯುಗವಾಗಿದ್ದಿತು. ಆದುದರಿಂದ ರಾಜನೂ ಹಾಗೆ ಅಧರ್ಮ ಮಾಡುವವರನ್ನು ಶಿಕ್ಷಿಸುತ್ತಿರಲಿಲ್ಲ. ಹೀಗೆಯೇ ಬಹುಸಮಯವು ಹೋದಮೇಲೆ ಒಂದು ದಿನದಲ್ಲಿ ಪಶುಕ್ರೀತನು ಮಾಂಸವನ್ನು ತಿನ್ನಬೇಕೆಂದು ಆಸೆಯುಳ್ಳವನಾಗಿ ಬಲೆಯನ್ನು ಹಾಕಿ ಮೃಗಗಳನ್ನು ಹಿಡಿಯಬೇಕೆಂದು ಕಾಡಿಗೆ ಹೋದನು. ಅಲ್ಲಿ ಒಂದು ಪರ್ವತದ ಶಿಖರಕ್ಕೆ ಹೋಗಿರುವಾಗ ಅವನನ್ನು ಒಂದು ಹುಲಿಯು ಹಿಡಿದು ಕೊಂದಿತು. ಅದರಿಂದ ಅವನ ದೇಹಕ್ಕೆ ಬೆಂಕಿಕೊಟ್ಟವರು ಒಬ್ಬರೂ ಇಲ್ಲ. ಅವನಿಗೆ ದಿನವಾರವನ್ನೂ ಒಬ್ಬನೂ ಮಾಡಲಿಲ್ಲ. ಅವನನ್ನು ಯಮದೂತರು ಯಮದೇವರ ಬಳಿಗೆ ಎಳೆದುಕೊಂಡು ಹೋದರು. ಯಮದೇವರು ಅವನನ್ನು ಘೋರವಾದ ರೌರವ ನರಕದಲ್ಲಿ ಹಾಕಿಸಿದರು. ಅಲ್ಲಿ ತಾಮ್ರಮಯವಾದ ಪ್ರದೇಶವಾಗಿದ್ದಿತು. ಬೆಂಕಿಯಿಂದ ಕಾದುಹೋಗಿದ್ದಿತು. ಬೆಂಕಿಯ ಜ್ವಾಲೆಯಿಂದ ಯುಕ್ತವಾಗಿದ್ದಿತು. ಬೆಂಕಿಯಿಂದ ಕಾದು ಹೋಗಿದ್ದಿತು. ಬೆಂಕಿಯ ಜ್ವಾಲೆಯಿಂದ ಯುಕ್ತವಾಗಿದ್ದಿತು. ಅದನ್ನು ನೋಡುವಾಗಲೇ ಭಯವಾಗುತ್ತಿದ್ದಿತು. ಆ ಪ್ರದೇಶವು ಎರಡು ಸಾವಿರ ಯೋಜನ ಉದ್ದವೂ ಒಂದು ಸಾವಿರ ಯೋಜನ ಅಗಲವೂ ಇದ್ದಿತು. ಅಲ್ಲಲ್ಲಿ ತಗ್ಗಾದ ಪ್ರದೇಶಗಳಿದ್ದವು. ಪಾಪಿಗಳಿಗೆ ಅತ್ಯಂತ ದುಃಖವನ್ನು ಉಂಟುಮಾಡುವ ಪ್ರದೇಶವಾಗಿದ್ದಿತು. ಕಬ್ಬಿಣದ ಸರಪಳಿಗಳಿಂದ ಪಶುಕ್ರೀತನ ಕೈಕಾಲುಗಳನ್ನು ಕಟ್ಟಿ ಯಮದೂತರು ಅಲ್ಲಿ ಹಾಕಿಬಿಟ್ಟರು. ಅವನು ಅಲ್ಲಿ ಬಹಳವಾಗಿ ವಿಲಾಪವನ್ನು ಮಾಡಿದನು. ಅವನ

ಚರ್ಮವೆಲ್ಲವೂ ಸೀಳಿಹೋಯಿತು. ಮಾಂಸವೂ ಎಲುಬು ಒಣಗಿಹೋಯಿತು. ಬಹುದುಃಖವನ್ನು ಅನುಭವಿಸಿದನು. ಮೇಲಿನಿಂದ ಯಮದೂತರು ಪುನಃ ಪುನಃ ಬಡಿಯುತ್ತಿದ್ದರು. ಅವನಿಗೆ ಅರ್ಧಘಳಿಗೆಯೂ ಸುಖವಿರಲಿಲ್ಲ. ತಾನು ಮಾಡಿದ ಪಾಪಕರ್ಮಗಳನ್ನು ಸ್ಮರಿಸಿಕೊಂಡು ದುಃಖಪಡುತ್ತಿದ್ದನು. ರಾತ್ರಿ ಹಗಲು ಯೋಚನೆ ಮಾಡಿದರೂ ತಾನು ಅಲ್ಲಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ತಿಳಿಯಲೇ ಇಲ್ಲ. ದುಃಖನ್ನು ಅನುಭವಿಸುತ್ತಲೇ ಇದ್ದನು.

ಇಲ್ಲಿ ಖರಕ್ರೀತನು ತನ್ನ ಮಿತ್ರನಾದ ಪಶುಕ್ರೀತನು ಮೃತನಾದ ವರ್ತಮಾನ ವನ್ನು ಕೇಳಿ ಬಹಳ ದುಃಖವನ್ನು ಹೊಂದಿದನು. ತನ್ನ ಬದುಕಿನಲ್ಲಿಯೇ ಆಸೆಯನ್ನು ಬಿಟ್ಟನು. ಕೆಲವು ದಿವಸ ದುಃಖಪಡುತ್ತಿದ್ದು ಆಮೇಲೆ ಪೂರ್ವದಂತೆಯೇ ಆದನು. ಪೂರ್ವದಂತೆಯೇ ಪಾಪಕರ್ಮವನ್ನು ಮಾಡುತ್ತಿದ್ದನು. ಅವನೂ ಒಂದುದಿನದಲ್ಲಿ ಕಾಡಿನಲ್ಲಿ ಬಹುದೂರ ಹೋಗಿರುವಾಗ ಕಳ್ಳರು ಅವನನ್ನು ಕೊಂದು ಹಾಕಿದರು. ಅವನ ದೇಹಕ್ಕೂ ಸಂಸ್ಕಾರವಾಗಲಿಲ್ಲ. ಅವನಿಗೂ ದಿನವಾರವು ನಡೆಯಲಿಲ್ಲ. ಅವನನ್ನು ಯಮದೂತರು ಯಮದೇವರಿದ್ದಲ್ಲಿಗೆ ಎಳೆದುಕೊಂಡು ಹೋದರು. ಯಮದೇವರು ಆಜ್ಞಾಮಾಡಿದಂತೆ ಯಮದೂತರು ಅವನನ್ನು ಪಶುಕ್ರೀತನು ಇದ್ದ ನರಕಕ್ಕೇ ಹಾಕಿದರು. ಅವನೂ ದುಃಖದಿಂದ ವಿಲಾಪವನ್ನು ಮಾಡಿದರು. ಅವರಿಬ್ಬರೂ ತಾವು ಮಾಡಿದ ಪಾಪಕರ್ಮಗಳನ್ನು ನಿಂದಿಸಿಕೊಂಡರು. ಬಹು ಸಮಯ ದುಃಖಪಡುತ್ತಿದ್ದರು.

ಪಶುಕ್ರೀತನ ಹೆಂಡತಿಯು ಅವನನ್ನು ಬಿಟ್ಟು ತಂದೆಯ ಮನೆಯಲ್ಲಿಯೇ ವಾಸಮಾಡುತ್ತಿದ್ದಳು. ಸಜ್ಜನರ ಸಹವಾಸದಿಂದ ಅಲ್ಲಿಯೇ ವಾಸಮಾಡಿದಳು. ಅವಳ ತಂದೆಯಾದ ಬ್ರಾಹ್ಮಣನು ಶ್ರುತಿಸ್ಮೃತಿಪುರಾಣಗಳನ್ನು ತಿಳಿದವನಾಗಿದ್ದನು. ಪಾಪವನ್ನು ಮಾಡುತ್ತಿದ್ದಿಲ್ಲ. ಅವಳು ಅವನ ಮನೆಯಲ್ಲಿ ಇದ್ದುಕೊಂಡು ಜಿತೇಂದ್ರಿಯಳಾಗಿ ಇದ್ದಳು. ತಾನು ಜನ್ಮಾಂತರದಲ್ಲಿ ಮಾಡಿದ ಪಾಪದ ಫಲವೆಂದು ಭಾವಿಸಿಕೊಂಡು ಇದ್ದಳು. ತನ್ನ ಗಂಡನನ್ನು ನಿಂದಿಸುತ್ತಿರಲಿಲ್ಲ. ತರುವಾಯ ತನ್ನ ಪತಿಯು ಮೃತನಾದನೆಂಬ ವರ್ತಮಾನವನ್ನು ಕೇಳಿ ತಲೆಕೂದಲನ್ನು ತೆಗೆಯುವವಳಾಗಿ ವ್ರತವುಳ್ಳವಳಾಗಿ ಕಠಿಣವಾದ ತಪಸ್ಸನ್ನು ಮಾಡುತ್ತಿದ್ದಳು. ಕೆಂಪುಸೀರೆಯನ್ನು ಉಡುತ್ತಿದ್ದಳು. ಸ್ನಾನಮಾಡುವಳು. ನೆಲದಮೇಲೆ ಮಲಗುವಳು. ಎಲೆಯಲ್ಲಿ ಭೋಜನ ಮಾಡುವಳು. ಮಾಸೋಪಾಸವನ್ನು ಮಾಡುತ್ತಿದ್ದಳು. ಕೃಚ್ಛ್ರವ್ರತವನ್ನು ಮಾಡುತ್ತಿದ್ದಳು. ಗಂಡನ ಉದ್ದೇಶವಾಗಿ ಅನ್ನದಾನವನ್ನು ನೀರು ದಾನವನ್ನು

ಮಾಡುತ್ತಿದ್ದಳು. ಆದರೆ ಅದು ಒಂದು ಅವನಿಗೆ ಹೋಗಿ ಸೇರುತ್ತಿರಲಿಲ್ಲ. ಪಿಂಡಪ್ರದಾನವೇ ಮೊದಲಾದದ್ದು ಯಾವುದೂ ಪಾಪಿಗಳಿಗೆ ಸೇರುವುದಿಲ್ಲ. ತರುವಾಯ ಅವಳು ಒಂದು ದಿವಸದಲ್ಲಿ ತಾಪೀನದಿಗೆ ಸ್ನಾನಕ್ಕೆ ಹೋಗುತ್ತಿದ್ದ ಜನರ ಗುಂಪನ್ನು ನೋಡಿ ಅಲ್ಲಿಯ ಸ್ನಾನದ ಫಲವನ್ನು ಕೇಳಿ ತಾನೂ ಅಲ್ಲಿಗೆ ಹೋದಳು. ಅಲ್ಲಿ ಆಷಾಢಮಾಸದಲ್ಲಿ ವ್ರತವುಳ್ಳವಳಾಗಿ ಸ್ನಾನವನ್ನು ಮಾಡಿ ಒಂದು ಮಾಸ ಉಪವಾಸನ್ನು ಮಾಡಿದಳು. ಸ್ನಾನವನ್ನು ಮುಗಿಸಿ ಬ್ರಾಹ್ಮಣರ ಭೋಜನ ಮಾಡಿಸಿ ಮರುದಿನ ಬ್ರಾಹ್ಮಣರನ್ನು ನಿಮಂತ್ರಿಸಿ ಶ್ರಾದ್ಧವನ್ನು ಮಾಡಿ ಆಷಾಢಮಾಸಸ್ನಾನದ ಫಲವನ್ನು ಗಂಡನಿಗೆ ಕೊಟ್ಟಳು. ಶ್ರದ್ಧೆಯಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಮರುದಿನ ಬ್ರಾಹ್ಮಣರನ್ನು ನಿಮಂತ್ರಿಸಿ ಶ್ರಾದ್ಧವನ್ನು ಮಾಡಿ ಆಷಾಢಮಾಸ ಸ್ನಾನದ ಫಲವನ್ನು ಗಂಡನಿಗೆ ಕೊಟ್ಟಳು. ಶ್ರದ್ಧೆಯಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಿದಳು. ತರುವಾಯ ಶ್ರಾದ್ಧದೇವತೆಗಳಾದ ಆದಿತ್ಯರೂ ವಸುಗಳೂ ರುದ್ರರೂ ಪಿತೃಗಳೂ ಹೋಗಿ ಯಮದೇವರ ಬಳಿಗೆ ಹೋಗಿ ಅವಳು ಗಂಡನಿಗೆ ಶ್ರದ್ಧೆಯಿಂದ ಆಷಾಢಸ್ನಾನದ ಫಲವನ್ನು ಕೊಟ್ಟುದನ್ನು ಶ್ರಾದ್ಧಮಾಡಿದುದನ್ನು ತಿಳಿಸಿದರು. ಆಗ ಯಮದೇವರು ಚಿತ್ರಗುಪ್ತನೊಡನೆ ಅದರ ಫಲವನ್ನು ವಿಚಾರಿಸಿ ತನ್ನ ಪುರುಷನನ್ನು ಕರೆದು ಬೇಗನೇ ಕಳುಹಿಸಿದರು. ಅವನು ಬೇಗನೇ ಹೋಗಿ ಯಮದೇವರ ಅಪ್ಪಣೆಯಿಂದ ಪಶುಕ್ರೀತನನ್ನು ರೌರವ ನರಕದಿಂದ ಬಿಡಿಸಿ ದಿವ್ಯಶರೀರವುಳ್ಳ ಅವನನ್ನು ದಿವ್ಯವಿಮಾನದಲ್ಲಿ ಕೂತುಕೊಳ್ಳಿಸಿ ಸ್ವರ್ಗಕ್ಕೆ ಕರಕೊಂಡು ಹೋದನು. ಪಶುಕ್ರೀತನು ಸಂತೋಷವುಳ್ಳವನಾದನು. ಆಶ್ಚರ್ಯವುಳ್ಳವನಾದನು. 'ಇದೇನು ಸ್ವಪ್ನವೋ? ಭ್ರಾಂತಿಯೋ? ಪಾಪಿಯಾದವನಿಗೆ ಸ್ವರ್ಗವು ಹೇಗೆ ಸಿಗುವುದು? ಮಹಾಪಾಪಿಯಾದ ನಾನು ಒಂದು ಪುಣ್ಯವನ್ನು ಮಾಡಲಿಲ್ಲ. ಸ್ವರ್ಗವನ್ನು ಹೊಂದಲಿಕ್ಕೆ ಕಾರಣವೇ ಇಲ್ಲ. ನನ್ನನ್ನು ರೌರವನರಕದಿಂದ ಉದ್ಧಾರಮಾಡಿದ ಪುರಷನು ಯಾರು?' ಇತ್ಯಾದಿ ರೀತಿಯಾಗಿ ಯೋಚನೆ ಮಾಡಿ ಆ ಪುರುಷನೊಡನೆ 'ನೀನು ಯಾರು? ಎಲ್ಲಿಂದ ಬಂದಿರುವಿ? ಯಾರು ನಿನ್ನನ್ನು ಕಳುಹಿಸಿರುವರು? ಈ ಭಯಂಕರವಾದ ನರಕದಿಂದ ನನ್ನನ್ನು ಯಾರು ಬಿಡಿಸಿರುವರು? ನಾನು ಪುಣ್ಯಲೇಶವನ್ನು ಮಾಡಿದವನಲ್ಲ. ಪ್ರಯತ್ನಪೂರ್ವಕವಾಗಿ ಪಾಪವನ್ನು ಮಾಡಿರುವೆನು. ನನಗೆ ಹೇಗೆ ಸ್ವರ್ಗಪ್ರಾಪ್ತಿಯಾಯಿತು' ಈ ನನ್ನ ಸಂದೇಹವನ್ನು ಪರಿಹರಿಸಬೇಕು' ಎಂದು ಹೇಳಿಕೊಂಡನು. ಅದನ್ನು ಕೇಳಿ ಆ ಪುರುಷನು 'ಪ್ರಶ್ನೆಯಿಂದ ಏನು ಮಾಡುವಿ. ನನ್ನೊಡನೆ ಸ್ವರ್ಗಕ್ಕೆ ಬಾ. ಮನುಷ್ಯರಿಗೆ

ದುರ್ಲಭಗಳಾದ ಅನೇಕ ಭೋಗಗಳನ್ನು ಅನುಭವಿಸು. ಅಥವಾ ಕೇಳಬೇಕೆಂದು ನಿನಗೆ ತುಂಬಾ ಆಸೆಯಿರುವುದಾದರೆ ಹೇಳುತ್ತೇನೆ ಕೇಳು. ನಾನು ಯಮದೇವರ ಪುರುಷನು ಯಮದೇವರ ಮನೆಯಿಂದ ಬಂದಿರುವೆನು. ಅವರೇ ನನ್ನನ್ನು ಕಳುಹಿಸಿದರು. ಅವರಿಂದಲೇ ನೀನು ನರಕದಿಂದ ಬಿಡಿಸಲ್ಪಟ್ಟಿರುವಿ. ಅವರ ಮಾತಿನಿಂದಲೇ ನಿನ್ನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವೆನು' ಎಂದು ಹೇಳಿದನು. ಆಗ ಪಶುಕ್ರೀತನು 'ನನ್ನ ಮಿತ್ರನಾದ ಖರಕ್ರೀತನು ರೌರವನರಕದಲ್ಲಿ ನನ್ನೊಡನೆ ಬಹಳ ದುಃಖವನ್ನು ಅನುಭವಿಸುತ್ತಿದ್ದನು. ನಾನೂ ಅವನೂ ಸೇರಿ ಬಹುಪಾಪಗಳನ್ನು ಮಾಡಿದೆವು. ಇಬ್ಬರೂ ದುರ್ಮರಣವನ್ನು ಹೊಂದಿದೆವು. ನಮಗಿಬ್ಬರಿಗೂ ದಿನವಾರಗಳು ನಡೆಯಲಿಲ್ಲ. ದೇಹಕ್ಕೆ ಸಂಸ್ಕಾರವೂ ಆಗಲಿಲ್ಲ. ನಮಗಿಬ್ಬರಿಗೂ ರೌರವನರಕ ಪ್ರಾಪ್ತಿಯಾಯಿತು. ಈಗ ಮಾತ್ರ ಅವನು ಆ ನರಕದಲ್ಲಿಯೇ ಇರುವನು. ನನ್ನನ್ನು ಮಾತ್ರ ನರಕದಿಂದ ಬಿಡಿಸಲಿಕ್ಕೆ ಏನು ಕಾರಣ?' ಎಂದು ಕೇಳಿದನು. ಅದಕ್ಕೆ ಯಮದೂತನು 'ನೀನು ಸ್ವರ್ಗವನ್ನು ಹೊಂದಲು ಕಾರಣವನ್ನು ಕೇಳಲು ಇಚ್ಛಿಸುವಿಯಾದರೆ ಹೇಳುವೆನು. ಕೇಳು. ನೀನು ಶ್ರೋತ್ರಿಯರ ಕುಲದಲ್ಲಿ ಹುಟ್ಟಿದ ನಿನ್ನ ಹೆಂಡತಿಯನ್ನು ಬಿಟ್ಟುಬಿಟ್ಟಿಯಲ್ಲಾ! ಅವಳು ತಪತೀನದಿಯಲ್ಲಿ ಪಾಪಪರಿಹಾರಕವಾದ ಆಷಾಢಸ್ನಾನವನ್ನು ಮಾಡಿದಳು. ಅವಳು ಬ್ರಾಹ್ಮಣರ ಸನ್ನಿಧಾನದಲ್ಲಿ ಆಷಾಢಸ್ನಾನದ ಫಲವನ್ನು ನಿನಗೆ ಕೊಟ್ಟಿರುವಳು. ಆ ಪುಣ್ಯವು ಮಹತ್ತಾದ್ದದೆಂದು ತಿಳಿದು ಯಮದೇವರು ನಿನ್ನನ್ನು ಘೋರವಾದ ನರಕದಿಂದ ಬಿಡಿಸಿರುವರು. ಈರೀತಿಯಾಗಿ ಆಷಾಢಮಾಸ ಸ್ನಾನದ ಪುಣ್ಯವನ್ನು ಕೊಟ್ಟು ನಿನ್ನ ಹೆಂಡತಿಯು ನಿನ್ನನ್ನು ಬಿಡಿಸಿರುವಳು. ಖರಕ್ರೀತನಿಗೆ ನರಕದಿಂದ ಬಿಡುಗಡೆಯಾಗಲಿಕ್ಕೆ ಕಾರಣವಿಲ್ಲ. ಆದುದರಿಂದ ಅವನು ರೌರವನರಕದಲ್ಲಿ ಇದ್ದುಕೊಂಡು ತಾನು ಮಾಡಿದ ಪಾಪದ ಫಲವನ್ನು ಅನುಭವಿಸುತ್ತಿರುವನು. ನೀನು ಸ್ವರ್ಗದಲ್ಲಿ ಆಷಾಢಮಾಸ ಸ್ನಾನದ ಫಲವನ್ನು ಅನುಭವಿಸು. ಒಂದು ಕಲ್ಪದವರೆಗೆ ಸುಖದಿಂದ ಇರು' ಎಂದು ಹೇಳಿದನು. ಅದನ್ನು ಕೇಳಿ ಪಶುಕ್ರೀತನು 'ನನಗೆ ನನ್ನ ಹೆಂಡತಿಯು ಕೊಟ್ಟಿರುವ ಆಷಾಢಸ್ನಾನದ ಪುಣ್ಯದಲ್ಲಿ ಅರ್ಧವನ್ನು ಕೊಟ್ಟು ಖರಕ್ರೀತನನ್ನು ನರಕದಿಂದ ಬಿಡಿಸುವೆನು. ಅವನು ನನಗೆ ಸಹೋದರನಿಗಿಂತಲೂ ಹೆಚ್ಚಿನವನು. ಅವನನ್ನು ನರಕದಲ್ಲಿ ಬಿಟ್ಟು ನನಗೆ ಸುಖವು ಹೇಗೆ ಆಗುವುದು? ನಾನು ಕೈಮುಗಿದು ಕೇಳಿಕೊಳ್ಳುವೆನು' ಎಂದು ಹೇಳಿದನು. ಆಗ ದೂತನು 'ಹಾಗಾದರೆ ಆ ಪುಣ್ಯದಲ್ಲಿ ಅರ್ಧಪುಣ್ಯವನ್ನು ಕೊಡು ಖರಕ್ರೀತನನ್ನು ಬಿಡಿಸುವೆನು' ಎಂದು

ಹೇಳಿದನು. ಪಶುಕ್ರೀತನು ಅರ್ಧಪುಣ್ಯವನ್ನು ಕೊಟ್ಟನು. ದೂತನು ಖತಕ್ರೀತನನ್ನು ನರಕದಿಂದ ಬಿಡಿಸಿ ಕರಕೊಂಡು ಬಂದನು. ಖರಕ್ರೀತನೊಡನೆ ಸೇರಿ ಪಶುಕ್ರೀತನು ಬಹಳ ಸಂತೋಷವನ್ನು ಹೊಂದಿದನು. ಖರಕ್ರೀತನು ಸಂತುಷ್ಟನಾಗಿ ಪಶುಕ್ರೀತನ ಹೆಂಡತಿಯನ್ನು ಬಹಳವಾಗಿ ಹೊಗಳಿದನು. ಪತಿವ್ರತೆಯಿಂದ ನೀನು ಉದ್ಧೃತನಾದಿಯೆಂದನು. ಮತ್ತು ತನಗೆ ಅರ್ಧಪುಣ್ಯವನ್ನು ಕೊಟ್ಟುದಕ್ಕಾಗಿ ಅವನನ್ನು ಹೊಗಳಿದನು. ಇಬ್ಬರೂ ಸ್ವರ್ಗದಲ್ಲಿ ಸುಖವಾಗಿ ಇದ್ದರು.

ಪಶುಕ್ರೀತನ ಹೆಂಡತಿಗೆ ಒಂದು ದಿವಸದಲ್ಲಿ ಸ್ವಪ್ನದಲ್ಲಿ ಯಾರೋ ಬಂದು 'ನಿನ್ನ ಗಂಡನು ನೀನು ಕೊಟ್ಟ ಆಷಾಢಸ್ನಾನದ ಪುಣ್ಯದಿಂದ ಸ್ವರ್ಗವನ್ನು ಹೊಂದಿರುವನು ಮಿತ್ರನಾದ ಖರಕ್ರೀತನನ್ನು ಸ್ವರ್ಗಕ್ಕೆ ಕರಕೊಂಡು ಹೋಗಿರುವನು. ಗಂಡನು ನಿನ್ನನ್ನು ಪರಿತ್ಯಜಿಸಿದರೂ ನೀನು ಅವನಿಗೆ ಪುಣ್ಯವನ್ನು ಕೊಟ್ಟು ನರಕದಿಂದ ಉದ್ಧಾರ ಮಾಡಿರುವಿ. ನಿನಗೆ ಸಮಾನಪತಿವ್ರತೆಯು ಎಲ್ಲಿಯೂ ಇರುವುದಿಲ್ಲ' ಎಂದು ಹೇಳಿದಂತೆ ಕೇಳಿದಳು. ಸ್ವಪ್ನದಿಂದ ಎದ್ದು ಈ ವಿಷಯವನ್ನು ಪಂಡಿತರಾದ ಬ್ರಾಹ್ಮಣರೊಡನೆ ಹೇಳಿಕೊಂಡಳು. ಅವರು ಅದು ಸತ್ಯವೇ ಸರಿ ಎಂದರು. ಆಮೇಲೆ ಅವಳು ಯಾವಾಗಲೂ ಆಷಾಢಮಾಸದಲ್ಲಿ ತಪತೀನದಿಯಲ್ಲಿ ಸ್ನಾನ ಮಾಡುತ್ತಿದ್ದಳು. ಹತ್ತು ವರ್ಷಕಾಲ ಹಾಗೆ ಮಾಡಿದಳು. ಮಾಸೋಪವಾಸ ದಾನಸ್ನಾನಗಳಿಂದ ಪುಣ್ಯವುಳ್ಳವಳಾಗಿ ದೇಹವನ್ನು ಪರಿತ್ಯಜಿಸಿ ಬೇಗನೇ ಪತಿಯಲೋಕವನ್ನು ಹೊಂದಿದಳು. ತಾನು ಮಾಡಿದ ಪುಣ್ಯದ ಪ್ರಭಾವದಿಂದ ವಿಷ್ಣುಲೋಕವನ್ನು ಹೊಂದಿ ಅಲ್ಲಿ ಒಂದು ಕಲ್ಪದವರೆಗೆ ತನ್ನ ಪತಿಯಿಂದ ಸಹಿತಳಾಗಿ ಭೋಗಗಳನ್ನು ಅನುಭವಿಸುತ್ತಾ ಇದ್ದಳು. ಆದುದರಿಂದ ಆಷಾಢಮಾಸದಲ್ಲಿ ತಪತೀನದಿಯಲ್ಲಿ ಸ್ನಾನಮಾಡುವುದು ಅತ್ಯಂತ ಪ್ರಶಸ್ತವಾದದ್ದು. (ತಪತೀನದಿಗೆ ತಾಪೀ ಎಂದೂ ಹೆಸರು ಇರುವುದು.)



# ವೃಂದಾರಕನ ಕಥೆಯು[1]

ಪೂರ್ವದಲ್ಲಿ ವೃಂದಾರಕನೆಂಬ ಬ್ರಾಹ್ಮಣನಿದ್ದನು. ಅವನು ವೇದಶಾಸ್ತ್ರಗಳನ್ನು ತಿಳಿದವನಾಗಿದ್ದನು. ಹಣವಂತನಾಗಿದ್ದನು. ಅವನಿಗೆ ಬಹುಜನ ಬಂಧುಗಳು ಇದ್ದರು. ಅವನಿಗೆ ದೇವಸೇನೆಯೆಂದು ಹೆಸರುಳ್ಳ ರೂಪವತಿಯಾದ ಗುಣವತಿ ಯಾದ ಹೆಂಡತಿಯಿದ್ದಳು. ವೃಂದಾರಕನು ಧರ್ಮಪತ್ನಿಯಿಂದ ಸಹಿತನಾಗಿ ಬಹು ಕಾಲ ಸುಖದಿಂದ ಇದ್ದನು. ಹಾಗೆಯೇ ಅವನು ಮುದುಕನಾದನು. ಮಕ್ಕಳಿಲ್ಲವೆಂದು ಬಹುದುಃಖವುಳ್ಳವನಾದನು. ಮಕ್ಕಳಾಗಬೇಕೆಂದು ಬಹುವ್ರತಗಳನ್ನು ಮಾಡಿದನು. ಬಹುದಾನಗಳನ್ನು ಮಾಡಿದನು. ಆದರೂ ಅವನಿಗೆ ಸಂತಾನವುಂಟಾಗಲಿಲ್ಲ. ಕೊನೆಗೆ ಅವನು ಪ್ರಾಣಗಳನ್ನು ಬಿಡುವೆನೆಂದು ದೊಡ್ಡ ಕಾಡಿಗೆ ಹೋದನು. ಅವನು ಕಾಡಿನಲ್ಲಿ ನಿದ್ರಾಹಾರ ರಹಿತನಾಗಿದ್ದನು. ನಾಲ್ಕನೇ ದಿನ ಮೂರ್ಛಿತನಾಗಿ ಬಿದ್ದನು. ಆಗ ಕರುಣಾಮಯನಾದ ಶ್ರೀಭಗವಂತನು ಬ್ರಾಹ್ಮಣ ರೂಪವನ್ನು ಧರಿಸಿಕೊಂಡು ಬಂದು ಅವನನ್ನು ಎಬ್ಬಿಸಿ 'ನೀನು ಯಾರು? ಎಲ್ಲಿಂದ ಬಂದಿರುವಿ? ಯಾಕೆ ಪ್ರಾಣಗಳನ್ನು ಬಿಡುವಿ?' ಎಂದು ಕೇಳಿದನು. ಆಗ ಬ್ರಾಹ್ಮಣನು ತನ್ನ ವೃತ್ತಾಂತವನ್ನು ತಿಳಿಸಿದನು. ಅದನ್ನು ಕೇಳಿ ಪರಮಾತ್ಮನು 'ಮಿತ್ರನೇ! ನಿನ್ನ ಮನೆಗೆ ಹೋಗು. ನಾನು ಹೇಳುವ ವ್ರತವನ್ನು ಮಾಡು. ಜ್ಯೇಷ್ಠಮಾಸದಲ್ಲಿ ಸೂರ್ಯೋದಯಕ್ಕಿಂತ ಮೊದಲೇ ಪ್ರತಿನಿತ್ಯವೂ ಸ್ನಾನಮಾಡು. ಹವಿಷ್ಯಾನ್ನವನ್ನು ಭೋಜನ ಮಾಡು. ಒಂದು ತಿಂಗಳಲ್ಲಿಯೂ ಬ್ರಹ್ಮಚರ್ಯದಿಂದ ಇರು. ತ್ರಿವಿಕ್ರಮ ರೂಪಿಯಾದ ಪರಮಾತ್ಮನನ್ನು ಪೂಜಿಸು. ಮೊಸರನ್ನವನ್ನು ದೇವರಿಗೆ ಸಮರ್ಪಿಸು. ಬ್ರಾಹ್ಮಣರ ಮನೆಯಲ್ಲಿ ಇರುವ ಮರಗಳಿಗೆ ನೀರನ್ನು ಹಾಕು' ಈರೀತಿಯಾಗಿ ನೀನು ಮಾಡಿದಿಯಾದರೆ ನಿನಗೆ ಸಂತಾನವಾಗುವುದು' ಎಂದು ಹೇಳಿ ಮರೆಯಾದನು. ವೃಂದಾರಕನು ತಂದೆಗೆ ಪರಮಾತ್ಮನೇ ಬಂದು ಹೇಳಿದನೆಂದು ನಿಶ್ಚಯಿಸಿಕೊಂಡು ಮನೆಗೆ ಹೋಗಿ ಹಾಗೆಯೇ ವ್ರತವನ್ನು ಮಾಡಲಿಕ್ಕೆ ಆರಂಭಿಸಿದನು. ನಿತ್ಯವೂ ಪ್ರಾತಃಸ್ನಾನವನ್ನು ಮಾಡುತ್ತಿದ್ದನು. ಒಂದು ದಿವಸದಲ್ಲಿ ಮರಗಳ ಸಮೂಹದಲ್ಲಿ ಒಂದು ಭಯಂಕರವಾದ ಹುಲಿಯನ್ನು ನೋಡಿದನು. ಆ ಹುಲಿಯು ಅವನ ಹತ್ತಿರವೇ ಬಂದು ಬಿಟ್ಟಿತು. ಆಗ ಅವನು ಭಯವುಳ್ಳವನಾಗಿ ನೀರಿನ ಪಾತ್ರೆಯನ್ನು ಬಿಸಾಡಿದನು. ಅದರ ನೀರು ಹುಲಿಯಮೇಲೆ ಬೀಳಲು ಹುಲಿಯ ದೇಹವು ಬಿದ್ದು

1. ಭವಿ.ಪು. ಜ್ಯೇ.ಮಾ.ಮಾ. ಅ.28

ದಿವ್ಯದೇಹವುಳ್ಳ ಪುರುಷನು ಬಂದು ನಿಂತನು. ಅವನು ಪ್ರಸನ್ನನಾಗಿ ನಾನು ನಿನ್ನ ದರ್ಶನದಿಂದ ಧನ್ಯನಾದೆನು. ಆ ದೋಷದಿಂದ ಹುಲಿಯಾಗಿ ಹುಟ್ಟಿದೆನು. ನಿನ್ನ ದರ್ಶನದಿಂದ ನಾನು ಈ ಹುಲಿಯ ಜನ್ಮದಿಂದ ಬಿಡುಗಡೆಯನ್ನು ಹೊಂದಿದೆನು. ನೀನು ಮಾಡುವ ಪುಣ್ಯವನ್ನು ನನಗೆ ಕೊಡುವವಾಗು' ಎಂದು ಹೇಳಿದನು. ಆಗ ವೃಂದಾರಕನು ತಾನು ಒಂದು ತಿಂಗಳು ಮಾಡಿದ ಪುಣ್ಯವನ್ನು ಕೊಟ್ಟನು. ಅದರಿಂದ ಅವನು ಸ್ವರ್ಗವನ್ನು ಹೊಂದಿದನು. ಮತ್ತೂ ಆ ಅದ್ಭುತವಾದ ವ್ರತವನ್ನು ಮಾಡಿದನು. ಆ ಪುಣ್ಯದ ಪ್ರಭಾವದಿಂದ ಶ್ರೇಷ್ಠನಾದ ಮಗನು ಹುಟ್ಟಿದನು. ಆದುದರಿಂದ ಜ್ಯೇಷ್ಠಮಾಸದಲ್ಲಿ ಪ್ರಾತಃಸ್ನಾನವನ್ನು ಮಾಡುವುದು ಪ್ರಶಸ್ತವು.



## ಲಾಂಗಲವರ್ಧನನ ಕಥೆಯು [1]

ಪೂರ್ವದಲ್ಲಿ ಲಾಂಗಲವರ್ಧನ ಎಂಬ ಬ್ರಾಹ್ಮಣನಿದ್ದನು. ಅವನು ಹಣವಂತ ನಾಗಿದ್ದನು. ಯಾವಾಗಲೂ ಕೃಷಿಯಿಂದ ಜೀವಿಸುತ್ತಿದ್ದನು. ಅವನು ಮುದುಕನಾಗಲು ಅವನ ಹಣವು ಕಳೆದುಹೋಯಿತು. ಮಕ್ಕಳು ಅವನನ್ನು ಮನೆಯಿಂದ ಹೊರಗೆ ಹಾಕಿದರು. ಅವನು ಅತಿದುಃಖವುಳ್ಳವನಾಗಿ ಭಿಕ್ಷೆಯಿಂದ ಜೀವಿಸುತ್ತಿದ್ದನು. ಅವನು ತಪತೀನದಿಯ ತೀರಕ್ಕೆ ಹೋಗಿ ಅಲ್ಲಿಯೇ ಒಂದು ಗುಡಿಸಲನ್ನು ಮಾಡಿಕೊಂಡು ಭಿಕ್ಷೆ ಬೇಡುತ್ತಾ ಜೀವಿಸುತ್ತಿದ್ದನು. ಧಾನ್ಯಗಳನ್ನು ಭಿಕ್ಷೆ ಬೇಡಿ ತಂದು ಸ್ನಾನಮಾಡಿ ಅವುಗಳನ್ನು ಬೇಯಿಸಿ ದೇವಋಷಿಭೂತಗಳಿಗೆ ಕೊಟ್ಟು ಭೋಜನ ಮಾಡುತ್ತಿದ್ದನು. ಹೀಗೆ ಇದ್ದುಕೊಂಡು ಇಪ್ಪತ್ತು ಆಷಾಢಮಾಸಗಳಲ್ಲಿ ಅವನು ತಪತೀನದಿಯಲ್ಲಿ ಸ್ನಾನ ಮಾಡಿದನು. ಒಂದು ದಿವಸದಲ್ಲಿ ಒಬ್ಬ ಬ್ರಾಹ್ಮಣನು ತಪತಿಯಲ್ಲಿ ಸ್ನಾನ ಮಾಡಲಿಕ್ಕೆ ಬಂದನು. ಇವನ ಗುಡಿಸಲಿನಲ್ಲಿ ಇಳಿದುಕೊಂಡು ಸ್ನಾನ ಮಾಡಿದನು. ಲಾಂಗಲವರ್ಧನನು ಅವನ ಹತ್ತಿರ ಕೇಳದೆ ತರ್ಪಣಕ್ಕಾಗಿ ಅವನ ಎಳ್ಳನ್ನು ತೆಗೆದನು. ಆದರೆ ಲೋಭದಿಂದ ತೆಗೆದದ್ದು ಅಲ್ಲ. ತೀರ್ಥಸ್ಥಳದಲ್ಲಿ ಎಳ್ಳನ್ನು ಅಪಹಾರ ಮಾಡಿದರೆ ದೋಷವು ಯಾವುದರಿಂದಲೂ ಪರಿಹಾರವಾಗಲಾರದು. ತರುವಾಯ ಬಂದ ಬ್ರಾಹ್ಮಣನು ತಪತೀನದಿಗೆ ಪ್ರದಕ್ಷಿಣೆ ಬಂದು ಹೊರಟು ಹೋದನು. ಬಹುಕಾಲದ ಮೇಲೆ ಲಾಂಗಲವರ್ಧನನು ಮೃತನಾದನು. ಯಮದೂತರು

---

1. ಸ್ಕಂ.ಪು. ಆಷಾ.ಮಾ.ಮಾ. ಅ.4

ಅವನನ್ನು ಯಮದೇವರ ಬಳಿಗೆ ಕರೆದುಕೊಂಡು ಹೋದರು. ಯಮದೇವರು ಲೇಖಕರೊಡನೆ ಇವನಿಗೆ ಪುಣ್ಯವೆಷ್ಟಿದೆ ಪಾಪವೆಷ್ಟಿದೆಯೆಂಬುದನ್ನು ಬೇಗನೇ ನೋಡಿ ಹೇಳಿರಿ ಎಂದರು. ಆಗ ಲೇಖಕರು ಇವನು ಮೊದಲು ಕೃಷಿಕರ್ಮದಿಂದ ಪಾಪವನ್ನು ಮಾಡಿದ್ದನು. ಆ ಪಾಪವೆಲ್ಲವೂ ತಪತೀನದಿಯಲ್ಲಿ ಸ್ನಾನಮಾಡಿದ ಪ್ರಭಾವದಿಂದ ನಷ್ಟವಾಯಿತು. ಇವನು ತಪತೀತೀರದಲ್ಲಿ ಎಳ್ಳನ್ನು ಅಪಹಾರಮಾಡಿದ ಪಾಪವೊಂದು ಮಾತ್ರ ಇದೆ. ಅದನ್ನೂ ಇವನು ಲೋಭದಿಂದ ಮಾಡಿದ್ದಲ್ಲವಾದ ಕಾರಣ ಬಹಳ ಸ್ವಲ್ಪವಾಗಿರುವುದು' ಎಂದು ಹೇಳಿದರು.

ತರುವಾಯ ಯಮದೇವರು ಅವರೊಡನೆ ಯೋಚಿಸಿ ಆ ಪಾಪದ ಪರಿಹಾರಕ್ಕಾಗಿ ಅವನಿಗೆ ನರಕಗಳನ್ನು ತೋರಿಸಬೇಕೆಂದು ದೂತನಿಗೆ ಆಜ್ಞಾ ಮಾಡಿದರು. ತರುವಾಯ ದೇವದೂತನು ಅವನನ್ನು ನರಕದಲ್ಲಿ ಎಲ್ಲಾ ಸ್ಥಳಕ್ಕೂ ಕರೆದುಕೊಂಡು ಹೋದನು. ಅವನು ಲಾಂಗಲವರ್ಧನನಿಗೆ ಎಲ್ಲಾ ನರಕಗಳಲ್ಲೂ ತೋರಿಸಿ 'ಯಮದೇವರ ಅಪ್ಪಣೆಯಿಂದ ಎಲ್ಲಾ ನರಕಗಳನ್ನೂ ತೋರಿಸಿದೆನು. ಇನ್ನು ಅವರ ಬಳಿಗೇ ಹೋಗುವ' ಎಂದು ಹೇಳಿ ಯಮದೇವರ ಬಳಿಗೆ ಕರೆದುಕೊಂಡು ಹೋದನು. ಆಗ ಲಾಂಗಲವರ್ಧನನು ಸೂರ್ಯನಂತೆ ಪ್ರಕಾಶಿಸುತ್ತಾ ಹೋದನು. ಅವನನ್ನು ನೋಡಿ ಯಮದೇವರು ಅವನಿಗೆ ಬಹುಮಾನವನ್ನು ಮಾಡಿ ಆಸನದಲ್ಲಿ ಕೂತುಕೊಳ್ಳಿಸಿದರು. ಅವನು ಮಾಡಿರುವ ಅನಂತವಾದ ತಪತೀನದಿಯಲ್ಲಿ ಆಷಾಢಮಾಸದಲ್ಲಿ ಸ್ನಾನಮಾಡಿದ ಪುಣ್ಯವನ್ನು ತಿಳಿದು ವಿಮಾನವನ್ನು ತರಿಸಿ 'ನೀನು ವಿಷ್ಣುಲೋಕವನ್ನು ಸಂಪಾದಿಸಿರುವಿ. ಅಲ್ಲಿ ಪರಮಾತ್ಮನ ಬಳಿಯಲ್ಲಿ ಬಹುಕಾಲ ವಾಸಮಾಡುವಿ. ನೀನು ಸ್ವಲ್ಪ ಪಾಪವನ್ನು ಮಾಡಿರುವಿ. ಆದರಿಂದ ಇಲ್ಲಿಗೆ ನಿನ್ನನ್ನು ಕರೆದುಕೊಂಡು ಬಂದರು. ನಿನಗೆ ನರಕದರ್ಶನದಿಂದ ಆ ಪಾಪವು ಪರಿಹೃತವಾಯಿತು. ಪುಣ್ಯಪಾಪಗಳಲ್ಲಿ ಯಾವುದನ್ನು ಕಡಿಮೆಮಾಡಿರುವನೋ ಅದರ ಫಲವನ್ನು ಇಲ್ಲಿ ಮೊದಲು ಅನುಭವಿಸುವುದು. ಆದುದರಿಂದ ನೀನು ನರಕವನ್ನು ನೋಡಿ ಸ್ವಲ್ಪ ಪಾಪದ ಫಲವನ್ನು ಅನುಭವಿಸಿಯಾಯಿತು. ಇನ್ನು ಭಗವಂತನ ಲೋಕಕ್ಕೆ ಹೋದವನಾಗಿ ಇಪ್ಪತ್ತು ಆಷಾಢಮಾಸಗಳಲ್ಲಿ ಮಾಡಿದ ತಪತೀಸ್ನಾನದ ಫಲವನ್ನು ಅನುಭವಿಸು. ಆ ಪುಣ್ಯವು ಅಕ್ಷಯವಾಗಿರುವುದು' ಎಂದು ಹೇಳಿದರು. ಆಗ ಲಾಂಗಲವರ್ಧನನು ನನ್ನ ಪುಣ್ಯವು ಅನಂತವಾಗಿರುವುದಾದರೆ ಆ ಪುಣ್ಯದಿಂದ ನರಕದಲ್ಲಿ ಇರುವವರೆಲ್ಲರೂ ಉದ್ಧೃತರಾಗಲಿ. ನಾನು ಬೇಡಿಕೊಳ್ಳುತ್ತೇನೆ. ನನ್ನ ಮೇಲೆ ದಯೆಯನ್ನು ಮಾಡಬೇಕು' ಎಂದು ಹೇಳಿದನು.

ಅದಕ್ಕೆ ಯಮದೇವರು 'ಆ ಪಾಪಿಗಳ ವಿಷಯವು ನಿನಗೆ ಯಾಕೆ? ನೀನು ಮಾಡಿದ ಪುಣ್ಯದ ಫಲವನ್ನು ನೀನು ಅನುಭವಿಸುವವನಾಗು. ಪಾಪಿಗಳು ಬಹುಕಾಲ ನರಕದಲ್ಲಿಯೇ ಇರಲಿ. ಪುಣ್ಯವನ್ನೋ ಪಾಪವನ್ನೋ ತಾನು ಮಾಡಿದ್ದನ್ನು ಅನುಭವಿಸಬೇಕು. ಹೀಗೆ ತಿಳಿದುಕೊಂಡು ಬೇಗನೇ ಇಲ್ಲಿಂದ ಹೊರಟುಹೋಗು. ಸಾವಕಾಶ ಮಾಡಬೇಡ' ಎಂದು ಹೇಳಿದರು.

ಆಗ ಲಾಂಗಲವರ್ಧನನು 'ದುಃಖದಿಂದ ಪೀಡಿತರಾದ ಈ ನರಕದಲ್ಲಿ ಇರುವವರನ್ನು ನೋಡಿ ಹಾಗೆಯೇ ಅವರನ್ನು ಬಿಟ್ಟು ನಾನು ಹೇಗೆ ಹೋಗಲಿ? ನನ್ನ ಪುಣ್ಯವು ಇರುವುದಾದರೆ ವಿಚಾರ ಮಾಡದೆ ಅವರಿಗೆ ಕೊಡಬೇಕು. ಆಪತ್ತಿನಲ್ಲಿ ಇರುವ ಇವರನ್ನು ನೋಡಿ ನನಗೆ ಪುಣ್ಯವು ಏನು ಬೇಕಾಗಿದೆ? ನನ್ನ ಪುಣ್ಯಾನುಸಾರವಾಗಿ ಒಂದೇ ಕ್ಷಣವೋ ಅರ್ಧಕ್ಷಣವೋ ಈ ನರಕದಲ್ಲಿ ಇರುವವರು ಎಲ್ಲರೂ ಸುಖವುಳ್ಳವರಾಗಲಿ. ಈರೀತಿಯಾಗಿ ನನ್ನ ಮೇಲೆ ಅನುಗ್ರಹವನ್ನು ಮಾಡಬೇಕು' ಎಂದು ಕೇಳಿಕೊಂಡನು. ಮತ್ತೂ 'ಇವರನ್ನು ಹೀಗೆಯೇಬಿಟ್ಟು ವಿಷ್ಣುಲೋಕಕ್ಕೆ ಹೋದರೆ ಅಲ್ಲಿಯೂ ನನಗೆ ಸಂತೋಷವಾಗಲಾರದು. ಆದುದ ರಿಂದ ನನ್ನ ಮೇಲೆ ಅನುಗ್ರಹವನ್ನು ಮಾಡಬೇಕು. ಇವರೆಲ್ಲರನ್ನೂ ಕ್ರೂರನರಕ ಗಳಿಂದ ನನ್ನ ಪುಣ್ಯದಿಂದ ಬಿಡಿಸಿ ಪುಣ್ಯಹೀನನಾದ ನಾನು ನರಕಗಳಲ್ಲಿ ವಾಸಮಾಡು ವೆನು. ಇದರಿಂದ ನನ್ನ ಪುಣ್ಯವು ಸಾತ್ವಿಕವಾಗುವುದು. ನಾನು ಸಾತ್ವಿಕನಾಗುವೆನು' ಎಂದು ಹೇಳಿದನು. ಆಗ 'ಆಹಾ! ನೀನು ಬಹಳ ಸಾಹಸಕಾರ್ಯವನ್ನು ಮಾಡುತ್ತಿರುವಿಯಲ್ಲಾ' ನೀನೇ ವಿಚಾರಮಾಡು. ನರಕದುಃಖವನ್ನು ಒಂದು ಕ್ಷಣವೂ ಸಹಿಸಲಿಕ್ಕೆ ಆಗಲಾರದು. ದೈವೇಚ್ಛೆಯಿಂದ ಸಿಕ್ಕಿದ ಅಮೃತವನ್ನು ಒಬ್ಬನಿಗೆ ಕೊಟ್ಟು ಪ್ರಯತ್ನಪೂರ್ವಕ ವಿಷವನ್ನು ಯಾರು ಸ್ವೀಕರಿಸಲಿಕ್ಕೆ ಇಚ್ಛಿಸುವನು? ಪಂಡಿತ ರಾದವರು ಯಾವ ಕಾರ್ಯವನ್ನು ವಿಚಾರಮಾಡದೆ ಮಾಡಬಾರದು. ವಿಚಾರ ಮಾಡಿಯೇ ಕಾರ್ಯವನ್ನು ಮಾಡುವ ಮನುಷ್ಯನು ಅವನು ಬದುಕಿರುವವರೆಗೆ ದುಃಖವನ್ನು ಹೊಂದಲಾರನು. ಆದುದರಿಂದ ನೀನು ಸುಖವನ್ನು ಅನುಭವಿಸಲಿಕ್ಕೆ ಹೋಗು. ಈ ಪಾಪಿಗಳಿಂದ ನಿನಗೆ ಏನಾಗಬೇಕು?' ಎಂದು ಹೇಳಿದರು.

ಯಮದೇವರ ಮಾತನ್ನು ಕೇಳಿ ಲಾಂಗಲವರ್ಧನನು ತನ್ನ ಪುಣ್ಯವನ್ನು ನರಕದಲ್ಲಿ ಇರುವವರೆಗೆ ಕೊಡುವೆನೆಂದು ನಿರ್ಬಂಧವನ್ನು ಮಾಡಿದನು. ಆಗ ಯಮದೇವರು 'ಹಾಗೆ ನಿನ್ನ ಅಭೀಷ್ಟವಿದ್ದರೆ ಯಾಕೆ ಸಾವಕಾಶವನ್ನು ಮಾಡಬೇಕು? ನೀನು ಇಪ್ಪತ್ತು ಆಷಾಢಮಾಸಗಳಲ್ಲಿ ತಪತಿಯಲ್ಲಿ ಸ್ನಾನ ಮಾಡಿದ ಪುಣ್ಯವನ್ನು ಈ

ನರಕದಲ್ಲಿ ಇರುವವರಿಗೆ ಕೊಟ್ಟುಬಿಡು' ಎಂದು ಹೇಳಿದರು. ಆಗ ಅವನು ಸಂತೋಷದಿಂದ ರೋಮಾಂಚನವುಳ್ಳವನಾಗಿ ತನ್ನ ಪುಣ್ಯವನ್ನು ನರಕದಲ್ಲಿ ಇರುವವರೆಗೆ ಕೊಟ್ಟನು. ಇದರಿಂದ ಅವರೆಲ್ಲರೂ ನರಕದಿಂದ ಮೇಲಕ್ಕೆ ಬಂದು ಅವನ ಸಮೀಪಕ್ಕೆ ಬಂದರು. ಅವರು ತಪತೀಸ್ನಾನದ ಪುಣ್ಯದಿಂದ ಪಾಪರಹಿತರಾಗಿ ಲಾಂಗಲವರ್ಧನನನ್ನು ಬಹಳವಾಗಿ ಹೊಗಳಿ ಉತ್ತಮವಾದ ಲೋಕಕ್ಕೆ ಹೋದರು.

ತರುವಾಯ ಲಾಂಗಲವರ್ಧನನು ಪರಮಸಂತೋಷವುಳ್ಳವನಾಗಿ ಯಮ ದೇವರಿಗೆ ನಮಸ್ಕರಿಸಿ 'ಪೂಜ್ಯರೇ! ತಮ್ಮ ಅನುಗ್ರಹದಿಂದ ನನ್ನ ಅಭೀಷ್ಟವನ್ನು ಹೊಂದಿರುವೆನು. ಈಗ ನನ್ನ ಮಾತಿನಿಂದ ನರಕದಲ್ಲಿ ಇರುವವರೆಲ್ಲರನ್ನು ಬಿಡಿಸಿದಿರಿ. ನಾನು ಎಲ್ಲಾ ಪುಣ್ಯವನ್ನು ಕೊಟ್ಟು ಈಗ ಪುಣ್ಯಹೀನನಾಗಿರುವೆನು. ಆದುದರಿಂದ ಈಗ ನಾನು ಯಾವ ನರಕಕ್ಕೆ ಹೋಗಲಿ ಅಥವಾ ಯಾವ ತಾಯಿಯ ಹೊಟ್ಟೆಯಲ್ಲಿ ಹುಟ್ಟಲಿ' ಎಂದು ಕೇಳಿದನು.

ಆದಕ್ಕೆ ಯಮದೇವರು 'ನಿನ್ನ ಪುಣ್ಯವು ಎಲ್ಲಿಗೆ ಹೋಯಿತು. ಮತ್ತಷ್ಟು ಹೆಚ್ಚಾಗಿ ಬಂದಿತು. ನಿನ್ನ ಪುಣ್ಯವು ವೆಚ್ಚಮಾಡಿ ಈ ನರಕದವರನ್ನು ಬಿಡಿಸಿ ನೀನು ನರಕವನ್ನು ಅಂಗೀಕಾರ ಮಾಡಿರುವಿ. ನಿನ್ನನ್ನು ಬಿಟ್ಟು ಇನ್ನು ಯಾರು ಈರೀತಿಯಾಗಿ ಮಾಡಲಿಕ್ಕೆ ಸಮರ್ಥರಾಗುವರು? ಎಲ್ಲರೂ ಇನ್ನೊಬ್ಬರು ಪೀಡಿಸಿ ತಾವು ಸುಖಪಡಬೇಕೆಂದು ಅಪೇಕ್ಷಿಸುವರು. ನೀನು ತನಗೆ ದುಃಖವನ್ನು ಅಂಗೀಕರಿಸಿ ಇತರರಿಗೆ ಸುಖವನ್ನು ಉಂಟುಮಾಡಿದಿ. ಇದರಿಂದ ನಿನ್ನ ಪುಣ್ಯವು ಅಕ್ಷಯವಾಯಿತು. ಇದರಿಂದ ನೀನು ವಿಷ್ಣುಲೋಕವನ್ನು ಹೊಂದು' ಎಂದು ಹೇಳಿದರು.

ಅದನ್ನು ಕೇಳಿ ಲಾಂಗಲವರ್ಧನನು ಯಮದೇವರಿಗೆ ನಮಸ್ಕರಿಸಿ ಹೋಗಲಿಕ್ಕೆ ಉದ್ಯುಕ್ತನಾದನು. ಅಷ್ಟರಲ್ಲಿ ಶ್ರೀಭಗವಂತನು ಕಳುಹಿಸಿದ ವಿಮಾನವನ್ನು ವಿಷ್ಣುದೂತರು ತೆಗೆದುಕೊಂಡು ಬಂದರು. ಅವನನ್ನು ವಿಮಾನದಲ್ಲಿ ಕೂತುಕೊಳ್ಳಿಸಿ ಕರೆದುಕೊಂಡು ಹೋದರು. ಅವನ ಮುಂಭಾಗದಲ್ಲಿ ದೇವಗಂಧರ್ವರು ಗಾಯನ ಮಾಡಿದರು. ಅಪ್ಸರಸ್ತ್ರೀಯರು ನರ್ತನ ಮಾಡಿದರು. ವಾದ್ಯಗಳನ್ನು ಬಾರಿಸಿದರು. ಅವನನ್ನು ವಿಷ್ಣುದೂತರು ಭಗವಂತನಲೋಕಕ್ಕೆ ಕರೆದುಕೊಂಡು ಹೋದರು. ಲಾಂಗಲವರ್ಧನನು ಶ್ರೀಭಗವಂತನನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿ ಸ್ತೋತ್ರಮಾಡಿ ಅವನ ಬಳಿಯಲ್ಲಿ ಸಂತೋಷದಿಂದ ಇದ್ದನು. ಆದುದರಿಂದ ಆಷಾಢಮಾಸದಲ್ಲಿ ತಪತೀನದಿಯಲ್ಲಿ ಸ್ನಾನಮಾಡುವುದು ಅತ್ಯಂತ ಪ್ರಶಸ್ತವಾದದ್ದು.



# ಲಾಂಗಲವರ್ಧನನ ನರಕದರ್ಶನವು [1]

ಯಮದೇವರ ಆಜ್ಞೆಯಿಂದ ದೂತನು ಲಾಂಗಲವರ್ಧನನನ್ನು ಭಯಂಕರ ನರಕಗಳನ್ನು ತೋರಿಸುತ್ತಾ ಕರಕೊಂಡು ಹೋದನು. ನರಕದಲ್ಲಿ ಜನರು ಬಹಳ ವಿಧದಿಂದ ದುಃಖವನ್ನು ಅನುಭವಿಸುತ್ತಿದ್ದರು. ಅದನ್ನು ನೋಡಿ ಲಾಂಗಲವರ್ಧನನು ಕೃಪೆಯುಳ್ಳವನಾಗಿ ದೂತರು 'ಇವರು ಯಾವ ಯಾವ ಪಾಪಗಳನ್ನು ಮಾಡಿರುವರು? ಯಾವುದರ ಫಲವಾಗಿ ಹೀಗೆ ನಾನಾವಿಧವಾಗಿ ಹಿಂಸೆಯನ್ನು ಹೊಂದುತ್ತಿರುವರು' ಎಂದು ಕೇಳಿದನು.

ಅದಕ್ಕೆ ಯಮದೇವರದೂತನು 'ಯಾರು ತಂದೆತಾಯಿಗಳಿಗೋ ತಂದೆ ಮಕ್ಕಳಿಗೋ ದಂಪತಿಗಳಿಗೋ ಪರಸ್ಪರ ವಿರೋಧವುಂಟಾಗುವಂತೆ ಮಾಡುವರೋ ಮಿತ್ರರಿಗೆ ಪರಸ್ಪರ ವಿರೋಧವುಂಟಾಗುವಂತೆ ಮಾಡುವರೋ ಅವರಿಗೆ ಎರಡು ಪಾರ್ಶ್ವಗಳಲ್ಲಿಯೂ ಕಟ್ಟಿಗೆಗಳಿಂದ ಬಡಿಯುವರು. ರಂಪಾದಿಂದ (ಗರಗಸದಿಂದ) ಸೀಳುವರು. ಯಾರು ತಂದೆತಾಯಿಗಳನ್ನೂ, ಗುರುಗಳನ್ನೂ, ಬ್ರಾಹ್ಮಣರನ್ನೂ ನಿಂದಿಸುವರೋ ಇನ್ನೂ ಸಜ್ಜನರಿಗೆ ದ್ರೋಹ ಮಾಡುವರೋ ಇನ್ನೂ ಅನೇಕ ದೋಷಗಳನ್ನು ಮಾಡುವರೋ ಅವರನ್ನು ನರಕದಲ್ಲಿ ಹಾಕಿ ಲೋಹದ ಗೂಟಗಳಿಂದ ಯಮದೂತರು ಬಡಿಯುತ್ತಿರುವರು. ಯಾರು ಇನ್ನೊಬ್ಬರ ದ್ರವ್ಯವನ್ನೋ ಇನ್ನೊಬ್ಬರ ಸ್ತ್ರೀಯರನ್ನೋ ಕೈಗಳಿಂದ ಮುಟ್ಟಿರುವರೋ ಅವರ ಕೈಗಳನ್ನು ಯಮದೂತರು ಕತ್ತರಿಸಿ ಹಾಕುವರು. ಕತ್ತರಿಸಿದಂತೆ ಆ ಕೈಗಳು ಚಿಗುರುವುವು. ಯಮದೂತರು ಪುನಃ ಪುನಃ ಕತ್ತರಿಸುತ್ತಲೇ ಇರುವರು. ಯಾರು ಕಾಮಾತುರರಾಗಿ ಪರಸ್ತ್ರೀಯರ ಸ್ಪರ್ಶವನ್ನು ಮಾಡಿರುವರೋ ಅವರನ್ನು ಬಿಸಿಯಾಗಿರುವ ಲೋಹ, ಭೂಮಿ, ಬೆಂಕಿ, ಮರಗಳಿಗೆ ಅಲಿಂಗನ ಮಾಡಿಸುವರು. ಯಾರು ಪುಣ್ಯಕ್ಷೇತ್ರಕ್ಕೋ ಪುಣ್ಯತೀರ್ಥಕ್ಕೋ ಹೋಗಿ ಪುಣ್ಯವನ್ನು ಸಂಪಾದಿ ಸದೆಯೇ ಇರುವರೋ ಅವರ ಬಾಯಿಗೆ ಪುನಃ ಪುನಃ ಬೆಂಕಿಯ ಕೆಂಡಗಳನ್ನು ಹಾಕುವರು. ಯಾರು ವೃದ್ಧರಾದ ತಂದೆತಾಯಿಗಳನ್ನೂ, ಬ್ರಾಹ್ಮಣರನ್ನೂ, ಗೋವುಗಳ್ನೂ, ಕಾಲುಗಳಿಂದ ಒದೆಯುವರೋ ಅವರ ಕಾಲುಗಳನ್ನು ಕಡಿದು ಹಾಕುವರು. ಯಾರು ಕೋಪವುಳ್ಳವರಾಗಿ ಬ್ರಾಹ್ಮಣರನ್ನೂ, ಗುರುಗಳನ್ನೂ, ಗೋವುಗಳನ್ನೂ, ಬಡಿಯುವರೋ ಅವರ ತಲೆಯ ಮೇಲೆ ಯಮದೂತರು ಮುದ್ಗರ ಎಂಬ ಆಯುಧಗಳಿಂದ ಬಡೆಯುತ್ತಿರುವರು.

1. ಸ್ಕಂ.ಪು.ಆಷಾ.ಮಾ.ಮಾ. ಅ.4

ಯಾವ ಬ್ರಾಹ್ಮಣರು ಯಾರ ಮನೆಯಲ್ಲಿ ಭೋಜನ ಮಾಡಬಾರದೋ ಅವರ ಮನೆಯಲ್ಲಿ ಲೋಭದಿಂದ ಭೋಜನ ಮಾಡುವರೋ ಅವರ ಬಾಯಿಯಲ್ಲಿ ಬಿಸಿಬಿಸಿಯಾಗಿರುವ ಲೋಹದ ಗುಂಡುಗಳನ್ನು ಹಾಕುವರು. ಯಾರು ಬಹುಪಾಪವನ್ನು ಮಾಡುವರೋ ತಿನ್ನಬಾರದ ಪದಾರ್ಥಗಳನ್ನು ತಿನ್ನುವರೋ ಅವರು ಯಮದೂತರಿಂದ ಚೆನ್ನಾಗಿ ಬಡೆಯಲ್ಪಡುವರು. ಯಾರು ಬ್ರಾಹ್ಮಣರನ್ನು ಕೊಲ್ಲುವರೋ ಬಂಗಾರವನ್ನು ಕದಿಯುವರೋ ಅವರ ತಲೆಯನ್ನು ಯಮದೂತರು ಪುನಃ ಪುನಃ ಪುಡಿ ಮಾಡುವರು. ಯಾವ ಬ್ರಾಹ್ಮಣರು ಮದ್ಯಪಾನ ಮಾಡಿರುವರೋ ಅವರ ಬಾಯಿಗೆ ತಾಮ್ರವನ್ನು ಕಾಯಿಸಿ ಅದರ ಬಿಸಿಯಾದ ರಸವನ್ನು ಹಾಕುತ್ತಿರುವರು. ಅವರನ್ನು ಬಲಾತ್ಕಾರದಿಂದ ಕೆಳಗೆ ಬೀಳಿಸಿ ಲೋಹದ ಆಯುಧಗಳಿಂದ ಅವರ ಬಾಯಿಯನ್ನು ಸೀಳಿ ಕೈಕಾಲುಗಳನ್ನು ಕಬ್ಬಿಣದ ಸರಪಳಿಗಳಿಂದ ಕಟ್ಟಿಹಾಕುವರು. ಗುರುಸ್ತ್ರೀಗಮನ ಮಾಡಿದ ಪಾಪಿಗಳ ಗುಹ್ಯೇಂದ್ರಿಯವನ್ನು ಕತ್ತರಿಸಿ ಹಾಕುವರು. ಮಹಾಪಾಪಿಗಳ ಸಹವಾಸ ಮಾಡಿದವರನ್ನು ಮೈಯೆಲ್ಲಾ ಗಾಯಮಾಡಿ ಉಪ್ಪುನೀರಿನ ಕುಂಡದಲ್ಲಿ ಹಾಕುವರು. ಗೋಹತ್ಯೆಯನ್ನು ಮಾಡಿದವರನ್ನು ಕಲ್ಲಿನಮೇಲೆ ಹಾಕಿ ತಿಕ್ಕುವರು. ಅವರ ಎಲುಬು ಮಾಂಸಗಳು ಸೀಳಿ ಹೊರಗೆ ಬರುವುವು. ಅವರು ರಾತ್ರಿಯೂ ಹಗಲೂ ಕೂಗುತ್ತಾ ಇರುವರು. ಸ್ತ್ರೀಹತ್ಯೆಯನ್ನು ಮಾಡಿದವರು ಹೊಟ್ಟೆಯನ್ನು ಸೀಳಿ ಬಿಸಿಬಿಸಿಯಾಗಿ ಜ್ವಲಿಸುತ್ತಿರುವ ಕಲ್ಲುಗಳನ್ನು ಹೊಟ್ಟೆಯ ಒಳಗೆ ಇಡುವರು. ಬಾಲಹತ್ಯೆಯನ್ನು ಮಾಡಿದವರನ್ನು ಪಾತ್ರೆಯಲ್ಲಿ ಹಾಕಿ ಬೇಯಿಸುವರು ಆ ವ್ಯಥೆಯಿಂದ ಪಾಪಿಗಳು ಸಾಯುವರು. ಪುನಃ ಬದುಕುವರು. ಭ್ರೂಣಹತ್ಯೆಯನ್ನು ಮಾಡಿದವರನ್ನು ಶೂಲದಲ್ಲಿ ಹಾಕುವರು. ಇತರ ಪ್ರಾಣಿಗಳನ್ನು ಸಂಹಾರ ಮಾಡುವವರನ್ನು ಲೋಹದ ಮುಖವುಳ್ಳ ಅತಿಭಯಂಕರಗಳಾದ ಕಾಗೆಗಳು ಬಂದು ಕುಕ್ಕಿ ಕೊಲ್ಲುವುವು. ಪುನಃ ಅವರು ಬದುಕುವರು. ಯಾರು ಕೇವಲ ತಮಗಾಗಿಯೇ ದಯೆಯಿಲ್ಲದೆ ಪಶುಗಳನ್ನು ಕೊಲ್ಲುವರೋ ಅವರನ್ನು ಲೋಹದ ಹಲ್ಲುಗಳುಳ್ಳ ನಾಯಿಗಳು ಬಂದು ಕಟ್ಟಿ ಅವರ ಮಾಂಸವನ್ನು ಎಲುಬನ್ನು ಮೇದಸ್ಸನ್ನು ತಿಂದುಹಾಕುವುವು. ಯಾರು ಪರಸ್ತ್ರೀಯರನ್ನು ಪರದ್ರವ್ಯವನ್ನು ಅಪಹರಿಸುವರೋ ಅವರು ಜೀವಿಸುವಾಗಲೇ ಅವರ ಮಾಂಸವನ್ನು ರಾಕ್ಷಸರು ತಿನ್ನುವರು. ಯಾರು ನಿಷಿದ್ಧಾನ್ನವನ್ನು ಭೋಜನ ಮಾಡಿರುವರೋ ಅವರ ಬಾಯಿಗೆ ಬೆಂಕಿಯನ್ನು ಹಾಕುವರು. ಅವರು ನಾಲಿಗೆ ಕುತ್ತಿಗೆಯೆಲ್ಲಾ ಸುಟ್ಟುಹೋಗಿ ವೇದನೆಯಿಂದ ಅತ್ಯಂತವಾಗಿ ಮೂರ್ಛಿತರಾಗುವರು. ಹೊರಳಾಡುವರು. ಯಾರು

ಲೋಭದಿಂದ ಕಪಟಮಾಡಿ ಇನ್ನೊಬ್ಬರ ಸೊತ್ತನ್ನು ಅಪಹರಿಸುವರೋ ಅವರ ಹೃದಯದ ಮಾಂಸವನ್ನು ಯಮದೂತರು ತೆಗೆಯುವರು. ಅವರು ಹಾಗೆಯೇ ಬಿದ್ದಿರುವರು. ಯಾರು ಹಣ್ಣಾಗಿರುವ ಪುಷ್ಪವಾಗಿರುವ ಮರಗಳನ್ನು ಕಡಿಯುವರೋ ಅವರನ್ನು ಯಮದೂತರು ದಯೆಯಿಲ್ಲದೆ ತುಂಡುತುಂಡಾಗಿ ಕಡಿದುಹಾಕುವರು. ಯಾರು ಕ್ರೋಧದಿಂದಲೋ, ಲೋಭದಿಂದಲೋ ಇನ್ನೊಬ್ಬರ ಮನೆಗೆ ಬೆಂಕಿಹಚ್ಚಿರುವರೋ ಅವರನ್ನು ಉಗುರನ್ನು ಆರಂಭಿಸಿ ಮೆಲ್ಲ ಮೆಲ್ಲನೆ ಬೆಂಕಿಯನ್ನು ಹಚ್ಚಿ ಸುಡುವರು. ಇನ್ನೊಬ್ಬರಿಗೆ ವಿಷಹಾಕಿದವರ ಬಾಯಿಗೆ ಬೆಂಕಿಯಂತೆ ಕಾದಿರುವ ಲೋಹದ ಗೂಟಗಳನ್ನು ಹಾಕಿ ಪಶುಗಳನ್ನು ಕೊಲ್ಲುವಂತೆ ಕೊಲ್ಲುವರು. ಯಾರು ಅನ್ನವನ್ನು ಅಪಹರಿಸಿರುವರೋ ಅವರು ಬಹಳ ಹಸಿವೆಯಿಂದ ಪೀಡಿತರಾಗಿ ಪುನಃ ಪುನಃ ವಿಲಾಪವನ್ನು ಮಾಡುತ್ತಾ ಇರುವರು. ಎಣ್ಣೆಯನ್ನು ಕಬ್ಬಿನರಸವನ್ನು ಯಾರು ಅಪಹರಿಸುವರೋ ಅವರನ್ನು ಯಮದೂತರು ಯಂತ್ರದಲ್ಲಿ ಹಾಕಿ ಹಿಂಡಿ ಕೆಳಗೆ ಹಾಕುವರು. ಅವರು ಪುನಃಪುನಃ ಗಟ್ಟಿಯಾಗಿ ಕೂಗುತ್ತಿರುವರು. ಲೋಹಗಳನ್ನು ಅಪಹಾರ ಮಾಡಿದವರನ್ನು ಯಂತ್ರಗಳಲ್ಲಿ ಹಾಕಿ ಅವರ ಚರ್ಮ ಮೊದಲಾದ ಧಾತುಗಳನ್ನು ತೆಗೆಯುವರು. ಹೆಂಗಸರೂ ಕೂಡ ತಾವು ಮಾಡಿದ ಪಾಪದಿಂದ ಭಯಂಕರವಾದ ನರಕವೇದನೆಯನ್ನು ಅನುಭವಿಸುವರು. ಸ್ವಲ್ಪ ಪಾಪವನ್ನು ಮಾಡಿದರೂ ಅದರ ಫಲವು ಭಯಂಕರವಾಗಿ ಪರಿಣಮಿಸುವುದು. **ಪಾಪವನ್ನು ಮಾಡುವುದು ಬಹಳ ಸುಲಭವಾದದ್ದು. ಅದರ ಫಲವನ್ನು ಇಲ್ಲಿ ಅನುಭವಿಸುವುದು ಬಹಳ ಶ್ರಮಸಾಧ್ಯವಾದದ್ದು. ಆದುದರಿಂದ ತಮಗೆ ಹಿತವಾಗಬೇಕೆಂದು ಅಭಿಪ್ರಾಯವುಳ್ಳವರು ಪಾಪವನ್ನು ಮಾಡಬಾರದು**' ಇತ್ಯಾದಿ ರೀಯಾಗಿ ಹೇಳಿದನು.



## ವಿಪುಲನ ಕಥೆ

ಪೂರ್ವದಲ್ಲಿ ದೇವಶರ್ಮ ಎಂಬ ಋಷಿಗಳು ಇದ್ದರು. ಅವರಿಗೆ ರುಚಿ ಎಂದು ಹೆಸರುಳ್ಳ ಹೆಂಡತಿಯಿದ್ದಳು. ಅವಳು ಪರಮಸುಂದರಿಯಾಗಿದ್ದಳು. ಅವಳನ್ನು ನೋಡಿ ಎಲ್ಲರೂ ಮೋಹಿತರಾಗುತ್ತಿದ್ದರು. ಇಂದ್ರದೇವರು ವಿಶೇಷವಾಗಿ ಅವಳಲ್ಲಿ ಮನಸ್ಸುಳ್ಳವರಾಗಿದ್ದರು. ದೇವಶರ್ಮ ಋಷಿಗಳು ಬಹಳ ಜಾಗ್ರತೆಯಿಂದ

1. ಮ.ಭಾ. ಅನುಪ. ಅ.40 ರಿಂದ 43

ಹೆಂಡತಿಯನ್ನು ನೋಡಿಕೊಳ್ಳುತ್ತಿದ್ದರು. ಒಂದು ಸಮಯದಲ್ಲಿ ಅವರಿಗೆ ಒಂದು ಯಾಗಕ್ಕೆ ಹೋಗಬೇಕಾದ ಸಂದರ್ಭವು ಬಂದಿತು. ಆಗ ಅವರು ತನ್ನ ಶಿಷ್ಯನಾದ ಮಹಾತಪಸ್ವಿಯಾದ ವಿಪುಲನನ್ನು ಕರೆದು 'ನಾನು ಯಾಗಕ್ಕೆ ಹೋಗುವನು. ರುಚಿಯನ್ನು ಇಂದ್ರದೇವರು ಅಪೇಕ್ಷಿಸುತ್ತಲೇ ಇರುವರು. ಆದುದರಿಂದ ನೀನು ಜಾಗ್ರತೆಯಿಂದ ರುಚಿಯನ್ನು ರಕ್ಷಿಸುತ್ತಾ ಇರಬೇಕು ಎಂದರು. ಅದಕ್ಕೆ ವಿಪುಲನು ಇಂದ್ರದೇವರು ಯಾವ ರೂಪಿದಿಂದ ಬರಬಹುದು? ಎಂದು ಕೇಳಿದನು. ಅದಕ್ಕೆ ಗುರುಗಳು 'ಬೇಕಾದ ರೂಪವನ್ನು ಧರಿಸಿಕೊಂಡು ಇಂದ್ರದೇವರು ಬರಬಹುದು. ಕಿರೀಟ ಕುಂಡಲಾದಿಗಳನ್ನು ಧರಿಸಿಕೊಂಡು ಬರಬಹುದು. ಬ್ರಾಹ್ಮಣನಾಗಿ ಬರಬಹುದು. ಗಾಳಿಯ ರೂಪದಿಂದ ಬರಬಹುದು. ಯಾವ ರೂಪವನ್ನೂ ಧರಿಸಲಿಕ್ಕೆ ಅವರಿಗೆ ತಿಳಿಯುವುದು' ಎಂದು ಹೇಳಿ ಹೊರಟುಹೋದರು.

ವಿಪುಲನು ಗುರುಗಳು ಹೊರಟುಹೋದಮೇಲೆ 'ನಾನು ಗುರುಪತ್ನಿಯನ್ನು ಹೇಗೆ ರಕ್ಷಿಸಲಿ? ಇಂದ್ರದೇವರು ಗಾಳಿಯ ರೂಪದಿಂದ ಬಂದುಬಿಟ್ಟರೆ ಏನು ಮಾಡಲಿ? ಯೋಗಸಾಮರ್ಥ್ಯದಿಂದ ಗುರುಪತ್ನಿಯ ದೇಹವನ್ನು ಪ್ರವೇಶಿಸಿ ಇಂದ್ರದೇವರಿಂದ ರಕ್ಷಿಸುವೆನು' ಎಂದು ಮನಸ್ಸಿನಲ್ಲೇ ಹೇಳಿಕೊಂಡು ಗುರುಪತ್ನಿಯು ಕೂತಿರುವಲ್ಲಿ ತಾನು ಕೂತುಕೊಂಡು ನಾನಾವಿಧಗಳಾದ ಕಥೆಗಳನ್ನು ಹೇಳುತ್ತಾ ತನ್ನನ್ನೇ ನೋಡುವಂತೆ ಮಾಡಿ ತನ್ನ ಕಣ್ಣಿನ ರಶ್ಮಿಯದ್ವಾರದಿಂದ ರುಚಿಯ ದೇಹದೊಳಗೆ ಪ್ರವೇಶಿಸಿದವರಾಗಿ ಅಲ್ಲಿಯೇ ಇದ್ದುಕೊಂಡು ರಕ್ಷಿಸುತ್ತಾ ಇದ್ದರು.

ತರುವಾಯ ಒಂದು ದಿವಸದಲ್ಲಿ ಇಂದ್ರದೇವರು ಇದೇ ಸರಿಯಾದ ಸಮಯವೆಂದು ತಿಳಿದುಕೊಂಡು ದಿವ್ಯರೂಪವುಳ್ಳವರಾಗಿ ಆಶ್ರಮಕ್ಕೆ ಬಂದರು. ಅಲ್ಲಿ ಕಣ್ಣು ತೆರೆದುಕೊಂಡು ಚಲಿಸದೆ ಇದ್ದ ವಿಪುಲನ ದೇಹವನ್ನು ನೋಡಿದರು. ಸುಂದರಿಯಾದ ರುಚಿಯನ್ನೂ ನೋಡಿದರು. ರುಚಿಯು ಇಂದ್ರದೇವರನ್ನು ನೋಡಿ ಅವರ ರೂಪದಿಂದ ಆಶ್ಚರ್ಯವುಳ್ಳವಳಾಗಿ ಏಳಬೇಕೆಂದೂ ನೀನು ಯಾರು ಎಂದು ಕೇಳಬೇಕೆಂದೂ ಇಚ್ಛಿಸಿದಳು. ಆಗ ವಿಪುಲನು ಏಳದಂತೆಯೂ ಮಾತಾಡ ದಂತೆಯೂ ಸೆಳೆದುಬಿಟ್ಟನು. ಆಗ ರುಚಿಗೆ ಒಂದೂ ಮಾತಾಡಲಿಕ್ಕೂ ಆಗಲಿಲ್ಲ. ಇಂದ್ರದೇವರೇ 'ರುಚಿ! ನಾನು ನಿನ್ನಲ್ಲಿ ಸೋತು ಬಂದಿರುವೆನು. ನಾನು ನಿನಗೋಸ್ಕರ ಬಂದಿರುವ ದೇವೇಂದ್ರನು. ಯಾವುದಕ್ಕಾಗಿ ಸುಮ್ಮನೆ ಕಾಲವನ್ನು ಕಳೆಯುವೆ' ಎಂದರು. ಗುರುಪತ್ನಿಯ ಶರೀರದಲ್ಲಿದ್ದ ವಿಪುಲನು ಇಂದ್ರದೇವರನ್ನು ನೋಡಿದನು. ವಿಪುಲನು ಸೆಳೆದು ಹಿಡಿದಿರುವ ಕಾರಣ ರುಚಿಯು ಒಂದೂ ಮಾಡಲಿಕ್ಕೆ ಆಗಲಿಲ್ಲ.

ವಿಪುಲನು ಅವಳ ಅಭಿಪ್ರಾಯವನ್ನು ತಿಳಿದುಕೊಂಡು ಯೋಗದಿಂದ ಬಂಧಿಸಿಬಿಟ್ಟನು. ಸುಮ್ಮನೆ ಕೂತಿರುವ ರುಚಿಯನ್ನು ನೋಡಿ ಇಂದ್ರದೇವರು ಮತ್ತೂ ಮಾತಾಡಿದರು. ಆಗ ರುಚಿಗೆ ಬನ್ನಿ ಬನ್ನಿ ಎಂದು ಹೇಳಬೇಕೆಂದು ತೋರಿತು. ವಿಪುಲನು ಅವಳ ಬಾಯಿಯನ್ನೇ ಬಂಧಿಸಿಬಿಟ್ಟನು. ತರುವಾಯ ರುಚಿಯ ಬಾಯಿಯಿಂದ ಏಕೆ ಬಂದಿರುವಿರಿ ಎಂದಿಷ್ಟೇ ಮಾತು ಬಂದಿತು. ಅಷ್ಟು ಮಾತಾಡಿ ರುಚಿಯು ಪರವಶಳಾಗಿ ಲಜ್ಜೆಯಿಂದ ಕೂತುಬಿಟ್ಟಳು. ಇಂದ್ರದೇವರು ಅದನ್ನು ನೋಡಿ ಮನಸ್ಸಿನಲ್ಲಿ ತುಂಬಾ ನೊಂದುಕೊಂಡರು. ರುಚಿಯು ಸುಮ್ಮನೆ ಇರುವುದನ್ನು ನೋಡಿ ಇಂದ್ರದೇವರು ದಿವ್ಯದೃಷ್ಟಿಯಿಂದ ನೋಡಿದರು. ರುಚಿಯ ದೇಹದೊಳಗೆ ಯೋಗಸಾಮರ್ಥ್ಯದಿಂದ ಇದ್ದು ಅವಳನ್ನು ರಕ್ಷಿಸುತ್ತಿರುವ ಮಹಾತಪಸ್ವಿಯಾದ ವಿಪುಲನನ್ನು ನೋಡಿದರು. ನೋಡುವ ಮಾತ್ರವೇ ಇಂದ್ರದೇವರು ಅವನ ಶಾಪದಿಂದ ಭಯವುಳ್ಳವರಾಗಿ ನಡುಗಿದರು. ತರುವಾಯ ವಿಪುಲನು ಗುರುಪತ್ನಿಯ ದೇಹವನ್ನು ಬಿಟ್ಟು ತನ್ನ ಶರೀರವನ್ನು ಪ್ರವೇಶಿಸಿ ಅನೇಕವಾಗಿ ಇಂದ್ರದೇವರನ್ನು ನಿಂದಿಸಿ ಬೆದರಿಸಿದರು. ಇಂದ್ರದೇವರು ಒಂದೂ ಮಾತಾಡದೆ ಅಲ್ಲಿಯೇ ಮರೆಯಾಗಿ ಹೊರಟುಹೋದರು. ತರುವಾಯ ಗುರುಗಳು ಬಂದ ಮೇಲೆ ಅವರೊಡನೆ ಇಂದ್ರದೇವರು ಬಂದು ಭಯಪಟ್ಟುಹೋದ ವಿಷಯವನ್ನೆಲ್ಲಾ ವಿಪುಲನು ಹೇಳಿದನು. ತಾನು ಯೋಗಸಾಮರ್ಥ್ಯದಿಂದ ರುಚಿಯ ದೇಹವನ್ನು ಪ್ರವೇಶಿಸಿದ ವಿಷಯವನ್ನು ಮಾತ್ರ ಹೇಳಲಿಲ್ಲ. ಗುರುಗಳು ವಿಪುಲನ ಮಾತನ್ನು ಕೇಳಿ ಸಂತೋಷಪಟ್ಟರು. ಬೇಕಾದ ವರವನ್ನು ಕೇಳಿಕೊ ಎಂದರು. ಧರ್ಮದಲ್ಲೇ ಇರುವಂತೆ ವರವನ್ನು ಕೇಳಿಕೊಂಡನು. ತರುವಾಯ ಗುರುಗಳ ಅನುಜ್ಞೆಯನ್ನು ಹೊಂದಿ ಉತ್ತಮವಾದ ತಪಸ್ಸನ್ನು ಮಾಡುತ್ತಿದ್ದನು. ದೇವಶರ್ಮರು ಇಂದ್ರದೇವರ ಭಯರಹಿತರಾಗಿ ಪತ್ನಿಯಿಂದ ಕೂಡಿ ಸುಖವಾಗಿ ಇದ್ದರು.

ವಿಪುಲನು ಕಠಿಣವಾದ ತಪಸ್ಸು ಮಾಡಿದನು. ತಾನು ಮಹಾತಪಸ್ವಿಯಾದೆನು. ಈ ಲೋಕ ಪರಲೋಕವೆಂಬ ಎರಡು ಲೋಕಗಳನ್ನು ಜಯಿಸಿದೆನು ಎಂದು ತಿಳಿದುಕೊಂಡು ಕೀರ್ತಿವಂತನಾಗಿ ಇಚ್ಛಾನುಸಾರವಾಗಿ ಸಂಚರಿಸುತ್ತಿದ್ದನು. ಹೀಗೆಯೇ ಕೆಲವು ಸಮಯವನ್ನು ಹೋದಮೇಲೆ ಒಂದು ಸಂದರ್ಭದಲ್ಲಿ ರುಚಿಯ ಅಕ್ಕನ ಮನೆಯಲ್ಲಿ ಏನೋ ಒಂದು ವಿಶೇಷವಾದ ಉತ್ಸವವು ಏರ್ಪಟ್ಟಿತು. ಅದೇ ಸಮಯದಲ್ಲಿ ಉತ್ತಮರೂಪವತಿಯಾದ ಒಬ್ಬಳು ದೇವಲೋಕದ ಸ್ತ್ರೀಯು ಅಲ್ಲಿಯೇ ಮೇಲೆ ಆಕಾಶಮಾರ್ಗದಲ್ಲಿ ಹೊರಟುಹೋದಳು. ಆಗ ಅವಳ

ದೇಹದಿಂದ ಸುವಾಸನೆಯುಳ್ಳ ಅನೇಕಪುಷ್ಪಗಳು ಕೆಳಗೆ ಬಿದ್ದವು. ಅತಿಸುವಾಸನೆ ಯುಳ್ಳ ಆ ಹೂಗಳನ್ನು ರುಚಿಯು ತೆಗೆದು ಮುಡಿದುಕೊಂಡಳು. ಅದೇ ಸಮಯ ದಲ್ಲಿ ಅಂಗದೇಶದಿಂದ ರುಚಿಯನ್ನು ಬರಹೇಳಲು ಜನವು ಬಂದಿತು. ರುಚಿಯ ಅಕ್ಕನ ಹೆಸರು ಪ್ರಭಾವತಿಯೆಂದು. ಅವಳು ಅಂಗದೇಶದ ರಾಜನಾದ ಚಿತ್ರರಥನ ಹೆಂಡತಿಯು. ಈರೀತಿಯಾಗಿ ಅಂಗದೇಶಕ್ಕೆ ತನಗೆ ಆಹ್ವಾನವು ಬರಲು ಆ ಹೂಗಳನ್ನು ಮುಡಿದುಕೊಂಡೇ ಗಂಡನೊಡನೆ ಅಂಗದೇಶಕ್ಕೆ ಹೋದಳು. ಅಲ್ಲಿ ರುಚಿಯ ಅಕ್ಕನು ಆ ಹೂಗಳ ಸುವಾಸನೆಯನ್ನು ನೋಡಿ ನನಗೂ ಆ ಹೂಗಳು ಬೇಕು ಎಂದು ಆಸೆಪಟ್ಟಳು. ರುಚಿಯು ಅದನ್ನು ತನ್ನ ಗಂಡನ ಹತ್ತಿರ ತಿಳಿಸಿದಳು. ದೇವಶರ್ಮರು ವಿಪುಲನನ್ನು ಕರೆದ ಆ ಹೂವನ್ನು ತರಬೇಕೆಂದು ಹೇಳಿದರು. ವಿಪುಲನು ಹಾಗೆಯೇ ಆಗಲಿ ಎಂದು ಹೇಳಿ ಅದೇ ಸ್ಥಳಕ್ಕೆ ಹೋದನು. ಪೂರ್ವದಲ್ಲಿ ಯಾವ ಸ್ಥಳದಲ್ಲಿ ಪುಷ್ಪಗಳು ಬಿದ್ದಿದ್ದವೋ ಅದೇ ಸ್ಥಳದಲ್ಲಿ ವಿಪುಲನ ತಪಃಸಾಮರ್ಥ್ಯದಿಂದ ಬಾಡಿಹೋಗದೆ ಇದ್ದ ಸುವಾಸನೆಯುಳ್ಳ ಅನೇಕ ಪುಷ್ಪಗಳು ಬಿದ್ದಿದ್ದವು. ವಿಪುಲನು ಆ ಪುಷ್ಪಗಳನ್ನು ಹಿಡಿದುಕೊಂಡು ಗುರುಗಳ ಮಾತು ನಡೆಯಿತು ಎಂದು ಸಂತೋಷಪಡುತ್ತಾ ಶೀಘ್ರವಾಗಿ ಬಂದನು. ಬರುತ್ತಿರುವಾಗ ದಾರಿಯಲ್ಲಿ ನಿರ್ಜನವಾದ ಅರಣ್ಯದಲ್ಲಿ ಹೆಣ್ಣುಗಂಡು ಇಬ್ಬರು ಚಕ್ರದಂತೆ ಸುತ್ತುತ್ತಾ ಇದ್ದರು. ಸ್ವಲ್ಪ ಹೊತ್ತಿನಲ್ಲೆ ಅವರಿಬ್ಬರಿಗೆ ನೀನು ಬೇಗ ಹೋಗುವಿ, ನೀನು ಬೇಗನೇ ಹೋಗುವಿ ಎದು ಜಗಳಕ್ಕೆ ಆರಂಭವಾಯಿತು. ಕೊನೆಗೆ ಅವರು ನಮ್ಮಲ್ಲಿ ಯಾರು ಸುಳ್ಳು ಹೇಳುವರೋ ಅವರಿಗೆ ವಿಪುಲನಿಗೆ ಪರಲೋಕದಲ್ಲಿ ಆಗುವ ಭಯಂಕರವಾದ ಗತಿಯಾಗಲಿ ಎಂದು ಹೇಳಿದರು. ಅದನ್ನು ಕೇಳಿ ವಿಪುಲನಿಗೆ ವಿಷಾದವುಂಟಾಯಿತು. ನಾನು ಇಷ್ಟು ತಪಸ್ಸನ್ನು ಮಾಡಿದ್ದೇನೆ. ನನಗೆ ಇವರೇಕೆ ಹೀಗೆ ಹೇಳುವರು ಎಂದು ಯೋಚಿಸುತ್ತಾ ದೀನನಾಗಿ ಮುಖವನ್ನು ತಗ್ಗಿಸಿಕೊಂಡು ಮುಂದಕ್ಕೆ ಹೋದನು. ಅಲ್ಲಿ ಆರುಜನರು ಪಗಡೆ ಆಟ ಆಡುತ್ತಿದ್ದರು. ಅವರೂ ಕೂಡ ಹಾಗೆಯೇ ಪೂರ್ವದ ಸ್ತ್ರೀಪುರುಷರು ಮಾಡಿದ ಪ್ರತಿಜ್ಞೆಯಂತೇ ಮಾಡಿದರು. ಇದನ್ನು ಕೇಳಿ ತುಂಬಾ ದುಃಖವುಂಟಾಯಿತು. ತಾನು ಏನು ಪಾಪವನ್ನು ಮಾಡಿದೆನೆಂದು ಬಹಳ ಯೋಚಿಸಿದನು. ತರುವಾಯ ರುಚಿಯನ್ನು ರಕ್ಷಿಸಲು ಅವಳ ಶರೀರವನ್ನು ಯೋಗಸಾಮರ್ಥ್ಯದಿಂದ ಪ್ರವೇಶಿಸಿದನು. ಆದರೆ ಅದನ್ನು ಗುರುಗಳ ಹತ್ತಿರ ತಿಳಿಸಲಿಲ್ಲ. ಇದೇ ನನ್ನ ಮಹಾಪಾಪವು ಎಂದು ಯೋಚಿಸುತ್ತಾ ಗುರುಗಳ ಸಮೀಪಕ್ಕೆ ಬಂದನು. ಗುರುಗಳಿಗೆ ಪುಷ್ಪಗಳನ್ನು ಕೊಟ್ಟು ಗುರುಗಳನ್ನು ಪೂಜಿಸಿದನು.

/

ದೇವಶರ್ಮರು ವಿಪುಲನೊಡನೆ 'ವಿಪುಲನೇ! ನೀನು ದಾರಿಯಲ್ಲಿ ಬರುವಾಗ ನೀನು ಯಾರನ್ನು ನೋಡಿದಿ? ನೀನು ಮಾಡಿದ ಕಾರ್ಯವನ್ನು ಅವರೂ ನಿನ್ನ ಮನನಸ್ಸೂ ರುಚಿಯೂ ತಿಳಿದಿರುವರು'ಎಂದರು.

ಆಗ ವಿಪುಲನು 'ಪೂಜ್ಯರೇ! ಅವರು ಸ್ತ್ರೀಪುರುಷರು ಯಾರು? ಆ ಆರು ಪುರುಷರು ಯಾರು? ಅದನ್ನು ಹೇಳಬೇಕು' ಎಂದನು.

ದೇವಶರ್ಮರು 'ಆ ಸ್ತ್ರೀಪುರುಷರೇ ರಾತ್ರಿಹಗಲುಗಳು. ಪಗಡೆ ಆಟವನ್ನು ಆಡುತ್ತಿದ್ದ ಆ ಆರುಜನರು ಋತುಗಳು ಯಾರೂ ಕೂಡ ನನ್ನನ್ನು ಯಾರೂ ನೋಡುವುದಿಲ್ಲ ಎಂದು ತಿಳಿದುಕೊಂಡು ಪಾಪವನ್ನು ಮಾಡಬಾರದು. ಎಷ್ಟು ರಹಸ್ಯದಲ್ಲಿ ಪಾಪವನ್ನು ಮಾಡಿದರೂ ರಾತ್ರಿಹಗಲು ಋತುಗಳು ಅಂದರೆ ಇವುಗಳ ಅಭಿಮಾನಿಗಳು ನೋಡುತ್ತಲೇ ಇರುವರು. ಅದೇ ರೀತಿಯಾಗಿ ನಿನಗೆ ಪಾಪಕರ್ಮವುಳ್ಳವರಿಗೆ ಉಂಟಾಗುವ ಲೋಕವು ಬರುತ್ತಿತ್ತು. ನೀನು ಯೋಗಸಾಮರ್ಥ್ಯದಿಂದ ರುಚಿಯ ದೇಹವನ್ನು ಪ್ರವೇಶಿಸಿದ್ದನ್ನು ನನ್ನ ಹತ್ತಿರ ಹೇಳಲಿಲ್ಲ. ಅದು ನಿನಗೆ ಪಾಪವು. ಆದರಿಂದಲೇ ಅವರು ನಗುತ್ತಾ ಬರುತ್ತಿರುವ ನಿನ್ನನ್ನು ನೋಡಿ ನೀನು ಗುರುಗಳ ತಿಳಿಸಲು ಸ್ಮರಣೆ ಉಂಟುಮಾಡಲು ಹಾಗೆ ಮಾಡಿದರು. ನೀನು ನನ್ನ ಹತ್ತಿರ ಹೇಳಲಿಲ್ಲ. ಅದರಿಂದಲೇ ನಿನಗೆ ಪಾಪಿಗಳ ಲೋಕವುಂಟಾಗುವುದೆಂದೂ ನಿನಗೆ ಜ್ಞಾಪಕಪಡಿಸಿದರು. ನೀನು ಒಂದೂ ಅನ್ಯಾಯವನ್ನು ಮಾಡಿಲ್ಲ. ಆದರಿಂದ ನಾನು ನಿನ್ನ ಮೇಲೆ ಪ್ರೀತಿಉಳ್ಳವನಾಗಿದ್ದೇನೆ. ನೀನು ಅನ್ಯಾಯ ಮಾಡಿದ್ದು ಆಗಿದ್ದರೆ ಆಗಲೇ ನಿನಗೆ ನಾನು ಶಾಪವನ್ನು ಕೊಡುತ್ತಿದ್ದೆನು. ವತ್ಸ! ನೀನು ನನ್ನ ಪತ್ನಿಯನ್ನು ರಕ್ಷಣೆ ಮಾಡಿದಿ. ನನಗೆ ಒಪ್ಪಿಸಿದಿ. ನಿನ್ನ ಮೇಲೆ ನಾನು ಪ್ರೀತಿಯುಳ್ಳವನಾಗಿರುವೆನು. ನೀನು ಸ್ವರ್ಗವನ್ನು ಹೊಂದುವಿ' ಎಂದರು. ತರುವಾಯ ದೇವಶರ್ಮರು ಪತ್ನಿಯಿಂದಲೂ ಶಿಷ್ಯನಿಂದಲೂ ಸಹಿತರಾಗಿ ಸ್ವರ್ಗವನ್ನು ಹೊಂದಿ ಸಂತೋಷದಿಂದ ಇದ್ದರು.



# ಔರ್ವಾಗ್ನಿಯ ಕಥೆ [1]

ಪೂರ್ವದಲ್ಲಿ ಭೃಗುಋಷಿಗಳ ಮಗನಾದ ತೇಜಸ್ವಿಯಾದ ಊರ್ವ ಎಂಬ ಋಷಿಗಳು ಅತಿಭಯಂಕರವಾದ ತಪಸ್ಸನ್ನು ಮಾಡಿದರು. ಅವರ ಸಮೀಪಕ್ಕೆ ದೇವತೆಗಳೂ ಮುನಿಗಳೂ ಬಂದರು. ಹಿರಣ್ಯಕಶಿಪುವೂ ಅಲ್ಲಿಗೆ ಬಂದನು. ಬಂದ ಮುನಿಗಳು ಊರ್ವ ಋಷಿಗಳೊಡನೆ 'ಋಷಿವಂಶಗಳಲ್ಲಿ ನಿಮ್ಮ ವಂಶವು ನಿಂತುಹೋಗುವಂತೆ ಇದೆ. ನಿಮ್ಮ ವಂಶದಲ್ಲಿ ನೀವು ಒಬ್ಬರೇ ಇದ್ದೀರಿ. ಸಂತಾನವನ್ನು ಪಡೆಯುವ ಯೋಚನೆಯನ್ನು ಮಾಡಿಲ್ಲ. ಬ್ರಹ್ಮಚರ್ಯವ್ರತವನ್ನು ಕೈಗೊಂಡು ಕ್ಲೇಶವನ್ನೇ ಹೊಂದುತ್ತಿದ್ದೀರಿ. ಹೀಗೆ ಎಷ್ಟೋ ಮುನಿಗಳ ವಂಶಗಳು ನಿಂತು ಹೋಗಿರುವುವು. ನೀವು ತಪಸ್ಸಿನಿಂದ ಶ್ರೇಷ್ಠರಾಗಿರುವಿರಿ. ಬ್ರಹ್ಮದೇವರಂತೆ ಕಾಂತಿಯುಳ್ಳವರಾಗಿರುವಿರಿ. ನಿಮ್ಮ ವಂಶವನ್ನು ಬೆಳೆಸಿರಿ. ಮಗನನ್ನು ಪಡೆಯಿರಿ' ಎಂದು ಹೇಳಿದರು.

ಈರೀತಿಯಾಗಿ ಮುನಿಗಳು ಹೇಳಲು ಊರ್ವಋಷಿಗಳಿಗೆ ಮನಸ್ಸಿನಲ್ಲಿ ಕೋಪವುಂಟಾಯಿತು. ಅವರು ಮುನಿಗಳನ್ನೆಲ್ಲಾ ನಿಂದಿಸಿದರು. 'ಬ್ರಹ್ಮಚರ್ಯವು ಮುನಿಗಳಿಗೆ ಧರ್ಮವು. ಬ್ರಹ್ಮಚರ್ಯವು ಎಂತಹವರನ್ನೂ ಭಯಪಡಿಸುವುದು. ಬ್ರಾಹ್ಮಣರಿಗೆ ಗೃಹಸ್ಥಾಶ್ರಮಿಗಳಿಗೆ ಯಾಜನ ಅಧ್ಯಾಪನ ಪ್ರತಿಗ್ರಹ ಎಂಬ ಮೂರು ಜೀವನೋಪಾಯಗಳು. ಕೌಮಾರವ್ರತವುಳ್ಳ ನಮಗೆ ವನದಲ್ಲಿ ಇರುವುದೇ ಧರ್ಮವು. ವಿವಾಹವಿಲ್ಲದೆ ವಾನಪ್ರಸ್ಥರಾಗಿರುವೆವು. ಬ್ರಹ್ಮಚರ್ಯದಿಂದಲೇ ಸಮಸ್ತ ಫಲಗಳು ಉಂಟಾಗುವುವು. ತಪಸ್ಸು ಮಾಡುವವರೆಲ್ಲರೂ ಬ್ರಹ್ಮಚರ್ಯದಿಂದಲೇ ತಪಸ್ಸು ಮಾಡುವರು. ಬ್ರಹ್ಮಚರ್ಯದಿಂದಲೇ ಸರಿಯಾದ ಬ್ರಾಹ್ಮಣತ್ವವು ಉಂಟಾಗುತ್ತದೆ. ಬ್ರಹ್ಮಚರ್ಯದಿಂದಲೇ ಧೈರ್ಯವುಂಟಾಗುವುದು. ತಪಸ್ಸು ಉಂಟಾಗುವುದು. ಬ್ರಹ್ಮಚರ್ಯದಿಂದಲೇ ಬ್ರಾಹ್ಮಣರು ಸ್ವರ್ಗಕ್ಕೆ ಹೋಗಿರುವರು. ಆದುದರಿಂದ ಇಂದ್ರಿಯಗಳನ್ನೆಲ್ಲಾ ನಿಗ್ರಹಿಸಿ ಬ್ರಹ್ಮಚರ್ಯದಿಂದ ಇರಬೇಕು. ಅದಕ್ಕಿಂತ ಹೆಚ್ಚಾದ ತಪಸ್ಸು ಏನಿದೆ? ಅವಶ್ಯವಾಗಿ ಮಾಡಬೇಕಾದ ಭಗವಂತನ ಧ್ಯಾನಮಾಡದೆ ಸನ್ಯಾಸಿಗಳೆಂದು ತಲೆಯನ್ನು ಬೋಳಿಸಿಕೊಳ್ಳುವುದೂ, ಪರ ಲೋಕದ ವಿಚಾರವಿಲ್ಲದೆ ಕೇವಲ ಜನರನ್ನು ಮೆಚ್ಚಿಸುವುದಕ್ಕಾಗಿ ಚಾಂದ್ರಾಯಣಾದಿವ್ರತ ಮಾಡುವುದೂ, ಬ್ರಹ್ಮಚರ್ಯವಿಲ್ಲದೆ ಬ್ರಹ್ಮಚಾರಿಯ

1. ಹ.ವಂ.ಪರ್ವ ಅ.45

ಧರ್ಮವನ್ನು ಜನರಿಗೆ ತೋರಿಸುವುದೂ ಡಂಭವೆನ್ನಿಸುವುದು. ಬ್ರಹ್ಮದೇವರು ಮನಸ್ಸಿನಿಂದ ಪ್ರಜಾಸೃಷ್ಟಿಯನ್ನು ಮಾಡಿಲ್ಲವೇ? ಆಗ ಸ್ತ್ರೀಸಂಬಂಧವು ಎಲ್ಲಿ ಇತ್ತು? ಮನಸ್ಸಿನಲ್ಲಿ ಸ್ತ್ರೀಯರನ್ನು ಕಾಮಿಸುವುದು ಎಲ್ಲಿ ಇತ್ತು? ನಿಮಗೆಲ್ಲಾ ತಪಸ್ಸಿನ ಸಾಮರ್ಥ್ಯವಿದ್ದರೆ ಬ್ರಹ್ಮದೇವರಂತೆ ಮನಸ್ಸಿನಿಂದಲೇ ಪುತ್ರನನ್ನು ಪಡೆಯಬೇಕು. ತಪಸ್ವಿಗಳಿಗೆ ಸ್ತ್ರೀಸಂಬಂಧವು ವಿಹಿತವಲ್ಲ. ಮನಸ್ಸಿನಿಂದಲೇ ಮಕ್ಕಳನ್ನು ಪಡೆಯಬೇಕು. ಈರೀತಿಯಾಗಿ ನೀವು ಭಯರಹಿತರಾಗಿ ನನ್ನೊಡನೆ ಇಂತಹ ಅಲ್ಪಕಾರ್ಯವನ್ನು ಹೇಳಿದಿರಲ್ಲಾ. ಅದಕ್ಕಾಗಿ ನಾನು ಸ್ತ್ರೀಸಂಬಂಧವಿಲ್ಲದೆಯೇ ಮನಃಸಂಕಲ್ಪದಿಂದಲೇ ಪುತ್ರನನ್ನು ಪಡೆಯುವೆನು. ಈರೀತಿಯಾಗಿ ನನ್ನ ದೇಹವು ತಪಃಸಾಮರ್ಥ್ಯದಿಂದ ಪ್ರಜೆಗಳನ್ನು ಸುಡುವಂತೆ ಇರುವ ಮಗನನ್ನು ಪಡೆಯುವುದು' ಈ ರೀತಿಯಾದ ಮಾತುಗಳನ್ನು ಹೇಳಿ ತಪಸ್ವಿಯಾದ ಊರ್ವರು ತನ್ನ ತೊಡೆಯಲ್ಲಿ ಅಗ್ನಿಯನ್ನು ಇಟ್ಟುಕೊಂಡು ಅಗ್ನಿಯನ್ನು ಒಂದು ದರ್ಭೆಯಿಂದ ಮಥನೆ ಮಾಡಿದರು. ಆಗಲೇ ಅವರ ತೊಡೆಯನ್ನು ಭೇದಿಸಿಕೊಂಡು ಕಟ್ಟಿಗೆಯಿಲ್ಲದೆ ಉರಿಯುವ ಜ್ವಾಲಾಮಾಲೆಯಿಂದ ಕೂಡಿದ ಜಗತ್ತಿನ ಸಂಹಾರವನ್ನು ಮಾಡುತ್ತೇನೆ ಎಂದು ಇಚ್ಛಿಸುತ್ತಿದ್ದ ಮಗನಾದ ಅಗ್ನಿಯು ಬಂದನು. ಈರೀತಿಯಾಗಿ ಊರ್ವರ ತೊಡೆಗಳನ್ನು ಭೇದಿಸಿ ಔರ್ವ ಎಂಬ ಪರಮಕೋಪಶೀಲನಾದ ಅಗ್ನಿಯು ಬಂದನು. ಹುಟ್ಟಿದ ಕೂಡಲೇ ತಂದೆಯೊಡನೆ 'ನನಗೆ ಹಸಿವೆಯಾಗುತ್ತದೆ. ಜಗತ್ತೆಲ್ಲವನ್ನೂ ತಿನ್ನುವೆನು. ನನ್ನನ್ನು ಬಿಡಿರಿ' ಎಂದು ಹೇಳಿದನು. ಸ್ವರ್ಗದವರೆಗೆ ಹೋಗುವ ಜ್ವಾಲೆಗಳಿಂದ ಎಲ್ಲಾ ಪ್ರಾಣಿಗಳನ್ನು ಸುಟ್ಟು ಹಾಕಲಿಕ್ಕೆ ಇಚ್ಛೆಯುಳ್ಳವನಂತೆ ಹತ್ತು ದಿಕ್ಕುಗಳಲ್ಲಿಯೂ ಜ್ವಲಿಸುತ್ತಾ ಬೆಳೆದನು. ಆಸಮಯದಲ್ಲಿ ಸರ್ವಲೋಕಗಳಿಗೂ ಪ್ರಭುವಾದ ಬ್ರಹ್ಮದೇವರು ಊರ್ವಮುನಿಗಳು ಮಗನನ್ನು ಸೃಷ್ಟಿಸಿದ ಸ್ಥಳಕ್ಕೆ ಬಂದರು. ಮಗನಾದ ಔರ್ವಾಗ್ನಿಯಿಂದ ಪ್ರಕಾಶಿಸುತ್ತಿರುವ ಊರ್ವಮುನಿಗಳ ತೊಡೆಯನ್ನು ಔರ್ವಾಗ್ನಿಯ ಕೋಪಾಗ್ನಿಯಿಂದ ಸಂತಪ್ತರಾದ ಲೋಕಗಳನ್ನು ನೋಡಿದರು. ತರುವಾಯ ಬ್ರಹ್ಮದೇವರು ಊರ್ವಮುನಿಗಳನ್ನು ಸತ್ಕರಿಸಿ 'ಲೋಕಗಳ ಹಿತಕ್ಕಾಗಿ ಮಗನ ತೇಜಸ್ಸನ್ನು ಧರಿಸಿಕೊಂಡು ಇರು. ನಿನ್ನ ಮಗನಿಗೆ ನಾನು ಉತ್ತಮವಾದ ಸಹಾಯವನ್ನು ಮಾಡುವೆನು. ಇವನಿಗೆ ವಾಸಸ್ಥಳವನ್ನು ಕೊಡುವೆನು. ಉತ್ತಮವಾದ ಅಮೃತಕ್ಕೆ ಸಮಾನವಾದ ಆಹಾರವನ್ನು ಕೊಡುವೆನು. ನಾನು ಹೇಳುವ ಮಾತು ಸುಳ್ಳಲ್ಲ. ಸತ್ಯವು' ಎಂದು ಹೇಳಿದರು. ಊರ್ವ ಮುನಿಗಳು 'ತಾವು ನನ್ನ ಮಗುವಿಗೆ ಈರೀತಿಯಾಗಿ ಅನುಗ್ರಹ ಮಾಡುವುದರಿಂದ ನಾನು

ಪರಮಧನ್ಯನಾದೆನು. ಕೃತಾರ್ಥನಾದೆನು. ಒಳ್ಳೇ ಯೌವನ ಕಾಲವು ಬರುವಾಗ ಅನ್ನವನ್ನು ಅಪೇಕ್ಷಿಸುವಾಗ ನನ್ನ ಮಗನು ಯಾವ ಅನ್ನದಿಂದ ತೃಪ್ತಿಯನ್ನು ಹೊಂದಲಿ' ಇವನಿಗೆ ಎಲ್ಲಿ ವಾಸಸ್ಥಾನವನ್ನು ಕಲ್ಪಿಸುವಿರಿ? ಯಾವ ಆಹಾರವನ್ನು ಕಲ್ಪಿಸುವಿರಿ? ಇವನ ತೇಜಸ್ಸಿಗೆ ಸರಿಯಾಗಿ ಎಲ್ಲಾ ಇರಬೇಕಲ್ಲಾ!' ಎಂದರು. ಅದಕ್ಕೆ ಬ್ರಹ್ಮದೇವರು 'ಕುದುರೆಯ ಮುಖದಂತೆ ಇರುವ ಸಮುದ್ರದ ಮುಖದಲ್ಲಿ ಇವನಿಗೆ ವಾಸಸ್ಥಾನವು. ಅಲ್ಲಿ ನೀರನ್ನು ಕುಡಿಯುತ್ತಾ ಇರಲಿ. ಪ್ರಲಯಕಾಲದಲ್ಲಿ ಎಲ್ಲಾ ಜಗತ್ತನ್ನೂ ಸುಟ್ಟುಹಾಕಲಿ' ಎಂದು ಹೇಳಿದರು. ಅದಕ್ಕೆ ಔರ್ವಾಗ್ನಿಯು ಹಾಗೆಯೇ ಆಗಲಿ ಎಂದು ಹೇಳಿ ತನ್ನ ಜ್ವಾಲೆಯನ್ನು ಕಡಿಮೆಮಾಡಿಕೊಂಡು ತನ್ನ ಕಾಂತಿಯನ್ನು ತಂದೆಯಲ್ಲಿ ಇಟ್ಟು ಹೊರಟುಹೋದನು. ತರುವಾಯ ಬ್ರಹ್ಮದೇವರು ಹೊರಟುಹೋದರು. ಋಷಿಗಳೆಲ್ಲರೂ ಔರ್ವಾಗ್ನಿಯ ಪ್ರಭಾವವನ್ನು ತಿಳಿದವರಾಗಿ ತಮ್ಮ ತಮ್ಮ ಸ್ಥಳಕ್ಕೆ ಹೋದರು. ಹಿರಣ್ಯಕಶಿಪುವು ಈ ಆಶ್ಚರ್ಯವನ್ನು ನೋಡಿ ಊರ್ವಮುನಿಗಳಿಗೆ ನಮಸ್ಕರಿಸಿ 'ನಾನು ತಮ್ಮ ಮತ್ತು ತಮ್ಮ ಪುತ್ರನ ಭೃತ್ಯನು. ನನಗೆ ಶತ್ರುಗಳಿಂದ ಪರಾಜಯವು ಬಾರದಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು. ಅದಕ್ಕೆ ಊರ್ವಮುನಿಗಳು ಅವನಿಗೆ ಕಟ್ಟಿಗೆಯಿಲ್ಲದೆ ಅಗ್ನಿಯನ್ನು ಉಂಟುಮಾಡುವ ಮಾಯೆಯನ್ನು ಎಂದರೆ ವಿದ್ಯೆಯನ್ನು ಉಪದೇಶಿಸಿದರು. 'ನೀನು ಬದುಕಿರುವವರೆಗೆ ಮಾತ್ರ ಈ ವಿದ್ಯೆಗೆ ವೀರ್ಯವಿರುವುದು. ಆಮೇಲೆ ಇರಲಾರದು' ಎಂದು ಹೇಳಿದರು. ಹಿರಣ್ಯಕಶಿಪುವು ಸಂತುಷ್ಟನಾಗಿ ಹೋದನು. ಹಿರಣ್ಯಕಶಿಪುವಿನ ಮರಣವಾದ ಮೇಲೆ ಮಾಯಾಸುರನು ಅವನಿಂದ ಅಭ್ಯಾಸಮಾಡಿದ ಆ ಮಾಯೆಯನ್ನು ತಾರಕಾಮಯಿ ಯುದ್ಧದಲ್ಲಿ ದೇವತೆಗಳ ಮೇಲೆ ಪ್ರಯೋಗಿಸಿದನು. ಅದನ್ನು ವರುಣದೇವರೂ ಚಂದ್ರನೂ ಸೇರಿ ನಾಶಮಾಡಿದರು.



# ಮೃಗಶೃಂಗಮುನಿಗಳ ಕಥೆ

ಪೂರ್ವದಲ್ಲಿ ರಥಂತರಕಲ್ಪದಲ್ಲಿ ಕೃತಯುಗದಲ್ಲಿ ಬ್ರಹ್ಮದೇವರ ಮಗನಾದ ಕುತ್ಸ ಎಂಬ ಮುನಿಗಳು ಇದ್ದರು. ಅವರು ಕರ್ದಮರ ಮಗಳಾದ ಸುಭ್ರೂ ಎಂಬ ಕನ್ಯೆಯನ್ನು ಮದುವೆಯಾದರು. ಅವರಿಗೆ ಅವಳಲ್ಲಿ ವತ್ಸ ಎಂಬ ಮಗನು ಹುಟ್ಟಿದನು. ತಂದೆಯು ಮಗನಿಗೆ ಐದನೇ ವರ್ಷದಲ್ಲಿಯೇ ಉಪನಯನವನ್ನು ಮಾಡಿದರು. ಆ ವತ್ಸಮುನಿಗಳು ಬ್ರಹ್ಮಚರ್ಯವ್ರತವುಳ್ಳವರಾಗಿ ಗುರುಕುಲವಾಸಮಾಡುತ್ತಾ ಎರಡು ಸಂಧ್ಯಾಕಾಲದಲ್ಲಿ ಅಗ್ನಿಕಾರ್ಯವನ್ನು ಮಾಡುತ್ತಿದ್ದರು. ಮೂರು ಹೊತ್ತು ಸ್ನಾನಮಾಡುವರು. ಭಿಕ್ಷಾನ್ನವನ್ನು ಭೋಜನ ಮಾಡುವರು. ಕೃಷ್ಣಾಜಿನವನ್ನು ಧರಿಸಿದ್ದರು. ನಿತ್ಯವೂ ವೇದಾಧ್ಯಯನವನ್ನು ಮಾಡುತ್ತಿದ್ದರು. ಪಲಾಶದ ದಂಡವನ್ನು ಹಿಡಿದುಕೊಂಡಿದ್ದರು. ಸರಿಯಾದ ಬ್ರಹ್ಮಚರ್ಯಧರ್ಮವನ್ನು ಮಾಡುತ್ತಿದ್ದರು. ಮಾಘಸ್ನಾನವನ್ನು ಮಾಡುತ್ತಿದ್ದರು. ಕೃಚ್ಛ್ರ ಚಾಂದ್ರಾಯಣ ಇತ್ಯಾದಿ ವ್ರತಗಳನ್ನೂ ಮಾಡುತ್ತಿದ್ದರು.

ತರುವಾಯ ಕಾವೇರಿಯಲ್ಲಿ ಮಾಘಸ್ನಾನವನ್ನು ಮಾಡುವೆನೆಂದು ಸಂಕಲ್ಪಿಸಿ ಕಾವೇರಿಯಲ್ಲಿ ಮೂರು ಮಾಘಮಾಸಗಳಲ್ಲಿ ಸ್ನಾನಮಾಡಿದರು. ಇದರಿಂದ ಶುದ್ಧವಾದ ಮನಸ್ಸುಳ್ಳವರಾದರು. ತಾಯಿತಂದೆಗಳಿಂದಲೂ ಗುರುಗಳಿಂದಲೂ ಆಜ್ಞೆಯನ್ನು ಪಡೆದು ತಪಸ್ಸಿಗೆ ಹೋದರು. ಕಾವೇರಿಯ ಉತ್ತರತೀರದಲ್ಲಿ ಒಂದು ಯೋಜನದೂರದಲ್ಲಿ ನಾರಾಯಣಗಿರಿಯಲ್ಲಿ ಇರುವ ಕಲ್ಯಾಣತೀರ್ಥವೆಂಬ ಸರೋವರದಲ್ಲಿ ಮಾಘಸ್ನಾನ ಮಾಡಿ ಅದರ ತೀರದಲ್ಲಿ ತಪಸ್ಸು ಮಾಡಿದರು. ಅವರು ಕಟ್ಟಿಗೆಯಂತೆಯೂ ಕಲ್ಲಿನಂತೆಯೂ ಇದ್ದುಕೊಂಡು ತಪಸ್ಸು ಮಾಡಿದರು. ಆಗ ನೀರಡಿಕೆಯಿಂದ ಆ ಸರೋವರಕ್ಕೆ ಬಂದ ಮೃಗಗಳು ಇದೇನೋ ಮರವೆಂಬ ಬುದ್ಧಿಯಿಂದ ಕೊಂಬಿನಿಂದ ತುರಿಸಿಕೊಂಡವು.

ಈರೀತಿಯಾಗಿ ನೂರುಯುಗ ಉತ್ತಮವಾದ ತಪಸ್ಸನ್ನು ಮಾಡುತ್ತಿದ್ದರು. ತರುವಾಯ ಪರಮಾತ್ಮನು ಪ್ರತ್ಯಕ್ಷನಾಗಿ ಅವರ ಮುಂದೆ ಬಂದನು. 'ಮಹಾಜ್ಞಾನಿಯಾದ ಮೃಗಶೃಂಗನೇ! ನಾನು ಪರಮಾತ್ಮನು ನಿನ್ನ ಮೇಲೆ ಸಂತುಷ್ಟನಾಗಿರುವೆನು' ಎಂದು ಹೇಳಿದನು. ವತ್ಸಮುನಿಗಳು ಧ್ಯಾನದಿಂದ ಎದ್ದವರಾಗಿ ಪರಮಾತ್ಮನನ್ನು ನೋಡಿ ಸಂಭ್ರಮದಿಂದ ನಮಸ್ಕರಿಸಿ

1. ಪ.

ಸ್ತೋತ್ರಮಾಡಲಿಕ್ಕೆ ಆರಂಭಿಸಿದರು. ಪುನಃ ಪುನಃ ಸ್ತೋತ್ರ ಮಾಡಿ ಆನಂದ ಬಾಷ್ಪವುಳ್ಳವರಾಗಿ ರೋಮಾಂಚಿತ ಗಾತ್ರರಾಗಿ ತಲೆಯಮೇಲೆ ಕೈಮುಗಿದುಕೊಂಡು ಸುಮ್ಮನೆ ನಿಂತರು.

ಆಗ ಪರಮಾತ್ಮನು 'ಮೃಗಶೃಂಗನೇ! ನೀನು ಮಾಡಿದ ಸ್ತೋತ್ರದಿಂದಲೂ ಮಾಘಮಾಸದಲ್ಲಿ ಈ ಸರೋವರದಲ್ಲಿ ಸ್ನಾನಮಾಡಿದ್ದರಿಂದಲೂ ನಿನ್ನ ತಪಸ್ಸಿನಿಂದಲೂ ಸಂತುಷ್ಟನಾಗಿರುವೆನು. ನೀನು ತುಂಬಾ ಶ್ರಮಪಟ್ಟಿರುವಿ. ನಾನು ಮಾಘಸ್ನಾನದಿಂದ ಸಂತೋಷಪಡುವಷ್ಟು ಯಜ್ಞದಾನಾದಿಗಳಿಂದ ಸಂತೋಷ ಪಡುವುದಿಲ್ಲ. ನಿನಗೆ ಬೇಕಾದ ವರವನ್ನು ಕೊಡುವೆನು. ನೀನು ನನ್ನ ಪ್ರೀತಿಗಾಗಿ ನನ್ನ ಆಜ್ಞೆಯನ್ನು ಪರಿಪಾಲಿಸು. ನೀನು ಬ್ರಹ್ಮಚರ್ಯದಿಂದ ಹೇಗೆ ಋಷಿಗಳನ್ನು ಸಂತೋಷಪಡಿಸಿದೆಯೋ ಹಾಗೆಯೇ ಯಜ್ಞಗಳಿಂದ ದೇವತೆಗಳನ್ನು ಪ್ರಜೆಗಳಿಂದ ಪಿತೃಗಳನ್ನೂ ಸಂತೋಷಪಡಿಸಬೇಕು. ಇನ್ನೊಂದು ಜನ್ಮದಲ್ಲಿ ನೀನು ಬ್ರಾಹ್ಮಣನಾಗಿ ಜೀವನ್ಮುಕ್ತನಾಗುವಿ. ಮಹಾಜ್ಞಾನಿಯಾಗಿ ಋಭು ಎಂಬ ಹೆಸರಿನಿಂದ ಬ್ರಹ್ಮದೇವರ ಮಗನಾಗಿ ಹುಟ್ಟುವಿ. ನಿದಾಘ ಎಂಬ ಮುನಿಗೆ ವೇದಾಂತವನ್ನು ಉಪದೇಶಿಸಿ ನನ್ನ ಲೋಕವನ್ನು ಹೊಂದುವಿ' ಎಂದು ಹೇಳಿದನು.

ಆ ಪ್ರಕಾರವಾಗಿ ಪರಮಾತ್ಮನಿಂದ ವರವನ್ನು ಪಡೆದು ಆ ಮೃಗಶೃಂಗ ಮುನಿಗಳು 'ಭಗವಂತನೇ! ನೀನು ಇಲ್ಲಿಯೇ ಎಲ್ಲರಿಗೂ ಅಭೀಷ್ಟವನ್ನು ಕೊಡುತ್ತಾ ಇರುವವನಾಗಬೇಕು. ಎಲ್ಲರಿಗೂ ಸರ್ವಸಂಪತ್ತನ್ನು ಕೊಡುವವನಾಗಬೇಕು' ಎಂದು ಹೇಳಿದರು.

ಪರಮಾತ್ಮನು 'ನಾನು ಇಲ್ಲಿಯೇ ಸನ್ನಿಹಿತನಾಗಿ ಇರುತ್ತೇನೆ. ನನ್ನನ್ನು ಯಾರು ಪೂಜಿಸುತ್ತಾರೋ ಅವರಿಗೆ ಸಂಪತ್ತು ಹಸ್ತಗತವಾಗುವುದು. ವಿಶೇಷವಾಗಿ ಮಾಘಮಾಸದಲ್ಲಿ ಸ್ನಾನಮಾಡಿದವರು ಸರ್ವಪಾಪರಹಿತರಾಗಿ ನನ್ನ ಲೋಕವನ್ನು ಹೊಂದಲಿ. ವ್ಯತೀಪಾತಯೋಗದಲ್ಲಿ ಸಂಕ್ರಾತಿಯಲ್ಲಿಯೂ ಹುಣ್ಣಿಮೆಯಲ್ಲಿಯೂ ಅಮಾವಾಸ್ಯೆಯಲ್ಲಿಯೂ ಚಂದ್ರಸೂರ್ಯಗ್ರಹಣಕಾಲದಲ್ಲಿಯೂ ಸ್ನಾನಮಾಡಿ ಯಥಾಶಕ್ತಿ ದಾನಮಾಡಿ ನೀನು ಮಾಡಿದ ಸ್ತೋತ್ರದಿಂದ ನನ್ನನ್ನು ಸ್ತೋತ್ರಮಾದರೆ ಅವನು ನನ್ನ ಲೋಕವನ್ನು ಹೊಂದುವನು' ಎಂದು ಹೇಳಿದನು. ತರುವಾಯ ಮೃಗಶೃಂಗಮುನಿಯು 'ನಾನು ಕುತ್ಸಮುನಿಗಳ ಮಗನು. ನನ್ನ ಹೆಸರು ವತ್ಸ ಎಂದು. ನನಗೆ ಮೃಗಶೃಂಗ ಎಂದು ಹೆಸರು ಹೇಗೆ' ಎಂದು ಕೇಳಿದರು. ಪರಮಾತ್ಮನು 'ನೀನು ತಪಸ್ಸನ್ನು ಮಾಡುತ್ತಿರುವಾಗ ನಿತ್ಯವೂ ಮೃಗಗಳು ಇಲ್ಲಿಗೆ ಬಂದು ನೀರನ್ನು

ಕುಡಿಯುತ್ತಿದ್ದವು. ಅವುಗಳ ಭಯವಿಲ್ಲದೆ ಕೊಂಬಿನಿಂದ ನಿನ್ನ ಮೈಯನ್ನು ತುರಿಸಿಕೊಳ್ಳುತ್ತಿದ್ದವು. ಅದರಿಂದ ನಿನ್ನನ್ನು ಮಹರ್ಷಿಗಳು ಮೃಗಶೃಂಗ ಎಂದು ಹೇಳುವರು ಎಂದು ಹೇಳಿ ಆ ನಾರಾಯಣಗಿರಿಯಲ್ಲಿ ಈಗಲೂ ಸನ್ನಿಹಿತನಾಗಿರುವನು. ಮೃಗಶೃಂಗಮುನಿಗಳು ತನ್ನ ಮನೆಗೆ ಬಂದರು. ಪೂರ್ವದಲ್ಲಿಯೇ ಅವರ ಹೆಸರು ಭೂಮಿಯಲ್ಲಿ ಪ್ರಸಿದ್ಧವಾಗಿದ್ದಿತು. ಅವರು ತಾಯಿಗೂ ತಂದೆಗೂ ನಮಸ್ಕರಿಸಿ ತನ್ನ ಕಥೆಯನ್ನು ಹೇಳಿಕೊಂಡರು. ತಂದೆಯೂ ತಾಯಿಯೂ ಸಂತೋಷಪಟ್ಟರು. ಗುರುಗಳಿಗೂ ನಮಸ್ಕರಿಸಿ ಪುನಃ ವೇದಗಳನ್ನು ಅಧ್ಯಯನ ಮಾಡುತ್ತಾ ಸಮಸ್ತವೇದಗಳನ್ನೂ ಅಧ್ಯಯನ ಮಾಡಿದ ಮೇಲೆ ಗುರುಗಳ ಅನುಮತಿಯನ್ನು ಪಡೆದು ಮನೆಗೆ ಬಂದರು.

ಮೃಗಶೃಂಗಮುನಿಗಳು ತಂದೆಯೊಡನೆ 'ಮಗನ ನಿಮಿತ್ತವಾಗಿ ತಂದೆತಾಯಿಗಳು ಸಹಿಸುವ ಕ್ಲೇಶಕ್ಕೆ ಮಗನು ನೂರುವರ್ಷ ಸೇವೆ ಮಾಡಿದರೂ ಪ್ರತಿ ಉಪಕಾರ ಮಾಡಿದಂತೆ ಆಗಲಾರದು. ಆದುದರಿಂದ ತಂದೆತಾಯಿಗಳಿಗೂ ಹಾಗೆಯೇ ಗುರುಗಳಿಗೂ ಯಾವಾಗಲೂ ಪ್ರಿಯವನ್ನು ಮಾಡಬೇಕು. ಇವರು ಮೂರು ಜನರು ಸಂತುಷ್ಟರಾಗಲು ಎಲ್ಲಾ ತಪಸ್ಸು ಎನ್ನಿಸುವುದು. ಅವರನ್ನು ಅತಿಕ್ರಮಿಸಿ ಯಾವುದನ್ನು ಮಾಡಿದರೂ ಅದರಿಂದ ಸಿದ್ಧಿಯನ್ನು ಹೊಂದಲಾರನು. ಈ ಮೂರು ಜನರನ್ನು ಆರಾಧಿಸಿ ಮೂರುಲೋಕಗಳನ್ನು ಹೊಂದುವನು. ಇತರವೆಲ್ಲವೂ ಉಪಧರ್ಮಗಳು. ಈ ಮೂರು ಜನರನ್ನು ಸಂತೋಷಪಡಿಸುವುದೇ ಮುಖ್ಯಧರ್ಮವು. ಮೂರು ವೇದಗಳನ್ನೋ ಎರಡು ವೇದಗಳನ್ನೋ ವೇದವನ್ನೋ ಓದಿ ಬ್ರಹ್ಮಚರ್ಯವುಳ್ಳವನಾಗಿಯೇ ಗೃಹಸ್ಥಾಶ್ರಮವನ್ನು ಹೊಂದಬೇಕು. ಪತ್ನಿಯು ವಶಳಾಗಿದ್ದರೆ ಗೃಹಸ್ಥಾಶ್ರಮದಿಂದ ಉತ್ತಮವಾದದ್ದು ಇಲ್ಲ. ದಂಪತಿಗಳ ಅನುಕೂಲ್ಯವು ಧರ್ಮಅರ್ಥಕಾಮಗಳಿಗೆ ಕಾರಣವಾಗುವುದು. ಹೆಂಡತಿಯು ಅನುಕೂಲಳಾಗಿ ಇದ್ದರೆ ಸ್ವರ್ಗವು ಬೇಕಾಗಿಲ್ಲ. ಹೆಂಡತಿಯು ವಿರುದ್ಧಳಾಗಿದ್ದರೆ ಬೇರೆ ನರಕವು ಬೇಕಾಗಿಲ್ಲ. ಗೃಹಸ್ಥಾಶ್ರಮವು ಸುಖಕ್ಕೆ ಕಾರಣವಾದದ್ದು. ಪತ್ನಿಯಿಂದಾಗಿ ಆ ಸುಖವಾಗಬೇಕು. ತನ್ನ ಹೆಂಡತಿಯು ವಿನಯದಿಂದ ಇದ್ದರೆ ಸುಖವುಂಟಾಗುವುದು. ಮಂದಬುದ್ಧಿಗಳು ಹೆಂಗಸರು ಅಟ್ಟೆಗಳಿಗೆ ಸಮಾನರೆಂದು ಹೇಳುವರು. ಆದರೆ ವಿಚಾರಮಾಡಿದರೆ ಹೆಂಗಸರಿಗೂ ಅಟ್ಟೆಗಳಿಗೂ ಬಹಳ ವ್ಯತ್ಯಾಸವಿದೆ. ಅಟ್ಟೆಯು ರಕ್ತವನ್ನು ಮಾತ್ರ ಹೀರುತ್ತದೆ. ಉಗ್ರಳಾದ ಸ್ತ್ರೀಯು ಮನಸ್ಸನ್ನು ಹಣವನ್ನು ಸುಖವನ್ನು ಬಲವನ್ನು ಹೀರುವಳು. ಮನೆಯ ಕೆಲಸದಲ್ಲಿ ಸಮರ್ಥಳಾಗಿಯೂ ಮಕ್ಕಳನ್ನು

ಹಡೆದವಳಾಗಿಯೂ ಪತಿವ್ರತೆಯಾಗಿಯೂ ಪ್ರಿಯವಚನವುಳ್ಳವಳಾಗಿಯೂ ವಶಳಾಗಿಯೂ ಇರುವ ಸ್ತ್ರೀಯು ಶ್ರೀದೇವಿಯಂತೆ ಎಂದು ತಿಳಿಯಬೇಕು. ಆದುದರಿಂದ ಸಮಾನಜಾತಿಯವಳಾದ ಉತ್ತಮಲಕ್ಷಣಗಳುಳ್ಳ ತಂದೆಗೆ ಸಗೋತ್ರಳಲ್ಲದೆ ಇರುವ ತಾಯಿಗೆ ಸಪಿಂಡಳಲ್ಲದೆ ಇರುವ ದ್ವಿಜರಿಗೆ ಧರ್ಮಸಿದ್ಧಿಗಾಗಿ ಮದುವೆ ಮಾಡಿಕೊಳ್ಳಲಿಕ್ಕೆ ಅರ್ಹಳು. ಅಪಸ್ಮಾರ ರೋಗವಿರುವ ಕ್ಷಯ ರೋಗವಿರುವ ವಂಶದಲ್ಲಿ ಹುಟ್ಟಿದ ಹೆಣ್ಣನ್ನು ಮದುವೆಯಾಗಬಾರದು. ಅಪವಾದ ಉಳ್ಳವಳಾದ ಹೆಣ್ಣನ್ನೇ ಹಡೆಯುವ ತಾಯಿಯ ಮಗಳಾಗಿರುವ ಹೆಣ್ಣನ್ನು ಮದುವೆಯಾಗಬಾರದು. ರೋಗಹೀನಳಾದ ಸಹೋದರರಿಂದ ಕೂಡಿದವಳಾದ ತನ್ನಿಂದ ಚಿಕ್ಕವಳಾದ ಸುಂದರವಾದ ಮುಖವುಳ್ಳ ಮೃದುವಾಗಿ ಮಾತಾಡುವ ಕನ್ಯೆಯನ್ನು ಮದುವೆಯಾಗಬೇಕು. ಪರ್ವತಗಳ ಮರಗಳ ಹೆಸರುಳ್ಳ ನದೀ ಸರ್ಪಗಳ ಪಕ್ಷಿಗಳ ಹೆಸರುಳ್ಳ ಕನ್ಯೆಯನ್ನು ಮದುವೆಯಾಗಬಾರದು. ಒಳ್ಳೇ ಹೆಸರುಳ್ಳ ಕನ್ಯೆಯನ್ನು ಮದುವೆಯಾಗಬೇಕು. ಹೆಚ್ಚುಕಡಿಮೆ ಅವಯವಗಳುಳ್ಳ ಅತಿ ಉದ್ದವನಲ್ಲದೆ ಇರುವ ಅತಿಕೃಶಳಾಗದೆ ಇರುವ ಹೆಣ್ಣನ್ನು ಮದುವೆಯಾಗಬೇಕು. ಮೈಯಲ್ಲಿ ರೋಮವೇ ಇಲ್ಲದೆ ಇರುವ ಅಥವಾ ಅತಿರೋಮವಿರುವ ಬಿರುಸಾದ ಕೂದಲುಗಳುಳ್ಳ ಕನ್ಯೆಯನ್ನು ಮದುವೆಯಾಗಬೇಕು. ಕುಲಹೀನಳಾದ ಕನ್ಯೆಯನ್ನು ಹೊಂದಬಾರದು. ಹೊಂದಿದರೆ ಸಂತಾನವೂ ಹೀನವಾಗುವುದು. ಈರೀತಿಯಾಗಿ ಲಕ್ಷಣಗಳನ್ನು ಪರೀಕ್ಷಿಸಿಯೇ ಕನ್ಯೆಯನ್ನು ಮದುವೆಯಾಗಬೇಕು. ಒಳ್ಳೇ ಲಕ್ಷಣಗಳುಳ್ಳ ಸದಾಚಾರವುಳ್ಳ ಕನ್ಯೆಯು ಪತಿಯ ಆಯುಷ್ಯವನ್ನು ಹೆಚ್ಚಿಸುವಳು. ಈರೀತಿಯಾಗಿ ಮನುವೂ ಅಗಸ್ತ್ಯರೂ ಹೇಳಿರುವರು. ಇತರ ಋಷಿಗಳೂ ಹೇಳುವರು. ಇಂತಹ ಪತ್ನಿಯು ಹೇಗೆ ಸಿಗುವಳು' ಎಂದು ಹೇಳಿದರು.

ಮೃಗಶೃಂಗಮುನಿಗಳ ಮಾತನ್ನು ಕೇಳಿ ಕುತ್ಸಮುನಿಗಳು ಸಂತುಷ್ಟರಾಗಿ 'ಮೃಗಶೃಂಗ! ನೀನು ವಿಚಾರಮಾಡಬೇಡ. ಇಂತಹ ಆಚಾರವುಳ್ಳ ನಿನಗೆ ದುರ್ಲಭ ವಾದದ್ದು ಇರಲಾರದು. ಅನಾಚಾರವುಳ್ಳವರಿಗೆ, ಆಲಸ್ಯವುಳ್ಳವರಿಗೆ, ಮಾಘಸ್ನಾನ ಮಾಡದೆ ಇದ್ದವರಿಗೆ, ಅತಿಥಿ ಪೂಜಾ ಮಾಡದಿದ್ದವರಿಗೆ, ಏಕಾದಶಿ ಉಪವಾಸ ಮಾಡದೆ ಇದ್ದವರಿಗೆ, ಪರಮಾತ್ಮನ ಭಕ್ತಿಯಿಲ್ಲದವರಿಗೆ, ತಂದೆತಾಯಿಗಳಲ್ಲಿ ಭಕ್ತಿಯಿಲ್ಲದವರಿಗೆ, ಗುರುಗಳ ಪ್ರೀತಿಯಿಲ್ಲದವರಿಗೆ, ಗೋಸೇವಾ ಮಾಡದೆ ಇದ್ದವರಿಗೆ, ಬ್ರಾಹ್ಮಣರ ಹಿತದಲ್ಲಿ ಆಸಕ್ತಿಯಿಲ್ಲದವರಿಗೆ, ದಾನಮಾಡದೆ ಭೋಜನ ಮಾಡುವವರಿಗೆ, ದಾನಧರ್ಮ ಮಾಡದೆ ಇದ್ದವರಿಗೆ ಹೋಮಮಾಡದೆ ಅನ್ನವನ್ನು

ಭೋಜನ ಮಾಡುವವರಿಗೆ, ಗೋಪಿಯನ್ನು ಹಚ್ಚಿಕೊಳ್ಳದೆ ಇದ್ದವರಿಗೆ, ತಲೆಯಲ್ಲಿ ತುಲಸಿಯನ್ನು ಧರಿಸದೆ ಇದ್ದವರಿಗೆ, ಕಾವೇರಿಸ್ನಾನ ಮಾಡದೆ ಇದ್ದವರಿಗೆ, ಮಾಘ ಮಾಸದ ವ್ರತವನ್ನು ಮಾಡದೆ ಇದ್ದವರಿಗೆ, ಅಂತಹ ಹೆಂಡತಿಯರು ಸಿಗಲಾರರು. ಮಾಘಮಾಸವು ನಿರ್ಮಲವಾದ ವಿದ್ಯೆಯನ್ನು ಕೀರ್ತಿಯನ್ನು ಆರೋಗ್ಯವನ್ನು ಆಯುಷ್ಯವನ್ನು ಅಕ್ಷಯವಾದ ಧನವನ್ನು ಸಮಸ್ತ ಪಾಪಪರಿಹಾರವನ್ನೂ ಇಂದ್ರ ಲೋಕವನ್ನ ಉಂಟುಮಾಡುವುದು. ಸಮಸ್ತ ಫಲವನ್ನು ಉಂಟುಮಾಡುವುದು. ಮಗನೇ! ಮಾಘಸ್ನಾನದಿಂದ ಸಂತುಷ್ಟನಾದ ಪರಮಾತ್ಮನು ನಿನ್ನ ಮನಸ್ಸಿನ ಅಭೀಷ್ಟ ವನ್ನು ಪೂರೈಯಿಸುವನು' ಎಂದು ಹೇಳಲು ಮೃಗಶೃಂಗಮುನಿಗಳು ತಂದೆಗೆ ನಮ ಸ್ಕರಿಸಿ ರಾತ್ರಿಯಲ್ಲಿಯೂ ಹಗಲಲ್ಲಿಯೂ ಪರಮಾತ್ಮನನ್ನೇ ಧ್ಯಾನಮಾಡುತ್ತಾ ಇದ್ದರು.



## ಸುವೃತ್ತೆಯ ಕಥೆಯು

ಆ ಸಮಯದಲ್ಲಿ ಭೋಜಪುರದಲ್ಲಿ ಉಚಥ್ಯರೆಂಬ ಮುನಿಶ್ರೇಷ್ಠರು ಇದ್ದರು. ಅವರಿಗೆ ಸುವೃತ್ತಾ ಎಂದು ಹೆಸರುಳ್ಳ ಸುಂದರಿಯಾದ ಮಗಳಿದ್ದಳು. ಅವಳು ಮಾಘಮಾಸದಲ್ಲಿ ಬೆಳಿಗ್ಗೆ ಬೇಗನೇ ಎದ್ದು ಸಖಿಯರಾದ ಕನ್ಯೆಯರಿಂದ ಕೂಡಿಕೊಂಡು ಕಾವೇರಿಯಲ್ಲಿ ಸ್ನಾನವನ್ನು ಮಾಡುತ್ತಿದ್ದಳು. 'ದೇವಿ! ಕಾವೇರಿ! ನಿನಗೆ ನಮಸ್ಕಾರವು. ನನ್ನ ಪಾಪವನ್ನು ಪರಿಹರಿಸು. ನನಗೆ ಮಂಗಲವನ್ನು ಉಂಟುಮಾಡು. ಧನಾದಿಗಳನ್ನು ಪಾತಿವ್ರತ್ಯವನ್ನು ಕೊಡು' ಎಂಬ ಅರ್ಥವುಳ್ಳ ಮಂತ್ರವನ್ನು ಹೇಳುತ್ತಾ ಸೂರ್ಯೋದಯಕ್ಕಿಂತ ಪೂರ್ವದಲ್ಲಿಯೇ ಮಾಘಮಾಸದಲ್ಲಿ ಕಾವೇರಿಯಲ್ಲಿ ಸ್ನಾನ ಮಾಡುತ್ತಿದ್ದಳು. ಅವಳ ಚರಿತ್ರೆಯನ್ನು ಮನೆಯ ಕೆಲಸದಲ್ಲಿ ಸಾಮರ್ಥ್ಯವನ್ನು ನೋಡಿ ತಂದೆಯು ಸಂತೋಷವುಳ್ಳವನಾಗಿ ಇವಳನ್ನು ಯಾರಿಗೆ ಮದುವೆ ಮಾಡಿಕೊಡಲಿ ಎಂದು ಯೋಚಿಸಿದರು.

ತರುವಾಯ ಕುತ್ಸಮುನಿಗಳು ತನ್ನ ಮಗನಾದ ಮೃಗಶೃಂಗ ಮುನಿಗಳಿಗೆ ಉಚಥ್ಯರ ಮಗಳಾದ ಸುವೃತ್ತೆಯನ್ನು ಮದುವೆ ಮಾಡಬೇಕೆಂದು ಯೋಚಿಸಿದರು. ಮೃಗಶೃಂಗಮುನಿಗಳೂ ಸುಂದರಿಯಾದ ಆ ಉಚ್ಯರ ಮಗಳನ್ನು ಮದುವೆಯಾಗ ಬೇಕೆಂದು ಯೋಚಿಸಿದರು.

1. ಪ.

ಒಂದು ದಿವಸದಲ್ಲಿ ಆ ಸುವೃತ್ತೆಯು ಮೂರು ಜನ ಸಖಿಯರಿಂದ ಕೂಡಿಕೊಂಡು ಅರುಣೋದಯಕಾಲದಲ್ಲಿ ಮಾಘಸ್ನಾನಕ್ಕಾಗಿ ಕಾವೇರಿಗೆ ಹೋದಳು. ಆ ಸಮಯದಲ್ಲಿ ಒಂದು ಕಾಡಿನ ಆನೆಯು ಭಯಪಡಿಸುತ್ತಾ ಬಂದಿತು. ಸುವೃತ್ತೆಯೂ ಅವಳ ಸಖಿಯರೂ ಭಯವುಳ್ಳವರಾಗಿ ಓಡಿದರು. ಆನೆಯೂ ಅವರನ್ನು ಅಟ್ಟಿಸಿಕೊಂಡು ಹೋಯಿತು. ಆನೆಯೂ ಅವರನ್ನು ಅನುಸರಿಸಿ ಅಟ್ಟಿಸಿಕೊಂಡು ಹೋಯಿತು. ಕನ್ಯೆಯರು ವೇಗದಿಂದ ಓಡುತ್ತಾ ಹುಲ್ಲಿನಿಂದ ಮುಚ್ಚಿಹೋಗಿದ್ದ ನೀರಿಲ್ಲದೆ ಇದ್ದ ದೊಡ್ಡ ಭಾವಿಯಲ್ಲಿ ಬಿದ್ದರು. ಆಗಲೇ ಅವರು ಪ್ರಾಣವನ್ನು ಬಿಟ್ಟರು. ಆಮೇಲೆ ಅವರು ಮನೆಗೆ ಬಾರದೆ ಇರಲು ತಂದೆತಾಯಿಗಳು ಅವರನ್ನು ಹುಡುಕುತ್ತಾ ಬಂದರು. ವನದಿಂದ ವನಕ್ಕೆ ಹುಡುಕುತ್ತಾ ಬಂದು ಬಾವಿಯಲ್ಲಿ ಬಿದ್ದು ಮೃತರಾದ ಅವರನ್ನು ನೋಡಿದರು. ನೋಡಿ ಗಟ್ಟಿಯಾಗಿ ಅಳುವವರಾದರು. ವಿಮಲೆಯೇ! ಕಮಲೆಯೇ! ಸುವೃತ್ತೆಯೇ! ಸುರಸೆಯೇ! ಎಂದು ಹೆಸರನ್ನು ಹೇಳುತ್ತಾ ಅವರ ತಾಯಿಯರು ವಿಲಾಪವನ್ನು ಮಾಡಿದರು. ಉಚಥ್ಯರೂ ಅಳುವವರಾದರು. 'ತಪಸ್ವಿಯಾದ ಮೃಗಶೃಂಗಮುನಿಯು ನಿನ್ನನ್ನು ಮದುವೆಯಾಗ ಬೇಕೆಂದು ಯಾಚಿಸಿದರು. ನಾನು ಆಗಲಿ ಎಂದು ಹೇಳಿರುವೆನು. ಇನ್ನು ಅವರ ಹತ್ತಿರ ಏನೆಂದು ಹೇಳಲಿ' ಎಂದು ವಿಲಾಪವನ್ನು ಮಾಡಿಸಿದರು. ಈರೀತಿಯಾಗಿ ತಂದೆತಾಯಿಗಳು ಅಳುತ್ತಿರಲು ಅಲ್ಲಿಗೆ ಮೃಗಶೃಂಗಮುನಿಗಳು ಬಂದರು. ಅವರ ದುಃಖವನ್ನು ಮೃತರಾದ ಕನ್ಯೆಯರನ್ನು ನೋಡಿ ಯೋಚನೆ ಮಾಡಿ ಆ ಉಚಥ್ಯರೇ ಮೊದಲಾದವರೊಡನೆ 'ನಾನು ಕೆಲವು ದಿವಸಗಳಲ್ಲಿಯೇ ಈ ಕನ್ಯೆಯರನ್ನು ಎಬ್ಬಿಸುವೆನು' ಎಂದು ಹೇಳಿದರು. ಅದನ್ನು ಕೇಳಿ ಅವರೆಲ್ಲರೂ ಅಳುವನ್ನು ನಿಲ್ಲಿಸಿದರು. ಆಮೇಲೆ ಮೃಗಶೃಂಗಮುನಿಗಳು 'ನಾನು ಕನ್ಯೆಯರನ್ನು ಬದುಕಿಸು ವವರೆಗೆ ಇವರ ಮನೋಹರವಾದ ದೇಹಗಳನ್ನು ರಕ್ಷಿಸಿಕೊಂಡು ಇರಿ' ಎಂದು ಹೇಳಿದರು.

ತರುವಾಯ ಮೃಗಶೃಂಗಮುನಿಗಳು ಕಾವೇರಿಗೆ ಹೋಗಿ ಕುತ್ತಿಗೆಯ ಪರ್ಯಂತವಾದ ನೀರಿನಲ್ಲಿ ನಿಂತುಕೊಂಡು ಸೂರ್ಯನನ್ನು ನೋಡುತ್ತಾ ಮೇಲೆ ಮುಖವನ್ನು ಮಾಡಿಕೊಂಡು ಮೇಲ್‌ಕೈಗಳನ್ನು ಮಾಡಿಕೊಂಡು ಮೃತ್ಯುದೇವತೆಯನ್ನು ಸ್ತೋತ್ರಮಾಡಿದರು. ಒಂದು ಸಮಯದಲ್ಲಿ ಒಂದು ಆನೆಯು ಅವರನ್ನು ಕೊಲ್ಲಬೇಕೆಂದು ಸೊಂಡಿಲನ್ನು ಎತ್ತಿಕೊಂಡು ವೇಗದಿಂದ ಆ ಮುನಿಗಳ ಸಮೀಪಕ್ಕೆ ಹೋಯಿತು. ಅದರ ವೇಗವನ್ನು ನೋಡಿ ಮುನಿಗಳು ಕದಲಲೇ ಇಲ್ಲ. ಚಿತ್ರದಲ್ಲಿ

ಬರೆದ ಬೊಂಬೆಯಂತೆ ನಿಂತುಕೊಂಡರು. ತರುವಾಯ ಅವರನ್ನು ನೋಡಿ ಆನೆಯು ಶಾಂತವಾಯಿತು. ಸೊಂಡಿಲಿನಿಂದ ಅವರನ್ನು ಎತ್ತಿ ತನ್ನ ತಲೆಯ ಮೇಲೆ ಇಟ್ಟುಕೊಂಡಿತು. ಅದರ ಅಭಿಪ್ರಾಯವನ್ನು ತಿಳಿದು ಮುನಿಗಳು ಜಪವನ್ನು ಮುಗಿಸಿ ಆನೆಯ ಮೇಲೆ ಕೂತುಕೊಂಡು ಸಂತೋಷವನ್ನು ಹೊಂದಿದರು. ತರುವಾಯ ಬಹುಕಾಲದಿಂದ ದುಃಖಿತವಾದ ಈ ಪ್ರಾಣಿಯನ್ನು ಉದ್ಧರಿಸುತ್ತೇನೆ ಎಂದು ನಿಶ್ಚಯಿಸಿ ಬಹುವಿಚಾರ ಮಾಡಿ ಮಾಘಸ್ನಾನದ ಎಂಟುದಿನದ ಪುಣ್ಯವನ್ನು ನಿನಗೆ ಕೊಟ್ಟಿರುವೆನು ಎಂದು ಹೇಳಿ ಕೈಯಿಂದ ನೀರನ್ನು ತೆಗೆದು ಆನೆಯ ತಲೆಯಮೇಲೆ ಪ್ರೋಕ್ಷಣೆ ಮಾಡಿದರು. ಆಗ ಆನೆಯು ಪಾಪರಹಿತವಾಗಿ ಗಟ್ಟಿಯಾಗಿ ಗರ್ಜನೆ ಮಾಡಿತು. ಅದರಿಂದಲೂ ಮೃಗಶೃಂಗಮುನಿಗಳು ಸಂತುಷ್ಟರಾಗಿ ತನ್ನ ಹಸ್ತದಿಂದ ಮುಟ್ಟಿ ಕೃಪೆಯಿಂದ ನೋಡಿದರು. ಆ ಮುನಿಗಳು ಹಸ್ತಸ್ಪರ್ಶದಿಂದ ಆನೆಯು ಆನೆಯ ರೂಪವನ್ನು ಬಿಟ್ಟು ದಿವ್ಯದೇಹವನ್ನು ಹೊಂದಿ ಮೃಗಶೃಂಗಮುನಿಗಳಿಗೆ ನಮಸ್ಕರಿಸಿ 'ನಾನು ಕೃತಾರ್ಥನಾದೆನು. ನಾನು ಕೃತಾರ್ಥನಾದೆನು. ನಾನು ಕೃತಾರ್ಥನಾದೆನು. ನನ್ನನ್ನು ಉದ್ಧಾರ ಮಾಡಿದಿರಿ. ನಾನು ಪೂರ್ವದಲ್ಲಿ ವಿಶ್ವಗುಪ್ತನೆಂಬ ವೈಶ್ಯನು' ಎಂದು ಹೇಳಿ ತನ್ನ ಪೂರ್ವಚರಿತ್ರೆಯನ್ನು ತಿಳಿಸಿ ಸ್ವರ್ಗಕ್ಕೆ ಹೊರಟುಹೋದನು.

ತರುವಾಯ ಮೃಗಶೃಂಗಮುನಿಗಳು ಯಮದೇವರನ್ನು ವಿಶೇಷವಾಗಿ ಸ್ತೋತ್ರಮಾಡಿದರು. ನಮಸ್ಕಾರ ಮಾಡಿದರು. ತರುವಾಯ ಯಮದೇವರು ಪ್ರಸನ್ನವಾದ ಮುಖಕಮಲವುಳ್ಳವರಾಗಿ ಪ್ರತ್ಯಕ್ಷರಾದರು. ನಮಸ್ಕಾರ ಮಾಡಿದ ಮೃಗಶೃಂಗಮುನಿಗಳನ್ನು ಕೈಗಳಿಂದ ಎಬ್ಬಿಸಿ 'ನಿನ್ನ ಸ್ತೋತ್ರದಿಂದ ಸಂತುಷ್ಟನಾಗಿ ಬಂದಿರುವೆನು. ಬೇಕಾದ ವರಗಳನ್ನು ಕೇಳಿಕೊ' ಎಂದು ಹೇಳಿದರು. ಆಗ ಮೃಗಶೃಂಗಮುನಿಗಳು ಆ ಮೃತರಾದ ಕನ್ಯೆಯರು ಬದುಕುವಂತೆ ಮಾಡಬೇಕೆಂದು ವರವನ್ನು ಕೇಳಿದರು. ಆ ಮಾತನ್ನು ಕೇಳಿ ಯಮದೇವರು ತನ್ನ ಪಾರ್ಶ್ವದಲ್ಲಿ ಇದ್ದ ದೂತರೊಡನೆ 'ಉದ್ಯಾನಮಧ್ಯದಲ್ಲಿ ಬಾಳೆಗಿಡಗಳ ವನದ ಮಧ್ಯದಲ್ಲಿ ಇರುವ ನಾಲ್ಕು ಕನ್ಯೆಯರನ್ನು ಬೇಗನೇ ಕರಕೊಂಡು ಬನ್ನಿರಿ' ಎಂದು ಹೇಳಿದರು. ಯಮದೂತರು ಬೇಗನೆ ಅವರನ್ನು ಕರೆದುಕೊಂಡು ಬಂದರು. ಯಮದೇವರು ಅದೃಶ್ಯರೂಪದಿಂದ ಅವರನ್ನು ಅವರ ದೇಹವಿದ್ದಲ್ಲಿಗೆ ಕಳುಹಿಸಿದರು. ತರುವಾಯ ಅಲ್ಲಿ ನಿದ್ರೆಯನ್ನು ಮಾಡುವವರು ಏಳುವಂತೆ ಆ ಭಾವಿಯಿಂದ ಮೃತರಾದ ಆ ಕನ್ಯೆಯರು ಬದುಕಿ ಎದ್ದರು. ಅವರನ್ನು ನೋಡಿ ತಾಯಿಯರು ಸಂತೋಷವುಳ್ಳವರಾಗಿ ತಮ್ಮ ಮನೆಗೆ ಕರೆದುಕೊಂಡು ಹೋದರು.

ಯಮದೇವರು ಸಂತುಷ್ಟರಾಗಿ ಮೃಗಶೃಂಗಮುನಿಗಳೊಡನೆ 'ಇನ್ನು ವರವನ್ನು ಕೇಳಿಕೊ' ಎಂದರು.

ಅದಕ್ಕೆ ಮೃಗಶೃಂಗಮುನಿಗಳು 'ಯಾರು ನಿಮ್ಮ ಈ ಸ್ತೋತ್ರವನ್ನು ಭಕ್ತಿಯಿಂದ ಹೇಳುವನೋ ಕೇಳುವನೋ ಅವನಿಗೆ ಅಪಮೃತ್ಯುವುಂಟಾಗಬಾರದು. ಅವನು ಪಾಪಿಯಾಗಬಾರದು. ಬಹುಕಾಲ ಬದುಕಿರಬೇಕು' ಎಂದರು.

ಯಮದೇವರು 'ಹಾಗೆಯೇ ಆಗಲಿ. ಇನ್ನೊಂದು ರಹಸ್ಯವನ್ನು ಹೇಳುವೆನು. ಕೇಳು. ಈ ವಿಷಯವನ್ನು ನಾಸ್ತಿಕರಿಗೆ ಹೇಳಬಾರದು. ಆಸ್ತಿಕರಿಗೆ ಅವಶ್ಯವಾಗಿ ಹೇಳಬೇಕು. ಕೃಷ್ಣಪಕ್ಷದಲ್ಲಿ ಮಂಗಳವಾರದಲ್ಲಿ ಚತುರ್ದಶಿಯು ಬಂದಲ್ಲಿ ತಿಲತರ್ಪಣವನ್ನು ಮಾಡಿ ಈ ಸ್ತೋತ್ರವನ್ನು ಜಪಿಸಿದರೆ ಅವನು ಸರ್ವಾಭೀಷ್ಟವನ್ನು ಹೊಂದುವನು' ಎಂದು ವರವನ್ನು ಕೊಟ್ಟು ತನ್ನ ದೂತರಿಂದ ಸಹಿತರಾಗಿ ಅಂತರ್ಧಾನವನ್ನು ಹೊಂದಿದರು. ಮೃಗಶೃಂಗಮುನಿಗಳು ಸಂತೋಷದಿಂದ ತನ್ನ ಆಶ್ರಮವನ್ನು ಹೊಂದಿದರು.

(ಮಾಸಮಾಹಾತ್ಮ ಪರಿಚ್ಛೇದವುಳ್ಳ ಸದಾಚಾರ ತಂರಗದಲ್ಲೂ ಇದನ್ನು ಓದಬಹುದು)



# ಸುವ್ರತನ ಕಥೆ

ಮನೋಹರವಾದ ನರ್ಮದಾತೀರದಲ್ಲಿ ವೇದವನ್ನು ಓದಿಕೊಂಡು ಬ್ರಾಹ್ಮಣರು ವಾಸಮಾಡಿದ್ದ ಅಕಲಂಕ ಎಂದು ಹೆಸರುಳ್ಳ ದೊಡ್ಡ ಅಗ್ರಹಾರವಿದ್ದಿತು. ಅಲ್ಲಿ ಸುವತ್ರನೆಂಬ ಬ್ರಾಹ್ಮಣನಿದ್ದನು. ಅವನು ವೇದಗಳನ್ನು ವೇದಾಂಗಶಾಸ್ತ್ರಗಳನ್ನು ಓದಿದ್ದನು. ಧರ್ಮಶಾಸ್ತ್ರವನ್ನು ತಿಳಿದಿದ್ದನು. ಪುರಾಣಗಳಲ್ಲಿ ಪಂಡಿತನಾಗಿದ್ದನು. ಹಣಸಂಪಾದನೆ ಮಾಡುವುದಕ್ಕಾಗಿ ಅನೇಕ ಗುರುಗಳಿಂದ ಅನೇಕ ವಿದ್ಯೆಗಳನ್ನು ಅಭ್ಯಾಸ ಮಾಡಿ ಲೋಭದಿಂದ ಆವಾವ ಗುರುಗಳಿಗೆ ದಕ್ಷಿಣೆಯನ್ನು ಕೊಡಲಿಲ್ಲ. ಬಹುಹಣವನ್ನು ಸಂಪಾದಿಸಿದನು. ಹಣವನ್ನು ಸಂಪಾದಿಸುವುದಕ್ಕಾಗಿ ನಾನಾ ಭಾಷೆಗಳನ್ನು ಆವಾವ ದೇಶದ ಅಕ್ಷರಗಳನ್ನು ತಿಳಿದಿದ್ದನು. ಲೋಭಿಯಾಗಿ ಅನ್ಯಾಯದಿಂದಲೂ ಹಣವನ್ನು ಸಂಪಾದಿಸುತ್ತಿದ್ದನು. ಮಾರಬಾರದ ಪದಾರ್ಥಗಳನ್ನು ಮಾರುತ್ತಿದ್ದನು. ಚಂಡಾಲರ ಕೈಯಿಂದಲೂ ದಾನವನ್ನು

1. ಪ.

ತೆಗೆದುಕೊಳ್ಳುತ್ತಿದ್ದನು. ಕನ್ಯೆಯರನ್ನು ಮಾರುತ್ತಿದ್ದನು. ದನಗಳನ್ನು ಮಾರುತ್ತಿದ್ದನು. ಎಳ್ಳುಗಳನ್ನು ಮಾರುತ್ತಿದ್ದನು. ಅಕ್ಕಿಯನ್ನು ಮಾರುತ್ತಿದ್ದನು. ರಸಪದಾರ್ಥಗಳನ್ನೂ ಎಣ್ಣೆಯನ್ನೂ ಮಾರುತ್ತಿದ್ದನು. ಇನ್ನೊಬ್ಬರಿಗೋಸ್ಕರ ಹಣವನ್ನು ತೆಗೆದುಕೊಂಡು ತೀರ್ಥಯಾತ್ರೆಯನ್ನು ಇನ್ನೊಬ್ಬರಿಗೋಸ್ಕರ ದೇವತಾಪೂಜೆಯನ್ನು ಮಾಡುತ್ತಿದ್ದನು. ಹಣವನ್ನು ತೆಗೆದುಕೊಂಡು ಪಾಠಹೇಳುತ್ತಿದ್ದನು. ಇನ್ನೊಬ್ಬರ ಮನೆಯಲ್ಲಿಯೇ ಭೋಜನ ಮಾಡುತ್ತಿದ್ದನು. ಉಪ್ಪು ಹಾಲು ನೀರು ಮೊಸರು ಅನ್ನ ಇವುಗಳನ್ನು ಮಾರಿ ಬಹುಹಣವನ್ನು ಸಂಪಾದಿಸಿದನು. ನಿತ್ಯನಿಮಿತ್ತಕರ್ಮಗಳನ್ನು ಬಿಟ್ಟುಬಿಟ್ಟನು. ತಾನೂ ಅನುಭವಿಸುತ್ತಿದ್ದಿಲ್ಲ. ಇನ್ನೊಬ್ಬರಿಗೆ ದಾನ ಮಾಡುತ್ತಲೂ ಇರಲಿಲ್ಲ. ತನ್ನ ಹಣವು ಎಷ್ಟು ಆಯಿತೆಂದು ಲೆಕ್ಕ ಮಾಡುತ್ತಿದ್ದನು. ನೂರು ಸಾವಿರ ಬಂಗಾರದ ನಾಣ್ಯಗಳನ್ನು ಸಂಪಾದಿಸಿದ್ದನು. ಹೀಗೆ ಹಣವನ್ನು ಸಂಪಾದಿಸುತ್ತಾ ಮುದುಕನಾದನು. ಅವನ ಇಂದ್ರಿಯಗಳು ದುರ್ಬಲಗಳಾದವು. ಏಳಲಿಕ್ಕೂ ನಡೆಯಲಿಕ್ಕೂ ಅಶಕ್ತನಾದನು. ಆಮೇಲೆ ಹಣ ಸಂಪಾದನೆ ಮಾಡಲಿಕ್ಕೆ ಆಗದೆ ಪತ್ನೀಸಹಿತನಾಗಿ ದುಃಖವುಳ್ಳವನಾದನು. ಆಮೇಲೆ ಅವನಿಗೆ ಸ್ವಲ್ಪ ವಿವೇಕವುಂಟಾಯಿತು.

''ಕಂಡವರೊಡನೆ ದಾನವನ್ನು ಪಡೆದು ಮಾರಬಾರದ ಪದಾರ್ಥಗಳನ್ನು ಮಾರಿ ತಪಸ್ಸು ಮೊದಲಾದುವನ್ನು ಮಾರಿ ಹಣವನ್ನು ಸಂಪಾದಿಸಿದೆನು. ಈಗಲೂ ನನಗೆ ಶಾಂತಿಯುಂಟಾಗಲಿಲ್ಲ. ಆಸೆಯು ತುಂಬಾ ಕೆಟ್ಟದ್ದು. ಮೇರುಪರ್ವತಕ್ಕೆ ಸಮಾನವಾದ ಎಣಿಕೆಯಿಲ್ಲದ ಹಣವನ್ನು ಇಚ್ಛಿಸುತ್ತಿದೆ. ಆಹಾ! ಬಹುಕಷ್ಟ! ಮನಸ್ಸು ಸಮಸ್ತಕ್ಲೇಶವನ್ನು ಹೊಂದಲಿಕ್ಕೆ ಕಾರಣವಾದದ್ದು. ಸರ್ವಅಭೀಷ್ಟವನ್ನು ಹೊಂದಿದರೂ ಮತ್ತು ಇತರ ವಿಷಯಗಳನ್ನು ಅಪೇಕ್ಷಿಸುತ್ತಿದೆ. ಮುದುಕನಾದಂತೆ ಕೂದಲುಗಳು ಹಲ್ಲುಗಳೂ ಜೀರ್ಣವಾಗುವುವು. ಕಣ್ಣುಕಿವಿಗಳ ಶಕ್ತಿಯೂ ಜೀರ್ಣವಾಗುವುವು. ನನ್ನ ಎಲ್ಲಾ ಇಂದ್ರಿಯಗಳು ಶಕ್ತಿಯು ಕಡಿಮೆಯಾಗಿರುವುದು. ಬಲವೂ ಹೋಯಿತು. ಆಸೆಯು ಮಾತ್ರ ಹೆಚ್ಚೇ ಆಗುತ್ತಿದೆ. ಆಸೆಯು ಬಹುಕೆಟ್ಟದ್ದು. ಆದುದರಿಂದ ಪಂಡಿತನಾದವನು ಆಸೆಯನ್ನು ಬಿಡಬೇಕು. ಆಸೆಯ ವಶವರಾದ ಜನರು ಮಹಾಮೋಹವುಳ್ಳವರಾಗಿ ಅವಮಾನಾದಿ ದುಃಖವನ್ನು ತಿಳಿಯುವುದಿಲ್ಲ. ಬಹುಶ್ರಮಪಟ್ಟು ಹಣವನ್ನು ಸಂಪಾದಿಸಿದೆನು. ದೇಹವು ಜೀರ್ಣವಾಯಿತು. ಬಲವು ಹೋಯಿತು. ಇನ್ನು ಮೇಲಾದರೂ ಪರಲೋಕ ಸಾಧನೆಯನ್ನು ಮಾಡಲಿಕ್ಕೆ ಪ್ರಯತ್ನಮಾಡುವೆನು' ಎಂದು ಹೇಳಿದನು.

ಈರೀತಿಯಾಗಿ ಆ ಬ್ರಾಹ್ಮಣನು ಧರ್ಮಮಾರ್ಗದಲ್ಲಿ ಮನಸ್ಸುಳ್ಳವನಾಗಲು ಆ

ರಾತ್ರಿಯಲ್ಲಿಯೇ ಕೆಲವು ಕಳ್ಳರು ಬಂದು ಮನೆಯಲ್ಲಿ ಇದ್ದ ವಸ್ತ್ರರತ್ನ ಬಂಗಾರ ಇತ್ಯಾದಿ ಸಮಸ್ತವನ್ನೂ ಮಧ್ಯರಾತ್ರಿಯಲ್ಲಿಯೇ ಅಪಹರಿಸಿಕೊಂಡು ಹೋದರು.

ತರುವಾಯ ಸುವ್ರತನು ಪಶ್ಚಾತ್ತಾಪವನ್ನು ಹೊಂದಿದನು. ನಾನು ಸಂಪಾದಿಸಿದ ಹಣವು ಧರ್ಮಕ್ಕಾಗಲೀ, ಕಾಮಕ್ಕಾಗಲೀ ಮೋಕ್ಷಕ್ಕಾಗಲಿ ಉಪಯೋಗ ಬೀಳಲಿಲ್ಲ. ನಾನು ತಿನ್ನಲೂ ಇಲ್ಲ. ಇನ್ನೊಬ್ಬರಿಗೆ ಕೊಡಲೂ ಇಲ್ಲ. ನನ್ನನ್ನೇ ನಾನು ವಂಚನೆ ಮಾಡಿಕೊಂಡೆನು. ಎಲ್ಲರ ಕೈಯಲ್ಲಿಯೂ ದಾನವನ್ನು ಪಡೆದೆನು. ಮದ್ಯವನ್ನೂ ಮಾರಿದೆನು. ಒಂದು ಗೋವನ್ನೇ ದಾನ ತೆಗೆದುಕೊಳ್ಳಬಾರದು. ಎರಡನೇ ಗೋವನ್ನು ದಾನ ತೆಗೆದುಕೊಳ್ಳಲೇಬಾರದು. ದಾನವನ್ನು ತೆಗೆದುಕೊಂಡ ಗೋವನ್ನು ಮಾರಿದರೆ ಏಳುತಲೆಯವರನ್ನು ನಾಶಮಾಡುವುದು. ಇದನ್ನು ತಿಳಿದುಕೊಂಡೇ ನಾನು ಬಹುಗೋದಾನವನ್ನು ಪಡೆದು ಗೋವುಗಳನ್ನು ಮಾರಿದೆನು. ದೇಶದೇಶಕ್ಕೆ ಹೋಗಿ ಬಹುಶ್ರಮಪಟ್ಟು ಸಂಪಾದಿಸಿದ ಹಣವು ಕ್ಷಣದಲ್ಲಿಯೇ ಹೊರಟು ಹೋಯಿತು. ಹಣವನ್ನು ಸಂಪಾದಿಸುವ ಯೋಚನೆಯಿಂದ ಒಂದು ದಿವಸ ದಲ್ಲಿಯೂ ಸಂಧ್ಯಾವಂದನೆಯನ್ನು ಮಾಡಿಲ್ಲ. ಪಂಚಯಜ್ಞಗಳನ್ನು ಮಾಡಿಲ್ಲ. ಬ್ರಾಹ್ಮಣರಿಗೆ ಅನ್ನವನ್ನು ಹಾಕಿಲ್ಲ. ಯತಿಗಳಿಗೂ ಬ್ರಹ್ಮಚಾರಿಗಳಿಗೂ ಭಿಕ್ಷೆಯನ್ನು ಹಾಕದೆ ಊಟಮಾಡಿದರೆ ಚಾಂದ್ರಾಯಣವ್ರತವನ್ನು ಮಾಡಬೇಕೆಂದು ನಿಯಮ ವಿರುವುದು. ನಾನು ಯತಿಗಳಿಗೂ ಬ್ರಹ್ಮಚಾರಿಗಳಿಗೂ ಭಿಕ್ಷೆಯನ್ನು ಹಾಕಲಿಲ್ಲ. ಹೋಮವನ್ನು ಮಾಡಲಿಲ್ಲ. ಅಶ್ವತ್ಥಸೇವೆಯನ್ನು ಮಾಡಿಲ್ಲ. ಒಂದು ಪುಣ್ಯವನ್ನೂ ಮಾಡಿಲ್ಲ. ಯಮಲೋಕಕ್ಕೆ ಹೋಗುವ ಸಮಯವು ಬಂದಿತು. ಏನು ಮಾಡಲಿ? ಎಲ್ಲಿಗೆ ಹೋಗಲಿ? ಹಾ! ಕಷ್ಟವು ಬಂದು ಸೇರಿತು' ಎಂದು ಹೇಳಿ ತುಂಬಾ ಪಶ್ಚಾತ್ತಾಪವನ್ನು ಹೊಂದಿದನು. ''ನಾನು ಹಣವನ್ನು ಸಂಪಾದಿಸಲಿಕ್ಕೆ ಕಾಶ್ಮೀರದೇಶಕ್ಕೆ ಹೋಗುವಾಗ ಭಾಗೀರಥೀತೀರದಲ್ಲಿ ವೇದಪಾರಂಗತರಾದ ಬ್ರಾಹ್ಮಣರು ಅನೇಕರು ಉಷಃಕಾಲದಲ್ಲಿ ಸ್ನಾನಮಾಡಿ ಇದ್ದರು. ಅಲ್ಲಿ ಪುರಾಣಿಕನು 'ಮಾಘಮಾಸದಲ್ಲಿ ಪ್ರಾತಃಸ್ನಾನವನ್ನು ಮಾಡಿದವನು ಸ್ವರ್ಗವನ್ನು ಹೊಂದವರು' ಎಂದು ಪುರಾಣಮಧ್ಯದಲ್ಲಿ ಹೇಳುವುದನ್ನು ಕೇಳಿರುವೆನು. ಅಸಾಧನವನ್ನೇ ನಾನು ಮಾಡುವೆನು'' ಎಂದು ಹೇಳಿಕೊಂಡು ಆ ಬ್ರಾಹ್ಮಣನು ನರ್ಮದಾನದಿಯಲ್ಲಿ ಒಂಭತ್ತು ದಿನಗಳಲ್ಲಿ ಮಾಘಸ್ನಾನವನ್ನು ಮಾಡಿದನು. ಹತ್ತನೇ ದಿವಸದಲ್ಲಿ ನದೀತೀರಕ್ಕೆ ಹೋಗಿ ಛಳಿಯನ್ನು ತಡೆಯಲಿಕ್ಕೆ ಆಗಲಾರದೆ ಗೋವಿಂದ ಎನ್ನುತ್ತಾ ಪ್ರಾಣವನ್ನು ಬಿಟ್ಟನು. ಆಗಲೇ ಮೇರುಪರ್ವತದಂತೆ ಪ್ರಕಾಶಮಾನವಾದ

ವಿಮಾನವು ಬಂದಿತು. ಸುವ್ರತನು ಮಾಘಮಾಸದ ವೈಭವದಿಂದ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದನು. ಅಲ್ಲಿ ಒಂದು ಮನ್ವಂತರವಿದ್ದು ಪುನಃ ಭೂಮಿಯಲ್ಲಿ ಬ್ರಾಹ್ಮಣನಾಗಿ ಹುಟ್ಟಿದನು. ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನಮಾಡಿ ಬ್ರಹ್ಮಲೋಕವನ್ನು ಹೊಂದಿದನು. ಒಂದು ಕಲ್ಪದ ಅನಂತರದಲ್ಲಿ ಪುನಃ ಭೂಮಿಯಲ್ಲಿ ಹುಟ್ಟಿ ಮಾಘಮಾಸದ ಮಹಿಮೆಯಿಂದ ಕಾಶಿಯಲ್ಲಿ ರುದ್ರದೇವರ ಉಪದೇಶವನ್ನು ಹೊಂದಿ ಮೃತನಾಗಿ ಉತ್ತಮವಾದ ಲೋಕವನ್ನು ಹೊಂದಿದನು.



## ತಿಲೋತ್ತಮೆಯ ಕಥೆ

ಋಚೀಕಾ ಎಂಬ ಭೃಗುವಂಶದ ಬ್ರಾಹ್ಮಣಸ್ತ್ರೀಯು ಇದ್ದಳು. ಅವಳು ಬಾಲ್ಯದಲ್ಲಿಯೇ ವಿಧವೆಯಾಗಿದ್ದಳು. ಅದರಿಂದ ಅವಳು ದುಃಖವುಳ್ಳವಳಾಗಿ ವಿಂಧ್ಯಪರ್ವತದ ಬಳಿಯಲ್ಲಿ ರೇವಾ ಕಪಿಲಸಂಗಮಸ್ಥಳಕ್ಕೆ ಹೋಗಿ ಅಲ್ಲಿ ಪರಮಾತ್ಮನ ವಿಷಯವಾಗಿ ಕಠಿನವಾದ ತಪಸ್ಸನ್ನು ಮಾಡಿದಳು. ನರ್ಮದಾನದಿಯಲ್ಲಿಯೂ ಮಾಘಸ್ನಾನ ಮಾಡುತ್ತಿದ್ದಳು. ರೇವಾಕಪಿಲಾ ಸಂಗಮದಲ್ಲಿ ಅರವತ್ತು ಮಾಘಮಾಸಗಳಲ್ಲಿ ಸ್ನಾನ ಮಾಡಿದಳು. ತರುವಾಯ ಅವಳು ತಪಸ್ಸಿನಿಂದ ಕ್ಷೀಣಳಾಗಿ ಆ ತೀರ್ಥದಲ್ಲಿಯೇ ಮೃತಳಾದಳು. ಮಾಘಸ್ನಾನದ ಪುಣ್ಯದಿಂದ ಪರಮಾತ್ಮನ ಲೋಕದಲ್ಲಿ ಸಾವಿರ ಚತುರ್ಯುಗಗಳಲ್ಲಿ ವಾಸಮಾಡಿದಳು. ಆಮೇಲೆ ಅಲ್ಲಿಂದ ಸತ್ಯಲೋಕಕ್ಕೆ ಹೋದಳು. ಅಲ್ಲಿ ಬೇಕಾದ ಭೋಗಗಳನ್ನು ಅನುಭವಿಸುತ್ತಾ ಸಾವಿರ ಚತುರ್ಯುಗಗಳಲ್ಲಿ ವಾಸಮಾಡುವವಳಾಗಿ ಸುಂದೋಪಸುಂದರ ನಾಶಕ್ಕಾಗಿ ಬ್ರಹ್ಮದೇವರಿಂದ ತಿಲೋತ್ತಮೆಯೆಂಬ ಹೆಸರಿನಿಂದ ಸೃಷ್ಟಿಮಾಡಲ್ಪಟ್ಟಳು. ಆ ಸಮಯದಲ್ಲಿ ಸುಂದ ಉಪಸುಂದ ಎಂಬ ದೈತ್ಯರಿಂದ ಪೀಡಿತನಾಗಿ ದೇವತೆಗಳು ಬ್ರಹ್ಮದೇವರೊಡನೆ ದೂರಿಕೊಂಡಿದ್ದರು. ಆ ಅಸುರರ ಸಂಹಾರಕ್ಕಾಗಿ ಬ್ರಹ್ಮದೇವರು ಮನಸ್ಸಿನಿಂದಲೇ ತಿಲೋತ್ತಮೆಯನ್ನು ಸೃಷ್ಟಿಮಾಡಿದರು. ಅವಳೊಡನೆ 'ದೈತ್ಯನಾಶಕ್ಕಾಗಿ ಬೇಗನೇ ಹೋಗು' ಎಂದು ಹೇಳಿ ಕಳುಹಿಸಿದನು. ತರುವಾಯ ಆ ಸುಂದರಿಯು ವೀಣೆಯನ್ನು ಹಿಡಿದುಕೊಂಡು ಬ್ರಹ್ಮಲೋಕದಿಂದ ಇಳಿದು ಬಂದು ಆ ಸುಂದ ಉಪಸುಂದ ಎಂಬ ಇಬ್ಬರು ಅಸುರರು ಇದ್ದಲ್ಲಿಗೆ ಹೋದಳು. ಅವಳು

1. ಪ.ಪು

ರೇವಾನದಿಯ ಪವಿತ್ರವಾದ ಜಲದಲ್ಲಿ ಸ್ನಾನಮಾಡಿ ಕೆಂಪುಬಣ್ಣದ ಸೀರೆಯನ್ನು ಉಟ್ಟುಕೊಂಡು ಬಳೆಗಳ ಶಬ್ದವನ್ನು ಮಾಡುತ್ತಾ ಕಾಲಿನ ಆಭರಣದ ಶಬ್ದವನ್ನು ಮಾಡುತ್ತಾ ಮುತ್ತಿನಸರವನ್ನು ಧರಿಸಿಕೊಂಡು ವೀಣೆಯನ್ನು ಬಾರಿಸುತ್ತಾ ಸುಸ್ವರವಾಗಿ ಹಾಡನ್ನು ಕೇಳುತ್ತಾ ಕೂತುಕೊಂಡಳು. ಈರೀತಿಯಾಗಿ ಇದ್ದ ತಿಲೋತ್ತಮೆಯನ್ನು ಸುಂದೋಪಸುಂದರ ಭಟರಾದ ದೈತ್ಯರು ನೋಡಿ ಆಶ್ಚರ್ಯವುಳ್ಳವರಾಗಿ ಸುಂದೋಪಸುಂದರ ಬಳಿಗೆ ಹೋಗಿ ಅವಳನ್ನು ವರ್ಣನೆಮಾಡಿ ಹೇಳಿದರು. ಈರೀತಿಯಾಗಿ ಸೈನಿಕರ ಮಾತನ್ನು ಕೇಳಿ ಸುಂದೋಪಸುಂದರು ಮದ್ಯಪಾನ ಮಾಡುತ್ತಾ ಇದ್ದವರು ಮದ್ಯದ ಪಾತ್ರೆಯನ್ನು ಅಲ್ಲಿಯೇ ಬಿಟ್ಟು ಹತ್ತಿರವಿದ್ದ ಸಾವಿರಾರು ಸ್ತ್ರೀಯರನ್ನು ಬಿಟ್ಟು ಕೈಯಲ್ಲಿ ಭಯಂಕರವಾದ ಗದೆಯನ್ನು ಹಿಡಿದುಕೊಂಡು ಆ ಸುಂದರಿಯು ಇದ್ದಲ್ಲಿಗೆ ಓಡಿದರು. ಅವಳನ್ನು ನೋಡುವ ಮಾತ್ರದಿಂದಲೇ ಅವರಿಬ್ಬರಿಗೂ ಮೋಹವುಂಟಾಯಿತು. ಅವರಿಬ್ಬರೂ ನನ್ನ ಹೆಂಡತಿ, ನನ್ನ ಹೆಂಡತಿ ಎಂದು ಹೇಳಿಕೊಂಡರು. ತರುವಾಯ ಕೋಪಿಸಿಕೊಂಡು ಇಬ್ಬರೂ ಪರಸ್ಪರವಾಗಿ ಗದೆಯಿಂದ ಬಡೆದುಕೊಂಡರು. ಇಬ್ಬರೂ ಸತ್ತುಬಿದ್ದರು. ಸೈನಿಕರು ಮೃತರಾದ ಅವರನ್ನು ನೋಡಿ ಕೋಲಾಹಲವನ್ನು ಮಾಡಿದರು. ಎಲ್ಲರೂ ನೋಡುತ್ತಿರಲು ತಿಲೋತ್ತಮೆಯು ಆ ದೈತ್ಯರಿಬ್ಬರನ್ನೂ ಬೀಳಿಸಿ ಹತ್ತುದಿಕ್ಕುಗಳನ್ನು ಬೆಳಗಿಸುತ್ತಾ ಬೇಗನೇ ಆಕಾಶದ ಮೇಲೆ ಹೋದಳು. ಈರೀತಿಯಾಗಿ ದೇವತಾಕಾರ್ಯವನ್ನು ಸಾಧಿಸಿ ಬ್ರಹ್ಮದೇವರ ಬಳಿಗೆ ಹೋದಳು. ತರುವಾಯ ಬ್ರಹ್ಮದೇವರು ಸಂತೋಷ ವನ್ನು ಹೊಂದಿದರು. 'ಸುಂದರಿ! ನಿನಗೆ ಸೂರ್ಯರಥದಲ್ಲಿ ಸ್ಥಾನವನ್ನು ಕೊಟ್ಟಿರುವೆನು. ನೀನು ಅಲ್ಲಿ ಇದ್ದುಕೊಂಡು ಬೇಕಾದ ಭೋಗಗಳನ್ನು ಅನುಭವಿಸು ತ್ತಿರು' ಎಂದು ವರವನ್ನು ಕೊಟ್ಟರು. ಈರೀತಿಯಾಗಿ ಮೊದಲು ಬ್ರಾಹ್ಮಣಿಯಾಗಿ ಇದ್ದವಳು ಶ್ರೇಷ್ಠಳಾದ ಅಪ್ಸರಸ್ತ್ರೀಯಾಗಿ ಈಗಲೂ ಸೂರ್ಯಲೋಕದಲ್ಲಿ ಮಾಘ ಸ್ನಾನದ ಮಹತ್ತಾದ ಫಲವನ್ನು ಅನುಭವಿಸುತ್ತಿರುವಳು. ಆದುದರಿಂದ ಮಾಘಸ್ನಾನವು ಅತಿಪ್ರಶಸ್ತವಾದದ್ದು



# ಶ್ರೀಕುಂಡಲವಿಕುಂಡಲರ ಕಥೆ[1]

ಪೂರ್ವದಲ್ಲಿ ಕೃತಯುಗದಲ್ಲಿ ನೈಷಧ ಎಂಬ ನಗರದಲ್ಲಿ ಹೇಮಕುಂಡಲ ಎಂಬ ಹೆಸರುಳ್ಳ ತುಂಬಾ ಹಣವಂತನಾದ ವೈಶ್ಯನಿದ್ದನು. ಅವನು ಧರ್ಮಿಷ್ಠನಾಗಿದ್ದನು. ಅಗ್ನಿ ಬ್ರಾಹ್ಮಣ ಪೂಜಕನಾಗಿದ್ದನು. ಬಹುವ್ಯಾಪಾರವನ್ನು ಮಾಡುತ್ತಿದ್ದನು. ದನ ಕುದುರೆ ಎಮ್ಮೆ ಇತ್ಯಾದಿಗಳನ್ನು ಪೋಷಿಸುತ್ತಿದ್ದನು. ಹಾಲು ಮೊಸರು ಮಜ್ಜಿಗೆ ಗೋಮಯ ಹುಲ್ಲು ಕಟ್ಟಿಗೆ ಗೆಡ್ಡೆ ಹಣ್ಣು ತುಪ್ಪ ಉಪ್ಪು ಕಾಯಿಪಲ್ಯ ಎಣ್ಣೆ ವಸ್ತ್ರ ಇತ್ಯಾದಿ ನಾನಾ ವಸ್ತುಗಳನ್ನು ಮಾರುತ್ತಿದ್ದನು. ನಾನಾ ಉಪಾಯಗಳಿಂದ ಎಂಟು ಕೋಟಿ ಬಂಗಾರದ ನಾಣ್ಯಗಳನ್ನು ಸಂಪಾದಿಸಿದನು. ಈರೀತಿಯಾಗಿ ಮಹಾಹಣವಂತನಾಗಿ ಮುದುಕನಾದನು. ಆಮೇಲೆ ವಿಚಾರಮಾಡಿ ಸಂಸಾರವು ಕ್ಷಣಿಕವೆಂದು ತಿಳಿದವನಾಗಿ ತಾನು ಸಂಪಾದಿಸಿದ ಹಣದಲ್ಲಿ ಆರನೇ ಒಂದು ಭಾಗದಿಂದ ಧರ್ಮಕಾರ್ಯವನ್ನು ಮಾಡಿದನು. ಎಷ್ಟೋ ದೇವರ ಗುಡಿಗಳನ್ನು ಕಟ್ಟಿಸಿದನು. ಅನೇಕ ಸರೋವರಗಳನ್ನು ಇಳಿಭಾವಿಗಳನ್ನು ಧರ್ಮಕ್ಕಾಗಿ ಕಟ್ಟಿಸಿದನು. ಅಶ್ವತ್ಥ ಮೊದಲಾದ ಅನೇಕ ಮರಗಳನ್ನು ನಡೆಸಿದನು. ಅನೇಕ ಹೂವಿನ ತೋಟಗಳನ್ನು ಮಾಡಿಸಿದನು. ಬೆಳಗಿನಿಂದ ಸಾಯಂಕಾಲದವರೆಗೆ ಅನ್ನದಾನವನ್ನು ಮಾಡಿಸಿದನು. ಊರ ಹೊರಗೆ ನೀರನ್ನು ಕೊಡುವ ಸ್ಥಳಗಳನ್ನು ಅಂದರೆ ಅರವಟ್ಟಿಗೆಗಳನ್ನು ಇಡಿಸಿದನು. ಪುರಾಣದಲ್ಲಿ ಹೇಳಿದ ಪ್ರಸಿದ್ಧ ದಾನಗಳನ್ನೆಲ್ಲಾ ಮಾಡಿದನು. ತಾನು ಮಾಡಿದ ಪಾಪಕ್ಕೆಲ್ಲಾ ಪ್ರಾಯಶ್ಚಿತ್ತ ಮಾಡಿಕೊಂಡನು. ನಿತ್ಯವೂ ದೇವರ ಪೂಜೆಯನ್ನು ಮಾಡುತ್ತಿದ್ದನು. ಅತಿಥಿಗಳನ್ನು ಪೂಜಿಸುತ್ತಿದ್ದನು. ಈಪ್ರಕಾರವಾಗಿ ಇದ್ದ ಅವನಿಗೆ ಶ್ರೀಕುಂಡಲ ವಿಕುಂಡಲ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಹೇಮಕುಂಡಲನು ಮನೆಯನ್ನು ಮಕ್ಕಳ ವಶದಲ್ಲಿ ಒಪ್ಪಿಸಿ ತಪಸ್ಸನ್ನು ಮಾಡಲಿಕ್ಕೆ ವನಕ್ಕೆ ಹೋದನು. ಅಲ್ಲಿ ಪರಮಾತ್ಮನನ್ನು ಆರಾಧಿಸಿ ದೇಹವನ್ನು ಪರಿತ್ಯಜಿಸಿ ಉತ್ತಮವಾದ ಲೋಕವನ್ನು ಹೊಂದಿದನು.

ತರುವಾಯ ತರುಣರಾದ ಅವನ ಮಕ್ಕಳು ಹಣದ ಮದದಿಂದ ತಾಯಿಯ ಮತ್ತು ಬಂಧುಗಳ ಮಾತನ್ನು ಕೇಳದೆ ಪರಸ್ತ್ರೀಗಮನ ಮದ್ಯಪಾನ ಇತ್ಯಾದಿ ದುರ್ವ್ಯಾಪಾರಗಳಿಂದ ಹಣವನ್ನು ಹಾಳುಮಾಡಿದರು. ಸತ್ಪಾತ್ರರಲ್ಲಿ ಸ್ವಲ್ಪವೂ ಹಣವನ್ನು ಕೊಡಲಿಲ್ಲ. ಬ್ರಾಹ್ಮಣರ ಮುಖದಲ್ಲಿ ಸ್ವಲ್ಪವನ್ನು ಕೊಡಲಿಲ್ಲ. ನಟವಿಟ ಮೊದಲಾದ ಅಪಾತ್ರದಲ್ಲಿಯೇ ಹಣವನ್ನು ಕೊಟ್ಟು ನಾಶ ಮಾಡಿದರು.

---

1. ಪ.ಪು. ಉ.ಖಂ. ಅ.243

ಭಗವಂತನನ್ನು ಪೂಜಿಸಲಿಲ್ಲ. ಹೀಗೆ ಬೇಗನೇ ತಂದೆಯು ಸಂಪಾದಿಸಿದ್ದ ಹಣವೆಲ್ಲವೂ ನಾಶವನ್ನು ಹೊಂದಿತು. ತರುವಾಯ ಹಸಿವೆದಾಹಗಳಿಂದ ಪೀಡಿತರಾಗಿ ತುಂಬಾ ದುಃಖವನ್ನು ಹೊಂದಿದರು. ಅವರಿಗೆ ಊಟ ಮಾಡಲಿಕ್ಕೆ ಅನ್ನವಿರಲಿಲ್ಲ. ಹಣವು ಖರ್ಚಾಗಲು ಭೃತ್ಯರೂ ಬಂಧುಗಳೂ ಮಿತ್ರರೂ ಅವರನ್ನು ಬಿಟ್ಟುಬಿಟ್ಟರು. ತರುವಾಯ ಅವರು ಆ ನಗರದಲ್ಲಿಯೇ ಕಳವು ಮಾಡಲಿಕ್ಕೆ ಆರಂಭಿಸಿದರು. ತರುವಾಯ ರಾಜನಿಂದ ಭಯವುಳ್ಳವರಾಗಿ ಕಾಡಿಗೆಹೋಗಿ ಪ್ರಾಣಿಗಳನ್ನು ಪೀಡಿಸುತ್ತಾ ಜೀವನ ಮಾಡಿದರು. ನಾನಾ ಮೃಗಪಕ್ಷಿಗಳನ್ನು ಕೊಂದು ಮಾಂಸಾಹಾರಿಗಳಾಗಿದ್ದರು. ಮೃಗಬೇಟೆಯಾಡುತ್ತಿದ್ದರು. ಪಾಪಾಚಾರವುಳ್ಳವ ರಾದರು. ಒಂದುದಿವಸದಲ್ಲಿ ಒಬ್ಬನು ಒಂದು ಪರ್ವತಕ್ಕೆ ಹೋದನು. ಮತ್ತೊಬ್ಬನು ವನಕ್ಕೆ ಹೋದನು. ದೊಡ್ಡವನು ಹುಲಿಯಬಾಯಿಗೆ ಬಿದ್ದು ಸತ್ತನು. ಚಿಕ್ಕವನು ಹಾವು ಕಚ್ಚಿಸತ್ತನು. ಯಮದೂತರು ಬಂದು ಅವರಿಬ್ಬರನ್ನು ಕಟ್ಟಿ ಯಮಲೋಕಕ್ಕೆ ಎಳೆದುಕೊಂಡು ಹೋದರು. ಯಮದೇವರೊಡನೆ 'ತಮ್ಮ ಆಜ್ಞೆಯಂತೆ ಈ ಪಾಪಿಗಳನ್ನು ಎಳೆದುಕೊಂಡು ಬಂದಿರುವೆವು. ಮುಂದೇನು ಮಾಡಬೇಕೆಂದು ಆಜ್ಞಾಪಿಸಬೇಕೆಂದು ಕೇಳಿಕೊಂಡರು. ಯಮದೇವರು ಚಿತ್ರಗುಪ್ತನೊಡನೆ ಯೋಚಿಸಿ 'ಇವಲ್ಲಿ ಅಣ್ಣನನ್ನು ಕ್ರೂರವಾದ ನರಕದಲ್ಲಿ ಹಾಕಿರಿ. ತಮ್ಮನನ್ನು ಉತ್ತಮಭೋಗಗುಳುಳ್ಳ ಸ್ವರ್ಗಕ್ಕೆ ಕಳುಹಿಸಿರಿ' ಎಂದು ಹೇಳಿದರು. ತರುವಾಯ ಯಮದೂತರು ಶ್ರೀಕುಂಡಲನನ್ನು ಭಯಂಕರವಾದ ರೌರವನರಕದಲ್ಲಿ ಹಾಕಿದರು. ಅವರಲ್ಲಿ ಒಬ್ಬ ದೂತನು 'ವಿಕುಂಡಲ' ನನ್ನೊಡನೆ ಬಾ. ನಿನಗೆ ಸ್ವರ್ಗವನ್ನು ಕೊಡುವೆನು. ನೀನು ಕರ್ಮಗಳಿಂದ ಸಂಪಾದಿಸಿದ ಭೋಗಗಳನ್ನು ಅನುಭವಿಸು' ಎಂದು ಹೇಳಿದನು. ಆಗ ವಿಕುಂಡಲನು 'ನಾನೊಂದು ಸಂದೇಹವನ್ನು ಕೇಳುತ್ತೇನೆ. ನಾವಿಬ್ಬರೂ ಒಂದೇ ವಂಶದಲ್ಲಿ ಹುಟ್ಟಿದವರು. ಒಂದೇ ವಿಧವಾದ ಕರ್ಮವನ್ನು ಮಾಡಿದವರು. ಒಂದೇ ಕಾಲದಲ್ಲಿ ಸತ್ತಿದ್ದೇವೆ. ಹೀಗೆ ಇರುವಾಗ ನನ್ನ ಅಣ್ಣನನ್ನು ನರಕದಲ್ಲಿ ಹಾಕಲಿಕ್ಕೆ ಕಾರಣವೇನು? ನನಗೆ ಸ್ವರ್ಗವು ಸಿಕ್ಕಲಿಕ್ಕೆ ಕಾರಣವೇನು? ನನ್ನಲ್ಲಿ ಸ್ವರ್ಗಕ್ಕೆ ಕಾರಣವಾದದ್ದು ಒಂದೂ ಕಾಣೆಯಷ್ಟೆ!' ಎಂದು ಕೇಳಿದನು.

ಅದಕ್ಕೆ ಯಮದೂತನು 'ವಿಕುಂಡಲ! ಅವರವರು ಮಾಡಿದ ಪುಣ್ಯಾಪಾಪಗಳ ಫಲವನನು ಅವರವರೇ ಅನುಭವಿಸಬೇಕು. ನೀನು ಮಾಡಿರುವ ಪುಣ್ಯವನ್ನು ನಾನು ತಿಳಿದಿರುವೆನು. ನಿನಗೆ ತಿಳಿದಿರಲಾರದು. ಹರಿಮಿತ್ರನ ಮಗನಾದ ಸುಮಿತ್ರನೆಂಬವನು ನಿನಗೆ ಮಿತ್ರನಾಗಿದ್ದನು. ಅವನು ಯಮುನೆಯ ದಕ್ಷಿಣ ಆಶ್ರಮವನ್ನು

ಮಾಡಿಕೊಂಡಿದ್ದನು. ನಿನಗೆ ಅವನಲ್ಲಿ ಸ್ನೇಹ ಏರ್ಪಟ್ಟಮೇಲೆ ಅವನ ಸಹವಾಸದಿಂದ ಎರಡು ಮಾಸಗಳಲ್ಲಿ ಯಮುನಾನದಿಯಲ್ಲಿ ಸ್ನಾನವನ್ನು ಮಾಡಿರುವಿ. ಒಂದು ಮಾಘಮಾಸ ಸ್ನಾನದಿಂದ ನಿನ್ನ ಪಾಪಗಳ ಪರಿಹಾರವಾಯಿತು. ಇನ್ನೊಂದು ಮಾಘಮಾಸ ಸ್ನಾನದಿಂದ ಸ್ವರ್ಗಲೋಕ ಪ್ರಾಪ್ತಿಯಾಗಿರುವುದು. ನೀನು ಪುಣ್ಯದ ಪ್ರಭಾವದಿಂದ ಸ್ವರ್ಗದಲ್ಲಿ ಸಂತೋಷಪಡುವವನಾಗು. ನಿನ್ನ ಅಣ್ಣನು ನರಕದಲ್ಲಿ ನಾನಾವಿಧವಾದ ವೇದನೆಯನ್ನು ಅನುಭವಿಸಲಿ' ಎಂದನು. ತರುವಾಯ ಯಮದೂತನು ವಿಕುಂಡಲನಿಂದ ಪ್ರಾರ್ಥಿತನಾಗಿ ಸ್ವರ್ಗಲೋಕಕ್ಕೂ ನರಕಕ್ಕೂ ಕಾರಣಗಳಿಂದ ಕರ್ಮಗಳನ್ನು ವಿಸ್ತರಿಸಿ ಹೇಳಿದನು. ತರುವಾಯ ವಿಕುಂಡಲನು ಅಣ್ಣನಿಗೆ ನರಕದಿಂದ ಬಿಡುಗಡೆಯಾಗುವ ಉಪಾಯವನ್ನು ತಿಳಿಸಬೇಕೆಂದು ಪ್ರಾರ್ಥಿಸಿಕೊಂಡನು. ಆಗ ಯಮದೂತನು ಜ್ಞಾನದೃಷ್ಟಿಯಿಂದ ಒಂದು ಕ್ಷಣಹೊತ್ತು ಧ್ಯಾನಮಾಡಿ 'ನೀನು ಕಳೆದುಹೋದ ಎಂಟನೇ ಜನ್ಮದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದಿ. ಆ ಸಮಯದಲ್ಲಿ ಪವಿತ್ರವಾದ ಮಧುವನದಲ್ಲಿ ವಿಶಾಲಿಕ ಎಂಬ ಮುನಿಗಳು ಇದ್ದರು. ಅವರಿಗೆ ರೇವತಿ ಎಂಬ ಹೆಂಡತಿಯಲ್ಲಿ ಧ್ರುವ ಶಶಿ ಬಧ ತಾರ ಜ್ಯೋತಿಷ್ಮಾನ್ ಎಂಬ ಐದು ಜನ ಮಕ್ಕಳಿದ್ದರು. ಅವರು ಗೃಹಸ್ಥಧರ್ಮದಲ್ಲಿ ಆಸಕ್ತರಾಗಿದ್ದರು. ನಿರ್ಮೋಹ, ಜಿತಮಯ, ಧ್ಯಾನಕಾಮ, ಗುಣಾತಿಗ ಎಂಬ ನಾಲ್ಕುಜನ ಮಕ್ಕಳು ಮಾತ್ರ ವಿರಕ್ತರಾಗಿ ಪರಮಹಂಸ ಸನ್ಯಾಸಿಗಳಾಗಿ ಸಂಚರಿಸುತ್ತಿದ್ದರು. ಅವರು ಒಂದುದಿವಸದಲ್ಲಿ ಮಧ್ಯಾಹ್ನದಲ್ಲಿ ವೈಶ್ವದೇವಮಾಡಿ ಅತಿಥಿಗಳನ್ನು ನಿರೀಕ್ಷಿಸುವ ಸಮಯದಲ್ಲಿ ನಿನ್ನ ಮನೆಗೆ ಬಂದರು. ನೀನು ಅವರನ್ನು ಭಕ್ತಿಯಿಂದ ಪೂಜಿಸಿ ಕಾಲನ್ನು ತೊಳೆದು ಶ್ರದ್ಧೆಯಿಂದ ಭೋಜನ ಮಾಡಿಸಿದಿ. ಅವರು ತೃಪ್ತಿಯನ್ನು ಹೊಂದಿದವ ರಾಗಿ ಆ ರಾತ್ರಿಯಲ್ಲಿ ಭಗವಂತನನ್ನು ಧ್ಯಾನಮಾಡುತ್ತಾ ನಿನ್ನ ಮನೆಯಲ್ಲಿಯೇ ಇದ್ದರು. ಇದರಿಂದ ಆ ಜನ್ಮದಲ್ಲಿ ನಿನಗೆ ಬಹುಪುಣ್ಯವು ಬಂದಿರುವುದು. ಅದನ್ನು ನಿನ್ನ ಅಣ್ಣನಿಗೆ ಕೊಟ್ಟಿಯಾದರೆ ಅವನ ನರಕವು ಪರಿಹಾರವಾಗುವುದು' ಎಂದನು. ಅದನ್ನು ಕೇಳಿ ವಿಕುಂಡಲು ಸಂತೋಷದಿಂದ ಅಣ್ಣನಿಗೆ ಆ ಪುಣ್ಯವನ್ನು ಕೊಟ್ಟನು. ಅದರಿಂದ ಅಣ್ಣನು ನರಕದಿಂದ ಬಿಡುಗಡೆಯನ್ನು ಹೊಂದಿದನು. ತರುವಾಯ ಅವರಿಬ್ಬರ ತಲೆಯ ಮೇಲೆಯೂ ದೇವತೆಗಳು ಹೂವಿನ ಮಳೆಯನ್ನು ಸುರಿಸಿದರು ಅವರಿಬ್ಬರು ಸಂತೋಷದಿಂದ ಸ್ವರ್ಗಕ್ಕೆ ಹೋದರು. ಅವರಿಂದ ಚೆನ್ನಾಗಿ ಸತ್ಕೃತನಾಗಿ ಯಮದೂತನು ಯಮಲೋಕಕ್ಕೆ ಹೋದನು. ಈಕಥೆಯನ್ನು ಹೇಳುವವರಿಗೂ ಕೇಳುವವರಿಗೂ ಸಾವಿರ ಗೋದಾನ ಮಾಡಿದ ಪುಣ್ಯವು ಬರುವುದು.

# ದೇವದ್ಯುತಿಯ ಕಥೆ [1]

ಸರಸ್ವತೀ ನದಿಯು ಉದ್ಭವಿಸುವ ಸ್ಥಳವಾದ ಲಕ್ಷಪ್ರಸ್ರವಣ ಎಂಬ ಅರಣ್ಯದಲ್ಲಿ ಬೆಟ್ಟದಲ್ಲಿ ಒಂದು ಆಶ್ರಮವು ಶೋಭಿಸುತ್ತಿತ್ತು. ಆ ವನವು ಅನೇಕ ವಿಧಗಳಾದ ಮರಗಳಿಂದ ಅಲಂಕೃತವಾಗಿತ್ತು. ಆ ಆಶ್ರಮದಲ್ಲಿ ಸುಮಿತ್ರ ಎಂಬ ಬ್ರಾಹ್ಮಣರ ಮಗನಾದ ದೇವದ್ಯುತಿಯೆಂಬ ಮುನಿಗಳು ವಾಸಮಾಡುತ್ತಿದ್ದರು. ಅವರು ಭಗವಂತನ ವರದಿಂದ ಹುಟ್ಟಿದ್ದರು. ಅವರು ಗ್ರೀಷ್ಮಋತುವಿನಲ್ಲಿ ಪಂಚಾಗ್ನಿ ಮಧ್ಯದಲ್ಲಿ ತಪಸ್ಸನ್ನು ಮಾಡುತ್ತಿದ್ದರು. ಸೂರ್ಯನನ್ನು ನೋಡುತ್ತಾ ತಪಸ್ಸನ್ನು ಮಾಡುತ್ತಿದ್ದರು. ಮಳೆಯು ಬರುತ್ತಿರುವಾಗ ಮಳೆಯಲ್ಲಿ ನೆನೆಯುತ್ತಾ ತಪಸ್ಸನ್ನು ಮಾಡುತ್ತಿದ್ದರು. ಛಳಿಗಾಲದಲ್ಲಿ ನೀರಿನಲ್ಲಿ ಮುಳುಗಿಕೊಂಡು ತಪಸ್ಸು ಮಾಡುತ್ತಿದ್ದರು. ಹೀಗೆ ಕಠಿಣವಾದ ತಪಸ್ಸನ್ನು ಮಾಡುತ್ತಿದ್ದರು. ಹೀಗೆಯೇ ಸಾವಿರ ವರ್ಷಗಳಾದವು. ಅವರ ತಪಸ್ಸಿನಿಂದ ಆ ಬೆಟ್ಟವು ಜ್ವಲಿಸಿತು. ಪ್ರಾಣಿಗಳಿಂದ ಅವರ ತಪಸ್ಸನ್ನು ಸಹಿಸಲಿಕ್ಕೆ ಆಗಲಿಲ್ಲ. ತಪಸ್ಸಿನಿಂದ ಅಗ್ನಿಯಂತೆ ಜ್ವಲಿಸುತ್ತಿದ್ದರು. ಅವರ ಆಶ್ರಮದಲ್ಲಿ ಹುಲಿ, ಜಿಂಕೆ ಮೊದಲಾದ ಪ್ರಾಣಿಗಳು ವಿರೋಧರಹಿತಗಳಾಗಿ ಇದ್ದವು. ಅವರು ಮೂರುಹೊತ್ತು ಪರಮಾತ್ಮನನ್ನು ಪೂಜಿಸುತ್ತಿದ್ದರು. ವೇದಮಂತ್ರಗಳಿಂದ ಸಾವಿರಪುಷ್ಪಗಳಿಂದ ಪೂಜಿಸುತ್ತಿದ್ದರು. ಒಂದು ವೈಶಾಖಮಾಸದ ಏಕಾದಶಿಯಲ್ಲಿ ದೇವರಪೂಜೆಯನ್ನು ಮಾಡಿ ವಿಚಿತ್ರವಾಗಿ ದೇವರನ್ನು ಸ್ತುತಿಸಿದರು. ಆಗ ಆ ಸ್ತುತಿಯಿಂದ ಸಂತೋಷಪಟ್ಟು ಪರಮಾತ್ಮನು ಗರುಡಾರೂಢನಾಗಿ ಬಂದು ಪ್ರತ್ಯಕ್ಷನಾದನು. ದೇವದ್ಯುತಿ ಮುನಿಗಳು ಪರಮಾತ್ಮನನ್ನು ನೋಡಿ ರೋಮಾಂಚಿತಗಾತ್ರರಾಗಿ ಕಣ್ಣಿನಲ್ಲಿ ಆನಂದಬಾಷ್ಪವುಳ್ಳವರಾಗಿ ಪರಮಾತ್ಮನಿಗೆ ಉದ್ದಕ್ಕೆ ನಮಸ್ಕರಿಸಿದರು. ಪರಮಾತ್ಮನ ಮೇಲಿನ ಭಕ್ತಿಯಿಂದ ತನ್ನ ಮೈಯನ್ನೇ ಮರೆತರು. ಆಗ ಪರಮಾತ್ಮನು 'ದೇವದ್ಯುತಿಯೇ! ನಿನ್ನ ವಿಷಯವನ್ನು ನಾನು ತಿಳಿದಿರುವೆನು. ನೀನು ನನ್ನ ಭಕ್ತನಾಗಿರುವಿ. ನಾನು ಸಂತುಷ್ಟನಾಗಿರುವೆನು. ಬೇಕಾದ ವರವನ್ನು ಕೇಳಿಕೋ' ಎಂದು ಹೇಳಿದನು. ಅದನ್ನು ಕೇಳಿ ದೇವದ್ಯುತಿಮುನಿಗಳು ತನಗೆ ದೃಢವಾದ ಭಕ್ತಿಯು ಉಂಟಾಗುವಂತೆ ಪ್ರಾರ್ಥಿಸಿದರು. ಪರಮಾತ್ಮನು ಹಾಗೆಯೇ ವರವನ್ನು ಕೊಟ್ಟು ಮರೆಯಾದನು.

ದ್ರಾವಿಡದೇಶದಲ್ಲಿ ಚಂದ್ರವಂಶದಲ್ಲಿ ಚಿತ್ರ ಎಂದು ಹೆಸರುಳ್ಳ ರಾಜನಿದ್ದನು.

---

1. ಪ.ಪು. ಮಾಘ.ಮಾ.ಮಾ.

ಅವನು ಸಾವಿರಾರು ಸ್ತ್ರೀಯರಿಂದ ಸಹಿತ ವಿಹರಿಸುತ್ತಿದ್ದನು. ಬಹುಲೋಭಿಯಾಗಿದ್ದನು. ಕೋಪಿಯಾಗಿದ್ದನು. ಮಂತ್ರಿಗಳು ಹೇಳುವ ಧರ್ಮಯುಕ್ತವಾದ ಮಾತನ್ನು ಕೇಳುತ್ತಿರಲಿಲ್ಲ. ಅವನು ಯಾವಾಗಲೂ ವಿಷ್ಣುವನ್ನು ವಿಷ್ಣುಭಕ್ತರನ್ನು ದ್ವೇಷಿಸುತ್ತಿದ್ದನು. ವಿಷ್ಣುವೆನ್ನುವವನು ಯಾರು? ಎಲ್ಲಿರುವನು? ಯಾರು ಅವನನ್ನು ನೋಡಿದವರು? ಹೀಗೆ ಹೇಳುತ್ತಿದ್ದನು. ಪರಮಾತ್ಮನನ್ನು ಭಜನೆ ಮಾಡುವವರನ್ನು ನೋಡಿದರೆ ಕೋಪಿಸಿಕೊಂಡು ಪೀಡಿಸುತ್ತಿದ್ದನು. ಪಾಷಂಡಮತವುಳ್ಳವನಾಗಿದ್ದನು. ಬ್ರಾಹ್ಮಣರನ್ನೂ ವೇದಗಳನ್ನೂ ವೈದಿಕಕರ್ಮಗಳನ್ನು ಬಹುಮಾನಿಸುತ್ತಿದ್ದಿಲ್ಲ. ದಾನವನ್ನು ಮಾಡುತ್ತಿರಲಿಲ್ಲ. ಅನ್ಯಾಯದಿಂದ ಪ್ರಜೆಗಳನ್ನು ಪೀಡಿಸುತ್ತಿದ್ದನು. ದಯಾಹೀನನಾಗಿದ್ದನು. ಕ್ರೂರನಾಗಿದ್ದನು. ಪುಣ್ಯಕಾರ್ಯವನ್ನು ಮಾಡುತ್ತಿರಲಿಲ್ಲ. ಆಚಾರರಹಿತನು. ಎರಡನೇ ಯಮನಂತೆ ಜನರನ್ನು ಶಿಕ್ಷಿಸುತ್ತಿದ್ದನು. ಹೀಗೆಯೇ ಬಹುಕಾಲವು ಕಳೆದುಹೋದಮೇಲೆ ಆ ರಾಜನು ಮೃತನಾದನು. ಅವನಿಗೆ ವೇದದಲ್ಲಿ ಹೇಳಿದ ರೀತಿಯಾಗಿ ಸಂಸ್ಕಾರವು ನಡೆಯಲಿಲ್ಲ. ಯಮದೂತರು ಅವನನ್ನು ಬಡಿಯುತ್ತಾ ಬೆಂಕಿಯ ಕೆಂಡಗಳು ತುಂಬಿದ ಮಾರ್ಗದಲ್ಲಿ ಎಳೆದುಕೊಂಡು ಹೋದರು. ಸೂರ್ಯನ ಕಿರಣಗಳಿಂದ ಬಿಸಿಯಾಗಿರುವ ಮರದನೆರಳಿನಿಂದ ರಹಿತವಾದ ಬೆಂಕಿಯ ಜ್ವಾಲೆಯಿಂದ ಕೂಡಿದ ದಾರಿಯಲ್ಲಿ ಎಳೆದುಕೊಂಡು ಹೋದರು. ಹೋಗುವಾಗ ಆಯುಧಗಳಿಂದ ಬಡಿದರು. ತೋಳಗಳೂ ನಾಯಿಗಳೂ ಬಂದು ಅವನನ್ನು ಕಚ್ಚಿದವು. ಆ ರಾಜನು ಈ ರೀತಿಯಾಗಿ ಕಷ್ಟಪಡುತ್ತಾ ಇತರ ಪಾಪಿಗಳು ಅಳುವುದನ್ನು ಕೇಳುತ್ತಾ ಯಮಲೋಕಕ್ಕೆ ಹೋದನು. ಅಲ್ಲಿ ಬಹುನರಕಗಳನ್ನು ಅನುಭವಿಸಿದನು. ಪರಮಾತ್ಮನಲ್ಲಿ ದ್ವೇಷಮಾಡಿದ ದೋಷದಿಂದ ಎಪ್ಪತ್ತೊಂದು ಯುಗಗಳವರೆಗೆ ನರಕವನ್ನು ಅನುಭವಿಸಿದನು. ಆಮೇಲೆ ಅವನು ಪರ್ವತದಲ್ಲಿ ಪಿಶಾಚನಾದನು. ಹಸಿವೆಯುಳ್ಳವನಾಗಿ ಎಲ್ಲಾ ಅರಣ್ಯಗಳಲ್ಲಿಯೂ ಸಂಚರಿಸುತ್ತಿದ್ದನು. ಒಂದು ದಿವಸದಲ್ಲಿ ಸಂಚರಿಸುತ್ತಾ ಪೂರ್ವ ಪುಣ್ಯದಿಂದ ಲಕ್ಷ ಪ್ರಸ್ರವಣವೆಂಬ ವನಕ್ಕೆ ಬಂದನು. ಅಲ್ಲಿ ಒಂದು ಮರದ ನೆರಳಿನಲ್ಲಿ ನಿಂತುಕೊಂಡು 'ಹಾ! ನಾನು ಸತ್ತೆನು' ಎಂದು ಗಟ್ಟಿಯಾಗಿ ಘೋರವಾಗಿ ಕೂಗಿಕೊಂಡನು. ಹಸಿವೆದಾಹದಿಂದ ಪೀಡಿತನಾದ ಸರ್ವರಿಗೂ ದ್ರೋಹಿಯಾದ ನನ್ನ ಈ ಜನ್ಮಕ್ಕೆ ಹೇಗೆ ಕೊನೆಯಾಗುವುದು? ಪಾಪ ಸಮುದ್ರದಲ್ಲಿ ಮುಳುಗಿದ ನನಗೆ ಯಾರು ಹಸ್ತವನ್ನು ಕೊಟ್ಟು ಉದ್ಧರಿಸುವರು?' ಎಂದು ಹೇಳುತ್ತಾ ಗಟ್ಟಿಯಾಗಿ ಅಳುವವನಾದನು. ಈ

ರೀತಿಯಾಗಿ ಅವನು ಅಳುವ ಶಬ್ದವು ಅಧ್ಯಯನ ಮಾಡುತ್ತಿದ್ದ ದೇವದ್ಯುತಿಯ ಕಿವಿಗೆ ಬಿದ್ದಿತು. ದೇವದ್ಯುತಿಮುನಿಗಳು ಅಲ್ಲಿಗೆ ಬಂದು ಭಯಂಕರವಾದ ಮುಖವುಳ್ಳ ಪಿಂಗಲಬಣ್ಣವುಳ್ಳ ಮೇಲೆ ನಿಂತಿರುವ ಕೂದಲು ಇರುವ ಎರಡನೇ ಯಮನಂತೆ ಇರುವ ಚಂಚಲವಾದ ನಾಲಿಗೆಯುಳ್ಳ ಚಂಚಲವಾದ ಕಣ್ಣುಗಳುಳ್ಳ ಉದ್ದವಾದ ಮೊಳಕಾಲುಳ್ಳ ವಿಕಾರರೂಪವುಳ್ಳ ಪಿಶಾಚನನ್ನು ನೋಡಿದರು. ಅವನನ್ನು ನೋಡಿ ದೇವದ್ಯುತಿಮುನಿಗಳು ಕುತೂಹಲವುಳ್ಳವರಾಗಿ 'ಭಯಂಕರವಾದ ಆಕಾರವುಳ್ಳ ನೀನು ಯಾರು? ಯಾಕೆ ಅಳುತ್ತಿರುವಿ? ನಿನಗೆ ಇಂತಹ ಅವಸ್ಥೆಯು ಹೇಗೆ ಬಂದಿತು? ನಿನಗೆ ನಾನು ಏನು ಸಹಾಯಮಾಡಬೇಕು? ನನ್ನ ಆಶ್ರಮದಲ್ಲಿ ಪ್ರವೇಶಿಸಿದವರು ಒಬ್ಬರೂ ದುಃಖಪಡುವವರು ಇಲ್ಲ. ಎಲ್ಲರೂ ಸಂತೋಷ ಪಡುವರು. ನಿನ್ನ ದುಃಖದ ಕಾರಣವನ್ನು ಬೇಗನೇ ತಿಳಿಸು' ಎಂದು ಹೇಳಿದರು.

ಪಿಶಾಚನು ಅವರ ಮಾತನ್ನು ಕೇಳಿ ಅಳುವುದನ್ನು ನಿಲ್ಲಿಸಿ ವಿನಯದಿಂದ ಬಗ್ಗಿಕೊಂಡು 'ತಮ್ಮ ಮಾತು ನನ್ನ ಸಂತಾಪವನ್ನು ಪರಿಹರಿಸಿತು. ನಾನು ಪೂರ್ವದಲ್ಲಿ ಮಾಡಿದ ಪುಣ್ಯದಿಂದ ತಮ್ಮ ದರ್ಶನವಾಯಿತು. ಪುಣ್ಯಮಾಡದೆ ಇದ್ದರೆ ತಮ್ಮಂತಹ ಸಜ್ಜನರನ್ನು ನೋಡಲಿಕ್ಕೆ ಆಗಲಾರದು. ನಾನು ಭಗವಂತನ ದ್ವೇಷವನ್ನು ಮಾಡಿ ಈ ಅವಸ್ಥೆಯನ್ನು ಹೊಂದಿದೆನು. ಯಾವಾತನ ನಾಮಸ್ಮರಣೆಯಿಂದಲೇ ಮೋಕ್ಷವನ್ನು ಹೊಂದುವರೋ ಅಂತಹ ಪರಮಾತ್ಮನಲ್ಲಿ ಪಾಪಿಯಾದ ನನಗೆ ದ್ವೇಷವುಂಟಾ ಯಿತು. ಯಾವಾತನು ಸಮಸ್ತರನ್ನು ಪರಿಪಾಲಿಸುವನೋ ಧರ್ಮವನ್ನು ರಕ್ಷಿಸು ವನೋ ಎಲ್ಲರ ಅಂತರ್ಯಾಮಿಯಾಗಿರುವನೋ ಎಲ್ಲರೂ ಮಾಡಿದ ಕರ್ಮಗಳಿಗೆ ಫಲವನ್ನು ಕೊಡುವವನೋ, ವೇದ ಪ್ರತಿಪಾದ್ಯನೋ, ಯಾವಾತನನ್ನು ಕುರಿತು ಸಜ್ಜನರು ಅರಣ್ಯದಲ್ಲಿ ತಪಸ್ಸು ಮಾಡುವರೋ ಬ್ರಹ್ಮಾದಿದೇವತೆಗಳು ಯಾರನ್ನು ಪೂಜಿಸುವರೋ ಅಂತಹ ಸರ್ವೋತ್ತಮನಾದ ಪರಮಾತ್ಮನಲ್ಲಿ ದ್ವೇಷವನ್ನು ಮಾಡಿರುವೆನು. ನಾನು ಪೂರ್ವದಲ್ಲಿ ಮಾಡಿದ ಪುಣ್ಯವೆಲ್ಲವೂ ಪರಮಾತ್ಮನ ದ್ವೇಷವೆಂಬ ಅಗ್ನಿಯಿಂದ ಭಸ್ಮವಾಗಿ ಹೋಯಿತು. ಇನ್ನು ಹೇಗಾದರೂ ನನ್ನ ಈ ಪಾಪದ ಕೊನೆಯನ್ನು ಕಂಡವನಾದರೆ ಆಮೇಲೆ ನಾರಾಯಣನನ್ನು ಹೊರತು ಮತ್ತೆ ಯಾರನ್ನು ಸ್ಮರಿಸಲಾರೆನು. ಪರಮಾತ್ಮನ ದ್ವೇಷದಿಂದ ಬಹು ನರಕ ದುಃಖವನ್ನು ಹೊಂದಿದೆನು. ನರಕದಿಂದ ಬಂದು ಪಶುವಾಗಿ ಹುಟ್ಟಿದೆನು. ಆಮೇಲೆ ಪಿಶಾಚ ಜನ್ಮವನ್ನು ಹೊಂದಿದೆನು. ಯಾವುದೋ ಪೂರ್ವಪುಣ್ಯದಿಂದ ಈಗ ನಿಮ್ಮ ಸಮೀಪಕ್ಕೆ ಬಂದಿರುವೆನು. ನಿಮ್ಮ ದರ್ಶನದಿಂದ ನನ್ನ ದುಃಖವು ಪರಿಹೃತವಾಯಿತು. ಈಗ ನನ್ನ

ಪಿಶಾಚಜನ್ಮ ನಿವೃತ್ತಿಗೆ ಕಾರಣವನ್ನು ಹೇಳುವವರಾಗಬೇಕು. ತಮ್ಮಂತಹರು ಪರೋಪಕಾರಕ್ಕೆ ಹಿಂದೆಗೆಯುವವರಲ್ಲ' ಎಂದು ಹೇಳಿದನು.

ಆಗ ದೇವದ್ಯುತಿ ಮುನಿಗಳು 'ದೇವರ ಶಕ್ತಿಯು ದೇವಾಸುರ ಮನುಷ್ಯರನ್ನು ಮೋಹಗೊಳಿಸುವುದು. ಆದರಿಂದ ದೇವರಲ್ಲಿಯೂ ದ್ವೇಷವುಂಟಾಗುವುದಲ್ಲಾ! ಯಾವಾತನು ಸಮಸ್ತ ಜಗತ್ತನ್ನೂ ಸೃಷ್ಟಿಮಾಡಿದವನು. ಸಂಹಾರ ಮಾಡಿದವನು. ರಕ್ಷಣೆ ಮಾಡಿದವನು. ಸರ್ವರಿಗೂ ಸ್ವಾಮಿಯಾದವನು. ಅಂತಹ ಪರಮಾತ್ಮನನ್ನು ಯಾವ ಮೂಢನು ಏಕೆ ದ್ವೇಷಿಸುವನು. ಸರ್ವಕರ್ಮಗಳನ್ನು ಯಾವಾತನಿಗೆ ಸಮರ್ಪಿಸಿದರೆ ಸಫಲವಾಗುವುವೋ ಅಂತಹ ಪರಮಾತ್ಮನನ್ನು ದ್ವೇಷಿಸಿದನು. ಹೇಗೆ ದುರ್ಗತಿಯನ್ನು ಹೊಂದದೆ ಇರುವನು? ಯಾರು ಪರಮಾತ್ಮನನ್ನು ವೇದಗಳನ್ನು ನಿಂದಿಸುವರೋ ಅವರೆಲ್ಲರೂ ನರಕವನ್ನು ಹೊಂದಿಯೇ ಹೊಂದುವರು. ಹೇಗೆ ಈ ದ್ರಾವಿಡರಾಜನೇ ಜಗದ್ಗುರುವಾದ ಭಗವಂತನನ್ನು ದ್ವೇಷಿಸಿ ನರಕವನ್ನು ಹೊಂದಿದನು. ಆದುದರಿಂದ ಪರಮಾತ್ಮನಲ್ಲಿಯೂ ದೇವತೆಗಳಲ್ಲಿಯೂ ಗೋವುಗಳಲ್ಲಿಯೂ ಬ್ರಾಹ್ಮಣರಲ್ಲಿಯೂ ದ್ವೇಷವನ್ನು ಮಾಡಬಾರದು. ವೇದಗಳಲ್ಲಿ ಮಾಡಬಾರದು ಎಂದು ಹೇಳಿದ ಕಾರ್ಯವನ್ನು ಮಾಡಬಾರದು' ಎಂದು ಹೇಳಿಕೊಳ್ಳುವವರಾಗಿ ಪಿಶಾಚನೊಡನೆ 'ಎಲಾ! ನೀನು ಮಾಘಮಾಸವನ್ನು ವಿಚಾರಿಸಿಕೊಂಡು ಪ್ರಯಾಗಕ್ಕೆ ಹೋಗು. ಅಲ್ಲಿ ನಿಶ್ಚಯವಾಗಿಯೂ ನಿನಗೆ ಪಿಶಾಚ ಜನ್ಮದಿಂದ ಬಿಡುಗಡೆಯಾಗುವುದು. ಅಲ್ಲಿ ಸ್ನಾನ ಮಾಡಿದವರು ಸ್ವರ್ಗವನ್ನು ಹೊಂದುವರೆಂದು ಶ್ರುತಿಯಲ್ಲಿಯೇ ಹೇಳುತ್ತದೆ. ಪ್ರಯಾಗ ಸ್ನಾನಕ್ಕಿಂತ ಹೆಚ್ಚಿನ ಪ್ರಾಯಶ್ಚಿತ್ತವಿಲ್ಲ. ಪ್ರಯಾಗವು ಸ್ವರ್ಗಮೋಕ್ಷಗಳಿಗೆ ಕಾರಣವಾದದ್ದು. ಅಲ್ಲಿಯ ಮಹಿಮೆಯನ್ನು ಹೇಳಲಿಕ್ಕೇ ಸಾಧ್ಯವಾಗಲಾರದು. ಅಲ್ಲಿಯ ನೀರಿನ ಸ್ಪರ್ಶದಿಂದ ಒಬ್ಬ ಕೇರಳದೇಶದ ಬ್ರಾಹ್ಮಣನು ಪ್ರೇತಜನ್ಮದಿಂದ ಬಿಡಲ್ಪಟ್ಟನು' ಎಂದು ಹೇಳಿ ಆ ಕೇರಲದೇಶದ ಬ್ರಾಹ್ಮಣನ ಕಥೆಯನ್ನು ವಿಸ್ತಾರವಾಗಿ ಹೇಳಿದರು. ತರುವಾಯ ಆಪಿಶಾಚನು ದೇವದ್ಯುತಿ ಮುನಿಗಳಿಗೆ ನಮಸ್ಕರಿಸಿ ಬೇಗನೇ ಪ್ರಯಾಗಕ್ಕೆ ಹೋದನು. ಅಲ್ಲಿ ಗಂಗಾ, ಯಮುನಾ, ಸರಸ್ವತೀ ಸಂಗಮದಲ್ಲಿ ಮಾಘಮಾಸದಲ್ಲಿ ಸ್ನಾನ ಮಾಡಿದನು. ಆದರಿಂದ ಪಾಪರಹಿತನಾಗಿ ದ್ವೇಷರಹಿತನಾಗಿ ಭಕ್ತಿಯಿಂದ ನಾರಾಯಣನನ್ನು ಸ್ತುತಿಸುತ್ತಾ ಗಂಧರ್ವರಿಂದ ಸ್ತೋತ್ರ ಮಾಡಲ್ಪಡುವವನಾಗಿ ಉತ್ತಮವಾದ ವಿಮಾನದಲ್ಲಿ ಕೂತುಕೊಂಡು ಸಂತೋಷದಿಂದ ಇಂದ್ರದೇವರ ಪಟ್ಟಣಕ್ಕೆ ಹೋದನು.



ರೀತಿಯಾಗಿ ಅವನು ಅಳುವ ಶಬ್ದವು ಅಧ್ಯಯನ ಮಾಡುತ್ತಿದ್ದ ದೇವದ್ಯುತಿಯ ಕಿವಿಗೆ ಬಿದ್ದಿತು. ದೇವದ್ಯುತಿಮುನಿಗಳು ಅಲ್ಲಿಗೆ ಬಂದು ಭಯಂಕರವಾದ ಮುಖವುಳ್ಳ ಪಿಂಗಲಬಣ್ಣವುಳ್ಳ ಮೇಲೆ ನಿಂತಿರುವ ಕೂದಲು ಇರುವ ಎರಡನೇ ಯಮನಂತೆ ಇರುವ ಚಂಚಲವಾದ ನಾಲಿಗೆಯುಳ್ಳ ಚಂಚಲವಾದ ಕಣ್ಣುಗಳುಳ್ಳ ಉದ್ದವಾದ ಮೊಳಕಾಲುಳ್ಳ ವಿಕಾರರೂಪವುಳ್ಳ ಪಿಶಾಚನನ್ನು ನೋಡಿದರು. ಅವನನ್ನು ನೋಡಿ ದೇವದ್ಯುತಿಮುನಿಗಳು ಕುತೂಹಲವುಳ್ಳವರಾಗಿ 'ಭಯಂಕರವಾದ ಆಕಾರವುಳ್ಳ ನೀನು ಯಾರು? ಯಾಕೆ ಅಳುತ್ತಿರುವಿ? ನಿನಗೆ ಇಂತಹ ಅವಸ್ಥೆಯು ಹೇಗೆ ಬಂದಿತು? ನಿನಗೆ ನಾನು ಏನು ಸಹಾಯಮಾಡಬೇಕು? ನನ್ನ ಆಶ್ರಮದಲ್ಲಿ ಪ್ರವೇಶಿಸಿದವರು ಒಬ್ಬರೂ ದುಃಖಪಡುವವರು ಇಲ್ಲ. ಎಲ್ಲರೂ ಸಂತೋಷ ಪಡುವರು. ನಿನ್ನ ದುಃಖದ ಕಾರಣವನ್ನು ಬೇಗನೇ ತಿಳಿಸು' ಎಂದು ಹೇಳಿದರು.

ಪಿಶಾಚನು ಅವರ ಮಾತನ್ನು ಕೇಳಿ ಅಳುವುದನ್ನು ನಿಲ್ಲಿಸಿ ವಿನಯದಿಂದ ಬಗ್ಗಿಕೊಂಡು 'ತಮ್ಮ ಮಾತು ನನ್ನ ಸಂತಾಪವನ್ನು ಪರಿಹರಿಸಿತು. ನಾನು ಪೂರ್ವದಲ್ಲಿ ಮಾಡಿದ ಪುಣ್ಯದಿಂದ ತಮ್ಮ ದರ್ಶನವಾಯಿತು. ಪುಣ್ಯಮಾಡದೆ ಇದ್ದರೆ ತಮ್ಮಂತಹ ಸಜ್ಜನರನ್ನು ನೋಡಲಿಕ್ಕೆ ಆಗಲಾರದು. ನಾನು ಭಗವಂತನ ದ್ವೇಷವನ್ನು ಮಾಡಿ ಈ ಅವಸ್ಥೆಯನ್ನು ಹೊಂದಿದೆನು. ಯಾವಾತನ ನಾಮಸ್ಮರಣೆಯಿಂದಲೇ ಮೋಕ್ಷವನ್ನು ಹೊಂದುವರೋ ಅಂತಹ ಪರಮಾತ್ಮನಲ್ಲಿ ಪಾಪಿಯಾದ ನನಗೆ ದ್ವೇಷವುಂಟಾ ಯಿತು. ಯಾವಾತನು ಸಮಸ್ತರನ್ನು ಪರಿಪಾಲಿಸುವನೋ ಧರ್ಮವನ್ನು ರಕ್ಷಿಸು ವನೋ ಎಲ್ಲರ ಅಂತರ್ಯಾಮಿಯಾಗಿರುವನೋ ಎಲ್ಲರೂ ಮಾಡಿದ ಕರ್ಮಗಳಿಗೆ ಫಲವನ್ನು ಕೊಡುವವನೋ, ವೇದ ಪ್ರತಿಪಾದ್ಯನೋ, ಯಾವಾತನನ್ನು ಕುರಿತು ಸಜ್ಜನರು ಅರಣ್ಯದಲ್ಲಿ ತಪಸ್ಸು ಮಾಡುವರೋ ಬ್ರಹ್ಮಾದಿದೇವತೆಗಳು ಯಾರನ್ನು ಪೂಜಿಸುವರೋ ಅಂತಹ ಸರ್ವೋತ್ತಮನಾದ ಪರಮಾತ್ಮನಲ್ಲಿ ದ್ವೇಷವನ್ನು ಮಾಡಿರುವೆನು. ನಾನು ಪೂರ್ವದಲ್ಲಿ ಮಾಡಿದ ಪುಣ್ಯವೆಲ್ಲವೂ ಪರಮಾತ್ಮನ ದ್ವೇಷವೆಂಬ ಅಗ್ನಿಯಿಂದ ಭಸ್ಮವಾಗಿ ಹೋಯಿತು. ಇನ್ನು ಹೇಗಾದರೂ ನನ್ನ ಈ ಪಾಪದ ಕೊನೆಯನ್ನು ಕಂಡವನಾದರೆ ಆಮೇಲೆ ನಾರಾಯಣನನ್ನು ಹೊರತು ಮತ್ತೆ ಯಾರನ್ನು ಸ್ಮರಿಸಲಾರೆನು. ಪರಮಾತ್ಮನ ದ್ವೇಷದಿಂದ ಬಹು ನರಕ ದುಃಖವನ್ನು ಹೊಂದಿದೆನು. ನರಕದಿಂದ ಬಂದು ಪಶುವಾಗಿ ಹುಟ್ಟಿದೆನು. ಆಮೇಲೆ ಪಿಶಾಚ ಜನ್ಮವನ್ನು ಹೊಂದಿದೆನು. ಯಾವುದೋ ಪೂರ್ವಪುಣ್ಯದಿಂದ ಈಗ ನಿಮ್ಮ ಸಮೀಪಕ್ಕೆ ಬಂದಿರುವೆನು. ನಿಮ್ಮ ದರ್ಶನದಿಂದ ನನ್ನ ದುಃಖವು ಪರಿಹೃತವಾಯಿತು. ಈಗ ನನ್ನ

ಪಿಶಾಚಜನ್ಮ ನಿವೃತ್ತಿಗೆ ಕಾರಣವನ್ನು ಹೇಳುವವರಾಗಬೇಕು. ತಮ್ಮಂತಹರು ಪರೋಪಕಾರಕ್ಕೆ ಹಿಂದೆಗೆಯುವವರಲ್ಲ' ಎಂದು ಹೇಳಿದನು.

ಆಗ ದೇವದ್ಯುತಿ ಮುನಿಗಳು 'ದೇವರ ಶಕ್ತಿಯು ದೇವಾಸುರ ಮನುಷ್ಯರನ್ನು ಮೋಹಗೊಳಿಸುವುದು. ಆದರಿಂದ ದೇವರಲ್ಲಿಯೂ ದ್ವೇಷವುಂಟಾಗುವುದಲ್ಲಾ! ಯಾವಾತನು ಸಮಸ್ತ ಜಗತ್ತನ್ನೂ ಸೃಷ್ಟಿಮಾಡಿದವನು. ಸಂಹಾರ ಮಾಡಿದವನು. ರಕ್ಷಣೆ ಮಾಡಿದವನು. ಸರ್ವರಿಗೂ ಸ್ವಾಮಿಯಾದವನು. ಅಂತಹ ಪರಮಾತ್ಮನನ್ನು ಯಾವ ಮೂಢನು ಏಕೆ ದ್ವೇಷಿಸುವನು. ಸರ್ವಕರ್ಮಗಳನ್ನು ಯಾವಾತನಿಗೆ ಸಮರ್ಪಿಸಿದರೆ ಸಫಲವಾಗುವುವೋ ಅಂತಹ ಪರಮಾತ್ಮನನ್ನು ದ್ವೇಷಿಸಿದನು. ಹೇಗೆ ದುರ್ಗತಿಯನ್ನು ಹೊಂದದೆ ಇರುವನು? ಯಾರು ಪರಮಾತ್ಮನನ್ನು ವೇದಗಳನ್ನು ನಿಂದಿಸುವರೋ ಅವರೆಲ್ಲರೂ ನರಕವನ್ನು ಹೊಂದಿಯೇ ಹೊಂದುವರು. ಹೇಗೆ ಈ ದ್ರಾವಿಡರಾಜನೇ ಜಗದ್ಗುರುವಾದ ಭಗವಂತನನ್ನು ದ್ವೇಷಿಸಿ ನರಕವನ್ನು ಹೊಂದಿದನು. ಆದುದರಿಂದ ಪರಮಾತ್ಮನಲ್ಲಿಯೂ ದೇವತೆಗಳಲ್ಲಿಯೂ ಗೋವುಗಳಲ್ಲಿಯೂ ಬ್ರಾಹ್ಮಣರಲ್ಲಿಯೂ ದ್ವೇಷವನ್ನು ಮಾಡಬಾರದು. ವೇದಗಳಲ್ಲಿ ಮಾಡಬಾರದು ಎಂದು ಹೇಳಿದ ಕಾರ್ಯವನ್ನು ಮಾಡಬಾರದು' ಎಂದು ಹೇಳಿಕೊಳ್ಳುವವರಾಗಿ ಪಿಶಾಚನೊಡನೆ 'ಎಲಾ! ನೀನು ಮಾಘಮಾಸವನ್ನು ವಿಚಾರಿಸಿಕೊಂಡು ಪ್ರಯಾಗಕ್ಕೆ ಹೋಗು. ಅಲ್ಲಿ ನಿಶ್ಚಯವಾಗಿಯೂ ನಿನಗೆ ಪಿಶಾಚ ಜನ್ಮದಿಂದ ಬಿಡುಗಡೆಯಾಗುವುದು. ಅಲ್ಲಿ ಸ್ನಾನ ಮಾಡಿದವರು ಸ್ವರ್ಗವನ್ನು ಹೊಂದುವರೆಂದು ಶ್ರುತಿಯಲ್ಲಿಯೇ ಹೇಳುತ್ತದೆ. ಪ್ರಯಾಗ ಸ್ನಾನಕ್ಕಿಂತ ಹೆಚ್ಚಿನ ಪ್ರಾಯಶ್ಚಿತ್ತವಿಲ್ಲ. ಪ್ರಯಾಗವು ಸ್ವರ್ಗಮೋಕ್ಷಗಳಿಗೆ ಕಾರಣವಾದದ್ದು. ಅಲ್ಲಿಯ ಮಹಿಮೆಯನ್ನು ಹೇಳಲಿಕ್ಕೇ ಸಾಧ್ಯವಾಗಲಾರದು. ಅಲ್ಲಿಯ ನೀರಿನ ಸ್ಪರ್ಶದಿಂದ ಒಬ್ಬ ಕೇರಳದೇಶದ ಬ್ರಾಹ್ಮಣನು ಪ್ರೇತಜನ್ಮದಿಂದ ಬಿಡಲ್ಪಟ್ಟನು' ಎಂದು ಹೇಳಿ ಆ ಕೇರಲದೇಶದ ಬ್ರಾಹ್ಮಣನ ಕಥೆಯನ್ನು ವಿಸ್ತಾರವಾಗಿ ಹೇಳಿದರು. ತರುವಾಯ ಆಪಿಶಾಚನು ದೇವದ್ಯುತಿ ಮುನಿಗಳಿಗೆ ನಮಸ್ಕರಿಸಿ ಬೇಗನೇ ಪ್ರಯಾಗಕ್ಕೆ ಹೋದನು. ಅಲ್ಲಿ ಗಂಗಾ, ಯಮುನಾ, ಸರಸ್ವತೀ ಸಂಗಮದಲ್ಲಿ ಮಾಘಮಾಸದಲ್ಲಿ ಸ್ನಾನ ಮಾಡಿದನು. ಆದರಿಂದ ಪಾಪರಹಿತನಾಗಿ ದ್ವೇಷರಹಿತನಾಗಿ ಭಕ್ತಿಯಿಂದ ನಾರಾಯಣನನ್ನು ಸ್ತುತಿಸುತ್ತಾ ಗಂಧರ್ವರಿಂದ ಸ್ತೋತ್ರ ಮಾಡಲ್ಪಡುವವನಾಗಿ ಉತ್ತಮವಾದ ವಿಮಾನದಲ್ಲಿ ಕೂತುಕೊಂಡು ಸಂತೋಷದಿಂದ ಇಂದ್ರದೇವರ ಪಟ್ಟಣಕ್ಕೆ ಹೋದನು.



# ಅರುಂಧತಿಯ ಕಥೆಯು [1]

ಬ್ರಹ್ಮರ್ಷಿವಸಿಷ್ಠರ ಪತ್ನಿಯಾದ ಅರುಂಧತಿಯು ಪತಿವ್ರತಾಸ್ತ್ರೀಯರಲ್ಲಿ ಪ್ರಸಿದ್ಧರಾಗಿರುವರು. ವೈವಾಹಿಕ ಶುಭಸಂದರ್ಭದಲ್ಲಿ ಇವಳ ನಾಕ್ಷತ್ರಿಕದರ್ಶನವೂ ಕೂಡ ವಧೂವರರಿಗೆ ಸೌಭಾಗ್ಯಪ್ರದವೆಂದು ಆರ್ಷವಿವಾಹ ಸಂಸ್ಕಾರದಲ್ಲಿ ಹೇಳಿರುತ್ತದೆ.

ಹಿಂದಕ್ಕೆ ವಸಿಷ್ಠ ಮೊದಲಾದ ಮಹರ್ಷಿಗಳು ದೊಡ್ಡ ಯಜ್ಞವೊಂದನ್ನು ಮಾಡಿದಾಗ ಇಂದ್ರಾದಿದೇವತೆಗಳು ಸೋಮಪಾನವನ್ನು ಮಾಡಲಿಕ್ಕೆ ತಾವೇ ಬಂದಿದ್ದರು. ಸೂರ್ಯಮಂಡಲದಿಂದ ಎದ್ದು ಬಂದ ಆವಹನೀಯ ಅಗ್ನಿಯು ಮಹರ್ಷಿಗಳ ಮಂತ್ರಪೂತವಾದ ತುಪ್ಪದ ಆಹುತಿಯಿಂದ ಸಮೃದ್ಧನಾದಾಗ ಅವನ ಕಣ್ಣಿಗೆ ಯಜ್ಞಕುಂಡದ ಸುತ್ತಲೂ ಋಷಿಗಳ ಪಕ್ಕದ್ದಲ್ಲಿಯೇ ಕೂತಿದ್ದ ಅರುಂಧತಿ ಮೊದಲಾದ ಋಷಿಗಳ ಪತ್ನಿಯರು ಕಂಡುಬಂದರು. ಅವರ ಸೌಂದರ್ಯವನ್ನು ನೋಡಿ ಅಗ್ನಿಯು ಕಾಮಬಾಣವಶನಾದನು. ಅವನು ಆವಹನೀಯ ರೂಪದಿಂದ ಅವರನ್ನು ಕಣ್ಣೆತ್ತಿಯೂ ನೋಡಲಿಕ್ಕೆ ಧೈರ್ಯಸಾಲದೆ ಗಾರ್ಹಪತ್ಯಾಗ್ನಿಯ ರೂಪವನ್ನು ಧರಿಸಿ ಋಷಿಗಳೊಂದಿಗೆ ಅವರ ಪತ್ನಿಯರು ಆಹುತಿಗಳನ್ನು ಹಾಕಲು ಬಂದಾಗ ಅವರ ಬೆರಳುಗಳಿಗೆ ತನ್ನ ಜ್ವಾಲೆಯನ್ನು ತಾಗಿಸಿ ಸಂತೋಷಪಟ್ಟನು. ಆ ಅಗ್ನಿಯು ಕಾಮಬಾಧೆಯನ್ನು ತಾಳಲಾರದೆ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ಅಡವಿಗೆ ಹೋದನು. ಅವನ ಅವಸ್ಥೆಯನ್ನು ತಿಳಿದು ಅವನಿಗೆ ಪತ್ನಿಯಾಗಬೇಕೆಂದು ಆಸೆಯುಳ್ಳ ದಕ್ಷಪ್ರಜೇಶ್ವರರ ಮಗಳಾದ ಸ್ವಾಹಾದೇವಿಯು ಕ್ರಮದಿಂದ ಸಪ್ತರ್ಷಿಗಳ ಪತ್ನಿಯರಲ್ಲಿ ಒಬ್ಬೊಬ್ಬಳ ರೂಪವನ್ನು ಧರಿಸಿಕೊಂಡು ಹೋಗಿ ಅಗ್ನಿಯೊಡನೆ ವಿಹರಿಸಿ ತೃಪ್ತಿಪಡಿಸಿದಳು. ಆದರೆ ಎಷ್ಟು ಪ್ರಯತ್ನಪಟ್ಟರೂ ಅರುಂಧತಿಯ ರೂಪವನ್ನು ಮಾತ್ರ ಅವಳಿಂದ ಧರಿಸಲಿಕ್ಕೆ ಆಗಲೇ ಇಲ್ಲ. ಈರೀತಿಯಾದ ಅರುಂಧತಿಯ ಪರಮಪಾತಿವ್ರತ್ಯದಿಂದಲೂ ಅದ್ಭುತವಾದ ತಪಸ್ಸಿನ ಪ್ರಭಾವದಿಂದಲೂ ಅವಳ ರೂಪವನ್ನು ಧರಿಸಲಿಕ್ಕೆ ಆಗಲಿಲ್ಲ. ಆಮೇಲೆ ಈ ವಿಚಾರವು ಸಪ್ತರ್ಷಿಗಳಿಗೆ ತಿಳಿಯಲು ಅರುಂಧತಿಯ ಪಾತಿವ್ರತ್ಯದ ಉಚ್ಚಮಟ್ಟವನ್ನು ಮುಟ್ಟದಿರುವ ತಮ್ಮ ಪತ್ನಿಯರನ್ನು ಬಿಟ್ಟುಬಿಟ್ಟರು. ಆದುದರಿಂದ ಇಂದು ನಾವು ಕಾಣುವ ನಕ್ಷತ್ರಪುಂಜದಲ್ಲಿ ಬೇರೆ ಯಾವ ಋಷಿಪತ್ನಿಯರೂ ಕಾಣದೆ ಅರುಂಧತಿಯು ಮಾತ್ರ ಪ್ರಕಾಶಿಸುತ್ತಿದ್ದಾಳೆ.

---

1. ಪ.

ಭಾಗವತದಲ್ಲಿ ಅರುಂಧತಿಯು ಕರ್ದಮಪ್ರಜೇಶ್ವರರಿಗೆ ದೇವಹೂತಿ ದೇವಿಯಲ್ಲಿ ಮಗಳಾಗಿ ಹುಟ್ಟಿರುವಂತೆ ಹೇಳಿದೆ.

ವಾಯುಪುರಾಣದಲ್ಲಿ ಇವಳು ಕಶ್ಯಪರ ಮಗಳೆಂದೂ ಅವಳಿಗೆ ನಾರದಪರ್ವತ ಎಂಬ ಸಹೋದರರಿದ್ದರೆಂದೂ ಹೇಳಿದೆ. ಕೂರ್ಮಬ್ರಹ್ಮಾಂಡ ಪುರಾಣಗಳಲ್ಲಿ ಕಶ್ಯಪರ ಮಗಳೆಂದೇ ಹೇಳಿ ಇವಳನ್ನು ಹಿರಿಯ ಅಣ್ಣನಾದ ನಾರದರು ವಸಿಷ್ಠರಿಗೆ ಮದುವೆ ಮಾಡಿಕೊಟ್ಟಂತೆ ಹೇಳಿದೆ. ಲಿಂಗಪುರಾಣ ವಿಷ್ಣುಧರ್ಮಪುರಾಣ ಗಳಲ್ಲಿಯೂ ಹೀಗೆಯೇ ಹೇಳಿರುತ್ತದೆ.

ಪದ್ಮಪುರಾಣ ಭವಿಷ್ಯಪುರಾಣಗಳಲ್ಲಿ ಇವಳು ಗೌರೀವ್ರತವನ್ನು ಮಾಡಿ ಅದರ ಪ್ರಭಾವದಿಂದ ವಸಿಷ್ಠರಂತಹ ಬ್ರಹ್ಮರ್ಷಿಗಳನ್ನು ಪತಿಯನ್ನಾಗಿ ಪಡೆದಳು ಇತ್ಯಾದಿ ವಿಷಯಗಳನ್ನು ಕಾಲಿಕಾಪುರಾಣದಲ್ಲಿ ಈ ಪ್ರಕಾರವಾಗಿ ಹೇಳಿದೆ. ಈ ಅರುಂಧತಿಯು ಪೂರ್ವಕಲ್ಪದಲ್ಲಿ ಬ್ರಹ್ಮದೇವರ ಮಾನಸಕುಮಾರಿಯಾದ ಸಂಧ್ಯೆಯಾಗಿದ್ದಳು. ಒಂದು ದಿನ ಸಂಧ್ಯಾಕಾಲದಲ್ಲಿ ಬ್ರಹ್ಮರ್ಷಿವಸಿಷ್ಠರು ಮಂದಾಕಿನೀತಟದಲ್ಲಿ ಸಂಧ್ಯಾವಂದನೆ ಯನ್ನು ಮಾಡುತ್ತಾ ಇದ್ದರು. ಅವರನ್ನು ನೋಡಿ ಸಂಧ್ಯೆಗೆ ತಾನು ಮಾನವಿಯಾಗಿ ಆ ಮಹರ್ಷಿಯ ಮಡದಿಯಾಗಬೇಕೆಂದು ಮನಸ್ಸಾಯಿತು.

ಪಾಂಡುರಂಗ ಕ್ಷೇತ್ರದಲ್ಲಿ ಸಮೀಪದಲ್ಲಿ ಚಂದ್ರಭಾಗಾನದಿಯ ಪುಣ್ಯಾರಣ್ಯದ ಏಕಾಂತ ಆಶ್ರಮದಲ್ಲಿ ಮಹರ್ಷಿ ಮೇಧಾತಿಥಿಗಳು ತಪಸ್ಸನ್ನು ಆಚರಿಸುತ್ತಿದ್ದರು. ಅವರು ಸಂತಾನಕ್ಕಾಗಿ ಒಮ್ಮೆ ಜ್ಯೋತಿಷ್ಟೋಮಯಾಗವನ್ನು ಮಾಡಿದರು. ಆಗ ಬ್ರಹ್ಮಕುಮಾರಿಯಾದ ಆ ಸಂಧ್ಯಾದೇವಿಯೇ ಮೇಧಾತಿಥಿಗಳ ಯಜ್ಞಕುಂಡದಿಂದ ಜನಿಸಿ ಅರುಂಧತಿಯಾಗಿ ಅವತರಿಸಿ ಬಂದಳು. ಅತಿಸುಂದರಿಯಾದ ಆ ಮಗಳ ಕಾಂತಿಯನ್ನು ನೋಡಿ ಮೇಧಾತಿಥಿಗಳಿಗೆ ಬಹಳ ಸಂತೋಷವಾಯಿತು. ಅವಳು ಐದು ವರ್ಷದವಳಾದ ಕೂಡಲೇ ಬ್ರಹ್ಮದೇವರು ಮೇಧಾತಿಥಿಗಳ ಬಳಿಗೆ ಬಂದು ಅವಳನ್ನು ಯಾರಾದರೊಬ್ಬ ಪತಿವ್ರತಾಸ್ತ್ರೀಯ ಹತ್ತಿರ ಶಿಕ್ಷಣಕ್ಕಾಗಿ ಇಡಬೇಕೆಂದು ಆಜ್ಞಾ ಮಾಡಿದರು. ಅದರಂತೆ ಮೇಧಾತಿಥಿಗಳು ಆ ಚಿಕ್ಕವಯಸ್ಸಿನ ಅರುಂಧತಿಯನ್ನು ಸತ್ಯಲೋಕಕ್ಕೆ ಕರೆದೊಯ್ದು ಬ್ರಹ್ಮಪತ್ನಿ ಸಾವಿತ್ರೀದೇವಿಯರ ಬಳಿಯಲ್ಲಿಯೇ ಬಿಟ್ಟುಬಂದರು. ಅಲ್ಲಿ ಅರುಂಧತಿಯು ಜ್ಞಾನ ವಿಜ್ಞಾನ ಸದಾಚಾರ ಇತ್ಯಾದಿ ಸಾಧು ಸ್ವಭಾವವುಳ್ಳವಳಾದಳು. ಏಳು ವರುಷ ಅಲ್ಲಿ ವಿದ್ಯಾಧ್ಯಯನ ಮಾಡಿ ಅವಳು ಹನ್ನೆರಡು ವರ್ಷದವಳಾದಾಗ ಹದಿನಾಲ್ಕು ವಿದ್ಯೆಗಳಲ್ಲಿಯೂ ಪಾರಂಗತಳಾಗಿ ಪ್ರಸಿದ್ಧಳಾದಳು.

ಇವಳು ಒಂದುದಿನ ಹಿಮವತ್ಪರ್ವತದ ಪುಣ್ಯಶಿಖರದಲ್ಲಿರುವ ಮಾನಸ ಸರೋವರದ ದಂಡೆಯ ಮೇಲೆ ಇರುವ ಪುಷ್ಪೋದ್ಯಾನದಲ್ಲಿ ವನದೇವತೆಯಂತೆ ಸಂಚರಿಸುತ್ತಿದ್ದಳು. ಆಗ ಪುಷ್ಪಗಳನ್ನು ಕೊಯ್ಯಲಿಕ್ಕಾಗಿ ಬಂದ ಬಹುಳಾ ಎಂಬ ಅವಳ ಸಖಿಯೂ ಸಾವಿತ್ರೀದೇವಿಯೂ ಇದ್ದರು. ಅದೇ ಮಾನಸಸರೋವರದ ಒಂದು ಕಲ್ಲಿನ ಮೇಲೆ ಕೂತು ವಸಿಷ್ಠರು ತಪಸ್ಸನ್ನು ಮಾಡುತ್ತಿದ್ದರು. ಅವರನ್ನು ನೋಡಿ ಅರಂಧತೀದೇವಿಗೆ ಅವರಲ್ಲಿ ಮನಸ್ಸು ಮೋಹಿತವಾಯಿತು. ಆಮೇಲೆ ಕಣ್ಣುತೆರೆದು ಅವಳನ್ನು ನೋಡಿದ ವಸಿಷ್ಠರಿಗೂ ಹಾಗೆಯೇ ಆಯಿತು. ಆದರೆ ಇದನ್ನು ಇಬ್ಬರೂ ತೋರಿಸಿಕೊಳ್ಳದೆ ಇದ್ದರೂ ಇದನ್ನು ಸಾವಿತ್ರೀದೇವಿಯು ತಿಳಿದು ಈ ವಿಷಯವನ್ನು ಮೇಧಾತಿಥಿಗಳಿಗೆ ತಿಳಿಸಿದಳು. ಅವರು ಬ್ರಹ್ಮದೇವರ ಮುಖಾಂತರ ಈ ವಿಷಯವನ್ನು ನಿಶ್ಚಯಿಸಿ ವಸಿಷ್ಠರಿಗೆ ಅರುಂಧತಿಯನ್ನು ಕೊಟ್ಟು ಮದುವೆ ಮಾಡಿದರು.

ಅರುಂಧತಿಯು ಋಷಿಗಳೊಡನೆ ಅನೇಕ ಧರ್ಮಗಳನ್ನು ಹೇಳಿರುವಳು. ಅರುಂಧತಿಯು ಭಯಂಕರ ಬರಕಾಲವು ಬಂದಾಗ ಮನೆಗೆ ಬಂದ ಅತಿಥಿಗಳಿಗೆ ಆದರದಿಂದ ಸತ್ಕರಿಸಿದಳು. ಅವಳು ಗೃಹಿಣೀಧರ್ಮವನ್ನು ಪರಿಪಾಲಿಸಿದ್ದಕ್ಕೆ ಮಹಾಭಾರತದ ಬದರಪಾಚನ ತೀರ್ಥವು ಉಜ್ವಲ ಸಾಕ್ಷಿಯಾಗಿರುವುದು.

ಹಿಂದೆ ಒಮ್ಮೆ ಅಯಾಚಿತವೃತ್ತಿಯ ಸಪ್ತರ್ಷಿಗಳು ಈ ಅರುಂಧತೀದೇವಿಯನ್ನು ಆಶ್ರಮದಲ್ಲಿ ಇಟ್ಟು ತಾವು ಕಂದಮೂಲಗಳನ್ನು ಫಲಗಳನ್ನು ತರಲು ಹಿಮಾಲಯದ ಸುದೂರವನಾಂತರದಲ್ಲಿ ಪ್ರವೇಶಿಸಿದರು. ತಮ್ಮ ಉಪಜೀವನಸಾಧನವಾದ ಗೆಡ್ಡೆಗೆಣಸುಗಳನ್ನು ಬಹಳವಾಗಿ ಸಂಗ್ರಹಿಸಿಕೊಂಡು ಬರಬೇಕೆಂದು ಆ ಕಾನನದಲ್ಲಿ ಅಲೆಯುತ್ತಿರುವಾಗ ಭಯಂಕರವಾದ ಬರಗಾಲವು ಬಂದಿತು. ಹದಿನೆರಡು ವರ್ಷವಾದರೂ ಒಳ್ಳೇಕಾಲವು ಪ್ರಾಪ್ತವಾಗಲಿಲ್ಲ. ಆಗ ಅವರು ಅಲ್ಲಿಯೇ ಆಶ್ರಮವನ್ನು ಮಾಡಿಕೊಂಡು ತಪಸ್ಸನ್ನು ಮಾಡುತ್ತಾ ಇದ್ದು ಬಿಟ್ಟರು.

ಇಲ್ಲಿ ಏಕಾಕಿನಿಯಾದ ಅರುಂಧತಿಯಾದರೂ ಸಪ್ತರ್ಷಿಗಳು ಬಾರದಕ್ಕೆ ಬೇಸರವನ್ನು ಹೊಂದದೆ ತಪಸ್ಸು ಧ್ಯಾನ ಭಗವಂತನ ಗುಣಗಾನಗಳನ್ನು ಮಾಡುತ್ತಾ ಆಶ್ರಮದಲ್ಲಿಯೇ ವಾಸಮಾಡಿದಳು. ಒಂದುದಿನ ಒಬ್ಬ ತೇಜಸ್ವಿಯಾದ ಬ್ರಾಹ್ಮಣನು ಆ ಆಶ್ರಮದ ಅಂಗಳಕ್ಕೆ ಬಂದು ಭಿಕ್ಷೆಯನ್ನು ಬೇಡಿದನು. ಪರ್ಣಕುಟೀರದ ಉಗ್ರಾಣವು ಬರಿದಾಗಿತ್ತು. ಆದರೂ ಅತಿಥಿಸತ್ಕಾರ ಪರಾಯಣಳಾದ ಅರುಂಧತಿಯು ಬಂದ ಬ್ರಾಹ್ಮಣನ ಎದುರು ಕೆಲವು ಬೋರೆಹಣ್ಣುಗಳನ್ನು ಇಟ್ಟು

ಇವುಗಳನ್ನು ತಾವು ಪರಿಗ್ರಹಿಸಿ ಸಂತುಷ್ಟರಾಗಬೇಕೆಂದು ಬೇಡಿಕೊಂಡಳು. ಆಗ ಆ ಅತಿಥಿಯು ಇವುಗಳನ್ನೇ ಬೇಯಿಸಿಕೊಡು ಎಂದನು. ಅದಕ್ಕೆ ಅವಳು ಹಾಗೆಯೇ ಆಗಲಿ ಎಂದು ಅವುಗಳನ್ನು ಒಲೆಯ ಮೇಲೆ ಇಟ್ಟು ಒಲೆಯಲ್ಲಿ ಬೆಂಕಿಯನ್ನು ಮಾಡಿ ಕುದಿಯಲಿಕ್ಕೆ ಇಟ್ಟಳು. ಆದರೆ ಆ ಕಬ್ಬಿಣದ ಬೋರೇ ಹಣ್ಣುಗಳು ಬೇಯಲೇ ಇಲ್ಲ. ಆಗ ಅವಳು ಹೊರಗೆ ಕುಳಿತ ಅತಿಥಿಗಳು ಏನೆಂದುಕೊಳ್ಳುವರೋ ಎಂಬ ಭಯದಿಂದ ಹೊರಗೆ ಬಂದು ಆ ಬ್ರಾಹ್ಮಣರಿಗೆ ನಮಸ್ಕರಿಸಿ 'ಸ್ವಾಮಿ! ಈ ಫಲವು ಬೇಯುವವರೆಗೆ ತಾವು ನನಗೆ ಸತ್ಕಥಾಶ್ರವಣ ಮಾಡಿಸಬೇಕೆಂದು ಕೇಳಿಕೊಂಡಳು. ಆಗ ಆ ಅತಿಥಿಯು ಶ್ರದ್ಧೆಯಿಂದ ಕೇಳುವ ಅವಳಿಗೆ ವೇದ ವೇದಾಂತ ಪುರಾಣ ಇತಿಹಾಸ ತತ್ತ್ವರಹಸ್ಯಗಳನ್ನು ಅನೇಕ ಸತ್ಕಥಾ ಚರಿತ್ರೆಗಳನ್ನು ಹೇಳಹತ್ತಿದನು. ಉತ್ಸಾಹದಿಂದ ಅವನು ಹೇಳಿದ್ದೆಲ್ಲವನ್ನೂ ಶ್ರದ್ಧೆಯಿಂದ ಕೇಳುತ್ತಿದ್ದಳು. ಈ ಸತ್ಕಥಾಶ್ರವಣವು ಅವಿಚ್ಛಿನ್ನವಾಗಿ ನಡೆಯಿತು. ಹೊರಗೆ ಅನಾವೃಷ್ಟಿಯಿಂದ ನೀರು ನೀರೆಂದು ಜನರು ಪ್ರಾಣ ಬಿಡುತ್ತಿದ್ದರು. ಈ ಆಶ್ರಮದ ಅಂಗಳದಲ್ಲಿ ಮಾತ್ರ ಸತ್ಕಥೆಯ ಭಾಗೀರಥಿಯ ಪ್ರವಾಹವು ನಿತ್ಯವೂ ಹರಿಯುತ್ತಿತ್ತು. ಹೇಳುವ ಅತಿಥಿಯನ್ನೂ ಕೇಳುವ ಒಡತಿಯನ್ನೂ ಈ ಕಥಾಮೃತವು ತಣಿಸುತ್ತಿತ್ತು. ಹೀಗೆ ತಿಂಗಳೆಷ್ಟೋ ಹೊರಳಿದರೂ ಅವರಿಬ್ಬರಿಗೂ ಹಸಿವೆ ನೀರಡಿಕೆಯಾಗಲಿಲ್ಲ. ಹೀಗೆಯೇ ಹನ್ನೆರಡು ವರ್ಷಗಳು ಕಳೆದವು. ಪ್ರತಿದಿನವೂ ಬೋರೆಹಣ್ಣನ್ನು ಬೇಯಿಸುವುದೂ ಬಂದ ಅತಿಥಿಯ ಮುಖದಿಂದ ಸತ್ಕಥಾಶ್ರವಣ ಮಾಡುವುದು ಅರುಂಧತಿಯ ಕರ್ಮವಾಗಿತ್ತು. ಹೀಗೆ ಹನ್ನೆರಡು ವರ್ಷಗಳಾಗಿ ಬರಗಾಲವು ಕಳೆದಮೇಲೆ ಜಗತ್ತಿನಲ್ಲಿ ಮಳೆಯು ಬಂದಿತು. ಆಗಲೇ ವಸಿಷ್ಠರೇ ಮೊದಲಾದ ಸಪ್ತರ್ಷಿಗಳು ಹಣ್ಣುಗೆಡ್ಡೆಗೆಣಸುಗಳನ್ನು ಸಂಗ್ರಹಿಸಿಕೊಂಡು ತಮ್ಮ ಆಶ್ರಮಕ್ಕೆ ಬಂದರು. ಆಗ ಅರುಂಧತಿಗೆ ಋಷಿಗಳ ಕೈಯಲ್ಲಿ ಇದ್ದ ಹಣ್ಣುಹಂಪಲುಗಳನ್ನು ಕಂಡು ಬಹು ಆನಂದವಾಯಿತು. ಅವಳು ಆ ಹಣ್ಣುಗಳಲ್ಲಿ ಉತ್ತಮೋತ್ತಮ ಹಣ್ಣುಗಳನ್ನು ತಂದು ಅತಿಥಿಯ ಎದುರು ಇಟ್ಟು 'ಸ್ವಾಮಿ! ತಮ್ಮನ್ನು ಇಷ್ಟುದಿನ ಕಾಯಿಸಿದ ಅಪರಾಧವನ್ನು ಕ್ಷಮಿಸಬೇಕು. ಈ ಅಲ್ಪಸೇವೆಯನ್ನು ಸ್ವೀಕರಿಸಬೇಕು' ಎಂದು ಹೇಳಿ ಸಾಷ್ಟಾಂಗ ನಮಸ್ಕಾರ ಮಾಡಿದಳು. ನಮಸ್ಕಾರ ಮಾಡಿ ಅವಳು ಎದ್ದಾಗ ತನ್ನ ಮನೆಗೆ ಬಂದು ಕಥಾಶ್ರವಣ ಮಾಡಿಸಿದ ಆ ಅತಿಥಿಯ ತಲೆಯಲ್ಲಿ ಗಂಗೋದಕವೂ ಜಡೆಯಮೇಲೆ ಚಂದ್ರಕಲೆಯೂ ಮೈಮೇಲೆ ಕೃತ್ತಿವಾಸವೂ ಡಮರು ಶೂಲಗಳು ಬೆಳಗುತ್ತಿದ್ದವು. ಸಾಕ್ಷಾತ್ ರುದ್ರದೇವರೇ ಮೂರ್ತಿಮತ್ತಾಗಿ ನಿಂತುಕೊಂಡಿದ್ದರು.

ಆಗ ಸಪ್ತರ್ಷಿಗಳೂ ಆಶ್ಚರ್ಯವುಳ್ಳವರಾಗಿ ರುದ್ರದೇವರಿಗೆ ನಮಸ್ಕಾರ ಮಾಡಿದರು. ಆಗ ರುದ್ರದೇವರು ಅರುಂಧತಿಯ ತಪಸ್ಸನ್ನು ವರ್ಣಿಸಿ ಹೋದರು.



# ಮುದ್ಗಲರ ಕಥೆ

## (ಮಹಾಭಾರತ ವನಪರ್ವ)

ಕುರುಕ್ಷೇತ್ರದಲ್ಲಿ ಮುದ್ಗಲರು ಶಿಲೋಂಛವೃತ್ತಿಯಿಂದ ಜೀವಿಸುತ್ತಾ ಇದ್ದರು. ಗದ್ದೆಯಿಂದ ಯಜಮಾನರು ಪೈರನ್ನು ಕೊಯಿದು ತೆಗೆದುಕೊಂಡು ಹೋದಮೇಲೆ ಅಲ್ಲಿ ಬಿದ್ದಿರುವ ಒಂದೊಂದು ಭತ್ತವನ್ನು ಮಾತ್ರ ಆರಿಸಿಕೊಂಡು ಬಂದು ಮಾಡುವ ಜೀವನಕ್ಕೆ ಉಂಛವೃತ್ತಿಯೆಂದು ಹೆಸರು. ಅಲ್ಲಿ ಭತ್ತದ ಗೊನೆಗಳು ಬಿದ್ದಿದ್ದರೂ ಅದನ್ನು ತೆಗೆದು ಕೊಂಡು ಬಂದು ಜೀವಿಸುವ ವೃತ್ತಿಗೆ ಶಿಲವೃತ್ತಿಯೆಂದು ಹೆಸರು. ಈ ಪ್ರಕಾರವಾದ ವೃತ್ತಿಯಿಂದ ಜೀವಿಸುತ್ತಾ ಮುದ್ಗಲರು ಸತ್ಯವನ್ನೇ ಆಡುವರು. ಒಬ್ಬರ ಮೇಲೆ ಅಸೂಯೆ ಯನ್ನು ಹೊಂದಲಾರರು. ಅತಿಥಿಗಳನ್ನು ಸತ್ಕರಿಸುತ್ತಾ ಇದ್ದರು. ಪಶುಸಂಹಾರಮಾಡದೆ ಇಷ್ಟಿಗಳಿಂದಲೇ ಅಂದರೆ ಇತರ ಧಾನ್ಯಾದಿಗಳಿಂದಲೇ ಸತ್ರಯಾಗವನ್ನು ಮಾಡುವರು. ಪತ್ನೀಪುತ್ರರಿಂದ ಸಹಿತರಾಗಿ ಹದಿನೈದು ದಿವಸಗಳಿಗೆ ಒಂದು ದಿನ ಭೋಜನ ಮಾಡುವರು. ಸ್ವಲ್ಪಸ್ವಲ್ಪವೇ ಸಂಗ್ರಹಮಾಡಿ ಒಂದಷ್ಟು ಧಾನ್ಯಗಳನ್ನು ಸಂಗ್ರಹಿಸುವರು. ಅದರಿಂದ ದರ್ಶಪೂರ್ಣಮಾಸ ಎಂಬ ಅಮಾವಾಸ್ಯೆಯಲ್ಲಿಯೂ ಹುಣ್ಣಿಮೆ ಯಲ್ಲಿಯೂ ಮಾಡುವ ಯಾಗಗಳನ್ನು ಮಾಡುವರು. ಅತಿಥಿಗಳಿಗೆ ಭೋಜನ ಮಾಡಿಸಿ ಉಳಿದದ್ದರಿಂದ ತಾನು ಭೋಜನಮಾಡುವರು. ಒಂದೊಂದು ಹುಣ್ಣಿಮೆ ಅಮಾವಾಸ್ಯೆಗಳಲ್ಲಿಯೂ ಅವರು ಯಾಗದಲ್ಲಿ ಕೊಡುವ ಹವಿಸ್ಸನ್ನು ದೇವತೆಗಳಿಂದ ಸಹಿತರಾಗಿ ಇಂದ್ರದೇವರು ಪ್ರತ್ಯಕ್ಷವಾಗಿ ಬಂದು ಸ್ವೀಕರಿಸುತ್ತಿದ್ದರು. ಅವರು ಈರೀತಿ ಯಾಗವನ್ನು ಮಾಡಿ ಸಂತೋಷಯುಕ್ತವಾದ ಮನಸ್ಸಿನಿಂದ ಅತಿಥಿಗಳಿಗೆ ಭೋಜನವನ್ನು ಮಾಡಿಸುವರು. ಇದ್ದ ಸ್ವಲ್ಪ ಅಕ್ಕಿಯಿಂದ ಬ್ರಾಹ್ಮಣರಿಗೆ ಸಂತೋಷದಿಂದ ಭೋಜನಮಾಡಿಸಲು ಅತಿಥಿಗಳನ್ನು ಕಂಡಂತೆ ಅನ್ನವು ಹೆಚ್ಚಾಗುವುದು. ಎಷ್ಟು ನೂರು ಜನರು ಬಂದರೂ ಆ ಅನ್ನವನ್ನೇ ಊಟಮಾಡುತ್ತಿದ್ದರು. ಅಂದರೆ ಎಷ್ಟು ಜನರು ಬಂದರೂ ಆ ಅನ್ನವೇ

1. ಮ.ಭಾ.ವ.ಪ. 259-261

ಸಾಕಾಗುತ್ತಿತ್ತು. ಆ ಮುನಿಗಳ ದಾನಮಾಡುವ ಶುದ್ಧಮನಸ್ಸಿನಿಂದ ಮಾಡಿದ ಅನ್ನವೇ ಹೆಚ್ಚುತ್ತಿತ್ತು. ಈರೀತಿಯಾಗಿ ಮುದ್ಗಲರು ಧರ್ಮಮಾಡುವುದನ್ನು ದುರ್ವಾಸರು ಕೇಳಿದರು. ಅಂವರು ಹುಚ್ಚರಂತೆ ವೇಷವನ್ನು ಧರಿಸಿಕೊಂಡು ತಲೆಬಿಚ್ಚಿಕೊಂಡು ಕಠಿಣವಾಗಿ ಮಾತಾಡುತ್ತಾ ನಾನಾ ವಿಧವಾಗಿ ಮಾತಾಡುತ್ತಾ ಮುದ್ಗಲರ ಬಳಿಗೆ ಬಂದು ನನಗೆ ಅನ್ನವನ್ನು ಹಾಕು ಎಂದರು. ಆಗ ಮುದ್ಗಲರು ಬರಬೇಕು ಎಂದು ಹೇಳಿ ಬೇಕಾದ ಉಪಚಾರವನ್ನು ಮಾಡಿ ಹಸಿವೆಯಿಂದ ಬಂದಿರುವ ಅವರಿಗೆ ಅನ್ನವನ್ನು ಹಾಕಿದರು. ತರುವಾಯ ಹುಚ್ಚರಂತೆ ವೇಷವುಳ್ಳ ಆ ದುರ್ವಾಸರು ಎಲ್ಲಾ ಅನ್ನವನ್ನೂ ಊಟ ಮಾಡಿದರು. ಊಟಮಾಡಿದ್ದು ಮಾತ್ರವಲ್ಲದೆ ಎಲ್ಲಾ ಎಂಜಲನ್ನೂ ಮುದ್ಗಲರ ಮೈಯೆಲ್ಲಾ ಹಚ್ಚಿದರು. ಹಾಗೆಯೇ ತನ್ನ ಮೈಮೇಲೆಯೂ ಹಚ್ಚಿಕೊಂಡು ನಗುತ್ತಾ ಹಾಡುತ್ತಾ ಹೋದರು. ಈರೀತಿಯಾಗಿ ಮುದ್ಗಲರಿಗೆ ಆ ಪರ್ವಕಾಲದಲ್ಲಿ (ಹುಣ್ಣಿಮೆ ಅಥವಾ ಅಮಾವಾಸ್ಯೆಗೆ ಪರ್ವಕಾಲವೆಂದು ಹೆಸರು) ಉಪವಾಸವಾಯಿತು. ಪರ್ವಕಾಲ ಹೊರತು ಬೇರೆ ದಿವಸದಲ್ಲಿ ಅವರು ಭೋಜನ ಮಾಡಲಾರರು. ಆಮೇಲೆ ಎರಡನೇ ಪರ್ವಕಾಲದಲ್ಲಿಯೂ ದುರ್ವಾಸರು ಬಂದು ಎಲ್ಲವನ್ನೂ ಭೋಜನ ಮಾಡಿದರು. ಇದರಿಂದ ಆಗಲೂ ಮುದ್ಗಲರಿಗೆ ಉಪವಾಸವೇ ಆಯಿತು. ಉಪವಾಸದಿಂದಲೇ ಮತ್ತೊಂದು ಪರ್ವಕಾಲಕ್ಕೋಸ್ಕರ ಉಂಛವೃತ್ತಿಯನ್ನು ಮಾಡಿ ಧಾನ್ಯಸಂಗ್ರಹ ಮಾಡಲಿಕ್ಕೆ ಆರಂಭಿಸಿ ಒಂದು ತಿಂಗಳು ಉಪವಾಸವಾಯಿತು ಎಂದು ಒಂದು ವಿಕಾರವನ್ನೂ ತೋರಿಸಲಿಲ್ಲ. ಅವರಿಗೆ ಮಾತ್ರವಲ್ಲದೆ ಅವರ ಹೆಂಡತಿಗಾಗಲೀ ಅವರ ಮಕ್ಕಳಿಗಾಗಲೀ ಕೋಪವೂ ಬರಲಿಲ್ಲ. ಮಾತ್ಸರ್ಯವೂ ಉಂಟಾಗಲಿಲ್ಲ. ಈರೀತಿಯಾಗಿ ದುರ್ವಾಸರು ಆರು ಪರ್ವಕಾಲದಲ್ಲಿ ಬಂದು ಎಲ್ಲವನ್ನೂ ಭೋಜನ ಮಾಡಿ ಹೋದರು. ಆದರೂ ಮುದ್ಗಲರ ಮನಸ್ಸಿನಲ್ಲಿ ಒಂದು ವಿಕಾರವೂ ಉಂಟಾಗಲಿಲ್ಲ. ಅಂದರೆ ಕೋಪವೋ ಮಾತ್ಸರ್ಯವೋ ಒಂದೂ ಉಂಟಾಗಲಿಲ್ಲ. ಮುದ್ಗಲರ ಮನಃಶುದ್ಧಿಪೂರ್ವಕವಾದ ದಾನವನ್ನು ನೋಡಿ ದುರ್ವಾಸರು ಪ್ರೀತಿಯುಳ್ಳವರಾಗಿ 'ಮುದ್ಗಲ! ನಿನಗೆ ಸಮಾನನಾದ ಮಾತ್ಸರ್ಯರಹಿತನಾಗಿ ದಾನಮಾಡುವವನು ಯಾರೂ ಇರುವುದಿಲ್ಲ. ಎಂತಹ ಜನರಿಗೂ ಹಸಿವೆಯು ಧೈರ್ಯವನ್ನು ಕೆಡಿಸುತ್ತದೆ. ಮನಸ್ಸನ್ನು ನಿಗ್ರಹಿಸುವುದು ಕಷ್ಟ. ನಾಲಗೆಯನ್ನು ಜಯಿಸುವುದು ಕಷ್ಟ. ನೀನು ಶ್ರಮದಿಂದ ಸಂಪಾದಿಸಿದ ಅನ್ನವನ್ನೆಲ್ಲಾ ನನಗೆ ಹಾಕಿದಿ. ಆದರೂ ಮನಸ್ಸಿನಲ್ಲಿ ದುಃಖಪಡಲಿಲ್ಲ. ಇದರಿಂದ ನಾವು ಸಂತುಷ್ಟರಾಗಿದ್ದೇವೆ. ಇಂದ್ರಿಯಜಯವೂ ಧೈರ್ಯವೂ

ಅತಿಥಿಗಳಿಗೆ ಅನ್ನದಾನ ಮಾಡುವುದೂ ಭಗವಂತನಲ್ಲಿ ಭಕ್ತಿಯೂ ಇಂದ್ರಿಯನಿಗ್ರಹವೂ ದಯೆಯೂ ಸತ್ಯವಚನವೂ ಧರ್ಮವೂ ಎಲ್ಲವೂ ನಿನ್ನಲ್ಲಿ ಸ್ಥಿರವಾಗಿ ಇರುವುವು. ನಿನ್ನಂತೆ ಶುದ್ಧವಾದ ಮನಸ್ಸುಳ್ಳವನು ಇನ್ನೊಬ್ಬನು ಇರುವುದಿಲ್ಲ, ಇದರಿಂದ ನೀನು ಉತ್ತಮಲೋಕವನ್ನು ಪಡೆದಿರುವಿ. ಸ್ವರ್ಗದಲ್ಲಿ ಇರುವ ಜನರು ನಿನ್ನ ದಾನವನ್ನು ಹೊಗಳುತ್ತಿರುವರು. ನೀನು ಶರೀರ ಸಹಿತವಾಗಿ ಸ್ವರ್ಗಕ್ಕೆ ಹೋಗುವಿ' ಎಂದರು.

ಈರೀತಿಯಾಗಿ ದುರ್ವಾಸರು ಹೇಳುತ್ತಿರುವ ಸಮಯದಲ್ಲಿಯೇ ಹಂಸ ಸಾರಸ ಎಂಬ ಪಕ್ಷಿಗಳಿಂದ ಕೂಡಿದ ಗಂಟಿಕಟ್ಟಿರುವ ಇಚ್ಛಾನುಸಾರವಾಗಿ ಹೋಗುವ ಸುವಾಸನೆಯಿಂದ ಯುಕ್ತವಾದ ವಿಮಾನದಿಂದ ಒಬ್ಬ ದೇವದೂತನು ಅಲ್ಲಿಗೆ ಬಂದನು. ಮುದ್ಗಲರೊಡನೆ ನಿನ್ನ ಪುಣ್ಯದಿಂದ ಬಂದಿರುವ ವಿಮಾನವಿದು. ನೀನು ಸಿದ್ಧಿಯನ್ನು ಹೊಂದುವಿ. ಈ ವಿಮಾನವನ್ನು ಏರು ಎಂದು ಹೇಳಿದನು. ಈರೀತಿಯಾಗಿ ಹೇಳುವ ದೇವದೂತನೊಡನೆ ಮುದ್ಗಲರು 'ಸ್ವರ್ಗವಾಸಿಗಳ ಗುಣಗಳನ್ನು ಹೇಳು. ಅಲ್ಲಿ ವಾಸಮಾಡುವವರಿಗೆ ಯಾವ ಗುಣಗಳಿವೆ? ಯಾವ ತಪಸ್ಸು ಇದೆ? ಅಲ್ಲಿ ಏನು ಸುಖವಿದೆ? ಏನು ದೋಷವಿದೆ? ಸಜ್ಜನರಿಗೆ ಒಬ್ಬರೊಡನೆ ಏಳು ಹೆಜ್ಜೆ ನಡೆದರೆ ಮಿತ್ರತ್ವವುಂಟಾಗುವುದೆಂದು ಹೇಳುವರು. ನಾನು ಮಿತ್ರಭಾವನೆಯಿಂದ ಕೇಳುವೆನು. ಅಲ್ಲಿರುವ ವಿಷಯಗಳನ್ನೆಲ್ಲಾ ಹೇಳಿದರೆ ಅದನ್ನು ಕೇಳಿ ಆಮೇಲೆ ಸ್ವರ್ಗಕ್ಕೆ ಬರುವ ವಿಷಯದಲ್ಲಿ ನಿಶ್ಚಯಮಾಡುತ್ತೇನೆ' ಎಂದರು.

ಆಗ ದೇವದೂತನು 'ಮಹರ್ಷಿಯೇ! ನೀನು ಸರಿಯಾದ ಬುದ್ಧಿಯುಳ್ಳವನಲ್ಲ. ಏಕೆಂದರೆ ಸ್ವರ್ಗಸುಖವು ಪ್ರಾಪ್ತವಾಗಿರುವಾಗ ಒಂದೂ ತಿಳಿಯದ ಮೂರ್ಖನಂತೆ ವಿಚಾರಿಸುತ್ತಿರುವಿ. ಸ್ವರ್ಗಲೋಕವೆಂಬುದು ಮೇಲೆ ಇರುವ ಲೋಕವು. ಅಲ್ಲಿ ದೇವತೆಗಳ ವಿಮಾನಗಳು ಸಂಚರಿಸುತ್ತಿರುವುವು. ತಪಸ್ಸು ಮಾಡದೆ ಇರುವ ಜನರೂ ಮಹಾಯಜ್ಞಗಳನ್ನು ಮಾಡದೆ ಇದ್ದವರೂ ಸುಳ್ಳು ಹೇಳುವವರೂ ಪರಲೋಕವೇ ಇಲ್ಲವೆನ್ನುವ ನಾಸ್ತಿಕರೂ ಅಲ್ಲಿಗೆ ಹೋಗಲಾರರು. ಧರ್ಮದಲ್ಲಿ ಮನಸ್ಸುಳ್ಳವರು ಮನಸ್ಸನ್ನು ದುಷ್ಟವಿಷಯಗಳಿಗೆ ಹೋಗದಂತೆ ಬಯಸಿದವರೂ ಭಗವಂತನಲ್ಲಿ ಭಕ್ತಿಯುಳ್ಳವರೂ ಇಂದ್ರಿಯಗಳನ್ನೆಲ್ಲಾ ದುರ್ವಿಷಯಗಳಿಗೆ ಹೋಗದಂತೆ ಜಯಿಸಿದವರೂ ದಾನಧರ್ಮಗಳಲ್ಲಿ ಆಸಕ್ತರಾದವರೂ ಶೂರರಾದವರೂ ಆ ಲೋಕಕ್ಕೆ ಹೋಗುವರು. ಅಲ್ಲಿ ದೇವತೆಗಳೂ ಸಾಧ್ಯರೂ ವಿಶ್ವೇದೇವತೆಗಳೂ ಮಹರ್ಷಿಗಳೂ ಯಾಮ ಧಾಮ ಎಂದು ಹೆಸರುಳ್ಳವರೂ ಗಂಧರ್ವರೂ

ಅಪ್ಸರಸ್ತ್ರೀಯರೂ ಇರುವರು. ಇವರಿಗೆಲ್ಲಾ ಬೇರೆ ಬೇರೆಯಾಗಿ ಒಳ್ಳ ಪ್ರಕಾಶವುಳ್ಳ ಲೋಕಗಳಿರುವುವು. ಅಲ್ಲಿ ಬಂಗಾರಮಯವಾದ ಮೇರುಪರ್ವತವಿದೆ. ಬೇಕಾದ ಫಲಪುಷ್ಪಗಳಿಂದ ಸರ್ವದಾ ಯುಕ್ತಿಗಳಾದ ನಂದನಾದಿ ಉದ್ಯಾನಗಳಿವೆ. ಅಲ್ಲಿ ಹಸಿವೆಯಿಂದ ಶ್ರಮವಿಲ್ಲ. ದಾಹವಾಗುವುದಿಲ್ಲ. ಛಳಿಯಿಲ್ಲ. ಬಿಸಿಲು ಇಲ್ಲ. ರೋಗವೂ ಇಲ್ಲ. ಯಾವ ಕೆಟ್ಟಪದಾರ್ಥವೂ ಅಲ್ಲಿ ಇಲ್ಲ. ಸುವಾಸನೆಯೇ ಬರುತ್ತಿರುವುದು. ಕಿವಿಗೆ ಮನೋಹರಗಳಾದ ಶಬ್ದಗಳೇ ಕೇಳಿಸುತ್ತಾ ಇರುವುವು. ಅಲ್ಲಿ ಮುದುಕರಾಗುವುದಿಲ್ಲ. ಶೋಕವಿಲ್ಲ. ಅಳುವುದು ಇಲ್ಲ. ಪುರುಷರು ತಾವು ಮಾಡಿದ ಪುಣ್ಯದಿಂದ ತೈಜಸ ಎಂದರೆ ತೇಜೋಮಯವಾದ ದೇಹವನ್ನು ಹೊಂದುವರು. ತಂದೆತಾಯಿಗಳಿಂದ ಹುಟ್ಟಿದ ದೇಹವಲ್ಲ. ಅಲ್ಲಿ ದೇಹದಲ್ಲಿ ಬೆವರು ಬರಲಾರದು. ದುರ್ವಾಸನೆಯಿಲ್ಲ. ಮಲಮೂತ್ರಗಳು ಇರುವುದಿಲ್ಲ. ಅಲ್ಲಿಯವರ ವಸ್ತ್ರಕ್ಕೆ ಧೂಳಿತಾಗುವುದಿಲ್ಲ. ಅವರು ಧರಿಸಿದ ಹೂವಿನ ಮಾಲೆಗಳು ಬಾಡಿ ಹೋಗುವುದಿಲ್ಲ. ವಿಮಾನದಲ್ಲಿ ಕೂತುಕೊಂಡು ಸಂಚಾರ ಮಾಡುತ್ತಾ ಇರುವರು. ಇನ್ನೂ ಅನೇಕ ಕಾರಣಗಳಿರುವುವು. ಇಂತಹ ಲೋಕವು ನೀನು ದಾನಮಾಡಿದ್ದಕ್ಕೆ ಫಲವಾಗಿ ಸಿಕ್ಕಿದೆ. ಅದನ್ನು ಅನುಭವಿಸು. ಈರೀತಿಯಾಗಿ ಸ್ವರ್ಗದ ಗುಣಗಳನ್ನು ಹೇಳಿದೆನು. ಇನ್ನು ದೋಷವನ್ನೂ ಹೇಳಿಬಿಡುತ್ತೇನೆ. ಭೂಮಿಯಲ್ಲಿ ಮಾಡಿದ ಪುಣ್ಯದ ಫಲವನ್ನು ಅಲ್ಲಿ ಅನುಭವಿಸಬಹುದಲ್ಲದೆ ಅಲ್ಲಿ ಒಂದೂ ಹೆಚ್ಚಿಗೆ ಮಾಡಲಿಕ್ಕೆ ಆಗಲಾರದು. ಇಲ್ಲಿ ಮಾಡಿದ ಪುಣ್ಯವನ್ನೆಲ್ಲಾ ಅಲ್ಲಿ ಅನುಭವಿಸಿಬಿಡುವನು. ಪುಣ್ಯವು ನಷ್ಟವಾದ ಮೇಲೆ ಅಲ್ಲಿಂದ ಕೆಳಗೆ ಬೀಳಬೇಕು. ಅದೊಂದು ದೋಷವಿದೆ. ಕೆಳಗಿನವರಿಗೆ ಮೇಲಿನವರ ತಮಗಿಂತ ಹೆಚ್ಚಾದ ಭೋಗವನ್ನು ನೋಡಿ ತಮಗೆ ಅಂತಹ ಭೋಗಗಳಿಲ್ಲವೆಂದು ಸಂತಾಪವುಂಟಾಗುತ್ತದೆ. ಅವರು ಕೆಳಗೆ ಬೀಳಲಿಕ್ಕೆ ಆಗುವಾಗ ಅವರ ಮೇಲೆ ಧೂಳಿಯು ಅಂಟಿಕೊಳ್ಳುವುದು. ಅವರು ಧರಿಸಿರುವ ಹೂವುಗಳು ಬಾಡಿ ಹೋಗುವುವು. ಆಗ ನಾವು ಕೆಳಗೆ ಬೀಳುವೆವು ಎಂದು ಭಯವುಂಟಾಗುವುದು. ಈರೀತಿಯಾಗಿ ಸ್ವರ್ಗದಲ್ಲಿ ವಾಸಿಸುವವರಿಗೆ ಅನೇಕ ಗುಣಗಳಿವೆ. ದೋಷವು ಸ್ವಲ್ಪ ಮಾತ್ರವಿದೆ. ಮತ್ತೊಂದು ಗುಣವಿದೆ. ಸ್ವರ್ಗದಿಂದ ಕೆಳಗೆ ಬಂದವರು ಮನುಷ್ಯರಾಗಿ ಹುಟ್ಟುವರು. ಒಳ್ಳೇ ವಂಶದಲ್ಲಿ ಹುಟ್ಟುವರು. ಆಗಲೂ ಜ್ಞಾನಸಂಪಾದಿಸದೆ ಇದ್ದರೆ ನೀಚಗತಿಯನ್ನು ಹೊಂದುವರು. ಇಲ್ಲಿ ಮಾಡಿದ ಪುಣ್ಯದ ಫಲವನ್ನು ಸ್ವರ್ಗದಲ್ಲಿ ಅನುಭವಿಸುವುದು. ಇದು ಕರ್ಮಭೂಮಿಯು ಅದು ಫಲಭೂಮಿಯು' ಎಂದು ಹೇಳಿದನು.

ಅದಕ್ಕೆ ಮುದ್ಗಲರು 'ಸ್ವರ್ಗದಲ್ಲಿ ಹೇಳಿದ ದೋಷಗಳು ಪ್ರಬಲವಾಗಿವೆ. ನಿರ್ದೋಷವಾದ ಯಾವಲೋಕವಿದೆಯೋ ಅದನ್ನು ಹೇಳು' ಎಂದರು.

ಅದಕ್ಕೆ ದೇವದೂತನು 'ಬ್ರಹ್ಮದೇವರ ಲೋಕದ ಮೇಲೆ ಭಗವಂತನ ಲೋಕವಿರುವುದು. ಅದು ಶುದ್ಧವಾದ ಲೋಕವು. ಅಂತಹ ವಿಷ್ಣುಲೋಕಕ್ಕೆ ವಿಷಯಾಸಕ್ತರಾದ ಜನರು ಹೋಗಲಾರರು. ದಂಭಲೋಭ ಕೋಪ ಮೋಹ ದ್ರೋಹ ಇಂತಹ ದೋಷವುಳ್ಳವರೂ ಹೋಗಲಾರರು. ಅಹಂಕಾರ ಮಮಕಾರವನ್ನು ಬಿಟ್ಟು ಭಗವಂತನ ಧ್ಯಾನವನ್ನು ಮಾಡಿದವರು ಮಾತ್ರ ಅಲ್ಲಿಗೆ ಹೋಗುವರು. ಈರೀತಿಯಾಗಿ ನಿನ್ನ ಮೇಲಿನ ದಯೆಯಿಂದ ಎಲ್ಲವನ್ನೂ ಹೇಳಿರುವೆನು. ಇನ್ನು ಹೊರಡು. ನಾವು ಬೇಗನೇ ಸ್ವರ್ಗಕ್ಕೆ ಹೋಗುವ' ಎಂದನು.

ಈರೀತಿಯಾಗಿ ದೇವದೂತನ ಮಾತನ್ನು ಕೇಳಿ ಮುದ್ಗಲರು ವಿಚಾರಮಾಡಿ ದೇವದೂತನೊಡನೆ 'ದೇವದೂತನೇ! ನಿನಗೆ ನಮಸ್ಕಾರವು. ನೀನು ಸುಖದಿಂದ ಹೊರಟುಹೋಗು. ಅಂತಹ ಮಹಾದೋಷವುಳ್ಳ ಸ್ವರ್ಗದಿಂದಲೂ ಸ್ವರ್ಗಸುಖದಿಂದಲೂ ನನಗೊಂದೂ ಆಗಬೇಕಾಗಿಲ್ಲ. ಸ್ವರ್ಗವನ್ನು ಹೊಂದಿದವರು ಕೊನೆಗೆ ಅಲ್ಲಿಂದ ಕೆಳಗೆ ಬೀಳುತ್ತಾರೆ ಎಂಬುದು ತುಂಬಾ ಭಯಂಕರವಾಗಿದೆ. ಎಲ್ಲಿಗೆ ಹೋದರೆ ದುಃಖವನ್ನು ಹೊಂದುವುದಿಲ್ಲವೋ! ಹಿಂದೆತಿರುಗಿ ಬರುವುದಿಲ್ಲವೋ ಅಂತಹ ಸ್ಥಾನವನ್ನೇ ನಾನು ಹುಡುಕುವೆನು' ಎಂದು ಹೇಳಿ ಭಗವಂತನ ಧ್ಯಾನವನ್ನು ಮಾಡಿ ಕ್ರಮದಿಂದ ಪರಮಾತ್ಮನ ಅನುಗ್ರಹವನ್ನು ಪಡೆದು ಪರಮಾತ್ಮನ ಲೋಕವನ್ನು ಹೊಂದಿದರು.



# ಪಿತೃ ಪರಿಚ್ಛೇದ

## ಪಿತೃಗಳು ಯಾರು ?

ಪೂರ್ವದಲ್ಲಿ ಶರತಲ್ಪದಲ್ಲಿ ಮಲಗಿರುವ ಭೀಷ್ಮಾಚಾರ್ಯರೊಡನೆ ಪ್ರಶ್ನೆಮಾಡಲು ಭೀಷ್ಮಾಚಾರ್ಯರು ಪಿತೃಗಳನ್ನು ಪೂಜಿಸುವುದರಿಂದ ಅಂದರೆ ಶ್ರಾದ್ಧವನ್ನು ಮಾಡುವುದರಿಂದ ಅವರು ಧರ್ಮಪುಷ್ಟಿ ಮೊದಲಾದ ಬೇಕಾದ ಫಲವನ್ನು ಕೊಡುವರು ಎಂದರು. ಧರ್ಮರಾಜನು 'ತಾತ! ಸತ್ತವರು ಕೆಲವರು ಸ್ವರ್ಗದಲ್ಲಿ

1. ಹ.ವಂ.ಪ.ಅ.16

ಇರುವರು. ಕೆಲವರು ನರಕದಲ್ಲಿರುವರು. ಲೋಕದಲ್ಲಿ ಜನರು ಪಿತೃ, ಪಿತಾಮಹ, ಪ್ರಪಿತಾಮಹ ಈ ಮೂರು ಜನರನ್ನು ಉದ್ದೇಶಿಸಿ ಮೂರು ಪಿಂಡಗಳನ್ನು ಹಾಕಿ ಶ್ರಾದ್ಧವನ್ನು ಮಾಡುತ್ತಾರೆ. ಆ ಶ್ರಾದ್ಧವು ಸತ್ತವರಿಗೆ ಹೇಗೆ ಹೋಗಿ ಸೇರುತ್ತದೆ? ಮತ್ತೂ ಸತ್ತವರು ತಾವೇ ನರಕದಲ್ಲಿದಲ್ಲಿದ್ದರೆ ಶ್ರಾದ್ಧ ಮಾಡಿದವರಿಗೆ ಫಲವನ್ನು ಕೊಡಲಿಕ್ಕೆ ಹೇಗೆ ಸಮರ್ಥರಾಗುತ್ತಾರೆ? ಅಥವಾ ನಾವು ಬೇರೆ ಯಾವ ಪಿತೃಗಳನ್ನು ಪೂಜಿಸುವುದು? ಪಿತೃಗಳ ವಿಷಯವನ್ನು ವಿಸ್ತಾರವಾಗಿ ಹೇಳಬೇಕು ಎಂದು ಕೇಳಿದನು.

ಅದಕ್ಕೆ ಭೀಷ್ಮಾಚಾರ್ಯರು 'ಧರ್ಮರಾಜ! ಈ ವಿಷಯದಲ್ಲಿ ನಾನು ತಿಳಿದ ವಿಷಯವನ್ನು ಹೇಳುತ್ತೇನೆ. ಒಂದು ಬಾರಿ ನಾನು ನನ್ನ ತಂದೆಗೆ ಶ್ರಾದ್ಧವನ್ನು ಮಾಡುತ್ತಿದ್ದೆನು. ಪಿಂಡಪ್ರಧಾನ ಮಾಡುವ ಕಾಲದಲ್ಲಿ ಭೂಮಿಯನ್ನು ಭೇದಿಸಿಕೊಂಡು ನನ್ನ ತಂದೆಯ ಕೈಯು ಮೇಲಕ್ಕೆ ಬಂದಿತು. ನಾನು ತಂದೆಯು ಬದುಕಿರುವಾಗ ಹೇಗೆ ಅವರ ಕೈಯನ್ನು ನೋಡಿದ್ದೆನೋ ಅದೇರೀತಿಯಾಗಿ ತೋಳಸರಿಗೆ ಇತ್ಯಾದಿ ಆಭರಣದಿಂದ ಸಹಿತವಾಗಿ ಕೆಂಪಾದ ಅಂಗೈಯಿಂದ ಕೂಡಿದ ಕೈಯನ್ನು ನೋಡಿದೆನು. ತರುವಾಯ ನಾನು ಯೋಚನೆ ಮಾಡಿ, ಪಿಂಡವನ್ನು ಧರ್ಭೆಯ ಮೇಲೆ ಇಡಬೇಕೆಂದು ಶಾಸ್ತ್ರವಲ್ಲದೆ ಕೈಯಲ್ಲಿ ಕೊಡಬೇಕೆಂದು ಶಾಸ್ತ್ರವಿಲ್ಲ ಎಂದು ನಿಶ್ಚಯಿಸಿ, ಧರ್ಭೆಯ ಮೇಲೆಯೇ ಪಿಂಡವನ್ನು ಇಟ್ಟೆನು. ಆಗ ನನ್ನ ತಂದೆಯ ಕೈಯು ಮರೆಯಾಯಿತು. ಕಣ್ಣಿಗೆ ಕಾಣದಂತೆ ಇದ್ದುಕೊಂಡು ನನ್ನ ತಂದೆಯು ಮಾತಾಡಿದರು. 'ಭೀಷ್ಮ! ನಿನಗೆ ಶಾಸ್ತ್ರದಲ್ಲಿರುವ ದೃಢನಿಶ್ಚಯವನ್ನು ನೋಡಿ ನಾನು ಸಂತೋಷಪಟ್ಟೆನು. ನಿನ್ನನ್ನು ಪರೀಕ್ಷೆ ಮಾಡುವುದಕ್ಕೋಸ್ಕರವೇ ಕೈಯನ್ನು ನೀಡಿದೆನು. ನಿನ್ನಿಂದ ಸತ್ಪುತ್ರವಂತನಾದೆನು. ನಿನ್ನಲ್ಲಿ ಬಹಳ ಸಂತೋಷವುಳ್ಳವನಾಗಿದ್ದೇನೆ. ಬೇಕಾದ ವರಗಳನ್ನು ಕೇಳಿಕೋ' ಎಂದರು. ಮತ್ತು 'ನೀನು ಎಷ್ಟು ಕಾಲ ಬದುಕಿರಬೇಕೆಂದು ಆಸೆಪಡುವಿಯೋ ಅಷ್ಟು ಕಾಲವೂ ನಿನಗೆ ಮರಣವುಂಟಾಗಲಾರದು. ನಿನ್ನ ಇಚ್ಛೆಯನ್ನು ಅನುಸರಿಸಿಯೇ ನಿನಗೆ ಮೃತ್ಯು ಉಂಟಾಗುವುದು. ನಿನಗೆ ಇನ್ನೂ ಯಾವ ವರವನ್ನು ಕೊಡಲಿ? ಕೇಳಿಕೊ' ಎಂದರು. ಆಗ ನಾನು ತಂದೆಗೆ ಕೈಮುಗಿದುಕೊಂಡು 'ನೀವು ನನ್ನಲ್ಲಿ ಸಂತುಷ್ಟರಾಗಿರುವಿರಾದರೆ ನಾನು ಕೃತಾರ್ಥನಾದೆನು. ಇನ್ನೂ ತಾವು ನನಗೆ ಅನುಗ್ರಹ ಮಾಡುವ ಇಚ್ಛಾವುಳ್ಳವರಾಗಿರುವಿರಾದರೆ ತಮ್ಮ ಹತ್ತಿರ ಒಂದು ಪ್ರಶ್ನೆಯನ್ನು ಮಾಡಬೇಕೆಂದು ಇದ್ದೇನೆ' ಎಂದೆನು. ಆಗ ತಂದೆಯು 'ಭೀಷ್ಮ ಯಾವುದನ್ನು ಬೇಕಾದರೂ ಕೇಳು. ನಿನ್ನ

ಸಂದೇಹವನ್ನು ಪರಿಹರಿಸುತ್ತೇನೆ' ಎಂದರು. ಅದಕ್ಕೆ ನಾನು ಪಿತೃಗಳು ಎಂದರೆ ಯಾರು? ನಾನು ಇಲ್ಲಿ ಮಾಡಿದ ಶ್ರಾದ್ಧವು ಅವರನ್ನು ಹೇಗೆ ತೃಪ್ತಿಪಡಿಸುವುದು? ಇತ್ಯಾದಿ ವಿಷಯಗಳನ್ನು ಕೇಳಿದೆನು.

ಅದಕ್ಕೆ ತಂದೆಯು 'ಭೀಷ್ಮ! ನಿನಗೆ ಸಂಕ್ಷೇಪವಾಗಿ ಎಲ್ಲವನ್ನೂ ತಿಳಿಸುವೆನು. ಪಿತೃಗಳು ಹೇಗೆ ಉಂಟಾದರು? ಅವರಿಗೆ ಶ್ರಾದ್ಧ ಮಾಡುವುದರಿಂದ ಏನು ಫಲವುಂಟಾಗುವುದು ಎಂಬುದನ್ನೆಲ್ಲಾ ಹೇಳುವೆನು. ಪಿತೃಗಳು ಎಂದು ಹೆಸರುಳ್ಳವರು ಬೇರೆಯೇ ಇರುವರು. ಅವರು ಮೊದಲು ಬ್ರಹ್ಮದೇವರ ಮಕ್ಕಳು. ಅವರನ್ನು ದೇವತೆಗಳೂ ಮನುಷ್ಯರೂ ಎಲ್ಲರೂ ಪೂಜಿಸುವರು. ಅವರನ್ನು ಕುರಿತು ಶ್ರಾದ್ಧಮಾಡಿದರೆ ಮೃತರಾದ ಜೀವರು ಎಲ್ಲಿ ಇದ್ದರೂ ಅವರಿಗೆ ಅಲ್ಲಿಯೇ ತೃಪ್ತಿಯುಂಟಾಗುವಂತೆ ಮಾಡುವರು. ಎಂದರೆ ಮೃತರಾದವರ ನಾಮಗೋತ್ರಗಳನ್ನು ಹೇಳಿ ಪಿಂಡಪ್ರದಾನ ಮಾಡಿದರೆ ಪಿತೃಗಳು ಮೃತರಾದವರಿಗೆ ತೃಪ್ತಿಪಡಿಸುವರು. ಇದರಿಂದ ಶ್ರಾದ್ಧಮಾಡಿದವನಿಗೆ ಪುಷ್ಟಿಸಂಪತ್ತು ಇತ್ಯಾದಿ ಉಂಟಾಗುವಂತೆ ಮಾಡುವರು. ಇನ್ನು ಹೆಚ್ಚಿನ ವಿಷಯವನ್ನು ಪಿತೃಭಕ್ತರಾದ ಮಾರ್ಕಂಡೇಯರು ಹೇಳುವರು. ನನ್ನ ಅನುಗ್ರಹಕ್ಕಾಗಿ ಈ ದಿವಸ ಶ್ರಾದ್ಧದಲ್ಲಿ ಮಾರ್ಕಂಡೇಯರು ಇಲ್ಲಿಗೆ ಬಂದು ಸೇರಿರುವರು ಎಂದು ಹೇಳಿ ಮರೆಯಾಗಿ ಹೋದರು.



## ಪಿತೃಗಳ ಕಥೆಯು

ಭೀಷ್ಮಾಚಾರ್ಯರು ಮಾರ್ಕಂಡೇಯರೊಡನೆ ಪಿತೃಗಳ ವಿಷಯವಾಗಿ ಪ್ರಶ್ನೆಮಾಡಲು ಭೀಷ್ಮಾಚಾರ್ಯರೊಡನೆ ಮಾರ್ಕಂಡೇಯರು ಹೇಳಿದರು. 'ಭೀಷ್ಮ! ಪಿತೃಗಳ ಮಹಿಮೆಯನ್ನು ಕೇಳು. ನಾನು ಪಿತೃಗಳ ಅನುಗ್ರಹದಿಂದಲೇ ದೀರ್ಘಾಯುಷ್ಯವನ್ನು ಹೊಂದಿರುವೆನು. ಪಿತೃಭಕ್ತಿಯಿಂದಲೇ ಲೋಕದಲ್ಲಿ ಅತ್ಯಂತ ಕೀರ್ತಿಯನ್ನು ಹೊಂದಿರುವೆನು. ನಾನು ಪೂರ್ವದಲ್ಲಿ ಮೇರುಪರ್ವತದ ಮೇಲೆ ಹತ್ತಿ ಅನೇಕ ಸಾವಿರವರ್ಷ ಕಠಿಣವಾದ ತಪಸ್ಸನ್ನು ಮಾಡಿದ್ದೆನು. ಒಂದುದಿವಸದಲ್ಲಿ ಆಕಾಶವನ್ನೇ ಪ್ರಕಾಶಗೊಳಿಸುತ್ತಾ ಬರುತ್ತಿರುವ ಒಂದು ವಿಮಾನವನ್ನು ನೋಡಿದೆನು. ಆ ವಿಮಾನದಲ್ಲಿ ಸೂರ್ಯನಂತೆ ಪ್ರಕಾಶಿಸುತ್ತಿದ್ದ ಒಂದು ವಿಮಾನದಲ್ಲಿ

1. ಹ.ವಂ.ಅ.17

ಅಗ್ನಿಯಂತೆಯೇ ಜ್ವಲಿಸುತ್ತಾ ಮಲಗಿರುವ ಅಂಗುಷ್ಠದಷ್ಟೇ ದೊಡ್ಡವರಾಗಿರುವ ಒಬ್ಬ ಪುರುಷರನ್ನು ನೋಡಿದೆನು. ತರುವಾಯ ಅವರು ವಿಮಾನದಲ್ಲಿ ಕೂತುಕೊಂಡರು. ನಾನು ಅವರಿಗೆ ಅರ್ಘ್ಯಪದ್ಯಾದಿ ಉಪಚಾರವನ್ನು ಮಾಡಿ ತಮ್ಮನ್ನು ನಾನು ಯಾರು ಎಂದು ತಿಳಿದುಕೊಳ್ಳಲಿ ಎಂದು ಕೇಳಿದೆನು. ಆಗ ಅವರು ನೀನು ಮಾಡಿದ ತಪಸ್ಸು ಸಾಲದು. ಆದುದರಿಂದ ನಾನು ಯಾರು ಎಂದು ತಿಳಿಯದೆ ಹೋಯಿತು ಎಂದು ನಗುತ್ತಾ ಹೇಳಿದರು. ಆಗಲೇ ಮತ್ತೊಂದು ರೂಪವನ್ನು ಧರಿಸಿ ಹೇಳಿದರು. ನಾನು ಬ್ರಹ್ಮದೇವರ ಮಾನಸಪುತ್ರನು. ದೇವತೆಗಳ ಮಧ್ಯದಲ್ಲಿ ಸನತ್ಕುಮಾರ ಎಂಬ ಹೆಸರನ್ನು ನೀನು ಕೇಳಿರಬಹುದು. ಆ ಸನತ್ಕುಮಾರನೇ ನಾನು. ಕ್ರತು, ವಸಿಷ್ಠ, ಪುಲಹ, ಪುಲಸ್ತ್ಯ, ಅತ್ರಿ, ಅಂಗಿರಾ, ಮರೀಚಿ ಎಂಬ ಏಳು ಜನರೂ ನನ್ನ ತಮ್ಮಂದಿರು. ಅವರು ಜಗತ್ತಿಗೆ ಕಾರಣರಾದವರು. ನಾನು ಯತಿಧರ್ಮವುಳ್ಳವನು ಹುಟ್ಟಿದಾಗ ಇದ್ದಂತೆಯೇ ಯಾವಾಗಲೂ ರಾಗದ್ವೇಷರಹಿತನಾಗಿದ್ದೇನೆ. ಆದುದರಿಂದಲೇ ನನಗೆ ಸನತ್ಕುಮಾರ ಎಂದು ಹೆಸರು. ನೀನು ನನ್ನಲ್ಲಿ ಭಕ್ತಿಯಿಂದ ನನ್ನನ್ನು ನೋಡಬೇಕೆಂಬ ಆಸೆಯಿಂದ ತಪಸ್ಸು ಮಾಡಿದಿ. ಆದುದರಿಂದ ನನ್ನ ದರ್ಶನವನ್ನು ಕೊಟ್ಟಿರುವೆನು. ಇನ್ನು ಬೇಕಾದ ವರವನ್ನು ಕೇಳು' ಎಂದರು. ಆಗ ನಾನು ಅವರೊಡನೆ ಪಿತೃಗಳ ವಿಷಯವನ್ನೇ ಪ್ರಶ್ನಿಸಿದೆನು. ಆಗ ಸನತ್ಕುಮಾರರು ನನ್ನೊಡನೆ ಪಿತೃಗಳ ವಿಷಯವನ್ನು ವಿಸ್ತರಿಸಿ ಹೇಳಿದರು.

'ಬಹುಕಾಲದ ಮೇಲೆ ನೀನು ಮಾಡಿರುವ ಪ್ರಶ್ನೆಯಿಂದ ನಾನು ಸಂತುಷ್ಟನಾದೆನು. ಪೂರ್ವದಲ್ಲಿ ಬ್ರಹ್ಮದೇವರು ತನ್ನನ್ನು ಪೂಜಿಸುವರು ಎಂದು ದೇವತೆಗಳನ್ನು ಸೃಷ್ಟಿಮಾಡಿದರು. ಆದರೆ ದೇವತೆಗಳು ಬ್ರಹ್ಮದೇವರನ್ನು ಪೂಜಿಸುವುದನ್ನು ಬಿಟ್ಟು ಇಂದ್ರಿಯಸುಖದಲ್ಲಿ ಆಸಕ್ತರಾದರು. ಆಗ ಬ್ರಹ್ಮದೇವರು ಅವರಿಗೆ ಶಾಪವನ್ನು ಕೊಟ್ಟರು. ಅವರ ಶಾಪದಿಂದ ದೇವತೆಗಳು ಜ್ಞಾನಹೀನರಾದರು. ದೇವತೆಗಳು ಜ್ಞಾನಹೀನರಾಗಲು, ಅವರನ್ನು ಅನುಸರಿಸಿರುವ ಎಲ್ಲರೂ ಜ್ಞಾನಹೀನರಾದರು. ತರುವಾಯ ದೇವತೆಗಳು ಬ್ರಹ್ಮದೇವರನ್ನು ನಮಸ್ಕರಿಸಿ ಬೇಡಿಕೊಂಡರು. ಆಗ ಬ್ರಹ್ಮದೇವರು ನೀವು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಿರಿ. ನಿಮ್ಮ ಮಕ್ಕಳ ಹತ್ತಿರ ಕೇಳಿರಿ. ಅವರು ಹೇಳಿದಂತೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಜ್ಞಾನವನ್ನು ಪಡೆಯಿರಿ' ಎಂದರು. ದೇವತೆಗಳು ತಮ್ಮ ಮಕ್ಕಳ ಹತ್ತಿರ ಹೋಗಿ ಪ್ರಾಯಶ್ಚಿತ್ತವನ್ನು ಕೇಳಿದರು. ಆಗ ಮಕ್ಕಳು ದೇವತೆಗಳಿಗೆ ಪ್ರಾಯಶ್ಚಿತ್ತವನ್ನು ಉಪದೇಶಿಸಿ 'ಮಕ್ಕಳೇ! ಹೋಗಿ ಬನ್ನಿರಿ' ಎಂದರು. ದೇವತೆಗಳು ತಮ್ಮನ್ನು ತಮ್ಮ

ಮಕ್ಕಳು 'ಮಕ್ಕಳೇ' ಎಂದು ಕೂಗಿದರಲ್ಲಾ' ಇದು ಏನು ನಮಗೆ ಅವಮಾನ ಎಂದುಕೊಂಡು ಬ್ರಹ್ಮದೇವರ ಹತ್ತಿರ ಬಂದು ಹೇಳಿಕೊಂಡರು. ಆಗ ಬ್ರಹ್ಮದೇವರು ಜ್ಞಾನವನ್ನು ಉಪದೇಶಿಸಿದವರು ತಂದೆಯಂತೆಯೇ ಆಗುತ್ತಾರೆ. ಆದುದರಿಂದ ನಿಮ್ಮ ಮಕ್ಕಳು ಪ್ರಾಯಶ್ಚಿತ್ತವನ್ನು ಉಪದೇಶಿಸಿ ಜ್ಞಾನವನ್ನು ಉಂಟುಮಾಡಿದ ತಂದೆಯಂತೆ ಆದರು. ಆದುದರಿಂದ ನಿಮ್ಮನ್ನು ಮಕ್ಕಳೇ! ಎಂದು ಕರೆದರು. ನಿಮ್ಮ ಮಕ್ಕಳು ನಿಮಗೆ ಉಪದೇಶಿಸಿದ ಕಾರಣ ಅವರು ಪಿತೃಗಳು ಎಂದೇ ಪ್ರಸಿದ್ಧರಾಗುವರು ಅಂದರು. ತರುವಾಯ ದೇವತೆಗಳು ತಮ್ಮ ಮಕ್ಕಳ ಹತ್ತಿರ ಬಂದು ನಾವು ಬ್ರಹ್ಮದೇವರ ಹತ್ತಿರ ಕೇಳಿಕೊಂಡೆವು. ನೀವು ನಮಗೆ ಜ್ಞಾನೋಪದೇಶವನ್ನು ಮಾಡಿದ ಕಾರಣ ತಂದೆಗಳಾದಿರಿ. ನಮ್ಮನ್ನು ಮಕ್ಕಳೇ ಎಂದು ಕರೆದದ್ದು ಸರಿಯಾಯಿತು ಎಂದರು. ಈ ರೀತಿಯಾಗಿ ಆ ದೇವತೆಗಳ ಮಕ್ಕಳೇ ಪಿತೃಗಳೆಂದು ಪ್ರಸಿದ್ಧರಾದರು. ಅಂತಹ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧವನ್ನು ಮಾಡುವುದರಿಂದ ರಾಕ್ಷಸರು ದಾನವರು ಮಾನವರು ಎಲ್ಲರೂ ಫಲವನ್ನು ಹೊಂದುವರು. ಶ್ರಾದ್ಧಗಳಿಂದ ಸಂತುಷ್ಟರಾದ ಪಿತೃಗಳು ಚಂದ್ರನನ್ನು ಸಂತೋಷಪಡಿಸುವರು. ಚಂದ್ರನು ಎಲ್ಲಾ ಲೋಕವನ್ನೂ ಸಂತೋಷಪಡಿಸುವನು. ಪುಷ್ಟಿಯಾಗಬೇಕೆಂದೋ ಮಕ್ಕಳು ಆಗಬೇಕೆಂದೋ ಯಾರು ಪಿತೃಗಳಿಗೆ ಪೂಜಿಸುವರೋ ಅವರು ಆ ಎಲ್ಲಾ ಫಲವನ್ನೂ ಹೊಂದುವರು.

ಪಿತೃಗಳು ಏಳು ಗಣದವರು ಇರುವರು. ನಾಲ್ಕುಗಣದವರು ದೊಡ್ಡದೇಹವುಳ್ಳವರು. ಮೂರು ಗಣದವರು ಅತಿಚಿಕ್ಕ ದೇಹವುಳ್ಳವರು. ವೈರಾಜರು, ಅಗ್ನಿಷ್ವಾತ್ತರು, ಬರ್ಹಿಷದ ಎಂದು ಹೆಸರುಳ್ಳ ಮೂರು ಗಣದವರು ಸೂಕ್ಷ್ಮದೇವವುಳ್ಳವರು. ಸುಕಾಲ, ಅಂಗಿರಸ, ಸುಸ್ವಧಾ, ಸೋಮಪ ಎಂದು ನಾಲ್ಕು ಗಣದವರು ದೊಡ್ಡದೇಹವುಳ್ಳವರು.

ವೈರಾಜ ಎನ್ನುವವರು ವಿರಾಜ ಎಂಬ ಪ್ರಜಾಪತಿಯ ಮಾನಸಪುತ್ರರು. ಅವರು ದೇವತೆಗಳಿದ ಪೂಜಿಸಲ್ಪಡುವರು. ಇವರಿಗೆ ಮಾನಸಪುತ್ರಿಯ ಮೇನಾ ಎಂಬುವಳು. ಅವಳು ಹಿಮವಂತನಿಗೆ ಪತ್ನಿಯಾದಳು. ಇವಳ ಮಗನು ಮೈನಾಕಪರ್ವತವು ಅಪರ್ಣಾ, ಏಕಪರ್ಣಾ, ಏಕಪಾಟಲಾ ಎಂದು ಹೆಸರುಳ್ಳ ಮೂರು ಜನ ಹೆಣ್ಣುಮಕ್ಕಳು ಹುಟ್ಟಿದರು. ಅವರು ಮೂರು ಜನರು ಕಠಿಣವಾದ ತಪಸ್ಸನ್ನು ಮಾಡಿದರು. ಏಕಪರ್ಣೆಯು ಒಂದು ಎಲೆಯನ್ನು ತಿನ್ನುತ್ತಾ ತಪಸ್ಸು ಮಾಡಿದಳು. ಏಕಪಾಟಲೆಯು ಒಂದು ಪಾಟಲಪುಷ್ಪವನ್ನು ತಿನ್ನುತ್ತಾ ತಪಸ್ಸು ಮಾಡಿದಳು. ಅಪರ್ಣೆಯು ಉಪವಾಸವನ್ನು ಮಾಡಿ ತಪಸ್ಸು ಮಾಡಿದಳು. ತಾಯಿಯು

ದುಃಖದಿಂದ ಅಪರ್ಣೆಯೊಡನೆ (ಉ=ಎಲೋ ಮಗಳೇ! ಮಾ=ಉಪವಾಸದಿಂದ ತಪಸ್ಸು ಬೇಡ ಎಂದು) ನಿಷೇಧಮಾಡುವವಳಾದಳು. ಆದುದರಿಂದ ಉಮಾ ಎಂದು ಹೆಸರುಳ್ಳವಳಾದಳು. ಅವರಲ್ಲಿ ಉಮಾದೇವಿಯು ಎಲ್ಲರಿಂದಲೂ ಜ್ಯೇಷ್ಠಳು. ರುದ್ರದೇವರಿಗೆ ಪತ್ನಿಯಾದಳು. ಏಕಪರ್ಣಾದೇವಿಯು ದೇವಲಋಷಿಗಳ ಪತ್ನಿಯಾದಳು. ಏಕಪಾಟಲಾದೇವಿಯು ಜೈಗೀಷವ್ಯರ ಪತ್ನಿಯಾದಳು.

ಎರಡನೇ ಗಣದವರು ಅಗ್ನಿಷ್ವಾತ್ತ ಎಂದು ಹೆಸರುಳ್ಳವರು. ಅವರು ಸೋಮಪದ ಎಂಬ ಲೋಕದಲ್ಲಿ ಇರುವರು. ಮರೀಚಿಋಷಿಗಳ ಮಕ್ಕಳು. ಇವರನ್ನು ದೇವತೆಗಳು ಪೂಜಿಸುವರು. ಅಚ್ಛೋದಾ ಎಂದು ಹೆಸರುಳ್ಳ ನದೀದೇವತೆಯು ಇವರ ಮನಸ್ಸಿನಿಂದ ಹುಟ್ಟಿದ ಮಗಳು. ಇವರಿಂದಲೇ ಅಚ್ಛೋದ ಎಂದು ಹೆಸರುಳ್ಳ ಸರೋವರ ನಿರ್ಮಿತವಾಯಿತು. ಇವಳು ಹುಟ್ಟಿದಂದಿನಿಂದ ತನ್ನ ತಂದೆಯನ್ನು ತಿಳಿದಿರಲಿಲ್ಲ. ಒಂದುದಿನ ಆಕಾಶದಲ್ಲಿ ಅದ್ರಿಕಾ ಎಂಬ ಅಪ್ಸರಸ್ತ್ರೀಯಿಂದ ಕೂಡಿಕೊಂಡು ವಿಮಾನದಲ್ಲಿ ಸಂಚರಿಸುತ್ತಿದ್ದ ವಸು ಎಂಬ ರಾಜನನ್ನು ನೋಡಿ ಇವನೇ ನನ್ನ ತಂದೆಯು ಎಂದು ತಿಳಿದುಕೊಂಡಳು. ಇವಳು ಈರೀತಿ ಇನ್ನೊಬ್ಬ ಪುರುಷನನ್ನು ತಂದೆಯೆಂದು ತಿಳಿದುಕೊಂಡದ್ದು ತಪ್ಪಾಯಿತು. ಇದರಿಂದ ಇವಳು ಯೋಗಭ್ರಷ್ಟಳಾಗಿ ಮೇಲಿನ ಲೋಕದಲ್ಲಿ ಕೆಳಗೆ ಬಿದ್ದಳು. ಕೆಳಗೆ ಬೀಳುವಾಗ ಸೂಕ್ಷ್ಮಗಳಾದ ಮೂರು ವಿಮಾನಗಳನ್ನು ನೋಡಿ ಅಲ್ಲಿದ್ದ ತನ್ನ ಪಿತೃಗಳನ್ನು ನೋಡಿ ತಲೆಕೆಳಗಾಗಿ ಬೀಳುತ್ತಾ ಇದ್ದವಳು ತನ್ನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದಳು. ಆಗ ಅವರು 'ಬೆದರಬೇಡ' ಎಂದು ಹೇಳಿದರು. ಆಗ ಆಕಾಶದಲ್ಲೇ ನಿಂತಳು. ತನ್ನ ಪಿತೃಗಳು ಎಂದು ತಿಳಿದು ಅವರೊಡನೆ ಪ್ರಾರ್ಥನಾಮಾಡಿದಳು. ಆಗ ಪಿತೃಗಳು ಅವಳಿಗೆ ಅನುಗ್ರಹಮಾಡಿದರು. ನೀನು ಇದೇ ವಸುವಿಗೆ ಭೂಮಿಯಲ್ಲಿ ಮಗಳಾಗಿ ಹುಟ್ಟುವಿ. ಆಮೇಲೆ ಉತ್ತಮ ಲೋಕಗಳನ್ನು ಹೊಂದುವಿ. ನೀನು ಭೂಮಿಯಲ್ಲಿ ಪರಾಶರ ಋಷಿಗಳಿಂದ ವೇದವ್ಯಾಸರನ್ನು ಪಡೆಯುವಿ. ಮತ್ತು ಶಂತನುರಾಜನಿಂದ ಚಿತ್ರಾಂಗದ ವಿಚಿತ್ರವೀರ್ಯ ಎಂಬ ಮಕ್ಕಳು ಹುಟ್ಟುವರು. ಆಮೇಲೆ ಉತ್ತಮಲೋಕಗಳಲ್ಲಿ ಹೊಂದುವಿ. ಈ ಅದ್ರಿಕೆಯೆಂಬ ಅಪ್ಸರ ಸ್ತ್ರೀಯು ಭೂಮಿಯಲ್ಲಿ ಮೀನಾಗಿ ಹುಟ್ಟುವಳು. ಅವಳ ಹೊಟ್ಟೆಯಲ್ಲಿ ಅಂದರೆ ಮೀನಿನ ಹೊಟ್ಟೆಯಲ್ಲಿ ಹುಟ್ಟುವಿ ಎಂದು ಹೇಳಿದರು. ಅದೇ ಪ್ರಕಾರ ಅಚ್ಛೋದೆಯು ಭೂಮಿಯಲ್ಲಿ ಸತ್ಯವತೀ ಎಂಬ ಹೆಸರಿನಿಂದ ಹುಟ್ಟಿ, ವೇದವ್ಯಾಸದೇವರನ್ನು ಮಗನನ್ನಾಗಿ ಪಡೆದು, ಶಂತನುರಾಜನಿಂದ ಚಿತ್ರಾಂಗದ, ವಿಚಿತ್ರವೀರ್ಯ ಎಂಬ

ಮಕ್ಕಳನ್ನೂ ಪಡೆದು ತನ್ನ ಲೋಕವನ್ನು ಹೊಂದಿದಳು.

ಮೂರನೆ ಗಣದವರು ಬರ್ಹಿಷದ ಎಂಬ ಹೆಸರುಳ್ಳವರು. ವೈಭ್ರಾಜ ಎಂಬ ಲೋಕದಲ್ಲಿ ಇರುವರು. ಇವರನ್ನು ದೇವತೆಗಳೂ ಯಕ್ಷರೂ ಗಂಧರ್ವರೂ ರಾಕ್ಷಸರೂ ಸರ್ಪಗಳೂ ಗರುಡರೂ ಪೂಜಿಸುವರು. ಇವರು ಪುಲಸ್ತ್ಯಪ್ರಜೇಶ್ವರರ ಮಕ್ಕಳು. ಇವರಿಗೆ ಪೀವರೀ ಎಂದು ಹೆಸರುಳ್ಳವಳು, ಮಾನಸಪುತ್ರಿಯು. ಇವಳು ವ್ಯಾಸರ ಮಗನಾದ ಶುಕಾಚಾರ್ಯರಿಗೆ ಪತ್ನಿಯಾಗುವಳು. ಮಹಾತಪಸ್ವಿಯಾದ ಶುಕಾಚಾರ್ಯರು ಇವಳಲ್ಲಿ ಕೃಷ್ಣ, ಗೌರ, ಪ್ರಭು, ಶಂಭು ಎಂಬ ನಾಲ್ಕು ಗಂಡುಮಕ್ಕಳನ್ನು ಕೃತ್ವೀ ಎಂಬ ಹೆಣ್ಣುಮಗಳನ್ನೂ ಪಡೆದು, ತಂದೆಯಾದ ವೇದವ್ಯಾಸದೇವರಿಂದ ತತ್ತ್ವೋಪದೇಶವನ್ನು ಪಡೆದು ಉತ್ತಮಗತಿಯನ್ನು ಹೊಂದಿದರು. ಕೃತ್ವಿಯು ಅಣುಹ ಎಂಬ ರಾಜನಿಗೆ ಪತ್ನಿಯಾದಳು. ಅವಳಲ್ಲಿ ಬ್ರಹ್ಮದತ್ತ ಎಂಬ ರಾಜನು ಹುಟ್ಟಿದನು.

ನಾಲ್ಕನೇ ಗಣದವರು ಸುಕಾಲ ಎಂದು ಹೆಸರುಳ್ಳವರು. ಇವರು ವಸಿಷ್ಠರ ಮಕ್ಕಳು. ಸ್ವರ್ಗದಲ್ಲಿ ಪ್ರಕಾಶಮಾನಗಳಾದ ಲೋಕಗಳಲ್ಲಿ ಇರುವರು. ಇವರನ್ನು ಬ್ರಾಹ್ಮಣರು ಪೂಜಿಸುವರು. ಇವರಿಗೆ ಗೌಃ ಎಂದು ಪ್ರಸಿದ್ಧಳಾದ ಹೆಣ್ಣುಮಗಳು ಮನಸ್ಸಿನಿಂದ ಹುಟ್ಟಿದಳು. ಇವಳೇ ಏಕಶೃಂಗಾ ಎಂಬ ಹೆಸರಿನಿಂದ ಭೂಮಿಯಲ್ಲಿ ಹುಟ್ಟಿ ಶುಕಾಚಾರ್ಯರಿಗೆ ಪತ್ನಿಯಾದಳು.

ಐದನೇ ಗಣದವರು ಆಂಗೀರಸ ಋಷಿಗಳ ಮಕ್ಕಳು. ಅವರು ಮರೀಚಿ ಗರ್ಭಲೋಕದಲ್ಲಿ ಇರುವರು. ಅವರನ್ನು ಕ್ಷತ್ರಿಯರು ಪೂಜಿಸುವರು. ಇವರ ಮಾನಸಪುತ್ರಿಯು ಯಶೋದಾ ಎಂಬುವಳು. ಇವಳು ವಿಶ್ವಮಹಾನ್ ಎಂಬುವನ ಹೆಂಡತಿಯಾದಳು. ವೃದ್ಧಶರ್ಮನ ಸೊಸೆಯು. ದಿಲೀಪನ ತಾಯಿಯು ಆದಳು. ಆ ದಿಲೀಪನು ಅತಿ ಪ್ರಸಿದ್ಧನಾಗಿದ್ದನು.

ಆರನೇ ಗಣದವರು ಸುಸ್ವಧಾ ಎಂದು ಹೆಸರುಳ್ಳವರು. ಕರ್ದಮ ಪ್ರಜೇಶ್ವರರ ಪಿತೃಗಳು. ಪುಲಹರ ಮಕ್ಕಳು. ಇವರನ್ನು ವೈಶ್ಯರು ಪೂಜಿಸುವರು. ಇವರ ಮಾನಸಪುತ್ರಿಯು ವಿರಜಾ ಎಂಬುವಳು. ಇವಳು ಯಯಾತಿರಾಜನ ತಾಯಿಯು. ನಹುಷರಾಜನ ಪತ್ನಿಯು.

ಏಳನೇ ಗಣದವರು ಸೋಮಪ ಎಂದು ಹೆಸರುಳ್ಳವರು. ಇವರು ಕವಿಯ ಮಗಳಾದ ಸ್ವಧಾದೇವಿಯಲ್ಲಿ ಅಗ್ನಿದೇವರ ಮಕ್ಕಳು. ಇವರನ್ನು ಶೂದ್ರರು ಪೂಜಿಸುವರು. ಇವರು ಮಾನಸ ಎಂಬ ಲೋಕದಲ್ಲಿ ಇರುವರು. ಇವರ

ಮಾನಸಪುತ್ರಿಯು ನರ್ಮದೆಯು. ಇವಳು ನದೀ ಶ್ರೇಷ್ಠಳು. ಪುರುಕುತ್ಸರಾಜನ ಹೆಂಡತಿಯು. ತ್ರಸದ್ದಸ್ಯು ರಾಜನ ತಾಯಿಯು.

ಈರೀತಿಯಾಗಿ ಸನತ್ಕುಮಾರರು ಪಿತೃಗಳ ಚರಿತೆಯನ್ನು ಹೇಳಿ ಇನ್ನೂ ಪಿತೃಗಳ ಮಹಿಮೆಯು ತಿಳಿಯಲಿ ಎಂದು ಹೇಳಿ ದಿವ್ಯದೃಷ್ಟಿಯನ್ನು ಕೊಟ್ಟು ಹೊರಟುಹೋದರು' ಎಂದು ಮಾರ್ಕಂಡೇಯರು ಭೀಷ್ಮಾಚಾರ್ಯರೊಡನೆ ಹೇಳಿದರು. ಸನತ್ಕುಮಾರರು ಹದಿನೆಂಟು ವರ್ಷಕಾಲ ಉಪದೇಶ ಮಾಡಿದರು. ಅಷ್ಟುಕಾಲವೂ ನನಗೆ ಒಂದು ದಿವಸದಂತೆ ಕಳೆದುಹೋಯಿತು. ನನಗೊಂದು ಶ್ರಮವೂ ಆಗಲಿಲ್ಲ. ಅವರು ಮರೆಯಾಗಿ ಹೋದಮೇಲೆ ನನ್ನ ಶಿಷ್ಯನಿಂದ ಅಷ್ಟುಸಮಯವಾದದ್ದನ್ನು ತಿಳಿದುಕೊಂಡೆನು ಎಂದೂ ಮಾರ್ಕಂಡೇಯರು ಹೇಳಿದರು.



# ಪಿತೃಪೂಜೆಯ ಫಲವು

ಮಾರ್ಕಂಡೇಯರು ಹೇಳಿದರು 'ಭೀಷ್ಮ! ಸನತ್ಕುಮಾರರು ಮರೆಯಾಗಿ ಹೋದಮೇಲೆ ಅವರ ಅನುಗ್ರಹದಿಂದ ನನಗೆ ಎಲ್ಲವೂ ಪ್ರತ್ಯಕ್ಷವಾಗಿ ತಿಳಿಯಿತು. ಭರದ್ವಾಜರ ಏಳು ಜನ ಮಕ್ಕಳು ಮಾನಸ ಸರೋವರದ ತೀರದಲ್ಲಿ ಯೋಗಭಷ್ಠರಾದರು. ತರುವಾಯ ಹಾಗೆಯೇ ಮೃತರಾಗಿ ಸ್ವರ್ಗಲೋಕಕ್ಕೆ ಹೋಗಿ ಕೆಲವುಕಾಲ ಅಲ್ಲಿ ಇದ್ದು ಆಮೇಲೆ ಭೂಮಿಯಲ್ಲಿ ಕುರುಕ್ಷೇತ್ರದಲ್ಲಿ ಕೌಶಿಕರ ಮಕ್ಕಳಾಗಿ ಹುಟ್ಟಿದರು. ಕೌಶಿಕರಿಗೆ ಎಂದರೆ ವಿಶ್ವಾಮಿತ್ರರಿಗೆ ನೂರುಜನ ಮಕ್ಕಳು. ವಿಶ್ವಾಮಿತ್ರರು ತನ್ನ ಮಕ್ಕಳೊಡನೆ ಶುನಃ ಶೇಫರನ್ನು ಜ್ಯೇಷ್ಠನನ್ನಾಗಿ ಅಂಗೀಕರಿಸಬೇಕೆಂದು ಹೇಳಲು ಐವತ್ತು ಜನರು ಒಪ್ಪಲಿಲ್ಲ. ಅವರಿಗೆ ನೀವು ಅಂತ್ಯಜರಾಗಿರಿ ಎಂದು ಶಾಪವನ್ನು ಕೊಟ್ಟರು. ಐವತ್ತು ಜನರು ಅಂಗೀಕರಿಸಿದರು. ಅವರಿಗೆ ವಿಶ್ವಾಮಿತ್ರರು ಅನುಗ್ರಹ ಮಾಡಿದರು. ವಿಶ್ವಾಮಿತ್ರರಿಂದ ಶಾಪಹೊಂದಿದ ಐವತ್ತು ಜನರಲ್ಲಿ ಈ ಏಳು ಜನರು ಸೇರಿದವರು. ಇವರಹೆಸರು ವಾಗ್ದುಷ್ಟ, ಕ್ರೋಧನ, ಹಿಂಸ್ರ, ಪಿಶುನ, ಕವಿ, ಖಸ್ರಮ, ಪಿತೃವರ್ತೀ ಎಂದು.

ತಂದೆಯು ತಮಗೆ ಶಾಪವನ್ನು ಕೊಟ್ಟು ಉದಾಸೀನರಾಗಿ ಹೋದಮೇಲೆ

1. ಹ.ವಂ.ಅ.21

ಗಾರ್ಗ್ಯಋಷಿಗಳ ಮನೆಗೆ ಹೋಗಿ, ಗುರುಕುಲ ವಾಸಮಾಡಿದರು. ಬ್ರಹ್ಮಚರ್ಯವ್ರತವನ್ನು ಮಾಡಿದರು. ಗುರುಗಳ ಸೇವೆಯನ್ನು ಮಾಡುತ್ತಿದ್ದರು. ಒಂದುದಿನ ಗುರುಗಳ ಆಜ್ಞೆಯಿಂದ ದನವನ್ನೂ ಕರುವನ್ನೂ ಮೇಯಿಸಲಿಕ್ಕೆ ಕರೆದುಕೊಂಡು ಹೋದರು. ಗೋವನ್ನು ಕರೆದುಕೊಂಡು ಹೋಗುವಾಗ ಅವರಿಗೆ ದಾರಿಯಲ್ಲಿ ಹಸಿವೆಯಾಯಿತು. ಹಸಿವೆಯಿಂದಲೂ ಬಾಲ್ಯದಿಂದಲೂ ಮೋಹಿತರಾಗಿ ಆ ದನವನ್ನು ಕೊಂದು ತಿನ್ನಬೇಕೆಂದು ಅವರಿಗೆ ಬುದ್ಧಿಯು ಬಂದಿತು. ಕವಿ ಖಸೃಮ ಎಂಬ ಇಬ್ಬರು ದನವನ್ನು ಕೊಲ್ಲಬಾರದು ಎಂದು ಪ್ರಾರ್ಥಿಸಿದರು. ಆದರೆ ಅವರಿಬ್ಬರಿಂದ ಇತರರ ಅಭಿಪ್ರಾಯವನ್ನು ತಪ್ಪಿಸಲಿಕ್ಕೆ ಸಾಧ್ಯವಾಗಲಿಲ್ಲ. ಪಿತೃವರ್ತೀ ಎನ್ನುವವನು ನಿತ್ಯವೂ ಪಿತೃಗಳಿಗೆ ಶ್ರಾದ್ಧವನ್ನು ಮಾಡುವ ಸ್ವಭಾವವುಳ್ಳವನು. ಧರ್ಮಿಷ್ಠನಾದ ಅವನು ಕೋಪದಿಂದ ಈ ದನವನ್ನು ಅವಶ್ಯವಾಗಿ ತಿನ್ನಬೇಕೆಂದೇ ಆಸೆಯಿರುವ ಪಕ್ಷದಲ್ಲಿ ಪಿತೃಗಳ ಪೂಜೆಗೆಂದು ಕೊಲ್ಲಿರಿ. ಇದರಿಂದ ದನಕ್ಕೂ ಸ್ವರ್ಗವಾಗುವುದು. ಪಿತೃಗಳ ಪೂಜೆಯಿಂದ ನಮಗೂ ಪುಣ್ಯವು ಏರ್ಪಡುವುದು ಎಂದು ಹೇಳಿದರು. ಹಾಗೆಯೇ ಆಗಲಿ ಎಂದು ಹೇಳಿ ಆ ಗೋವನ್ನು ಪ್ರೋಕ್ಷಣೆ ಮಾಡಿ, ಪಿತೃಗಳಿಗೆ ಸಮರ್ಪಣೆ ಮಾಡಿ ತಾವು ತಿಂದರು. ಗುರುಗಳ ಬಳಿಗೆ ಹೋಗಿ ದನವನ್ನು ಹುಲಿಯು ಹಿಡಿದು ಕೊಂದಿತು. ನಿಮ್ಮ ಕರುವನ್ನು ಮಾತ್ರ ಸ್ವೀಕರಿಸಿ ಎಂದರು. ಗಾರ್ಗ್ಯರು ಸತ್ಯವೆಂದೇ ನಂಬಿದರು.

ತರುವಾಯ ಅವರು ಈ ರೀತಿ ಗುರುಗಳನ್ನು ಮೋಸಗೊಳಿಸಿ ಕಾಲಕ್ರಮದಿಂದ ಆಯುಷ್ಯವು ತೀರಲು ಮೃತರಾದರು. ಅವರು ಗುರುಗಳನ್ನು ಮೋಸಗೊಳಿಸಿದ ಕಾರಣವೂ ದನವನ್ನು ಹಿಂಸಾಮಾಡಿದ ಕಾರಣವೂ ಒಬ್ಬ ಬೇಡನ ಮಕ್ಕಳಿಗಾಗಿ ಹುಟ್ಟಿದರು. ಹಿಂಸಾವಿಹಾರವುಳ್ಳ ಬೇಡರಾಗಿ ಹುಟ್ಟಿದರು. ಆದರೂ ಪಿತೃಗಳಿಗೆ ಪೂಜೆ ಮಾಡಿದ ಕಾರಣ ಪೂರ್ವಜನ್ಮದ ಸ್ಮರಣೆಯುಳ್ಳವರಾಗಿದ್ದರು. ಈರೀತಿಯಾಗಿ ದಶಾರ್ಣದೇಶದಲ್ಲಿ ಏಳು ಬೇಡರಾಗಿ ಹುಟ್ಟಿದರು. ಆದರೂ ಅವರು ಧರ್ಮಜ್ಞ ರಾಗಿದ್ದರು. ತಮ್ಮ ದೇಹವು ನಡೆಯಲಿಕ್ಕೆ ಎಷ್ಟೋ ಹಿಂಸೆಯನ್ನು ಮಾಡುತ್ತಿದ್ದರು. ಉಳಿದ ಕಾಲದಲ್ಲಿ ಧ್ಯಾನಮಾಡುತ್ತಾ ಇದ್ದರು. ಅವರ ಹೆಸರು ನಿರ್ವೈರ, ನಿರ್ವೃತಿ, ಶಾಂತ, ನಿರ್ಮನ್ಯು, ಕೃತಿ, ವೈದ್ಯಸೋಮ, ನೃವರ್ತೀ ಎಂದು. ತಂದೆತಾಯಿಗಳನ್ನು ರಕ್ಷಿಸುತ್ತಾ ಇದ್ದರು. ತಂದೆತಾಯಿಗಳು ಇರುವವರೆಗೆ ಮಾತ್ರ ಮೃಗಬೇಟೆಯಾಡು ತ್ತಿದ್ದರು. ಆಗಲೂ ಗರ್ಭಿಣಿಯಾದ ಮೃಗವನ್ನು , ಕ್ರೀಡೆಯನ್ನು ಮಾಡುತ್ತಿರುವ ಮೃಗಗಳನ್ನು ಕೊಲ್ಲುತ್ತಿರಲಿಲ್ಲ. ತಂದೆತಾಯಿಗಳು ಮೃತರಾದ ಮೇಲೆ ಧನುಸ್ಸನ್ನು

ಪರಿತ್ಯಾಗಮಾಡಿ ಪ್ರಾಣವನ್ನು ಬಿಟ್ಟರು.

ತರುವಾಯ ಅವರು ಶುಭಕರ್ಮದಿಂದ ಪೂರ್ವಜನ್ಮಸ್ಮರಣೆಯುಳ್ಳ ಜಿಂಕೆಗಳಾಗಿ ಕಾಲಂಜಿರಗಿರಿಯಲ್ಲಿ ಹುಟ್ಟಿದರು. ಉನ್ಮುಖ ನಿತ್ಯವಿತ್ರಸ್ತ, ಸ್ತಬ್ಧಕರ್ಣ, ವಿಲೋಚನ, ಪಂಡಿತ, ಘಸ್ಮರ, ನಾದೀ ಎಂದು ಅವರ ಹೆಸರು. ಆ ಜಿಂಕೆಗಳು ಪೂರ್ವಜನ್ಮದ ಸ್ಮರಣೆಯುಳ್ಳವುಗಳಾದ ಪ್ರಯುಕ್ತ ಕ್ಷಮಾದಿಗುಣವುಳ್ಳವುಗಳಾಗಿ ಸಂಚರಿಸುತ್ತಿದ್ದವು. ಕೊನೆಗೆ ನೀರಿಲ್ಲದ ಪ್ರದೇಶಕ್ಕೆ ಹೋಗಿ ನೀರನ್ನು ಪರಿತ್ಯಾಗ ಮಾಡಿ ಪ್ರಾಣಬಿಟ್ಟವು. ಕಾಲಂಜರಗಿರಿಯಲ್ಲಿ ಈಗಲೂ ಅವುಗಳ ಹೆಜ್ಜೆಗಳು ತೋರುತ್ತವೆ ಎನ್ನುವರು.

ಆಮೇಲೆ ಶರದ್ವೀಪದಲ್ಲಿ ಚಕ್ರವಾಕ ಪಕ್ಷಿಗಳಾಗಿ ಹುಟ್ಟಿದರು. ಅವುಗಳು ಬ್ರಹ್ಮಚಾರಿಗಳಾಗಿ ಇದ್ದುಕೊಂಡು ಧ್ಯಾನಮಾಡುತ್ತಾ ಇದ್ದವು. ಅವುಗಳ ಹೆಸರು ನಿಸ್ಪೃಹ ನಿರ್ಮಮ, ಕ್ಷಾಂತ, ನಿರ್ದ್ವಂದ್ವ, ನಿಷ್ಪರಿಗ್ರಹ, ನಿರ್ವೃತಿ, ನಿಭೃತ ಎಂದು. ಆ ಪಕ್ಷಿಗಳು ಆಹಾರವನ್ನು ಪರಿತ್ಯಾಗ ಮಾಡಿ ನದೀತೀರದಲ್ಲಿ ದೇಹಪರಿತ್ಯಾಗ ಮಾಡಿದವು.

ತರುವಾಯ ಮಾನಸಸರೋವರದಲಲ್ಲಿ ಹಂಸಪಕ್ಷಿಗಳಾಗಿ ಹುಟ್ಟಿದರು. ಆಗಲೂ ಪೂರ್ವಜನ್ಮಸ್ಮರಣೆಯಿತ್ತು. ಬ್ರಹ್ಮಚಾರಿಗಳಾಗಿದ್ದವು. ಅವುಗಳ ಹೆಸರು ಸುಮನ ಶುಚಿವಾಕ್, ಶುದ್ಧ, ಪಂಚಮ, ಛಿದ್ರದರ್ಶನ, ಸುನೇತ್ರ, ಸ್ವತಂತ್ರ ಎಂದು. ಈ ಪಕ್ಷಿಗಳಿಗೆ ಏಳು ಜನ್ಮದಲ್ಲಿ ಮಾಡಿದ ತಪಸ್ಸಿನಿಂದ ಪೂರ್ವದೇಹದಲ್ಲಿ ಅಧ್ಯಯನ ಮಾಡಿದ್ದ ವೇದಗಳೆಲ್ಲವೂ ಮನಸ್ಸಿನಲ್ಲಿ ಹೊಳೆದವು. ಆ ಪಕ್ಷಿಗಳು ಬ್ರಹ್ಮಚಾರಿಗಳಾಗಿದ್ದುಕೊಂಡು ವೇದವನ್ನು ಉಚ್ಚರಿಸುತ್ತಾ ಅಲ್ಲಲ್ಲಿ ಸಂಚರಿಸುತ್ತಾ ಇದ್ದವು. ಈರೀತಿಯಾಗಿ ಆ ಪಕ್ಷಿಗಳು ಸಂಚರಿಸುತ್ತಿರಲು ನೀಪದೇಶದ ರಾಜನಾದ ವಿಭ್ರಾಜ ಎಂಬುವನು ಅಂತಃಪುರದವರಿಂದ ಸಹಿತನಾಗಿ ಅಲ್ಲಿಗೆ ಬಂದನು. ಆ ರಾಜನನ್ನು ನೋಡಿ ಸ್ವತಂತ್ರ ಎಂದು ಹೆಸರುಳ್ಳ ಏಳನೆಯ ಪಕ್ಷಿಯು ನಾನು ಮಾಡಿದ ಪುಣ್ಯವೇನಾದರೂ ಇದ್ದರೆ ತಪಸ್ಸು ಇದ್ದರೆ ಹೀಗೆಯೇ ಒಬ್ಬ ರಾಜನಾಗಬೇಕು. ಸುಮ್ಮನೆ ಉಪವಾಸ ತಪಸ್ಸು ಮಾಡಿ ತುಂಬಾ ಶ್ರಮವನ್ನು ಹೊಂದಿರುವೆನು ಎಂದು ಹೇಳಿತು. ಐದನೇ ಮತ್ತು ಆರನೇ ಪಕ್ಷಿಗಳು ನಾವು ನಿನಗೆ ಮಂತ್ರಿಗಳಾಗುವೆವು ಎಂದವು.

ಆಗ ಶುಚಿವಾಕ್ ಎಂಬ ಹೆಸರುಳ್ಳ ಎರಡನೇ ಹಂಸವು ಕೊನೆಯ ಹಂಸದೊಡನೆ ನೀನು ಈರೀತಿಯಾಗಿ ಕಾಮದಲ್ಲಿ ಆಸಕ್ತನಾದಿ. ನಾನು ಹೇಳುವ ಮಾತನ್ನು ಕೇಳು. ನೀನು ಕಾಂಪಿಲ್ಯದಲ್ಲಿ ರಾಜನಾಗುವಿ. ನಿನಗೆ ಈ ಇಬ್ಬರೂ

ಮಿತ್ರರಾಗಿಯೂ ಮಂತ್ರಿಗಳಾಗಿಯೂ ಆಗುವರು. ಈರೀತಿ ಹೇಳಿ ಆ ಮೂರು ಪಕ್ಷಿಗಳನ್ನೂ ನಾಲ್ಕು ಪಕ್ಷಿಗಳು ಶಪಿಸಿದವು. ಆಗ ಯೋಗಭ್ರಷ್ಟಗಳಾದ ಆ ಮೂರು ಪಕ್ಷಿಗಳು ನಾಲ್ಕು ಪಕ್ಷಿಗಳೊಡನೆ ಪ್ರಾರ್ಥನಾ ಮಾಡಿಕೊಂಡವು. ಆಮೇಲೆ ಅವುಗಳು ಅನುಗ್ರಹ ಮಾಡಿದವು. ನಿಮಗೆ ಕೊಟ್ಟ ಶಾಪವು ಸ್ವಲ್ಪಕಾಲದ ಮೇಲೆ ಪರಿಹೃತವಾಗುತ್ತದೆ. ಈ ಸ್ವತಂತ್ರ ಎಂಬವನು ಸರ್ವಪ್ರಾಣಿಗಳ ಭಾಷೆಯನ್ನು ತಿಳಿಯುತ್ತಾನೆ. ಇವನಿಂದಾಗಿಯೇ ನಾವೆಲ್ಲರೂ ಪಿತೃಪ್ರಸಾದವನ್ನು ಹೊಂದಿದೆವು. ಇವನು ಹೇಳಿದ ರೀತಿಯಾಗಿ ಗೋವನ್ನು ಪಿತೃಗಳಿಗೆ ಸಮರ್ಪಿಸಿ ನಾವು ಉಪಯೋಗಿಸಿದ ಕಾರಣ ಪಿತೃಗಳ ಅನುಗ್ರಹದಿಂದ ನಮಗೆ ಜ್ಞಾನವು ಬಂದಿದೆ. ಇದೊಂದು ಶ್ಲೋಕವನ್ನು ಒಬ್ಬ ಪುರುಷನ ಬಾಯಿಯಿಂದ ನೀವು ಕೇಳುವವರಾಗಿ, ಪುನಃ ಎಲ್ಲವನ್ನೂ ಸ್ಮರಿಸಿ ಯೋಗಾನುಷ್ಠಾನವನ್ನು ಮಾಡಿ ಯೋಗ್ಯವಾದ ಲೋಕವನ್ನು ಹೊಂದುವಿರಿ ಎಂದು ಹೇಳಿದವು.

ತರುವಾಯ ಏಳು ಪಕ್ಷಿಗಳೂ ನೀರುಗಾಳಿ ಮಾತ್ರ ಆಹಾರವುಳ್ಳವು ಶರೀರವನ್ನು ಕೃಶವಾಗಿ ಮಾಡಿಕೊಂಡು ಧ್ಯಾನಮಾಡುತ್ತಾ ಇದ್ದವು. ವಿಭ್ರಾಜ ಎಂಬ ರಾಜನು ಅಲ್ಲಿ ಸಂಚರಿಸುತ್ತಾ ಧ್ಯಾನಮಾಡುತ್ತಾ ಆ ಪಕ್ಷಿಗಳನ್ನು ನೋಡಿ, ಪಕ್ಷಿಗಳೂ ಧ್ಯಾನ ಮಾಡುತ್ತಿವೆಯಲ್ಲ ! ಎಂದು ವೈರಾಗ್ಯವುಳ್ಳವನಾಗಿ ರಾಜ್ಯಕ್ಕೆ ಹೋದನು. ತನ್ನ ಮಗನಾದ ಅಣುಹನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿ ಊರ ಜನರ ಹತ್ತಿರ ಹೇಳಿಕೊಂಡು ಆ ಹಂಸಗಳು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೇ ಹೋದನು. ಈ ಪಕ್ಷಿಗಳಲ್ಲಿ ಒಂದಕ್ಕೆ ನಾನು ಮಗನಾಗಿ ಹುಟ್ಟಿ ಯೋಗಾನುಷ್ಠಾನ ಮಾಡಬೇಕು ಎಂದು ಆಸೆಪಟ್ಟು ಅಲ್ಲಿಯೇ ತಪಸ್ಸು ಮಾಡಿದನು. ಆ ರಾಜನು ಸೂರ್ಯನಂತೆ ಪ್ರಕಾಶಿಸಿದನು. ಅವನಿಂದ ಪ್ರಕಾಶಿತವಾದ ಆ ವನಕ್ಕೆ ವಿಭ್ರಾಜಿತ ಎಂದು ಹೆಸರಾಯಿತು. ಆ ಸರೋವರವೂ ವೈಭ್ರಾಜ ಎಂದು ಹೆಸರುಳ್ಳದ್ದಾಯಿತು. ತರುವಾಯ ಆ ಏಳು ಪಕ್ಷಿಗಳೂ ದೇಹಪರಿತ್ಯಾಗ ಮಾಡಿದವು.

ತರುವಾಯ ಏಳು ಪಕ್ಷಿಗಳೂ ಕಾಂಪಿಲ್ಯ ನಗರದಲ್ಲಿ ಹುಟ್ಟಿದರು. ನಾಲ್ಕು ಪಕ್ಷಿಗಳು ಬ್ರಾಹ್ಮಣನ ಮಕ್ಕಳಾಗಿ ಹುಟ್ಟಿದರು. ಕೊನೆಯ ಪಕ್ಷಿಯು ಅಣುಹರಾಜನಿಗೆ ಮಗನಾಗಿ ಬ್ರಹ್ಮದತ್ತ ಎಂಬ ಹೆಸರಿನಿಂದ ಹುಟ್ಟಿತು. ಐದನೆಯ ಪಕ್ಷಿಯು ಪಾಂಚಾಲ ಎಂಬ ಹೆಸರಿನಿಂದಲೂ, ಆರನೆಯ ಪಕ್ಷಿಯು ಕಂಡರೀಕ ಎಂಬ ಹೆಸರಿನಿಂದಲೂ ಬ್ರಾಹ್ಮಣಪುತ್ರನಾಗಿ ಹುಟ್ಟಿದರು. ಪಾಂಚಾಲಕಂಡರೀಕರು ಬ್ರಹ್ಮದತ್ತರಾಜನಿಗೆ ಮಿತ್ರರಾಗಿದ್ದರು. ಬ್ರಹ್ಮದತ್ತನು ಸರ್ವಪ್ರಾಣಿಗಳ ಭಾಷೆಯನ್ನೂ ತಿಳಿದವನಾಗಿದ್ದನು.

ಆ ಮೂರು ಜನರೂ ಕಾಮಾಸಕ್ತರಾಗಿದ್ದರು. ಆದರೂ ಪೂರ್ವಜನ್ಮದಲ್ಲಿ ಶ್ರಾದ್ಧಮಾಡಿದ್ದರಿಂದ ಧರ್ಮಕಾಮಾರ್ಥಗಳಲ್ಲಿ ಪಂಡಿತರಾಗಿದ್ದರು.

ಅಣುಹರಾಜನು ಬ್ರಹ್ಮದತ್ತನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿ, ಉತ್ತಮವಾದ ಗತಿಯನ್ನು ಹೊಂದಿದನು. ದೇವಲ ಎನ್ನುವವರ ಮಗಳಾದ ಸನ್ನತಿ ಎಂಬವಳು ಬ್ರಹ್ಮದತ್ತನಿಗೆ ಪತ್ನಿಯಾಗಿದ್ದಳು. ಉಳಿದ ನಾಲ್ಕು ಜನ ಪಕ್ಷಿಗಳು ಒಬ್ಬ ದರಿದ್ರಬ್ರಾಹ್ಮಣನಿಗೆ ಮಗಳಾಗಿ ಹುಟ್ಟಿದವರು ತತ್ವಜ್ಞಾನಿಗಳಾಗಿದ್ದರು. ವೇದಾಧ್ಯಯನ ಮಾಡಿದ್ದರು. ಯೋಗದಲ್ಲಿ ಆಸಕ್ತರಾಗಿದ್ದರು. ಅವರಿಗೆ ಪೂರ್ವಜನ್ಮದ ಸ್ಮರಣೆಯೂ ಇದ್ದಿತು. ಅವರು ತಂದೆಯನ್ನು ಬಿಟ್ಟು ಹೊರಟುಹೋಗಲು ಆರಂಭಿಸಿದರು. ಆಗ ತಂದೆಯಾದ ದರಿದ್ರನಾದ ಬ್ರಾಹ್ಮಣನು ನನ್ನ ದಾರಿದ್ರ್ಯವನ್ನು ಪರಿಹರಿಸದೆ, ನನ್ನ ಶುಶ್ರೂಷೆಯನ್ನು ಮಾಡದೆ ನೀವು ನನ್ನನ್ನು ಬಿಟ್ಟುಹೋಗುವುದು ಧರ್ಮವಲ್ಲ ಎಂದನು. ಆಗ ಆ ನಾಲ್ಕು ಜನರೂ ತಂದೆಯೊಡನೆ ನಿಮಗೆ ಜೀವನೋಪಾಯವನ್ನು ಕಲ್ಪಿಸಿಯೇ ಹೋಗುತ್ತೇವೆ. ಮಹಾರ್ಥವುಳ್ಳ ಒಂದು ಶ್ಲೋಕವನ್ನು ಹೇಳಿಕೊಡುವೆವು. ಆ ಶ್ಲೋಕವನ್ನು ಪಾಂಚಾಲ ಕಂಡರೀಶ ಎಂಬ ಇಬ್ಬರು ಮಂತ್ರಿಗಳಿಂದ ಸಹಿತನಾಗಿರುವ ಬ್ರಹ್ಮದತ್ತರಾಜನ ಹತ್ತಿರ ಹೇಳಿರಿ. ಆಗ ರಾಜನು ನಿಮಗೆ ಬೇಕಾದಷ್ಟು ಗ್ರಾಮಗಳನ್ನೂ ಧನಗಳನ್ನೂ ಕೊಡುವನು ಎಂದು ಹೇಳಿ ಹೊರಟುಹೋದರು. ಯೋಗಾನುಷ್ಠಾನವನ್ನು ಮಾಡಿ ಉತ್ತಮಗತಿಯನ್ನು ಹೊಂದಿದರು.

ಒಂದು ದಿನದಲ್ಲಿ ಬ್ರಹ್ಮದತ್ತನು ತನ್ನ ಪತ್ನಿಯಾದ ಸನ್ನತಿಯೊಡನೆ ಕಾಡಿನಲ್ಲಿ ವಿಹಾರ ಮಾಡುತ್ತಿದ್ದನು. ಅಲ್ಲಿ ಒಂದು ಗಂಡು ಇರುವೆಯು ಕೋಪಿಸಿಕೊಂಡಿರುವ ಹೆಣ್ಣು ಇರುವೆಯನ್ನು ಪ್ರಾರ್ಥನಾಮಾಡಿ ಸಮಾಧಾನಪಡಿಸುವುದನ್ನು ಕೇಳಿ ಅದರ ಭಾಷೆಯನ್ನು ತಿಳಿದ ಬ್ರಹ್ಮದತ್ತನು ಗಟ್ಟಿಯಾಗಿ ನಕ್ಕನು. ಅದನ್ನು ಕೇಳಿದ ಸನ್ನತಿಯು ತುಂಬಾ ಲಜ್ಜೆಯನ್ನು ಹೊಂದಿದಳು. ಬಹುದಿನ ಆಹಾರವನ್ನೇ ಬಿಟ್ಟಳು. ರಾಜನು ಸಮಾಧಾನಪಡಿಸಲು ನೀವು ನನ್ನನ್ನು ಅಪಹಾಸ ಮಾಡಿದಿರಿ. ನಾನು ಬದುಕಲಾರೆನು. ನಾನೊಬ್ಬಳೇ ಇರುವಾಗ ನೀವು ಯಾಕೆ ಹಾಗೆ ನಕ್ಕಿರಿ ಎಂದು ಹೇಳಿದರು. ಆಗ ರಾಜನು ತಾನು ನೆಗಾಡಿದ ಕಾರಣವನ್ನು ಹೇಳಿದರು. ಆಗ ಸನ್ನತಿಯು ಕೋಪಿಸಿಕೊಂಡೇ ನೀವು ಸುಳ್ಳು ಹೇಳುವಿರಿ. ಇರುವೆಯ ಮಾತು ಯಾರಿಗಾದರೂ ಅರ್ಥವಾಗುವುದುಂಟೇ? ತಪೋಬಲದಿಂದಲೋ ವಿದ್ಯಾಸಾಮರ್ಥ್ಯದಿಂದ ಇರುವೆಯ ಭಾಷೆಯನ್ನು ತಿಳಿಯುವ ಸಾಮರ್ಥ್ಯವಿದ್ದರೆ ನಾನು ತಿಳಿಯುವಂತೆ

ಮಾಡಬೇಕು. ನನಗೆ ನಂಬಿಕೆ ಬರುವಂತೆ ಮಾಡಬೇಕು. ಇಲ್ಲದಿದ್ದರೆ ನಾನು ಪ್ರಾಣಬಿಡುವೆನು ಎಂದು ಹೇಳಿದಳು.

ಹೆಂಡತಿಯ ಕಠಿಣವಾದ ಮಾತನ್ನು ಕೇಳಿ ರಾಜನು ತುಂಬಾ ವ್ಯಥೆಯನ್ನು ಹೊಂದಿದನು. ಆರುದಿವಸ ಉಪವಾಸಮಾಡಿ ಪರಮಾತ್ಮನನ್ನು ಭಜಿಸಿದನು. ದೇವರು ಪ್ರತ್ಯಕ್ಷವಾಗಿ ಬ್ರಹ್ಮದತ್ತ! ನಿನಗೆ ನಾಳೆಯೇ ಪ್ರಾತಃಕಾಲದಲ್ಲಿ ಮಂಗಳ ವಾಗುವುದು ಎಂದು ಹೇಳಿ ಮರೆಯಾದನು.

ಪೂರ್ವದಲ್ಲಿ ಹೇಳಿದ ದರಿದ್ರಬ್ರಾಹ್ಮಣನು ಮಕ್ಕಳು ಹೇಳಿಕೊಟ್ಟ ಶ್ಲೋಕವನ್ನು ಮುಖಪಾಠ ಮಾಡಿಕೊಂಡು ರಾಜನ ಹತ್ತಿರ ಹೇಳಲಿಕ್ಕೆ ಅವಸರವು ಸಿಗದೆ ನಿರೀಕ್ಷಿಸಿಕೊಂಡಿದ್ದನು. ಬ್ರಹ್ಮದತ್ತನು ಭಗವಂತನಿಂದ ವರವನ್ನು ಪಡೆದಮೇಲೆ ಪ್ರಾತಃಕಾಲದಲ್ಲಿ ಸರೋವರದಲ್ಲಿ ಸ್ನಾನಮಾಡಿ ಬಂಗಾರದ ರಥದಲ್ಲಿ ಕೂತುಕೊಂಡು ಊರೊಳಗೆ ಪ್ರವೇಶಿಸಿದನು. ಆಗ ಕಂಡರೀಕನು ಸಾರಥ್ಯವನ್ನು ಮಾಡಿದನು. ಪಾಂಚಾಲನು ರಾಜನಿಗೆ ಚಾಮರವನ್ನು ಬೀಸಿದನು. ಈ ಸಂದರ್ಭವನ್ನು ನೋಡಿ ಆ ದರಿದ್ರಬ್ರಾಹ್ಮಣನು ಇದೇ ಅವಕಾಶವೆಂದು ತಿಳಿದುಕೊಂಡು—ಈಪ್ರಕಾರವಾಗಿ ಶ್ಲೋಕವನ್ನು ಹೇಳಿದನು.

'ಸಪ್ತವ್ಯಾಧಾ ದಶಾರ್ಣೇಷು ಮೃಗಾಃ ಕಾಲಂಜರೇ ಗಿರೌ
ಚಕ್ರವಾಕಾಃ ಶರದ್ವೀಪೇ ಹಂಸಾಃ ಸರಸಿ ಮಾನಸೇ ।
ತೇಽಭಿಜಾತಾಃ ಕುರುಕ್ಷೇತ್ರೇ ಬ್ರಾಹ್ಮಣಾಃ ವೇದಪಾರಗಾಃ
ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ಕಿಮವಸೀಧಥ ।

ಇದರರ್ಥ 'ಮೊದಲು ದಶಾರ್ಣದೇಶದಲ್ಲಿ ಏಳು ಬೇಡರಾಗಿದ್ದರು. ಅವರು ಆಮೇಲೆ ಕಾಲಂಜರಗಿರಿಯಲ್ಲಿ ಮೃಗಗಳಾದರು. ಶರದ್ವೀಪದಲ್ಲಿ ಚಕ್ರವಾಕ ಪಕ್ಷಿಗಳಾದರು. ಆಮೇಲೆ ಮಾನಸಸರೋವರದಲ್ಲಿ ಹಂಸಪಕ್ಷಿಗಳಾದರು. ಅವರ ಮಧ್ಯದಲ್ಲಿ ನಾಲ್ಕು ಜನರಾದ ನಾವು ಕುರುಕ್ಷೇತ್ರದಲ್ಲಿ ವೇದಶಾಸ್ತ್ರ ಪಾರಂಗತರಾದ ಬ್ರಾಹ್ಮಣರಾಗಿ ಹುಟ್ಟಿದ ನಾವು ದೀರ್ಘವಾದ ಮಾರ್ಗವನ್ನು ಅನುಸರಿಸಿ ಹೊರಟಿರುವೆವು. ನೀವು ಮೂರು ಜನರು ಏಕೆ ಶ್ರಮಪಡುತ್ತಿರುವಿರಿ' ಎಂದು.

ಈ ಶ್ಲೋಕವನ್ನು ಕೇಳುವ ಮಾತ್ರದಿಂದ ಬ್ರಹ್ಮದತ್ತರಾಜನಿಗೂ ಕಂದರೀಶ ಪಾಂಚಾಲರಿಗೂ ಮೂರ್ಛೆಯೂ ಬಂದಿತು. ಮುಹೂರ್ತಕಾಲ ಮೂರ್ಛೆಯಿಂದ ಇದ್ದು ಆಮೇಲೆ ಜ್ಞಾನವನ್ನು ಹೊಂದಿದರು. ಪೂರ್ವಸ್ಮರಣೆಯು ಅವರಿಗೆ ಬಂದಿತು. ಬ್ರಹ್ಮದತ್ತರಾಜನು ಆ ದರಿದ್ರ ಬ್ರಾಹ್ಮಣನಿಗೆ ಬೇಕಾದ ಧನಾದಿಗಳನ್ನು ಕೊಟ್ಟನು.

ಮಗನಾದ ವಿಷ್ವಕ್ಸೇನನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ಪತ್ನೀಸಹಿತನಾಗಿ ವನಕ್ಕೆ ಹೋದನು. ಆಗ ಹೆಂಡತಿಯು ಬ್ರಹ್ಮದತ್ತನೊಡನೆ ನಿಮಗೆ ಇರುವೆಯ ಭಾಷೆಯು ತಿಳಿದಿರುವ ವಿಷಯವು ನನಗೆ ಗೊತ್ತಿದೆ. ಆದರೂ ನೀವು ತುಂಬಾ ಕಾಮದಲ್ಲಿ ಆಸಕ್ತರಾಗಿರುವಿರಿ. ಆದುದರಿಂದ ನಿಮಗೆ ಸ್ವಲ್ಪ ಕ್ರೋಧವುಂಟಾಗಲಿ ಎಂದೇ ನಾನು ಹಾಗೆ ಮಾಡಿದೆನು. ತಮಗೆ ಈಗ ಯೋಗವು ಸ್ಮರಣೆಗೆ ಬಂದಿದೆ. ಇನ್ನು ನಾವು ಯೋಗಾನುಷ್ಠಾನವನ್ನು ಮಾಡಿ ಉತ್ತಮವಾದ ಗತಿಯನ್ನು ಹೊಂದುವ ಎಂದಳು. ಹೆಂಡತಿಯ ಮಾತನ್ನು ಕೇಳಿ ರಾಜನು ಸಂತೋಷವುಳ್ಳವನಾಗಿ ಯೋಗಾನುಷ್ಠಾನ ವನ್ನು ಮಾಡಿ ಉತ್ತಮವಾದ ಗತಿಯನ್ನು ಹೊಂದಿದನು. ಇದೇ ರೀತಿಯಿಂದ ಕಂಡರೀಕನೂ ಪಾಂಚಾಲನೂ ಉತ್ತಮಗತಿಯನ್ನು ಹೊಂದಿದರು. ಈರೀತಿಯಾಗಿ ಗೋವನ್ನು ಹಿಂಸಾಮಾಡಿಯಾದರೂ ಪಿತೃಗಳ ಪೂಜೆಯನ್ನು ಅಂದರೆ ಶ್ರಾದ್ಧವನ್ನು ಮಾಡಿದ ಕಾರಣ ಕೊನೆಗೆ ಉತ್ತಮವಾದ ಗತಿಯನ್ನೇ ಹೊಂದಿದರು. ಆದುದರಿಂದ ಪಿತೃಗಳನ್ನು ಕುರಿತು ಶ್ರಾದ್ಧವನ್ನು ಮಾಡುವುದು ಅತ್ಯಂತ ಪ್ರಶಸ್ತವಾದದ್ದು.

ಈರೀತಿಯಾಗಿ ಮಾರ್ಕಂಡೇಯರು ಭೀಷ್ಮಾಚಾರ್ಯರೊಡನೆ ಪಿತೃಗಳ ಪೂಜೆಯ ಅಂದರೆ ಶ್ರಾದ್ಧದ ಮಹಿಮೆಯನ್ನು ಹೇಳಿದರು.



# ರಾಜ ಪರಿಚ್ಛೇದ

## ನಳರಾಯನ ಕಥೆ

ನಿಷಧದೇಶದಲ್ಲಿ ವೀರಸೇನ ಎಂಬ ರಾಜನಿದ್ದನು. ಅವನಿಗೆ ನಳನೆಂಬ ಮಗ ನಿದ್ದನು. ನಳರಾಜನು ಪರಮಸುಂದರನಾಗಿದ್ದನು. ಅಶ್ವರಹಸ್ಯವನ್ನು ತಿಳಿದವ ನಾಗಿದ್ದನು. ಸೂರ್ಯನಂತೆ ತೇಜಸ್ವಿಯಾಗಿದ್ದನು. ಬ್ರಾಹ್ಮಣರಲ್ಲಿ ಪ್ರೀತಿಉಳ್ಳವ ನಾಗಿದ್ದನು. ಸರ್ವಗುಣಗಳಿಂದ ಸಂಪನ್ನನಾಗಿದ್ದನು. (ಅ.53. 1 ರಿಂದ 4)

ವಿದರ್ಭದೇಶದಲ್ಲಿ ಪರಾಕ್ರಮಶಾಲಿಯಾದ ಭೀಮ ಎಂಬ ರಾಜನಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಮಕ್ಕಳಾಗಬೇಕೆಂದು ಬಹಳ ಪ್ರಯತ್ನವನ್ನು ಮಾಡಿದನು. ಅವನಿದ್ದಲ್ಲಿಗೆ ದಮನ ಎಂಬ ಋಷಿಗಳು ಬಂದರು. ರಾಜನು ತನಗೆ ಮಕ್ಕಳಾಗ ಬೇಕೆಂದು ಅವರನ್ನು ಬಹಳ ಸಂತೋಷಪಡಿಸಿದನು. ಪತ್ನಿಯಿಂದ ಸಹಿತನಾಗಿ

1. ಮ.ಭಾ.ವ.ಪ. ಅ.52-79

ಸತ್ಕಾರಮಾಡಿದನು. ದಮನ ಋಷಿಗಳು ಪತ್ನಿಸಹಿತನಾದ ಭೀಮರಾಜನಿಗೆ ಒಂದು ಹೆಣ್ಣುಮಗಳೂ ಮೂರು ಗಂಡುಮಕ್ಕಳೂ ಆಗುವಂತೆ ಅನುಗ್ರಹಿಸಿದರು. ದಮಯಂತೀ ಎಂಬ ಮಗಳೂ, ದಮ, ದಾಂತ, ದಮನ ಎಂದು ಮಕ್ಕಳು ಹುಟ್ಟಿದರು. ದಮಯಂತಿಯು ಪರಮರೂಪವತಿಯಾಗಿದ್ದಳು. ಮೂರುಲೋಕಗಳಲ್ಲಿಯೂ ಪ್ರಸಿದ್ಧಳಾಗಿದ್ದಳು. ಅವಳಿಗೆ ವಯಸ್ಸಾಗಲು ನೂರುಜನ ದಾಸಿಯರೂ ಸಖಿಯರೂ ಸೇವಿಸುತ್ತಾ ಇದ್ದರು. ಆ ಸಖಿಯರ ಮಧ್ಯದಲ್ಲಿ ಸರ್ವಾಭರಣಗಳಿಂದ ಅಲಂಕೃತಳಾಗಿ ಮಿಂಚಿನಂತೆ ಹೊಳೆಯುತ್ತಿದ್ದಳು. ದೇವತೆಗಳಲ್ಲಿಯೂ ಯಕ್ಷರಲ್ಲಿಯೂ ಮನುಷ್ಯರಲ್ಲಿಯೂ ಅಂತಹ ರೂಪವತಿಯೇ ಇರಲಿಲ್ಲ.(53-13,14)

ಅದೇರೀತಿಯಾಗಿ ನಳರಾಯನೂ ಮನ್ಮಥನಂತೆ ಅತ್ಯಂತ ರೂಪವಂತನಾಗಿದ್ದನು. ಜನರು ದಮಯಂತಿಯ ಸಮೀಪದಲ್ಲಿ ನಳರಾಯನ ವಿಷಯವನ್ನು ಹೇಳಿದರು. ನಳರಾಯನ ಸಮೀಪದಲ್ಲಿ ದಮಯಂತಿಯ ವಿಷಯವನ್ನು ಹೇಳುತ್ತಿದ್ದರು. ಇದರಿಂದ ಅವರಿಬ್ಬರಿಗೂ ಪರಸ್ಪರ ನೋಡದೆ ಗುಣಗಳನ್ನು ಕೇಳಿಯೇ ಮದುವೆಯಾಗಬೇಕೆಂಬ ಆಸೆಯುಂಟಾಯಿತು. ನಳರಾಯನು ಕಾಮೋಪದ್ರವವನ್ನು ಸಹಿಸಲಾರದೆ ಅಂತಃಪುರದ ಬಳಿಯಲ್ಲಿದ್ದ ವನದಲ್ಲಿ ಏಕಾಂತದಲ್ಲಿ ಇರುತ್ತಿದ್ದನು. ಅಲ್ಲಿ ಒಂದುದಿನ ನಳರಾಯನು ಸಂಚರಿಸುತ್ತಿದ್ದ ಬಂಗಾರದ ರೆಕ್ಕೆಯುಳ್ಳ ಹಂಸಪಕ್ಷಿಗಳನ್ನು ನೋಡಿದನು. ಅವುಗಳಲ್ಲಿ ಒಂದನ್ನು ಹಿಡಿದನು. ಆಗ ಆ ಹಂಸವು 'ನಳರಾಯನೇ! ನನ್ನನ್ನು ಕೊಲ್ಲಬೇಡ. ನಿನಗೆ ನಾನು ಉಪಕಾರವನ್ನು ಮಾಡುವೆನು. ದಮಯಂತಿಯ ಬಳಿಗೆ ಹೋಗಿ ನಿನ್ನ ವಿಷಯವನ್ನು ಹೇಳುವೆನು. ದಮಯಂತಿಯು ನಿನ್ನನ್ನು ಬಿಟ್ಟು ಇನ್ನೊಬ್ಬರನ್ನು ಮದುವೆ ಮಾಡಿಕೊಳ್ಳದಂತೆ ಮಾಡುವೆನು. ನನ್ನನ್ನು ಬಿಟ್ಟುಬಿಡು' ಎಂದಿತು. ನಳರಾಯನು ಅದನ್ನು ಬಿಟ್ಟುಬಿಟ್ಟನು.

ತರುವಾಯ ಆ ಹಂಸಪಕ್ಷಿಗಳು ಹಾರಿಹೋಗಿ ವಿದರ್ಭನಗರಕ್ಕೆ ಹೋಗಿ ದಮಯಂತಿಯ ಸಮೀಪದಲ್ಲಿ ಇಳಿದವು. ದಮಯಂತಿಯು ಆಶ್ಚರ್ಯಕರಗಳಾಗಿರುವ ಆ ಪಕ್ಷಿಗಳನ್ನು ನೋಡಿ ಸಂತೋಷದಿಂದ ಸಖಿಯರಿಂದ ಸಹಿತಳಾಗಿ ಹಿಡಿಯಲಿಕ್ಕೆ ಹೋದಳು. ತರುವಾಯ ಹಂಸಪಕ್ಷಿಗಳು ಆ ವನದಲ್ಲಿ ಬೇರೆಬೇರೆಯಾಗಿ ದೂರದೂರ ಹೋದವು. ದಮಯಂತಿಯ ಸಖಿಯರಲ್ಲಿ ಒಬ್ಬೊಬ್ಬರು ಒಂದೊಂದು ಹಂಸವನ್ನು ಹಿಡಿಯಲು ಹೋದರು. ದಮಯಂತಿಯು ಯಾವ ಹಂಸವನ್ನು ಹಿಡಿಯಲು ಹೋದಳೋ ಆ ಹಂಸವು ಮನುಷ್ಯವಾಣಿಯಿಂದ 'ದಮಯಂತಿ! ನಿಷಧದೇಶದಲ್ಲಿ ನಳನೆಂಬ ಮಹಾರಾಜನಿರುವನು. ಅವನು

ರೂಪದಲ್ಲಿ ಅಶ್ವಿನಿದೇವತೆಗಳಂತೆ ಇರುವನು. ಅವನಿಗೆ ಸಮಾನರಾದ ಮನುಷ್ಯರೇ ಇಲ್ಲ. ಅವನಿಗೆ ನೀನು ಹೆಂಡತಿಯಾಗುವ ಪಕ್ಷದಲ್ಲಿ ನೀನು ಹುಟ್ಟಿದ್ದು ಸಾರ್ಥಕವಾಗುವುದು. ನಾವು ದೇವತೆಗಳನ್ನೂ ಗಂಧರ್ವರನ್ನೂ ಮನುಷ್ಯರನ್ನೂ ರಾಕ್ಷಸರನ್ನೂ ನೋಡಿರುವೆವು. ಆದರೆ ನಳರಾಯನಂತೆ ಇರುವ ಯಾರನ್ನೂ ನೋಡಿಲ್ಲ. ನೀನು ಹೆಂಗಸರಲ್ಲಿ ರತ್ನಪ್ರಾಯಳಾಗಿರುವಿ. ನಳರಾಯನು ಪುರುಷರಲ್ಲಿ [1]ಶ್ರೇಷ್ಠನಾಗಿರುವನು' ಎಂದು ಹೇಳಿತು. ಅದನ್ನು ಕೇಳಿ ದಮಯಂತಿಯು 'ನೀನೂ ಹೋಗಿ ನಳರಾಯನ ಹತ್ತಿರ ಹೀಗೆಯೇ ಹೇಳು' ಎಂದಳು. ಹಾಗೆಯೇ ಆಗಲಿ ಎಂದು ಹೇಳಿ ಆ ಹಂಸವು ಪುನಃ ನಿಷಧನಗರಿಗೆ ಹೋಗಿ ನಳರಾಯನೊಡನೆ ಸಮಸ್ತವನ್ನು ತಿಳಿಸಿತು. (53-24 ರಿಂದ 32)

ದಮಯಂತಿಯು ಹಂಸದ ಮಾತನ್ನು ಕೇಳಿ ನಳರಾಯನನ್ನೇ ಸ್ಮರಿಸಿಕೊಂಡು ಅಸ್ವಸ್ಥಳಾದಳು. ಯೋಚನೆ ಮಾಡುತ್ತಾ ಕೂತುಕೊಂಡಳು. ಅವಳ ಮುಖವು ಕಪ್ಪುಕಪ್ಪಗಾಯಿತು. ದೀರ್ಘಶ್ವಾಸಬಿಡುವಳು. ಮೇಲೆ ನೋಡುವಳು. ಹೀಗೆ ಹುಚ್ಚು ಹಿಡಿದವಳಂತೆ ಕಾಣಿಸುವಳು. ಮೈಯೆಲ್ಲಾ ಬೆಳ್ಳಗಾಯಿತು. ಭೋಜನ ಮಲಗುವುದು ಇತ್ಯಾದಿ ಒಂದು ಇಷ್ಟವಾಗಲಿಲ್ಲ. ರಾತ್ರಿಯೂ ಹಗಲೂ ನಿದ್ದೆ ಮಾಡಲಾರಳು. ಹಾ ಹಾ ಎಂದು ಅಳುತ್ತಲೇ ಇರುವಳು. ಈ ಪ್ರಕಾರವಾಗಿ ಇರುವುದನ್ನು ಸಖಿಯರು ತಿಳಿದು ವಿದರ್ಭರಾಜನೊಡನೆ ತಿಳಿಸಿದರು. ಸಖಿಯರ ಮುಖದಿಂದ ದಮಯಂತಿಯ ವಿಷಯವನ್ನು ತಿಳಿದು ಭೀಮರಾಜನು ಏನು ಮಾಡಲಿ ಎಂದು ಯೋಚಿಸಿದನು. ತರುವಾಯ ತನ್ನ ಮಗಳು ಯೌವನವತಿಯಾದದ್ದನ್ನು ನೋಡಿ ಮಗಳಿಗೆ ಸ್ವಯಂವರವನ್ನು ಮಾಡುವುದೆಂದು ನಿಶ್ಚಯಿಸಿದನು. ಎಲ್ಲಾ ರಾಜಪುತ್ರರಿಗೂ ದಮಯಂತಿಗೆ ಸ್ವಯಂವರವಾಗುವುದೆಂದು ವರ್ತಮಾನವನ್ನು ಹೇಳಿಕಳುಹಿಸಿದನು. ಭೀಮರಾಜನ ಆಜ್ಞೆಯಿಂದ ರಾಜರೆಲ್ಲರೂ ವಿದರ್ಭನಗರಿಗೆ ಬಂದರು. ಆನೆ ಕುದುರೆ ರಥಗಳಿಂದ ಧ್ವನಿಯನ್ನು ಉಂಟುಮಾಡುತ್ತಾ ಅಲಂಕಾರ ಮಾಡಿಕೊಂಡು ರಾಜರೆಲ್ಲರೂ ಬಂದರು. ಭೀಮನು ಬಂದಿರುವ ರಾಜರಿಗೆಲ್ಲಾ ಯೋಗ್ಯತೆಯನ್ನು ಅನುಸರಿಸಿ ಪೂಜಿಸಿದನು.

ಇದೇ ಸಮಯದಲ್ಲಿ ದೇವರ್ಷಿಶ್ರೇಷ್ಠರಾದ ಪರ್ವತ ಮತ್ತು ನಾರದರು ಸಂಚರಿಸುತ್ತಾ ಇಂದ್ರದೇವರ ಮಂದಿರಕ್ಕೆ ಪ್ರವೇಶಿಸಿದರು. ಇಂದ್ರದೇವರು ಅವರಿಬ್ಬರನ್ನೂ ಪೂಜಿಸಿ ಕುಶಲಪ್ರಶ್ನೆಯನ್ನು ಮಾಡಿದರು.

---

1. ವಿಶಿಷ್ಟಯಾ ವಿಶಿಷ್ಟೇನ ಸಂಗಮೋ ಗುಣವಾನ್ ಭವೇತ್ । 53-31

ನಾರದರು ನಾವಿಬ್ಬರೂ ಕ್ಷೇಮದಿಂದ ಇದ್ದೇವೆ. ಲೋಕದಲ್ಲಿ ಎಲ್ಲಾ ರಾಜರೂ ಕ್ಷೇಮದಿಂದ ಇದ್ದಾರೆ ಎಂದರು.

ನಾರದರ ಮಾತನ್ನು ಕೇಳಿ ಇಂದ್ರದೇವರು ನಾರದರೊಡನೆ 'ಯಾವರಾಜರು ಧರ್ಮಜ್ಞರಾಗಿ ಹಿಂದೆ ಓಡಿಹೋಗದೆ ಪ್ರಾಣದ ಆಸೆಯಿಲ್ಲದೆ ಯುದ್ಧವನ್ನು ಮಾಡಿ ಶಸ್ತ್ರದಿಂದ ಮರಣವನ್ನು ಹೊಂದುವರೋ ಅವರಿಗೆ ಅಭೀಷ್ಟಪ್ರದವಾಗಿ ಈ ಲೋಕವು ಅಕ್ಷಯವಾಗಿರುವುದು. ಆದರೆ ಅಂತಹ ನನ್ನ ಪ್ರಿಯ ಅತಿಥಿಗಳಾಗಿ ಬರತಕ್ಕ ಕ್ಷತ್ರಿಯರೇ ಕಾಣಸುವುದಿಲ್ಲವಲ್ಲಾ! ಅಂತಹ ಶೂರರಾದ ರಾಜರೆಲ್ಲರೂ ಎಲ್ಲಿಗೆ ಹೋದರು? ಎಂದು ಕೇಳಿದರು.

ಅದಕ್ಕೆ ನಾರದರು 'ದೇವೇಂದ್ರ! ಕ್ಷತ್ರಿಯರು ನಿನಗೆ ಕಾಣಿಸದೆ ಇರಲು ಕಾರಣವನ್ನು ಕೇಳು. ವಿದರ್ಭರಾಜನಿಗೆ ದಮಯಂತಿ ಎಂಬ ಮಗಳಿದ್ದಾಳೆ. ಅವಳು ರೂಪದಲ್ಲಿ ಎಲ್ಲಾ ಹೆಂಗಸರನ್ನೂ ಮೀರಿದವಳು. ಆ ದಮಯಂತಿಗೆ ಸ್ವಯಂವರ ವಾಗುತ್ತಿದೆ. ಆದಕ್ಕೆ ಎಲ್ಲಾ ರಾಜರೂ ರಾಜಪುತ್ರರೂ ಹೋಗುತ್ತಿರುವರು. ಲೋಕಕ್ಕೇ ರತ್ನದಂತೆ ಇರುವ ಆ ಸುಂದರಿಯನ್ನು ಅಪೇಕ್ಷಿಸಿಕೊಂಡು ಹೋಗುತ್ತಿರುವರು' ಎಂದರು. ಈ ರೀತಿಯಾಗಿ ನಾರದರು ಹೇಳುವ ಸಮಯದಲ್ಲಿಯೇ ಅಗ್ನಿ ಯಮ ವರುಣರು ಅಲ್ಲಿಗೆ ಬಂದರು. ತರುವಾಯ ಅವರೂ ನಾರದರ ಮಾತನ್ನು ಕೇಳಿದರು. ಆದನ್ನು ಕೇಳಿ ಎಲ್ಲರೂ ಅಂದರೆ ಇಂದ್ರ ಯಮ ಅಗ್ನಿ ವರುಣರು ಸಂತೋಷವುಳ್ಳವ ರಾಗಿ ನಾವು ಸ್ವಯಂವರಕ್ಕೆ ಹೋಗುವಎಂದರು. ತರುವಾಯ ಅವರು ಸಪರಿವಾರವಾಗಿ ವಾಹನಗಳಿಂದ ಸಹಿತರಾಗಿ ವಿದರ್ಭನಗರಿಗೆ ಹೊರಟು ಹೋದರು. ನಳರಾಯನೂ ಕೂಡ ಎಲ್ಲಾ ರಾಜರೂ ವಿದರ್ಭ ನಗರಿಗೆ ಹೋದದ್ದನ್ನು ತಿಳಿದು ತಾನೂ ಹೋದನು. ತರುವಾಯ ದೇವತೆಗಳು ವಿದರ್ಭ ನಗರಿಗೆ ಹೋಗುವವರು ದಾರಿಯಲ್ಲಿ ರೂಪ ಸಂಪತ್ತಿನಿಂದ ಮನ್ಮಥನಂತೆ ಇರುವ ನಳರಾಯನನ್ನು ನೋಡಿದರು ಆ ನಳರಾಯನ ರೂಪಸಂಪತ್ತಿನಿಂದ ಆಶ್ಚರ್ಯ ಪಡುವವರಾಗಿ, ಈ ಸೌಂದರ್ಯದಿಂದ ದಮಯಂತಿಯು ನಳರಾಯನನ್ನೇ ವರಿಸುವಳೆಂದು ನಿಶ್ಚಯಿಸಿ ತಾವು ದಮಯಂತಿ ಯನ್ನು ಮದುವೆಯಾಗುವ ಸಂಕಲ್ಪವನ್ನು ಬಿಟ್ಟುಬಿಟ್ಟರು. ಅನಂತರ ದೇವತೆಗಳು ವಿಮಾನಗಳನ್ನು ಆಕಾಶದಲ್ಲಿಯೇ ನಿಲ್ಲಿಸಿ ತಾವು ಆಕಾಶದಿಂದ ಕೆಳಗೆ ಇಳಿದು 'ನಿಷಧ ದೇಶದ ರಾಜನಾದ ನಳಮಹಾರಾಯನೇ! ನೀನು ಸತ್ಯವ್ರತವುಳ್ಳವನು. ನಮಗೆ ಸಹಾಯವನ್ನು ಮಾಡು. ನಮಗೆ ದೂತನಾಗು' ಎಂದರು.

ನಳರಾಯನು ಅವರೊಡನೆ ಹಾಗೆಯೇ ಮಾಡುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿ, ಕೈಮುಗಿದುಕೊಂಡು 'ನೀವು ಯಾರು? ನಾನು ಯಾರಿಗೆ ದೂತನಾಗಬೇಕು? ನಾನು ದೂತನಾಗಿ ಯಾವ ಕಾರ್ಯವನ್ನು ಮಾಡಬೇಕು? ಅದನ್ನೆಲ್ಲಾ ಹೇಳಬೇಕು' ಎಂದು ಕೇಳಿದನು. (55-1,2)

ಆಗ ಇಂದ್ರದೇವರು ''ನಾವು ದೇವತೆಗಳು ದಮಯಂತಿಗೋಸ್ಕರ ಬಂದವರಿದ್ದೇವೆ ಎಂದು ತಿಳಿ. ನಾನು ಇಂದ್ರನು ಇವನು ಅಗ್ನಿಯು. ಇವನು ವರುಣನು. ಇವನು ಯಮನು. ನೀನು ಹೋಗಿ ದಮಯಂತಿಯೊಡನೆ ನಾವು ಬಂದಿರುವ ವಿಷಯವನ್ನು ತಿಳಿಸು. 'ಇಂದ್ರ ಅಗ್ನಿ ಯಮ ವರುಣರು ನಿನ್ನನ್ನು ಮದುವೆಯಾಗಲು ಬಂದಿರುವರು. ನೀನು ಅವರಲ್ಲಿ ಯಾರಾದರೂ ಒಬ್ಬನನ್ನು ಮದುವೆ ಮಾಡಿಕೊ' ಎಂದುಹೇಳು'' ಎಂದರು. (55-6)

ಆಗ ನಳರಾಯನು ಕೈಮುಗಿದುಕೊಂಡು 'ನಾನೂ ದಮಯಂತಿಯನ್ನು ಮದುವೆ ಮಾಡಿಕೊಳ್ಳಲಿಕ್ಕೇ ಹೊರಟಿರುವ ಪ್ರಯುಕ್ತ ನಾವು ಒಂದೇ ಕಾರ್ಯಕ್ಕೆ ಹೊರಟವರು. ಆದುದರಿಂದ ನನ್ನನ್ನು ಈ ಕಾರ್ಯದಲ್ಲಿ ದೂತನನ್ನಾಗಿ ಕಳುಹಿಸಬಾರದು. ಒಬ್ಬ ಪುರುಷನು ಒಬ್ಬ ಸ್ತ್ರೀಯನ್ನು ಮನಸ್ಸಿನಲ್ಲಿ ಸಂಕಲ್ಪ ಮಾಡಿದಮೇಲೆ ಇನ್ನೊಬ್ಬರಿಗೋಸ್ಕರ ಹೇಗೆ ಬಿಡುವನು? ನನ್ನ ಹತ್ತಿರ ಈ ಕಾರ್ಯವನ್ನು ಹೇಳಬಾರದು' ಎಂದನು. (55-7,8)

ಇಂದ್ರದೇವರು 'ಮೊದಲು ನಮ್ಮೊಡನೆ ಮಾಡುತ್ತೇನೆ ಎಂದು ಹೇಳಿ ಪ್ರತಿಜ್ಞಾಮಾಡಿ ಈಗ ಯಾಕೆ ಮಾಡಲಾರೆ? ನೀನು ಬೇಗನೆ ಹೋಗು. ದೇವತೆಗಳ ಮಾತಿನಂತೆ ನಡೆಯುವುದರಿಂದ ನಿನಗೆ ಕ್ಷೇಮವಾಗುವುದು' ಎಂದರು. (55-7,9)

ಅದಕ್ಕೆ ಪುನಃ ನಳರಾಯನು 'ರಾಜನ ಮನೆಯು ಸುರಕ್ಷಿತವಾಗಿರುವುದು. ನಾನು ಹೇಗೆ ಪ್ರವೇಶಿಸಲಿ?' ಎಂದು ಕೇಳಿದನು. ಅದಕ್ಕೆ ಇಂದ್ರದೇವರು ನೀನು ಒಳಗೆ ಪ್ರವೇಶಿಸುವಿ ಎಂದು ಹೇಳಿದರು. ನಳರಾಯನು ಹಾಗೆಯೇ ಆಗಲಿ ಎಂದು ಹೇಳಿ ದಮಯಂತಿಯ ಮನೆಗೆ ಹೋದನು. ಅಲ್ಲಿ ಸಖಿಯರ ಮಧ್ಯದಲ್ಲಿ ಪ್ರಕಾಶಿಸುತ್ತಿದ್ದ ತನ್ನ ತೇಜಸ್ಸಿನಿಂದ ಚಂದ್ರನನ್ನೇ ಮೀರುವಂತೆ ಇದ್ದ ದಮಯಂತಿಯನ್ನು ನೋಡಿದನು. ಅವಳನ್ನು ನೋಡುವ ಮಾತ್ರದಿಂದಲೇ ಮನಸ್ಸಿನಲ್ಲಿ ಕಾಮವು ಉಂಟಾಯಿತು. ಆದರೂ ದೇವತೆಗಳೊಡನೆ ಹೇಳಿದ ಮಾತನ್ನು ಸತ್ಯವನ್ನಾಗಿ ಮಾಡುವುದಕ್ಕಾಗಿ ಕಾಮವನ್ನು ಸಹಿಸಿಕೊಂಡನು. ತರುವಾಯ ನಳರಾಯನನ್ನು ನೋಡಿ ಅವನ ತೇಜಸ್ಸಿನಿಂದ ಆಸನದಿಂದ ಎದ್ದು ಬಿಟ್ಟರು.

ಆಶ್ಚರ್ಯದಿಂದ ನಳರಾಯನನ್ನು ಸ್ತೋತ್ರಮಾಡಿದರು. ನಳರಾಯನೊಡನೆ ಬಾಯಿಯಿಂದ ಮಾತನಾಡಲಿಲ್ಲ. ಮನಸ್ಸಿನಿಂದಲೇ ಪೂಜಿಸಿದರು. ಏನು ರೂಪ! ಏನು ಕಾಂತಿ!! ಏನು ಧೈರ್ಯ!!! ದೇವತೆಯೋ? ಯಕ್ಷನೋ? ಗಂಧರ್ವನೋ? ಎಂದುಕೊಂಡರು. ಅವನ ಹತ್ತಿರ ಮಾತನಾಡಲಿಕ್ಕೂ ಶಕ್ತರಾಗಲಿಲ್ಲ. ತರುವಾಯ ದಮಯಂತಿಯೂ ಆಶ್ಚರ್ಯವುಳ್ಳವಳಾಗಿ ಮಂದಹಾಸಪೂರ್ವಕವಾಗಿ 'ಸರ್ವಾಂಗ ಸುಂದರನಾದ ನನಗೆ ಕಾಮೋದ್ದೀಪಕನಾದ ನೀನು ಯಾರು? ದೇವತೆಯಂತೆ ಬಂದಿರುವಿಯಲ್ಲಾ! ನೀನು ಯಾರು ಎಂದು ತಿಳಿಯಲು ಇಚ್ಛಿಸುವೆನು. ಇಲ್ಲಿಗೆ ಹೇಗೆ ಬಂದಿರುವೆ? ಒಬ್ಬರಿಗೂ ಹೇಗೆ ಕಾಣಿಸದೆ ಬಂದೆ? ನಾನಿರುವ ಮನೆಯು ಅತ್ಯಂತ ರಕ್ಷಿತವಾದದ್ದು. ರಾಜನು ಅತ್ಯುಗ್ರ ಶಿಕ್ಷಾಮಾಡುವವನು' ಎಂದು ನಳರಾಯ ನೊಡನೆ ಕೇಳಿದಳು. ಆಗ ನಳನು ''ಸುಂದರಿ! ನಾನು ನಳನು. ದೇವತೆಗಳ ದೂತನಾಗಿ ಬಂದಿರುವೆನು. ಇಂದ್ರ, ಅಗ್ನಿ ಯಮ ವರುಣ ಎಂಬ ದೇವತೆಗಳು ನಿನ್ನನ್ನು ಮದುವೆ ಯಾಗಲು ಬಯಸುವರು. ಅವರಲ್ಲಿ ಯಾರಾದರೂ ಒಬ್ಬನನ್ನು ನೀನು ಮದುವೆ ಯಾಗು. ಅವರ ಪ್ರಭಾವದಿಂದಲೇ ನಾನು ಒಳಗೆ ಬಂದಿರುವೆನು. ಪ್ರವೇಶ ಮಾಡುವ ನನ್ನನ್ನು ಒಬ್ಬರೂ ನೋಡಲಿಲ್ಲ. ಒಬ್ಬರೂ ತಡೆಯಲೂ ಇಲ್ಲ. ಇದಕ್ಕೋಸ್ಕರ ದೇವತೆಗಳೇ ನನ್ನನ್ನು ಕಳುಹಿಸಿದರು. ಇದನ್ನು ಕೇಳಿ ಇನ್ನು ನಿನ್ನ ಇಚ್ಛೆಯಂತೆ ಮಾಡು'' ಎಂದನು.

ದಮಯಂತಿಯು ದೇವತೆಗಳಿಗೆ ನಮಸ್ಕರಿಸಿ ನಗುತ್ತಾ ನಳರಾಯನೊಡನೆ 'ಮಹಾರಾಜನೇ! ದೇವತೆಗಳಿಗೆ ನಮಸ್ಕರಿಸಿ ನನ್ನನ್ನು ಮದುವೆಯಾಗು. ನಾನೂ ನನಗಿರುವ ಎಲ್ಲವೂ ವಸ್ತುವೂ ನಿನಗೆ ಸೇರಿದ್ದು. ಹಂಸಗಳ ಮಾತನ್ನು ಕೇಳಿ ನನಗೆ ದುಃಖವಾಗುತ್ತದೆ. ನಿನಗೋಸ್ಕರವೇ ಎಲ್ಲ ರಾಜರನನೂ ತರಿಸಿದ್ದು. ನಿನ್ನನ್ನು ಅಪೇಕ್ಷಿಸುತ್ತಿರುವ ನನ್ನನ್ನು ನೀನು ಪರಿತ್ಯಜಿಸುವ ಪಕ್ಷದಲ್ಲಿ ನಾನು ವಿಷವನ್ನು ಕುಡಿಯುವೆನು. ಅಗ್ನಿಯನ್ನು ಪ್ರವೇಶಿಸುವೆನು. ನೀರಿನಲ್ಲಿ ಹಾರುವೆನು. ಕುತ್ತಿಗೆಗೆ ಹಗ್ಗಹಾಕಿಕೊಂಡು ಸಾಯುವೆನು' ಎಂದು ಹೇಳಿದಳು. ಅದಕ್ಕೆ ನಳರಾಯನು 'ಲೋಕಪಾಲಕರು ಇರುವಾಗ ಮನುಷ್ಯನನ್ನು ಹೇಗೆ ಇಚ್ಛಿಸುವಿ? ನಾನು ಮಹಾನುಭಾವರಾದ ಆ ಲೋಕಪಾಲಕರ ಪಾದದ ಧೂಳಿಗೂ ಸಮಾನನಾಗಲಾರೆನು. ಆದುದರಿಂದ ನೀನು ಆ ದೇವತೆಗಳಲ್ಲಿಯೇ ಮನಸ್ಸಿಡು. ದೇವತೆಗಳಿಗೆ ಅಪ್ರಿಯವನ್ನು ಮಾಡುವವನು ಮೃತ್ಯುವನ್ನು ಹೊಂದುವನು. ಸುಂದರಿ! ನೀನು ಆ ದೇವತೆಗಳ ಕೋಪವು ನನ್ನಲ್ಲಿ ಉಂಟಾಗದಂತೆ ಮಾಡಿ ನನ್ನನ್ನು ರಕ್ಷಿಸು. ಆ

ದೇವತೆಗಳನ್ನೇ ಮದುವೆ ಮಾಡಿಕೊ. ಆ ದೇವತೆಗಳನ್ನು ಮದುವೆ ಮಾಡಿಕೊಂಡು ದಿವ್ಯಭೋಗಗಳನ್ನು ಅನುಭವಿಸು' ಇತ್ಯಾದಿ ರೀತಿಯಾಗಿ ಹೇಳಲು ದಮಯಂತಿಯು ಕಣ್ಣಲ್ಲಿ ನೀರನ್ನು ತುಂಬಿಸಿಕೊಂಡು 'ನಾನು ಎಲ್ಲಾ ದೇವತೆಗಳಿಗೂ ನಮಸ್ಕರಿಸಿ ನಿಮ್ಮನ್ನೇ ಪತಿಯನ್ನಾಗಿ ಸ್ವೀಕರಿಸುವೆನು. ಇದು ಸತ್ಯವಾದ ಮಾತು' ಎಂದು ಹೇಳಿದಳು. ಆಗ ಕೈಮುಗಿದುಕೊಂಡು ನಡುಗುತ್ತಾ ಇರುವ ದಮಯಂತಿಯೊಡನೆ 'ಸುಂದರಿ! ನಾನು ದೂತನಾಗಿ ಬಂದು ನನ್ನ ಪ್ರಯೋಜನವನ್ನು ಮಾಡಿಕೊಳ್ಳಲಾರೆನು. ಅದೂ ದೇವತೆಗಳ ಹತ್ತಿರ ನಾನು ಪ್ರತಿಜ್ಞೆಯನ್ನು ಮಾಡಿ ಹೇಗೆ ಸ್ವಾರ್ಥವನ್ನು ಸಾಧಿಸಿಕೊಳ್ಳುವೆನು. ಅವರನ್ನು ಮದುವೆಯಾದರೆ ನಿನ್ನ ಪ್ರಯೋಜನವೂ ಆಗುವುದು. ನನ್ನ ಪ್ರಯೋಜನವು ಆಗುವುದು' ಎಂದನು. (56-1ರಿಂದ14)

ತರುವಾಯ ದಮಯಂತಿಯು ಕಣ್ಣೀರನ್ನು ತುಂಬಿಸಿಕೊಂಡು ಮೆಲ್ಲನೆ ನಳರಾಯನೊಡನೆ 'ಮಹಾರಾಜ! ನಿನಗೊಂದೂ ಅಪಾಯ ರಹಿತವಾದ ಉಪಾಯವಿದೆ. ಅದರಿಂದ ನಿಮಗೊಂದು ದೋಷವಿಲ್ಲ. ನೀವೂ ದೇವತೆಗಳೂ ಸ್ವಯಂವರ ಮಂಟಪಕ್ಕೆ ಬರೋಣವಾಗಲಿ. ತರುವಾಯ ನಾನು ಲೋಕಪಾಲಕರ ಸನ್ನಿಧಾನದಲ್ಲಿ ನಿಮ್ಮನ್ನು ವರಿಸುವೆನು. ಇದರಿಂದ ನಿಮಗೆ ಒಂದೂ ದೋಷವಾಗಲಾರದು' ಎಂದಳು. ಈ ರೀತಿಯಾಗಿ ದಮಯಂತಿಯು ಹೇಳಲು ನಳರಾಯನು ದೇವತೆಗಳಿದ್ದಲ್ಲಿಗೆ ಬಂದನು. ಬರುತ್ತಾ ಇದ್ದ ನಳರಾಯನನ್ನು ಲೋಕಪಾಲಕರು ನೋಡಿದರು. ನೋಡಿ ಅಲ್ಲಿ ನಡೆದ ವಿಷಯವನ್ನೆಲ್ಲಾ ಕೇಳಿದರು. ನಳರಾಯನು ಅಲ್ಲಿ ನಡೆದ ವಿಷಯವನ್ನೆಲ್ಲಾ ತಿಳಿಸಿದನು. (56- 19 ರಿಂದ 24)

ತರುವಾಯ ಸರಿಯಾದ ಮುಹೂರ್ತದಲ್ಲಿ ಸ್ವಯಂವರ ಮಂಟಪದಲ್ಲಿ ಎಲ್ಲಾ ರಾಜರೂ ಸೇರಿದ್ದರು. ನಳರಾಯನೂ ಬಂದಿದ್ದನು. ದಮಯಂತಿಯು ಸ್ವಯಂವರ ಮಂಟಪದಲ್ಲಿ ಪ್ರವೇಶಿಸಿದಳು. ಎಲ್ಲಾ ರಾಜರ ಹೆಸರನ್ನು ಹೇಳುತ್ತಿರಲು ಮುಂದೆ ಮುಂದೆ ಬಂದಳು. ಅಲ್ಲಿ ಐದು ಜನರು ಒಂದೇ ವಿಧವಾದ ರೂಪವುಳ್ಳವರಾಗಿದ್ದರು. ಅವರಲ್ಲಿ ಯಾರು ನಳರಾಯನೆಂದು ತಿಳಿಯಲಿಲ್ಲ. ಯಾರನ್ನು ನೋಡಿದರೂ ನಳರಾಯನಂತೆ ಕಾಣುತ್ತಿದ್ದರು. ಕೊನೆಗೆ ಅವರು ದೇವತೆಗಳೆಂದು ತಿಳಿದು ಅವರಲ್ಲಿ ಯಾರು ನಳರಾಯನು? ಯಾರು ದೇವತೆಯು ಎಂದು ತಿಳಿಯಲಿಲ್ಲ. ತರುವಾಯ ಮನಸ್ಸಿನಿಂದ ಬಾಯಿಯಿಂದಲೂ ನಮಸ್ಕಾರವನ್ನು ಆಡಿ ಕೈಮುಗಿದುಕೊಂಡು ನಡುಗಿಕೊಂಡು 'ಹಂಸಗಳ ಮಾತುಗಳನ್ನು ಕೇಳಿ ನಾನು ಹೇಗೆ ನಳರಾಯನನ್ನು ಪತಿಯನ್ನಾಗಿ ಸ್ವೀಕರಿಸಿದೆನೋ ಆ ಸತ್ಯದಿಂದ ದೇವತೆಗಳು ನಳರಾಯನನ್ನೇ

ಪತಿಯನ್ನಾಗಿಕೊಡಲಿ. ಮನಸ್ಸಿನಿಂದಲೂ ವಚನದಿಂದಲೂ ನಾನು ಹೇಗೆ ನಳರಾಯನನ್ನು ಮನಸ್ಸಿನಿಂದಲೂ ಮಾತಿನಿಂದಲೂ ಅತಿಕ್ರಮಿಸಲಿಲ್ಲವೋ ಆ ಸತ್ಯದಿಂದ ದೇವತೆಗಳು ನಳರಾಯನನ್ನೇ ಪತಿಯನ್ನಾಗಿ ಮಾಡಲಿ. ನಳರಾಯನನ್ನು ನಾನು ತಿಳಿಯುವಂತೆ ಮಾಡಲಿ. ತಮ್ಮ ರೂಪವನ್ನು ತಿಳಿಸಲಿ' ಎಂದು ಪ್ರಾರ್ಥಿಸಿದಳು. ಕರುಣಾಬರುವಂತೆ ದಮಯಂತಿಯು ಹೇಳಿದ ಮಾತನ್ನು ಕೇಳಿ ನಳರಾಯನಲ್ಲಿ ಇದ್ದ ಅನುರಾಗವನ್ನು ನೋಡಿ ಅವಳ ಮನಸ್ಸಿನ ಶುದ್ಧಿಯನ್ನು ನೋಡಿ ತಮ್ಮ ರೂಪವನ್ನು ತಿಳಿಸಿದರು. ತರುವಾಯ ದಮಯಂತಿಯು ನೋಡುವಾಗ ದೇವತೆಗಳು ಮೈಯಲ್ಲಿ ಬೆವರಿನಿಂದ ರಹಿತರಾಗಿರುವುದನ್ನೂ, ಕಣ್ಣುರೆಪ್ಪೆ ಹಾಕದೆ ಇರುವುದನ್ನೂ ಅವರು ಭೂಮಿಯನ್ನು ಮುಟ್ಟದೆ ಮೇಲೆ ಇರುವುದನ್ನೂ, ಅವರು ಧರಿಸಿರುವ ಹೂವಿನ ಮಾಲೆಯು ಬಾಡಿ ಹೋಗದೆ ಇರುವುದನ್ನೂ ನೋಡಿದಳು. ನಳರಾಯನ ನೆರಳನ್ನು ಕಂಡಳು. ಅವನು ಧರಿಸಿರುವ ಹೂವು ಬಾಡಿರುವುದನ್ನೂ ಮೈಯಲ್ಲಿ ಬೆವರನ್ನು ಸುರಿಸುವುದನ್ನೂ ಕಣ್ಣುರೆಪ್ಪೆಯನ್ನು ಹಾಕುವುದನ್ನೂ ನೋಡಿದಳು. ಹಾಗೆಯೇ ನೆಲವನ್ನು ಮುಟ್ಟಿಕೊಂಡಿರುವುದನ್ನೂ ನೋಡಿದಳು. ಈರೀತಿಯಾಗಿ ನಳರಾಯನನ್ನೂ ದೇವತೆಗಳನ್ನೂ ತಿಳಿದು ನಳರಾಯನನ್ನು ವರಿಸಿದಳು. ನಾಚಿಕೆಪಡುತ್ತಾ ಅವನ ವಸ್ತ್ರದ ಅಗ್ರವನ್ನು ಹಿಡಿದಳು. ಕೊರಳಲ್ಲಿ ಉತ್ತಮವಾದ ಮಾಲಿಕೆಯನ್ನು ಹಾಕಿದಳು. ಅವನನ್ನು ಪತಿಯನ್ನಾಗಿ ಸ್ವೀಕರಿಸಿದಳು. ತರುವಾಯ ಎಲ್ಲಾ ರಾಜರೂ ಹಾಹಾ ಎಂದು ಹೇಳಿದರು. ದೇವತೆಗಳೂ ಋಷಿಗಳೂ ಆಶ್ಚರ್ಯವುಳ್ಳವರಾಗಿ ನಳರಾಯನನ್ನು ಹೊಗಳುವವರಾಗಿ ಸರಿಸರಿ ಎಂದು ಹೇಳಿದರು. ನಳರಾಯನು ಸಂತೋಷದಿಂದ ದಮಯಂತಿಯನ್ನು ಸಮಾಧಾನಪಡಿಸಿ ದನು. 'ಸುಂದರಿ! ದೇವತೆಗಳು ಇರುತ್ತಿರಲು ಅವರ ಸಮೀಪದಲ್ಲಿ ನೀನು ನನ್ನನ್ನು ವರಿಸಿದೆಯಾದ ಕಾರಣ ನಿನ್ನ ಮಾತಿನಂತೆ ನಾನು ಇರುವೆನು. ನನ್ನ ದೇಹದಲ್ಲಿ ಪ್ರಾಣವಿರುವವರೆಗೂ ನಿನ್ನನ್ನು ಬಿಡಲಾರೆನು' ಎಂದನು. ದಮಯಂತಿಯ ಮಾತುಗಳಿಂದ ಸಂತೋಷಪಡಿಸಿ ಕೈಮುಗಿದಳು. ಅವರಿಬ್ಬರೂ ಪರಸ್ಪರ ಪ್ರೀತಿಯುಳ್ಳವರಾಗಿ ಅಗ್ನಿದೇವರೇ ಮೊದಲಾದ ದೇವತೆಗಳನ್ನು ನೋಡಿ ಮನಸ್ಸಿನಿಂದ ಅವರನ್ನೇ ಮರೆಹೊಂದಿದರು. ದಮಯಂತಿಯು ನಳರಾಯನನ್ನು ಸ್ವೀಕರಿಸಲು ಲೋಕಪಾಲಕರು ಎಲ್ಲರೂ ಸಂತೋಷವುಳ್ಳವರಾಗಿ ಎಂಟು ವರಗಳನ್ನು ಕೊಟ್ಟರು.

ಇಂದ್ರದೇವರು (1)ಯಜ್ಞದಲ್ಲಿ ತಾನು ಪ್ರತ್ಯಕ್ಷ ತೋರುವೆನೆಂದೂ

(2)ಉತ್ತಮವಾದ ಗತಿಯಾಗುವಂತೆಯೂ ವರವನ್ನು ಕೊಟ್ಟರು. ಅಗ್ನಿದೇವರು (3)ನಳರಾಯನು ಇಚ್ಛಿಸುವಲ್ಲಿ ತಾನು ಬರುವಂತೆಯೂ (4)ತನ್ನಂತೆ ಕಾಂತಿಯುಳ್ಳ ಲೋಕಗಳು ಸಿಗುವಂತೆಯೂ ವರವನ್ನು ಕೊಟ್ಟರು. ಯಮದೇವರು (5)ಎಂತಹ ಅನ್ನದಲ್ಲಿಯೂ ಒಳ್ಳೇ ರಸವುಂಟಾಗುವಂತೆಯೂ (6)ಧರ್ಮದಲ್ಲಿ ಸ್ಥಿತಿಯುಂಟಾಗು ವಂತೆಯೂ ವರವನ್ನು ಕೊಟ್ಟರು. ವರುಣದೇವರು (7)ನಳರಾಯನು ಇಚ್ಛಿಸುವಲ್ಲಿ ನೀರು ಬರುವಂತೆಯೂ (8)ಪುಷ್ಪಗಳು ಒಳ್ಳೇ ವಾಸನೆಯುಕ್ತವಾಗಿರುವಂತೆಯೂ ವರಗಳನ್ನು ಕೊಟ್ಟರು. ಈಪ್ರಕಾರವಾಗಿ ವರಗಳನ್ನು ಕೊಟ್ಟು ಸ್ವರ್ಗಕ್ಕೆ ಹೋದರು.

ಎಲ್ಲಾ ರಾಜರೂ ಸ್ವಯಂವರವನ್ನು ಅನುಭವಿಸಿ ಆಶ್ಚರ್ಯವುಳ್ಳವರಾಗಿ ದಮಯಂತಿಯ ಮೇಲೆ ಸಂತೋಷವುಳ್ಳವರಾಗಿ ಬಂದಂತೆ ಹೊರಟುಹೋದರು. ನಳರಾಯನು ವಿದರ್ಭನಗರದಲ್ಲಿ ಸ್ವಲ್ಪ ದಿವಸವಿದ್ದು ಭೀಮರಾಜನಿಂದ ಅನುಜ್ಞೆಯನ್ನು ಪಡೆದು ತನ್ನ ನಿಷಧನಗರಕ್ಕೆ ಹೋದನು. ಸ್ತ್ರೀರತ್ನವನ್ನು ನಳರಾಯನು ಹೊಂದಿ ಸಂತೋಷದಿಂದ ವಿಹರಿಸುತ್ತಾ ಇದ್ದನು. ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಾ ಸಂತೋಷಪಡಿಸಿದನು. ಯಯಾತಿ ರಾಜನಂತೆಯೇ ಅಶ್ವಮೇಧ ಯಾಗವನ್ನು ಮಾಡಿದನು. ಮತ್ತೂ ಬೇಕಾದಷ್ಟು ದಕ್ಷಿಣೆಗಳನ್ನು ಕೊಟ್ಟು ಯಾಗವನ್ನು ಮಾಡಿದನು. ಮನೋಹರಗಳಾದ ಉದ್ಯಾನಗಳಲ್ಲಿ ದಮಯಂತಿ ಯೊಡನೆ ವಿಹಾರ ಮಾಡಿದನು. ದಮಯಂತಿಯಲ್ಲಿ ಇಂದ್ರಸೇನ ಎಂಬ ಗಂಡು ಮಗವನ್ನು ಇಂದ್ರಸೇನೆಯೆಂಬ ಹೆಣ್ಣುಮಗಳನ್ನೂ ಪಡೆದನು. ಈರೀತಿಯಾಗಿ ರಾಜನು ವಿಹಾರಮಾಡುತ್ತಾ ರಾಜ್ಯವನ್ನು ಪಾಲಿಸುತ್ತಾ ಭೂಮಿಯನ್ನು ಆಳುತ್ತಾ ಇದ್ದನು. (ಅ.57)

ನಳರಾಯನನ್ನು ದಮಯಂತಿಯು ವರಿಸಿದ ಮೇಲೆ ಲೋಕಪಾಲಕರು ಹೋಗುತ್ತಿರುವಾಗ ಎದುರಾಗಿ ಬರುತ್ತಿರುವ ದ್ವಾಪರನನ್ನು ಕಲಿಯನ್ನೂ ನೋಡಿದರು. ಇಂದ್ರದೇವರು ಕಲಿಯನ್ನು ನೋಡಿ ನೀನು ದ್ವಾಪರನೊಡನೆ ಎಲ್ಲಿಗೆ ಹೋಗುತ್ತಿರುವಿ ಎಂದು ಕೇಳಿದರು. ಅದಕ್ಕೆ ಕಲಿಯು 'ನಾನು ದಮಯಂತಿಯ ಸ್ವಯಂವರಕ್ಕೆ ಹೋಗುತ್ತಿರುವೆನು. ಹೋಗಿ ಅವಳನ್ನು ಮದುವೆಮಾಡಿಕೊಳ್ಳುವೆ ನೆಂದು ನನ್ನ ಅಭಿಪ್ರಾಯವಿದೆ? ಎಂದನು. ಅದನ್ನು ಕೇಳಿ ಇಂದ್ರದೇವರು ನೆಗುತ್ತಾ 'ಆ ಸ್ವಯಂವರವು ಮುಗಿದುಹೋಯಿತು. ದಮಯಂತಿಯು ನಮ್ಮ ಸಮೀಪದಲ್ಲಿ ನಳರಾಯನನ್ನು ವರಿಸಿದಳು' ಎಂದು ಹೇಳಿದರು. ಈರೀತಿಯಾಗಿ ಇಂದ್ರದೇವರು ಹೇಳಲು ಬಹುಕೋಪವುಳ್ಳವನಾಗಿ ಕಲಿಯು ಎಲ್ಲಾ ದೇವತೆಗಳನ್ನೂ ಕರೆದು ಆ

ದಮಯಂತಿಯು ದೇವತೆಗಳ ಮಧ್ಯದಲ್ಲಿ ಮನುಷ್ಯನನ್ನು ವರಿಸಿದವಳಾದ ಕಾರಣ ಅವಳಿಗೆ ಶಿಕ್ಷೆ ಮಾಡುವುದು ನ್ಯಾಯವು. ಈರೀತಿಯಾಗಿ ಕಲಿಯು ಹೇಳಲು ದೇವತೆಗಳು 'ನಾವು ಅನುಜ್ಞೆಯನ್ನು ಕೊಟ್ಟಮೇಲೆ ದಮಯಂತಿಯು ನಳರಾಯನನ್ನು ವರಿಸಿದಳು. ಸರ್ವಗುಣಗಳಿಂದ ತುಂಬಿದ ಆ ನಳರಾಯನನ್ನು ಯಾವ ಕನ್ಯೆಯು ವರಿಸದೆ ಇರುವಳು? ಕಲಿಯೇ! ಯಾರು ನಳರಾಯನನ್ನು ಶಪಿಸಲಿಕ್ಕೆ ಇಚ್ಛಿಸುವನೋ ಅವನು ತನ್ನನ್ನೇ ಶಪಿಸಿದಂತೆ ಆಗುವುದು. ತನ್ನನ್ನೇ ಕೊಂದುಕೊಂಡಂತೆ ಆಗುವುದು. ಅವನು ಮಹಾನರಕವನ್ನು ಹೊಂದುವನು' ಎಂದು ಹೇಳಿ ಸ್ವರ್ಗಕ್ಕೆ ಹೋದರು. (ಅ.58)

ತರುವಾಯ ದೇವತೆಗಳು ಹೊರಟುಹೋದ ಮೇಲೆ ಕಲಿಯು ದ್ವಾಪರನೊಡನೆ 'ದ್ವಾಪರ' ನನಗೆ ಕೋಪವನ್ನು ಸಹಿಸಲಿಕ್ಕೆ ಆಗುವದಿಲ್ಲ. ನಾನು ನಳರಾಯನಲ್ಲಿ ವಾಸಮಾಡುತ್ತೇನೆ. ಅವನನ್ನು ರಾಜ್ಯದಿಂದ ಬಿಡಿಸುತ್ತೇನೆ. ಅವನು ದಮಯಂತಿಯೊಡನೆ ಸುಖಪಡಬಾರದು. ನೀನೂ ಪಗಡೆ ಕಾಳುಗಳಲ್ಲಿ ಪ್ರವೇಶಿಸಿ ನನಗೆ ಸಹಾಯಮಾಡಬೇಕು' ಎಂದು ಹೇಳಿದನು. (ಅ.58)

ಈರೀತಿಯಾಗಿ ಕಲಿಯು ದ್ವಾಪರನೊಡನೆ ಹೇಳಿ ನಳರಾಯನಿದ್ದಲ್ಲಿಗೆ ಹೋದನು. ನಳರಾಯನನ್ನು ಹಿಡಿಯಲಿಕ್ಕೆ ಅವಕಾಶವನ್ನು ನೋಡುತ್ತಾ ಇದ್ದನು. ಹನ್ನೆರಡನೇ ವರ್ಷದಲ್ಲಿ ಒಂದು ಅವಕಾಶವನ್ನು ಹೊಂದಿದನು. ನಳರಾಯನು ಮೂತ್ರವಿಸರ್ಜನೆ ಮಾಡಿ ಕಾಲುತೊಳೆಯಲಿಕ್ಕೆ ಮರೆತು ಸಂಧ್ಯಾವಂದನೆ ಮಾಡಿದನು. ಆ ಸಂದರ್ಭವನ್ನು ನೋಡಿ ಕಲಿಯು ನಳರಾಯನನ್ನು ಪ್ರವೇಶಿಸಿದನು.[1] ಕಲಿಯು ನಳರಾಯನಲ್ಲಿ ಪ್ರವೇಶಿಸಿ, ನಳನ ತಮ್ಮನಾದ ಪುಷ್ಕರನ ಬಳಿಗೆ ಹೋಗಿ 'ಬಾ ನೀನು ನಳರಾಯನೊಡನೆ ಪಗಡೆ ಆಡು. ನೀನು ನನ್ನ ಸಹಾಯದಿಂದ ನಳನನ್ನು ಜಯಿಸಿ ರಾಜ್ಯವನ್ನು ಹೊಂದುವಿ' ಎಂದನು. ಆ ಮಾತನ್ನು ಕೇಳಿ ಪುಷ್ಕರನು ಕಲಿಯೊಡನೆ ನಳರಾಯನಿದ್ದಲ್ಲಿಗೆ ಹೋದನು. ಕಲಿಯು ಎತ್ತಿನ ರೂಪವನ್ನು ಧರಿಸಿ ಪುಷ್ಕರನ ಹಿಂದೆಯೇ ಹೋದನು. ಪುಷ್ಕರನು ವೀರನಾದ ನಳರಾಯನೊಡನೆ ಈ ಎತ್ತನ್ನು ಪಂದ್ಯವಾಗಿಟ್ಟು ಪಗಡೆ ಆಡೋಣ ಎಂದು ಪುನಃ ಪುನಃ ಕೇಳಿದನು. ದಮಯಂತಿಯು ನೋಡುವಂತೆ ಪುಷ್ಕರನು ಪುನಃ ಪುನಃ ಆಟಕ್ಕೆ ಕರೆಯಲು ಸಹಿಸಲಿಲ್ಲ. ಆಗಲಿ ಎಂದು ಒಪ್ಪಿಕೊಂಡನು. ಕಲಿಯ ಆವೇಶವುಳ್ಳ ನಳರಾಯನು ಮೊದಲು ಬಂಗಾರದ ಎರಡು ಭಂಡಿಗಳನ್ನೂ ವಸ್ತ್ರಗಳನ್ನೂ ಆಟದಲ್ಲಿ ಸೋತನು.

1. ಅ.59- 2,3,4

ಆಮೇಲೆ ಪುನಃ ಪುನಃ ಆಡಲಿಕ್ಕೆ ಆರಂಭಿಸಿದನು. ಮಂತ್ರಿಗಳೂ ಮಿತ್ರರೂ ಅವನನ್ನು ನಿಲ್ಲಿಸಲಿಕ್ಕೆ ಸಮರ್ಥರಾಗಲಿಲ್ಲ. ತರುವಾಯ ಊರ ಜನರೂ ಮಂತ್ರಿಗಳಿಂದ ಸಹಿತರಾಗಿ ರಾಜನನ್ನು ಪಗಡೆ ಆಟದಿಂದ ನಿಲ್ಲಿಸಲಿಕ್ಕೆ ಬಂದರು. ತರುವಾಯ ಸಾರಥಿಯು ಬಂದು ದಮಯಂತಿಯೊಡನೆ ತಿಳಿಸಿದನು. 'ದೇವಿ! ಊರಜನರು ಬಾಗಿಲಲ್ಲಿ ಬಂದು ನಿಂತಿದ್ದಾರೆ. ಕಾರ್ಯಾರ್ಥಿಗಳಾಗಿ ಬಂದಿದ್ದಾರೆ. ರಾಜರ ಹತ್ತಿರ ಎಲ್ಲ ಪ್ರಜೆಗಳೂ ಬಂದಿರುವರು ಎಂದು ತಿಳಿಸಬೇಕು' ಎಂದರು. ರಾಜನಿಗೆ ಬಂದಿರುವ ಈ ವ್ಯಸನವನ್ನು ಸಹಿಸದೆ ಕಣ್ಣಲ್ಲಿ ನೀರನ್ನು ತುಂಬಿಸಿಕೊಂಡು ದಮಯಂತಿಯು ದುಃಖವುಳ್ಳವಳಾಗಿ 'ರಾಜರೇ! ಊರಜನರು ಮಂತ್ರಿಗಳಿಂದ ಕೂಡಿಕೊಂಡು ರಾಜಭಕ್ತಿಉಳ್ಳವರಾಗಿ ಬಾಗಿಲಲ್ಲಿ ಕಾದುಕೊಂಡಿರುವರು. ಅವರನ್ನು ಸ್ವಲ್ಪ ಬಂದು ನೋಡಿರಿ' ಎಂದು ಪುನಃ ಪುನಃ ಹೇಳಿದಳು. ಆ ಪ್ರಕಾರವಾಗಿ ಹೇಳುತ್ತಿರುವ ದಮಯಂತಿಯೊಡನೆ ನಳರಾಯನು ಒಂದೂ ಮಾತಾಡಲೇ ಇಲ್ಲ. ತರುವಾಯ ಮಂತ್ರಿಗಳೂ ಊರಜನರೂ ಈ ರಾಜನು ಉಳಿಯಲಿಕ್ಕೆ ಹೋಗುವುದಿಲ್ಲ ಎಂದು ಹೇಳಿಕೊಂಡು ದುಃಖದಿಂದ ಪೀಡಿತರಾಗಿ ಲಜ್ಜಾಉಳ್ಳವರಾಗಿ ತಮ್ಮ ಮನೆಗಳಿಗೆ ಹೋದರು. ತರುವಾಯ ಅನೇಕ ಮಾಸಪರ್ಯಂತ ನಳರಾಯನಿಗೂ ಪುಷ್ಕರನಿಗೂ ಪಗಡೆ ಆಟವು ನಡೆಯಿತು. ತರುವಾಯ ಪವಿತ್ರವಾದ ಕೀರ್ತಿಯುಳ್ಳ ನಳರಾಯನು ಸೋತುಹೋದನು.

ತರುವಾಯ ದಮಯಂತಿಯು ಪಗಡೆ ಆಟವನ್ನು ಆಡುತ್ತಲೇ ಇದ್ದ ನಳರಾಯನನ್ನು ನೋಡಿ ದಮಯಂತಿಗೆ ಹುಚ್ಚು ಹಿಡಿದಂತೆ ಆಯಿತು. ಭಯಶೋಕವುಳ್ಳವಳಾಗಿ ಏನು ಮಾಡಬೇಕೆಂದು ಯೋಚಿಸಿದಳು. ನಳರಾಯನ ಸರ್ವಸ್ವವೂ ಕಳೆದುಹೋದದ್ದನ್ನು ನೋಡಿ ಬೃಹತ್ಸೇನೆಯೆಂಬ ಪರಿಚಾರಿಕೆಯೊಡನೆ 'ಬೃಹತ್ಸೇನೆಯೇ! ರಾಜರ ಆಜ್ಞೆಯಾಯಿತೆಂದು ಹೇಳಿ ಮಂತ್ರಿಗಳನ್ನು ಕರೆದುಕೊಂಡು ಬಾ. ಎಷ್ಟು ಹಣವು ಹೋಯಿತು? ಎಷ್ಟು ಹಣವು ಉಳಿದಿದೆ ಎಂದು ಹೇಳು' ಎಂದಳು. ಮಂತ್ರಿಗಳು ನಳರಾಯನ ಆಜ್ಞೆಯೆಂದು ಕೇಳಿ ನಮ್ಮ ಅದೃಷ್ಟವು ಚೆನ್ನಾಗಿದೆಯೋ ಏನೋ ಎಂದು ಹೇಳುತ್ತಾ ಬಂದರು. ಎಲ್ಲಾ ಪ್ರಜೆಗಳೂ ಪುನಃ ಬಂದರು. ಪುನಃ ದಮಯಂತಿಯು ಹೋಗಿ ತಿಳಿಸಿದಳು. ನಳರಾಯನು ಕೇಳಲೇ ಇಲ್ಲ. ದಮಯಂತಿಯು ಪುನಃ ಲಜ್ಜೆಯಿಂದ ಮನೆಯೊಳಗೆ ಪ್ರವೇಶಿಸಿದಳು. ಒಂದೊಂದು ಆಟಕ್ಕೂ ಪಗಡೆ ಕಾಳುಗಳು ನಳರಾಯನಿಗೆ ವಿರುದ್ಧವಾಗಿಯೇ ಬೀಳುವುದನ್ನು ನೋಡಿ ಮತ್ತು ನಳರಾಯನ ಸರ್ವಸ್ವವೂ ಹೋದದ್ದನ್ನು ತಿಳಿದು

'ಬೃಹತ್ಸೇನೆಯೇ! ನಳರಾಯ ಆಜ್ಞೆಯೆಂದು ಹೇಳಿ ಸಾರಥಿಯಾದ ವಾರ್ಷ್ಣೇಯನನ್ನು ಕರೆದುಕೊಂಡು ಬಾ. ದೊಡ್ಡ ಕಾರ್ಯವು ಆಗುವುದಿದೆ? ಎಂದು ಹೇಳಲು ಬೃಹತ್ಸೇನೆಯು ಹಾಗೆಯೇ ಮಾಡಿದಳು. ದಮಯಂತಿಯು ವಾರ್ಷ್ಣೇಯನೊಡನೆ 'ಮಹಾರಾಜರು ನಿನ್ನಲ್ಲಿ ಎಷ್ಟು ಚೆನ್ನಾಗಿ ಇದ್ದರು ಎಂದು ನಿನಗೇನು ತಿಳಿದಿರುವುದು. ಈಗ ಅವರಿಗೆ ಸಾಲದ ವೇಳೆಯು ಬಂದಿರುವುದು. ಅವರಿಗೆ ನೀನು ಈಗ ಸಹಾಯವನ್ನು ಮಾಡಬೇಕು. ರಾಜರಿಗೆ ಪುಷ್ಕರನೊಡನೆ ಸೋತುಹೋದಂತೆಲ್ಲಾ ಆಟದಲ್ಲಿ ಆಸೆಯು ಹೆಚ್ಚುತ್ತಲೇ ಇರುವುದು. ಪುಷ್ಕರನಿಗೆ ಪಗಡೆಕಾಳುಗಳು ಅನುಕೂಲಗಳಾಗಿಯೇ ಬೀಳುವುವು. ಹಾಗೆಯೇ ರಾಜರಿಗೆ ವಿಪರೀತವಾಗಿಯೇ ಬೀಳುವುವು. ಮಿತ್ರ ಬಂಧುಗಳು ಯಾರು ಹೇಳಿದರೂ ಕೇಳುವುದೇ ಇಲ್ಲ. ನಾನು ಹೇಳಿದ ಮಾತನ್ನೂ ಅಂಗೀಕರಿಸುವುದಿಲ್ಲ. ಸಾರಥಿಯೇ! ರಾಜರ ಭಾಗ್ಯವು ಸ್ವಲ್ಪವೂ ಉಳಿದಿಲ್ಲ. ನಾನು ಹೇಳಿದ ಮಾತನ್ನು ರಾಜರು ಕೇಳುವುದಿಲ್ಲ. ಆದುದರಿಂದ ನಿನ್ನನ್ನೇ ಮರೆಹೋದುವೆನು. ನನ್ನ ಮನಸ್ಸೇನೋ ಸರಿಯಾಗಿಯೇ ಇಲ್ಲ. ರಾಜರಿಗೆ ಪ್ರಿಯಗಳಾದ ಕುದುರೆಗಳನ್ನು ರಥಕ್ಕೆ ಕಟ್ಟಿ ನನ್ನ ಮಕ್ಕಳಿಬ್ಬರನ್ನೂ ರಥದಲ್ಲಿ ಕೂತುಕೊಳ್ಳಿಸಿ ಕುಂಡಿನ ನಗರಿಗೆ ಕರೆದುಕೊಂಡು ಹೋಗು. ನನ್ನ ಬಂಧುಗಳ ಬಳಿಯಲ್ಲಿ ಮಕ್ಕಳನ್ನೂ ಕುದುರೆಗಳನ್ನೂ ರಥವನ್ನೂ ಬಿಟ್ಟು ಆಮೇಲೆ ಅಲ್ಲಿಯೇ ಬೇಕಾದರೆ ವಾಸಮಾಡು. ಅಥವಾ ಬೇರೆಯೆಲ್ಲಿಗಾದರೂ ಹೊರಟುಹೋಗು ಎಂದಳು. ದಮಯಂತಿಯ ಮಾತನ್ನು ವಾರ್ಷ್ಣೇಯನು ಮುಖ್ಯಮಂತ್ರಿಗಳ ಹತ್ತಿರ ತಿಳಿಸಿದನು. ಅವರ ಹತ್ತಿರ ಯೋಚಿಸಿ ಅವರ ಅನುಮತಿಯನ್ನು ಪಡೆದು ನಳ ರಾಯನ ಇಬ್ಬರು ಮಕ್ಕಳನ್ನೂ ರಥದಲ್ಲಿ ಕೂತುಕೊಳ್ಳಿಸಿಕೊಂಡು ವಿದರ್ಭನಗರಿಗೆ ಹೋಗಿ ಕುದುರೆಗಳನ್ನೂ ರಥವನ್ನೂ ಅಲ್ಲಿ ಬಿಟ್ಟು ಇಂದ್ರಸೇನನನ್ನೂ ಇಂದ್ರಸೇನೆಯನ್ನೂ ಅಲ್ಲಿಯೇಬಿಟ್ಟು ಭೀಮರಾಜನೊಡನೆ ಹೋಗಿ ಬರುವೆನು ಎಂದು ಹೇಳಿಕೊಂಡು ನಳರಾಯನ ವಿಷಯವಾಗಿ ಶೋಕಿಸುತ್ತಾ ನಾನು ಎಲ್ಲಿಗೆ ಹೋಗಲಿ ಎಂದು ಮನಸ್ಸಿನಲ್ಲೇ ಯೋಚಿಸುತ್ತಾ ಅಲ್ಲಲ್ಲಿ ಸಂಚರಿಸುತ್ತಾ ಅಯೋಧ್ಯಾನಗರಿಗೆ ಹೋದನು. ದುಃಖದಿಂದ ಋತುಪರ್ಣರಾಜನಲ್ಲಿ ಸೇರಿಕೊಂಡನು. ಋತುಪರ್ಣನು ಅವನಿಗೆ ಸಂಬಳವನ್ನು ಕೊಟ್ಟು ಸಾರಥ್ಯಕ್ಕೆ ಇಟ್ಟುಕೊಂಡನು. (ಅ.59)

ವಾರ್ಷ್ಣೇಯನು ಹೊರಟುಹೋಗಲು ಪಗಡೆ ಆಡುತ್ತಿದ್ದ ನಳರಾಯನ ರಾಜ್ಯವನ್ನೂ ಸರ್ವಸೊತ್ತನ್ನೂ ಪುಷ್ಕರನು ಅಪಹರಿಸಿದನು. ರಾಜ್ಯಭ್ರಷ್ಟನಾದ

ನಳರಾಯನನ್ನು ನೋಡಿ ಪುಷ್ಕರನು ನೆಗುತ್ತಾ ನಿನಗಿನ್ನು ಪಗೆಡೆಯಾಡಲಿಕ್ಕೆ ಒಂದು ವಸ್ತುವೂ ಇಲ್ಲ, ಎನ್ನುವ ಜಯಿಸಿದೆನು. ದಮಯಂತಿಯೊಬ್ಬಳಿದ್ದಾಳೆ. ಬೇಕಾದರೆ ಅವಳನ್ನೂ ಇಟ್ಟು ಆಡು ಎಂದನು. ಈರೀತಿಯಾಗಿ ಪುಷ್ಕರನು ಹೇಳಲು ನಳರಾಯನು ಎದೆಯು ಸೀಳಿದಂತೆ ಆಯಿತು. ಒಂದೂ ಮಾತನಾಡಲಿಲ್ಲ. ತರುವಾಯ ಪುಷ್ಕರನನ್ನು ನೋಡಿ ನಳನು ಅತ್ಯಂತ ಕೋಪವುಳ್ಳವನಾಗಿ ಎಲ್ಲಾ ಆಭರಣಗಳನ್ನೂ ಕೊಟ್ಟು ಮಿತ್ರರಿಗೆ ಶೋಕವನ್ನು ಉಂಟುಮಾಡುತ್ತಾ ಒಂದೇ ವಸ್ತ್ರವುಳ್ಳವನಾಗಿ ಹೊರಟುಹೋದನು. ದಮಯಂತಿಯೂ ಒಂದೇ ವಸ್ತ್ರವುಳ್ಳವಳಾಗಿ ನಳರಾಯನ ಹಿಂದೆಯೇ ಹೋದಳು.

ದಮಯಂತಿಯಿಂದ ಸಹಿತನಾಗಿ ನಗರದ ಹತ್ತಿರ ಮೂರು ರಾತ್ರಿ ನಳರಾಯನು ವಾಸಮಾಡಿದನು. ಪುಷ್ಕರನು ನಳರಾಯನಿಗೆ ಯಾರಾದರೂ ಸಹಾಯಮಾಡಿದ್ದಲ್ಲಿ ಅವನನ್ನು ಸಂಹರಿಸುವೆನು ಎಂದು ಪ್ರಸಿದ್ಧಿಪಡಿಸಿದನು. ಈರೀತಿಯಾಗಿ ಪುಷ್ಕರನ ಮಾತಿನಿಂದ ಊರಿನವರೊಬ್ಬರೂ ನಳರಾಯನಿಗೆ ಸಹಾಯವನ್ನು ಮಾಡಲಿಲ್ಲ. ಇದರಿಂದ ಮೂರುರಾತ್ರಿ ನೀರನ್ನು ಮಾತ್ರ ಕುಡಿದು ಕಳೆದನು. ಹೀಗೆಯೇ ಬಹುದಿವಸವು ಕಳೆಯಲು ಒಂದುದಿನ ಹಸಿವೆಯುಳ್ಳವನಾಗಿ ನಳರಾಯನು ಬಂಗಾರದಂತೆ ರೆಕ್ಕೆಯುಳ್ಳ ಕೆಲವು ಪಕ್ಷಿಗಳನ್ನು ನೋಡಿದನು. ಆಗ ಬಲಿಷ್ಠನಾದ ನಳರಾಯನು ಇವುಗಳನ್ನು ಹಿಡಿದರೆ ಆಹಾರವೂ ಆಯಿತು. ಹಣವೂ ಆಯಿತು ಎಂದುಕೊಂಡನು. ತರುವಾಯ ತನ್ನ ವಸ್ತ್ರವನ್ನು ಆ ಪಕ್ಷಿಗಳ ಮೇಲೆ ಹಾಕಿದನು. ಆಗ ಆ ಪಕ್ಷಿಗಳು ಆ ವಸ್ತ್ರವನ್ನೂ ಹಿಡಿದುಕೊಂಡು ಆಕಾಶದಲ್ಲಿ ಹಾರಿಹೋದವು. ಪಕ್ಷಿಗಳು ಮೇಲಕ್ಕೆ ಹಾರುತ್ತಾ ದಿಗಂಬರನಾಗಿ ದೀನನಾಗಿ ಮುಖ ತಗ್ಗಿಸಿಕೊಂಡು ನಿಂತಿರುವ ನಳರಾಯನೊಡನೆ 'ದುರ್ಬುದ್ಧಿಯುಳ್ಳವರೇ! ನಾವು ಪಗಡೆಕಾಳುಗಳು, ನಿನ್ನ ವಸ್ತ್ರವನ್ನು ಅಪಹಾರ ಮಾಡುವುದಕ್ಕಾಗಿಯೇ ಪಕ್ಷಿಗಳಾಗಿ ಬಂದಿರುವೆವು. ನೀನು ವಸ್ತ್ರವನ್ನು ಧರಿಸಿಕೊಂಡು ಹೋದರೆ ನಮಗೆ ಪ್ರೀತಿಯಾಗಲಾರದು' ಎಂದು ಹೇಳಿ ಹಾರಿಹೋದವು.

ಈರೀತಿಯಾಗಿ ಪಕ್ಷಿಗಳು ಹಾರಿಹೋದದ್ದನ್ನು ತಾನು ದಿಗಂಬರನಾಗಿರುವುದನ್ನೂ ನೋಡಿಕೊಂಡು ನಳರಾಯನು ದಮಯಂತಿಯೊಡನೆ 'ಯಾವ ಪಗಡೆಕಾಳುಗಳು ಪ್ರಕೋಪದಿಂದ ನಾನು ಐಶ್ವರ್ಯದಿಂದ ಭ್ರಷ್ಟನಾಗಿದ್ದೇನೋ ಹಸಿವೆಯಿಂದ ದುಃಖಿತನಾಗಿ ಬದಕಲಿಕ್ಕೇನೇ ಸಾಧ್ಯವಾಗದೆ ಇದ್ದೇನೋ ಯಾರ ನಿಮಿತ್ತವಾಗಿ ಊರಜನರೆಲ್ಲರೂ ನನಗೆ ಸತ್ಕಾರವನ್ನು ಮಾಡುವುದಿಲ್ಲವೋ ಆ

ಪಗಡೆಕಾಳುಗಳು ಪಕ್ಷಿಗಳಾಗಿ ನನ್ನ ವಸ್ತ್ರವನ್ನು ಅಪಹಾರ ಮಾಡುತ್ತಾ ಇವೆ. ನಿನ್ನ ಗಂಡನಾದ ನಾನು ತುಂಬಾ ಆಪತ್ತನ್ನು ಹೊಂದಿರುವೆನು. ಈ ಹಿತಕರವಾದ ಮಾತನ್ನು ಕೇಳು. ಇಲ್ಲಿ ಅನೇಕ ಮಾರ್ಗಗಳು ಹೋಗುತ್ತಾ ಇವೆ. ಇವುಗಳಲ್ಲಿ ಇದು ವಿದರ್ಭದೇಶಕ್ಕೆ ಹೋಗುವ ಮಾರ್ಗವು. ಇದು ಕೋಸಲ ದೇಶಕ್ಕೆ ಹೋಗುವ ಮಾರ್ಗವು ಎಂದು ಹೇಳಿದನು. ಈ ಮಾತನ್ನು ನಳನು ದುಃಖದಿಂದ ದಮಯಂತಿಯೊಡನೆ ಅನೇಕಬಾರಿ ಹೇಳಿದನು. ಆಗ ದಮಯಂತಿಯು ತುಂಬಾ ದುಃಖವುಳ್ಳವಳಾಗಿ ಕಣ್ಣಲ್ಲಿ ನೀರನ್ನು ತುಂಬಿಸಿಕೊಂಡು ನಿಮ್ಮ ಮನಸ್ಸಿನ ಅಭಿಪ್ರಾಯವನ್ನು ಯೋಚಿಸಿದರೆ ನನ್ನ ಎದೆಯು ನಡುಗುತ್ತದೆ. ಅಂಗಗಳೆಲ್ಲಾ ಬಿದ್ದುಹೋಗುತ್ತಿವೆ. ರಾಜ್ಯವನ್ನು ಕಳೆದುಕೊಂಡಿರುವ ಸೊತ್ತನ್ನು ಕಳೆದುಕೊಂಡಿರುವ ವಸ್ತ್ರದಿಂದಲೂ ರಹಿತರಾದ ಹಸಿವೆಯಿಂದ ಶ್ರಮಪಡುವ ನಿಮ್ಮನ್ನು ನಿರ್ಜನವಾದ ಅರಣ್ಯದಲ್ಲಿ ಬಿಟ್ಟು ನಾನು ಹೇಗೆ ಹೋಗಲಿ? ಶ್ರಮಪಟ್ಟಿರುವ ಹಸಿವೆಯಿಂದ ಬಳಲುವ ಪೂರ್ವದ ಸುಖವನ್ನು ಯೋಚನೆಮಾಡುವ ನಿಮ್ಮ ದುಃಖವನ್ನು ಈ ಘೋರವಾದ ಕಾಡಿನಲ್ಲಿ ನಾನು ಪರಿಹರಿಸುವೆನು. ನಿತ್ಯವೂ ಸರ್ವದುಃಖಗಳಲ್ಲೂ ಹೆಂಡತಿಗೆ ಸಮಾನವಾದ ಔಷಧವಿಲ್ಲ' ಎಂದಳು.

[1]'ಅದಕ್ಕೆ ನಳರಾಯನು ದಮಯಂತಿ! ನೀನು ಹೇಳುವ ಮಾತು ಸತ್ಯವು. ಹೆಂಡತಿಗೆ ಸಮಾನ ಮಿತ್ರರು ಬೇರೆ ಇರುವುದಿಲ್ಲ. ನಾನು ನಿನ್ನನ್ನು ಬಿಟ್ಟುಹೋಗುವ ಆಸೆಯುಳ್ಳವನಾಗಿಲ್ಲ. ನೀನು ಯಾಕೆ ಭಯಪಡುವಿ? ನಾನು ಸರ್ವಥಾ ನಿನ್ನನ್ನು ಬಿಡಲಾರೆನು' ಎಂದನು.

ಅದಕ್ಕೆ ದಮಯಂತಿಯು ನನ್ನನ್ನು ಬಿಡುವ ಅಭಿಪ್ರಾಯವು ನಿಮಗೆ ಇಲ್ಲದಿದ್ದರೆ ನೀವು ವಿದರ್ಭದೇಶದ ಮಾರ್ಗವನ್ನು ಯಾಕೆ ತೋರಿಸುವಿರಿ? ನಿಮ್ಮ ಅಭಿಪ್ರಾಯವನ್ನು ನಾನು ತಿಳಿದುಕೊಂಡೆನು. ಕಲಿಪ್ರವೇಶವುಳ್ಳ ಮನಸ್ಸಿನಿಂದ ಬಿಟ್ಟುಬಿಡಬಹುದು. ಹಾಗೆ ಮಾಡಬೇಡಿ. ನನಗೆ ದಾರಿಯನ್ನು ಹೇಳುತ್ತಾ ಇದ್ದೀರಿ. ಆದರಿಂದ ನನಗೆ ಶೋಕವನ್ನು ಹೆಚ್ಚಿಸುತ್ತೀರಿ. ತನಗೆ ಹಾಗೇನಾದರೂ ಅಭಿಪ್ರಾಯವಿದ್ದರೆ ನಾವಿಬ್ಬರೂ ಸೇರಿಯೇ ವಿದರ್ಭ ನಗರಿಗೆ ಹೋಗುವ. ವಿದರ್ಭರಾಜನು ನಿಮ್ಮನ್ನು ಪೂಜಿಸುವರು. ಅವರಿಂದ ಪೂಜಿತರಾಗಿ ನಮ್ಮ ಮನೆಯಲ್ಲಿ ಸುಖವಾಗಿ ವಾಸಿಸುವಿರಿ' ಎಂದಳು. (ಅ.61. 32 ರಿಂದ 36)

1. ನ ಚಾಹಂ ತ್ಯಕ್ತುಕಾಮಸ್ತ್ವಾಂ.... । ತ್ಯಜೇಯ ಮಹಮಾತ್ಮಾನಂ ನ ತ್ವೈವ ತ್ವಾಮನಿಂದಿತೇ ॥ 61-31

ಈರೀತಿಯಾಗಿ ದಮಯಂತಿಯು ಹೇಳಲು ನಳರಾಯನು 'ದಮಯಂತಿ! ನಿನ್ನ ತಂದೆಯ ರಾಜ್ಯವು ನನ್ನ ರಾಜ್ಯದಂತೆಯೇ ಸರಿ. ಆದರೂ ಈ ಅವಸ್ಥೆಯಲ್ಲಿ ನಾನು ಅಲ್ಲಿಗೆ ಹೋಗಲಾರೆನು. ಪೂರ್ವದಲ್ಲಿ ಸಮೃದ್ಧನಾಗಿ ನಿನ್ನ ಸಂತೋಷಕ್ಕೆ ಕಾರಣನಾಗಿ ಅಲ್ಲಿಗೆ ಹೋದವನು. ಈಗ ದರಿದ್ರನಾಗಿ ನಿನ್ನ ಶೋಕ್ಕೆ ಕಾರಣನಾಗಿದ್ದುಕೊಂಡು ಹೇಗೆ ಹೋಗಲಿ?' ಎಂದು ಹೇಳಿ ದಮಯಂತಿಯನ್ನು ಸಮಾಧಾನಪಡಿಸಿದನು. ತರುವಾಯ ಇಬ್ಬರೂ ಒಂದೇ ವಸ್ತ್ರವನ್ನು ಉಟ್ಟುಕೊಂಡು ಅಲ್ಲಿ ಇಲ್ಲಿ ಸಂಚರಿಸುತ್ತಾ ಹಸಿವೆದಾಹಗಳಿಂದ ಪೀಡಿತರಾಗಿ ಒಂದು ಸಭಾಸ್ಥಳಕ್ಕೆ ಹೋದರು. ಆ ಸಭೆಗೆ ಹೋಗಿ ನಳರಾಯನು ದಮಯಂತಿಯೊಡನೆ ಕೂತುಕೊಂಡನು. ವಸ್ತ್ರ ರಹಿತನಾದ ಮೈಯೆಲ್ಲಾ ಧೂಳಿಯುಳ್ಳವನಾಗಿ ಶ್ರಮವುಳ್ಳವನಾಗಿ ದಮಯಂತಿಯೊಡನೆ ಮಲಗಿದನು. ದಮಯಂತಿಯು ನಿದ್ರಾಪರವಶಳಾಗಿ ನಿದ್ದೆ ಮಾಡಿದಳು. ದಮಯಂತಿಗೆ ನಿದ್ದೆಯು ಬಂದಿತು. ನಳರಾಯನಿಗೆ ಮಾತ್ರ ನಿದ್ರೆಯೇ ಬರಲಿಲ್ಲ. ತನ್ನ ರಾಜ್ಯವು ಕಳೆದುಹೋದದ್ದು, ಮಿತ್ರರ ಪರಿತ್ಯಾಗ, ವನಕ್ಕೆ ಬಂದದ್ದು ಇದನ್ನೆಲ್ಲಾ ಯೋಚಿಸಿಕೊಂಡು ಹಾಗೆಯೇ ಮಲಗಿದನು. ನಾನು ಏನು ಮಾಡಿದರೆ ಶ್ರೇಯಸ್ಸಾಗುವುದು? ಏನು ಮಾಡದೆ ಇದ್ದರೆ ಶ್ರೇಯಸ್ಸಾಗುವುದು? ನಾನು ಸಾಯುವುದೇ ಒಳ್ಳೇದೋ? ಇವಳನ್ನು ಬಿಟ್ಟು ಹೋಗುವುದು ಒಳ್ಳೆಯದೋ? ಇವಳು ನನ್ನಲ್ಲಿ ಸ್ನೇಹದಿಂದ ನನ್ನಿಂದಾಗಿ ದುಃಖಪಡುತ್ತಿರುವಳು. ನಾನು ಬಿಟ್ಟುಹೋದರೆ ಒಂದು ಪಕ್ಷಕ್ಕೆ ಸ್ವಕೀಯಜನರನ್ನು ಸೇರಬಹುದು. ನನ್ನ ಹತ್ತಿರವೇ ಇದ್ದರೆ ನಿಶ್ಚಯವಾಗಿಯೂ ದುಃಖವನ್ನು ಹೊಂದುವಳು. ಬಿಟ್ಟುಹೋದರೆ ಸುಖವನ್ನು ಹೊಂದಿದರೂ ಹೊಂದಬಹುದು!'

ಈರೀತಿಯಾಗಿ ನಳರಾಯನು ಪುನಃ ಪುನಃ ವಿಚಾರಮಾಡಿ ದಮಯಂತಿಯನ್ನು ಬಿಟ್ಟುಹೋಗುವುದೇ ಶ್ಲಾಘ್ಯವೆಂದು ತಿಳಿದುಕೊಂಡನು. 'ಇವಳು ಮಹಾ ತೇಜಸ್ವಿನಿಯು. ಪತಿವ್ರತೆಯು. ಇವಳನ್ನು ಒಬ್ಬರೂ ಬಲಾತ್ಕರಿಸಲಿಕ್ಕೆ ಆಗಲಾರದು' ಎಂದುಕೊಂಡನು. ಕಲಿಯ ಪ್ರೇರಣೆಯಿಂದ ನಳರಾಯನಿಗೆ ದಮಯಂತಿಯನ್ನು ಬಿಟ್ಟುಹೋಗಲಿಕ್ಕೆ ಬುದ್ಧಿಯುಂಟಾಯಿತು. ತಾನೂ ದಮಯಂತಿಯೂ ಒಂದೇ ವಸ್ತ್ರವನನು ಉಟ್ಟುಕೊಂಡಿರುವುದನ್ನು ತಿಳಿದು ಅದನ್ನು ತುಂಡುಮಾಡಬೇಕೆಂದು ಬುದ್ಧಿಯುಂಟಾಯಿತು. ದಮಯಂತಿಗೆ ತಿಳಿಯದಂತೆ ವಸ್ತ್ರವನು ಹೇಗೆ ಕತ್ತರಿಸಲಿ ಎಂದು ಯೋಚನೆ ಮಾಡಿದನು. ತರುವಾಯ ಆ ಸಭೆಯಲ್ಲಿ ಅಲ್ಲಲ್ಲಿ ಹುಡುಕಿ ನೋಡಲು ಒಂದು ಖಡ್ಗವು ಸಿಕ್ಕಿತು. ಆ ಖಡ್ಗದಿಂದ ವಸ್ತ್ರವನ್ನು ಕತ್ತರಿಸಿ ಅದನ್ನು ತಾನು

ಉಟ್ಟುಕೊಂಡು ನಿದ್ದೆ ಮಾಡುತ್ತಿದ್ದ ದಮಯಂತಿಯನ್ನು ಬಿಟ್ಟುಹೋದನು. ಸ್ವಲ್ಪ ದೂರಹೋಗಿ ದಮಯಂತಿಯ ಮೇಲಿನ ಪ್ರೇಮದಿಂದ ಪುನಃ ತಿರುಗಿ ಬಂದನು. ದಮಯಂತಿಯನ್ನು ನೋಡಿ ಅತ್ತನು. ಹೀಗೆಯೇ ಹೋಗುತ್ತಾ ಬರುತ್ತಾ ಕೊನೆಗೆ ದೇವತೆಗಳನ್ನೆಲ್ಲಾ 'ರಕ್ಷಣೆ ಮಾಡಲಿ' ಎಂದು ಪ್ರಾರ್ಥಿಸಿ ಬಹಳವಾಗಿ ಅತ್ತು ಕಲಿಯಿಂದ ಪ್ರೇರಿತವಾದ ಮನಸ್ಸುಳ್ಳವನಾಗಿ ಶೂನ್ಯವಾದ ಅರಣ್ಯದಲ್ಲಿ ದಮಯಂತಿಯನ್ನು ಬಿಟ್ಟೇ [1]ಹೊರಟುಹೋದನು. (ಅ. 62-15, 25, 26, 28, 29)

ನಳರಾಯನು ಹೊರಟುಹೋದ ಮೇಲೆ ದಮಯಂತಿಯು ಎದ್ದಳು. ನಳರಾಯನನ್ನು ಕಾಣದೆ ಭಯವುಳ್ಳವಳಾಗಿ ತುಂಬಾ ದುಃಖವುಳ್ಳವಳಾಗಿ ಗಟ್ಟಿಯಾಗಿ ಕರೆದಳು. ಹಾ ನಾಥ! ನನ್ನನ್ನು ಬಿಟ್ಟುಹೋದಿರಾ? ಎಂದುಕೊಂಡಳು. ನಾನಾವಿಧ ವಾಗಿ ವಿಲಾಪವನ್ನು ಮಾಡಿದಳು. ತುಂಬಾ ಅಳುವವಳಾಗಿ ದೀರ್ಘಶ್ವಾಸವುಳ್ಳವಳಾಗಿ 'ಯಾರು ಈಪ್ರಕಾರ ವ್ಯರ್ಥವಾಗಿ ದ್ವೇಷಮಾಡಿ ನಳರಾಯನಿಗೆ ದುಃಖ ಬರುವಂತೆ ಮಾಡಿರುವರೋ ಅವರಿಗೆ ಅತ್ಯಂತ ದುಃಖವುಂಟಾಗಲಿ?!! ಎಂದು ಶಪಿಸಿದಳು. ಅಳುತ್ತಾ ಹುಚ್ಚುಹಿಡಿದವಳಂತೆ ನಳರಾಯನನ್ನು ಹುಡುಕುತ್ತಾ ಹೋದಳು. ಹೀಗೆ ಅವಳು ಸಂಚರಿಸುತ್ತಿರಲು ಒಂದು ದೊಡ್ಡ ಹೆಬ್ಬಾವು ಹತ್ತಿರಕ್ಕೆ ಬಂದು ದಮಯಂತಿಯನ್ನು ಹಿಡಿದು ನುಂಗಲಿಕ್ಕೆ ಆರಂಭಿಸಿತು. ಆಗ ದಮಯಂತಿಯು ನಳರಾಯನನ್ನು ಜ್ಞಾಪಿಸಿಕೊಂಡು ತುಂಬಾ ಕೂಗಿಕೊಂಡಳು. ಆ ಸಮಯದಲ್ಲಿ ಒಬ್ಬ ಬೇಡನು ಆ ಕಾಡಿನಲ್ಲಿ ಸಂಚರಿಸುತ್ತಾ ಇದ್ದನು. ದಮಯಂತಿಯ ಕೂಗನ್ನು ಕೇಳಿ ಓಡಿಬರತಕ್ಕವನಾಗಿ ತೀಕ್ಷ್ಣವಾದ ಶಸ್ತ್ರದಿಂದ ಹಾವಿನ ಬಾಯಿಯಲ್ಲೇ ಸೀಳಿದನು. ಆ ಹಾವನ್ನು ಕೊಂದುಹಾಕಿ ದಮಯಂತಿಯನ್ನು ಬಿಡಿಸಿ ಸ್ನಾನಮಾಡಿಸಿದನು. ಸಮಾಧಾನ ಪಡಿಸಿ ಆಹಾರವನ್ನು ಕೊಟ್ಟನು. ಸುಂದರಿ! ನೀನು ಯಾರು? ಎಲ್ಲಿಂದ ಬಂದಿ? ಈ ಅವಸ್ಥೆಯನ್ನು ಹೇಗೆ ಹೊಂದಿದಿ'? ಎಂದು ಕೇಳಿದನು. ದಮಯಂತಿಯು ನಡೆದ ವಿಷಯವನ್ನೆಲ್ಲಾ ತಿಳಿಸಿದಳು. ಅರ್ಧವಸ್ತ್ರವನ್ನು ಧರಿಸಿರುವ ನವಯುವತಿಯಾದ ಆ ಸುಂದರಾಂಗಿಯನ್ನು ನೋಡಿ ಬೇಡನು ಕಾಮಪೀಡಿತನಾಗಿ ತನ್ನನ್ನು ಮದುವೆಯಾಗು ವಂತೆ ಕೇಳಿಕೊಂಡನು. ದಮಯಂತಿಗೆ ಅವನ ದುಷ್ಟ ಅಭಿಪ್ರಾಯವನ್ನು ತಿಳಿದು ಕೋಪವುಂಟಾಯಿತು. ದುಷ್ಟನಾದ ಬೇಡನು ಅವಳನ್ನು ಬಲಾತ್ಕರಿಸಲಿಕ್ಕೆ ಉದ್ಯುಕ್ತ ನಾದನು. ತರುವಾಯ ದಮಯಂತಿಯು ಎಷ್ಟು ಸಮಾಧಾನವನ್ನು ಹೇಳಿದರೂ

1. ಆಕೃಷ್ಯಮಾಣಃ ಕಲಿನಾ...... ಅಪಕೃಷ್ಟಸ್ತು ಕಲಿನಾ....ಮೋಹಿತಃ ಪ್ರಾದವನ್ನಲಃ ।

ಕೇಳದೆ ಹೋಗಲು 'ನಾನು ಮನಸ್ಸಿನಿಂದಲೂ ಕೂಡ ನಳರಾಯನಿಂದ ಇತರ ಪುರುಷರನ್ನು ಭಾವಿಸಲಿಲ್ಲ. ಆ ಸತ್ಯದಿಂದ ಈ ಅಲ್ಪನು ಸತ್ತು ಬೀಳಲಿ' ಎಂದಳು. ಆಗ ಬೇಡನು ಬೆಂಕಿಹಿಡಿದ ಮರದಂತೆ ಸತ್ತು ಭೂಮಿಯಲ್ಲಿ ಬಿದ್ದನು. (ಅ.63)

ಈರೀತಿಯಾಗಿ ಬೇಡನನ್ನು ಕೊಂದಮೇಲೆ ದಮಯಂತಿಯು ಮುಂದೆ ಭಯಂಕರವಾದ ವನದಲ್ಲಿ ಹೋದಳು. ಅನೇಕ ನದೀ ಸರೋವರ ಮೊದಲಾದವನ್ನು ದಾಟಿಕೊಂಡು ನಳರಾಯನನ್ನು ಹುಡುಕುತ್ತಾ ವಿಲಾಪವನ್ನು ಮಾಡುತ್ತಾ ಹೋದಳು. ಸಿಂಹದ ಹತ್ತಿರ ಹುಲಿಯ ಹತ್ತಿರ ಬೆಟ್ಟದ ಹತ್ತಿರ ಹುಚ್ಚುಹಿಡಿದವಳಂತೆ ಕೇಳುತ್ತಾ ಹೋದಳು. ಹೀಗೆಯೇ ಮುಂದೆ ಹೋಗುತ್ತಾ ಅನೇಕ ತಪಸ್ವಿಗಳಿಂದ ಕೂಡಿದ ಆಶ್ರಮವನ್ನು ನೋಡಿದಳು. ಸುಂದರಿಯಾದ ದಮಯಂತಿಯು ಆ ಆಶ್ರಮವನ್ನು ಪ್ರವೇಶಿಸಿದಳು. ದೊಡ್ಡವರಿಗೆ ನಮಸ್ಕಾರಮಾಡಿ ವಿನಯದಿಂದ ನಿಂತುಕೊಂಡಳು. ಋಷಿಗಳೆಲ್ಲ ಬರಬೇಕು ಎಂದು ಕರೆದು ಕೂತುಕೊಳ್ಳಲಿಕ್ಕೆ ಹೇಳಿದರು. ದಮಯಂತಿಯು ಅವರೊಡನೆ ಕುಶಲಪ್ರಶ್ನೆಯನ್ನು ಮಾಡಲು ಅವರು ತಮ್ಮ ಕುಶಲವನ್ನು ತಿಳಿಸಿ ನೀನು ಯಾರು? ನಿನ್ನ ರೂಪವನ್ನು ನೋಡಿ ನಮಗೆಲ್ಲಾ ಆಶ್ಚರ್ಯವಾಗುತ್ತಿದೆ. ನೀನು ವನದೇವತೆಯೋ? ನದಿದೇವತೆಯೋ? ಎಂದು ಕೇಳಿದರು. ಆಗ ದಮಯಂತಿಯು ತನ್ನ ಎಲ್ಲಾ ವಿಷಯವನ್ನು ತಿಳಿಸಿ ನಿಮ್ಮ ತಪೋವನಕ್ಕೆ ನಳರಾಯನು ಬಂದಿರುವರೇ ಎಂದು ಕೇಳಿದಳು. ಇನ್ನು ಕೆಲವು ದಿವಸಗಳಲ್ಲಿ ನಳರಾಯನನ್ನು ನಾನು ನೋಡದೆ ಇದ್ದರೆ ಪ್ರಾಣವನ್ನು ಬಿಡುವೆನು. ಅವರಿಲ್ಲದೆ ನಾನು ಬದುಕಿ ಏನು ಪ್ರಯೋಜನವಿದೆ? ಎಂದಳು. ಈ ಪ್ರಕಾರ ವಿಲಾಪ ಮಾಡುವ ದಮಯಂತಿಯೊಡನೆ ಋಷಿಗಳು 'ಕಲ್ಯಾಣಿ' ನಿನ್ನ ಉತ್ತರಕಾಲದ ಫಲವು ಚೆನ್ನಾಗಿದೆ. ನಾವು ತಪಸ್ಸಿನ ಸಾಮರ್ಥ್ಯದಿಂದ ತಿಳಿದಿರುವೆವು. ನೀನು ಬೇಗನೇ ನಳರಾಯನನ್ನು ನೋಡುವಿ. ಅದೇ ನಿಷಧ ದೇಶವನ್ನೇ ನೀವು ಆಳುವಿರಿ ಎಂದು ಹೇಳಿ ಆ ಋಷಿಗಳು ಮರೆಯಾದರು. (64-96) ದಮಯಂತಿಯು ಅದನ್ನು ನೋಡಿ ತುಂಬಾ ಆಶ್ಚರ್ಯಪಟ್ಟಳು. ಮುಂದೆ ಹೋಗಿ ಮತ್ತೂ ಅತ್ತಳು. ಹೀಗೆ ಬಹುದೂರ ಹೋದವಳಾಗಿ ಒಂದು ಸ್ಥಳದಲ್ಲಿ ನದಿಯನ್ನು ದಾಟುತ್ತಿದ್ದ ಆನೆ ಕುದುರೆ ರಥಗಳಿಂದ ಕೂಡಿದ್ದ ವರ್ತಕರ ಗುಂಪನ್ನು ನೋಡಿದಳು. ನೋಡಿ ಅವರ ಹತ್ತಿರ ಹೋದಳು. ಅರ್ಧವಸ್ತ್ರವನ್ನು ಉಟ್ಟುಕೊಂಡು ಧೂಳಿನಿಂದ ತಲೆಕೂದಲುಳ್ಳವಳಾಗಿ ತುಂಬಾ ಕೃಶಳಾಗಿ ಹುಚ್ಚಿಯಂತೆ ಕಾಣಸುತ್ತಾ ಹೋದಳು. ಅವಳನ್ನು ನೋಡಿ ಕೆಲವರು ಓಡಿಹೋದರು. ಕೆಲವರು ಯೋಚನೆ

ಮಾಡುತ್ತಾ ನಿಂತರು. ಇನ್ನು ಕೆಲವರು ಕೂಗಿಕೊಂಡರು. ಕೆಲವರು ಅಪಹಾಸ ಮಾಡಿದರು. ಕೆಲವರು ಅಸೂಯಾಪಟ್ಟರು. ಕೆಲವರು ಅವಳಲ್ಲಿ ದಯಾತೋರಿಸಿ ದರು. ಇನ್ನು ಕೆಲವರು 'ಅಮ್ಮ ಯಾರು ನೀನು? ಯಾರನ್ನು ಹುಡುಕುವಿ?' ಎಂದು ಕೇಳಿದರು. 'ನಿನ್ನನ್ನು ನೋಡಿ ನಮಗೆಲ್ಲಾ ದುಃಖವಾಗುತ್ತದೆ. ನೀನು ಮನುಷ್ಯಳೋ? ದೇವತಾಸ್ತ್ರೀಯೋ? ನಿನ್ನನ್ನು ನಾವೆಲ್ಲರೂ ಮರೆಹೊಂದಿರುವೆವು. ನೀನು ಯಕ್ಷಿಯೋ ರಾಕ್ಷಸಿಯೋ? ಯಾರು ಬೇಕಾದರೂ ಆಗಿರು. ನಮ್ಮನ್ನು ರಕ್ಷಿಸು.' ಎಂದರು. ಈರೀತಿಯಾಗಿ ಕೇಳಲು ದಮಯಂತಿಯು ಆ ವರ್ತಕರ ಗುಂಪಿನ ಯಜಮಾನ ನೊಡನೆಯೂ ವರ್ತಕರೊಡನೆಯೂ ತನ್ನ ವಿಷಯವನ್ನೆಲ್ಲಾ ತಿಳಿಸಿ ನಾನು ನಳರಾಯನನ್ನು ಹುಡುಕುತ್ತಾ ಇದ್ದೇನೆ. ನೀವು ನೋಡಿದ್ದರೆ ನನಗೆ ಹೇಳಬೇಕು ಎಂದು ಹೇಳಿದರು. (ಅ.64)

ಅದಕ್ಕೆ ಆ ವರ್ತಕರ ಗುಂಪಿಗೆ ಯಜಮಾನನಾದ ಶುಚಿ ಎನ್ನುವವನು 'ಅಮ್ಮ! ನಾನು ಈ ಗುಂಪಿಗೆ ಯಜಮಾನನು. ನಾನು ನಳನೆಂಬ ಮನುಷ್ಯನನ್ನು ನೋಡಲೇ ಇಲ್ಲ. ಮನುಷ್ಯ ಸಂಚಾರರಹಿತವಾದ ಈ ಕಾಡಿನಲ್ಲಿ ಆನೆ ಹುಲಿ ಇತ್ಯಾದಿ ಪ್ರಾಣಿಗಳನ್ನು ನೋಡಿದೆನಲ್ಲದೆ ಯಾವ ಮನುಷ್ಯನನ್ನು ನೋಡಿಲ್ಲ. ನಿನ್ನನ್ನು ಮಾತ್ರ ಮನುಷ್ಯಳನ್ನು ನೋಡುತ್ತಿದ್ದೇನೆ. ನಮ್ಮ ಯಕ್ಷರಾಜನಾದ ಮಣಿಭದ್ರನು ರಕ್ಷಿಸಲಿ' ಎಂದನು. ದಮಯಂತಿಯು ಈ ಗುಂಪು ಎಲ್ಲಿಗೆ ಹೋಗುತ್ತಿರುವುದು ಎಂದು ಕೇಳಿದಳು. ಅದಕ್ಕೆ ಯಜಮಾನಾನು ಚೇದಿರಾಜನಾದ ಸುಬಾಹುವಿನ ನಗರಕ್ಕೆ ವ್ಯಾಪಾರಮಾಡಲಿಕ್ಕೆ ಹೋಗುತ್ತಾ ಇದೆ ಎಂದನು. (ಅ.64, 127 ರಿಂದ 131)

ದಮಯಂತಿ ಆ ಮಾತನ್ನು ಕೇಳಿ ತಾನೂ ಅವರೊಡನೆ ಹೋದಳು. ಆ ಭಯಂಕರವಾದ ಅರಣ್ಯದಲ್ಲಿ ಬಹುದಿನ ಪ್ರಯಾಣಮಾಡಲು ಒಂದು ದಿನ ಒಂದು ಸುಂದರವಾದ ಸರೋವರವನ್ನು ನೋಡಿದರು. ತರುವಾಯ ಅಲ್ಲಿಯೇ ವಾಸಮಾಡಬೇಕೆಂದು ಆ ಸರೋವರತೀರದಲ್ಲಿಯೇ ರಾತ್ರಿಕಾಲದಲ್ಲಿ ಮದಭರಿತ ಗಳಾದ ಕಾಡಾನೆಗಳು ನೀರು ಕುಡಿಯಲಿಕ್ಕೆ ಆ ಸರೋವರಕ್ಕೆ ಬಂದವು. ದಾರಿಯಲ್ಲಿ ಮಲಗಿರುವ ವರ್ತಕರನ್ನು ಮೆಟ್ಟಿದವು. ಗಟ್ಟಿಯಾಗಿ ಕೂಗುತ್ತಾ ಎಷ್ಟೋ ಜನರನ್ನು ಕೊಂದವು. ಎಷ್ಟೋ ಜನರು ಮಹಾಭಯದಿಂದ ಮರಗಳ ಮರೆಗೆ ಓಡಿಹೋದರು. ಆನೆಗಳು ಕೆಲವರನ್ನು ದಂತಗಳಿಂದ ಸೀಳಿಕೊಂದವು. ಕೆಲವರನ್ನು ಕಾಲಿನಿಂದ ಮೆಟ್ಟಿಕೊಂಥವು. ಒಂಟೆಗಳನ್ನೂ ಕುದುರೆಗಳನ್ನೂ ಎಷ್ಟೋ ಮನುಷ್ಯರನ್ನೋ ಕೊಂದವು. ಎಷ್ಟೋ ಜನರು ಭಯದಿಂದ ಗಟ್ಟಿಯಾಗಿ ಕೂಗುತ್ತಾ ಓಡುವವರಾಗಿ

ಮರವು ತಾಗಿ ಬಿದ್ದರು. ತಗ್ಗಾದ ಸ್ಥಳದಲ್ಲಿ ಬಿದ್ದರು. ಈ ಪ್ರಕಾರವಾಗಿ ದೈವೇಚ್ಛೆಯಿಂದ ಅನೇಕ ವರ್ತಕರು ಸತ್ತರು. ಉಳಿದವರೆಲ್ಲರೂ ಹಣವು ನಾಶವಾಯಿತು ಎಂದು ಗಟ್ಟಿಯಾಗಿ ಕೂಗಿಕೊಂಡರು. ಓಡುತ್ತಿದ್ದರು. ಈರೀತಿಯಾಗಿ ಜನರ ನಾಶವಾಗು ತ್ತಿರಲು ದಮಯಂತಿಗೆ ಎಚ್ಚರವಾಯಿತು. ವರ್ತಕರೆಲ್ಲ ಸತ್ತಿದ್ದನ್ನು ನೋಡಿದಳು. ಭಯದಿಂದ ಎದ್ದಳು. ಉಳಿದ ವರ್ತಕರೆಲ್ಲಾ ಒಟ್ಟಿಗೆ ಸೇರಿದವರಾಗಿ 'ಇದು ಯಾವ ಕರ್ಮದ ಫಲವು? ನಾವು ಮಣಿಭದ್ರನನ್ನೂ ಯಕ್ಷರಾಜನಾದ ಕುಬೇರನನ್ನು ಪೂಜಿಸಲಿಲ್ಲ. ಆದರಿಂದಲೇ ಹೀಗಾಯಿತು' ಎಂದುಕೊಂಡರು. ಇನ್ನು ಕೆಲವರು 'ನಮಗೆ ಹುಚ್ಚಿಯಂತೆ ಒಬ್ಬಳು ಹೆಂಗಸು ಕಾಣಿಸಿದ್ದಳಷ್ಟೇ ಅವಳೇ ಮಾಯೆಯಿಂದ ಹೀಗೆ ಮಾಡಿರಬೇಕು. ಅವಳು ರಾಕ್ಷಸಿಯೋ ಪಿಶಾಚಿಯೋ ಯಕ್ಷಿಯೋ ಆಗಿರಬೇಕು. ಆ ಪಾಪಿಯನ್ನು ನಾವು ನೋಡಿದರೆ ಕಲ್ಲಿನಿಂದ ಮಣ್ಣಿನ ಗೆಡ್ಡೆಯಿಂದ ಕಟ್ಟಿಗೆಯಿಂದ ಬಡಿಸುವ ಎಂದರು. ಅವಳನ್ನು ಕೊಂದುಹಾಕುವ ಎಂದರು. ಇದನ್ನು ಕೇಳಿ ದಮಯಂತಿಯು ಲಜ್ಜಾಉಳ್ಳವಳಾಗಿ ಭಯವುಳ್ಳವಳಾಗಿ ಓಡಿದಳು. ತುಂಬಾ ದುಃಖಪಟ್ಟಳು. 'ನಾನು ಏನು ಪಾಪಮಾಡಿದೆನೋ? ನನಗೆ ಸಹಾಯಕ್ಕೆ ಸಿಕ್ಕಿದ ಈ ವರ್ತಕರೂ ಆನೆಗಳಿಂದ ಮರ್ದಿತರಾದರಲ್ಲಾ'? ಸ್ವಯಂವರ ಕಾಲದಲ್ಲಿ ದೇವತೆಗಳು ಬಂದಿದ್ದರು. ನಳರಾಯನಿಗೋಸ್ಕರ ಅವರನ್ನು ತಿರಸ್ಕರಿದೆನು. ಅವರ ಪ್ರಭಾವದಿಂದ ಹೀಗೆ ವಿಯೋಗವನ್ನು ಹೊಂದಿರುವೆನು' ಇತ್ಯಾದಿ ವಿಲಾಪವನ್ನು ಮಾಡಿದಳು. ತರುವಾಯ ಸತ್ತು ಉಳಿದ ವರ್ತಕರು ಮುಂದೆ ಹೋಗಲು ಅವರ ಹಿಂದೆಯೇ ಹೋಗುತ್ತಾ ಸಾಯಂಕಾಲದಲ್ಲಿ ಸುಬಾಹುರಾಜನ ಚೇದಿದೇಶವನ್ನು ಹೋಗಿ ಸೇರಿದಳು. ಅರ್ಧವಸ್ತ್ರವನ್ನು ಉಟ್ಟುಕೊಂಡು ಹುಚ್ಚಿಯಂತೆ ಹೋಗುತ್ತಿರುವ ಪರಮಸುಂದರಿ ಯಾದ ದಮಯಂತಿಯನ್ನು ನೋಡಿ ಊರಜನರೆಲ್ಲರೂ ಸುತ್ತಲೂ ಬಂದರು. ಅರಮನೆಯ ಉಪ್ಪರಿಗೆಯಲ್ಲಿ ಕೂತಿದ್ದ ರಾಜನ ತಾಯಿಯು ದಾಸಿಯ ಹತ್ತಿರ ದಮಯಂತಿಯನ್ನು ತನ್ನ ಹತ್ತಿರ ಕರೆದುಕೊಂಡು ಬರುವಂತೆ ಹೇಳಿದಳು. ದಾಸಿಯಾದರೋ ಹೋಗಿ ಜನರನ್ನು ದೂರಮಾಡಿ ದಮಯಂತಿಯನ್ನು ಉಪ್ಪರಿಗೆಗೆ ಕರೆದುಕೊಂಡು ಬಂದಳು. ನೀನು ಯಾರು? ಎಂದು ಕೇಳಿದಳು. ಅದಕ್ಕೆ ಅವಳು ನಾನೊಬ್ಬ ಮನುಷ್ಯಳು. ನನ್ನ ಗಂಡನು ಒಳ್ಳೇ ಗುಣವಂತನು. ಅವನು ಪಗಡೆ ಆಟದಲ್ಲಿ ಸೋತು ಕಾಡಿಗೆ ಹೋದನು. ನಾನೂ ಅವನನ್ನು ಅನುಸರಿಸುತ್ತಾ ಸಮಾಧಾನಪಡಿಸುತ್ತಾ ವನಕ್ಕೆ ಬಂದೆನು. ಒಂದು ಸಂದರ್ಭದಲ್ಲಿ ಹಸಿವೆಯುಳ್ಳವನಾಗಿ ತನ್ನ ವಸ್ತ್ರವನ್ನು ಕಳೆದುಕೊಂಡನು. ಹುಚ್ಚನಂತೆ ವಸ್ತ್ರರಹಿತನಾದ

ಅವನನ್ನು ಒಂದೇ ವಸ್ತ್ರವುಳ್ಳವಳಾಗಿ ಅನುಸರಿಸಿ ಹೋದೆನು. ಒಂದು ಸ್ಥಳದಲ್ಲಿ ನಾನು ಮಲಗಿರಲು ನನ್ನ ವಸ್ತ್ರವನ್ನು ಕತ್ತರಿಸಿಕೊಂಡು ನಿರಪರಾಧಿಯಾದ ನನ್ನನ್ನು ಬಿಟ್ಟುಹೋದನು. ನಾನು ಪತಿಯನ್ನು ಹುಡುಕುತ್ತಾ ಬರುತ್ತಿರುವೆನು. ಎಂದು ರಾಜನ ತಾಯಿಯೊಡನೆ ಹೇಳಿ ಕಣ್ಣೀರು ಸುರಿಸುತ್ತಾ ನಿಂತುಕೊಂಡಳು. ರಾಜನ ತಾಯಿಯು ಅಳುತ್ತಾ ಇದ್ದ ದಮಯಂತಿಯನ್ನು ನೋಡಿ ತಾನೂ ತುಂಬಾ ದುಃಖವುಳ್ಳವಳಾಗಿ 'ಸುಂದರಿ! ನೀನು ಇಲ್ಲಿಯೇ ವಾಸಮಾಡು. ನಿನ್ನಮೇಲೆ ನನಗೆ ತುಂಬಾ ಪ್ರೇಮ ಉಂಟಾಗಿದೆ. ನಮ್ಮ ಆಳುಗಳು ನಿನ್ನ ಗಂಡನನ್ನು ಹುಡುಕುವರು. ಅಥವಾ ನಿನ್ನ ಗಂಡನೇ ಅಲ್ಲಲ್ಲಿ ಸಂಚರಿಸಿ ಇಲ್ಲಿಗೆ ಬರಬಹುದು. ನೀನು ಇಲ್ಲಿ ಇದ್ದುಕೊಂಡೇ ಗಂಡನನ್ನು ಹೊಂದುವಿ! ಎಂದು ಹೇಳಿದಳು. (ಅ.65)

ಆಗ ದಮಯಂತಿಯು 'ಅಮ್ಮ' ನಾನು ಕೆಲವು ನಿಯಮದಿಂದ ಮಾತ್ರ ಇಲ್ಲಿ ಇರುವೆನು. ನಾನು ಒಬ್ಬರ ಎಂಜಲನ್ನು ತಿನ್ನಲಾರೆನು. ನಾನು ಒಬ್ಬ ಗಂಡಸರ ಕಾಲುತೊಳೆಯಲಾರೆನು. ಬೇರೆ ಪುರುಷರ ಹತ್ತಿರ ಮಾತಾಡಲಾರೆನು. ನನ್ನನ್ನು ಯಾರಾದರೂ ಅಪೇಕ್ಷಿಸಿದರೆ ಅವನನ್ನು ಶಿಕ್ಷಿಸಬೇಕು. ಗಂಡನನ್ನು ಹುಡುಕುವುದ ಕ್ಕೋಸ್ಕರ ಬ್ರಾಹ್ಮಣರನ್ನು ನೋಡುವೆನು. ಹೀಗೆಲ್ಲಾ ಸಾಧ್ಯವಾದರೆ ಮಾತ್ರ ನಾನು ನಿಮ್ಮಲ್ಲಿ ಇರುವೆನು. ಇಲ್ಲದಿದ್ದರೆ ನನಗೆ ಇಲ್ಲಿ ಇರಲಿಕ್ಕೆ ಇಷ್ಟವಿಲ್ಲ' ಎಂದು ಹೇಳಲು ರಾಜನ ತಾಯಿಯು 'ಹಾಗೆಯೇ ಆಗಲಿ. ಒಳ್ಳೇ ವ್ರತಗಳನ್ನು ಇಟ್ಟುಕೊಂಡಿರುವಿ' ಎಂದು ಹೇಳಿ ತನ್ನ ಮಗಳಾದ ಸುನಂದೆಯೊಡನೆ 'ಸುನಂದಾ! ಇವಳು ನಿನ್ನ ವಯಸ್ಸಿನಿಂದ ಸಮಾನಳಾದವಳು. ಸೈರಂಧ್ರಿಯು. ನಿನಗೆ ಸಖಿಯಾಗಲಿ. ಇವಳೊಡನೆ ಸಂತೋಷದಿಂದ ಇರು' ಎಂದಳು. ತರುವಾಯ ಸುನಂದೆಯು ಪರಮಸಂತೋಷ ವುಳ್ಳವಳಾಗಿ ದಮಯಂತಿಯನ್ನು ಕರೆದುಕೊಂಡು ಇತರ ಸಖಿಯ ರಿಂದ ಸಹಿತಳಾಗಿ ಮನೆಗೆ ಹೋದಳು. ದಮಯಂತಿಯು ಸರ್ವದಾ ನಳ ರಾಯನನ್ನು ಸ್ಮರಿಸಿಕೊಂಡು ರಾಜಪುತ್ರಿಯಾದ ಸುನಂದೆಯೊಡನೆ ವಾಸಮಾಡು ತ್ತಿದ್ದಳು. (ಅ.65. 67 ರಿಂದ 76)

ಇತ್ತ ದಮಯಂತಿಯನ್ನು ಬಿಟ್ಟು ಹೋಗುತ್ತಿದ್ದ ನಳರಾಯನು ಭಯಂಕರವಾದ ವನದಲ್ಲಿ ಕಾಡುಗಿಚ್ಚನ್ನು ನೋಡಿದನು. ಆ ಬೆಂಕಿಯ ಮಧ್ಯದಿಂದ 'ಪವಿತ್ರ ಕೀರ್ತಿಯುಳ್ಳ ನಳರಾಯನೇ! ಓಡಿ ಬಾ! ಓಡಿ ಬಾ'! ಎಂದು ಕೂಗುವ ಶಬ್ದವು ಕೇಳಿಸುತ್ತಿತ್ತು. ಆಗ ನಳರಾಯನು ಭಯಪಡಬೇಡ ಎಂದು ಹೇಳುತ್ತಾ ಅಗ್ನಿಯ ಮಧ್ಯದಲ್ಲಿ ಪ್ರವೇಶಿಸಿ ಅಲ್ಲಿ ಸುತ್ತುಹಾಕಿ ಮಲಗಿರುವ ಹಾವನ್ನು ನೋಡಿದನು. ಆ

ಹಾವು ಕೈಮುಗಿದು ನಡುಗುತ್ತಾ 'ಮಹಾರಾಜನೇ! ನಾನು ಕರ್ಕೋಟಕ ಎಂಬ ಸರ್ಪನೆಂದು ತಿಳಿ. ನಾನು ಒಬ್ಬ ನಿರಪರಾಧಿಯಾದ ಮಹಾತಪಸ್ವಿಯಾದ ಋಷಿಗಳನ್ನು ಮೋಸಗೊಳಿಸಿದೆನು. ಇದರಿಂದ ಕೋಪವುಳ್ಳವರಾಗಿ ನೀನು ಇಲ್ಲೇ ಬಿದ್ದಿರು. ನಳರಾಯನು ಇಲ್ಲಿಗೆ ಬಂದು ನಿನ್ನನ್ನು ಇಲ್ಲಿಂದ ಎತ್ತಿಕೊಂಡು ಹೋಗಿ ನನ್ನನ್ನು ಶಾಪದಿಂದ ಬಿಡಿಸುವನು ಎಂದು ಶಪಿಸಿದರು. ಅವರ ಶಾಪದಿಂದ ನನಗೆ ಒಂದು ಹೆಜ್ಜೆಯೂ ಹೋಗಲಿಕ್ಕೆ ಆಗುವುದಿಲ್ಲ. ನಿನಗೆ ಶ್ರೇಯಸ್ಸನ್ನು ಉಪದೇಶಿಸುವೆನು. ನನ್ನನ್ನು ನೀನು ರಕ್ಷಿಸಬೇಕು. ನಿನಗೆ ನಾನು ಮಿತ್ರನಾಗುವೆನು. ನನಗೆ ಸಮಾನರಾದ ಸರ್ಪರು ಇಲ್ಲ. ತುಂಬಾ ಚಿಕ್ಕರೂಪವುಳ್ಳನಾಗುವೆನು. ನನ್ನನ್ನು ಬೇಗನೇ ಎತ್ತಿಕೊಂಡುಹೋಗು' ಎಂದು ಹೇಳಿ ಅಂಗುಷ್ಠ ಬೆರಳಿನಷ್ಟು ದೊಡ್ಡ ರೂಪವನ್ನು ಧರಿಸಿದನು. ನಳರಾಯನು ಅವನನ್ನು ಎತ್ತಿಕೊಂಡು ಬೆಂಕಿಯಿಲ್ಲದೆ ಇರುವ ಸ್ಥಳಕ್ಕೆ ಹೋದನು. ಅಲ್ಲಿ ಬಿಟ್ಟು ಹೋಗಬೇಕೆಂಬ ಅಭಿಪ್ರಾಯವುಳ್ಳವ ನಾಗಲು ಕರ್ಕೋಟಕನು ನಳರಾಯನೇ! ಕೆಲವು ಹೆಜ್ಜೆಗಳನ್ನು ಎಣಿಸುತ್ತಾ ಹೋಗು. ನಿನಗೆ ಶ್ರೇಯಸ್ಸನ್ನು ಉಂಟುಮಾಡುವೆನು' ಎಂದಿತು. ತರುವಾಯ ನಳರಾಯನು ಒಂದು ಎರಡು ಎಂದು ಸಂಸ್ಕೃತ ಭಾಷೆಯಿಂದ ಎಣಿಸುತ್ತಾ ಹೋದನು. ಹತ್ತನೇ ಹೆಜ್ಜೆಯನ್ನು ಇಡಲು ಹತ್ತು ಎಂಬುದಕ್ಕೆ ಸಂಸ್ಕೃತದಲ್ಲಿ 'ದಶ' ಎಂದು ಹೇಳಿದನು. ದಶ ಎಂಬ ಸಂಸ್ಕೃತಪದಕ್ಕೆ 'ಹತ್ತು' ಎಂಬ ಅರ್ಥವೂ ಆಗುತ್ತದೆ. 'ಕಚ್ಚು' ಎಂಬ ಅರ್ಥವೂ ಆಗುತ್ತಿದೆ. ಅದರಿಂದ ದಶ ಎಂದು ಹೇಳಲು ನಳರಾಯನಿಗೆ ಕರ್ಕೋಟಕನು ಕಚ್ಚಿದನು. ಈರೀತಿಯಾಗಿ ಕಚ್ಚಲು ನಳರಾಯನ ಆ ಸುಂದರವಾದ ರೂಪವು ಮರೆಯಾಯಿತು. ವಿಕಾರವನ್ನು ಹೊಂದಿದ. ತನ್ನನ್ನೂ ನಿಜರೂಪವನ್ನು ಧರಿಸಿದ ಕರ್ಕೋಟಕನು ನಳರಾಯನನ್ನು ಸಮಾಧಾನಪಡಿಸುತ್ತಾ 'ಜನರು ನಿನ್ನನ್ನು ನಳನೆಂದು ತಿಳಿಯದೆ ಇರಲಿ ಎಂದು ನಿನ್ನ ರೂಪವನ್ನು ಮರೆಮಾಡಿರುವೆನು. ಯಾರಿಂದಾಗಿ ನೀನು ಇಂತಹ ದುಃಖವನ್ನು ಹೊಂದಿರುವೆಯೋ ಆ ಕಲಿಯು ನನ್ನ ವಿಷದಿಂದ ನಿನ್ನಲ್ಲಿ ತುಂಬಾ ದುಃಖದಿಂದ ವಾಸಿಸುವನು. ವಿಷಯುಕ್ತ ಅವಯವವುಳ್ಳವನಾಗಿ ಅವನು ನಿನ್ನನ್ನು ಬಿಟ್ಟುಹೋಗನು. ಅವನು ನಿನ್ನನ್ನು ಬಿಟ್ಟುಹೋಗುವ ಮೊದಲು ನಿನ್ನನ್ನು ದುಃಖಪಡಿಸುವನು. ನಿರಪರಾಧಿಯಾದ ನಿನ್ನನ್ನು ಯಾವಾತನು ಕ್ಲೇಶಪಡಿಸಿದನೋ ಅವನಿಂದ ನಿನಗೆ ನಾನು ರಕ್ಷೆಯನ್ನು ಮಾಡಿದೆನು. ನಿನಗೆ ಹುಲಿ ಮೊದಲಾದ ದುಷ್ಟಪ್ರಾಣಿಗಳಿಂದಲೂ ಶತ್ರುಗಳಿಂದಲೂ ಭಯವಿರಲಾರದು. ನನ್ನ ಅನುಗ್ರಹದಿಂದ ನಿನಗೆ ಬ್ರಹ್ಮಜ್ಞಾನವುಂಟಾಗುವುದು.

ರಾಜನೇ! ನಿನಗೆ ವಿಷದಿಂದ ಪೀಡೆಯಿರಲಾರದು. ಸರ್ವದಾ ಯುದ್ಧದಲ್ಲಿ ಜಯವನ್ನು ಹೊಂದುವಿ. ರಾಜನೇ! ಇಲ್ಲಿಂದ ಋತುಪರ್ಣ ರಾಜನಿದ್ದಲ್ಲಿಗೆ 'ಬಾಹುಕ' ಎಂಬ ಸೂತನೆಂದು ಹೇಳಿಕೊಂಡು ಹೋಗು. ಅವನು ಪಗಡೆ ಆಟದ ರಹಸ್ಯವನ್ನು ತಿಳಿದಿರುವನು. ಇಕ್ಷ್ವಾಕುವಂಶದ ರಾಜನಾದ ಆ ಋತುಪರ್ಣನು ನಿನಗೆ ಮಿತ್ರನಾಗುವನು. ನೀನೂ ಪಗಡೆ ಆಟದ ರಹಸ್ಯವನ್ನು ತಿಳಿಯುವೆ. ಶ್ರೇಯಸ್ಸನ್ನು ಹೊಂದುವಿ. ನಿನ್ನ ಹೆಂಡತಿಯನ್ನು ಹೊಂದುವಿ. ರಾಜ್ಯವನ್ನೂ ಮಕ್ಕಳನ್ನೂ ಹೊಂದುವಿ. ಸತ್ಯವನ್ನೇ ಹೇಳುವೆನು. ನೀನು ನಿನ್ನ ಪೂರ್ವರೂಪವನ್ನು ಹೊಂದಬೇಕೆಂದು ಯಾವಾಗ ಇಚ್ಛಿಸುವಿಯೋ ಆಗ ನನ್ನನ್ನು ಸ್ಮರಿಸು. 'ಈ ವಸ್ತ್ರವನ್ನು ಧರಿಸು'. ಈ ವಸ್ತ್ರವನ್ನು ಧರಿಸಿದ ಕೂಡಲೇ ನಿನ್ನು ಪೂರ್ವರೂಪವನ್ನು ಹೊಂದುವಿ' ಎಂದು ಹೇಳಿ ನಳರಾಯನಿಗೆ ದಿವ್ಯವಾದ ಎರಡು ವಸ್ತ್ರಗಳನ್ನು ಕೊಟ್ಟು ಅಲ್ಲಿಯೇ ಮರೆಯಾಗಿ ಹೋದನು. (ಅ.66

ಅಲ್ಲಿ ಕರ್ಕೋಟಕನು ಮರೆಯಾಗಲು, ನಳರಾಯನು ಅಲ್ಲಿಂದ ಹೊರಟು ಹತ್ತನೇ ದಿವಸದಲ್ಲಿ ಋತುಪರ್ಣನ ನಗರವನ್ನು ಪ್ರವೇಶಿಸಿದನು. ಅವನು ರಾಜನ ಬಳಿಗೆ ಹೋಗಿ 'ನನ್ನ ಹೆಸುರ ಬಾಹುಕ ಎಂದು. ಕುದುರೆ ಓಡಿಸುವುದರಲ್ಲಿ ನನಗೆ ಸಮಾನರು ಯಾರೂ ಇಲ್ಲ. ಇತರರಿಂದ ವಿಶೇಷವಾಗಿ ಅಡಿಗೆ ಮಾಡಲಿಕ್ಕೂ ತಿಳಿದವನಾಗಿದ್ದೇನೆ. ಇತರರಿಂದ ಮಾಡಲಿಕ್ಕೆ ಅಶಕ್ಯಗಳಾದ ಶಿಲ್ಪಗಳನ್ನೆಲ್ಲಾ ಮಾಡಲಿಕ್ಕೆ ಪ್ರಯತ್ನ ಮಾಡುವೆನು. ನನ್ನನ್ನು ರಕ್ಷಿಸು' ಎಂದು ಹೇಳಿದನು. ಅದಕ್ಕೆ ಋತುಪರ್ಣನು 'ಬಾಹುಕನೇ! ನನ್ನ ಸಮೀಪದಲ್ಲಿಯೇ ವಾಸಮಾಡು. ನೀನು ಹೇಳಿದ ಎಲ್ಲಾ ಕಾರ್ಯಗಳನ್ನೂ ಮಾಡುವಿ. ಬೇಗನೇ ಕುದುರೆಗಳು ಓಡುವ ವಿಷಯದಲ್ಲಿ ನನಗೆ ತುಂಬಾ ಆಸೆಯಿದೆ. ನನ್ನ ಕುದುರೆಗಳು ಬೇಗನೇ ಓಡುವಂತೆ ಮಾಡು. ನೀನು ನಮ್ಮ ಕುದುರೆಗಳಿಗೆಲ್ಲಾ ಯಜಮಾನನು. ನಿನಗೆ ನೂರು ನೂರು ನಾಣ್ಯಗಳು ಸಂಬಳವು ವಾರ್ಷ್ಣೇಯ ಜೀವಲ ಎಂಬ ಇಬ್ಬರು ಸೂತರು ನಿನಗೆ ಸಹಾಯಕರಾಗಿರುವರು. ಇವರಿಬ್ಬರಿಂದ ಕೂಡಿಕೊಂಡು ನೀನು ಸುಖವಾಗಿರುವಿ' ಎಂದು ಹೇಳಿದನು. (ಅ.67)

ಈರೀತಿಯಾಗಿ ಹೇಳಲು, ಆ ರಾಜನಿಂದ ಸತ್ಕೃತನಾಗಿ ಆ ಋತುಪರ್ಣದ ನಗರದಲ್ಲಿ ವಾರ್ಷ್ಣೇಯ ಜೀವಲರಿಂದ ಕೂಡಿಕೊಂಡು ವಾಸಮಾಡುತ್ತಾ ಇದ್ದನು. ನಳರಾಯನು ದಮಯಂತಿಯನ್ನು ಯೋಚಿಸುತ್ತಾ ಅಲ್ಲಿಯೇ ಇದ್ದನು. ಪ್ರತಿಯೊಂದು ಸಾಯಂಕಾಲದಲ್ಲಿಯೂ

'ಕ್ವನು ಸಾ ಕ್ಷುತ್‌ಪಿಪಾಸಾರ್ತಾ ಶ್ರಾಂತಾ ಶೇತೇ ತಪಸ್ವಿನೀ ।
ಸ್ಮರಂತೀ ತಸ್ಯ ಮಂದಸ್ಯ ಕಂ ವಾಸಾದ್ಯೋಪತಿಷ್ಠತಿ ॥'

(ಹಸಿವೆ ದಾಹಗಳಿಂದ ಪೀಡಿತಳಾದ ಆ ತಪಸ್ವಿಯು ಶ್ರಮವುಳ್ಳವಳಾಗಿ ಎಲ್ಲಿ ಮಲಗುವಳೋ! ಆ ಅಲ್ಪನನ್ನು ಸ್ಮರಿಸುತ್ತಾ ಯಾರನ್ನು ಹೊಂದಿ ಇರುವಳೋ) ಎಂಬ ಅರ್ಥವುಳ್ಳ ಶ್ಲೋಕವನ್ನು ಹೇಳುತ್ತಾ ಇದ್ದನು.

ಅದನ್ನು ಕೇಳಿ ಒಂದುದಿನ ರಾತ್ರಿಯಲ್ಲಿ ಜೀವಲನು 'ಬಾಹುಕನೇ! ಯಾವ ಹೆಂಗಸನ್ನು ಯೋಚಿಸಿ ದುಃಖಪಡುವಿ? ನಿತ್ಯವೂ ದುಃಖಪಡುವಿಯಲ್ಲಾ! ನನಗೆ ಕೇಳಬೇಕೆಂಬ ಆಸೆಯಿದೆ. ಅವಳು ಯಾರ ಹೆಂಡತಿಯು? ನೀನು ಈ ಪ್ರಕಾರವಾಗಿ ದುಃಖಿಸುವಿಯಲ್ಲಾ' ಎಂದು ಕೇಳಿದನು.

ಆಗ ನಳರಾಯನು 'ಒಬ್ಬ ಅಲ್ಪಬುದ್ಧಿ ಯುಳ್ಳವನ ಹೆಂಡತಿಯವಳು. ಅವಳು ಅವನಿಗೂ ಬಹುಮಾನಕ್ಕೆ ಪಾತ್ರಳಾಗಿದ್ದಳು. ಅವನೂ ಅವಳಲ್ಲಿಯೂ ತುಂಬಾ ಪ್ರೀತಿಯುಳ್ಳವನಾಗಿದ್ದನು. ಏನೋ ಒಂದು ಕಾರಣದಿಂದಆ ಅಲ್ಪನು ಅವಳಿಂದ ವಿಯೋಗವನ್ನು ಹೊಂದಿ ದುಃಖದಿಂದ ತಿರುಗುತ್ತಿದ್ದನು. ಅವನು ಯಾವಾಗಲೂ ರಾತ್ರಿಯಲ್ಲಿ ಅವಳನ್ನು ಸ್ಮರಿಸಿಕೊಂಡನು. ಈ ಶ್ಲೋಕವೊಂದನ್ನು ಹೇಳುತ್ತಿರುವನು. ಆ ಅಲ್ಪನು ಭೂಮಿಯೆಲ್ಲಾ ಸಂಚರಿಸಿ ಒಂದು ಸ್ಥಳದಲ್ಲಿ ದುಃಖದಿಂದ ವಾಸಮಾಡುತ್ತಿರುವನು. ಆ ಹೆಂಗಸು ಅತ್ಯಂತ ಆಪತ್ಕಾಲದಲ್ಲಿಯೂ ಆ ಅಲ್ಪನನ್ನೇ ಅನುಸರಿಸಿ ಕಾಡಿಗೆ ಬಂದಿರುತ್ತಾಳೆ. ಅವಳು ಒಂದನ್ನೂ ತಿಳಿದವಳಲ್ಲ. ಹಸಿವೆದಾಹ ಗಳಿಂದ ಕೂಡಿದವಳಾಗಿ ಹೇಗೆ ಜೀವಿಸುವಳೋ? ಹುಲಿ ಕರಡಿ ಇತ್ಯಾದಿ ಭಯಂಕರ ಪ್ರಾಣಿಗಳು ಇರುವ ಸ್ಥಳದಲ್ಲಿ ಆ ಅಲ್ಪನು ಅವಳನ್ನು ಬಿಟ್ಟು ಬಂದಿರುತ್ತಾನೆ. ಅವಳು ಬದುಕಿದ್ದರೆ ಬಹಳ ಹೆಚ್ಚು' ಎಂದು ಹೇಳಿ ದಮಯಂತಿಯನ್ನೇ ಸ್ಮರಿಸುತ್ತಾ ಆ ರಾಜನ ಮನೆಯಲ್ಲಿ ಒಬ್ಬರಿಗೂ ತಾನು ನಳರಾಯನೆಂದು ತಿಳಿಯದಂತೆ ವಾಸಮಾಡಿದನು. (ಅ.67)

ನಳರಾಯನು ರಾಜ್ಯವನ್ನು ಕಳೆದುಕೊಂಡು ದಮಯಂತಿಯಿಂದ ಸಹಿತನಾಗಿ ಮರೆಯಾಗಿ ಹೋದನು ಎಂಬ ವರ್ತಮಾನವನ್ನು ಕೇಳಿ ಮಂತ್ರಿಗಳಿಂದ ಕೂಡಿಕೊಂಡು ಬಹುಯೋಚನೆ ಮಾಡಿದನು. (ಭೀಮರಾಜನು) ಬ್ರಾಹ್ಮಣರನ್ನೆಲ್ಲಾ ಕರೆದು 'ಯಾರು ದಮಯಂತಿಯನ್ನೂ ನಳರಾಯನನ್ನೂ ಹುಡುಕಿಕೊಂಡು ಬಂದವರಿಗೆ ಅಗ್ರಹಾರವನ್ನು ಕೊಡುವೆನು. ದೊಡ್ಡ ಗ್ರಾಮವನ್ನೂ ನೂರುಸಾವಿರ ದನಗಳನ್ನೂ ಕೊಡುವೆನು' ಎಂದು ಹೇಳಿ ಬ್ರಾಹ್ಮಣರಿಗೆ ಬೇಕಾದಷ್ಟು ಹಣವನ್ನು

ಕೊಟ್ಟು ಕಳುಹಿಸಿದನು. ಮತ್ತು ಅವರೊಡನೆ 'ಈ ಕಾರ್ಯವಾದರೆ ಅಂದರೆ ದಮಯಂತಿಯೂ ನಳರಾಯನೂ ಇರುವ ಸ್ಥಳವನ್ನು ತಿಳಿಸಿದರೆ ಸಾವಿರ ದನಗಳನ್ನು ಕೊಡುವೆನು. ನಿಮ್ಮಲ್ಲಿ ಯಾರು ಅವರನ್ನು ಇಲ್ಲಿಗೆ ಕರತರುವನೋ ಅವನಿಗೆ ಅಗ್ರಹಾರಗಳನ್ನೂ ದೊಡ್ಡ ಗ್ರಾಮವನ್ನೂ ಬಂಗಾರವನ್ನೂ ಬೆಳ್ಳಿಯನ್ನೂ ದಾಸಿಯರನ್ನೂ ದಾಸರನ್ನೂ ಕೊಡುವೆನು. ಅವರಿಬ್ಬರನ್ನು ಕರೆದುಕೊಂಡು ಬರಲಿಕ್ಕೆ ಸಾಧ್ಯವಾಗದೆ ಇದ್ದರೂ ಅವರು ಇರುವ ಸ್ಥಳವನ್ನು ತಿಳಿಸುವ ಮಾತ್ರದಿಂದಲೇ ಸಾವಿರದನಗಳಂತೂ ಕೊಟ್ಟೇ ಕೊಡುವೆನು' ಎಂದು ಹೇಳಿದನು. ಈರೀತಿಯಾಗಿ ಹೇಳಲು ಬ್ರಾಹ್ಮಣರು ಸಂತೋಷವುಳ್ಳವರಾಗಿ ದಮಯಂತಿಯನ್ನು ನಳರಾಯನನ್ನೂ ಹುಡುಕುತ್ತಾ ಎಲ್ಲಾ ದಿಕ್ಕುಗಳಿಗೂ ಹೋದರು. ಎಲ್ಲಿಯೂ ನಳರಾಯನನ್ನಾಗಲೀ ದಮಯಂತಿಯನ್ನಾಗಲೀ ನೋಡಲೇ ಇಲ್ಲ.

ತರುವಾಯ ಸುದೇವ ಎಂದು ಹೆಸರುಳ್ಳ ಬ್ರಾಹ್ಮಣನು ದಮಯಂತಿಯನ್ನು ಹುಡುಕುತ್ತಾ ಚೇದಿದೇಶಕ್ಕೆ ಹೋಗಿ ಅಲ್ಲಿ ರಾಜನ ಮನೆಯಲ್ಲಿ ದಮಯಂತಿಯನ್ನು ನೋಡಿದನು. ಅಲ್ಲಿ ರಾಜನ ತಾಯಿಯು ದಮಯಂತಿಯೊಡನೆ ಬ್ರಾಹ್ಮಣರಿಗೆ ಬಡಿಸಿದಳು. ಭೋಜನಕ್ಕೋಸ್ಕರ ಸುದೇವನೂ ಅಲ್ಲಿಗೆ ಹೋದನು. ಅಲ್ಲಿ ಸುನಂದೆಯೊಡನೆ ನಿಂತಿರುವ ದಮಯಂತಿಯನ್ನು ನೋಡಿದನು. ಅವಳ ಸೌಂದರ್ಯವನ್ನು ನೋಡಿ ದಮಯಂತಿಯಾಗಿರಬಹುದೆಂದು ಯೋಚಿಸಿದನು. ಇವಳ ವಿಷಯವನ್ನು ಭೀಮರಾಜನ ಹತ್ತಿರ ಹೋಗಿ ಅವನ ಹತ್ತಿರ ಹೇಳಿ ಸಮಾಧಾನಪಡಿಸಬಹುದು ಇತ್ಯಾದಿ ನಾನಾವಿಧವಾಗಿ ಯೋಚಿಸಿ, ದಮಯಂತಿಯ ಬಳಿಗೆ ಹೋಗಿ 'ದಮಯಂತಿ! ನಾನು ನಿನ್ನ ಸಹೋದರನಿಗೆ ಮಿತ್ರನಾದ ಸುದೇವ ಎಂಬ ಬ್ರಾಹ್ಮಣನು. ಭೀಮಮಹಾರಾಜರ ಮಾತಿನಿಂದ ನಿನ್ನನ್ನು ಹುಡುಕುತ್ತಾ ಇಲ್ಲಿಯವರೆಗೆ ಬಂದಿರುವೆನು. ನಿನ್ನ ತಂದೆ ತಾಯಿ ಸಹೋದರರು ನಿನ್ನ ಇಬ್ಬರು ಮಕ್ಕಳು ಎಲ್ಲರೂ ಸೌಖ್ಯದಿಂದ ಇರುವರು. ನಿನ್ನಿಂದಾಗಿ ನಿನ್ನ ಬಂಧುಗಳೆಲ್ಲಾ ಸತ್ತವರಂತೆ ಆಗಿದ್ದಾರೆ. ಬ್ರಾಹ್ಮಣರೆಲ್ಲರೂ ನಿನ್ನನ್ನು ಹುಡುಕುತ್ತಾ ದೇಶದೇಶಗಳಲ್ಲಿ ಸಂಚರಿಸುತ್ತಿರುವರು' ಎಂದು ಹೇಳಿದನು. (ಅ.68)

ದಮಯಂತಿಗೂ ಆ ಸುದೇವನ ಪರಿಚಯವಾಯಿತು. ಅವನೊಡನೆ ತನ್ನ ಎಲ್ಲಾ ಮಿತ್ರರ ವಿಷಯವಾಗಿ ಪ್ರಶ್ನೆ ಮಾಡಿದಳು. ತನ್ನ ಸಹೋದರನಿಗೆ ಬೇಕಾದವನಾದ ಆ ಬ್ರಾಹ್ಮಣನನ್ನು ನೋಡಿ ದಮಯಂತಿಗೆ ಕೂಡಲೇ ಅಳು ಬಂದಿತು. ಏಕಾಂತದಲ್ಲಿ ಸುದೇವನೊಡನೆ ಮಾತಾಡುತ್ತಾ ಅಳುತ್ತಿರುವ ದಮಯಂತಿಯನ್ನು

ನೋಡಿ ಸುನಂದೆಯು ತಾಯಿಯ ಬಳಿಗೆ ಹೋಗಿ ನಮ್ಮ ಸೈರಂಧ್ರಿಯು ಒಬ್ಬ ಬ್ರಾಹ್ಮಣನೊಡನೆ ಮಾತಾಡುತ್ತಾ ಅಳುತ್ತಿರುವಳು ಎಂದು ತಿಳಿಸಿದಳು. ತರುವಾಯ ರಾಜನ ತಾಯಿಯು ಅಂತಃಪುರದಿಂದ ದಮಯಂತಿಯು ಬ್ರಾಹ್ಮಣನೊಡನೆ ಮಾತಾಡುತ್ತಿರುವ ಸ್ಥಳಕ್ಕೆ ಬಂದಳು. ಸುದೇವನನ್ನು ಕರೆದು 'ಇವಳು ಯಾರ ಹೆಂಡತಿಯು. ಯಾರ ಮಗಳು? ಇವಳು ಬಂಧುಗಳಿಂದಲೂ ಗಂಡನಿಂದಲೂ ಹೇಗೆ ತಪ್ಪಿಹೋದಳು? ನಿಮಗೆ ಹೇಗೆ ಇವಳ ಪರಿಚಯವಾಯಿತು? ಇದನ್ನೆಲ್ಲಾ ತಿಳಿಯಬೇಕೆಂಬ ಆಸೆಯಿದೆ. ಯಥಾರ್ಥವನ್ನು ಹೇಳಿ' ಎಂದು ಕೇಳಿದಳು. ಆಗ ಸುದೇವನು ಸುಖವಾಗಿ ಕೂತುಕೊಂಡು ದಮಯಂತಿಯ ವಿಷಯವೆಲ್ಲವನ್ನೂ ಹೇಳಿದನು. (ಅ.69)

ಮಹಾಪರಾಕ್ರಮಶಾಲಿಯಾದ ದರ್ಮಿಷ್ಠನಾದ ಭೀಮರಾಜನು ವಿದರ್ಭದೇಶ ವನ್ನು ಆಳುತ್ತಿರುವನು. ಇವಳು ಅವನ ಮಗಳು. ಇವಳ ಹೆಸರು ದಮಯಂತಿ ಯೆಂದು. ವೀರಸೇನ ರಾಜನ ಮಗನಾದ ನಿಷಧದೇಶದ ರಾಜನಾದ ನಳರಾಯನ ಹೆಂಡತಿಯು. ಪವಿತ್ರ ಕೀರ್ತಿಯುಳ್ಳ ಆ ನಳರಾಯನು ಪಗಡೆ ಆಟವನ್ನು ಆಡಿ ರಾಜ್ಯವನ್ನೆಲ್ಲಾ ಕಳೆದುಕೊಂಡು ದಮಯಂತಿಯಿಂದ ಸಹಿತನಾಗಿ ಎಲ್ಲಿಗೆ ಹೊರಟು ಹೋದನು ಎಂದು ತಿಳಿಯಲೇ ಇಲ್ಲ. ನಾವು ದಮಯಂತಿಯನ್ನು ಹುಡುಕುತ್ತಾ ಸಂಚರಿಸುತ್ತಾ ಇರುವೆವು. ದೇವಿ! ಈಗ ಈ ದಮಯಂತಿಯನ್ನು ನಿಮ್ಮ ಮನೆಯಲ್ಲಿ ನೋಡಿದೆನು. ಇವಳಂತೆ ರೂಪವತಿಯಾದ ಮನುಷ್ಯ ಸ್ತ್ರೀಯೊಬ್ಬಳೂ ಇಲ್ಲ. ಇವಳ ಹುಬ್ಬುಗಳ ಮಧ್ಯದಲ್ಲಿ ಹಣೆಯಲ್ಲಿ ಕೆಂಪಾಗಿ ಕುಂಕುಮಹಚ್ಚಿಕೊಂಡಂತೆ ಒಂದು ಮಚ್ಚೆಯು ಇರುವುದು. ಅದರ ಮೇಲೆ ಮಣ್ಣು ಹಿಡಿದು ಹೋಗಿರುವ ಪ್ರಯುಕ್ತ ಸರಿಯಾಗಿ ಕಾಣಿಸುವುದಿಲ್ಲ. ಇವಳಿಗೆ ಇದೊಂದು ಬ್ರಹ್ಮದೇವರಿಂದಲೇ ನಿರ್ಮಿತವಾದ ಗುರುತು. ಏನಾದರೂ ಇವಳ ಸೌಂದರ್ಯಕ್ಕೆ ಹಾನಿಯಾಗಲಾರದು. ಇವಳ ಈ ಸೌಂದರ್ಯದಿಂದ ಈ ಗುರುತಿನಿಂದ ದಮಯಂತಿಯೆಂದು ತಿಳಿದುಕೊಂಡೆನು' ಎಂದನು. (ಅ.69)

ಈ ಮಾತನ್ನು ಕೇಳಿ ಸುನಂದೆಯು ದಮಯಂತಿಯ ಹಣೆಯನ್ನು ಚೆನ್ನಾಗಿ ತೊಳೆದಳು. ಆಗ ಆ ಮಚ್ಚೆಯು ಆಕಾಶದಲ್ಲಿ ಚಂದ್ರನಂತೆ ಶೋಭಿಸಿತು. ಆ ಹಣೆಯ ಮಚ್ಚೆಯನ್ನು ನೋಡಿ ರಾಜನ ತಾಯಿಯೂ ಸುನಂದೆಯೂ ಇಬ್ಬರೂ ದಮಯಂತಿಯನ್ನು ಆಲಂಗಿಸಿಕೊಂಡು ಒಂದು ಮುಹೂರ್ತಕಾಲ ಅಳುತ್ತಾ ನಿಂತುಕೊಂಡರು. ಬಹುಹೊತ್ತು ಕಣ್ಣೀರು ಸುರಿಸಿ ರಾಜನ ತಾಯಿಯು 'ನೀನು ನನ್ನ

ತಂಗಿಯ ಮಗಳಾಗಿದ್ದೀಯೆ! ಈ ಮಚ್ಚೆಯಿಂದ ಈಗ ನನಗೆ ತಿಳಿಯಿತು. ನಾನೂ ನಿನ್ನ ತಾಯಿಯೂ ಇಬ್ಬರೂ ದಶಾರ್ಣದೇಶದ ರಾಜನಾದ ಸುದಾಮ ಮಹಾರಾಜರ ಮಕ್ಕಳು. ನಿನ್ನ ತಾಯಿಯನ್ನು ಭೀಮರಾಜನಿಗೆ ಮದುವೆ ಮಾಡಿಕೊಟ್ಟರು. ನನ್ನನ್ನು ವೀರಬಾಹು ಮಹಾಜರಿಗೆ ಮದುವೆ ಮಾಡಿಕೊಟ್ಟರು. ನೀನು ನನ್ನ ತಂದೆಯ ಮನೆಯಲ್ಲಿ ದಶಾರ್ಣದೇಶದಲ್ಲಿ ಹುಟ್ಟಿರುವಿ. ನಾನು ಅಲ್ಲಿ ನಿನ್ನನ್ನು ನೋಡಿರುವೆನು. ದಮಯಂತಿ! ಇದು ತಂದೆಯ ಮನೆಯಂತೆ ಭಾವಿಸು. ಈ ಐಶ್ವರ್ಯವೆಲ್ಲವೂ ನನಗೆ ಸೇರಿದಂತೆಯೇ ನಿನಗೂ ಸೇರಿದ್ದು' ಎಂದು ಹೇಳಿದಳು. (ಅ.69)

ಆಗ ದಮಯಂತಿಯು ತನ್ನ ದೊಡ್ಡ ತಾಯಿಗೆ ನಮಸ್ಕಾರ ಮಾಡಿ 'ಅಮ್ಮ! ನಾನು ಯಾರು ಎಂದು ತಿಳಿಸದಯೇ ನಿಮ್ಮ ಮನೆಯಲ್ಲಿ ಸುಖವಾಗಿಯೇ ಇದ್ದೆನು. ಎಲ್ಲಾ ಅಭೀಷ್ಟಗಳನ್ನೂ ಹೊಂದಿದ್ದೆನು. ಇದಕ್ಕಿಂತಲೂ ಸುಖಕರವಾದ ವಾಸವು ನನಗಿನ್ನು ಏರ್ಪಡುವುದು. ಅಮ್ಮ! ಬಹುಕಾಲ ಇಲ್ಲಿ ವಾಸ ಮಾಡಿರುವ ನನಗೆ ಅನುಜ್ಞೆಯನ್ನು ಕೊಡಬೇಕು. ವಿದರ್ಭನಗರದಲ್ಲಿ ನನ್ನ ಇಬ್ಬರು ಮಕ್ಕಳು ವಾಸಮಾಡುತ್ತಿರುವರು. ಅವರು ತಂದೆಯಿಂದ ರಹಿತರಾಗಿ ನನ್ನಿಂದಲೂ ರಹಿತರಾಗಿ ಹೇಗೆ ಇರುವರು? ಅಮ್ಮ! ನೀನು ನನಗೆ ಪ್ರಿಯವನ್ನು ಮಾಡಬೇಕೆಂದು ಬಯಸುವುದಾದರೆ ನಾನು ವಿದರ್ಭದೇಶಕ್ಕೆ ಹೋಗಲಿಕ್ಕೆ ಇಚ್ಛಿಸುವೆನು. ಬೇಗನೇ ನನಗೆ ವಾಹನವನ್ನು ತರಿಸು' ಎಂದು ಹೇಳಿದಳು.

ಅದಕ್ಕೆ ರಾಜನ ತಾಯಿಯು ಸಂತೋಷದಿಂದ ಹಾಗೆಯೇ ಆಗಲಿ ಎಂದು ಹೇಳಿ ಮಗನ ಅನುಮತಿಯಿಂದ ಮಹಾಸೈನ್ಯದ ರಕ್ಷೆಯಿಂದ ದಮಯಂತಿಯನ್ನು ವಿದರ್ಭ ದೇಶಕ್ಕೆ ಕಳುಹಿಸಿದಳು. ಬಹುಬೇಗನೇ ವಿದರ್ಭದೇಶಕ್ಕೆ ಹೋಗಿ ಸೇರಿದಳು. ಬಂಧುಗಳೆಲ್ಲರೂ ಅವಳನ್ನು ನೋಡಿ ಸಂತೋಷಪಟ್ಟರು. ದಮಯಂತಿಯು ಸುಖ ದಿಂದ ಇರುವ ಬಂಧುಗಳನ್ನೂ ಇಬ್ಬರು ಮಕ್ಕಳನ್ನೂ ತಂದೆ ತಾಯಿಗಳನ್ನೂ ಸಖಿಯ ರನ್ನೂ ನೋಡಿ ಸಂತೋಷಪಟ್ಟಳು. ದೇವತೆಗಳಿಗೂ ಬ್ರಾಹ್ಮಣರಿಗೂ ಪೂಜಿಸಿದಳು. ಭೀಮರಾಜನು ಸುದೇವ ಬ್ರಾಹ್ಮಣನಿಗೆ ಸಾವಿರ ದನಗಳನ್ನೂ ಗ್ರಾಮವನ್ನೂ ಹಣವನ್ನೂ ಕೊಟ್ಟು ಸಂತೋಷಪಡಿಸಿದನು. ಮಗಳನ್ನು ನೋಡಿ ಸಂತೋಷಪಟ್ಟನು. ಆ ರಾತ್ರಿ ದಮಯಂತಿಯು ವಿಶ್ರಾಂತಿಯನ್ನು ಹೊಂದಿ ತಾಯಿಯೊಡನೆ 'ಅಮ್ಮ! ನಾನು ಬದುಕಿರಬೇಕೆಂದು ನಿನಗೆ ಆಸೆಯಿರುವ ಪಕ್ಷದಲ್ಲಿ ನಳಮಹಾರಾಯನನ್ನು ಕರ ಕೊಂಡು ಬರುವುದಕ್ಕೆ ಪ್ರಯತ್ನಮಾಡಬೇಕು' ಎಂದು ಹೇಳಿದಳು. ಆಗ ತಾಯಿಯು ಬಹು ದುಃಖವುಳ್ಳವಳಾಗಿ ಕಣ್ಣೀರು ಸುರಿಸುತ್ತಾ ಒಂದು ಉತ್ತರವನ್ನೂ ಹೇಳಲಿಲ್ಲ.

ಈರೀತಿಯಾದ ಅವಸ್ಥೆಯುಳ್ಳ ಅವಳನ್ನು ನೋಡಿ ಅಂತಃಪುರದ ಜನರೆಲ್ಲರೂ ಹಾಹಾ ಎನ್ನುತ್ತಾ ಅತ್ತರು. ತರುವಾಯ ದಮಯಂತಿಯ ತಾಯಿಯು ಭೀಮರಾಜನೊಡನೆ 'ದಮಯಂತಿಯು ಗಂಡನ ವಿಷಯವಾಗಿ ತುಂಬಾ ದುಃಖಪಡುತ್ತಾಳೆ. ನಾಚಿಕೆಯನ್ನು ಬಿಟ್ಟು ನನ್ನೊಡನೆ ಅವಳೇ ಹೇಳಿಬಿಟ್ಟಳು. ಆದುದರಿಂದ ಅವನನ್ನು ಹುಡುಕಲಿಕ್ಕೆ ನಿಮ್ಮ ಆಳುಗಳು ಪ್ರಯತ್ನಮಾಡಲಿ' ಎಂದಳು. (ಅ.69)

ಈರೀತಿಯಾಗಿ ಹೆಂಡತಿಯು ಹೇಳಲು ಭೀಮರಾಜನು ಹಾಗೆಯೇ ಆಗಲಿ ಎಂದು ಹೇಳಿ ತನ್ನ ವಶರಾದ ಬ್ರಾಹ್ಮಣರನ್ನು ನಳರಾಯನನ್ನು ಕಂಡುಹಿಡಿಯುವುದಕ್ಕಾಗಿ ದಿಕ್ಕುದಿಕ್ಕುಗಳಿಗೆ ಕಳುಹಿಸಿದನು. ತರುವಾಯ ವಿದರ್ಭರಾಜನ ಆಜ್ಞೆಯಿಂದ ಎಲ್ಲಾ ಬ್ರಾಹ್ಮಣರೂ ದಮಯಂತಿಯೊಡನೆ ಹೇಳಿಕೊಂಡು ಹೊರಟರು. ಆಗ ದಮಯಂತಿಯು ಎಲ್ಲರೊಡನೆ 'ನೀವು ಅಲ್ಲಲ್ಲಿ ಸಭೆಗಳಲ್ಲಿ ಹೋಗಿ

'ಕ್ವನು ತ್ವಂ ಕಿತವಚ್ಛಿತ್ವಾ ವಸ್ತ್ರಾರ್ಧಂ ಪ್ರಸ್ಥಿತೋ ಮಮ । ಉತ್ಸೃಜ್ಯ ವಿಪಿನೇ ಸುಪ್ತಾಮನುರಕ್ತಾಂ ಪ್ರಿಯಾಂ ಮಮ । ಸಾ ವೈ ಯಥಾ ತ್ವಯಾ ದೃಷ್ಟಾ ತಥಾಸ್ತೇ ತ್ವತ್ಪ್ರತೀಕ್ಷಿಣೀ । ದಹ್ಯಮಾನಾ ಭೃಶಂ ಬಾಲಾ ವಸ್ತ್ರಾರ್ಧೇನಾಭಿಸಂವೃತಾ । ತಸ್ಯಾಃ ರುದಂತ್ಯಾಃ ಸತತಂ ತೇನಶೋಕೇನ ಪಾರ್ಥಿವ । ಪ್ರಸಾದಂ ಕುರು ವೈ ದೇವ ಪ್ರತಿವಾಕ್ಯಂ ವದಸ್ವಚ । ವಾಯುನಾ ಧೂಯಮಾನೋಹಿ ವನಂ ದಹತಿ ಪಾವಕಃ । ಭರ್ತವ್ಯಾ ರಕ್ಷಣೀಯಾ ಚ ಪತ್ನೀ ಪತ್ಯಾ ಹಿ ನಿತ್ಯದಾ ।

ಇದೇ ಮೊದಲಾಗಿಉಳ್ಳ (ವಂಚಕನೇ! ನನ್ನ ಅರ್ಧವಸ್ತ್ರವನ್ನು ಕತ್ತರಿಸಿಕೊಂಡು ಎಲ್ಲಿಗೆ ಹೋದಿ? ನಿಮ್ಮಲ್ಲಿ ಅನುರಾಗವುಳ್ಳ ನಿದ್ದೆ ಮಾಡುತ್ತಿರುವವಳನ್ನು ಹೇಗೆ ಬಿಟ್ಟುಹೋದಿರಿ? ನೀವು ಬಿಟ್ಟುಹೋದ ಹೆಂಗಸು ನೀವು ನೋಡುವಾಗ ಇದ್ದಂತೆ ನಿಮ್ಮನ್ನೇ ನಿರೀಕ್ಷಿಸುತ್ತಾ ಇರುತ್ತಿರುವಳು. ಅರ್ಧವಸ್ತ್ರದಿಂದ ದುಃಖಪಡುತ್ತಾ ಇರುವಳು. ಆ ದುಃಖದಿಂದ ಸರ್ವದಾ ಅಳುತ್ತಿರುವ ಅವಳಿಗೆ ಹೇ ಮಹಾರಾಜನೇ ಅನುಗ್ರಹ ಮಾಡಿ. ಗಾಳಿಯಿಂದ ಯುಕ್ತವಾಗಿ ಅಗ್ನಿಯು ವನವನ್ನು ಸುಡುತ್ತಾ ಇದೆ. ಗಂಡನು ಹೆಂಡತಿಯನ್ನು ಸರ್ವದಾ ರಕ್ಷಿಸಬೇಕಲ್ಲವೇ! ದಯಾಶೀಲರಾದ ನೀವು ನನ್ನ ಪುಣ್ಯವು ಕಡಿಮೆಯಾದ ಪ್ರಯುಕ್ತ ನನ್ನಲ್ಲಿ ದಯೆಯಿಲ್ಲದೆ ಹೋದಿರಾ?)

ಇತ್ಯಾದಿ ಅರ್ಥವುಳ್ಳ ಶ್ಲೋಕಗಳನ್ನು ಹೇಳಿರಿ. ಅವನು ಹೇಳಿದ ಮಾತನ್ನು ನನ್ನೊಡನೆ ಬಂದು ತಿಳಿಸಬೇಕು. ನೀವು ಭೀಮರಾಜನ ಆಜ್ಞೆಯಿಂದ ಸಂಚರಿಸು ತ್ತಿರುವುದು ಒಬ್ಬರಿಗೂ ತಿಳಿಯಬಾರದು. ಬೇಗನೇ ಪುನಃ ಇಲ್ಲಿಗೆ ಬರಬೇಕು.

ಪ್ರತ್ಯುತ್ತರವನ್ನು ಹೇಳುವವನು ಹಣವಂತನಾಗಿರಲಿ ದರಿದ್ರನಾಗಿರಲಿ ಅಸಮರ್ಥನಾಗಿರಲಿ ಹೇಗೆ ಇದ್ದರೂ ಇಲ್ಲಿಗೆ ಬಂದು ತಿಳಿಸಬೇಕು ಎಂದಳು.

ತರುವಾಯ ಬ್ರಾಹ್ಮಣರು ನಳರಾಯನನ್ನು ಹುಡುಕಲಿಕ್ಕೆ ಹೊರಟುಹೋದರು. ಅವರು ನಾನಾದೇಶಗಳಲ್ಲಿ ಗ್ರಾಮಗಳಲ್ಲಿ ಎಲ್ಲಾ ಹುಡುಕುತ್ತಾ ನಳರಾಯನ ವಿಷಯವನ್ನೇ ತಿಳಿಯಲಿಲ್ಲ. ದಮಯಂತಿಯು ಹೇಳಿದ ವಾಕ್ಯಗಳನ್ನು ಅಲ್ಲಲ್ಲಿ ಹೇಳುತ್ತಾ ಹೋದರು. ತರುವಾಯ ಬಹುಕಾಲದ ಮೇಲೆ ಪರ್ಣಾದ ಎಂಬ ಬ್ರಾಹ್ಮಣನು ಬಂದು ದಮಯಂತಿಯೊಡನೆ 'ಅಮ್ಮ ದಮಯಂತಿ! ನಾನು ನಳರಾಯನನ್ನು ಹುಡುಕುತ್ತಾ ರಾತ್ರಿಹಗಲು ನಡೆಯುತ್ತಾ ಅಯೋಧ್ಯಾನಗರಿಗೆ ಹೋಗಿ ಋತುಪರ್ಣರಾಜನನ್ನು ನೋಡಿದೆನು. ಅಲ್ಲಿಯೂ ನೀನು ಹೇಳಿರುವ ಶ್ಲೋಕಗಳನ್ನು ಹೇಳಿದೆನು. ಋತುಪರ್ಣ ರಾಜನು ಆ ಶ್ಲೋಕಗಳನ್ನು ಕೇಳಿ ಒಂದು ಮಾತನ್ನೂ ಆಡಲಿಲ್ಲ. ಸಭೆಯಲ್ಲಿದ್ದ ಒಬ್ಬನೂ ಪ್ರತ್ಯುತ್ತರವನ್ನೂ ಕೊಡಲಿಲ್ಲ. ತರುವಾಯ ನಾನು ರಾಜನಿಂದ ಅನುಜ್ಞೆಯನ್ನು ಪಡೆದು ಬರಲು ಏಕಾಂತದಲ್ಲಿ ಒಬ್ಬ ಪುರುಷನು ಎಂದರೆ ಬಾಹುಕ ಎಂಬ ಹೆಸರುಳ್ಳ ಋತುಪರ್ಣನ ಸಾರಥಿಯು ನೋಡಲಿಕ್ಕೆ ಕುರೂಪಿಯಾಗಿದ್ದವನು, ಒಳ್ಳೇ ರೀತಿಯಾಗಿ ಕುದುರೆಗಳನ್ನು ಓಡಿಸಲಿಕ್ಕೆ ಸಮರ್ಥನಾದವನು, ಚೆನ್ನಾಗಿ ಅಡಿಗೆಯನ್ನು ಮಾಡುವವನು, ದೀರ್ಘಶ್ವಾಸವನ್ನು ಬಿಟ್ಟು ಸ್ವಲ್ಪ ಹೊತ್ತು ಅಳುವವನಾಗಿ ನನ್ನೊಡನೆ ಕುಶಲ ಪ್ರಶ್ನೆಯನ್ನು ಮಾಡಿ 'ಕುಲಸ್ತ್ರೀಯರು ಆಪತ್ತನ್ನು ಹೊಂದಿದರೂ ತಮ್ಮನ್ನು ರಕ್ಷಿಸಿಕೊಳ್ಳುವರು. ಅಂತವರು ಸ್ವರ್ಗವನ್ನೇ ಹೊಂದುವರು. ಸಂಶಯವೇ ಇಲ್ಲ. ಗಂಡಂದಿರು ಬಿಟ್ಟುಹೋದರೂ ಪತಿವ್ರತಾಸ್ತ್ರೀಯರು ಕೋಪಿಸಿಕೊಳ್ಳಲಾರರು. ನೀಚಸ್ಥಿತಿಯಿಂದ ಹೊಂದಿದ ಸುಖರಹಿತನಾದ ಆ ಪುರುಷನಿಂದ ಬಿಡಲ್ಪಟ್ಟ ಆ ಸ್ತ್ರೀಯು ಕೋಪಿಸಿಕೊಳ್ಳಬಾರದು. ಆ ಪುರುಷನ ವಸ್ತ್ರವನ್ನು ಪಕ್ಷಿಗಳು ಅಪಹರಿಸಿದವು. ಮನಸ್ಸಿನಲ್ಲಿ ತುಂಬಾ ವ್ಯಥೆಯುಳ್ಳವನಾಗಿದ್ದಾನೆ. ಕೇವಲ ಬದುಕಿದ್ದಾನೆ. ಅವನ ಮೇಲೆ ಆ ಹೆಂಗಸು ಕೋಪಿಸಿಕೊಳ್ಳಬಾರದು. ಸತ್ಕೃತಳಾಗಲೀ ಅಥವಾ ಅಸತ್ಕೃತಳಾಗಲಿ. ಆ ಸ್ತ್ರೀಯು ಅಂತಹ ಅವಸ್ಥೆಯುಳ್ಳ ಗಂಡನನ್ನು ನೋಡಿ ಕೋಪಿಸಿಗೊಳ್ಳಬಾರದು' ಎಂದು ಹೇಳಿದನು. ನಾನು ಆ ಮಾತನ್ನು ಕೇಳಿ ಇಲ್ಲಿಗೆ ಬೇಗನೆ ಓಡಿ ಬಂದಿರುವೆನು. ಇದನ್ನು ಕೇಳಿ ಮುಂದೆ ಏನು ಮಾಡಬೇಕೋ ಅದನ್ನು ಮಹಾರಾಜರ ಹತ್ತಿರ ತಿಳಿಸು' ಎಂದನು.

ಅದನ್ನು ಕೇಳಿ ದಮಯಂತಿಯು ಕಣ್ಣು ತುಂಬಾ ನೀರನ್ನು ಧರಿಸಿದವಳಾಗಿ

ಏಕಾಂತದಲ್ಲಿ ತಾಯಿಯ ಹತ್ತಿರ ಬಂದು ತಾಯಿಯೊಡನೆ 'ಅಮ್ಮ! ಈ ವಿಷಯವನ್ನು ತಂದೆಯೊಡನೆ ನೀನು ತಿಳಿಸಲೇಬಾರದು. ನಿನ್ನ ಸಮೀಪದಲ್ಲೇ ನಾನು ಸುದೇವ ಎಂಬ ಬ್ರಾಹ್ಮಣನನ್ನು ಕಳುಹಿಸುವೆನು. ಇದನ್ನು ನೀನು ನನ್ನ ಪ್ರಿಯನನ್ನು ಇಚ್ಛಿಸುವ ಪಕ್ಷದಲ್ಲಿ ತಂದೆಗೆ ತಿಳಿಸಬಾರದು. ಹೇಗೆ ಸುದೇವನು ಇಲ್ಲಿಗೆ ನನ್ನನ್ನು ಕರಕೊಂಡು ಬಂದನೋ ಅದೇ ಮಂಗಳದಿಂದ ಈಗ ಅವನೇ ಬೇಗನೇ ಹೋಗಲಿ. ನಳರಾಯನನ್ನು ಅಯೋಧ್ಯಾಪಟ್ಟಣದಿಂದ ಇಲ್ಲಿಗೆ ಕರಕೊಂಡು ಬರಲಿಕ್ಕೆ ಬೇಗನೇ ಹೋಗಲಿ? ಎಂದು ಹೇಳಿದಳು.

ದಮಯಂತಿಯು ಪರ್ಣಾದ ಬ್ರಾಹ್ಮಣನಿಗೆ ಬೇಕಾದ ಹಣವನ್ನು ಕೊಟ್ಟು ಸತ್ಕಾರವನ್ನು ಮಾಡಿದಳು. ನೀವು ಮಾಡಿದ ಉಪಕಾರವನ್ನು ಇನ್ನಾರೂ ಮಾಡಲಾರರು. ನಳರಾಯರು ಇಲ್ಲಿಗೆ ಬಂದಮೇಲೆ ನಿಮಗೆ ಇನ್ನೂ ಹಣವನ್ನು ಕೊಡುವೆನು ಎಂದಳು. ಈರೀತಿಯಾಗಿ ದಮಯಂತಿಯು ಉಪಚರಿಸಲು ಪರ್ಣಾದನು ದಮಯಂತಿಗೆ ಆಶೀರ್ವದಿಸಿ ಮನೆಗೆ ಹೋದನು. ತರುವಾಯ ದಮಯಂತಿಯು ಸುದೇವನನ್ನು ಕರೆಸಿ ತಾಯಿಯ ಸಮೀಪದಲ್ಲಿ ದುಃಖವುಳ್ಳವಳಾಗಿ 'ಸುದೇವ! ನೀವೀಗ ಅಯೋಧ್ಯಾವಾಸಿಯಾದ ಋತುಪರ್ಣರಾಜನ ಬಳಿಗೆ ಹೋಗಿ ದಮಯಂತಿಯು ಪುನಃ ಸ್ವಯಂವರವನ್ನು ಮಾಡಿಕೊಳ್ಳುವಳು. ಎಲ್ಲ ರಾಜರೂ ರಾಜಪುತ್ರರೂ ವಿದರ್ಭನಗರಿಗೆ ಹೋಗುತ್ತಿದ್ದಾರೆ. ನಾಳೆ ದಿವಸವೇ ಸ್ವಯಂವರವು ನಡೆಯುವುದು. ನಿನಗೆ ಹೋಗಲಿಕ್ಕೆ ಸಾಧ್ಯವಾದರೆ ಹೋಗು. ನಾಳೆ ಸೂರ್ಯೋದಯವು ಆಗಲು ದಮಯಂತಿಯು ಎರಡನೇ ಗಂಡನನ್ನು ವರಿಸುವಳು. ನಳರಾಯನು ಜೀವಿಸಿಕೊಂಡಿದ್ದಾನೋ? ಸತ್ತಿದ್ದಾನೋ ತಿಳಿಯಲಿಲ್ಲ ಎಂದು ತಿಳಿಸಬೇಕು' ಎಂದು ಹೇಳಿದಳು. ಅದನ್ನು ಕೇಳಿ ಸುದೇವ ಬ್ರಾಹ್ಮಣನು ಋತುಪರ್ಣರಾಜನಿದ್ದಲ್ಲಿಗೆ ಹೋದನು. (ಅ.70)

ಋತುಪರ್ಣನು ಸುದೇವ ಬ್ರಾಹ್ಮಣನು ಹೇಳಿದ ಮಾತನ್ನು ಕೇಳಿ ಸಾರಥಿಯರನ್ನು ಕರೆದು ಬಾಹುಕನನ್ನು ಕರೆದು ಸುದೇವನು ಹೇಳಿದ ದಮಯಂತಿಯ ಪುನಃ ಸ್ವಯಂವರದ ವಿಷಯವನ್ನು ಹೇಳಿದನು. ಋತುಪರ್ಣನು ಬಾಹುಕನನ್ನು ಮಧುರವಾದ ವಾಣಿಯಿಂದ ಸಮಾಧಾಪಡಿಸುತ್ತಾ 'ಕುದುರೆಯ ರಹಸ್ಯವನ್ನು ತಿಳಿದವನೇ! ನೀನು ಮನಸ್ಸು ಮಾಡಿದ ಪಕ್ಷದಲ್ಲಿ ನಾನು ಒಂದೇ ದಿನದಲ್ಲಿ ವಿದರ್ಭನಗರಕ್ಕೆ ಹೋಗಲಿಕ್ಕೆ ಇಚ್ಛಿಸುವೆನು ಎಂದನು. ದಮಯಂತಿಯ ಎರಡನೇ ಸ್ವಯಂವರದ ಕಥೆಯನ್ನು ಕೇಳಿ ನಳರಾಯನ ಮನಸ್ಸು ಸೀಳಿಹೋದಂತೆ ಆಯಿತು.

ಯೋಚನೆ ಮಾಡಿದನು. 'ದಮಯಂತಿಯು ದುಃಖದಿಂದ ಮೋಹಿತಳಾಗಿ ಹೀಗೇ ಮಾಡಿರಬಹುದೇ? ಅಥವಾ ನನ್ನನ್ನು ಕರೆದು ತರುವುದಕ್ಕಾಗಿ ಮಾಡಿರುವ ಉಪಾಯವಾಗಿರಬಹುದೇ? ಅಲ್ಪನಾದ ಪಾಪಬುದ್ಧಿಯುಳ್ಳ ನನ್ನಿಂದ ನಿರಾಕೃತಳಾಗಿ ತಪಸ್ವಿಯಾದ ದಮಯಂತಿಯು ಇಂತಹ ಕ್ರೂರಕಾರ್ಯವನ್ನು ಮನಸ್ಸು ಮಾಡಿದಳೇ? ಹೀಗೆ ಇದ್ದರೂ ಇರಬಹುದು. ಲೋಕದಲ್ಲಿ ಸ್ತ್ರೀಯರ ಸ್ವಭಾವವು ಚಂಚಲವಾದದ್ದು. ನನ್ನಲ್ಲಿಯೂ ದೋಷವಿದೆ. ನನ್ನ ಶೋಕದಿಂದ ಸಂತಪ್ತಳಾಗಿ ಕೊನೆಗೆ ನಾನು ಬರುವ ಆಸೆಯನ್ನು ಬಿಟ್ಟು ನನ್ನಲ್ಲಿ ಸ್ನೇಹವನ್ನು ಬಿಟ್ಟು ಹೀಗೆ ಮಾಡಿದ್ದರೂ ಮಾಡಿರಬಹುದು. ಸತ್ಯವೋ ಸುಳ್ಳೋ ಅಲ್ಲಿಗೆ ಹೋಗಿಯೇ ನೋಡುವೆನು. ಋತುಪರ್ಣನ ಅಭೀಷ್ಟವನ್ನು ನನ್ನ ಕಾರ್ಯಕ್ಕಾಗಿ ಮಾಡುವೆನು'. (ಅ.70)

ಈ ಪ್ರಕಾರವಾಗಿ ಬಾಹುಕನು ಯೋಚಿಸಿ ಕೈಮುಗಿದು ಋತುಪರ್ಣನೊಡನೆ 'ರಾಜನು ನಿನಗೆ ಪ್ರತಿಜ್ಞಾ ಮಾಡುತ್ತೇನೆ. ಒಂದೇ ದಿವಸದಲ್ಲಿ ಎಂದರೆ ನಾಳೆ ಸೂರ್ಯೋದಯಕಾಲದಲ್ಲಿ ನೀನು ವಿದರ್ಭನಗರನ್ನು ಸೇರುವಿ' ಎಂದು ಹೇಳಿದನು. ಆ ಮಾತನ್ನು ಕೇಳಿ ಋತುಪರ್ಣನು 'ಬಾಹುಕ! ನನಗೆ ಬಹಳ ಸಂತೋಷವಾಯಿತು. ನಿನಗೇನು ನಾನು ಕೊಡಲಿ?' ಎಂದು ಸಂತೋಷಾಧಿಕ್ಯದಿಂದ ಹೇಳಿದನು. (ಅ.70)

ತರುವಾಯ ನಳರಾಯನು ಋತುಪರ್ಣನೊಡನೆ ಕುದುರೆಗಳನ್ನು ಪರೀಕ್ಷಿಸಿ ಕೊಂಡು ಬರುವೆನು ಎಂದು ಹೇಳಿ ಅಶ್ವಶಾಲೆಗೆ ಹೋದನು. ಋತುಪರ್ಣನು ಅವಸರಪಡಿಸಿದನು. ನಳರಾಯನು ಪುನಃಪುನಃ ಪರೀಕ್ಷಾಮಾಡಿ ಕಣ್ಣಿಗೆ ಸೊಗಸಾಗಿ ಕಾಣದೆ ಇರುವ ಓಡಲಿಕ್ಕೆ ಸಮರ್ಥಗಳಾದ ಉತ್ತಮಲಕ್ಷಣವುಳ್ಳ ಕುದುರೆಗಳನ್ನು ತಂದನು. ಅವನ್ನು ನೋಡಿ ಋತುಪರ್ಣನು ಬಾಹುಕನೇ! ನನ್ನನ್ನು ಮೋಸ ಮಾಡುವಿಯಾ? ಬಹುದೂರವಿದೆಯಲ್ಲಾ! ಈ ಕುದುರೆಗಳು ಅಷ್ಟುದೂರ ರಥವನ್ನು ಹೇಗೆ ಸೆಳೆದುಕೊಂಡು ಹೋಗುವುವು? ಎಂದು ಕೇಳಿದನು. ಅದಕ್ಕೆ ನಳನು 'ಈ ಕುದುರೆಗಳು ನಿಶ್ಚಯವಾಗಿಯೂ ವಿದರ್ಭದೇಶಕ್ಕೆ ಹೋಗಿ ಸೇರುವುವು. ಸಂಶಯ ವಿಲ್ಲ. ಅಥವಾ ಬೇರೆ ಕುದುರೆಗಳನ್ನು ಕಟ್ಟಬೇಕೆಂದು ನಿಮ್ಮ ಅಭಿಪ್ರಾಯವಿದ್ದರೆ ಯಾವ ಕುದುರೆಗಳನ್ನು ಕಟ್ಟಬೇಕೋ ಹೇಳಿರಿ. ಆ ಕುದುರೆಗಳನ್ನೇ ಕಟ್ಟುತ್ತೇನೆ' ಎಂದನು.

ಅದಕ್ಕೆ ಋತುಪರ್ಣನು 'ನೀನೇ ಕುದುರೆಯ ರಹಸ್ಯವನ್ನು ತಿಳಿದವನು.

ಆದುದರಿಂದ ಯಾವ ಕುದುರೆಗಳು ಸಮರ್ಥಗಳು ಎಂದು ತಿಳಿದಿರುವಿಯೋ ಆ ಕುದುರೆಗಳನ್ನೇ ಕಟ್ಟು' ಎಂದು ಹೇಳಿದನು. ನಳರಾಯನು ಓಡಲಿಕ್ಕೆ ಸಮರ್ಥಗಳಾದ ಕುದುರೆಗಳನ್ನು ರಥಕ್ಕೆ ಕಟ್ಟಿದನು. ತರುವಾಯ ರಾಜನು ರಥವನ್ನು ಏರಿದನು. ಆಗ ಕುದುರೆಗಳು ಮೊಳಕಾಲನ್ನು ಊರಿ ಬಿದ್ದವು. ನಳರಾಯನು ಅವುಗಳನ್ನು ಸಮಾಧಾನ ಪಡಿಸಿ ಕಡಿವಾಣವನ್ನು ಹಿಡಿದು ವಾರ್ಷ್ಣೇಯನ್ನು ರಥದಲ್ಲಿ ಕೂತುಕೊಳ್ಳಿಸಿ ಕುದುರೆ ಗಳನ್ನು ಓಡಿಸಿದನು. ವಿಧಿಪ್ರಕಾರವಾಗಿ ನಳರಾಯನು ಕುದುರೆಗಳನ್ನು ಓಡಿಸಲು ಕುದುರೆಗಳು ಆಕಾಶದಲ್ಲಿ ಹಾರುವಂತೆ ಓಡಿದವು. ರಥದಲ್ಲಿ ಕೂತ ರಾಜನನ್ನು ಮೋಹಗೊಳಿಸಿದವು. ಆ ಪ್ರಕಾರವಾಗಿ ಓಡುವ ಕುದುರೆಗಳನ್ನು ನೋಡಿ ಅಯೋಧ್ಯಾಧಿಪತಿಯಾದ ಋತುಪರ್ಣನು ಅತ್ಯಂತ ಆಶ್ಚರ್ಯವನ್ನು ಹೊಂದಿದನು. ರಥವು ಓಡುವ ಶಬ್ದವನ್ನೂ ಕುದುರೆಗಳನ್ನೂ ಓಡಿಸುವ ಕ್ರಮವನ್ನೂ ನೋಡಿ ವಾರ್ಷ್ಣೇಯನು ಬಾಹುಕನಿಗೆ ಕುದುರೆಗಳ ರಹಸ್ಯವು ಚೆನ್ನಾಗಿ ತಿಳಿದಿರುವುದು ಎಂದುಕೊಂಡನು. ಇವನು ಮಾತಲಿಯಿರಬಹುದೋ? ಅಥವಾ ಅಶ್ವಶಾಸ್ತ್ರವನ್ನೇ ಮಾಡಿರುವ ಮನುಷ್ಯದೇಹವನ್ನು ಧರಿಸಿಕೊಂಡು ಬಂದಿರುವ ಶಾಲಿಹೋತ್ರನಾಗಿರ ಬಹುದೋ? ಅಥವಾ ನಳರಾಯನೇ ಆಗಿರಬಹುದೋ? ಅಥವಾ ನಳರಾಯನಿಂದ ಈ ಬಾಹುಕನು ವಿದ್ಯೆಯನ್ನು ಅಭ್ಯಾಸಮಾಡಿರಬಹುದೋ? ನಳರಾಯನ ಜ್ಞಾನ ದಂತೆಯೇ ಬಾಹುಕನ ಜ್ಞಾನವೂ ಇದೆ. ಈ ಬಾಹುಕನಿಗೆ ಅದೇ ವಯಸ್ಸು. ರೂಪ ಮಾತ್ರ ಬೇರೆಯಾಗಿದೆ. ಕೊನೆಗೆ ನೋಡುವಾಗ ಬಾಹುಕನು ನಳನೇ ಇರಬಹು ದೆಂದು ತೋರುತ್ತದೆ. ಈರೀತಿಯಾಗಿ ವಿಚಾರಿಸಿ ವಾರ್ಷ್ಣೇಯನು ಬಹಳವಾಗಿ ಯೋಚನೆ ಮಾಡಿದನು. ಋತುಪರ್ಣರಾಜನು ಬಾಹುಕನ ಅಶ್ವಜ್ಞಾನವನ್ನು ಯೋಚಿಸಿ ಸಂತೋಷಪಟ್ಟನು. (ಅ.71)

ತರುವಾಯ ರಥವು ನದಿಗಳನ್ನೂ ಪರ್ವತಗಳನ್ನೂ ವನಗಳನ್ನೂ ದಾಟಿ ವಾಯುವೇಗದಿಂದ ಹೋಯಿತು. ಆ ರೀತಿಯಾಗಿ ವೇಗದಿಂದ ರಥವು ಹೋಗು ತ್ತಿರಲು ಋತುಪರ್ಣನು ತಾನು ಹೊದ್ದುಕೊಂಡ ವಸ್ತ್ರವು ಕೆಳಗೆ ಬೀಳಲು ಅವಸರದಿಂದ ಬಾಹುಕ1 ಕುದುರೆಗಳ ಕಡಿವಾಣವನ್ನು ಹಿಡಿದು ನಿಲ್ಲಿಸು. ನಾನು ಮೇಲೆ ಧರಿಸಿದ ವಸ್ತ್ರವು ಕೆಳಗೆ ಬಿದ್ದಿತು. ವಾರ್ಷ್ಣೇಯನು ನನ್ನ ವಸ್ತ್ರವನ್ನು ತಂದುಕೊಡಲಿ ಎಂದು ಹೇಳಿದನು. ಅದಕ್ಕೆ ನಳರಾಯನು 'ನಿಮ್ಮ ವಸ್ತ್ರವು ಬಹುದೂರವಾಯಿತು. ಹತ್ತು ಮೈಲು ದೂರ ಬಂದುಬಿಟ್ಟೆವು' ಎಂದನು. ಅದನ್ನು ಕೇಳಿ ಋತುಪರ್ಣನು ಮನಸ್ಸಿನಲ್ಲಿ ಸ್ವಲ್ಪ ಅಸಂತೋಷವುಳ್ಳವನಾಗಿ ದಾರಿಯಲ್ಲಿ

ಒಂದು ವಿಭೀತಕ ಎಂಬ ಮರವನ್ನು ನೋಡಿ ನಳರಾಯನೊಡನೆ 'ಬಾಹುಕ! ಎಲ್ಲರೂ ಎಲ್ಲವನ್ನೂ ತಿಳಿದಿರುವುದಿಲ್ಲ. ನನಗೂ ಒಂದು ಸಾಮರ್ಥ್ಯವಿದೆ. ಅದೇನೆಂದರೆ ನಾನು ಅಕ್ಷಹೃದಯ ಎಂಬ ವಿದ್ಯೆಯನ್ನು ತಿಳಿದಿರುವೆನು. ಅಂದರೆ ಪಗಡೆಕಾಳಿನ ಅಭಿಮಾನಿದೇವತೆಯನ್ನು ವಶಮಾಡಿಕೊಳ್ಳುವ ವಿದ್ಯೆಯು. ಇದರಿಂದ ಪಗಡೆ ಆಟದಲ್ಲಿ ಪಗಡೆ ಕಾಳುಗಳು ಅನುಕೂಲಗಳಾಗಿಯೇ ಬೀಳುವುವು. ರಾಶಿಯಾಗಿ ಬಿದ್ದಿರುವ ಫಲಪುಷ್ಪ ಎಲೆಗಳು ಇತ್ಯಾದಿಗಳ ಲೆಕ್ಕವನ್ನು ಹೇಳಬಹುದು' ಎಂದು ಹೇಳಿ ಆ ಮರದಲ್ಲಿ ಎಲೆ ಮೊದಲಾದವುಗಳ ಲೆಕ್ಕವನ್ನು ಹೇಳಿದನು. ಆಗ ನಳನು ಒಂದು ಮುಹೂರ್ತ ವಾರ್ಷ್ಣೇಯನು ಕುದುರೆಯ ಹಗ್ಗವನ್ನು ಹಿಡಿಯಲಿ. ನಾನು ಇದನ್ನು ಪರೀಕ್ಷಿಸಿ ಬಿಡುತ್ತೇನೆ. ನಿನ್ನ ಎದುರಲ್ಲೇ ಲೆಕ್ಕ ಮಾಡುತ್ತೇನೆ ಎಂದನು. ಅದಕ್ಕೆ ಋತುಪರ್ಣನು 'ಬಾಹುಕನೇ! ಇದು ಸಾವಕಾಶ ಮಾಡುವ ಕಾಲವಲ್ಲ' ಎಂದನು. ಅದಕ್ಕೆ ನಳರಾಯನು 'ಒಂದು ಮುಹೂರ್ತಕಾಲ ತಡೆ. ಅಥವಾ ಹೀಗೆಯೇ ವಿದರ್ಭನಗರಕ್ಕೆ ದಾರಿಯು ಹೋಗುತ್ತದೆ. ವಾರ್ಷ್ಣೇಯನನ್ನು ರಥವನ್ನು ಓಡಿಸಲಿ' ಎಂದನು. ಅದಕ್ಕೆ ಋತುಪರ್ಣನು 'ಬಾಹುಕನೇ! ನೀನೇ ಭೂಮಿಯಲ್ಲಿ ಕುದುರೆ ಓಡಿಸುವವನು. ನಿನ್ನಿಂದಾಗಿ ನಾನು ವಿದರ್ಭದೇಶಕ್ಕೆ ಹೋಗಲಿಕ್ಕೆ ಇಚ್ಛಿಸುವೆನು. ನಿನ್ನನ್ನೇ ಮರೆಹೊಂದಿರುವೆನು. ನೀನು ವಿಘ್ನ ಮಾಡಬಾರದು. ನಿನಗೆ ನಾನು ಬೇಕಾದ್ದನ್ನು ಕೊಡುವೆನು. ನೀನು ವಿದರ್ಭನಗರಿಗೆ ಹೋಗಿ ಸೂರ್ಯೋದಯವನ್ನು ತೋರಿಸುವ ಪಕ್ಷದಲ್ಲಿ ನಿನಗೆ ನಾನು ಬೇಕಾದ್ದನ್ನು ಕೊಡುವೆನು' ಎಂದು ಹೇಳಿದನು. ಅದಕ್ಕೆ ನಳರಾಯನು 'ಆಗಲಿ. ನಾನು ಎಣಿಸಿಬಿಡುತ್ತೇನೆ. ಆಮೇಲೆ ವಿದರ್ಭನಗರಿಗೆ ಹೋಗಬಹುದು' ಎಂದನು. ಋತುಪರ್ಣನಿಗೆ ಇಷ್ಟವೇ ಇಲ್ಲ. ಆಗಲಿ ಎಂದನು. ತರುವಾಯ ಬೇಗನೆ ನಳರಾಯನು ರಥದಿಂದ ಕೆಳಗೆ ಇಳಿದು ಋತುಪರ್ಣನು ಹೇಳಿದ್ದನ್ನು ಎಣಿಸಿನೋಡಲು ಸರಿಯಾಗಿ ಇದ್ದಿತು. ನಳರಾಯನು ಆಶ್ಚರ್ಯವನ್ನು \ಹೊಂದಿ 'ರಾಜನೇ! ಅತ್ಯದ್ಭುತವಾದ ನಿನ್ನ ಸಾಮರ್ಥ್ಯವನ್ನು ನೋಡಿದೆನು. ಆ ವಿದ್ಯೆಯನ್ನು ನನಗೆ ತಿಳಿಯಬೇಕೆಂಬ ಆಸೆಯಿದೆ' ಎಂದು ಹೇಳಿದನು. ಅದಕ್ಕೆ ಋತುಪರ್ಣನು ಹೋಗುವ ಅವಸರವುಳ್ಳವನಾಗಿ 'ಬಾಹುಕನೇ! ನನಗೆ ಪಗಡೆ ಆಟದ ರಹಸ್ಯವೂ ತಿಳಿಯುವುದು. ಮತ್ತು ನಾನು ಬೇಗನೇ ಎಣಿಸುವುದರಲ್ಲಿಯೂ ಸಮರ್ಥನು' ಎಂದನು. ನಳರಾಯನು 'ರಾಜನೇ! ನಿನ್ನ ಆ ಎರಡು ವಿದ್ಯೆಗಳನ್ನೂ ನನಗೆ ಹೇಳಿಕೊಡು. ನನ್ನಲ್ಲಿರುವ ಅಶ್ವಹೃದಯವೆಂಬ ಕುದುರೆಗಳ ರಹಸ್ಯವನ್ನು ತಿಳಿಯುವ

ವಿದ್ಯೆಯನ್ನು ಸ್ವೀಕರಿಸು' ಎಂದನು. ಅದಕ್ಕೆ ಋತುಪರ್ಣನು ಬಾಹುಕನೊಡನೆ 'ಕಾರ್ಯಗೌರವದಿಂದ ಕುದುರೆಯ ರಹಸ್ಯವನ್ನು ತಿಳಿಯಬೇಕೆಂಬ ಲೋಭ ದಿಂದಲೂ ಹಾಗೆಯೇ ಆಗಲಿ ಎಂದನು. ನನ್ನ ವಿದ್ಯೆಯನ್ನು ಈಗಲೇ ಸ್ವೀಕರಿಸು. ನಿನ್ನ ವಿದ್ಯೆಯನ್ನು ನಾನು ಆಮೇಲೆ ಸ್ವೀಕರಿಸುವೆನು ಎಂದು ಋತುಪರ್ಣನು ಹೇಳಿದನು. ನಳರಾಯನಿಗೆ ಆ ವಿದ್ಯೆಯ ಉಪದೇಶವನ್ನೂ ಮಾಡಿದನು. ನಳರಾಯನು ಅಕ್ಷಹೃದಯವನ್ನು ತಿಳಿಯುವ ಮಾತ್ರದಲ್ಲಿ ಕರ್ಕೋಟಕನ ವಿಷವನ್ನು ಬಾಯಿಯಿಂದ ಕಾರುತ್ತಾ ಕಲಿಯು ನಳರಾಯನ ದೇಹದಿಂದ ಹೊರಗೆ ಬಂದನು. ಕಲಿಯನ್ನು ನೋಡಿ ನಳರಾಯನು ಕೋಪದಿಂದ ಶಾಪವನ್ನು ಕೊಡಲಿಕ್ಕೆ ಉದ್ಯುಕ್ತನಾದನು. ಆಗ ಕಲಿಯು ನಡುಗುತ್ತಾ ಕೈಮುಗಿದುಕೊಂಡು 'ರಾಜನೇ! ಕೋಪವನ್ನು ಶಾಂತಿ ಮಾಡಿಕೊ. ನಿನಗೆ ಮಹಾಕೀರ್ತಿಯನ್ನು ಉಂಟುಮಾಡುವೆನು. ನೀನು ಬಿಟ್ಟುಹೋದ ಮೇಲೆ ನನಗೆ ದಮಯಂತಿಯು ಶಾಪವನ್ನು ಕೊಟ್ಟಿರುವಳು. ಆದರಿಂದ ನಾನು ಅತ್ಯಂತ ಪೀಡಿತನಾಗಿದ್ದೇನೆ. ಆ ಶಾಪದಿಂದ ಮತ್ತು ನಾಗರಾಜನಾದ ಕರ್ಕೋಟಕನ ವಿಷದಿಂದಲೂ ತುಂಬಾ ದುಃಖದಿಂದ ನಾನು ನಿನ್ನಲ್ಲಿ ವಾಸಮಾಡುತ್ತಿದ್ದೆನು. ನಿನ್ನನ್ನೇ ಮರೆಹೊಂದಿದ್ದೇನೆ. ನನ್ನ ಮಾತನ್ನು ಕೇಳು. ಲೋಕದಲ್ಲಿ ಯಾರು ನಿನ್ನನ್ನು ಕೀರ್ತನ ಮಾಡುವರೋ ಅವರಿಗೆ ನನ್ನ ಭಯವುಂಟಾಗಲಾರದು. ಭಯದಿಂದ ಪೀಡಿತನಾದ ನನ್ನನ್ನು ನೀನು ಶಪಿಸದಿದ್ದರೆ ನಿನಗೆ ಈ ವರವನ್ನು ಕೊಡುವೆನು' ಎಂದನು.(ಅ.72)

ಈರೀತಿಯಾಗಿ ಕಲಿಯು ಹೇಳಲು ನಳನು ತನ್ನ ಕೋಪವನ್ನು ಅಡಗಿಸಿ ಕೊಂಡನು. ತರುವಾಯ ಕಲಿಯು ಭಯದಿಂದ ವಿಭೀತಕ ಎಂಬ ಮರವನ್ನು ಪ್ರವೇಶಿಸಿದನು. ಆಮೇಲೆ ನಳರಾಯನು ಪರಮಸಂತೋಷವುಳ್ಳ ತೇಜಸ್ಸಿನಿಂದ ಕೂಡಿದವನಾಗಿ ರಥವನ್ನು ಏರಿ ಬಹುವೇಗದಿಂದ ಹೋದನು. ನಳರಾಯನು ಸಂತೋಷದಿಂದ ಪಕ್ಷಿಗಳಂತೆ ಹಾರುತ್ತಿರುವ ಕುದುರೆಗಳನ್ನು ಓಡಿಸಿದನು. ನಳನು ಹೊರಟುಹೋದ ಮೇಲೆ ಕಲಿಯು ಮನೆಗೆ ಹೋದನು. ಕಲಿಯು ಬಿಟ್ಟುಹೋದಮೇಲೆ ನಳರಾಯನು ಸಂತೋಷವನ್ನು ಹೊಂದಿದನು. ರೂಪವು ಮಾತ್ರ ಹಾಗೆಯೇ ಇದ್ದಿತು. (ಅ.72)

ತರುವಾಯ ಸಾಯಂಕಾಲದಲ್ಲಿ ಋತುಪರ್ಣನು ವಿದರ್ಭದೇಶಕ್ಕೆ ಬಂದನೆಂದು ಜನರು ಭೀಮರಾಜನ ಹತ್ತಿರ ತಿಳಿಸಿದರು. ಭೀಮನು ಬರಲಿಕ್ಕೆ ಹೇಳಿಕಳುಹಿಸಿದನು. ಋತುಪರ್ಣನು ರಥಶಬ್ದದಿಂದ ಸರ್ವತ್ರ ಶಬ್ದವನ್ನು ಮಾಡುತ್ತಾ ವಿದರ್ಭನಗರವನ್ನು ಪ್ರವೇಶಿಸಿದನು. ಪೂರ್ವದಲ್ಲಿ ದಮಯಂತಿಯು ತನ್ನ

ಮಕ್ಕಳೊಡನೆ ಅಲ್ಲಿಗೆ ಕಳುಹಿಸಿದ್ದ ನಳನ ಕುದುರೆಗಳು ಈ ರಥದ ಶಬ್ದವನ್ನು ಕೇಳಿ ನಳರಾಯನ ಸಮೀಪದಲ್ಲಿ ಇದ್ದಾಗ ಹೇಗೆ ಸಂತೋಷಪಟ್ಟಿದ್ದವೋ ಹಾಗೆಯೇ ಸಂತೋಷಪಟ್ಟವು. ದಮಯಂತಿಯೂ ಕೂಡ ಆ ರಥದ ಶಬ್ದವನ್ನು ಕೇಳಿದಳು. ನಳರಾಯನು ಪೂರ್ವದಲ್ಲಿ ರಥದ ಶಬ್ದವಾಗುತ್ತಿದ್ದಂತೆಯೇ ಶಬ್ದವನ್ನು ಕೇಳಿ ದಮಯಂತಿಯು ತುಂಬಾ ಆಶ್ಚರ್ಯಪಟ್ಟಳು. ಆ ರಥದ ಶಬ್ದವನ್ನು ಕೇಳಿ ಮಹಡಿಯ ಮೇಲೆ ಇದ್ದ ನವಿಲುಗಳೂ ಕೆಳಗಿದ್ದ ಆನೆಗಳೂ ಕೇಳಿ ಮೇಘವನ್ನು ನೋಡಿ ಸಂತೋಷಪಡುವಂತೆ ಸಂತೋಷಪಟ್ಟು ಮೇಘವು ಬಂದಿದೆಯೋ ಏನೋ ಎಂದು ತಲೆಯನ್ನು ಎತ್ತಿದವು. (ಅ.73)

ಆಗ ದಮಯಂತಿಯು 'ಈ ರಥದ ಧ್ವನಿಯು ನನ್ನನ್ನು ಸಂತೋಷಪಡಿಸುತ್ತದೆ. ಇವರು ನಳರಾಯರೇ ಬರುತ್ತಿರುವರು. ಚಂದ್ರನಂತೆ ಮುಖವುಳ್ಳ ನಳರಾಜರನ್ನು ಈದಿನ ಕಾಣದಿದ್ದರೆ ನಾನು ಸಾಯುವೆನು. ನಾನು ಅವರನ್ನು ಆಲಿಂಗಿಸದಿದ್ದರೆ ಬದುಕಲಾರೆನು. ಈದಿನ ಅವರು ಬಾರದೆ ಇದ್ದರೆ ನಾನು ಬೆಂಕಿಯಲ್ಲಿ ಬೀಳುವೆನು. ಈ ದಿವಸದಲ್ಲಿ ಸಿಂಹದಂತೆ ಪರಾಕ್ರಮವುಳ್ಳ ಅವರು ಬಾರದೆ ಇದ್ದರೆ ನಾನು ನಾಶವನ್ನು ಹೊಂದುವೆನು. ಅವರ ಗುಣಗಳನ್ನು ರಾತ್ರಿಹಗಲು ಯೋಚನೆ ಮಾಡುತ್ತಿರುವ ನನ್ನ ಹೃದಯವು ಅವರಿಲ್ಲದೆ ಸೀಳುವಂತೆ ಇದೆ' ಹೀಗೆಲ್ಲಾ ವಿಲಾಪವನ್ನು ಮಾಡುತ್ತಾ ನಳರಾಯನನ್ನು ನೋಡಬೇಕೆಂಬ ಆಸೆಯಿಂದ ಮಹಡಿಯ ಮೇಲೆ ಹೋದಳು. ಮಧ್ಯಪ್ರದೇಶದಲ್ಲಿ ರಥದಲ್ಲಿ ಕೂತಿದ್ದ ಋತುಪರ್ಣನನ್ನೂ ಬಾಹುಕನನ್ನೂ ವಾರ್ಷ್ಣೇಯನನ್ನೂ ನೋಡಿದಳು. ತರುವಾಯ ವಾರ್ಷ್ಣೇಯನೂ ಬಾಹುಕನೂ ರಥದಿಂದ ಕೆಳಗೆ ಇಳಿದು ಕುದುರೆಗಳನ್ನು ಬಿಚ್ಚಿ ರಥವನ್ನು ನಿಲ್ಲಿಸಿದರು. ಋತುಪರ್ಣನು ರಥದಿಂದ ಕೆಳಗೆ ಇಳಿದು ಭೀಮರಾಜನ ಸಮೀಪಕ್ಕೆ ಬಂದನು. ಭೀಮನು ಆದರದಿಂದ ಕರೆದು ಪೂಜಿಸಿದನು. ಋತುಪರ್ಣನು ಕುಂಡಿನನಗರದಲ್ಲಿ ವಾಸಮಾಡುತ್ತಾ ಸ್ವಯಂವರದ ವಿಷಯವಾಗಿ ಒಂದು ಚಿಹ್ನೆಯನ್ನೂ ತಿಳಿಯಲಿಲ್ಲ. ಹೆಂಗಸರ ಯೋಚನೆಯಿಂದ ನಡೆದ ವಿಷಯವು ಭೀಮರಾಜನಿಗೂ ತಿಳಿಯದು. ಭೀಮರಾಜನು ಋತುಪರ್ಣನೊಡನೆ 'ಸ್ವಾಗತವು ಬಂದ ಕಾರ್ಯವೇನು?' ಎಂದು ಕೇಳಿದನು. ತನ್ನ ಮಗಳ ಸ್ವಯಂವರಕ್ಕಾಗಿ ಬಂದಿರುವನು ಎಂಬ ವಿಷಯವು ಅವನಿಗೆ ತಿಳಿಯದು. ಋತುಪರ್ಣನು ಅಲ್ಲಿ ಒಬ್ಬ ರಾಜನನ್ನಾಗಲೀ ರಾಜಪುತ್ರನನ್ನಾಗಲೀ ನೋಡಲಿಲ್ಲ. ಒಬ್ಬ ಬ್ರಾಹ್ಮಣರೂ ಬಂದಿಲ್ಲ. ಸ್ವಯಂವರದ ಕಥೆಯೇ ಅಲ್ಲಿ ಇಲ್ಲ. ಇದರಿಂದ ಭೀಮರಾಜನು ಕೇಳಿದ್ದಕ್ಕೆ ಏನು ಹೇಳಬೇಕೆಂದು ತೋರದೆ ನಿನಗೆ

ನಮಸ್ಕರಿಸಿ ಹೋಗುವ ಎಂದು ಬಂದೆನು ಎಂದನು. ಭೀಮರಾಜನು ಮಂದಹಾಸವನ್ನು ಮಾಡಿದನು. ಮನಸ್ಸಿನಲ್ಲಿ ನೂರುಯೋಜನ ದೂರ ಅನೇಕ ಗ್ರಾಮಗಳನ್ನು ದಾಟಿ ಬಂದಿರುವನು. ಕಾರಣವನ್ನು ಕೇಳಿದರೆ ನನಗೆ ನಮಸ್ಕಾರ ಮಾಡಲಿಕ್ಕೆ ಬಂದಿದ್ದೇನೆ ಎನ್ನುವನು. ಈ ಅಲ್ಪಕಾರ್ಯಕ್ಕೋಸ್ಕರ ಇಷ್ಟುದೂರ ಬರುವನೇ? ಮುಂದೆ ಇದರ ಕಾರಣವು ಗೊತ್ತಾಗುವುದು ಎಂದುಕೊಂಡು ವಿಶ್ರಾಂತಿಯನ್ನು ಹೊಂದು ಎಂದು ಹೇಳಿ ಕಳುಹಿಸಿದನು. ಋತುಪರ್ಣನು ರಾಜಭೃತ್ಯರಿಂದ ಕೂಡಿಕೊಂಡು ರಾಜನು ತೋರಿಸಿದ ಮನೆಗೆ ಪ್ರವೇಶಿಸಿದನು. ಋತುಪರ್ಣನು ವಾರ್ಷ್ಣೇಯನಿಂದ ಸಹಿತನಾಗಿ ಹೊರಟು ಹೋಗಲು ಬಾಹುಕನು ರಥವನ್ನು ತೆಗೆದುಕೊಂಡು ರಥಶಾಲೆಗೆ ಹೋದನು. ಕುದುರೆಗಳಿಗೆ ಬೇಕಾದ ಉಪಚಾರವನ್ನು ಮಾಡಿ ತಾನು ರಥದ ಸಮೀಪದಲ್ಲಿ ಕೂತುಕೊಂಡನು. ದಮಯಂತಿಯು ದುಃಖಪೀಡಿತಳಾಗಿ ಋತುಪರ್ಣವನ್ನು ವಾರ್ಷ್ಣೇಯನನ್ನೂ ಬಾಹುಕನನ್ನೂ ನೋಡಿ 'ಇದು ಯಾರು ರಥವನ್ನು ಓಡಿಸಿದ್ದರಿಂದ ಉಂಟಾದ ಶಬ್ದವು? ನಳರಾಜರು ರಥವನ್ನು ಓಡಿಸುವ ಶಬ್ದದಂತೆ ಇತ್ತಲ್ಲಾ! ನಳರಾಯರು ಕಾಣಿಸುವುದಿಲ್ಲವಲ್ಲಾ! ವಾರ್ಷ್ಣೇಯನೇ ನಳರಾಯರಿಂದ ಆ ವಿದ್ಯೆಯನ್ನು ಕಲಿತಿರಬೇಕು. ಆದರಿಂದ ಈಗ ನಳರಾಯರು ಓಡಿಸಿದಂತೆ ರಥದ ಶಬ್ದವು ಕೇಳಿಸಿತು' ಹೀಗೆಲ್ಲಾ ಯೋಚನೆ ಮಾಡುತ್ತಾ ನಳರಾಯನನ್ನು ಹುಡುಕಿಕೊಂಡು ಬರುವುದಕ್ಕಾಗಿ ದೂತಿಯನ್ನು ಕಳುಹಿಸಿದಳು. (ಅ.73)

ದಮಯಂತಿಯು 'ಕೇಶಿನಿ ! ರಥದ ಹತ್ತಿರ ಕೂತಿರುವ ವಿಕಾರವುಳ್ಳ ಗಿಡ್ಡಾದ ಕೈಗಳುಳ್ಳ ಆ ರಥವನ್ನು ಓಡಿಸುವವನು ಯಾರು? ಎಂದು ನೋಡಿಕೊಂಡು ಬಾ. ಅವನ ಹತ್ತಿರ ಹೋಗಿ ಮೃದುವಾಗಿ ಕುಶಲಪ್ರಶ್ನೆಯನ್ನು ಮಾಡು. ಅವನೇ ನಳರಾಯರಾಗಿರಬಹುದೋ ಎಂದು ನನಗೆ ಬಹಳ ಸಂದೇಹವಿದೆ. ಅವನಿಗೆ ಮನಸ್ಸಿಗೆ ಸಂತೋಷವಾಗುವಂತೆ ಮಾತನಾಡು. ಕೊನೆಗೆ ಮಾತ್ರ ಪರ್ಣಾದನು ಹೇಳಿದ ಮಾತನ್ನು ಹೇಳು. ಅವನ ಒಂದೊಂದು ಮಾತನ್ನು ಜ್ಞಾಪಕವಿಟ್ಟುಕೊ' ಎಂದು ಹೇಳಿದಳು. ದಾಸಿಯು ನಳನಿದ್ದಲ್ಲಿಗೆ ಹೋದಳು. ದಮಯಂತಿಯು ಉಪ್ಪರಿಗೆಯ ಮೇಲೆ ಹೋಗಿ ಎಲ್ಲವನ್ನೂ ನೋಡುತ್ತಾ ಇದ್ದಳು.

ಕೇಶಿನಿಯು ನಳನಿದ್ದಲ್ಲಿಗೆ ಹೋಗಿ 'ಪುರುಷಶ್ರೇಷ್ಠನೇ! ನಿನಗೆ ಸ್ವಾಗತವು. ನಿನ್ನ ಹತ್ತಿರ ಕುಶಲವನ್ನು ಹೇಳುವೆನು. ದಮಯಂತಿಯ ಮಾತನ್ನು ಕೇಳು. ನೀವು ಯಾವಾಗ ಹೊರಟಿರುವಿರಿ? ಯಾವುದಕ್ಕೋಸ್ಕರ ಇಲ್ಲಿಗೆ ಬಂದಿರಿ? ಯಥಾರ್ಥ

ಮಕ್ಕಳೊಡನೆ ಅಲ್ಲಿಗೆ ಕಳುಹಿಸಿದ್ದ ನಳನ ಕುದುರೆಗಳು ಈ ರಥದ ಶಬ್ದವನ್ನು ಕೇಳಿ ನಳರಾಯನ ಸಮೀಪದಲ್ಲಿ ಇದ್ದಾಗ ಹೇಗೆ ಸಂತೋಷಪಟ್ಟಿದ್ದವೋ ಹಾಗೆಯೇ ಸಂತೋಷಪಟ್ಟವು. ದಮಯಂತಿಯೂ ಕೂಡ ಆ ರಥದ ಶಬ್ದವನ್ನು ಕೇಳಿದಳು. ನಳರಾಯನು ಪೂರ್ವದಲ್ಲಿ ರಥದ ಶಬ್ದವಾಗುತ್ತಿದ್ದಂತೆಯೇ ಶಬ್ದವನ್ನು ಕೇಳಿ ದಮಯಂತಿಯು ತುಂಬಾ ಆಶ್ಚರ್ಯಪಟ್ಟಳು. ಆ ರಥದ ಶಬ್ದವನ್ನು ಕೇಳಿ ಮಹಡಿಯ ಮೇಲೆ ಇದ್ದ ನವಿಲುಗಳೂ ಕೆಳಗಿದ್ದ ಆನೆಗಳೂ ಕೇಳಿ ಮೇಘವನ್ನು ನೋಡಿ ಸಂತೋಷಪಡುವಂತೆ ಸಂತೋಷಪಟ್ಟು ಮೇಘವು ಬಂದಿದೆಯೋ ಏನೋ ಎಂದು ತಲೆಯನ್ನು ಎತ್ತಿದವು. (ಅ.73)

ಆಗ ದಮಯಂತಿಯು 'ಈ ರಥದ ಧ್ವನಿಯು ನನ್ನನ್ನು ಸಂತೋಷಪಡಿಸುತ್ತದೆ. ಇವರು ನಳರಾಯರೇ ಬರುತ್ತಿರುವರು. ಚಂದ್ರನಂತೆ ಮುಖವುಳ್ಳ ನಳರಾಜರನ್ನು ಈದಿನ ಕಾಣದಿದ್ದರೆ ನಾನು ಸಾಯುವೆನು. ನಾನು ಅವರನ್ನು ಆಲಿಂಗಿಸದಿದ್ದರೆ ಬದುಕಲಾರೆನು. ಈದಿನ ಅವರು ಬಾರದೆ ಇದ್ದರೆ ನಾನು ಬೆಂಕಿಯಲ್ಲಿ ಬೀಳುವೆನು. ಈ ದಿವಸದಲ್ಲಿ ಸಿಂಹದಂತೆ ಪರಾಕ್ರಮವುಳ್ಳ ಅವರು ಬಾರದೆ ಇದ್ದರೆ ನಾನು ನಾಶವನ್ನು ಹೊಂದುವೆನು. ಅವರ ಗುಣಗಳನ್ನು ರಾತ್ರಿಹಗಲು ಯೋಚನೆ ಮಾಡುತ್ತಿರುವ ನನ್ನ ಹೃದಯವು ಅವರಿಲ್ಲದೆ ಸೀಳುವಂತೆ ಇದೆ' ಹೀಗೆಲ್ಲಾ ವಿಲಾಪವನ್ನು ಮಾಡುತ್ತಾ ನಳರಾಯನನ್ನು ನೋಡಬೇಕೆಂಬ ಆಸೆಯಿಂದ ಮಹಡಿಯ ಮೇಲೆ ಹೋದಳು. ಮಧ್ಯಪ್ರದೇಶದಲ್ಲಿ ರಥದಲ್ಲಿ ಕೂತಿದ್ದ ಋತುಪರ್ಣನನ್ನೂ ಬಾಹುಕನನ್ನೂ ವಾರ್ಷ್ಣೇಯನನ್ನೂ ನೋಡಿದಳು. ತರುವಾಯ ವಾರ್ಷ್ಣೇಯನೂ ಬಾಹುಕನೂ ರಥದಿಂದ ಕೆಳಗೆ ಇಳಿದು ಕುದುರೆಗಳನ್ನು ಬಿಚ್ಚಿ ರಥವನ್ನು ನಿಲ್ಲಿಸಿದರು. ಋತುಪರ್ಣನು ರಥದಿಂದ ಕೆಳಗೆ ಇಳಿದು ಭೀಮರಾಜನ ಸಮೀಪಕ್ಕೆ ಬಂದನು. ಭೀಮನು ಆದರದಿಂದ ಕರೆದು ಪೂಜಿಸಿದನು. ಋತುಪರ್ಣನು ಕುಂಡಿನನಗರದಲ್ಲಿ ವಾಸಮಾಡುತ್ತಾ ಸ್ವಯಂವರದ ವಿಷಯವಾಗಿ ಒಂದು ಚಿಹ್ನೆಯನ್ನೂ ತಿಳಿಯಲಿಲ್ಲ. ಹೆಂಗಸರ ಯೋಚನೆಯಿಂದ ನಡೆದ ವಿಷಯವು ಭೀಮರಾಜನಿಗೂ ತಿಳಿಯದು. ಭೀಮರಾಜನು ಋತುಪರ್ಣನೊಡನೆ 'ಸ್ವಾಗತವು ಬಂದ ಕಾರ್ಯವೇನು?' ಎಂದು ಕೇಳಿದನು. ತನ್ನ ಮಗಳ ಸ್ವಯಂವರಕ್ಕಾಗಿ ಬಂದಿರುವನು ಎಂಬ ವಿಷಯವು ಅವನಿಗೆ ತಿಳಿಯದು. ಋತುಪರ್ಣನು ಅಲ್ಲಿ ಒಬ್ಬ ರಾಜನನ್ನಾಗಲೀ ರಾಜಪುತ್ರನನ್ನಾಗಲೀ ನೋಡಲಿಲ್ಲ. ಒಬ್ಬ ಬ್ರಾಹ್ಮಣರೂ ಬಂದಿಲ್ಲ. ಸ್ವಯಂವರದ ಕಥೆಯೇ ಅಲ್ಲಿ ಇಲ್ಲ. ಇದರಿಂದ ಭೀಮರಾಜನು ಕೇಳಿದ್ದಕ್ಕೆ ಏನು ಹೇಳಬೇಕೆಂದು ತೋರದೆ ನಿನಗೆ

ನಮಸ್ಕರಿಸಿ ಹೋಗುವ ಎಂದು ಬಂದೆನು ಎಂದನು. ಭೀಮರಾಜನು ಮಂದಹಾಸವನ್ನು ಮಾಡಿದನು. ಮನಸ್ಸಿನಲ್ಲಿ ನೂರುಯೋಜನ ದೂರ ಅನೇಕ ಗ್ರಾಮಗಳನ್ನು ದಾಟಿ ಬಂದಿರುವನು. ಕಾರಣವನ್ನು ಕೇಳಿದರೆ ನನಗೆ ನಮಸ್ಕಾರ ಮಾಡಲಿಕ್ಕೆ ಬಂದಿದ್ದೇನೆ ಎನ್ನುವನು. ಈ ಅಲ್ಪಕಾರ್ಯಕ್ಕೋಸ್ಕರ ಇಷ್ಟುದೂರ ಬರುವನೇ? ಮುಂದೆ ಇದರ ಕಾರಣವು ಗೊತ್ತಾಗುವುದು ಎಂದುಕೊಂಡು ವಿಶ್ರಾಂತಿಯನ್ನು ಹೊಂದು ಎಂದು ಹೇಳಿ ಕಳುಹಿಸಿದನು. ಋತುಪರ್ಣನು ರಾಜಭೃತ್ಯರಿಂದ ಕೂಡಿಕೊಂಡು ರಾಜನು ತೋರಿಸಿದ ಮನೆಗೆ ಪ್ರವೇಶಿಸಿದನು. ಋತುಪರ್ಣನು ವಾರ್ಷ್ಣೇಯನಿಂದ ಸಹಿತನಾಗಿ ಹೊರಟು ಹೋಗಲು ಬಾಹುಕನು ರಥವನ್ನು ತೆಗೆದುಕೊಂಡು ರಥಶಾಲೆಗೆ ಹೋದನು. ಕುದುರೆಗಳಿಗೆ ಬೇಕಾದ ಉಪಚಾರವನ್ನು ಮಾಡಿ ತಾನು ರಥದ ಸಮೀಪದಲ್ಲಿ ಕೂತುಕೊಂಡನು. ದಮಯಂತಿಯು ದುಃಖಪೀಡಿತಳಾಗಿ ಋತುಪರ್ಣವನ್ನು ವಾರ್ಷ್ಣೇಯನನ್ನೂ ಬಾಹುಕನನ್ನೂ ನೋಡಿ 'ಇದು ಯಾರು ರಥವನ್ನು ಓಡಿಸಿದ್ದರಿಂದ ಉಂಟಾದ ಶಬ್ದವು? ನಳರಾಜರು ರಥವನ್ನು ಓಡಿಸುವ ಶಬ್ದದಂತೆ ಇತ್ತಲ್ಲಾ! ನಳರಾಯರು ಕಾಣಿಸುವುದಿಲ್ಲವಲ್ಲಾ! ವಾರ್ಷ್ಣೇಯನೇ ನಳರಾಯರಿಂದ ಆ ವಿದ್ಯೆಯನ್ನು ಕಲಿತಿರಬೇಕು. ಆದರಿಂದ ಈಗ ನಳರಾಯರು ಓಡಿಸಿದಂತೆ ರಥದ ಶಬ್ದವು ಕೇಳಿಸಿತು' ಹೀಗೆಲ್ಲಾ ಯೋಚನೆ ಮಾಡುತ್ತಾ ನಳರಾಯನನ್ನು ಹುಡುಕಿಕೊಂಡು ಬರುವುದಕ್ಕಾಗಿ ದೂತಿಯನ್ನು ಕಳುಹಿಸಿದಳು. (ಅ.73)

ದಮಯಂತಿಯು 'ಕೇಶಿನಿ ! ರಥದ ಹತ್ತಿರ ಕೂತಿರುವ ವಿಕಾರವುಳ್ಳ ಗಿಡ್ಡಾದ ಕೈಗಳುಳ್ಳ ಆ ರಥವನ್ನು ಓಡಿಸುವವನು ಯಾರು? ಎಂದು ನೋಡಿಕೊಂಡು ಬಾ. ಅವನ ಹತ್ತಿರ ಹೋಗಿ ಮೃದುವಾಗಿ ಕುಶಲಪ್ರಶ್ನೆಯನ್ನು ಮಾಡು. ಅವನೇ ನಳರಾಯರಾಗಿರಬಹುದೋ ಎಂದು ನನಗೆ ಬಹಳ ಸಂದೇಹವಿದೆ. ಅವನಿಗೆ ಮನಸ್ಸಿಗೆ ಸಂತೋಷವಾಗುವಂತೆ ಮಾತನಾಡು. ಕೊನೆಗೆ ಮಾತ್ರ ಪರ್ಣಾದನು ಹೇಳಿದ ಮಾತನ್ನು ಹೇಳು. ಅವನ ಒಂದೊಂದು ಮಾತನ್ನು ಜ್ಞಾಪಕವಿಟ್ಟುಕೊ' ಎಂದು ಹೇಳಿದಳು. ದಾಸಿಯು ನಳನಿದ್ದಲ್ಲಿಗೆ ಹೋದಳು. ದಮಯಂತಿಯು ಉಪ್ಪರಿಗೆಯ ಮೇಲೆ ಹೋಗಿ ಎಲ್ಲವನ್ನೂ ನೋಡುತ್ತಾ ಇದ್ದಳು.

ಕೇಶಿನಿಯು ನಳನಿದ್ದಲ್ಲಿಗೆ ಹೋಗಿ 'ಪುರುಷಶ್ರೇಷ್ಠನೇ! ನಿನಗೆ ಸ್ವಾಗತವು. ನಿನ್ನ ಹತ್ತಿರ ಕುಶಲವನ್ನು ಹೇಳುವೆನು. ದಮಯಂತಿಯ ಮಾತನ್ನು ಕೇಳು. ನೀವು ಯಾವಾಗ ಹೊರಟಿರುವಿರಿ? ಯಾವುದಕ್ಕೋಸ್ಕರ ಇಲ್ಲಿಗೆ ಬಂದಿರಿ? ಯಥಾರ್ಥ

ವನ್ನು ಹೇಳಬೇಕು. ಅದನ್ನು ಕೇಳಬೇಕೆಂದು ದಮಯಂತಿಯೂ ಅಪೇಕ್ಷಿಸುತ್ತಾಳೆ' ಎಂದಳು.

ಅದಕ್ಕೆ ನಳನು 'ಒಬ್ಬ ಬ್ರಾಹ್ಮಣರು ಅಯೋಧ್ಯೆಗೆ ಬಂದು ನಾಳೆದಿನ ಕುಂಡಿನನಗರದಲ್ಲಿ ದಮಯಂತಿಗೆ ಎರಡನೇ ಸ್ವಯಂವರವು ನಡೆಯುವುದು ಎಂದರು. ಅದನ್ನು ಕೇಳಿ ರಾಜರು ನೂರುಯೋಜನ ದೂರ ಹೋಗುವ ಬಹುವೇಗದಿಂದ ಹೋಗುವ ಈ ಕುದುರೆಗಳಿಂದ ಹೊರಟುಬಂದನು. ನಾನು ಅವರ ಸಾರಥಿಯು ಎಂದನು.

ಕೇಶಿಸಿಯು 'ಆ ಮೂರನೆಯವನು ಯಾರು? ಯಾರಿಗೆ ಸೇರಿದವನು? ನೀನು ಯಾರಿಗೆ ಸೇರಿದವನು? ನಿನಗೆ ಈ ಕೆಲಸವು ಹೇಗೆ? ಎಂದು ಕೇಳಿದಳು.

ನಳನು 'ಇವನು ಪವಿತ್ರಕೀರ್ತಿಯುಳ್ಳವನಾದ ನಳರಾಯನ ಸಾರಥಿಯಾದ ವಾರ್ಷ್ಣೇಯನು. ನಳರಾಯನು ಓಡಿಹೋಗಲು ಋತುಪರ್ಣನನ್ನು ಆಶ್ರಯಿಸಿರು ವನು. ನಾನೂ ಕುದುರೆಯ ವಿಷಯದಲ್ಲಿ ಚೆನ್ನಾಗಿ ತಿಳಿದವನು. ಚೆನ್ನಾಗಿ ಸಾರಥ್ಯವನ್ನೂ ಮಾಡುವೆನು. ಋತುಪರ್ಣನು ನನ್ನನ್ನು ಸಾರಥ್ಯ ಮಾಡಲಿಕ್ಕೂ ಅಡಿಗೆ ಮಾಡಲಿಕ್ಕೂ ಆಜ್ಞಾಪಿಸಿರುವನು' ಎಂದನು.

ಕೇಶಿನಿಯು 'ವಾರ್ಷ್ಣೇಯನು ನಳರಾಯನು ಎಲ್ಲಿಗೆ ಹೋಗಿರುವನೆಂದು ತಿಳಿದಿರುವನೇ? ನಿನ್ನೊಡನೆ ಅವನು ಏನು ಹೇಳಿರುವನು?' ಎಂದಳು.

ನಳನು 'ಇಲ್ಲಿಯೇ ನಳರಾಯನ ಇಬ್ಬರು ಮಕ್ಕಳನ್ನು ಬಿಟ್ಟು ಇಚ್ಛಾನುಸಾರವಾಗಿ ಹೋಗಿರುವನು. ಅವನಿಗೆ ನಳನ ವಿಷಯವು ತಿಳಿಯದು. ಬೇರೊಬ್ಬರಿಗೂ ನಳನ ವಿಷಯವು ತಿಳಿಯಲಾರದು. ರೂಪವನ್ನು ಕಳೆದುಕೊಂಡು ಈ ಲೋಕದಲ್ಲಿ ಗೂಢವಾಗಿ ಸಂಚರಿಸುತ್ತಿರುವನು. ನಳನ ಆತ್ಮವೇ ನಳನನ್ನು ತಿಳಿಯುವುದಷ್ಟೆ' ಅವನ ಲಕ್ಷಣಗಳು ನಳರಾಯನನ್ನು ತಿಳಿಸಲಾರವು' ಎಂದನು.

ಕೇಶಿನಿಯು 'ಅಯೋಧ್ಯೆಗೆ ಪ್ರಥಮದಲ್ಲಿ ಹೋದ ಬ್ರಾಹ್ಮಣನು ಒಂದು ಹೆಂಗಸಿನ ಮಾತನ್ನು ಹೇಳಿದಾಗ ನೀನು ಅದಕ್ಕೆ ಪ್ರತಿಉತ್ತರವನ್ನು ಕೊಟ್ಟೆಯಂತಲ್ಲಾ! ಆ ನೀನು ಹೇಳಿದ ಮಾತುಗಳನ್ನೇ ದಮಯಂತಿಯು ಪುನಃ ಕೇಳಬೇಕೆಂದು ಇಚ್ಛಿಸುತ್ತಾಳೆ' ಎಂದಳು.

ಈರೀತಿಯಾಗಿ ಕೇಶಿನಿಯು ಹೇಳಲು ನಳರಾಯನ ಎದೆಯು ಒಡೆದು ಹೋದಂತೆ ಆಯಿತು. ಕಣ್ಣುಗಳಲ್ಲಿ ಧಾರೆಯಾಗಿ ನೀರು ಸುರಿಯಿತು. ತಾನು ಮನಸ್ಸಿನ

ದುಃಖವನ್ನು ಸಹಿಸಿಕೊಂಡು ಕಣ್ಣೀರನ್ನು ಸುರಿಸುತ್ತಾ ಪೂರ್ವದಲ್ಲಿ ಪರ್ಣಾದ ಬ್ರಾಹ್ಮಣನ ಬಳಿಯಲ್ಲಿ ಹೇಳಿದ ಮಾತುಗಳನ್ನೇ ಹೇಳಿದನು. ನಳರಾಯನು ಹೇಳುತ್ತಾ ಕಣ್ಣೀರನ್ನು ಪಡೆದುಕೊಳ್ಳಲಿಕ್ಕೆ ಸಾಧ್ಯವಾಗದೆ ಗಟ್ಟಿಯಾಗಿ ಅತ್ತುಬಿಟ್ಟನು. ಆಗಲೇ ಕೇಶಿನಿಯು ದಮಯಂತಿಯ ಬಳಿಗೆ ಹೋಗಿ ನಳರಾಯನು ಹೇಳಿದ ಮಾತನ್ನೂ ನಳರಾಯನಿಗೆ ಆದ ವಿಕಾರವನ್ನೂ ಹೇಳಿದಳು.

ಕೇಶಿನಿಯ ಮಾತನ್ನು ಕೇಳಿ ದಮಯಂತಿಯು ನಳನಾಗಿರಬಹುದೆಂದು ಮತ್ತಷ್ಟು ಸಂಶಯವುಳ್ಳವಳಾಗಿ 'ಕೇಶಿನಿ! ಇನ್ನು ಹೋಗು. ಇನ್ನೂ ಪರೀಕ್ಷಾ ಮಾಡು. ಒಂದೂ ಮಾತಾಡದೆ ಅವನ ಹತ್ತಿರವೇ ಇದ್ದುಕೊಂಡು ಅವನು ಮಾಡುವುದನ್ನೆಲ್ಲಾ ನೋಡುತ್ತಾ ಇರು. ಅವನು ಎಷ್ಟು ಕೇಳಿದರೂ ಬೆಂಕಿಯನ್ನು ಕೊಡುವುದು ಬೇಡ. ನೀರನ್ನೂ ಕೊಡುವುದು ಬೇಡ. ಇನ್ನು ಏನೇನು ಅಲ್ಲಿ ನಡೆಯುತ್ತದೋ ಅದನ್ನೆಲ್ಲಾ ನೀನು ಬಂದು ನನ್ನೊಡನೆ ತಿಳಿಸಬೇಕು' ಎಂದು ಹೇಳಲು ಕೇಶಿನಿಯು ಹಾಗೆಯೇ ಹೋಗಿ ಎಲ್ಲವನ್ನು ತಿಳಿದುಕೊಂಡು ಬಂದು ದಮಯಂತಿಯೊಡನೆ ತಿಳಿಸಿದಳು. (ಅ.75)

ಕೇಶಿನಿಯು 'ದಮಯಂತಿ! ನಾನು ಅಂತಹ ಮನುಷ್ಯನನ್ನು ಇಷ್ಟರವರೆಗೆ ಎಲ್ಲಿಯೂ ನೋಡಿದ್ದೇ ಇಲ್ಲ, ಕೇಳಿದ್ದೂ ಇಲ್ಲ. ಅವನು ಚಿಕ್ಕಬಾಗಿಲಿದ್ದಲ್ಲಿಗೆ ಹೋಗುವಾಗ ಬಗ್ಗಿಕೊಂಡು ಹೋಗುವುದು. ಇವನು ಹೋದರೆ ಬಾಗಿಲೇ ದೊಡ್ಡದಾಗುವುದು. ಋತುಪರ್ಣನ ಭೋಜನಕ್ಕೆ ರಾಜರು ಬಹಳ ಪಶುಗಳ ಮಾಂಸಗಳನ್ನು ಕಳುಹಿಸಿದ್ದರು. ಅವುಗಳನ್ನು ತೊಳೆಯುವುದಕ್ಕಾಗಿ ಅಲ್ಲಿ ಕೊಡಗಳನ್ನು ಇಟ್ಟಿದ್ದರು. ಆ ಕೊಡಗಳಲ್ಲಿ ನೀರಿಡಲಿಲ್ಲ. ಅವನು ಕೊಡಗಳನ್ನು ನೋಡುವ ಮಾತ್ರದಿಂದಲೇ ತುಂಬಾ ನೀರಾಯಿತು. ಒಂದಿಷ್ಟು ಒಣಹುಲ್ಲನ್ನು ತೆಗೆದು ಸೂರ್ಯನಿಗೆ ತೋರಿಸಿದರು. ಆಗಲೇ ಭಗ್ಗನೆ ಅದರಲ್ಲಿ ಬೆಂಕಿಯುಂಟಾಯಿತು. ಈ ಆಶ್ಚರ್ಯಗಳನ್ನೆಲ್ಲಾ ನೋಡಿ ನಿನ್ನ ಹತ್ತಿರ ತಿಳಿಸುವುದಕ್ಕಾಗಿ ಓಡಿಬಂದೆನು. ಮತ್ತೊಂದು ಆಶ್ಚರ್ಯವನ್ನು ನೋಡಿದೆನು. ಅವನಿಗೆ ಬೆಂಕಿಮುಟ್ಟಿದರೆ ಸುಡುವುದಿಲ್ಲ. ಅವನು ಇಚ್ಛಾಮಾಡಿದಂತೆ ನೀರು ಬರುವುದು. ಅವನು ಕೆಲವು ಪುಷ್ಪಗಳನ್ನು ತೆಗೆದು ಮೆಲ್ಲನೆ ತಿಕ್ಕಿದನು. ಆಗ ಹೂವು ಬಾಡಿಹೋಗದೆ ಅವನು ತಿಕ್ಕಿದಷ್ಟು ಅದು ವಾಸನೆಯುಳ್ಳದ್ದಾಯಿತು. ಈರೀತಿಯಾಗಿ ಬಾಹುಕನ ಸಮೀಪದಲ್ಲಿ ವಿಶೇಷಗಳನ್ನು ನೋಡಿ ಬಂದೆನು' ಎಂದಳು. (ಅ.75)

ದಮಯಂತಿಯು ಇದನ್ನೆಲ್ಲಾ ಕೇಳಿ ನಳರಾಯನೇ ಬಂದಿರುವನೆಂದು

ತಿಳಿದುಕೊಂಡಳು. ಮತ್ತು ಸಂದೇಹವುಳ್ಳವಳಾಗಿ ಕೇಶಿನಿಯೊಡನೆ ಅಳುತ್ತಾ ಇನ್ನೊಂದು ಬಾರಿ ನೀನು ಅಲ್ಲಿಗೆ ಹೋಗಿ ಅವನು ಪಕ್ವ ಮಾಡಿರುವ ಮಾಂಸವನ್ನು ಸ್ವಲ್ಪ ತೆಗೆದುಕೊಂಡು ಬಾ ಎಂದಳು. ಹಾಗೆಯೇ ಕೇಶಿನಿಯು ನಳನು ಎಲ್ಲಿಯೋ ನೋಡುತ್ತಿರಲು ಅತಿಬಿಸಿಯಾದ ಮಾಂಸವನ್ನು ತೆಗೆದುಕೊಂಡು ಬಂದಳು. ದಮಯಂತಿಗೆ ಕೊಟ್ಟಳು. ದಮಯಂತಿಯು ಅನೇಕಬಾರಿ ನಳನು ಪಕ್ವಮಾಡಿದ ಮಾಂಸವನ್ನು ತಿಂದವಳು. ಅದನ್ನು ತಿಂದು ನಳರಾಯನೇ ಎಂದು ಕೂಗಿಕೊಂಡಳು. ದಮಯಂತಿಯು ಪರವಶಳಾಗಿ ಕೇಶಿನಿಯೊಡನೆ ತನ್ನ ಇಬ್ಬರು ಮಕ್ಕಳ ಮುಖವನ್ನು ತೋಳೆದು ಕಳುಹಿಸಿದಳು. ನಳನು ಆ ಮಕ್ಕಳನ್ನು ನೋಡಿ ಗುರುತುಹಿಡಿದು ಓಡಿಬಂದು ಆಲಿಂಗನ ಮಾಡಿ ಅತಿ ದುಃಖವುಳ್ಳವನಾಗಿ ಗಟ್ಟಿಯಾಗಿ ಅತ್ತನು. ತರುವಾಯ ಮಕ್ಕಳನ್ನು ಬಿಟ್ಟು 'ಅಮ್ಮ! ಈ ಮಕ್ಕಳು ನನ್ನ ಮಕ್ಕಳಂತೆಯೇ ಇವೆ. ಆದುದರಿಂದ ನಾನು ಇವುಗಳನ್ನು ನೋಡಿ ಕಣ್ಣೀರು ಸುರಿಸಿದೆನು. ನೀನು ಸುಮ್ಮನೆ ಇಲ್ಲಿಗೆ ಬಂದರೆ ನನ್ನ ಮೇಲೇನಾದರೂ ಜನರು ದೋಷವನ್ನು ಶಂಕಿಸಬಹುದು. ನಾವು ಈ ದೇಶಕ್ಕೆ ಅತಿಥಿಗಳಾಗಿ ಬಂದವರು. ನೀನು ಸುಖವಾಗಿ ಹೊರಟುಹೋಗು ಎಂದನು. (ಅ.75)

ನಳರಾಯನ ಈ ವಿಕಾರಗಳನ್ನೆಲ್ಲಾ ತಿಳಿದುಕೊಂಡು ಕೇಶಿನಿಯು ಬಂದು ದಮಯಂತಿಯೊಡನೆ ತಿಳಿಸಿದಳು. ತರುವಾಯ ದಮಯಂತಿಯು ಕೇಶಿನಿಯನ್ನು ತನ್ನ ತಾಯಿಯ ಬಳಿಗೆ 'ನನಗೆ ಬಾಹುಕನನ್ನು ನೋಡುವಾಗ ನಳನಿರಬಹುದೆಂಬ ಸಂಶಯವುಂಟಾಗುತ್ತದೆ. ಅವನ ರೂಪದಲ್ಲಿ ಮಾತ್ರ ಸಂಶಯವು ಉಳಿದಿದೆ. ಆದುದರಿಂದ ನಾನೇ ತಿಳಿಯಬೇಕೆಂದು ಇಚ್ಛೆಯುಳ್ಳವಳಾಗಿದ್ದೇನೆ. ಅವನನ್ನು ಇಲ್ಲಿಗೆ ಕಳುಹಿಸಬೇಕು. ಅಥವಾ ನನ್ನನ್ನು ಅವನಿದ್ದಲ್ಲಿಗೆ ಹೋಗಲಿಕ್ಕೆ ಅನುಮತಿಯನ್ನು ಕೊಡಬೇಕು. ತಂದೆಗೆ ತಿಳಿದೋ ತಿಳಿಯದೆಯೋ ಹೇಗೆ ಬೇಕಾದರೂ ಆಗಲಿ' ಎಂದು ಹೇಳಿಕಳುಹಿಸಿದಳು. ತಾಯಿಯು ಈ ವಿಷಯವನ್ನು ಭೀಮರಾಜನೊಡನೆ ತಿಳಿಸಿದಳು. ಭೀಮರಾಜನು ಹಾಗೆಯೇ ಆಗಲಿ ಎಂದು ಅಂಗೀಕರಿಸಿದನು. ದಮಯಂತಿಯು ತಂದೆತಾಯಿಗಳಿಂದ ಅನುಜ್ಞೆಯನ್ನು ಪಡೆದವಳಾಗಿ 'ಕೇಶಿನಿ! ನೀನು ಹೋಗಿ ತಂದೆಯ ಆಜ್ಞೆಯಿಂದ ಬೇಗನೇ ಬಾಹುಕನನ್ನು ಇಲ್ಲಿಗೆ ಕರೆದುಕೊಂಡು ಬಾ. ತಾಯಿಯಂತೆ ನೀನು ನನಗೆ ಪ್ರಿಯವನ್ನು ಮಾಡು' ಎಂದಳು.

ಕೇಶಿನಿಯು ನಳನಿದ್ದಲ್ಲಿಗೆ ಹೋಗಿ 'ಸೂತನೇ! ನಾನು ಭೀಮರಾಜರ ಆಜ್ಞೆಯಿಂದ ಬಂದಿದ್ದೇನೆ. ನೀನು ರಾಜನ ಮನೆಯೊಳಗೆ ಬರಬೇಕು' ಎಂದಳು.

ತರುವಾಯ ಬಾಹುಕನೆಂಬ ನಳನು ಬಹುಹೊತ್ತು ಯೋಚಿಸಿ ಕೇಶಿನಿಯೊಡನೆ ದಮಯಂತಿ ಇದ್ದ ಮನೆಗೆ ಪ್ರವೇಶಿಸಿದನು. ನಳರಾಯನು ದಮಯಂತಿಯನ್ನು ನೋಡುವ ಮಾತ್ರವೇ ತುಂಬಾ ದುಃಖವುಳ್ಳವನಾದನು. ಕಣ್ಣೀರು ಸುರಿಸಿದನು. ಆಪ್ರಕಾರವಿರುವ ನಳರಾಯನನ್ನು ನೋಡಿ ದಮಯಂತಿಯು ತುಂಬಾ ದುಃಖವುಳ್ಳವಳಾದಳು. ಕಾವಿಬಣ್ಣದ ಸೀರೆಯನ್ನು ಉಟ್ಟಿರುವ ಜಟೆಯನ್ನು ಬಿಟ್ಟಿರುವ ಮೈಯೆಲ್ಲಾ ಮಣ್ಣುಳ್ಳ ಆ ದಮಯಂತಿಯು ನಳರಾಯನೊಡನೆ 'ಬಾಹುಕನೇ! ಪೂರ್ವದಲ್ಲಿ ಕಾಡಿನಲ್ಲಿ ಮಲಗಿದ್ದ ಹೆಂಡತಿಯನ್ನು ಬಿಟ್ಟು ಹೋಗಿರುವ ಧರ್ಮವನ್ನು ತಿಳಿದವನಾದ ಒಬ್ಬ ಪುರುಷನನ್ನು ನೋಡಿರುವಿಯಾ? ನಿರಪರಾಧಿಯಾದ ಒಬ್ಬರೂ ಇಲ್ಲದಿರುವ ಅರಣ್ಯದಲ್ಲಿ ಶ್ರಮದಿಂದ ಮಲಗಿರುವ ಪ್ರಿಯಳಾದ ಹೆಂಡತಿಯನ್ನು ಪವಿತ್ರಕೀರ್ತಿಯುಳ್ಳ ನಳರಾಯನು ಹೊರತು ಮತ್ತೆ ಯಾರು ಬಿಟ್ಟುಹೋಗುವರು? ನಾನು ಆ ಮಹಾರಾಜನಿಗೆ ಬಾಲ್ಯದಲ್ಲಿ ಏನು ಅಪರಾಧ ಮಾಡಿದೆನು? ಸಾಕ್ಷಾತ್ ದೇವತೆಗಳೇ ಸ್ವಯಂವರಕ್ಕೆ ಬಂದಿದ್ದರು. ನಾನು ಅವರನ್ನೆಲ್ಲಾ ಬಿಟ್ಟು ನಳರಾಯನನ್ನೇ ವರಿಸಿದೆನು. ಅಂತಹ ತನ್ನನ್ನೇ ಅನುಸರಿಸಿಕೊಂಡಿದ್ದ ತನ್ನಿಂದ ಮಕ್ಕಳನ್ನು ಪಡೆದ ನನ್ನನ್ನು ಬಿಟ್ಟು ಹೇಗೆ ಹೋದನು? ಅಗ್ನಿಸಾಕ್ಷಿಕವಾಗಿ ಮದುವೆಯಾಗಿರುವ ಹಂಸಗಳ ಮಾತಿನಂತೆ ಇದ್ದ ನನ್ನನ್ನು ರಕ್ಷಿಸುವನೆಂದು ಪ್ರತಿಜ್ಞೆ ಮಾಡಿದ್ದನು. ಅದು ಎಲ್ಲಿಗೆ ಹೋಯಿತು? ಎಂದು ಕೇಳಿದಳು. (ಅ.77)

ದಮಯಂತಿಯು ಈರೀತಿಯಾಗಿ ಹೇಳುತ್ತಿರಲು ನಳರಾಯನ ಎರಡು ಕಣ್ಣುಗಳಿಂದಲೂ ಧಾರೆಧಾರೆಯಾಗಿ ನೀರು ಸುರಿಯಿತು. ಕಣ್ಣುಗಳು ಕೆಂಪಗಾದವು. ತುಂಬಾ ದುಃಖವುಳ್ಳವನಾಗಿ ಹೀಗೆ ಹೇಳಿದನು.

'ಸುಂದರಿ! ನಾನೇ ಆ ನಳನು. ಕಲಿಯಿಂದ ಆವಿಷ್ಟನಾಗಿ ನಾನು ಮೋಹವನ್ನು ಹೊಂದಿದೆನು. ನಿನ್ನನ್ನು ಬಿಟ್ಟು ಹೋದೆನು. ನನ್ನ ರಾಜ್ಯವು ಹೋದದ್ದು. ನಾನು ನಿನ್ನನ್ನು ಬಿಟ್ಟು ಹೋದದ್ದು ಇವೆಲ್ಲಾ ಕಲಿಯು ಮಾಡಿದ ವ್ಯಾಪಾರಗಳು. ನೀನು ಕಾಡಿನಲ್ಲಿ ಕಷ್ಟದಲ್ಲಿರುವಾಗ ರಾತ್ರಿ ಹಗಲು ದುಃಖಪಟ್ಟು ಅವನಿಗೆ ಶಾಪವನ್ನು ಕೊಟ್ಟಿರುವಿ. ಆ ಶಾಪದಿಂದ ದಗ್ಧನಾಗಿ ಅಗ್ನಿಯಲ್ಲಿ ಅಗ್ನಿಯಿರುವಂತೆ ನನ್ನಲ್ಲಿ ಕಷ್ಟದಿಂದ ವಾಸಮಾಡುತ್ತಿದ್ದನು. ನನ್ನ ತಪಸ್ಸಿನಿಂದಲೂ ಜಯಿಸಲ್ಪಟ್ಟನು. ಈಗ ನಮ್ಮಿಬ್ಬರ ದುಃಖವು ನಾಶವಾಗಬೇಕಾಗಿದೆ. ಅದರಿಂದ ಆ ಪಾಪಿಯು ನನ್ನನ್ನು ಬಿಟ್ಟು ಹೊರಟು ಹೋದನು. ನಾನು ಇಲ್ಲಿಗೆ ಬಂದೆನು. ನಿನಗಾಗಿಯೇ ನಾನು ಇಲ್ಲಿಗೆ ಬಂದೆನು. ನನಗೆ ಬೇರೆ ಪ್ರಯೋಜನವಿಲ್ಲ. ತನ್ನಲ್ಲಿ ಅನುರಾಗವುಳ್ಳ ಗಂಡನನ್ನು ಬಿಟ್ಟು ನೀನು ಹೊರತು

ಯಾವ ಹೆಂಗಸಾದವಳು ಬೇರೆ ಗಂಡನನ್ನು ವರಿಸುವಳು? ರಾಜಶಾಸನೆಯಿಂದ ದೂತರು 'ದಮಯಂತಿಯು ಇಚ್ಛಾನುಸಾರ ವ್ಯಾಪಾರವುಳ್ಳವಳಾಗಿ ಎರಡನೇ ಗಂಡನನ್ನು ಅನುಸರಿಸುವಳು ಎಂದು ಹೇಳುತ್ತಾ ಭೂಮಿಯಲ್ಲೆಲ್ಲಾ ಸಂಚರಿಸುತ್ತಿರುವರು. ಅದನ್ನು ಕೇಳಿಯೇ ಋತುಪರ್ಣನೇ ಬೇಗನೇ ಬಂದಿರುವನು'.

ಈರೀತಿಯಾಗಿ ನಳರಾಯನು ಕಷ್ಟದಿಂದ ಹೇಳಿದ ಮಾತನ್ನು ಕೇಳಿ ದಮಯಂತಿಯು ಕೈಮುಗಿದುಕೊಂಡು ಭಯದಿಂದ ನಡುಗುತ್ತಾ 'ನೀವು[1] ಈರೀತಿಯಾಗಿ ನನ್ನ ವಿಷಯದಲ್ಲಿ ಪಾಪಯೋಚನೆಯನ್ನು ಮಾಡಬಾರದು. ನಾನು ದೇವತೆಗಳನ್ನೇ ಬಿಟ್ಟು ನಿಮ್ಮನ್ನು ವರಿಸಿರುವೆನು. ನಿಮ್ಮನ್ನು ಇಲ್ಲಿಗೆ ಬರುವಂತೆ ಮಾಡುವುದಕ್ಕಾಗಿಯೇ ಬ್ರಾಹ್ಮಣರು ನಾನು ಹೇಳಿಕೊಟ್ಟ ಶ್ಲೋಕಗಳನ್ನು ಹೇಳುತ್ತಾ ದಿಕ್ಕುದಿಕ್ಕುಗಳಿಗೆ ಹೋಗಿರುವರು. ಅದರಿಂದ ಪರ್ಣಾದ ಎಂಬ ಬ್ರಾಹ್ಮಣನು ಕೋಸಲದೇಶದಲ್ಲಿ ಋತುಪರ್ಣನ ಮನೆಗೆ ಬಂದರು. ಅವರು ಹೇಳಿದ ಮಾತಿಗೆ ನೀವು ಪ್ರತಿಮಾತನ್ನು ಹೇಳಲು ನಿಮ್ಮನ್ನು ಇಲ್ಲಿಗೆ ಕರೆತರಲು ಮಾಡಿದ ಉಪಾಯವಿದು. ನೀವು ಹೊರತು ಇನ್ನು ಯಾರೂ ದಿವಸಕ್ಕೆ ನೂರುಯೋಜನ ದೂರ ಕುದುರೆಗಳನ್ನು ಓಡಿಸಲಿಕ್ಕೆ ಸಮರ್ಥರಿಲ್ಲ ಎಂದು ತಿಳಿದು ಹೀಗೆ ಮಾಡಿದ್ದು. ನಾನು ನಿಮ್ಮ ಪಾದವನ್ನು ಮುಟ್ಟಿ ಆಣೆ ಇಡುತ್ತೇನೆ. ನಾನು ಮನಸ್ಸಿನಿಂದಲೂ ನಿಮ್ಮನ್ನು ಅತಿಕ್ರಮಿಸುವವಳಲ್ಲ. ನಾನು ಏನಾದರೂ ಪಾಪಯೋಚನೆ ಮಾಡಿದ್ದರೆ ಸೂರ್ಯದೇವರು ಚಂದ್ರದೇವರು ಎಲ್ಲರೂ ನನ್ನನ್ನು ಬಿಡಲಿ. ಮೂರುಲೋಕಗಳಿಗೆ ಧಾರಕರಾದ ದೇವತೆಗಳು ಸತ್ಯವನ್ನು ಹೇಳಲಿ' ಇತ್ಯಾದಿ ರೀತಿಯಿಂದ ಪ್ರತಿಜ್ಞಾ ಮಾಡಿದಳು.

ಆಗ ಅಂತರಿಕ್ಷದಿಂದ ವಾಯುದೇವರು 'ರಾಜನೇ! ದಮಯಂತಿಯ ಪಾತಿವ್ರತ್ಯವು ಸುರಕ್ಷಿತವಾದದ್ದು. [2]ಮೂರು ವರ್ಷಗಳ ಕಾಲಗಳಿಂದ ನಾವು ಸಾಕ್ಷಿಗಳಾಗಿದ್ದೇವೆ. ರಕ್ಷಕರಾಗಿಯೂ ಇದ್ದೇವೆ. ದಿವಸಕ್ಕೆ ನೂರು ಯೋಜನದೂರ ಕುದುರೆಗಳನ್ನು ಓಡಿಸುವವನು ನೀನಲ್ಲದೆ ಇನ್ನೊಬ್ಬರು ಇಲ್ಲವೆಂದು ತಿಳಿದಿರುವ ಪ್ರಯುಕ್ತ ನೀನಿಲ್ಲಿ ಬಂದು ಸೇರಬೇಕೆಂಬ ಪ್ರಯುಕ್ತವೇ ಈ ಎರಡನೇ ಸ್ವಯಂವರವೆಂಬ ಉಪಾಯವನ್ನು ಮಾಡಿದ್ದು. ನೀನು ಸ್ವಲ್ಪವೂ ಸಂದೇಹಪಡುವುದು ಬೇಡ. ದಮಯಂತಿಯೊಡನೆ ಸುಖದಿಂದ ಇರು' ಎಂದು ಹೇಳಿದರು. ಈರೀತಿಯಾಗಿ ವಾಯುದೇವರು ಹೇಳಲು ಆಕಾಶದಿಂದ ಹೂವಿನಮಳೆಯು ಬಿದ್ದಿತು.

---

1. ಅ.76-26,27 2. ಅ.76-36 ರಿಂದ 40.

ದೇವದುಂಭಿಯನ್ನು ಭಾರಿಸಿದನು. ವಾಯುದೇವರು ಶಬ್ದವನ್ನು ಮಾಡಿದರು. ತರುವಾಯ ನಳರಾಯನು ದಮಯಂತಿಯ ಮೇಲೆ ಇದ್ದ ಸಂದೇಹವನ್ನು ಬಿಟ್ಟನು. ತರುವಾಯ ನಾಗರಾಜನಾದ ಕರ್ಕೋಟಕನನ್ನು ಸ್ಮರಿಸಿ ಅವನು ಕೊಟ್ಟ ಶುದ್ಧವಾದ ವಸ್ತ್ರವನ್ನು ಧರಿಸಿದನು.

ತರುವಾಯ ಪೂರ್ವದಂತೆ ಅತಿ ಸುಂದರವಾದ ರೂಪವನ್ನು ಧರಿಸಿದನು. ಗಂಡನನ್ನು ನೋಡಿ ದಮಯಂತಿಯು ಆಲಿಂಗನಮಾಡಿ ಗಟ್ಟಿಯಾಗಿ ಅತ್ತುಬಿಟ್ಟಳು. ಪೂರ್ವದಂತೆ ಪ್ರಕಾಶಮಾನವಾಗಿ ನಳರಾಯನು ತನ್ನ ಹೆಂಡತಿಯನ್ನು ಆಲಂಗಿಸಿದನು. ಮಕ್ಕಳನ್ನು ಆಲಂಗಿಸಿ ಸಂತೋಷಪಟ್ಟನು. ತರುವಾಯ ದಮಯಂತಿಯು ನಳರಾಯನ ಎದೆಯಲ್ಲಿ ತನ್ನ ಮುಖವನ್ನಿಟ್ಟುಕೊಂಡು ಪೂರ್ವದ ದುಃಖದಿಂದ ದೀರ್ಘಶ್ವಾಸಬಿಟ್ಟಳು. ನಳನೂ ದಮಯಂತಿಯನ್ನು ಆಲಂಗಿಸಿಕೊಂಡು ಹಾಗೆಯೇ ಬಹುಹೊತ್ತು ದುಃಖದಿಂದ ನಿಂತಿದ್ದನು. ತರುವಾಯ ದಮಯಂತಿಯ ತಾಯಿಯು ಭೀಮರಾಜನೊಡನೆ ದಮಯಂತಿಯ ಮತ್ತು ನಳರಾಯನ ವಿಷಯ ನಡೆದದ್ದನ್ನೆಲ್ಲಾ ಹೇಳಿದಳು. ತರುವಾಯ ಭೀಮರಾಜನು ನಾಳೆ ಬೆಳಿಗ್ಗೆ ಶುದ್ಧನಾಗಿ ದಮಯಂತಿಯೊಡನೆ ಸುಖದಿಂದ ಇದ್ದ ನಳರಾಯನ್ನು ನೋಡುವೆನು' ಎಂದನು. ತರುವಾಯ ರಾತ್ರಿಯಲ್ಲಿ ದಮಯಂತಿಯೂ ನಳರಾಯನೂ ತಾವು ವನದಲ್ಲಿ ಅನುಭವಿಸಿದ ವಿಷಯಗಳನ್ನೆಲ್ಲಾ ಹೇಳುತ್ತಾ ಸಂತೋಷದಿಂದ ರಾತ್ರಿಯನ್ನು ಕಳೆದರು. ಈರೀತಿಯಾಗಿ ನಳರಾಯನು ನಾಲ್ಕನೇ ವರ್ಷದಲ್ಲಿ ದಮಯಂತಿಯನ್ನು ಸೇರಿ ಸಂತೋಷವನ್ನು ಹೊಂದಿದನು. ದಮಯಂತಿಯೂ ಗಂಡನನ್ನು ಹೊಂದಿ ಸಂತೋಷಪಟ್ಟಳು. (ಅ.76-51)

ಈರೀತಿಯಾಗಿ ನಳರಾಯನು ದಮಯಂತಿಯೊಡನೆ ಆ ರಾತ್ರಿಯನ್ನು ಸುಖದಿಂದ ಕಳೆದು ಮರುದಿನ ಬೆಳಿಗ್ಗೆ ದಮಯಂತಿಯಿಂದ ಸಹಿತನಾಗಿ ಭೀಮರಾಜನನ್ನು ನೋಡಿದನು. ಮಾವನಿಗೆ ನಮಸ್ಕರಿಸಿದನು. ದಮಯಂತಿಯೂ ತಂದೆಗೆ ನಮಸ್ಕರಿಸಿದಳು. ಭೀಮರಾಜನು ನಳನನ್ನು ಮಗನನ್ನು ನೋಡುವಂತೆ ಸಂತೋಷದಿಂದ ನೋಡಿದನು. ಯಥೋಚಿತವಾಗಿ ಸತ್ಕಾರವನ್ನು ಮಾಡಿದನು. ಸಮಾಧಾನಪಡಿಸಿದನು. ನಳರಾಯನಿಂದ ಸಹಿತಳಾದ ಪತಿವ್ರತೆಯಾದ ದಮಯಂತಿ ಯನ್ನೂ ಸಂತೋಷಪಡಿಸಿದನು. ನಳರಾಯನ ಮಾವನು ಮಾಡಿದ ಸತ್ಕಾರವನ್ನು ಸಂತೋಷದಿಂದ ಸ್ವೀಕರಿಸಿ ತನ್ನ ಸೇವೆಯನ್ನು ತಿಳಿಸಿದನು. ತರುವಾಯ ನಳರಾಯನು ಬಂದದ್ದನ್ನು ನೋಡಿ ಊರಜನರಿಗೆಲ್ಲಾ ಸಂತೋಷವುಂಟಾಯಿತು. ಊರನ್ನೆಲ್ಲಾ

ಶೃಂಗರಿಸಿದರು. ರಾಜಮಾರ್ಗಗಳಲ್ಲೆಲ್ಲಾ ಅಲಂಕಾರ ಮಾಡಿದರು. ಒಬ್ಬೊಬ್ಬರ ಮನೆಯ ಎದುರಲ್ಲೂ ಹೂವಿನ ರಾಶಿಯನ್ನು ಹಾಕಿದರು. ದೇವಗುಡಿ ಗಳಲ್ಲೆಲ್ಲಾ ಅರ್ಚನೆ ಮಾಡಿದರು. ಋತುಪರ್ಣನೂ ತನ್ನ ಮನೆಯಲ್ಲಿ ಬಾಹುಕನೆಂಬ ವೇಷದಿಂದ ಇದ್ದ ನಳರಾಯನು ದಮಯಂತಿಯಿಂದ ಸೇರಿದ್ದನ್ನು ಕೇಳಿ ಸಂತೋಷ ಪಟ್ಟನು. ತಾನು ಬಂದು ನಳರಾಯನ ಹತ್ತಿರ ಕ್ಷಮಾ ಕೇಳಿಕೊಂಡನು. ಬುದ್ಧಿವಂತ ನಾದ ನಳರಾಯನೂ ಕ್ಷಮಿಸಿದನು. ಸತ್ಕಾರವನ್ನು ಹೊಂದಿದ ಋತುಪರ್ಣರಾಜನು ಆಶ್ಚರ್ಯವುಳ್ಳವನಾಗಿ ನಳರಾಯನೊಡನೆ 'ನೀನು ದೈವೇಚ್ಛೆಯಿಂದ ನಿನ್ನ ಪತ್ನಿಯನ್ನು ಸೇರಿದಿ. ನಳರಾಜನೇ! ನೀನು ನನಗೆ ತಿಳಿಯದಂತೆ ಬಾಹುಕ ಎಂಬ ವೇಷದಿಂದ ನನ್ನ ಮನೆಯಲ್ಲಿ ಇರುವಾಗ ನಾನು ನಿನಗೇನಾದರೂ ಅಪರಾಧ ಮಾಡಿರುವೆನೋ? ಬುದ್ಧಿಪೂರ್ವಕವಾಗಿಯೋ ಬುದ್ಧಿಪೂರ್ವಕವಾಗದೆಯೋ ನಾನೇನಾದರೂ ಅಪರಾಧವನ್ನು ಮಾಡಿದ್ದಿದ್ದರೆ ಅದನ್ನು ನೀನು ಕ್ಷಮಿಸಬೇಕು' ಎಂದನು.

ನಳನು 'ರಾಜನೇ! ನನಗೆ ಸ್ವಲ್ಪವೂ ಅಪರಾಧವನ್ನು ನೀನು ಮಾಡಿಲ್ಲ. ನೀನು ಹಾಗೆ ಮಾಡಿದ್ದರೂ ನನಗೆ ಕೋಪವಿಲ್ಲ. ನಾನು ಕ್ಷಮಿಸಬೇಕಾದದ್ದೇ. ನೀನು ಪೂರ್ವದಲ್ಲಿಯೂ ನನಗೆ ಮಿತ್ರನಾಗಿದ್ದಿ. ಸಂಬಂಧಿಯಾಗಿದ್ದಿ. ಇನ್ನು ಮೇಲಂತೂ ಅತ್ಯಂತ ಪ್ರೀತಿಯುಳ್ಳವನಾಗಿರಬೇಕು. ಸರ್ವಭೋಗಗಳಿಂದ ಸುಖದಿಂದ ನಿನ್ನ ಮನೆಯಲ್ಲಿ ವಾಸಮಾಡಿದೆನು. ನಿನ್ನ ಮನೆಯಲ್ಲಿ ಸುಖದಿಂದ ಇದ್ದಷ್ಟು ನನ್ನ ಮನೆಯಲ್ಲಿ ಸುಖದಿಂದ ಇರಲಿಲ್ಲ ಎನ್ನಬಹುದು. ನಿನಗೆ ಉಪದೇಶ ಮಾಡಬೇಕಾದ ಅಶ್ವರಹಸ್ಯವಿದ್ಯೆಯು ನನ್ನಲ್ಲೇ ಇದೆ. ನಿನಗೆ ಅಭಿಪ್ರಾಯವಿದ್ದರೆ ಈಗಲೇ ಅದನ್ನು ನಿನಗೆ ಉಪದೇಶ ಮಾಡುವೆನು' ಎಂದನು. ಋತುಪರ್ಣನು ಹಾಗೆಯೇ ಆಗಲಿ ಎಂದು ಹೇಳಿ ಆ ವಿದ್ಯೆಯನ್ನು ಪಡೆದು ಪ್ರೀತಿಯನ್ನು ಹೊಂದಿದನು. ತರುವಾಯ ಬೇರೊಬ್ಬ ಸಾರಥಿಯನ್ನು ಮಾಡಿಕೊಂಡು ತನ್ನ ಊರಿಗೆ ಹೋದನು. ಋತುಪರ್ಣನು ಹೊರಟುಹೋದ ಮೇಲೆ ನಳರಾಯನು ಸ್ವಲ್ಪ ಸಮಯ ಕುಂಡಿನ ನಗರದಲ್ಲಿಯೇ ವಾಸಮಾಡಿದನು.

ನಳರಾಯನು ಒಂದು ತಿಂಗಳು ಕುಂಡಿನನಗರದಲ್ಲಿ ವಾಸಮಾಡಿ ಅಲ್ಪ ಪರಿವಾರವನ್ನು ಕರೆದುಕೊಂಡು ನಿಷಧದೇಶಕ್ಕೆ ಹೋದನು. ಒಂದು ರಥವುಳ್ಳವನಾಗಿ ಹದಿನಾರು ಆನೆಗಳಿಂದಲೂ ಐವತ್ತು ಕುದುರೆಗಳಿಂದಲೂ ಆರುನೂರು ಪದಾತಿಗಳಿಂದಲೂ ಭೂಮಿಯನ್ನು ನಡುಗಿಸುವಂತೆ ಕ್ರೋಧದಿಂದ ನಗರವನ್ನು ಪ್ರವೇಶಿಸಿದನು. ವೀರಸೇನ ರಾಜನ ಮಗನಾದ ನಳರಾಯನು ಪುಷ್ಕರನ

ಬಳಿಗೆ ಬಂದು ನಾನು ಬಹಳ ಹಣವನ್ನು ಸಂಪಾದಿಸಿಕೊಂಡು ಬಂದಿರುವೆನು. ದಮಯಂತಿಯನ್ನೂ ನನ್ನಲ್ಲಿರುವ ಎಲ್ಲಾ ಹಣವನ್ನೂ ಆಟಕ್ಕೆ ಪಂದ್ಯವನ್ನಾಗಿ ಇಡುವೆನು. ನೀನಾದರೂ ಸಂಪೂರ್ಣ ರಾಜ್ಯವನ್ನು ಇಡು. ಆಟವು ನಡೆಯಲಿ. ಆಮೇಲೆ ಪ್ರಾಣವನ್ನು ಕೂಡ ಪಂದ್ಯವನ್ನಾಗಿ ಇಡಬೇಕು. ರಾಜ್ಯವನ್ನೋ ಹಣವನ್ನೋ ಇನ್ನೊಬ್ಬರ ಸೊತ್ತನ್ನು ಅಪಹಾರಮಾಡಿದ ಮೇಲೆ ಪ್ರಾಣವನ್ನೇ ಪಂದ್ಯವನ್ನಾಗಿ ಇಡಬೇಕು. ನಿನಗೆ ಪಗಡೆ ಆಟದಲ್ಲಿ ಅಭಿಪ್ರಾಯವಿಲ್ಲದಿದ್ದರೆ ಯುದ್ಧ ದ್ಯೂತವು ನಡೆಯಲಿ. ದ್ವಂದ್ವಯುದ್ಧದಲ್ಲಿ ಒಂದೋ ನಿನ್ನ ಶಾಂತಿಯಾಗಲಿ. ಅಥವಾ ನನ್ನ ಶಾಂತಿಯಾಗಲಿ. ವಂಶಪರಂಪರೆಯಿಂದ ಬಂದಿರುವ ರಾಜ್ಯವನ್ನು ಯಾವುದಾದರೂ ಉಪಾಯದಿಂದ ಅಪೇಕ್ಷಿಸಬೇಕೆಂದು ದೊಡ್ಡವರ ಮಾತೇ ಇದೆ. ಆದುದರಿಂದ ಪುಷ್ಕರ! ಯಾವುದಾದರೂ ಒಂದರಲ್ಲಿ ಮನಸ್ಸು ಮಾಡು. ಒಂದೋ ಪಗಡೆ ಆಡು. ಒಂದೋ ಯುದ್ಧದಲ್ಲಿ ಧನುಸ್ಸನ್ನು ಬಗ್ಗಿಸು' ಎಂದನು.

ಅದಕ್ಕೆ ಪುಷ್ಕರನು ನೆಗುತ್ತಾ ಪೂರ್ವದಂತೆಯೇ ನಿಶ್ಚಯವಾಗಿಯೂ ತನಗೇ ಜಯವುಂಟಾಗುವುದೆಂದು ನಂಬಿಕೊಂಡು ನಳರಾಯನೊಡನೆ 'ದೈವೇಚ್ಛೆಯಿಂದ ಪುನಃ ನನ್ನೊಡನೆ ಆಡುವುದಕ್ಕಾಗಿ ಹಣವನ್ನು ಸಂಪಾದಿಸಿಕೊಂಡು ಬಂದಿರುವಿ. ದೈವೇಚ್ಛೆಯಿಂದಲೇ ದಮಯಂತಿಯು ಮಾಡಿರುವ ಪಾಪವೆಲ್ಲ ಪರಿಹೃತವಾಯಿತು. ನನ್ನ ಲಾಭಕ್ಕೋಸ್ಕರ ನೀನು ಆಟದಲ್ಲಿ ಪ್ರೀತಿಯುಳ್ಳವನಾಗಿರುವೆ. ಪುನಃ ಆಟ ಆಡಬೇಕೆಂದು ನಿನಗೆ ದೈವೇಚ್ಛೆಯಿಂದಲೇ ಬುದ್ಧಿಯುಂಟಾಗಿದೆ. ನೀನು ಆಟಕ್ಕೆ ಇಟ್ಟ ಹಣದಿಂದ ಸಹಿತಳಾಗಿ ದಮಯಂತಿಯು ಅಲಂಕೃತಳಾಗಿ ಸ್ವರ್ಗದಲ್ಲಿ ಇಂದ್ರದೇವ ರನ್ನು ಅಪ್ಸರಸ್ತ್ರೀಯು ಸೇವಿಸುವಂತೆ ಸೇವಿಸುವಳು. ನಿತ್ಯವೂ ನಾನು ನಿನ್ನನ್ನೇ ಸ್ಮರಿಸಿಕೊಂಡಿರುವೆನು. ನಿನ್ನನ್ನೇ ಎದುರು ನೋಡುತ್ತಿರುವೆನು. ಈಗ ಸುಂದರಿಯಾದ ದಮಯಂತಿಯನ್ನು ಜಯಿಸಿ ಕೃತಾರ್ಥನಾಗುವೆನು. ದಮಯಂತಿಯ ಆಸೆಯು ನನಗೆ ಯಾವಾಗಲೂ ಮನಸ್ಸಿನಲ್ಲೇ ಇದೆ' ಎಂದು ಹೇಳಿದನು.

ಈರೀತಿಯಾಗಿ ಬಹಳವಾಗಿ ಅಸಂಬದ್ಧವಾಗಿ ಮಾತಾಡುವ ಅವನ ಮಾತುಗಳನ್ನು ಕೇಳಿ ನಳರಾಯನು ಕೋಪಿಸಿಕೊಂಡು ಕತ್ತಿಯಿಂದ ಅವನ ತಲೆಯನ್ನು ಕಡಿದುಹಾಕಬೇಕೆಂದು ಇಚ್ಛಿಸಿದನು. ಆಮೇಲೆ ನೆಗುತ್ತಾ ರೋಷದಿಂದ ಕೆಂಡಾದ ಕಣ್ಣುಳ್ಳವನಾಗಿ 'ಆಟಆಡುವ. ಯಾಕೆ ಸುಮ್ಮನೆ ಮಾತಾಡುವಿ. ಆಟದಲ್ಲಿ ಸೋತ ಮೇಲೆ ಮಾತಾಡಲಾರಿ' ಎಂದನು. ತರುವಾಯ ನಳರಾಯನಿಗೂ ಪುಷ್ಕರನಿಗೂ ಪಗಡೆ ಆಟವು ನಡೆಯಿತು. ನಳರಾಯನು ಒಂದೇ ಆಟದಲ್ಲಿಯೇ ಪುಷ್ಕರನನ್ನು

ಜಯಿಸಿದನು. ತರುವಾಯ ನಳರಾಯನು ನಗುತ್ತಾ 'ಅಯೋಗ್ಯನೇ! ಶತ್ರುರಹಿತವಾದ ಸಂಪೂರ್ಣವಾದ ರಾಜ್ಯವು ನನ್ನ ವಶವಾಯಿತು. ದಮಯಂತಿಯನ್ನು ನೀನು ನೋಡಲಿಕ್ಕೆ ಆಗಲಾರದು. ಮೂರ್ಖನೇ! ಪರಿವಾರ ಸಹಿತನಾದ ನೀನೇ ಅವಳಿಗೆ ದಾಸನಾಗಿರುವಿ. ನನ್ನನ್ನು ಪೂರ್ವದಲ್ಲಿ ಜಯಿಸಿದ್ದು ನೀನು ಮಾಡಿದ ಕಾರ್ಯವಲ್ಲ. ಕಲಿಯು ಮಾಡಿದ ಕೆಲಸವದು. ಮೂಢನೇ! ನಿನಗೆ ಅದು ತಿಳಿಯದು. ನಾನು ಇನ್ನೊಬ್ಬರು ಮಾಡಿದ ದೋಷವನ್ನು ನಿನ್ನ ಮೇಲೆ ಹೊರಿಸಲಾರೆನು. ಸುಖವಾಗಿ ಹೋಗಿ ಜೀವಿಸು. ನಿನ್ನ ಪ್ರಾಣಗಳನ್ನು ಬಿಟ್ಟಿದ್ದೇನೆ. ನಿನ್ನ ರಾಜ್ಯದ ಭಾಗವನ್ನು ಕೊಡುತ್ತೇನೆ. ಪೂರ್ವದಂತೆಯೇ ನನ್ನ ಪ್ರೀತಿಯು ನಿನ್ನಲ್ಲಿ ಇರುವುದು. ನಿನ್ನಲ್ಲಿರುವ ಸ್ನೇಹವು ನನಗೆ ಯಾವಾಗಲೂ ಹೋಗಲಾರದು. ಪುಷ್ಕರ! ನೀನು ನನ್ನ ತಮ್ಮನು. ನೂರುವರ್ಷಕಾಲ ಬದುಕಿರು' ಎಂದು ತಮ್ಮನನ್ನು ಸಮಾಧಾನಪಡಿಸಿ ಸಂತೋಷಪಡಿಸಿ ಆಲಿಂಗನ ಮಾಡಿದನು. ಆಗ ಪುಷ್ಕರನು ನಳರಾಯನಿಗೆ ನಮಸ್ಕಾರ ಮಾಡಿ 'ನಿನ್ನ ಕೀರ್ತಿಯು ಅಕ್ಷಯವಾಗಲಿ. ಹತ್ತುಸಾವಿರ ವರ್ಷಕಾಲ ಬದುಕಿರು. ನೀನು ನನಗೆ ಪ್ರಾಣಗಳನ್ನೂ ರಾಜ್ಯವನ್ನು ಕೊಟ್ಟಿರುವಿ' ಎಂದು ಹೇಳಿ ನಳರಾಯನಿಂದ ಸತ್ಕೃತನಾಗಿ ಒಂದು ತಿಂಗಳಿದ್ದು ಆಮೇಲೆ ಸಂತೋಷದಿಂದ ತನ್ನ ಜನರನ್ನು ಕರೆದುಕೊಂಡು ತನ್ನ ಊರಿಗೆ ಹೋದನು. ನಳರಾಯನು ಈ ರೀತಿ ಪುಷ್ಕರನಿಗೆ ಬೇಕಾದ ಹಣವನ್ನು ಕೊಟ್ಟು ಅವನ ಊರಿಗೆ ಕಳುಹಿಸಿ ಅಲಂಕೃತವಾದ ತನ್ನ ರಾಜ್ಯಕ್ಕೆ ಪ್ರವೇಶಿಸಿದನು. ಊರ ಜನರನ್ನೆಲ್ಲಾ ಸಮಾಧಾನಪಡಿಸಿದನು. ಎಲ್ಲಾ ಜನರೂ ಸಂತೋಷದಿಂದ ರೋಮಾಂಚವುಳ್ಳವ ರಾಗಿ ನಾವೆಲ್ಲರೂ ಈಗ ಸಂತೋಷವುಳ್ಳವರಾಗಿ ನಿಮ್ಮ ಸೇವಾಮಾಡಲಿಕ್ಕೆ ಸಿದ್ಧರಾಗಿರುವೆವು ಎಂದು ಹೇಳಿಕೊಂಡರು.

ಈರೀತಿಯಾಗಿ ಊರೆಲ್ಲಾ ಸಂತೋಷವನ್ನು ಹೊಂದಿರಲು ನಳರಾಯನು ಮಹಾಸೈನ್ಯದಿಂದ ದಮಯಂತಿಯನ್ನು ತರಿಸಿದನು. ಭೀಮರಾಜನು ಅಳಿಯನು ರಾಜ್ಯವನ್ನು ಹೊಂದಿರುವುದನ್ನು ಕೇಳಿ ಸಂತೋಷವುಳ್ಳವನಾಗಿ ಮಗಳಾದ ದಮಯಂತಿಯನ್ನು ಸತ್ಕರಿಸಿ ಕಳುಹಿಸಿದನು. ಮಕ್ಕಳಿಂದ ಸಹಿತಳಾಗಿ ದಮಯಂತಿಯು ಬರಲು ಇಂದ್ರದೇವರು ನಂದನವನದಲ್ಲಿ ಸಂತೋಷದಿಂದ ಇದ್ದಂತೆ ಸಂತೋಷದಿಂದ ಇದ್ದನು. ಬೇಕಾದ ಯಜ್ಞಗಳನ್ನು ಮಾಡಿ ಸಂತೋಷದಿಂದ ಇದ್ದನು.

ಈ ನಳರಾಯನ ಕಥೆಯನ್ನು ಕೇಳಿದರೆ ಕಲಿಪೀಡೆಯುಂಟಾಗಲಾರದು.

ಕರ್ಕೋಟಕನ ದಮಯಂತಿಯ ನಳನ ಋತುಪರ್ಣರಾಜನ ಹೆಸರನ್ನು ಹೇಳಿದರೆ ಕಲಿಯು ಪೀಡಿಸಲಾರನು. ಈ ಕಥೆಯನ್ನು ಅರಣ್ಯವಾಸದಿಂದ ದುಃಖಪಡುತ್ತಿದ್ದ ಧರ್ಮರಾಜನಿಗೆ ಬೃಹದಶ್ವ ಎಂಬ ಮುನಿಗಳು ಹೇಳಿದರು.

**ಕರ್ಕೋಟಕಸ್ಯ ನಾಗಸ್ಯ ದಮಯಂತ್ಯಾ ನಲಸ್ಯ ಚ ।**

**ಋತುಪರ್ಣಸ್ಯ ರಾಜರ್ಷೇಃ ಕೀರ್ತನಂ ಕಲಿನಾಶನಂ ॥ (79-10)**



## ಇಂದ್ರದ್ಯುಮ್ನ ರಾಜನ ಕಥೆಯು [1]

ಪಾಂಡವರು ಮಾರ್ಕಂಡೇಯರ ಹತ್ತಿರ ನಿಮಗಿಂತಲೂ ವಯಸ್ಸಿನಲ್ಲಿ ದೊಡ್ಡವರು ಇರುವರೇ ಎಂದು ಕೇಳಿದರು.

ಅದಕ್ಕೆ ಮಾರ್ಕಂಡೇಯರು 'ಧರ್ಮರಾಜನೇ! ಇರುವರು. ಕೇಳು. ಇಂದ್ರದ್ಯುಮ್ನ ಎಂಬ ಒಬ್ಬ ರಾಜನಿದ್ದನು. ಅವನು ಪುಣ್ಯಕ್ಷಯದಿಂದ ಸ್ವರ್ಗದಿಂದ ಭ್ರಷ್ಟನಾಗಿ ಬಂದನು. ತನ್ನ ಕೀರ್ತಿಯು ನಷ್ಟವಾಯಿತೆಂದು ನನ್ನ ಬಳಿಗೆ ಬಂದು ನನ್ನೊಡನೆ 'ನಾನು ಯಾರು? ನಿಮಗೆ ತಿಳಿಯುವುದಾ' ಎಂದು ಕೇಳಿದನು. ಅದಕ್ಕೆ ನಾನು ಅವನೊಡನೆ 'ನನಗೆ ತಿಳಿಯಲಾರದು. ನಾವು ಗ್ರಾಮವೊಂದರಲ್ಲಿ ಒಂದು ರಾತ್ರಿಯಂತೆ ಸಂಚಾರಮಾಡುತ್ತಿದ್ದವರು. ನಮ್ಮ ಪದಾರ್ಥಗಳೇ ನಮಗೆ ತಿಳಿಯ ಲಾರದು. ಶರೀರಸಂತಾಪಗೊಳಿಸಿ ತಪಸ್ಸು ಮಾಡುವವಷ್ಟೆ' ಎಂದು ಹೇಳಿದೆನು.

ಈ ರೀತಿಯಾಗಿ ನಾನು ಹೇಳಲು ರಾಜರ್ಷಿಯಾದ ಇಂದ್ರದ್ಯುಮ್ನನು ನಿಮಗಿಂತ ವಯಸ್ಸಿನಲ್ಲಿ ದೊಡ್ಡವರು ಯಾರಾದರೂ ಇರುವರೇ? ಎಂದು ಕೇಳಿದನು. ಅದಕ್ಕೆ ನಾನು 'ಹಿಮವತ್ಪರ್ವತದಲ್ಲಿ 'ಪ್ರಾವಾರಕರ್ಣ' ಎಂದು ಹೆಸರುಳ್ಳ ಒಂದು ಗೂಗೆಪಕ್ಷಿಯಿದೆ. ಅದು ನನಗಿಂತಲೂ ವಯಸ್ಸಿನಲ್ಲಿ ದೊಡ್ಡನು. ಅದು ನಿನ್ನನ್ನು ತಿಳಿದಿರಬಹುದು. ಅದು ಬಹುದೂರದಲ್ಲಿ ಹಿಮವತ್ಪರ್ವತದಲ್ಲಿ ವಾಸಿಸುತ್ತಿರುವುದು ಎಂದೆನು. ತರುವಾಯ ಆ ಇಂದ್ರದ್ಯುಮ್ನರಾಜನು ಕುದುರೆಯಾಗಿ ನನ್ನನ್ನು ಹೊತ್ತುಕೊಂಡು ಗೂಗೆಯಿದ್ದಲ್ಲಿಗೆ ಹೋದನು. ಗೂಗೆಯ ಹತ್ತಿರ ರಾಜನು ನಾನು ಯಾರೆಂದು ತಿಳಿದಿರುವಿಯಾ? ಎಂದು ಕೇಳಿದನು. ಆಗ ಗೂಗೆಯು ಸ್ವಲ್ಪ

1. ಮ.ಭಾ.ವ.ಪ. ಅ.199

ಹೊತ್ತು ಯೋಚಿಸಿ ನೀನು ಯಾರೆಂದು ನನಗೆ ತಿಳಿಯಲಿಲ್ಲವಲ್ಲಾ ಎಂದಿತು. ಅದಕ್ಕೆ ಇಂದ್ರದ್ರಮ್ಯರಾಜನು ನಿನಗಿಂತ ವಯಸ್ಸಿಗಿಂತ ದೊಡ್ಡವರು ಇರುವರೇ? ಎಂದು ಕೇಳಿದನು.

ಅದಕ್ಕೆ ಗೂಗೆಯು 'ಇಂದ್ರದ್ಯುಮ್ನ ಸರೋವರ'ವೆಂಬ ಸರೋವರವಿದೆ. ಅಲ್ಲಿ 'ನಾಲಿಜಂಘ' ಎಂದು ಹೆಸರುಳ್ಳ ಕೊಕ್ಕರೆಯು ವಾಸ ಮಾಡುತ್ತಾ ಇದೆ. ಆ ಕೊಕ್ಕರೆಯು ವಯಸ್ಸಿನಲ್ಲಿ ನನಗಿಂತ ದೊಡ್ಡದು. ಅದರ ಹತ್ತಿರ ಕೇಳು ಎಂದು ಹೇಳಿತು.

ಇಂದ್ರದ್ಯುಮ್ನರಾಜನು ನನ್ನನ್ನೂ ಗೂಗೆಯನ್ನೂ ಹೊತ್ತುಕೊಂಡು ಆ ಕೊಕ್ಕರೆಯಿದ್ದ ಇಂದ್ರದ್ಯುಮ್ನ ಸರೋವರದ ಬಳಿಗೆ ಹೋದನು. ನಾವು ಆ ಕೊಕ್ಕರೆಯೊಡನೆ ನಿನಗೆ ಇಂದ್ರದ್ಯುಮ್ನನನ್ನು ತಿಳಿದಿರುವಿಯಾ? ಎಂದು ಕೇಳಲು ಆ ಕೊಕ್ಕರೆಯೂ ಒಂದು ಮುಹೂರ್ತಕಾಲ ಯೋಚಿಸಿ ನನಗೆ ಜ್ಞಾಪಕವಿಲ್ಲವಲ್ಲಾ ಎಂದಿತು. ಆಗ ನಾವು ನಿಮಗಿಂತ ಪೂರ್ವಿಕರು ಯಾರಾದರೂ ಇರುವರೇ ಎಂದು ಕೇಳಿದೆವು. ಅದಕ್ಕೆ ಅದು ಇದೇ ಸರೋವರದಲ್ಲಿ 'ಅಕೂಪಾರ' ಎಂದು ಹೆಸರುಳ್ಳ ಆಮೆಯಿದೆ. ಅದು ನನಗಿಂತ ವಯಸ್ಸಿನಲ್ಲಿ ದೊಡ್ಡದು. ಅದು ಬೇಕಾದರೆ ಈ ರಾಜನನ್ನು ತಿಳಿದಿರಬಹುದು. ಅದರ ಹತ್ತಿರ ಕೇಳಿರಿ' ಎಂದು ಹೇಳಿತು.

ಆಮೇಲೆ ಆ ಕೊಕ್ಕರೆಯು ಆಮೆಯನ್ನು ಕರೆದು 'ನಿನ್ನ ಹತ್ತಿರ ಒಂದು ವಿಷಯವನ್ನು ಕೇಳಬೇಕಾಗಿದೆ. ಬೇಗನೆ ಬಾ' ಎಂದಿತು. ಆ ಮಾತನ್ನು ಕೇಳಿ ಆ ಆಮೆಯು ಎದ್ದು ನಾವು ಇದ್ದ ಸ್ಥಳಕ್ಕೆ ಬಂತು. ಆ ಸರೋವರದ ತೀರಕ್ಕೆ ಬಂದಿರುವ ಅದರೊಡನೆ ನಾವು 'ನೀನು ಇಂದ್ರದ್ಯುಮ್ನ ರಾಜನನ್ನು ತಿಳಿದರುವೆಯಾ?' ಎಂದು ಕೇಳಿದೆವು.

ಆಗ ಆಮೆಯು ಒಂದು ಮುಹೂರ್ತಕಾಲ ಯೋಚಿಸಿ ಕಣ್ಣಲ್ಲಿ ನೀರನ್ನು ತುಂಬಿಕೊಂಡು ನಡುಗುತ್ತಾ ಜ್ಞಾನ ತಪ್ಪಿದಂತೆ ಆಗಿ ಕೈಮುಗಿದುಕೊಂಡು 'ನನಗೆ ಇಂದ್ರದ್ಯುಮ್ನ ರಾಜನ ಪರಿಚಯವಿಲ್ಲದೆ ಇರುವುದೇ? ಅವನು ಸಾವಿರ ಬಾರಿ ಅಗ್ನಿಚಯನವನ್ನು ಮಾಡಿರುವನು. ಆ ರಾಜನು ಗೋದಾನ ಮಾಡುವಾಗ ಬಿಟ್ಟ ನೀರಿನಿಂದ ಈ ಸರೋವರವಾಗಿದೆ. ಇದರಲ್ಲಿ ನಾನು ವಾಸಮಾಡುತ್ತಿದ್ದೇನೆ' ಎಂದಿತು.

ಈರೀತಿಯಾಗಿ ಆಮೆಯು ಹೇಳಲು ಆಗಲೇ ದೇವಲೋಕದಿಂದ ದೇವರಥವು ಬಂದಿತು. 'ಇಂದ್ರದ್ಯುಮ್ನರಾಜನೇ! ನಿನಗೆ ಸ್ವರ್ಗವು ಸಿದ್ಧವಾಗಿದೆ.

ಉಚಿತವಾದ ಸ್ಥಾನವನ್ನು ಹೊಂದು. ನೀನು ಕೀರ್ತಿವಂತನಾಗಿದ್ದಿ. ಬೇಗನೇ ಸ್ವರ್ಗಕ್ಕೆ ಹೋಗು' ಎಂಬ ಮಾತೂ ಕೇಳಿಸಿತು.

'ಯಾರು ಮಾಡಿದ ಪುಣ್ಯಕರ್ಮದಿಂದ ಕೀರ್ತಿಯು ಸ್ವರ್ಗದಲ್ಲಿ ಭೂಮಿಯಲ್ಲಿಯೂ ಇರುತ್ತದೋ ಅಷ್ಟುಕಾಲ ಅವನು ಸ್ವರ್ಗಲೋಕದಲ್ಲಿ ಇರುವನು. ಯಾವಾತನಿಗೆ ಲೋಕದಲ್ಲಿ ಅಪಕೀರ್ತಿಯುಂಟಾಗುತ್ತದೋ ಅವನ ಅಪಕೀರ್ತಿಯು ಭೂಮಿಯಲ್ಲಿ ಇರುವವರೆಗೆ ನರಕದಲ್ಲಿರುವನು. ಆದುದರಿಂದ ಪಾಪಕಾರ್ಯವನ್ನು ಮಾಡದೆ ಪುಣ್ಯಕಾರ್ಯವನ್ನೇ ಮಾಡಬೇಕು' ಎಂಬ ಮಾತೂ ಕೇಳಿಸಿತು.

ಈ ಮಾತನ್ನು ಕೇಳಿ ಇಂದ್ರದ್ಯುಮ್ನರಾಜನು 'ಸ್ವಲ್ಪ ಇರಿ. ಈ ಇಬ್ಬರು ವೃದ್ಧರನ್ನು ಅವರಿದ್ದಲ್ಲಿಗೇ ಬಿಟ್ಟುಬರುತ್ತೇನೆ' ಎಂದು ಹೇಳಿ ಪ್ರಾವಾರಕರ್ಣ ಎಂಬ ಗೂಗೆಯನ್ನೂ ನನ್ನನ್ನೂ ನಮ್ಮ ಸ್ಥಳದಲ್ಲಿಯೇ ಬಿಟ್ಟು ವಿಮಾನದಿಂದ ತನಗೆ ಯೋಗ್ಯವಾದ ಸ್ವರ್ಗದಲ್ಲಿರುವ ಸ್ಥಾನಕ್ಕೆ ಹೋದನು. ಹೀಗ ನನ್ನಿಂದಲೂ ವಯಸ್ಸಿನಿಂದ ದೊಡ್ಡವರು ಇದ್ದಾರೆ' ಎಂದು ಹೇಳಿದರು.



## ಶಿಬಿರಾಜನ ಶ್ರೇಷ್ಠತ್ವವು [1]

ಧರ್ಮರಾಜನು ಮಾರ್ಕಂಡೇಯರ ಹತ್ತಿರ ಕ್ಷತ್ರಿಯರ ಮಹಾಭಾಗ್ಯವನ್ನು ಹೇಳಬೇಕು ಎಂದು ಕೇಳಿಕೊಂಡನು. ಅದಕ್ಕೆ ಮಾರ್ಕಂಡೇಯರು ಹೇಳಿದರು—

ವಿಶ್ವಾಮಿತ್ರರ ಮಗನಾದ ಅಷ್ಟಕನು ಅಶ್ವಮೇಧಯಾಗವನ್ನು ಮಾಡಿದನು. ಆ ಯಾಗಕ್ಕೆ ಅವನ ಅಣ್ಣಂದಿರಾದ ಪ್ರತರ್ದನ, ವಸುಮನಾ, ಶಿಬಿ ಎಂಬ ಮೂರು ಜನರು ಬಂದಿದ್ದರು. ಅಷ್ಟಕನು ಯಾಗವನ್ನು ಮುಗಿಸಿ ಅಣ್ಣಂದಿರೊಡನೆ ರಥದಲ್ಲಿ ಕೂತುಕೊಂಡು ಹೋದನು. ಹೋಗುತ್ತಿರುವಾಗ ದಾರಿಯಲ್ಲಿ ನಾರದರನ್ನು ನೋಡಿ ನೀವೂ ರಥವನ್ನು ಹತ್ತಿ ಬನ್ನಿರಿ' ಎಂದನು. ಹಾಗೆಯೇ ಆಗಲಿ ಎಂದು ಹೇಳಿ ನಾರದರು ಆ ರಥವನ್ನು ಹತ್ತಿದರು. ಆಗ ಅವರಲ್ಲಿ ಒಬ್ಬನು ತಮ್ಮ ಅನುಜ್ಞೆಯಿಂದ ತಮ್ಮ ಹತ್ತಿರ ಒಂದು ಪ್ರಶ್ನೆಯನ್ನು ಕೇಳಬೇಕು ಎಂಬ ಆಸೆಯಿದೆ ಎಂದನು. ನಾರದರು ಕೇಳು ಎಂದರು.

ಅದಕ್ಕೆ 'ನಾವು ಎಲ್ಲರೂ ಗುಣವಂತರೇ ಆಗಿದ್ದೇವೆ. ಆದರೂ ಈಗ ಬಹುಕಾಲ

1. ಮ.ಭಾ.ವ.ಪ. ಅ- 198

ಅನುಭವಿಸಲಿಕ್ಕೆ ಯೋಗ್ಯವಾದ ಸ್ವರ್ಗವನ್ನು ನಾಲ್ಕೇ ಜನರು ಹೋಗಬೇಕು ಎಂದು ಆಗುವ ಪಕ್ಷದಲ್ಲಿ ಈ ಐದು ಜನರ ಮಧ್ಯದಲ್ಲಿ ಯಾರು ಕೆಳಗೆ ಇಳಿಯಬೇಕಾಗುವುದು? ಎಂದು ಕೇಳಿದನು.

ಅದಕ್ಕೆ ನಾರದರು 'ಈ ಅಷ್ಟಕನು ಕೆಳಗೆ ಇಳಿಯಬೇಕು' ಎಂದರು. ಏಕೆ ಎಂದು ಕಾರಣವನ್ನು ಕೇಳಲು ನಾರದರು 'ನಾನು ಅಷ್ಟಕನ ಮನೆಯಲ್ಲಿ ವಾಸಮಾಡಿಕೊಂಡಿದ್ದೆನು. ಅವನು ನನ್ನನ್ನು ರಥದಲ್ಲಿ ಕೂತುಕೊಳ್ಳಿಸಿಕೊಂಡು ಹೋದನು. ನಾನು ದಾರಿಯಲ್ಲಿ ನಾನಾ ಬಣ್ಣವುಳ್ಳ ಸಾವಿರಾರು ಗೋಗಳನ್ನು ನೋಡಿದೆನು. ಇದು ಯಾರ ಗೋಗಳು ಎಂದು ಕೇಳಿದೆನು. ಅದು ನಾನು ದಾನಮಾಡಿದ ಗೋಗಳು ಎಂದನು. ಈರೀತಿಯಾಗಿ ತನ್ನನ್ನು ಸ್ತೋತ್ರಮಾಡಿಕೊಂಡಿದ್ದಾನೆ. ಆದುದರಿಂದ ಅವನು ಇಳಿಯಬೇಕು.

ಮೂರೇ ಜನರು ಸ್ವರ್ಗಕ್ಕೆ ಹೋಗಬೇಕಾಗಿ ಬಂದ ಪಕ್ಷದಲ್ಲಿ ಆಮೇಲೆ ಯಾರು ರಥದಿಂದ ಕೆಳಗಿಳಿಯಬೇಕು ಎಂದು ಒಬ್ಬನು ಕೇಳಿದನು.

ಅದಕ್ಕೆ ನಾರದರು 'ಪ್ರತರ್ದನನು ಇಳಿಯಬೇಕು. ಕಾರಣವೇನೆಂದರೆ ನಾನು ಪತರ್ದನನ ಮನೆಯಲ್ಲಿಯೂ ವಾಸಮಾಡಿಕೊಂಡಿದ್ದೆನು. ಅವನೂ ನನ್ನನ್ನು ರಥದಲ್ಲಿ ಕೂತುಕೊಳ್ಳಿಸಿಕೊಂಡು ಕರೆದುಕೊಂಡು ಹೋದನು. ಆಗ ಒಬ್ಬ ಬ್ರಾಹ್ಮಣನು ಬಂದು ನನಗೊಂದು ಕುದುರೆಯು ಬೇಕಾಗಿದೆ ಎಂದು ಹೇಳಿದನು. ಅದಕ್ಕೆ ಅವನು ಆಗಲಿ. ನಾನು ರಥವನ್ನು ಮನೆಗೆ ತಂದು ಮುಟ್ಟಿಸಿದ ಮೇಲೆ ಕೊಡುತ್ತೇನೆ ಎಂದನು. ಅದಕ್ಕೆ ಬ್ರಾಹ್ಮಣನು ಅದು ಸಾಧ್ಯವಿಲ್ಲ. ನನಗೆ ಬೇಗನೇ ಬೇಕಾಗಿದೆ ಎಂದನು. ಆಗಲಿ ಎಂದು ಹೇಳಿ ಪ್ರತರ್ದನನು ಬಲಪಾರ್ಶ್ವದಲ್ಲಿ ಕಟ್ಟಿದ್ದ ಕುದುರೆಯನ್ನು ಬಿಚ್ಚಿಕೊಟ್ಟನು. ಆಮೇಲೆ ಮತ್ತೊಬ್ಬ ಬ್ರಾಹ್ಮಣನು ಬಂದು ಕುದುರೆಯು ಬೇಕೆಂದು ಅವಸರಪಡಿಸಿದನು. ಅವನಿಗೆ ಎಡಪಾರ್ಶ್ವಕ್ಕೆ ಕಟ್ಟಿದ್ದ ಕುದುರೆಯನ್ನು ಬಿಚ್ಚಿಕೊಟ್ಟನು. ಆಮೇಲೆ ಮತ್ತೊಬ್ಬ ಬ್ರಾಹ್ಮಣನು ಹಾಗೆಯೇ ಬಂದು ಒಂದು ಕುದುರೆಯು ಬೇಗನೇ ಬೇಕೆಂದನು. ಆಗ ರಥದ ಎದುರಲ್ಲಿ ಕಟ್ಟಿರುವ ಎಡಭಾಗದ ಕುದುರೆಯನ್ನು ಬಿಚ್ಚಿಕೊಟ್ಟನು. ಮುಂದೆ ಹೋಗಲು ಮತ್ತೊಬ್ಬ ಬ್ರಾಹ್ಮಣನು ಬಂದು ನನಗೊಂದು ಕುದುರೆಯು ಬೇಕೆಂದು ಅವಸರಪಡಿಸಿದನು. ಆಗ ಪ್ರತರ್ದನನು ಸರಿಯೆಂದು ಹೇಳಿ ಇದ್ದ ಒಂದು ಕುದುರೆಯನ್ನು ಕೊಟ್ಟು ತಾನೇ ರಥವನ್ನು ಸೆಳೆದನು. ಆಗ 'ಬ್ರಾಹ್ಮಣರಿಗೇನು? ಯಾವ ಹೊತ್ತಿನಲ್ಲಿ ಯಾವುದನ್ನು ಕೇಳಬೇಕು ಎಂಬ ವಿವೇಕವೂ ಸ್ವಲ್ಪವೂ ಇಲ್ಲವೇ ಇಲ್ಲ' ಎಂದು ಹೇಳಿದನು.

ಇದರಿಂದ ಅವನು ದಾನಮಾಡಿದರೂ ಆ ಮಾತಿನಿಂದ ಅಸೂಯೆಯನ್ನು ಪಡುತ್ತಾನೆ ಎಂದು ಆಯಿತು. ಆದುದರಿಂದ ಅವನು ಕೆಳಗೆ ಇಳಿಯಬೇಕು.

ಆಮೇಲೆ ಇಬ್ಬರೇ ಹೋಗಬೇಕಾಗಿ ಬಂದ ಪಕ್ಷದಲ್ಲಿ ಯಾರು ಕೆಳಗೆ ಇಳಿಯಬೇಕು ಎಂದು ಕೇಳಲು ನಾರದರು ವಸುಮನನು ಇಳಿಯಬೇಕು ಎಂದರು. ಯಾಕೆಂದು ಕೇಳಲು ನಾರದರು 'ನಾನು ಸಂಚಾರಮಾಡುತ್ತಾ ವಸುಮನನ ಮನೆಗೆ ಬಂದೆನು. ವಸುಮನರಾಜನು ಒಂದು ಶ್ರೇಷ್ಠವಾದ ರಥವನ್ನು ಮಾಡಿಸಿದ್ದನು. ಅದಕ್ಕಾಗಿ ಪುಣ್ಯಾಹವಾಚನೆ ಮಾಡಿಸಿದ್ದನು. ಅನೇಕ ಬ್ರಾಹ್ಮಣರು ಬಂದಿದ್ದರು. ಪುಣ್ಯಾಹವಾಚನವಾದ ಮೇಲೆ ಬ್ರಾಹ್ಮಣರಿಗೆಲ್ಲಾ ಆ ರಥವನ್ನು ತೋರಿಸಿದನು. ಆಗ ನಾನು ರಥವು ಬೇಕು ಎಂಬ ಅಭಿಪ್ರಾಯದಿಂದ ರಥವನ್ನು ಬಾಯಿಬಿಟ್ಟು ಕೇಳದೆ ತುಂಬಾ ಸ್ತೋತ್ರಮಾಡಿದೆನು. ರಾಜನು ನನ್ನ ಅಭಿಪ್ರಾಯವು ತಿಳಿದರೂ ರಥವನ್ನು ಕೊಡಲಿಲ್ಲ. ಇದು ತಮ್ಮದ್ದೇ ರಥವು. ಇದು ತಮ್ಮದ್ದೇ ರಥವು ಎಂದು ಹೇಳಿದನಷ್ಟೆ. ಮತ್ತೊಂದು ಬಾರಿ ನನಗೆ ರಥವು ಬೇಕಾಗಿತ್ತು. ಆ ರಾಜನಿದ್ದಲ್ಲಿಗೆ ಹೋದೆನು. ಆಗಲೂ ನನಗೆ ರಥವನ್ನು ಕೊಡಲಿಲ್ಲ. ಈ ರಥವು ತಮಗೇ ಸೇರಿದ್ದು ಎಂದು ಬಾಯಿಯಲ್ಲಿ ಮಾತ್ರ ಹೇಳಿದನು. ಮೂರನೇ ಬಾರಿಯೂ ಹೋದೆನು. ರಥವನ್ನು ಸ್ತೋತ್ರ ಮಾಡಿದೆನು. ಆಗ ಅವರು ರಥವನ್ನು ತಾವು ತುಂಬಾ ಸ್ತೋತ್ರ ಮಾಡುವಿರಿ. ಈ ರಥವು ತಮಗಲ್ಲದೆ ಮತ್ತೆ ಯಾರಿಗೆ ಸೇರಬೇಕು ಎಂದನು. ಈರೀತಿಯಾಗಿ ಬಾಯಿಯಲ್ಲಿ ಹೇಳಿದನೇ ಹೊರತು ಕೊಡಲೇ ಇಲ್ಲ. ಇದರಿಂದ ವಸುಮನನು ರಥದಿಂದ ಕೆಳಗೆ ಇಳಿಯಬೇಕು' ಎಂದರು.

ಆಮೇಲೆ ಒಬ್ಬನೇ ಸ್ವರ್ಗಕ್ಕೆ ಹೋಗಬೇಕಾಗಿ ಬಂದ ಪಕ್ಷದಲ್ಲಿ ರಥದಲ್ಲಿ ಇದ್ದ ಇಬ್ಬರಲ್ಲಿ ಯಾರು ಕೆಳಗೆ ಇಳಿಯಬೇಕು' ಎಂದು ಕೇಳಲು ನಾರದರು ''ಶಿಬಿಯೇ ಹೋಗಬೇಕು. ನಾನು ಕೆಳಗೆ ಇಳಿಯಬೇಕು. 'ಏಕೆಂದರೆ ನಾನು ಶಿಬಿಗೆ ಸಮಾನನಲ್ಲ. ಒಂದು ದಿನ ಒಬ್ಬ ಬ್ರಾಹ್ಮಣನು ಬಂದು ಶಿಬಿಯೊಡನೆ 'ಶಿಬೀ! ನಾನು ಅನ್ನವನ್ನು ಅಪೇಕ್ಷಿಸಿ ಬಂದಿರುವೆನು' ಎಂದನು. ಅದಕ್ಕೆ ಶಿಬಿಯು 'ಆಗಲಿ. ನಾನು ಏನು ಮಾಡಬೇಕು. ಬೇಗನೇ ಹೇಳಿರಿ' ಎಂದನು. ಅದಕ್ಕೆ ಆ ಬ್ರಾಹ್ಮಣನು 'ನಿನ್ನ ಬೃಹದ್ಗರ್ಭ ಎಂಬ ಮಗನಿದ್ದಾನಲ್ಲ. ಅವನನ್ನು ಕೊಂದು ಅವನ ಮಾಂಸವನ್ನು ಪಕ್ವಮಾಡಬೇಕು. ಅನ್ನವನ್ನೂ ಮಾಡಿಸು. ಆಮೇಲೆ ನಾನು ಬರುವುದನ್ನು ಎದುರು ನೋಡುತ್ತಿರು' ಎಂದನು. ತರುವಾಯ ಶಿಬಿಯು ಮಗನನ್ನು ಕೊಂದು, ಅವನ ಮಾಂಸವನ್ನು ಪಕ್ವಮಾಡಿ ಅನ್ನವನ್ನೂ ಮಾಡಿಸಿ ಪಾತ್ರೆಯಲ್ಲಿ ಇಟ್ಟುಕೊಂಡು ಆ

ಬ್ರಾಹ್ಮಣನನ್ನು ಹುಡುಕಿದನು.

ಈ ರೀತಿಯಾಗಿ ಆ ಬ್ರಾಹ್ಮಣನನ್ನು ಹುಡುಕುತ್ತಿರಲು ಒಬ್ಬ ಪುರುಷನು ಬಂದು 'ಸ್ವಾಮಿ! ತಾವು ಹುಡುಕುತ್ತಿರುವ ಬ್ರಾಹ್ಮಣನು ಬಂದು ಕೋಪದಿಂದ ಹಣವಿಡುವ ಮನೆಯನ್ನೂ ಶಸ್ತ್ರಗಳನ್ನಿಡುವ ಮನೆಯನ್ನೂ ಹೆಂಗಸರಿರುವ ಮನೆಯನ್ನೂ ಕುದುರೆಗಳನ್ನು ಕಟ್ಟುವ ಶಾಲೆಯನ್ನೂ ಆನೆಗಳನ್ನು ಕಟ್ಟುವ ಸ್ಥಳವನ್ನೂ ಬೆಂಕಿ ಇಟ್ಟು ಸುಡುತ್ತಾ ಇದ್ದಾನೆ' ಎಂದನು.

ಶಿಬಿಯು ಆ ಮಾತನ್ನು ಕೇಳಿಯೂ ಒಂದು ವಿಕಾರವಿಲ್ಲದೆ ನಗರವನ್ನು ಪ್ರವೇಶಿಸಿ ಆ ಬ್ರಾಹ್ಮಣನನ್ನು ನೋಡಿ 'ಪೂಜ್ಯರೇ! ನಿಮಗೆ ಅನ್ನವು ಸಿದ್ಧವಾಗಿದೆ' ಎಂದನು. ಆಗ ಆ ಬ್ರಾಹ್ಮಣನು ಒಂದು ಮಾತನ್ನು ಹೇಳಲಿಲ್ಲ. ಆಶ್ಚರ್ಯದಿಂದ ಮುಖವನ್ನು ತಗ್ಗಿಸಿದನು.

ಶಿಬಿಯು ತಾವು ಭೋಜನ ಮಾಡಬೇಕೆಂದು ತುಂಬಾ ಕೇಳಿಕೊಂಡನು. ಆ ಬ್ರಾಹ್ಮಣನು ಒಂದು ಮುಹೂರ್ತಕಾಲ ನೋಡಿ ನೀನೇ ಇದನ್ನು ಭೋಜನಮಾಡು' ಎಂದನು. ಆಗ ಶಿಬಿಯು ಹಾಗೆಯೇ ಆಗಲಿ ಎಂದುಹೇಳಿ ಸ್ವಲ್ಪವೂ ಮನಸ್ಸಿನಲ್ಲಿಯೂ ವಿಕಾರವಿಲ್ಲ. ಭೋಜನ ಮಾಡಲಿಕ್ಕೆ ಇಚ್ಛಿಸಿದನು. ಆಗ ಆ ಬ್ರಾಹ್ಮಣನು ಶಿಬಿಯ ಕೈಹಿಡಿದನು. 'ನೀನು ಕೋಪವನ್ನು ಜಯಿಸಿದನಾಗಿದ್ದಿ. ಬ್ರಾಹ್ಮಣರಿಗೆ ಯಾವುದನ್ನೂ ಕೊಡಲಿಕ್ಕೆ ಸಿದ್ಧನಾಗಿದ್ದಿ' ಎಂದು ಹೇಳಿ ಅವನನ್ನು ಸತ್ಕಾರ ಮಾಡಿದನು.

ತರುವಾಯ ಶಿಬಿರಾಜನು ನೋಡುತ್ತಿರುವಾಗಲೇ ತನ್ನ ಮುಂದೆ ನಿಂತಿರುವ ದೇವಕುಮಾರನಂತೆ ವೇಷವುಳ್ಳ ಸುವಾಸನೆಯುಳ್ಳ ಅಲಂಕೃತನಾದ ಮಗನನ್ನು ನೋಡಿದನು. ಈರೀತಿಯಾಗಿ ಮಾಡಿ ಆ ಬ್ರಾಹ್ಮಣನು ಮರೆಯಾಗಿ ಹೋದನು. ಅನಂತರದಲ್ಲಿ ಮಂತ್ರಿಗಳು ಅವನೊಡನೆ ವಿಧಾತಾ ಎಂಬ ದೇವರು ಬ್ರಾಹ್ಮಣರೂಪದಿಂದ ನಿಮ್ಮನ್ನು ಪರೀಕ್ಷಾ ಮಾಡಲಿಕ್ಕೆ ಬಂದರು' ಎಂದರು. ನೀವು ಯಾವ ಅಭಿಪ್ರಾಯದಿಂದ ಹೀಗೆಲ್ಲಾ ಮಾಡಿದಿರಿ ಎಂದು ಮಂತ್ರಿಗಳು ಕೇಳಲು ಶಿಬಿರಾಜನು 'ನಾನು ಕೀರ್ತಿ ಬರಬೇಕೆಂದು ದಾನ ಮಾಡುವುದಲ್ಲ. ಒಬ್ಬರ ಹಣವನ್ನು ಕೊಡುತ್ತಾರೆಂದು ಮಾಡುವುದಿಲ್ಲ. ನಾನು ಮಾಡುವ ಮಾರ್ಗವು ಪಾಪಕರವಲ್ಲ ಎಂದು ಇಷ್ಟು ತಿಳಿದುಕೊಂಡೇ ಮಾಡುವೆನು. ದೊಡ್ಡವರು ಸರ್ವದಾ ಮಾಡಿದ ಕಾರ್ಯವು ಶ್ರೇಷ್ಠವಾದದ್ದು. ಶ್ರೇಷ್ಠವಾದ ಕಾರ್ಯವೆಂದು ತಿಳಿದುಕೊಂಡು ನಾನು ಮಾಡುತ್ತೇನೆ' ಎಂದು ಹೇಳಿದನು. ಆದುದರಿಂದ ಶಿಬಿಯು ಶ್ರೇಷ್ಠನು' ಎಂದು ಹೇಳಿದರು.



# ಸೇದುಕ ವೃಷದರ್ಭರಾಜರ ಕಥೆ [1]

ವೃಷದರ್ಭ ಸೇದುಕ ಎಂಬ ಇಬ್ಬರು ರಾಜರು ನೀತಿಮಾರ್ಗದಲ್ಲಿ ಪಂಡಿತರಾಗಿಯೂ ಅಸ್ತ್ರಉಪಾಸ್ತ್ರಗಳಲ್ಲಿ ಸಮರ್ಥರಾಗಿಯೂ ಇದ್ದರು. ವೃಷದರ್ಭರಾಜನು ಬಾಲ್ಯದಲ್ಲಿಯೇ 'ನಾನು ಬ್ರಾಹ್ಮಣರಿಗೆ ಬಂಗಾರಬೆಳ್ಳಿ ಹೊರತು ಮತ್ತೆ ಯಾವುದನ್ನೂ ಕೊಡಲಾರೆನು' ಎಂದು ಒಬ್ಬರಿಗೂ ತಿಳಿಯದಂತೆ ಒಂದು ನಿಯಮವನ್ನು ಮಾಡಿದ್ದನು. ಸೇದುಕರಾಜನು ಅವನ ಈ ನಿಯಮವನ್ನು ತಿಳಿದಿದ್ದನು.

ಒಂದು ದಿನದಲ್ಲಿ ಒಬ್ಬ ವೇದಾಧ್ಯಯನ ಮಾಡಿರುವ ಬ್ರಾಹ್ಮಣನು ಬಂದು ಸೇದುಕ ರಾಜನನ್ನು ಆಶೀರ್ವದಿಸಿ 'ನನಗೆ ಗುರುದಕ್ಷಿಣೆ ಕೊಡಲಿಕ್ಕೆ ನನಗೆ ಸಾವಿರ ಕುದುರೆಗಳನ್ನು ಕೊಡಬೇಕು' ಎಂದು ಕೇಳಿದನು. ಅದಕ್ಕೆ ಸೇದುಕರಾಜನು 'ನನ್ನಲ್ಲಿ ನಿಮಗೆ ಗುರುದಕ್ಷಿಣೆ ಕೊಡಲಿಕ್ಕೆ ಬೇಕಾದಷ್ಟು ಇಲ್ಲ. ವೃಷದರ್ಭರಾಜನ ಬಳಿಗೆ ಹೋಗಿರಿ. ಆ ರಾಜನು ಪರಮಧರ್ಮಜ್ಞನು. ಅವನ ಹತ್ತಿರ ಕೇಳಿರಿ. ಅವನಿಗೆ ನಿಮಗೆ ಬೇಕಾದಷ್ಟು ಕೊಡುವನು. ಆದರೆ ಅವನಿಗೆ ತಾನು ಬ್ರಾಹ್ಮಣರಿಗೆ ಬಂಗಾರಬೆಳ್ಳಿ ಹೊರತು ಬೇರೆ ಯಾವುದನ್ನೂ ಕೊಡಲಾರೆನು ಎಂಬ ರಹಸ್ಯವಾದ ವ್ರತವಿದೆ' ಎಂದು ಹೇಳಿದನು.

ತರುವಾಯ ಆ ಬ್ರಾಹ್ಮಣನು ವೃಷದರ್ಭರಾಜನ ಬಳಿಗೆ ಹೋಗಿ ನನಗೆ ಸಾವಿರ ಕುದುರೆಗಳನ್ನು ಕೊಡಬೇಕು ಎಂದು ಕೇಳಿದನು. ಆಗ ರಾಜನು ಬ್ರಾಹ್ಮಣನಿಗೆ ಬಾರುಕೋಲಿನಿಂದ (ಚಾಟುವಾರಿನಿಂದ) ಬಡೆದನು. ಆಗ ಬ್ರಾಹ್ಮಣನು 'ನಿರಪರಾಧಿಯಾದ ನನಗೆ ಏಕೆ ಹಿಂಸಾಮಾಡುವಿ' ಎಂದು ಹೇಳಿ ಶಾಪವನ್ನು ಕೊಡಲಿಕ್ಕೆ ಉದ್ಯುಕ್ತನಾದನು.

ಆಗ ರಾಜನು 'ಬ್ರಾಹ್ಮಣ! ನೀನು ಯಾಚನೆ ಮಾಡುವಾಗ ಪೂರ್ವದಲ್ಲಿ ಯಾರು ಕೊಡಲಿಲ್ಲವೋ ಅವನಿಗೆ ನೀನು ಶಾಪಕೊಡಬಾರದೇ? ನಾನು ನಿನಗೆ ಮುಂದೆ ಕೊಡಲಿಕ್ಕಿರುವೆನು. ನಾನು ಶಾಪಯೋಗ್ಯನಲ್ಲ. ಮತ್ತು ಬ್ರಾಹ್ಮಣನಿಗೆ ಶಾಂತನಾಗಿರುವುದು ಧರ್ಮವಲ್ಲವೇ? ಆದುದರಿಂದ ಶಾಪ ಕೊಡುವುದು ನ್ಯಾಯವೇ' ಎಂದನು.

ಅದಕ್ಕೆ ಬ್ರಾಹ್ಮಣನು 'ನಾನು ಸೇದುಕರಾಜನಿಂದ ಕಳುಹಿಸಲ್ಪಟ್ಟವನಾಗಿ ನಿನ್ನ ಬಳಿ ಭಿಕ್ಷಾ ಕೇಳಲಿಕ್ಕೆ ಬಂದಿರುವೆನು' ಎಂದನು.

---

1. ಮಭಾ. ವ.ಪ. ಅ.196

ರಾಜನು 'ನಾಳೆ ಬೆಳಿಗ್ಗೆ, ಈ ದಿನ ಎಲ್ಲಾ ನನಗೆ ಬಂದಿರುವ ಹಣವನ್ನೆಲ್ಲಾ ನಿನಗೆ ಕೊಡುವೆನು. ನಿನಗೆ ಬಾರುಕೋಲಿನಿಂದ ಬಡೆದ ಮೇಲೆ ಹಾಗೆಯೇ ಅಂದರೆ ಒಂದೂ ಕೊಡದೆ ನಿನ್ನನ್ನು ಕಳುಹಿಸುವೆನೇ?' ಎಂದು ಹೇಳಿ ಆ ದಿವಸ ಬಂದ ಹಣವನ್ನೆಲ್ಲಾ ಬ್ರಾಹ್ಮಣನಿಗೆ ಕೊಟ್ಟನು. ಅದು ಸಾವಿರ ಕುದುರೆಗಳ ಕ್ರಯಕ್ಕಿಂತಲೂ ಹೆಚ್ಚೇ ಆಗಿತ್ತು. ಇದರಿಂದ ರಾಜನು ತನ್ನ ನಿಯಮವನ್ನು ಭಂಗಮಾಡಲಿಕ್ಕೆ ಬಂದ ಬ್ರಾಹ್ಮಣನನ್ನು ಶಿಕ್ಷಾ ಮಾಡಲಿಕ್ಕೂ ಸಮರ್ಥನು. ಅವನು ಅಪೇಕ್ಷಿಸಿದ್ದಕ್ಕಿಂತಲೂ ಹೆಚ್ಚಾಗಿ ಕೊಟ್ಟು ಅವನನ್ನು ಸಂತೋಷಪಡಿಸಲಿಕ್ಕೂ ಸಮರ್ಥನು ಎಂದು ರಾಜರ ಮಹಿಮೆಯನ್ನು ತಿಳಿಸಿದಂತೆ ಆಯಿತು.



## ಯಯಾತಿರಾಜನ ಗೋದಾನವು [1]

ನಹುಷರಾಜನ ಮಗನಾದ ಯಯಾತಿರಾಜನು ಊರ ಜನರಿಂದ ಸಹಿತನಾಗಿ ಸಭೆಯಲ್ಲಿ ಕೂತಿದ್ದನು. ಆಗ ಅಲ್ಲಿಗೆ ಒಬ್ಬ ಬ್ರಾಹ್ಮಣನು ತಾನು ಗುರುದಕ್ಷಿಣೆ ಕೊಡುವುದಕ್ಕಾಗಿ ರಾಜನ ಹತ್ತಿರ ಯಾಚನೆ ಮಾಡಲಿಕ್ಕೆ ಬಂದನು. 'ರಾಜನೇ! ನಾನು ಗುರುಗಳಿಗೆ ದಕ್ಷಿಣೆ ಕೊಡಬೇಕಾಗಿದೆ. ಅದಕ್ಕೋಸ್ಕರ ನಾನು ನಿನ್ನ ಹತ್ತಿರ ಯಾಚನೆ ಮಾಡಲಿಕ್ಕೆ ಬಂದಿರುವೆನು. ಆದರೆ ನಾನು ಹೇಳಿದಂತೆ ಕೊಡುವ ಪಕ್ಷದಲ್ಲಿ ಮಾತ್ರ ನಿನ್ನಲ್ಲಿ ನಾನು ಯೋಚನೆ ಮಾಡುವೆನು' ಎಂದನು.

ಯಯಾತಿ ರಾಜನು 'ಹೇಗೆ ಕೊಡಬೇಕು ಎಂದು ಹೇಳು' ಎಂದನು. ಅದಕ್ಕೆ ಬ್ರಾಹ್ಮಣನು ಲೋಕದಲ್ಲಿ ಯಾರ ಹತ್ತಿರವಾದರೂ ಯಾಚನೆ ಮಾಡಿದರೆ ಈ ಬ್ರಾಹ್ಮಣನು ಏಕೆ ಬಂದನಪ್ಪಾ' ಎಂದು ಅವನಲ್ಲಿ ದ್ವೇಷವುಳ್ಳವರಾಗುವರು? ನೀನೂ ಹಾಗೆಯೇ ಮನಸ್ಸಿನಲ್ಲಿ ದ್ವೇಷವುಳ್ಳವರಾಗಿ ಕೊಡುವುದಾದರೆ ಬೇಡ. ಪ್ರೀತಿಯಿಂದಲೇ ಕೊಡುವ ಪಕ್ಷದಲ್ಲಿ ತೆಗೆದುಕೊಳ್ಳುವೆನು. ನೀನು ಹೇಗೆ ಕೊಡುವಿ. ಹೇಳು' ಎಂದು ಹೇಳಿದನು.

ಅದಕ್ಕೆ ಯಯಾತಿರಾಜನು 'ದಾನಕ್ಕೆ ಯೋಗ್ಯನಾದ ಬ್ರಾಹ್ಮಣನೇ! ನಾನು ದಾನಮಾಡಿದ ಮೇಲೆ ಇಷ್ಟು ದಾನ ಮಾಡಿದೆನು ಎಂದು ಹೇಳಿಕೊಂಡು ಬರಲಾರೆನು. ನನ್ನಿಂದ ಕೊಡಲಿಕ್ಕೆ ಆಗದ ವಸ್ತುವನ್ನು ಕೊಡುತ್ತೇನೆ' ಎಂದೂ

1. ಮಭಾ. ವ.ಪ. ಅ.195

ಹೇಳಲಾರೆನು. ಕೊಡಲಿಕ್ಕೆ ಸಾಧ್ಯವಾದ ವಸ್ತುವನ್ನು ಕೊಟ್ಟು ಸಂತೋಷದಿಂದಲೇ ಇರುತ್ತೇನೆ. ಬ್ರಾಹ್ಮಣನಿಗೆ ಕೊಟ್ಟುಬಿಟ್ಟೆನಲ್ಲಾ ಎಂದು ದುಃಖವನ್ನು ಹೊಂದಲಾರೆನು. ನಿನಗೆ ನಾನು ಸಾವಿರಗೋವುಗಳನ್ನು ಕೊಡುವೆನು. ನನಗೆ ಬ್ರಾಹ್ಮಣರು ಬಂದು ಯಾಚನೆ ಮಾಡಿದರೆ ಕೋಪವಿಲ್ಲ. ಯಾಚನೆಮಾಡುವ ಬ್ರಾಹ್ಮಣರನ್ನು ಕಂಡರೆ ಪ್ರೀತಿಯೇ ಆಗುವುದು. ಈ ರೀತಿಯಾಗಿ ಹೇಳಿ ಯಯಾತಿರಾಜನು ಆ ಬ್ರಾಹ್ಮಣನಿಗೆ ಸಾವಿರಗೋವುಗಳನ್ನು ಕೊಟ್ಟನು. ಬ್ರಾಹ್ಮಣನು ಅವುಗಳನ್ನು ಸಂತೋಷದಿಂದ ತೆಗೆದುಕೊಂಡು ಹೋದನು.



## ಮಂಡೂಕೋಪಾಖ್ಯಾನವು [1]

ಪೂರ್ವಕಾಲದಲ್ಲಿ ಆಯೋಧ್ಯೆಯಲ್ಲಿ ಇಕ್ಷ್ವಾಕುವಂಶದ ಪರೀಕ್ಷಿತ್ ಎಂಬ ರಾಜನಿದ್ದನು. ಆರಾಜನು ಒಂದು ದಿವಸದಲ್ಲಿ ಮೃಗಬೇಟೆಗೆ ಹೋದನು. ಕುದುರೆಯ ಮೇಲೆ ಕೂತುಕೊಂಡು ಒಬ್ಬನೇ ಒಂದು ಮೃಗವನ್ನು ಅಟ್ಟಿಸಿಕೊಂಡು ಹೋದನು. ಮೃಗವು ಬಹುದೂರ ಕರೆದುಕೊಂಡು ಹೋಯಿತು. ದಾರಿಯಲ್ಲಿ ರಾಜನಿಗೆ ತುಂಬಾ ಶ್ರಮವಾಯಿತು. ಹಸಿವೆ ಬಾಯಾರಿಕೆ ಉಂಟಾಯಿತು. ಸಮೀಪದಲ್ಲೇ ನೀಲವಾದ ಒಂದು ವನವನ್ನು ನೋಡಿದನು. ಅದರ ಮಧ್ಯದಲ್ಲಿ ಮನೋಹರವಾದ ಸರೋವರನ್ನು ನೋಡಿ ಕುದುರೆಯ ಸಹಿತವಾಗಿ ಸರೋವರದಲ್ಲಿ ಇಳಿದನು. ತರುವಾಯ ಶ್ರಮವನ್ನು ಪರಿಹಾರ ಮಾಡಿಕೊಂಡು ಕುದುರೆಯ ಮುಂದೆ ಕಮಲದ ನಾಳಗಳನ್ನೂ ಗೆಡ್ಡೆಗಳನ್ನೂ ಹಾಕಿ ಆ ಸರೋವರದ ತೀರದಲ್ಲಿಯೇ ಮಲಗಿದನು. ಹಾಗೆಯೇ ಮಲಗಿಕೊಂಡು ಅತಿಮನೋಹರವಾದ ಗಾಯನವನ್ನು ಕೇಳಿದನು. ಅದನ್ನು ಕೇಳಿ 'ಇಲ್ಲಿ ಮನುಷ್ಯಸಂಚಾರವು ಕಾಣಿಸುವುದಿಲ್ಲ. ಯಾವ ಹಾಡು ಆಗಿರಬಹುದು' ಎಂದು ಯೋಚಿಸಿದನು. ತರುವಾಯ ಹೂವನ್ನು ಕೊಯ್ಯುತ್ತಾ ಹಾಡು ಹೇಳುತ್ತಾ ಇರುವ ಒಬ್ಬಳು ಕನ್ಯೆಯನ್ನು ನೋಡಿದನು. ಆ ಕನ್ಯೆಯು ರಾಜನ ಹತ್ತಿರವೇ ಬಂದಳು. ರಾಜನು ಅವಳನ್ನು ನೋಡಿ 'ನೀನು ಯಾರು? ಯಾರ ಹೆಂಡತಿ?' ಎಂದು ಕೇಳಿದನು. ಅದಕ್ಕೆ ಅವಳು ನನಗೆ ಮದುವೆಯಾಗಿಲ್ಲ. ನಾನು ಕನ್ಯೆಯು ಎಂದಳು. ರಾಜನು 'ನಿನ್ನನ್ನು ನಾನು

1. ಮಭಾ. ಅ.192

ಮದುವೆಯಾಗುವೆನು' ಎಂದನು. ಅದಕ್ಕೆ ಅವಳು 'ನಾನು ಮಂಡೂಕರಾಜನ ಮಗಳು. ಒಂದು ನಿಯಮದಿಂದ ನನ್ನನ್ನು ಹೊಂದಲಿಕ್ಕೆ ಆಗುವುದು' ಎಂದಳು. ರಾಜನು 'ಮಂಡೂಕರಾಜನ ನಿಯಮವೇನು?' ಎಂದು ಕೇಳಿದನು. ಅದಕ್ಕೆ ಅವಳು 'ನನಗೆ ನೀರನ್ನು ತೋರಿಸಬಾರದು' ಎಂದಳು. ಅದಕ್ಕೆ ರಾಜನು ಹಾಗೆಯೇ ಆಗಲಿ ಎಂದು ಹೇಳಿ ಅವಳನ್ನು ಪತ್ನಿಯನ್ನಾಗಿ ಮಾಡಿಕೊಂಡು ಅವಳೊಡನೆ ಅಲ್ಲಿಯೇ ಇದ್ದನು. ರಾಜನು ಅಲ್ಲಿಯೇ ಕೂತಿರಲು ಅಲ್ಲಿಗೆ ಸೈನ್ಯವು ಬಂದಿತು. ರಾಜನು ಕುದುರೆಯ ಹೆಜ್ಜೆಯನ್ನೇ ನೋಡಿಕೊಂಡು ಬಂದ ಸೈನ್ಯವು ಅಲ್ಲಿಯೇ ರಾಜನ ಸುತ್ತಲೂ ಬಂದು ನಿಂತಿತು. ತರುವಾಯ ರಾಜನು ವಿಶ್ರಾಂತಿ ಪಡೆದು ಆಕನ್ಯೆಯೊಡನೆ ಮೇನೆಯಲ್ಲಿ ಕೂತುಕೊಂಡು ಸಂತೋಷದಿಂದ ರಾಜ್ಯಕ್ಕೆ ಹೋಗಿ ಅಲ್ಲಿ ಏಕಾಂತದಲ್ಲಿ ಆ ಕನ್ಯೆಯೊಡನೆ ವಿಹರಿಸುತ್ತಾ ಒಬ್ಬರನ್ನೂ ನೋಡಲೇ ಇಲ್ಲ. ರಾಜನು ಯಾವ ರಾಜ್ಯಕಾರ್ಯಕ್ಕೂ ಬಾರದೆ ಇದ್ದುದನ್ನು ನೋಡಿ ಪ್ರಧಾನಮಂತ್ರಿಯು ರಾಜನ ಹತ್ತಿರವಿರುವ ಹೆಂಗಸರ ಹತ್ತಿರ ಇಲ್ಲಿ ಏನು ವಿಶೇಷತೆ ಎಂದು ಕೇಳಿದನು. ಅದಕ್ಕೆ ಅವರು ಇಲ್ಲಿ ಒಂದು ಅಪೂರ್ವವಾದ ವಿಷಯವನ್ನು ನೋಡುತ್ತಿರುವೆವು. ಇಲ್ಲಿ ನೀರನ್ನು ತರುವುದೇ ಇಲ್ಲ' ಎಂದನು.

ತರುವಾಯ ಮಂತ್ರಿಯು ಬಹುಪುಷ್ಪಫಲಗಳುಳ್ಳ ಮರಗಳಿಂದ ಕೂಡಿದ ಉದ್ಯಾನವನ್ನು ಮಾಡಿ ಎಲ್ಲಿಯೂ ನೀರು ಇಲ್ಲದಂತೆಮಾಡಿ ಒಂದು ಸುತ್ತಲೂ ಮುತ್ತುಗಳಿಂದ ಕೂಡಿದ ಇಳಿಭಾವಿಯನ್ನು ಗಾಢವಾಗಿ ಮಾಡಿಸಿ ಅದರ ಸುತ್ತಲೂ ಸುಣ್ಣವನ್ನು ಹಚ್ಚಿಸಿ ದೂರದಲ್ಲಿ ಅದು ಇಳಿಭಾವಿಯೆಂದು ತಿಳಿಯದಂತೆ ಮಾಡಿ ಏಕಾಂತದಲ್ಲಿ ರಾಜನಿದ್ದಲ್ಲಿಗೆ ಬಂದು 'ಶ್ರೇಷ್ಠವಾದ ಉದ್ಯಾನವಿದೆ. ಅಲ್ಲಿ ನೀರಿಲ್ಲ. ಇವಳೊಡನೆ ನೀವು ಅಲ್ಲಿ ವಿಹರಿಸಬಹುದು' ಎಂದು ಹೇಳಿದನು. ಅದನ್ನು ಕೇಳಿ ರಾಜನು ತನ್ನ ಹೆಂಡತಿಯಿಂದ ಸಹಿತನಾಗಿ ಆ ಉದ್ಯಾನಕ್ಕೆ ಹೋದನು. ಒಂದುದಿನ ಅತಿಮನೋಹರವಾದ ಆ ಉದ್ಯಾನದಲ್ಲಿ ತನ್ನ ಹೆಂಡತಿಯೊಡನೆ ವಿಹರಿಸುತ್ತಿದ್ದನು. ಶ್ರಮವುಂಟಾಗಿ ಅತಿ ಮನೋಹರವಾದ ಲತಾಗೃಹವನ್ನು ನೋಡಿದನು. ಅಲ್ಲಿಗೆ ರಾಜನು ತನ್ನ ಪತ್ನಿಯಿಂದ ಸಹಿತನಾಗಿ ಪ್ರವೇಶಿಸಿ ಅಲ್ಲಿ ನಿರ್ಮಲವಾದ ನೀರಿನಿಂದ ತುಂಬಿದ್ದ. ಇಳಿಭಾವಿಯನ್ನು ನೋಡಿದನು. ಅದನ್ನು ನೋಡಿ ಅದರ ತೀರದಲ್ಲಿ ಪತ್ನಿಯಿಂದ ಸಹಿತನಾಗಿಯೇ ನಿಂತನು. ರಾಜನು ಪತ್ನಿಯೊಡನೆ 'ಮೆಲ್ಲನೆ ನೀರಿಗೆ ಇಳಿ' ಎಂದನು. ಅವಳು ರಾಜನ ಮಾತನ್ನು ಕೇಳಿ ಇಳಿಭಾವಿಯಲ್ಲಿ ಇಳಿದು ನೀರಿನಲ್ಲಿ ಮುಳುಗಿದಳು. ಆಮೇಲೆ ಮೇಲೆ ಬರಲೇ ಇಲ್ಲ. ರಾಜನು ಎಷ್ಟು ಹುಡುಕಿದರೂ

ಅವಳು ನೋಡಲಿಕ್ಕೆ ಸಿಗಲೇ ಇಲ್ಲ. ಇಳಿಯ ಬಾವಿಯ ನೀರನ್ನೆಲ್ಲಾ ಬತ್ತಿಸಿದನು. ಅಲ್ಲಿ ಒಂದು ಕಪ್ಪೆಯನ್ನು ನೋಡಿ ರಾಜನು ಕೋಪದಿಂದ 'ಎಲ್ಲಾ ಕಪ್ಪೆಗಳನ್ನು ಕೊಲ್ಲಿರಿ. ಯಾರಾದರೂ ನನ್ನನ್ನು ನೋಡಲಿಕ್ಕೆ ಬರುವುದಾದರೆ ಸತ್ತಕಪ್ಪೆಯನ್ನು ಹಿಡಿದುಕೊಂಡು ಬರಬೇಕು' ಎಂದು ಆಜ್ಞೆಯನ್ನು ಮಾಡಿದನು.

ಈರೀತಿಯಾಗಿ ಎಲ್ಲಾ ಸ್ಥಳದಲ್ಲಿಯೂ ಜನರು ಕಪ್ಪೆಗಳನ್ನು ಕೊಲ್ಲಲಿಕ್ಕೆ ಆರಂಭಿಸಲು ಕಪ್ಪೆಗಳಿಗೆಲ್ಲಾ ಭಯವುಂಟಾಯಿತು. ಅವುಗಳೆಲ್ಲಾ ತಮ್ಮ ರಾಜನ ಹತ್ತಿರ ಹೋಗಿ ಹೇಳಿಕೊಂಡವು.

ತರುವಾಯ ಕಪ್ಪೆಗಳು ರಾಜನು (ಮಂಡೂಕರಾಜನು) ತಪಸ್ವಿಯ ವೇಷವನ್ನು ಧರಿಸಿಕೊಂಡು ಬಂದು 'ರಾಜನೇ ಕೋಪಿಸಿಕೊಳ್ಳಬೇಡ. ಪ್ರಸನ್ನನಾಗು. ನಿರಪರಾಧಿ ಗಳಾದ ಕಪ್ಪೆಗಳನ್ನು ಸಂಹರಿಸದಿರು. ಈ ಅಧರ್ಮಕಾರ್ಯವನ್ನು ಮಾಡಬೇಡ. ಕಪ್ಪೆಗಳನ್ನು ಕೊಂದು ನಿನಗೆ ಏನು ಸಿಗುವುದು?' ಎಂದನು.

ಅದಕ್ಕೆ ರಾಜನು ತನ್ನ ಹೆಂಡತಿಯನ್ನು ಕಳೆದುಕೊಂಡ ಶೋಕದಿಂದ 'ನಾನು ಕ್ಷಮಿಸಲಾರೆನು. ಈ ದುರಾತ್ಮಗಳಾದ ಕಪ್ಪೆಗಳನ್ನು ಅವಶ್ಯವಾಗಿ ಕೊಲ್ಲಿಸುವೆನು. ಅವುಗಳು ನನ್ನ ಹೆಂಡತಿಯನ್ನು ತಿಂದು ಹಾಕಿದವು. ಆದುದರಿಂದ ಅವುಗಳು ಸಂಹಾರಕ್ಕೆ ಅರ್ಹಗಳೇ ಆಗಿದ್ದಾವೆ. ತಾವು ನನ್ನನ್ನು ನಿರ್ಬಂಧಪಡಿಸಬಾರದು' ಎಂದನು.

ಆಗ ಮಂಡೂಕರಾಜನು ಮನಸ್ಸಿನಲ್ಲಿ ವ್ಯಥೆಯುಳ್ಳವನಾಗಿ 'ರಾಜನೇ! ಪ್ರಸನ್ನನಾಗು. ನಾನು ಆಯು ಎಂದು ಹೆಸರುಳ್ಳ ಕಪ್ಪೆಗಳ ರಾಜನು. ನಿನ್ನ ಹೆಂಡತಿಯು ಸುಶೋಭನಾ ಎಂಬ ಹೆಸರುಳ್ಳ ನನ್ನ ಮಗಳು. ಅವಳ ದುಷ್ಟಸ್ವಭಾವವಿದು. ಅವಳು ಹೀಗೆಯೇ ಎಷ್ಟೋ ರಾಜರನ್ನು ಮೋಸಪಡಿಸಿದ್ದಾಳೆ' ಎಂದನು.

ಅದಕ್ಕೆ ರಾಜನು 'ಹಾಗಾದರೆ ನನಗೆ ನಿನ್ನ ಮಗಳು ಬೇಕಾಗಿದ್ದಾಳೆ. ಅವಳನ್ನು ತಂದುಕೊಡು' ಎಂದನು.

ಮಂಡೂಕರಾಜನು ಮಗಳನ್ನು ಕರೆದು ಈ ರಾಜನನ್ನು ಸೇವಿಸುತ್ತಾ ಇರು ಎಂದು ಹೇಳಿದನು. ಮಂಡೂಕರಾಜನು ಈರೀತಿಯಾಗಿ ಹೇಳಿ ಮಗಳೊಡನೆ 'ನೀನು ಎಷ್ಟೋ ರಾಜರನ್ನು ಮೋಸಪಡಿಸಿದಿ. ಈರೀತಿಯಾಗಿ ಮೋಸಮಾಡಿದ ಕಾರಣ ನಿನಗೆ ಬ್ರಾಹ್ಮಣದ್ವೇಷಿಗಳಾದ ಮಕ್ಕಳಾಗುವರು' ಎಂದು ಶಾಪವನ್ನು ಕೊಟ್ಟನು.

ರಾಜನು ಅವಳನ್ನು ನೋಡಿ ಮೂರುಲೋಕವನ್ನು ಹೊಂದಿದಂತೆ

ಸಂತೋಷಪಟ್ಟನು. ಕಣ್ಣಿನಲ್ಲಿ ಆನಂದಬಾಷ್ಪವನ್ನು ಸುರಿಸಿದನು. ಮಂಡೂಕರಾಜನಿಗೆ ನಮಸ್ಕರಿಸಿ ನನಗೆ ಅನುಗ್ರಹವನ್ನು ಮಾಡಿದಿರಿ ಎಂದನು. ಮಂಡೂಕರಾಜನು ಮಗಳ ಹತ್ತಿರ ಹೇಳಿಕೊಂಡು ಹೊರಟುಹೋದನು.

ಕೆಲವು ಸಮಯವಾದ ಮೇಲೆ ರಾಜನಲ್ಲಿ ಅವಳಲ್ಲಿ ಶಲ, ದಲ, ಬಲ ಎಂಬ ಮೂರು ಮಕ್ಕಳು ಹುಟ್ಟಿದರು. ತಂದೆಯು ಅವರಲ್ಲಿ ಜ್ಯೇಷ್ಠನಾದ ಶಲನಿಗೆ ರಾಜ್ಯದಲ್ಲಿ ಪಟ್ಟವನ್ನು ಕಟ್ಟಿ ತಪಸ್ಸು ಮಾಡಲಿಕ್ಕೆ ಕಾಡಿಗೆ ಹೋದನು.

ಒಂದುದಿನ ಶಲನು ಮೃಗಬೇಟೆಗೆ ಹೋದನು. ಅಲ್ಲಿ ಒಂದು ಮೃಗವನ್ನು ನೋಡಿ ರಥದಲ್ಲಿ ಕೂತುಕೊಂಡು ಅದನ್ನು ಅಟ್ಟಿಸಿಕೊಂಡು ಹೋದನು. ಸಾರಥಿಯೊಡನೆ ಬೇಗನೇ ರಥವನ್ನು ನಡೆಸು ಎಂದನು. ಅದಕ್ಕೆ ಸಾರಥಿಯು 'ನಿರ್ಬಂಧ ಮಾಡಬೇಡಿರಿ. ಈ ಮೃಗವನ್ನು ಹಿಡಿಯಲಿಕ್ಕೆ ಆಗಲಾರದು. ವಾಮ್ಯ ಎಂಬ ಕುದುರೆಗಳನ್ನು ಈ ರಥಕ್ಕೆ ಕಟ್ಟಿದ್ದರೆ ಆ ಮೃಗವನ್ನು ಹಿಡಿಯಬಹುದಿತ್ತು ಎಂದನು. ಆಗ ರಾಜನು ವಾಮ್ಯ ಎಂಬ ಕುದುರೆಗಳು ಯಾವುವು? ಎಂದು ಕೇಳಿದನು. ಅದಕ್ಕೆ ಸಾರಥಿಯು ರಾಜನ ಭಯವುಳ್ಳವನಾಗಿ ಹಾಗೆಯೇ ವಾಮದೇವರ ಶಾಪದಿಂದಲೂ ಭಯವುಳ್ಳವನಾಗಿ ವಾಮದೇವ ಋಷಿಗಳು ವಾಮ್ಯ ಎಂದು ಹೆಸರುಳ್ಳವುಗಳು. ಅವು ಮನಸ್ಸಿನಂತೆ ವೇಗವುಳ್ಳವು ಎಂದನು. ಅದಕ್ಕೆ ರಾಜನು ಹಾಗಾದರೆ ವಾಮದೇವ ಋಷಿಗಳ ಆಶ್ರಮವನ್ನು ರಥವನ್ನು ಓಡಿಸು ಎಂದನು. ಹಾಗೆ ವಾಮದೇವ ಋಷಿಗಳ ಆಶ್ರಮಕ್ಕೆ ಹೋಗಿ 'ಪೂಜ್ಯರೇ! ನಾನು ಒಂದು ಮೃಗವನ್ನು ಬಡಿದೆನು. ಅದು ಓಡುತ್ತಾ ಇದೆ. ಅದನ್ನು ಹಿಡಿಯಲಿಕ್ಕೆ ವಾಮ್ಯ ಎಂದು ಹೆಸರುಳ್ಳ ನಿಮ್ಮ ಕುದುರೆಗಳನ್ನು ಕೊಡಬೇಕು' ಎಂದು ಕೇಳಿದನು. ಅದಕ್ಕೆ ವಾಮದೇವಋಷಿಗಳು 'ನಿನಗೆ ಕುದುರೆಗಳನ್ನು ಕೊಡುತ್ತೇನೆ. ಆದರೆ ನಿನಗೆ ಕೆಲಸವಾದ ಮೇಲೆ ಬೇಗನೆ ನನಗೆ ಆ ಕುದುರೆಗಳನ್ನು ತಂದುಕೊಡಬೇಕು' ಎಂದು ಹೇಳಿಕೊಟ್ಟರು. ರಾಜನು ಕುದುರೆಗಳನ್ನು ತೆಗೆದುಕೊಂಡು ರಥಕ್ಕೆ ಕಟ್ಟಿ ಓಡಿಸಿಕೊಂಡು ಹೋಗುವಾಗ ದಾರಿಯಲ್ಲಿ ಸಾರಥಿಯೊಡನೆ 'ಈ ಶ್ರೇಷ್ಠ ಕುದುರೆಗಳು ನನಗೆ ಯೋಗ್ಯಗಳಾಗಿದ್ದಾವೆ. ನಾನು ಇವುಗಳನ್ನು ವಾಮದೇವರಿಗೆ ತಿರುಗಿಸಿ ಕೊಡುವುದೇ ಇಲ್ಲ' ಈ ಪ್ರಕಾರವಾಗಿ ಹೇಳುತ್ತಾ ಆ ಮೃಗವನ್ನು ಹೊಂದಿ ತನ್ನ ರಾಜ್ಯಕ್ಕೆ ಬಂದು ಆ ಕುದುರೆಗಳನ್ನು ಅಂತಃಪುರದಲ್ಲಿ ಇಟ್ಟನು.

ತರುವಾಯ ವಾಮದೇವರು 'ತರುಣನಾದ ರಾಜಪುತ್ರನು ಒಳ್ಳೇ ವಾಹನವನ್ನು ಹೊಂದಿ ಸಂತೋಷಪಡುತ್ತಿದ್ದಾನೆ. ನನ್ನ ಕುದುರೆಗಳನ್ನು ತಿರಿಗಿ ಕೊಡಲೇ ಇಲ್ಲ. ಕಷ್ಟ'

ಎಂದು ಯೋಚನೆ ಮಾಡಿದರು. ಈ ರೀತಿಯಾಗಿ ಯೋಚನೆಮಾಡಿ ಕೊನೆಗೆ ಒಂದು ತಿಂಗಳು ಆಗಲು ಶಿಷ್ಯನನ್ನು ಕರೆದು 'ಆತ್ರೇಯ! ರಾಜನಿದ್ದಲ್ಲಿಗೆ ಹೋಗಿ 'ನಿನ್ನ ಕಾರ್ಯವು ಆದರೆ ನಮ್ಮ ಗುರುಗಳು ಕುದುರೆಯನ್ನು ಕೊಡಬೇಕು' ಎಂದು ಕೇಳು ಎಂದರು. ಅದೇ ರೀತಿಯಾಗಿ ಅವನು ಹೋಗಿಕೇಳಲು ರಾಜನು 'ಈ ಕುದುರೆಗಳು ರಾಜನಿಗೆ ಯೋಗ್ಯವಾದವು. ಈ ವಿಧವಾಗಿರುವ ಶ್ರೇಷ್ಠ ಪದಾರ್ಥಗಳನ್ನು ಇಟ್ಟುಕೊಂಡು ಇರಲಿಕ್ಕೆ ಬ್ರಾಹ್ಮಣರು ಅರ್ಹರಲ್ಲ. ಬ್ರಾಹ್ಮಣರಿಂದ ಕುದುರೆಗಳಿಂದ ಒಂದು ಕಾರ್ಯವೂ ಆಗಬೇಕಾಗಿಲ್ಲ. ಸುಖವಾಗಿ ಹೊರಟುಹೋಗಿ' ಎಂದನು.

ಶಿಷ್ಯನು ಗುರುಗಳಿದ್ದಲ್ಲಿಗೆ ಬಂದು ಅದೇ ಪ್ರಕಾರವಾಗಿ ಹೇಳಿದನು. ಅದನ್ನು ಕೇಳಿ ವಾಮದೇವರು ಅತ್ಯಂತ ಕೋಪವುಳ್ಳವರಾಗಿ ತಾನೇ ರಾಜನಿದ್ದಲ್ಲಿಗೆ ಹೋಗಿ ಕುದುರೆಗಳನ್ನು ಕೇಳಿದರು. ರಾಜನು ಕೊಡಲಿಲ್ಲ.

ಆಗ ವಾಮದೇವರು 'ರಾಜನೇ! ವಾಮ್ಯ ಎಂದೂ ಹೆಸರುಳ್ಳ ನನ್ನ ಕುದುರೆಗಳನ್ನು ಕೊಟ್ಟುಬಿಡು. ಇವುಗಳಿಂದ ನೀನು ಅಶಕ್ಯವಾದ ಕಾರ್ಯವನ್ನು ಮಾಡಿದಿ. ಬ್ರಾಹ್ಮಣರಿಗೆ ಕ್ಷತ್ರಿಯರಿಂದ ವಿರೋಧಬಂದರೆ ಬ್ರಾಹ್ಮಣರಿಗೆ ಸಹಾಯ ಮಾಡುವ ವರುಣದೇವರು ಘೋರಪಾಶಗಳಿಂದ ನಿನ್ನನ್ನು ಕೊಲ್ಲದೆ ಇರಲಿ' ಎಂದರು.

ಅದಕ್ಕೆ ರಾಜನು 'ವಾಮದೇವರೇ! ಈ ಒಳ್ಳೇ ಎತ್ತುಗಳನ್ನು ತೆಗೆದುಕೊಂಡು ಹೋಗಿರಿ. ಇವುಗಳೇ ನಿಮ್ಮಂತಿರುವ ಬ್ರಾಹ್ಮಣರಿಗೆ ಯೋಗ್ಯವಾಹನಗಳು. ಇವುಗಳ ಮೇಲೆ ಕೂತುಕೊಂಡು ಎಲ್ಲಿಗೆ ಬೇಕಾದರೂ ಹೋಗಿ ಅಥವಾ ನಿಮಗೆ ವಾಹನ ವೇಕೆ? ನೀವು ಅಧ್ಯಯನ ಮಾಡಿರುವ ವೇದಗಳೇ ನಿಮ್ಮನ್ನು ಎಲ್ಲಿಗೂ ಕರಕೊಂಡು ಹೋಗುವುವು' ಎಂದನು.

ವಾಮದೇವರು 'ಪರಲೋಕದಲ್ಲಿ ವೇದಗಳು ನಮ್ಮನ್ನು ಕರಕೊಂಡು ಹೋಗುವುವು. ಈ ಲೋಕದಲ್ಲಿ ಈ ಕುದುರೆಗಳೇ ನಮಗೆ ವಾಹನವು' ಎಂದರು.

ಅದಕ್ಕೆ ರಾಜನು 'ನಿಮ್ಮ ರಥವನ್ನು ನಾಲ್ಕು ಕತ್ತೆಗಳು ಸೆಳೆಯಲಿ ಅಥವಾ ಕುದುರೆಯಲ್ಲಿ ಕತ್ತೆಯಿಂದ ಹುಟ್ಟಿದ ಅಶ್ವತರೀ ಎಂಬ ಮೃಗಗಳು ಅಥವಾ ಬೇರೆ ಕುದುರೆಗಳು ಸೆಳೆಯಲಿ. ಅದರಿಂದ ಹೊರಟು ಹೋಗಿ. ಈ ಕುದುರೆಗಳು ನನ್ನ ಕುದುರೆಗಳು ನಿಮ್ಮ ಕುದುರೆಗಳಲ್ಲ' ಎಂದನು.

ಅದಕ್ಕೆ ವಾಮದೇವರು 'ಬ್ರಾಹ್ಮಣರ ಸೊತ್ತನ್ನು ಅಪಹಾರ ಮಾಡುವುದು

ಅನರ್ಥಕ್ಕೆ ಕಾರಣವಾದ ಕರ್ಮವು. ನನ್ನಿಂದ ಪ್ರೇರಿತರಾದ ಭಯಂಕರರಾಗಿರುವ ಕ್ರೂರವಾದ ಶೂಲವನ್ನು ಹಿಡಿದುಕೊಂಡು ಇರುವ ನಾಲ್ಕುಜನ ರಾಕ್ಷಸರು ಬಂದು ನಿನ್ನನ್ನು ನಾಲ್ಕಾಗಿ ಸೀಳಿ ನಾಲ್ಕು ದಿಕ್ಕುಗಳಲ್ಲಿ ಹಾಕಲಿ' ಎಂದರು. ಈರೀತಿಯಾಗಿ ವಾಮದೇವರು ಹೇಳಲು ನಾಲ್ಕು ಜನ ಭಯಂಕರರಾದ ಶೂಲವನ್ನು ಹಿಡಿದುಕೊಂಡಿರುವ ರಾಕ್ಷಸರು ಬಂದರು. ಆ ರಾಕ್ಷಸರು ಬಂದು ರಾಜನನ್ನು ಹಿಂಸಿಸಿದರು. ಆಗ ರಾಜನು 'ಇಕ್ಷ್ವಾಕು ವಂಶದವರೆಲ್ಲರೂ ನನ್ನನ್ನು ಬಿಡಲಿ. ನನ್ನ ಅಧೀನರಾದ ರಾಜರೆಲ್ಲರೂ ನನ್ನನ್ನು ಬಿಟ್ಟುಹೋಗಲಿ. ಆದರೂ ಕೂಡ ನಾನು ಈ ಕುದುರೆಗಳನ್ನು ಕೊಡಲಾರೆನು' ಎಂದು ಹೇಳುತ್ತಿರುವಾಗಲೇ ರಾಕ್ಷಸರಿಂದ ಗಾಯವನ್ನು ಹೊಂದಿ ಸತ್ತು ಕೆಳಗೆ ಬಿದ್ದನು. ತರುವಾಯ ಜನರು ಅವನ ತಮ್ಮನಾದ ದಲನಿಗೆ ಪಟ್ಟಾಭಿಷೇಕವನ್ನು ಮಾಡಿದರು.

ದಲನು ರಾಜನಾಗಿರುವಾಗ ವಾಮದೇವಋಷಿಗಳು ಬಂದು 'ರಾಜನೇ! ಬ್ರಾಹ್ಮಣರ ಸೊತ್ತನ್ನು ಕೊಟ್ಟುಬಿಡಬೇಕು. ಇದು ಧರ್ಮವು ನಿನಗೆ ಅಧರ್ಮದಿಂದ ಭಯವಿರುವ ಪಕ್ಷದಲ್ಲಿ ನನ್ನ ವಾಮ್ಯ ಎಂಬ ಕುದುರೆಗಳನ್ನು ಕೊಡತಕ್ಕವನಾಗು' ಎಂದು ಹೇಳಿದರು.

ಆಮಾತನ್ನು ಕೇಳಿ ದಲನು ರೋಷವುಳ್ಳವನಾಗಿ ಸಾರಥಿಯೊಡನೆ 'ಒಂದು ವಿಚಿತ್ರವಾದ ವಿಷವನ್ನು ಹಚ್ಚಿರುವ ಬಾಣವನ್ನು ತೆಗೆದುಕೊಂಡು ಬಾ ಆ ಬಾಣದ ಪೆಟ್ಟಿನಿಂದ ವಾಮದೇವರು ದುಃಖದಿಂದ ಕೆಳಗೆ ಬೀಳಲಿ. ಅವರನ್ನು ನಾಯಿಗಳು ಬಂದು ಕಚ್ಚಲಿ' ಎಂದನು.

ಆಗ ವಾಮದೇವರು 'ನಿನ್ನ ಹೆಂಡತಿಯಲ್ಲಿ ಹುಟ್ಟಿರುವ ಹತ್ತು ವರ್ಷದ ಶ್ಯೇನಜಿತ್ ಎಂಬ ಮಗನನ್ನು ನಾನು ತಿಳಿದಿರುವೆನು. ನನ್ನ ಮಾತಿನಿಂದ ಪ್ರೇರಿತನಾಗಿ ಘೋರಬಾಣಗಳಿಂದ ಬೇಗನೇ ನಿನ್ನ ಮಗನನ್ನು ಸಂಹಾರಮಾಡು' ಎಂದು ಹೇಳಿದರು.

ಈರೀತಿಯಾಗಿ ವಾಮದೇವರು ಹೇಳಲು ದಲನು ಅವರಿಗೆಂದು ಬಾಣವನ್ನು ಬಿಟ್ಟನು. ಆದರೆ ಆ ಬಾಣವು ಅಂತಃಪುರಕ್ಕೆ ಹೋಗಿ ಅವನ ಮಗನಾದ ಶ್ಯೇನಜಿತ್‌ನನ್ನು ಕೊಂದಿತು. ಅದನ್ನು ಕೇಳಿ ದಲನು 'ಇಕ್ಷ್ವಾಕುವಂಶದವರೇ! ಈಗ ನಿಮಗೆ ನಾನು ಪ್ರಿಯವನ್ನು ಮಾಡುತ್ತೇನೆ. ಈ ಬ್ರಾಹ್ಮಣನನ್ನು ಈಗಲೇ ಬಡಿದು ಕೊಂದು ಹಾಕಿಬಿಡುತ್ತೇನೆ. ಇನ್ನೊಂದು ಕ್ರೂರವಾದ ಬಾಣವು ಬರಲಿ. ನನ್ನ ಸಾಮರ್ಥ್ಯವನ್ನು ನೋಡಿರಿ' ಎಂದನು.

ಆಗ ವಾಮದೇವರು 'ವಿಷವನ್ನು ಹಚ್ಚಿರುವ ಈ ಬಾಣವನ್ನು ನನಗೆ ಬಿಡಬೇಕೆಂದು ಯೋಚಿಸಿರುವಿಯಲ್ಲಾ! ಈ ಬಾಣವನ್ನು ಬಿಲ್ಲಿಗೆ ಜೋಡಿಸಲಿಕ್ಕೂ ನನಗೆ ಬಿಡಲಿಕ್ಕೂ ನೀನು ಸಮರ್ಥನಾಗಲಾರೆ' ಎಂದರು. ದಲನಿಗೆ ಕೈಕಾಲುಗಳು ಹಾಗೆಯೇ ನಿಂತುಹೋದವು. ನಡೆಯಲಿಕ್ಕೂ ಆಗಲಿಲ್ಲ. ಕೈ ಎತ್ತಲಿಕ್ಕೂ ಆಗಲಿಲ್ಲ. ಆಗ ದಲನು 'ಇಕ್ಷ್ವಾಕುವಂಶದವರೇ! ನೋಡಿರಿ. ನನ್ನನ್ನು ವಾಮದೇವರು ನಿಗ್ರಹಮಾಡಿದರು. ನನಗೆ ಬಾಣಬಿಡಲಿಕ್ಕೆ ಶಕ್ತಿಯೇ ಇಲ್ಲ. ಇವರನ್ನು ನಾಶಮಾಡಬೇಕೆಂದು ನಾನು ಆಸೆಪಡುವುದಿಲ್ಲ. ದೀರ್ಘಾಯುಷ್ಯವುಳ್ಳವರಾದ ವಾಮದೇವರು ಬದುಕಿರಲಿ' ಎಂದನು.

ವಾಮದೇವರು 'ನೀನು ಧರಿಸಿದ ಈ ಬಾಣದಿಂದ ನಿನ್ನ ಹೆಂಡತಿಯನ್ನು ಬಡಿದು ಬ್ರಹ್ಮಹತ್ಯೆಯನ್ನು ಮಾಡಬೇಕೆಂದು ನಿಶ್ಚಯವನ್ನು ಮಾಡಿದ್ದರಿಂದ ಉಂಟಾದ ಪಾಪದಿಂದ ಬಿಡುಗಡೆಯನ್ನು ಹೊಂದುವಿ' ಎಂದರು. ರಾಜನು ಹಾಗೆಯೇ ಮಾಡಿದನು. ಆಗ ಅವನ ಹೆಂಡತಿಯು ವಾಮದೇವರೊಡನೆ 'ನಾನು ಕ್ರೂರರಾದ ನನ್ನ ಪತಿಗಳೊಡನೆ ನಿತ್ಯವೂ ಒಳ್ಳೇ ಮಾತುಗಳನ್ನು ಹೇಳುತ್ತಿದ್ದೆನು. ಬ್ರಾಹ್ಮಣರ ಸೇವೆಯನ್ನು ಮಾಡಬೇಕೆಂಬ ಅಭಿಲಾಷೆಉಳ್ಳವಳಾಗಿದ್ದೆನು' ಎಂದರು. 'ನಾನು ಅದರಿಂದ ಪುಣ್ಯಲೋಕವನ್ನು ಹೊಂದಬೇಕು' ಎಂದೂ ಹೇಳಿದಳು.

ವಾಮದೇವರು 'ಸುಂದರಿ! ನಿನ್ನಿಂದಾಗಿ ರಾಜಕುಲವು ರಕ್ಷಿತವಾಯಿತು. ನಿನಗೆ ಒಳ್ಳೇ ವರವನ್ನು ಕೊಡುವೆನು. ನಿನ್ನ ಸ್ವಕೀಯರನ್ನೂ ಈ ಮಹತ್ತಾದ ರಾಜ್ಯವನ್ನೂ ಆಳತಕ್ಕವಳಾಗು' ಎಂದರು.

ರಾಜಪತ್ನಿಯು 'ಪೂಜ್ಯರೇ! ನಾನು ಈ ರೀತಿಯಾಗಿ ವರವನ್ನು ಕೇಳಿಕೊಳ್ಳುವೆನು. ನನ್ನ ಗಂಡನನ್ನು ಈ ಪಾಪದಿಂದ ಬಿಡಿಸಬೇಕು. ಮಕ್ಕಳು ಬಂಧುಗಳಿಂದ ಸುಖವಾಗಿ ನಾನು ಜೀವಿಸುವಂತೆ ಮಾಡಬೇಕು' ಎಂದು ಹೇಳಿದಳು.

ವಾಮದೇವಋಷಿಗಳು ರಾಜಪುತ್ರಿಯ ಮಾತನ್ನು ಕೇಳಿ 'ಹಾಗೇ ಆಗಲಿ' ಎಂದರು. ರಾಜನಾದ ದಲನೂ ಸಂತೋಷವನ್ನು ಹೊಂದಿದನು. ವಾಮದೇವ ಋಷಿಗಳಿಗೆ ನಮಸ್ಕಾರವನ್ನು ಮಾಡಿ ವಾಮ್ಯ ಎಂಬ ಕುದುರೆಗಳನ್ನು ಕೊಟ್ಟನು.



# ಮಾಂಧಾತರಾಜನ ಕಥೆಯು [1]

ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಯುವನಾಶ್ವ ಎಂಬ ರಾಜನಿದ್ದನು. ಅವನು ಬ್ರಾಹ್ಮಣರಿಗೆ ಬಹುದಕ್ಷಿಣೆಯನ್ನು ಕೊಟ್ಟು ಬಹುಯಾಗಗಳನ್ನು ಮಾಡಿದನು. ಅವನು ಸಾವಿರ ಅಶ್ವಮೇಧಯಾಗಗಳನ್ನು ಮಾಡಿದನು. ಇನ್ನೂ ಅನೇಕ ಯಾಗಗಳನ್ನು ಮಾಡಿದನು. ಆದರೆ ಅವನಿಗೆ ಮಕ್ಕಳಿರಲಿಲ್ಲ. ಇದರಿಂದ ರಾಜನು ಮಂತ್ರಿಗಳಲ್ಲಿ ರಾಜ್ಯಭಾರವನ್ನು ಒಪ್ಪಿಸಿ ಶಾಸ್ತ್ರದಲ್ಲಿ ಹೇಳಿದರಿಂದ ಪರಮಾತ್ಮನನ್ನೇ ಧ್ಯಾನಮಾಡುತ್ತಾ ಯಾವಾಗಲೂ ಕಾಡಿನಲ್ಲೇ ಇರುವವನಾದನು. ಒಂದುದಿವಸ ರಾಜನು ಉಪವಾಸದಿಂದ ತುಂಬಾ ದುಃಖವುಳ್ಳವನಾಗಿ ಬಾಯಾರಿಕೆಯಿಂದ (ನೀರಡಿಕೆಯಿಂದ) ಒಣಗಿಹೋದ ಎದೆಯುಳ್ಳವನಾಗಿ ಭೃಗುಋಷಿಗಳ ಆಶ್ರಮಕ್ಕೆ ಪ್ರವೇಶಿಸಿದನು. ಅಲ್ಲಿ ಅದೇರಾತ್ರಿ ಭೃಗು ಋಷಿಗಳ ಮಗನು ಸುದ್ಯುಮ್ನರಾಜನ ಮಗನಾದ ಆಯವನಾಶ್ವರಾಜನಿಗೆ ಮಗನಾಗುವಂತೆ ಒಂದು ಇಷ್ಟಿಯನ್ನು ಮಾಡಿದ್ದರು. ಒಂದು ದೊಡ್ಡ ಕಲಶದಲ್ಲಿ ನೀರನ್ನು ಮಂತ್ರದಿಂದ ಅಭಿಮಂತ್ರಣ ಮಾಡಿದ್ದರು. ಆ ಕಲಶವು ಹಾಗೆಯೇ ಅಲ್ಲಿ ಇದ್ದಿತು. ಆ ಕಲಶದ ನೀರನ್ನು ಕುಡಿದು ಯವನಾಶ್ವರಾಜನ ಹೆಂಡತಿಯು ಇಂದ್ರದೇವರಿಗೆ ಸಮಾನನಾದ ಮಗನನ್ನು ಹಡೆಯಬೇಕೆಂದು ಋಷಿಗಳ ಅಭಿಪ್ರಾಯವು. ಆ ಕಲಶವನ್ನು ಇಷ್ಟಿಮಾಡಿದ ಸ್ಥಳದಲ್ಲಿಯೇ ಸ್ವಲ್ಪ ಎತ್ತರವಾದ ಸ್ಥಳದಲ್ಲಿ ಇಟ್ಟು ಋಷಿಗಳೆಲ್ಲರೂ ರಾತ್ರಿಯೆಲ್ಲಾ ಆ ಕಲಶಕ್ಕೆ ಮಂತ್ರವನ್ನು ಹೇಳುತ್ತಾ ಜಾಗರಣವನ್ನು ಮಾಡಿದ್ದ ಪ್ರಯುಕ್ತ ಶ್ರಮದಿಂದ ನಿದ್ರೆ ಬಂದು ಮಲಗಿದ್ದರು. ಬಾಯಾರಿಕೆಯಿಂದ ಕುತ್ತಿಗೆಯು ಒಣಗಿಹೋದ ಯುವನಾಶ್ವರಾಜನು ನೀರು ಬೇಕು ಎಂಬ ಆಸೆಯಿಂದ ಆ ಆಶ್ರಮವನ್ನು ಪ್ರವೇಶಿಸಿ ಶ್ರಮದಿಂದ ನೀರು ಎಂದು ಕೇಳಿದನು. ಅವನಿಗೆ ಬಾಯಾರಿಕೆಯಿಂದ ಕುತ್ತಿಗೆಯು ಒಣಗಿದ್ದ ಪ್ರಯುಕ್ತ ಗಟ್ಟಿಯಾಗಿ ಸ್ವರವೇ ಬರಲಿಲ್ಲ. ಅವನು ಮೆಲ್ಲನೆ ಹೇಳಿದ ಮಾತು ನಿದ್ದೆಯಿಂದ ಮಲಗಿದ್ದ ಯಾರಿಗೂ ಕೇಳಿಸಲಿಲ್ಲ. ತರುವಾಯ ಅಲ್ಲೇ ನೀರು ತುಂಬಿರುವ ಕಲಶವನ್ನು ನೋಡಿ ವೇಗದಿಂದ ಓಡಿದನು. ಋಷಿಗಳು ಮಂತ್ರಿಸಿ ಇಟ್ಟಿದ್ದ ನೀರನ್ನೆಲ್ಲಾ ಕುಡಿದು ತೃಪ್ತಿಯನ್ನು ಹೊಂದಿದನು.

ತರುವಾಯ ಮಲಗಿದ್ದ ಋಷಿಗಳೆಲ್ಲಾ ಎದ್ದರು. ಎದ್ದು ಕಲಶದಲ್ಲಿ ನೀರು ಇಲ್ಲದೆ ಇರುವುದನ್ನು ನೋಡಿದರು. ಇದು ಯಾರು ಮಾಡಿದ ಕಾರ್ಯವೆಂದು ಕೇಳಿದರು.

1. ಮಭಾ. ವ.ಪ. .126. ಭಾಗ.IX ಅ-7

ಯುವನಾಶ್ವರಾಜನು ನಾನು ಈ ನೀರನ್ನು ಕುಡಿದೆನು ಎಂದು ಸತ್ಯವನ್ನೇ ಹೇಳಿದನು. ಆಗ ಭೃಗು ಋಷಿಗಳ ಮಗನು 'ರಾಜನೇ! ನೀನು ನೀರು ಕುಡಿದದ್ದು ಸರಿಯಲ್ಲ. ನಿನಗೆ ಮಗನಾಗುವುದಕ್ಕಾಗಿ ನಾವು ಈ ನೀರನ್ನು ಇಲ್ಲಿ ಇಟ್ಟಿರುವೆವು. ನಿನಗೆ ಮಗನಾಗಬೇಕೆಂದು ಈ ನೀರಿಗೆ ಬಹಳ ಅಭಿಮಂತ್ರಣ ಮಾಡಿರುವೆನು. ಇಂದ್ರದೇವರನ್ನೂ ಜಯಿಸುವ ಮಗನಾಗುವಂತೆ ನಾನು ಅಭಿಮಂತ್ರಿಸಿರುವೆನು. ಅಂತಹ ನೀರನ್ನು ನೀನು ಕುಡಿದದ್ದು ಸರಿಯಾಗಲಿಲ್ಲ. ಆಗಲಿ. ಈಗ ಅದನ್ನು ನಾವು ಬೇರೆ ವಿಧವಾಗಿ ಮಾಡಲಿಕ್ಕೆ ಆಗಲಾರದು. ದೇವರ ಇಚ್ಛೆಯೇ ಹೀಗೆ ಇದೆ. ಆದುದರಿಂದ ನೀನು ಈ ನೀರನ್ನು ಕುಡಿದೆ. ನನ್ನ ತಪೋವೀರ್ಯದಿಂದ ಕೂಡಿದ ನನ್ನಿಂದ ಅಭಿಮಂತ್ರಿತವಾದ ಈ ನೀರನ್ನು ಕುಡಿದ ಕಾರಣ ನೀನೇ ಇಂದ್ರದೇವರಿಗೆ ಸಮಾನನಾದ ಮಗನನ್ನು ಹಡೆಯುವಿ. ಅದಕ್ಕಾಗಿ ನಾವು ಒಂದು ಅದ್ಭುತವಾದ ಇಷ್ಟಿಯನ್ನು ಮಾಡುವೆವು. ನೀನು ದುಃಖವನ್ನು ಹೊಂದಬೇಡ. ದೈವವೇ ಪ್ರಬಲವಾದದ್ದು. ನೀನೇ ಮಗನನ್ನು ಹಡೆಯುವುದರಿಂದ ನಿನ್ನ ಪ್ರಾಣವು ಹೋಗಲಾರದು. ಗರ್ಭಧಾರಣೆಯಿಂದಾಗಿ ನಿನಗೆ ದುಃಖವೂ ಉಂಟಾಗಲಾರದು? ಎಂದು ಹೇಳಿದರು. ತರುವಾಯ ನೂರುವರ್ಷವಾದ ಮೇಲೆ ಯುವನಾಶ್ವರಾಜನ ಎಡಹೊಟ್ಟೆಯ ಭಾಗವನ್ನು ಸೀಳಿಕೊಂಡು ಸೂರ್ಯನಂತೆ ಮಹಾತೇಜಸ್ವಿಯಾದ ಮಗನು ಹೊರಗೆ ಬಂದನು. ಆದರಿಂದ ಯುವನಾಶ್ವರಾಜನು ಸಾಯಲಿಲ್ಲ. ಅದು ತುಂಬಾ ಆಶ್ಚರ್ಯಕರವಾಗಿತ್ತು. ತರುವಾಯ ಮಹಾತೇಜಸ್ವಿಯಾದ ಇಂದ್ರದೇವರು ಮಗುವನ್ನು ನೋಡಲಿಕ್ಕೆ ಬಂದರು. ದೇವತೆಗಳೂ ಬಂದಿದ್ದರು. ದೇವತೆಗಳು ಇಂದ್ರದೇವರನ್ನು ನೋಡಿ ಈ ಮಗುವಿಗೆ ಸ್ತನ್ಯ ಎಂದರೆ ಮೊಲೆಹಾಲು ಕೊಡಲಿಕ್ಕೆ ತಾಯಿಯಿಲ್ಲವಲ್ಲಾ. ಆದುದರಿಂದ ಈ ಮಗು (ಕಿಂ ಧಾಸ್ಯತಿ) ಏನನ್ನು ಕುಡಿಯುವುದು ಎಂದು ಕೇಳಿದರು. ಅದಕ್ಕೆ ಇಂದ್ರದೇವರು (ಮಾಂ ಧಾಸ್ಯತಿ) ನನ್ನನ್ನೇ ಕುಡಿಯುವನು. ಎಂದರೆ ನನ್ನ ಬೆರಳನ್ನು ಪಾನಮಾಡುವನು ಎಂದು ಹೇಳಿ ತನ್ನ ತೋರುಬೆರಳನ್ನು ಮಗುವಿನ ಬಾಯಿಯಲ್ಲಿ ಇಟ್ಟರು. ಇಂದ್ರದೇವರು ಈ ರೀತಿಯಾಗಿ 'ಮಾಂ ಧಾಸ್ಯತಿ' ಎಂದು ಹೇಳಲು ಆ ಮಗುವಿಗೆ ದೇವತೆಗಳು ಮಾಂಧಾತ ಎಂದೇ ನಾಮಕರಣ ಮಾಡಿದರು. ಇಂದ್ರದೇವರ ತೋರುಬೆರಳನ್ನು ಪಾನಮಾಡಿ ಆ ಮಗುವು ಆಗಲೇ ಹದಿಮೂರು ಗೇಣು ಉದ್ದಬೆಳೆಯಿತು. ಆ ಮಾಂಧಾತನಿಗೆ ಯೋಚನೆ ಮಾಡುವ ಮಾತ್ರದಿಂದಲೇ ವೇದಗಳೂ ಧನುರ್ವೇದಗಳೂ ದಿವ್ಯಅಸ್ತ್ರ ಮಂತ್ರಗಳೂ ಎಲ್ಲವೂ ಮನಸ್ಸಿಗೇ ಹೊಳೆದವು. ಆಜಗವ ಎಂಬ ಧನುಸ್ಸೂ

ಕೊಂಬಿನಿಂದ ಉಂಟಾದ ಬಾಣಗಳೂ ಅಭೇದ್ಯವಾದ ಕವಚವೂ ಆಗಲೇ ಬಂದು ಸೇರಿದವು. ಇಂದ್ರದೇವರು ತಾನೇ ಮಾಂಧಾತರಾಜನಿಗೆ ಪಟ್ಟಾಭಿಷೇಕವನ್ನು ಮಾಡಿದರು. ಮಾಂಧಾತರಾಜನು ಧರ್ಮದಿಂದ ಮೂರು ಲೋಕಗಳನ್ನೂ ಜಯಿಸಿದನು. ಅವನ ಆಜ್ಞೆಯು ಸರ್ವತ್ರ ನಡೆಯುತ್ತಿತ್ತು. ಹಣದಿಂದ ತುಂಬಿದ ಈ ಭೂಮಿಯೆಲ್ಲಾ ಅವನ ವಶವಾಗಿತ್ತು. ಅವನು ಬ್ರಾಹ್ಮಣರಿಗೆ ಬಹಳ ದಕ್ಷಿಣೆಯನ್ನು ಕೊಟ್ಟು ಬಹಳ ಯಾಗಗಳನ್ನು ಮಾಡಿದ್ದನು. ಇಂದ್ರದೇವರ ಅರ್ಧಾಸನವನ್ನು ಹೊಂದಿದ್ದನು. ಒಂದೇ ದಿವಸದಲ್ಲಿ ಸಮಸ್ತ ಭೂಮಿಯನ್ನೂ ಜಯಿಸಿದ್ದನು. ಅವನು ಹತ್ತು ಸಾವಿರ ಪದ್ಮ ಎಂಬ ಸಂಖ್ಯೆಯಷ್ಟು ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದ್ದಾನೆಂದು ಹೇಳುತ್ತಾರೆ. (ಪದ್ಮ ಎಂದರೆ ನೂರು ಕೋಟಿ) ಒಂದು ಸಂದರ್ಭದಲ್ಲಿ ಹನ್ನೆರಡು ವರ್ಷಕಾಲ ಮಳೆಯು ಬಾರದಿರಲು ಇಂದ್ರದೇವರು ನೋಡುವಂತೆ ಮಳೆಯನ್ನು ಸುರಿಸಿದನು. ಚಂದ್ರಕುಲದಲ್ಲಿ ಹುಟ್ಟಿದ ಮೇಘದಂತೆ ಗರ್ಜನೆ ಮಾಡುತ್ತಿದ್ದ ಗಾಂಧಾರದೇಶದ ರಾಜನನ್ನು ಯುದ್ಧದಲ್ಲಿ ಸಂಹರಿಸಿದನು. ದೇವತೆಗಳು, ಮನುಷ್ಯರು, ಮೃಗಾದಿಗಳು, ವೃಕ್ಷಾದಿಗಳು ಎಂಬ ನಾಲ್ಕುವಿಧ ಪ್ರಜೆಗಳನ್ನು ರಕ್ಷಣೆಮಾಡಿದನು. ಬಹಳ ತಪಸ್ಸನ್ನೂ ಮಾಡಿದನು. ಉತ್ತಮವಾದ ಲೋಕವನ್ನು ಹೊಂದಿದನು.



## ಧುಂಧುಮಾರನ ಉಪಾಖ್ಯಾನ [1]

ಪೂರ್ವದಲ್ಲಿ ಉದಂಕ ಎಂಬ ಪ್ರಸಿದ್ಧರಾದ ಋಷಿಗಳು ಇದ್ದರು. ಅವರು ಮರುಪ್ರದೇಶದಲ್ಲಿ ಆಶ್ರಮವನ್ನು ಮಾಡಿಕೊಂಡು ತಪಸ್ಸು ಮಾಡುತ್ತಿದ್ದರು. ಅವರ ತಪಸ್ಸಿನಿಂದ ಸಂತುಷ್ಟನಾಗಿ ಪರಮಾತ್ಮನು ಪ್ರತ್ಯಕ್ಷನಾದನು. ಆಗ ಉದಂಕರು ನಾನಾ ವಿಧ ಸ್ತೋತ್ರಗಳಿಂದ ಭಗವಂತನನ್ನು ಸ್ತೋತ್ರಮಾಡಿದರು. ಆದರಿಂದ ಪರಮಾತ್ಮನು ಸಂತುಷ್ಟನಾಗಿ ನಾನು ನಿನ್ನಲ್ಲಿ ಪ್ರೀತಿಯುಳ್ಳವನಾಗಿದ್ದೇನೆ. ಬೇಕಾದ ವರವನ್ನು ಕೇಳಿಕೊ ಎಂದನು. ಆಗ ಉದಂಕರು 'ಭಗವಂತನೆ1 ಸೃಷ್ಟಿಕರ್ತನಾದ ಜಗತ್ಪ್ರಭುವಾದ ನಿನ್ನ ದರ್ಶನವನ್ನು ಕೊಟ್ಟದ್ದೇ ನನಗೆ ವರವಾಯಿತು. ನನಗೆ ಅಷ್ಟೇ ಸಾಕು ಎಂದರು. ಆಗ ಭಗವಂತನು ನಿನ್ನ ಭಕ್ತಿಯಿಂದಲೂ ಆಸೆಯಿಲ್ಲದೆ ಇರೋಣದಿಂದಲೂ ತುಂಬಾ

1. ಮಭಾ. ವ.ಪ. ಅ.201-204

ಸಂತೋಷವುಳ್ಳವನಾಗಿರುವೆನು. ನೀನು ಅವಶ್ಯವಾಗಿ ನನ್ನಿಂದ ಒಂದು ವರವನ್ನು ಹೊಂದಲೇಬೇಕು' ಎಂದು ಹೇಳಿದನು. ಈಪ್ರಕಾರವಾಗಿ ಪರಮಾತ್ಮನು ನಿರ್ಬಂಧಪಡಿಸಲು ಉದಂಕ ಋಷಿಗಳು ಕೈಮುಗಿದುಕೊಂಡು 'ಭಗವಂತನೇ! ನೀನು ನನ್ನಲ್ಲಿ ಪ್ರೀತನಾಗಿದ್ದರೆ ಧರ್ಮ ಸತ್ಯ ಇಂದ್ರಿಯನಿಗ್ರಹ ಇವುಗಳಲ್ಲಿ ಬುದ್ಧಿಯಿರಲಿ. ನಿನ್ನಲ್ಲಿ ಸರ್ವದಾಭಕ್ತಿಯೂ ಇರಲಿ' ಎಂದು ಕೇಳಿಕೊಂಡರು. 'ನನ್ನ ಅನುಗ್ರಹದಿಂದ ಇದೆಲ್ಲವೂ ನಿನಗೆ ಆಗುವುದು. ನೀನು ಮೂರುಲೋಕಗಳಿಗೂ ಮಹಾಕಾರ್ಯವನ್ನು ಮಾಡುವಿ. ಲೋಕಗಳನ್ನೆಲ್ಲಾ ನಾಶಮಾಡಬೇಕೆಂದು ಧುಂಧು ಎಂಬ ರಾಕ್ಷಸನು ಘೋರವಾದ ತಪಸ್ಸನ್ನು ಮಾಡುತ್ತಿರುವನು. ಅವನನ್ನು ಸಂಹಾರಮಾಡುವವನನ್ನು ಹೇಳುತ್ತೇನೆ. ಬೃಹದಶ್ವ ಎಂದು ಪ್ರಸಿದ್ಧನಾದ ರಾಜನು ಬರುವನು. ಅವನ ಮಗನಾದ ಕುವಲಾಶ್ವ ಎನ್ನುವವನು ನನ್ನ ಆವೇಶವುಳ್ಳವನಾಗಿ ಯೋಗಸಾಮರ್ಥ್ಯವುಳ್ಳವನಾಗಿ ನಿನ್ನ ಆಜ್ಞೆಯಿಂದ ಧುಂಧುವನ್ನು ಕೊಲ್ಲುವನು' ಎಂದು ಹೇಳಿ ಪರಮಾತ್ಮನು ಅಂತರ್ಧಾನವನ್ನು ಹೊಂದಿದನು.

ಸೂರ್ಯವಂಶದಲ್ಲಿ ಇಕ್ಷ್ವಾಕುರಾಜನು ಸ್ವರ್ಗಸ್ಥನಾದ ಮೇಲೆ ಅವನ ಮಗನಾದ ಶಶಾದನು ಅಯೋಧ್ಯೆಯಲ್ಲಿ ಇದ್ದುಕೊಂಡು ರಾಜ್ಯಭಾರ ಮಾಡಿದನು. ಹೀಗೇ ಆ ವಂಶದಲ್ಲಿ ಬೃಹದಶ್ವ ಎಂಬ ಮಹಾಬಲಿಷ್ಠನಾದ ರಾಜನು ಹುಟ್ಟಿದನು. ಆ ಬೃಹದಶ್ವರಾಜನ ಮಗನು ಕುವಲಾಶ್ವನು. ಸರಿಯಾದ ಸಮಯದಲ್ಲಿ ಪರಾಕ್ರಮಶಾಲಿಯಾದ ಉತ್ತಮಧಾರ್ಮಿಕನಾದ ಕುವಲಾಶ್ವನಿಗೆ ಬೃಹದಶ್ವನು ಪಟ್ಟಾಭಿಷೇಕ ಮಾಡಿದನು. ರಾಜ್ಯಸಂಪತ್ತನ್ನೆಲ್ಲಾ ಮಗನಿಗೆ ಒಪ್ಪಿಸಿ ಬೃಹದಶ್ವನು ತಪಸ್ಸು ಮಾಡುವುದಕ್ಕಾಗಿ ತಪೋವನಕ್ಕೆ ಹೊರಟನು. ಈರೀತಿಯಾಗಿ ಬೃಹದಶ್ವನು ವನಕ್ಕೆ ಹೊರಟಿರುವುದನ್ನು ಕೇಳಿ ಉದಂಕರು ಬಂದು ತಡೆದರು. 'ರಾಜನೇ! ನೀನು ರಕ್ಷಣೆ ಮಾಡುತ್ತಾ ಇರಬೇಕು. ನಿನ್ನ ಅನುಗ್ರಹದಿಂದ ನಾವು ಭಯವಿಲ್ಲದೆ ಇದ್ದೇವೆ. ನೀನು ರಕ್ಷಣೆ ಮಾಡುತ್ತಿರುವುದರಿಂದ ಭೂಮಿಯು ಭಯರಹಿತವಾಗಿ ಇರುತ್ತದೆ. ನೀನು ಕಾಡಿಗೆ ಹೋಗಬಾರದು. ನೀನು ಪ್ರಜೆಗಳನ್ನು ರಕ್ಷಣೆ ಮಾಡುತ್ತಿದ್ದರೆ ಮಹಾಪುಣ್ಯವು ಬರುವುದು. ನೀನು ಕಾಡಿಗೆ ಹೋಗುವುದಾದರೆ ಅಂತಹ ಪುಣ್ಯವು ಬರಲಾರದು. ಆದುದರಿಂದ ಕಾಡಿಗೆ ಹೋಗುವ ಬುದ್ಧಿಯು ನಿನಗೆ ಬೇಡ' ಎಂದರು. ಮತ್ತು 'ಪೂರ್ವದ ರಾಜರೆಲ್ಲರೂ ಪ್ರಜೆಗಳನ್ನು ರಕ್ಷಿಸುತ್ತಿದ್ದರು. ಆದುದರಿಂದ ನೀನೂ ಪ್ರಜೆಗಳನ್ನು ರಕ್ಷಿಸಬೇಕು. ನಾನು ಭಯವಿಲ್ಲದೆ ತಪಸ್ಸು ಮಾಡಲಿಕ್ಕೆ ಆಗುವುದಿಲ್ಲ. ನನ್ನ ಆಶ್ರಮ ಸಮೀಪದಲ್ಲಿ ಮರುಭೂಮಿಯಲ್ಲಿ

ಸಮುದ್ರದ ಉಸುಬಿನಿಂದ ತುಂಬಿದ 'ಉಜ್ಜಾಲಕ'. ಬಹುಯೋಜನ ವಿಸ್ತಾರವಾಗಿ ಉಳ್ಳ ಪ್ರದೇಶವಿದೆ. ಅಲ್ಲಿ ಮಹಾಪರಾಕ್ರಮಶಾಲಿ ಮಧುವಿನ ಮಗನಾದ ಧುಂಧು ಎಂಬ ರಾಕ್ಷಸನು ಭೂಮಿಯ ಒಳಗೆ ವಾಸಮಾಡುತ್ತಿರುವನು. ಅವನನ್ನು ಸಂಹರಿಸಿ ನೀನು ವನಕ್ಕೆ ಹೋಗಬೇಕು. ಅವನು ಲೋಕವನ್ನೇ ನಾಶಮಾಡುವುದಕ್ಕಾಗಿ ಭಯಂಕರವಾದ ತಪಸ್ಸು ಮಾಡುತ್ತಾ ಮಲಗಿರುವನು. ಅವನನ್ನು ದೇವತೆಗಳೂ ದೈತ್ಯರೂ ನಾಗರೂ ಯಕ್ಷರೂ ರಾಕ್ಷಸರೂ ಗಂಧರ್ವರೂ ಒಬ್ಬರೂ ಸಂಹಾರ ಮಾಡಲಿಕ್ಕೆ ಆಗಲಾರದು. ಅವನಿಗೆ ಅಂತಹ ವರವನ್ನು ಬ್ರಹ್ಮದೇವರು ಕೊಟ್ಟಿರುವರು. ಅವನನ್ನು ನೀನು ಸಂಹರಿಸು. ನಿನಗೆ ಕಾಡಿಗೆ ಹೋಗುವ ಬುದ್ಧಿಯು ಬೇಡ. ಇದರಿಂದ ನಿನಗೆ ಮಹಾಕೀರ್ತಿಯು ಬರುವುದು. ಕ್ರೂರನಾದ ಆ ಅಸುರನು ಉಸುಬಿನ ಕೆಳಗೆ ಮಲಗಿರುವನು. ವರ್ಷಕ್ಕೆ ಒಂದು ಸಲ ಅವನು ಶ್ವಾಸ ಬಿಡುವನು. ಆಗ ಭೂಮಿಯೆಲ್ಲಾ ನಡುಗುವುದು. ಅವನ ಶ್ವಾಸಗಾಳಿಯಿಂದ ಸೂರ್ಯನ ರಥದ ಪರ್ಯಂತ ಏಳುದಿವಸದವರೆಗೆ ಬೆಂಕಿಯಿಂದ ಕಿಡಿಗಳಿಂದಲೂ ಮಹಾಜ್ವಾಲೆ ಯಿಂದ ಹೊಗೆಯಿಂದಲೂ ಸಹಿತವಾಗಿ ಧೂಳಿಯು ಏಳುವುದು. ಏಳುದಿನದ ವರೆಗೂ ಭೂಕಂಪವಾಗುತ್ತಿರುವುದು. ರಾಜನೇ! ಆದರಿಂದ ನನಗೆ ನನ್ನ ಆಶ್ರಮದಲ್ಲಿ ಇರಲಿಕ್ಕೆ ಆಗುವುದಿಲ್ಲ. ಆದುದರಿಂದ ಲೋಕಹಿತಕ್ಕೋಸ್ಕರ ಅವನನ್ನು ಸಂಹರಿಸು. ಅವನನ್ನು ಕೊಂದರೆ ಜನರೆಲ್ಲರೂ ಸುಖವನ್ನು ಹೊಂದುವರು. ನೀನು ಅವನನ್ನು ಸಂಹರಿಸಲು ಸಮರ್ಥನಾಗಿರುವಿ ಎಂದು ನನ್ನ ಅಭಿಪ್ರಾಯವಿದೆ. ಭಗವಂತನು ನಿನಗೆ ಸಾಮರ್ಥ್ಯವನ್ನು ಕೊಡುವನು. ಭಗವಂತನು ಪೂರ್ವದಲ್ಲಿ ನನಗೆ ವರವನ್ನು ಕೊಟ್ಟಿರುವನು. ಯಾರು ಆ ಕ್ರೂರನಾದ ದೈತ್ಯನನ್ನು ಸಂಹರಿಸುವನೋ ಅವನಲ್ಲಿ ಭಗವಂತನಿಂದ ಕೂಡಿದವನಾಗಿ ಭಯಂಕರವಾದ ಪರಾಕ್ರಮವುಳ್ಳ ಆ ದೈತ್ಯನನ್ನು ಸಂಹರಿಸು. ಅಲ್ಪ ತೇಜಸ್ಸುಳ್ಳ ಪುರುಷನು ಆ ಮಹಾತೇಜಸ್ವಿಯಾದ ಧುಂಧುವನ್ನು ಎಷ್ಟು ನೂರು ವರ್ಷಗಳಾದರೂ ಸಂಹರಿಸಲಿಕ್ಕೆ ಆಗಲಾರದು' ಎಂದು ಹೇಳಿದರು.

ಆಗ ಬೃಹದಶ್ವರಾಜನು ಉದಂಕರಿಗೆ ಕೈಮುಗಿದುಕೊಂಡು 'ಪೂಜ್ಯರೇ! ನಾನು ವನಕ್ಕೆ ಹೊರಟಿರುವ ಸಂಕಲ್ಪವು ವ್ಯರ್ಥವಾಗಬಾರದು. ನನ್ನ ಮಗನು ಕುವಲಾಶ್ವನು ಇರುವನು. ಅವನು ಒಳ್ಳೇ ಧೈರ್ಯಶಾಲಿ. ಯಾವಕಾರ್ಯವನ್ನು ಬೇಗನೇ ಮಾಡುವನು. ಮಹಾಪರಾಕ್ರಮಶಾಲಿಯು. ನಿಮಗೆ ಬೇಕಾದ ಪ್ರಿಯಕಾರ್ಯವನ್ನು ಮಾಡುವನು. ಪರಾಕ್ರಮಶಾಲಿಗಳಾದ ತನ್ನ ಎಲ್ಲಾ ಮಕ್ಕಳಿಂದ ಕೂಡಿಕೊಂಡು ಹೋಗಿ ಅವನು ಧುಂಧುವನ್ನು ಸಂಹರಿಸುವನು. ನಾನು ಶಸ್ತ್ರವನ್ನು ಪರಿತ್ಯಾಗ

ಮಾಡಿಯಾಯಿತು. ನನ್ನನ್ನು ತಾವು ಬಿಟ್ಟುಬಿಡಬೇಕು' ಎಂದು ಕೇಳಿಕೊಂಡರು. ಉದಂಕರು ಅದಕ್ಕೆ ಹಾಗೆಯೇ ಆಗಲಿ ಎಂದರು. ತರುವಾಯ ಬೃದಶ್ವನು ಮಗನೊಡನೆ ಉದಂಕರ ಕಾರ್ಯವನ್ನು ಮಾಡುವಂತೆ ಆಜ್ಞಾಪಿಸಿ ಕಾಡಿಗೆ ಹೊರಟು ಹೋದನು.

ತರುವಾಯ ಕುವಲಾಶ್ವನು ಬಲಿಷ್ಠರಾದ ತನ್ನ ಇಪ್ಪತ್ತೊಂದು ಸಾವಿರ ಮಕ್ಕಳಿಂದ ಕೂಡಿಕೊಂಡು ಸೈನ್ಯವಾಹನ ಸಹಿತನಾಗಿ ಉದಂಕರಿಂದ ಕೂಡಿಕೊಂಡು ಧುಂಧುವಿನ ಸಂಹಾರಕ್ಕಾಗಿ ಹೊರಟನು. ಆಗ ಉದಂಕರ ಪ್ರಾರ್ಥನೆಯಿಂದ ಲೋಕದ ಹಿತಕ್ಕೋಸ್ಕರ ಭಗವಂತನು ಅವನಲ್ಲಿ ಪ್ರವೇಶಿಸಿದನು. ಅಂತಹ ಕುವಲಾಶ್ವನು ಧುಂಧುವನ್ನು ಸಂಹರಿಸಲು ಹೊರಡಲು ಆಕಾಶದಲ್ಲಿ ಆ ರಾಜಪುತ್ರನು ಧುಂಧುಮಾರನು ಎಂದರೆ ಧುಂಧುವನ್ನು ಸಂಹರಿಸುವವನು ಆಗುವನು ಎಂಬ ಮಹಾಶಬ್ದವುಂಟಾಯಿತು. ದೇವತೆಗಳು ಅವನ ಮೇಲೆ ಸ್ವರ್ಗಲೋಕದ ಪುಷ್ಪಗಳನ್ನು ಸುರಿಸಿದರು. ದೇವಲೋಕದ ದುಂದುಭಿಗಳು (ನಗಾರಿಗಳು) ಒಬ್ಬರೂ ಬಡಿಯದೆ ತಾವಾಗಿಯೇ ಶಬ್ದಮಾಡಿದವು. ಕುವಲಾಶ್ವನು ಪ್ರಯಾಣ ಮಾಡುವಾಗ ತಣ್ಣಗೆ ಗಾಳಿಯು ಬೀಸಿತು. ಭೂಮಿಯಲ್ಲಿ ಧೂಳಿಯಿಲ್ಲದಂತೆ ಮಾಡುವುದಕ್ಕಾಗಿ ಇಂದ್ರದೇವರು ಮಳೆಯನ್ನು ಸುರಿಸಿದರು. ತರುವಾಯ ಧುಂಧುವು ಇರುವ ಸ್ಥಳದಲ್ಲಿ ಆಕಾಶದಲ್ಲಿ ದೇವತೆಗಳು ವಿಮಾನಗಳು ಹೋದವು. ಕುವಲಾಶ್ವನಿಗೂ ಧುಂಧುವಿಗೂ ನಡೆಯುವ ಯುದ್ಧವನ್ನು ನೋಡಬೇಕೆಂಬ ಆಸೆಯಿಂದ ದೇವತೆಗಳೂ ಗಂಧರ್ವರೂ ಯಕ್ಷರೂ ಮಹರ್ಷಿಗಳೂ ಎಲ್ಲರೂ ಆ ಯುದ್ಧವನ್ನು ನೋಡಬೇಕೆಂಬ ಆಸೆಯಿಂದ ಹೋಗಿದ್ದರು. ಭಗವಂತನ ತೇಜಸ್ಸಿನಿಂದ ಯುಕ್ತನಾದ ಕುವಲಾಶ್ವನು ಧುಂಧುವು ಮಲಗಿರುವ ಸ್ಥಳಕ್ಕೆ ಹೋಗಿ ಬೇಗನೆ ಮಕ್ಕಳಿಂದ ಸುತ್ತಲೂ ಸಮುದ್ರತೀರವನ್ನು ತೋಡಿಸಿದನು. ಕುವಲಾಶ್ವನ ಮಕ್ಕಳು ಏಳುದಿವಸ ಆ ಉಸುಬಿನ ಪ್ರದೇಶದಲ್ಲಿ ತೋಡಿದ ಮೇಲೆ ಧುಂಧುವು ಕಾಣಿಸಿದನು. ಉಸುಬಿನಲ್ಲಿ ಅಡಗಿದ್ದ ಅವನ ದೇಹವು ಸೂರ್ಯನಂತೆ ಪ್ರಕಾಶಿಸುತ್ತಿತ್ತು. ಪ್ರಲಯಕಾಲದ ಬೆಂಕಿಯಂತೆ ಕಾಂತಿಯುಳ್ಳ ಧುಂಧುವು ಪಶ್ಚಿಮದಿಕ್ಕಿಗೆ ತಲೆಯನ್ನಿಟ್ಟು ಮಲಗಿದ್ದನು. ಕುವಲಾಶ್ವನ ಮಕ್ಕಳು ಸುತ್ತಲೂ ನಿಂತು ತೀಕ್ಷ್ಣಗಳಾದ ಬಾಣಗಳಿಂದಲೂ ಗದೆಗಳಿಂದಲೂ ಒನಕೆಗಳಿಂದಲೂ ಪಟ್ಟಸ ಪರಿಘಪ್ರಾಸ ಖಡ್ಗ ಮೊದಲಾದ ಆಯುಧಗಳಿಂದಲೂ ಬಡಿದರು. ಈರೀತಿ ಬಡಿಯಲು ಆ ರಾಕ್ಷಸನು ಎದ್ದನು. ಕೋಪಿಸಿಕೊಂಡು ಅವರ ಆಯುಧಗಳನ್ನೆಲ್ಲಾ ನುಂಗಿದನು. ತನ್ನ ಬಾಯಿಯಿಂದ ಪ್ರಲಯಕಾಲದ ಬೆಂಕಿಯಂತೆ

ಇರುವ ಬೆಂಕಿಯನ್ನು ಕಾರಿ ಅವರನ್ನೆಲ್ಲಾ ತನ್ನ ತೇಜಸ್ಸಿನಿಂದ ಸುಟ್ಟುಬಿಟ್ಟನು. ಈ ರೀತಿಯಾಗಿ ಮಕ್ಕಳೆಲ್ಲಾ ಅವನ ಕ್ರೋಧಾಗ್ನಿಯಿಂದ ಸುಟ್ಟುಹೋಗಲು ನಿದ್ರೆಯಿಂದ ಎಚ್ಚೆತ್ತ ಕುಂಭಕರ್ಣನಂತಿರುವ ಅವನ ಸಮೀಪಕ್ಕೆ ಮಹಾತೇಜಸ್ವಿಯಾದ ಕುವಲಾಶ್ವನು ಹೋದನು. ಆಗ ಧುಂಧುವು ತನ್ನ ದೇಹದಿಂದ ನೀರನ್ನು ಸುರಿಸಿದನು. ಕುವಲಾಶ್ವನು ತನ್ನ ತೇಜಸ್ಸಿನಿಂದ ಅದನ್ನೆಲ್ಲಾ ಪಾನಮಾಡಿದನು. ತರುವಾಯ ಕುವಲಾಶ್ವನು ಸರ್ವಲೋಕಗಳ ಕ್ಷೇಮಕ್ಕಾಗಿ ಆ ಧುಂಧುವನ್ನು ಬ್ರಹ್ಮಾಸ್ತ್ರದಿಂದ ಸುಟ್ಟುಹಾಕಿದನು. ಈರೀತಿಯಾಗಿ ಕುವಲಾಶ್ವನು ಧುಂಧುವನ್ನು ಸಂಹಾರ ಮಾಡಿದ ಕಾರಣ ಧುಂಧುಮಾರ ಎಂಬ ಹೆಸರನ್ನು ಪಡೆದನು. ದೇವತೆಗಳೆಲ್ಲರೂ ಪ್ರೀತಿಉಳ್ಳವರಾಗಿ ಬೇಕಾದ ವರವನ್ನು ಕೇಳಿಕೊ ಎನ್ನಲು ರಾಜನು ನಮಸ್ಕಾರ ಮಾಡಿ ಕೈಮುಗಿದುಕೊಂಡು 'ನಾನು ಬ್ರಾಹ್ಮಣರಿಗೆ ಬೇಕಾದಷ್ಟು ದಾನಮಾಡಬೇಕು. ಶತ್ರುಗಳು ನನ್ನನ್ನು ಜಯಿಸಬಾರದು. ಧರ್ಮದಲ್ಲಿ ಸರ್ವದಾ ಆಸಕ್ತಿಯಿರಬೇಕು. ಸ್ವರ್ಗದಲ್ಲಿ ಯಾವಾಗಲೂ ವಾಸವುಂಟಾಗಬೇಕು' ಎಂದು ಕೇಳಿಕೊಂಡನು. ದೇವತೆಗಳು ಪ್ರೀತಿಯಿಂದ ಹಾಗೆಯೇ ಆಗಲಿ ಎಂದು ಹೇಳಿದರು. ಋಷಿಗಳೂ ಗಂಧರ್ವರೂ ಉದಂಕರೂ ಆ ರಾಜನೊಡನೆ ಸಂಭಾಷಿಸಿ ಆಶೀರ್ವಾದ ಮಾಡಿದರು. ದೇವತೆಗಳೂ ಋಷಿಗಳೂ ತಮ್ಮ ತಮ್ಮ ಸ್ಥಾನಕ್ಕೆ ಹೋದರು. ಅವನ ಮಕ್ಕಳಲ್ಲಿ ದೃಢಾಶ್ವ ಕಪಿಲಾಶ್ವ ಭದ್ರಾಶ್ವ ಎಂಬ ಮೂರು ಜನ ಮಕ್ಕಳು ಮಾತ್ರ ಬದುಕಿದ್ದರು. ಅವರಿಂದಲೇ ಇಕ್ಷ್ವಾಕುವಂಶವು ಬೆಳೆಯಿತು.



## ಧುಂಧುವಿನ ಕಥೆ [1]

ಸ್ಥಾವರ ಜಂಗಮಾತ್ಮಕವಾದ ಲೋಕವೆಲ್ಲಾ ನಾಶವನ್ನು ಹೊಂದಿ ಸಮುದ್ರಮಯವಾಗಿರುವ ಸಮಯದಲ್ಲಿ ಶ್ರೀಭಗವಂತನು ಶೇಷದೇವರಲ್ಲಿ ಮಲಗಿದ್ದನು. ಮಲಗಿದ್ದ ಆ ಭಗವಂತನ ನಾಭಿಯಿಂದ ಸೂರ್ಯನಂತೆ ಪ್ರಕಾಶಮಾನವಾದ ಕಮಲವುಂಟಾಯಿತು. ಆ ಕಮಲದಲ್ಲಿ ಬ್ರಹ್ಮದೇವರು ಹುಟ್ಟಿ ಕೂತಿದ್ದರು. ಸ್ವಲ್ಪ ಸಮಯವಾದ ಮೇಲೆ ಮಹಾಪರಾಕ್ರಮಶಾಲಿಗಳಾದ ಬಲಿಷ್ಠರಾದ ಮಧುಕೈಟಭ ಎಂಬ ರಾಕ್ಷಸರು ದಿವ್ಯಶೇಷದೇವರ ದೇಹದಲ್ಲಿ ಮಲಗಿರುವ ಕಿರೀಟಕೌಸ್ತುಭದಾರಿಯಾದ

1. ಮಭಾ. ವ.ಪ. ಅ.203, 204

ಅರಸಿನಬಣ್ಣದ ಪಟ್ಟೆವಸ್ತ್ರವನ್ನು ಉಟ್ಟುಕೊಂಡಿರುವ ಸಹಸ್ರಸೂರ್ಯರಂತೆ ತೇಜಸ್ಸುಳ್ಳ ಭಗವಂತನನ್ನು ನೋಡಿದರು. ಮಧುಕೈಟಭರಿಗೆ ಮಲಗಿದ್ದ ಆ ಭಗವಂತನನ್ನು ನೋಡಿ ಆಶ್ಚರ್ಯವಾಯಿತು. ಅವರು ನಾಭಿಕಮಲದಲ್ಲಿ ಕೂತಿದ್ದ ಬ್ರಹ್ಮದೇವರನ್ನು ನೋಡಿ ಅನೇಕ ವಿಧವಾಗಿ ಭಯಪಡಿಸಿದರು. ಬ್ರಹ್ಮದೇವರು ಭಯರಹಿತರಾದರೂ ದೇವರಸಂಕಲ್ಪವನ್ನು ತಿಳಿದವರಾದ ಪ್ರಯುಕ್ತ ತಾನು ಕೂತಿದ್ದ ಪದ್ಮದ ನಾಲವನ್ನು ಅಡಿಸಿದರು. ಅಷ್ಟರವರೆಗೆ ನಿದ್ರಾಹೀನನಾಗಿದ್ದರೂ ನಿದ್ರಾಬಂದವನಂತೆ ನಟನೆ ಮಾಡುತ್ತಿದ್ದ ಪರಮಾತ್ಮನು ಎಚ್ಚತ್ತವನಂತೆ ಎದ್ದು ಕುಳಿತು ಮಧುಕೈಟಭರನ್ನು ನೋಡಿದನು. ಅವರನ್ನು ನೋಡಿ ಭಗವಂತನು 'ಮಹಾಬಲಿಷ್ಠರೇ! ಸ್ವಾಗತವು. ನಿಮ್ಮನ್ನು ನೋಡಿ ನನಗೆ ಪ್ರೀತಿ ಉಂಟಾಗಿದೆ. ನಿಮಗೆ ಬೇಕಾದ ಶ್ರೇಷ್ಠವಾದ ವರವನ್ನು ಕೇಳಿರಿ' ಎಂದನು. ಆಗ ಅವರು ಮಹಾ ಅಹಂಕಾರವುಳ್ಳವರು ನಗುವವರಾಗಿ 'ನೀನೇ ನಮ್ಮ ಹತ್ತಿರ ವರವನ್ನು ಕೇಳು. ನಾವೇ ನಿನಗೆ ಕೊಡುತ್ತೇನೆ. ವಿಚಾರವಿಲ್ಲದೆ ವರವನ್ನು ಕೇಳು' ಎಂದರು. ಹಾಗಾದರೆ ನಿಮ್ಮ ಹತ್ತಿರ ನಾನು ವರವನ್ನು ಕೇಳಿಕೊಳ್ಳುವೆನು. ನೀವಿಬ್ಬರೂ ಪರಾಕ್ರಮಶಾಲಿಗಳು. ನಿಮಗೆ ಸಮಾನಪುರುಷನಿಲ್ಲ. ನೀವು ನನ್ನಿಂದ ಮರಣವನ್ನು ಹೊಂದಬೇಕು. ಲೋಕಹಿತಕ್ಕಾಗಿ ಇದೇ ವರವನ್ನು ಕೇಳುವೆನು' ಎಂದನು.

ಅದಕ್ಕೆ ಮಧುಕೈಟಭರು 'ನಾವು ಯಾವಾಗಲೂ ಸುಳ್ಳು ಹೇಳಿದವರಲ್ಲ. ನಾವು ಸತ್ಯಧರ್ಮದಲ್ಲಿ ಇರತಕ್ಕವರು ಎಂದು ತಿಳಿ. ಬಲ ರೂಪ ಇತ್ಯಾದಿ ಗುಣಗಳಲ್ಲಿ ನಮಗೆ ಸಮಾನರು ಇಲ್ಲ. ನಮಗೆ ನೀನೊಂದು ಮಾಡಬೇಕು. ಆವರಣವಿಲ್ಲದಿರುವ ಅವಕಾಶದಲ್ಲಿ ನಮ್ಮನ್ನು ಸಂಹರಿಸು. ನಾವು ನಿನ್ನ ಮಕ್ಕಳಾಗುವೆವು' ಎಂದು ಹೇಳಿದರು. ಪರಮಾತ್ಮನು ಹಾಗೇ ಆಗಲಿ ಎಂದು ಹೇಳಿ ತನ್ನ ತೊಡೆಯಲ್ಲಿ ಅವರಿಬ್ಬರ ತಲೆಯನ್ನೂ ಚಕ್ರದಿಂದ ಕತ್ತರಿಸಿದನು.

ಅವರ ಮಗನಾದ ಧುಂಧುವೆಂಬ ರಾಕ್ಷಸನು ಮಹಾಪರಾಕ್ರಮಶಾಲಿ ಯಾದವನು ಒಂದೇ ಕಾಲಿನಿಂದ ನಿಂತುಕೊಂಡು ತಪಸ್ಸು ಮಾಡಿದನು. ಅವನಿಗೆ ಬ್ರಹ್ಮದೇವರು ಬಂದು ವರವನ್ನು ಕೊಟ್ಟರು. ಅವನು 'ತಾನು ದೇವದಾನವ ಯಕ್ಷರಿಂದಲೂ ಸರ್ಪಗಂಧರ್ವ ರಾಕ್ಷಸರಿಂದಲೂ ಸಾಯಬಾರದು' ಎಂದು ವರವನ್ನು ಕೇಳಿಕೊಂಡನು. ಬ್ರಹ್ಮದೇವರು ಹಾಗೇ ಆಗಲಿ ಹೋಗು ಎಂದರು. ಈ ರೀತಿ ಬ್ರಹ್ಮದೇವರು ಹೇಳಲು ಬ್ರಹ್ಮದೇವರ ಪಾದಗಳಿಗೆ ಶಿರಸ್ಸಿನಿಂದ ನಮಸ್ಕಾರಮಾಡಿ ಹೋದನು.

ತರುವಾಯ ಧುಂಧುವು ಭಗವಂತನು ತನ್ನ ತಂದೆಯನ್ನು ಸಂಹಾರ ಮಾಡಿದ್ದನ್ನು ಜ್ಞಾಪಿಸಿಕೊಂಡು ದೇವಗಂಧರ್ವ ಇತ್ಯಾದಿ ಸಮಸ್ತರನ್ನು ಜಯಿಸಿದನು. ದೇವತೆಗಳನ್ನೆಲ್ಲಾ ಅನೇಕಬಾರಿ ಪೀಡಿಸಿದನು. ಸಮುದ್ರದ ಉಸುಬಿನಿಂದ ಕೂಡಿದ ಉಜ್ಜಾನಕ ಎಂಬ ಸ್ಥಳಕ್ಕೆ ಬಂದು ಆ ದುಷ್ಟನು ಉದಂಕ ಋಷಿಗಳನ್ನು ಪೀಡಿಸುತ್ತಿದ್ದನು. ಉಸುಬಿನ ಕೆಳಗೆ ಮಲಗಿರುತ್ತಿದ್ದನು. ಅಂತಹ ಧುಂಧುವನ್ನು ಕುವಲಾಶ್ವರಾಜನು ಉದಂಕರ ಮಾತಿನಂತೆ ಪರಮಾತ್ಮನ ತೇಜಸ್ಸಿನಿಂದ ಯುಕ್ತನಾಗಿ ಮಕ್ಕಳಿಂದ ಸಹಿತನಾಗಿ ಹೋಗಿ ಸಂಹಾರ ಮಾಡಿದನು.



## ಸಾವಿತ್ರಿಯ ಕಥೆ [1]

ಪೂರ್ವದಲ್ಲಿ ಮದ್ರದೇಶದಲ್ಲಿ ಅಶ್ವಪತಿಯೆಂಬ ರಾಜನಿದ್ದನು. ಅವನು ಧರ್ಮಿಷ್ಠನು. ಸತ್ಯವಂತನು. ಯಜ್ಞವನ್ನು ಮಾಡಿದವನು. ಬಹುದಾನ ಮಾಡಿದವನು. ಕ್ಷಮಾಗುಣವುಳ್ಳವನು. ಅವನಿಗೆ ವಯಸ್ಸಾದರೂ ಮಕ್ಕಳಾಗಲಿಲ್ಲ. ಇದರಿಂದ ಸಂತಾಪವನ್ನು ಹೊಂದಿದನು. ಮಕ್ಕಳಾಗಬೇಕೆಂದು ಕಠಿಣವ್ರತಗಳನ್ನು ಮಾಡಿದನು. ಮಿತವಾಗಿ ಭೋಜನಮಾಡಿದನು. ಬ್ರಹ್ಮಚರ್ಯಉಳ್ಳವನಾಗಿದ್ದನು. ನಿತ್ಯವೂ ಮೂರುಗಂಟೆಯ ಮೇಲೆ ಭೋಜನ ಮಾಡುತ್ತಿದ್ದನು. ಸಾವಿತ್ರಿದೇವಿಯು ದೇವತೆಯಾಗಿ ಉಳ್ಳ [2]**'ಸೋಮೋ ವಧೂಯುರಭವತ್'** ಇತ್ಯಾದಿ ನೂರು ಸಾವಿರ ವೇದಮಂತ್ರಗಳಿಂದ ಹೋಮವನ್ನು ಮಾಡಿದನು. ಹೋಮಮಾಡಿಯಾದ ಮೇಲೆ ಮಿತವಾಗಿ ಭೋಜನ ಮಾಡುತ್ತಿದ್ದನು. ಈರೀತಿಯಾಗಿ ಹದಿನೆಂಟು ವರ್ಷದವರೆಗೆ ಮಾಡಿದನು. ಹದಿನೆಂಟನೇ ವರ್ಷವು ಪೂರ್ಣವಾಗಲು ಸಾವಿತ್ರೀದೇವಿಯರು ಸಂತುಷ್ಟರಾದರು. ರಾಜನು ಹೋಮಮಾಡುತ್ತಿದ್ದ ಯಜ್ಞಕುಂಡದಿಂದ ಸಂತೋಷ ದಿಂದ ಮೂರ್ತಿಮತ್ತಾಗಿ ಮೇಲಕ್ಕೆ ಬಂದರು. ನಿಯಮದಿಂದ ಇದ್ದ ಅಶ್ವಪತಿರಾಜ ನೊಡನೆ 'ನಿನ್ನ ಬ್ರಹ್ಮಚರ್ಯ ಇಂದ್ರಿಯನಿಗ್ರಹ ನಿಯಮ ಭಕ್ತಿ ಇವುಗಳಿಂದ ನಾನು ಅತ್ಯಂತ ಸಂತೋಷವುಳ್ಳವನಾಗಿರುವೆನು. ಬೇಕಾದ ವರಗಳನ್ನು ಕೇಳು. ಮದ್ರದೇಶದ ರಾಜನೇ! ಯಾವಾಗಲೂ ಧರ್ಮವನ್ನು ಮರೆಯದಿರು' ಎಂದು ಹೇಳಿದರು.

---

1. ಮಭಾ. ವ.ಪ. ಅ.293-299. ಜ್ಯೇ.ಮಾ.ಮಾ. ಅ. 22 ರಿಂದ 27 ಮತ್ತು ವ್ರತ ವಿಷಯಗಳಿವೆ. 2. ಋ. 10-85-9

ಆಗ ಅಶ್ವಪತಿರಾಜನು 'ದೇವಿ! ನನಗೆ ಮಕ್ಕಳಾಗಬೇಕೆಂಬ ಅಭಿಲಾಷೆಯಿಂದ ಈ ಕಾರ್ಯವನ್ನು ಆರಂಭಿಸಿರುವೆನು. ನನಗೆ ವಂಶವನ್ನು ಉದ್ಧರಿಸುವ ಅನೇಕ ಮಕ್ಕಳಾಗಬೇಕು. ದೇವಿ, ನೀವು ಸಂತುಷ್ಟರಾಗಿದ್ದರೆ ನನಗೆ ಈ ವರವನ್ನು ಕೊಡಬೇಕು' ಎಂದನು.

ಅದಕ್ಕೆ ಸಾವಿತ್ರೀದೇವಿಯರು 'ರಾಜನೇ! ಈ ಮೊದಲೇ ನಿನ್ನ ಅಭಿಪ್ರಾಯವನ್ನು ತಿಳಿದುಕೊಂಡು ನಾನು ನಿನಗೆ ಮಕ್ಕಳಾಗುವಂತೆ ಬ್ರಹ್ಮದೇವರ ಹತ್ತಿರ ಕೇಳಿಕೊಂಡೆನು. ಅವರ ಅಭಿಪ್ರಾಯದಂತೆ ನಿನಗೆ ನಾನು ವರವನ್ನೂ ಕೊಡುವೆನು. ತೇಜಸ್ವಿನಿಯಾದ ಮಗಳೊಬ್ಬಳು ಬೇಗನೇ ಜನಿಸುವಳು. ಆಮೇಲೆ ಗಂಡುಮಕ್ಕಳು ಬೇಕೆಂದು ಕೇಳಬೇಡ. ಏಕೆಂದರೆ ಬ್ರಹ್ಮದೇವರ ಆಜ್ಞೆಯಿಂದ ನಾನು ಇದನ್ನು ಹೇಳುತ್ತಾ ಇದ್ದೇನೆ' ಎಂದು ಹೇಳಿದರು. ರಾಜನು ಹಾಗೆಯೇ ಆಗಲಿ ಎಂದು ಅಂಗೀಕರಿಸಿ ಮಗಳು ಬೇಗನೇ ಜನಿಸಲಿ ಎಂದು ಹೇಳಿ ದೇವಿಯರನ್ನು ಪ್ರಾರ್ಥಿಸಿದನು. ಸಾವಿತ್ರೀದೇವಿಯರು ಅಂತರ್ಧಾನವನ್ನು ಹೊಂದಿದರು.

ರಾಜನು ತನ್ನ ನಗರಕ್ಕೆ ಹೋದನು. ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಾ ರಾಜ್ಯದಲ್ಲಿ ವಾಸಮಾಡಿದನು. ಸ್ವಲ್ಪಸಮಯವಾದ ಮೇಲೆ ರಾಜನ ಜ್ಯೇಷ್ಠಪತ್ನಿಯು ಗರ್ಭಿಣಿಯಾದಳು. ಸರಿಯಾದ ಕಾಲದಲ್ಲಿ ರಾಜಪತ್ನಿಯು ಕನ್ಯೆಯನ್ನು ಹಡೆದಳು. ರಾಜನು ಸಂತೋಷದಿಂದ ಮಗಳಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದನು. ಸಾವಿತ್ರೀದೇವಿಯಿಂದ ಕೊಟ್ಟ ಮಗಳಾದ ಪ್ರಯುಕ್ತ ಸಾವಿತ್ರಿಯೆಂದೇ ನಾಮಕರಣವನ್ನು ಮಾಡಿದನು. ರಾಜಪುತ್ರಿಯು ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ಬೆಳೆಯುತ್ತಾ ಬಂದಳು. ಯೌವನವನ್ನು ಹೊಂದಿದಳು. ಬಂಗಾರದ ಬೊಂಬೆಯಂತಿರುವ ಅವಳನ್ನು ನೋಡಿ ದೇವಕನ್ಯೆಯೇ ಬಂದಳು ಎಂದು ತಿಳಿದುಕೊಂಡರು. ಮಹಾತೇಜಸ್ವಿನಿಯಾದ ಪರಮಸುಂದರಿಯಾದ ಅವಳನ್ನು ನೋಡಿ ಅವಳ ತೇಜಸ್ಸನ್ನು ನೋಡಿ ಅವಳನ್ನು ಮದುವೆಯಾಗಲಿಕ್ಕೆ ಭಯದಿಂದ ಒಬ್ಬರೂ ಬರಲಿಲ್ಲ. ಅವಳು ಉಪವಾಸಮಾಡಿ ತಲೆಗೆ ಮಂಗಳಸ್ನಾನಮಾಡಿ ದೇವತೆಗೆ ನಮಸ್ಕಾರಮಾಡಿ ಪರ್ವದಿನದಲ್ಲಿ ಬ್ರಾಹ್ಮಣರಿಂದ ಮಂಗಳವನ್ನು ಹೇಳಿಸಿ ಅವರು ಕೊಟ್ಟ ದೇವರಿಗೆ ಸಮರ್ಪಿಸಿದ ಹೂಗಳನ್ನು ಸ್ವೀಕರಿಸಿ ತಂದೆಯ ಸಮೀಪಕ್ಕೆ ಬಂದು ಪಾದಗಳಿಗೆ ನಮಸ್ಕರಿಸಿ ಕೈಮುಗಿದುಕೊಂಡು ಪಾರ್ಶ್ವದಲ್ಲಿ ನಿಂತಳು.

ಯೌವನದಲ್ಲಿರುವ ದೇವತೆಯಂತೆ ಇರುವ ತನ್ನ ಮಗಳನ್ನು ಒಬ್ಬರೂ

ಮದುವೆಯಾಗಲಿಕ್ಕೆ ಬಾರದೆ ಇರುವುದನ್ನು ನೋಡಿ ರಾಜನು ದುಃಖವುಳ್ಳವನಾದನು. [1]ಮಗಳೊಡನೆ 'ಮಗಳೇ! ಈಗ ನಿನ್ನನ್ನು ಮದುವೆಮಾಡಿಕೊಡುವ ಕಾಲವಾಗಿದೆ. ಆದರೆ ಒಬ್ಬನೂ ವರನೂ ನಿನ್ನನ್ನು ಮದುವೆಯಾಗಲು ಕೇಳಲಿಕ್ಕೆ ಬರಲಿಲ್ಲ. ಆದುದರಿಂದ ನೀನೇ ನಿನಗೆ ಸರಿಯಾದ ಪತಿಯನ್ನು ಹುಡುಕಿಕೊಂಡು ಬಾ. ನಿನಗೆ ಯಾರು ಆಗಬಹುದೆಂದು ತೋರುತ್ತದೋ ಅವನನ್ನು ನನಗೆ ತಿಳಿಸು. ನಾನು ವಿಚಾರಿಸಿ ನಿನಗೆ ಮದುವೆ ಮಾಡುತ್ತೇನೆ. ಧರ್ಮಶಾಸ್ತ್ರದಲ್ಲಿ ಹೇಳಿದ ವಿಷಯವನ್ನು ಬ್ರಾಹ್ಮಣರು ಹೇಳುವುದನ್ನು ಕೇಳಿರುವೆನು. ನೀನೂ ಕೇಳು. ಸರಿಯಾದ ವಯಸ್ಸಿನಲ್ಲಿ ಮಗಳನ್ನು ಮದುವೆಮಾಡಿಕೊಡದೆ ಇದ್ದರೆ ಅವನು ನಿಂದ್ಯನಾಗುವನು. ಗಂಡನು ತನ್ನ ಹೆಂಡತಿಯನ್ನು ಋತುಕಾಲದಲ್ಲಿ ಸಂಸರ್ಗ ಮಾಡದೆ ಇದ್ದರೆ ಅವನೂ ನಿಂದ್ಯನಾಗುವನು. ತಂದೆಯ ಮರಣಾನಂತರದಲ್ಲಿ ತಾಯಿಯನ್ನು ರಕ್ಷಿಸದೆ ಇದ್ದ ಮಗನೂ ನಿಂದ್ಯನಾಗುವನು. ಈ ಮಾತನ್ನು ಕೇಳಿ ನೀನು ನಿನ್ನ ಗಂಡನನ್ನು ಹುಡುಕಿಕೊಂಡು ಬರಲಿಕ್ಕೆ ಹೋಗು. ನಾನು ದೇವತೆಗಳಿಂದ ನಿಂದ್ಯನಾಗದಂತೆ ಮಾಡು' ಎಂದು ಮಗಳೊಡನೆ ಹೇಳಿಹೋಗಲಿಕ್ಕೆ ಬೇಕಾದ ವಾಹನಾದಿಗಳನ್ನು ಸಿದ್ಧಪಡಿಸಿ ಹೋಗಿ ಬಾ ಎಂದನು.

ಸಾವಿತ್ರಿಯು ಸ್ವಲ್ಪ ನಾಚಿಕೆಉಳ್ಳವಳಾಗಿ ತಂದೆಯ ಪಾದಗಳಿಗೆ ನಮಸ್ಕರಿಸಿ ತಂದೆಯ ಅಪ್ಪಣೆಯಂತೆ ಹೊರಟುಹೋದಳು. ಅವಳು ಬಂಗಾರದ ರಥದಲ್ಲಿ ಕೂತುಕೊಂಡು ಮುದುಕರಾದ ಮಂತ್ರಿಗಳಿಂದ ಸಹಿತಳಾಗಿ ಮನೋಹರಗಳಾದ ರಾಜರ್ಷಿಗಳ ತಪೋವನಗಳಲ್ಲಿ ಎಲ್ಲಾ ಸಂಚರಿಸಿದಳು. ದೊಡ್ಡವರಿಗೆಲ್ಲಾ ನಮಸ್ಕರಿಸಿ ಎಲ್ಲಾ ವನಗಳಿಗೂ ಕ್ರಮದಿಂದ ಹೋದಳು. ಎಲ್ಲಾ ತೀರ್ಥಗಳಿಗೂ ಹೋಗುತ್ತಾ ಬ್ರಾಹ್ಮಣರಿಗೆ ಹಣವನ್ನು ಕೊಡುತ್ತಾ ಅಲ್ಲಲ್ಲಿ ಸಂಚರಿಸುತ್ತಾ ಹೋದಳು.

ತರುವಾಯ ಒಂದು ದಿನ ಮದ್ರದೇಶಕ್ಕೆ ನಾರದರು ಬಂದರು. ರಾಜನು ಅವರಿಗೆ ಸತ್ಕರಿಸಿ ನಾರದರೊಡನೆ ಸಭಾಮಧ್ಯದಲ್ಲಿ ಮಾತಾಡುತ್ತಾ ಕೂತಿದ್ದನು. ಆ ಸಮಯದಲ್ಲಿ ಸಾವಿತ್ರಿಯು ಎಲ್ಲಾ ತೀರ್ಥಗಳಲ್ಲಿಯೂ ಸಂಚರಿಸಿ ಮಂತ್ರಿಗಳಿಂದ ಸಹಿತಳಾಗಿ ತಂದೆಯ ಮನೆಗೆ ಬಂದಳು. ನಾರದರೊಡನೆ ಕೂತಿರುವ ತಂದೆಯನ್ನು ನೋಡಿ ಇಬ್ಬರ ಪಾದಗಳಿಗೂ ಶಿರಸಾ ನಮಸ್ಕಾರ ಮಾಡಿದಳು.

ನಾರದರು 'ರಾಜನೇ! ಈ ನಿನ್ನ ಮಗಳು ಎಲ್ಲಿಗೆ ಹೋಗಿದ್ದಳು? ಎಲ್ಲಿಂದ

1. ಮ.ಭಾ. ವ.ಪ. ಅ-293-32 ರಿಂದ 36

ಅಪ್ರದಾತಾ ಪಿತಾ ವಾಚ್ಯೋ ವಾಚ್ಯಶ್ಚಾನುಪಯನ್ ಪತಿಃ ॥ ಇತ್ಯಾದಿ

ಬರುತ್ತಾ ಇದ್ದಾಳೆ? ಇಷ್ಟು ವಯಸ್ಸಾದರೂ ಇವಳಿಗೇಕೆ ಮದುವೆ ಮಾಡಿಲ್ಲ?' ಎಂದರು.

ರಾಜನು 'ಮದುವೆಗಾಗಿಯೇ ಇವಳನ್ನು ಕಳುಹಿಸಿದ್ದೆನು. ಇವಳು ಯಾರನ್ನು ಪತಿಯನ್ನಾಗಿ ನೋಡಿಕೊಂಡು ಬಂದಿದ್ದಾಳೋ ಅದನ್ನು ತಾವು ಸ್ವಲ್ಪ ಕೇಳಬೇಕು' ಎಂದನು.

ತರುವಾಯ ತಂದೆಯು ಮಗಳ ಹತ್ತಿರ ನೀನು ನೋಡಿಕೊಂಡು ಬಂದ ವರನನ್ನು ಹೇಳು ಎಂದು ಹೇಳಲು ಸಾವಿತ್ರಿಯು 'ಪೂರ್ವದಲ್ಲಿ ಸಾಲ್ವದೇಶದಲ್ಲಿ ಧರ್ಮಿಷ್ಟನಾದ ದ್ಯುಮತ್ಸೇನ ಎಂಬ ರಾಜನು ಇದ್ದನು. ಅವನು ಆಮೇಲೆ ಕುರುಡನಾದನು. ರಾಜನು ಕುರುಡನಾಗಲು ಅವನ ಮಗನೂ ಚಿಕ್ಕವನಾಗಿದ್ದ ಕಾರಣ ಈ ಅವಕಾಶವನ್ನು ಅವನ ಹತ್ತಿರದ ರಾಜ್ಯದಲ್ಲಿದ್ದ ಮೊದಲೇ ಶತ್ರುವಾಗಿದ್ದ ರಾಜನು ರಾಜ್ಯವನ್ನು ಅಪಹರಿಸಿದನು. ಇದರಿಂದ ರಾಜನು ಚಿಕ್ಕಕೂಸಿನಿಂದ ಸಹಿತಳಾದ ಹೆಂಡತಿಯಿಂದ ಕೂಡಿಕೊಂಡು ಕಾಡಿಗೆ ಹೋಗಿ ಮಹಾವ್ರತವುಳ್ಳವನಾಗಿ ತಪಸ್ಸು ಮಾಡುತ್ತಿದ್ದನು. ಅವನ ಮಗನು ಊರಲ್ಲಿ ಹುಟ್ಟಿದವನು ಕಾಡಿನಲ್ಲಿ ಬೆಳೆದವನು ಸತ್ಯವಾನ್ ಎಂದು ಹೆಸರುಳ್ಳವನು. ನನಗೆ ಪತಿಯೆಂದು ನಾನು ಮನಸ್ಸಿನಲ್ಲಿ ಅಂಗೀಕರಿಸಿರುವೆನು' ಎಂದಳು.

ಆಗ ನಾರದರು 'ಅಯ್ಯೋ ಪಾಪ ಸಾವಿತ್ರಿಯು ತಿಳಿಯದೆ ಆ ಸತ್ಯವಂತನನ್ನು ಪತಿಯನ್ನಾಗಿ ಅಂಗೀಕರಿಸಿದಳು. ಸತ್ಯವಂತನು ಒಳ್ಳೆ ಗುಣವಂತನೇ ಅವನ ತಂದೆಯೂ ಸತ್ಯವನ್ನೇ ಹೇಳುವನು. ತಾಯಿಯೂ ಸತ್ಯವನ್ನೇ ಹೇಳುವಳು. ಬ್ರಾಹ್ಮಣರು ಅವನಿಗೆ ಸತ್ಯವಾನ್ ಎಂದೇ ಹೆಸರಿಟ್ಟರು. ಚಿಕ್ಕಬಾಲಕನಾಗಿರುವಾಗ ಅವನಿಗೆ ಕುದುರೆಗಳೆಂದರೆ ತುಂಬಾ ಪ್ರಿಯ. ಮಣ್ಣಿನಿಂದ ಕುದುರೆಗಳನ್ನು ಮಾಡುವನು. ಕುದುರೆಗಳ ಚಿತ್ರಗಳನ್ನೇ ಬರಿಯುವನು. ಇದರಿಂದ ಚಿತ್ರಾಶ್ವ ಎಂದೂ ಅವನನ್ನು ಕೂಗುವರು' ಎಂದರು.

ರಾಜನು 'ಆ ರಾಜಪುತ್ರನು ತೇಜಸ್ವಿಯೋ? ಬುದ್ಧಿವಂತನೋ? ಕ್ಷಮಾಗುಣ ವುಳ್ಳವನೋ? ಶೂರನೋ? ಸತ್ಯವುಳ್ಳವನೋ? ತಂದೆತಾಯಿಗಳಲ್ಲಿ ಪ್ರೀತಿ ಉಳ್ಳವನೋ?' ಎಂದು ಕೇಳಿದನು.

ನಾರದರು 'ಸೂರ್ಯನಂತೆ ತೇಜಸ್ವಿಯು. ಬೃಹಸ್ಪತ್ಯಾಚಾರ್ಯರಂತೆ ಬುದ್ಧಿವಂತನು. ಇಂದ್ರದೇವರಂತೆ ವೀರನು. ಭೂಮಿಯಂತೆ ಕ್ಷಮಾಗುಣಉಳ್ಳವನು' ಎಂದರು.

ಅಶ್ವಪತಿರಾಜನು 'ಆ ರಾಜಪುತ್ರನು ದಾನಮಾಡುವ ಸ್ವಭಾವವುಳ್ಳವನೋ? ಬ್ರಾಹ್ಮಣರಲ್ಲಿ ಪ್ರೀತಿ ಉಳ್ಳವನೋ? ರೂಪವಂತನೋ? ಶ್ರೇಷ್ಠನಾಗಿದ್ದಾನೋ?' ಎಂದು ಕೇಳಿದನು.

ನಾರದರು 'ರಂತಿದೇವರಾಜನಂತೆ ದಾನಮಾಡುವವನು. ಶಿಬಿರಾಜನಂತೆ ಬ್ರಾಹ್ಮಣರಲ್ಲಿ ಪ್ರೀತಿಉಳ್ಳವನು. ಸತ್ಯ ಹೇಳುವವನು. ಯಯಾತಿರಾಜನಂತೆ ಶ್ರೇಷ್ಠನಾಗಿರುವನು. ಚಂದ್ರನಂತೆ ಪ್ರಿಯವಾಗಿ ಕಾಣಿಸುವನು. ಅಶ್ವಿನೀದೇವತೆಗಳಂತೆ ರೂಪವಂತನು' ಎಂದರು.

ರಾಜನು 'ಪೂಜ್ಯರೇ! ಅವನನ್ನು ಎಲ್ಲಾ ಗುಣವುಳ್ಳವನು ಎಂದು ಹೇಳುವಿರಿ. ಅವನ ದೋಷಗಳನ್ನೂ ಹೇಳಿರಿ. ಇದ್ದರೆ ಹೇಳಿರಿ' ಎಂದು ಕೇಳಿದನು.

ನಾರದರು 'ಅವನಿಗೆ ಒಂದೇ ದೋಷವಿರುವುದು. ಅದು ಎಲ್ಲಾ ಗುಣಗಳನ್ನೂ ಮರೆಮಾಡುವುದು. ಆ ದೋಷವನ್ನು ಪ್ರಯತ್ನದಿಂದ ಪರಿಹರಿಸಲಿಕ್ಕೆ ಆಗಲಾರದು. ಬೇರೆ ಒಂದೂ ದೋಷವಿಲ್ಲ. 'ಆ ಸತ್ಯವಂತನು ಈ ದಿವಸದಿಂದ ಸರಿಯಾದ ಒಂದು ವರ್ಷವಾಗಲು ಮರಣವನ್ನು ಹೊಂದುವನು' ಎಂದರು.

ಆಗ ರಾಜನು 'ಅಮ್ಮ ಸಾವಿತ್ರಿ! ಅವನು ನಿನಗೆ ಬೇಡ. ಬೇರೆ ವರವನ್ನು ಹುಡುಕು. ಅವನಿಗೆ ಮಹಾದೋಷವಿದೆ. ಎಲ್ಲಾ ಗುಣಗಳನ್ನೂ ಮರೆಮಾಡುವುದಾಗಿದೆ. ಹಾಗೆ ದೊಡ್ಡವರು ನಾರದರು ಹೇಳುತ್ತಾರೆ. ಒಂದು ವರ್ಷದಲ್ಲಿ ಅವನು ಸಾಯುವನಂತೆ' ಎಂದನು.

ಆದಕ್ಕೆ ಸಾವಿತ್ರಿಯು 'ಕಟ್ಟಿಗೆ ಇತ್ಯಾದಿಯು ಒಂದೇ ಸಲ ತುಂಡಾಗಿ ಬೀಳುವುದು. ತುಂಡಾದ ಭಾಗವನ್ನು ಪುನಃ ತುಂಡು ಮಾಡಲಿಕ್ಕೆ ಆಗಲಾರದು. ಹಾಗೆಯೇ ಕನ್ಯೆಯನ್ನೂ ಒಂದೇಬಾರಿ ಕೊಡುವುದು. ಒಂದು ವಸ್ತ್ರವನ್ನು ಒಂದು ಸಲವೇ ದಾನಮಾಡುವುದು. ಈ ಪ್ರಕಾರವಾಗಿ ಈ ಮೂರೂ ಒಂದೇ ಸಲವಾಗತಕ್ಕದ್ದು. ದೀರ್ಘಾಯುಷ್ಯವುಳ್ಳವನಾಗಲೀ ಅಲ್ಪಾಯುಷ್ಯವುಳ್ಳವನಾಗಲೀ ಸುಗುಣನಾಗಲೀ ನಿರ್ಗುಣನಾಗಲೀ ನಾನು ಒಂದು ಸಲ ಪತಿಯೆಂದು ಅಂಗೀಕರಿಸಿಯಾಯಿತು. ಇನ್ನು ಬೇರೊಬ್ಬನನ್ನು ಅಂಗೀಕರಿಸಲಾರೆನು. ಮನಸ್ಸಿನಿಂದ

---

1. ಮಭಾ. ವ.ಪ. ಅ-294-25.

ಏಕೋ ದೋಷೋऽಸ್ತಿ ನಾನ್ಯೋऽಸ್ಯ ಸೋऽದ್ಯ ಪ್ರಭೃತಿ ಸತ್ಯವಾನ್ ।
ಸಂವತ್ಸರೇಣ ಕ್ಷೀಣಾಯುರ್ದೇಹನ್ಯಾಸಂ ಕರಿಷ್ಯತಿ ।

ನಿಶ್ಚಯಮಾಡಿ ಬಾಯಿಯಿಂದ ಆಮೇಲೆ ಹೇಳುವುದು. ಆಮೇಲೆ ಕಾರ್ಯವನ್ನು ಮಾಡುವುದು. ನನಗೆ ಮನಸ್ಸು ಪ್ರಮಾಣವು ಮನಸ್ಸಿನಲ್ಲಿ ಯೋಚನೆಮಾಡಿದಂತೆ ಅವನನ್ನೇ ನಾನು ಮದುವೆಯಾಗುವೆನು' ಎಂದಳು. [1]

ನಾರದರು 'ರಾಜನೇ! ನಿನ್ನ ಮಗಳಾದ ಸಾವಿತ್ರಿಗೆ ಸ್ಥಿರವಾದ ಬುದ್ಧಿಯಿದೆ. ಇವಳನ್ನು ಈ ಧರ್ಮಕಾರ್ಯದಿಂದ ತಪ್ಪಿಸಲಿಕ್ಕೆ ಆಗಲಾರದು. ಸತ್ಯವಂತನಲ್ಲಿ ಇರುವ ಗುಣಗಳು ಇನ್ನೊಬ್ಬರು ಯಾರಲ್ಲೂ ಇಲ್ಲ. ಆದುದರಿಂದ ನಿನ್ನ ಮಗಳನ್ನು ಅವನಿಗೆ ಕೊಡುವುದೇ ಒಳ್ಳೆಯದೆಂದು ತಿಳಿಯುತ್ತೇನೆ' ಎಂದು ಹೇಳಿದರು.

ಅಶ್ವಪತಿರಾಜನು 'ಸಾವಿತ್ರಿಯ ಮನಸ್ಸನ್ನು ಬದಲಾಯಿಸಲು ಆಗಲಾರದು. ತಾವು ಹೇಳಿದ ಮಾತ್ರು ಸತ್ಯವು. ತಾವು ಹೇಳಿದಂತೆಯೇ ಮಾಡುತ್ತೇನೆ. ನನಗೆ ತಾವು ಗುರುಗಳು' ಎಂದನು.

ನಾರದರು 'ರಾಜನೇ! ನಿನ್ನ ಮಗಳಾದ ಸಾವಿತ್ರಿಯ ಮದುವೆಯು [2]ನಿರ್ವಿಘ್ನವಾಗಿ ನಡೆಯಲಿ. ನಿಮಗೆಲ್ಲಾ ಮಂಗಳವಾಗಲಿ. ನಾನು ಹೋಗಿಬರುವೆನು' ಎಂದು ಹೇಳಿ ಆಕಾಶಕ್ಕೆ ಹಾರಿ ಸ್ವರ್ಗಲೋಕಕ್ಕೆ ಹೊರಟುಹೋದರು. ರಾಜನೂ ಮಗಳ ಮದುವೆಗೆ ಬೇಕಾದ ಸಾಮಗ್ರಿಯನ್ನು ಸಂಗ್ರಹಮಾಡಿದನು.

ತರುವಾಯ ನಾರದರು ಹೇಳಿದ ಮಾತನ್ನೇ ಯೋಚಿಸುತ್ತಾ ರಾಜನು ವೃದ್ಧರಾದ ಬ್ರಾಹ್ಮಣರನ್ನು ಋತ್ವಿಕ ಪುರೋಹಿತರನ್ನೂ ಕರೆದುಕೊಂಡು ಒಳ್ಳೇ ದಿವಸವನ್ನು ನೋಡಿ ಮಗಳನ್ನು ಕರೆದುಕೊಂಡು ಪವಿತ್ರವಾದ ಅರಣ್ಯಕ್ಕೆ ಹೋದನು. ದ್ಯುಮತ್ಸೇನನ ಆಶ್ರಮಕ್ಕೆ ಹೋದನು. ಬ್ರಾಹ್ಮಣರಿಂದ ಕೂಡಿಕೊಂಡು ಪಾದಚಾರಿಯಾಗಿಯೇ ರಾಜರ್ಷಿಯಾದ ದ್ಯುಮತ್ಸೇನನ ಬಳಿಗೆ ಹೋದನು. ಅಲ್ಲಿ ಒಂದು ಮರದ ಬುಡದಲ್ಲಿ ದರ್ಭೆಯ ಆಸನದಲ್ಲಿ ಕೂತಿದ್ದ ಕಣ್ಣು ಇಲ್ಲದೆ ಇದ್ದ ಆ

---

1. ಸಕೃದಂಭೋ ನಿಪತತಿ ಸಕೃತ್ಕನ್ಯಾ ಪ್ರದೀಯತೇ ।
ಸಕೃದಾಹ ದದಾನೀತಿ ತ್ರೀಣ್ಯೇತಾನಿ ಸಕೃತ್ ಸಕೃತ್ ॥ 294-26
ದೀರ್ಘಾಯು ರಥಾವಾಲ್ಪಾಯುಃ ಸಗುಣೋ ನಿರ್ಗುಣೋಽಪಿ ವಾ ।
ಸಕೃತ್‌ವೃತೋ ಮಯಾ ಭರ್ತಾ ನ ದ್ವಿತೀಯಂ ವಣೋಮ್ಯಹಮ್ ॥ 27
ಮನಸಾ ನಿಶ್ಚಯಂ ಕೃತ್ವಾ ತತೋ ವಾಚಾಭಿಧೀಯತೇ ।
ಕ್ರಿಯತೇ ಕರ್ಮಣಾ ಪಶ್ಚಾತ್ ಪ್ರಮಾಣಂ ಮೇ ಮನಸ್ತಥಾ ॥ 294-28
2. ಅವಿಘ್ನಮಸ್ತು ಸಾವಿತ್ರ್ಯಾಃ ಪ್ರದಾನೇ ದುಹಿತುಸ್ತವ ॥ 294-32

ರಾಜನನ್ನು ನೋಡಿದನು. ಅಶ್ವಪತಿರಾಜನು ಯಥೋಚಿತವಾಗಿ ದ್ಯುಮತ್ಸೇನನಿಗೆ ಪೂಜೆಯನ್ನು ಮಾಡಿ ಮಿತವಾದ ವಾಣಿಯಿಂದ ನಾನು ಅಶ್ವಪತಿರಾಜನು ಬಂದಿದ್ದೇನೆ ಎಂದು ತಿಳಿಸಿದನು. ಧರ್ಮವನ್ನು ತಿಳಿದ ದ್ಯುಮತ್ಸೇನನು ಅಶ್ವಪತಿರಾಜನಿಗೆ ಸತ್ಕಾರವನ್ನು ಮಾಡಿ ಬಂದಿರುವ ಕಾರ್ಯವೇನೆಂದು ಕೇಳಿದನು. ಅಶ್ವಪತಿರಾಜನು ತನ್ನ ಅಭಿಪ್ರಾಯವನ್ನೆಲ್ಲಾ ತಿಳಿಸಿ ಇವಳು ನನ್ನ ಸಾವಿತ್ರಿಯೆಂಬ ಮಗಳು. ನೀನು ಇವಳನ್ನು ಸೊಸೆಯನ್ನಾಗಿ ಸ್ವೀಕರಿಸಬೇಕು ಎಂದನು.

ಆಗ ದ್ಯುಮತ್ಸೇನನು 'ನಾವು ರಾಜ್ಯ ಭ್ರಷ್ಟರಾಗಿದ್ದೇವೆ. ಕಾಡಿನಲ್ಲಿ ಇದ್ದುಕೊಂಡು ತಪಸ್ಸು ಮಾಡುತ್ತಾ ಇದ್ದೇವೆ. ಕಾಡಿನಲ್ಲಿ ದುಃಖಪಡಲಿಕ್ಕೆ ಅನರ್ಹಳಾದ ನಿನ್ನ ಮಗಳು ಕಾಡಿನಲ್ಲಿ ಈ ದುಃಖವನ್ನು ಹೇಗೆ ಸಹಿಸುವಳು'? ಎಂದು ಹೇಳಿದನು.

ಆಗ ಅಶ್ವಪತಿರಾಜನು 'ಸುಖವೂ ದುಃಖವೂ ಬರುತ್ತದೆ ಹೋಗುತ್ತದೆ ಎಂದು ನಾನೂ ನನ್ನ ಮಗಳೂ ತಿಳಿದೇ ಇದ್ದೇವೆ. ಆದುದರಿಂದ ನಮ್ಮಂತವರಲ್ಲಿ ಇಂತಹ ಮಾತಾಡಬಾರದು. ನಾನು ನಿಮ್ಮ ಮಗನಿಗೆ ಮಗಳನ್ನು ಕೊಡಬೇಕೆಂದು ನಿಶ್ಚಯಮಾಡಿಕೊಂಡೇ ಬಂದಿರುತ್ತೇನೆ. ಸ್ನೇಹದಿಂದ ನಮಸ್ಕರಿಸಿ ಕೇಳಿಕೊಳ್ಳುತ್ತೇನೆ. ನನ್ನ ಆಸೆಯನ್ನು ನಾಶಮಾಡಬಾರದು.ಪ್ರೇಮದಿಂದ ಬಂದಿರುವ ನನ್ನನ್ನು ನಿರಾಕರಿಸ ಬಾರದು' ಎಂದನು. ಮತ್ತು 'ನಿನಗೂ ನನಗೂ ಸಂಬಂಧವು ಅನುಕೂಲವಾಗಿದೆ. ನನ್ನ ಮಗಳನ್ನು ನಿನ್ನ ಮಗನಾದ ಸತ್ಯವಂತನಿಗೆ ಹೆಂಡತಿಯನ್ನಾಗಿಯೂ ನಿನಗೆ ಸೊಸೆಯನ್ನಾಗಿಯೂ ಸ್ವೀಕರಿಸು' ಎಂದನು.

ಅದಕ್ಕೆ ದ್ಯುಮತ್ಸೇನನು ಮೊದಲೇ ನಿನ್ನ ಸಂಬಂಧವನ್ನು ಮಾಡಿಕೊಳ್ಳ ಬೇಕೆಂದು ನನಗೆ ಆಸೆಯಿತ್ತು. ಆದರೆ ನನಗೆ ರಾಜ್ಯವಿಲ್ಲವೆಂದು ಸ್ವಲ್ಪ ವಿಚಾರ ಮಾಡಿದೆನು. ನಾನು ಮೊದಲೇ ಅಪೇಕ್ಷಿಸಿದ ಅಭಿಪ್ರಾಯವು ಈ ದಿನವೇ ಆಗಿಹೋಗಲಿ. ನೀನು ನನಗೆ ಬೇಕಾದ ಅತಿಥಿಯಾಗಿರುವಿ' ಎಂದನು. ತರುವಾಯ ಆಶ್ರಮವಾಸಿಗಳಾದ ಋಷಿಗಳನ್ನು ಕರೆದು ಶಾಸ್ತ್ರದಲ್ಲಿ ಹೇಳಿದಂತೆ ಸಾವಿತ್ರಿ ಸತ್ಯವಂತರಿಗೆ ಮದುವೆ ಮಾಡಿದರು. ಅಶ್ವಪತಿರಾಜನು ಮಗಳನ್ನು ಕೊಟ್ಟು ಬೇಕಾದ ಪಾತ್ರೆ ಮೊದಲಾದವನ್ನೂ ಕೊಟ್ಟು ಪರಮಸಂತೋಷದಿಂದ ತನ್ನ ಮನೆಗೇ ಬಂದನು. ಸತ್ಯವಂತನೂ ಒಳ್ಳೇ ಗುಣವುಳ್ಳವಳಾದ ಹೆಂಡತಿಯನ್ನು ಹೊಂದಿ ಸಂತೋಷ ಪಟ್ಟನು. ಸಾವಿತ್ರಿಯೂ ತನ್ನ ಮನಸ್ಸಿಗೆ ಒಪ್ಪಿದ ಗಂಡನನ್ನು ಹೊಂದಿ ಸಂತೋಷವನ್ನು ಹೊಂದಿದಳು. ತಂದೆಯು ಹೊರಟುಹೋದ ಮೇಲೆ ಎಲ್ಲಾ ಆಭರಣಗಳನ್ನೂ ತೆಗೆದಿಟ್ಟು ಋಷಿಪತ್ನಿಗಳು ಉಡುವ ಕಾವಿಬಣ್ಣದ ನಾರುವಸ್ತ್ರವನ್ನು ಧರಿಸಿದಳು. ಅತ್ತೆಗೆ

ಪಾದಸೇವೆಯೇ ಮೊದಲಾದ ಸೇವೆಗಳಿಂದಲೂ ಮಾವನಿಗೆ ದೇವತೆಗಳಿಗೆ ಪೂಜಿಸುವಂತೆ ಸತ್ಕಾರಮಾಡುವುದರಿಂದಲೂ ಮಿತವಚನಗಳಿಂದಲೂ, ಗಂಡನಿಗೆ ಪ್ರಿಯವಚನಗಳಿಂದ ಏಕಾಂತದಲ್ಲಿ ಉಪಚಾರಗಳಿಂದಲೂ ಸಂತೋಷಪಡಿಸಿದಳು. ಹೀಗೆ ಆಶ್ರಮದಲ್ಲಿ ತಪಸ್ಸು ಮಾಡುತ್ತಾ ಅವರು ವಾಸಮಾಡುತ್ತಿರಲು ಕೆಲವು ಸಮಯವು ಕಳೆಯಿತು. ಸಾವಿತ್ರಿಗೆ ಮಾತ್ರ ನಾರದರು ಹೇಳಿದ ಮಾತು ಹಾಗೆಯೇ ಮನಸ್ಸಿನಲ್ಲಿಯೇ ಇದ್ದಿತು. ಆದರಿಂದ ರಾತ್ರಿ ಹಗಲು ದುಃಖಪಡುತ್ತಿದ್ದಳು.

ಹೀಗೆಯೇ ಬಹುದಿವಸಗಳು ಕಳೆದುಹೋದಮೇಲೆ ನಾರದರು ಹೇಳಿದ ಸತ್ಯವಾನನು ಸಾಯಬೇಕಾದ ದಿವಸವು ಸಮೀಪಿಸಿತು. ನಾರದರು ಹೇಳಿದ ದಿವಸವನ್ನು ಎಣಿಸುತ್ತಲೇ ಇದ್ದಳು. ಎಣಿಸಿ ಇನ್ನು ನಾಲ್ಕನೇ ದಿವಸವೇ ಸಾಯುವ ದಿವಸವೆಂದು ತಿಳಿದಳು. ಮೂರುದಿವಸ ಉಪವಾಸ ವ್ರತವನ್ನು ಕೈಗೊಂಡಳು. ಇದರಿಂದ ಗಂಡನ ಆಯುಷ್ಯವು ಹೆಚ್ಚುತ್ತದೆಂದು ವ್ರತವನ್ನು ಮಾಡಿದಳು. ಮಾವನಾದ ರಾಜನು ಸಾವಿತ್ರಿಯ ಈ ವ್ರತವನ್ನು ಕೇಳಿ ತುಂಬಾ ದುಃಖವುಳ್ಳವನಾಗಿ ಸಾವಿತ್ರಿಯನ್ನು ಸಮಾಧಾನಪಡಿಸುತ್ತಾ 'ಅಮ್ಮ ರಾಜಪುತ್ರಿ! ತುಂಬಾ ಕಠಿಣವಾದ ವ್ರತವನ್ನು ಆರಂಭಿಸಿರುವಿಯಲ್ಲಾ! ಮೂರು ದಿವಸ ಉಪವಾಸವೆಂದರೆ ಸಾಧ್ಯವಾಗದಲ್ಲಾ' ಎಂದನು.

ಆದಕ್ಕೆ ಸಾವಿತ್ರಿಯು 'ಇದಕ್ಕೆ ನೀವು ದುಃಖಪಡಬಾರದು. ನಾನು ಈ ವ್ರತವನ್ನು ಮಾಡಿ ಮುಗಿಸುತ್ತೇನೆ. ನಾನು ಮನಸ್ಸಿನಲ್ಲಿ ನಿಶ್ಚಯಿಸಿದ್ದೇನೆ. ಮನಸ್ಸು ದೃಢವಾಗಿದ್ದರೆ ಎಲ್ಲವೂ ಆಗುತ್ತದೆ' ಎಂದಳು.

ದ್ಯುಮತ್ಸೇನನು 'ವ್ರತವನ್ನು ಮಾಡಬೇಡ ಎಂದು ಹೇಳಲು ನಾನು ಶಕ್ತನಲ್ಲ, ನನ್ನಂತವನು ವ್ರತವನ್ನು ಹೇಗಾದರೂ ಮಾಡಿ ಮುಗಿಸು ಎಂದೇ ಹೇಳಬೇಕಾಗಿದೆ. ಎಂದರೆ ಒಳ್ಳೇ ಕೆಲಸಕ್ಕೆ ವಿಘ್ನಮಾಡುವುದು ಸರಿಯಲ್ಲ' ಎಂದನು. ಈರೀತಿಯಾಗಿ ಹೇಳಿ ಸುಮ್ಮನೆ ಆದನು. ಸಾವಿತ್ರಿಗೆ ಒಂದೇ ಯೋಚನೆ. ಎಲ್ಲಿ ಹೋದರೂ ಅಲ್ಲಿಯೇ ಕಟ್ಟಿಗೆಯ ಬೊಂಬೆಯಂತೆ ನಿಂತುಬಿಡುವಳು. ಮೂರುದಿವಸವೂ ಕಳೆಯಿತು. ನಾಳೆ ಮರಣ ಎಂದು ಸಾವಿತ್ರಿಯು ಬಹುದುಃಖದಿಂದ ಆ ರಾತ್ರಿಯನ್ನು ಕಳೆದಳು. ನಾರದರು ಹೇಳಿದ ದಿವಸವು ಇದೇ ಎಂದು ಹೇಳಿಕೊಂಡು ಸಾವಿತ್ರಿಯು ಸೂರ್ಯನು ಉದಯಿಸಿ ಸ್ವಲ್ಪ ಮೇಲೆ ಬರಲು ಅಗ್ನಿಯಲ್ಲಿ ಹೋಮಮಾಡಿ ಬೆಳಿಗ್ಗೆ ಮಾಡುವ ಕಾರ್ಯಗಳನ್ನೆಲ್ಲಾ ತೀರಿಸಿಕೊಂಡಳು. ತರುವಾಯ ವ್ರತವನ್ನು ಸಮಾಪ್ತಿಗೊಳಿಸಿ ಸ್ನಾನಮಾಡಿ ಶುದ್ಧಳಾಗಿ ಎಲ್ಲಾ ವೃದ್ಧಬ್ರಾಹ್ಮಣರಿಗೂ ಅತ್ತೆಗೂ

ಮಾವನಿಗೂ ಕ್ರಮದಿಂದ ನಮಸ್ಕಾರವನ್ನು ಮಾಡಿ ಕೈಮುಗಿದುಕೊಂಡು ನಿಂತುಕೊಂಡಳು. ತಪೋವನದಲ್ಲಿ ಎಲ್ಲಾ ತಪಸ್ವಿಗಳೂ ಸಾವಿತ್ರಿಗೆ ದೀರ್ಘ ಸೌಮಂಗಲ್ಯ ಉಂಟಾಗುವಂತೆ ಆಶೀರ್ವದಿಸಿದರು. ಹಾಗೆಯೇ ಆಗಲಿ ಎನ್ನುತ್ತಾ ಸಾವಿತ್ರಿಯು ಮನಸ್ಸಿನಲ್ಲೇ ಅವರ ಮಾತನ್ನೆಲ್ಲಾ ಅಂಗೀಕರಿಸಿದಳು. ನಾರದರು ಹೇಳಿದ ಮುಹೂರ್ತವನ್ನು ನಿರೀಕ್ಷಿಸುತ್ತಾ ನಾರದರ ಮಾತನ್ನು ಯೋಚಿಸುತ್ತಾ ದುಃಖಪಡುತ್ತಾ ಇದ್ದಳು. ತರುವಾಯ ಏಕಾಂತದಲ್ಲಿ ಇದ್ದ ಸಾವಿತ್ರಿಯ ಬಳಿಗೆ ಅತ್ತೆಮಾವಂದಿರು ಬಂದು 'ಅಮ್ಮ ಸಾವಿತ್ರಿ! ನೀನು ಮಾಡಿದ ವ್ರತವು ಮುಗಿಯಿತಲ್ಲ, ಇನ್ನು ಊಟ ಮಾಡಮ್ಮ' ಎಂದರು. ಅದಕ್ಕೆ ಸಾವಿತ್ರಿಯು 'ಸೂರ್ಯನು ಮುಳುಗಿದ ಮೇಲೆ ಭೋಜನ ಮಾಡುವುದೆಂದು ಯೋಚನೆ ಮಾಡಿದ್ದೇನೆ. ಹಾಗೆ ಸಂಕಲ್ಪ ಮಾಡಿದ್ದೇನೆ' ಎಂದಳು. ಈರೀತಿಯಾಗಿ ಸಾವಿತ್ರಿಯ ಹತ್ತಿರ ಭೋಜನದ ವಿಷಯ ಮಾತಾಡುತ್ತಿರುವಾಗ ಸತ್ಯವಾನನು ತನ್ನ ಹೆಗಲಮೇಲೆ ಕೊಡಲಿಯನ್ನು ಇಟ್ಟುಕೊಂಡು ಕಾಡಿಗೆ ಹೊರಟನು. ಆಗ ಸಾವಿತ್ರಿಯು ಗಂಡನೊಡನೆ 'ನೀವೊಬ್ಬರೇ ಕಾಡಿಗೆ ಹೋಗುವುದು ಬೇಡ. ನಾನೂ ನಿಮ್ಮೊಡನೆ ಬರುತ್ತೇನೆ. ನಿಮ್ಮನ್ನು ಬಿಟ್ಟು ಇರಲಿಕ್ಕೆ ನನಗೆ ಮನಸ್ಸು ಬರುವುದಿಲ್ಲ' ಎಂದಳು.

ಸತ್ಯವಾನನು 'ಸುಂದರಿ! ನೀನು ಇಷ್ಟರವರೆಗೆ ಕಾಡಿಗೆ ಒಂದದ್ದಿಲ್ಲ. ಹೋಗುವ ದಾರಿ ತುಂಬಾ ಕಷ್ಟಕರವಾಗಿದೆ. ಉಪವಾಸಮಾಡಿ ಕ್ಷೀಣಳಾಗಿದ್ದಿ. ಹೇಗೆ ಕಾಲಿನಿಂದ ನಡೆದುಕೊಂಡು ಬರುವಿ?' ಎಂದನು.

ಸಾವಿತ್ರಿಯು 'ನನಗೆ ಉಪವಾಸದಿಂದ ಶ್ರಮವೇ ಇಲ್ಲ. ನಿಮ್ಮ ಒಟ್ಟಿಗೆ ಬರಬೇಕೆಂದು ಆಸೆಯುಳ್ಳ ನನ್ನನ್ನು ನೀವು ನಿಷೇಧಮಾಡಬಾರದು' ಎಂದಳು.

ಸತ್ಯವಾನನು 'ನಿನಗೆ ಬರಬೇಕೆಂದು ಅಷ್ಟು ಉತ್ಸಾಹವಿದ್ದರೆ ನಿನಗೆ ಪ್ರಿಯವನ್ನು ಮಾಡುವೆನು. ಆದರೆ ಅತ್ತೆಮಾವಂದಿರ ಹತ್ತಿರ ಕೇಳಿಕೊ. ಕೇಳದೆ ಕರೆದುಕೊಂಡು ಹೋದೆನೆಂದು ನನಗೆ ದೋಷವು ಬರಬಾರದು' ಎಂದನು.

ಆಗ ಸಾವಿತ್ರಿಯು ಅತ್ತೆಗೂ ಮಾವನಿಗೂ ನಮಸ್ಕರಿಸಿ 'ನನ್ನ ಪತಿಗಳು ಫಲಗಳನ್ನು ತರಲಿಕ್ಕೆ ಕಾಡಿಗೆ ಹೋಗುತ್ತಾರೆ. ಅವರ ಒಟ್ಟಿಗೆ ಹೋಗಲಿಕ್ಕೆ ನೀವು ನನಗೆ ಅನುಜ್ಞೆಯನ್ನು ಕೊಡಬೇಕು. ಅವರನ್ನು ಬಿಟ್ಟಿರಲಿಕ್ಕೆ ನನಗೆ ಸಾಧ್ಯವಾಗುವುದಿಲ್ಲ. ಅಗ್ನಿಹೋತ್ರಕ್ಕೆ ಬೇಕಾದ ವಸ್ತುವನ್ನು ತರಲಿಕ್ಕೆ ಹೋಗುತ್ತಾರೆ. ಆದುದರಿಂದ ಹೋಗುವುದು ಬೇಡ ಎಂದು ಹೇಳುವುದು ಸರಿಯಲ್ಲ. ನಾನು ಇಲ್ಲಿಗೆ ಬಂದು ಒಂದುವರ್ಷಕ್ಕೆ ಸ್ವಲ್ಪಮಾತ್ರ ಕಡಿಮೆಯಾಗಿದೆ. ಇಷ್ಟರವರೆಗೆ ನಾನು ಆಶ್ರಮದಿಂದ

ಎಲ್ಲಿಗೂ ಹೋದದ್ದೇ ಇಲ್ಲ. ಹೂಗಳಿಂದ ಮನೋಹರವಾದ ವನವನ್ನು ನೋಡಬೇಕೆಂದು ನನಗೆ ತುಂಬಾ ಆಸೆಯುಂಟಾಗಿದೆ' ಎಂದು ಹೇಳಿದಳು.

ದ್ಯುಮತ್ಸೇನನು 'ನನ್ನ ಸೊಸೆಯಾದ ಸಾವಿತ್ರಿಯು ತಂದೆಯು ಮದುವೆ ಮಾಡಿಕೊಟ್ಟು ಹೋದಮೇಲೆ ಇಷ್ಟರವರೆಗೂ ನನ್ನ ಹತ್ತಿರ ಒಂದು ಕೇಳಿದ್ದೂ ಜ್ಞಾಪಕವಿಲ್ಲ. ಆದುದರಿಂದ ನನ್ನ ಸೊಯೆಯು ಈ ಅಭಿಲಾಷೆಯನ್ನು ಹೊಂದಲಿ. ಮಗು. ಸತ್ಯವಾನನು ಹೋಗುವ ದಾರಿಯಲ್ಲಿ ಜಾಗ್ರತೆಯಿಂದ ಹೋಗು' ಎಂದನು.

ಸಾವಿತ್ರಿಯು ಅತ್ತೆಮಾವಂದಿರಿಂದ ಇಬ್ಬರಿಂದಲೂ ಅನುಜ್ಞೆಯನ್ನು ಪಡೆಯುವವಳಾಗಿ ಗಂಡನೊಡನೆ ಹೊರಗೆ ನಗುತ್ತಾ ಮನಸ್ಸಿನಲ್ಲೇ ದುಃಖಪಡುತ್ತಾ ಹೋದಳು. ಅವಳು ವಿಚಿತ್ರಗಳಾದ ಮನೋಹರಗಳಾದ ನವಿಲುಪಕ್ಷಿಗಳಿಂದ ಕೂಡಿದ ಕಾಡುಗಳನ್ನು ನೋಡುತ್ತಾ ಹೋದಳು. ಅನೇಕ ನದಿಗಳನ್ನೂ ಪುಷ್ಪಗಳಿಂದ ಮರಗಳನ್ನೂ ಸಾವಿತ್ರಿಗೆ ಸತ್ಯವಾನನು ನೋಡು ಎಂದು ಹೇಳಿದನು. ಸಾವಿತ್ರಿಯು ಸರ್ವಾವಸ್ಥೆಯಲ್ಲಿ ಗಂಡನನ್ನೇ ನೋಡುತ್ತಾ ನಾರದರ ಮಾತನ್ನೂ ಸ್ಮರಿಸಿಕೊಂಡು ಗಂಡನು ಸತ್ತನೆಂದು ಭಾವನೆ ಮಾಡಿದಳು. ಮೆಲ್ಲನೆ ಗಂಡನ ಹಿಂದೆಯೇ ಹೋಗುತ್ತಿದ್ದಳು. ಯಾವಾಗ ಆಕಾಲವು ಬರುತ್ತದೆ ಎಂದು ನಿರೀಕ್ಷಿಸುತ್ತಿದ್ದಳು. ಅವಳ ಎದೆಯು ಎರಡಾಗಿ ಸೀಳಿಹೋಗುವಂತೆ ಆಗುತ್ತಿತ್ತು.

ತರುವಾಯ ಪತ್ನಿಯಿಂದ ಸಹಿತನಾದ ಸತ್ಯವಾನನು ಹಣ್ಣುಗಳನ್ನು ಕೊಯಿದು ಬುಟ್ಟಿಯಲ್ಲಿ ತುಂಬಿಸಿದನು. ಆಮೇಲೆ ಕಟ್ಟಿಗೆಯನ್ನು ಕಡಿದನು. ಕಟ್ಟಿಗೆಯನ್ನು ಕಡಿಯುತ್ತಿರುವಂತೆ ಮೈಯೆಲ್ಲಾ ಬೆವರುಬಂದಿತು. ಹಾಗೆಯೇ ತುಂಬಾ ತಲೆನೋವಾಯಿತು. ಸಾವಿತ್ರಿಯ ಹತ್ತಿರಕ್ಕೆ ಬಂದು ಶ್ರಮವುಳ್ಳವನಾಗಿ 'ಸಾವಿತ್ರಿ! ಕಟ್ಟಿಗೆ ಕಡಿದ ಶ್ರಮದಿಂದ ನನಗೆ ತಲೆನೋವಾಗುತ್ತಿದೆ. ಎಲ್ಲಾ ಅಂಗಗಳಲ್ಲಿಯೂ ಎದೆಯಲ್ಲಿಯೂ ವೇದನೆಯಾಗುತ್ತಿದೆ. ನನಗೆ ಸೌಖ್ಯವಿಲ್ಲದಂತೆ ಕಾಣಿಸುತ್ತದೆ. ನನ್ನ ತಲೆಗೆ ಶೂಲದಿಂದ ಕುಕ್ಕುವಂತೆ ಆಗುತ್ತಿದೆ. ದಿಕ್ಕುಗಳೆಲ್ಲಾ ತಿರುಗುವಂತೆ ಕಾಣಿಸುತ್ತಿವೆ. ನನ್ನ ತಲೆಯೂ ತಿರುಗುತ್ತದೆ. ನನಗೆ ಮಲಗಬೇಕೆಂದು ತೋರುತ್ತದೆ. ನಿಲ್ಲಲಿಕ್ಕೆ ಶಕ್ತಿಯಿಲ್ಲ' ಎಂದನು. ಆಗ ಸಾವಿತ್ರಿಯು ಗಂಡನ ಸಮೀಪಕ್ಕೆ ಬಂದು ಗಂಡನ ತಲೆಯನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ನೆಲದಲ್ಲಿ ಕೂತುಕೊಂಡಳು. ಸತ್ಯವಾನನು ಹಾಗೆಯೇ ಮಲಗಿಬಿಟ್ಟನು.

ತರುವಾಯ ಸಾವಿತ್ರಿಯು ನಾರದರ ಮಾತನ್ನು ಸ್ಮರಿಸಿಕೊಂಡು ದಿವಸಮೂಹರ್ತ ಕ್ಷಣಗಳನ್ನೆಲ್ಲಾ ಎಣಿಸಿದಳು. 'ಆಹಾ! ನಾರದರು ಹೇಳಿದ

ಸಮಯವು ಇದೇ' ಎಂದು ಯೋಚಿಸಿದಳು. ಒಂದು ಮುಹೂರ್ತದಲ್ಲೇ ಕೆಂಪು ವಸ್ತ್ರವನ್ನು ಧರಿಸಿದ್ದ ತಲೆಯಲ್ಲಿ ಕಿರೀಟವನ್ನು ಇಟ್ಟುಕೊಂಡಿದ್ದ ಸೂರ್ಯನಂತೆ ತೇಜಸ್ಸಿನಿಂದ ಕೂಡಿದ ನೀಲಬಣ್ಣವುಳ್ಳ ಕೆಂಪುಕಣ್ಣುಳ್ಳ ಕೈಯಲ್ಲಿ ಹಗ್ಗವನ್ನು ಹಿಡಿದುಕೊಂಡಿದ್ದ ಭಯಂಕರವಾದ ಸತ್ಯವಾನನ ಸಮೀಪದಲ್ಲೇ ನಿಂತು ಅವನನ್ನೇ ಒಬ್ಬ ಪುರುಷನನ್ನು ನೋಡಿದಳು. ಆ ಪುರುಷನನ್ನು ನೋಡಿ ಸಾವಿತ್ರಿಯು ಗಂಡನ ತಲೆಯನ್ನು ಮೆಲ್ಲನೆ ನೆಲದಲ್ಲಿ ಇಟ್ಟು ತಾನು ಎದ್ದು ನಿಂತಳು. ಕೈಮುಗಿದುಕೊಂಡು ತುಂಬಾ ದುಃಖವುಳ್ಳವಳಾಗಿ ಎದೆ ನಡುಗುತ್ತಾ ಇರಲು 'ನೀವು ದೇವತೆಯೆಂದು ನಾನು ತಿಳಿದಿದ್ದೇನೆ. ಇದು ಮನುಷ್ಯರ ದೇಹವಲ್ಲ. ನೀವು ಯಾರು? ಏನು ಮಾಡಲಿಕ್ಕೆ ಬಂದಿರುವಿರಿ? ಎಂಬುದನ್ನು ಹೇಳಬೇಕು' ಎಂದಳು.

ಆಗ ಪುರುಷನು 'ಸಾವಿತ್ರಿ! ನೀನು ಪತಿವ್ರತೆಯಾಗಿದ್ದಿ. ತಪಸ್ಸು ಮಾಡಿದವಳಾಗಿದ್ದಿ. ಆದುದರಿಂದ ನಿನ್ನೊಡನೆ ಮಾತಾಡುತ್ತೇನೆ. ನಾನು ಯಮ ಎಂದು ತಿಳಿ. ನಿನ್ನ ಗಂಡನ ಆಯುಷ್ಯವು ಮುಗಿಯಿತು. ಆದುದರಿಂದ ಅವನನ್ನು ಕಟ್ಟಿ ಕರಕೊಂಡು ಹೋಗುತ್ತೇನೆ. ಅದಕ್ಕೇ ನಾನು ಬಂದಿರುವೆನು ಎಂದರು.

ಸಾವಿತ್ರಿಯು 'ತಮ್ಮ ದೂತರು ಮನುಷ್ಯರನ್ನು ಕರೆದುಕೊಂಡು ಹೋಗಲಿಕ್ಕೆ ಬರುತ್ತಾರೆ ಎಂದು ಕೇಳಿರುವೆನು. ತಾವೇ ಯಾಕೆ ಬರೋಣವಾಯಿತು' ಎಂದು ಕೇಳಿದಳು.

ಯಮದೇವರು [1]**'ಇವನು ಧರ್ಮಯುಕ್ತನು. ರೂಪವಂತನು. ತುಂಬಾ ಗುಣಗಳುಳ್ಳವನು. ಆದುದರಿಂದ ನನ್ನ ದೂತರು ಕರೆದುಕೊಂಡು ಹೋಗಲಿಕ್ಕೆ ಬರುವುದು ಸರಿಯಲ್ಲವೆಂದು ನಾನೇ ಬಂದಿರುವೆನು'** ಎಂದು ಹೇಳಿ ಯಮದೇವರು ಸತ್ಯವಾನನ ದೇಹದಿಂದ ಒಂದು ಅಂಗುಷ್ಠದಷ್ಟು ದೊಡ್ಡದಾಗಿರುವ ಜೀವನನ್ನು ಹಗ್ಗದಿಂದ ಕಟ್ಟಿ ಎಳೆದರು. ತರುವಾಯ ಸತ್ಯವಾನನ ದೇಹವು ಶ್ವಾಸವು ನಿಂತು ಹೋಗಿ ಚೇಷ್ಟಾರಹಿತವಾಗಿ ಅಪ್ರಿಯವಾಗಿ ಕಂಡಿತು. ಎಂದರೆ ಹೆಣದ ರೂಪವು ಉಂಟಾಯಿತು. ಯಮದೇವರು ಜೀವನನ್ನು ಹಗ್ಗದಿಂದ ಕಟ್ಟಿಕೊಂಡು ದಕ್ಷಿಣದಿಕ್ಕಿಗೆ ಹೋದರು. ಸಾವಿತ್ರಿಯೂ ತುಂಬಾ ದುಃಖವುಳ್ಳವಳಾಗಿ ಯಮದೇವರ ಹಿಂದೆ ಹೋದಳು.

---

1. ಅಯಂ ಚ ಧರ್ಮಸಂಯುಕ್ತೋ ರೂಪವಾನ್ ಗುಣಸಾಗರಃ । ಅ.297-16
ನಾರ್ಹೋ ಮತ್ಪುರುಷೈರ್ನೇತು ಮತೋऽಸ್ಮಿ ಸ್ವಯಮಾಗತಃ ॥

ಯಮದೇವರು 'ಸಾವಿತ್ರಿ! ನೀನು ಹಿಂದೆ ಹೋಗು. ನಿನ್ನ ಗಂಡನಿಗೆ ಉತ್ತರಕ್ರಿಯೆಯನ್ನು ಮಾಡು. ಗಂಡನ ಋಣವನ್ನು ಪರಿಹಾರಮಾಡಿಕೊಂಡಿರುವಿ. ಎಷ್ಟು ದೂರ ಬರಬೇಕೋ ಅಷ್ಟು ದೂರ ಬಂದಾಯಿತು. ಇನ್ನು ಹಿಂದಿರುಗು' ಎಂದರು.

ಸಾವಿತ್ರಿಯು 'ನನ್ನ ಗಂಡನನ್ನು ಕರೆದುಕೊಂಡು ನೀವು ಎಲ್ಲಿಗೆ ಹೋಗುವಿರೋ ಅಲ್ಲಿಗೆ ನಾನು ಬರಬೇಕಾದ್ದು ಸನಾತನಧಮವು. ತಪಸ್ಸಿನಿಂದ ಗುರುಭಕ್ತಿಯಿಂದ ಪತಿಯಮೇಲಿನ ಸ್ನೇಹದಿಂದ ನಾನು ಮಾಡಿರುವ ವ್ರತದಿಂದ ನಿಮ್ಮ ಅನುಗ್ರಹದಿಂದ ನನ್ನ ಗಮನಕ್ಕೆ ತಡೆಯೇ ಇಲ್ಲ. ಜ್ಞಾನಿಗಳು ಏಳು ಹೆಜ್ಜೆ ಒಟ್ಟಿಗೆ ನಡೆದರೆ ಮಿತ್ರತ್ವವು ಏರ್ಪಡುವುದು ಎನ್ನುವರು. ಹಾಗೆಯೇ ನಾನು ಮಿತ್ರತ್ವವನ್ನು ಮುಂದಿಟ್ಟುಕೊಂಡು ಸ್ವಲ್ಪ ಹೇಳುತ್ತೇನೆ. ಕೇಳಿರಿ. ಇಂದ್ರಿಯಜಯವುಳ್ಳವರೇ ವನದಲ್ಲಿಯೋ ಗ್ರಾಮ ದಲ್ಲಿಯೋ ಯಜ್ಞವೇ ಮೊದಲಾದ ಧರ್ಮಕಾರ್ಯವನ್ನು ಮಾಡುವರು. ಗುರುಕುಲ ವಾಸವನ್ನೂ, ಸನ್ಯಾಸವನ್ನೂ ಜ್ಞಾನವನ್ನು ಹೊಂದಬೇಕೆಂದು ಆಶ್ರಯಿಸುವರು. ಬ್ರಹ್ಮಚರ್ಯ ಗೃಹಸ್ಥಧರ್ಮ ವಾನಪ್ರಸ್ಥ ಸನ್ಯಾಸ ಇವುಗಳಲ್ಲಿ ಯಾವ ಆಶ್ರಮದ ಧರ್ಮವನ್ನಾದರೂ ಡಂಭವಿಲ್ಲದೆ ಶ್ರದ್ಧೆಯಿಂದ ಮಾಡಿದರೆ ಜ್ಞಾನವನ್ನು ಹೊಂದ ಬಹುದು. ನಾನು ಬ್ರಹ್ಮಚರ್ಯ ಸನ್ಯಾಸಗಳನ್ನು ಇಚ್ಛಿಸುವುದಿಲ್ಲ. ಗೃಹಸ್ಥಧರ್ಮದಿಂದ ಇದ್ದುಕೊಂಡೇ ಜ್ಞಾನವನ್ನು ಹೊಂದಲು ಬಯಸುವೆನು. ನನ್ನ ಗಂಡನನ್ನು ಕರಕೊಂಡು ಹೋಗಿ ನಮ್ಮ ಗೃಹಸ್ಥಧರ್ಮವನ್ನು ನಾಶಮಾಡಬಾರದು' ಎಂದು ಹೇಳಿದಳು. (ಅ.297-21 ರಿಂದ 25)

ಯಮದೇವರು 'ಸಾವಿತ್ರಿ! ಹಿಂದೆ ತಿರುಗು. ನಿನ್ನ ಅತಿಮನೋಹರವಾದ ಮಾತಿನಿಂದ ಸಂತೋಷವುಳ್ಳವನಾಗಿರುವೆನು. ಸತ್ಯವಾನನ ಜೀವನವನ್ನು ಒಂದನ್ನು ಬಿಟ್ಟು ಬೇಕಾದ ವರವನ್ನು ಕೇಳಿಕೊ. ಕೊಡುತ್ತೇನೆ' ಎಂದರು. (ಅ.297-27)

ಅದಕ್ಕೆ ಸಾವಿತ್ರಿಯು 'ನನ್ನ ಮಾವಂದಿರು ಕಣ್ಣು ಇಲ್ಲದೆ ರಾಜ್ಯಭ್ರಷ್ಟರಾಗಿ ಕಾಡಿನಲ್ಲಿ ವಾಸಮಾಡುತ್ತಿರುವರು. ಅವರಿಗೆ ನಿಮ್ಮ ಅನುಗ್ರಹದಿಂದ ಎರಡು ಕಣ್ಣುಗಳೂ ಬಂದು ಅವರು ಅಗ್ನಿಯಂತೆಯೂ ಸೂರ್ಯನಂತೆಯೂ ಪ್ರಕಾಶಿಸಲಿ' ಎಂದಳು.

ಯಮದೇವರು 'ಹೇ ಸುಂದರಿ! ನಿನಗೆ ಹಾಗೆ ವರವನ್ನು ಕೊಟ್ಟಿದ್ದೇನೆ. ನೀನು ಹೇಳಿದಂತೆಯೇ ಆಗುತ್ತದೆ. ನಿನಗೆ ನಡೆದು ತುಂಬಾ ಶ್ರಮವಾದಂತೆ ಕಾಣುತ್ತದೆ. ನಿನಗೆ ಶ್ರಮವು ಬೇಡ. ಹಿಂದೆ ತಿರುಗಿಹೋಗು' ಎಂದರು.

ಆದಕ್ಕೆ ಸಾವಿತ್ರಿಯು 'ಗಂಡನ ಸಮೀಪದಲ್ಲಿ ಬರುತ್ತಿರುವ ನನಗೆ ಶ್ರಮವೆಲ್ಲಿದೆ? ಎಲ್ಲಿಗೆ ಗಂಡನು ಹೋಗುವನೋ ಅಲ್ಲಿಗೆ ನಾನು ಬರುವುದು ನಿಶ್ಚಯವು. ದೇವಶ್ರೇಷ್ಠರೇ! ನೀವು ನನ್ನ ಗಂಡನನ್ನು ಎಲ್ಲಿಗೆ ಕರೆದುಕೊಂಡು ಹೋಗುವಿರೋ ಅಲ್ಲಿಗೆ ನಾನೂ ಬರುವೆನು. ದೇವೋತ್ತಮರೇ! ಇನ್ನೂ ನಾನು ಹೇಳುವ ಮಾತನ್ನು ಕೇಳಿರಿ. ಸಜ್ಜನರ ಸಹವಾಸ ಒಂದು ಬಾಕಿ ಮಾಡಿದರೆ ಸಾಕು ಆಮೇಲೆ ಅವರು ಮಿತ್ರರಾಗುವರು. ಸಜ್ಜನರ ಸಹವಾಸವು ಯಾವಾಗಲೂ ವ್ಯರ್ಥವಾಗುವುದಿಲ್ಲ. ಆದುದರಿಂದ ಸಜ್ಜನರ ಸಮೀಪದಲ್ಲೇ ಇರಬೇಕು' ಎಂದಳು.(ಅ.297-29,30)

ಯಮದೇವರು 'ಮನಸ್ಸಿಗೆ ಅನುಕೂಲವಾದ ಪಂಡಿತರಿಗೂ ಜ್ಞಾನವು ಹೆಚ್ಚಾಗಲಿಕ್ಕೆ ಕಾರಣವಾದ ಹಿತಕರವಾದ ಮಾತನ್ನು ನೀನು ಆಡಿದಿಯಾದ ಕಾರಣ ಸತ್ಯವಾನನ ಜೀವನವೊಂದನ್ನು ಹೊರತು ಇನ್ನೊಂದು ವರವನ್ನು ಕೇಳು' ಎಂದರು. (ಅ.297-31)

ಆದಕ್ಕೆ ಸಾವಿತ್ರಿಯು 'ಪೂರ್ವದಲ್ಲಿ ನನ್ನ ಮಾವನ ತನ್ನದ್ದೇ ಆದ ರಾಜ್ಯವು ಅಪಹೃತವಾಗಿದೆ. ಆ ರಾಜ್ಯವನ್ನು ಅವರು ಹೊಂದಲಿ. ಅವರು ರಾಜ್ಯ ಪರಿಪಾಲನೆಯೆಂಬ ತನ್ನ ಧರ್ಮದಿಂದ ರಹಿತರಾಗಿರಬಾರದು. ಈ ರೀತಿಯಾಗಿ ಎರಡನೇ ವರವನ್ನು ಕೇಳುವೆನು' ಎಂದರು. (ಅ.297-32)

ಯಮದೇವರು 'ನಿನ್ನ ಮಾವನು ಬೇಗನೆ ತನ್ನದ್ದೇ ಆದ ರಾಜ್ಯವನ್ನು ಬೇಗನೇ ಹೊಂದುವನು. ತನ್ನ ಧರ್ಮದಿಂದ ರಹಿತನಾಗುವುದಿಲ್ಲ. ನಿನಗೆ ಅಭೀಷ್ಟವನ್ನು ಕೊಟ್ಟೆನು. ರಾಜಪುತ್ರಿ! ಹಿಂದೆ ಹೋಗು. ನಿನಗೆ ಶ್ರಮವಾಗಬಾರದು' ಎಂದರು.

ಆದಕ್ಕೆ ಸಾವಿತ್ರಿಯು 'ನೀವು ಈ ಪ್ರಜೆಗಳಿಗೆಲ್ಲಾ ನಿಯಾಮಕನಾಗಿರುವಿರಿ. ಆದುದರಿಂದ ಅವರು ನಿಗ್ರಹಿಸಿ ಇಚ್ಛಾನುಸಾರವಾಗಿ ಕರೆದು ಹೋಗುವಿರಿ. ಆದುದರಿಂದ ನಿಮಗೆ ಯಮ ಎಂಬ ಹೆಸರು ಪ್ರಸಿದ್ಧವಾಗಿದೆ. ನಾನು ಹೇಳುವ ಈ ಮಾತನ್ನೂ ತಾವು ಕೇಳಬೇಕು. ಸರ್ವಪ್ರಾಣಿಗಳಿಗೂ ಕಾರ್ಯದಿಂದ ಮನಸ್ಸಿನಿಂದಲೂ ಮಾತಿನಿಂದಲೂ ವಿರೋಧವನ್ನು ಮಾಡದೆ ಇರುವುದು, ಸಹಾಯ ಮಾಡುವುದು, ದಾನಮಾಡುವುದು ಇವೆಲ್ಲ ಸಜ್ಜನರ ಸನಾತನಧರ್ಮವು. ಸಜ್ಜನರು ಶತ್ರುಗಳಲ್ಲಿಯೂ ದಯೆಯನ್ನು ಮಾಡುವರು' ಎಂದಳು. (ಅ.291-34 ರಿಂದ 36)

ಯಮದೇವರು 'ಸಾವಿತ್ರಿ! ಬಾಯಾರಿಕೆ ಆದವನಿಗೆ ನೀರು ಸಿಕ್ಕಿದರೆ ಎಷ್ಟು ಸಂತೋಷವಾಗುವುದೋ ಅಷ್ಟು ಸಂತೋಷವು ನಿನ್ನ ಮಾತು ಕೇಳುವಾಗ ಆಗುತ್ತಾ ಇದೆ. ಈ ಸತ್ಯವಾನನ ಜೀವನವನ್ನು ಬಿಟ್ಟು ಬೇರೆ ಇನ್ನೊಂದು ವರವನ್ನು ಕೇಳು'

ಎಂದರು. (ಅ.297-37-38)

ಸಾವಿತ್ರಿಯು 'ನನ್ನ ತಂದೆಯಾದ ಅಶ್ವಪತಿರಾಜರಿಗೆ ಗಂಡುಮಕ್ಕಳಿಲ್ಲ. ಅವರಿಗೆ ನೂರು ಜನ ಮಕ್ಕಳು. ಕುಲಾಭಿವೃದ್ಧಿಗೆ ಕಾರಣರಾದವರು ಹುಟ್ಟಬೇಕು. ಈ ಪ್ರಕಾರ ಮೂರನೇ ವರವನ್ನು ಕೇಳಿಕೊಳ್ಳುತ್ತೇನೆ' ಎಂದಳು. (ಅ.297-39)

ಯಮದೇವರು 'ರಾಜಪುತ್ರಿ! ನಿನ್ನ ತಂದೆಗೆ ಕುಲಾಭಿವೃದ್ಧಿಗೆ ಕಾರಣರಾದ ನೂರು ಜನ ಮಕ್ಕಳು ಹುಟ್ಟುವರು. ನಿನ್ನ ಅಭೀಷ್ಟವನ್ನು ಕೊಟ್ಟೆನು. ಇನ್ನು ಹಿಂದೆ ತಿರುಗು. ನೀನು ಬಹುದೂರ ಬಂದಿರುವಿ' ಎಂದರು. (ಅ.297-39)

ಸಾವಿತ್ರಿಯು 'ಗಂಡನ ಸಮೀಪದಲ್ಲಿ ನನಗೆ ಇದು ದೂರವೇ ಅಲ್ಲ. ನನ್ನ ಮನಸ್ಸು ಇನ್ನೂ ದೂರ ಓಡುತ್ತಿದೆ. ಹೋಗುವಾಗಲೇ ನೀವು ನಾನು ಹೇಳುವ ಈ ಮಾತನ್ನು ಕೇಳಬೇಕು. ನೀವು ವಿವಸ್ವಾನ್ ಎಂದು ಹೆಸರುಳ್ಳ ಸೂರ್ಯದೇವರ ಪ್ರತಾಪಶಾಲಿಯಾದ ಮಗನಾಗಿದ್ದೀರಿ. ಆದುದರಿಂದ ಜ್ಞಾನಿಗಳು ನಿಮ್ಮನ್ನು ವೈವಸ್ವತ ಎಂದು ಹೇಳುವರು. ಶತ್ರುಮಿತ್ರ ಎಂಬ ಭಾವನೆಯಿಲ್ಲದ ಧರ್ಮದಿಂದ ಪ್ರಜೆಗಳು ನಿಮ್ಮ ವಶವಾಗಿದ್ದಾರೆ. ಆದುದರಿಂದಲೇ ನಿಮಗೆ ಧರ್ಮರಾಜ ಎಂಬ ಹೆಸರು ಕೂಡುವುದು. ಸಜ್ಜನರಲ್ಲಿ ಮಾಡುವ ವಿಶ್ವಾಸದಂತೆ ನಮ್ಮಲ್ಲಿಯೂ ವಿಶ್ವಾಸವಿರ ಲಾರದು. ಆದುದರಿಂದ ಎಲ್ಲರೂ ಸಜ್ಜನರಲ್ಲಿ ವಿಶೇಷವಾಗಿ ಪ್ರೀತಿಯನ್ನು ಮಾಡು ವರು. ಲೌಕಿಕರಲ್ಲಿ ವಿಶ್ವಾಸ ಮಾಡಿದರೂ ಇಷ್ಟಸಿದ್ಧಿಯನ್ನು ಹೊಂದುವನು. ಹೀಗಿರು ವಾಗ ತಮ್ಮಂತಹ ಸಜ್ಜನರಲ್ಲಿ ವಿಶ್ವಾಸಮೂಡುವವರಿಗೆ ಯಾಕೆ ಕಾರ್ಯಸಿದ್ಧಿ ಯಾಗಲಾರದು' ಎಂದಳು. (ಅ.297-40 ರಿಂದ 43)

ಯಮದೇವರು 'ಉತ್ತಮಸ್ತ್ರೀಯೇ! ನೀನು ಹೇಳಿದ ಮಾತಿನಂತೆ ಇರುವ ಮಾತನ್ನು ಇನ್ನೊಬ್ಬರ ಬಾಯಿಯಿಂದ ಕೇಳಲೇ ಇಲ್ಲ. ಇದರಿಂದ ನಾನು ತುಂಬಾ ಸಂತುಷ್ಟನಾಗಿದ್ದೇನೆ. ಸತ್ಯವಾನನ ಜೀವನವನ್ನು ಹೊರತು ನಾಲ್ಕನೇ ವರವನ್ನು ಕೇಳಿ ಹೊರಟುಹೋಗು' ಎಂದರು. (ಅ.297-44)

ಅದಕ್ಕೆ ಸಾವಿತ್ರಿಯು 'ನನಗೆ ಸತ್ಯವಾನರಿಂದ ನಮ್ಮಿಬ್ಬರ ಕುಲಾಭಿವೃದ್ಧಿಗೆ ಕಾರಣರಾದ ಬಲವೀರ್ಯಶಾಲಿಗಳಾದ ನೂರುಜನ ಮಕ್ಕಳು ಹುಟ್ಟಬೇಕು. ಇದನ್ನೇ ನಾಲ್ಕನೇ ವರವನ್ನು ಕೇಳುತ್ತೇನೆ' ಎಂದಳು. (ಅ.297-45)

ಯಮದೇವರು 'ನಿನಗೆ ನೂರು ಜನ ಮಕ್ಕಳು ಆಗುತ್ತಾರೆ. ಇನ್ನು ಶ್ರಮಪಡಬೇಡ. ಹಿಂದೆ ತಿರುಗಿಹೋಗು. ಬಹುದೂರ ಬಂದಿರುವಿ' ಎಂದರು. (ಅ.297-46)

ಆಗ ಸಾವಿತ್ರಿಯು 'ಸಜ್ಜನರು ಯಾವಾಗಲೂ ಧರ್ಮದಿದಂದಲೇ ಇರುವರು. ಸಜ್ಜನರು ವರವನ್ನು ಕೊಟ್ಟಮೇಲೆ ಆದರಿಂದ ವ್ಯಥೆಯನ್ನು ಹೊಂದುವುದಿಲ್ಲ. ತಾವು ಕೊಟ್ಟ ವರವನ್ನು ನಿರ್ವಹಿಸುತ್ತಾರೆ. ಸಜ್ಜನರ ಸಹವಾಸವು ವ್ಯರ್ಥವಾಗುವುದಿಲ್ಲ. ಸಜ್ಜನರು ಸಜ್ಜನರಿಂದ ಭಯವನ್ನು ಹೊಂದುವುದೂ ಇಲ್ಲ. ಸಜ್ಜನರು ತಮ್ಮ ಸತ್ಯದ ಸಾಮರ್ಥ್ಯದಿಂದ ಸೂರ್ಯನು ಸಂಚರಿಸುವಂತೆ ಮಾಡುವರು. ತಮ್ಮ ತಪಸ್ಸಿನಿಂದ ಭೂಮಿಯನ್ನು ಧರಿಸುವರು. ಸಜ್ಜನರೇ ಎಲ್ಲರಿಗೂ ಆಶ್ರಯರು. ಸಜ್ಜನರ ಮಧ್ಯದಲ್ಲಿ ಸಜ್ಜನರು ಶ್ರಮಪಡಲಾರರು. ಸಜ್ಜನರು ಇದು ಜ್ಞಾನಿಗಳು ಮಾಡಿಕೊಂಡು ಬಂದ ಧರ್ಮ ಎಂದು ಇಷ್ಟೇ ತಿಳಿದುಕೊಂಡು ಪರೋಪಕಾರವನ್ನು ಮಾಡುವರು. ಅದಕ್ಕೆ ಅವರು ಪ್ರತ್ಯುಪಕಾರವನ್ನು ಅಪೇಕ್ಷಿಸುವುದಿಲ್ಲ. ಸಜ್ಜನರು ಮಾಡಿದ ಅನುಗ್ರಹವು ವ್ಯರ್ಥವಾಗುವುದಿಲ್ಲ. ಅವರು ಅನುಗ್ರಹವನ್ನೂ ಮಾಡುವರು. ಅವರಿಂದ ಪ್ರಯೋಜನವೂ ಉಂಟಾಗುವುದು. ಅವರಿಂದ ಮಾನವು ಹೋಗಲಾರದು ಎಂದರೆ ಅವರು ಅವಮಾನ ಮಾಡಲಾರರು. ದರಿದ್ರನು ಅನುಗ್ರಹ ಮಾಡಬಹುದು. ಆದರೆ ಹಣ ಮೊದಲಾದ ಪ್ರಯೋಜನವಾಗಲಾರದು. ಹಣವಂತರು ಅನುಗ್ರಹಮಾಡಿದರೆ ಹಣ ಕೊಡಬಹುದು. ಆದರೆ ಮಾನಉಳಿಯಲಾರದು. ಅವರು ಅವಮಾನ ಮಾಡಿಯೇ ಹಣಕೊಡುವರು. ದುಷ್ಟರಲ್ಲಿ ಅನುಗ್ರಹವೂ ಇಲ್ಲ, ಹಣವೂ ಸಿಗಲಾರದು. ಮಾನವೂ ಉಳಿಯಲಾರದು. ನಿಮ್ಮಲ್ಲಿ ಹಾಗಲ್ಲ. ಅನುಗ್ರಹವನ್ನು ಮಾಡುವಿರಿ. ಪ್ರಯೋಜನವನ್ನೂ ಉಂಟುಮಾಡುವಿರಿ. ಅವಮಾನವನ್ನು ಮಾಡ ಲಾರಿರಿ. ಸಜ್ಜನರ ಲಕ್ಷಣವು ಹಾಗೆ ಇರುವುದು. ಆದುದರಿಂದ ಸಜ್ಜನರು ರಕ್ಷಕರಾಗಿ ಆಗುವರು' ಎಂದಳು. (ಅ.297-47 ರಿಂದ 50)

ಆಗ ಯಮದೇವರು 'ಪತಿವ್ರತೆಯಾದ ಸಾವಿತ್ರಿ! ಧರ್ಮಯುಕ್ತವಾದ ಮನೋಹರವಾದ ಒಳ್ಳೇ ಪದಗಳಿಂದ ಕೂಡಿದ ಬಹು ಅರ್ಥಗಳಿಂದ ಕೂಡಿದ ಮಾತನ್ನು ನೀನು ಹೇಳುವಂತೆ ನನಗೆ ನಿನ್ನಲ್ಲಿ ವಿಶ್ವಾಸವು ಹೆಚ್ಚುತ್ತಲೇ ಬರುತ್ತಿದೆ. ಬೇಕಾದ ಉತ್ತಮವಾದ ವರವನ್ನು ಕೇಳಿಕೊ' ಎಂದು ಹೇಳಿದರು. (ಅ.297-51)

ಅದಕ್ಕೆ ಸಾವಿತ್ರಿಯು 'ನೀವು ಕೊಟ್ಟಿರುವ ಪುತ್ರಪ್ರಾಪ್ತಿರೂಪವಾದ ಫಲವು ಸರಿಯಾದ ಧರ್ಮದಿಂದ ಆಗಬೇಕಲ್ಲದೆ ಬೇರೆ ಪುರುಷರಿಂದ ಉಂಟಾಗುವುದು ನ್ಯಾಯವಲ್ಲ. ಆದುದರಿಂದ ಈ ಸತ್ಯವಾನರು ನಿಮ್ಮ ವರದಿಂದ ಬದುಕಲಿ. ಪತಿ ಯಿಲ್ಲದೆ ನಾನು ಮೃತಳಂತೆಯೇ ಆಗಿದ್ದೇನೆ. ಪತಿಯಿಲ್ಲದೆ ನಾನು ಸುಖವನ್ನು ಅಪೇಕ್ಷಿ ಸುವುದಿಲ್ಲ. ಪತಿಯಿಲ್ಲದೆ ನಾನು ಸ್ವರ್ಗವನ್ನು ಅಪೇಕ್ಷಿಸುವುದಿಲ್ಲ. ಪತಿಯಿಲ್ಲದೆ ನಾನು

ಸಂಪತ್ತನ್ನು ಅಪೇಕ್ಷಿಸುವುದಿಲ್ಲ. ಪತಿಯಿಲ್ಲದೆ ನಾನು ಬದುಕುವ ನಿಶ್ಚಯವನ್ನೇ ಮಾಡಿಕೊಂಡಿಲ್ಲ. ನನಗೆ ನೂರುಮಕ್ಕಳಾಗುವಂತೆ ನೀವೇ ನನಗೆ ವರವನ್ನು ಕೊಟ್ಟಿರುವಿರಿ. ನೀವೇ ನನ್ನ ಗಂಡನನ್ನು ಅಪಹಾರಮಾಡಿಕೊಂಡು ಹೋಗುತ್ತಿರುವಿರಿ. ಸತ್ಯವಾನರು ಜೀವಿಸಲಿ ಎಂದು ನಾನು ವರವನ್ನು ಕೇಳಿಕೊಳ್ಳುವನು. ನೀವು ಪೂರ್ವದಲ್ಲಿ ಹೇಳಿದ ಮಾತೂ ಸತ್ಯವಾಗುವುದು' ಎಂದಳು. (ಅ.297-52 ರಿಂದ 54)

ಯಮದೇವರು ಹಾಗೆಯೇ ಆಗಲಿ ಎಂದು ಹೇಳಿ ಸತ್ಯವಾನ ಜೀವನ ಹಗ್ಗದಿಂದ ಬಿಟ್ಟು ಸಂತೋಷದಿಂದ ಸಾವಿತ್ರಿಯೊಡನೆ 'ಕುಲವನ್ನೇ ಸಂತೋಷಪಡಿಸುವ ಪರಮಂಗಳೇ! ಈ ನಿನ್ನ ಗಂಡನನ್ನು ನಾನು ಬಿಟ್ಟು ಬಿಟ್ಟಿದ್ದೇನೆ. ರೋಗರಹಿತನಾದ ನಿನ್ನ ಗಂಡನನ್ನು ಕರಕೊಂಡು ಹೋಗು. ಅವನು ಕಾರ್ಯಸಿದ್ಧಿಯನ್ನು ಹೊಂದುವನು. ನಿನ್ನೊಡನೆ ನಾಲ್ಕು ನೂರು ವರ್ಷ ಆಯುಷ್ಯವನ್ನು ಹೊಂದುವನು. ಅನೇಕ ಯಜ್ಞಗಳನ್ನೂ ಇತರ ಧರ್ಮಕಾರ್ಯಗಳನ್ನೂ ಮಾಡಿ ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದುವನು. ಸತ್ಯವಾನನು ನಿನ್ನಲ್ಲಿ ನೂರು ಮಕ್ಕಳನ್ನು ಹೊಂದುವನು. ಅವರೆಲ್ಲರೂ ಮಕ್ಕಳು ಮೊಮ್ಮಕ್ಕಳು ಉಳ್ಳವರಾಗಿ ರಾಜರಾಗಿ ನಿನ್ನ ಹೆಸರುಳ್ಳವರಾಗಿ ಪ್ರಸಿದ್ಧರಾಗುವರು. ನಿನ್ನ ತಂದೆಗೂ ಮಾಲವಿಯೆಂಬ ಪತ್ನಿಯಲ್ಲಿ ಮಾಲವ ಎಂದು ಹೆಸರುಳ್ಳ ದೇವತೆಗಳಂತೆ ಉಳ್ಳ ಮಕ್ಕಳು ಮೊಮ್ಮಕ್ಕಳುಳ್ಳವರಾದ ಕ್ಷತ್ರಿಯರಾದ ನಿನ್ನ ತಮ್ಮಂದಿರು ಹುಟ್ಟುವರು'. ಈ ಪ್ರಕಾರವಾಗಿ ಯಮದೇವರು ಸಾವಿತ್ರಿಗೆ ವರವನ್ನು ಕೊಡುವವರಾಗಿ ಸಾವಿತ್ರಿಯನ್ನು ಹಿಂದೆ ಕಳುಹಿಸಿ ತನ್ನ ಮಂದಿರಕ್ಕೆ ಹೊರಟುಹೋದರು. (ಅ.297-56 ರಿಂದ 61)

ಸಾವಿತ್ರಿಯೂ ಯಮದೇವರು ಹೊರಟುಹೋದಮೇಲೆ ಗಂಡನನ್ನು ಹೊಂದಿ ಗಂಡನ ಶವದೇಹವು ಇದ್ದ ಸ್ಥಳಕ್ಕೆ ಹೋದಳು. ಅವಳು ಗಂಡನ ದೇಹವನ್ನು ನೋಡಿ ಹತ್ತಿರಹೋಗಿ ದೇಹದ ತಲೆಯನ್ನು ತನ್ನ ತೊಡೆಯಮೇಲೆ ಇಟ್ಟುಕೊಂಡು ಭೂಮಿಯಲ್ಲಿ ಕೂತುಕೊಂಡಳು. ಸತ್ಯವಾನನು ಜ್ಞಾನವನ್ನು ಹೊಂದಿ ಪರದೇಶಕ್ಕೆ ಹೋಗಿ ಬಂದವನಂತೆ ಪ್ರೇಮದಿಂದ ಸಾವಿತ್ರಿಯನ್ನು ಪುನಃ ಪುನಃ ನೋಡಿ 'ಸಾವಿತ್ರಿ! ನಾನು ಬಹುಹೊತ್ತು ಮಲಗಿದೆನಲ್ಲಾ! ಯಾಕೆ ನೀನು ಎಬ್ಬಿಸಲಿಲ್ಲ? ಕಪ್ಪಾಗಿರುವ ಒಬ್ಬ ಪುರುಷನು ನನ್ನನ್ನು ಎಳೆದುಕೊಂಡು ಹೋದನಲ್ಲಾ ಅವನು ಎಲ್ಲಿಗೆ ಹೋದನು?' ಎಂದನು. (ಅ.297-65)

ಸಾವಿತ್ರಿಯು 'ನನ್ನ ತೊಡೆಯಲ್ಲಿ ಬಹುಹೊತ್ತು ಮಲಗಿದ್ದೀರಿ. ಪೂಜ್ಯರಾದ ಯಮದೇವರು ಹೊರಟುಹೋದರು. ವಿಶ್ರಾಂತಿಯನ್ನು ಹೊಂದಿದ್ದೀರಿ. ಈಗ

ನಿದ್ರೆಯಿಂದ ಎದ್ದಿರುವುರಿರಿ. ನಿಮಗೆ ಶಕ್ತಿಯಿದ್ದರೆ ಏಳಿರಿ. ತುಂಬಾ ರಾತ್ರಿಯಾಗಿರುವುದನ್ನು ನೋಡಿರಿ' ಎಂದಳು. (ಅ.297-66,67)

ಸತ್ಯವಾನನು ಸರಿಯಾದ ಜ್ಞಾನವನ್ನು ಹೊಂದಿದವನಾಗಿ ಸುಖವಾಗಿ ಮಲಗಿದವನು ಏಳುವಂತೆ ಎದ್ದು ಎಲ್ಲಾ ದಿಕ್ಕುಗಳನ್ನೂ ವನಪ್ರದೇಶಗಳನ್ನೂ ನೋಡಿ 'ಸುಂದರಿ! ನಾನು ನಿನ್ನೊಡನೆ ಹಣ್ಣುಗಳನ್ನು ತೆಗೆದುಕೊಂಡು ಹೋಗಲು ಬಂದಿರುವೆನು. ಕಟ್ಟಿಗೆ ಕಡಿಯುತ್ತಾ ಇರುವಾಗ ನನಗೆ ತಲೆನೋವಾಯಿತು. ತಲೆನೋವಿನಿಂದ ನಿಂತಿರಲಿಕ್ಕೆ ಸಾಧ್ಯವಾಗದೆ ನಿನ್ನ ತೊಡೆಯಲ್ಲಿ ಮಲಗಿದೆನು. ಇದೆಲ್ಲ ನನಗೆ ಜ್ಞಾಪಕವಿದೆ. ನಿನ್ನಿಂದ ಆಲಿಂಗಿತನಾದ ನನಗೆ ನಿದ್ರೆಯು ಬಂದಿತು. ತರುವಾಯ ಮಹಾತೇಜಸ್ವಿಯಾದ ಒಬ್ಬ ಘೋರಪುರುಷನನ್ನು ನೋಡಿದೆನು. ನಿನಗೆ ತಿಳಿದಿದ್ದರೆ ಅದು ಏನು ಎಂದು ಹೇಳು. ಅದು ಸ್ವಪ್ನವೋ? ಅಥವಾ ಸತ್ಯವಾಗಿಯೂ ನೋಡಿದೆನೋ?' ಎಂದು ಕೇಳಿದನು. ಆಗ ಸಾವಿತ್ರಿಯು 'ಈಗ ತುಂಬಾ ರಾತ್ರಿಯಾಯಿತು. ಅದನ್ನೆಲ್ಲಾ ನಿಮಗೆ ನಾಳೆ ಹೇಳುತ್ತೇನೆ. ಏಳಿರಿ. ನಿಮಗೆ ಮಂಗಳವಾಗಲಿ. ನಿಮ್ಮ ತಂದೆತಾಯಿಗಳನ್ನು ನೋಡಿರಿ. ತುಂಬಾ ರಾತ್ರಿಯಾಗಿದೆ. ಸೂರ್ಯಪ್ರಕಾಶವಿಲ್ಲ. ರಾತ್ರಿ ಸಂಚಾರ ಮಾಡುವ ಪ್ರಾಣಿಗಳು ಕ್ರೂರವಾಗಿ ಶಬ್ದಮಾಡುತ್ತಾ ಸಂತೋಷದಿಂದ ಸಂಚಾರಮಾಡುತ್ತಿದೆವ. ಮೃಗಗಳು ಕ್ರೂರವಾಗಿ ಶಬ್ದಮಾಡುತ್ತಾ ಸಂತೋಷದಿಂದ ಸಂಚಾರ ಮಾಡುತ್ತಿವೆ. ಮೃಗಗಳು ಸಂಚರಿಸುವಾಗ ಎಲೆಗಳ ಶಬ್ದಗಳೂ ಆಗುತ್ತಿವೆ. ದಕ್ಷಿಣ ಪಶ್ಚಿಮ ದಿಕ್ಕಿನಲ್ಲಿ ಹೆಣ್ಣು ನರಿಗಳು ಘೋರವಾಗಿ ಕೂಗುತ್ತಿವೆ. ನನ್ನ ಮನಸ್ಸು ಭಯದಿಂದ ನಡುಗುತ್ತಿದೆ' ಎಂದಳು.

ಸತ್ಯವಾನನು 'ವನವು ಭಯಂಕರವಾಗಿದೆ. ಬಹಳ ಕತ್ತಲೆಯೂ ಇದೆ. ನಿನಗೆ ದಾರಿಯು ತಿಳಿಯಲಾರದು. ಈಗ ಹೋಗಲಿಕ್ಕೆ ಆಗಲಾರದು' ಎಂದನು.

ಸಾವಿತ್ರಿಯು 'ಸುಟ್ಟುಹೋದ ಈ ವನದಲ್ಲಿ ಒಣಗಿದ ಒಂದು ಮರವು ಉರಿಯುತ್ತಾ ಇದೆ. ಗಾಳಿಯು ಬೀಸುತ್ತಾ ಇದೆ. ಅಲ್ಲಲ್ಲಿ ಬೆಂಕಿಯು ಕಾಣಿಸುತ್ತಾ ಇದೆ. ಅಲ್ಲಿಂದ ಬೆಂಕಿಯನ್ನು ತಂದು ಇಲ್ಲಿರುವ ಕಟ್ಟಿಗೆಗಳನ್ನು ಉರಿಸುತ್ತೇನೆ. ದುಃಖ ಪಡಬೇಡಿರಿ. ನಿಮಗೆ ಶ್ರಮವಿರುವಂತೆ ಕಾಣುತ್ತದೆ. ನಿಮಗೆ ಈ ಕತ್ತಲೆಯಲ್ಲಿ ದಾರಿಯು ಕಾಣದೆ ಹೋಗಲಿಕ್ಕೆ ಇಚ್ಛೆಯಿಲ್ಲದಿದ್ದರೆ ನಿಮಗೆ ಇಲ್ಲಿಯೇ ಇರುವುದು ಇಷ್ಟವಾಗಿದ್ದರೆ ರಾತ್ರಿಯಲ್ಲಿ ಇಲ್ಲಿಯೇ ಇದ್ದು ನಾಳೆ ಬೆಳಗಾದ ಮೇಲೆ ಹೋಗೋಣ' ಎಂದಳು.

ಸತ್ಯವಾನನು 'ನನ್ನ ತಲೆನೋವೆಲ್ಲಾ ವಾಸಿಯಾಗಿದೆ. ನನ್ನ ಅಂಗಗಳೆಲ್ಲಾ ಸ್ವಸ್ಥವಾಗಿವೆ.(ಅ.297-82) **ನಿನ್ನ ಅನುಗ್ರಹದಿಂದ ತಂದೆತಾಯಿಗಳ ಬಳಿಗೆ ಹೋಗ ಬೇಕೆಂದು ಆಸೆಪಡುತ್ತೇನೆ.** ನಾನು ಕಾಲವನ್ನು ಮೀರಿ ಯಾವಾಗಲೂ ಆಶ್ರಮಕ್ಕೆ ಹೋದ್ದು ಇಲ್ಲ. ಸಂಧ್ಯಾಕಾಲವು ಬರುವ ಪೂರ್ವದಲ್ಲಿಯೇ ನನ್ನ ತಾಯಿಯು ನನ್ನನ್ನು ಎಲ್ಲಿಗೆ ಹೋಗಲಿಕ್ಕೆ ಬಿಡಲಾರಳು. ಹಗಲಲ್ಲೂ ನಾನು ಎಲ್ಲಿಗಾದರೂ ಹೊರಗೆ ಹೋದರೆ ತಂದೆತಾಯಿಗಳು ದುಃಖಪಡುತ್ತಿದ್ದರು. ತಂದೆಯು ಆಶ್ರಮದ ಜನರನ್ನು ಕರೆದುಕೊಂಡು ಬಂದು ನನ್ನನ್ನು ಹುಡುಕುತ್ತಿದ್ದರು. ತಂದೆತಾಯಿಗಳು ಅನೇಕಬಾರಿ ತುಂಬಾ ದುಃಖವುಳ್ಳವರಾಗಿ ನೀನು ಸುಮ್ಮನೆ ಹೊತ್ತು ತಾಳಿ ಬರುತ್ತಿ ಎಂದು ಬೈದಿರುವರು. ಈಗ ಅವರಿಬ್ಬರಿಗೆ 'ಏನು ಅವಸ್ಥೆಯಾಗಿರಬಹುದು ಎಂದು ಯೋಚಿಸುತ್ತೇನೆ. ಅವರಿಗೆ ನನ್ನನ್ನು ಕಾಣದೆ ಇದ್ದರೆ ಬಹಳ ದುಃಖವಾಗುತ್ತದೆ. ಒಂದು ದಿವಸದಲ್ಲಿ ರಾತ್ರಿಯಲ್ಲಿ ಬಹುದುಃಖವುಳ್ಳವರಾಗಿ ನನ್ನ ಮೇಲಿನ ಪ್ರೀತಿಯಿಂದ ಕಣ್ಣೀರು ಸುರಿಸುತ್ತಾ 'ಮಗನೇ! ನೀನಿಲ್ಲದೆ ನಾವು ಒಂದು ಮುಹೂರ್ತವೂ ಬದುಕಲಾರೆವು. ನೀನು ಇರುವವರೆಗೆ ಮಾತ್ರ ನಮ್ಮ ಜೀವನವು. ಕುರುಡರಾದ ಮುದುಕರಾದ ನಮಗೆ ನೀನೇ ಕಣ್ಣು. ನಿನ್ನಲ್ಲಿ ನಮ್ಮ ವಂಶವು ನಿಂತಿರುವುದು. ನಿನ್ನಿಂದಲೇ ನಮಗೆ ಪಿಂಡವು ಸಿಗಬೇಕು. ನಿನ್ನಿಂದಲೇ ನಮ್ಮ ಸಂತಾನವು ಬೆಳೆಯಬೇಕು' ಎಂದು ಹೇಳಿರುವರು. ತಾಯಿ ತಂದೆ ಇಬ್ಬರೂ ಮುದುಕರು. ಅವರಿಗೆ ನಾನು ಊರುಗೋಲಿನಂತೆ ಇರುವವನು. ಅವರು ರಾತ್ರಿಯಲ್ಲಿ ನನ್ನನ್ನು ಕಾಣದೆ ಯಾವ ಅವಸ್ಥೆಯನ್ನು ಹೊಂದುವರೋ! ನನಗೆ ನಿದ್ರೆಯ ಮೇಲೆ ತುಂಬಾ ಕೋಪಬರುತ್ತಿದೆ. ನಿದ್ರೆಯಿಂದಾಗಿ ನನ್ನ ತಂದೆತಾಯಿಗಳು ಈಗ ಬದುಕಿದ್ದಾರೋ ಇಲ್ಲವೋ ಎಂಬ ಸಂದೇಹವುಂಟಾಗಿದೆ. ಇಂತಹ ಆಪತ್ತನ್ನು ಹೊಂದಿ ನಾನು ಬದುಕುವುದೂ ಸಂದೇಹವೇ. ತಂದೆತಾಯಿಗಳಿಗೆ ಏನಾದರೂ ಆದರೆ ನಾನು ಬದುಕಲಾರೆನು. ನಿಶ್ಚಯವಾಗಿಯೂ ಕುರುಡನಾದ ನನ್ನ ತಂದೆಯು ಒಂದೊಂದು ಸಮಯದಲ್ಲಿಯೂ ಆಶ್ರಮವಾಸಿ ಜನರೊಡನೆ ನನ್ನ ವಿಷಯವಾಗಿ ಕೇಳುತ್ತಿರುವರು. ನಾನು ತಂದೆಗಾಗಿ ದುಃಖಪಡುವಂತೆ ನನಗಾಗಿ ದುಃಖಪಡುವು ದಿಲ್ಲ. ತಾಯಿಗಾಗಿಯೂ ತುಂಬಾ ದುಃಖಪಡುತ್ತೇನೆ. ಅವರು ಬದುಕಿರುವಾಗ ಅವರನ್ನು ರಕ್ಷಿಸಬೇಕೆಂದು ನಾನು ಜೀವಿಸುತ್ತೇನೆ. ಅವರಿಗೆ ಪ್ರಿಯವನ್ನು ಮಾಡಬೇಕೆಂದು ನಾನು ಜೀವಿಸುತ್ತೇನೆ. ತಂದೆತಾಯಿಗಳು ಉತ್ತಮದೇವತೆಗಳು. ಅವರನ್ನು ಪೂಜಿಸಬೇಕೆಂದು ಮಹಾವ್ರತವಿದೆ' ಎಂದು ಹೇಳಿದನು.

ಈರೀತಿಯಾಗಿ ಧರ್ಮಿಷ್ಠನಾದ ಸತ್ಯವಾನನು ಹೇಳಿ ಕೈಗಳನ್ನು ಎತ್ತಿಕೊಂಡು ಅಳಲಿಕ್ಕೆ ಆರಂಭಿಸಿದನು. ಈರೀತಿಯಾಗಿ ಅಳುತ್ತಿರುವ ಗಂಡನನ್ನು ನೋಡಿ **ಸಾವಿತ್ರಿಯು ಗಂಡನ ಕಣ್ಣೀರನ್ನು ಒರಸಿ**(ಅ.297-98,99,100) **'ನಾನು ತಪಸ್ಸು ದಾನ ಹೋಮ ಮಾಡಿದ್ದು ಇದ್ದರೆ ಅತ್ತೆ ಮಾವ ಗಂಡಂದಿರಿಗೆ ಈ ರಾತ್ರಿಯು ಶುಭದಾಯಕವಾಗಲಿ. ನಾನು ಯಾವಾಲೂ ಸುಳ್ಳು ಹೇಳಿದ ಸ್ಮರಣೆಯೇ ಇಲ್ಲ. ಆ ಸತ್ಯದಿಂದ ಈಗ ನನ್ನ ಅತ್ತೆ ಮಾವಂದಿರು ಸುಖದಿಂದ ಇರಲಿ'** ಎಂದಳು.

ಸತ್ಯವಾನನು 'ಸಾವಿತ್ರಿ! ಬೇಗನೇ ತಂದೆತಾಯಿಗಳನ್ನು ನೋಡಬೇಕೆಂದು ಆಸೆಪಡುತ್ತೇನೆ. ತಂದೆತಾಯಿಗಳಿಗೆ ಯಾರಿಗಾದರೂ ಆಪತ್ತು ಸಂಭವಿಸಿದ್ದರೆ ನನಗೆ ಬದುಕುವ ಆಸೆಯಿಲ್ಲ. ನಿನಗೆ ಧರ್ಮದಲ್ಲಿ ಬುದ್ಧಿಯಿದ್ದರೆ ನಾನು ಬದುಕಿರಬೇಕೆಂಬ ಅಭಿಪ್ರಾಯವಿದ್ದರೆ ನನಗೆ ಪ್ರಿಯವನ್ನು ಮಾಡಬೇಕೆಂಬ ಅಭಿಪ್ರಾಯವಿದ್ದರೆ ನಾವು ಬೇಗನೇ ಆಶ್ರಮಕ್ಕೆ ಹೋಗುವ' ಎಂದನು.

ತರುವಾಯ ಸಾವಿತ್ರಿಯು ಎದ್ದು ತಲೆಯನ್ನು ಸರಿಮಾಡಿಕೊಂಡು ಎರಡು ಕೈಗಳಿಂದ ಹಿಡಿದು ಗಂಡನನ್ನು ಎಬ್ಬಿಸಿದಳು. ಸತ್ಯವಾನನೂ ಎದ್ದು ಮೈಯನ್ನೆಲ್ಲಾ ವರಿಸಿಕೊಂಡು ಎಲ್ಲಾ ದಿಕ್ಕುಗಳನ್ನೂ ನೋಡಿ, ಹಣ್ಣು ತುಂಬಿರುವ ಬುಟ್ಟಿಯ ಮೇಲೆ ಕಣ್ಣು ಹಾಕಿದನು. ಆಗ ಸಾವಿತ್ರಿಯು 'ಹಣ್ಣುಗಳನ್ನು ನಾಳೆ ಬಂದು ತೆಗೆದುಕೊಂಡು ಹೋಗುವಿರಿ. ನಮ್ಮ ಜೀವನಕ್ಕೆ ಕಾರಣವಾದ ಕೊಡಲಿಯನ್ನು ಮಾತ್ರ ತರುತ್ತೇನೆ' ಎಂದು ಹೇಳಿ ಹಣ್ಣು ತುಂಬಿದ ಬುಟ್ಟಿಯನ್ನು ಒಂದು ಮರದ ಕೊಂಬೆಯಲ್ಲಿ ಜೋಲುವಂತೆ ಇಟ್ಟು ಕೊಡಲಿಯನ್ನು ಹಿಡಿದುಕೊಂಡು ಗಂಡನ ಬಳಿಗೆ ಬಂದಳು. ಸಾವಿತ್ರಿಯು ಎಡ ಹೆಗಲಮೇಲೆ ಗಂಡನ ಕೈಯನ್ನು ಇಟ್ಟುಕೊಂಡು ಬಲಕೈಯಿಂದ ಆಲಿಂಗಿಸಿಕೊಂಡು ಹೋದಳು.

ಸತ್ಯವಾನನು 'ಅಭ್ಯಾಸದಿಂದ ನನಗೆ ಮಾರ್ಗವು ತಿಳಿದಿದೆ. ಮರದ ಸಂದಿನಲ್ಲಿ ಕಾಣುವ ಬೆಳದಿಂಗಳಿನಿಂದಲೂ ಮಾರ್ಗವು ತಿಳಿಯುತ್ತದೆ. ನಾವು ಯಾವ ಮಾರ್ಗದಿಂದ ಬಂದೆವೋ ಹಣ್ಣುಗಳನ್ನು ಕೊಯಿದೆವೋ ಅದೇ ಮಾರ್ಗದಲ್ಲಿ ಬಂದಂತೆಯೇ ನಡಿ. ದಾರಿಯನ್ನು ಕೇಳುವುದೇ ಬೇಡ. ಆ ಮರದ ತುಂಡಿನ ಹತ್ತಿರ ಮಾತ್ರ ಎರಡು ದಾರಿಯು ಹೋಗುತ್ತಿದೆ. ಅಲ್ಲಿ ಉತ್ತರದಿಕ್ಕಿನಲ್ಲಿ ಹೋಗುವ ಮಾರ್ಗದಿಂದ ಹೋಗು. ನನಗೆ ಸ್ವಸ್ಥವಾಗಿದೆ. ನನಗೆ ಈಗ ಬಲವು ಬಂದಿದೆ. ತಂದೆ ತಾಯಿಗಳನ್ನು ನೋಡಬೇಕೆಂದು ತುಂಬಾ ಆಸೆಯುಳ್ಳವನಾಗಿದ್ದೇನೆ' ಈ ರೀತಿಯಾಗಿ ಹೇಳುತ್ತಲೇ ಶೀಘ್ರವಾಗಿ ಸಾವಿತ್ರಿಯಿಂದ ಸಹಿತನಾಗಿ ಆಶ್ರಮಕ್ಕೆ ಬಂದನು.

(ಅ.298-1)ಸತ್ಯವಾನ ಸಾವಿತ್ರಿಯರು ಆಶ್ರಮಕ್ಕೆ ಬರುವ ಪೂರ್ವದಲ್ಲಿ ದ್ಯುಮತ್ಸೇನನು ಕಣ್ಣನ್ನು ಹೊಂದಿದನು. ಪ್ರಸನ್ನವಾದ ದೃಷ್ಟಿಯಿಂದ ಎಲ್ಲಾ ವಸ್ತುಗಳನ್ನೂ ನೋಡಿದನು. ಅವನು ತನ್ನ ಹೆಂಡತಿಯಾದ ಶೈಬ್ಯೆಯಿಂದ ಸಹಿತನಾಗಿ ಮಗನಿಗಾಗಿ ಆಶ್ರಮಗಳಿಗೆಲ್ಲಾ ಹೋಗಿ ಅತಿದುಃಖವನ್ನು ಹೊಂದಿದನು. ದ್ಯುಮತ್ಸೇನನೂ ಅವನ ಹೆಂಡತಿಯೂ ಆಶ್ರಮಗಳಲ್ಲಿ ನದಿಗಳಲ್ಲಿ ವನಗಳಲ್ಲಿ ಸರೋವರಗಳಲ್ಲಿ ಹುಡುಕುತ್ತಾ ಹೋದರು. ಏನಾದರೂ ಶಬ್ದವು ಉಂಟಾದರೆ ಮಗನು ಬರುವನೋ ಏನೋ ಎಂದು ನೋಡುತ್ತಿದ್ದರು. ಸಾವಿತ್ರಿಯನ್ನು ಕರೆದುಕೊಂಡು ಸತ್ಯವಾನನು ಬರುತ್ತಿರುವನು ಎನ್ನುವರು. ಅವರ ಪಾದಗಳೆಲ್ಲಾ ಸೀಳಿ ಹೋಗಿ ಗಾಯಗಳಿಂದ ರಕ್ತವು ಸುರಿಯಿತು. ತರುವಾಯ ಆಶ್ರಮವಾಸಿಗಳಾದ ಮುನಿಗಳು ಅವರನ್ನು ಸಮಾಧಾನಪಡಿಸಿ ಅವರ ಆಶ್ರಮಕ್ಕೆ ಕರೆದುಕೊಂಡು ಬಂದುಬಿಟ್ಟರು. ಎಲ್ಲರೂ ಅನೇಕ ವಿಚಿತ್ರವಾದ ಪೂರ್ವರಾಜರ ಕಥೆಗಳಿಂದ ಸಮಾಧಾನಪಡಿಸಿದರು. ಆದರೂ ಅವರು ಮಗನ ಬಾಲ್ಯದ ವೃತ್ತಾಂತಗಳನ್ನೂ ಸಾವಿತ್ರಿಯ ವೃತ್ತಾಂತಗಳನ್ನೂ ಸ್ಮರಿಸಿಕೊಂಡು ದುಃಖವನ್ನು ಹೊಂದಿದರು. 'ಹಾ ಮಗನೇ! ಹಾ ಸೊಸೆಯೇ! ಎಲ್ಲಿಗೆ ಹೋದಿರಿ?' ಎಂದು ಅಳಲಿಕ್ಕೆ ಆರಂಭಿಸಿದರು. ತರುವಾಯ ಎಲ್ಲಾ ಬ್ರಾಹ್ಮಣರೂ ನಾನಾ ವಿಧವಾಗಿ ಸಾವಿತ್ರೀ ಸತ್ಯವಾನರು ಬಂದು ಸೇರುವರೆಂದು ಶಪಥವನ್ನು ಮಾಡಿ ಸಮಾಧಾನಪಡಿಸಿದರು.

ತರುವಾಯ ಒಂದು ಮುಹೂರ್ತವಾದ ಮೇಲೆ ಸಾವಿತ್ರಿಯು ಸತ್ಯವಾನನಿಂದ ಕೂಡಿಕೊಂಡು ಬಂದು ಸಂತೋಷದಿಂದ ಆಶ್ರಮವನ್ನು ಪ್ರವೇಶಿಸಿದಳು. ಅವರನ್ನು ನೋಡಿ ಎಲ್ಲಾ ಬ್ರಾಹ್ಮಣರೂ ಸಂತೋಷದಿಂದ ಮೇಲೆ ಎದ್ದರು. ತಂದೆತಾಯಿ ಇಬ್ಬರೂ ಕುತ್ತಿಗೆಯಲ್ಲಿ ಆಲಿಂಗನಮಾಡಿ ಅಳುವವರಾದರು.

ಬ್ರಾಹ್ಮಣರು 'ರಾಜನೇ! ಕಣ್ಣನ್ನು ಪಡೆದಿರುವ ಮಗನಿಂದ ಸಹಿತನಾದ ನಿನ್ನನ್ನು ನೋಡಿ ಕುಶಲಪ್ರಶ್ನೆಯನ್ನು ಮಾಡುತ್ತಿರುವೆವು. ಮಗನ ಸಮಾಗಮದಿಂದ ಸಾವಿತ್ರಿಯನ್ನು ನೋಡುವುದರಿಂದ ಕಣ್ಣನ್ನು ಹೊಂದಿರುವುದರಿಂದ ಈರೀತಿ ಮೂರು ಕಾರಣಗಳಿಂದ ಅಭಿವೃದ್ಧಿಯನ್ನು ಹೊಂದಿರುವಿ. ನಾವು ಹೇಳುವ ಮಾತು ಸುಳ್ಳಾಗಲಾರದು. ನಿನಗೆ ಮೇಲೆ ಮೇಲೆ ಅಭಿವೃದ್ಧಿಯುಂಟಾಗುವುದು' ಎಂದು ಹೇಳಿದರು. (ಅ.298-23)

ತರುವಾಯ ಬ್ರಾಹ್ಮಣರೆಲ್ಲರೂ ಅಗ್ನಿಯನ್ನು ಉರಿಸಿ ರಾಜನ ಸುತ್ತಲೂ ಕೂತರು. ಶೈಬ್ಯೆಯೂ ಸತ್ಯವಾನನೂ ಸಾವಿತ್ರಿಯೂ ಒಂದು ಬದಿಯಲ್ಲಿ ಇದ್ದರು. ಎಲ್ಲರಿಂದಲೂ

ಈರೀತಿಯಾಗಿ ಧರ್ಮಿಷ್ಠನಾದ ಸತ್ಯವಾನನು ಹೇಳಿ ಕೈಗಳನ್ನು ಎತ್ತಿಕೊಂಡು ಅಳಲಿಕ್ಕೆ ಆರಂಭಿಸಿದನು. ಈರೀತಿಯಾಗಿ ಅಳುತ್ತಿರುವ ಗಂಡನನ್ನು ನೋಡಿ **ಸಾವಿತ್ರಿಯು ಗಂಡನ ಕಣ್ಣೀರನ್ನು ಒರಸಿ**(ಅ.297-98,99,100) **'ನಾನು ತಪಸ್ಸು ದಾನ ಹೋಮ ಮಾಡಿದ್ದು ಇದ್ದರೆ ಅತ್ತೆ ಮಾವ ಗಂಡಂದಿರಿಗೆ ಈ ರಾತ್ರಿಯು ಶುಭದಾಯಕವಾಗಲಿ. ನಾನು ಯಾವಾಲೂ ಸುಳ್ಳು ಹೇಳಿದ ಸ್ಮರಣೆಯೇ ಇಲ್ಲ. ಆ ಸತ್ಯದಿಂದ ಈಗ ನನ್ನ ಅತ್ತೆ ಮಾವಂದಿರು ಸುಖದಿಂದ ಇರಲಿ'** ಎಂದಳು.

ಸತ್ಯವಾನನು 'ಸಾವಿತ್ರಿ! ಬೇಗನೇ ತಂದೆತಾಯಿಗಳನ್ನು ನೋಡಬೇಕೆಂದು ಆಸೆಪಡುತ್ತೇನೆ. ತಂದೆತಾಯಿಗಳಿಗೆ ಯಾರಿಗಾದರೂ ಆಪತ್ತು ಸಂಭವಿಸಿದ್ದರೆ ನನಗೆ ಬದುಕುವ ಆಸೆಯಿಲ್ಲ. ನಿನಗೆ ಧರ್ಮದಲ್ಲಿ ಬುದ್ಧಿಯಿದ್ದರೆ ನಾನು ಬದುಕಿರಬೇಕೆಂಬ ಅಭಿಪ್ರಾಯವಿದ್ದರೆ ನನಗೆ ಪ್ರಿಯವನ್ನು ಮಾಡಬೇಕೆಂಬ ಅಭಿಪ್ರಾಯವಿದ್ದರೆ ನಾವು ಬೇಗನೇ ಆಶ್ರಮಕ್ಕೆ ಹೋಗುವ' ಎಂದನು.

ತರುವಾಯ ಸಾವಿತ್ರಿಯು ಎದ್ದು ತಲೆಯನ್ನು ಸರಿಮಾಡಿಕೊಂಡು ಎರಡು ಕೈಗಳಿಂದ ಹಿಡಿದು ಗಂಡನನ್ನು ಎಬ್ಬಿಸಿದಳು. ಸತ್ಯವಾನನೂ ಎದ್ದು ಮೈಯನ್ನೆಲ್ಲಾ ವರಿಸಿಕೊಂಡು ಎಲ್ಲಾ ದಿಕ್ಕುಗಳನ್ನೂ ನೋಡಿ, ಹಣ್ಣು ತುಂಬಿರುವ ಬುಟ್ಟಿಯ ಮೇಲೆ ಕಣ್ಣು ಹಾಕಿದನು. ಆಗ ಸಾವಿತ್ರಿಯು 'ಹಣ್ಣುಗಳನ್ನು ನಾಳೆ ಬಂದು ತೆಗೆದುಕೊಂಡು ಹೋಗುವಿರಿ. ನಮ್ಮ ಜೀವನಕ್ಕೆ ಕಾರಣವಾದ ಕೊಡಲಿಯನ್ನು ಮಾತ್ರ ತರುತ್ತೇನೆ' ಎಂದು ಹೇಳಿ ಹಣ್ಣು ತುಂಬಿದ ಬುಟ್ಟಿಯನ್ನು ಒಂದು ಮರದ ಕೊಂಬೆಯಲ್ಲಿ ಜೋಲುವಂತೆ ಇಟ್ಟು ಕೊಡಲಿಯನ್ನು ಹಿಡಿದುಕೊಂಡು ಗಂಡನ ಬಳಿಗೆ ಬಂದಳು. ಸಾವಿತ್ರಿಯು ಎಡ ಹೆಗಲಮೇಲೆ ಗಂಡನ ಕೈಯನ್ನು ಇಟ್ಟುಕೊಂಡು ಬಲಕೈಯಿಂದ ಆಲಿಂಗಿಸಿಕೊಂಡು ಹೋದಳು.

ಸತ್ಯವಾನನು 'ಅಭ್ಯಾಸದಿಂದ ನನಗೆ ಮಾರ್ಗವು ತಿಳಿದಿದೆ. ಮರದ ಸಂಧಿನಲ್ಲಿ ಕಾಣುವ ಬೆಳದಿಂಗಳಿನಿಂದಲೂ ಮಾರ್ಗವು ತಿಳಿಯುತ್ತದೆ. ನಾವು ಯಾವ ಮಾರ್ಗದಿಂದ ಬಂದೆವೋ ಹಣ್ಣುಗಳನ್ನು ಕೊಯಿದೆವೋ ಅದೇ ಮಾರ್ಗದಲ್ಲಿ ಬಂದಂತೆಯೇ ನಡಿ. ದಾರಿಯನ್ನು ಕೇಳುವುದೇ ಬೇಡ. ಆ ಮರದ ತುಂಡಿನ ಹತ್ತಿರ ಮಾತ್ರ ಎರಡು ದಾರಿಯು ಹೋಗುತ್ತಿದೆ. ಅಲ್ಲಿ ಉತ್ತರದಿಕ್ಕಿನಲ್ಲಿ ಹೋಗುವ ಮಾರ್ಗದಿಂದ ಹೋಗು. ನನಗೆ ಸ್ವಸ್ಥವಾಗಿದೆ. ನನಗೆ ಈಗ ಬಲವು ಬಂದಿದೆ. ತಂದೆ ತಾಯಿಗಳನ್ನು ನೋಡಬೇಕೆಂದು ತುಂಬಾ ಆಸೆಯುಳ್ಳವನಾಗಿದ್ದೇನೆ' ಈ ರೀತಿಯಾಗಿ ಹೇಳುತ್ತಲೇ ಶೀಘ್ರವಾಗಿ ಸಾವಿತ್ರಿಯಿಂದ ಸಹಿತನಾಗಿ ಆಶ್ರಮಕ್ಕೆ ಬಂದನು.

(ಅ.298-1)ಸತ್ಯವಾನ ಸಾವಿತ್ರಿಯರು ಆಶ್ರಮಕ್ಕೆ ಬರುವ ಪೂರ್ವದಲ್ಲಿ ದ್ಯುಮತ್ಸೇನನು ಕಣ್ಣನ್ನು ಹೊಂದಿದನು. ಪ್ರಸನ್ನವಾದ ದೃಷ್ಟಿಯಿಂದ ಎಲ್ಲಾ ವಸ್ತುಗಳನ್ನೂ ನೋಡಿದನು. ಅವನು ತನ್ನ ಹೆಂಡತಿಯಾದ ಶೈಬ್ಯೆಯಿಂದ ಸಹಿತನಾಗಿ ಮಗನಿಗಾಗಿ ಆಶ್ರಮಗಳಿಗೆಲ್ಲಾ ಹೋಗಿ ಅತಿದುಃಖವನ್ನು ಹೊಂದಿದನು. ದ್ಯುಮತ್ಸೇನನೂ ಅವನ ಹೆಂಡತಿಯೂ ಆಶ್ರಮಗಳಲ್ಲಿ ನದಿಗಳಲ್ಲಿ ವನಗಳಲ್ಲಿ ಸರೋವರಗಳಲ್ಲಿ ಹುಡುಕುತ್ತಾ ಹೋದರು. ಏನಾದರೂ ಶಬ್ದವು ಉಂಟಾದರೆ ಮಗನು ಬರುವನೋ ಏನೋ ಎಂದು ನೋಡುತ್ತಿದ್ದರು. ಸಾವಿತ್ರಿಯನ್ನು ಕರೆದುಕೊಂಡು ಸತ್ಯವಾನನು ಬರುತ್ತಿರುವನು ಎನ್ನುವರು. ಅವರ ಪಾದಗಳೆಲ್ಲಾ ಸೀಳಿ ಹೋಗಿ ಗಾಯಗಳಿಂದ ರಕ್ತವು ಸುರಿಯಿತು. ತರುವಾಯ ಆಶ್ರಮವಾಸಿಳಾದ ಮುನಿಗಳು ಅವರನ್ನು ಸಮಾಧಾನಪಡಿಸಿ ಅವರ ಆಶ್ರಮಕ್ಕೆ ಕರೆದುಕೊಂಡು ಬಂದುಬಿಟ್ಟರು. ಎಲ್ಲರೂ ಅನೇಕ ವಿಚಿತ್ರವಾದ ಪೂರ್ವರಾಜರ ಕಥೆಗಳಿಂದ ಸಮಾಧಾನಪಡಿಸಿದರು. ಆದರೂ ಅವರು ಮಗನ ಬಾಲ್ಯದ ವೃತ್ತಾಂತಗಳನ್ನೂ ಸಾವಿತ್ರಿಯ ವೃತ್ತಾಂತಗಳನ್ನೂ ಸ್ಮರಿಸಿಕೊಂಡು ದುಃಖವನ್ನು ಹೊಂದಿದರು. 'ಹಾ ಮಗನೇ! ಹಾ ಸೊಸೆಯೇ! ಎಲ್ಲಿಗೆ ಹೋದಿರಿ?' ಎಂದು ಅಳಲಿಕ್ಕೆ ಆರಂಭಿಸಿದರು. ತರುವಾಯ ಎಲ್ಲಾ ಬ್ರಾಹ್ಮಣರೂ ನಾನಾ ವಿಧವಾಗಿ ಸಾವಿತ್ರೀ ಸತ್ಯವಾನರು ಬಂದು ಸೇರುವರೆಂದು ಶಪಥವನ್ನು ಮಾಡಿ ಸಮಾಧಾನಪಡಿಸಿದರು.

ತರುವಾಯ ಒಂದು ಮುಹೂರ್ತವಾದ ಮೇಲೆ ಸಾವಿತ್ರಿಯು ಸತ್ಯವಾನನಿಂದ ಕೂಡಿಕೊಂಡು ಬಂದು ಸಂತೋಷದಿಂದ ಆಶ್ರಮವನ್ನು ಪ್ರವೇಶಿಸಿದಳು. ಅವರನ್ನು ನೋಡಿ ಎಲ್ಲಾ ಬ್ರಾಹ್ಮಣರೂ ಸಂತೋಷದಿಂದ ಮೇಲೆ ಎದ್ದರು. ತಂದೆತಾಯಿ ಇಬ್ಬರೂ ಕುತ್ತಿಗೆಯಲ್ಲಿ ಆಲಿಂಗನಮಾಡಿ ಅಳುವವರಾದರು.

ಬ್ರಾಹ್ಮಣರು 'ರಾಜನೇ! ಕಣ್ಣನ್ನು ಪಡೆದಿರುವ ಮಗನಿಂದ ಸಹಿತನಾದ ನಿನ್ನನ್ನು ನೋಡಿ ಕುಶಲಪ್ರಶ್ನೆಯನ್ನು ಮಾಡುತ್ತಿರುವೆವು. ಮಗನ ಸಮಾಗಮದಿಂದ ಸಾವಿತ್ರಿಯನ್ನು ನೋಡುವುದರಿಂದ ಕಣ್ಣನ್ನು ಹೊಂದಿರುವುದರಿಂದ ಈರೀತಿ ಮೂರು ಕಾರಣಗಳಿಂದ ಅಭಿವೃದ್ಧಿಯನ್ನು ಹೊಂದಿರುವಿ. ನಾವು ಹೇಳುವ ಮಾತು ಸುಳ್ಳಾಗಲಾರದು. ನಿನಗೆ ಮೇಲೆ ಮೇಲೆ ಅಭಿವೃದ್ಧಿಯುಂಟಾಗುವುದು' ಎಂದು ಹೇಳಿದರು. (ಅ.298-23)

ತರುವಾಯ ಬ್ರಾಹ್ಮಣರೆಲ್ಲರೂ ಅಗ್ನಿಯನ್ನು ಉರಿಸಿ ರಾಜನ ಸುತ್ತಲೂ ಕೂತರು. ಶೈಬ್ಯೆಯೂ ಸತ್ಯವಾನನೂ ಸಾವಿತ್ರಿಯೂ ಒಂದು ಬದಿಯಲ್ಲಿ ಇದ್ದರು. ಎಲ್ಲರಿಂದಲೂ

ಅನುಜ್ಞೆಯನ್ನೂ ಪಡೆದು ಸಂತೋಷದಿಂದ ಕೂತುಕೊಂಡರು. ರಾಜನೊಡನೆ ಕೂತಿದ್ದ ಎಲ್ಲಾ ಆಶ್ರಮದ ಜನರೂ ಕುತೂಹಲವುಳ್ಳವರಾಗಿ ಸತ್ಯವಾನನೊಡನೆ 'ರಾಜಪುತ್ರ! ನೀನು ಹೆಂಡತಿಯೊಡನೆ ಬೇಗನೆ ಯಾಕೆ ಬರಲಿಲ್ಲ? ಬಹುರಾತ್ರಿಯಲ್ಲಿ ಯಾಕೆ ಬಂದಿರುವಿ? ಅಲ್ಲಿ ಏನು ನಿರ್ಬಂಧವು ಏರ್ಪಟ್ಟಿತು? ತಂದೆತಾಯಿ ನಾವು ಎಲ್ಲರೂ ತುಂಬಾ ದುಃಖವನ್ನು ಹೊಂದಿದೆವು. ಅದು ಯಾವ ಕಾರಣದಿಂದ ಎಂದು ತಿಳಿಯಲಿಲ್ಲ. ಅದನ್ನು ಹೇಳಬೇಕು'ಎಂದು ಕೇಳಿದರು.

ಅದಕ್ಕೆ ಸತ್ಯವಾನನು 'ತಂದೆಯ ಆಜ್ಞೆಯನ್ನು ಪಡೆದು ಸಾವಿತ್ರಿಯನ್ನು ಕರೆದುಕೊಂಡು ಕಾಡಿಗೆ ಹೋದವನಿಗೆ ಅಲ್ಲಿ ಕಟ್ಟಿಗೆಯನ್ನು ಕಡಿಯುತ್ತಿರಲು ತಲೆನೋವಾಯಿತು. ತಲೆನೋವಿನಿಂದ ನಾನು ಬಹುಹೊತ್ತು ಮಲಗಿದ್ದೆನೆಂದು ಊಹಿಸುತ್ತೇನೆ. ಇಷ್ಟರವರೆಗೆ ನಾನು ಅಷ್ಟುಹೊತ್ತು ಮಲಗಿದ್ದೇ ಇಲ್ಲ. ನಿಮಗೆಲ್ಲರಿಗೂ ಸಂತಾಪವುಂಟಾಗಬಾರದು. ಎಂದು ಈ ರಾತ್ರಿಯಲ್ಲಿಯೇ ಬಂದಿರುವೆನು' ಎಂದನು.

ಆಗ ಗೌತಮಋಷಿಗಳು 'ಇದ್ದಕ್ಕಿದ್ದಂತೆ ನಿನ್ನ ತಂದೆಯಾದ ದ್ಯುಮತ್ಸೇನರಾಜನಿಗೆ ಕಣ್ಣು ಬಂದಿತು. ಇದಕ್ಕೆಲ್ಲಾ ನಿನಗೆ ಕಾರಣವು ತಿಳಿಯಲಾರದು. ಸಾವಿತ್ರಿಯು ಹೇಳಲಿ. ಅಮ್ಮ ಸಾವಿತ್ರಿ! ನೀನೆಲ್ಲಾ ಪೂರ್ವಾಪರವನ್ನು ತಿಳಿದವಳಾಗಿರುವಿ. ಕೇಳಬೇಕೆಂದು ಇಚ್ಛಾ ಉಳ್ಳವನಾಗಿರುವೆನು. ಸಾವಿತ್ರಿ! ನಿನ್ನನ್ನು ತೇಜಸ್ಸಿನಿಂದ ಸಾವಿತ್ರೀದೇವಿಯಂತೆ ತಿಳಿದಿರುವೆನು. ನೀನು ಕಾರಣವನ್ನು ತಿಳಿದಿರುವಿ. ಸತ್ಯವನ್ನು ಹೇಳು. ಅದು ಗೋಪ್ಯವಾದ ವಿಷಯವಾಗದೆ ಇದ್ದರೆ ನಮಗೆ ತಿಳಿಸು' ಎಂದರು.

ಅದಕ್ಕೆ **ಸಾವಿತ್ರಿಯು** 'ನೀವು ಹೇಳಿದ ಮಾತು ಸರಿ. ನಿಮ್ಮ ಸಂಕಲ್ಪವು ವ್ಯರ್ಥವಾಗಲಾರದು. ಈ ವಿಷಯದಲ್ಲಿ ರಹಸ್ಯವೊಂದೂ ಇಲ್ಲ. ಸತ್ಯವಾದ ವಿಷಯವನ್ನೇ ತಿಳಿಸುವೆನು. ಕೇಳಿರಿ. ಮೊದಲೇ ನಾರದರು ನನ್ನೊಡನೆ ನನ್ನ ಪತಿಯ ಮರಣದ ದಿವಸವನ್ನು ಹೇಳಿದ್ದರು. ಅದು ಇದೇ ದಿನವೇ ಆದುದರಿಂದ ನಾನು ಈ ದಿನ ಇವರನ್ನು ಬಿಟ್ಟಿರಲಿಲ್ಲ. ಇವರು ಕಾಡಿನಲ್ಲಿ ಮಲಗಿರುವಾಗ ಸಾಕ್ಷಾತ್ **ಯಮದೇವರು** ಬಂದರು. ಇವರನ್ನು ಪಾಶದಿಂದ ಕಟ್ಟಿಕೊಂಡು ದಕ್ಷಿಣದಿಕ್ಕಿಗೆ ಹೋದರು. **ನಾನು ಸತ್ಯವಚನಗಳಿಂದ ಆ ಪ್ರಭುವನ್ನು ಸ್ತುತಿಸಿದೆನು.** ಅದರಿಂದ ವರು ನನಗೆ **ಐದು ವರಗಳನ್ನು ಕೊಟ್ಟರು.** (1)ಮಾವಂದಿರಿಗೆ ಕಣ್ಣುಗಳು ಬರಬೇಕು. (2)ರಾಜ್ಯವು ಸಿಗಬೇಕು ಎಂದು ಎರಡು ವರಗಳನ್ನು ಕೇಳಿಕೊಂಡೆನು. ಆಮೇಲೆ (3)ನನ್ನ ತಂದೆಗೆ ನೂರು ಮಕ್ಕಳಾಗುವಂತೆಯೂ, (4)ನನಗೆ ನೂರು

ಮಕ್ಕಳಾಗುವಂತೆಯೂ ವರವನ್ನು ಕೇಳಿದೆನು. ಮತ್ತೆ ಕೊಟ್ಟ (5)ವರದಿಂದ ಪತಿಗಳು ನಾಲ್ಕುನೂರು ವರ್ಷ ಆಯುಷ್ಯವುಳ್ಳವರಾಗಿ ಬದುಕುವಂತೆ ಕೇಳಿಕೊಂಡೆನು. **ಗಂಡನು ಬದುಕಬೇಕೆಂದೇ ನಾನು ಮೂರು ದಿನ ಉಪವಾಸಮಾಡಿ ವ್ರತವನ್ನು ಮಾಡಿದೆನು.** ಈ ಪ್ರಕಾರವಾಗಿ ಕಾರಣವನ್ನು ನಿಮಗೆ ವಿಸ್ತಾರವಾಗಿ ಹೇಳಿದ್ದೇನೆ. ನಾನು ಉಪವಾಸ ಮಾಡಿ ಕಷ್ಟಪಟ್ಟು ಮಾಡಿದ ವ್ರತವು ಮುಂದಿನ ಸುಖಕ್ಕೆ ಕಾರಣವಾಯಿತು' ಎಂದು ಹೇಳಿದಳು.

ಆಗ ಋಷಿಗಳು 'ಪತಿವ್ರತೆಯಾದ ಸಾವಿತ್ರಿ! ವ್ಯಸನದಿಂದ ಕೂಡಿದ ದುಃಖ ಮಯವಾದ ಮಡುವಿನಲ್ಲಿ ಮುಳುಗಿಹೋದ ರಾಜನ ಕುಲವನ್ನು ಒಳ್ಳೇ ಶೀಲವ್ರತ ಪುಣ್ಯಗಳುಳ್ಳ ಸತ್ಕುಲದಲ್ಲಿ ಜನಿಸಿದ ನೀನು ಪುನಃ ಉದ್ಧಾರ ಮಾಡಿದಿಯಮ್ಮ' ಎಂದು ಹೊಗಳಿದರು.

ಈರೀತಿ ಉತ್ತಮಸ್ತ್ರೀಯಾದ ಸಾವಿತ್ರಿಯನ್ನು ಸತ್ಕರಿಸಿ ಸ್ತೋತ್ರ ಮಾಡಿ ರಾಜನೊಡನೆಯೂ ರಾಜಪುತ್ರನೊಡನೆಯೂ ಹೇಳಿಕೊಂಡು ಸಂತೋಷದಿಂದ ತಮ್ಮ ಆಶ್ರಮಗಳಿಗೆ ಹೋದರು.

ತರುವಾಯ ಆ ರಾತ್ರಿಯು ಕಳೆದು ಮರುದಿವಸದಲ್ಲಿ ಸೂರ್ಯೋದಯ ವಾಗಲು ಎಲ್ಲಾ ಋಷಿಗಳೂ ಪೂರ್ವಾಹ್ನಿಕದಲ್ಲಿ ಮಾಡುವ ನಿಯಮಗಳನ್ನು ತೀರಿಸಿಕೊಂಡು ದ್ಯುಮತ್ಸೇನನ ಆಶ್ರಮಕ್ಕೇ ಬಂದು ಸೇರಿದರು. ಮಹರ್ಷಿಗಳು ದ್ಯುಮತ್ಸೇನನೊಡನೆ ಸಾವಿತ್ರಿಯ ಮಹಾಭಾಗ್ಯವನ್ನು ಪುನಃಪುನಃ ಎಷ್ಟು ಹೇಳಿದರೂ ತೃಪ್ತಿಯನ್ನು ಹೊಂದಲೇ ಇಲ್ಲ. ತರುವಾಯ ಸಾಲ್ವದೇಶದ ಜನರೆಲ್ಲಾ ಬಂದು 'ನಿಮ್ಮ ದ್ವೇಷಿಯಾದ ರಾಜನನ್ನು ಮಂತ್ರಿಯು ಕೊಂದುಬಿಟ್ಟನು. ಸಹಾಯಕರಿಂದಲೂ ಬಂಧುಗಳಿಂದಲೂ ಸಹಿತನಾದ ರಾಜನನ್ನು ಮಂತ್ರಿಯು ಸಂಹರಿಸಲು ಶತ್ರುಸೇನೆ ಯೆಲ್ಲಾ ಓಡಿಹೋಯಿತು. ಊರಜನರಿಗೆಲ್ಲಾ ಕಣ್ಣಿರಲೀ ಇಲ್ಲದಿರಲಿ ನಮಗೆ ಮೊದಲಿನ ರಾಜನೇ ಬೇಕು. ಐಕಮತ್ಯವುಂಟಾಗಿದೆ. ಆ ನಿಶ್ಚಯದಿಂದ ನಮ್ಮನ್ನು ಊರಜನರೆಲ್ಲರೂ ಕಳುಹಿಸಿದ್ದಾರೆ. ವಾಹನಗಳೆಲ್ಲಾ ಬಂದಿವೆ. ಚತುರಂಗಸೈನ್ಯವೂ ನಿಮ್ಮ ವಶವಾಗಿದೆ. ಊರಲ್ಲೆಲ್ಲಾ ನಿಮ್ಮ ಜಯವನ್ನು ಡಂಗುರಸಾರಿಸಿದೆ. ಪರಂಪರಾಪ್ರಾಪ್ತವಾದ ರಾಜ್ಯವನ್ನು ಆಳಿರಿ' ಎಂದು ಹೇಳಿದರು.

ಬಂದ ಜನರು ರಾಜನಿಗೆ ಕಣ್ಣು ಬಂದಿರುವುದನ್ನೂ ಅವನು ತೇಜಸ್ವಿಯಾಗಿರುವುದನ್ನೂ ನೋಡಿ ಆಶ್ಚರ್ಯವುಳ್ಳವರಾಗಿ ಎಲ್ಲರೂ ಶಿರಸ್ಸಿನಿಂದ ನಮಸ್ಕರಿಸಿದರು. ತರುವಾಯ ರಾಜನು ಆಶ್ರಮವಾಸಿಗಳಾದ ವೃದ್ಧರಾದ ಬ್ರಾಹ್ಮಣ

ರಿಗೆ ನಮಸ್ಕರಿಸಿ ಅವರೆಲ್ಲರಿಂದ ಸತ್ಕೃತನಾಗಿ ರಾಜ್ಯಕ್ಕೆ ಹೋದನು. ಶೈಬ್ಯೆಯೂ ಸಾವಿತ್ರಿಯೂ ಸೈನ್ಯದಿಂದ ಸಹಿತರಾಗಿ ಜನರು ಹೊರುವ ಡೋಲಿಯಲ್ಲಿ (ಮೇನೆ ಯಲ್ಲಿ) ಕೂತುಕೊಂಡು ಹೋದರು. ತರುವಾಯ ಪುರೋಹಿತರು ಸಂತೋಷ ದಿಂದ ರಾಜ್ಯನಿಗೆ ಪಟ್ಟಾಭಿಕೇಷ ಮಾಡಿದರು. ಸತ್ಯವಾನನಿಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು. ತರುವಾಯ ಬಹುಕಾಲವಾಗಲು ಸಾವಿತ್ರಿಗೆ ಪರಾಕ್ರಮ ಶಾಲಿಗಳಾದ ಕೀರ್ತಿವರ್ಧಕರಾದ ನೂರು ಜನ ಮಕ್ಕಳು ಹುಟ್ಟಿದರು. ಅದೇ ರೀತಿಯಾಗಿ ನೂರುಜನ ತಮ್ಮಂದಿರೂ ಹುಟ್ಟಿದರು. **ಈರೀತಿಯಾಗಿ ಸಾವಿತ್ರಿಯು ತಂದೆತಾಯಿ ಅತ್ತೆ ಮಾವಂದಿರನ್ನೂ ಗಂಡನ ಕುಲವನ್ನೂ ಉದ್ಧಾರ ಮಾಡಿದಳು.**



## ಸಗರ ರಾಜನ ಕಥೆ [1]

ಇಕ್ಷ್ವಾಕುವಂಶದಲ್ಲಿ ಸಗರ ಎಂಬ ರಾಜನಿದ್ದನು. ಅವನು ರೂಪವಂತನಾಗಿದ್ದನು. ಬಲಿಷ್ಠನಾಗಿದ್ದನು. ಪ್ರತಾಪಶಾಲಿಯಾಗಿದ್ದನು. ಅವನಿಗೆ ಮಕ್ಕಳು ಇರಲಿಲ್ಲ. ಅವನು ಹೈಹಯ ತಾಲಜಂಘ ಎಂಬ ರಾಜರನ್ನು ಸಂಹರಿಸಿ ಇತರ ರಾಜರನ್ನು ತನ್ನ ಅಧೀನ ಮಾಡಿಕೊಂಡು ರಾಜ್ಯವನ್ನು ಆಳುತ್ತಿದ್ದನು. ಅವನಿಗೆ ಸುಂದರಿಯರಾದ ಯುವತಿಯರಾದ ಇಬ್ಬರು ಹೆಂಡತಿಯರಿದ್ದರು. ರಾಜನು ಮಕ್ಕಳಾಗಬೇಕೆಂಬ ಆಸೆಯಿಂದ ಪತ್ನಿಯರನ್ನು ಕರೆದುಕೊಂಡು ಕೈಲಾಸಪರ್ವತಕ್ಕೆ ಹೋಗಿ ತಪಸ್ಸು ಮಾಡಿದನು. ರಾಜನು ಮಹಾತಪಸ್ಸನ್ನು ಮಾಡುತ್ತಾ ಪೂಜ್ಯರಾದ ರುದ್ರದೇವರನ್ನು ನೋಡಿದನು. ನೋಡಿದ ಮಾತ್ರವೇ ರಾಜನು ತನ್ನ ಪತ್ನಿಯರಿಂದ ಕೂಡಿಕೊಂಡು ನಮಸ್ಕರಿಸಿ ತನಗೆ ಮಕ್ಕಳಾಗುವಂತೆ ಅನುಗ್ರಹಿಸಬೇಕೆಂದು ಕೇಳಿದನು. ಆಗ ರುದ್ರದೇವರು ಪ್ರೀತರಾಗಿ 'ರಾಜನೇ! ನೀನು ಈ ಮುಹೂರ್ತದಲ್ಲಿ ವರವನ್ನು ಕೇಳಿಕೊಂಡೆಯಾದ ಕಾರಣ ನಿನಗೆ ಒಂದು ಪತ್ನಿಯಲ್ಲಿ ಅರವತ್ತು ಸಾವಿರ ಶೂರರಾದ ಮಕ್ಕಳು ಹುಟ್ಟುವರು. ಆದರೆ ಅವರೆಲ್ಲರೂ ಒಟ್ಟಿಗೆ ಸಾಯುವರು. ಮತ್ತೊಬ್ಬ ಹೆಂಡತಿಯಲ್ಲಿ ಶೂರನಾದ ವಂಶಕ್ಕೆ ಕಾರಣನಾದ ಮಗನು ಹುಟ್ಟುವನು' ಎಂದು ಹೇಳಿ ಮರೆಯಾದರು. ಸಗರರಾಜನು ತನ್ನ ಪತ್ನಿಯರನ್ನು ಕರೆದುಕೊಂಡು ಸಂತೋಷದಿಂದ ಮನೆಗೆ ಬಂದನು.

---

1. ಮಭಾ. ವಪ. ಅ-105, 106). ವಾರಾ. ಬಾ.ಕಾಂ. .38-43

ತರುವಾಯ ಸಗರರಾಜನು ಇಬ್ಬರು ಹೆಂಡತಿಯರೂ ಗರ್ಭಿಣಿಯರಾದರು. ಶೈಬ್ಯೆಯು ದೇವತೆಯಂತೆ ಇರುವ ಮಗುವನ್ನು ಹಡೆದಳು. ವೈದರ್ಭಿಯು ಒಂದು ಸೋರೆಕಾಯಿಯನ್ನು ಹಡೆದಳು. ತರುವಾಯ ರಾಜನು ಆ ಸೋರೆಕಾಯಿಯನ್ನು ಹೊರಗೆ ಬಿಸಾಡಲಿಕ್ಕೆ ಯೋಚಿಸಿದನು. ಆಗ 'ರಾಜನೇ! ಸಾಹಸವನ್ನು ಮಾಡಬೇಡ. ಮಕ್ಕಳನ್ನು ಪರಿತ್ಯಾಗ ಮಾಡಬೇಡ. ಸೋರೆಕಾಯಿಯ ಮಧ್ಯದಿಂದ ಬೀಜಗಳನ್ನು ತೆಗೆದು ಬೆಚ್ಚಗಾರಿರುವ ತುಂಬದಿಂದ ತುಂಬಿದ ಗಡಿಗೆಗಳನ್ನು ಇಟ್ಟು ರಕ್ಷಿಸು. ಇದರಿಂದ ಅರವತ್ತು ಸಾವಿರ ಮಕ್ಕಳನ್ನು ಪಡೆಯುವಿ' ಎಂದು ಅಶರೀರವಾಣಿಯು ಕೇಳಿಸಿತು. (ಅ.298-36 ರಿಂದ 42)

ರಾಜನು ಈರೀತಿಯಾಗಿ ಆಕಾಶವಾಣಿಯನ್ನು ಕೇಳಿ ವಿಶ್ವಾಸದಿಂದ ಹಾಗೆಯೇ ಮಾಡಿದನು. ಒಂದೊಂದು ಬೀಜವನ್ನು ಒಂದೊಂದು ತುಪ್ಪದ ಗಡಿಗೆಗಳಲ್ಲಿ ಇಟ್ಟು ಒಂದೊಂದನ್ನು ನೋಡಿಕೊಳ್ಳಲಿಕ್ಕೆ ಒಬ್ಬೊಬ್ಬ ದಾದಿಯನ್ನು ನೇಮಿಸಿದನು. ತರುವಾಯ ಬಹುಕಾಲವಾದ ಮೇಲೆ ರುದ್ರ ದೇವರ ಅನುಗ್ರಹದಿಂದ ಅತ್ಯಂತ ತೇಜಸ್ವಿಗಳಾದ ಅರವತ್ತು ಸಾವಿರ ಮಕ್ಕಳು ಹುಟ್ಟಿದರು. ಅವರು ಕ್ರೂರಕರ್ಮವುಳ್ಳವರಾಗಿದ್ದರು. ಭಯಂಕರರಾಗಿದ್ದರು. ತಾವು ಬಹಳ ಜನರಿದ್ದ ಪ್ರಯುಕ್ತ ಎಲ್ಲರನ್ನೂ ದೇವತೆಗಳನ್ನು ಅವಮಾನಮಾಡುತ್ತಿದ್ದರು. ದೇವತೆಗಳನ್ನೂ ಗಂಧರ್ವರನ್ನೂ ಎಲ್ಲಾ ಪ್ರಾಣಿಗಳನ್ನೂ ಹಿಂಸಾಮಾಡಿದರು. ಎಲ್ಲರೂ ಈ ರೀತಿಯಾಗಿ ಅವರಿಂದ ಪೀಡಿತರಾಗಿ ದೇವತೆಗಳಿಂದ ಸಹಿತರಾಗಿ ಬ್ರಹ್ಮದೇವರನ್ನು ಮರೆಹೊಂದಿದರು. ಆಗ ಮಹಾನುಭಾವರಾದ ಬ್ರಹ್ಮದೇವರು 'ದೇವತೆಗಳೇ! ನೀವೆಲ್ಲರೂ ನಿಮ್ಮ ಸ್ಥಾನಕ್ಕೆ ಹೋಗಿರಿ. ಬೇಗನೇ ಸಗರರಾಜನ ಮಕ್ಕಳ ನಾಶವು ಆಗುವುದು' ಎಂದರು. ಈರೀತಿಯಾಗಿ ಬ್ರಹ್ಮದೇವರ ಮಾತನ್ನು ಕೇಳಿ ತಮ್ಮ ಲೋಕಕ್ಕೆ ಹೊರಟುಹೋದರು. ಸ್ವಲ್ಪಕಾಲವು ಹೋದಮೇಲೆ ಬಲಿಷ್ಠನಾದ ಸಗರರಾಜನು ಅಶ್ವಮೇಧಯಾಗವನ್ನು ಮಾಡಲಿಕ್ಕೆ ದೀಕ್ಷಿತನಾದನು. ಅವನ ಕುದುರೆಯು ಅವನ ಅರವತ್ತು ಸಾವಿರ ಮಕ್ಕಳಿಂದ ರಕ್ಷಿತವಾಗಿ ಭೂಮಿಯಲ್ಲಿ ಸಂಚರಿಸಿಕೊಂಡು ಹೋಯಿತು. ಆ ಕುದುರೆಯು ಸಮುದ್ರದ ಬಳಿಗೆ ಹೋಗಿ ನೀರಿಲ್ಲದೆ ಇರುವ ಆ ಸಮುದ್ರದಲ್ಲಿ ಇಳಿದು ರಾಜಪುತ್ರರು ಎಷ್ಟು ರಕ್ಷಣೆ ಮಾಡಿಕೊಂಡು ಇದ್ದರೂ ಕಾಣದೆ ಹೋಯಿತು. ತರುವಾಯ ಸಾಗರರು ಯಾರೋ ಕುದುರೆಯನ್ನು ಅಪಹರಿಸಿಕೊಂಡು ಹೋದರು ಎಂದು ತಿಳಿದುಕೊಂಡು ತಂದೆಯ ಬಳಿಗೆ ಬಂದು ಕುದುರೆಯು ಕಾಣಿಸದೆ ಹೋದದ್ದನ್ನು ತಿಳಿಸಿದರು. ಅದಕ್ಕೆ ಸಗರರಾಜನು 'ಮಕ್ಕಳೇ! ಎಲ್ಲಾ

ದಿಕ್ಕುಗಳಲ್ಲಿಯೂ ಕುದುರೆಯನ್ನು ಹುಡುಕಿರಿ' ಎಂದನು. ತರುವಾಯ ಎಲ್ಲ ದಿಕ್ಕುಗಳಲ್ಲಿಯೂ ಕುದುರೆಯನ್ನು ಹುಡುಕಿದರು. ತರುವಾಯ ಎಲ್ಲಿ ಹುಡುಕಿದರೂ ಕುದುರೆಯನ್ನಾಗಲೀ ಕುದುರೆಯನ್ನು ಅಪಹರಿಸಿದವನನ್ನಾಗಲೀ ನೋಡಲೇ ಇಲ್ಲ. ತರುವಾಯ ತಂದೆಯ ಸಮೀಪಕ್ಕೆ ಬಂದು ಕೈಮುಗಿದುಕೊಂಡು ನಿಮ್ಮ ಆಜ್ಞೆಯಂತೆ ಎಲ್ಲಾ ಭೂಮಿಯನ್ನು ಹುಡುಕಿದೆವು. ಕುದುರೆಯು ಸಿಗಲಿಲ್ಲ ಎಂದರು. ಅವರ ಮಾತನ್ನು ಕೇಳಿ ರಾಜನು ಕೋಪವುಳ್ಳವನಾಗಿ ದೈವೇಚ್ಛೆಯಿಂದ 'ನೀವು ಹಿಂದೆ ತಿರುಗಿ ಬರುವುದೇ ಬೇಡ. ಹೋಗಿರಿ. ಕುದುರೆಯನ್ನು ಹುಡುಕಿರಿ. ಆ ಕುದುರೆಯಿಲ್ಲದೆ ಪುನಃ ಬರಬೇಡಿರಿ' ಎಂದನು. ತಂದೆಯ ಆಜ್ಞೆಯಿಂದ ಅವರು ಭೂಮಿಯಲ್ಲೆಲ್ಲಾ ಹುಡುಕಿಕೊಂಡು ಹೋದರು. ಒಂದು ಸ್ಥಳದಲ್ಲಿ ಭೂಮಿಯು ಸೀಳಿರುವುದನ್ನು ನೋಡಿದರು. ಸಮುದ್ರದಲ್ಲಿ ಕುದುರೆಯು ಹೋದ ಮಾರ್ಗವನ್ನು ನೋಡಿದರು. ಅದನ್ನು ನೋಡಿ ಹಾರೆ ಪಿಕ್ಕಾಸಿ ಇತ್ಯಾದಿ ಆಯುಧಗಳಿಂದ ಸಮುದ್ರವನ್ನು ಅಗೆಯಲಿಕ್ಕೆ ಆರಂಭಿಸಿದರು. ಇದರಿಂದ ಸಮುದ್ರವು ದುಃಖವನ್ನು ಹೊಂದಿತು. ಅಸುರ ಸರ್ಪ ಇತ್ಯಾದಿ ಪ್ರಾಣಿಗಳೂ ಸಾಗರದಿಂದ ಬಡಿಯಲ್ಪಟ್ಟವರಾಗಿ ಆರ್ತಧ್ವನಿಯನ್ನು ಮಾಡಿದವು. ನೂರಾರು ಪ್ರಾಣಿಗಳ ತಲೆಯು ತುಂಡಾಯಿತು. ಕಾಲು ಅಂಗಗಳು ಮುರಿದು ಹೋದವು. ಈರೀತಿಯಾಗಿ ಸಮುದ್ರವನ್ನು ತೋಡುತ್ತಾ ಬಹುಕಾಲವಾಯಿತು. ಕುದುರೆಯು ಕಾಣಿಸಲಿಲ್ಲ. ತರುವಾಯ ಸಮುದ್ರದ ಪೂರ್ವೋತ್ತರ ದೇಶದಲ್ಲಿ ತೋಡಿ ಕೋಪದಿಂದ ಸಗರರಾಜನ ಮಕ್ಕಳು ಪಾತಾಳವನ್ನು ಪ್ರವೇಶಿಸಿ ಅಲ್ಲಿ ಸಂಚರಿಸುತ್ತದ್ದ ಕುದುರೆಯನ್ನು ನೋಡಿದರು. ತೇಜಸ್ಸಿನಿಂದ ಜ್ವಲಿಸುತ್ತಿದ್ದ ಕಪಿಲದೇವರನ್ನೂ ನೋಡಿದರು. ನೋಡಿ ಅವರೆಲ್ಲರೂ ಆಶ್ಚರ್ಯಉಳ್ಳವರಾದರು.

ಸಗರರಾಜನ ಮಕ್ಕಳು ಕುದುರೆಯನ್ನು ನೋಡಿ ಸಂತೋಷದಿಂದ ರೋಮಾಂಚಿತ ಗಾತ್ರರಾಗಿ ಕಾಲಪ್ರೇರಿತರಾಗಿ ಮಹಾನುಭಾವರಾದ ಕಪಿಲ ದೇವರನ್ನು ಲಕ್ಷ್ಯ ಮಾಡದೆ ಕೋಪಿಸಿಕೊಂಡು ಕುದುರೆಯನ್ನು ಹಿಡಿಯಲಿಕ್ಕೆ ಓಡಿದರು. ತರುವಾಯ ಕಪಿಲದೇವರು ಕೋಪದಿಂದ ಕಣ್ಣುತೆರೆದು ನೋಡಿದರು. ಇದರಿಂದ ಆ ಅರವತ್ತು ಸಾವಿರಜನರೂ ಭಸ್ಮವಾಗಿ ಹೋದರು. ಇದನ್ನು ನೋಡಿ ಮಹಾತಪಸ್ವಿಯಾದ ನಾರದರು ಸಗರರಾಜನ ಬಳಿಗೆ ಬಂದು ತಿಳಿಸಿದರು. ಸಗರರಾಜನು ನಾರದರ ಮುಖದಿಂದ ಆ ಭಯಂಕರವಾದ ವರ್ತಮಾನವನ್ನು ಕೇಳಿ ಒಂದು ಮುಹೂರ್ತಕಾಲ ದುಃಖವುಳ್ಳವನಾಗಿ ಆಮೇಲೆ ರುದ್ರದೇವರ ಮಾತನ್ನು

ಸ್ಮರಿಸಿಕೊಂಡನು. ರಾಜನು ಮಕ್ಕಳ ಮರಣದ ದುಃಖವುಳ್ಳವನಾಗಿ ತರುವಾಯ ತಾನಾಗಿಯೇ ಸಮಾಧಾನ ಮಾಡಿಕೊಂಡು ಕುದುರೆಯನ್ನು ಯೋಚಿಸಿದನು. ತರುವಾಯ ತನ್ನ ಮೊಮ್ಮಗನಾದ ಅಸಮಂಜನ ಮಗನಾದ ಅಂಶುಮಂತನನ್ನು ಕರೆದು, 'ಅರವತ್ತು ಸಾವಿರ ನನ್ನ ಮಕ್ಕಳು ನನಗಾಗಿ ಕಪಿಲದೇವರ ತೇಜಸ್ಸಿನಿಂದ ಭಸ್ಮವಾಗಿ ಹೋದರು. ನಿನ್ನ ತಂದೆಯನ್ನಾದರೊ ಧರ್ಮವನ್ನು ರಕ್ಷಿಸುವುದಕ್ಕಾಗಿ ಊರ ಜನರ ಹಿತಕ್ಕಾಗಿ ಮೊದಲೇ ಪರಿತ್ಯಾಗ ಮಾಡಿರುವೆನು. ನಿನ್ನ ತಂದೆಯನ್ನು ಪರಿತ್ಯಾಗ ಮಾಡಿದ್ದರಿಂದಲೂ ಮಕ್ಕಳೆಲ್ಲರೂ ಸತ್ತು ಹೋದುದರಿಂದಲೂ ಕುದುರೆಯು ತಪ್ಪಿಹೋದ ಪ್ರಯುಕ್ತ ಸಂತಾಪಪಡುತ್ತೇನೆ. ಆದುದರಿಂದ ದುಃಖಪರವಶನಾದ ಯಜ್ಞವಿಘ್ನದಿಂದ ಮೋಹಿತನಾದ ನನ್ನನ್ನು ಕುದುರೆಯನ್ನು ತಂದುಕೊಟ್ಟು ನರಕದಿಂದ ಉದ್ಧರಿಸು ಎಂದನು.

(ಸಗರರಾಜನಿಗೆ ಶೈಬ್ಯಾ ಎಂಬ ಹೆಂಡತಿಯಲ್ಲಿ ಅಸಮಂಜ ಎಂಬ ಮಗನು ಹುಟ್ಟಿದನು. ಅವನು ಅಲ್ಲಲ್ಲಿ ಆಡುತ್ತಾ ಇರುವ ಊರ ಜನರ ಬಾಲಕರನ್ನು ಅಳುತ್ತಿರುವಂತೆ ತಲೆಕೂದಲನ್ನು ಹಿಡಿದು ಎಳೆದುಕೊಂಡು ಬಂದು ನದಿಯಲ್ಲಿ ಹಾಕುತ್ತಿದ್ದನು. ತರುವಾಯ ಊರಜನರು ಎಲ್ಲರೂ ದುಃಖಉಳ್ಳವರಾಗಿ ಸಗರರಾಜನ ಬಳಿಗೆ ಬಂದು ಕೈಮುಗಿದುಕೊಂಡು 'ಮಹಾರಾಜನೇ! ನೀನು ನಮ್ಮನ್ನು ಶತ್ರುರಾಜರ ಭಯದಿಂದ ಕಾಪಾಡುತ್ತಿರುವಿ. ಹಾಗೆಯೇ ಈಗ ಘೋರವಾದ ಅಸಮಂಜನ ಭಯದಿಂದ ರಕ್ಷಿಸಬೇಕು' ಎಂದು ಹೇಳಿಕೊಂಡರು. ಊರಜನರ ಘೋರವಾದ ಮಾತನ್ನು ಕೇಳಿ ಸ್ವಲ್ಪ ಹೊತ್ತು ರಾಜನು ಯೋಚನೆ ಮಾಡುವವನಾಗಿ ಆಮೇಲೆ ಮಂತ್ರಿಗಳೊಡನೆ ನನ್ನ ಮಗನಾದ ಅಸಮಂಜನನ್ನು ಈಗಲೆ ನಮ್ಮ ಊರಿನಿಂದ ದೂರಕ್ಕೆ ಕಳುಹಿಸಬೇಕು. ನೀವು ನನಗೆ ಪ್ರಿಯವನ್ನು ಮಾಡಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದರೆ ಬೇಗನೆ ಹೀಗೆ ಮಾಡಬೇಕು' ಎಂದನು. ಮಂತ್ರಿಗಳು ರಾಜನ ಮಾತನ್ನು ಕೇಳಿ ಕೂಡಲೇ ಹಾಗೆಯೇ ಮಾಡಿದರು. 'ಅಸಮಂಜನು ಮಹಾಯೋಗಿಯು. ಅವನಿಗೆ ಪೂರ್ವಸ್ಮರಣೆಯೆಲ್ಲಾ ಇದ್ದಿತು. ತನ್ನಲ್ಲಿ ಒಬ್ಬರಿಗೂ ಸ್ನೇಹವು ಉಂಟಾಗದೆ ಇರಲಿ ಎಂದು ಹಾಗೆ ಮಕ್ಕಳನ್ನೆಲ್ಲಾ ನದಿಯಲ್ಲಿ ಹಾಕುತ್ತಿದ್ದನು. ರಾಜನು ಊರನ್ನೇ ಬಿಟ್ಟು ಹೋಗಲು ಆಜ್ಞಾಪಿಸಲು, ಅವನು ತಾನು ನದಿಗೆ ಹಾಕಿದ ಮಕ್ಕಳನ್ನೆಲ್ಲಾ ತನ್ನ ಯೋಗಸಾಮರ್ಥ್ಯದಿಂದ ಬದುಕಿಸಿ ಹೊರಟುಹೋದನು. ಊರಜನರೆಲ್ಲರೂ ತಮ್ಮ ಮಕ್ಕಳೆಲ್ಲ ತಮ್ಮ ಮನೆಗೆ ಬರಲು ತುಂಬಾ ಆಶ್ಚರ್ಯಪಟ್ಟರು. ರಾಜನೂ ಈ ವರ್ತಮಾನವನ್ನು ಕೇಳಿ ಪಶ್ಚಾತ್ತಾಪವನ್ನು

ಹೊಂದಿದನು' ಎಂದು ಭಾಗವತದಲ್ಲಿ ಹೇಳಿದೆ.)

ಪೂರ್ವದಲ್ಲಿ ಹೇಳಿದಂತೆ ಸಗರರಾಜನಿಂದ ಆಜ್ಞೆಯನ್ನು ಹೊಂದಿದ ಅಂಶುಮಂತನು ದುಃಖದಿಂದ ಭೂಮಿಯು ಸೀಳಿಹೋಗಿರುವ ಆ ಸ್ಥಳಕ್ಕೆ ಹೋದನು. ಅದೇ ಮಾರ್ಗದಿಂದ ಸಮುದ್ರವನ್ನು ಪ್ರವೇಶಿಸಿದನು. ಅಲ್ಲಿ ಪಾತಾಳದಲ್ಲಿ ಕಪಿಲದೇವರನ್ನೂ ಕುದುರೆಯನ್ನೂ ನೋಡಿದನು. ಕಪಿಲದೇವರನ್ನು ನೋಡಿ ಶಿರಸಾನಮಸ್ಕಾರವನ್ನು ಮಾಡಿ ಕಾರ್ಯವನ್ನು ತಿಳಿಸಿದನು. ತರುವಾಯ ಕಪಿಲದೋವರು ಅಂಶುಮಂತನ ಮೇಲೆ ಸಂತುಷ್ಟರಾದರು. ವರವನ್ನು ಕೊಡುವೆನು ಎಂದರು. ಅಂಶುಮಂತನು ಮೊದಲು ಯಜ್ಞಕ್ಕಾಗಿ ಕುದುರೆಯನ್ನು ಕೇಳಿಕೊಂಡನು. ಎರಡನೆಯದಾಗಿ ಮೃತರಾದ ತನ್ನ ಪಿತೃಗಳಿಗೆಲ್ಲಾ ಪಾವಿತ್ರ್ಯಕ್ಕೋಸ್ಕರ ನೀರನ್ನು ಕೊಡಬೇಕು ಎಂದು ಕೇಳಿಕೊಂಡನು.

ಆಗ ಕಪಿಲದೇವರು 'ನಿನಗೆ ಮಂಗಳವಾಗಲಿ. ನೀನು ಪ್ರಾರ್ಥಿಸಿದ್ದನ್ನೆಲ್ಲಾ ಕೊಡುವೆನು. ನಿನ್ನಲ್ಲಿ ಕ್ಷಮೆಯೂ ಇಂದ್ರಿಯನಿಗ್ರಹವೂ ಸತ್ಯವೂ ಇದೆ. ನಿನ್ನಿಂದ ಸಗರರಾಜನು ಕೃತಾರ್ಥನಾದನು. ನಿನ್ನ ತಂದೆಯು ಸತ್ಪುತ್ರವಂತನಾದನು. ನಿನ್ನ ಪ್ರಭಾವದಿಂದ ಸಾಗರರು ಸ್ವರ್ಗವನ್ನು ಹೊಂದುವರು. ನಿನ್ನ ಮೊಮ್ಮಗನು ರುದ್ರದೇವರನ್ನು ಸಂತೋಷಪಡಿಸಿ, ಸಾಗರರ ಪಾವಿತ್ರ್ಯಕ್ಕಾಗಿ ಸ್ವರ್ಗದಿಂದ ಗಂಗೆಯನ್ನು ತರಿಸುವನು. ನೀನು ಯಜ್ಞದ ಕುದುರೆಯನ್ನು ತೆಗೆದುಕೊಂಡು ಹೋಗು. ಮಹಾನುಭಾವನಾದ ಸಗರರಾಜನ ಯಜ್ಞವು ಮುಗಿಯಲಿ' ಎಂದು ಹೇಳಿದರು.



## ನೃಗರಾಜನ ಕಥೆ[1]

ಒಂದು ದಿನದಲ್ಲಿ ಪ್ರದ್ಯುಮ್ನ ಚಾರು ಭಾನು ಗದ ಮೊದಲಾದ ಯದುಕುಮಾರರು ತೋಟಕ್ಕೆ ವಿಹಾರಮಾಡಲಿಕ್ಕೆ ಹೋದರು. ಅಲ್ಲಿ ಬಹುಹೊತ್ತು ಆಟವಾಡಿದವರಾಗಿ ಬಾಯಾರಿಕೆ (ನೀರಡಿಕೆ) ಆಗಲು ನೀರನ್ನು ಹುಡುಕುತ್ತಾ ಹೋದರು. ಒಂದು ಭಾವಿಯನ್ನು ನೋಡಿ ಆ ಭಾವಿಯ ಹತ್ತಿರ ಹೋದರು. ಆ ಭಾವಿಯಲ್ಲಿ ನೀರು ಇರಲಿಲ್ಲ. ಅದರಲ್ಲಿ ಪರ್ವತದಂತೆ ಒಂದು ದೊಡ್ಡ ಓತಿಯನ್ನು ನೋಡಿದರು. ಆಶ್ಚರ್ಯವುಳ್ಳವರಾಗಿ ಅದಕ್ಕೆ ಮೇಲಕ್ಕೆ ಎತ್ತಿಹಾಕಬೇಕೆಂದು ಚರ್ಮಗಳಿಂದ

1. ಮಭಾ. ಅನು.ಪ. -70. ಭಾಗ. X 87

ಹಗ್ಗಗಳಿದ ಕಟ್ಟಿ ಎಳೆದರು. ಅದನ್ನು ಎಳೆಯಲಿಕ್ಕೆ ಆಗಲೇ ಇಲ್ಲ. ಆಮೇಲೆ ಆಶ್ಚರ್ಯವುಳ್ಳವರಾಗಿ ಕೃಷ್ಣಪರಮಾತ್ಮನ ಬಳಿಗೆ ಬಂದು ತಿಳಿಸಿದರು. ಭಗವಂತನು ಅಲ್ಲಿಗೆ ಹೋಗಿ ನೋಡಿ ತನ್ನ ಎಡಕೈಯಿಂದ ಎತ್ತಿ ಮೇಲಕ್ಕೆ ಹಾಕಿದನು. ಆಗ ಭಗವಂತನ ಕರಸ್ಪರ್ಶವಾಗಲು ಓತಿಯ ದೇಹವನ್ನು ಬಿಟ್ಟು ಬಂಗಾರದಂತೆ ಬಣ್ಣವುಳ್ಳ ಸ್ವರ್ಗಕ್ಕೆ ಯೋಗ್ಯವಾದ ಆಭರಣಗಳನ್ನು ಧರಿಸಿದ ಒಬ್ಬ ಪುರುಷನು ನಿಂತನು. ಉದ್ದಕ್ಕೆ ಪರಮಾತ್ಮನ ಕಾಲುಗಳಿಗೆ ನಮಸ್ಕರಿಸಿದನು. ಆಗ ಭಗವಂತನು ಎಲ್ಲವನ್ನೂ ತಿಳಿದವನಾದರೂ ಜನರಿಗೆಲ್ಲಾ ತಿಳಿಸುವುದಕ್ಕಾಗಿ 'ನೀನು ಯಾರು? ದೇವೋತ್ತಮ ನಂತೆ ಇರುವಿ. ನಿನಗೆ ಈ ದೇಹವು ಹೇಗೆ ಬಂದಿತು. ಅದನ್ನು ತಿಳಿಸು' ಎಂದು ಕೇಳಿದನು.

ಆಗ ಆ ಪುರುಷನು 'ಪ್ರಭೋ! ನಾನು ಇಕ್ಷ್ವಾಕುರಾಜನ ಮಗನು ನೃಗ ಎಂದು ನನ್ನ ಹೆಸರು. ದಾನಮಾಡಿರುವವರ ಹೆಸರನ್ನು ಕೇಳುವಾಗ ನನ್ನ ಹೆಸರನ್ನೂ ಕೇಳಿರಬಹುದು. ಭಗವಂತನೇ! ಸರ್ವಜ್ಞನಾದ ನಿನಗೆ ತಿಳಿಯದ ವಿಷಯವಲ್ಲ. ಆದರೂ ನಿನ್ನ ಆಜ್ಞೆಯಿಂದ ನಾನು ಹೇಳುವೆನು. ಭೂಮಿಯಲ್ಲಿ ಎಷ್ಟು ಮಳೆಧಾರೆಗಳು ಬೀಳುವುವೋ ಅಷ್ಟು ಗೋವುಗಳ ದಾನವನ್ನು ಮಾಡಿರುವೆನು. ಗುಣಶೀಲವುಳ್ಳವ ರಾದ ಶ್ರಮಪಡುವ ಕುಟುಂಬಗಳಾದ ತಪಸ್ಸು ಶಾಸ್ತ್ರಶ್ರಣಾದಿಗಳನ್ನು ಮಾಡಿರುವ ಒಳ್ಳೇ ವ್ರತಗಳನ್ನು ಮಾಡಿರುವ ಯುವಕರಾದ ಬ್ರಾಹ್ಮಣಶ್ರೇಷ್ಠರಿಗೆ ಒಳ್ಳೇ ಹಾಲು ಕೊಡುವ ತಾರುಣ್ಯವುಳ್ಳ ಶೀಲರೂಪಗುಣಗಳುಳ್ಳ ನ್ಯಾಯದಿಂದ ಸಂಪಾದಿತಗಳಾದ ಕರುಗಳಿಂದ ಸಹಿತಗಳಾದ ಗೋವುಗಳನ್ನು ಅವುಗಳ ಕೊಂಬುಗಳಿಗೆ ಬಂಗಾರ ವನ್ನಿಟ್ಟು ಪಾದಗಳಲ್ಲಿ ಬೆಳ್ಳಿಯನ್ನು ಇಟ್ಟು ಪಟ್ಟೆಯ ವಸ್ತ್ರಗಳನ್ನು ಬೆನ್ನಿಗೆ ಹೊದಿಸಿ ದಾನಮಾಡಿರು.(ವೆನು) ಗೋದಾನ ಭೂದಾನ ಬಂಗಾರದಾನ ಗೃಹದಾನಗಳನ್ನು ಮಾಡಿರುವೆನು. ಕುದುರೆಗಳನ್ನೂ ಆನೆಗಳನ್ನೂ ದಾನ ಮಾಡಿರುವೆನು. ಹಾಗೆಯೇ ಅನೇಕ ಕನ್ಯಾದಾನಗಳನ್ನು ಮಾಡಿರುವೆನು. ದಾಸಿಯರಿಂದ ಸಹಿತ ಕನ್ಯಾದಾನ ಮಾಡಿರುವೆನು. ಶಯ್ಯಾದಾನ ತಿಲದಾನ ರಜತದಾನ ವಸ್ತ್ರದಾನ ರತ್ನಗಳ ದಾನ ರಥಗಳ ದಾನವನ್ನೂ ಮಾಡಿರುವೆನು. ಬೇಕಾದ ಯಜ್ಞಗಳನ್ನು ಮಾಡಿರುವೆನು. ಬೇಕಾದ ಧರ್ಮದ ಭಾವಿಗಳನ್ನು ಕಟ್ಟಿಸಿರುವೆನು. ಒಂದು ದಿನ ಒಬ್ಬ ಬ್ರಾಹ್ಮಣಶ್ರೇಷ್ಠನಿಗೆ ದಾನಮಾಡಿದ ದನವು ನಮಗೆ ತಿಳಿಯದೆ ನಮ್ಮ ದನಗಳ ಸಮೂಹದಲ್ಲಿ ಸೇರಿಬಿಟ್ಟಿತು. ಅದನ್ನು ಪೂರ್ವದಲ್ಲಿ ಒಬ್ಬನಿಗೆ ದಾನಮಾಡಿದ್ದೆನು ಎಂಬುದನ್ನು ತಿಳಿಯದೆ ಅದೇ ದನವನ್ನು ಮತ್ತೊಂದು ಬ್ರಾಹ್ಮಣನಿಗೆ

ದಾನಮಾಡಿದೆನು. ದಾನ ತೆಗೆದುಕೊಂಡ ಬ್ರಾಹ್ಮಣನೂ ಆ ದನವನ್ನು ಮನೆಗೆ ತೆಗೆದುಕೊಂಡು ಹೋಗುವಾಗ ಮೊದಲು ದಾನ ತೆಗೆದುಕೊಂಡು ಬ್ರಾಹ್ಮಣನು ನೋಡಿ ಇದು ನನ್ನ ದನವೆಂದನು. ಇಬ್ಬರೂ ಆ ದನಕ್ಕೆ ಜಗಳಾಡಿದರು. ನನ್ನ ಹತ್ತಿರ ಬಂದರು. ರಾಜನೇ! ನೀನೇ ನನಗೆ ದನವನ್ನು ದಾನಮಾಡಿ ನೀನೇ ಅಪಹರಿಸಿ ಇನ್ನೊಬ್ಬನಿಗೆ ಕೊಟ್ಟೆಯಾ ಎಂದು ಬ್ರಾಹ್ಮಣನು ಬಂದು ಕೇಳಿದನು. ಆಗ ನನಗೆ ಏನು ಹೇಳಬೇಕೆಂದೂ ತೋರಲಿಲ್ಲ, ಇಬ್ಬರನ್ನೂ ಸಮಾಧಾನಪಡಿಸಿದೆನು. ಈ ಒಂದು ದನಕ್ಕಾಗಿ ಜಗಳವಾಡಬೇಡಿರಿ. ಒಂದಕ್ಕೆ ಲಕ್ಷಗೋಗಳನ್ನು ಕೊಡುವೆನು ಎಂದು ಹೇಳಿದೆನು. ನೀವು ಅನುಗ್ರಹಿಸಬೇಕು. ನಾವು ಭೃತ್ಯನು ತಿಳಿಯದೆ ಈ ಅಧರ್ಮವು ಏರ್ಪಟ್ಟಿತು ಎಂದು ತುಂಬಾ ಕೇಳಿಕೊಂಡೆನು. ನನಗೆ ಬೇರೆ ಗೋವು ಬೇಕಾಗಿಲ್ಲ ಎಂದು ಹೇಳಿ ಆ ಗೋವನ್ನು ಬಿಟ್ಟು ಒಬ್ಬ ಬ್ರಾಹ್ಮಣನು ಹೊರಟುಹೋದನು. ನನಗೂ ಬೇಕಾಗಿಲ್ಲ ಎಂದು ಮತ್ತೊಬ್ಬ ಬ್ರಾಹ್ಮಣನೂ ಹೊರಟುಹೋದನು. ತರುವಾಯ ಕಾಲಕ್ರಮದಿಂದ ನಾನು ಮೃತನಾದ ಮೇಲೆ ಯಮದೂತರು ನನ್ನನ್ನು ಯಮಲೋಕಕ್ಕೆ ಕರೆದುಕೊಂಡು ಹೋದರು. ಅಲ್ಲಿ ಯಮದೇವರು 'ನೀನು ಮೊದಲು ಪುಣ್ಯದ ಫಲವನ್ನು ಅನುಭವಿಸುವಿಯೋ? ಅಥವಾ ಪಾಪದ ಫಲವನ್ನು ಅನುಭವಿಸುವಿಯೋ? ನೀನು ದಾನ ಮಾಡಿದ ಪುಣ್ಯದ ಲೋಕಗಳು ಅಂತರಹಿತವಾಗಿದೆ ನೋಡು' ಎಂದರು. ನಾನು ಮೊದಲು ಪಾಪದ ಫಲವನ್ನು ಅನುಭವಿಸುವೆನು' ಎಂದು ಹೇಳಿಕೊಂಡೆನು. 'ಹಾಗಾದರೆ ಕೆಳಗೆ ಬೀಳು' ಎಂದು ಯಮದೇವರು ಹೇಳಿದರು. ತರುವಾಯ ಈರೀತಿಯಾಗಿ ಓತಿಯಾಗಿ ಬಿದ್ದದ್ದನ್ನು ನೋಡಿಕೊಂಡೆನು. ಬ್ರಾಹ್ಮಣಪ್ರಿಯನಾದ ನಿನ್ನ ಭಕ್ತನಾದ ನಿನ್ನನ್ನು ನೋಡಬೇಕೆಂದು ಆಸೆಪಡುತ್ತಿದ್ದ ನನಗೆ ಈಗಲೂ ಪೂರ್ವದ ಸ್ಮರಣೆಯು ನಾಶವನ್ನು ಹೊಂದಿಲ್ಲ, ಭಗವಂತನೇ! ಅನುಗ್ರಹಿಸು. ನನ್ನ ಲೋಕಕ್ಕೆ ಹೋಗಲು ಆಜ್ಞೆಯನ್ನು ಕೊಡು. ನಾನು ಎಲ್ಲಿದ್ದರೂ ನನ್ನ ಮನಸ್ಸು ನಿನ್ನ ಪಾದದಲ್ಲಿಯೇ ಇರಲಿ ಎಂದು ಹೇಳಿ ಭಗವಂತನಿಗೆ ಪ್ರದಕ್ಷಿಣೆ ಬಂದು ನಮಸ್ಕಾರವನ್ನು ಮಾಡಿ ಅನುಜ್ಞೆಯನ್ನು ಪಡೆದು ಎಲ್ಲರೂ ನೋಡುವಂತೆ ವಿಮಾನದಲ್ಲಿ ಕೂತುಕೊಂಡು ಹೊರಟುಹೋದನು.

ತರುವಾಯ ಕೃಷ್ಣಪರಮಾತ್ಮನು ತನ್ನವರಿಗೆ ತಿಳಿಯುವುದಕ್ಕಾಗಿ 'ಬ್ರಾಹ್ಮಣರ ಸೊತ್ತನ್ನು ಜೀರ್ಣಮಾಡಿಕೊಳ್ಳಲಿಕ್ಕೆ ಆಗಲಾರದು. ತೇಜಸ್ಸುಳ್ಳ ಅಗ್ನಿಗೂ ಕೂಡ ಸಾಧ್ಯವಾಗಲಾರದು. ರಾಜರಿಗೆ ಸಾಧ್ಯವಾಗಲಾರದೆಂದು ಏನು ಹೇಳಬೇಕು? ಹಾಲಾಹಲವೆಂಬುದನ್ನು ವಿಷವೆಂದು ಹೇಳಲಾಗದು. ಏಕೆಂದರೆ ಆ ವಿಷವನ್ನು

ತಿಂದರೂ ಅದಕ್ಕೆ ಸರಿಯಾದ ಔಷಧ ಮಾಡಿ ಪರಿಹರಿಸಬಹುದು. ಬ್ರಾಹ್ಮಣರ ಸೊತ್ತು ಸರಿಯಾದ ವಿಷವು. ಅದನ್ನು ತಿಂದರೆ ಪರಿಹರಿಸುವ ಔಷಧವೇ ಇಲ್ಲ. ಬ್ರಾಹ್ಮಣರ ಸೊತ್ತನ್ನು ಕಷ್ಟದಿಂದ ಅವರ ಅನುಜ್ಞೆಯನ್ನು ಪಡೆದು ತಿಂದರೆ ಮೂರು ತಲೆಯವರನ್ನು ನಾಶಮಾಡುತ್ತದೆ. ಅತಿ ಬಲಾತ್ಕಾರದಿಂದ ಅಪಹರಿಸಿದರೆ ಅಪಹರಿಸಿದವನೆ ಹತ್ತು ತಲೆ ಪೂರ್ವದವರನ್ನೂ, ಹತ್ತುತಲೆ ಆಮೇಲಿನವರನ್ನೂ ಹಿಂಸಿಸುವುದು. ನರಕಕ್ಕೆ ಹೋಗುವವರು ಮಾತ್ರ ಬ್ರಾಹ್ಮಣರ ಸೊತ್ತನ್ನು ಅಪಹರಿಸುವರು. ಬ್ರಾಹ್ಮಣರ ಸೊತ್ತನ್ನು ಅಪಹರಿಸಲು ಅವರು ಅಳುತ್ತಾ ಅವರ ಕಣ್ಣೀರು ಎಷ್ಟು ಧೂಳಿಯನ್ನು ತೋಯಿಸುವುದೋ ಅಷ್ಟು ಕಾಲ ಆ ಅಪಹಾರ ಮಾಡಿದ ರಾಜರೂ ಇನ್ನೊಬ್ಬರು ಕೊಟ್ಟಿರುವ ಬ್ರಾಹ್ಮಣರ ಸೊತ್ತನ್ನು ಅಪಹರಿಸುವವನು ಅರುವತ್ತು ಸಾವಿರ ವರ್ಷ ಮಲದಲ್ಲಿ ಕೃಮಿಯಾಗಿ ಬಿದ್ದಿರುವನು. ಬ್ರಾಹ್ಮಣರು ಅಪರಾಧಮಾಡಿದರೂ ಅವರಿಗೆ ದ್ರೋಹ ಮಾಡಬಾರದು. ಅವರು ಹಿಂಸಿಸಲಿ ಶಾಪಕೊಡಲಿ ಅವರಿಗೆ ನಮಸ್ಕಾರವನ್ನು ಮಾಡಬೇಕು. ನಾನು ಬ್ರಾಹ್ಮಣರಿಗೆ ಲೋಕಶಿಕ್ಷೆಗಾಗಿ ನಮಸ್ಕರಿಸುವೆನು. ಹಾಗೆಯೇ ನೀವೆಲ್ಲರೂ ಮಾಡಬೇಕು. ಇಲ್ಲದಿದ್ದರೆ ನಾನು ಶಿಕ್ಷಿಸುವೆನು. ಬ್ರಾಹ್ಮಣರ ಸೊತ್ತನ್ನು ಅಪಹರಿಸಿದವರಿಗೆ ಈ ನೃಗರಾಜನಿಗೆ ಆದಂತೆ ಅಧಃಪಾತವಾಗುವುದು' ಎಂದು ಹೇಳಿ ತನ್ನ ಮಂದಿರಕ್ಕೆ ಹೊರಟುಹೋದನು.



## ಕುಶಿಕರಾಜನ ಪರೀಕ್ಷೆ [1]

ಒಂದು ದಿನದಲ್ಲಿ ಚ್ಯವನ ಋಷಿಗಳು ಕುಶಿಕರಾಜನಿದ್ದಲ್ಲಿಗೆ ಬಂದು 'ರಾಜನೇ! ನಿನ್ನ ಬಳಿ ವಾಸಮಾಡಬೇಕು ಎಂದು ಇಚ್ಛೆಯುಂಟಾಗಿದೆ ಎಂದರು. ಅದಕ್ಕೆ ರಾಜನು 'ಕನ್ಯಾದಾನ ಮಾಡುವಾಗಲೇ ಸಹಧರ್ಮವನ್ನು ಮಾಡಬೇಕು ಎನ್ನುತ್ತಾರೆ. ಆ ರೀತಿಯಾಗಿ ನಾನು ಪತ್ನೀಸಹಿತನಾಗಿ ನೀವು ಹೇಳಿದ ಸೇವೆಯನ್ನು ಮಾಡುವೆನು' ಎಂದನು. ತರುವಾಯ ರಾಜನು ಪತ್ನೀಸಹಿತನಾಗಿ ಚ್ಯವನರಿಗೆ ಆಸನವನ್ನು ತೆಗೆದುಕೊಂಡು ಬಂದನು. ಶಾಸ್ತ್ರೋಕ್ತಪ್ರಕಾರದಿಂದ ಪೂಜೆಯನ್ನು ಮಾಡಿದನು. ನಾವಿಬ್ಬರೂ ನಿಮ್ಮ ಅಧೀನರು. ಆಜ್ಞಾ ಮಾಡಬೇಕು ಎಂದನು. ಈ ರಾಜ್ಯವು ಈ

1. ಮಭಾ. ಅನು.ಪ. 52-56

ಹಣವು ಈ ಮನೆಯು ಎಲ್ಲವೂ ತಮಗೆ ಸೇರಿದ್ದು ಎಂದನು. ತಾವೇ ರಾಜ್ಯಭಾರ ಮಾಡಬೇಕು ಎಂದನು. ಆಗ ಚ್ಯವನರು ಸಂತೋಷದಿಂದ ಕೂಡಿದವರಾಗಿ ನಾನು ರಾಜ್ಯವನ್ನಾಗಲೀ ಹಣವನ್ನಾಗಲೀ ಯಾವುದನ್ನೂ ಅಪೇಕ್ಷಿಸುವುದಿಲ್ಲ. ನಿಮಗೆ ಇಷ್ಟವಿದ್ದರೆ ಒಂದು ನಿಯಮವನ್ನು ಆರಂಭಿಸುವೆನು. ನೀವಿಬ್ಬರೂ ನನ್ನನ್ನು ಸೇವಿಸಬೇಕು ಎಂದು ಹೇಳಿದರು. ಅದನ್ನು ಕೇಳಿ ದಂಪತಿಗಳಿಬ್ಬರೂ ಹರ್ಷದಿಂದ ಆಗಲಿ ಎಂದರು.

ತರುವಾಯ ಕುಶಿಕರಾಜನು ಚ್ಯವನರನ್ನು ಕರೆದುಕೊಂಡು ಮನೆಯೊಳಗೆ ಹೋದನು. ಸುಂದರವಾದ ಗೃಹವನ್ನು ತೋರಿಸಿದನು. ಸ್ವಾಮೀ! ಇದು ತಮಗೆ ಹಾಸಿಗೆಯು. ಇಲ್ಲಿ ಇಚ್ಛಾನುಸಾರವಾಗಿ ಇರಬಹುದು. ನಾವು ನಿಮ್ಮ ಪ್ರೀತಿಯನ್ನು ಸಂಪಾದಿಸಲು ಇಚ್ಛಿಸುವೆವು ಎಂದನು. ತರುವಾಯ ಸೂರ್ಯನು ಮುಳುಗಿದನು. ಚ್ಯವನರು ನನಗೆ ಭೋಜನಕ್ಕೆ ಬರಲಿ ಎಂದರು. ತಮಗೆ ಯಾವುದು ಇಷ್ಟವು? ಯಾವುದನ್ನು ತರಿಸಲಿ ಎಂದನು. ಆಗ ಚ್ಯವನರು ಪರಮ ಪ್ರೀತಿಯಿಂದ ಏನು ಮಾಡಿದ್ದು ಇದೆಯೋ ಅದನ್ನು ತರಿಸು ಎಂದರು. ಹಾಗೆಯೇ ರಾಜನು ತರಿಸಿದನು. ತರುವಾಯ ಭೋಜನಮಾಡಿ ರಾಜನೇ! ನನಗೆ ಒಳ್ಳೇ ನಿದ್ರೆಯು ಬರುತ್ತದೆ. ನಾನು ಮಲಗುತ್ತೇನೆ ಎಂದು ಹೇಳಿ ಮಲಗುವ ಮನೆಗೆ ಹೋದರು. ಅಲ್ಲಿ ಮಲಗಿದರು. ರಾಜನು ಪತ್ನಿಯ ಸಹಿತನಾಗಿ ನಿಂತಿದ್ದನು. ನಿದ್ದೆ ಬಂದ ನನ್ನನ್ನು ಎಬ್ಬಿಸಬೇಡಿ. ಹಾಗೆಯೇ ನನ್ನ ಕಾಲನ್ನು ಒತ್ತುತಾ ಇರಿ ಎಂದರು. ನೀವು ನಿದ್ರೆ ಮಾಡದೆ ಜಾಗ್ರತೆಯಿಂದಲೇ ಇರಿ ಎಂದರು. ರಾಜನು ಹಾಗೆಯೇ ಆಗಲಿ ಎಂದನು. ಬೆಳಗಾದರೂ ದಂಪತಿಗಳು ಅವರನ್ನು ಎಬ್ಬಿಸಲಿಲ್ಲ. ಹಾಗೆಯೇ ಅವರ ಸೇವೆ ಮಾಡುತ್ತಾ ಇದ್ದರು. ಹೀಗೆ ಚ್ಯವನ ಋಷಿಗಳು ಇಪ್ಪತ್ತೊಂದು ದಿನಗಳವರೆಗೆ ಏಳದೆಯೇ ಮಲಗಿಯೇ ಇದ್ದರು. ಅಷ್ಟು ದಿವಸವೂ ರಾಜನು ಪತ್ನಿಯಿಂದ ಸಹಿತನಾಗಿ ಸಂತೋಷದಿಂದಲೇ ಅವರ ಪಾದಸೇವೆಯನ್ನು ಮಾಡುತ್ತಲೇ ಇದ್ದನು. ಆಮೇಲೆ ಋಷಿಗಳು ತಾನಾಗಿ ಎದ್ದರು. ಒಂದೂ ಮಾತಾಡದೆ ಮನೆಯ ಹೊರಗೆ ಹೋದರು. ಹಸಿವೆಯಿಂದ ಶ್ರಮಪಡುತ್ತಿದ್ದ ದಂಪತಿಗಳು ಅವರ ಹಿಂದೆಯೇ ಹೋದರು. ಋಷಿಗಳು ಅವರನ್ನು ನೋಡಲೇ ಇಲ್ಲ. ಆಮೇಲೆ ಅವರಿಬ್ಬರು ನೋಡುತ್ತಿರುವಾಗಲೇ ಕಣ್ಣಿಗೆ ಮರೆಯಾಗಿ ಹೋದರು. ರಾಜನು ಪತ್ನಿಯಿಂದ ಸಹಿತನಾಗಿ ಮುಹೂರ್ತಕಾಲ ಶ್ರಮಪರಿಹರಿಸಿಕೊಂಡು ಆಮೇಲೆ ಅವರನ್ನು ಹುಡುಕಲಿಕ್ಕೆ ಪ್ರಯತ್ನ ಮಾಡಿದನು. ಎಲ್ಲಿಯೂ ಕಾಣದೆ ದೀನನಾಗಿ ಲಜ್ಜೆಯಿಂದ

ಹಿಂದೆ ತಿರುಗಿ ಮನೆಗೆ ಬಂದನು. ಒಬ್ಬರ ಹತ್ತಿರವೂ ಮಾತಾಡಲಿಲ್ಲ. ಚ್ಯವನರ ವ್ಯಾಪಾರವನ್ನೇ ಯೋಚಿಸಿದರು. ತರುವಾಯ ಮನೆಯೊಳಗೆ ಬಂದು ನೋಡುವಾಗ ಅವರು ಪೂರ್ವದಂತೆ ಮಲಗಿಕೊಂಡೇ ಇದ್ದರು. ದಂಪತಿಗಳಿಬ್ಬರೂ ನೋಡಿ ತುಂಬಾ ಆಶ್ಚರ್ಯವನ್ನು ಹೊಂದಿದರು. ಅವರಿದ್ದಲ್ಲಿಗೆ ಅವರಿಗೆ ಸೇವಾಮಾಡಲಿಕ್ಕೆ ಆರಂಭಿಸಿದರು. ಚ್ಯವನರು ಮತ್ತೊಂದು ಪಾರ್ಶ್ವದಿಂದ ಪುನಃ ಇಪ್ಪತ್ತೊಂದು ದಿನಗಳವರೆಗೆ ಮಲಗಿಕೊಂಡರು. ಆಮೇಲೆ ಎದ್ದರು. ಅವರ ಭಯದಿಂದ ದಂಪತಿಗಳು ಒಂದು ವಿಕಾರವನ್ನು ಹೊಂದಲಿಲ್ಲ. ಚ್ಯವನರು ನನಗೆ ಈಗ ತೈಲಾಭ್ಯಂಗವಾಗಬೇಕು ಎಂದರು. ಹಸಿವೆಯಿಂದ ಕೃಶರಾದ ದಂಪತಿಗಳು ಹಾಗೆಯೇ ಆಗಲಿ ಎಂದು ಒಳ್ಳೇ ಕಾಸಿದ ತೈಲವನ್ನು ಹಚ್ಚಿದರು. ಸಾಕು ಎಂದರು. ದಂಪತಿಗಳು ತಾನು ಇಷ್ಟೆಲ್ಲಾ ಮಾಡಿದರೂ ವಿಕಾರರಹಿತರಾಗಿರುವುದನ್ನು ನೋಡಿ ಸ್ನಾನ ಮಾಡುವ ಮನೆಗೆ ಹೋದರು. ಅಲ್ಲಿ ರಾಜಯೋಗ್ಯವಾದ ಸ್ನಾನದ ಸಿದ್ಧತೆಯು ಇದ್ದಿತು. ಇದೊಂದೂ ಚೆನ್ನಾಗಿಲ್ಲವೆಂದು ಕಣ್ಣಿಗೆ ಮರೆಯಾಗಿ ಹೋದರು. ಆದರೂ ದಂಪತಿ ಗಳು ಮಾತಾಡಲಿಲ್ಲ. ಆಮೇಲೆ ಋಷಿಗಳು ಸ್ನಾನಮಾಡಿದರು. ಸಿಂಹಾಸನದಲ್ಲಿ ಕೂತುಕೊಂಡು ದಂಪತಿಗಳಿಗೆ ಕಾಣಿಸಿಕೊಂಡರು. ಸಂತೋಷಯುಕ್ತವಾದ ಮುಖವುಳ್ಳ ರಾಜನು ಪತ್ನೀಸಹಿತವಾಗಿ ಅನ್ನವು ಸಿದ್ಧವಾಗಿದೆ ಎಂದನು. ಇಲ್ಲಿಗೆ ತರಿಸು ಎಂದರು. ರಾಜನು ಪತ್ನಿಯಿಂದ ಸಹಿತನಾಗಿ ನಾನಾ ವಿಧವಾದ ಅನ್ನವನ್ನು ತಂದನು. ಋಷಿಗಳು ಅದೆಲ್ಲವನ್ನೂ ತಂದು ಅದರ ಮೇಲೆ ವಸ್ತ್ರವನ್ನು ಮುಚ್ಚಿ ಅದಕ್ಕೂ ಹಾಸಿಗೆಗೂ ಎಲ್ಲಾ ಬೆಂಕಿ ಕೊಟ್ಟರು. ಆದರೂ ದಂಪತಿಗಳು ಸ್ವಲ್ಪವೂ ಕೋಪಿಸಿಕೊಳ್ಳಲಿಲ್ಲ. ಅವರು ನೋಡುತ್ತಿರುವಾಗಲೇ ಚ್ಯವನರು ಕಾಣಿಸದೆ ಹೋದರು. ರಾಜನು ಪತ್ನಿಯಿಂದ ಸಹಿತನಾಗಿ ರಾತ್ರಿಯೆಲ್ಲಾ ಹಾಗೆಯೇ ಇದ್ದನು. ಸ್ವಲ್ಪವೂ ಕೋಪಿಸಿಕೊಳ್ಳಲಿಲ್ಲ. ಚ್ಯವನರು ಕೋಪಿಸಿಕೊಳ್ಳಲು ಒಂದು ಅವಕಾಶವೂ ಸಿಗಲಿಲ್ಲ.

ತರುವಾಯ ಚ್ಯವನರು ರಾಜನೊಡನೆ ರಾಜನೇ! ನೀನು ನನ್ನನ್ನು ರಥದಲ್ಲಿ ಕೂತುಕೊಳ್ಳಿಸಿ ಪತ್ನೀಸಹಿತನಾಗಿ ನಾನು ಹೇಳುವಲ್ಲಿಗೆ ಎಳೆದುಕೊಂಡು ಹೋಗಬೇಕು ಎಂದರು. ರಾಜನು ಹಾಗೆಯೇ ಆಗಲಿ ಎಂದನು. ಕ್ರೀಡಾರಥವಾಗಲೋ! ಅಥವಾ ಯುದ್ಧದ ರಥವಾಗಲೋ ಎಂದು ಕೇಳಿದನು. ಅದಕ್ಕೆ ಚ್ಯವನರು ಯುದ್ಧದ ರಥವೇ ಇರಲಿ. ಆಯುಧ ಸಹಿತವಾಗಿ ಸಿದ್ಧಮಾಡು ಎಂದರು. ರಾಜನು ಹಾಗೆಯೇ ರಥವನ್ನು ಸಿದ್ಧಮಾಡಿ ರಥದಲ್ಲಿ ಮೂರು

ಕೋಲಿನಿಂದ ಕೂಡಿದ ವಜ್ರದ ಸೂಜಿಯು ಕೊನೆಯಲ್ಲಿ ಉಳ್ಳ ಬಾರುಕೋಲನ್ನು ಇಟ್ಟು ತಾನು ಪತ್ನೀಸಹಿತನಾಗಿ ರಥವನ್ನು ಎಳೆಯಲಿಕ್ಕೆ ಆರಂಭಿಸಿದನು. ಪೂಜ್ಯರೇ! ರಥವು ಎಲ್ಲಿಗೆ ಹೋಗಲಿ. ತಾವು ಹೇಳಿದಲ್ಲಿಗೆ ಎಳೆದುಕೊಂಡು ಹೋಗುವೆನು ಎಂದನು. ಚ್ಯವನರು ಇಲ್ಲಿಯೇ ಮೆಲ್ಲಮೆಲ್ಲನೆ ಹೋಗಲಿ. ನನಗೆ ಶ್ರಮವಾಗದಂತೆ ಹೋಗಬೇಕು. ಎಲ್ಲ ಜನರೂ ನೋಡಲಿ. ಯಾರನ್ನೂ ದೂರ ಹೋಗಲಿಕ್ಕೆ ಹೇಳಬಾರದು. ನಾನು ದಾರಿಯಲ್ಲಿ ಹೋಗುವಾಗ ಬ್ರಾಹ್ಮಣರು ಏನೇನು ಕೇಳುವರೋ ಅದನ್ನೆಲ್ಲಾ ಕೊಡುವೆನು ಎಂದರು. ರಾಜನು ಸರಿಯೆಂದನು. ಋಷಿಗಳು ಕೇಳಿದ್ದನ್ನು ಕೊಡಬೇಕು ಎಂದು ಹೇಳಿದನು. ತರುವಾಯ ರಥದ ಹಿಂದೆಯೇ ಮುತ್ತುರತ್ನ ಆನೆ ಕುದುರೆ ಸ್ತ್ರೀಯರು ಎಲ್ಲರೂ ಬಂದರು. ಮಂತ್ರಿಗಳೂ ಹಿಂದೆಯೇ ಹೋದರು. ಎಲ್ಲ ಜನರೂ ದುಃಖದಿಂದ ಇದ್ದರು. ಚ್ಯವನರು ರಾಜನಿಗೂ ರಾಜಪತ್ನಿಗೂ ಚಾಟುದಾರಿಯಿಂದ ಬೆನ್ನಿಗೂ ಪಾರ್ಶ್ವಕ್ಕೂ ಬಡೆದರು. ಆದರೂ ಅವರಿಬ್ಬರೂ ವಿಕಾರರಹಿತರಾಗಿದ್ದರು. ನಾಲ್ವತ್ತೈದು ದಿವಸ ಉಪವಾಸ ದಿಂದ ಶ್ರಮವುಳ್ಳ ದಂಪತಿಗಳು ಬಹುಕಷ್ಟದಿಂದ ರಥವನ್ನು ಎಳೆಯುತ್ತಿದ್ದರು. ಚ್ಯವನರು ಚಾಟುವಾರಿಯಿಂದ ದಂಪತಿಗಳಿಗೆ ಬಡಿದರು. ಇದರಿಂದ ಅವರ ಮೈಯೆಲ್ಲಾ ಗಾಯವಾಗಿ ರಕ್ತವು ಸುರಿಯುತ್ತಿತ್ತು. ಇದನ್ನು ನೋಡಿ ಊರ ಜನರೆಲ್ಲರೂ ದುಃಖವುಳ್ಳವರಾಗಿದ್ದರು. ಚ್ಯವನರು ಎಲ್ಲಿ ಶಾಪವನ್ನು ಕೊಡುವರೋ ಎಂಬ ಭಯದಿಂದ ಒಬ್ಬರೂ ಒಂದು ಮಾತನ್ನೂ ಆಡಲಿಲ್ಲ. ಇಬ್ಬಿಬ್ಬರಾಗಿಯೇ 'ನೋಡಿ. ತಪಸ್ಸಿನ ಒಲವು. ನಾವು ಕೋಪವುಳ್ಳವರಾರೂ ಮುನಿಶ್ರೇಷ್ಠರನ್ನು ನೋಡಲಿಕ್ಕೇ ಸಮರ್ಥರಾಗಿಲ್ಲ. ಅವರ ಸಾಮರ್ಥ್ಯವನ್ನೇನು ಹೇಳಲಿ? ರಾಜನ ಪತ್ನಿಯ ಧೈರ್ಯವನ್ನು ನೋಡಿ. ಶ್ರಮವುಳ್ಳವರಾದರೂ ಕಷ್ಟದಿಂದ ರಥವನ್ನು ಎಳೆಯುತ್ತಾ ಇದ್ದಾರೆ' ಎಂದು ಮಾತಾಡಿಕೊಂಡರು.

ಚ್ಯವನರು ತಾನು ಇಷ್ಟು ಮಾಡಿದರೂ ರಾಜನೂ ರಾಜಪತ್ನಿಯೂ ವಿಕಾರರಹಿತರಾಗಿರುವುದನ್ನು ನೋಡಿ ಕುಬೇರನಂತೆ ಬ್ರಾಹ್ಮಣರಿಗೆಲ್ಲಾ ಹಣವನ್ನು ಕೊಡಲಿಕ್ಕೆ ಆರಂಭಿಸಿದರು. ಆಗಲೂ ರಾಜನು ಸಂತೋಷದಿಂದಲೇ ಅವರು ಹೇಳಿದಂತೆ ಮಾಡಿದನು. ತರುವಾಯ ಚ್ಯವನರು ದಂಪತಿಗಳ ಮೇಲೆ ಸಂತೋಷವನ್ನು ಹೊಂದಿದರು. ತಾನು ರಥದಿಂದ ಕೆಳಗೆ ಇಳಿದು ದಂಪತಿಗಳನ್ನು ರಥದಿಂದ ಬಿಡಿಸಿದರು. ಗಂಭೀರವಾದ ವಾಣಿಯಿಂದ ನಿಮಗೆ ಬೇಕಾದ ಶ್ರೇಷ್ಠವಾದ ವರವನ್ನು ಕೇಳಿರಿ ಎಂದರು. ಗಾಯವನ್ನು ಹೊಂದಿರುವ ಅವರಿಬ್ಬರ ದೇಹವನ್ನೂ

ಅಮೃತಕ್ಕೆ ಸಮಾನವಾದ ತನ್ನ ಕೈಗಳಿಂದ ಸ್ನೇಹದಿಂದ ಸ್ಪರ್ಶ ಮಾಡಿದರು. ಆಗ ರಾಜನೂ ರಾಜನ ಪತ್ನಿಯೂ ನಮಗೀಗ ಶ್ರಮವೇ ಇಲ್ಲ. ತಮ್ಮ ಅನುಗ್ರಹದಿಂದ ಶ್ರಮವೆಲ್ಲ ಪರಿಹಾರವಾಯಿತು.

ತರುವಾಯ ಚ್ಯವನರು ಸಂತೋಷದಿಂದ 'ನಾನು ಹೇಳಿದ ಮಾತು ಯಾವಾಗಲೂ ವ್ಯರ್ಥವಾಗಲಾರದು. ಈ ಗಂಗಾತೀರವು ಅತಿರಮಣೀಯವಾಗಿದೆ. ಕೆಲವು ಸಮಯ ಇಲ್ಲಿ ನಾನು ವ್ರತವುಳ್ಳವನಾಗಿ ಇರುವೆನು. ವತ್ಸ! ನೀನೀಗ ಊರಿಗೆ ಹೋಗು. ಶ್ರಮಪರಿಹಾರ ಮಾಡಿಕೊ. ಇಲ್ಲಿರುವ ನನ್ನನ್ನು ನಾಳೆ ಬಂದು ನೋಡು. ನಾನು ಹೀಗೆ ಮಾಡಿದೆನೆಂದು ಕೋಪಿಸಿಕೊಳ್ಳಬೇಡ. ನಿನಗೆ ಶ್ರೇಯಸ್ಸು ಸಮೀಪಿಸಿರುವುದು. ನಿನ್ನ ಮನಸ್ಸಿನಲ್ಲಿ ಇರುವ ಅಭೀಷ್ಟವೆಲ್ಲವೂ ಸಿದ್ಧಿಸುವುದು' ಎಂದು ಹೇಳಿದರು. ಆಗ ಕುಶಿಕರಾಜನು 'ಮಹಾನುಭಾವರೇ! ನನಗೆ ಕೋಪವಿಲ್ಲ. ನಾವಿಬ್ಬರೂ ಪವಿತ್ರರಾದೆವು. ಒಳ್ಳೇ ಯೌವನವುಳ್ಳವರಾಗಿರುವೆವು. ದೇಹದಲ್ಲಿ ನಮಗೆ ಒಳ್ಳೇ ಬಲವು ಬಂದಿದೆ. ನನ್ನ ಮತ್ತು ನನ್ನ ಪತ್ನಿಯ ಮೈಯಲ್ಲಿ ತಾವು ಚಾಟುವಾರಿಯಿಂದ ಮಾಡಿದ ಗಾಯವೇ ಇಲ್ಲವಲ್ಲಾ! ನಾವು ಸ್ವಸ್ಥರಾಗಿದ್ದೇವೆ. ನನ್ನ ಪತ್ನಿಯು ಅಪ್ಸರಸ್ತ್ರೀಯಂತೆ ಕಾಣಿಸುತ್ತಾಳೆ. ಇದೆಲ್ಲಾ ತಮ್ಮ ಅನುಗ್ರಹದಿಂದ ಉಂಟಾಯಿತು. ತಮಗೆ ಇದೊಂದೂ ಆಶ್ಚರ್ಯ ಅಲ್ಲ' ಎಂದು ಚ್ಯವನರು 'ನೀನು ನಾಳೆ ಪುನಃ ಇಲ್ಲಿಗೆ ಪತ್ನೀಸಹಿತನಾಗಿ ಬಾ' ಎಂದರು. ತರುವಾಯ ಮುನಿಗಳ ಅನುಜ್ಞೆಯನ್ನು ಪಡೆದು ಪತ್ನೀಸಹಿತನಾಗಿ ಚ್ಯವನರಿಗೆ ನಮಸ್ಕರಿಸಿ ಪರಮಸುಂದರವಾದ ರೂಪವುಳ್ಳವನಾಗಿ ದೇವರಾಜನಂತೆ ನಗರಕ್ಕೆ ಹೋದನು. ತರುವಾಯ ಮಂತ್ರಿಗಳು ಪುರೋಹಿತರೂ ವೇಶ್ಯಾಸ್ತ್ರೀಯರೂ ರಾಜನನ್ನು ಕರೆದುಕೊಂಡು ಕುಶಿಕರಾಜನು ಸಂತೋಷದಿಂದ ಪುರಪ್ರವೇಶವನ್ನು ಮಾಡಿದನು. ಪ್ರಾತಃಕಾಲದಲ್ಲಿ ಮಾಡಬೇಕಾದ ಕಾರ್ಯಗಳನ್ನು ತೀರಿಸಿ ಪತ್ನೀಸಹಿತನಾಗಿ ಭೋಜನವನ್ನು ಮಾಡಿ ಆ ರಾತ್ರಿಯಲ್ಲಿ ಸುಖವಾಗಿ ವಾಸಮಾಡಿದನು. ರಾತ್ರಿಯೆಲ್ಲ ದಂಪತಿಗಳು ತಮ್ಮ ದೇಹದಲ್ಲಿ ಉಂಟಾಗಿರುವ ಯೌವನವನ್ನು ಪರಸ್ಪರ ನೋಡಿಕೊಂಡು ಅತ್ಯಂತ ಸಂತೋಷಹೊಂದಿದರು. ಇಲ್ಲಿ ಚ್ಯವನಋಷಿಗಳು ತಾನು ಇರುವ ಸ್ಥಳದಲ್ಲಿ ಇಂದ್ರಲೋಕದಲ್ಲಿಯೂ ಇಲ್ಲದ ರೀತಿಯಾಗಿ ಅನೇಕ ರತ್ನಗಳಿಂದ ಅಲಂಕೃತವಾದ ಉದ್ಯಾನವನ್ನು ನಿರ್ಮಿಸಿದರು.

ರಾಜನು ಮರುದಿನ ಬೆಳಿಗ್ಗೆ ಎದ್ದು ಪ್ರಾತಃಕಾಲದ ಕಾರ್ಯಗಳನ್ನು ಮುಗಿಸಿಕೊಂಡು ಚ್ಯವನರು ಇದ್ದ ವನಕ್ಕೆ ಹೋದರು. ರಾಜನು ಅಲ್ಲಿಗೆ ಹೋಗುತ್ತಾ

ಬಂಗಾರದಿಂದಲೇ ಮಾಡಿರುವ ಉಪ್ಪರಿಗೆಯ ಮನೆಯನ್ನು ನೋಡಿದನು. ಆ ಮನೆಯಲ್ಲಿ ರತ್ನಗಳಿಂದ ಮಾಡಿದ ಸಾವಿರ ಕಂಬಗಳಿದ್ದವು. ಗಂಧರ್ವರ ನಗರದಂತೆ ಇದ್ದಿತು. ಬೆಳ್ಳಿಯ ಪ್ರದೇಶಗಳುಳ್ಳ ಪರ್ವತಗಳನ್ನು ನೋಡಿದನು. ಬಂಗಾರದ ನೆಲವನ್ನು ನೋಡಿದನು. ನಾನಾ ವಿಧಗಳಾದ ಸುಂದರಗಳಾದ ಮರಗಳನ್ನೂ ಸರೋವರಗಳನ್ನೂ ಅಲ್ಲಿ ಕಮಲಪುಷ್ಪಗಳನ್ನೂ ವಿಮಾನಗಳನ್ನೂ ಉಪ್ಪರಿಗೆಗಳನ್ನೂ ವಿಚಿತ್ರಗಳಾದ ಆಸನಗಳನ್ನೂ ಬಂಗಾರದ ಮಂಚಗಳನ್ನೂ ಹಾಸಿಗೆಗಳನ್ನೂ ನೋಡಿದನು. ಅಲ್ಲಲ್ಲಿ ಬೇಕಾದ ಭಕ್ಷ್ಯಭೋಜನಗಳನ್ನು ನೋಡಿದನು. ಸುಂದರವಾಗಿ ಮಾತಾಡುವ ಗಿಳಿಗಳನ್ನೂ ಸಾರಸ ಪಕ್ಷಿಗಳನ್ನೂ ನವಿಲುಗಳನ್ನೂ ಹಂಸಪಕ್ಷಿಗಳನ್ನೂ ಕಪಿಗಳನ್ನೂ ಅಲ್ಲಲ್ಲಿ ನೋಡಿದನು. ಕೆಲವು ಸ್ಥಳಗಳಲ್ಲಿ ಅಪ್ಸರಸ್ತ್ರೀಯರ ಗುಂಪನ್ನೂ ಗಂಧರ್ವರ ಗುಂಪನ್ನೂ ಮತ್ತೂ ಸ್ತ್ರೀಯರಿಂದ ಆಲಿಂಗಿತರಾದ ಅನೇಕರನ್ನೂ ನೋಡಿದನು. ಹಾಡುವ ಶಬ್ದವನ್ನೂ ವೇದಾಧ್ಯಯನ ಮಾಡುವ ಶಬ್ದವನ್ನೂ ಕೇಳಿದನು. ರಾಜನಿಗೆ ಬಹು ಆಶ್ಚರ್ಯವಾಯಿತು. ಏನಿದು? ಸ್ವಪ್ನವೋ? ಮನಸ್ಸಿನ ಭ್ರಾಂತಿಯೋ? ಅಥವಾ ಶರೀರ ಸಹಿತನಾಗಿ ಸ್ವರ್ಗಕ್ಕೆ ಬಂದೆನೋ? ಉತ್ತರ ಕುರುದೇಶವನ್ನು ನೋಡುತ್ತಿರುವೆನೋ? ಅಮರಾವತಿಯನ್ನು ನೋಡುತ್ತಿರುವೆನೋ? ಎಂದು ಯೋಚಿಸುತ್ತಿದ್ದನು. ಹೀಗೆ ಯೋಚನೆ ಮಾಡುತ್ತಲೇ ರತ್ನದ ಕಂಬಗಳಿಂದ ಕೂಡಿದ ಬಂಗಾರದ ವಿಮಾನದಲ್ಲಿ ದಿವ್ಯವಾದ ಹಾಸಿಗೆಯಲ್ಲಿ ಮಲಗಿರುವ ಚ್ಯವನ ಋಷಿಗಳನ್ನು ನೋಡಿದನು. ರಾಜನು ಪತ್ನಿಯಿಂದ ಸಹಿತನಾಗಿ ಅವರ ಸಮೀಪಕ್ಕೆ ಹೋದನು. ಹತ್ತಿರ ಹೋಗುವಾಗ ಅವರು ಮರೆಯಾಗಿಬಿಟ್ಟರು. ಅಲ್ಲಿ ಇರಲಿಲ್ಲ. ತರುವಾಯ ಮತ್ತೊಂದು ವನಪ್ರದೇಶದಲ್ಲಿ ದರ್ಭೆಯ ಆಸನದಲ್ಲಿ ಕೂತುಕೊಂಡು ಜಪಮಾಡುತ್ತಿರುವ ಅವರನ್ನು ನೋಡಿದನು. ಈರೀತಿಯಾಗಿ ಚ್ಯವನರು ತನ್ನ ಯೋಗಸಾಮರ್ಥ್ಯದಿಂದ ರಾಜನನ್ನು ಮೋಹಗೊಳಿಸಿದರು. ತರುವಾಯ ಒಂದು ಕ್ಷಣದಲ್ಲಿ ಅಲ್ಲಿದ್ದ ಅಪ್ಸರ ಸ್ತ್ರೀಯರು ಗಂಧರ್ವರು ಮರಗಳು ಎಲ್ಲವೂ ಮರೆಯಾಯಿತು. ನಿಶ್ಶಬ್ದವಾಗಿದ್ದ ಗಂಗಾತೀರವಾಗಿತ್ತು. ಪೂರ್ವದಂತೆ ದರ್ಭೆಗಳಿಂದಲೂ ಹುತ್ತಗಳಿಂದಲೂ ತುಂಬಿರುವ ಪ್ರದೇಶವಾಯಿತು. ಪತ್ನೀಸಹಿತನಾದ ಕುಶಿಕರಾಜನು ಇದನ್ನೆಲ್ಲಾ ನೋಡಿ ಅತ್ಯಂತ ಆಶ್ಚರ್ಯವನ್ನು ಹೊಂದಿದನು. ರಾಜನು ಪತ್ನಿಯೊಡನೆ 'ಚ್ಯವನರ ಅನುಗ್ರಹದಿಂದ ಏನೇನು ಪದಾರ್ಥಗಳನ್ನು ನೋಡಿದೆವು. ಇದೆಲ್ಲವೂ ತಪಃಸಾಮರ್ಥ್ಯವಿಲ್ಲದೆ ಸಾಧ್ಯವೇ? ಮನಸ್ಸಿನಲ್ಲಿ ಆಸೆಪಟ್ಟದ್ದನ್ನೆಲ್ಲವನ್ನೂ ತಪಸ್ಸಿನಿಂದ ಮಾಡಲಿಕ್ಕೆ ಶಕ್ಯವಾಗುವುದು.

ಮೂರುಲೋಕದ ರಾಜ್ಯಕ್ಕಿಂತಲೂ ತಪಸ್ಸೇ ಶ್ರೇಷ್ಠವಾದದ್ದು. ಚ್ಯವನರ ಪ್ರಭಾವವೇನೆಂದು ಹೇಳಲಿ? ಇವರು ತಪಸ್ಸಿನಿಂದ ಬೇರೆ ಲೋಕಗಳನ್ನೇ ಸೃಷ್ಟಿ ಮಾಡಲು ಸಮರ್ಥರು. ಲೋಕದಲ್ಲಿ ಬ್ರಾಹ್ಮಣರಾಗಿಯೇ ಹುಟ್ಟಬೇಕು. ಇಲ್ಲದಿದ್ದರೆ ಚ್ಯವನರಂತೆ ಯಾರು ಮಾಡಲಿಕ್ಕೆ ಸಾಧ್ಯವಾಗುವುದು. ಲೋಕದಲ್ಲಿ ರಾಜ್ಯವು ಸಿಗಬಹುದು. ಆದರೆ ಬ್ರಾಹ್ಮಣ್ಯವು ಸಿಗಲಾರದು. ಬ್ರಾಹ್ಮಣ್ಯದ ಪ್ರಭಾವದಿಂದಲೇ ನಮ್ಮನ್ನು ಕುದುರೆಯನ್ನು ಕಟ್ಟುವ ರಥಕ್ಕೆ ಕಟ್ಟಿದರಷ್ಟೆ! ಹೀಗೆಲ್ಲಾ ಯೋಚಿಸುತ್ತಾ ಬರುವಾಗ ಚ್ಯವನರು ನೋಡಿದರು. ಬೇಗನೇ ಬಾ ಎಂದು ಕರೆದರು. ರಾಜನು ಪತ್ನೀಸಹಿತನಾಗಿ ಹೋಗಿ ಅವರಿಗೆ ನಮಸ್ಕರಿಸಿದನು. ಋಷಿಗಳು ಆಶೀರ್ವದಿಸಿ ಕೂತುಕೊ ಎಂದರು. ರಾಜನು ಕೂತುಕೊಂಡ ಮೇಲೆ ಋಷಿಗಳು 'ರಾಜನೇ! ನೀನು ಸರಿಯಾಗಿ ಪಂಚ ಇಂದ್ರಿಯಗಳನ್ನೂ ಮನಸ್ಸನ್ನೂ ಚೆನ್ನಾಗಿ ಜಯಿಸಿರುವಿ. ಆದುದರಿಂದ ನೀನು ಆಪತ್ತಿನಿಂದ ಉದ್ಧೃತನಾಗಿರುವಿ. ಪುತ್ರ! ನೀನು ನನ್ನನ್ನು ಚೆನ್ನಾಗಿ ಸತ್ಕಾರ ಮಾಡಿದಿ. ನಿನ್ನಲ್ಲಿ ಒಂದು ದೋಷವನ್ನೂ ಕಂಡು ಹಿಡಿಯಲಿಕ್ಕೆ ಆಗಲಿಲ್ಲ. ನನಗೆ ಇನ್ನು ಅನುಜ್ಞೆಯನ್ನು ಕೊಡು. ನಾನು ಬಂದಂತೆಯೇ ಹೊರಟು ಹೋಗುವೆನು. ನಿನ್ನ ಮೇಲೆ ತುಂಬಾ ಪ್ರೀತಿಯುಳ್ಳವನಾಗಿರುವೆನು. ಬೇಕಾದ ವರವನ್ನು ಕೇಳು' ಎಂದರು.

ರಾಜನು 'ಬೆಂಕಿಯ ಮಧ್ಯದಲ್ಲಿ ಇರುವಂತೆ ತಮ್ಮ ಸಮೀಪದಲ್ಲಿ ಇದ್ದೆನು. ನಾನು ಸುಟ್ಟು ಹೋಗದೆ ಇದ್ದದ್ದೇ ಬಹಳವಾಯಿತು. ತಾವು ನನ್ನ ಮೇಲೆ ಪ್ರೀತಿಯನ್ನು ಹೊಂದಿದಿರಿ. ನನ್ನ ಕುಲವನ್ನು ಉಳಿಸಿದಿರಿ. ಇದೇ ನನಗೆ ವರವಾಯಿತು. ತಾವು ನನ್ನಲ್ಲಿ ಪ್ರೀತಿಯುಳ್ಳವರಾಗಿರುವ ಪಕ್ಷದಲ್ಲಿ ನನ್ನ ಒಂದು ಸಂಶಯವನ್ನು ಪರಿಹರಿಸಬೇಕು' ಎಂದನು. ಚ್ಯವನರು 'ವರವನ್ನೂ ಕೇಳಿಕೊ. ನಿನ್ನ ಸಂಶಯವನ್ನೂ ಕೇಳು' ಎಂದರು.

ಅದಕ್ಕೆ ರಾಜನು 'ತಾವು ಈರೀತಿಯಾಗಿ ನನ್ನ ಮನೆಗೆ ಬಂದು ವಾಸಮಾಡಲು ಕಾರಣವೇನು? ಒಂದೇ ಪಾರ್ಶ್ವದಲ್ಲಿ ಇಪ್ಪತ್ತೊಂದು ದಿವಸಗಳವರೆಗೆ ಮಲಗಿದಿರಿ. ಮಾತಾಡದೆ ಹೊರಟುಹೋದಿರಿ. ಆಮೇಲೆ ಕಣ್ಣಿಗೆ ಮರೆಯಾದಿರಿ. ಪುನಃ ಇಪ್ಪತ್ತೊಂದು ದಿವಸ ಮಲಗಿದಿರಿ. ಭೋಜನ ಸಾಮಗ್ರಿಗೆ ಬೆಂಕಿ ಕೊಡುವವರಾದಿರಿ. ನನ್ನನ್ನು ಎಳೆಯಲಿಕ್ಕೆ ಹೇಳಿ ರಥದಿಂದ ಹೋದಿರಿ. ಹಣವನ್ನೆಲ್ಲಾ ಬ್ರಾಹ್ಮಣರಿಗೆ ಕೊಟ್ಟಿರಿ. ನಾನು ಈಗ ಬರುವಾಗ ನಾನಾ ವನಗಳನ್ನು ಬಂಗಾರದ ಮನೆಗಳು ಇತ್ಯಾದಿಗಳನ್ನು ತೋರಿಸಿದಿರಿ. ಪುನಃ ಅದನ್ನೆಲ್ಲಾ ಮರೆಮಾಡಿದಿರಿ. ಇದಕ್ಕೆಲ್ಲಾ

ಕಾರಣವೇನು? ಯೋಚಿಸುವಂತೆ ನನ್ನ ಮನಸ್ಸಿಗೆ ಒಂದೂ ತಿಳಿಯುವುದಿಲ್ಲ. ಇದರ ಕಾರಣವನ್ನೆಲ್ಲಾ ಯಥಾರ್ಥವಾಗಿ ತಮ್ಮ ಮುಖದಿಂದ ಕೇಳಿ ತಿಳಿದುಕೊಳ್ಳಲು ಆಸೆಪಡುತ್ತೇನೆ' ಎಂದನು.

ಚ್ಯವನರು ''ರಾಜನೇ! ನೀನು ಇಷ್ಟು ಕೇಳುವಾಗ ಹೇಳದೆ ಇರಲಿಕ್ಕೆ ಆಗುವುದಿಲ್ಲ. ಹೇಳುತ್ತೇನೆ ಕೇಳು. ಪೂರ್ವದಲ್ಲಿ ದೇವತೆಗಳ ಸಭೆಯಲ್ಲಿ ಬ್ರಹ್ಮದೇವರು 'ಇನ್ನು ಮುಂದೆ ಬ್ರಾಹ್ಮಣ ಕ್ಷತ್ರಿಯರ ವಿರೋಧದಿಂದ ಕುಲಸಾಂಕರ್ಯವೇರ್ಪಡುವುದು ನಿನ್ನ ಮೊಮ್ಮಗನು ತೇಜೋವೀರ್ಯವುಳ್ಳವನಾಗಿ ಹುಟ್ಟುವನು ಎಂದು ಹೇಳಿದ ಮಾತನ್ನು ಕೇಳಿ ನಿನ್ನ ಕುಲವನ್ನೇ ನಾಶಮಾಡಬೇಕೆಂದು ಯೋಚಿಸಿ ನಿನ್ನ ಮನೆಗೆ ಬಂದೆನು. ಅದಕ್ಕಾಗಿಯೇ ನಿನ್ನ ಮನೆಯಲ್ಲಿ ವಾಸಮಾಡುವೆನೆಂದೆನು. ನಿನ್ನಲ್ಲಿ ಯಾವುದಾದರೂ ಒಂದು ದೋಷವನ್ನು ಕಂಡುಹಿಡಿದು ನಿನಗೆ ಶಾಪವನ್ನು ಕೊಡಬೇಕೆಂದು ನನ್ನ ಅಭಿಪ್ರಾಯವಿದ್ದಿತು. ಅದಕ್ಕಾಗಿ ನಾನು ಹಾಗೆಲ್ಲಾ ಮಾಡಿದೆನು. ಆದರೆ ಏನು ಮಾಡಿದರೂ ನಿನ್ನಲ್ಲಿ ದೋಷವು ಕಾಣಿಸುವುದಿಲ್ಲ. ಏನೇನು ಮಾಡಿದರೂ ನೀನು ಕೋಪಿಸದ ಕಾರಣ ಆಮೇಲೆ ನಾನು ನಿನ್ನ ಮೇಲೆ ಪ್ರೀತಿಯಿಂದ ಈಗ ಬರುವಾಗ ಬಂಗಾರದ ಮನೆ ಮೊದಲಾದುವನ್ನು ನೋಡುವಂತೆ ಮಾಡಿದೆನು. ನಿನಗೆ ಸ್ವಲ್ಪ ಹೊತ್ತು ಸ್ವರ್ಗವನ್ನು ತೋರಿಸಿದೆನು. ರಾಜನೇ! ನೀನು ಇದೇ ದೇಹದಿಂದ ಪತ್ನೀ ಸಹಿತನಾಗಿ ಒಂದು ಮುಹೂರ್ತ ಸ್ವರ್ಗವನ್ನು ಅನುಭವಿಸಿದಿ. ತಪಸ್ಸಿನ ಸಾಮರ್ಥ್ಯವನ್ನು ತಿಳಿಸುವುದಕ್ಕಾಗಿ ಹಾಗೆ ಮಾಡಿದೆನು. ನಿನಗೆ ಬರುವಾಗ ಉಂಟಾದ ಆಸೆಯೂ ನನಗೆ ತಿಳಿದಿದೆ. ನೀನು ಬ್ರಾಹ್ಮಣ್ಯವನ್ನು ತಪಸ್ಸನ್ನೂ ಆಸೆ ಪಟ್ಟಿರುವೆ. ರಾಜನಾಗುವುದನ್ನೂ ದೇವೇಂದ್ರನಾಗುವುದನ್ನು ತಿರಸ್ಕರಿಸಿ ಬ್ರಾಹ್ಮಣ್ಯವೇ ಶ್ರೇಷ್ಠವೆಂದು ಯೋಚಿಸಿದಿ. ನೀನು ಯೋಚಿಸಿದ್ದು ಸರಿ. ಬ್ರಾಹ್ಮಣ್ಯವು ದುರ್ಲಭವು ಅದರಲ್ಲಿಯೂ ಋಷಿತ್ವವು ಅದರಲ್ಲಿ ತಪಸ್ವಿತ್ವವು ದುರ್ಲಭವು. ನಿನ್ನ ಆಸೆಯು ಕೈಗೂಡುತ್ತಿದೆ. ನಿನ್ನ ಮೊಮ್ಮಗನಿಂದ ನನ್ನ ಕುಲವು ಬ್ರಾಹ್ಮಣ್ಯವನ್ನು ಹೊಂದುವುದು. ನಿನ್ನ ಮೊಮ್ಮಗನು ಮಹಾತಪಸ್ವಿಯಾಗಿ ದೇವಮನುಷ್ಯರಿಗೆಲ್ಲಾ ಮೂರುಲೋಕಗಳಿಗೂ ಭಯವನ್ನು ಉಂಟು ಮಾಡುವನು. ರಾಜನೇ! ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ನನಗೆ ತೀರ್ಥಯಾತ್ರೆಗೆ ಹೋಗಬೇಕಾಗಿದೆ. ನನಗೆ ಹೊತ್ತಾಗುತ್ತದೆ. ಬೇಗನೆ ಕೇಳು' ಎಂದರು.

ಕುಶಿಕರು 'ಪೂಜ್ಯರೇ! ಇದೇ ತಾವು ಕೊಟ್ಟ ವರವಾಗಲಿ. ತಾವು ಹೇಳಿದಂತೆ

ನನ್ನ ಮೊಮ್ಮಗನಾಗಲಿ. ನನ್ನ ಕುಲಕ್ಕೆ ಬ್ರಾಹ್ಮಣ್ಯವು ಬರಲಿ. ಆದರೆ ನನ್ನ ವಂಶಕ್ಕೆ ಹೇಗೆ ಬ್ರಾಹ್ಮಣ್ಯವು ಬರಲಿಕ್ಕೆ ಹೋಗುವುದು? ಯಾರು ನನಗೆ ಬಂಧುವಾಗುವನು ಎಂದೆಲ್ಲಾ ವಿಸ್ತಾರವಾಗಿ ಕೇಳಲಿಕ್ಕೆ ಬಯಸುವೆನು' ಎಂದನು.

ಚ್ಯವನರು 'ರಾಜನೇ! ಇದನ್ನು ಅವಶ್ಯವಾಗಿ ಹೇಳುತ್ತೇನೆ. ಭೃಗುವಂಶದವರಿಗೆ ಕ್ಷತ್ರಿಯರು ಶಿಷ್ಯರು. ಅವರು ದೈವೇಚ್ಛೆಯಿಂದ ವಿರೋಧವನ್ನು ಹೊಂದುತ್ತಾರೆ. ಕ್ಷತ್ರಿಯರು ಭೃಗುವಂಶದವರನ್ನೆಲ್ಲಾ ಕೊಲ್ಲಲಿಕ್ಕೆ ಹೋಗುವರು. ಗರ್ಭದಲ್ಲಿರುವ ಮಗುವನ್ನೂ ಕೂಡ ಕೊಂದು ಹಾಕುವರು. ತರುವಾಯ ನಮ್ಮ ವಂಶದಲ್ಲಿ ಊರ್ವ ಎಂಬ ಮಹಾತೇಜಸ್ವಿಯು ಹುಟ್ಟುವನು. ಅವನು ಮೂರುಲೋಕವನ್ನೂ ನಾಶಮಾಡುವುದಕ್ಕಾಗಿ ಕೋಪಾಗ್ನಿಯನ್ನು ಧರಿಸುವನು. ಭೂಮಿಯನ್ನು ಭಸ್ಮವನ್ನಾಗಿ ಮಾಡುವನು. ಸ್ವಲ್ಪ ಸಮಯದ ಮೇಲೆ ಅವನೇ ಆ ಅಗ್ನಿಯನ್ನು ಶಾಂತವನ್ನಾಗಿ ಮಾಡುವನು. ಸಮುದ್ರದಲ್ಲಿ ವಡವಾವಕ್ತ್ರದಲ್ಲಿ ಇಡುವನು. ಅವನ ಮಗನಾದ ಋಚೀಕನಿಗೆ ತಾನಾಗಿಯೇ ಧನುರ್ವೇದವು ತಿಳಿಯುವುದು. ದೈವೇಚ್ಛೆಯಿಂದ ಕ್ಷತ್ರಿಯರ ನಾಶಕ್ಕಾಗಿ ಆ ಧನುರ್ವೇದವನ್ನು ತನ್ನ ಮಗನಿಗೆ ಹೇಳಿಕೊಡುವನು. ಅವನ ಮಗನ ಹೆಸರು ಜಮದಗ್ನಿಯೆಂದು. ಋಚೀಕನು ನಿನ್ನ ಕುಲದಿಂದ ಮದುವೆಯಾಗುವನು. ನಿನ್ನ ವಂಶವೃದ್ಧಿಗಾಗಿ ನಿನ್ನ ಮಗನಾದ ಗಾಧಿಯ ಮಗಳನ್ನು ಮದುವೆಯಾಗುವನು. ಅವನ ವಂಶದಲ್ಲಿ ಕ್ಷತ್ರಿಯ ಕರ್ಮವುಳ್ಳ ಬ್ರಾಹ್ಮಣನು ಹುಟ್ಟುವನು. ನಿನ್ನ ಮಗನಿಗೆ ಬ್ರಾಹ್ಮಣಧರ್ಮವುಳ್ಳ ಕ್ಷತ್ರಿಯನಾದ ವಿಶ್ವಾಮಿತ್ರನು ಹುಟ್ಟುವನು. ಈ ವ್ಯತ್ಯಾಸವಾಗಲಿಕ್ಕೆ ಇಬ್ಬರು ಹೆಂಗಸರು ಕಾರಣರಾಗುತ್ತಾರೆ. ಬ್ರಹ್ಮದೇವರ ಆಜ್ಞೆ ಹಾಗೆ ಇದೆ. ಇದು ಬೇರೆ ವಿಧವಾಗಿ ಆಗಲಾರದು. ನಿನ್ನ ಮೂರನೇ ತಲೆಯಲ್ಲಿ ಬ್ರಾಹ್ಮಣ್ಯವೂ ಬರುವುದು ನೀನು ಭೃಗುವಂಶದವರಿಗೆ ಸಂಬಂಧಿಯಾಗುವಿ' ಎಂದರು.

ಕುಶಿಕರಾಜನು ಮುನಿಗಳ ಮಾತನ್ನು ಕೇಳಿ ಸಂತೋಷಪಟ್ಟನು. ಹಾಗೇ ಆಗಲಿ ಎಂದನು. ಚ್ಯವನರು ಪುನಃ ವರವನ್ನು ಕೇಳಿಕೊ ಎಂದರು. ನನ್ನ ವಂಶವು ಬ್ರಾಹ್ಮಣ್ಯವನ್ನು ಪಡೆಯಲಿ. ಧರ್ಮದಲ್ಲಿಯೇ ಮನಸ್ಸುಳ್ಳುದ್ದಾಗಲಿ ಎಂದು ಕೇಳಿಕೊಂಡನು. ಚ್ಯವನರು ಈರೀತಿಯಾಗಿ ರಾಜನು ಕೇಳಿಕೊಳ್ಳಲು ಹಾಗೆಯೇ ಆಗಲಿ ಎಂದು ಹೇಳಿ ರಾಜನಿಗೆ ಅನುಜ್ಞೆಯನ್ನು ಕೊಟ್ಟು ತೀರ್ಥಯಾತ್ರೆಗೆ ಹೋದರು. ರಾಜನೂ ನಗರಕ್ಕೆ ಹೋಗಿ ಸುಖದಿಂದ ಇದ್ದನು.



# ಭಂಗಾಸ್ವನರಾಜನ ಚರಿತೆಯು [1]

ಪೂರ್ವದಲ್ಲಿ ಧಾರ್ಮಿಕನಾದ ಭಂಗಾಸ್ವನ ಎಂಬ ರಾಜನಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಆದುದರಿಂದ ಅವನು ಮಕ್ಕಳಾಗಬೇಕೆಂಬ ಆಸೆಯಿಂದ ಇಂದ್ರದೇವರಿಗೆ ಅಪ್ರಿಯವಾದ ಅಗ್ನಿಷ್ಟುತ್ ಎಂಬ ಯಾಗವನ್ನು ಮಾಡಿದನು. ಇಂದ್ರದೇವರು ಈರೀತಿಯಾಗಿ ರಾಜನು ಯಾಗವನ್ನು ಮಾಡುವುದನ್ನು ತಿಳಿದು ಅವನಿಗೆ ಉಪದ್ರವನ್ನು ಮಾಡಬೇಕೆಂದು ಯೋಚಿಸಿದರು. ಆದರೆ ಸರಿಯಾದ ಅವಕಾಶವು ಸಿಕ್ಕಲಿಲ್ಲ. ಸ್ವಲ್ಪ ಸಮಯದ ಮೇಲೆ ರಾಜನು ಮೃಗಬೇಟೆಗೆ ಹೋದನು. ಆಗ ಇಂದ್ರದೇವರು ಇದೇ ಸಮಯ ಎಂದು ತಿಳಿದುಕೊಂಡು ದಾರಿಯನ್ನು ತಪ್ಪಿಸಿದರು. ರಾಜನಿಗೆ ದಿಕ್ಕೇ ತಿಳಿಯಲಿಲ್ಲ. ಹಸಿವೆಯಿಂದಲೂ ಬಾಯಾರಿಕೆಯಿಂದಲೂ ಶ್ರಮವನ್ನು ಹೊಂದುವವನಾಗಿ ಅತಿಮನೋಹರವಾದ ನೀರಿನಿಂದ ತುಂಬಿದ ಸರೋವರವನ್ನು ನೋಡಿದನು. ಆ ಸರೋವರದಲ್ಲಿ ಇಳಿದು ಕುದುರೆಗೆ ನೀರನ್ನು ಕುಡಿಸಿದನು. ಆಮೇಲೆ ಕುದುರೆಯನ್ನು ಮರಕ್ಕೆ ಕಟ್ಟಿಹಾಕಿ ತಾನು ನೀರಿನಲ್ಲಿ ಮುಳುಗಿದನು. ಮೇಲೆ ಬರುವಾಗ ತಾನೂ ಹೆಂಗಸಾದನು. ತುಂಬಾ ದುಃಖವುಳ್ಳವನಾಗಿ ಶ್ರಮದಿಂದ ಕುದುರೆಯ ಮೇಲೆ ಕೂತುಕೊಂಡು ಊರಿಗೆ ಬಂದನು. ಊರಿನಲ್ಲಿ ಪತ್ನಿಯರೂ ಮಕ್ಕಳೂ ಭೃತ್ಯರೂ ಊರಜನರೂ ಇದೇನೆಂದು ಆಶ್ಚರ್ಯಪಟ್ಟರು. ತರುವಾಯ ರಾಜನು ಅವರೊಡನೆ 'ನಾನು ಕಾಡಿಗೆ ಭೃತ್ಯರೊಡನೆ ಮೃಗಬೇಟೆಗೆ ಹೋಗಿರುವಾಗ ದೈವೇಚ್ಛೆಯಿಂದ ದಾರಿತಪ್ಪಿಹೋಗಿ ಘೋರವಾದದ ಕಾಡಿಗೆ ಹೋಗಿ ಅಲ್ಲಿ ಕಂಡ ಸರೋವರದಲ್ಲಿ ಮುಳುಗಿ ಹೆಂಗಸಾದೆನು. ಮಕ್ಕಳೇ! ನೀವು ಪ್ರೀತಿಯಿಂದ ರಾಜ್ಯವನ್ನು ಅನುಭವಿಸಿರಿ. ನಾನು ಕಾಡಿಗೆ ಹೋಗುವೆನು'ಎಂದು ಹೇಳಿ ಕಾಡಿಗೆ ಹೋಗಿ ಅಲ್ಲಿ ಒಬ್ಬ ತಪಸ್ವಿಯನ್ನು ಮದುವೆಯಾಗಿ ಅವನಿಂದ ನೂರು ಜನ ಮಕ್ಕಳನ್ನು ಪಡೆದನು. ತರುವಾಯ ಆ ಮಕ್ಕಳನ್ನು ಕರಕೊಂಡು ರಾಜ್ಯಕ್ಕೆ ಹೋಗಿ 'ಮಕ್ಕಳೇ! ನೀವು ನಾನು ಪುರುಷನಾದಾಗ ಹುಟ್ಟಿದ ನೂರು ಮಕ್ಕಳು. ಇವರು ನಾನು ಸ್ತ್ರೀಯಾಗಿರುವಾಗ ಹುಟ್ಟಿದ ನೂರು ಮಕ್ಕಳು. ನೀವು ಪರಸ್ಪರ ಸ್ನೇಹದಿಂದ ಇದ್ದುಕೊಂಡು ರಾಜ್ಯವನ್ನು ಅನುಭವಿಸಿರಿ ಎಂದು ಹೇಳಿದನು.

ತರುವಾಯ ಪರಸ್ಪರದಿಂದ ರಾಜ್ಯವನ್ನು ಅನುಭವಿಸುತ್ತಾ ಇದ್ದರು. ಇದನ್ನು

1. ಮಭಾ. ಅನುಪ. ಅ-12 (34) (ಪು.ನಾ.ಚೂ)

ನೋಡಿ ಇಂದ್ರದೇವರಿಗೆ ಕೋಪವು ಬಂದಿತು. ನಾನು ರಾಜನಿಗೆ ಉಪದ್ರವನ್ನು ಮಾಡಬೇಕೆಂದು ಮಾಡಿದರೆ ಉಪಕಾರವೇ ಆಯಿತಲ್ಲಾ! ಎಂದು ಹೇಳಿಕೊಂಡು ತಾನು ಬ್ರಾಹ್ಮಣ ರೂಪದಿಂದ ರಾಜಪುತ್ರರಲ್ಲಿಗೆ ಹೋಗಿ ಪರಸ್ಪರ ಜಗಳವಾಗುವಂತೆ ಮಾಡಿದರು. ಅಣ್ಣತಮ್ಮಂದಿರಿಗೆ ಯಾವಾಗಲೂ ಸ್ನೇಹವಿರುವುದು ಇಲ್ಲವೇ ಇಲ್ಲ. ಒಂದೇ ತಂದೆಯಾದ ಕಶ್ಯಪರ ಮಕ್ಕಳಾದ ದೇವತೆಗಳು ದೈತ್ಯರೇ ಜಗಳಾಡಿದ್ದಾರೆ. ಈಗ ನಮ್ಮ ರಾಜ್ಯವನ್ನು ಯಾರೋ ಒಬ್ಬ ತಪಸ್ವಿಯ ಮಕ್ಕಳು ಅನುಭವಿಸಲಿಕ್ಕೆ ಬಿಡುತ್ತೀರಿ?' ಎಂದು ಹೇಳಲು ಅವರು ಪರಸ್ಪರ ಯುದ್ಧಮಾಡಿಕೊಂಡು ಇನ್ನೂರು ಜನರೂ ಸತ್ತುಹೋದರು. ಆಗ ಹೆಂಗಸಾಗಿದ್ದ ಭಂಗಾಸ್ವನನು ಅಳತಕ್ಕವನಾದನು.

ಆಗ ಇಂದ್ರದೇವರು ಬ್ರಾಹ್ಮಣ ರೂಪದಿಂದ ಅವನ ಸಮೀಪಕ್ಕೆ ಹೋಗಿ ಏನು ದುಃಖದಿಂದ ನೀನು ಅಳುತ್ತಿರುವಿ ಎಂದು ಕೇಳಿದರು. ಅದಕ್ಕೆ ಭಂಗಾಸ್ವನನು 'ನನ್ನ ಇನ್ನೂರು ಮಕ್ಕಳೂ ಮೃತರಾದರು. ನಾನು ಮೊದಲು ರಾಜನಾಗಿದ್ದೆನು. ಆಗ ನನಗೆ ನೂರು ಮಕ್ಕಳು ಹುಟ್ಟಿದರು. ನಾನು ಮೃಗಬೇಟೆಗೆ ಹೋಗಿ ಒಂದು ಸರೋವರದಲ್ಲಿ ಹೆಂಗಸಾದೆನು. ಆಮೇಲೆ ನನ್ನಲ್ಲಿ ಒಬ್ಬ ತಪಸ್ವಿಗಳಿಂದ ನೂರುಜನ ಮಕ್ಕಳಾದರು. ಅವರನ್ನು ರಾಜ್ಯದಲ್ಲಿದ್ದ ಮೊದಲಿನ ಮಕ್ಕಳೊಡನೆ ರಾಜ್ಯವನ್ನು ಬಿಟ್ಟು ಬಂದೆನು. ಅವರೆಲ್ಲರೂ ಜಗಳಾಡಿಕೊಂಡು ಸತ್ತುಹೋದರು. ಅದಕ್ಕಾಗಿ ನಾನು ಅಳುತ್ತಿದ್ದೇನೆ' ಎಂದನು. ಆಗ ಇಂದ್ರದೇವರು ಕಠಿಣವಾದ ಸ್ವರದಿಂದ 'ನೀನು ಪೂರ್ವದಲ್ಲಿ ನನಗೆ ಬಹಳ ದುಃಖವನ್ನು ಉಂಟುಮಾಡಿದಿ. ನನ್ನನ್ನು ಕರೆಯದೆ ನನಗೆ ಅಪ್ರಿಯವಾದ ಯಾಗವನ್ನು ಮಾಡಿದಿ. ನಾನು ಇಂದ್ರನು. ನಾನೇ ನಿನ್ನ ಮಕ್ಕಳಿಗೆ ವಿರೋಧವನ್ನು ಉಂಟುಮಾಡಿದವನು! ಎಂದರು. ಇಂದ್ರದೇವರನ್ನು ನೋಡಿ ಭಂಗಾಸ್ವನನು ಕಾಲಿಗೆ ಬಿದ್ದನು. 'ಕ್ಷಮಿಸಬೇಕು. ನಾನು ಮಕ್ಕಳುಬೇಕೆಂಬ ಆಸೆಯಿಂದ ಆ ಯಾಗವನ್ನು ಮಾಡಿದೆನು' ಎಂದುಕೊಂಡನು. ನಮಸ್ಕಾರ ಮಾಡಿದ್ದರಿಂದ ಇಂದ್ರದೇವರು ಪ್ರಸನ್ನರಾಗಿ 'ನಿನಗೆ ಪುರುಷನಾಗಿರುವಾಗ ಹುಟ್ಟಿದ ಮಕ್ಕಳು ಬದುಕಲೇ? ಅಥವಾ ಸ್ತ್ರೀಯಾಗಿರುವ ಹುಟ್ಟಿದ ಮಕ್ಕಳು ಬದುಕಲೇ? ಎಂದು ಕೇಳಿರು. ಅದಕ್ಕೆ ಭಂಗಾಸ್ವನನು ಸ್ತ್ರೀಯಾಗಿರುವಾಗ ಹುಟ್ಟಿದ ಮಕ್ಕಳು ಬದುಕಲಿ ಎಂದನು. ಅದನ್ನು ಕೇಳಿ ಇಂದ್ರದೇವರು ಆಶ್ಚರ್ಯಉಳ್ಳವರಾಗಿ 'ನಿನಗೆ ಪುರುಷನಾಗಿರುವಾಗ ಹುಟ್ಟಿದ ಮಕ್ಕಳಮೇಲೆ ದ್ವೇಷವೇಕೆ? ಸ್ತ್ರೀಯಾಗಿ ಹುಟ್ಟಿದ ಮಕ್ಕಳ ಮೇಲೆ ಪ್ರೇಮವೇತಕ್ಕೆ? ಎಂದು ಕೇಳಿದರು.

ಅದಕ್ಕೆ ಸ್ತ್ರೀಯರಿಗೆ ಮಕ್ಕಳಲ್ಲಿ ಅಧಿಕವಾದ ಸ್ನೇಹವು ಇರುವುದು. ಪುರುಷರಿಗೆ

ಅಷ್ಟು ಇರುವುದಿಲ್ಲ. ಆದುದರಿಂದ ನಾನು ಸ್ತ್ರೀಯಾಗಿರುವ ಹುಟ್ಟಿದ ಮಕ್ಕಳು ಬದುಕಲಿ' ಎಂದನು. ಅದಕ್ಕೆ ಇಂದ್ರದೇವರು ಸಂತುಷ್ಟರಾಗಿ ನೀನು ಸತ್ಯವನ್ನು ಹೇಳಿದ ಕಾರಣ ನಿನ್ನ ಎಲ್ಲಾ ಮಕ್ಕಳೂ ಬದುಕಲಿ. ಇನ್ನು ನೀನು ವರವನ್ನು ಕೇಳು. ನೀನು ಪೂರ್ವದಂತೆ ಪುರುಷನಾಗುವಿಯಾ? ಅಥವಾ ಸ್ತ್ರೀಯಾಗಿಯೋ ಇರುವಿಯಾ? ಎಂದರು. ಅದಕ್ಕೆ ನಾನು ಸ್ತ್ರೀಯಾಗಿಯೇ ಇರುವೆನು. ಪುರುಷತ್ವವು ನನಗೆಬೇಡ ಎಂದನು. ಆಗ ಇಂದ್ರದೇವರು ನೀನು ಪುರುಷತ್ವವನ್ನು ಬಿಟ್ಟು ಸ್ತ್ರೀತ್ವವನ್ನೇ ಯಾಕೆ ಅಪೇಕ್ಷಿಸುವೆ' ಎಂದು ಕೇಳುವಾಗ ಭಂಗಾಸ್ವನನು ಸ್ತ್ರೀಪುರುಷ ಸಂಯೋಗದಲ್ಲಿ ಸ್ತ್ರೀಯರಿಗೇ ಹೆಚ್ಚಿನ ಪ್ರೀತಿಯುಂಟಾಗುವುದು. ಆದುದರಿಂದ ನಾನು ಸ್ತ್ರೀತ್ವವನ್ನೇ ಅಪೇಕ್ಷಿಸುವೆನು' ಎಂದನು. ಅದಕ್ಕೆ ಇಂದ್ರದೇವರು ಹಾಗೇ ಆಗಲಿ ಎಂದು ಹೇಳಿ ಹೊರಟು ಹೋದನು.



## ವೀತಹವ್ಯನ ಕಥೆ [1]

ಮಹಾನುಭಾವನಾದ ವೈವಸ್ವತಮನುವಿಗೆ ಶರ್ಯಾತಿ ಎಂಬ ಧರ್ಮಿಷ್ಟನಾದ ಮಗನಿದ್ದನು. ಅವನ ವಂಶದಲ್ಲಿ ಹೈಹಯ ತಾಲಜಂಘ ಎಂಬ ಇಬ್ಬರು ರಾಜರು ಬಂದರು. ಹೈಹಯನಿಗೆ ವೀತಹವ್ಯ ಎಂದೂ ಹೆಸರು. ಅವನಿಗೆ ಹತ್ತುಜನ ಹೆಂಡತಿಯಲ್ಲಿ ನೂರುಜನ ಮಕ್ಕಳು ಹುಟ್ಟಿದರು. ನೂರು ಜನರೂ ಯುದ್ಧದಲ್ಲಿ ಮಹಾಸಮರ್ಥರಾಗಿದ್ದರು.

ಅದೇ ಸಮಯದಲ್ಲಿ ಕಾಶಿಯಲ್ಲಿ ದಿವೋದಾಸನ ಪಿತಾಮಹನಾದ ಹರ್ಯಶ್ವ ಎಂಬ ರಾಜನಿದ್ದನು. ವೀತಹವ್ಯನ ನೂರು ಜನ ಮಕ್ಕಳು ಬಂದು ಗಂಗಾಯಮುನೆಗಳ ಮಧ್ಯದಲ್ಲಿ ಯುದ್ಧಮಾಡಿ ಆ ಹರ್ಯಶ್ವನನ್ನು ಕೊಂದುಹಾಕಿ ತಮ್ಮ ಊರಿಗೆ ಹೋದರು. ತರುವಾಯ ಹರ್ಯಶ್ವನ ಮಗನಾದ ಸುದೇವನು ಪಟ್ಟಾಭಿಷಿಕ್ತನಾಗಿ ರಾಜ್ಯವನ್ನು ಪಾಲಿಸುತ್ತಿದ್ದನು. ಅದೇ ವೀತಹವ್ಯನ ಮಕ್ಕಳು ಬಂದು ಯುದ್ಧದಲ್ಲಿ ಸುದೇವನನ್ನೂ ಕೊಂದು ಹೋದರು. ತರುವಾಯ ಸುದೇವನ ಮಗನಾದ ದಿವೋದಾಸನು ಅವರ ಪರಾಕ್ರಮವನ್ನು ನೋಡಿ ಇಂದ್ರದೇವರ ಆಜ್ಞೆಯಿಂದ ಗಂಗೆಯ ಉತ್ತರತೀರದಲ್ಲಿ ಗೋಮತೀನದಿಯ ದಕ್ಷಿಣತೀರದಲ್ಲಿ ಇಂದ್ರದೇವರ ಅಮರಾವತಿಯಂತೆ ಇರುವ ವಾರಾಣಸೀ ಎಂಬ ಪಟ್ಟಣವನ್ನು ನಿರ್ಮಿಸಿ ಅಲ್ಲಿಯೇ ರಾಜ್ಯಭಾರ ಮಾಡುತ್ತಾ ಇದ್ದನು.

---

1. ಮಭಾ.ಅನು.ಪ. ಅ-30

ಅಲ್ಲಿಗೂ ವೀತಹವ್ಯನ ಮಕ್ಕಳು ಬಂದರು. ದಿವೋದಾಸನು ಬಂದು ಅವರೊಡನೆ ಯುದ್ಧಮಾಡಿದನು. ದೇವಾಸುರರ ಯುದ್ಧದಂತೆ ಅತಿಭಯಂಕರ ವಾದ ಯುದ್ಧವು ನಡೆಯಿತು. ದಿವೋದಾಸನ ಸೈನಿಕರು ಮೃತರಾದರು. ವಾಹನಗಳು ನಾಶವನ್ನು ಹೊಂದಿದವು ಹಣವೆಲ್ಲವೂ ವೆಚ್ಚವಾಯಿತು. ಕೊನೆಗೆ ದಿವೋದಾಸನು ಓಡಿಹೋಗಲಿಕ್ಕೆ ಆರಂಭಿಸಿದನು. ಅವನು ಮನೋಹರವಾದ ಭರದ್ವಾಜರ ಆಶ್ರಮಕ್ಕೆ ಓಡಿಬಂದವನಾಗಿ ಕೈಮುಗಿದು ಮರೆಹೊಂದಿದನು. ಆಗ ಭರದ್ವಾಜರು 'ರಾಜನೇ! ನೀನು ಬಂದಿರುವ ಕಾರಣವನ್ನು ತಿಳಿಸು. ನಾನು ನಿನಗೆ ಪ್ರಿಯವನ್ನು ಮಾಡುವೆನು' ಎಂದರು.

ದಿವೋದಾಸನು 'ಪೂಜ್ಯರೇ! ವೀತಹವ್ಯನ ಮಕ್ಕಳು ಯುದ್ಧದಲ್ಲಿ ನನ್ನ ವಂಶವನ್ನು ನಾಶಮಾಡಿದರು. ನಾನೊಬ್ಬನೇ ಉಳಿದಿದ್ದೇನೆ. ತಮ್ಮನ್ನೇ ಮರೆಹೊಂದಿದ್ದೇನೆ. ಪೂಜ್ಯರೇ! ಶಿಷ್ಯನೆಂಬ ಸ್ನೇಹದಿಂದ ನನ್ನನ್ನು ತಾವು ಉದ್ಧರಿಸಬೇಕು. ಆ ಪಾಪಿಗಳು ನನ್ನ ವಂಶದಲ್ಲಿ ನಾನೊಬ್ಬನೇ ಉಳಿಯುವಂತೆ ಮಾಡಿಬಿಟ್ಟರು' ಎಂದನು.

ಆಗ ಭರದ್ವಾಜರು 'ರಾಜ! ಭಯಪಡಬೇಡ. ನಿನಗೊಬ್ಬ ಮಗನಾಗುವಂತೆ ನಾನೊಂದು ಇಷ್ಟಿಯನ್ನು ಮಾಡುವೆನು. ಆ ಮಗನಿಂದ ನೀನು ವೀತಹವ್ಯನ ವಂಶದವರನ್ನೆಲ್ಲಾ ಜಯಿಸುವಿ' ಎಂದು ಹೇಳಿ ಒಂದು ಇಷ್ಟಿಯನ್ನು ಮಾಡಿದರು. ತರುವಾಯ ದಿವೋದಾಸನಿಗೆ ಪ್ರತರ್ದನ ಎಂದು ಹೆಸರುಳ್ಳ ಮಗನು ಹುಟ್ಟಿದನು. ಅವನು ಹುಟ್ಟಿದ ಕೂಡಲೇ ಹದಿಮೂರು ವರ್ಷದವನಷ್ಟು ದೊಡ್ಡದಾಗಿ ಬೆಳೆದನು. ಸಂಪೂರ್ಣ ವೇದವನ್ನೂ ಧನುರ್ವೇದವನ್ನೂ ಅಧ್ಯಯನ ಮಾಡಿದನು. ಭರದ್ವಾಜರ ಅನುಗ್ರಹಕ್ಕೆ ಪಾತ್ರರಾಗಿ ಒಳ್ಳೇ ತೇಜಸ್ವಿಯಾದನು. ಅವನು ಕವಚವನ್ನು ಧರಿಸಿಕೊಂಡು ಧನುರ್ಧಾರಿಯಾಗಿ ಋಷಿಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ ಸೂರ್ಯನಂತೆ ಪ್ರಕಾಶಿಸಿದನು. ಅವನನ್ನು ನೋಡಿ ದಿವೋದಾಸನು ವೀತಹವ್ಯನ ಮಕ್ಕಳು ಸತ್ತರೆಂದೇ ಭಾವಿಸಿದನು. ತರುವಾಯ ದಿವೋದಾಸನು ಪತ್ರರ್ದನನಿಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿ ವೀತಹವ್ಯನ ಮಕ್ಕಳನ್ನು ಸಂಹರಿಸಲಿಕ್ಕೆ ಕಳುಹಿಸಿದನು. ಅವನು ರಥದಲ್ಲಿ ಕೂತುಕೊಂಡು ಗಂಗೆಯನ್ನು ದಾಟಿ ವೀತಹವ್ಯನ ರಾಜ್ಯಕ್ಕೆ ಹೋದನು. ವೀತಹವ್ಯನ ಮಕ್ಕಳು ರಥದ ಶಬ್ದವನ್ನು ಕೇಳಿ ರಥಾರೂಢರಾಗಿ ಯುದ್ಧಕ್ಕೆ ಬಂದರು. ನಾನಾವಿಧಗಳಾದ ಶಸ್ತ್ರಗಳನ್ನು ಸುರಿಸಿದರು. ಪ್ರತರ್ದನನು ಅವರ ಅಸ್ತ್ರ ಶಸ್ತ್ರಗಳನ್ನೆಲ್ಲಾ ತಡೆದು ನೂರಾರು ಭಲ್ಲ ಎಂಬ ಬಾಣಗಳಿಂದ ಅವರ ತಲೆಗಳನ್ನು ಕಡಿದುಹಾಕಿದನು.

ಈರೀತಿಯಾಗಿ ಮಕ್ಕಳೆಲ್ಲರೂ ಸಾಯಲು ವೀತಹವ್ಯನು ತನ್ನ ನಗರವನ್ನು ಬಿಟ್ಟು ಭೃಗುಋಷಿಗಳ ಆಶ್ರಮಕ್ಕೆ ಓಡಿಹೋದನು. ವೀತಹವ್ಯರಾಜನು ಭೃಗುಋಷಿಗಳನ್ನು ಕಾಪಾಡಬೇಕೆಂದು ಬೇಡಿಕೊಂಡನು. ಭೃಗುಋಷಿಗಳು ಅವನಿಗೆ ಅಭಯಪ್ರದಾನ ಮಾಡಿದರು. ಸ್ವಲ್ಪ ಹೊತ್ತಿನಲ್ಲೇ ಅಲ್ಲಿಗೆ ಪ್ರತರ್ದನನು ಹೋಗಿ ಸೇರಿದನು. ಪ್ರತರ್ದನನು ಆಶ್ರಮದ ಹೊರಗೆ ನಿಂತು 'ಅಲ್ಲಿ ಭೃಗುಋಷಿಗಳು ಶಿಷ್ಯರು ಯಾರು ಇದ್ದೀರಿ. ನನಗೆ ಭೃಗುಋಷಿಗಳನ್ನು ನೋಡಬೇಕಾಗಿದೆ. ಅವರೊಡನೆ ನಾನು ಬಂದಿರುವುದನ್ನು ತಿಳಿಸಿರಿ' ಎಂದು ಹೇಳಿದನು. ಅದನ್ನು ಕೇಳಿ ಭೃಗುಋಷಿಗಳೇ ಹೊರಗೆ ಬಂದರು. ರಾಜಶ್ರೇಷ್ಠನಾದ ಪ್ರತರ್ದನನನ್ನು ಶಾಸ್ತ್ರದಲ್ಲಿ ಹೇಳಿದ ರೀತಿಯಿಂದಲೇ ಪೂಜಿಸಿದರು. 'ರಾಜೇಂದ್ರ! ಇಲ್ಲಿಗೆ ಬರಲಿಕ್ಕೆ ಕಾರಣವೇನು? ಹೇಳು' ಎಂದರು. ಅದಕ್ಕೆ ಪ್ರತರ್ದನನು 'ಪೂಜ್ಯರೇ! ಇಲ್ಲಿರುವ ವೀತಹವ್ಯನನ್ನು ಬಿಟ್ಟುಬಿಡಿರಿ. ಅವನ ಮಕ್ಕಳು ನನ್ನ ವಂಶವನ್ನು ಸಂಪೂರ್ಣ ನಾಶಮಾಡಿದರು. ಅಹಂಕಾರಿಯಾದ ಇವನ ನೂರು ಜನ ಮಕ್ಕಳನ್ನೂ ಕೊಂದು ಬಂದಿರುವೆನು. ಇವನನ್ನೂ ಸಂಹರಿಸಿ ಋಣಪರಿಹಾರ ಮಾಡಿಕೊಳ್ಳುವೆನು' ಎಂದನು.

ಆಗ ಧರ್ಮಿಷ್ಠರಾದ ಭೃಗುಋಷಿಗಳು ಕೃಪೆಯುಳ್ಳವರಾಗಿ 'ನಮ್ಮ ಆಶ್ರಮದಲ್ಲಿ ಕ್ಷತ್ರಿಯನೊಬ್ಬನೂ ಇಲ್ಲವಲ್ಲಾ! ಇಲ್ಲಿ ಇರುವವರೆಲ್ಲರೂ ಬ್ರಾಹ್ಮಣರೇ' ಎಂದು ಹೇಳಿದರು. ಸತ್ಯ ಹೇಳುವವರಾದ ಭೃಗುಋಷಿಗಳ ಅಸತ್ಯವಾದ ಮಾತನ್ನು ಕೇಳಿ ಪ್ರತರ್ದನನು ಸಂತೋಷವುಳ್ಳವನಾಗಿ ಮೆಲ್ಲನೆ ಭೃಗುಋಷಿಗಳ ಪಾದವನ್ನು ಮುಟ್ಟಿ ನಮಸ್ಕಾರ ಮಾಡಿ 'ಪೂಜ್ಯರೇ! ಹೀಗಾದರೂ ನಾನು ಕೃತಾರ್ಥನಾದೆನು. ನೀವು ಆ ರಾಜನ ಕ್ಷತ್ರಿಯ ಜಾತಿಯನ್ನು ಬಿಡಿಸಿಬಿಟ್ಟಿರಿ. ನನಗೆ ಇನ್ನು ಅನುಜ್ಞೆಯನ್ನು ಕೊಡಿ. ಕೃಪಾದೃಷ್ಟಿಯಿಂದ ನೋಡಿರಿ. ಈ ರಾಜನ ಜಾತಿಯನ್ನು ಬಿಡಿಸಿದೆನಷ್ಟೆ! ಅಷ್ಟೇ ಸಾಕು' ಎಂದು ಹೇಳಿ ಭೃಗುಋಷಿಗಳ ಅನುಜ್ಞೆಯನ್ನು ಪಡೆದು ಹೊರಟುಹೋದನು. ಈ ರೀತಿಯಾಗಿ ಭೃಗುಋಷಿಗಳ ಮಾತಿನಿಂದಲೇ ವೀತಹವ್ಯನು ಬ್ರಾಹ್ಮಣನಾದನು. ಬ್ರಹ್ಮಜ್ಞಾನವನ್ನು ಹೊಂದಿದನು. ಅವನ ಮಗನು ಗೃತ್ಸಮದನು. ರೂಪದಿಂದ ಎರಡನೇ ಇಂದ್ರನಂತೆ ಇದ್ದನು. ಒಂದು ಸಂದರ್ಭದಲ್ಲಿ ಅಸುರರು ಅವನನ್ನು ಇಂದ್ರನೆಂದೇ ತಿಳಿದುಕೊಂಡು ಹಿಡಿದುಬಿಟ್ಟರು. ಅವನ ಮಗನು ಸುಚೇತಾ ಎನ್ನುವವನು. ಈಪ್ರಕಾರವಾಗಿ ವೀತಹವ್ಯನು ಬ್ರಾಹ್ಮಣನಾಗಿ ಅವನ ವಂಶವು ಬ್ರಾಹ್ಮಣವಂಶವಾಯಿತು.

# ವೃಷಾದರ್ಭರಾಜನ ಕಥೆ [1]

ಒಂದು ಸಮಯದಲ್ಲಿ ಕಶ್ಯಪ ಅತ್ರಿ ಭರದ್ವಾಜ ಗೌತಮ ವಿಶ್ವಾಮಿತ್ರ ಜಮದಗ್ನಿ ಅರುಂಧತೀ ಇವರಿಗೆಲ್ಲಾ ಪರಿಚಾರಿಕೆಯಾದ ಗಂಡಾ ಎನ್ನುವವಳೂ ಅವಳ ಗಂಡನಾದ ಪಶುಸಖ ಎಂದು ಹೆಸರುಳ್ಳವನೂ ಇಷ್ಟು ಜನರೂ ಸೇರಿ ತಪಸ್ಸು ಮಾಡುತ್ತಾ ಭೂಮಿಯಲ್ಲಿ ಸಂಚರಿಸುತ್ತಾ ಇದ್ದರು. ಹೀಗೆ ಇರಲು ಒಂದು ಸಮಯ ಬಹಳಕಾಲ ಮಳೆಯೇ ಬರಲಿಲ್ಲ. ಜನರೆಲ್ಲರೂ ಹಸಿವೆಯಿಂದ ಬಳಲಿದರು. ಪೂರ್ವದಲ್ಲಿ ಒಂದು ಯಜ್ಞದಲ್ಲಿ ಶಿಬಿರಾಜನ ಮಗನು ಶೈಬ್ಯ ಎನ್ನುವವನು ಋತ್ವಿಕ್‌ಗಳಿಗೆ ತನ್ನ ಮಗನನ್ನೇ ದಕ್ಷಿಣೆಯನ್ನಾಗಿ ಕೊಟ್ಟಿದ್ದನು. ಅವನು ಆಯುಷ್ಯ ತೀರಿ ಮೃತನಾದನು. ಅವನ ದೇಹದ ಸುತ್ತಲೂ ಇವರೆಲ್ಲರೂ ಕೂತುಕೊಂಡರು. ಹಸಿವೆಯಿಂದ ಕೂತುಕೊಂಡರು.

ಅದನ್ನು ನೋಡಿ ವೃಷಾದರ್ಭಿ ಎಂಬ ರಾಜನು 'ಬ್ರಾಹ್ಮಣರೇ! ದಾನವನ್ನು ತೆಗೆದುಕೊಳ್ಳಿರಿ. ನಿನಗೆ ಸೌಖ್ಯವಾಗುವುದು. ನನ್ನಲ್ಲಿ ಇರುವ ಹಣವನ್ನು ನೀವು ತೆಗೆದುಕೊಳ್ಳಿರಿ. ನನಗೆ ಯಾಚನೆಮಾಡುವ ಬ್ರಾಹ್ಮಣರನ್ನು ಕಂಡರೆ ಬಹಳ ಪ್ರೀತಿಯು. ಒಬ್ಬೊಬ್ಬರಿಗೂ ಸಾವಿರ ಅಶ್ವತರೀಗಳನ್ನೂ (ಅಶ್ವತರೀ ಎಂದರೆ ಕುದುರೆಯಲ್ಲಿ ಕತ್ತೆಯಿಂದ ಹುಟ್ಟಿದ ಜಾತಿ) ಎತ್ತುಗಳನ್ನೂ ಕೊಡುತ್ತೇನೆ. ದನಗಳನ್ನು ಕೊಡುತ್ತೇನೆ. ಗ್ರಾಮಗನ್ನೂ ಕೊಡುತ್ತೇನೆ. ಅಕ್ಕಿ ಯವ ಬೇಕಾದದ್ದನ್ನು ಕೊಡುವೆನು. ಈ ಹೆಣವನ್ನು ತಿನ್ನಲಿಕ್ಕೆ ಪ್ರಯತ್ನ ಮಾಡಬೇಡಿ' ಎಂದನು.

ಅದಕ್ಕೆ ಋಷಿಗಳು 'ರಾಜನೇ! ರಾಜರ ಹತ್ತಿರ ದಾನವನ್ನು ತೆಗೆದುಕೊಳ್ಳುವುದು ಮೊದಲು ಜೇನಿನಂತೆ ಕಂಡರೆ ಕೊನೆಗೆ ವಿಷಕ್ಕೆ ಸಮವಾದದ್ದು. ಅದನ್ನು ತಿಳಿದೂ ಕೂಡ ನಮಗೇಕೆ ಆಸೆ ತೋರಿಸುವಿ? ರಾಜ ಪ್ರತಿಗ್ರಹವು ತಪಸ್ಸನ್ನೆಲ್ಲಾ ನಾಶಮಾಡುವುದು. ಆದುದರಿಂದ ರಾಜನೇ! ನಿನಗೆ ನಿನ್ನ ದಾನದ ಸಹ ಕ್ಷೇಮವಿರಲಿ. ಅಪೇಕ್ಷಿಸುವವರಿಗೆ ದಾನವನ್ನು ಕೊಡು' ಎಂದು ಹೇಳಿಹೊರಟುಹೋದರು.

ತರುವಾಯ ರಾಜನಿಂದ ಪ್ರೇರಿತನಾಗಿ ಅವನು ಮಂತ್ರಿಗಳು ಅತ್ತಿಯಕಾಯಿಯ ಒಳಗೆ ರತ್ನಗಳನ್ನಿಟ್ಟು ತೆಗೆದುಕೊಂಡು ಹೋದರು. ಅವನ್ನು ಭೃತ್ಯರು ಹೋಗಿ ಅವರಿಗೆ ಕೊಟ್ಟರು. ಋಷಿಗಳು ಅದನ್ನು ನೋಡಿದರು. ಅತ್ರಿಋಷಿಗಳು ಇವುಗಳು

---

1. ವೃಷದರ್ಭ, ವೃಷಾದರ್ಭಿ ಎಂದು ನಾಮಾಂತರ. ಮ.ಭಾ. ಅನು.ಪರ್ವ. ಅ-141. ಭಾಗ. IX -23. (ಪು.ನಾ.ಚೂ)

ಭಾರವಾಗಿದೆ. ಇವನ್ನು ನಾವು ತೆಗೆದುಕೊಳ್ಳಲಾರೆವು ಎಂದರು. ತರುವಾಯ ಎಲ್ಲಾ ಋಷಿಗಳು ಇವುಗಳ ರತ್ನದಿಂದ ಕೂಡಿದ ಹಣ್ಣುಗಳು ಇವುಗಳನ್ನು ಯಾರು ಕಳುಹಿಸಿರುವನೋ ಅವನಿಗೆ ಕ್ಷೇಮವಾಗಲಿ ಎಂದು ಹೇಳಿ ಅಲ್ಲಿಂದ ಹೊರಟುಹೋದರು.

ಆಗ ಮಂತ್ರಿಗಳು ರಾಜನ ಬಳಿಗೆ ಹೋಗಿ ಋಷಿಗಳು ಏನೋ ಕಪಟವಿದೆ ಯೆಂದು ತಿಳಿದುಕೊಂಡು ಆ ಹಣ್ಣುಗಳನ್ನು ಮುಟ್ಟದೆ ಬೇರೆ ಸ್ಥಳಕ್ಕೆ ಹೊರಟು ಹೋದರು ಎಂದು ಹೇಳಿದರು. ಇದನ್ನು (ಇದರಿಂದ) ರಾಜನಿಗೆ ಬಹಳವಾಗಿ ಕೋಪವು ಬಂದಿತು. ಅವರಿಗೆ ಪ್ರತೀಕಾರವನ್ನು ಮಾಡಬೇಕು ಎಂದು ಹೇಳಿ ತನ್ನ ಮನೆಗೆ ಹೋದನು. ಅಲ್ಲಿ ಆಭಿಚಾರಿಕ ಹೋಮವನ್ನು ಮಾಡಿದನು. ಆ ಬೆಂಕಿಯಿಂದ ಒಂದು ರಾಕ್ಷಸಿಯು ಮೇಲೆ ಬಂದಳು. ಅವಳಿಗೆ ವೃಷಾದರ್ಭಿರಾಜನು ಯಾತುಧಾನಿ ಎಂದು ಹೆಸರಿಟ್ಟನು. ಆ ಯಾತುಧಾನಿಯು ರಾಜನಿಗೆ ಕೈಮುಗಿದು ಏನು ಮಾಡಬೇಕು ಎಂದು ಕೇಳಿತು. ರಾಜನ ಸಪ್ತ ಋಷಿಗಳು ಅರುಂಧತಿ ಅವರ ದಾಸೀ ದಾಸಿಯ ಪತಿ ಇಷ್ಟು ಜನರ ಹೆಸರನ್ನು ತಿಳಿದುಕೊಂಡು ಅವರನ್ನು ನಾಶಮಾಡು. ಆಮೇಲೆ ಇಚ್ಚಾನುಸಾರವಾಗಿ ತಿರುಗುತ್ತಾ ಇರು ಎಂದನು. ಹಾಗೇ ಆಗಲಿ ಎಂದು ಹೇಳಿ ಆಯಾತುಧಾನಿಯು ಋಷಿಗಳು ಸಂಚರಿಸುತ್ತಿದ್ದ ವನಕ್ಕೆ ಹೋದಳು.

ತರುವಾಯ ಋಷಿಗಳು ಗೆಡ್ಡೆಹಣ್ಣುಗಳನ್ನು ತಿನ್ನುತ್ತಾ ಸಂಚರಿಸುತ್ತಾ ನಾಯಿ ಯಿಂದ ಕೂಡಿಕೊಂಡು ಬರುತ್ತಿರುವ ಒಬ್ಬ ಪುಷ್ಟನಾದ ಸನ್ಯಾಸಿಯನ್ನು ನೋಡಿದರು. ಅವನನ್ನು ನೋಡಿ ಅರುಂಧತಿಯು ನೀವೆಲ್ಲರೂ ಇವನಂತೆ ಪುಷ್ಟರಾಗಿಲ್ಲವಲ್ಲಾ ಎಂದಳು.

ಆಗ ಋಷಿಗಳೆಲ್ಲರೂ ತಮ್ಮಂತೆ ಇವನಿಗೆ ಶ್ರಮವುಂಟಾಗಿಲ್ಲ, ಆದುದರಿಂದ ಪುಷ್ಟನಾಗಿರುವನು ಎಂದರು. ತರುವಾಯ ಆ ಸನ್ಯಾಸಿಯು ನಾಯಿಯಿಂದ ಸಹಿತನಾಗಿ ಇರುವವನು. ಇವರನ್ನು ನೋಡಿ ಹತ್ತಿರ ಬಂದು ಹಸ್ತಸ್ಪರ್ಶವನ್ನು ಮಾಡಿದನು. ತರುವಾಯ ಅವರು ಪರಸ್ಪರವಾಗಿ ಹಸಿವೆ ಪರಿಹಾರ ಮಾಡಿಕೊಳ್ಳ ಬೇಕೆಂದು ಹೇಳಿಕೊಂಡು ಗೆಡ್ಡೆಹಣ್ಣುಗಳನ್ನು ಸ್ವೀಕರಿಸುತ್ತಾ ಸಂಚರಿಸಿದರು. ಒಂದು ದಿವಸದಲ್ಲಿ ಸಂಚರಿಸುತ್ತಾ ಶುದ್ಧವಾದ ನೀರಿನಿಂದ ಕೂಡಿದ ಕಮಲಾದಿ ಪುಷ್ಪಗಳಿಂದ ಕೂಡಿದ್ದ ಸರೋವರವನ್ನು ನೋಡಿದರು. ವೃಷಾದರ್ಭಿರಾಜನು ಕಳುಹಿಸಿದ್ದ ಯಾತುಧಾನಿಯು ಆ ಸರೋವರವನ್ನು ರಕ್ಷಿಸುತ್ತಾ ಇದ್ದಳು. ಪಶುಸಖನಿಂದ ಕೂಡಿದ ಆ ಋಷಿಗಳು ಕಮಲದಗೆಡ್ಡೆಯನ್ನು ತೆಗೆಯಬೇಕೆಂದು ಅಲ್ಲಿಗೆ ಹೋದರು.

ತರುವಾಯ ಅವರು ಸರೋವರದ ಬಳಿಯಲ್ಲಿ ಕೂತಿರುವ ಯಾತುಧಾನಿಯನ್ನು ನೋಡಿ ನೀನೇಕೆ ಒಬ್ಬಳೇ ಕೂತಿರುವಿ? ನೀನು ಯಾರು? ನಿನಗೇನು ಪ್ರಯೋಜನವಿದೆ? ಎಂದು ಕೇಳಿದರು.

ಅದಕ್ಕೆ ಅವಳು ನಾನು ಯಾರೋ ಆಗಿದ್ದೇನೆ. ನನ್ನ ಹತ್ತಿರ ಪ್ರಶ್ನೆ ಮಾಡ ಬಾರದು. ನಾನು ಈ ಸರೋವರವನ್ನು ರಕ್ಷಣೆ ಮಾಡುವವಳು ಎಂದಿಷ್ಟು ತಿಳಿದು ಕೊಳ್ಳಿರಿ ಎಂದಳು.

ನಮಗೆಲ್ಲಾ ಹಸಿವೆಯಾಗುತ್ತಿದೆ. ಬೇರೊಂದು ಉಪಾಯವೂ ಇಲ್ಲ. ನಿನ್ನ ಸಮ್ಮತಿಯಿಂದ ನಾವೆಲ್ಲರೂ ಪದ್ಮದ ಗೆಡ್ಡೆಯನ್ನು ತೆಗೆದುಕೊಳ್ಳುವೆವು ಎಂದು ಋಷಿಗಳು ಹೇಳಿದರು.

ಅದಕ್ಕೆ ಅವಳು ಒಬ್ಬೊಬ್ಬರೇ ನಿಮ್ಮ ಹೆಸರನ್ನು ಹೇಳಿ ಆಮೇಲೆ ಬೇಗನೇ ಪದ್ಮದ ಗೆಡ್ಡೆಯನ್ನು ತೆಗೆದುಕೊಳ್ಳಿರಿ ಎಂದಳು. ಅದೇರೀತಿಯಾಗಿ ಎಲ್ಲರೂ ತಮ್ಮ ಹೆಸರನ್ನು ಹೇಳಿ ಅದರ ಅರ್ಥವನ್ನೂ ಹೇಳಿದರು. ಯಾತುಧಾನಿಯು ಇದನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಲಿಕ್ಕೆ ಆಗಲಾರದು. ಸರೋವರಕ್ಕೆ ಇಳಿ ಎಂದು ಒಬ್ಬೊಬ್ಬರ ಹತ್ತಿರವೂ ಹೇಳಿದಳು. ಕೊನೆಗೆ ಆ ಸನ್ಯಾಸಿಯು ಇವರೆಲ್ಲರೂ ಹೇಳಿದಂತೆ ನಾನು ಹೇಳಲಾರೆನು. ನನ್ನನ್ನು ಶುನಃ ಸಖಸಖ ಎಂದಿಷ್ಟೇ ತಿಳಿದುಕೊ ಎಂದನು. ಅದಕ್ಕೆ ಯಾತುಧಾನಿಯು ನೀನು ಸರಿಯಾಗಿ ಹೇಳಲಿಲ್ಲ. ಆದುದರಿಂದ ಇನ್ನೊಂದು ಬಾರಿ ನಿನ್ನ ಹೆಸರನ್ನು ಹೇಳು ಎಂದಳು. ಸನ್ಯಾಸಿಯು ಒಂದುಸಲ ಹೇಳಿದ ಹೆಸರು ನಿನಗೆ ತಿಳಿಯದೆ ಇದ್ದರೆ ನನ್ನ ದಂಡದ ಪೆಟ್ಟಿನಿಂದ ಭಸ್ಮವಾಗಿ ಹೋಗು ಎಂದು ಹೇಳಿ ಆ ಸನ್ಯಾಸಿಯು ತನ್ನ ಕೈಯಲ್ಲಿದ್ದ ದಂಡದಿಂದ ಅವಳ ತಲೆಗೆ ಬಡೆದನು. ಅವಳು ಕೆಳಗೆ ಬಿದ್ದು ಭಸ್ಮವಾಗಿ ಹೋದಳು. ಈ ರೀತಿಯಾಗಿ ಆ ಸನ್ಯಾಸಿಯು ಬಲಿಷ್ಠಳಾದ ಯಾತುಧಾನಿಯನ್ನು ಸಂಹರಿಸಿ ಹುಲ್ಲು ಬೆಳೆದ ಪ್ರದೇಶದಲ್ಲಿ ತನ್ನ ದಂಡವನ್ನು ಊರಿ ಕೂತುಕೊಂಡನು. ತರುವಾಯ ಮುನಿಗಳೆಲ್ಲರೂ ಆ ಸರೋವರದಿಂದ ಕಮಲಗಳನ್ನು ಕಮಲದ ಗೆಡ್ಡೆಗಳನ್ನು ಹಿಡಿದುಕೊಂಡು ಮೇಲಕ್ಕೆ ಬಂದರು. ಬಹುಶ್ರಮದಿಂದ ಪದ್ಮದ ಗೆಡ್ಡೆಗಳನ್ನೆಲ್ಲಾ ಸರೋವರದ ತೀರದಲ್ಲಿ ಇಟ್ಟು ಸರೋವರದಲ್ಲಿ ತರ್ಪಣವನ್ನು ಬಿಡುತ್ತಾ ಇದ್ದರು. ಆಮೇಲೆ ಮೇಲಕ್ಕೆ ಬಂದು ನೋಡುವಾಗ ಪದ್ಮದ ಗೆಡ್ಡೆಗಳು ಅಲ್ಲಿ ಕಾಣಸಲಿಲ್ಲ. ಯಾವ ಪಾಪಿಯು ಹಸಿವೆಯಿಂದ ಪೀಡಿತರಾದ ಪದ್ಮದಗೆಡ್ಡೆಗಳನ್ನು ಅಪಹರಿಸಿದನು ಎಂದರು. ಒಬ್ಬರ ಮೇಲೆ ಸಂದೇಹವುಳ್ಳವರಾಗಿ ಪರಸ್ಪರ ಪ್ರತಿಜ್ಞೆಯನ್ನು ಮಾಡಿದರು.

ಅತ್ರಿಋಷಿಗಳು ನಮ್ಮ ಪದ್ಮದ ಗೆಡ್ಡೆಗಳನ್ನು ಅಪಹರಿಸಿದವನು ಗೋವನ್ನು ಮೆಟ್ಟಿದ, ಸೂರ್ಯನಿಗೆ ಎದುರಾಗಿ ಮಲವಿಸರ್ಜನೆ ಮಾಡಿದ ಅನಧ್ಯಾಯ ದಿವಸಗಳಲ್ಲಿ ಅಧ್ಯಯನವನ್ನು ಮಾಡಿದ ಪಾಪವನ್ನು ಹೊಂದಲಿ ಎಂದರು.

ವಸಿಷ್ಠರು 'ಅನಾಧ್ಯಾಯದಲ್ಲಿ ಓದಿದ ಪಾಪವನ್ನೂ, ನಾಯಿಯ ಎಳೆದ ದೋಷ ವನ್ನು, ಸನ್ಯಾಸಿಯಾಗಿ ಇಚ್ಛಾನುಸಾರವಾಗಿ ಇದ್ದವನ ದೋಷವನ್ನೂ, ಹೊಂದಲಿ ಎಂದರು. ಹೀಗೆಯೇ ಎಲ್ಲಾ ಋಷಿಗಳೂ ಪರಿಚಾರಿಕೆಯೂ ಪಶುಸಖನೂ ಪ್ರತಿಯೊಬ್ಬರೂ ಒಂದೊಂದು ವಿಧವಾಗಿ ಪಾಪವು ಬರುವಂತೆ ಪ್ರತಿಜ್ಞೆ ಮಾಡಿದರು.

ಆಗ ಸನ್ಯಾಸಿಯು ಮಾತ್ರ ಯಾರು ಪದ್ಮದ ಗೆಡ್ಡೆಗಳನ್ನು ಅಪಹರಿಸಿರುವನೋ ಅಧ್ವರ್ಯುವಿಗೆ ಅಥವಾ ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡಿರುವ ಯಜು ರ್ವೇದ ಅಧ್ಯಯನ ಮಾಡಿದವನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಡಲಿ. ವೇದಗಳ ಅಧ್ಯಯನ ಮಾಡಿ ಸ್ನಾತಕವ್ರತವನ್ನು ಹೊಂದಲಿ ಎಂದನು.

ಆಗ ಎಲ್ಲರೂ ನೀನು ಶಪಥಮಾಡಿದ್ದು ಎಲ್ಲರಿಗೂ ಇಷ್ಟವಾದದ್ದು. ಆದುದರಿಂದ ನೀನೇ ಪದ್ಮದ ಗೆಡ್ಡೆಗಳನ್ನು ಅಪಹರಿಸಿರುವಿ ಎಂದರು. ಆಗ ಸನ್ಯಾಸಿಯು ಹೌದು ನಾನೇ ಕದ್ದುಕೊಂಡೆನು. ನಿಮ್ಮನ್ನು ಪರೀಕ್ಷಾ ಮಾಡಲಿಕ್ಕೆ ಇಲ್ಲಿಯೇ ಮರೆಮಾಡಿದ್ದೇನೆ. ನಿಮ್ಮೆಲ್ಲರ ರಕ್ಷಣೆಗಾಗಿ ನಾನು ಬಂದಿರುತ್ತೇನೆ. ಪರಮಕ್ರೂರಳಾದ ಆ ಯಾತುಧಾನಿಯು ವೃಷಾದರ್ಭರಾಜನಿಂದ ಕಳುಹಿಸಲ್ಪಟ್ಟವ ಳಾಗಿ ನಿಮ್ಮನ್ನು ಕೊಲ್ಲಲಿಕ್ಕೆ ಬಂದಿರುವಳು. ಅವಳನ್ನು ನಾನು ಸಂಹರಿಸಿರುವೆನು. ಆ ದುಷ್ಟಳು ನಿಮ್ಮನ್ನು ಕೊಲ್ಲುವಳೆಂದೇ ನಾನು ನಿಮ್ಮ ಸಮೀಪಕ್ಕೆ ಬಂದಿರುವೆನು. ನಾನು ದೇವೇಂದ್ರನೆಂದು ತಿಳಿಯಿರಿ. ನೀವು ಲೋಭರಹಿತರಾದ ಪ್ರಯುಕ್ತ ಉತ್ತಮವಾದ ಲೋಕಗಳನ್ನು ಪಡೆದಿರುವಿರಿ. ಬೇಗನೇ ಏಳಿರಿ. ಆ ಲೋಕಗಳನ್ನು ಹೊಂದಿರಿ' ಎಂದರು.

ತರುವಾಯ ಮಹರ್ಷಿಗಳೆಲ್ಲರೂ ಪ್ರೀತರಾಗಿ ಹಾಗೇ ಆಗಲಿ ಎಂದುಹೇಳಿ ಇಂದ್ರದೇವರೊಡನೆ ಸ್ವರ್ಗಕ್ಕೆ ಹೋದರು. ಈರೀತಿಯಾಗಿ ಅವರು ಹಸಿವೆಯುಳ್ಳವರಾದರೂ ಎಷ್ಟು ಹೇಳಿದರೂ ಲೋಭವನ್ನು ಹೊಂದಲಿಲ್ಲ. ಆದುದರಿಂದ ಸ್ವರ್ಗವನ್ನು ಹೊಂದಿದರು. ಆದುದರಿಂದ ಸರ್ವಕಾಲದಲ್ಲಿಯೂ ಲೋಭವನ್ನು ಬಿಡಬೇಕು.



# ಸುಬಾಹುವಿನ ಕಥೆ

ಪಾಂಚಾಲದೇಶದಲ್ಲಿ ಸುಬಾಹು ಎಂಬ ಕ್ಷತ್ರಿಯನಿದ್ದನು. ಅವನು ಹೆಂಡತಿಯ ಮಾತನ್ನು ಕೇಳಿಕೊಂಡು ತಂದೆತಾಯಿಗಳನ್ನು ದ್ವೇಷಿಸುತ್ತಿದ್ದನು. ತಾನು ರುಚಿಕರವಾದ ಆಹಾರವನ್ನು ತೆಗೆದುಕೊಳ್ಳುವನು. ತಂದೆತಾಯಿಗಳಿಗೆ ಕದನ್ನವನ್ನು ಹಾಕಿಸುವನು. ತಂದೆತಾಯಿಗಳು ಏನಾರೂ ಹೇಳಿದರೂ ಅವಮಾನ ಮಾಡುವನು. ಅಪಹಾಸವನ್ನು ಮಾಡುವನು. 'ಜನರಿಗೆ ಮುದಿತನ ಬಂದು ಬಿಟ್ಟರೆ ಬುದ್ಧಿಕೆಟ್ಟು ಹೋಗುವುದು. ಆದುದರಿಂದಲೇ ಈ ಮುದಿಗಳು ಎಷ್ಟು ಹೊತ್ತಿಗೂ ಏನೋ ಕೂಗುತ್ತಾ ಇರುತ್ತವೆ' ಇತ್ಯಾದಿ ದುಷ್ಟವಾಕ್ಯಗಳನ್ನು ಹೇಳುವನು.

ಒಂದುದಿನದಲ್ಲಿ ಭದ್ರಶೀಲ ಎಂಬ ಬ್ರಾಹ್ಮಣನ ಮನೆಗೆ ಬಂದನು. ಅವನು ಸುಬಾಹುನೊಡನೆ 'ಸುಬಾಹೋ! ನಿನಗೆ ಹಿತಕರವಾದ ಮಾತನ್ನು ಹೇಳುತ್ತೇನೆ. ಕೇಳು. ಗುರುಗಳನ್ನು ಸಂತೋಷಪಡಿಸುವುದು ಅತಿ ಉತ್ತಮ ಧರ್ಮವು. ಬ್ರಾಹ್ಮಣರಿಗೆ ಉಪನಯನ ಮಾಡಿದವನು ಮುಖ್ಯ ಗುರುವು. ಅವನಿಗಿಂತ ಹತ್ತು ಪಾಲು ಅಧಿಕನು ತಂದೆಯು. ತಂದೆಗಿಂತಲೂ ಹತ್ತುಪಾಲು ಅಧಿಕಳು ಮಗನಿಗೆ ತಾಯಿಯು. ಮೋಕ್ಷಕ್ಕೆ ಉಪಯುಕ್ತವಾದ ಜ್ಞಾನವನ್ನು ಉಪದೇಶಿಸುವ ಗುರುವು ಎಲ್ಲರಿಗಿಂತಲೂ ಶ್ರೇಷ್ಠನು. ಅವನೇ ಪರಮಮಿತ್ರನು. ನಮ್ಮ ದೇಹವೂ ನಮಗೆ ಪರಮಪವಿತ್ರನಂತೆ ಇರುವುದು. ಇಂತಹ ದೇಹದಲ್ಲಿ ಇದ್ದುಕೊಂಡು ಎಲ್ಲವನ್ನೂ ತಿಳಿಯುವನು. ಅಂತಹ ದೇಹವು ತಂದೆತಾಯಿಗಳಿಂದ ಉಂಟಾಗುವುದು. ಆದುದರಿಂದ ತಂದೆತಾಯಿಗಳನ್ನು ಎಲ್ಲ ಜಾತಿಯವರೂ ನಮಸ್ಕರಿಸಬೇಕು. ಗರ್ಭವನ್ನು ಧರಿಸುವುದರಿಂದ ಪೋಷಣೆ ಮಾಡುವುದರಿಂದಲೂ ತಂದೆಗಿಂತಲೂ ತಾಯಿಯು ಮಗನಿಗೆ ಪೂಜ್ಯಳು. ತಂದೆಯು ಸತ್ತರೂ ತಾಯಿಯು ಬದುಕಿದ್ದರೆ ಮಕ್ಕಳು ಬದುಕುವರು. ತಂದೆಯು ಬದುಕಿದ್ದರೂ ತಾಯಿಯು ಇಲ್ಲದಿದ್ದರೆ ಮಕ್ಕಳು ಬದುಕಲಾರವು. ತಾಯಿಯು ಇಲ್ಲದಿದ್ದರೂ ಬೇರೊಬ್ಬ ತಾಯಿಯಿದ್ದರೆ ಬದುಕುವುವು. ಯಾರು ಪೋಷಣೆಮಾಡುವಳೋ ಅವಳೇ ತಾಯಿಯಾಗುವಳು. ಹಾಗೆ ಸಾಕಿದವಳನ್ನೂ ಕೂಡ ತಾಯಿಯಂತೆಯೇ ಪೂಜಿಸಬೇಕು. ಅವಮಾನ ಮಾಡಬಾರದು.

ಗಾಯತ್ರಿಯ ಉಪದೇಶದಿಂದ ಸರ್ವಕಾರ್ಯಗಳನ್ನು ಮಾಡಲಿಕ್ಕೆ ಅಧಿಕಾರಿಯಾಗುವನು. ಆದುದರಿಂದ ಗಾಯತ್ರಿಯನ್ನು ಉಪದೇಶಿಸುವವನೂ ಗುರುವಾಗು

1. ಪ.

ವನು. ಹೆಂಡತಿಯು ತನಗೆ ಅರ್ಧ ಎಂದು ತಿಳಿಯಬೇಕು. ಹೆಣ್ಣುಕೊಟ್ಟ ಮಾವ ದೊಡ್ಡತಂದೆ ಇತ್ಯಾದಿಗಳೆಲ್ಲರೂ ಗುರುಗಳು ಹೀಗಿರುವಾಗ ನೀನು ಧರ್ಮಾಧರ್ಮ ವನ್ನು ತಿಳಿದವನಾಗಿದ್ದುಕೊಂಡೂ ಕೂಡ ಹೆಂಡತಿಯ ವಶನಾಗಿ ತಂದೆತಾಯಿಗಳನ್ನು ಅವಮಾನ ಮಾಡುವುದು ಸರಿಯಲ್ಲ. ಹೆಂಡತಿಯು ನ್ಯಾಯದಿಂದ ಇರಬೇಕು. ಧರ್ಮಕ್ಕೆ ವಿರೋಧವನ್ನು ಮಾಡಬಾರದು. ಧರ್ಮಕ್ಕೆ ವಿರೋಧವನ್ನು ಮಾಡುವ ಹೆಂಡತಿಯನ್ನು ಶಿಕ್ಷಿಸಬೇಕು. ಹೆಂಡತಿಗೆ ಅತ್ತೆ ಮಾವಂದಿರ ಸೇವೆಯು ಉತ್ತಮಧರ್ಮವು. ಗಂಡನು ಧರ್ಮವನ್ನು ಬಿಟ್ಟರೆ ಹೆಂಡತಿಯು ಬುದ್ಧಿಹೇಳಬೇಕು. ಹಾಕಿದ್ದರೆ(ಹಾಗಿದ್ದರೆ) ಅವಳು ಧರ್ಮಪತ್ನಿಯಾಗುವಳು. ಇಲ್ಲದಿದ್ದರೆ ಭೋಗಪತ್ನಿ ಯಾಗುವಳು. ಧರ್ಮಕ್ಕೆ ಅನುಕೂಲಳಾದ ಪತ್ನಿಯನ್ನು ಅನುಸರಿಸಿಕೊಂಡು ಹೋಗಬೇಕು. ಇದಕ್ಕೆ ವಿಪರೀತವಾದ ಹೆಂಡತಿಯ ಮಾತನ್ನು ಕೇಳಬಾರದು. ಆದುದರಿಂದ ವಿವೇಕವನ್ನು ತಂದುಕೊಟ್ಟು ಹೆಂಡತಿಯ ಮಾತನ್ನು ಕೇಳದೆ ತಂದೆತಾಯಿಗಳ ಸೇವೆಯನ್ನು ಮಾಡಬೇಕು. ಈ ರೀತಿಯಾಗಿ ಮಾಡಿದರೆ ನಿನಗೆ ಈ ಲೋಕದಲ್ಲಿ ಸ್ಥಿರವಾದ ಕೀರ್ತಿಯು ಉಂಟಾಗುವುದು. ಪರಲೋಕದಲ್ಲಿಯೂ ದೇವತೆಗಳ ಭೋಗಗಳಂತೆ ಭೋಗಗಳು ಸಿಗುವುವು. ಇಲ್ಲದಿದ್ದರೆ ನೀನು ಪತ್ನೀಸಹಿತನಾಗಿ ನರಕದಲ್ಲಿ ದುಃಖವನ್ನು ಅನುಭವಿಸುವಿ. ಈ ಲೋಕದಲ್ಲಿಯೂ ಅಪಕೀರ್ತಿಯನ್ನು ಹೊಂದುವಿ. ಸಂಭಾವಿತರಿಗೆ ಅಪಕೀರ್ತಿಯು ಮರಣಕ್ಕಿಂತಲೂ ಅಧಿಕವಾದದ್ದು"[1] ಎಂದು ಹೇಳಿದನು.

ಈರೀತಿಯಾಗಿ ಮಹಾನುಭಾವನಾದ ಭದ್ರಶೀಲನು ಹೇಳುತ್ತಿರಲು ಸುಬಾಹುವಿನ ಹೆಂಡತಿಯು ಮರೆಯಾಗಿ ನಿಂತುಕೊಂಡು ಎಲ್ಲವನ್ನೂ ಕೇಳುತ್ತಿದ್ದಳು. ಕೋಪಿಸಿಕೊಂಡು ಎದುರಿಗೆ ಬಂದವಳಾಗಿ ಭದ್ರಶೀಲನನ್ನು ಬೆದರಿಸಿದಳು. 'ದುರ್ಬುದ್ಧಿಯುಳ್ಳವನೇ! ಏಳು ಏಳು! ನಿನ್ನನ್ನು ಉಪದೇಶ ಮಾಡಲಿಕ್ಕೆ ಯಾರು ಇಲ್ಲಿಗೆ ಕರೆದರು? ನಿನಗೆ ಸ್ವಲ್ಪವೂ ಧರ್ಮವು ತಿಳಿಯದು. ಧರ್ಮವನ್ನು ತಿಳಿದವನೆಂದು ಅಹಂಕಾರಪಡುವಿಯಷ್ಟೆ. ಹೆಂಡತಿಗೆ ಸಮಾನರಾದ ಮಿತ್ರರು ಮತ್ತೊಬ್ಬರು ಇಲ್ಲ. ಗೃಹಸ್ಥನು ಸುಖದಿಂದ ಇರಬೇಕೆಂದು ಆಸೆಯುಳ್ಳವನು ಹೆಂಡತಿಯ ಆಜ್ಞೆಯಂತೆ ಇರಬೇಕು. ನೀನು ಇಲ್ಲಿಂದ ಎದ್ದು ಹೋಗುವಿಯೋ? ಇಲ್ಲವೋ? ಒನಕೆಯಿಂದ ಒಡೆದು ನಿನ್ನನ್ನು ಕೊಂದುಬಿಡುವೆನು' ಎಂದು ಹೇಳಿ ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಕೈಯಲ್ಲಿ ಒನಕೆಯನ್ನು ತೆಗೆದಳು.

1. ಸಂಭಾವಿತಸ್ಯ ಚಾಕೀರ್ತಿಃ ಮರಣಾದತಿರಚ್ಯತೇ । ಗೀತಾ. 2-34

ಸುಬಾಹುವು ಹೆಂಡತಿಯ ವಶನಾಗಿದ್ದ ಪ್ರಯುಕ್ತ ಒಂದು ಮಾತನ್ನೂ ಆಡಲಿಲ್ಲ ಭದ್ರಶೀಲನು ಭಯವುಳ್ಳವನಾಗಿ ಬೇಗನೇ ಓಡಿಹೋದನು. ಆ ಪಾಪದಿಂದ ಸುಬಾಹುವಿನ ಹೆಂಡತಿಯು ನಾಯಿಯಾಗಿ ಹುಟ್ಟಿದಳು. ಸುಬಾಹುವು ಭಯಂಕರವಾದ ನರಕವನ್ನು ಹೊಂದಿದನು.



## ಕಾರ್ತವೀರ್ಯಾರ್ಜುನನ ಗರ್ವಪರಿಹಾರ [1]

ಪೂರ್ವದಲ್ಲಿ ಮಾಹಿಷ್ಮತೀನಗರಿಯಲ್ಲಿ ಸಾವಿರಕೈಗಳುಳ್ಳ ಕಾರ್ತವೀರ್ಯಾರ್ಜುನ ಎಂಬ ರಾಜನಿದ್ದನು. ಆ ರಾಜನು ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ಆಳುತ್ತಿದ್ದನು. ಅವನು ತನ್ನ ಧನವನ್ನು ಭಗವಂತನ ಅವತಾರಭೂತರಾದ ದತ್ತಾತ್ರೇಯರಿಗೆ ಸಮರ್ಪಿಸಿದನು. ವಿನಯದಿಂದ ಆರಾಧನೆ ಮಾಡಿದನು. ಆಗ ದತ್ತಾತ್ರೇಯರು ಮೂರು ವರಗಳನ್ನು ಕೇಳುವಂತೆ ಹೇಳಿದರು. ಒಂದು ವರದಿಂದ ತನಗೆ ಸಹಸ್ರಬಾಹುಗಳು ಬರಬೇಕೆಂದೂ ಮತ್ತೊಂದು ವರದಿಂದ ಸಮಸ್ತಭೂಮಿಯನ್ನೂ ಪರಾಕ್ರಮದಿಂದ ಜಯಿಸಬೇಕೆಂದೂ ಮತ್ತೊಂದು ವರದಿಂದ ಜಯಿಸಿದ ಭೂಮಿಯನ್ನು ಧರ್ಮದಿಂದ ಪರಿಪಾಲಿಸಬೇಕೆಂದೂ ಕೇಳಿಕೊಂಡನು. 'ಮತ್ತೊಂದು ವರವನ್ನು ಕೇಳಿಕೊಳ್ಳುತ್ತೇನೆ. ನನ್ನ ಅನುಗ್ರಹಕ್ಕಾಗಿ ಅದನ್ನು ಕೊಡಬೇಕು. ನಾನು ಏನಾದರೂ ಅನ್ಯಾಯವನ್ನು ಮಾಡಿದರೆ ಸಜ್ಜನರು ತಡೆಯಬೇಕು' ಎಂದು ಕೇಳಿಕೊಂಡನು. ಅದಕ್ಕೆ ದತ್ತಾತ್ರೇಯರು ಹಾಗೇ ಆಗಲಿ ಎಂದರು. ಈರೀತಿಯಾಗಿ ಅವನಿಗೆ ನಾಲ್ಕು ವರಗಳು ಲಭಿಸಿದವು. ಅವನು ಅಗ್ನಿಯಂತೆಯೂ ಸೂರ್ಯನಂತೆಯೂ ಪ್ರಕಾಶಿಸುವ ರಥದಲ್ಲಿ ಕೂತುಕೊಂಡು 'ಧೈರ್ಯವೀರ್ಯ ಶೌರ್ಯ ಇತ್ಯಾದಿಗಳಿಂದ ನನಗೆ ಸಮಾನರು ಯಾರಿರುವರು'? ಎಂದು ಹೇಳಿಕೊಂಡನು. ಅವನ ಮಾತು ಮುಗಿಯುವಷ್ಟರಲ್ಲಿ ಅಂತರಿಕ್ಷದಲ್ಲಿ 'ಮೂಢನೇ! ನಿನಗೆ ತಿಳಿಯದು ಕ್ಷತ್ರಿಯನಿಗಿಂತ ಬ್ರಾಹ್ಮಣನು ಶ್ರೇಷ್ಠನು. ಬ್ರಾಹ್ಮಣರ ಸಹಾಯವುಳ್ಳವನಾಗಿ ಕ್ಷತ್ರಿಯನು. ಪ್ರಜೆಗಳನ್ನು ಆಳುವನು' ಎಂಬ ಮಾತು ಕೇಳಿಸಿತು.

ಅದಕ್ಕೆಕಾರ್ತವೀರ್ಯಾರ್ಜುನನು 'ನಾನು ಸಂತುಷ್ಟನಾದರೆ ಪ್ರಾಣಿಗಳನ್ನು ಸೃಷ್ಟಿಮಾಡುವೆನು. ಕೋಪವು ಬಂದರೆ ನಾಶವನ್ನು ಮಾಡುವೆನು. ನನ್ನಿಂದ

1. ಮಭಾ. ಅನುಪ. ಅ.152, 153

ಉತ್ತಮವಾದ ಬ್ರಾಹ್ಮಣನಿಲ್ಲ. ಬ್ರಾಹ್ಮಣನು ಉತ್ತಮನು ಎಂಬುದು ಪೂರ್ವಪಕ್ಷವು. ಕ್ಷತ್ರಿಯನು ಉತ್ತಮನೆಂಬುದೇ ಸಿದ್ಧಾಂತವು. ಏಕೆಂದರೆ ಅವನು ಪ್ರಜಾಪಾಲನೆ ಮಾಡುವನೆಂಬ ಯುಕ್ತಿಯೂ ಇದೆ. ಬ್ರಾಹ್ಮಣರು ಕ್ಷತ್ರಿಯರನ್ನು ಆಶ್ರಯಿಸಿರುವರು. ಕ್ಷತ್ರಿಯರು ಬ್ರಾಹ್ಮಣರನ್ನು ಆಶ್ರಯಿಸಲಾರರು. ವೇದ ಉಪದೇಶ ಮಾಡುವುದು ಯಜ್ಞ ಮಾಡಿಸುವುದು ಮೊದಲಾದ ನೆಪದಿಂದ ಕ್ಷತ್ರಿಯರನ್ನು ಬ್ರಾಹ್ಮಣರು ಆಶ್ರಯಿಸಿರುವರು. ಕ್ಷತ್ರಿಯರಲ್ಲಿ ಪ್ರಜಾಪಾಲನ ರೂಪವಾದ ಧರ್ಮವು ಆಶ್ರಯಿಸಿರುವುದು. ಕ್ಷತ್ರಿಯರಿಂದ ಬ್ರಾಹ್ಮಣರಿಗೆ ಜೀವನವು ನಡೆಯುವುದು. ಅಂತಹ ಬ್ರಾಹ್ಮಣರು ಕ್ಷತ್ರಿಯರಿಂದ ಹೇಗೆ ಶ್ರೇಷ್ಠರಾಗುವರು' ಸರ್ವ ಪ್ರಾಣಿಗಳನ್ನು ಶ್ರೇಷ್ಠರಾದ ಭಿಕ್ಷಾಬೇಡುವ ತಾವೇ ದೊಡ್ಡವರು ಎಂದು ಅಹಂಕಾರಪಡುವ ಬ್ರಾಹ್ಮಣರನ್ನು ನನ್ನ ವಶದಲ್ಲಿ ಮಾಡಿಕೊಂಡಿದ್ದೇನೆ. ಯಾರೋ ಒಬ್ಬ ಕನ್ಯೆಯು ಆಕಾಶದಲ್ಲಿ ಇದ್ದುಕೊಂಡು ಸುಳ್ಳು ಹೇಳುತ್ತಿರುವಳು. ಕೃಷ್ಣಾಜಿನವನ್ನು ಹೊದ್ದುಕೊಂಡಿರುವ ಪರವಶರಾದ ಬ್ರಾಹ್ಮಣರನ್ನು ಜಯಿಸುವೆನು. ನನ್ನನ್ನು ಮೂರುಲೋಕಗಳಲ್ಲಿಯೂ ಜಯಿಸುವ ದೇವತೆಯೋ ಮನುಷ್ಯನೋ ಒಬ್ಬನೂ ಇಲ್ಲ. ನಾನು ಬ್ರಾಹ್ಮಣರನ್ನು ಜಯಿಸುವೆನು. ಇಷ್ಟರವರೆಗೆ ಬ್ರಾಹ್ಮಣರು ಶ್ರೇಷ್ಠರು ಎಂದು ಇರುವ ಲೋಕವನ್ನು ಇನ್ನು ಮುಂದೆ ಕ್ಷತ್ರಿಯರು ಶ್ರೇಷ್ಠರಾಗಿರುವಂತೆ ಮಾಡುವೆನು. ಯುದ್ಧದಲ್ಲಿ ನನ್ನ ಬಲವನ್ನು ಸಹಿಸುವವನು ಒಬ್ಬನೂ ಇಲ್ಲ ಎಂದು ಹೇಳಿದನು.

ಈರೀತಿಯಾಗಿ ಕಾರ್ತವೀರ್ಯನ ಮಾತನ್ನು ಕೇಳಿ ಅಂತರಿಕ್ಷದಲ್ಲಿ ಅಷ್ಟರಲ್ಲಿ ಹೇಳುತ್ತಿದ್ದ ದೇವತೆಯು ಭಯವನ್ನು ಹೊಂದಿತು. ಆಮೇಲೆ ಅಂತರಿಕ್ಷದಲ್ಲಿದ್ದ ವಾಯುದೇವರು ಮಾತಾಡಿದರು. 'ನಿನ್ನ ಮನಸ್ಸಿನಲ್ಲಿರುವ ದುರಭಿಪ್ರಾಯವನ್ನು ಬಿಟ್ಟುಬಿಡು. ಬ್ರಾಹ್ಮಣರಿಗೆ ನಮಸ್ಕಾರವನ್ನು ಮಾಡು. ಬ್ರಾಹ್ಮಣರಿಗೆ ಅಪರಾಧವನ್ನು ಮಾಡಿದೆಯಾದರೆ ನಿನ್ನ ರಾಜ್ಯವು ಹಾಳಾಗುವುದು. ಮತ್ತು ಬ್ರಾಹ್ಮಣರೇ ನಿನ್ನನ್ನು ಶಾಂತನನ್ನಾಗಿ ಮಾಡುವರು. ನಿನ್ನನ್ನೇ ರಾಜ್ಯದಿಂದ ಹೊರಡಿಸುವರು'.

ಈ ಮಾತನ್ನು ಕೇಳಿ ಕಾರ್ತವೀರ್ಯನು 'ನೀನು ಯಾರು'ಎಂದು ಕೇಳಿದನು. ಅದಕ್ಕೆ ಮುಖ್ಯಪ್ರಾಣದೇವರ ಮಗನಾದ ವಾಯುವು 'ನಾನು ದೇವದೂತನಾದ ವಾಯುವು. ನಿನಗೆ ಹಿತವನ್ನು ಹೇಳುವೆನು' ಎಂದರು. ಕಾರ್ತವೀರ್ಯನು 'ಬ್ರಾಹ್ಮಣರಲ್ಲಿ ಭಕ್ತಿಯನ್ನು ಮಾಡುವಂತೆ ಹೇಳಿರುವಿ. ಬ್ರಾಹ್ಮಣರ ಮಹಿಮೆಯನ್ನು ಹೇಳು' ಎಂದನು. ಅದಕ್ಕೆ ವಾಯುದೇವರು ಅನೇಕ ಬ್ರಾಹ್ಮಣರ ಮಹಿಮೆಯನ್ನು ಹೇಳಿದರು. ಅದನ್ನು ಕೇಳಿ ಕಾರ್ತವೀರ್ಯನು ವಾಯುದೇವರನ್ನು ಪೂಜಿಸಿ 'ನಾನು

ಬ್ರಾಹ್ಮಣರಿಗೋಸ್ಕರವೇ ಜೀವಿಸಿರುವೆನು. ನಾನು ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನು. ಬ್ರಾಹ್ಮಣರಿಗೆ ನಮಸ್ಕರಿಸುವೆನು. ದತ್ತಾತ್ರೇಯರ ಅನುಗ್ರಹದಿಂದಲೇ ಇಷ್ಟು ಬಲವನ್ನು ಹೊಂದಿರುವೆನು. ಲೋಕದಲ್ಲಿ ಪರಮಕೀರ್ತಿಯನ್ನು ಪಡೆದಿರುವೆನು. ಧರ್ಮವನ್ನು ಮಾಡಿರುವೆನು. ವಾಯುದೇವರೇ! ನೀವು ಹೇಳಿದ ಬ್ರಾಹ್ಮಣರ ಮಹಿಮೆಗಳನ್ನೆಲ್ಲಾ ಮನಸ್ಸಿಟ್ಟು ಕೇಳಿದೆನು' ಎಂದು ಹೇಳಿದನು. ವಾಯುದೇವರು 'ಬ್ರಾಹ್ಮಣರನ್ನು ಕ್ಷತ್ರಿಯಧರ್ಮದಿಂದ ರಕ್ಷಿಸುತ್ತಿರು. ಕೊನೆಗೆ ನಿನಗೆ ಬ್ರಾಹ್ಮಣರಿಂದಲೇ ಭಯವು ಬರುವುದು' ಎಂದು ಹೇಳಿದರು.



## ರಂತಿದೇವನ ಯಾಗ [1]

ಸುಮಿತ್ರನ ಗೋವುಗಳು ರಂತಿದೇವನ ಯಾಗಕ್ಕೆ ಹೋಗಿ ಋಷಿಗಳ ಮುಂಭಾಗದಲ್ಲಿ ತಾವು ಬಂದಿರುವುದನ್ನು ಹೇಳಿಕೊಂಡವು. ಆಗ ಶುದ್ಧನಾದ ರಂತಿ ದೇವನು ನಮಸ್ಕಾರವನ್ನು ಮಾಡಿ ಗೋವುಗಳೊಡನೆ ಬರಲಿಕ್ಕೆ ಕಾರಣವೇನೆಂದು ಕೇಳಿದನು.

ಗೋವುಗಳು 'ರಾಜನೇ! ನೀನು ಮಾಡುವ ಯಾಗದಲ್ಲಿ ನಾವು ಪಶುಗಳಾಗ ಬೇಕೆಂದು ಆಸೆಪಡುತ್ತೇವೆ. ನೀನು ಅನುಗ್ರಹವನ್ನು ಮಾಡಬೇಕು' ಎಂದವು.

ರಂತಿದೇವನು 'ನೂರಾರು ಸಾವಿರಾರು ಗೋವುಗಳನ್ನು ಸಂಹರಿಸಲು ಸಮರ್ಥನಾಗಿಲ್ಲ. ನಿಮ್ಮನ್ನು ಸಂಹಾರಮಾಡಿ ನಾನು ಹೇಗೆ ಉದ್ಧೃತನಾಗಲಿ! ಯಾವಾತನು ತನ್ನ ತಪಸ್ಸಿನಿಂದ ನಿಮ್ಮನ್ನು ಯಾಗದಲ್ಲಿ ಪಶುಗಳನ್ನು ಮಾಡಿ ಅಂದರೆ ನಿಮ್ಮನ್ನು ಕೊಂದು ಯಾಗವನ್ನು ಮಾಡಿ ನಿಮ್ಮನ್ನು ಸ್ವರ್ಗಕ್ಕೆ ಕಳುಹಿಸಲಿಕ್ಕೂ ತನ್ನನ್ನು ಉದ್ಧಾರ ಮಾಡಿಕೊಳ್ಳಲಿಕ್ಕೂ ಸಮರ್ಥನಾಗಿರುವನೋ ಅವನ ಬಳಿಗೆ ಹೋಗಿರಿ' ಎಂದನು.

ಆದಕ್ಕೆ ಗೋವುಗಳು 'ನಮ್ಮನ್ನು ಉದ್ಧಾರ ಮಾಡಲಿಕ್ಕೆ ಸಮರ್ಥನಾದ ತಪಸ್ವಿಯು ನೀನು ಎಂದು ನಾನು ಕೇಳಿರುವೆವು. ಆದುದರಿಂದ ನಾವೇ ಬಂದಿರುವೆವು' ಎಂದವು.

ಆದಕ್ಕೆ ರಂತಿದೇವನು 'ನನ್ನ ಯಾಗದಲ್ಲಿ ಪಶುಗಳಾಗಬೇಕೆಂದು ನಿಮ್ಮ ಅಭಿಪ್ರಾಯವಿರುವುದಾದರೆ ನಾನು ಒಂದು ನಿಯಮದಿಂದ ನಿಮ್ಮನ್ನು ಅಗ್ನಿಯಲ್ಲಿ

ಹೋಮಿಸುವೆನು. ಏಕೆಂದರೆ ಯಾವಾಗಲಾದರೂ ಯಾವುದಾದರೂ ಒಂದು ಗೋವು ಅದಕ್ಕೆ ಇಷ್ಟವಿಲ್ಲದೆ ಉಪಯೋಗಿಸಲ್ಪಟ್ಟಿದ್ದು ಆದರೆ ಆಗಲೇ ಗೋಯಾಗವನ್ನು ನಿಲ್ಲಿಸಿಬಿಡುವೆನು' ಎಂದನು.

ತರುವಾಯ ರಂತಿದೇವನ ಗೋಸತ್ರವು ಆರಂಭವಾಯಿತು. ಪ್ರತಿ ನಿತ್ಯವೂ ಅನೇಕ ಸಾವಿರ ಗೋವುಗಳನ್ನು ಸಂಹರಿಸುತ್ತಿದ್ದರು. ಈ ರೀತಿಯಾಗಿಯೇ ಅನೇಕ ವರ್ಷಗಳು ಕಳೆದುಹೋದವು. ಗೋವುಗಳನ್ನು ಕೊಲ್ಲುವುದಕ್ಕೆ ಕೊನೆಯೇ ಕಾಣಿಸಲಿಲ್ಲ. ಗೋವುಗಳ ಸಾವಿರಾರು ಚರ್ಮಗಳ ರಾಶಿಗಳು ಪರ್ವತಾಕಾರವಾಗಿ ಅನೇಕಗಳಾದವು. ಬಹುಮೇಘಗಳಂತೆ ಕಾಣಿಸಿದವು. ಅವುಗಳ ಮೇದಸ್ಸಿನಿಂದ ದೊಡ್ಡ ನದಿಯು ಹರಿಯಿತು. ಅದು ಈಗಲೂ ಭೂಮಿಯಲ್ಲಿ ಚರ್ಮಣ್ವತಿಯೆಂದು ಪ್ರಸಿದ್ಧವಾಗಿದೆ.

ತರುವಾಯ ಒಂದು ದಿವಸದಲ್ಲಿ ಒಂದು ದನವು ದುಃಖವುಳ್ಳದ್ದಾಗಿ ತನ್ನ ಕರುವನ್ನು ಕರೆದು 'ಮಗು! ಬಾ. ಸ್ತನವನ್ನು ಪಾನಮಾಡು. ಆಮೇಲೆ ನಿನಗೆ ಹಸಿವೆಯಾಗಬಾರದು. ನನ್ನನ್ನು ಕೊಂದ ಮೇಲೆ ನೀನು ತುಂಬಾ ದುಃಖವನ್ನು ಹೊಂದುವಿ. ಈ ಚಂಡಾಲರು ನನ್ನನ್ನು ಸಂಹರಿಸಲು ಶಸ್ತ್ರವನ್ನು ಹಿಡಿದುಕೊಂಡು ಬರುತ್ತಿರುವರು' ಎಂದು ಹೇಳಿತು.

ಆ ದನವು ಈ ರೀತಿಯಾಗಿ ಮನುಷ್ಯರ ಮಾತಿನಿಂದ ಹೇಳಿದ್ದನ್ನು ಕೇಳಿ ರಂತಿದೇವನು ಅದನ್ನು ಸಂಹರಿಸುವುದನ್ನು ನಿಲ್ಲಿಸಿದನು. ಗೋಸತ್ರವನ್ನು ಆಗಲೇ ನಿಲ್ಲಿಸಿಬಿಟ್ಟನು. ಸತ್ರಯಾಗದಲ್ಲಿ ಉಪಯೋಗಿಸಲ್ಪಡದೆ ಇದ್ದ ಗೋವುಗಳು ಹಾಗೇ ಉಳಿದು ಹೋದವು. ಆ ಮಹಾನುಭಾವನ ಸತ್ರಯಾಗದಲ್ಲಿ ಸತ್ತುಹೋದ ದನಗಳು ಗೋಲೋಕವನ್ನು ಹೊಂದಿದವು. ರಂತಿದೇವನು ಶಾಸ್ತ್ರದಲ್ಲಿ ಹೇಳಿದಂತೆ ಯಾಗವನ್ನು ಮಾಡಿ ಇಂದ್ರದೇವರ ಸಖ್ಯವನ್ನು ಅಕ್ಷಯವಾದ ಸ್ವರ್ಗವನ್ನೂ ಹೊಂದಿದನು. ಉಳಿದ ಗೋವುಗಳು ಕಾಡಿನಲ್ಲಿ ಸಂಚರಿಸುತ್ತಾ ಇದ್ದವು.



# ನಹುಷನ ಕಥೆ [1]

ನಹುಷರಾಜನು ಪೂರ್ವಪುಣ್ಯದಿಂದ ದೇವರಾಜ್ಯವನ್ನು ಹೊಂದಿದನು. ಅಲ್ಲಿ ಇದ್ದುಕೊಂಡು ನಹುಷರಾಜನು ಮನುಷ್ಯರು ಮಾಡುವ ಮತ್ತು ದೇವತೆಗಳು ಮಾಡುವ ಶುಭಕಾರ್ಯಗಳನ್ನು ಮಾಡುತ್ತಾ ಇದ್ದನು. ಪೂರ್ವದಂತೆ ಯಜ್ಞಗಳನ್ನು ಮಾಡಿ ದೇವತೆಗಳನ್ನು ಸತ್ಕರಿಸುತ್ತಿದ್ದನು. ಧೂಪದೀಪಗಳನ್ನು ಇಡುತ್ತಿದ್ದನು. ಹೀಗೆ ಸ್ವಲ್ಪ ಸಮಯವಾದ ಮೇಲೆ ತಾನು ಇಂದ್ರನೆಂದು ತಿಳಿದುಕೊಂಡು ಅವನಿಗೆ ಅಹಂಕಾರವುಂಟಾಯಿತು. ತರುವಾಯ ಅವನು ಮಾಡುವ ಸತ್ಕರ್ಮಗಳು ಕಡಿಮೆಯಾದವು. ದೇವತೆಗಳು ಕೊಟ್ಟ ವರದಿಂದ ಮದವುಳ್ಳವನಾಗಿ ಸಪ್ತಋಷಿಗಳನ್ನು ವಾಹನವನ್ನು ಎಳೆಯಲಿಕ್ಕೆ ಮಾಡಿದನು. ಸತ್ಕರ್ಮಗಳು ಕಡಿಮೆಯಾದ ಪ್ರಯುಕ್ತ ಅವನ ಬಲವು ಕಡಿಮೆಯಾಗುತ್ತಾ ಬಂದಿತು. ಹೀಗೆಯೇ ಬಹುಕಾಲವು ಕಳೆಯಿತು. ಕ್ರಮದಿಂದ ಒಬ್ಬೊಬ್ಬರನ್ನೇ ವಾಹನವನ್ನು ಎಳೆಯಲಿಕ್ಕೆ ಮಾಡಿದನು.

ಒಂದು ದಿವಸದಲ್ಲಿ ಮಹಾತೇಜಸ್ವಿಯಾದ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಭೃಗುಋಷಿಗಳು ಆಶ್ರಮದಲ್ಲಿ ಇದ್ದ ಅಗಸ್ತ್ಯರ ಬಳಿಗೆ ಹೋಗಿ 'ದುರ್ಬುದ್ಧಿಯುಳ್ಳ ದೇವೇಂದ್ರನಾದ ನಹುಷನ ಅಸತ್ಕಾರವನ್ನು ನಾವು ಹೀಗೆ ಏಕೆ ಸಹಿಸಬೇಕು?' ಎಂದರು.

ಅಗಸ್ತ್ಯರು 'ಮತ್ತೇನು ಮಾಡಲಿ? ನಾನು ಅವನಿಗೆ ಶಾಪವನ್ನು ಕೊಡಲಿಕ್ಕೆ ಹೇಗೆ ಸಾಧ್ಯವಾಗುವುದು. ಯಾರು ಕಣ್ಣಿಗೆ ತೋರುವನೋ ಅವನು ವಶನಾಗಲಿ ಎಂದು ಬ್ರಹ್ಮದೇವರು ವರವನ್ನು ಕೊಟ್ಟಿರುವರಲ್ಲಾ! ಆದುದರಿಂದ ನಾನೋ ನೀವೋ ಅವನನ್ನು ನಾಶಮಾಡಲಿಲ್ಲ. ಇತರ ಋಷಿಗಳೂ ನಾಶಮಾಡಲಿಲ್ಲ. ಅವನಿಗೆ ಅಮೃತವನ್ನೂ ಕುಡಿಯಲಿಕ್ಕೆ ಕೊಟ್ಟಿರುತ್ತದೆ. ಆದರಿಂದಲೂ ನಾವು ಅವನನ್ನು ಕೆಳಗೆ ಬೀಳಿಸಲಿಲ್ಲ. ಬ್ರಹ್ಮದೇವರು ಪ್ರಜೆಗಳಿಗೆ ದುಃಖಕರವಾದ ವರವನ್ನು ಕೊಟ್ಟುಬಿಟ್ಟರು. ಆ ಅಧಮನು ಬ್ರಾಹ್ಮಣರಲ್ಲಿ ಅಧರ್ಮಯುಕ್ತಕಾರ್ಯಗಳನ್ನು ಮಾಡುತ್ತಿರುವನು. ಈ ಸಂದರ್ಭದಲ್ಲಿ ಏನು ಮಾಡಬೇಕೆಂಬುದನ್ನು ಹೇಳಿ. ನೀವು ಹೇಗೆ ಹೇಳುವಿರೋ ಹಾಗೆ ನಾನು ನಿಶ್ಚಯವಾಗಿಯೂ ಮಾಡುವೆವು' ಎಂದರು.

ಅದಕ್ಕೆ ಭೃಗುಋಷಿಗಳು 'ಬ್ರಹ್ಮದೇವರ ಅಪ್ಪಣೆಯಿಂದ ನಾನು ದರ್ಪವುಳ್ಳವನಾದ ಬಲಿಷ್ಠನಾದ ನಹುಷನಿಗೆ ಪ್ರತೀಕಾರವನ್ನು ಮಾಡಲಿಕ್ಕೆ

1. ಭಾಗ.IX -18. ಮ.ಭಾ. ಅನು. ಅ-99, 100; ಮತಾನಿ. ಅ-22

ಬಂದಿರುವೆನು. ಈ ದಿವಸದಲ್ಲಿ ದುರ್ಬುದ್ಧಿಯುಳ್ಳ ನಹುಷನು ನಿಮ್ಮನ್ನು ರಥ ಎಳೆಯಲಿಕ್ಕೆ ಮಾಡುವನು. ಈ ದಿನವೇ ನಾನು ಅಹಂಕಾರಿಯಾದ ಇಂದ್ರನಿಲ್ಲದಂತೆ ಮಾಡಿಬಿಡುವೆನು. ನೀವು ನೋಡುವಂತೆ ಈ ದಿನದಲ್ಲಿ ಪೂರ್ವದ ಇಂದ್ರದೇವರನ್ನೇ ಸ್ಥಾಪನ ಮಾಡುವೆನು. ಆ ಪಾಪಿಯನ್ನು ಇಂದ್ರಪದವಿಯಿಂದ ಇಳಿಸುವೆನು. ಈದಿನ ಆ ದುಷ್ಟ ಇಂದ್ರನು ನಿಮ್ಮನ್ನು ಪಾದದಿಂದ ಒದೆಯುವನು. ಧರ್ಮವನ್ನು ಮೀರಿದ ಅವನನ್ನು ನಾನು ಕೋಪದಿಂದ ಸರ್ಪನಾಗು ಎಂದು ಶಾಪಕೊಡುವೆನು. ನೀವು ನೋಡುವಂತೆ ಆ ಪಾಪಿಯಾದ ನಹುಷನನ್ನು ಭೂಮಿಯಲ್ಲಿ ಬೀಳಿಸುವೆನು' ಎಂದರು. ಆಗ ಅಗಸ್ತ್ಯರು ಅತ್ಯಂತ ಸಂತುಷ್ಟರಾದರು.

ಈ ರೀತಿಯಾಗಿ ಅವರಿಬ್ಬರೂ ಮಾತಾಡಿಕೊಂಡು ಇರುವಾಗ ನಹುಷನು ಸತ್ಕರ್ಮಗಳನ್ನೆಲ್ಲಾ ಮಾಡುತ್ತಿದ್ದನು. ದೀಪದಾನಗಳನ್ನು ಮಾಡುತ್ತಿದ್ದನು. ವಾರ್ಷಿಕೋತ್ಸವಗಳನ್ನು ಮಾಡುತ್ತಿದ್ದನು. ನಾನಾವಿಧ ಸತ್ಕರ್ಮಗಳನ್ನು ಮಾಡುತ್ತಿದ್ದನು. ಇದರಿಂದ ದೇವತೆಗಳಿಗೆ ಪ್ರೀತಿಯುಂಟಾಗುತ್ತಿತ್ತು. ಹೀಗೆಯೇ ಕೆಲವು ಸಮಯವು ನಡೆಯುತ್ತಿರಲು ನಹುಷನ ಭಾಗ್ಯವು ಕ್ಷಯವನ್ನು ಹೊಂದಲು ನಹುಷನು ಸತ್ಕರ್ಮಗಳನ್ನು ಬಿಡುತ್ತಾ ಬಂದನು. ಅದರಿಂದ ನಹುಷನ ಬಲವು ಕಡಿಮೆಯಾಗುತ್ತಾ ಬಂದಿತು. ತರುವಾಯ ಅವನು ಯಜ್ಞವನ್ನು ಮಾಡಲು ರಾಕ್ಷಸರು ಕೆಡಿಸಲಿಕ್ಕೆ ಆರಂಭಿಸಿದರು.

ತರುವಾಯ ಒಂದುದಿನ ನಹುಷನು ಸರಸ್ವತೀತೀರದಿಂದ ಅಗಸ್ತ್ಯರನ್ನು ರಥ ಎಳೆಯಲಿಕ್ಕೆ ಕರೆದನು. ಅನಂತರದಲ್ಲಿ ಮಹಾತೇಜಸ್ವಿಯಾದ ಭೃಗುಋಷಿಗಳು ಅಗಸ್ತ್ಯರೊಡನೆ 'ನೀವು ಕಣ್ಣುಮುಚ್ಚಿಕೊಳ್ಳಿರಿ. ನಿಮ್ಮ ಜಟೆಯಲ್ಲಿ ಪ್ರವೇಶಿಸಿ ಅಡಗಿ ಕೂತುಕೊಳ್ಳುವೆನು' ಎಂದು ಹೇಳಿ ಅಗಸ್ತ್ಯರೊಡನೆ ನೀವು ರಥವನ್ನು ಎಳೆಯಬೇಕು ಎಂದನು. ಅಗಸ್ತ್ಯರು 'ಆಗಲಿ. ಬೇಗನೆ ಯಾವ ದೇಶಕ್ಕೆ ರಥವನ್ನು ಎಳೆದುಕೊಂಡು ಹೋಗಲಿ? ಯಾವ ಸ್ಥಳಕ್ಕೆ ಬೇಕಾದರೂ ರಥವನ್ನು ಎಳೆದುಕೊಂಡು ಹೋಗುವೆನು' ಎಂದರು. ನಹುಷನು ರಥವನ್ನು ಎಳೆಯಲಿಕ್ಕೆ ಹೇಳಿದನು. ಆಗ ಜಟೆಯ ಒಳಗಿದ್ದ ಭೃಗು ಋಷಿಗಳು ಸಂತೋಷವನ್ನು ಹೊಂದಿದರು. ಆ ಭೃಗು ಋಷಿಗಳು ಯಾವಾಗಲೂ ಆ ನಹುಷನ ಕಣ್ಣಿಗೆ ಬಿದ್ದಿದ್ದಲ್ಲ. ಏಕೆಂದರೆ ಅವನ ಕಣ್ಣಿಗೆ ಬಿದ್ದವರ ತಪಸ್ಸು ಬಲವೂ ಅವನಿಗೆ ಬರುತ್ತಿತ್ತು. ನಹುಷನು ರಥವನ್ನು ಎಳೆಯಲಿಕ್ಕೆ ಹೇಳಿದರೂ ಕೋಪಿಸಿಕೊಳ್ಳಲಿಲ್ಲ. ಹೋಗುವಾಗ ವೇದವು ಪ್ರಮಾಣವೋ ಅಲ್ಲವೋ ಎಂಬ ಚರ್ಚೆಯಾಯಿತು. ಪ್ರಮಾಣವಲ್ಲವೆಂದು ನಹುಷನು ಹೇಳಿದನು. ಪ್ರಮಾಣವೇ

ಎಂದು ಅಗಸ್ತ್ಯರು ಹೇಳಿದರು. ಇದರಿಂದ ನಹುಷನು ಕೋಪಿಸಿಕೊಂಡು ತನ್ನ ಎಡಪಾದದಿಂದ ಅಗಸ್ತ್ಯರ ತಲೆಯನ್ನು ಮೆಟ್ಟಿದನು. ಆಗ ಅಗಸ್ತ್ಯರ ತಲೆಯಲ್ಲಿ ಇದ್ದ ಭೃಗುಋಷಿಗಳು ಅತ್ಯಂತ ಕೋಪವುಳ್ಳವರಾಗಿ 'ನೀನು ಕೋಪದಿಂದ ಮಹಾಮುನಿಗಳನ್ನು ಕಾಲಿನಿಂದ ಮೆಟ್ಟಿದಿಯಾದ ಕಾರಣ ಭೂಮಿಯಲ್ಲಿ ಸರ್ಪವಾಗಿ ಬೀಳು ಎಂದು ಶಾಪವನ್ನು ಕೊಟ್ಟರು. ಭೃಗು ಋಷಿಗಳನ್ನು ನಹುಷನು ಅಷ್ಟರವರೆಗೂ ನೋಡಿರಲೇ ಇಲ್ಲ. ನೋಡಿದ್ದರೆ ಅವರ ತಪಸ್ಸೆಲ್ಲಾ ಅವನಿಗೆ ಹೋಗಿ ಶಾಪಕೊಡಲಿಕ್ಕೆ ಆಗುತ್ತಿರಲಿಲ್ಲ. ಆ ಭೃಗುಋಷಿಗಳಲ್ಲಿ ಬ್ರಹ್ಮದೇವರೇ ಇದ್ದುಕೊಂಡು ಶಾಪವನ್ನು ಕೊಟ್ಟರು. ತರುವಾಯ ನಹುಷನು ಸರ್ಪನಾದರೂ ಅವನು ಮಾಡಿದ ತಪಸ್ಸು ಇತ್ಯಾದಿ ಸತ್ಕರ್ಮಗಳಿಂದ ಎಲ್ಲಾ ಸ್ಮರಣೆಯೂ ಇದ್ದಿತು. ತನಗೆ ಶಾಪದ ಅವಸಾನವನ್ನು ಹೇಳಬೇಕೆಂದು ಭೃಗುಋಷಿಗಳನ್ನು ಪ್ರಾರ್ಥಿಸಿದನು. ಆಗ ಅಗಸ್ತ್ಯರೂ ಕೃಪೆಯುಳ್ಳವರಾಗಿ ಶಾಪದ ಅವಸಾನವನ್ನು ಹೇಳಬೇಕೆಂದು ಭೃಗು ಋಷಿಗಳ ಬಳಿಯಲ್ಲಿ ಹೇಳಿದರೂ ಭೃಗು ಋಷಿಗಳು ಯುಧಿಷ್ಠಿರನೆಂಬ ರಾಜನು ಮುಂದೆ ಬರುವನು. ಅವನು ನಿನ್ನನ್ನು ಶಾಪದಿಂದ ಬಿಡಿಸುವನು ಎಂದು ಹೇಳಿ ಅಂತರ್ಧಾನವನ್ನು ಹೊಂದಿದರು. ಅಗಸ್ತ್ಯರು ಇಂದ್ರದೇವರ ಕಾರ್ಯವನ್ನು ಮಾಡಿ ತನ್ನ ಆಶ್ರಮಕ್ಕೆ ಹೋದರು. ನಹುಷರಾಜನು ಧರ್ಮರಾಜನಿಂದಾಗಿ ಶಾಪದಿಂದ ಬಿಡುಗಡೆಯನ್ನು ಹೊಂದಿ ಬ್ರಹ್ಮಲೋಕಕ್ಕೆ ಹೋದರು. ಭೃಗು ಋಷಿಗಳು ನಹುಷನನ್ನು ಕೆಳಗೆ ಬೀಳಿಸಿ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮದೇವರ ಹತ್ತಿರ ಎಲ್ಲಾ ತಿಳಿಸಿದರು. ತರುವಾಯ ಬ್ರಹ್ಮದೇವರು ಇಂದ್ರದೇವರನ್ನು ಕರೆಸಿ ದೇವತೆಗಳೊಡನೆ 'ನನ್ನ ವರದಿಂದ ನಹುಷನು ರಾಜ್ಯವನ್ನು ಹೊಂದಿದನು. ಅಗಸ್ತ್ಯರು ಕೋಪಿಸಿಕೊಂಡು ಅವನನ್ನು ಭೂಮಿಯಲ್ಲಿ ಬೀಳಿಸಿದರು. ರಾಜರು ಇಲ್ಲದೆ ಸುಖವಾಗಿ ಇರಲಿಕ್ಕೆ ಆಗಲಾರದು. ಆದುದರಿಂದ ಈ ಇಂದ್ರನಿಗೇ ದೇವರಾಜ್ಯದಲ್ಲಿ ಅಭಿಷೇಕ ಮಾಡಿರಿ ಎಂದರು. ದೇವತೆಗಳು ಸಂತೋಷದಿಂದ ಹಾಗೇ ಆಗಲಿ ಎಂದರು. ತರುವಾಯ ಬ್ರಹ್ಮದೇವರೇ ದೇವರಾಜ್ಯದಲ್ಲಿ ಇಂದ್ರದೇವರಿಗೆ ಪಟ್ಟಾಭಿಷೇಕವನ್ನು ಮಾಡಿದರು. ಆಮೇಲೆ ಇಂದ್ರದೇವರು ಪೂರ್ವದಂತೆಯೇ ಪ್ರಕಾಶಿಸುತ್ತಿದ್ದರು.



# ಹರಿಶ್ಚಂದ್ರೋಪಾಖ್ಯಾನ [1]

ಪೂರ್ವದಲ್ಲಿ ಒಂದು ಸಮಯದಲ್ಲಿ ಇಂದ್ರದೇವರ ಸಭೆಯಲ್ಲಿ ವಸಿಷ್ಠರಿಗೂ ವಿಶ್ವಾಮಿತ್ರರಿಗೂ ಬಹಳ ವಿವಾದವು ನಡೆಯಿತು. 'ಭೂಮಿಯು ಲೋಕಪಾಲರಂತೆ ಇರುವ ಅನೇಕ ಜನರಿಂದ ಆಳಲ್ಪಟ್ಟಿದೆ. ಈಗ ಭೂಮಿಯಲ್ಲಿ ಹರಿಶ್ಚಂದ್ರ ಎಂದು ಹೆಸರುಳ್ಳ ಮಹಾರಾಜನಿದ್ದಾನೆ. ಅವನು ಮಹಾತಪಸ್ವಿಯು. ಏಳು ದ್ವೀಪಗಳಿಂದ ಕೂಡಿರುವ ಭೂಮಿಯನ್ನು ಆ ರಾಜನು ಧರ್ಮದಿಂದ ಆಳುತ್ತಿರುವನು. ಧರ್ಮಿಷ್ಠನು. ದೀರ್ಘಜ್ಞಾನಿಯು. ಸತ್ಯವಚನವುಳ್ಳವನು. ದೃಢವಾದ ಪರಾಕ್ರಮವುಳ್ಳವನು. ಪರ್ವತವಾದರೂ ಚಲಿಸಬಹುದು. ಬೆಂಕಿಯು ತಣ್ಣಗೆ ಆಗಬಹುದು. ಹಿಮವತ್ ಪರ್ವತವಾದರೂ ಬೀಳಬಹುದು. ಆದರೂ ಹರಿಶ್ಚಂದ್ರನು ಮಾತ್ರ ಸುಳ್ಳನ್ನು ಹೇಳಲಾರನು. ವೇದದಲ್ಲಿ ಹೇಳಿದ ಆಚಾರವುಳ್ಳವನು. ಇಂದ್ರಿಯ ನಿಗ್ರಹವುಳ್ಳವನು. ಭೋಗಗಳಲ್ಲಿ ಆಸಕ್ತವಾದ ಮನಸ್ಸಿರುವಾಗಲೂ ರಾಜನು ಸತ್ಯವನ್ನೇ ಹೇಳುವನು' ಎಂದು ವಸಿಷ್ಠರು ಹೇಳಿದರು.

ಈರೀತಿಯಾಗಿ ವಸಿಷ್ಠರು ಹೇಳುತ್ತಿರಲು ವಿಶ್ವಾಮಿತ್ರರು ಕೋಪದಿಂದ ಕೆಂಪಾದ ಕಣ್ಣುಳ್ಳವರಾಗಿ 'ನಾನು ಹದಿಮೂರು ಕೋಟಿ ವರ್ಷ ತಪಸ್ಸು ಮಾಡಿರುವೆನು. ಇಷ್ಟು ಸಮಯ ಎಷ್ಟೋ ರಾಜರು ಆಗಿರುವರು. ಈ ರಾಜರಲ್ಲಿ ರಾಜ್ಯ ಸಂಪತ್ತಿನಿಂದ ಕೂಡಿರುವ ಯಾವ ರಾಜನು ಸತ್ಯವನ್ನು ಹೇಳುವನು? ಸುಳ್ಳನ್ನು ಹೇಳದೆ ಇರುವನು? ನಿಮ್ಮ ಮಾತನ್ನು ನಾನು ನಂಬಲಾರೆನು' ಎಂದು ಹೇಳಿದರು.

ಆಗ ವಸಿಷ್ಠರು 'ಆ ರಾಜನು ಎಂತಹ ವ್ಯಸನವುಳ್ಳವನಾಗಿದ್ದರೂ ಸಾವಿರ ಸ್ತ್ರೀಯರಿಂದ ಸಹಿತನಾಗಿದ್ದರೂ ಸ್ವಪ್ನದಲ್ಲಿ ಕೂಡ ಸುಳ್ಳ ಹೇಳಲಾರನು. ಎಲ್ಲಾ ಋಷಿಗಳೂ ಇಂದ್ರಾದಿ ದೇವತೆಗಳೂ ನನ್ನ ಪ್ರತಿಜ್ಞೆಯನ್ನು ಕೇಳಬೇಕು. ಹರಿಶ್ಚಂದ್ರರಾಜನು ಸುಳ್ಳು ಹೇಳಿದ ಪಕ್ಷದಲ್ಲಿ ನಾನು ಯಜ್ಞೋಪವೀತವನ್ನು ತೆಗೆದುಹಾಕಿ ತಲೆಯನ್ನು ಬೋಳಿಸಿಕೊಂಡು ವೇದಧರ್ಮಗಳನ್ನು ಬಿಟ್ಟು ವಸ್ತ್ರವನ್ನು ಬಿಚ್ಚಿಕೊಂಡು ದಕ್ಷಿಣದಿಕ್ಕಿಗೆ ಮುಖವುಳ್ಳವನಾಗಿ ತಲೆಯ ಓಡಿನಲ್ಲಿ ಮದ್ಯವನ್ನು ಪಾನಮಾಡುವೆನು' ಎಂದು ಹೇಳಿದರು. ಈ ಮಾತನ್ನು ಕೇಳಿ ಇಂದ್ರಾದಿದೇವತೆಗಳು ಆಶ್ಚರ್ಯವನ್ನು ಹೊಂದಿದರು. ಆಗ ದೇವತಾಸಭೆಯಲ್ಲಿಯೇ ಹಾಹಾಕಾರವು ಎದ್ದಿತು. ಆಗ ಇಂದ್ರದೇವರು ವಿಶ್ವಾಮಿತ್ರ ವಸಿಷ್ಠರೊಡನೆ 'ಪೂಜ್ಯರೇ! ನೀವು ಈ

---

1. ಭಾಗ. IX-7. ಮ.ಭಾ. ದೇ.ಭಾ; ವಾ.ಪು. ಮಾ.ಪು. ಇತ್ಯಾದಿ

ಮಾತನ್ನು ಹೇಳುವುದು ಸರಿಯಲ್ಲ' ಎಂದರು. ಆದಕ್ಕೆ ವಿಶ್ವಾಮಿತ್ರರು ವಸಿಷ್ಠರೊಡನೆ 'ಆ ರಾಜನಿಗೆ ಅನೇಕವಿಧವಾದ ಉಪದ್ರವನ್ನು ಉಂಟುಮಾಡುವೆನು. ದುಃಖಸಮುದ್ರದಲ್ಲಿಯೇ ಮುಳುಗಿಸುವೆನು. ಹಾಗೆ ಮಾಡಿದರೂ ಆ ರಾಜನು ಸತ್ಯವನ್ನು ಬಿಡದೆ ಇದ್ದರೆ ನೀವು ಹೇಳಿದಂತೆ ಪ್ರತಿಜ್ಞೆಯನ್ನು ನಾವು ಮಾಡುವೆನು. ಆ ರಾಜನಿಗೆ ಹದಿನಾಲ್ಕು ಇಂದ್ರರು ಇರುವವರೆಗೂ ಸ್ವರ್ಗದಲ್ಲಿ ವಾಸವು ಏರ್ಪಡುವುದು' ಎಂದು ಹೇಳಿದರು. ಈರೀತಿಯಾಗಿ ವಸಿಷ್ಠರೂ ವಿಶ್ವಾಮಿತ್ರರೂ ವಿವಾದ ಮಾಡಿಕೊಂಡು ದೇವಲೋಕದಿಂದ ಹೊರಟುಹೋದರು.

ತರುವಾಯ ವಸಿಷ್ಠರು ಹರಿಶ್ಚಂದ್ರರಾಜನಿದ್ದಲ್ಲಿಗೆ ಬಂದು ದೇವಲೋಕದಲ್ಲಿ ನಡೆದ ವಿಷಯವನ್ನೆಲ್ಲಾ ತಿಳಿಸಿ 'ರಾಜನೇ! ನೀನು ವಿಶ್ವಾಮಿತ್ರರ ಆಶ್ರಮಕ್ಕೆ ಹೋಗಲೇಬಾರದು. ಅವರು ರಾತ್ರಿ ಹಗಲೂ ನಿನ್ನೊಡನೆ ಸ್ಪರ್ಧೆಯಿಂದ ಇರುವರು' ಎಂದು ಹೇಳಿದರು.

ಅದನ್ನು ಕೇಳಿ ಹರಿಶ್ಚಂದ್ರನು 'ನೀವೇ ನನಗೆ ಗುರುಗಳು ನೀವೇ ನನಗೆ ಗತಿಯು. ನೀವು ಹೇಳಿದ ಎಲ್ಲವನ್ನು ನಾನು ಮಾಡುವೆನು' ಎಂದು ಹೇಳಿದನು. ವಸಿಷ್ಠರು ತನ್ನ ಆಶ್ರಮಕ್ಕೆ ಹೋದರು. ಅಯೋಧ್ಯಾಧಿಪತಿಯಾದ ಹರಿಶ್ಚಂದ್ರನು ಧರ್ಮದಿಂದ ರಾಜ್ಯವನ್ನು ಪರಿಪಾಲನೆ ಮಾಡುತ್ತಾ ಇದ್ದನು.

ಒಂದು ದಿವಸದಲ್ಲಿ ರಾಜನು ಮೃಗಗಳ ಉಪದ್ರವವನ್ನು ಕೇಳಿ ಮೃಗಬೇಟೆಯನ್ನು ಆಡಬೇಕೆಂದು ರಥದಲ್ಲಿ ಕೂತುಕೊಂಡು ಪತ್ನೀಮಂತ್ರಿಪುತ್ರರಿಂದ ಕೂಡಿಕೊಂಡು ವನಕ್ಕೆ ಹೋದನು. ಅಲ್ಲಿ ಅನೇಕ ಸಿಂಹಗಳನ್ನೂ ಹುಲಿಗಳನ್ನೂ ಸಂಹರಿಸಿದನು. ಅವನ ರಥದ ಶಬ್ದವನ್ನು ಕೇಳಿ ವಿಶ್ವಾಮಿತ್ರರು ಬಹುಸಂತೋಷವನ್ನು ಹೊಂದಿದರು. ತನ್ನ ಸಾಮರ್ಥ್ಯದಿಂದ ಬಂಗಾರದಂತೆ ಪ್ರಕಾಶಿಸುವ ಮನೋಹರವಾದ ಒಂದು ಮೃಗವನ್ನು ನಿರ್ಮಿಸಿ ಕಳುಹಿಸಿದರು. ಹರಿಶ್ಚಂದ್ರರಾಜನು ಆ ಮೃಗವನ್ನು ನೋಡಿ ಬಾಣವನ್ನು ಹಿಡಿದುಕೊಂಡು ಅಟ್ಟಿಸಿಕೊಂಡು ವಿಶ್ವಾಮಿತ್ರರ ಆಶ್ರಮಕ್ಕೆ ಹೋದನು.

ತರುವಾಯ ಹರಿಶ್ಚಂದ್ರರಾಜನು ಸರ್ವಪ್ರಾಣಿಗಳಿಂದ ಕೂಡಿದ ಮನೋಹರವಾದ ಆಶ್ರಮವನ್ನು ನೋಡಿದನು. 'ಇದು ಯಾರ ಆಶ್ರಮವಾಗಿರಬಹುದು? ಹುಲಿಯ ಮರಿಯು ಸಿಂಹದ ಮೊಲೆಯನ್ನು ತಿನ್ನುತ್ತಿದೆ. ಸಿಂಹದ ಮರಿಗಳು ಆನೆಯ ಮೊಲೆಯನ್ನು ಕುಡಿಯುತ್ತಿವೆ. ಇಲಿ ಬೆಕ್ಕುಗಳು ಪರಸ್ಪರ ಸ್ನೇಹದಿಂದ ನೆಕ್ಕಿಕೊಳ್ಳುತ್ತಿವೆ. ಹಾವುಗಳು ನೆರಳಿಗಾಗಿ ನವಿಲನ ರೆಕ್ಕೆಯ ಕೆಳಗೆ ಇರುತ್ತಿವೆ' ಎಂದು ಹರಿಶ್ಚಂದ್ರನು

ತನ್ನೊಳಗೆ ಹೇಳುತ್ತಾ ರಥದಿಂದ ಕೆಳಗೆ ಹಾರಿದನು. ವಿನಯವನ್ನು ತೋರಿಸುವ ವೇಷ ಆಭರಣವುಳ್ಳವನಾಗಿ ತನ್ನ ಪತ್ನಿಯಿಂದಲೂ ಪುತ್ರನಿಂದಲೂ ಸತ್ಯಕೀರ್ತಿಯೆಂಬ ಮಂತ್ರಿಯಿಂದಲೂ ಸಹಿತನಾಗಿ ರಥದಿಂದ ಕೆಳಗೆ ಇಳಿದನು. ಕುದುರೆಗಳನ್ನು ಆನೆಗಳನ್ನು ರಥಗಳನ್ನೂ ಹೊರಗೇ ನಿಲ್ಲಿಸಿ ಪವಿತ್ರವಾದ ಆಶ್ರಮವನ್ನು ನೋಡಿದನು. ಇದು ವಿಶ್ವಾಮಿತ್ರರ ಆಶ್ರಮವೆಂದು ತಿಳಿಯುವವನಾಗಿ ಮನಸ್ಸಿನಲ್ಲಿ ತುಂಬಾ ನೊಂದುಕೊಂಡನು. 'ನನಗೆ ಹಿತವನ್ನು ಮಾಡುವ ವಸಿಷ್ಠರು ಬಂದು ನನ್ನೊಡನೆ ವಿಶ್ವಾಮಿತ್ರರು ಆಶ್ರಮಕ್ಕೆ ಹೋಗಬೇಡವೆಂದಿರುವರು. ಅವರ ಮಾತನ್ನು ನಾನು ನಡೆಸಿಲ್ಲವೆಂದು ನನಗೆ ತುಂಬಾ ಸಂತಾಪವಾಗುತ್ತದೆ. ಮೂಢನಾದ ಗುರುಗಳ ಮಾತನ್ನು ಮೀರಿದ ನಾನು ಎರಡು ಲೋಕಗಳನ್ನು ಕಳೆದುಕೊಂಡೆನು. ಧರ್ಮಶಾಸ್ತ್ರದಲ್ಲಿ ಪಂಡಿತರಾದ ಯುಕ್ತಿಯನ್ನು ತಿಳಿದವರಾದ ಜ್ಞಾನಿಗಳು ಮರ್ಯಾದೆಯನ್ನು ಮೀರಲಾರರು. ದೈವದಿಂದ ನಷ್ಟವಾದ ಜ್ಞಾನವುಳ್ಳವರು ಧರ್ಮ ಮರ್ಯಾದೆಯನ್ನು ಮೀರಿ ನರಕದಲ್ಲಿ ಬೀಳುವರು' ಈರೀತಿಯಾಗಿ ನಾನಾವಿಧವಾಗಿ ಯೋಚಿಸಿ ರಥದಲ್ಲಿ ವೇಗದಿಂದ ಬಂದ ಕಾರಣಶ್ರಮವುಳ್ಳವನಾಗಿ ಅಲ್ಲಿಯೇ ಕೂತುಕೊಂಡನು. 'ದೇವಿ! ನನಗೆ ಬಹುಶ್ರಮವಾಗಿದೆ. ನಿನ್ನ ತೊಡೆಯಲ್ಲಿ ತಲೆಯನ್ನಿಟ್ಟು ಮಲಗುವೆನು' ಎಂದು ತನ್ನ ಹೆಂಡತಿಯೊಡನೆ ಹೇಳಿದನು. ಹಾಗೆಯೇ ಮಾಡಿರಿ ಎಂದು ಅವಳು ಹೇಳಿದಳು. ಹರಿಶ್ಚಂದ್ರನು ಹಾಗೆಯೇ ಮಲಗಿದನು.

ಸ್ವಲ್ಪ ಹೊತ್ತಿನ ಮೇಲೆ 'ವಿಶ್ವಾಮಿತ್ರರೇ! ತಾವು ನನಗೆ ಶಾಪವನ್ನು ಕೊಡಬಾರದು. ನಾನು ತಮ್ಮ ಶಿಷ್ಯನು' ಎಂದು ಹೇಳುತ್ತಾ ಕಣ್ಣೀರು ಸುರಿಸುತ್ತಾ ಎದ್ದನು. ಅದನ್ನು ನೋಡಿ ಅವನ ಪತ್ನಿಯು ಭಯದಿಂದ ನಡುಗಿಹೋದಳು. ಅವಳು 'ದೇವಾಸುರ ಸಮೂಹಗಳಲ್ಲಿ ಮಹಾಯುದ್ಧದಲ್ಲಿ ಭಯಪಟ್ಟವರಿಗೆ ಅಭಯಪ್ರದಾನ ಮಾಡುತ್ತಿರುವ ತಮಗೆ ಭಯವು ಹೇಗೆ ಬರಬೇಕು? ಎಂದು ಕೇಳಿದಳು. ''ಸುಂದರಿ! ನಾನು ಮಲಗಿರುವಾಗ ಭಯಂಕರವಾದ ಒಂದು ಸ್ವಪ್ನವನ್ನು ನೋಡಿದೆನು. ಆದರಿಂದ ಈಗಲೂ ನನ್ನ ಎದೆಯು ಪುನಃ ಪುನಃ ನಡುಗುತ್ತಿರುವುದು. ಸ್ವಪ್ನದಲ್ಲಿ ವಿಶ್ವಾಮಿತ್ರರು ನನ್ನ ಬಳಿಗೆ ಬಂದು 'ನಾನು ಯಾಗ ಮಾಡುವ ಅಭಿಪ್ರಾಯದಿಂದ ಇರುವೆನು. ಬಹು ಬಂಗಾರವನ್ನು ದಕ್ಷಿಣೆ ಕೊಡಬೇಕು. ನನಗೆ ಅಷ್ಟು ಹಣವನ್ನು ಕೊಡು' ಎಂದು ಕೇಳಿದರು. ತರುವಾಯ ನಾನು ಅವರಿಗೆ ಬಹು ಹಣವನ್ನು ಕೊಟ್ಟೆನು. ತರುವಾಯ ವಜ್ರದಿಂದ ಬಡೆಯಲ್ಪಟ್ಟು ನನ್ನ ಮನೆಯು ಸೀಳಿ ಕೆಳಗೆ ಬಿದ್ದಿತು. ತರುವಾಯ ನಾನು ಸ್ಥಾನದಿಂದ ಚಲಿತನಾದೆನು. ನನ್ನ ಎದುರಿಗೆ ಬಂದು

ಕಾಗೆಗಳೆಲ್ಲಾ ಭಯಂಕರವಾಗಿ ಕೂಗಿದವು. ಮಧ್ಯಾಹ್ನ ಸೂರ್ಯನಂತೆ ಪ್ರಕಾಶಿಸುವ ಮಹತ್ತಾದ ಬಂಗಾರದ ಗೋಡೆಯಿಂದ ಕೂಡಿದ ಮುತ್ತಿನ ಅಲಂಕೃತಗಳಾದ ನಾಲ್ಕು ದ್ವಾರಗಳಿಂದ ಕೂಡಿದ ಆಕಾಶದಲ್ಲಿ ಸಂಚರಿಸುವ ದಿವ್ಯವಾದ ಪಟ್ಟಣವನ್ನು ನಿರ್ಮಿಸಿದ ವಿಶ್ವಾಮಿತ್ರರು ನನಗೆ ಶಾಪಕೊಡಲಿಕ್ಕೆ ಉದ್ಯುಕ್ತರಾದರು. ಅದನ್ನು ನೋಡಿ ನಾನು ಎದ್ದುಬಿಟ್ಟೆನು'' ಎಂದು ಹೇಳಿದನು. ಆಗ ಹೆಂಡತಿಯಾದ ಚಂದ್ರವತಿಯು 'ಮಹಾರಾಜರೇ! ಹೀಗಾದರೆ ನಿಮಗೆ ಅವಶ್ಯವಾದ ಒಂದು ಘೋರವಾದ ವ್ಯಸನವು ಬರುವುದು. ಇದರಲ್ಲಿ ಸಂದೇಹವೇ ಇಲ್ಲ. ನೀವು ಮಲಗಿರುವಾಗ ಉಲ್ಕಾ ಎಂದು ಹೆಸರುಳ್ಳ ನಕ್ಷತ್ರದಂತೆ ಪ್ರಕಾಶಮಾನವಾದ ವಸ್ತುವು ಕೆಳಗೆ ಬಿದ್ದಿತು. ಮೇಘವಿಲ್ಲದೆ ಮೇಘಗರ್ಜನೆಯು ಕೇಳಿಸಿತು. ಭೂಕಂಪನವಾಯಿತು. ನಿಮ್ಮ ಜನ್ಮ ನಕ್ಷತ್ರದಲ್ಲಿ ವಕ್ರ ಅಂಗಾರಕನು ಇರುವನು. ಇದೆಲ್ಲಾ ವಿಪರೀತ ಫಲಕ್ಕೆ ಕಾರಣವಾಗಿದೆ. ಜಪಹೋಮ ನಿಯಮ ಲಕ್ಷಹೋಮ ಇತ್ಯಾದಿಗಳಿಂದ ಇದು ಶಾಂತಿಯನ್ನು ಹೊಂದಬೇಕು. ದೈವದಿಂದ ಬಂದ ಆಪತ್ತನ್ನು ಪುರುಷಯತ್ನದಿಂದ ಪರಿಹರಿಸಲಿಕ್ಕೆ ನೋಡಬೇಕು. ಸಂಸಾರದಲ್ಲಿ ಎಷ್ಟೋ ಆಪತ್ತುಗಳು ಬರುವುವು. ಆದುದರಿಂದ ಸತ್ಯವನ್ನು ಮುಂದೆ ಮಾಡಿಕೊಂಡು ಗುರುಗಳ ಮಾತನ್ನು ಪ್ರಮಾಣವನ್ನು ಮಾಡಿಕೊಂಡು ಹೋಮವನ್ನೂ ದಾನವನ್ನೂ ದೇವತೆಗಳ ಅತಿಥಿಗಳ ಪೂಜೆಯನ್ನು ಮಾಡಿರಿ' ಎಂದಳು.

ಈ ಸಮಯದಲ್ಲಿ ವಿಶ್ವಾಮಿತ್ರರು ಚಂಡಾಲದೇಹದಿಂದ ಕೂಡಿದ ಮಾಯಾಮಯರಾದ ಇಬ್ಬರು ಸ್ತ್ರೀಯರನ್ನು ನಿರ್ಮಿಸಿ ಹರಿಶ್ಚಂದ್ರನಿಗೆ ಕೋಪಬರುವಂತೆ ಮಾಡಿರಿ ಎಂದು ಹೇಳಿ ಕಳುಹಿಸಿದರು. ಹಾಗೆಯೇ ಆಗಲಿ ಎಂದು ಹೇಳಿ ಆ ಚಂಡಾಲರಂತೆ ದೇಹವುಳ್ಳ ಸ್ತ್ರೀಯರು ರಾಜನ ಸಮೀಪಕ್ಕೆ ಹೋಗಿ 'ರಾಜನೇ! ನೀನು ಎಲ್ಲರಿಗೂ ಸುಖವನ್ನು ಉಂಟುಮಾಡುವವನು. ನಾವಿಬ್ಬರೂ ಬಿಸಿಲಿನಿಂದ ತುಂಬಾ ಬಳಲುತ್ತಿರುವೆವು. ನಮ್ಮನ್ನು ನೀನು ರಕ್ಷಿಸಬೇಕು. ಈ ಸರ್ವರತ್ನಗಳಿಂದ ಅಲಂಕೃತವಾದ ನಿನ್ನ ಬಂಗಾರಮಯವಾದ ಛತ್ರವನ್ನು ನಮಗೆ ಕೊಡುವವನಾಗು' ಎಂದು ಹೇಳಿದರು. ಆಗ ಮಂತ್ರಿಯಾದ ಸತ್ಯಕೀರ್ತಿಯು 'ಮಹಾರಾಜನೇ! ಈ ಹೆಂಗಸರು ಯಾವ ಜಾತಿಯವರು ಎಂದು ತಿಳಿಯಬೇಕು. ಇವರ ಮಾತನ್ನು ಕೇಳುವಾಗ ಇವರು ಚತುರ್ವರ್ಣದಿಂದ ಬಾಹ್ಯರಾದ ಅಂತ್ಯಜಜಾತಿಯವರೆಂದು ತಿಳಿಯುತ್ತದೆ. ನೀನು ಇವರೊಡನೆ ಮಾತಾಡುವುದೂ ಇವರನ್ನು ನೋಡುವುದೂ ಸರಿಯಲ್ಲ ಎಂದು ನನ್ನ ಅಭಿಪ್ರಾಯವಿದೆ' ಎಂದನು.

'ಇವರು ಚಂಡಾಲ ಕನ್ಯೆಯರು ಎಂದು ನನ್ನ ಮನಸ್ಸಿಗೂ ತೋರುತ್ತದೆ. ಆ ಪ್ರಕಾರವಾದ ದೇಹಭೂಷಣಗಳಿಂದ ಯುಕ್ತರಾಗಿದ್ದಾರೆ. ಈರೀತಿಯಾಗಿ ಹೇಳಿ ಸತ್ಯಸಂಧನಾದ ಹರಿಶ್ಚಂದ್ರನು 'ಯಾರು ನಾಲ್ಕು ವರ್ಣದ ಜನರಿಂದ ಕೂಡಿ ಏಳು ದ್ವೀಪಸಮುದ್ರಗಳಿಂದ ಕೂಡಿದ ಭೂಮಿಯನ್ನು ಆಳುವನೋ ಅವನು ಮಾತ್ರ ಈ ಛತ್ರವನ್ನು ಧರಿಸಬೇಕು' ಎಂದನು. ಆಗ ಚಂಡಾಲಕನ್ಯೆಯರು 'ರಾಜನೇ! ಪ್ರಜೆಗಳನ್ನು ಪಾಲಿಸುವುದು ಧರ್ಮವು. ನಮ್ಮನ್ನು ರಕ್ಷಿಸು. ಈ ಛತ್ರವನ್ನು ನಮಗೆ ಕೊಟ್ಟುಬಿಡು' ಎಂದರು. ರಾಜನು ಎಷ್ಟು ಸಮಾಧಾನಪಡಿಸಿದರೂ ಕೇಳದೆ ಇರಲು 'ದುಷ್ಟರಿಗೆ ಶಿಕ್ಷೆಯನ್ನು ಮಾಡಬೇಕೆಂದು ದೊಡ್ಡವರು ಹೇಳಿರುವರು' ಎಂದು ಹೇಳಿ ಚಾಟುವಾರಿಯನ್ನು (ಬಾರುಕೋಲನ್ನು) ತೆಗೆದು ಕೋಪದಿಂದ ಅವರಿಗೆ ಬಡಿದನು. ಆಗ ಆ ಚಂಡಾಲ ಕನ್ಯೆಯರು ಹಾಹಾಕಾರವನ್ನು ಮಾಡುತ್ತಾ ಅಳುತ್ತಾ ವಿಶ್ವಾಮಿತ್ರ ರಿದ್ದಲ್ಲಿಗೆ ಹೋಗಿ 'ನಮಗೆ ನೀವು ನಾಥರಿದ್ದರೂ ಕೂಡ ಅನಾಥರಂತೆ ನಾವು ರಾಜನಿಂದ ಪೆಟ್ಟು ತಿಂದೆವು' ಎಂದು ಹೇಳಿ ಅಳಲಕ್ಕೆ ಆರಂಭಿಸಿದರು. ಕರುಣೆ ಯುಂಟಾಗುವಂತೆ ಅವರು ಅಳುವುದನ್ನು ಕೇಳಿ ವಿಶ್ವಾಮಿತ್ರರು ಬಹುಕೋಪವುಳ್ಳವ ರಾಗಿ ಕಣ್ಣು ಕೆಂಪಗಾಗಿ ಮಾಡಿಕೊಂಡು ಬಂದು 'ಪವಿತ್ರವಾದ ಕ್ರೋಧ ಅಹಂಕಾರದಿಂದ ರಹಿತವಾದ ನನ್ನ ಆಶ್ರಮಕ್ಕೆ ಬಂದು ನನ್ನ ಹೆಣ್ಣುಮಕ್ಕಳಿಗೆ ಪಶುವಿಗೆ ಬಡೆಯುವಂತೆ ಬಾರುಕೋಲಿನಿಂದ ಬಡೆಯುವವನು ಯಾರವನು? ಲೋಕದಲ್ಲಿ ನನ್ನ ಆಶ್ರಮಕ್ಕೆ ಬಂದು ನನಗೆ ಅಪ್ರಿಯವನ್ನು ಮಾಡಿ ನನ್ನ ಆಶ್ರಮದಿಂದ ಬದುಕಿ ಹೋಗಲಿಕ್ಕೆ ಸಾಕ್ಷಾತ್ ಇಂದ್ರನಿಂದಲೂ ಸಾಧ್ಯವಾಗಲಾರದು' ಎಂದು ಹೇಳಿದರು.

ತರುವಾಯ ಹರಿಶ್ಚಂದ್ರರಾಜನು ಚಂಡಾಲಕನ್ಯೆಯರಿಗೆ ಸಂತೋಷಜನಕವಾದ ಕೋಪದಿಂದ ಹೇಳಿದ ವಿಶ್ವಾಮಿತ್ರರ ಮಾತನ್ನು ಕೇಳಿ ಹರಿಶ್ಚಂದ್ರರಾಜನು ವಸಿಷ್ಠರು ಯಾರ ಬಳಿಗೆ ಹೋಗಬಾರದೆಂದು ನನ್ನನ್ನು ತಡೆದರೋ ಅದೇ ಮಿಶ್ವಾಮಿತ್ರರೇ ಬಂದುಬಿಟ್ಟರು. ನೀರಿನ ಒಳಗೆ ಇರುವ ಮೀನೂ ಬಲೆಗೆ ಸಿಕ್ಕಿಬೀಳುವುದು. ಗಾಳಿಯಂತೆ ವೇಗವುಳ್ಳ ಪಕ್ಷಿಯು ನೂರುಯೋಜನದೂರದಲ್ಲಿರುವ ಮಾಂಸವನ್ನು ನೋಡುವುದು. ಪಾಶವನ್ನು ಮಾತ್ರ ತಿಳಿಯದೆ ಪಾಶದಲ್ಲಿ ಸಿಕ್ಕಿಬೀಳುವುದು. ಅದೇರೀತಿಯಾಗಿ ನಾನೂ ದುರದೃಷ್ಟವುಳ್ಳ ದುರ್ಬುದ್ಧಿಯುಳ್ಳವನು ಪತಂಗವು ದೀಪವನ್ನು ಪ್ರವೇಶಿಸುವಂತೆ ಈ ಆಶ್ರಮಕ್ಕೆ ಬಂದು ಪ್ರವೇಶಿಸಿದೆನು. ಜಗತ್ತಿಗೆ ನಿಯಮಕರಾದ ಸೂರ್ಯಚಂದ್ರರೇ ಮುಳುಗುವರು. ಆದುದರಿಂದ ದೈವವನ್ನು ಮೀರಲಿಕ್ಕೆ ಯಾರಿಂದ ಆಗುವುದು' ಎಂದುಕೊಂಡನು.

ಅಷ್ಟರಲ್ಲಿ ವಿಶ್ವಾಮಿತ್ರರು 'ಈ ಆಶ್ರಮವು ಕ್ರೋಧರಹಿತವಾದದ್ದು. ವಿನಯದಿಂದ ಕೂಡಿದ್ದು. ಸರ್ವಕಾಲದಲ್ಲಿಯೂ ಶುದ್ಧವಾದದ್ದು. ಯಾವ ದೋಷದಿಂದಲೂ ರಹಿತವಾದದ್ದು. ಇಲ್ಲಿ ಕೋಪವು ಇಲ್ಲವೇ ಇಲ್ಲ. ಇಂತಹ ನನ್ನ ಆಶ್ರಮಕ್ಕೆ ಬಂದು ಶಿಕ್ಷಾ ಮಾಡಬಾರದವರನ್ನು ಹೇಗೆ ಶಿಕ್ಷಿಸಿದೆ? ಈ ಹೆಣ್ಣುಮಕ್ಕಳನ್ನು ನನ್ನನ್ನು ಲಕ್ಷ್ಯಮಾಡದೆ ಬಾರುಕೋಲಿನಿಂದ ಏಕೆ ಬಡೆದೆ?' ಎಂದು ಕೇಳಿದರು.

ಹರಿಶ್ಚಂದ್ರನು 'ಬೆಲೆಬಾಳುವ ರತ್ನಗಳಿಂದ ಖಚಿತವಾದ ಉತ್ತಮವಾದ ನನ್ನ ಛತ್ರವನ್ನು ನಾನು ಬೇಡವೆಂದು ಕೂಗುತ್ತಿರುವಾಗಲೇ ಇವರು ಅಪಹರಿಸಲಿಕ್ಕೆ ಆರಂಭಿಸಿದರು. ಈ ಛತ್ರವು ಇಕ್ಷ್ವಾಕುವಂಶದವರಿಗೆ ಕ್ರಮದಿಂದ ಬಂದದ್ದು. ಇದನ್ನು ಅಪಹರಿಸಿದರೆ ನನ್ನ ರಾಜ್ಯವನ್ನು ಅಪಹರಿಸಿದಂತೆ ಆಗುವುದು. ರಾಜ್ಯವನ್ನು ಅಪಹರಿಸುವ ಶತ್ರುವನ್ನೂ ಯುದ್ಧದಲ್ಲಿ ಬಂದಿರುವವನನ್ನೂ ಸಂಹಾರ ಮಾಡಲಿಕ್ಕೆ ಅರ್ಹನಾದವನನ್ನು ಸಂಹಾರ ಮಾಡದೆ ಇದ್ದವನು, ರಾಜ್ಯವನ್ನು ಹೇಗೆ ಹೊಂದುವನು? ಅದೇ ರೀತಿ ಈ ಸ್ತ್ರೀಯರೂ ಕೂಡ ನನ್ನ ರಾಜ್ಯವನ್ನು ಅಪಹರಿಸಲು ಉದ್ಯುಕ್ತರಾಗಿರುವರು. ನನಗೆ ಶತ್ರುಗಳಂತೆ ಇರುವರು. ಆದುದರಿಂದ ನಾನು ಇವರಿಗೆ ಬಾರುಕೋಲಿನಿಂದ ಬಡೆದೆನು' ಎಂದು ಹೇಳಿದನು.

ವಿಶ್ವಾಮಿತ್ರರು—ಇವರು ನಿನ್ನ ಛತ್ರವನ್ನು ಪ್ರಾರ್ಥಿಸಿದ್ದು ಯುಕ್ತವಲ್ಲ. ನಿನಗೆ ಕೋಪಬರುವುದು ನ್ಯಾಯವೇ. ಆದರೂ ನೀನು ವಿಚಾರಮಾಡದೆ ಶಿಕ್ಷಿಸಿರುವಿ. ಉತ್ತಮ ಮನಸ್ಸುಳ್ಳವರಿಗೆ ಗುರುಗಳು ಶಿಕ್ಷಕರು. ದುರಾತ್ಮರಿಗೆ ರಾಜನು ಶಿಕ್ಷಿಸುವವನು. ಇಲ್ಲಿ ಮರೆಯಾಗಿ ಪಾಪಮಾಡುವವರಿಗೆ ಯಮದೇವರೇ ಶಿಕ್ಷಿಸುವವರು. ನಾನು ಗುರುವು ಎಲ್ಲರಿಗೂ ಶಿಕ್ಷಾ ಮಾಡುವವನು. ನನ್ನನ್ನು ಲಕ್ಷ್ಯಮಾಡದೆ ನೀನು ಯಾಕೆ ಶಿಕ್ಷೆಯನ್ನು ಮಾಡಿದಿ? ಈಗ ಈ ಸ್ತ್ರೀಯರನ್ನು ಮದುವೆಮಾಡಿಕೊ. ಇದು ನಿನಗೆ ಪ್ರಿಯವಾದದ್ದು. ನೀನು ಹೀಗೆ ಮಾಡುವ ಪಕ್ಷದಲ್ಲಿ ನಾನು ನಿನ್ನಲ್ಲಿ ಪ್ರೀತಿಉಳ್ಳವನಾಗುವೆನು' ಎಂದರು.

ಹರಿಶ್ಚಂದ್ರನು–ಭಗವಂತನ ಬಾಹುಗಳಿಂದ ಬಾಹುವೀರ್ಯದಿಂದ ಜೀವಿಸುವ ಕ್ಷತ್ರಿಯರು ಹುಟ್ಟಿರುವರು. ಜ್ಞಾನಿಗಳಾದ ಕ್ಷತ್ರಿಯರು ಕ್ಷತ್ರಿಯ ಸ್ತ್ರೀಯರನ್ನೇ ಮದುವೆಯಾಗಬೇಕು. ಇವರು ಚಂಡಾಲ ಕನ್ಯೆಯರಾಗಿರುವರು. ಸರ್ವಜಾತಿಗಳಿಗಿಂತಲೂ ನೀಚ ಜಾತಿಯವರು. ಇವರನ್ನು ನೋಡುವುದೂ ಇವರನ್ನು ಮುಟ್ಟುವುದೂ ಇವರ ಹತ್ತಿರ ಮಾತಾಡುವುದೂ ನಿಷಿದ್ಧವಾಗಿದೆ. ಚಂಡಾಲನನ್ನೂ ಭ್ರಷ್ಟನನ್ನೂ ನೋಡಿದರೆ ಉರಿಯು ಬೆಂಕಿಯನ್ನೂ ಸೂರ್ಯನನ್ನು ಬ್ರಾಹ್ಮಣರನ್ನೂ ನೋಡಿದರೆ

ಶುದ್ಧಿಯಾಗುವುದು' ಎಂದನು.

ವಿಶ್ವಾಮಿತ್ರರು—'ರಾಜನೇ! ಇವರು ಚಂಡಾಲ ಕನ್ಯೆಯರಲ್ಲ, ನನ್ನ ಮಕ್ಕಳು. ಇವರನ್ನು ಮದುವೆಯಾಗು. ಇದರಿಂದ ನಿನಗೆ ದೋಷವಿಲ್ಲ' ಎಂದರು. ವಿಶ್ವಾಮಿತ್ರರು ಅನೇಕ ಬಾರಿ ಹೇಳಿದರೂ ಹರಿಶ್ಚಂದ್ರನು ಆ ಕನ್ಯೆಯರನ್ನು ಮದುವೆಯಾಗಲು ಒಪ್ಪಲಿಲ್ಲ. ಆಗ ವಿಶ್ವಾಮಿತ್ರರು ಅತ್ಯಂತ ಕೋಪವುಳ್ಳವರಾಗಿ 'ಮೂರ್ಖನೇ! ಅತಿ ಅಹಂಕಾರವುಳ್ಳ ಸರ್ವಶಾಸ್ತ್ರ ಬಹಿಷ್ಕೃತನಾದ ಮೂಢನಾದ ನೀನು ನನ್ನ ಮಾತನ್ನು ಆದರಿಸದೆ ಅತಿಕ್ರಮಿಸುವಿ' ಎಂದರು. ಹರಿಶ್ಚಂದ್ರನು 'ಪೂಜ್ಯರೇ! ತಾವು ಈ ರೀತಿಯಾಗಿ ಹೇಳುವುದು ನ್ಯಾಯವಲ್ಲ. ಅತಿಥಿಯಾಗಿ ಬಂದವನಿಗೆ ಯೋಗ್ಯವಾದ ಆತಿಥ್ಯವನ್ನು ಮಾಡಬೇಕು. ಯೋಗ್ಯವಾದ ಮಾತನ್ನು ಹೇಳಬೇಕು. ತಮ್ಮಂತವರು ಸರ್ವಪ್ರಾಣಿಗಳಲ್ಲಿ ಕ್ಷಮೆಯನ್ನು ಮಾಡುವವರು. ಎಲ್ಲಾ ತೀರ್ಥಗಳಲ್ಲಿಯೂ ಸತ್ಯವಚನವೂ ಕ್ಷಮಾಗುಣವೂ ಪವಿತ್ರವಾದ ತೀರ್ಥವು. ಮರವನ್ನು ಕಡಿದರೆ ಅದು ಬೆಳೆಯುವುದು. ಬಾಯಿಯೆಂಬ ವಜ್ರದಿಂದ ಉಂಟಾದ ಮಾತು ಎಂಬ ಗಾಯವು ಪುನಃ ಬೆಳೆಯಲಾರದು. ಅಥವಾ ನಿಮ್ಮ ವಿಷಯವು ನನಗೆ ತಿಳಿಯಿತು. ಎಲ್ಲರಿಗೂ ಅವರ ಜಾತಿಗೆ ಸರಿಯಾದ ಬುದ್ಧಿಯು ಬರುವುದು. ತಾವು ಜಾತಿಯಿಂದ ಬ್ರಾಹ್ಮಣರಲ್ಲ. ಆದರಿಂದ ನಿಮಗೆ ಈ ಬುದ್ಧಿಯು ಬಂದಿರುವುದು' ಎಂದನು.

ಜಾತಿಯ ವಿಷಯವನ್ನು ಹೇಳಲು ವಿಶ್ವಾಮಿತ್ರರಿಗೆ ಬಹುಕೋಪವು ಬಂದಿತು. ಒಂದು ದಾನವನ್ನೂ ಮಾಡದೆ ತಾನು ಸ್ವಾಮಿ ಎಂದು ಹೇಳಿಕೊಳ್ಳುವುದೂ ತಪಸ್ವಿಗಳಿಗೆ ಕ್ರೋಧಲೋಭವಿರುವುದೂ ಮೂರ್ಖರ ಸ್ವಭಾವವು. ಹಾಗೆಯೇ ಸಜ್ಜನರನ್ನು ದ್ವೇಷಿಸುವವನು ಮನುಷ್ಯಾಧಮನು ಎಂದರು.

ಹರಿಶ್ಚಂದ್ರನು 'ದಾನಮಾಡದೆ ಇದ್ದವನು ಪ್ರಭುತ್ವವೂ ತಪಸ್ವಿಗಳಿಗೆ ಕ್ರೋಧಲೋಭವಿರುವುದೂ ಮೂರ್ಖರ ಸ್ವಭಾವವು ಎಂದು ಹೇಳಿದ ಮಾತು ಸತ್ಯವು. ಗುರುಗಳಾದ ತಮಗೆ ದಕ್ಷಿಣೆಯನ್ನು ಕೊಡುವೆನು. ನಾನು ಬಹುಬಂಗಾರವನ್ನು ದಕ್ಷಿಣೆ ಕೊಡುವ ಯಾಗವನ್ನು ಮಾಡಿದ್ದೆನು. ಆಗ ನೀವು ಬಂದಿರಲಿಲ್ಲ. ಅದನ್ನು ನೀವೀಗ ಸ್ವೀಕರಿಸಿರಿ' ಎಂದನು.

ವಿಶ್ವಾಮಿತ್ರರು ಬಹುಬಂಗಾರವನ್ನು ವೆಚ್ಚ ಮಾಡಿದ ಯಾಗದಲ್ಲಿ ನೀನು ವಿಭಾಗಮಾಡಿ ಇಟ್ಟ ದಕ್ಷಿಣೆಯನ್ನು ನನಗೀಗ ಕೊಡು ಎಂದರು.

ಹರಿಶ್ಚಂದ್ರನು ತಾವೇ ಮುಂದೆ ನಿಂತುಕೊಂಡು ಸ್ವೀಕರಿಸುತ್ತಿರುವ ಕಾರಣ ನಾನು ಧನ್ಯನಾದೆನು ಎಂದನು. ಈ ರೀತಿಯಾಗಿ ಹರಿಶ್ಚಂದ್ರನು ಹೇಳಿ ಮಂತ್ರಪೂರ್ವಕವಾಗಿ ದಕ್ಷಿಣೆಯನ್ನು ಕೊಟ್ಟೆನೆಂದನು.

ತರುವಾಯ ವಿಶ್ವಾಮಿತ್ರರು 'ನಿನ್ನ ದಾತೃತ್ವವು ತಿಳಿಯಿತು. ಇನ್ನು ನನ್ನ ಈ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊ. ನಿನಗೆ ಬೇಕಾದಷ್ಟು ಹಣವನ್ನು ಕೊಡುವೆನು' ಎಂದರು.

ಆಗ ರಾಜನು 'ಮೂಢರು ವಿದ್ಯಾಹೀನರು ಸರ್ವಶಾಸ್ತ್ರಬಹಿಷ್ಕೃತರು ವ್ಯರ್ಥವಾದ ಮಾತನ್ನು ಪುನಃ ಪುನಃ ಹೇಳುವರು. ಈ ಪ್ರಕಾರವಾದ ಧರ್ಮಲೋಪಕ್ಕೆ ಕಾರಣವಾದ ಮಾತನ್ನು ನೀವು ಹೇಳಬಾರದು. ನಾನು ಸುಳ್ಳು ಹೇಳಲಾರೆನು' ಎಂದನು.

ವಿಶ್ವಾಮಿತ್ರರು 'ಸಮಸ್ತ ಭೂಮಿಯನ್ನು ಬಂಗಾರಮಯವನ್ನಾಗಿ ಮಾಡಿ ದಾನಮಾಡಿದರೂ ನಿನ್ನನ್ನು ಗರ್ವದಿಂದ ಯಾರೂ ಮಾತಾಡಲಾರರು. ಇಕ್ಷ್ವಾಕುವಂಶವೇ ನಿನ್ನಿಂದಾಗಿ ಅಪವಾದಗ್ರಸ್ತವಾಯಿತು' ಎಂದನು.

ಹರಿಶ್ಚಂದ್ರನು 'ರಾಜನಾದವನು ಬ್ರಾಹ್ಮಣರಿಗೆ ಯಥಾಶಕ್ತಿ ಭೂಮಿಯನ್ನು ದಾನಮಾಡಬೇಕಾದದ್ದೇ. ತಮ್ಮಂತಹ ಮಹಾಪಾತ್ರರು ಬಂದಲ್ಲಿ ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನೂ ಕೊಡುವೆನು ಎಂದನು.

ವಿಶ್ವಾಮಿತ್ರರು–'ರಾಜನೇ! ಬಹು ಸಂತೋಷವಾಯಿತು. ನೀನು ಸಮಸ್ತವಾದ ಭೂಮಿಯನ್ನು ಕೊಟ್ಟುದರಿಂದ ಬಹಳ ಸಂತೋಷವಾಯಿತು. ನಿನಗೆ ಮಂಗಳವಾಗಲಿ. ಇದರಿಂದ ನೀನು ಬಲವಂತವಾಗಿಯೂ ಜ್ಞಾನವಂತನಾಗಿಯೂ ಆಗು' ಎಂದರು.

ಹರಿಶ್ಚಂದ್ರನು–'ಪೂಜ್ಯರೇ ನಾನು ನಿಮಗೆ ಭೂಮಿಯನ್ನೆಲ್ಲಾ ದಾನ ಮಾಡಿಲ್ಲ. ನಾನು ಸುಮ್ಮನೆ ಹಾಸ್ಯಕ್ಕೆ ಹೇಳಿದ ಮಾತು ಎಂದು ತಿಳಿಸಿರಿ' ಎಂದು ಹೇಳಿದನು.

ವಿಶ್ವಾಮಿತ್ರರು–'ರಾಜನೇ! ನಾನು ನಿನ್ನಿಂದ ಭೂಮಿಯನ್ನು ತೆಗೆದುಕೊಂಡಾಯಿತು. ನೀನು ಸತ್ಯವನ್ನು ಅನುಸರಿಸುವ ಪಕ್ಷದಲ್ಲಿ ನಾನು ಈ ಸಂಪೂರ್ಣಭೂಮಿಯನ್ನು ಕೊಟ್ಟಾಯಿತು. ನಾನು ತೆಗೆದುಕೊಂಡಾಯಿತು. ನೀನು ಈ ವಿಷಯದಲ್ಲಿ ಸಂದೇಹಪಡುವುದು ಬೇಡ. ವ್ರತಗಳ ಮಧ್ಯದಲ್ಲಿ ಸತ್ಯವು ಶ್ರೇಷ್ಠವು. ಆಶ್ರಮಗಳ ಮಧ್ಯದಲ್ಲಿ ಗೃಹಸ್ಥಾಶ್ರಮವು ಶ್ರೇಷ್ಠವು. ಮಹಾರಾಜನೇ! ನೀನು

ಗೃಹಸ್ಥನಾಗಿದ್ದುಕೊಂಡು ಸತ್ಯವನ್ನು ಹೇಳುವ ಪಕ್ಷದಲ್ಲಿ ಬ್ರಹ್ಮಲೋಕವನ್ನು ಅನಾಯಾಸದಿಂದ ಹೊಂದುವಿ. ಸತ್ಯದಿಂದಲೇ ಭೂಮಿಯು ಇರುವುದು. ಸತ್ಯದಿಂದ ಸೂರ್ಯನು ಉದಯಿಸುವನು. **ಸಾವಿರ ಅಶ್ವಮೇಧಯಾಗಗಳನ್ನು ಸತ್ಯವಚನವನ್ನು ತೂಕಮಾಡಿದರೆ ಸತ್ಯವೇ ಶ್ರೇಷ್ಠವಾಗುವುದು**' ಎಂದು ಹೇಳಿದರು.

ಆಗ ಹರಿಶ್ಚಂದ್ರನು 'ಸ್ವಾಮಿ! ಹಾಗೆಯೇ ಆಗಲಿ. ಭೂಮಿಯು ನಿಮ್ಮದ್ದಾಗಲಿ. ನಾನು ಹೋಗಿಬರುವೆನು. ನಾನು ತಿಳಿಯದೆ ಹೇಳಿದ ಮಾತನ್ನು ಕ್ಷಮಿಸಬೇಕು' ಎಂದನು.

ಅತಿಕೋಪದಿಂದ ವಿಶ್ವಾಮಿತ್ರರು ರೋಷದಿಂದ ಅನೇಕಬಾರಿ ಹೋಗು ಹೋಗು ಎಂದರು. ಹರಿಶ್ಚಂದ್ರನು ಹೊರಡಲು 'ರಾಜನೇ! ನೀನು ಬಹು ಬಂಗಾರ ದಕ್ಷಿಣೆಯನ್ನು ಕೊಟ್ಟಿರುವಿಯಲ್ಲಾ! ಅದೆಲ್ಲಿ? ಅದನ್ನು ಈಗ ನನ್ನ ಕೈಯಲ್ಲಿ ಕೊಟ್ಟು ಆಮೇಲೆ ಎಲ್ಲಿಗೆ ಬೇಕಾದರೂ ಹೋಗು' ಎಂದನು.

ಹರಿಶ್ಚಂದ್ರನು 'ಕಿರೀಟ ಕುಂಡಲ ಇತ್ಯಾದಿ ಆಭರಣಗಳನ್ನೂ ದಿವ್ಯವಾದ ರಥಗಳನ್ನು ಆನೆ ಕುದುರೆ ಇತ್ಯಾದಿ ಸಮಸ್ತವನ್ನೂ ನಿಮಗೆ ಕೊಡುವೆನು' ಎಂದನು.

ವಿಶ್ವಾಮಿತ್ರರು–ನೀನು ಒಳ್ಳೇ ಬುದ್ಧಿವಂತನಾಗಿರುವೆ. ಮೊದಲು ಸಮಸ್ತ ಭೂಮಿಯನ್ನು ಕೊಟ್ಟಮೇಲೆ ಇವೆಲ್ಲಾ ನನ್ನದೇ ಆಗಿಲ್ಲವೇ? ನನ್ನದನ್ನೇ ಪುನಃ ನನಗೆ ಕೊಡುವೆಯಾ? ಬೇರೆ ಹಣವನ್ನು ನನಗೆ ರಕ್ಷಣೆ ಕೊಡು' ಎಂದು ಹೇಳಿದರು.

ಹರಿಶ್ಚಂದ್ರನು–'ಹಾಗಾದರೆ ಸ್ವಲ್ಪ ಸಮಯ ನಿರೀಕ್ಷಿಸಿರಿ. ಒಂದು ತಿಂಗಳು ನನಗೆ ಅವಧಿಯನ್ನು ಕೊಡಿರಿ. ಅಷ್ಟರವರೆಗೆ ತಮಗೆ ಆ ದಕ್ಷಿಣೆಯನ್ನು ಕೊಡುವೆನು' ಎಂದನು.

ವಿಶ್ವಾಮಿತ್ರರು ಒಂದು ತಿಂಗಳಾದರೆ ಆಮೇಲೆ ನಾನು ಸ್ವೀಕರಿಸಲಾರೆನು ಎಂದರು. ತರುವಾಯ ವಿಶ್ವಾಮಿತ್ರರು ಹರಿಶ್ಚಂದ್ರನೊಡನೆ ತನ್ನ ಶಿಷ್ಯನಾದ ನಕ್ಷತ್ರನನ್ನು ಕಳುಹಿಸಿದರು. ಇವನ ಕೈಯಲ್ಲಿ ದಕ್ಷಿಣೆಯನ್ನು ಕೊಡಬೇಕು ಎಂದರು. ಈರೀತಿಯಾಗಿ ಹೇಳಲು ಹರಿಶ್ಚಂದ್ರರಾಜನು ಮನಸ್ಸಿನಲ್ಲೇ ನೊಂದುಕೊಂಡು ಪತ್ನೀಯಿಂದಲೂ ಪುತ್ರನಿಂದಲೂ ಮಂತ್ರಿಯಿಂದಲೂ ಕೂಡಿಕೊಂಡು ಒಂದೇ ವಸ್ತುವುಳ್ಳವನಾಗಿ ಹಸಿವೆದಾಹದಿಂದ ಕೂಡಿದವನಾಗಿ ಹೆಜ್ಜೆ ಹೆಜ್ಜೆಗೂ ಎಡವುತ್ತಾ ಆಶ್ರಮದಿಂದ ಹೊರಟುಹೋದನು. ಈರೀತಿಯಾಗಿ ಸಂಚರಿಸುವ ರಾಜನನ್ನು ನೋಡಿ ಮಂತ್ರಿಯು ತುಂಬಾ ದುಃಖದಿಂದ ವಿಲಾಪವನ್ನು ಮಾಡಿದನು.

ಹೀಗೆಯೇ ಇಪ್ಪತ್ತೇಳು ದಿವಸಗಳು ಆಗಲು ಇಪ್ಪತ್ತೇಳನೆ ದಿವಸದಲ್ಲಿ ಪತ್ನಿಯೊಡನೆ 'ಸುಂದರಿ! ಮೃಗಗಳಿಂದ ಸೇವಿತವಾದ ವನದಲ್ಲಿ ನಾವು ಎಲ್ಲಿಗೆ ಹೋಗಲಿ? ದೇವಿ! ನನಗೆ ಯಾರು ಮಿತ್ರರಿರುವರು?' ಎಂದಳು.

ಆಗ ಚಂದ್ರವತಿಯು 'ಈ ಸಂಸಾರದಲ್ಲಿ ಯಾರೂ ಯಾವಾಗಲೂ ಸುಖವುಳ್ಳವರಾಗಿಯೂ ಇರುವುದಿಲ್ಲ. ಯಾವಾಗಲೂ ದುಃಖವುಳ್ಳವರಾಗಿಯೂ ಇರುವುದಿಲ್ಲ. ಎಲ್ಲರಿಗೂ ಸುಖವೂ ದುಃಖವೂ ಬರುವುದು. ದುಃಖಕ್ಕೆ ಪಾಪವು ಕಾರಣವು. ಆದುದರಿಂದ ಜ್ಞಾನಿಯಾದವನು ಸರ್ವಪ್ರಯತ್ನದಿಂದ ಪಾಪವನ್ನು ಪರಿತ್ಯಾಗ ಮಾಡಬೇಕು. ಯಾರಿಗೆ ಧರ್ಮವು ಮಿತ್ರವಾಗಿರುವುದೋ ಅವನು ಸುಖಿಯಾಗಿರುವನು. ಆದುದರಿಂದಲೇ ಪೂರ್ವಿಕರು ಎಲ್ಲವನ್ನೂ ಬಿಟ್ಟು ಧರ್ಮದಲ್ಲಿ ಆಸಕ್ತರಾಗಿರುವರು. ಈ ಭೂಮಿಯಲ್ಲಿ ವಾರಾಣಸೀ ಎಂದು ಹೆಸರುಳ್ಳ ದೇವಪೂಜ್ಯರಾದ ನಗರಿಯು ಇದೆ. ಅಲ್ಲಿ ರುದ್ರದೇವರು ಪಾರ್ವತೀ ದೇವಿಯರಿಂದ ಸಹಿತರಾಗಿ ಸನ್ನಿಹಿತರಾಗಿರುವರು. ಅಲ್ಲಿಗೆ ನಾವು ಹೋಗಿ ಇರುವ' ಎಂದಳು.

ಈರೀತಿಯಾಗಿ ಮಾತಾಡುತ್ತಾ ಅಲ್ಲಿ ನೆರಳಲ್ಲಿ ಕುಳಿತಿರಲು ವೇದಶಾಸ್ತ್ರಪಾರಂಗತರಾದ ವಿಶ್ವಾಮಿತ್ರರು ತನ್ನ ಮಾಯಾ ಸಾಮರ್ಥ್ಯದಿಂದ ಆನೆ ಕುದುರೆಗಳಿಂದ ರಥಗಳಿಂದಲೂ ಕೂಡಿದ ಅನೇಕ ಪದಾತಿಗಳಿಂದ ಸಹಿತವಾದ ಸೈನ್ಯವನ್ನು ನಿರ್ಮಿಸಿ ಕರಕೊಂಡು ಬಂದರು. ಸೂತ ಮಾಗಧರ ಶಬ್ದಗಳಿಂದ ವನವು ತುಂಬಿಹೋಯಿತು. ಆಕಾಶದಿಂದ ಹೂವಿನ ಮಳೆಯು ಸುರಿಯಿತು. ವಾಸನೆಯುಳ್ಳ ತಣ್ಣಗಿರುವ ಗಾಳಿಯು ಬೀಸಿತು. ಆ ಸಮಯದಲ್ಲಿ ವಿಶ್ವಾಮಿತ್ರರೂ ಕೃಷ್ಣಾಜಿನವನ್ನು ಧರಿಸಿಕೊಂಡು ಜಪಮಾಲೆಯಿಂದಲೂ ಕಮಂಡುಲುವಿನಿಂದಲೂ ಸಹಿತರಾಗಿ ಕೌಪೀನಧಾರಿಯಾಗಿ ಮೈಯೆಲ್ಲಾ ಭಸ್ಮವನ್ನು ಹಚ್ಚಿಕೊಂಡು ಕಾಣಿಸಿದರು. 'ರಾಜನೇ! ನನಗೆ ಕೊಡುತ್ತೇನೆ ಎಂದು ಹೇಳಿದ ದಕ್ಷಿಣೆಯನ್ನು ಕೊಡು. ನಿನಗೆ ಶಕ್ತಿಯಿಲ್ಲದೆ ಹೋದರೆ ನನ್ನ ಮಾತಿನಂತೆ ಕೇಳು. ನನ್ನ ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊ. ಎಲ್ಲಾ ಭೂಮಿಯನ್ನು ಸ್ವೀಕರಿಸು' ಎಂದರು. 'ಇನ್ನೂ ಎರಡು ಮೂರು ದಿನಗಳು ಇವೆ. ಈದಿನ ಸೂರ್ಯನು ಮುಳುಗುವ ಮೊದಲು ನಿನ್ನ ದಕ್ಷಿಣೆಯನ್ನು ಕೊಡುವೆನು. ನಾನು ಸ್ವಪ್ನದಲ್ಲಿಯೂ ಸುಳ್ಳು ಹೇಳಲಿಕ್ಕೆ ಉತ್ಸಾಹಿಯಾಗಿಲ್ಲ' ಎಂದನು.

ಆಗ ವಿಶ್ವಾಮಿತ್ರರು ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು 'ಇನ್ನು ಎರಡು ಮೂರು ದಿನಗಳು ಉಳಿದಿವೆ. ಒಂದು ತಿಂಗಳು ಸಂಪೂರ್ಣವಾದ ಮೇಲೆ ಕೊಟ್ಟರೆ ನಾನು ಸ್ವೀಕರಿಸಲಾರೆನು' ಎಂದರು.

ಹರಿಶ್ಚಂದ್ರನು–'ಈ ದಿನವೇ ಸೂರ್ಯನು ಮುಳುಗುವ ಮೊದಲು ನಿಮಗೆ ದಕ್ಷಿಣೆಯನ್ನು ಕೊಡುವೆನು. ಯಾರ ಕೈಯಲ್ಲಿ ಹಣವನ್ನು ಕೊಡಬೇಕೆಂದು ನೀವು ಆಜ್ಞಾಪಿಸಬೇಕು' ಎಂದು ಹೇಳಿದನು.

ವಿಶ್ವಾಮಿತ್ರರು ನಕ್ಷತ್ರಕನೆಂಬ ಶಿಷ್ಯನನ್ನು ಕಳುಹಿಸಿದರು. ತರುವಾಯ ನಕ್ಷತ್ರಕನು ರಾಜನೊಡನೆ 'ರಾಜನೇ! ನೀನು ಸತ್ಯವಚನವುಳ್ಳವನಾದರೆ ಬೇಗನೇ ದಕ್ಷಿಣೆಯನ್ನು ಕೊಡು. ಇಲ್ಲದಿದ್ದರೆ ನೀನು ಸತ್ಯವನ್ನು ಬಿಟ್ಟವನಾಗುವಿ' ಎಂದನು. ಈ ರೀತಿಯಾಗಿ ನಕ್ಷತ್ರಕನು ಹೇಳುತ್ತಿರಲು ವಿಶ್ವಾಮಿತ್ರರು ಹರಿಶ್ಚಂದ್ರನು ನೋಡುವಂತೆ ಅಲ್ಲಿಯೇ ಮರೆಯಾದರು. ತರುವಾಯ ಮಧ್ಯಾಹ್ನದಲ್ಲಿ ಹರಿಶ್ಚಂದ್ರನು ಎಲ್ಲರಿಂದ ಕೂಡಿಕೊಂಡು ಮುಂದೆ ಹೋದನು. ಹೋಗುತ್ತಾ ಇರಲು ವಿಶ್ವಾಮಿತ್ರರು ಆಗ್ನೇಯಧಾರಣೆಯಿದ ಅಗ್ನಿಯನ್ನು ಸೃಷ್ಟಿಮಾಡಿದರು. ರಾಜನು ಹೋಗುವ ದಾರಿಯಲ್ಲಿ ಮಧ್ಯೇ ದೊಡ್ಡ ಬೆಂಕಿಯು ಉರಿಯುತ್ತಿತ್ತು. ಯಾವ ಯಾವ ದಿಕ್ಕಿಗೆ ಹೋಗುವರೋ ಅಲ್ಲಿ ಅಲ್ಲಿ ಬೆಂಕಿಯು ಜ್ವಲಿಸುತ್ತಿತ್ತು. ಈರೀತಿಯಾಗಿ ಕಾಡುಕಿಚ್ಚನ್ನು ನೋಡಿ ತನ್ನನ್ನೂ ನೋಡಿಕೊಂಡು ಹೇಳಿದನು. 'ದಕ್ಷಿಣೆಯನ್ನು ಕೊಡದೆ ಇರುವ ನನಗೆ ಮಿತ್ರರೆಲ್ಲಿ? ಮಕ್ಕಳೆಲ್ಲಿ? ಬಂಧುಗಳೆಲ್ಲಿ? ನನಗೆ ಎಲ್ಲಿ ಉತ್ತಮ ಗತಿಯಾಗುವುದು? ಪತ್ನಿಯನ್ನು ರಕ್ಷಣೆ ಮಾಡುವುದರಿಂದ ಗಂಡನಿಗೆ ಭರ್ತಾ ಎಂದು ಹೆಸರು ಸಲ್ಲುವುದು? ನನ್ನ ಪ್ರಾಣಕ್ಕಿಂತಲೂ ಪ್ರಿಯಳಾದ ಪತ್ನಿಯು ಬೆಂಕಿಯಲ್ಲಿ ಸುಟ್ಟುಹೋಗುವುದನ್ನು ಹೇಗೆ ನೋಡಲಿ? ನನ್ನ ಪ್ರೇಮವುಳ್ಳವನಾದ ಸತ್ಯಕೀರ್ತಿಗಾಗಿ ಮತ್ತಷ್ಟು ದುಃಖಪಡುವೆನು' ಎಂದು ಹೇಳಿದನು.

ಚಂದ್ರವತಿಯು 'ಯಾರು ಯಾರ ದುಃಖವನ್ನು ಪರಿಹರಿಸಲು ಶಕ್ತರಾಗುವರು? ಶ್ರೀಭಗವಂತನು ಸರ್ವವನ್ನು ಮಾಡುವನು. ಆದುದರಿಂದ ವಿಷಾದವನ್ನು ಮಾಡಬೇಡಿರಿ. ಧೈರ್ಯವನ್ನು ಹೊಂದಿರಿ. ಪಂಡಿತರು ಮರಣದಿಂದ ದುಃಖವನ್ನು ಹೊಂದಲಾರರು' ಎಂದಳು. ತರುವಾಯ ಎಲ್ಲಾ ಸ್ಥಳಗಳಲ್ಲಿಯೂ ಹೊಗೆಯು ತುಂಬಿಹೋಯಿತು. ಜ್ವಾಲೆಯು ಕಾಣಿಸಿತು. ಎಲ್ಲಿ ನಿಲ್ಲಲಿ? ಎಲ್ಲಿಗೆ ಹೋಗಲಿ ಎಂದು ಯೋಚನೆ ಮಾಡುತ್ತಿದ್ದರು. ತರುವಾಯ ಚಂದ್ರವತಿಯು ಪ್ರದಕ್ಷಿಣೆ ಬಂದು ನಮಸ್ಕರಿಸಿ ಕಣ್ಣೀರು ಧರಿಸಿಕೊಂಡು ಪತಿಯೊಡನೆ 'ನನ್ನ ವಿಜ್ಞಾಪನೆ ಮಾಡಿಕೊಳ್ಳುವುದನ್ನು ನೀವು ಅಂಗೀಕರಿಸಬೇಕು. ನಿಮ್ಮ ಅನುಗ್ರಹದಿಂದ ಎರಡು ಲೋಕದಲ್ಲಿಯೂ ಸುಖವನ್ನು ಹೊಂದುವೆನು. ಸ್ತ್ರೀಗೆ ಗಂಡನೇ ದೇವತೆಯು. ಗುರುವು. ಗಂಡನು ಸ್ತ್ರೀಯಮೇಲೆ ಪ್ರೀತಿಯನ್ನು ಹೊಂದಿದರೆ ಎಲ್ಲಾ ದೇವತೆಗಳು

ಪ್ರೀತರಾಗುವರು. ನಾನು ತಮ್ಮ ಮುಂಭಾಗದಲ್ಲಿ ಸಂತೋಷದಿಂದ ಅಗ್ನಿಯಲ್ಲಿ ದೇಹವನ್ನು ಪರಿತ್ಯಾಗ ಮಾಡುವೆನು' ಎಂದಳು.

ಹರಿಶ್ಚಂದ್ರನು–ಸುಂದರಿ! ನಾನು ನಿನ್ನ ಮರಣವನ್ನು ಕಣ್ಣುಗಳಿಂದ ನೋಡಲು ಸಮರ್ಥನಲ್ಲ. ಬ್ರಾಹ್ಮಣರಿಗೆ ಗೋವುಗಳಿಗೆ ಸ್ತ್ರೀಯರಿಗೆ ಆಪತ್ತು ಬಂದಾಗ ತಮ್ಮ ದೇಹವನ್ನೇ ಸಮರ್ಪಿಸಬೇಕು ಎಂದಿರುವುದು. ನಿನ್ನ ದುಃಖವನ್ನು ನೋಡಲಿಕ್ಕೆ ನನ್ನಿಂದ ಆಗಲಾರದು. ಗಾಯದಿಂದ ರಕ್ಷಿಸುವ ಕಾರಣ ಕ್ಷತ್ರಿಯನೆಂದೂ ರಕ್ಷಿಸುವ ಪ್ರಯುಕ್ತವೇ ಭರ್ತಾ ಎಂಬ ಹೆಸರೂ ಇರುವುದು. ಆದುದರಿಂದ ನಿನ್ನ ಮುಂಭಾಗದಲ್ಲಿ ನಾನೇ ಮರಣವನ್ನು ಹೊಂದಬೇಕಾಗಿದೆ' ಎಂದನು.

ಚಂದ್ರವತಿಯು–'ಮಹಾರಾಜರೇ! ತಾವು ಹಾಗೆ ಹೇಳಬಾರದು. ನಾನು ತಮ್ಮ ಮುಂಭಾಗದಲ್ಲಿ ಅಗ್ನಿಗೆ ದೇಹವನ್ನು ಸಮರ್ಪಿಸಬೇಕು. ಶೂರರು ಯುದ್ಧದಲ್ಲಿ ದೇಹವನ್ನು ಪರಿತ್ಯಾಗ ಮಾಡಬೇಕು. ಸ್ತ್ರೀಯು ಪತಿಯ ಮುಂಭಾಗದಲ್ಲಿ ದೇಹವನ್ನು ಪರಿತ್ಯಜಿಸಬೇಕು. ಹೀಗಿರುವಾಗ ತಾವು ನನ್ನನ್ನು ಹೇಗೆ ತಡೆಯುವಿರಿ? ಪರಮನಿಂದ್ಯವಾದ ವೈಧವ್ಯವನ್ನು ನೋಡಲಿಕ್ಕೆ ನನಗೆ ಹೇಗೆ ಸಾಧ್ಯವಾಗುವುದು? ತಾವು ಕ್ಷಮಿಸಬೇಕು'ಎಂದಳು.

ಆಗ ಸತ್ಯಕೀರ್ತಿಯು–ರಾಜರೇ! ಸ್ವಾಮಿಯ ಮುಂಭಾಗದಲ್ಲಿ ಭೃತ್ಯರ ಮರಣವು ಶ್ರೇಷ್ಠವು. ನಾನು ನಿಮ್ಮ ಭೃತ್ಯನು. ನಿಮ್ಮ ಮುಂಭಾಗದಲ್ಲಿ ನಾನು ಸಾಯುವೆನು ಎಂದು ಹೇಳಿದನು.

ತರುವಾಯ ಚಂದ್ರವತಿಯು ಕಣ್ಣೀರು ತುಂಬಿಸಿಕೊಂಡು ಗದ್ಗದ ಸ್ವರದಿಂದ 'ನಾನು ಮಾಡಿದ ಪುಣ್ಯದಿಂದ ಪ್ರತಿಜನ್ಮದಲ್ಲಿಯೂ ಹರಿಶ್ಚಂದ್ರಮಹಾರಾಜರೇ ಪತಿಯಾಗಬೇಕು. ನಾನು ಅವರಿಗೆ ರಾಣಿಯಾಗಬೇಕು' ಎಂದು ಹೇಳಿ ಪತಿಯ ಪಾದಗಳಿಗೆ ನಮಸ್ಕರಿಸಿ ಬೆಂಕಿಯಲ್ಲಿ ಹಾರಿದಳು. ಹನ್ನೆರಡು ಸೂರ್ಯರಂತೆ ಇರುವ ಪತಿವ್ರತೆಯಾದ ಚಂದ್ರವತಿಯನ್ನು ನೋಡಿ ಬೆಂಕಿಯು ದೂರ ಹೋಯಿತು. ತರುವಾಯ ಅಂತರಿಕ್ಷದಲ್ಲಿ ಪುಷ್ಪದ ಮಳೆಯು ಸುರಿಯಿತು. ಇಂದ್ರಾದಿದೇವತೆಗಳು ಸಾಧು ಸಾಧು ಎಂದು ಹೇಳಿದರು. ಆ ದಾರಿಯೆಲ್ಲಾ ತಣ್ಣಗೆ ಆಯಿತು. ದೇವತೆಗಳು ನೋಡಿ ಆಶ್ಚರ್ಯವನ್ನು ಹೊಂದಿದರು. ತಣ್ಣಗೆ ಆಯಿತು. ದೇವತೆಗಳು ನೋಡಿ ಆಶ್ಚರ್ಯವನ್ನು ಹೊಂದಿದರು. ಆಗ ಹರಿಶ್ಚಂದ್ರನು 'ದೇವಿ! ನಿನ್ನ ಅನುಗ್ರಹದಿಂದ ನಾನು ಯಮದೇವರ ಬಾಯಿಯಿಂದ ತಪ್ಪಿಸಿಕೊಂಡೆನು' ಎಂದನು. ತರುವಾಯ ಅವರು ಅವನಿಂದ ಹೊರಗೆ ಬಿದ್ದು ಕಾಶಿಗೆ ಹೋಗಿ ಸೇರಿದರು. ಗಂಗೆಗೆ ಹೋಗಿ

ಸ್ನಾನಮಾಡಿ ದೇವಾದಿತರ್ಪಣವನ್ನು ಮಾಡಿ ದೇವರ ಪೂಜೆಯನ್ನು ಮಾಡಿ ರುದ್ರದೇವರ ದರ್ಶನವನ್ನು ಮಾಡಿದನು.

ಈ ಕಾಲದಲ್ಲಿ ವೈಭವದಿಂದ ಯುಕ್ತನಾದ ಒಬ್ಬ ಬ್ರಾಹ್ಮಣನು ಬಹು ಬ್ರಾಹ್ಮಣರಿಂದ ಕೂಡಿಕೊಂಡು ತನ್ನ ಮನೆಯಿಂದ ಹೊರಗೆ ಬಂದನು. ಚಂದ್ರವತಿಯು ವೇದಶಾಸ್ತ್ರಪಾರಂಗತನಾದ ಆ ಬ್ರಾಹ್ಮಣನನ್ನು ನೋಡಿ 'ಮೂರು ವರ್ಣದವರಿಗೂ ಬ್ರಾಹ್ಮಣನು ತಂದೆಯೆಂದೆನಿಸಿಕೊಳ್ಳುತ್ತಾನೆ. ತಂದೆಯ ಹಣವನ್ನು ಮಗನು ಸ್ವೀಕರಿಸಬಹುದು. ಆದುದರಿಂದ ಈ ಬ್ರಾಹ್ಮಣರೊಡನೆ ಬೇಕಾದ ಹಣವನ್ನು ಕೊಡಿರಿ. ಅವರು ಹಣವನ್ನು ಕೊಡುವರು. ಅವರು ಧರ್ಮದಿಂದ ನಿಮಗೆ ತಂದೆಯು' ಎಂದು ಹೇಳಿದಳು.

ಹರಿಶ್ಚಂದ್ರರಾಜನು–'ನಾನು ಕ್ಷತ್ರಿಯನಾದವನು ದಾನವನ್ನು ತೆಗೆದುಕೊಳ್ಳಲಾರೆನು. ಯಾಚನೆ ಮಾಡುವುದು ಬ್ರಾಹ್ಮಣರ ಧರ್ಮವು. ಯಜ್ಞ ಮಾಡುವುದು ಅಧ್ಯಯನಮಾಡುವುದು ದಾನಮಾಡುವುದು ಸತ್ಯ ಶೌಚ ಶರಣಾಗತರನ್ನು ರಕ್ಷಿಸುವುದು. ಇವೆಲ್ಲಾ ಕ್ಷತ್ರಿಯರ ಧರ್ಮವು. ಕೊಡಿರಿ ಎಂದು ಹೇಳಲಿಕ್ಕೆ ನನಗೆ ಬಾಯಿ ಬರುವುದೇ ಇಲ್ಲ. ಕೊಡುತ್ತೇನೆ ಎಂದೇ ನನ್ನ ಬಾಯಿಯಲ್ಲಿ ಬರುವುದು. ಒಬ್ಬ ಬ್ರಾಹ್ಮಣರೊಡನೆ ಯಾಚನೆ ಮಾಡಿ ಮತ್ತೊಬ್ಬ ಬ್ರಾಹ್ಮಣರಿಗೆ ಕೊಟ್ಟರೆ ಏನು ಪ್ರಯೋಜನ' ಎಂದನು.

ಚಂದ್ರವತಿಯು–ಕಾಲವು ವಿಷಮವಾದದ್ದು. ಕಾಲವು ದಾನಮಾಡಿದವರನ್ನು ಯಾಚನೆ ಮಾಡಿಸುವುದು. ಇಂದ್ರದೇವರೂ ಪೂರ್ವದಲ್ಲಿ ದಧೀಚಿಋಷಿಗಳಲ್ಲಿ ಯಾಚನೆ ಮಾಡಿದರು. ಆದುದರಿಂದ ನೀವೂ ಯಾಚನೆ ಮಾಡಿರಿ. ದೋಷವಿಲ್ಲ' ಎಂದಳು.

ಹರಿಶ್ಚಂದ್ರನು–ತೀಕ್ಷ್ಣವಾದ ಕತ್ತಿಯಿಂದ ನಾಲಿಗೆಯನ್ನು ತುಂಡುಮಾಡಿಕೊಳ್ಳಬಹುದಲ್ಲದೆ ನನಗೆ ಕೊಡಿರಿ ಎಂದು ಯಾಚನೆ ಮಾಡುವುದು ಸರಿಯಲ್ಲ. ಪ್ರಾಣಬಿಡುವುದು ಶ್ರೇಷ್ಠವು. ತಲೆಯನ್ನು ಕಡಿದುಕೊಳ್ಳುವುದು ಶ್ರೇಷ್ಠವಾದದ್ದು. ಲಜ್ಜೆಯನ್ನು ಬಿಟ್ಟು ಕೊಡಿರಿ ಎಂದು ಹೇಳಿ ಕೈ ನೀಡುವುದು ಸರಿಯಲ್ಲ' ಎಂದನು.

ಆಗ ಚಂದ್ರವತಿಯು 'ನೀವು ಯಾಚನೆ ಮಾಡಲಿಕ್ಕೆ ಇಚ್ಛಿಸದಿದ್ದರೆ ನಿಮಗೆ ಇನ್ನೊಂದು ಕಾರ್ಯವನ್ನು ಹೇಳುವೆನು. ನಾನು ನಿಮಗೆ ನ್ಯಾಯದಿಂದ ಪತ್ನಿಯಾಗಿರುವೆನು. ನನ್ನನ್ನು ನೀವು ನಿಮ್ಮ ಪ್ರತಿಜ್ಞಾಪರಿಪಾಲನೆಗಾಗಿ ಕ್ರಯಕ್ಕೆ ಮಾರಿ' ಎಂದಳು.

ಹರಿಶ್ಚಂದ್ರನು ಗಟ್ಟಿಯಾಗಿ 'ನಾನು ಈ ಹೆಂಗಸನ್ನು ಕ್ರಯಕ್ಕೆ ಮಾರುತ್ತೇನೆ' ಎಂದು ಹೇಳಿದನು. ಆ ಶಬ್ದವನ್ನು ಕೇಳಿ ಕಾಲ ಕೌಶಿಕನೆಂಬವನು ಬಂದು ನಾನು ಈ ಹೆಂಗಸನ್ನು ಕ್ರಯಕ್ಕೆ ಪಡೆಯುವೆನು. ಇವಳ ಕ್ರಯವನ್ನು ಹೇಳು' ಎಂದು ಕೇಳಿದನು.

ಹರಿಶ್ಚಂದ್ರನು–ಸ್ತ್ರೀಮೂಲ್ಯವು ಬಂಗಾರ ಐನೂರು ನಾಣ್ಯಗಳೆಂದೂ ಪುರುಷರ ಮೂಲ್ಯವು ಸಾವಿರ ನಾಣ್ಯಗಳೆಂದೂ ಧರ್ಮಶಾಸ್ತ್ರದಲ್ಲಿ ಹೇಳಿದೆ ಎಂದನು.

ಕಾಲಕೌಶಿಕನು–ಆಗಲಿ. ಸ್ತ್ರೀಗೆ ಅಮೂಲ್ಯವನ್ನು ನಾನು ಕೊಡುವೆನು ಎಂದನು.

ತರುವಾಯ ಚಂದ್ರವತಿಯು ಗಂಡನಿಗೆ ಪ್ರದಕ್ಷಿಣೆ ಬಂದು ಮೊಳಕಾಲನ್ನು ಊರಿ ಕಣ್ಣೀರು ಸುರಿಸುತ್ತಾ ಗಂಡನೊಡನೆ 'ನಾನು ದಾನಾದಿ ಸತ್ಕರ್ಮಗಳನ್ನು ಮಾಡಿದ್ದರೆ ದೇವರನ್ನು ಪೂಜಿಸಿದ್ದರೆ ಬೇರೆ ಜನ್ಮದಲ್ಲಿಯೂ ನನಗೆ ನೀವೇ ಪತಿಯಾಗಬೇಕು' ಎಂದು ಹೇಳಿ ನಮಸ್ಕರಿಸಿದಳು. ಕಾಲಿಗೆ ಅಡ್ಡಬಿದ್ದಿರುವ ತನ್ನ ಪ್ರಾಣಕ್ಕಿಂತಲೂ ಪ್ರೀತಿಪಾತ್ರಳಾದ ಚಂದ್ರವತಿಯನ್ನು ನೋಡಿ ರಾಜನು ಹಾಹಾಕಾರವನ್ನು ಮಾಡಿದನು. 'ದೇವಿ! ಮರವು ತನ್ನ ನೆರಳನ್ನು ಬಿಡದೆ ಇರುವಂತೆ ನೀನು ನನ್ನನ್ನು ಬಿಟ್ಟಿದ್ದದ್ದೇ ಇಲ್ಲ. ನಿನ್ನನ್ನು ಬಿಟ್ಟು ನಾನು ಎಲ್ಲಿಗೆ ಹೋಗಲಿ? ಯಾವ ದಿಕ್ಕಿಗೆ ಹೋಗಲಿ? ಯಾರು ನನ್ನ ದುಃಖವನ್ನು ಪರಿಹರಿಸುವರು? ರಾಜ್ಯ ತ್ಯಾಗದಿಂದ ನನಗೆ ದುಃಖವಷ್ಟುಇಲ್ಲ. ವನವಾಸದಿಂದಲೂ ಅಷ್ಟು ದುಃಖವಿಲ್ಲ. ಪುತ್ರವಿಯೋಗವು ನನಗೆ ಅತಿದುಃಖಕ್ಕೆಕಾರಣವಾಗಿದೆ. ಶೋಕಸಾಗರದಲ್ಲಿ ಮುಳುಗಿ ನಾನು ಮರಣವನ್ನು ಹೊಂದುವೆನು' ಎಂದು ಹೇಳಿದನು. ಕಾಲ ಕೌಶಿಕನು ಚಂದ್ರವತಿಯ ಕೈಯನ್ನು ಕಟ್ಟಿ ರಾಜನು ನೋಡುವಂತೆ ಚಾಟುವಾರಿಯಿಂದ ಬಡಿಯುತ್ತಾ, ಕಠಿನವಾದ ಮಾತುಗಳಿಂದ ಪೀಡಿಸುತ್ತಾ ಎಳೆದುಕೊಂಡು ಹೋದನು.

ತರುವಾಯ ಅಂತರಿಕ್ಷದಲ್ಲಿ ಮಹಾತಪಸ್ವಿಯಾದ ನಕ್ಷತ್ರನು ಬಂದು 'ರಾಜನೇ! ನೀನು ಸತ್ಯವಚನವುಳ್ಳವನಾಗಿದ್ದರೆ ಹೇಳಿದ ದಕ್ಷಿಣೆಯನ್ನು ಕೊಡು' ಎಂದನು. ಹರಿಶ್ಚಂದ್ರನು ನಕ್ಷತ್ರನಿಗೆ ನಮಸ್ಕರಿಸಿ 'ನಾನು ನ್ಯಾಯದಿಂದ ಸಂಪಾದಿಸಿರುವ ಹಣವನ್ನು ದಕ್ಷಿಣೆಯಾಗಿ ಸ್ವೀಕರಿಸಬೇಕು' ಎಂದು ಹೇಳಿ ಕೊಟ್ಟನು.

ಆಗ ನಕ್ಷತ್ರನು–'ಈ ಹಣವನ್ನು ಹೇಗೆ ಸಂಪಾದಿಸಿದೆ? ಅದನ್ನು ನನಗೆ ಸತ್ಯವಾಗಿಯೂ ತಿಳಿಸಬೇಕು' ಎಂದನು.

ಹರಿಶ್ಚಂದ್ರನು–ನಾನು ಮಾಡಿರುವ ಕ್ರೂರಕರ್ಮವನ್ನು ಕೇಳಿ ಏನು ಆಗಬೇಕು. ಅದನ್ನು ಕೇಳಿದರೆ ನಿಮಗೆ ಶೋಕವುಂಟಾಗುವುದು ಎಂದನು.

ನಕ್ಷತ್ರನು 'ರಾಜನೇ! ನಾನು ವಿಶ್ವಾಮಿತ್ರರ ಶಿಷ್ಯನು. ನನಗೆ ಸ್ವಲ್ಪವೂ ದಯೆಯಿಲ್ಲ. ಆದುದರಿಂದ ಹಣವು ಬಂದ ಕ್ರಮವನ್ನು ತಿಳಿಸು' ಎಂದನು. ನನ್ನ ಪ್ರಾಣಕ್ಕಿಂತಲೂ ಅಧಿಕಳಾದ ಪತ್ನಿಯನ್ನು ಐನೂರು ನಾಣ್ಯಗಳಿಗೂ ಮಗನನ್ನು ಸಾವಿರ ನಾಣ್ಯಗಳಿಗೂ ಮಾರಿದ್ದೇನೆ. ಈ ಹಣವನ್ನು ಸ್ವೀಕರಿಸಬೇಕು' ಎಂದನು.

ನಕ್ಷತ್ರನು-ಬಹು ಬಂಗಾರ ವೆಚ್ಚಮಾಡಿ ನೀನು ಮಾಡಿದ ಯಾಗಕ್ಕೆ ಇಷ್ಟೇ ದಕ್ಷಿಣೆಯು ಸಾಲದು. ಆದುದರಿಂದ ಸಂಪೂರ್ಣ ದಕ್ಷಿಣೆಯಾಗುವಂತೆ ಉಪಾಯವನ್ನು ಮಾಡು ಎಂದನು.

ಆಗ ಸತ್ಯಸಂಧನಾದ ಹರಿಶ್ಚಂದ್ರನು ಎದ್ದು ನಿಂತು ಗಟ್ಟಿಯಾಗಿ ನನ್ನನ್ನೇ ನಾನೇ ಮಾರಿಕೊಳ್ಳುತ್ತೇನೆ ಎಂದು ಹೇಳಿದನು. ಆ ಸಮಯದಲ್ಲಿ ಮದದಿಂದ ಕೆಂಪಾದ ಕಣ್ಣುಳ್ಳ ಮುದುಕನಾದ ಚಂಡಾಲನೊಬ್ಬನು 'ನಾನು ನಿನ್ನನ್ನು ದಾಸನನ್ನಾಗಿ ಕ್ರಯಕ್ಕೆ ಪಡೆಯುವೆನು. ನಿನಗೆ ಎಷ್ಟು ಬೆಲೆಯೆಂದು ತಿಳಿಸು' ಎಂದು ಕೇಳಿದನು.

ಹರಿಶ್ಚಂದ್ರನು ಅವನ ಸ್ವರರೂಪ ಇತ್ಯಾದಿಗಳನ್ನು ನೋಡಿ ಚಂಡಾಲನೆಂದು ತಿಳಿದುಕೊಂಡು 'ವೇದಜ್ಞಾನಿಗಳಾದ ಬ್ರಾಹ್ಮಣರೋ ಕ್ಷತ್ರಿಯರೋ ವೈಶ್ಯರೋ ಶೂದ್ರರೋ ನನ್ನನ್ನು ಕ್ರಯಕ್ಕೆ ಪಡೆಯಲಿಕ್ಕೆ ಇಲ್ಲದೆ ಹೋದರೆ? ಚಂಡಾಲನು ನನ್ನನ್ನು ಕ್ರಯಕ್ಕೆ ಪಡೆಯುವನೇ?' ಎಂದುಕೊಂಡನು. ತರುವಾಯ ಆ ಚಂಡಾಲನು ಗಟ್ಟಿಯಾಗಿ 'ನಿನಗೆ ಎಷ್ಟು ಹಣವು ಬೇಕು? ಹೇಳು ನಾನು ಕೊಡುತ್ತೇನೆ' ಎಂದನು. ಆಗ ರಾಜನು ನಾಲ್ಕು ವರ್ಣದವರು ನನ್ನನ್ನು ಕ್ರಯಕ್ಕೆ ಪಡೆಯುವರು ಎಂದು ನನ್ನ ಅಭಿಪ್ರಾಯವಿತ್ತು. ಉತ್ತಮರು ಉತ್ತಮವರ್ಣದವರನ್ನು ಪಡೆಯಬೇಕು. ಮಧ್ಯಮರು ಮಧ್ಯಮರನ್ನು ಪಡೆಯಬೇಕು. ಅಧಮರು ಅಧಮರನ್ನು ಪಡೆಯಬೇಕು' ಎಂದನು. ಅದಕ್ಕೆ ವೀರಬಾಹು ಎಂಬ ಆ ಚಂಡಾಲನು 'ನೀನು ಮೊದಲು ಈ ವಿಶೇಷವನ್ನು ಹೇಳಲಿಲ್ಲ. ಈಗ ಹೇಳುವಿ. ನೀನು ಸತ್ಯವನ್ನು ಹೇಳುವವನಾದರೆ ನಿನ್ನನ್ನು ನಾನು ಕ್ರಯಕ್ಕೆ ಪಡೆದಿರುವೆನು' ಎಂದನು. ವಿಶ್ವಾಮಿತ್ರರು ಎಷ್ಟು ಹಣದಿಂದ ತೃಪ್ತಿಯನ್ನು ಹೊಂದುವರೋ ಅಷ್ಟು ಹಣವನ್ನು ನನಗೆ ಕೊಡಬೇಕು ಎಂದರು. ಅದಕ್ಕೆ ವೀರಬಾಹುವು-ದೊಡ್ಡ ಆನೆಯ ಮೇಲೆ ತನ್ನ ಶಕ್ತಿಯಿದ್ದಷ್ಟು ಎತ್ತರಕ್ಕೆ ಬಿಸಾಡಿದರೆ ಎಷ್ಟು ಎತ್ತರ ಬೀಳುವುದೋ ಅಷ್ಟು ಎತ್ತರ ಸುತ್ತಲೂ ನೂರು ಯೋಜನದಷ್ಟು ಅಗಲಕ್ಕೆ ಬಂಗಾರ ನಾಣ್ಯಗಳ ರಾಶಿಯನ್ನು ವಿಶ್ವಾಮಿತ್ರರಿಗೆ ಕೊಡುವೆನು' ಎಂದು ಹೇಳಿದನು. ಹರಿಶ್ಚಂದ್ರನು ಅಷ್ಟು ಹಣವನ್ನೂ ನಕ್ಷತ್ರನ ವಶಮಾಡಿದನು. ತರುವಾಯ ಅಂತರಿಕ್ಷದಲ್ಲಿ ರಾಜನೇ! ನೀನು ಋಣ

ರಹಿತನಾಗಿರುವಿ. ನೀನು ದಕ್ಷಿಣೆಯನ್ನು ಕೊಟ್ಟಿರುವಿ' ಎಂದು ಅಶರೀರವಾಣಿ ಯಾಯಿತು. ಹರಿಶ್ಚಂದ್ರನ ತಲೆಯಮೇಲೆ ಹೂವಿನ ಮಳೆಯು ಸುರಿಯಿತು. ಇಂದ್ರಾದಿದೇವತೆಗಳು ಸಾಧು ಸಾಧು ಎಂದು ಹೇಳಿದರು.

ಹರಿಶ್ಚಂದ್ರನು ವೀರಬಾಹುವಿನೊಡನೆ 'ನೀನೇ ನನ್ನ ತಂದೆಯು. ನೀನೇ ನನ್ನ ತಾಯಿಯು. ನೀನೇ ನನ್ನ ಬಂಧುವು. ಭಯಂಕರವಾದ ಋಣದಿಂದ ನನ್ನನ್ನು ಬಿಡಿಸಿದೆ. ನಾನು ನಿನಗೆ ಈಗ ಏನು ಮಾಡಬೇಕು? ನೀನು ಹೇಳಿದಂತೆ ಮಾಡುವೆನು' ಎಂದರು.

ತರುವಾಯ ವೀರಬಾಹುವು ನನ್ನ ಕಾಲನ್ನು ಒತ್ತು ಎಂದು ಹೇಳಿ ಕಾಲನ್ನು ನೀಡಿದನು. ಆಗ ಹರಿಶ್ಚಂದ್ರನು ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು. ಸ್ವಲ್ಪ ಹೊತ್ತಿನ ಮೇಲೆ ಸಮಾಧಾನ ಮಾಡಿಕೊಂಡು 'ಭೃತ್ಯನನ್ನು ನೋಡಿ ಅವನ ಯೋಗ್ಯತೆಯನ್ನು ಅನುಸರಿಸಿ ಕೆಲಸವನ್ನು ಹೇಳಬೇಕು' ಎಂದನು. ಆಗ ಸತ್ಯಕೀರ್ತಿಯು 'ನಾನು ತಮ್ಮ ಭೃತ್ಯನು. ನನ್ನನ್ನು ತಮ್ಮ ಕಾರ್ಯದಲ್ಲಿ ಆಜ್ಞಾಪಿಸಿರಿ. ನೀವು ದೈವದ ಮೇಲೆ ಕೋಪಿಸಿಕೊಳ್ಳಬಾರದು. ಎಂತವರಿಗೂ ಸುಖದುಃಖಗಳು ಬಂದೇ ಬರುವುವು' ಎಂದನು.

ಈರೀತಿಯಾಗಿ ಹೇಳಲು ಹರಿಶ್ಚಂದ್ರನು 'ಕ್ಷತ್ರಿಯನಾದ ನನಗೆ ದೈವೇಚ್ಛೆಯಿಂದ ಚಂಡಾಲತ್ವವು ಬಂದಿತು. ಮಂತ್ರಿ! ನನ್ನನ್ನು ಮುಟ್ಟಬೇಡ. ನಾನು ಚಂಡಾಲನಾದೆನು. ಭ್ರಷ್ಟನಾದೆನು' ಎಂದನು. ಮಂತ್ರಿಯು 'ರಾಜನೇ! ನನ್ನನ್ನು ಬೇಕಾದಂತೆ ಪೂರ್ವದಲ್ಲಿ ಸತ್ಕಾರ ಮಾಡಿರುವಿ. ಆದುದರಿಂದ ಈಗ ನಿನಗೆ ಆದ ಗತಿಯೇ ನನಗೂ ಆಗುವುದು. ಸತ್ಯವನ್ನೇ ಹೇಳುತ್ತೇನೆ ಎಂದನು. ಆಗ ಹರಿಶ್ಚಂದ್ರನು 'ಕೊನೆಯವರೆಗೆ ನನ್ನ ಒಟ್ಟಿಗೆ ಪತ್ನಿಯಾಗಲೀ ಪುತ್ರನಾಗಲೀ ಬರಲಿಲ್ಲ. ಮಂತ್ರಿಯು ಮಾತ್ರ ಬಂದನು' ಎಂದುಕೊಂಡನು.

ಆಗ ವೀರಬಾಹುವು 'ಎಲಾ ಮಾನಗೆಟ್ಟ ಮಂತ್ರಿಯೇ! ನೀನು ಯಾವಾಗಲೂ ಏನು ಹೇಳುವಿ? ಹರಿಶ್ಚಂದ್ರ! ನಿನಗೆ ಬೇಕಾದಷ್ಟು ಹಣವನ್ನು ಕೊಟ್ಟು ದಾಸನನ್ನಾಗಿ ಮಾಡಿಕೊಂಡಿರುವೆನು. ಪೂರ್ವದಲ್ಲಿ ನೀನು ಇಂತಹ ಕೆಲಸವನ್ನು ಮಾಡಲಾರೆನು. ಇತ್ಯಾದಿ ಒಂದು ಹೇಳಿಲ್ಲವಲ್ಲಾ! ನನ್ನಂತೆ ಇರುವ ಪಾಪಿಗಳು ಸುಳ್ಳು ಹೇಳಬಹುದು. ನಿನ್ನಂತೆ ಇರುವ ಮಹಾನುಭಾವರು ಎಷ್ಟು ಮಾತ್ರಕ್ಕೂ ಹೇಳಬಾರದು' ಎಂದನು. ಆಗ ರಾಜನು ಸತ್ಯವನ್ನೇ ಮುಂದೆ ಮಾಡಿಕೊಂಡು ಕಾಲನ್ನು ಒತ್ತಲಿಕ್ಕೆ ಚಂಡಾಲನ ಹತ್ತಿರ ಹೋದನು.

ತರುವಾಯ ವೀರಬಾಹುವು ಸ್ಮಶಾನದಲ್ಲಿ ದಕ್ಷಿಣಭಾಗಕ್ಕೆ ಹೋಗಬೇಕು. ನನ್ನ ಅಪ್ಪಣೆಯಿಂದ ಅಲ್ಲಿಗೆ ಹೋಗಿ ರಕ್ಷಿಸುತ್ತಿರು. ಈ ಝುಝುರ ಎಂಬ ವಾದ್ಯವನ್ನು ಬಡೆಯುತ್ತಾ ಎಲ್ಲಾ ಬೀದಿಗಳಲ್ಲಿಯೂ ನಾನು ವೀರಬಾಹುವಿನ ದಾಸನು. ಸ್ಮಶಾನವನ್ನು ರಕ್ಷಿಸಲಿಕ್ಕೆ ಹೋಗುವೆನು ಎಂದು ಹೋಗು. ಬೇಗನೇ ಹೋಗು. ನನ್ನ ಮಾತನ್ನು ಮೀರಬೇಡ' ಎಂದು ಹೇಳಿದನು. ಹರಿಶ್ಚಂದ್ರನು ಹಾಗೆಯೇ ಮಾಡಿ ಭಯಂಕರವಾದ ಸ್ಮಶಾನಕ್ಕೆ ಹೋದನು. ಅಲ್ಲಿ ಮಂತ್ರಿಯೊಡನೆ ನಾನಾ ಧರ್ಮಗಳನ್ನು ಹೇಳುತ್ತಾ ಇದ್ದನು.

ಕಾಲ ಕೌಶಿಕನ ಆಜ್ಞೆಯಿಂದ ಲೋಹಿತಾಶ್ವನು ಒಂದು ದಿನದಲ್ಲಿ ಬಾಲಕರೊಡನೆ ಕಟ್ಟಿಗೆಯನ್ನು ತರಲಿಕ್ಕೆ ಹೋಗಿದ್ದನು. ಬಹುಭಾರವನ್ನು ಹೊತ್ತುಕೊಂಡು ಒಂದೊಂದು ಹೆಜ್ಜೆಗೂ ಶ್ರಮಪಡುತ್ತಾ ಒಂದು ಪಲಾಶದ ಕೋಲನ್ನು ಊರುತ್ತಾ ಮೆಲ್ಲನೆ ಬರುತ್ತಿದ್ದನು. ನೀರಡಿಕೆಯಾಗಿ ನೀರಿದ್ದಲ್ಲಿಗೆ ಬಂದು ನೀರನ್ನು ಕುಡಿದನು. ನಿಂತುಕೊಂಡೇ ಕಟ್ಟಿಗೆಯ ಹೊರೆಯನ್ನು ಕೆಳಗೆ ಹಾಕಿದನು. ಆಗ ಅದನ್ನು ಕಟ್ಟಿದ್ದ ಹಗ್ಗವು ಕಡಿದು ಬಿದ್ದಿತು. ಮತ್ತೂ ನೀರನ್ನು ಕುಡಿದು ಒಂದು ಮುಹೂರ್ತ ವಿಶ್ರಾಂತಿಯನ್ನು ಹೊಂದಿ ಕಟ್ಟಿಗೆಯ ಹೊರೆಯನ್ನು ಕಟ್ಟಲಿಕ್ಕೆ ಹುತ್ತದ ಮೇಲೆ ಬೆಳೆದಿರುವ ದರ್ಭೆಗಳನ್ನು ಕೊಯ್ಯಲಿಕ್ಕೆ ಆರಂಭಿಸಿದನು. ಅಷ್ಟರಲ್ಲಿ ಕೃಷ್ಣಸರ್ಪವು ಬಂದು ಅವನನ್ನು ಕಚ್ಚಿಬಿಟ್ಟಿತು. ರೋಹಿತಾಶ್ವನು ತನ್ನನ್ನು ಹಾವು ಕಚ್ಚಿದ್ದನ್ನು ನೋಡಿ ಹಾಹಾ ಎಂದು ಹೇಳುತ್ತಾ ಭೂಮಿಯಲ್ಲಿ ಬಿದ್ದುಬಿಟ್ಟನು. ತರುವಾಯ ಆ ಹುಡುಗರೆಲ್ಲರೂ ಹೋಗಿ ಚಂದ್ರವತಿಯೊಡನೆ ನಿನ್ನ ಮಗುವನ್ನು ಹಾವು ಕಚ್ಚಿತು ಎಂದು ಹೇಳಿದರು. ಆಗ ಚಂದ್ರವತಿಯು ವಜ್ರಪಾತದಂತೆ ಇರುವ ಆ ಮಾತನ್ನು ಕೇಳಿ ಮೂರ್ಛಿತಳಾಗಿ ಅಲ್ಲೇ ಬಿದ್ದಳು. ತರುವಾಯ ಎದ್ದವಳಾಗಿ ಹುಡುಗರ ಹತ್ತಿರ ಕೇಳಿ ರೋಹಿತಾಶ್ವನು ಬಿದ್ದಿರುವಲ್ಲಿಗೆ ಹೋದಳು. ಮೃತನಾಗಿ ಬಿದ್ದಿದ್ದ ಆ ಮಗನನ್ನು ನೋಡಿ ಅಳುತ್ತಾ ಆ ಮಗನ ಮೇಲೆ ಬಿದ್ದಳು. ಮೂರ್ಛಿತಳಾದಳು. ಮೂರ್ಛೆಯಿಂದ ಎದ್ದು ಗಟ್ಟಿಯಾಗಿ ನಾನಾವಿಧವಾಗಿ ವಿಲಾಪವನ್ನು ಮಾಡಿದಳು. ಇವಳು ಅಳುವುದನ್ನು ಸ್ಮಶಾನದಲ್ಲಿ ಹರಿಶ್ಚಂದ್ರನು ಕೇಳಿ 'ಅಳುವ ಶಬ್ದವು ಕೇಳಿಸುತ್ತದೆ. ಯಾವುದೋ ಹೆಣವು ಬರುವಂತಿದೆ. ನಮ್ಮ ಲಾಭಕ್ಕೆ ಕಾರಣವಾಗುತ್ತದೆ' ಎಂದುಕೊಂಡನು.

ಚಂದ್ರವತಿಯು ಬಹುಹೊತ್ತು ಅಳುವವಳಾಗಿ ಮೃತನಾದ ಮಗನ ಶವವನ್ನು ಹಿಡಿದುಕೊಂಡು ಸ್ಮಶಾನಕ್ಕೆ ಹೋದಳು. ಸೂರ್ಯನು ಮುಳುಗಿದ ಮೇಲೆ ರಾತ್ರಿ

ನಕ್ಷತ್ರದ ಬೆಳಕಿನಲ್ಲಿ ಸ್ಮಶಾನದಲ್ಲಿ ಒಂದು ಸ್ಥಳದಲ್ಲಿ ಮಗುವಿನ ದೇಹವನ್ನು ಇಟ್ಟು ಗಟ್ಟಿಯಾಗಿ ಅಳುವವಳಾದಳು. ಆ ಅಳುವ ಶಬ್ದವನ್ನು ಕೇಳಿ ಹರಿಶ್ಚಂದ್ರನು ಅಳುವ ಶಬ್ದವು ಕೇಳುವಲ್ಲಿಗೆ ಹೋದನು. ಹೆಣದ ವಸ್ತ್ರವನ್ನು ತೆಗೆಯುವುದು ಅವನ ಕರ್ತವ್ಯವಾಗಿತ್ತು. ಹಾಗೆಯೇ ಆಗಲೂ ಕೂಸಿಗೆ ಹೊದಿಸಿದ ವಸ್ತ್ರವನ್ನು ತೆಗೆದನು. ಈರೀತಿಯಾಗಿ ವಸ್ತ್ರವನ್ನು ತೆಗೆದುಕೊಂಡು ಹೋಗುವುದನ್ನು ನೋಡಿ ಚಂದ್ರವತಿಯು ಭಯವುಳ್ಳವಳಾಗಿ ಈ ರಾಕ್ಷಸನು ನನ್ನನ್ನು ಕೊಲ್ಲಲಿಕ್ಕೆ ಉದ್ಯುಕ್ತವಾಗಿರುವನು ಎಂದು ಹೇಳಿದಳು. ಈರೀತಿಯಾಗಿ ಅವಳು ಭಯದಿಂದ ಹೇಳಿದ ಮಾತನ್ನು ಕೇಳಿ 'ಇವಳು ನನ್ನ ಭಯಂಕರವಾದ ರೂಪವನ್ನು ನೋಡಿ ಪ್ರಾಣಬಿಡುವಳು. ಆದುದರಿಂದ ಸಮಾಧಾನಪಡಿಸುವೆನು' ಎಂದುಕೊಂಡು 'ದೇವಿ! ನನ್ನನ್ನು ರಾಕ್ಷಸನೆಂದು ತಿಳಿಯಬೇಡ. ನಾನು ಮನುಷ್ಯನು. ಅಂಜಿಕೆಯಿಲ್ಲದೆ ನನ್ನ ಮಾತನ್ನು ಕೇಳು. ಹರಿಶ್ಚಂದ್ರ ಎಂದು ಪ್ರಸಿದ್ಧನಾದ ರಾಜನನ್ನು ನೀನು ನೋಡಿಯೋ ಅಥವಾಕೇಳಿಯೋ ಇದ್ದರೆ ಅವನೇ ನಾನು ಎಂದು ತಿಳಿ. ಸಂದೇಹಪಡಬೇಡ. ಭಯವನ್ನು ಹೊಂದಬೇಡ' ಎಂದನು.

ಚಂದ್ರವತಿಯು–ಈ ಮಾತು ಅತ್ಯಂತ ಅದ್ಭುತವಾಗಿದೆಯಲ್ಲಾ! ಹರಿಶ್ಚಂದ್ರ ರಾಜನಾಗಿದ್ದರೆ ಆ ದೇಹದ ಕಾಂತಿಯೇನಾಯಿತು. ನೀನು ಹರಿಶ್ಚಂದ್ರರಾಜನಾಗಿದ್ದರೆ ನಿನ್ನ ಹೆಂಡತಿಯೆಲ್ಲಿ? ಮಗನು ಎಲ್ಲಿ? ಮಂತ್ರಿಯಾದ ಸತ್ಯಕೀರ್ತಿಯೆಲ್ಲಿರುವನು?

ಹರಿಶ್ಚಂದ್ರನು–ಇದು ತುಂಬಾ ಕಷ್ಟಕರವಾದ ವಿಷಯವು. ನಾನು ಹೊರತು ಯಾವ ಪಾಪಿಯು ಹೆಂಡತಿ ಮಕ್ಕಳನ್ನು ಮಾರುವನು? ನಾನು ದುರಾಚಾರವುಳ್ಳವನು. ಮಹಾಪಾಪವನ್ನು ಮಾಡಿರುವೆನು. ನನ್ನೊಡನೆ ಯಾಕೆ ಪ್ರಶ್ನೆ ಮಾಡುವಿ? ಎಂದನು.

ಈರೀತಿಯಾಗಿ ಹರಿಶ್ಚಂದ್ರನು ಹೇಳಲು ಚಂದ್ರವತಿಯು ಎದ್ದು ಕಣ್ಣೀರನ್ನು ಸುರಿಸುತ್ತಾ ರಾಜನ ಕಾಲಿಗೆ ಬಿದ್ದಳು. 'ನಿಮ್ಮ ದೇಹಕಾಂತಿಯು ಎಲ್ಲಿಗೆ ಹೋಯಿತು. ತೇಜಸ್ಸು ಎಲ್ಲಿಗೆ ಹೋಯಿತು? ನಾನು ನಿಮ್ಮ ಪತ್ನಿಯು. ದೈವೇಚ್ಛೆಯಿಂದ ತಮ್ಮ ವಿಯೋಗವನ್ನು ಹೊಂದಿದವಳು' ಎಂದಳು.

ತರುವಾಯ ರಾಜನು ತನ್ನ ಪಾದಕ್ಕೆ ಬಿದ್ದಿರುವ ಅವಳನ್ನು ನೋಡಿ ಕಣ್ಣೀರಿನಿಂದ ಗದ್ಗದವಾದ ಸ್ವರದಿಂದ ಸುಂದರಿ! ನನ್ನನ್ನು ಮುಟ್ಟಬೇಡ. ನಾನು ಚಂಡಾಲನಾಗಿರುವೆನು. ನನ್ನನ್ನು ಪಿತೃಋಣದಿಂದ ಬಿಡಿಸುವ ನನ್ನ ಮಗನು ಎಲ್ಲಿರುವನು ಎಂಬುದನ್ನು ತಿಳಿಸು ಎಂದನು.

ಚಂದ್ರವತಿಯು–ಈ ನನ್ನ ಪ್ರಿಯ ಪುತ್ರನು ಹಾವು ಕಚ್ಚಿ ಸತ್ತುಬಿದ್ದಿರುವನು. ನಿಮ್ಮ ಮಗನನ್ನು ನೋಡಿರಿ ಎಂದಳು.

ಮಗನು ಮೃತನಾಗಿ ಬಿದ್ದಿರುವುದನ್ನು ನೋಡಿ ಬುಡವನ್ನು ಕತ್ತರಿಸಿದ ಮರದಂತೆ ಅವನ ಮೇಲೆ ಬಿದ್ದನು. ಮೂರ್ಛೆಯನ್ನು ಹೊಂದಿದನು. ಆಮೇಲೆ ಜ್ಞಾನವನ್ನು ಹೊಂದಿ ಬಹಳವಾಗಿ ವಿಲಾಪವನ್ನು ಮಾಡಿದನು. ಕೊನೆಗೆ ಸಂಸಾರದಲ್ಲಿ ಜನ್ಮಮರಣಗಳು ಸಹಜವೆಂದು ತಿಳಿದುಕೊಂಡು ನಿನ್ನ ಸ್ವಾಮಿಯ ಮನೆಗೆ ಹೋಗು ಎಂದು ಪತ್ನಿಯೊಡನೆ ಹೇಳಿ ಮಗನ ದೇಹವನ್ನು ಹೊತ್ತುಕೊಂಡು ಹೋದನು.

ತರುವಾಯ ಚಂದ್ರವತಿಯು ಶೋಕವುಳ್ಳವಳಾಗಿ ಎಡವುತ್ತಾ ಕಾಲ ಕೌಶಿಕನ ಮನೆಗೆ ಹೊರಟಳು. ದಾರಿಯಲ್ಲಿ ಅವಳು ನೋಡುತ್ತಿರುವಾಗಲೇ ಕೆಲವು ಕಳ್ಳರು ಒಂದು ಹುಡುಗನನ್ನು ಹಿಡಿದು ಹಣಕ್ಕೋಸ್ಕರ ಕೊಲ್ಲಲಿಕ್ಕೆ ಆರಂಭಿಸಿದ್ದರು. ಆ ಹುಡುಗನು ರಕ್ಷಿಸಿರಿ ರಕ್ಷಿಸಿರಿ ಎಂದು ಗಟ್ಟಿಯಾಗಿ ಕೂಗುತ್ತಿದ್ದನು. ಆ ಘೋರಕರ್ಮವನ್ನು ನೋಡಿ ಚಂದ್ರವತಿಯು ಪಾಪಿಗಳಾದ ನೀವು ಮಗುವನ್ನು ಕೊಲ್ಲಬೇಡಿರಿ ಕೊಲ್ಲಬೇಡಿರಿ ಎಂದು ಕೂಗುತ್ತಾ ಹತ್ತಿರಕ್ಕೆ ಓಡಿದಳು. ಆಗ ಕಳ್ಳರು ಭಯವುಳ್ಳವರಾಗಿ ತಾವು ಕೊಂದಿರುವ ಬಾಲಕನನ್ನು ಅಲ್ಲೇ ಬಿಟ್ಟು ಓಡಿಹೋದರು. ಆಗ ಅವಳು ಆ ಹುಡುಗನ ಬಳಿಗೆ ಹೋದಳು. ಅಷ್ಟರಲ್ಲಿ ಆ ಶಬ್ದವನ್ನು ಕೇಳಿ ರಾಜಭೃತ್ಯರು ಅಲ್ಲಿಗೆ ಓಡಿಬಂದರು. ಚಂದ್ರವತಿಯನ್ನು ನೋಡಿ ಅವಳೇ ಮಗುವನ್ನು ಕೊಂದಿರುವಳೆಂದು ತಿಳಿದುಕೊಂಡು 'ಪಾಪಿ! ಮಾನಕೆಟ್ಟವಳೇ! ದಯಾಶೂನ್ಯಳೇ! ನಿನ್ನ ಮಗುವಿನಂತೇ ಇರುವ ಈ ಕೂಸನ್ನು ಕೊಂದೆಯಾ? ನೀನು ಅಪಹಾರ ಮಾಡಿದ ದ್ರವ್ಯವೆಲ್ಲಿಗೆ ಹೋಯಿತು? ನಿನಗೆ ಬದುಕಿರುವ ಆಸೆಯಿದ್ದರೆ ಆ ಹಣವನ್ನು ತಂದು ತೋರಿಸು' ಎಂದರು. ಚಂದ್ರವತಿಯು ಒಂದು ಮಾತನ್ನೂ ಆಡಲಿಲ್ಲ. ಆಗ ರಾಜಭೃತ್ಯರು ಚಂದ್ರವತಿಗೆ ಬಾರುಕೋಲಿನಿಂದ ಚೆನ್ನಾಗಿ ಬಡಿದರು. ಗಂಡನ ವಿಯೋಗ ದುಃಖದಿಂದ ಮಗನ ಮರಣದ ದುಃಖದಿಂದಲೂ ಆ ರಾಜಭೃತ್ಯರ ವಶಳಾಗಿಯೂ ಮರಣವನ್ನೇ ಅಪೇಕ್ಷಿಸಿದಳು.

ತರುವಾಯ ಕುರುರೀ ಪಕ್ಷಿಯಂತೆ ಅಳುತ್ತಿರುವ ಅವಳನ್ನು ರಾಜಭೃತ್ಯರು ಹಗ್ಗದಿಂದ ಕಟ್ಟಿ ರಾಜನ ಸಮೀಪಕ್ಕೆ ಎಳೆದುಕೊಂಡು ಹೋಗಿ ರಾಜನ ಸಮೀಪದಲ್ಲಿ ತಿಳಿಸಿದರು. ಅಲ್ಲಿ ಚಂದ್ರವತಿಯು ನಡೆದ ವಿಷಯವನ್ನು ಹೇಳಿದಳು. ಆದರೆ ರಾಜನು ಅದನ್ನು ನಂಬದೆ ದುಷ್ಟವ್ಯಾಪಾರವುಳ್ಳ ಇವಳನ್ನು ಚಂಡಾಲರಿಂದ ಸಂಹಾರಮಾಡಿಸಿರಿ ಎಂದನು. ತರುವಾಯ ಕ್ರೂರರಾದ ರಾಜಪುರುಷರು ಅವಳನ್ನು ವೀರಬಾಹುವಿನ

ವಶಮಾಡಿದರು. ವೀರಬಾಹುವು ಸ್ಮಶಾನದಲ್ಲಿ ಇರುವ ನನ್ನ ದಾಸನನ್ನು ಕರೆದುಕೊಂಡು ಬಾ ಎಂದು ಮಗನನ್ನು ಕಳುಹಿಸಿದನು. ಅವನು ಸ್ಮಶಾನಕ್ಕೆ ಹೋಗಿ 'ದಾಸನೇ! ಬೇಗನೇ ಏಳು. ನೀನು ಬರಬೇಕೆಂದು ನನ್ನ ತಂದೆಯರು ಹೇಳಿರುವರು' ಎಂದನು. ಆಗ ಹರಿಶ್ಚಂದ್ರನು ವೇದಗಳಲ್ಲಿಯೋ ನ್ಯಾಯಶಾಸ್ತ್ರದಲ್ಲಿಯೋ ಮೀಮಾಂಸಾಶಾಸ್ತ್ರದಲ್ಲಿಯೋ ಸಂದೇಹ ಬಂದಿರಬಹುದೋ ಅಥವಾ ಇನ್ನು ಯಾವುದಾದರೂ ಶಾಸ್ತ್ರದಲ್ಲಿ ಸಂದೇಹವು ಬಂದಿರಬಹುದೋ ಅಥವಾ ಇನ್ನು ಯಾವುದಾದರೂ ಶಾಸ್ತ್ರದಲ್ಲಿ ಸಂದೇಹವು ಬಂದಿರಬಹುದೋ ಅಥವಾ ಎಲ್ಲಿಯಾದರೂ ಯುದ್ಧ ಮಾಡಬೇಕಾಗಿರಬಹುದೋ ಇತ್ಯಾದಿ ಯೋಚನೆ ಮಾಡುತ್ತಾ ವೀರಬಾಹುವಿನ ಮನೆಗೆ ಬಂದು 'ನಾನು ಬಂದಿರುವೆನು. ಏನು ಮಾಡಬೇಕು. ಹೇಳು' ಎಂದು ಕೇಳಿದನು.

ಅದಕ್ಕೆ ವೀರಬಾಹುವು 'ಈ ದುರಾಚಾರಿಣಿಯನ್ನು ಕೊಲ್ಲಬೇಕು. ಖಡ್ಗದಿಂದ ಇವಳ ತಲೆಯನ್ನು ಕತ್ತರಿಸು' ಎಂದು ಹೇಳಿದನು. ಅದಕ್ಕೆ ಹರಿಶ್ಚಂದ್ರನು 'ನಾನು ಇದಕ್ಕಿಂತ ಪೂರ್ವದಲ್ಲಿ ಕೈಕಾಲು ಮುರಿದುಹೋದ ಕವಚವು ಸೀಳಿಹೋದ ಶಸ್ತ್ರರಹಿತರಾದ ಯುದ್ಧದಲ್ಲಿ ಪರಾಙ್ ಮುಖರಾದ ಗಂಡಸರನ್ನೇ ಸಂಹರಿಸಲಿಲ್ಲ. ಈಗ ಹೆಂಗಸನ್ನು ಹೇಗೆ ಸಂಹಾರ ಮಾಡಲಿ? ಬಾಲಕನನ್ನೂ ವೃದ್ಧನನ್ನೂ ನಪುಂಸಕನನ್ನೂ ಭಯವುಳ್ಳವನನ್ನೂ ವಿದ್ವಾಂಸರು ಕೊಲ್ಲಲಾರರು. ಅಪಕಾರ ಮಾಡಿದವಳಾಗಿದ್ದರೂ ಹೆಂಗಸನ್ನು ಕೊಲ್ಲಲಾರರು' ಎಂದನು. ಈ ಮಾತನ್ನು ಕೇಳಿ 'ವೀರಬಾಹುವು ಕೋಪವುಳ್ಳವನಾಗಿ ಕಠಿನವಾದ ತನ್ನ ಜಾತಿಗೆ ಯೋಗ್ಯವಾದ ಮಾತನ್ನು ಆಡಿದನು. 'ಎಲಾ! ನೀನು ಕ್ರಯಕ್ಕೆ ಪಡೆದ ದಾಸನಾಗಿದ್ದಿ. ಯುಕ್ತಾಯುಕ್ತ ವಿಚಾರ ಮಾಡುವಿಯಾ? ರಾಜನ ಅಪ್ಪಣೆಯಿಂದ ಪಾಪಿನಿಯಾದ ಇವಳನ್ನು ಸಂಹರಿಸು' ಎಂದು ಹೇಳಿದನು.

ತರುವಾಯ ಹರಿಶ್ಚಂದ್ರನು ದೊಡ್ಡ ಖಡ್ಗವನ್ನು ಹಿಡಿದುಕೊಂಡು ಮಹಾಶೋಕದಿಂದ ಕೂಡಿದವನಾಗಿ ಚಂದ್ರವತಿಯನ್ನು ಮುಂದೆ ಮಾಡಿಕೊಂಡು ಸ್ಮಶಾನಕ್ಕೆ ಹೋದನು. ಆಗಾಗ್ಗೆ ಎಡವುತ್ತಾ ಯೋಚನೆ ಮಾಡುತ್ತಾ ಹೋದನು. ಸ್ಮಶಾನದಲ್ಲಿ ಅವಳನ್ನು ನಿಲ್ಲಿಸಿ ಭಯಂಕರವಾದ ಖಡ್ಗವನ್ನು ಹಿಡಿದು ತನಗೆ ಇಂತಹ ದುರದೃಷ್ಟವೂ ಬಂದು ಸೇರಿತ್ತಲಾ ಎಂದು ತುಂಬಾ ಯೋಚನೆ ಮಾಡಿದವನಾಗಿ ಚಂದ್ರವತಿಯೊಡನೆ ನಿನಗೆ ಮರಣವು ಸಮೀಪಿಸಿದೆ. ನಿನ್ನ ಮನಸ್ಸಿನಲ್ಲಿರುವ ದೇವತೆಯನ್ನು ಧ್ಯಾನಮಾಡು' ಎಂದನು. ಅದಕ್ಕೆ ಚಂದ್ರವತಿಯು 'ನಾನು

ಪೂರ್ವದಲ್ಲಿ ಧರ್ಮವನ್ನು ಮಾಡಿದ್ದರೆ ಸತ್ಯವಚನವನ್ನು ಹೇಳಿದ್ದರೆ ದಾನಹೋಮಾದಿಗಳನ್ನು ಮಾಡಿದ್ದರೆ ನನಗೆ ಪ್ರತಿಯೊಂದು ಜನ್ಮದಲ್ಲಿಯೂ ಹರಿಶ್ಚಂದ್ರರಾಜರೇ ಪತಿಯಾಗಬೇಕು' ಎಂದು ಹೇಳಿದಳು. ಎದೆಯನ್ನು ಸೀಳುವಂತೆ ಇದ್ದ ಮಾತನ್ನು ಕೇಳಿ ಹರಿಶ್ಚಂದ್ರನು ಬಹುಹೊತ್ತು ಸುಮ್ಮನೆ ಇದ್ದು 'ಸುಂದರಿ! ನೋಡಿದೆಯಾ ನನ್ನ ದುರದೃಷ್ಟವನ್ನು ರಾಜನಾಗಿದ್ದ ನನ್ನನ್ನು ಈಗ ನಿನ್ನನ್ನು ಕೊಲ್ಲಲಿಕ್ಕೆ ಪ್ರೇರಿಸುತ್ತದೆ. ಪಾಪಿಯಾದ ನಾನು ನಿನ್ನನ್ನು ಇನ್ನೊಬ್ಬರ ದಾಸಿಯನ್ನಾಗಿ ಮಾಡಿದೆನು. ಸೈನ್ಯವನ್ನು ನಾಶಮಾಡಲಿಕ್ಕೆ ಇದ್ದ ಖಡ್ಗವು ನಿನ್ನನ್ನು ಸಂಹರಿಸಲಿಕ್ಕೆ ಉಪಯೋಗಿಸಲ್ಪಡುತ್ತದೆ' ಎಂದನು.

ಚಂದ್ರವತಿಯು 'ನಾನು ಧನ್ಯಳಾದೆನು. ನನ್ನ ಮನಸ್ಸಿನ ಅಭಿಲಾಷೆಯು ಪೂರ್ಣವಾಯಿತು. ತಮ್ಮ ಸಮೀಪದಲ್ಲಿಯೇ ನಾನು ಮರಣವನ್ನು ಹೊಂದುವೆನು. ತಾವು ದೈವದ ಮೇಲೆ ಕೋಪವನ್ನು ಮಾಡಬೇಡಿರಿ. ಹುಟ್ಟಿದವರಿಗೆ ಮರಣವು ತಪ್ಪಿದ್ದಲ್ಲ. ತಾವು ಧೈರ್ಯ ಮಾಡಿಕೊಂಡು ಒಂದೇ ಪೆಟ್ಟಿನಿಂದ ನನ್ನ ತಲೆಯನ್ನು ಹಾರಿಸಿರಿ' ಎಂದಳು.

ತರುವಾಯ ಹರಿಶ್ಚಂದ್ರನು ಚಂದ್ರವತಿಯ ತಲೆಯನ್ನು ಕತ್ತರಿಸಲು ಪ್ರಯತ್ನ ಮಾಡಲು ವಿಶ್ವಾಮಿತ್ರರು ಬಂದು ಅವನ ಕೈಯನ್ನು ಹಿಡಿದರು. ಆಗ ಹರಿಶ್ಚಂದ್ರನು 'ಯಾರು ನನ್ನ ಖಡ್ಗವನ್ನು ಹಿಡಿದ ಕೈಯನ್ನು ನಿಲ್ಲಿಸಿದವರು? ಯಕ್ಷನೋ ರಾಕ್ಷಸನೋ? ಯಾರಾದರೂ ನನ್ನ ಎದುರಲ್ಲಿ ನಿಲ್ಲಲಿ ಎಂದನು. ಆ ಸಮಯದಲ್ಲಿ ವಿಶ್ವಾಮಿತ್ರರು ಬಂದು ಮಧುರವಾದ ವಾಣಿಯಿಂದ 'ನೀನು ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊ. ಸಪ್ತಸಮುದ್ರಗಳಿಂದ ಕೂಡಿದ ಭೂಮಿಯನ್ನು ಹೊಂದುವವನಾಗು' ಎಂದರು.

ಹರಿಶ್ಚಂದ್ರನು 'ನಾನೇ ತಮಗೆ ಕೊಟ್ಟಿರುವ ಭೂಮಿಯನ್ನು ನಾನೇ ಹೇಗೆ ಪುನಃ ಹೊಂದಲಿ. ನನಗೆ ರಾಜ್ಯದಿಂದ ಮಗನಿಂದ ಭೋಗದಿಂದ ಬದುಕಿನಿಂದ ಏನು ಪ್ರಯೋಜನವಿದೆ? ಹೆಂಡತಿಯನ್ನು ಸಂಹರಿಸಲಿಕ್ಕೆ ಉದ್ಯುಕ್ತನಾಗಿರುವೆನು. ನಿಮಗೆ ಹೇಳಿದ ದಕ್ಷಿಣೆಯನ್ನು ಕೊಟ್ಟಾಯಿತು. ಇನ್ನು ಯಾವ ಧರ್ಮಕರವಾದ ಪ್ರಿಯವಾದ ಕಾರ್ಯವನ್ನು ಮಾಡಬೇಕೋ ಹೇಳಿರಿ' ಎಂದನು.

ವಿಶ್ವಾಮಿತ್ರರು 'ನನ್ನ ಪ್ರಿಯವನ್ನು ಮಾಡಬೇಕೆಂದು ಇದ್ದರೆ ಸತ್ಯವನ್ನು ಬಿಟ್ಟು ನನ್ನ ಹೆಣ್ಣುಮಕ್ಕಳ ಮದುವೆಮಾಡಿಕೊ' ಎಂದರು. ಅದಕ್ಕೆ ಹರಿಶ್ಚಂದ್ರನು ನಾನು ಸ್ವಪ್ನದಲ್ಲಿಯೂ ಸುಳ್ಳು ಹೇಳಲಾರೆನು. ನನ್ನ ಕೈಯನ್ನು ಬಿಟ್ಟು ಹೋಗಿರಿ. ನನ್ನ

ಸ್ವಾಮಿಯ ವಾಕ್ಯದಿಂದ ಇವಳನ್ನು ಕೊಲ್ಲುವೆನು. ಸ್ವಾಮಿಯ ವಾಕ್ಯದಂತೆ ಕಾರ್ಯವನ್ನು ಮಾಡುವವನಿಗೆ ದೋಷವಿರುವುದಿಲ್ಲ. ನೀವು ಕ್ಷಮಿಸಬೇಕು' ಎಂದು ಹೇಳಿ ಚಂದ್ರವತಿಯ ಕುತ್ತಿಗೆಗೆ ಸರಿಯಾಗಿ ಕತ್ತಿಯನ್ನು ಹಾಕಿದನು. ಆ ಭಯಂಕರವಾದ ಖಡ್ಗವು ಅವಳ ಕುತ್ತಿಗೆಗೆ ಬಿದ್ದದ್ದು ಒಂದು ಹೂವಿನ ಮಾಲೆಯು ಬಿದ್ದಂತೆ ಆಯಿತು. ತರುವಾಯ ದೇವತೆಗಳೂ ಗಂಧರ್ವರೂ ಯಕ್ಷರೂ ಉರಗರೂ ಎಲ್ಲರೂ ಬಂದು ಸಾಧು ಸಾಧು ಎಂದು ಹೇಳಿದರು. ದೇವದುಂದುಭಿಯನ್ನು ಬಾರಿಸಿದರು. ಹೂವಿನ ಮಳೆಯು ಬಿದ್ದಿತು. ಜಯ ಜಯ ಎಂಬ ಶಬ್ದವು ಕೇಳಿತು. ಆಗ ಐರಾವತದ ಮೇಲೆ ಕೂತುಕೊಂಡು ಇಂದ್ರದೇವರು ಬಂದರು. ತುಂಬುರು ಮೊದಲಾದ ಗಂಧರ್ವರೂ ನಾರದರೂ ಅಗ್ನಿ ಯಮ ನಿಋತಿ ವರುಣ ವಾಯು ಕುಬೇರ ರುದ್ರರೂ ಬಂದರು. ಬಂದಿರುವ ಎಲ್ಲಾ ದೇವತೆಗಳನ್ನು ನೋಡಿ ಕೈಮುಗಿದುಕೊಂಡು 'ಅತಿ ಹೇಯವಾದ ಪ್ರೇತಗಳಿಂದ ಯುಕ್ತಗಳಾದ ಶೂಲಗಳಿಂದ ಕೂಡಿದ ಅನೇಕ ಹೆಣಗಳಿಂದಲೂ ಎಲುಬುಗಳಿಂದಲೂ ಕೂಡಿದ ಮಾಂಸದ ಕೆಸರಿನಿಂದ ಕೂಡಿದ ರಕ್ತದಿಂದ ತುಂಬಿದ ಗೂಗೆ ಹದ್ದು ನರಿಗಳ ಕೂಗುಗಳಿಂದ ಕೂಡಿರುವ ಈ ಸ್ಮಶಾನಕ್ಕೆ ನೀವೆಲ್ಲರೂ ಯಾವ ಕಾರಣದಿಂದ ಬಂದಿರುವಿರಿ?' ಎಂದು ಕೇಳಿದನು.

ಆಗ ಬ್ರಹ್ಮದೇವರು 'ಇವುಗಳು ಮಾಂಸದ ತುಂಡುಗಳಲ್ಲ. ಯಾಗಕ್ಕೆ ಉಪಯುಕ್ತಗಳಾದ ಪುರೋಡಾಶ ಎಂಬ ಹೆಸರುಳ್ಳ ಹವಿಸ್ಸುಗಳು. ಇದು ಸ್ಮಶಾನವಲ್ಲ. ಇದು ನಿನ್ನ ಯಜ್ಞಭೂಮಿಯು. ಇವು ಶೂಲಗಳಲ್ಲ. ಯಜ್ಞಸ್ತಂಭಗಳು. ಇವು ರಕ್ತದ ಪ್ರವಾಹಗಳಲ್ಲ. ತುಪ್ಪದ ಪ್ರವಾಹಗಳು. ಇವು ಹೆಣಗಳಲ್ಲ. ಯಜ್ಞದ ಹವಿಸ್ಸುಗಳು– ಇವು ಹೋತೃಗಳ ಧ್ವನಿಯು. ನರಿಗಳ ಕೂಗಲ್ಲ. ನಿನ್ನ ಸತ್ಯಯಜ್ಞದಿಂದ ಭಗವಂತನು ಸಂತುಷ್ಟನಾಗಿರುವನು. ಬೇಕಾದ ವರವನ್ನು ಕೇಳಿಕೊ' ಎಂದು ಹೇಳಿದರು.

ಹರಿಶ್ಚಂದ್ರನು 'ನಾನು ಸ್ವತಂತ್ರನಲ್ಲ. ಚಂಡಾಲನೊಬ್ಬನ ದಾಸನು'ಎಂದನು. ಆಗ ಬೇಡನೇ ಚಂಡಾಲನಾದ ವೀರಬಾಹುವು ಅಲ್ಲಿಗೆ ಬಂದು ಮಧುರವಾದ ವಾಣಿಯಿಂದ 'ನಾನು ಲೋಕನಿಂದ್ಯವಾದ ಚಂಡಾಲರೂಪವನ್ನು ಧರಿಸಿಕೊಂಡು ನಿನ್ನ ಮನಸ್ಸನ್ನು ಪರೀಕ್ಷಿಸಲಿಕ್ಕೆ ಬಂದಿರುವೆನು. ವಿಶ್ವಾಮಿತ್ರ ವಸಿಷ್ಠರ ವಿವಾದದಿಂದ ನೀನು ಪರೀಕ್ಷಿಸಲಿಕ್ಕೆ ಬಂದಿರುವೆನು. ಇಂದ್ರಾದಿದೇವತೆಗಳೆಲ್ಲಾ ನಿನ್ನನ್ನು ಪರೀಕ್ಷಿಸಿರುವರು. ನೀನು ಎಂತಹ ಆಪತ್ತು ಬಂದಿರುವಾಗಲೂ ಸತ್ಯವನ್ನು ಬಿಡಲಿಲ್ಲ' ಎಂದನು.

ತರುವಾಯ ವಿಶ್ವಾಮಿತ್ರರು ಬಂದು ಮಧುರವಾದ ವಾಣಿಯಿಂದ 'ನಾನು ದ್ವೇಷದಿಂದಲೋ ಕೋಪದಿಂದಲೋ ಇಷ್ಟೆಲ್ಲಾ ಮಾಡಿದ್ದಲ್ಲ. ನಿನ್ನ ಮನಸ್ಸನ್ನು ಪರೀಕ್ಷಿಸಲು ಮಾಡಿದೆನು. ರಾಜನೇ ಕ್ಷಮಿಸು. ನಿನ್ನಿಂದ ಉತ್ತಮನು ಇಲ್ಲ. ನಿನಗೆ ದೇವತೆಗಳೇ ಪ್ರತ್ಯಕ್ಷರಾಗಿರುವರು' ಎಂದು ಹೇಳಿದರು.

ತರುವಾಯ ದೇವತೆಗಳು ಉತ್ತಮವಾದ ಸಿಂಹಾಸನವನ್ನು ತಂದು ಅದರಲ್ಲಿ ಹರಿಶ್ಚಂದ್ರನನ್ನು ಕೂತುಕೊಳ್ಳಿಸಿದರು. ರೋಹಿತಾಶ್ವನು ಸರ್ವಾಭರಣಗಳಿಂದ ಅಲಂಕೃತನಾಗಿ ಅವನ ತೊಡೆಯಲ್ಲಿ ಪ್ರಕಾಶಿಸಿದನು. ಸರ್ವಾಭರಣಗಳಿಂದ ಅಲಂಕೃತಳಾದ ಚಂದ್ರವತಿಯೂ ರಾಜನ ಅರ್ಧಾಸನದಲ್ಲಿ ಶೋಭಿಸಿದಳು. ಸತ್ಯಕೀರ್ತಿಯೂ ಸಮೀಪದಲ್ಲೇ ಇದ್ದನು. ದೇವತೆಗಳು ರಾಜನೇ! ನಿನಗೆ ಬೇಕಾದ ವರವನ್ನು ಕೇಳು ಎಂದು ಹೇಳಿದರು. 'ನನಗೆ ಸರ್ವದಾ ಸತ್ಯವಚನವೇ ಇರುವಂತೆ ಅನುಗ್ರಹಿಸಬೇಕು' ಎಂದು ರಾಜನು ಕೇಳಿಕೊಂಡನು.

ವಿಶ್ವಾಮಿತ್ರರು–ಸತ್ಯದಿಂದ ಎಲ್ಲಾ ಲೋಕಗಳನ್ನೂ ಹೊಂದಿರುವಿ. ನೀನು ನೂರು ಲಕ್ಷ ವರ್ಷ ಭೂಮಿಯನ್ನು ಪರಿಪಾಲನೆ ಮಾಡಿ ಆಮೇಲೆ ಮಗನನ್ನು ರಾಜ್ಯದಲ್ಲಿ ಸ್ಥಾಪಿಸಿ ನಿನ್ನ ತಪಸ್ಸಿನ ಫಲದ ಅರ್ಧದಿಂದ ಸ್ವರ್ಗಲೋಕವನ್ನು ಹೊಂದುವಿ' ಎಂದರು.

ಎಲ್ಲಾ ದೇವತೆಗಳೂ 'ನಮ್ಮ ಲೋಕಗಳನ್ನು ಕ್ರಮದಿಂದ ಹೊಂದಿ ಬ್ರಹ್ಮಲೋಕವನ್ನು ಹೊಂದಿ ಅಲ್ಲಿ ಅನೇಕ ಭೋಗಗಳನ್ನು ಅನುಭವಿಸುವಿ. ಹರಿಶ್ಚಂದ್ರ ಎಂದು ಲೋಕದಲ್ಲಿ ಕೀರ್ತಿಯು ಹದಿನಾಲ್ಕು ಇಂದ್ರರೂ ಚಂದ್ರಸೂರ್ಯರೂ ಇರುವವರೆಗೆ ಇರುವುದು'ಎಂದು ಅನುಗ್ರಹಿಸಿದರು. ಈರೀತಿಯಾಗಿ ಹರಿಶ್ಚಂದ್ರನು ಮಹಾದುಃಖವನ್ನು ಹೊಂದಿ ಕೊನೆಗೆ ಮಹಾಸೌಖ್ಯವನ್ನು ಹೊಂದಿದನು.



# ಧರ್ಮಗುಪ್ತನ ಚರಿತೆಯು [1]

ಚಂದ್ರವಂಶದಲ್ಲಿ ಉದ್ಭವಿಸಿದ ನಂದ ಎಂಬ ರಾಜನು ಎಲ್ಲಾ ಭೂಮಿಯನ್ನೂ ಆಳುತ್ತಿದ್ದನು. ಅವನಿಗೆ ಧರ್ಮಗುಪ್ತನೆಂಬ ಮಗನಿದ್ದನು. ನಂದನು ರಾಜ್ಯಭಾರವನ್ನು ಮಗನಲ್ಲಿ ಒಪ್ಪಿಸಿ ತಪೋವನಕ್ಕೆ ಹೊರಟು ಹೋದನು. ಧರ್ಮವನ್ನು ತಿಳಿದ ಧರ್ಮಗುಪ್ತನು ಧರ್ಮದಿಂದ ರಾಜ್ಯವನ್ನು ಪಾಲಿಸಿದನು. ಅನೇಕ ಯಜ್ಞಗಳಿಂದ ಇಂದ್ರಾದಿದೇವತೆಗಳನ್ನು ಆರಾಧಿಸಿದನು. ಬ್ರಾಹ್ಮಣರಿಗೆ ಬೇಕಾದಷ್ಟು ದಾನ ಮಾಡಿದನು. ಆ ರಾಜನು ರಾಜ್ಯ ಪರಿಪಾಲನೆ ಮಾಡುತ್ತಿರಲು ಎಲ್ಲರೂ ತಮ್ಮ ಧರ್ಮದಲ್ಲಿ ಆಸಕ್ತರಾಗಿದ್ದರು. ಕಳ್ಳರೇ ಮೊದಲಾದವರ ಭಯವೇ ಇರಲಿಲ್ಲ.

ಒಂದು ದಿನದಲ್ಲಿ ಧರ್ಮಗುಪ್ತನು ಶ್ರೇಷ್ಠವಾದ ಕುದುರೆಯ ಮೇಲೆ ಕೂತುಕೊಂಡು ಮೃಗಬೇಟೆಯಾಡುತ್ತಾ ಹೋದನು. ಸಿಂಹ ಹುಲಿಗಳಿಂದ ಭಯಂಕರವಾದ ಒಂದು ಕಾಡಿಗೆ ಹೋದನು. ಆ ಕಾಡಿನಲ್ಲಿ ಸಂಚರಿಸುತ್ತಿರಲು ರಾತ್ರಿಯಾಯಿತು. ರಾಜನು ವಿನಯದಿಂದ ಸಂಧ್ಯಾವಂದನೆಯನ್ನು ಮಾಡಿ ಗಾಯತ್ರೀಜಪವನ್ನು ಮಾಡಿದನು. ತರುವಾಯ ಹುಲಿಸಿಂಹಗಳ ಭಯದಿಂದ ಒಂದು ಮರದ ಮೇಲೆ ಹತ್ತಿಕೂತುಕೊಂಡನು. ಸ್ವಲ್ಪ ಸಮಯದ ಮೇಲೆ ಒಂದು ಕರಡಿಯು ಆ ಮರದ ಬಳಿಗೆ ಬಂದಿತು. ಅದನ್ನು ಅಟ್ಟಿಸಿಕೊಂಡು ಒಂದು ಸಿಂಹವು ಬಂದಿತು. ಆಗ ಕರಡಿಯು ಆ ಮರವನ್ನು ಹತ್ತಿ ಬಂದಿತು. ಕರಡಿಯು ಮೊದಲೇ ಮರವನ್ನು ಹತ್ತಿ ಕೂತಿದ್ದ ಮಹಾಬಲಪರಾಕ್ರಮಶಾಲಿಯಾದ ರಾಜನನ್ನು ನೋಡಿತು. ರಾಜನೊಡನೆ ಕರಡಿಯು 'ರಾಜನೇ! ನೀನು ಭಯಪಡಬೇಡ. ನಾವಿಬ್ಬರೂ ಈ ರಾತ್ರಿಯಲ್ಲಿ ಈ ಮರದಲ್ಲಿಯೇ ವಾಸಮಾಡುವ ಮಹಾಸಾಮರ್ಥ್ಯವುಳ್ಳ ಭಯಂಕರವಾದ ಸಿಂಹವು ಮರದ ಬುಡಕ್ಕೆ ಬಂದಿದೆ. ರಾತ್ರಿಯಲ್ಲಿ ಮೊದಲು ನೀನು ನಿದ್ರೆಯನ್ನು ಮಾಡು. ನಾನು ನಿನ್ನನ್ನು ರಕ್ಷಿಸಿಕೊಂಡಿರುವೆನು. ಆಮೇಲೆ ನಾನು ನಿದ್ರೆಯನ್ನು ಮಾಡುವೆನು. ನೀನು ರಕ್ಷಣೆ ಮಾಡು' ಎಂದು ಹೇಳಿತು. ಈ ಮಾತನ್ನು ಕೇಳಿ ಆ ರಾಜನು ನಿದ್ರೆಯನ್ನು ಮಾಡಲು ಸಿಂಹವು ಕರಡಿಯೊಡನೆ ಮಲಗಿರುವ ರಾಜನನ್ನು ನನಗೆ ಕೊಟ್ಟುಬಿಡು ಎಂದಿತು. ಆದಕ್ಕೆ ಕರಡಿಯು 'ನಿನಗೆ ಧರ್ಮವು ತಿಳಿಯಲಾರದು. ವಿಶ್ವಾಸಘಾತಕರಿಗೆ ಬಹಳ ಕಷ್ಟವೇರ್ಪಡುತ್ತದೆ. ಮಿತ್ರದ್ರೋಹಿಗಳು. ಹತ್ತು ಸಾವಿರ ಯಜ್ಞಗಳನ್ನು ಮಾಡಿದರೂ ಪಾವಿತ್ರ್ಯವುಂಟಾಗಲಾರದು.

1. ಪ.ಸ್ಕಾಂ.

ಬ್ರಹ್ಮಹತ್ಯಾದಿ ಪಾಪಗಳಿಗೆ ಪ್ರಾಯಶ್ಚಿತ್ತವಿದೆ. ಆದರೆ ವಿಶ್ವಾಸಘಾತಕರಿಗೆ ಪ್ರಾಯಶ್ಚಿತ್ತವೇ ಇಲ್ಲ' ಎಂದು ಹೇಳಿತು. ಅದನ್ನು ಕೇಳಿ ಸಿಂಹವು ಸುಮ್ಮನೆಯಾಯಿತು.

ಆಮೇಲೆ ಧರ್ಮಗುಪ್ತನು ಎದ್ದಮೇಲೆ ಆ ಕರಡಿಯು ಮಲಗಿತು. ಆಗ ಸಿಂಹವು ರಾಜನೊಡನೆ ಮಲಗಿರುವ ಕರಡಿಯನ್ನು ನಾನಿದ್ದಲ್ಲಿಗೆ ತಳ್ಳಿಬಿಡು ಎಂದು ಹೇಳಿತು. ರಾಜನು ತನ್ನ ತೊಡೆಯಲ್ಲಿ ತಲೆಯಿಟ್ಟು ಮಲಗಿದ್ದ ಕರಡಿಯನ್ನು ಕೆಳಗೆ ತಳ್ಳಿಬಿಟ್ಟನು. ಕೆಳಗೆ ಬೀಳುತ್ತಿದ್ದ ಆ ಕರಡಿಯು ಬೇಗನೆ ಒಂದು ಕೊಂಬೆಯನ್ನು ಹಿಡಿದುಕೊಂಡಿತು. ಕೆಳಗೆ ಬೀಳಲಿಲ್ಲ. ಅದು ರಾಜನ ಬಳಿಗೆ ಬಂದು 'ನಾನು ಇಚ್ಛಾನುಸಾರವಾಗಿ ರೂಪವನ್ನು ಧರಿಸಲಿಕ್ಕೆ ಬಲ್ಲವನು ಭೃಗುಕುಲದವನು. ನನ್ನ ಹೆಸರು ಧ್ಯಾನಕಾಷ್ಠವೆಂದು ಹೆಸರುಳ್ಳವನು. ನಿರಪರಾಧಿಯಾದ ಮಲಗಿದ್ದ ನನ್ನನ್ನು ಯಾಕೆ ತಳ್ಳಿದಿ? ನನ್ನ ಶಾಪದಿಂದ ನೀನು ಬೇಗನೆ ಹುಚ್ಚನಂತೆ ತಿರುಗುತ್ತಿರು' ಎಂದು ಶಾಪವನ್ನು ಕೊಟ್ಟು, ಸಿಂಹದೊಡನೆ 'ನೀನು ಸಿಂಹನಲ್ಲ. ಪೂರ್ವದಲ್ಲಿ ಕುಬೇರನ ಮಂತ್ರಿಯಾದ ಮಹಾಯಕ್ಷನಾಗಿದ್ದಿ. ನೀನು ಒಂದು ಸಮಯದಲ್ಲಿ ಸ್ತ್ರೀಯರಿಂದ ಸಹಿತವಾಗಿ ತಿಳಿಯದೆ ಗೌತಮರ ಸಮೀಪದಲ್ಲಿ ವಿಹಾರವನ್ನು ಮಾಡಿದೆ. ಗೌತಮರು ದೈವೇಚ್ಛೆಯಿಂದ ಸಮಿಧೆಯನ್ನು ತೆಗೆದುಕೊಳ್ಳುವುದಕ್ಕಾಗಿ ಅಲ್ಲಿಗೆ ಬಂದವರಾಗಿ ವಸ್ತ್ರರಹಿತನಾದ ನಿನ್ನನ್ನು ನೋಡಿ, ನನ್ನ ಆಶ್ರಮದಲ್ಲಿ ನೀನು ವಸ್ತ್ರರಹಿತನಾಗಿ ಇರುವ ಕಾರಣ ಸಿಂಹನಾಗಿ ಹೋಗು ಎಂದು ಶಾಪಕೊಟ್ಟರು. ಹೀಗೆ ಕುಬೇರನ ಮಂತ್ರಿಯಾದ ಭದ್ರ ಎಂಬ ಯಕ್ಷನು ಕುಬೇರನೂ ಅವನ ಭೃತ್ಯರೂ ಧರ್ಮಶೀಲರಷ್ಟೆ! ನೀನು ಮಾತ್ರ ಕಾಡಿನಲ್ಲಿ ಇರುವ ಋಷಿಯಾದ ನನ್ನನ್ನು ಏಕೆ ಸಂಹರಿಸುವೆ? ಇದೆಲ್ಲವನ್ನು ನಾನು ಧ್ಯಾನದೃಷ್ಟಿಯಿಂದ ತಿಳಿದಿರುವೆನು' ಎಂದು ಹೇಳಲು ಆ ಸಿಂಹವು ಸಿಂಹದೇಹವನ್ನು ಬಿಟ್ಟು ದಿವ್ಯವಾದ ಯಕ್ಷರೂಪವನ್ನು ಧರಿಸಿ ಧ್ಯಾನಕಾಷ್ಠನಿಗೆ ಕೈಮುಗಿದು ನಮಸ್ಕರಿಸಿ 'ಈಗ ನನಗೆ ಪೂರ್ವವೃತ್ತಾಂತವು ತಿಳಿಯಿತು. ಗೌತಮರು ನನಗೆ ಶಾಪವನ್ನು ಕೊಡುವಾಗ ಕರಡಿಯ ರೂಪವುಳ್ಳ ಧ್ಯಾನಕಾಷ್ಠನಿಂದ ಸಂವಾದವಾದ ಮೇಲೆ ಸಿಂಹರೂವನ್ನು ಬಿಟ್ಟು ಯಕ್ಷರೂಪವನ್ನು ಹೊಂದಪಿ ಎಂದು ಹೇಳಿದ್ದರು. ಈಗ ನನ್ನ ಸಿಂಹರೂಪವು ನಷ್ಟವಾದ ಕಾರಣ ನೀನೇ ಧ್ಯಾನಕಾಷ್ಠನೆಂದು ತಿಳಿದೆನು' ಎಂದು ಹೇಳಿ ಧ್ಯಾನಕಾಷ್ಠನಿಗೆ ನಮಸ್ಕರಿಸಿ ಆ ಯಕ್ಷರೂಪಿಯು ವಿಮಾನದಲ್ಲಿ ಕೂತುಕೊಂಡು ಅಲಕಾಪಟ್ಟಣಕ್ಕೆ ಹೋದರು. ತರುವಾಯ ಹುಚ್ಚನಾದ ಆ ರಾಜಪುತ್ರನನ್ನು ಮಂತ್ರಿಗಳು ರೇವಾತೀರದಲ್ಲಿ ತಪಸ್ಸು ಮಾಡುತ್ತಿದ್ದ ಅವನ ತಂದೆಯಾದ ನಂದರಾಜನೊಡನೆ ತಿಳಿಸಿದರು. ರಾಜನು

ಮಗನನ್ನು ಕರೆದುಕೊಂಡು ಜೈಮಿನಿಋಷಿಗಳ ಬಳಿಗೆ ಹೋಗಿ ತನ್ನ ಮಗನ ಹುಚ್ಚನ್ನು ತಿಳಿಸಿದನು. ಜೈಮಿನಿಋಷಿಗಳು ಬಹುಹೊತ್ತು ಯೋಚಿಸಿ 'ಧ್ಯಾನಕಾಷ್ಠನೆಂಬ ಯಕ್ಷನ ಶಾಪದಿಂದ ನಿನ್ನ ಮಗನು ಹುಚ್ಚನಾಗಿರುವನು. ಹುಚ್ಚು ಬಿಟ್ಟು ಹೋಗುವ ಉಪಾಯವನ್ನು ಹೇಳುವೆನು. ಸುವರ್ಣಮುಖರೀ ನದಿಯ ತೀರದಲ್ಲಿ ವೆಂಕಟವೆಂಬ ಸರ್ವಪಾಪಪರಿಹಾರಕವಾದ ಪರ್ವತದಲ್ಲಿ ಸ್ವಾಮಿಪುಷ್ಕರಣಿಯೆಂಬ ತೀರ್ಥವಿದೆ. ಅದು ಅತ್ಯಂತ ಪವಿತ್ರವಾದದ್ದು. ಅದರಲ್ಲಿ ನಿನ್ನ ಮಗನನ್ನು ಕರೆದುಕೊಂಡು ಹೋಗಿ ಸ್ನಾನ ಮಾಡಿಸು. ಕೂಡಲೇ ಹುಚ್ಚು ಬಿಟ್ಟು ಹೋಗುವುದು' ಎಂದು ಹೇಳಿದರು. ನಂದರಾಜನು ಜೈಮಿನಿ ಋಷಿಗಳಿಗೆ ನಮಸ್ಕರಿಸಿ ಮಗನನ್ನು ಕರೆದುಕೊಂಡು ಸ್ವಾಮಿ ಪುಷ್ಕರಿಣಿಗೆ ಹೋಗಿ ನಿಯಮದಿಂದ ಸ್ನಾನ ಮಾಡಿಸಿದನು. ಅಲ್ಲಿ ಸ್ನಾನ ಮಾಡುವ ಮಾತ್ರದಿಂದಲೇ ರಾಜಪುತ್ರನ ಹುಚ್ಚು ಬಿಟ್ಟು ಹೋಯಿತು. ನಂದನೂ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿದನು. ಒಂದು ದಿನದಲ್ಲೇ ಇದ್ದು ಮಗನಿಂದ ಸಹಿತನಾಗಿ ಶ್ರೀನಿವಾಸದೇವರ ಸೇವೆಯನ್ನು ಮಾಡಿದನು. ಮಗನೊಡನೆ ಹೇಳಿಕೊಂಡು ತಂದೆಯು ತಪಸ್ಸಿಗೆ ಹೋದನು. ಧರ್ಮಗುಪ್ತನು ಶ್ರೀನಿವಾಸ ದೇವರಿಗೆ ಭಕ್ತಿಯಿಂದ ಬಹಳ ಹಣವನ್ನು ಕೊಟ್ಟನು. ಬ್ರಾಹ್ಮಣರಿಗೆ ಧನಧಾನ್ಯಗಳನ್ನು ಗದ್ದೆಗಳನ್ನು ದಾನಮಾಡಿದನು. ರಾಜ್ಯಕ್ಕೆ ಹೋಗಿ ಮಂತ್ರಿಗಳಿಂದ ಸಹಿತನಾಗಿ ರಾಜ್ಯಭಾರವನ್ನು ಮಾಡಿಕೊಂಡಿದ್ದನು. ಈ ಪ್ರಕಾರವಾಗಿ ಸ್ವಾಮಿಪುಷ್ಕರಿಣಿಯ (ಇದನ್ನು ಸದಾಚಾರ ತರಂಗದ ತೀರ್ಥಕ್ಷೇತ್ರ ಪರಿಚ್ಛೇದದಲ್ಲೂ ಸೇರಿಸಬಹುದು) ಮಹಿಮೆಯಿರುವುದು.



## ಹೇಮಾಂಗರಾಜನ ಕಥೆ [1]

ಪೂರ್ವದಲ್ಲಿ ಇಕ್ಷ್ವಾಕುವಂಶದಲ್ಲಿ ಹೇಮಾಂಗನೆಂಬ ರಾಜನಿದ್ದನು. ಅವನು ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನಾಗಿದ್ದನು. ಭೂಮಿಯಲ್ಲಿ ಎಷ್ಟು ಧೂಳಿಗಳಿವೆಯೋ ಎಷ್ಟು ನೀರಿನ ಬಿಂದುಗಳಿವೆಯೋ ಆಕಾಶದಲ್ಲಿ ಎಷ್ಟು ನಕ್ಷತ್ರಗಳಿವೆಯೋ ಅಷ್ಟು ಗೋದಾನಗಳನ್ನು ಮಾಡಿದ್ದನು. ಅನೇಕ ಯಜ್ಞಗಳನ್ನು ಮಾಡಿದ್ದನು. ಗೋದಾನ ಭೂದಾನ ತಿಲದಾನ ಬಂಗಾರದಾನ ಇತ್ಯಾದಿ ದಾನಗಳಿಂದ ಬ್ರಾಹ್ಮಣರನ್ನು ಸಂತೋಷಪಡಿಸಿದ್ದನು. ಅವನು ಕೊಡದೆ ಇದ್ದ ದಾನವೇ ಇಲ್ಲವೆನ್ನಬಹುದು. ಆದರೆ ಅವನು ನೀರನ್ನು ಮಾತ್ರ ದಾನಮಾಡಿಲ್ಲ. ನೀರು ಎಲ್ಲಾ ಕಡೆಯಲ್ಲಿಯೂ ಸಿಗುವುದು.

ಅದನ್ನು ದಾನಮಾಡುವುದೇನು ಎಂದು ಬಿಟ್ಟಿದ್ದನು. ವಸಿಷ್ಠರು ಅವನಿಗೆ ಜಲದಾನ ಮಾಡುವಂತೆ ಉಪದೇಶ ಮಾಡಿದರು. ಅದಕ್ಕೂ ರಾಜನು 'ನೀರು ಎಲ್ಲಿಯೂ ಸಿಗುವುದು. ಅದಕ್ಕೆ ಬೆಲೆಯೇ ಇಲ್ಲ, ಅದನ್ನು ದಾನಮಾಡಲಾರೆನು. ಸಿಗದೆ ಇರುವ ವಸ್ತುವನ್ನು ದಾನಮಾಡಬೇಕು. ಎಲ್ಲಿಯೂ ಸಿಗುವ ವಸ್ತುವನ್ನು ದಾನಮಾಡಿ ಏನು ಪ್ರಯೋಜನವಿದೆ' ಎಂದು ಕುಯುಕ್ತಿಯಿಂದ ಅವರ ಮಾತನ್ನು ತಿರಸ್ಕರಿಸಿಬಿಟ್ಟನು. ಮತ್ತು ಅವನು ದಾನ ಮಾಡುವಾಗಲೂ ಶ್ರೋತ್ರಿಯರಾದ ಪಂಡಿತರಾದ ಬ್ರಾಹ್ಮಣರಿಗೆ ದಾನಮಾಡುತ್ತಿದ್ದಿಲ್ಲ. ಕೈಕಾಲು ಇಲ್ಲದಿರುವ ದರಿದ್ರರಾದವರನ್ನು ನೋಡಿಯೇ ದಾನ ಮಾಡುವನು. ಪ್ರಸಿದ್ಧರಾದ ಪಂಡಿತರಿಗೆ ಲೋಕದಲ್ಲಿ ಎಲ್ಲರೂ ದಾನ ಮಾಡುವರು. ಅವರಿಗೆ ನಾನೇಕೆ ದಾನಮಾಡಬೇಕು. ಅನಾಥರಿಗೂ ಅವಿದ್ಯಾವಂತರಿಗೂ ದರಿದ್ರರಿಗೂ ಕುಟುಂಬಗಳಿಗೂ ನಾನು ದಾನಮಾಡಬೇಕು. ಅವರನ್ನು ಕೇಳುವವರಿಲ್ಲ' ಎಂದುಕೊಂಡು ಅಪಾತ್ರರಿಗೇನೇ ದಾನ ಮಾಡುತ್ತಿದ್ದನು. ಆ ಮಹಾದೋಷದಿಂದ ಮೂರುಜನ್ಮಗಳಲ್ಲಿ ಮರಕುಟಿಗ ಪಕ್ಷಿಯಾಗಿ ಹುಟ್ಟಿದನು. ಒಂದು ಜನ್ಮದಲ್ಲಿ ಹದ್ದು ಪಕ್ಷಿಯಾದನು. ಏಳು ಜನ್ಮಗಳಲ್ಲಿ ನಾಯಿಯಾದನು. ಆಮೇಲೆ ಮಿಥಿಲಾದೇಶದ ರಾಜನಾದ ಶ್ರುತಕೀರ್ತಿಯ ಮನೆಯಲ್ಲಿ ಒಂದು ಹಲ್ಲಿಯಾಗಿ ಹುಟ್ಟಿದನು. ಮನೆಯ ಬಾಗಿಲ ಮೇಲಿನ ಪ್ರದೇಶದಲ್ಲಿ ಕೀಟಗಳನ್ನು ತಿನ್ನುತ್ತಾ ಇದ್ದನು. ಹೀಗೆಯೇ ಅಲ್ಲಿ ಎಂಬತ್ತೆಂಟು ವರ್ಷ ಇದ್ದನು.

ಒಂದು ದಿನದಲ್ಲಿ ಶ್ರುತಕೀರ್ತಿರಾಜನ ಮನೆಗೆ ಮಧ್ಯಾಹ್ನಕಾಲದಲ್ಲಿ ಶ್ರುತದೇವ ಎಂಬ ಋಷಿಗಳು ಶ್ರಮವುಳ್ಳವರಾಗಿ ಬಂದರು. ಅವರನ್ನು ನೋಡಿ ರಾಜನು ಸಂತೋಷದಿಂದ ಸತ್ಕರಿಸಿ ಅವರ ಕಾಲನ್ನು ತೊಳೆದು ಆ ನೀರನ್ನು ತಲೆಯಮೇಲೆ ಹಾಕಿಕೊಂಡನು. ದೈವೇಚ್ಛೆಯಿಂದ ರಾಜನು ತಲೆಯಮೇಲೆ ನೀರನ್ನು ಹಾಕಿಕೊಳ್ಳು ವಾಗ ಅಲ್ಲಿಯೇ ಮೇಲಿನ ಭಾಗದಲ್ಲಿ ಇದ್ದ ಆ ಹಲ್ಲಿಯ ಮೇಲೆಯೂ ಸ್ವಲ್ಪ ನೀರಿನ ಬಿಂದುಬಿದ್ದಿತು. ಇದರಿಂದ ಆ ಹಲ್ಲಿಗೆ ತನ್ನ ಪೂರ್ವಸ್ಮರಣೆಯು ಬಂದು ತನ್ನನ್ನು ರಕ್ಷಿಸಬೇಕೆಂದು ಕೂಗಿಕೊಂಡಿತು. ಅದು ಕೂಗುವುದನ್ನು ಕೇಳಿ ಶ್ರುತದೇವರು ಆಶ್ಚರ್ಯವುಳ್ಳವರಾಗಿ 'ಹಲ್ಲಿಯೇ! ಯಾಕೆ ಕೂಗುತ್ತಿರುವಿ? ನಿನಗೆ ಆ ಅವಸ್ಥೆಯು ಹೇಗೆ ಬಂದಿತು? ನೀನು ದೇವತೆಯೋ ಗಂಧರ್ವನೋ ರಾಜನೋ? ಯಾರು? ನಿನ್ನನ್ನು ನಾನು ಉದ್ಧಾರಮಾಡುತ್ತೇನೆ' ಎಂದು ಹೇಳಿದರು. ಅದಕ್ಕೆ ಅದು ತನ್ನ ಪೂರ್ವಚರಿತ್ರೆಯನ್ನು ಹೇಳಿಕೊಂಡು 'ಈ ರಾಜನು ನಿಮ್ಮ ಪಾದಜಲವನ್ನು ತಲೆಯಮೇಲೆ ಹಾಕಿಕೊಳ್ಳುವಾಗ ನನ್ನ ಮೇಲೆ ಬಿದ್ದಿತು. ಅದರಿಂದ ನನಗೆ ಪೂರ್ವದ

ಸ್ಮರಣೆಯು ಉಂಟಾಯಿತು. ನನಗೆ ಇನ್ನು ಮುಂದೆ ಇಪ್ಪತ್ತೆಂಟು ಹಲ್ಲಿಯ ಜನ್ಮಗಳು ಬರುವಂತೆ ಕಾಣಿಸುತ್ತದೆ. ನನಗೆ ತುಂಬಾ ಭಯವಾಗುತ್ತದೆ. ನನಗೆ ಹೀಗೆ ಆಗಲಿಕ್ಕೆ ಕಾರಣವು ತಿಳಿಯಲಿಲ್ಲ' ಎಂದು ಹಲ್ಲಿಯು ಹೇಳಿತು.

ಆಗ ಶ್ರುತದೇವರು ಧ್ಯಾನದೃಷ್ಟಿಯಿಂದ ಎಲ್ಲವನ್ನೂ ತಿಳಿದು 'ರಾಜನೇ! ನೀನು ವೇಂಕಟಾಚಲದಲ್ಲಿ ನೀರುದಾನ ಮಾಡಲಿಲ್ಲ. ನೀರಿಗೆ ಬೆಲೆಯಿಲ್ಲ. ಸರ್ವಸ್ಥಳದಲ್ಲಿ ಸಿಗುತ್ತದೆ ಎಂದುಕೊಂಡು ಬೇಸಿಗೆ ಕಾಲದಲ್ಲಿಯೂ ದಾರಿಯಲ್ಲಿ ಶ್ರಮಪಟ್ಟು ಬಂದ ಬ್ರಾಹ್ಮಣರಿಗೂ ನೀರು ಕೊಡಲಿಲ್ಲ. ಮತ್ತು ಸತ್ಪಾತ್ರರನ್ನು ಅಪಾತ್ರರಿಗೆ ದಾನಮಾಡಿರುವಿ. ಉರಿಯುವ ಬೆಂಕಿಯನ್ನು ಬಿಟ್ಟು ಬೂದಿಯಲ್ಲಿ ಹೋಮ ಮಾಡುವುದೇ? ತುಳಸಿಗೆ ಪೂಜೆಯನ್ನು ಮಾಡುವುದನ್ನು ಬಿಟ್ಟು ಬದನೆಕಾಯಿಯ ಗಿಡಕ್ಕೆ ಪೂಜಿಸುವುದುಂಟೆ? ಹಾಗೆಯೇ ಸತ್ಪಾತ್ರರನ್ನು ಬಿಟ್ಟು ಅಪಾತ್ರರಿಗೆ ದಾನಮಾಡಬಾರದು. ಅನಾಥರು ಕೈಕಾಲು ಇಲ್ಲದವರು ದರಿದ್ರರೂ ಇವರೆಲ್ಲರೂ ದಯೆಗೆ ಪಾತ್ರರು. ಅಲ್ಲದೆ ದಾನಕ್ಕೆ ಪಾತ್ರರಲ್ಲ. ತಪಸ್ವಿಗಳಾದ ಶ್ರೋತ್ರಿಯರಾದ ಪಂಡಿತರಾದ ಬ್ರಾಹ್ಮಣರೇ ದಾನಕ್ಕೆ ಪಾತ್ರರು. ಅವರು ಸರ್ವದಾ ಪೂಜಿಸಬೇಕು. ಅಪಾತ್ರರನ್ನು ಪೂಜಿಸಬಾರದು. ಜ್ಞಾನಿಗಳೇ ಭಗವಂತನಿಗೆ ಪ್ರಿಯರಾದವರು. ಆದುದರಿಂದ ಜ್ಞಾನಿಯು ಅತ್ಯಂತ ಪೂಜ್ಯನು. ನೀನು ನೀರುದಾನವನ್ನು ಮಾಡಲಿಲ್ಲ. ಸಜ್ಜನರನ್ನು ಸೇವಿಸಲಿಲ್ಲ. ಅದರಿಂದ ನಿನಗೆ ಈ ದುರ್ಗುತಿಯು ಉಂಟಾಯಿತು. ನಿನಗೆ ನಾನು ವೇಂಕಟಾಚಲದಲ್ಲಿ ಮಾಡಿದ ಪುಣ್ಯವನ್ನು ಕೊಡುತ್ತೇನೆ' ಎಂದು ಹೇಳಿ ಆಚಮನಮಾಡಿ ವೇಂಕಟಾಚಲದಲ್ಲಿ ಒಂದುದಿನ ಸ್ನಾನಮಾಡಿದ ಮತ್ತು ಬ್ರಾಹ್ಮಣನಿಗೆ ನೀರು ದಾನಮಾಡಿದ ಪುಣ್ಯವನ್ನು ಅವನಿಗೆ ಕೊಟ್ಟರು. ಇದರಿಂದ ಹಲ್ಲಿಯು ಪಾಪರಹಿತವಾಗಿ ಹಲ್ಲಿಯ ದೇಹವನ್ನು ಬಿಟ್ಟು ದಿವ್ಯರೂಪಧರಿಸಿಕೊಂಡು ದಿವ್ಯವಿಮಾನದಲ್ಲಿ ಕೂತುಕೊಂಡು ಎಲ್ಲರೂ ಮಿಥಿಲೆಯ ರಾಜನೂ ನೋಡುವಂತೆ ಶ್ರುತದೇವರಿಗೆ ಕೈಮುಗಿದು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ದೇವತೆಗಳಿಂದ ಸ್ತೋತ್ರ ಮಾಡಲ್ಪಡುತ್ತಾ ಸ್ವರ್ಗಲೋಕಕ್ಕೆ ಹೋದನು. ಅಲ್ಲಿ ಹತ್ತು ಸಾವಿರ ವರ್ಷ ದಿವ್ಯಭೋಗಗಳನ್ನು ಅನುಭವಿಸಿ ಅವನೇ ಇಕ್ಷ್ವಾಕುವಂಶದಲ್ಲಿ ಕಕುಸ್ಥ ಎಂಬ ರಾಜನಾಗಿ ಹುಟ್ಟಿದನು. ವಸಿಷ್ಠರಿಂದ ಉಪದೇಶವನ್ನು ಪಡೆಯುವವನಾಗಿ ಸರ್ವಧರ್ಮಗಳನ್ನು ಅನುಷ್ಠಾನ ಮಾಡಿ ಸರ್ವಪಾಪಗಳನ್ನು ಕಳೆದುಕೊಂಡು ಕೊನೆಗೆ ಭಗವಂತನ ಸಾಯುಜ್ಯ ಮೋಕ್ಷವನ್ನು ಹೊಂದಿದನು.



ಅದನ್ನು ದಾನಮಾಡುವುದೇನು ಎಂದು ಬಿಟ್ಟಿದ್ದನು. ವಸಿಷ್ಠರು ಅವನಿಗೆ ಜಲದಾನ ಮಾಡುವಂತೆ ಉಪದೇಶ ಮಾಡಿದರು. ಅದಕ್ಕೂ ರಾಜನು 'ನೀರು ಎಲ್ಲಿಯೂ ಸಿಗುವುದು. ಅದಕ್ಕೆ ಬೆಲೆಯೇ ಇಲ್ಲ, ಅದನ್ನು ದಾನಮಾಡಲಾರೆನು. ಸಿಗದೆ ಇರುವ ವಸ್ತುವನ್ನು ದಾನಮಾಡಬೇಕು. ಎಲ್ಲಿಯೂ ಸಿಗುವ ವಸ್ತುವನ್ನು ದಾನಮಾಡಿ ಏನು ಪ್ರಯೋಜನವಿದೆ' ಎಂದು ಕುಯುಕ್ತಿಯಿಂದ ಅವರ ಮಾತನ್ನು ತಿರಸ್ಕರಿಸಿಬಿಟ್ಟನು. ಮತ್ತು ಅವನು ದಾನ ಮಾಡುವಾಗಲೂ ಶ್ರೋತ್ರಿಯರಾದ ಪಂಡಿತರಾದ ಬ್ರಾಹ್ಮಣರಿಗೆ ದಾನಮಾಡುತ್ತಿದ್ದಿಲ್ಲ. ಕೈಕಾಲು ಇಲ್ಲದಿರುವ ದರಿದ್ರರಾದವರನ್ನು ನೋಡಿಯೇ ದಾನ ಮಾಡುವನು. ಪ್ರಸಿದ್ಧರಾದ ಪಂಡಿತರಿಗೆ ಲೋಕದಲ್ಲಿ ಎಲ್ಲರೂ ದಾನ ಮಾಡುವರು. ಅವರಿಗೆ ನಾನೇಕೆ ದಾನಮಾಡಬೇಕು. ಅನಾಥರಿಗೂ ಅವಿದ್ಯಾವಂತರಿಗೂ ದರಿದ್ರರಿಗೂ ಕುಟುಂಬಗಳಿಗೂ ನಾನು ದಾನಮಾಡಬೇಕು. ಅವರನ್ನು ಕೇಳುವವರಿಲ್ಲ' ಎಂದುಕೊಂಡು ಅಪಾತ್ರರಿಗೇನೇ ದಾನ ಮಾಡುತ್ತಿದ್ದನು. ಆ ಮಹಾದೋಷದಿಂದ ಮೂರುಜನ್ಮಗಳಲ್ಲಿ ಮರಕುಟಿಗ ಪಕ್ಷಿಯಾಗಿ ಹುಟ್ಟಿದನು. ಒಂದು ಜನ್ಮದಲ್ಲಿ ಹದ್ದು ಪಕ್ಷಿಯಾದನು. ಏಳು ಜನ್ಮಗಳಲ್ಲಿ ನಾಯಿಯಾದನು. ಆಮೇಲೆ ಮಿಥಿಲಾದೇಶದ ರಾಜನಾದ ಶ್ರುತಕೀರ್ತಿಯ ಮನೆಯಲ್ಲಿ ಒಂದು ಹಲ್ಲಿಯಾಗಿ ಹುಟ್ಟಿದನು. ಮನೆಯ ಬಾಗಿಲ ಮೇಲಿನ ಪ್ರದೇಶದಲ್ಲಿ ಕೀಟಗಳನ್ನು ತಿನ್ನುತ್ತಾ ಇದ್ದನು. ಹೀಗೆಯೇ ಅಲ್ಲಿ ಎಂಬತ್ತೆಂಟು ವರ್ಷ ಇದ್ದನು.

ಒಂದು ದಿನದಲ್ಲಿ ಶ್ರುತಕೀರ್ತಿರಾಜನ ಮನೆಗೆ ಮಧ್ಯಾಹ್ನಕಾಲದಲ್ಲಿ ಶ್ರುತದೇವ ಎಂಬ ಋಷಿಗಳು ಶ್ರಮವುಳ್ಳವರಾಗಿ ಬಂದರು. ಅವರನ್ನು ನೋಡಿ ರಾಜನು ಸಂತೋಷದಿಂದ ಸತ್ಕರಿಸಿ ಅವರ ಕಾಲನ್ನು ತೊಳೆದು ಆ ನೀರನ್ನು ತಲೆಯಮೇಲೆ ಹಾಕಿಕೊಂಡನು. ದೈವೇಚ್ಛೆಯಿಂದ ರಾಜನು ತಲೆಯಮೇಲೆ ನೀರನ್ನು ಹಾಕಿಕೊಳ್ಳು ವಾಗ ಅಲ್ಲಿಯೇ ಮೇಲಿನ ಭಾಗದಲ್ಲಿ ಇದ್ದ ಆ ಹಲ್ಲಿಯ ಮೇಲೆಯೂ ಸ್ವಲ್ಪ ನೀರಿನ ಬಂದುಬಿದ್ದಿತು. ಇದರಿಂದ ಆ ಹಲ್ಲಿಗೆ ತನ್ನ ಪೂರ್ವಸ್ಮರಣೆಯು ಬಂದು ತನ್ನನ್ನು ರಕ್ಷಿಸಬೇಕೆಂದು ಕೂಗಿಕೊಂಡಿತು. ಅದು ಕೂಗುವುದನ್ನು ಕೇಳಿ ಶ್ರುತದೇವರು ಆಶ್ಚರ್ಯವುಳ್ಳವರಾಗಿ 'ಹಲ್ಲಿಯೇ! ಯಾಕೆ ಕೂಗುತ್ತಿರುವಿ? ನಿನಗೆ ಆ ಅವಸ್ಥೆಯು ಹೇಗೆ ಬಂದಿತು? ನೀನು ದೇವತೆಯೋ ಗಂಧರ್ವನೋ ರಾಜನೋ? ಯಾರು? ನಿನ್ನನ್ನು ನಾನು ಉದ್ಧಾರಮಾಡುತ್ತೇನೆ' ಎಂದು ಹೇಳಿದರು. ಅದಕ್ಕೆ ಅದು ತನ್ನ ಪೂರ್ವಚರಿತ್ರೆಯನ್ನು ಹೇಳಿಕೊಂಡು 'ಈ ರಾಜನು ನಿಮ್ಮ ಪಾದಜಲವನ್ನು ತಲೆಯಮೇಲೆ ಹಾಕಿಕೊಳ್ಳುವಾಗ ನನ್ನ ಮೇಲೆ ಬಿದ್ದಿತು. ಅದರಿಂದ ನನಗೆ ಪೂರ್ವದ

ಸ್ಮರಣೆಯು ಉಂಟಾಯಿತು. ನನಗೆ ಇನ್ನು ಮುಂದೆ ಇಪ್ಪತ್ತೆಂಟು ಹಲ್ಲಿಯ ಜನ್ಮಗಳು ಬರುವಂತೆ ಕಾಣಿಸುತ್ತದೆ. ನನಗೆ ತುಂಬಾ ಭಯವಾಗುತ್ತದೆ. ನನಗೆ ಹೀಗೆ ಆಗಲಿಕ್ಕೆ ಕಾರಣವು ತಿಳಿಯಲಿಲ್ಲ' ಎಂದು ಹಲ್ಲಿಯು ಹೇಳಿತು.

ಆಗ ಶ್ರುತದೇವರು ಧ್ಯಾನದೃಷ್ಟಿಯಿಂದ ಎಲ್ಲವನ್ನೂ ತಿಳಿದು 'ರಾಜನೇ! ನೀನು ವೇಂಕಟಾಚಲದಲ್ಲಿ ನೀರುದಾನ ಮಾಡಲಿಲ್ಲ. ನೀರಿಗೆ ಬೆಲೆಯಿಲ್ಲ, ಸರ್ವಸ್ಥಳದಲ್ಲಿ ಸಿಗುತ್ತದೆ ಎಂದುಕೊಂಡು ಬೇಸಿಗೆ ಕಾಲದಲ್ಲಿಯೂ ದಾರಿಯಲ್ಲಿ ಶ್ರಮಪಟ್ಟು ಬಂದ ಬ್ರಾಹ್ಮಣರಿಗೂ ನೀರು ಕೊಡಲಿಲ್ಲ, ಮತ್ತು ಸತ್ಪಾತ್ರರನ್ನು ಅಪಾತ್ರರಿಗೆ ದಾನಮಾಡಿರುವಿ. ಉರಿಯುವ ಬೆಂಕಿಯನ್ನು ಬಿಟ್ಟು ಬೂದಿಯಲ್ಲಿ ಹೋಮ ಮಾಡುವುದೇ? ತುಳಸಿಗೆ ಪೂಜೆಯನ್ನು ಮಾಡುವುದನ್ನು ಬಿಟ್ಟು ಬದನೆಕಾಯಿಯ ಗಿಡಕ್ಕೆ ಪೂಜಿಸುವುದುಂಟೆ? ಹಾಗೆಯೇ ಸತ್ಪಾತ್ರರನ್ನು ಬಿಟ್ಟು ಅಪಾತ್ರರಿಗೆ ದಾನಮಾಡಬಾರದು. ಅನಾಥರು ಕೈಕಾಲು ಇಲ್ಲದವರು ದರಿದ್ರರೂ ಇವರೆಲ್ಲರೂ ದಯೆಗೆ ಪಾತ್ರರು. ಅಲ್ಲದೆ ದಾನಕ್ಕೆ ಪಾತ್ರರಲ್ಲ, ತಪಸ್ವಿಗಳಾದ ಶ್ರೋತ್ರಿಯರಾದ ಪಂಡಿತರಾದ ಬ್ರಾಹ್ಮಣರೇ ದಾನಕ್ಕೆ ಪಾತ್ರರು. ಅವರು ಸರ್ವದಾ ಪೂಜಿಸಬೇಕು. ಅಪಾತ್ರರನ್ನು ಪೂಜಿಸಬಾರದು. ಜ್ಞಾನಿಗಳೇ ಭಗವಂತನಿಗೆ ಪ್ರಿಯರಾದವರು. ಆದುದರಿಂದ ಜ್ಞಾನಿಯು ಅತ್ಯಂತ ಪೂಜ್ಯನು. ನೀನು ನೀರುದಾನವನ್ನು ಮಾಡಲಿಲ್ಲ. ಸಜ್ಜನರನ್ನು ಸೇವಿಸಲಿಲ್ಲ. ಆದರಿಂದ ನಿನಗೆ ಈ ದುರ್ಗತಿಯು ಉಂಟಾಯಿತು. ನಿನಗೆ ನಾನು ವೇಂಕಟಾಚಲದಲ್ಲಿ ಮಾಡಿದ ಪುಣ್ಯವನ್ನು ಕೊಡುತ್ತೇನೆ' ಎಂದು ಹೇಳಿ ಆಚಮನಮಾಡಿ ವೇಂಕಟಾಚಲದಲ್ಲಿ ಒಂದುದಿನ ಸ್ನಾನಮಾಡಿದ ಮತ್ತು ಬ್ರಾಹ್ಮಣನಿಗೆ ನೀರು ದಾನಮಾಡಿದ ಪುಣ್ಯವನ್ನು ಅವನಿಗೆ ಕೊಟ್ಟರು. ಇದರಿಂದ ಹಲ್ಲಿಯು ಪಾಪರಹಿತವಾಗಿ ಹಲ್ಲಿಯ ದೇಹವನ್ನು ಬಿಟ್ಟು ದಿವ್ಯರೂಪಧರಿಸಿಕೊಂಡು ದಿವ್ಯವಿಮಾನದಲ್ಲಿ ಕೂತುಕೊಂಡು ಎಲ್ಲರೂ ಮಿಥಿಲೆಯ ರಾಜನೂ ನೋಡುವಂತೆ ಶ್ರುತದೇವರಿಗೆ ಕೈಮುಗಿದು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ದೇವತೆಗಳಿಂದ ಸ್ತೋತ್ರ ಮಾಡಲ್ಪಡುತ್ತಾ ಸ್ವರ್ಗಲೋಕಕ್ಕೆ ಹೋದನು. ಅಲ್ಲಿ ಹತ್ತು ಸಾವಿರ ವರ್ಷ ದಿವ್ಯಭೋಗಗಳನ್ನು ಅನುಭವಿಸಿ ಅವನೇ ಇಕ್ಷ್ವಾಕುವಂಶದಲ್ಲಿ ಕಕುಸ್ಥ ಎಂಬ ರಾಜನಾಗಿ ಹುಟ್ಟಿದನು. ವಸಿಷ್ಠರಿಂದ ಉಪದೇಶವನ್ನು ಪಡೆಯುವವನಾಗಿ ಸರ್ವಧರ್ಮಗಳನ್ನು ಅನುಷ್ಠಾನ ಮಾಡಿ ಸರ್ವಪಾಪಗಳನ್ನು ಕಳೆದುಕೊಂಡು ಕೊನೆಗೆ ಭಗವಂತನ ಸಾಯುಜ್ಯ ಮೋಕ್ಷವನ್ನು ಹೊಂದಿದನು.



# ಶಂಖಣರಾಜನ ಕಥೆ [1]

ಸಾಂಕಾಶ್ಯ ಎಂಬ ದೇಶದಲ್ಲಿ ಚಂದ್ರವಂಶದಲ್ಲಿ ಹುಟ್ಟಿದ ಶಂಖಣ ಎಂದು ಹೆಸರುಳ್ಳ ರಾಜನಿದ್ದನು. ಅವನು ಅನೇಕ ದೇಶಗಳಿಂದ ಸಹಿತವಾದ ಪರಂಪರಾಪ್ರಾಪ್ತವಾದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಒಂದು ದಿವಸದಲ್ಲಿ ಆ ರಾಜನು ಪೂರ್ವಕರ್ಮದಿಂದ ಸುತ್ತಲಿನ ಚಿಕ್ಕ ರಾಜರಿಂದ ಸೋತುಹೋದನು. ರಾಜ್ಯವನ್ನು ಕಳೆದುಕೊಂಡು ಪತ್ನಿಯಿಂದಲೂ ಮಂತ್ರಿಗಳಿಂದಲೂ ಕೂಡಿಕೊಂಡು ಅಲ್ಲಿಂದ ಹೊರಟು ದಕ್ಷಿಣದಿಕ್ಕಿಗೆ ಹೋಗಿ ರಾಮೇಶ್ವರಕ್ಕೆ ಹೋದನು. ರಾಮಸೇತುವೆಯಲ್ಲಿ ಸ್ನಾನಮಾಡಿ ಮೆಲ್ಲನೆ ಸುವರ್ಣಮುಖರೀನದಿಗೆ ಬಂದನು. ಅಲ್ಲಿ ಸ್ನಾನ ಮಾಡಿ ಅಲ್ಲಿಂದ ಉತ್ತರದಲ್ಲಿರುವ ಪದ್ಮಸರೋವರಕ್ಕೆ ಹೋಗಿ ಅಲ್ಲಿ ಸ್ನಾನವನ್ನು ಮಾಡಿದನು. ನಿತ್ಯವೂ ವಿಧಿಪ್ರಕಾರವಾಗಿ ಸ್ನಾನಮಾಡುತ್ತಾ ಇದ್ದನು. 'ನನಗೆ ರಾಜ್ಯದ ಭ್ರಂಶವಾಯಿತು. ನನ್ನ ಸ್ವಾಮಿತ್ವವು ಶತ್ರುಗಳಿಂದ ಅಪಹೃತವಾಯಿತು. ಪರಾಧೀನತ್ವವು ಮರಣಕ್ಕಿಂತಲೂ ಅಧಿಕ ದುಃಖ ಕಾರಣವಾದದ್ದು. ನಾನು ಹೇಗೆ ಬದುಕಲಿ? ಎಲ್ಲಿಗೆ ಹೋಗಲಿ? ಏನು ಗತಿಯು' ಈರೀತಿಯಾಗಿ ದುಃಖಿಸುತ್ತಾ ನಿದ್ರಿಸಿದನು. ಆಮೇಲೆ ಅವನಿಗೆ 'ನೀನು ದುಃಖಿಸಬೇಡ. ಧೈರ್ಯವನ್ನು ತಂದುಕೊ. ಇಲ್ಲಿಂದ ಉತ್ತರದಿಕ್ಕಿನಲ್ಲಿ ವೇಂಕಟಾಚಲವೆಂದು ಪ್ರಸಿದ್ಧರಾದ ಪರ್ವತವಿದೆ. ಸರ್ವರಿಗೂ ಅಭೀಷ್ಟಪ್ರದವಾದದ್ದು. ಅಲ್ಲಿ ಪ್ರಸಿದ್ಧವಾದ ಸ್ವಾಮಿ ಪುಷ್ಕರಿಣಿಯೆಂಬ ಸರೋವರವಿದೆ. ಅದರ ಪಶ್ಚಿಮದಿಕ್ಕಿನಲ್ಲಿ ದೊಡ್ಡ ಹುತ್ತವಿದೆ. ನೀನು ಎದ್ದು ಅಲ್ಲಿಗೆ ಹೋಗು. ಸ್ವಾಮಿ ಪುಷ್ಕರಿಣಿಯ ತೀರದಲ್ಲಿಯೇ ಗುಡಿಸಲನ್ನು ಮಾಡಿಕೊಂಡಿರು. ಅಲ್ಲಿ ಇದ್ದುಕೊಂಡು ಮೂರು ಸಂಧ್ಯಾಕಾಲದಲ್ಲಿಯೂ ಸ್ನಾನಮಾಡು. ಶ್ರೀನಿವಾಸ ದೇವರನ್ನು ಪೂಜಿಸುತ್ತಾ ಇರು. ಹೀಗೆ ಆರು ತಿಂಗಳು ಅಲ್ಲಿ ವಾಸಿಸುತ್ತಾ ಇರು. ನಿನ್ನ ಸ್ವಾಮಿತ್ವವು ನಿನಗೇ ಬಂದು ಸೇರುವುದು'ಎಂದು ಅಶರೀರವಾಣಿಯು ಕೇಳಿಸಿತು. ಶಂಖಣರಾಜನು ಅಶರೀರವಾಣಿಯನ್ನು ಕೇಳಿ ಶೋಕರಹಿತನಾಗಿ ಸಂತೋಷವುಳ್ಳವನಾಗಿ ವೇಂಕಟಾಚಲಕ್ಕೆ ಹತ್ತಿಹೋದನು. ಅಲ್ಲಿ ಸ್ವಾಮಿಪುಷ್ಕರಿಣಿಯನ್ನು ಹುಡುಕಿದನು. ಅದನ್ನು ಕಂಡುಹಿಡಿದನು. ನೋಡಿ ಸಂತೋಷಪಟ್ಟನು. ಅದರ ತೀರದಲ್ಲಿಯೇ ಗುಡಿಸಲನ್ನು ಕಟ್ಟಿಕೊಂಡು ಮೂರು ಹೊತ್ತು ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನಮಾಡುತ್ತಾ ಶ್ರೀನಿವಾಸದೇವರನ್ನು ಪೂಜಿಸುತ್ತಾ ಆರುತಿಂಗಳು ಇದ್ದನು.

---

1. ವಾರಾಹ ಪು.

ತರುವಾಯ ಒಂದು ದಿವಸದಲ್ಲಿ ಅನೇಕ ಸೂರ್ಯರಂತೆ ಪ್ರಕಾಶಿಸುವ ಹತ್ತು ದಿಕ್ಕುಗಳನ್ನು ಶೋಭಿಸುವ ದಿವ್ಯವಿಮಾನವು ಮೇಲಕ್ಕೆ ಬಂದಿತು. ಆ ವಿಮಾನದಲ್ಲಿ ಶಂಖಚಕ್ರಗದಾಧಾರಿಯಾದ ಶ್ರೀಭೂಮಿಯರಿಂದ ಸಹಿತರಾದ ಶ್ರೀನಿವಾಸದೇವರು ಇದ್ದರು. ಅಲ್ಲಿಗೆ ಬ್ರಹ್ಮಾದಿದೇವತೆಗಳೂ ಋಷಿಗಳೂ ಸಿದ್ಧರೂ ಕಿನ್ನರರೂ ಕಿಂಪುರುಷರೂ ಎಲ್ಲರೂ ಬಂದರು. ಆಕಾಶದಲ್ಲಿ ವಾದ್ಯಘೋಷಗಳು ಕೇಳಿದವು. ಗಾಯನವೂ ನರ್ತನವೂ ನಡೆಯಿತು. ಎಲ್ಲಾ ದೇವತೆಗಳೂ ಸ್ತೋತ್ರ ಮಾಡಿದರು. ಆಗ ಶಂಖಣರಾಜನು ಸಂಭ್ರಮದಿಂದ ಎದ್ದು ನಮಸ್ಕರಿಸಿ ಶ್ರೀನಿವಾಸದೇವರನ್ನು ಸ್ತೋತ್ರ ಮಾಡಿ ವಿಜ್ಞಾಪನ ಮಾಡಿಕೊಂಡನು. 'ಭಗವಂತನೇ! ನಾನು ರಾಜ್ಯಭ್ರಷ್ಟನಾಗಿದ್ದೇನೆ. ನನ್ನನ್ನು ರಕ್ಷಿಸಬೇಕು. ನಿನ್ನ ಅನುಗ್ರಹದಿಂದ ನಿನ್ನ ದರ್ಶನವು ನನಗಾಯಿತು' ಎಂದು ಹೇಳಿಕೊಂಡನು.

ಆಗ ಶ್ರೀನಿವಾಸದೇವರು 'ನೀನು ದುಃಖವನ್ನು ಹೊಂದಬೇಡ. ನಿನಗೆ ಸ್ವಾಮಿತ್ವವನ್ನು ಕೊಟ್ಟಿರುತ್ತೇನೆ. ನಿನಗೆ ಸ್ವಾಮಿ ಪುಷ್ಕರಿಣೀ ಜಲದಲ್ಲಿ ಮಹಾ ಭಕ್ತಿಯಿರುವ ಕಾರಣವು ನಿನಗೆ ಪುನಃ ಸ್ವಾಮಿತ್ವವು ಬರುವುದು. ಇನ್ನೂ ಯಾರು ಈ ಸ್ವಾಮಿಪುಷ್ಕರಿಣಿಗೆ ಬಂದು ಸ್ನಾನಮಾಡುವರೋ ಅವರೂ ಸ್ವಾಮಿತ್ವವನ್ನು ಹೊಂದುವರು. ನೀನು ಹೋಗಿ ರಾಜ್ಯಭಾರವನ್ನು ಮಾಡು' ಎಂದು ಹೇಳಿ ಅಂತರ್ಧಾನವನ್ನು ಹೊಂದಿದರು. ಆ ಸರೋವರಕ್ಕೆ ಸ್ವಾಮಿ ಪುಷ್ಕರಿಣೀ ಎಂಬ ಹೆಸರು ರೂಢಿಯಿಂದ ಇತ್ತು. ಅದು ತೀರ್ಥಗಳಿಗೆ ಸ್ವಾಮಿಯಾದ ಕಾರಣ ಸ್ವಾಮಿ ಪುಷ್ಕರಿಣಿಯೆಂದು ಪೂರ್ವಿಕರು ಹೇಳಿದರು. ಈಗ ಸ್ವಾಮಿತ್ವಕ್ಕೆ ಕಾರಣವಾದ ಪ್ರಯುಕ್ತ ಸ್ವಾಮಿ ಪುಷ್ಕರಿಣಿಯೆಂದು ದೇವರು ಹೇಳಿದರು. ಈ ಪುಷ್ಕರಿಣಿಯು ಪರಮಶ್ರೇಷ್ಠವಾದದ್ದು. ಈ ದೇಶದಲ್ಲಿ ವಾಸಿಸುವವರು ಪರಮಧನ್ಯರು ಎಂದು ಹೇಳುತ್ತಾ ದೇವತೆಗಳೆಲ್ಲರೂ ಹೊರಟುಹೋದರು. ಶಂಖಣರಾಜನೂ ಪತ್ನೀಸಹಿತನಾಗಿ ಸಂತೋಷದಿಂದ ಬೆಟ್ಟದಿಂದ ಕೆಳಗೆ ಇಳಿದು ತನ್ನ ರಾಜ್ಯಕ್ಕೆ ಹೋದನು. ಅವನ ರಾಜ್ಯವನ್ನು ಅಪಹರಿಸಿದವರೆಲ್ಲರೂ ತಾವೇ ಪರಸ್ಪರ ಜಗಳಾಡಿಕೊಂಡು ಕ್ಷೀಣರಾದರು. ಕೊನೆಗೆ ನಮಗೊಬ್ಬರಿಗೂ ಈ ರಾಜ್ಯವು ಬೇಡ. ಅವನಿಗೇ ಇರಲಿ ಎಂದು ನಿಶ್ಚಯಿಸಿ ಆ ರಾಜರು ಜನರನ್ನು ಕಳುಹಿಸಿದರು. ಆ ಜನರು ಗೋದಾವರೀ ತೀರದಲ್ಲಿ ಆ ಶಂಖಣನನ್ನು ನೋಡಿದರು. 'ರಾಜರೆಲ್ಲರೂ ಸೇರಿ ನಿಮ್ಮ ರಾಜ್ಯವನ್ನು ನಿಮಗೇ ಬಿಟ್ಟಿದ್ದಾರೆ. ನೀವೇ ಅನುಭವಿಸಬೇಕು' ಎಂದರು. ಹಾಗೆಯೇ ಶಂಖಣರಾಜನು ತನ್ನ ರಾಜ್ಯಕ್ಕೆ ಹೋದನು. ಎಲ್ಲಾ ರಾಜರೂ ಅವನನ್ನು

ಸಿಂಹಾಸನದಲ್ಲಿ ಕೂತುಕೊಳ್ಳಿಸಿ ಪಟ್ಟಾಭಿಷೇಕ ಮಾಡಿದರು. ಈರೀತಿಯಾಗಿ ಶಂಖಣರಾಜನು ಶ್ರೀನಿವಾಸದೇವರ ಅನುಗ್ರಹದಿಂದ ಪುನಃ ರಾಜ್ಯವನ್ನು ಹೊಂದಿ ರಾಜ್ಯಭಾರವನ್ನು ಮಾಡುತ್ತಿದ್ದನು.

(ಸ್ವಾಮಿ ಪುಷ್ಕರಿಣೀತೀರ್ಥ ಮಹಿಮೆ ಸದಾಚಾರ ತರಂದಲ್ಲೂ ಇದನ್ನು ಸೇರಿಸುವುದು.)



## ವಜ್ರನಾಭನ ವಧೆಯು [1]

ಮೇರುಪರ್ವತ ಪ್ರದೇಶದಲ್ಲಿ ವಜ್ರನಾಭನೆಂಬ ಅಸುರನು ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡುತ್ತಿದ್ದನು. ಬ್ರಹ್ಮದೇವರು ಪ್ರತ್ಯಕ್ಷವಾಗಿ ಅವನೊಡನೆ ಬೇಕಾದ ವರವನ್ನು ಕೇಳುವಂತೆ ಹೇಳಿದರು. ಆಗ ಅಸುರನು ಸಮಸ್ತದೇವತೆಗಳಿಂದ ಅವಧ್ಯತ್ವವನ್ನು ವಜ್ರಪುರವೆಂಬ ಸರ್ವರತ್ನಮಯಾದ ಪುರವು ತನಗೆ ಬೇಕೆಂದೂ ಅಲ್ಲಿ ವಾಯುವೂ ಕೂಡ ತನ್ನ ಇಚ್ಛಾನುಸಾರವಾಗಿ ಪ್ರವೇಶಿಸಬಾರದೆಂದೂ ಅಲ್ಲಿ ತನಗೆ ಬೇಕಾದ ಅಭೀಷ್ಟಗಳು ಉಂಟಾಗುವಂತೆಯೂ ವಜ್ರಪುರದ ಸುತ್ತಲೂ ಶಾಖಾನಗರಗಳೆಂದು ನಗರಗಳು ಇರಬೇಕೆಂದೂ ಪ್ರಾಕಾರವಿರಬೇಕೆಂದೂ ವರವನ್ನು ಕೇಳಿಕೊಂಡನು. ಹಾಗೆಯೇ ಬ್ರಹ್ಮದೇವರ ವರದಿಂದ ಎಲ್ಲವೂ ಆಯಿತು. ವಜ್ರನಾಭನು ವಜ್ರನಗರದಲ್ಲಿ ವಾಸಮಾಡಿದನು. ವರವನ್ನು ಪಡೆದಿರುವ ಆ ಅಸುರನನ್ನು ಆಶ್ರಯಿಸಿಕೊಂಡು ಅನೇಕ ಕೋಟಿ ರಾಕ್ಷಸರು ಆ ನಗರಕ್ಕೆ ಬಂದು ವಾಸಮಾಡಿದರು. ಮನೋಹರಗಳಾದ ಶಾಖಾನಗರದಲ್ಲಿಯೂ ಅನೇಕರು ವಾಸಮಾಡಿದರು.

ತರುವಾಯ ದುಷ್ಟನಾದ ವಜ್ರನಾಭನು ಬ್ರಹ್ಮದೇವರ ವರದಿಂದ ಅಹಂಕಾರವುಳ್ಳವನಾಗಿ ಜಗತ್ತಿಗೆಲ್ಲಾ ಉಪದ್ರವನ್ನು ಕೊಡಲು ಆರಂಭಿಸಿದನು. ಇಂದ್ರದೇವರ ಬಳಿಗೆ ಹೋಗಿ 'ನಾನು ಮೂರುಲೋಕವನ್ನು ಆಳಲಿಕ್ಕೆ ಇಚ್ಛಿಸುತ್ತೇನೆ. ಅಥವಾ ನೀನು ನನ್ನ ಹತ್ತಿರ ಯುದ್ಧವನ್ನು ಮಾಡು. ಈ ಜಗತ್ತು ಎಲ್ಲಾ ಕಶ್ಯಪಪುತ್ರರಿಗೂ ಸೇರಿದ್ದು' ಎಂದು ಹೇಳಿದನು. ಇಂದ್ರದೇವರು ಬೃಹಸ್ಪತ್ಯಾಚಾರ್ಯರೊಡನೆ ಯೋಚಿಸಿ ವಜ್ರನಾಭನೊಡನೆ 'ನಮ್ಮ ತಂದೆಯಾದ ಕಶ್ಯಪರು ಯಜ್ಞದಲ್ಲಿ ದೀಕ್ಷಿತರಾಗಿದ್ದಾರೆ. ಆ ಯಜ್ಞವು ಮುಗಿದಮೇಲೆ ಅವರು ಹೇಗೆ

1. ಹಂ.ವ.ವಿ.ಪ ಅ.91-97

ನ್ಯಾಯವೋ ಹಾಗೆ ಮಾಡುವರು' ಎಂದರು. ದೈತ್ಯನು ಕಶ್ಯಪರಿದ್ದಲ್ಲಿಗೆ ಹೋಗಿ ಇಂದ್ರದೇವರು ಹೇಳಿದ ವಿಷಯವನ್ನು ಹೇಳಿದನು. ಆಗ ಕಶ್ಯಪರೂ 'ವಜ್ರನಾಭ! ಈ ಸತ್ರಯಾಗವು ಮುಗಿದ ಮೇಲೆ ಹೇಗೆ ನ್ಯಾಯವೋ ಹಾಗೆ ಮಾಡುವೆನು. ನೀನು ಈಗ ವಜ್ರಪುರಕ್ಕೆ ಹೋಗು. ಅಲ್ಲಿಯೇ ವಾಸಮಾಡು' ಎಂದರು. ವಜ್ರನಾಭನು ವಜ್ರನಗರಕ್ಕೆ ಹೋದನು. ಇಂದ್ರದೇವರು ದ್ವಾರಕಾಪಟ್ಟಣಕ್ಕೆ ಬಂದು ಕೃಷ್ಣಪರಮಾತ್ಮ ನೊಡನೆ ವಜ್ರನಾಭನ ವೃತ್ತಾಂತವನ್ನು ತಿಳಿಸಿದರು. ಆಗ ಕೃಷ್ಣಪರಮಾತ್ಮನು 'ವಸುದೇವನ ಅಶ್ವಮೇಧವು ಬೇಗನೇ ಆಗಲಿಕ್ಕೆ ಇದೆ. ಅದು ಮುಗಿದ ಮೇಲೆ ವಜ್ರನಾಭನನ್ನು ಸಂಹಾರ ಮಾಡಿಸುತ್ತೇನೆ. ಆ ವಜ್ರನಗರದ ಒಳಗೆ ಪ್ರವೇಶ ಮಾಡುವುದು ಹೇಗೆ ಎಂದು ವಿಚಾರಮಾಡುವ. ಅವನ ಇಚ್ಛೆಯಿಲ್ಲದೆ ಅಲ್ಲಿ ವಾಯುವೂ ಕೂಡ ಪ್ರವೇಶ ಮಾಡಲಿಕ್ಕೆ ಆಗದು' ಎಂದು ಹೇಳಿದರು.

ತರುವಾಯ ಕೃಷ್ಣಪರಮಾತ್ಮನಿಂದ ಸತ್ಕೃತರಾಗಿ ಹೊರಟುಹೋದರು. ತರುವಾಯ ವಸುದೇವನ ಯಾಗವು ನಡೆಯುತ್ತಿರಲು ಕೃಷ್ಣಪರಮಾತ್ಮನೂ ಇಂದ್ರ ದೇವರೂ ವಜ್ರನಗರದ ಒಳಗೆ ಪ್ರವೇಶ ಮಾಡುವ ಉಪಾಯವನ್ನು ಯೋಚಿಸುತ್ತಾ ಇದ್ದರು. ಆ ಅಶ್ವಮೇಧಯಾಗವು ನಡೆಯುತ್ತಿರುವಾಗ ಭದ್ರನಾಮಾ ಎಂದು ಹೆಸರುಳ್ಳ ಒಬ್ಬ ನಟನು ನಾಟ್ಯದಿಂದ ಮಹರ್ಷಿಗಳನ್ನು ಸಂತೋಷಪಡಿಸಿದನು. ಆಗ ಮುನಿಶ್ರೇಷ್ಠರು ಅವನಿಗೆ ಬೇಕಾದ ವರಗಳನ್ನು ಕೇಳಿಕೊಳ್ಳುವಂತೆ ಹೇಳಿದರು. ಆಗ ಆ ನಟನು ಅಶ್ವಮೇಧಕ್ಕೆ ಬಂದಿರತಕ್ಕ ಋಷಿಗಳಿಗೆಲ್ಲಾ ನಮಸ್ಕರಿಸಿ ಇಂದ್ರದೇವರ ಮತ್ತು ಕೃಷ್ಣಪರಮಾತ್ಮನ ಇಚ್ಛಾನುಸಾರವಾಗಿ ಸರಸ್ವತೀದೇವಿಯಿಂದ ಪ್ರೇರಿತನಾಗಿ 'ಬ್ರಾಹ್ಮಣರಿಗೆಲ್ಲಾ ನಾನು ಭೋಜನಾರ್ಹನಾಗಬೇಕು. ಸಪ್ತದ್ವೀಪಗಳಿಂದ ಕೂಡಿದ ಪೃಥಿವಿಯಲ್ಲಿ ನಾನು ಸಂಚರಿಸಬೇಕು. ಆಕಾಶದಲ್ಲಿ ಸಂಚರಿಸಬೇಕು. ಸ್ಥಾವರ ಜಂಗಮಪ್ರಾಣಿಗಳಿಂದ ಅವಧ್ಯನಾಗಬೇಕು. ಸತ್ತಿರುವವನ ಬದುಕಿರುವವನ ಇನ್ನೂ ಹುಟ್ಟುವವನ ಎಲ್ಲರ ವೇಷವನ್ನು ಧರಿಸುವ ಸಾಮರ್ಥ್ಯ ಬರಬೇಕು. ವಾರ್ಧಿಕ್ಯ ರೋಗರಹಿತನಾಗಿರಬೇಕು. ಮುನಿಗಳೂ ಇತರರೂ ನನ್ನಲ್ಲಿ ಸಂತೋಷವನ್ನು ಹೊಂದಬೇಕು' ಎಂದು ವರವನ್ನು ಕೇಳಿಕೊಂಡನು. ಬ್ರಾಹ್ಮಣರೆಲ್ಲರೂ ಹಾಗೆಯೇ ಆಗಲಿ ಎಂದರು. ತರುವಾಯ ಆ ನಟನು ಭೂಮಿಯಲ್ಲಿ ಎಲ್ಲಾ ಸಂಚರಿಸುತ್ತಿದ್ದನು. ದಾನವರ ಪುರಗಳನ್ನು ಉತ್ತರ ಕುರುದೇಶವನ್ನು ಭದ್ರಾಶ್ವ ಕೇತುಮಾಲಾ ಇತ್ಯಾದಿ ಖಂಡಗಳಿಗೂ ಹೋದನು. ಪರ್ವಕಾಲದಲ್ಲಿ ಯಾದವರಿಂದ ಅಲಂಕೃತವಾದ ದ್ವಾರಕಾಪಟ್ಟಣಕ್ಕೆ ಬರುವನು.

ತರುವಾಯ ಇಂದ್ರದೇವರು ದೇವಲೋಕದಲ್ಲಿ ವಾಸಿಸುವ ಹಂಸಪಕ್ಷಿಗಳಲ್ಲಿ ಸಮಾಧಾನಪಡಿಸಿ 'ನೀವು ಕಶ್ಯಪರ ಮಕ್ಕಳು. ನನಗೆ ಸಹೋದರರು ದೇವತೆಗಳ ಮತ್ತು ಪುಣ್ಯವಂತರ ವಿಮಾನಗಳನ್ನು ಧರಿಸಿಕೊಂಡು ಹೋಗುವಿರಿ. ದೇವತೆಗಳಿಗೆ ಶತ್ರುಸಂಹಾರಮಾಡುವುದಿದೆ. ಅದನ್ನು ನೀವು ಮಾಡಬೇಕಾಗಿದೆ. ಈ ರಹಸ್ಯವನ್ನು ಒಬ್ಬರ ಹತ್ತಿರವೂ ಹೇಳಬಾರದು. ದೇವತೆಗಳ ಆಜ್ಞೆಯನ್ನು ನಡಿಸದಿದ್ದರೆ ಮಹಾದೋಷವು ಬರುವುದು. ನೀವು ಎಲ್ಲಿಗೆ ಹೋದರೂ ತಡೆಯುವವರಿಲ್ಲ. ಆದುದರಿಂದ ನೀವು ಇನ್ನೊಬ್ಬರಿಂದ ಪ್ರವೇಶಿಸಲಿಕ್ಕೆ ಅಶಕ್ಯವಾದ ವಜ್ರನಗರಕ್ಕೆ ಪ್ರವೇಶಿಸಬೇಕು. ಅಲ್ಲಿ ಅಂತಃಪುರದ ಇಳಿಭಾವಿಗಳಲ್ಲಿ ಸಂಚರಿಸಬೇಕು. ವಜ್ರನಾಭನಿಗೆ ಚಂದ್ರನಂತೆ ಪ್ರಕಾಶವುಳ್ಳವಳಾದ ಪ್ರಭಾವತಿಯೆಂಬ ಕನ್ಯೆಯಿರುವಳು. ಪಾರ್ವತೀದೇವಿಯ ಅನುಗ್ರಹದಿಂದ ಅವಳು ಹುಟ್ಟಿರುವಳೆಂದು ಕೇಳಿದ್ದೇವೆ. ಅವಳು ಸ್ವಯಂವರಕ್ಕೆ ಸಿದ್ಧಳಾಗಿರುವಳು. ಅವಳು ತನ್ನ ಇಚ್ಛೆಯಂತೆ ಪತಿಯನ್ನು ಆರಿಸಿಕೊಳ್ಳುವಳು. ಆದುದರಿಂದ ನೀವು ಅವಳೊಡನೆ ಮಹಾನುಭಾವನಾದ ಪ್ರದ್ಯುಮ್ನನ ಗುಣಗಳನ್ನು ಹೇಳಬೇಕು. ಯಾವಾಗ ಅವಳು ಪ್ರದ್ಯುಮ್ನನಲ್ಲಿ ಅನುರಾಗವುಳ್ಳವಳಾಗುತ್ತಾಳೋ ಆಗ ಅವಳಿಂದ ವರ್ತಮಾನವನ್ನು ಪ್ರದ್ಯುಮ್ನನಿಗೆ ಹೇಳಬೇಕು. ಪ್ರಭಾವತಿಗೆ ಪ್ರದ್ಯುಮ್ನನಲ್ಲಿ ಮನಸ್ಸು ಸ್ಥಿರವಾಗುವಂತೆ ಪ್ರದ್ಯುಮ್ನನ ಗುಣಗಳನ್ನು ಹೇಳಬೇಕು. ವೃತ್ತಾಂತವನ್ನು ನಿತ್ಯವೂ ನನಗೂ ದ್ವಾರಕಾ ಪಟ್ಟಣದಲ್ಲಿರುವ ಕೃಷ್ಣಪರಮಾತ್ಮನಿಗೂ ತಿಳಿಸಬೇಕು. ವಜ್ರನಾಭನ ಮಗಳಾದ ಪ್ರಭಾವತಿಯನ್ನು ಪ್ರದ್ಯುಮ್ನನು ಹೊಂದುವಂತೆ ಮಾಡಬೇಕು. ಆ ದೈತ್ಯರು ಬ್ರಹ್ಮ ದೇವರ ವರದಿಂದ ದೇವತೆಗಳಿಂದ ಸಾಯುವವರಲ್ಲ. ಆದುದರಿಂದ ದೇವಪುತ್ರ ರಾದ ಪ್ರದ್ಯುಮ್ನಾದಿಗಳು ಸಂಹರಿಸಬೇಕು. ನಟನೊಬ್ಬನು ಋಷಿಗಳ ವರವನ್ನು ಪಡೆದಿರುವನು. ಅವನ ಸಹಾಯದಿಂದ ಪ್ರದ್ಯುಮ್ನಾದಿಗಳು ವಜ್ರನಾಭನನ್ನು ಸಂಹರಿಸಲಿಕ್ಕೆ ಹೋಗಬೇಕು. ವಜ್ರನಾಭನ ಇಚ್ಛೆಯಿಲ್ಲದೆ ಅಲ್ಲಿ ಯಾರೂ ಪ್ರವೇಶಿಸಲಾಗದು' ಎಂದು ಹೇಳಿದರು.

ಹಂಸಗಳು ಇಂದ್ರದೇವರ ಮಾತನ್ನು ಕೇಳಿ ವಜ್ರಪುರಕ್ಕೆ ಹೋದವು. ಅವು ಅಲ್ಲಿಗೆ ಪ್ರವೇಶಿಸುವುದು ವಜ್ರನಾಭನಿಗೂ ಸಮ್ಮತವಾಗಿತ್ತು. ಅವು ನಿಲೋತ್ಪಲ ಪುಷ್ಪಗಳುಳ್ಳ ಇಳಿಬಾವಿಯಲ್ಲಿ ಸಂಚರಿಸಿದವು. ಪೂರ್ವದಲ್ಲಿಯೂ ಅವು ಅಲ್ಲಿಗೆ ಬಂದಿದ್ದವು. ಸ್ವರ್ಗದಲ್ಲಿರತಕ್ಕ ಅವು ಅಲ್ಲಿಗೆ ಬಂದಿರುವುದನ್ನು ನೋಡಿ ವಜ್ರನಾಭನು ಅವುಗಳೊಡನೆ 'ನೀವು ಸ್ವರ್ಗದಲ್ಲಿರುವವರು. ಚೆನ್ನಾಗಿ ಮಾತಾಡಲಿಕ್ಕೆ ತಿಳಿದವರು.

ಇಲ್ಲಿಯೇನಾದರೂ ಉತ್ಸವವಾದರೆ ನಿಮಗೆ ತಿಳಿಯುತ್ತದೆ. ನೀವು ಹೀಗೆಯೇ ಬರುತ್ತಿರಬೇಕು. ಇದು ನಿಮ್ಮ ಮನೆಯು. ಇಲ್ಲಿಗೆ ಯಾವಾಗಬೇಕಾದರೂ ಪ್ರವೇಶಿಸಬಹುದು' ಎಂದು ಹೇಳಿದನು. ಹಂಸಗಳು ಹಾಗೆಯೇ ಆಗಲಿ ಎಂದವು. ದಾನವರ ಮನೆಗಳನ್ನು ಪ್ರವೇಶಿಸಿದವು. ದೇವಕಾರ್ಯಕ್ಕಾಗಿ ಅಲ್ಲಿ ಪರಿಚಯ ಮಾಡಿಕೊಂಡವು. ದಾನವರ ವಂಶದ ಕಥೆಗಳನ್ನು ಹೇಳಿದವು. ಇದನ್ನು ಕೇಳುತ್ತಾ ದಾನವಸ್ತ್ರೀಯರೂ ಸಂತೋಷಪಡುತ್ತಿದ್ದರು.

ಹೀಗೆಯೇ ಸಂಚರಿಸುತ್ತಾ ಹಂಸಗಳು ಸುಂದರಿಯಾದ ವಜ್ರನಾಭನ ಮಗಳಾದ ಪ್ರಭಾವತಿಯನ್ನು ನೋಡಿದವು. ಅವಳ ಪರಿಚಯವನ್ನು ಮಾಡಿಕೊಂಡವು. ಪ್ರಭಾವತಿಯು ಶುಚಿಮುಖಿಯೆಂಬ ಹಂಸವನ್ನು ಸಖಿಯನ್ನಾಗಿ ಮಾಡಿ ಶುಚಿಮುಖಿಯು ಒಂದುದಿನ ನೂರಾರು ಕಥೆಗಳನ್ನು ತನ್ನ ಮುಖದಿಂದ ಕೇಳಿ ತನ್ನಲ್ಲಿ ವಿಶ್ವಾಸವುಳ್ಳ ಪ್ರಭಾವತಿಯೊಡನೆ 'ಪ್ರಭಾವತಿ! ನೀನು ಮೂರುಲೋಕದಲ್ಲಿಯೂ ಸುಂದರಿಯೆಂದು ತಿಳಿದಿರುವೆನು. ನಿನ್ನೊಡನೆ ಒಂದು ಮಾತನ್ನು ಆಡಬೇಕೆಂದಿರುವೆನು. ನಿನ್ನ ಯೌವನವು ವ್ಯರ್ಥವಾಗಿ ಹೋಗುತ್ತದಲ್ಲಾ! ಕಳೆದುಹೋದ ಯೌವನವು ಪುನಃ ಬಂದು ಸೇರಲಾರದು. ಸ್ತ್ರೀಯರಿಗೆ ಕಾಮಸುಖಕ್ಕೆ ಸಮಾನವಾದ ಸುಖವು ಬೇರೆ ಒಂದೂ ಇಲ್ಲ. ಇದು ಸತ್ಯವಾದ ಮಾತು. ನೀನು ಸ್ವಯಂವರ ಮಾಡಿಕೊಳ್ಳಬಹುದೆಂದು ನಿನ್ನ ತಂದೆಯು ಹೇಳಿರುವನು. ದೇವಾಸುರ ಕುಲದಲ್ಲಿ ಹುಟ್ಟಿದ ಯಾರನ್ನು ನೀನು ವರಿಸಲಿಲ್ಲವಲ್ಲಾ! ಬಂದವರೆಲ್ಲರೂ ನಿನ್ನಿಂದ ತಿರಸ್ಕೃತರಾಗಿ ಲಜ್ಜೆಯನ್ನು ಹೊಂದಿ ಹೋಗುತ್ತಿದ್ದಾರೆ. ರೂಪಶೌರ್ಯಗುಣಗಳಿಂದ ಕೂಡಿದ ನಿನ್ನ ಕುಲರೂಪಗಳಿಗೆ ಯೋಗ್ಯರಾಗಿರುವವರನ್ನು ನೀನು ಇಚ್ಛಿಸದೆ ಇರುವಿ. ರುಕ್ಮಿಣೀದೇವಿಯರ ಮಗನಾದ ಪ್ರದ್ಯುಮ್ನನು ಇಲ್ಲಿಗೆ ಏಕೆ ಬರುವನು? ಮೂರುಲೋಕದಲ್ಲಿ ಅವನಿಗೆ ಸದೃಶನಾದ ರೂಪವಂತನೂ ಒಳ್ಳೇ ವಂಶದಲ್ಲಿ ಹುಟ್ಟಿದವನೂ ಶೌರ್ಯವುಳ್ಳವನೂ ಇತರ ಗುಣಗಳುಳ್ಳವನೂ ಇನ್ನೊಬ್ಬರು ಇರುವುದಿಲ್ಲ. ಅವನು ದೇವತೆಗಳಲ್ಲಿ ದೇವತೆಯಂತೆಯೂ ದಾನವರಲ್ಲಿ ದಾನವರಂತೆಯೂ ಮನುಷ್ಯರಲ್ಲಿ ಮನುಷ್ಯರಂತೆಯೂ ಇರುವನು. ಅವನನ್ನು ನೋಡಿದರೆ ಯಾವ ಹೆಂಗಸಾದರೂ ಮೋಹಿತರಾಗುವರು. ಪರಮಸುಂದರನು ಎಂದು ಹೇಳಿ ಬಹಳವಾಗಿ ಪ್ರದ್ಯುಮ್ನನನ್ನು ವರ್ಣನೆ ಮಾಡಿತು.

ಅದನ್ನು ಕೇಳಿ ಪ್ರಭಾವತಿಯು "ನನ್ನ ತಂದೆಯೂ ನಾರದರೂ ಮಾತಾಡುವಾಗ ನಾನು ಕೇಳಿದ್ದೇನೆ. ವಿಷ್ಣುವು ಮನುಷ್ಯಲೋಕದಲ್ಲಿ ಇರುವನಂತೆ. ಅವನು ನಮ್ಮ

ದಾನವರಿಗೆಲ್ಲಾ ಶತ್ರುವಂತೆ. ಅವನಿಂದ ಅನೇಕ ದೈತ್ಯ ವಂಶಗಳು ನಾಶವನ್ನು ಹೊಂದಿವೆಯಂತೆ. ಸ್ತ್ರೀಯರಿಗೆ ಪತಿಯ ಕುಲವು ತಂದೆಯ ಕುಲಕ್ಕಿಂತ ಶ್ರೇಷ್ಠವಾಗಿರಬೇಕೆಂದು ಅಭಿಪ್ರಾಯವಿರುತ್ತದೆ. ಆ ಪ್ರದ್ಯುಮ್ನನನ್ನು ಇಲ್ಲಿಗೆ ಬರುವಂತೆ ಮಾಡಲು ಏನಾದರೂ ಉಪಾಯವಿದೆಯಾ? ಅವನು ಇಲ್ಲಿಗೆ ಬರುವುದಾದರೆ ನನ್ನಲ್ಲಿ ಮಹಾಅನುಗ್ರಹವನ್ನು ಮಾಡಿದಂತೆ ಆಗುವುದು. ನನ್ನ ವಂಶವು ಪವಿತ್ರವಾಗುವುದು. ದೈತ್ಯರಿಗೆ ಅತ್ಯಂತ ವೈರಿಯಾದ ಯದುಕುಲದಲ್ಲಿ ಉದ್ಭವಿದ ಪ್ರದ್ಯುಮ್ನನು ನನಗೆ ಹೇಗೆ ಗಂಡನಾಗುವನು? ವೃದ್ಧರಾದ ಅಸುರಸ್ತ್ರೀಯರು ಪ್ರದ್ಯುಮ್ನನು ಹುಟ್ಟಿದ ಕಥೆಯನ್ನು ಕಾಲಶಂಬರ ಎಂಬ ದೈತ್ಯನನ್ನು ಸಂಹಾರಮಾಡಿದ್ದನ್ನು ನನ್ನಲ್ಲಿ ಹೇಳಿದ್ದಾರೆ. ನನ್ನ ಹೃದಯದಲ್ಲಿ ಯಾವಾಗಲೂ ಪ್ರದ್ಯುಮ್ನನೇ ಇದ್ದಾನೆ. ಅವನು ನನ್ನನ್ನು ಬಂದು ಸೇರಲು ಉಪಾಯವೇ ಇಲ್ಲವಲ್ಲಾ! ಸಖಿ! ನಿನಗೆ ನಾನು ದಾಸಿಯಾಗುವೆನು. ನಿನ್ನನ್ನೇ ದೂತಕಾರ್ಯದಲ್ಲಿ ಕಳುಹಿಸುವೆನು. ನೀನು ತಿಳಿದವಳಾಗಿರುವಿ. ನನಗೆ ಪ್ರದ್ಯುಮ್ನನ ಸಂಗಮವಾಗುವ ವಿಷಯದಲ್ಲಿ ಉಪಾಯವನ್ನು ಹೇಳು' ಎಂದು ಹೇಳಿದಳು.

ಆಗ ಆ ಹಂಸಪಕ್ಷಿಯು ಪ್ರಭಾವತಿಯನ್ನು ಸಮಾಧಾನಪಡಿಸಿ ನಗುತ್ತಾ 'ನಾನೇ ಪ್ರದ್ಯುಮ್ನನಿದ್ದಲ್ಲಿಗೆ ದೂತಿಯಾಗಿ ಹೋಗುವೆನು. ಅವನೊಡನೆ ನಿನ್ನ ಈ ಉತ್ಕೃಷ್ಟವಾದ ಭಕ್ತಿಯನ್ನು ತಿಳಿಸುವೆನು. ಪ್ರದ್ಯುಮ್ನನು ನೀನಿದ್ದಲ್ಲಿಗೆ ಬರುವಂತೆ ಮಾಡುವೆನು. ನಿನ್ನ ತಂದೆಯೊಡನೆ ನಾನು ಚೆನ್ನಾಗಿ ಕಥೆಯನ್ನು ಹೇಳುತ್ತೇನೆ ಎಂದು ತಿಳಿಸು. ಅದು ನನಗೆ ಪ್ರದ್ಯುಮ್ನನನ್ನು ಕರತರಲು ಸಹಾಯಕವಾಗುವುದು' ಎಂದು ಹೇಳಿತು. ಆಮೇಲೆ ಪ್ರಭಾವತಿಯು ಹಾಗೆಯೇ ಮಾಡಿದಳು. ತರುವಾಯ ವಜ್ರನಾಭನೂ ಒಂದುದಿನ ಹಂಸದೊಡನ 'ನೀನು ಚೆನ್ನಾಗಿ ಕಥೆಯನ್ನು ಹೇಳುವಿಯಂತೆ. ಪ್ರಭಾವತಿಯು ನನ್ನೊಡನೆ ಹೇಳಿದಳು. ನೀನು ನನಗೂ ಆಶ್ಚರ್ಯಕರವಾದ ವಿಷಯವಿದ್ದರೆ ಹೇಳು. ನೀನು ಇನ್ನೊಬ್ಬರು ನೋಡದೆ ಇರುವ ಉತ್ತಮ ವಿಷಯವೇನನ್ನು ನೋಡಿರುವಿ?' ಎಂದು ಕೇಳಿದನು. ಅದಕ್ಕೆ ಹಂಸಿಯು 'ನಾನು ಅನೇಕ ಆಶ್ಚರ್ಯವಿಷಯಗಳನ್ನು ನೋಡಿರುವೆನು. ಮೇರುಪಾರ್ಶ್ವದಲ್ಲಿ ಅಶ್ಚರ್ಯಕರವಾದ ಕರ್ಮವನ್ನು ಮಾಡುತ್ತಿರುವ ಶಾಂಡಿಲಿನಿಯನ್ನು ನೋಡಿದೆನು. ಅವಳು ಪಾರ್ವತಿದೇವಿಯ ಸಖಿಯು. ಹಾಗೆಯೇ ವರವನ್ನು ಪಡೆದಿರುವ ಒಬ್ಬ ನಟನನ್ನು ನೋಡಿರುವೆನು. ಅವನು ಇಚ್ಛಾನುಸಾರವಾದ ರೂಪವನ್ನು ಧರಿಸುವನು. ಉತ್ತರಕುರುದೇಶಕ್ಕೆ ಭದ್ರಾಶ್ವ ಕೇತುಮೂಲಖಂಡಗಳಿಗೆ ಇತರ ದ್ವೀಪಗಳಿಗೂ

ಹೋಗುತ್ತಾನೆ. ನರ್ತನವನ್ನೆಲ್ಲಾ ಚೆನ್ನಾಗಿ ತಿಳಿದವನಾಗಿರುತ್ತಾನೆ. ತನ್ನ ನರ್ತನದಿಂದ ದೇವತೆಗಳನ್ನು ಆಶ್ಚರ್ಯಪಡಿಸುತ್ತಾನೆ' ಎಂದು ಹೇಳಿತು. ಅದಕ್ಕೆ ವಜ್ರನಾಭನು 'ಚಾರಣರೂ ಸಿದ್ಧರೂ ಹೇಳುವ ಮಾತಿನಿಂದಲೂ ನಾನು ಈ ವಿಷಯವನ್ನು ಕೇಳಿರುವೆನು. ನನಗೂ ಆ ನಟನನ್ನು ನೋಡಬೇಕೆಂದು ಕುತೂಹಲವಿದೆ. ಆದರೆ ನನಗೆ ಅವನ ಪರಿಚಯವಿರುವುದಿಲ್ಲ' ಎಂದನು. ಅದಕ್ಕೆ ಹಂಸಿಯು 'ಅವನು ಸಪ್ತದ್ವೀಪಗಳಲ್ಲಿಯೂ ಸಂಚರಿಸುತ್ತಿರುವನು. ನಿನ್ನ ಗುಣಗಳನ್ನು ಕೇಳಿದರೆ ಇಲ್ಲಿಗೆ ಬಂದೇ ಬರುವನು' ಎಂದನು.

ವಜ್ರನಾಭನು 'ಹಂಸಿಯೇ! ಆ ನಟನು ನಮ್ಮ ಊರಿಗೆ ಬರುವ ಉಪಾಯವನ್ನು ಮಾಡು' ಎಂದು ಹೇಳಿದನು. ತರುವಾಯ ಅವನು ಹಂಸಗಳನ್ನು ಕಾರ್ಯಕ್ಕಾಗಿ ಕಳುಹಿಸಿದನು. ಹಂಸಗಳು ಹೋಗಿ ಎಲ್ಲಾ ವಿಷಯವನ್ನೂ ಇಂದ್ರದೇವರಿಗೂ ಕೃಷ್ಣಪರಮಾತ್ಮನಿಗೂ ತಿಳಿಸಿದವು. ಶ್ರೀಕೃಷ್ಣಪರಮಾತ್ಮನು ಪ್ರಭಾವತಿಯನ್ನು ಮದುವೆ ಮಾಡಿಕೊಳ್ಳಲಿಕ್ಕೂ ವಜ್ರನಾಭನನ್ನು ಸಂಹರಿಸಲಿಕ್ಕೂ ಪ್ರದ್ಯುಮ್ನನಿಗೆ ಆಜ್ಞಾಪಿಸಿದನು. ದೈವ ಮಾಯೆಯಿಂದ ಪರಮಾತ್ಮನು ನಟವೇಷದಿಂದ ಯಾದವರನ್ನು ಕಳುಹಿಸಿದನು. ಪ್ರದ್ಯುಮ್ನನನ್ನು ನಾಯಕನನ್ನಾಗಿಯೂ ಸಾಂಬನನ್ನು ವಿದೂಷಕನನ್ನಾಗಿಯೂ ಗದನನ್ನು ಪಾರಿಪಾರ್ಶ್ವನನ್ನಾಗಿಯೂ ಹಾಗೆಯೇ ಇತರ ಯಾದವರನ್ನು ಕಳುಹಿಸಿದನು. ವೇಶ್ಯಾಸ್ತ್ರೀಯರನ್ನು ನಟಿಯರನ್ನಾಗಿ ಮಾಡಿ ಕಳುಹಿಸಿದನು. ಹಾಗೆಯೇ ಆಭದ್ರ ಎಂಬ ನಟನನ್ನು ಅವನಿಗೆ ಸಹಾಯಕರನ್ನು ಕಳುಹಿಸಿದನು. ಎಲ್ಲರೂ ಒಬ್ಬರ ಹಾಗೆಯೇ ಮತ್ತೊಬ್ಬರು ಕಾಣಿಸುತ್ತಿದ್ದರು. ಅವರೆಲ್ಲರೂ ವಜ್ರನಗರದ ಸುಪುರವೆಂಬ ಶಾಖಾನಗರಕ್ಕೆ ಹೋದರು.

ಆಗ ವಜ್ರನಾಭನು ಸುಪುರದಲ್ಲಿರುವ ಅಸುರರಿಗೆ ಬಂದವರಿಗೆ ಒಳ್ಳೇ ಮನೆಯನ್ನು ಕೊಡುವಂತೆ ಆಜ್ಞಾ ಮಾಡಿದನು. ಆತಿಥ್ಯವನ್ನು ಮಾಡಿರಿ. ರತ್ನಗಳನ್ನು ಬೇಕಾದ ವಸ್ತ್ರಗಳನ್ನು ಕೊಡಿರಿ ಎಂದು ಹೇಳಿದನು. ರಾಜನ ಆಜ್ಞೆಯಂತೆ ರಾಕ್ಷಸರು ಮಾಡಿದರು. ಪೂರ್ವದಲ್ಲಿ ತಾವು ಕೇಳಿದ ನಟನು ಬಂದನೆಂದು ಎಲ್ಲರಿಗೂ ಕುತೂಹಲವುಂಟಾಯಿತು. ಆ ನಟನಿಗೆ ದೈತ್ಯರೆಲ್ಲರೂ ಪರಮಸಂತೋಷದಿಂದ ಸತ್ಕಾರವನ್ನು ಮಾಡಿದರು. ಬೇಕಾದ ರತ್ನಗಳನ್ನು ಕೊಟ್ಟರು. ವರವನ್ನು ಪಡೆದ ಆ ನಟನು ಸುಪುರವಾಸಿಗಳಿಗೆ ಸಂತೋಷವನ್ನು ಉಂಟುಮಾಡಿದನು. ಅಲ್ಲಿ ರಾಮಾಯಣವನ್ನು ನಾಟಕವನ್ನಾಗಿ ಆಡಿತೋರಿಸಿದನು. 'ಭಗವಂತನು ರಾಕ್ಷಸ ಸಂಹಾರಕ್ಕಾಗಿ ಅವತಾರ ಮಾಡಿದ್ದು, ದಶರಥನು ಋಷ್ಯಶೃಂಗರನ್ನು

ಶಾಂತಾದೇವಿಯನ್ನು ವೇಶ್ಯೆಯರಿಂದ ಸಹ ತರಿಸಿದ್ದು ಇತ್ಯಾದಿಗಳನ್ನು ಆಡಿ ತೋರಿಸಿದನು. ರಾಮ ಲಕ್ಷ್ಮಣ ಭರತ ಶತ್ರುಘ್ನರು ಋಷ್ಯಶೃಂಗರು ಶಾಂತಾದೇವಿ ಇವರ ವೇಷವನ್ನು ನಟರು ಹಾಕಿದ್ದರು. ರಾಮದೇವರೇ ಮೊದಲಾದವರು ಇದ್ದ ಕಾಲದಲ್ಲಿ ಇದ್ದ ಮುದುಕರಾದ ರಾಕ್ಷಸರು ಈ ವೇಷಗಳನ್ನು ನೋಡಿ ಸರಿಯಾದ ರಾಮಾದಿಗಳಂತೆಯೇ ಇವರು ಇದ್ದಾರೆ ಎಂದು ಆಶ್ಚರ್ಯದಿಂದ ಹೇಳಿಕೊಂಡರು. ನಾಟಕವು ನಡೆಯುತ್ತಿರುವಾಗ ಬಹುಸಂತೋಷದಿಂದ ಗರ್ಜನೆ ಮಾಡಿದರು. ಮಧ್ಯೇ ಮಧ್ಯೇ ಎದ್ದು ಸಂತೋಷದಿಂದ ವಸ್ತ್ರಗಳನ್ನು ಸರಗಳನ್ನು ಬಳೆಗಳನ್ನು ಮುತ್ತಿನ ಸರಗಳನ್ನು ನಾನಾ ಆಭರಣರಗಳನ್ನು ಕೊಟ್ಟರು. ಆಗ ನಟರು ಅಸುರರನ್ನು ಮುನಿಗಳನ್ನು ತುಂಬಾ ಸ್ತೋತ್ರಮಾಡಿದರು. ಆಮೇಲೆ ಸುಪುರವಾಸಿಗಳು ನಟನು ಬಂದು ನಾಟಕವಾಡಿರುವ ವಿಷಯವನ್ನು ವಜ್ರನಾಭನಿಗೆ ಹೇಳಿಕಳುಹಿಸಿದರು.

ಅದನ್ನು ಕೇಳಿ ವಜ್ರನಾಭನು ಸಂತೋಷದಿಂದ ನಮ್ಮ ನಗರಕ್ಕೆ ಕರೆದು ತರಬೇಕೆಂದು ಹೇಳಿ ಕಳುಹಿಸಿದನು. ಅವನ ಮಾತನ್ನು ಕೇಳಿ ಸುಪುರವಾಸಿಗಳು ನಟವೇಷದಿಂದ ಇದ್ದ ಯಾದವರನ್ನು ವಜ್ರಪುರಕ್ಕೆ ಕರೆದುಕೊಂಡು ಬಂದರು. ವಜ್ರನಾಭನು ಅವರಿಗೆ ಬೇಕಾದದ್ದನ್ನು ಕೊಟ್ಟನು. ರುದ್ರದೇವರಿಗೆ ಉತ್ಸವವನ್ನು ಮಾಡಿದನು. ಸಂತೋಷದಿಂದ ನೋಡಲಿಕ್ಕೆ ಸೈನ್ಯವನ್ನು ತರಿಸಿದನು. ವಜ್ರನಾಭನೂ ಜ್ಞಾತಿಗಳಿಂದ ಕೂಡಿಕೊಂಡು ಬಂದು ನಾಟಕವನ್ನು ನೋಡಲಿಕ್ಕೆ ಕೂತನು. ಅಂತಃಪುರದ ಹೆಂಗಸರನ್ನು ತೆರೆಯ ಮರೆಯಲ್ಲಿ ಕೂತುಕೊಂಡು ನೋಡಲಿಕ್ಕೆ ಏರ್ಪಾಡು ಮಾಡಿದ್ದನು. ಯಾದವರೆಲ್ಲರೂ ನಟರ ವೇಷವನ್ನು ಧರಿಸಿದವರಾಗಿ ಕಾರ್ಯಕ್ಕಾಗಿ ನಾಟಕವಾಡಲಿಕ್ಕೆ ಆರಂಭಿಸಿದರು. ತರುವಾಯ ನಾನಾ ವಿಧವಾದ್ಯ ಗಳನ್ನು ಬಾರಿಸಿದರು. ಯಾದವರು ಕರೆದುಕೊಂಡು ಬಂದಿದ್ದ ಈ ವೇಶ್ಯಾಸ್ತ್ರೀಯರು ನಾನಾವಿಧಗಳಾದ ಹಾಡುಗಳನ್ನು ಹೇಳಿದರು. ಆ ಸಂಗೀತವು ಅಸುರರನ್ನೆಲ್ಲಾ ಸಂತೋಷಪಡಿಸಿತು. ಪ್ರದ್ಯುಮ್ನನೂ ಗದನೂ ಸಾಂಬನೂ ನಟವೇಷದಿಂದ ಇದ್ದವರು ನಾಂದೀಪದ್ಯವನ್ನ ಹೇಳಿದರು. ನಾಂದೀಪದ್ಯವನ್ನು ಮುಗಿದ ಮೇಲೆ ಪ್ರದ್ಯುಮ್ನನು ಗಂಗಾವತರಣ ಎಂಬ ರಾಗದಿಂದ ಒಂದು ಶ್ಲೋಕವನ್ನು ಹೇಳಿದನು. ಆಮೇಲೆ ರಂಭಾಭಿಸಾರ ಎಂಬ ನಾಟಕವನ್ನಾಡಿದರು. ಶೂರನು ರಾವಣವೇಷವನ್ನು ಧರಿಸಿದನು. ಮನೋವತಿಯೆಂಬ ವೇಶ್ಯಾಸ್ತ್ರೀಯು ರಂಭೆಯ ವೇಷವನ್ನು ಧರಿಸಿದಳು. ಪ್ರದ್ಯುಮ್ನನು ನಲಕೂಬರನಾದನು. ಸಾಂಬನು ವಿದೂಷಕನಾದನು. ಯಾದವರು ಮಾಯೆಯಿಂದ ಕೈಲಾಸಪರ್ವತವನ್ನು ತೋರಿಸಿದರು. ನಲಕೂಬರನು

ಕೋಪಿಸಿಕೊಂಡು ರಾವಣನಿಗೆ ಶಾಪಕೊಟ್ಟರು. ರಂಭೆಯನ್ನು ಸಮಾಧಾನಪಡಿಸಿದರು. ರಾವಣನಿಗೆ ಶಾಪಬಂದದ್ದನ್ನು ನೋಡಿ ನಾರದರು ನರ್ತನ ಮಾಡಿದರು. ಇತ್ಯಾದಿ ದೃಶ್ಯಗಳನ್ನು ಯಾದವರು ಚೆನ್ನಾಗಿ ಆಡಿತೋರಿಸಿದರು. ದಾನವರೆಲ್ಲರೂ ನಟರನ್ನು ಸ್ತೋತ್ರಮಾಡಿದರು. ವಸ್ತ್ರಗಳನ್ನು ರತ್ನಗಳನ್ನೂ ಆಭರಣಗಳನ್ನೂ ಮುತ್ತಿನ ಸರಗಳನ್ನು ಇನ್ನೂ ಅನೇಕ ಆಭರಣಗಳನ್ನು ವಿಚಿತ್ರ ವಿಮಾನಗಳನ್ನು ಆಕಾಶದಲ್ಲಿ ಸಂಚರಿಸುವ ರಥಗಳನ್ನು ಆನೆಗಳನ್ನು ದಿವ್ಯಗಂಧಗಳನ್ನು ಸರ್ವ ಅಭೀಷ್ಟವನ್ನು ಕೊಡುವ ಚಿಂತಾಮಣಿಗಳನ್ನು ಕೊಟ್ಟರು. ತಮ್ಮ ಕೈಯಲ್ಲಿ ಇದ್ದದ್ದನ್ನೆಲ್ಲಾ ಕೊಟ್ಟರು. ದಾನವಸ್ತ್ರೀಯರೂ ಹಾಗೆಯೇ ಮಾಡಿದರು.

ತರುವಾಯ ಪ್ರಭಾವತಿಯ ಸಖಿಯಾದ ಹಂಸಿಯು ಪ್ರಭಾವತಿಯ ಬಳಿಗೆ ಹೋಗಿ 'ಸುಂದರಿ! ನಾನು ಯಾದವರಿಂದ ರಕ್ಷಿತವಾದ ಸುಂದರವಾದ ದ್ವಾರಕಾಪಟ್ಟಣಕ್ಕೆ ಹೋದೆನು. ಅಲ್ಲಿ ಪ್ರದ್ಯುಮ್ನನನ್ನು ನೋಡಿದೆನು. ನಿನ್ನ ಭಕ್ತಿಯನ್ನು ಅವನಲ್ಲಿ ತಿಳಿಸಿದೆನು. ಅವನು ಸಂತೋಷದಿಂದ ಈದಿನ ಪ್ರದೋಷಕಾಲದಲ್ಲಿ ನಿನ್ನ ಬಳಿಗೆ ಬರುವೆನೆಂದು ಹೇಳಿರುವನು. ಆದುದರಿಂದ ಈದಿನ ನಿನಗೆ ಪ್ರಿಯ ಸಮಾಗಮವಾಗಲಿದೆ. ಯಾದವರು ಯಾವಾಗಲೂ ಸುಳ್ಳು ಹೇಳುವವರಲ್ಲ' ಎಂದಿತು. ಆಗ ಪ್ರಭಾವತಿಯು ಸಂತೋಷವುಳ್ಳವನಾಗಿ ಹಂಸಿಯೊಡನೆ 'ನೀನು ನನ್ನ ಮನೆಯಲ್ಲಿಯೇ ಮಲಗುವವಳಾಗು. ನಿನ್ನಿಂದ ಸಹಿತಳಾಗಿಯೇ ನಾನು ಆ ಕೇಶವನ ಪುತ್ರನನ್ನು ನೋಡುವೆನು. ನೀನಿದ್ದರೆ ನನಗೆ ಅಂಜಿಕೆಯಿರುವುದಿಲ್ಲ' ಎಂದಳು. ಹಂಸಿಯು ಹಾಗೆಯೇ ಆಗಲಿ ಎಂದು ಹೇಳಿ ಪ್ರಭಾವತಿಯೊಡನೆ ಅವಳ ಮಹಡಿ ಮನೆಯ ಮೇಲೆ ಹತ್ತಿಹೋಯಿತು. ಪ್ರಭಾವತಿಯಲ್ಲಿ ವಿಶ್ವಕರ್ಮ ರಚಿತವಾದ ಆ ಮಹಡಿಯಲ್ಲಿ ಪ್ರದ್ಯುಮ್ನನನ್ನು ನೋಡಲಿಕ್ಕೆ ಬೇಕಾದ ಸಿದ್ಧತೆಯನ್ನು ಮಾಡಿದ್ದಳು. ಆಮೇಲೆ ಹಂಸಿಯು ಪ್ರಭಾವತಿಯ ಅನುಮತಿಯಿಂದ ಪ್ರದ್ಯುಮ್ನನನ್ನು ಕರೆತರಲಿಕ್ಕೆ ಹೋಯಿತು. ನಟವೇಷವನ್ನು ಧರಿಸಿರುವ ಪ್ರದ್ಯುಮ್ನನ ಬಳಿಗೆ ಹೋಗಿ ರಾತ್ರಿಕಾಲದಲ್ಲಿ ಬರಬೇಕೆಂದು ಹೇಳಿಕೊಂಡಿತು. ಪ್ರದ್ಯುಮ್ನನು ಹಾಗೆಯೇ ಆಗಲಿ ಎಂದನು. ಹಂಸಿಯು ಬಂದು ಪ್ರಭಾವತಿಯೊಡನೆ 'ಪ್ರದ್ಯುಮ್ನನು ಬರುವನು. ಸಮಾಧಾನದಿಂದ ಇರು' ಹೇಳಿತು.

ಪ್ರದ್ಯುಮ್ನನು ಪ್ರಭಾವತಿಗಾಗಿ ತೆಗೆದುಕೊಂಡು ಹೋಗುತ್ತಿರುವ ಭ್ರಮರಗಳಿಂದ ಕೂಡಿರುವ ಸುವಾಸನೆಯುಳ್ಳ ಹೂವಿನ ಮಾಲೆಯನ್ನು ನೋಡಿದನು. ಅದರಲ್ಲಿಯೇ ತಾನೂ ಒಂದು ಭ್ರಮರದ ರೂಪವನ್ನು ಧರಿಸಿ ಅಡಗಿಕೂತು

ಕೊಂಡನು. ಭ್ರಮರಗಳಿಂದ ಸಹಿತವಾದ ಆ ಮಾಲೆಯನ್ನು ಹೆಂಗಸರು ಪ್ರಭಾವತಿಗೆ ತೆಗೆದುಕೊಂಡು ಹೋಗಿ ಕೊಟ್ಟರು. ಪ್ರಭಾವತಿಯು ಅದನ್ನು ಹತ್ತಿರದಲ್ಲಿಯೇ ಇಟ್ಟಳು. ಸಂಧ್ಯಾಕಾಲವಾಗಲು ಭ್ರಮರಗಳೆಲ್ಲವೂ ಹೊರಟುಹೋದವು. ಭ್ರಮರ ರೂಪವುಳ್ಳ ಪ್ರದ್ಯುಮ್ನನು ತನಗೆ ಸಹಾಯಕ್ಕೆ ಇತರ ಭ್ರಮರಗಳು ಇಲ್ಲದ ಕಾರಣ ಮೆಲ್ಲನೆ ಪ್ರಭಾವತಿಯ ಕಿವಿಯಲ್ಲಿ ಇಟ್ಟುಕೊಂಡಿದ್ದ ನೀಲೋತ್ಪಲ ಪುಷ್ಪಗಳಲ್ಲಿ ಅಡಗಿಕೂತುಕೊಂಡನು.

ತರುವಾಯ ಪ್ರಭಾವತಿಯು ಚಂದ್ರೋದಯವಾಗಲು ಕಾಮತಾಪದಿಂದ ಪೀಡಿತಳಾಗಿ ಹಂಸಿಯೊಡನೆ ಬಹಳವಾಗಿ ತನ್ನ ದುಃಖವನ್ನು ಹೇಳಿಕೊಂಡಳು. ಆಗ ಪ್ರದ್ಯುಮ್ನನು ಹಂಸಿಯೊಡನೆ 'ನಾನು ಇತರ ಭ್ರಮರಗಳೊಡನೆ ಭ್ರಮರರೂಪ ವುಳ್ಳವನಾಗಿ ಹೂವಿನೊಟ್ಟಿಗೆ ಇಲ್ಲಿ ಬಂದಿರುವೆನೆಂದು ಪ್ರಭಾವತಿಗೆ ತಿಳಿಸು' ಎಂದು ಹೇಳಿದನು. ಮತ್ತೂ 'ನಾನು ಪ್ರಭಾವತಿಗೆ ವಿಧೇಯನಾದವನು. ನನ್ನಲ್ಲಿ ಅವಳು ಇಚ್ಛಾನುಸಾರವಾಗಿ ಇರಬಹುದು' ಎಂದು ಹೇಳಿ ತನ್ನ ರೂಪವನ್ನು ತೋರಿಸಿದನು. ಮಹಡಿಯ ಮೇಲೆಲ್ಲಾ ಅವನ ದೇಹಕಾಂತಿಯಿಂದ ಬೆಳಕಾಯಿತು. ಆ ಕಾಂತಿಯಿಂದ ಬೆಳದಿಂಗಳ ಕಾಂತಿಯೂ ಕೂಡ ಮರೆಯಾಯಿತು. ಅವನನ್ನು ನೋಡಿ ಪ್ರಭಾವತಿಗೆ ಕಾಮವು ಹೆಚ್ಚಾಯಿತು. ಲಜ್ಜೆಯುಳ್ಳವಳಾಗಿ ಮುಖವನ್ನು ತಗ್ಗಿಸಿಕೊಂಡು ಓರೆನೋಟದಿಂದ ನೋಡುತ್ತಾ ಸುಮ್ಮನೆ ನಿಂತುಕೊಂಡಳು. ಪ್ರದ್ಯುಮ್ನನು ಅವಳನ್ನು ಸಮಾಧಾನಪಡಿಸಿ ಗಾಂಧರ್ವವಿವಾಹವನ್ನು ಮಾಡಿಕೊಂಡು ಅವಳೊಡನೆ ರಾತ್ರಿಯೆಲ್ಲಾ ವಿಹರಿಸುತ್ತಾ ಅರುಣೋದಯವಾಗಲು ನಟರು ಇರುವ ಸ್ಥಳಕ್ಕೆ ಹೋದನು. ಅವಳನ್ನೇ ಮನಸ್ಸಿನಲ್ಲಿ ಯೋಚಿಸುತ್ತಾ ಇದ್ದನು. ಯಾದವರು ನಟವೇಷದಿಂದಲೇ ಇಂದ್ರದೇವರ ಮತ್ತು ಪರಮಾತ್ಮನ ಆಜ್ಞೆಯನ್ನು ನಿರೀಕ್ಷಿಸುತ್ತಾ ಇದ್ದನು. ವಜ್ರನಾಭನು ಮೂರು ಲೋಕಗಳನ್ನು ಜಯಿಸಲಿಕ್ಕೆ ಉದ್ಯೋಗ ಮಾಡುವುದನ್ನು ನಿರೀಕ್ಷಿಸುತ್ತಾ ಇದ್ದರು. ಕಶ್ಯಪರ ಸತ್ರಯಾಗವು ಮುಗಿಯುವವರೆಗೆ ದೇವಾಸುರರಿಗೆ ವಿರೋಧವಿಲ್ಲದೆ ಇದ್ದಿತು. ಈರೀತಿಯಾಗಿ ಕಾಲವನ್ನು ನಿರೀಕ್ಷಿಸುತ್ತಾ ವಾಸಮಾಡುತ್ತಿರಲು ಮಳೆಕಾಲವು ಬಂದಿತು. ಹಂಸಗಳು ರಾತ್ರಿ ಹಗಲು ಹೋಗಿ ಇಂದ್ರದೇವರಿಗೂ ಕೃಷ್ಣಪರಮಾತ್ಮನಿಗೂ ವಜ್ರಪುರದಲ್ಲಿರುವ ಯಾದವರ ವೃತ್ತಾಂತವನ್ನು ಹೇಳುತ್ತಿದ್ದವು. ಒಂದೊಂದು ರಾತ್ರಿಯಲ್ಲಿಯೂ ಪ್ರಭಾವತಿಯೊಡನೆ ಪ್ರದ್ಯುಮ್ನನು ವಿಹರಿಸುತ್ತಿದ್ದನು. ಹಗಲಲ್ಲಿಯೂ ಪ್ರದ್ಯುಮ್ನನು ಪ್ರಭಾವತಿಯ ಮನೆಯಲ್ಲಿಯೇ ಮರೆಯಾಗಿ ಇದ್ದನು. ಮಾಯೆಯಿಂದ ನಟರು ಇರುವ ಸ್ಥಳದಲ್ಲಿ

ಅವನ ಪ್ರತಿಬಿಂಬವು ಇದ್ದಿತು. ನಟರೂಪದಿಂದ ಇದ್ದ ಯಾದವರನ್ನು ನೋಡಿ ಅಸುರರು ತಾವೂ ಅವರಂತೆ ಇರಬೇಕೆಂದು ಆಸೆಪಡುತ್ತಿದ್ದರು. ವೇಶ್ಯಾಸ್ತ್ರೀಯರನ್ನು ನಟರೂಪದಿಂದ ಇದ್ದವರನ್ನು ನೋಡಿ ಅವರ ಸ್ವಭಾವ ಸೌಂದರ್ಯಾದಿಗಳನ್ನು ನೋಡಿ ತಾವೂ ಅವರಂತೆ ಇರಬೇಕೆಂದು ಆಸೆಪಡುತ್ತಿದ್ದರು.

ವಜ್ರನಾಭನಿಗೆ ಸುನಾಭ ಎಂಬ ತಮ್ಮನಿದ್ದನು. ಅವನಿಗೆ ಚಂದ್ರವತೀ ಗುಣವತೀ ಎಂಬ ಇಬ್ಬರು ಹೆಣ್ಣುಮಕ್ಕಳು ಇದ್ದರು. ಅವರು ಯಾವಾಗಲೂ ಪ್ರಭಾವತಿಯ ಮನೆಗೆ ಬರುತ್ತಿದ್ದರು. ಅವರು ಪ್ರಭಾವತಿಯು ಪುರುಷಸುಖವನ್ನು ಅನುಭವಿಸುತ್ತಿರುವಳಾಗಿ ತಿಳಿದುಕೊಂಡವರಾಗಿ ರಹಸ್ಯವಾಗಿ ಅವಳೊಡನೆ ಕೇಳಿದರು. ಅದಕ್ಕೆ ಅವಳು 'ನನಗೆ ವಿದ್ಯಾಸಾಮರ್ಥ್ಯವಿದೆ. ಅದರ ಪ್ರಭಾವದಿಂದ ನನಗೆ ಪ್ರದ್ಯುಮ್ನನು ಪ್ರಿಯನಾಗಿರುವನು' ಎಂದು ಹೇಳಿ ಪ್ರದ್ಯುಮ್ನನನ್ನು ತೋರಿಸಿದಳು. ಅವರು ಪ್ರದ್ಯುಮ್ನನ ರೂಪಯೌವನವನ್ನು ನೋಡಿ ಆಶ್ಚರ್ಯಪಟ್ಟರು. ಆಮೇಲೆ ಪ್ರಭಾವತಿಯು ಅಸುರರೆಲ್ಲರೂ ಅಯೋಗ್ಯರೆಂದೂ ದೇವತೆಗಳು ಉತ್ತಮರೆಂದೂ ಸ್ಥಾಪಿಸಿದಳು. ನೀವೂ ಕೂಡ ದೇವಪುತ್ರರನ್ನು ವರಿಸಿರಿ ಎಂದು ಹೇಳಿದಳು. ಅವರು ಹಾಗೆಯೇ ಆಗಲಿ ಎಂದು ಅಂಗೀಕರಿಸಿದರು. ಪ್ರಭಾವತಿಯು ಪ್ರದ್ಯುಮ್ನನೊಡನೆ ಈ ವಿಷಯವನ್ನು ತಿಳಿಸಿದಳು. ಪ್ರದ್ಯುಮ್ನನು ತನ್ನ ಚಿಕ್ಕತಂದೆಯಾದ ಗದನನ್ನೂ ತಮ್ಮನಾದ ಸಾಂಬನನ್ನು ಹೇಳಿದನು. ಅವರಿಬ್ಬರೂ ಶೂರರು ಸುಂದರರು ಎಂದು ಹೇಳಿದನು. ತರುವಾಯ ಪ್ರಭಾವತಿಯು ಚಂದ್ರವತಿ ಗುಣವತಿಯರೊಡನೆ ನನಗೆ ದುರ್ವಾಸರು ಉಪದೇಶಿಸಿದ ವಿದ್ಯೆಯಿದೆ. ಅದರಿಂದ ಯಾರನ್ನು ನಾವು ಯೋಚಿಸಿದರೂ ಬರುವರು. ಅದನ್ನು ನಿಮಗೆ ಉಪದೇಶಿಸುತ್ತೇನೆ' ಎಂದಳು. ಅದೇ ರೀತಿಯಾಗಿ ಅವರು ಉಪದೇಶವನ್ನು ಹೊಂದಿದರು. ಸಾಂಬನನ್ನು ಗದನನ್ನು ಪ್ರಭಾವತಿಯ ಮಾತಿನಿಂದ ಧ್ಯಾನಿಸಿದರು. ಪ್ರದ್ಯುಮ್ನನು ಮಾಯೆಯಿಂದ ಅವರಿಬ್ಬರನ್ನು ಕರೆದುಕೊಂಡು ಬಂದನು. ಅವರೂ ಗಾಂಧರ್ವ ವಿವಾಹ ಮಾಡಿಕೊಂಡರು. ಈರೀತಿಯಾಗಿ ಆ ಮೂರು ಜನ ಯಾದವಶ್ರೇಷ್ಠರು ಅಂದರೆ ಪ್ರದ್ಯುಮ್ನ ಗದಸಾಂಬರು ಅಸುರಸ್ತ್ರೀಯರೊಡನೆ ವಿಹಾರಮಾಡುತ್ತಾ ಇಂದ್ರದೇವರ ಕೃಷ್ಣದೇವರ ಆಜ್ಞೆಯನ್ನು ನಿರೀಕ್ಷಿಸುತ್ತಾ ಇದ್ದರು.

ಕಶ್ಯಪರ ಸತ್ರಯಾಗವು ಮುಗಿದಮೇಲೆ ಪರಾಕ್ರಮಶಾಲಿಗಳಾದ ದೇವತೆಗಳೂ ಅಸುರರೂ ತಮ್ಮ ಸ್ಥಾನಗಳಿಗೆ ಹೋದರು. ವಜ್ರನಾಭನು ಸತ್ರಯಾಗವು ಮುಗಿದಮೇಲೆ ಕಶ್ಯಪರ ಬಳಿಗೆ ಬಂದನು. ಮೂರುಲೋಕಗಳನ್ನು ಜಯಿಸಬೇಕೆಂಬ

ತನ್ನ ಆಸೆಯನ್ನು ತಿಳಿಸಿದನು. ಆಗ ಕಶ್ಯಪರು 'ವಜ್ರನಾಭ! ನನ್ನ ಮಾತುಗಳನ್ನು ಕೇಳುವಿಯಾದರೆ ಹೇಳುತ್ತೇನೆ. ಕೇಳು. ನೀನು ಸ್ವಕೀಯರಿಂದ ಕೂಡಿಕೊಂಡು ವಜ್ರಪುರದಲ್ಲಿಯೇ ಇರು. ಇಂದ್ರನು ತಪಸ್ಸಿನಿಂದ ನಿನಗಿಂತ ಅಧಿಕನು. ಸ್ವಭಾವದಿಂದ ಹೆಚ್ಚು ಸಾಮರ್ಥ್ಯವುಳ್ಳವನು. ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನು. ಒಬ್ಬರು ಮಾಡಿದ ಉಪಕಾರವನ್ನು ಸ್ಮರಿಸುವ ಸ್ವಭಾವವುಳ್ಳವನು. ಜ್ಯೇಷ್ಠನು. ಗುಣಗಳಿಂದ ಶ್ರೇಷ್ಠನು. ಅವನು ಎಲ್ಲಾ ಜಗತ್ತಿಗೂ ರಾಜನು. ಸಜ್ಜನರಿಗೆ ಆಶ್ರಯನು. ಅವನು ಲೋಕರಾಜ್ಯವನ್ನು ಹೊಂದಿದ್ದಾನೆ. ಎಲ್ಲರ ಹಿತದಲ್ಲಿ ಆಸಕ್ತನಾಗದ್ದಾನೆ. ಅವನನ್ನು ಜಯಿಸಲಿಕ್ಕೆ ನಿನ್ನಿಂದ ಆಗಲಾರದು. ನೀನಾಗಿಯೇ ಸಾಯುವಿ' ಎಂದು ಹೇಳಿದರು. ವಜ್ರನಾಭನಿಗೆ ಅವರ ಮಾತು ಸಾಯುವವನಿಗೆ ಔಷಧದಂತೆ ರುಚಿಸಲಿಲ್ಲ. ದುರ್ಬುದ್ಧಿಯುಳ್ಳ ಅವನು ಕಶ್ಯಪರಿಗೆ ನಮಸ್ಕಾರ ಮಾಡಿ ಮೂರುಲೋಕಗಳನ್ನೂ ಜಯಿಸಲಿಕ್ಕೆ ಆರಂಭಿಸಬೇಕೆಂದು ಅಭಿಪ್ರಾಯಪಟ್ಟನು. ಅನೇಕ ಬಂಧುಗಳನ್ನೂ ಮಿತ್ರರನ್ನು ತರಿಸಿ ಮೊದಲು ಸ್ವರ್ಗವನ್ನೇ ಜಯಿಸಬೇಕೆಂದು ಹೋದನು. ಆ ಸಮಯದಲ್ಲಿ ಇಂದ್ರದೇವರೂ ಕೃಷ್ಣಪರಮಾತ್ಮನೂ ವಜ್ರನಾಭನನ್ನು ಕೊಲ್ಲಬೇಕೆಂದು ಹಂಸಗಳನ್ನು ಕಳುಹಿಸಿದರು. ಅದನ್ನು ಕೇಳಿ ಯಾದವರು 'ವಜ್ರನಾಭನನ್ನು ಪ್ರದ್ಯುಮ್ನನು ಸಂಹರಿಸಬೇಕು. ಆದರೆ ಅವನ ಮತ್ತು ಅವನ ತಮ್ಮನ ಹೆಣ್ಣುಮಕ್ಕಳು ಪ್ರದ್ಯುಮ್ನಾದಿಗಳ ಪತ್ನಿಯರಾಗಿರುವರು. ಭಕ್ತರಾಗಿರುವರು. ಅವರೆಲ್ಲರೂ ಆಗ ಗರ್ಭಿಣಿಯರಾಗಿರುವರು. ಬೇಗನೇ ಅವರು ಹಡೆಯುವ ಕಾಲವೂ ಬರುವುದು ಏನು ಮಾಡಲಿ' ಎಂದು ಯೋಚಿಸಿ ಹಂಸಪಕ್ಷಿಗಳೊಡನೆ ಈ ವಿಷಯವನ್ನು ಇಂದ್ರದೇವರೊಡನೆಯೂ ಕೃಷ್ಣಪರಮಾತ್ಮನೊಡನೆಯೂ ತಿಳಿಸಬೇಕೆಂದರು. ಹಂಸಗಳು ಹೋಗಿ ಹಾಗೆಯೇ ಹೇಳಿದವು. ಇಂದ್ರಕೃಷ್ಣರು 'ನೀವು ಭಯಪಡುವುದು ಬೇಡ. ಒಳ್ಳೇ ಗುಣವಂತರಾದ ಮಕ್ಕಳು ನಿಮಗೆ ಹುಟ್ಟುವರು. ಗರ್ಭದಲ್ಲಿರುವಾಗಲೇ ಸಾಂಗವೇದಗಳನ್ನೂ ತಿಳಿಯುತ್ತಾರೆ. ಮುಂದೆ ಬರುವುದನ್ನೆಲ್ಲಾ ತಿಳಿಯುವರು. ನಾನಾ ವಿಧಗಳಾದ ಅಸ್ತ್ರಗಳನ್ನು ತಿಳಿಯುವರು. ಆಗಲೇ ಯೌವನವುಳ್ಳವರಾಗುವರು. ಪಂಡಿತರಾಗುವರು' ಎಂದು ಹಂಸಗಳೊಡನೆ ಹೇಳಿ ಕಳುಹಿಸಿದರು. ಹಂಸಗಳು ವಜ್ರಪುರಕ್ಕೆ ಬಂದು ಎಲ್ಲವನ್ನು ಹೇಳಿದವು.

ಆಗ ಪ್ರಭಾವತಿಯು ತಂದೆಯಂತೆಯೇ ಇರುವ ಮಗುವನ್ನು ಹಡೆದಳು. ಆ ಮಗುವು ಆಗಲೇ ಯೌವನವನ್ನು ಹೊಂದಿತು. ಸರ್ವಜ್ಞತ್ವವನ್ನು ಹೊಂದಿತ್ತು. ಒಂದು ತಿಂಗಳಲ್ಲಿಯೇ ಚಂದ್ರವತಿಯು ಚಂದ್ರಪ್ರಭನೆಂದು ಹೆಸರುಳ್ಳ

ಯೌವನವನ್ನು ಹೊಂದಿದ ಸರ್ವಜ್ಞನಾದ ಮಗನನ್ನು ಹಡೆದಳು. ಹಾಗೆಯೇ ಗುಣವತಿಯೂ ಗುಣವಂತನೆಂಬ ಸರ್ವವನ್ನೂ ತಿಳಿದ ಸದ್ಯ ಯೌವನವನ್ನು ಹೊಂದಿದ ಮಗುವನ್ನು ಹಡೆದಳು. ಇಂದ್ರಕೃಷ್ಣನ ಅನುಗ್ರಹದಿಂದ ಯುದ್ಧದಲ್ಲಿ ಮಹಾಸಾಮರ್ಥ್ಯವುಳ್ಳವರಾಗಿದ್ದರು. ತರುವಾಯ ಇಂದ್ರಕೃಷ್ಣರ ಇಚ್ಛೆಯಿಂದ ಮಹಡಿಯಲ್ಲಿ ಇದ್ದ ಅವರನ್ನು ರಾಕ್ಷಸರು ನೋಡಿದರು. ಎಲ್ಲಾ ವಿಷಯವೂ ಅವರಿಗೆ ತಿಳಿಯಿತು. ಅವರು ಹೋಗಿ ಮೂರುಲೋಕಗಳನ್ನು ಜಯಿಸಲಿಕ್ಕೆ ಇಚ್ಛೆಯುಳ್ಳ ವಜ್ರನಾಭನಿಗೆ ತಿಳಿಸಿದರು. ವಜ್ರನಾಭನು ನನ್ನ ಮನೆಯನ್ನು ಕೆಡಿಸಿದವರನ್ನೆಲ್ಲಾ ಕೊಂದುಹಾಕಲಿಕ್ಕೆ ಹಿಡಿದುಕೊಂಡು ಬನ್ನಿರಿ ಎಂದನು. ಸೈನ್ಯಕ್ಕೆ ಆಜ್ಞಾಪಿಸಿದರು. ಹಿಡಿಯಿರಿ, ಕೊಲ್ಲಿರಿ ಎಂದು ಹೇಳುತ್ತಾ ಸುತ್ತಲೂ ಸೈನಿಕರು ಬಂದುಬಿಟ್ಟರು. ಅದನ್ನು ಕೇಳಿ ಆ ಮಕ್ಕಳ ತಾಯಿಯರು ಅಳುವವರಾದರು. ಆಗ ಪ್ರದ್ಯುಮ್ನನು ನಗುತ್ತಾ 'ನಾವು ಬದುಕಿರುವಾಗ ಭಯಪಡಬೇಡಿರಿ. ನಮಗೆ ದೈತ್ಯರು ಏನು ಮಾಡಲಿಕ್ಕೆ ಹೋಗುತ್ತಾರೆ?' ಎಂದು ಹೇಳಿ ಪ್ರಭಾವತಿಯೊಡನೆ 'ನಿನ್ನ ತಂದೆಯೂ ಗದೆಯನ್ನು ಹಿಡಿದುಕೊಂಡು ನಿಂತಿದ್ದಾನೆ. ನಿನ್ನ ತಂದೆಯ ಸಹೋದರರೂ ನಿನ್ನ ಸಹೋದರರೂ ಇತರ ಬಂಧುಗಳೂ ಎಲ್ಲರೂ ಯುದ್ಧಕ್ಕೆ ಬಂದಿದ್ದಾರೆ. ನಿನ್ನ ನಿಮಿತ್ತವಾಗಿ ಇವರೆಲ್ಲರೂ ನನಗೆ ಪೂಜ್ಯರಾಗಬೇಕು. ನಿನ್ನ ಸಹೋದರಿಯರೊಡನೆಯೂ ಕೇಳು. ಇದು ಈಗ ಭಯಂಕರವಾದ ಪ್ರಸಂಗವಾಗಿದೆ. ನಾವು ಸುಮ್ಮನೆ ಇದ್ದರೆ ಇವರೆಲ್ಲರೂ ನಮ್ಮನ್ನು ಕೊಂದು ಹಾಕುವರು. ಯುದ್ಧ ಮಾಡಿದರೆ ನಮಗೆ ನಿಶ್ಚಯವಾಗಿಯೂ ಜಯವಾಗುವುದು. ದಾನವರೆಲ್ಲರೂ ನಮ್ಮನ್ನು ಕೊಲ್ಲಬೇಕೆಂದು ಇಚ್ಛೆಯಿಂದ ಯುದ್ಧ ಮಾಡುತ್ತಿದ್ದಾರೆ. ಪರದೇಶದಲ್ಲಿ ಇರುವ ನಾವು ಏನು ಮಾಡಬೇಕೆಂದು ಹೇಳು' ಎಂದು ಹೇಳಿದನು.

ಆಗ ಪ್ರಭಾವತಿಯು ಅಳುತ್ತಾ ತಲೆಯಮೇಲೆ ಕೈಮುಗಿದುಕೊಂಡು ಮೊಳಕಾಲುಗಳಿಂದ ನೆಲದ ಮೇಲೆ ಕೂತು 'ಶಸ್ತ್ರವನ್ನು ಗ್ರಹಣಮಾಡಿರಿ. ನಿಮ್ಮನ್ನು ರಕ್ಷಣೆ ಮಾಡಿಕೊಳ್ಳಿರಿ. ಬದುಕಿದ್ದರೆ ಹೆಂಡತಿ ಮಕ್ಕಳನ್ನು ನೋಡಬಹುದು. ಪೂಜ್ಯರಾದ ವೈದರ್ಭಿಯನ್ನು ಅನಿರುದ್ಧನನ್ನು ನೋಡಬಹುದು. ಇದನ್ನೆಲ್ಲಾ ಯೋಚಿಸಿಕೊಂಡು ಈ ವ್ಯಸನದಿಂದ ನಿಮ್ಮನ್ನು ಬಿಡಿಸಿಕೊಳ್ಳಿರಿ. ದುರ್ವಾಸರು ನನಗೆ ನೀನು ವೈಧವ್ಯರಹಿತಳಾಗಿಯೂ ಮಕ್ಕಳುಳ್ಳವಳಾಗಿಯೂ ಆಗುವಿ ಎಂದು ವರವನ್ನು ಕೊಟ್ಟಿರುವರು. ಅವರ ಮಾತು ನನಗೆ ಸ್ವಲ್ಪ ಧೈರ್ಯಕ್ಕೆ ಕಾರಣವಾಗಿದೆ' ಎಂದು ಹೇಳಿ ಒಂದು ಖಡ್ಗವನ್ನು ತೆಗೆದು ಜಯಿಸಿರಿ ಎಂದು ಹೇಳಿಕೊಟ್ಟಳು. ನಮಸ್ಕರಿಸಿ

ಭಕ್ತಿಯಿಂದ ಕೊಟ್ಟ ಆ ಖಡ್ಗವನ್ನು ಪ್ರದ್ಯುಮ್ನನು ಸಂತೋಷದಿಂದ ಸ್ವೀಕರಿಸಿದನು. ಚಂದ್ರವತಿಯೂ ಗದನಿಗೆ ಒಂದು ಖಡ್ಗವನ್ನು ಕೊಟ್ಟಳು. ಗುಣವತಿಯು ಸಾಂಬನಿಗೆ ಖಡ್ಗವನ್ನು ಕೊಟ್ಟಳು.

ತರುವಾಯ ಪ್ರದ್ಯುಮ್ನನು ತನಗೆ ನಮಸ್ಕರಿಸಿದ ಮಗನಾದ ಹಂಸಕೇತುವಿನೊಡನೆ 'ನೀನು ಇಲ್ಲಿಯೇ ಸಾಂಬನಿಂದ ಯಾದವರಿಂದಲೂ ಸಹಿತನಾಗಿ ಯುದ್ಧ ಮಾಡುತ್ತಿರು. ಆಕಾಶದಲ್ಲಿಯೂ ಸರ್ವದಿಕ್ಕುಗಳಲ್ಲಿಯೂ ನಾನು ಯುದ್ಧ ಮಾಡುತ್ತಿರುವೆನು' ಎಂದು ಹೇಳಿ ಮಾಯೆಯಿಂದ ಒಂದು ರಥವನ್ನು ನಿರ್ಮಾಣ ಮಾಡಿದನು. ಅದಕ್ಕೆ ಸಾವಿರ ತಲೆಗಳುಳ್ಳ ಸರ್ಪವನ್ನು ಸಾರಥಿಯನ್ನಾಗಿ ಮಾಡಿದನು. ಆ ಶ್ರೇಷ್ಠವಾದ ರಥದಲ್ಲಿ ಕೂತುಕೊಂಡು ಪ್ರಭಾವತಿಯನ್ನು ಸಂತೋಷಪಡಿಸುತ್ತಾ ಅಸುರಸೈನ್ಯಗಳಲ್ಲಿ ಸಂಚಾರಮಾಡಿದನು. ನಾನಾವಿಧ ಬಾಣಗಳನ್ನು ಬಿಟ್ಟನು. ಮದವುಳ್ಳ ಅಸುರರೂ ಯುದ್ಧದಲ್ಲಿ ಪ್ರದ್ಯುಮ್ನನಿಗೆ ಬಡಿದರು. ಪ್ರದ್ಯುಮ್ನನು ಕೆಲವರ ಕೈಗಳನ್ನು ಕಡಿದುಹಾಕಿದನು. ಇನ್ನು ಕೆಲವರ ಕುಂಡಲಸಹಿತಗಳಾದ ತಲೆಗಳನ್ನೂ ಕಡಿದುಹಾಕಿದನು. ರಾಕ್ಷಸರ ತಲೆಗಳಿಂದಲೂ ದೇಹದ ತುಂಡುಗಳಿಂದಲೂ ಆ ಸ್ಥಳವು ತುಂಬಿ ಹೋಯಿತು. ಇಂದ್ರದೇವರು ದೇವತೆಗಳಿಂದ ಕೂಡಿಕೊಂಡು ಯಾದವರು ದೈತ್ಯರೊಡನೆ ಮಾಡುವ ಯುದ್ಧವನ್ನು ಸಂತೋಷದಿಂದ ನೋಡುತ್ತಾ ಇದ್ದರು. ಯಾವ ದೈತ್ಯರು ಗದನನ್ನೂ ಸಾಂಬನನ್ನು ಎದುರಿಸಿಕೊಂಡು ಹೋದರೋ ಅವರೆಲ್ಲರೂ ಮರಣವನ್ನು ಹೊಂದಿದರು. ಇಂದ್ರದೇವರು ಭಯಂಕರವಾದ ಆ ಯುದ್ಧವನ್ನು ನೋಡಿ ಗದನಿಗೆ ತನ್ನ ರಥವನ್ನು ಕಳುಹಿಸಿದರು. ಮಾತಲಿಯ ಮಗನನ್ನು ಸಾರಥಿಯನ್ನಾಗಿ ಕಳುಹಿಸಿದರು. ಸಾಂಬನಿಗೆ ಐರಾವಣವೆಂಬ ಆನೆಯನ್ನು ಕಳುಹಿಸಿದರು. ಪ್ರದ್ಯುಮ್ನನಿಗೆ ಸಹಾಯ ಮಾಡಲಿಕ್ಕೆ ಜಯಂತನನ್ನು ಕಳುಹಿಸಿದರು. ಐರಾವಣವನ್ನು ಮಾವುತನಾಗಿ ನಡೆಸಲಿಕ್ಕೆ ಪ್ರವರ ಎಂಬ ತನ್ನ ಮಿತ್ರನಾದ ಬ್ರಾಹ್ಮಣನನ್ನು ಕಳುಹಿಸಿದರು. ಇವರನ್ನೆಲ್ಲಾ ಇಂದ್ರದೇವರು ಬ್ರಹ್ಮದೇವರ ಅನುಜ್ಞೆಯನ್ನು ತೆಗೆದುಕೊಂಡು ಕಳುಹಿಸಿದರು. ವಜ್ರನಾಭನ ತಪಸ್ಸು ಕ್ಷೀಣವಾಗಿದೆ. ಇವನು ಯಾದವರಿಂದ ಸಾಯುವನು. ಎಲ್ಲರೂ ಸರ್ವತ್ರ ಇಚ್ಛಾನುಸಾರವಾಗಿ ಪ್ರವೇಶಿಸಿರಿ ಎಂದರು. ಪ್ರದ್ಯುಮ್ನನೂ ಜಯಂತನೂ ಮಹಡಿಯ ಮೇಲೆ ಹೋಗಿ ಅಸುರರನ್ನು ಬಾಣಸಮೂಹಗಳಿಂದ ಸಂಹರಿಸಿದರು. ಆಗ ಪ್ರದ್ಯುಮ್ನನು ಗದನೊಡನೆ 'ಇಂದ್ರದೇವರು ನಿನಗೆ ಈ ರಥವನ್ನು ಕಳುಹಿಸಿರುವರು. ಮಾತಲಿಯ ಮಗನು ಸಾರಥಿಯಾಗಿರುವನು. ಪ್ರವರ ಎಂಬ

ಬ್ರಾಹ್ಮಣನಿಂದ ಏರಲ್ಪಟ್ಟ ಈ ಐರಾವಣ ಎಂಬ ಆನೆಯನ್ನು ಸಾಂಬನಿಗೆ ಕಳುಹಿಸಿರುವರು.

ಈದಿನದಲ್ಲಿ ದ್ವಾರಕಾಪಟ್ಟಣದಲ್ಲಿ ಶ್ರೀಭಗವಂತನು (ಅಸುರಾ ವ್ಯಾಮೋಹಕ್ಕಾಗಿ) ರುದ್ರದೇವರ ಮಹಾಪೂಜೆಯನ್ನು ಮಾಡುವನು ಅದು ಮುಗಿದಮೇಲೆ ನಾಳೆ ಇಲ್ಲಿಗೆ ಬರುವನು. ಅವನಆಜ್ಞೆಯಿಂದ ನಾವು ಬಂಧುಗಳಿಂದ ಸಹಿತನಾದ ವಜ್ರನಾಭನನ್ನೂ ಸಂಹರಿಸುವ. ಮೂರುಲೋಕಗಳನ್ನು ಜಯಿಸ ಬೇಕೆಂದು ಹೊರಟಿರುವ ಪ್ರಯುಕ್ತ ಪಾಪಿಯಾದ ಅವನನ್ನು ಕೊಲ್ಲುವ. ಅವನು ಹೋಗಿ ಇಂದ್ರದೇವರನ್ನು ಅವರ ಮಗನನ್ನು ಜಯಿಸದಂತೆ ನೋಡಿಕೊಳ್ಳಬೇಕು. ಮತ್ತು ಹೆಂಡತಿಯರನ್ನು ಮೊದಲು ರಕ್ಷಿಸಬೇಕು. ಹೆಂಡತಿಯರನ್ನು ಇನ್ನೊಬ್ಬರು ಸೆಳೆದುಕೊಂಡು ಹೋದರೆ ಅದು ಮರಣಕ್ಕಿಂತಲೂ ಅಧಿಕವಾದದ್ದು' ಎಂದು ಹೇಳಿ ತನ್ನ ಮಾಯೆಯಿಂದ ಕೋಟಿ ಪ್ರದ್ಯುಮ್ನರ ರೂಪವನ್ನು ಉಂಟುಮಾಡಿದನು. ದೈತ್ಯರು ಉಂಟುಮಾಡಿರುವ ಕತ್ತಲೆಯನ್ನು ನಾಶಮಾಡಿದನು. ಇಂದ್ರದೇವರು ಶತ್ರುವನ್ನು ಸಂಹರಿಸುತ್ತಿರುವ ಪ್ರದ್ಯುಮ್ನನನ್ನು ನೋಡಿ ಸಂತೋಷಪಟ್ಟರು. ಎಲ್ಲರೂ ಎಲ್ಲಾ ಶತ್ರುಗಳ ಒಳಗೆಯೂ ಪ್ರವೇಶ ಮಾಡಿರುವ ಪ್ರದ್ಯುಮ್ನನನ್ನು ನೋಡಿದರು. ಆರೀತಿಯಾಗಿ ಪ್ರದ್ಯುಮ್ನನು ಯುದ್ಧಮಾಡುತ್ತಾ ಆ ರಾತ್ರಿಯು ಕಳೆದುಹೋಯಿತು. ಅಸುರರಲ್ಲಿ ಮೂರನೇ ಭಾಗವು ಮೃತವಾಯಿತು. ತರುವಾಯ ಪ್ರದ್ಯುಮ್ನನು ಯುದ್ಧಮಾಡುತ್ತಿರುವಾಗ ಜಯಂತನು ಗಂಗಾಜಲದಲ್ಲಿ ಸಂಧ್ಯಾ ವಂದನೆಯನ್ನು ಮಾಡಿದನು. ಜಯಂತನು ಯುದ್ಧಮಾಡುತ್ತಿರುವಾಗ ಪ್ರದ್ಯುಮ್ನನು ಆಕಾಶಗಂಗೆಯಲ್ಲಿ ಸಂಧ್ಯಾವಂದನೆಯನ್ನು ಮಾಡಿದನು.

ತರುವಾಯ ಸೂರ್ಯೋದಯವಾಗಲು ಒಂದು ಮುಹೂರ್ತವಾಗಲು ಶ್ರೀಕೃಷ್ಣಪರಮಾತ್ಮನು ಗರುಡದೇವರ ಮೇಲೆ ಕೂತುಕೊಂಡು ಕಾಣಿಸಿಕೊಂಡನು. ವಾಯುವೇಗವುಳ್ಳ ಗರುಡದೇವರು ಆಕಾಶದಲ್ಲಿ ಇಂದ್ರದೇವರ ಬಳಿಯಲ್ಲಿ ನಿಂತುಕೊಂಡರು. ಕೃಷ್ಣಪರಮಾತ್ಮನು ಇಂದ್ರದೇವರ ಸಾಮೀಪ್ಯವನ್ನು ಹೊಂದಿ ದೈತ್ಯರಿಗೆ ಭಯವನ್ನು ಹೆಚ್ಚಿಸುವ ಪಾಂಚಜನ್ಯ ಶಂಖವನ್ನು ಊದಿದರು. ಅದನ್ನು ಕೇಳಿ ಅಲ್ಲಿಗೆ ಪ್ರದ್ಯುಮ್ನನು ಬಂದನು. ಶ್ರೀಭಗವಂತನು ಬೇಗನೇ ವಜ್ರನಾಭನನ್ನು ಕೊಲ್ಲು ಎಂದು ಹೇಳಿದನು. 'ಗರುಡನ ಮೇಲೆ ಕೂತುಕೊಂಡು ಹೋಗು' ಎಂದು ಪುನಃ ಹೇಳಿದನು. ಪ್ರದ್ಯುಮ್ನನು ಇಂದ್ರದೇವರಿಗೂ ಕೃಷ್ಣಪರಮಾತ್ಮನಿಗೂ ನಮಸ್ಕರಿಸಿ ಗರುಡದೇವರ ಮೇಲೆ ಕೂತುಕೊಂಡು ಬೇಗನೇ ವಜ್ರನಾಭನ ಬಳಿಗೆ ಹೋದನು.

ವಜ್ರನಾಭನ ಎದೆಗೆ ಗದೆಯಿಂದ ಬಡೆದನು. ಅದರಿಂದ ವಜ್ರನಾಭನ ರಕ್ತವನ್ನು ಕಾರಿ ಸತ್ತವನಂತೆ ಮೂರ್ಛಿತನಾಗಿಬಿದ್ದನು. ಪ್ರದ್ಯುಮ್ನನು 'ಸ್ವಲ್ಪ ಸುಧಾರಿಸಿಕೋ' ಎಂದನು. ವಜ್ರನಾಭನು ಜ್ಞಾನವನ್ನು ಹೊಂದಿದವನಾಗಿ ಪ್ರದ್ಯುಮ್ನನೊಡನೆ 'ಯಾದವ! ಪರಾಕ್ರಮಶಾಲಿಯಾಗಿರುವಿ. ನೀನು ನನ್ನ ಶತ್ರುವು. ನಿನಗೆ ಬಡಿಯುವ ಕಾಲವು ಬಂದಿದೆ. ಸ್ಥಿರನಾಗಿ ಇರು' ಎಂದು ಹೇಳಿ ಗಟ್ಟಿಯಾಗಿ ಗರ್ಜನೆಮಾಡಿ ಅನೇಕ ಮುಳ್ಳುಗಳಿಂದ ಕೂಡಿದ ಗದೆಯನ್ನು ಬಿಸಾಡಿದನು. ಅದು ಹಣೆಗೆ ಬಂದು ಬೀಳಲು ಪ್ರದ್ಯುಮ್ನನು ರಕ್ತವನ್ನು ಕಾರಿ ಮೂರ್ಛಿತನಾದನು. ಅದನ್ನು ನೋಡಿ ಶ್ರೀಕೃಷ್ಣಪರಮಾತ್ಮನು ಮಗನಿಗೆ ಸಮಾಧಾನಪಡಿಸುವುದಕ್ಕಾಗಿ ಪಾಂಚಜನ್ಯ ಶಂಖವನ್ನು ಊದಿದನು. ಪಾಂಚಜನ್ಯ ಶಬ್ದವನ್ನು ಕೇಳಿ ಶ್ರಮರಹಿತನಾಗಿ ಎದ್ದಿರುವ ಮಹಾಬಲಿಷ್ಠನಾದ ಪ್ರದ್ಯುಮ್ನನನ್ನು ನೋಡಿ ಇಂದ್ರದೇವರೂ ಕೃಷ್ಣಪರಮಾತ್ಮನೂ ಸಂತೋಷಪಟ್ಟರು. ಆಗ ಕೃಷ್ಣಪರಮಾತ್ಮನ ಇಚ್ಛೆಯಿಂದ ಅವನ ಚಕ್ರವು ಪ್ರದ್ಯುಮ್ನನ ಕೈಯಲ್ಲಿ ಬಂದಿತು. ಅದನ್ನು ಪ್ರದ್ಯುಮ್ನನು ಇಂದ್ರದೇವರಿಗೂ ಪರಮಾತ್ಮನಿಗೂ ನಮಸ್ಕರಿಸಿ ವಜ್ರನಾಭನನ್ನು ಸಂಹಾರ ಮಾಡಲಿಕ್ಕೆ ಬಿಟ್ಟನು. ದೈತ್ಯರೆಲ್ಲರೂ ನೋಡುತ್ತಿರುವಂತೆ ಆ ಚಕ್ರಾಯುಧವು ಹೋಗಿ ವಜ್ರನಾಭನ ತಲೆಯನ್ನು ಕತ್ತರಿಸಿತು. ಆಮೇಲೆ ಯುದ್ಧ ಮಾಡುತ್ತಿದ್ದ ಸುನಾಭನನ್ನು ಗದನು ಸಂಹರಿಸಿದನು. ಸಾಂಬನು ಎಲ್ಲ ಅಸುರರನ್ನು ಬಾಣಗಳಿಂದ ಸಂಹರಿಸಿದನು. ವಜ್ರನಾಭನು ಸಾಯಲು ನಿಕುಂಭ ಎಂಬ ಅಸುರನು ಪರಮಾತ್ಮನಿಂದ ಭಯವುಳ್ಳವನಾಗಿ ಷಟ್ಪುರಕ್ಕೆ ಓಡಿಹೋದನು. ಆಮೇಲೆ ಕೃಷ್ಣಪರಮಾತ್ಮನೂ ಇಂದ್ರದೇವರೂ ವಜ್ರಪುರಕ್ಕೆ ಇಳಿದು ಬಂದರು. ಭಯದಿಂದ ಕೂಡಿದ ಮುದುಕರನ್ನು ಮಕ್ಕಳನ್ನೂ ಸಮಾಧಾಪಡಿಸಿದರು.

ತರುವಾಯ ಕೃಷ್ಣಪರಮಾತ್ಮನೂ ಇಂದ್ರದೇವರೂ ಯೋಚನೆ ಮಾಡಿ ವಜ್ರನಾಭನ ರಾಜ್ಯವನ್ನು ನಾಲ್ಕು ವಿಭಾಗ ಮಾಡಿಕೊಂಡರು. ಒಂದು ಭಾಗವು ಜಯಂತನ ಮಗನಾದ ವಿಜಯನಿಗೆ ಮತ್ತು ಪ್ರದ್ಯುಮ್ನನ ಮಗನಿಗೂ ಸಾಂಬನ ಮಗನಿಗೂ ಗದನ ಮಗನಿಗೂ ಉಳಿದ ಭಾಗಗಳು ಎಂದು ಮಾಡಿದರು. ಹಾಗೆಯೇ ಶಾಖಾನಗರಗಳನ್ನೂ ವಿಭಾಗಮಾಡಿ ನಾಲ್ಕು ಜನರಿಗೆ ಹಂಚಿದರು. ಎಲ್ಲಾ ವಸ್ತುಗಳನ್ನು ನಾಲ್ಕು ಭಾಗಮಾಡಿ ಅವರಿಗೆ ಹಂಚಿದರು. ತರುವಾಯ ಇಂದ್ರದೇವರ ಅಪ್ಪಣೆಯಿಂದ ಗಂಗಾಜಲದಿಂದ ಆ ನಾಲ್ಕು ಜನರಿಗೂ ಪಟ್ಟಾಭಿಷೇಕ ಮಾಡಿದರು. ಮಹಾವೈಭವದಿಂದ ಪಟ್ಟಾಭಿಷೇಕವು ನಡೆಯಿತು. ಋಷಿಗಳ ಸಮೀಪದಲ್ಲಿ ಕೃಷ್ಣ ಇಂದ್ರರೇ ಅಭಿಷೇಕ ಮಾಡಿದರು. ಅವರಲ್ಲಿ ಜಯಂತನ ಮಗನಾದ ವಿಜಯನಿಗೆ

ಆಕಾಶದಲ್ಲಿ ಸಂಚರಿಸುವ ಶಕ್ತಿಯು ಸ್ವಭಾವದಿಂದಲೇ ಇದ್ದಿತು. ಉಳಿದ ಮೂವರಿಗೂ ಅಸುರರ ಮೊಮ್ಮಕ್ಕಳಾದ ಕಾರಣ ಆಕಾಶದಲ್ಲಿ ಸಂಚರಿಸುವ ಶಕ್ತಿಯಿದ್ದಿತು. ಪಟ್ಟಾಭಿಷೇಕವಾದ ಮೇಲೆ ಇಂದ್ರದೇವರ ಜಯಂತನೊಡನೆ 'ನೀನು ಇವರನ್ನು ನೋಡಿಕೊಂಡು ಇರಬೇಕು. ಇವರಲ್ಲಿ ಒಬ್ಬನು ನನ್ನ ವಂಶಕ್ಕೆ ಕಾರಣನು. ಉಳಿದ ಮೂವರು ಕೃಷ್ಣಪರಮಾತ್ಮನ ವಂಶಕ್ಕೆ ಕಾರಣರು. ಎಲ್ಲಾ ಪ್ರಾಣಿಗಳಿಂದಲೂ ಅವಧ್ಯರಾಗುವರು. ಆಕಾಶದಲ್ಲಿ ಹೋಗಿ ಬರುತ್ತಿರುವರು. ಸ್ವರ್ಗಕ್ಕೂ ದ್ವಾರಕೆಗೂ ಹೋಗಿ ಬರುತ್ತಾ ಇರಬಹುದು. ಐರಾವಣದ ಮಕ್ಕಳಾದ ಶತ್ರುಂಜಯ ರಿಪುಂಜಯ ಎಂಬ ಎರಡು ಆನೆಗಳನ್ನು ಸಾಂಬನಿಗೂ ಗದನಿಗೂ ಕೊಡು. ದಿಗ್ಗಜಗಳ ಮಕ್ಕಳಾದ ಆನೆಗಳನ್ನೂ ಉಚ್ಚೈಃಶ್ರವ ಎಂಬ ಕುದುರೆಯ ವಂಶದ ಕುದುರೆಗಳನ್ನು ವಿಶ್ವಕರ್ಮನು ಮಾಡಿರುವ ರಥಗಳನ್ನೂ ಇವರಿಗೆಲ್ಲಾ ಬೇಕಾದಷ್ಟು ಕೊಡು. ಸಾಂಬನೂ ಗದನೂ ಶತ್ರುಂಜಯ ರಿಪುಂಜಯ ಎಂಬ ಆನೆಗಳಲ್ಲಿ ಕೂತುಕೊಂಡು ಆಕಾಶಮಾರ್ಗದಿಂದ ದ್ವಾರಕೆಗೆ ಹೋಗಲಿ. ಹಾಗೆಯೇ ಅಲ್ಲಿಂದ ಮಕ್ಕಳನ್ನು ನೋಡಲಿಕ್ಕೆ ಆಕಾಶಮಾರ್ಗದಿಂದಲೇ ಇಲ್ಲಿಗೂ ಬರಲಿ' ಎಂದು ಹೇಳಿ ಸ್ವರ್ಗಕ್ಕೆ ಹೋದರು.

ಕೃಷ್ಣಪರಮಾತ್ಮನು ದ್ವಾರಕಾಪಟ್ಟಣಕ್ಕೆ ಹೋದನು. ಗದನೂ ಪ್ರದ್ಯುಮ್ನನೂ ಸಾಂಬನೂ ಆರು ತಿಂಗಳು ಅಲ್ಲಿಯೇ ಇದ್ದು ರಾಜ್ಯವೆಲ್ಲವೂ ಸರಿಯಾದ ಮೇಲೆ ದ್ವಾರಕಾಪಟ್ಟಣಕ್ಕೆ ಹೋದರು. ಆ ರಾಜ್ಯಗಳು ಮೇರುಪರ್ವತದ ಉತ್ತರದಲ್ಲಿ ಈಗಲೂ ಇರುತ್ತವೆ. ಅವುಗಳು ಜಗತ್ತಿರುವವರೆಗೆ ಇರುತ್ತವೆ. ಮೌಸಲ ಯುದ್ಧವು ಮುಗಿದ ಮೇಲೆ ಯಾದವರೆಲ್ಲರೂ ಸ್ವರ್ಗಸ್ಥರಾಗಲು ಪ್ರದ್ಯುಮ್ನ ಸಾಂಬರು ವಜ್ರಪುರಕ್ಕೆ ಹೋದರು. ಆಮೇಲೆ ಸ್ವರ್ಗಕ್ಕೆ ಹೋದರು. ಈರೀತಿಯಾಗಿ ಪ್ರದ್ಯುಮ್ನನ ಉತ್ಕರ್ಷವನ್ನು ತಿಳಿಸುವ ಈ ಆಖ್ಯಾನವು ಧನಕ್ಕೂ ಕೀರ್ತಿಗೂ ಆಯುಷ್ಯಕ್ಕೂ ಶತ್ರುನಾಶಕ್ಕೂ ಪುತ್ರ ಪೌತ್ರಾಭಿವೃದ್ಧಿಗೂ ಕಾರಣವಾಗಿದೆಯೆಂದು ವೇದವ್ಯಾಸದೇವರೇ ಹೇಳಿರುವರು.



# ಹರ್ಯಶ್ವರಾಜನ ಕಥೆ [1]

ಮನುವಂಶದಲ್ಲಿ ಇಕ್ಷ್ವಾಕುರಾಜನ ಮಗನಾದ ಹರ್ಯಶ್ವ ಎಂಬ ರಾಜನಿದ್ದನು. ಅವನು ಮಹಾಪರಾಕ್ರಮಶಾಲಿಯಾಗಿದ್ದನು. ಅವನಿಗೆ ಮಧು ಎಂಬ ದೈತ್ಯನ ಮಗಳಾದ ಮಧುಮತಿಯೆಂದು ಹೆಸರುಳ್ಳವಳು ಹೆಂಡತಿಯಾಗಿ ಇದ್ದಳು. ಅವರು ಯೌವನವುಳ್ಳವಳಾಗಿ ಅತ್ಯಂತ ರೂಪವತಿಯಾಗಿದ್ದಳು. ರಾಜನ ಮನೋಭೀಷ್ಟ ದಂತೆ ನಡೆಯುತ್ತಿದ್ದಳು. ರಾಜನಿಗೆ ಪ್ರಾಣಕ್ಕಿಂತಲೂ ಅತ್ಯಂತ ಪ್ರಿಯಳಾಗಿದ್ದಳು. ದಾನವಕುಲದಲ್ಲಿ ಹುಟ್ಟಿದವಳು. ಪತಿವ್ರತೆಯಾಗಿದ್ದಳು. ಅವಳು ಇಕ್ಷ್ವಾಕುವಂಶದ ರಾಜನಾದ ಹರ್ಯಶ್ವನನ್ನು ಕಾಮಿಸಿದ್ದಳು. ಒಂದು ದಿನದಲ್ಲಿ ಹರ್ಯಶ್ವನಿಂದ ಅಣ್ಣನಿಂದ ರಾಜ್ಯದಿಂದ ಹೊರಡಿಸಲ್ಪಟ್ಟನು. ಆದರೂ ಅವನು ಜಗಳವಾಡದೆ ಅಣ್ಣನೆಂಬ ಗೌರವದಿಂದ ಅಯೋಧ್ಯಾಪಟ್ಟಣವನ್ನೇ ಬಿಟ್ಟು ಸ್ವಲ್ಪ ಪರಿವಾರವುಳ್ಳವ ರಾಗಿ ಪತ್ನಿಯಿಂದ ಸಹಿತನಾಗಿ ಕಾಡಿನಲ್ಲಿ ವಿಹಾರ ಮಾಡುತ್ತಾ ಇದ್ದನು.

ಅಣ್ಣನಿಂದ ರಾಜ್ಯದಿಂದ ಹೊರಡಿಸಲ್ಪಟ್ಟ ಹರ್ಯಶ್ವನನ್ನು ನೋಡಿ ಅವನ ಹೆಂಡತಿಯಾದ ಮಧುಮತಿಯು 'ಬನ್ನಿರಿ. ರಾಜ್ಯದ ಆಸೆಯನ್ನು ಬಿಡಿರಿ. ನಾವಿಬ್ಬರೂ ನನ್ನ ತಂದೆಯಾದ ಮಧುವಿನ ಮನೆಗೆ ಹೋಗುವ. ಮನೋಹರವಾದ ಬೇಕಾದ ಪುಷ್ಪಫಲಗಳಿಂದ ಕೂಡಿದ ಮಧುವನವಿದೆ. ಅಲ್ಲಿ ಸ್ವರ್ಗದಲ್ಲಿ ಇರುವಂತೆ ವಿಹರಿಸುತ್ತಾ ಇರುವ. ನನ್ನ ತಂದೆಗೂ ತಾಯಿಗೂ ನೀವು ತುಂಬಾ ಪ್ರಿಯರಾಗಿರು ವಿರಿ. ನನ್ನ ನಿಮಿತ್ತವಾಗಿ ನನ್ನ ಸಹೋದರನಾದ ಲವಣಾಸುರನಿಗೂ ಅತ್ಯಂತ ಪ್ರಿಯರಾಗಿರುವಿರಿ. ರಾಜ್ಯದಲ್ಲಿ ಇರುವಂತೆ ಅಲ್ಲಿ ಸಂತೋಷದಿಂದ ಇರುವ ತುಂಬಾ ಅಭಿಮಾನಿಯಾದ ನಮ್ಮ ಮೇಲೆ ದ್ವೇಷವುಳ್ಳ ರಾಜ್ಯಮದದಿಂದ ಮತ್ತನಾದ ನಿಮ್ಮ ಅಣ್ಣನನ್ನು ಬಿಟ್ಟುಬಿಡುವ. ಭೃತ್ಯರಂತೆ ಇನ್ನೊಬ್ಬರನ್ನು ಆಶ್ರಯಿಸಿಕೊಂಡಿರುವ ಈ ನಿಂದ್ಯವಾದ ವಾಸಕ್ಕೆ ಧಿಕ್ಕಾರವಿರಲಿ. ನಾವಿಬ್ಬರೂ ನನ್ನ ತಂದೆಯ ಮನೆಗೆ ಹೋಗುವ' ಎಂದು ಹೇಳಿದಳು. ಅಣ್ಣನ ಮೇಲಿನ ಗೌರವದಿಂದ ಅವನನ್ನು ಹಿಂಸಿಸುವ ಅಭಿಪ್ರಾಯವಿಲ್ಲದವನಾದ ಆ ರಾಜನಿಗೆ ಹೆಂಡತಿಯ ಮಾತು ರುಚಿಸಿತು. ಕಾಮಿಯಾದ ಆ ಹರ್ಯಶ್ವನು ಪತ್ನಿಯಿಂದ ಸಹಿತನಾಗಿ ಮಧುವಿನ ಪುರಿಗೆ ಹೋದನು.

ಆಗ ದಾನವೇಂದ್ರನಾದ ಮಧುವು ಸಮಾಧಾನದಿಂದ 'ವತ್ಸ! ಹರ್ಯಶ್ವ!

1. ಭಾಗ. VI -5. ಹ.ವಂ.ವಿ.ಪ. ಅ-1, 7, 15

ಬರಬೇಕು. ನಿನ್ನ ದರ್ಶನದಿಂದ ತುಂಬಾ ಸಂತೋಷವನ್ನು ಹೊಂದಿದೆನು. ಮಧುವನ ಒಂದನ್ನು ಬಿಟ್ಟು ನನ್ನ ಎಲ್ಲಾ ರಾಜ್ಯವನ್ನು ನಿನಗೇ ಕೊಟ್ಟುಬಿಡುವೆನು. ಮಧುವನದಲ್ಲಿ ಲವಣನಿದ್ದುಕೊಂಡು ನಿನಗೆ ಯುದ್ಧದಲ್ಲಿ ಸಹಾಯವನ್ನು ಮಾಡುತ್ತಿರುವನು. ಸಮುದ್ರದ ತೀರದಲ್ಲಿರುವ ಗೋವುಗಳ ಸಮೃದ್ಧಿಯುಳ್ಳ ಗೋಪಾಲರಿಂದ ತುಂಬಿದ ಈ ರಾಜ್ಯವನ್ನು ಆಳುವವನಾಗು. ಆನರ್ತದೇಶವೆಂದು ನಿನ್ನ ದೇಶವು ತುಂಬಾ ದೊಡ್ಡದಾಗಿ ಆಗುವುದು. ಭವಿಷ್ಯವನ್ನು ನಾನು ತಿಳಿದಿರುವೆನು. ನಿನ್ನ ವಂಶವು ಯಯಾತಿಯ ಮಗನಾದ ಯದುವಿನ ವಂಶವನ್ನು ಪ್ರವೇಶಿಸುವುದು. ಅಂದರೆ ಯಯಾತಿಯ ಮಗನಾದ ಯದುರಾಜನೇ ಯೋಗಸಾಮರ್ಥ್ಯದಿಂದ ನಿನಗೆ ಮಗನಾಗಿ ಹುಟ್ಟುವನು. ಆದುದರಿಂದ ನಿನ್ನ ಸೂರ್ಯವಂಶವು ಚಂದ್ರವಂಶವನ್ನು ಪ್ರವೇಶಿಸುವುದು. ನಿನಗೆ ಈ ನನ್ನ ದೇಶವನ್ನು ಕೊಟ್ಟು ತಪಸ್ಸು ಮಾಡಲಿಕ್ಕೆ ಸಮುದ್ರಕ್ಕೆ ಹೋಗಬೇಕೆಂದು ನನ್ನ ಆಸೆಯು. ಲವಣಾಸುರನಿಂದ ಕೂಡಿಕೊಂಡು ನಿನ್ನ ವಂಶದಲ್ಲಿ ಅಭಿವೃದ್ಧಿಗಾಗಿ ಈ ದೇಶವನ್ನು ರಕ್ಷಿಸುತ್ತಾ ಇರು' ಎಂದು ಹೇಳಿದನು.

ಅದನ್ನು ಕೇಳಿ ಹರ್ಯಶ್ವನು ಹಾಗೆಯೇ ಆಗಲಿ ಎಂದು ಅಂಗೀಕರಿಸಿದನು. ಮಧುವು ತಪಸ್ಸು ಮಾಡಲಿಕ್ಕೆ ಸಮುದ್ರಕ್ಕೆ ಹೋದನು. ಹರ್ಯಶ್ವನು ದಿವ್ಯವಾದ ಆ ಪರ್ವತದಲ್ಲಿ ವಾಸಕ್ಕಾಗಿ ದಿವ್ಯವಾದ ಪಟ್ಟಣವನ್ನು ಮಾಡಿಸಿದನು. ಅದು ಆನರ್ತ ಎಂದು ಹೆಸರುಳ್ಳದ್ದು. ಗೋವುಗಳಿಂದ ತುಂಬಿದ್ದು. ಸ್ವಲ್ಪ ಕಾಲದಲ್ಲಿಯೇ ಸಮೃದ್ಧಿಯನ್ನು ಹೊಂದಿತು. ಹರ್ಯಶ್ವನು ಅಲ್ಲಿ ಇದ್ದುಕೊಂಡು ಧರ್ಮದಿಂದ ರಾಜ್ಯಭಾರ ಮಾಡಿದನು. ಆ ರಾಜನ ಸರಿಯಾದ ಪ್ರಚಾರದಿಂದ ಆ ರಾಜ್ಯವು ಬಹುಬೇಗನೆ ಅಭಿವೃದ್ಧಿಯನ್ನು ಹೊಂದಿತು. ಸಚ್ಚರಿತೆಯುಳ್ಳ ಸತ್ಪುತ್ರನನ್ನು ಪಡೆಯಬೇಕೆಂದು ಆಸೆಯುಳ್ಳ ಆ ಹರ್ಯಶ್ವನಿಗೆ ಮಧುಮತಿಯಲ್ಲಿ ಮಹಾಕೀರ್ತಿವಂತನಾದ ಯದು ಎಂಬ ಮಗನು ಹುಟ್ಟಿದನು. ಹರ್ಯಶ್ವನಿಗೆ ಅವನೊಬ್ಬನೇ ಮಗನಿದ್ದನು. ಹರ್ಯಶ್ವನು ಹತ್ತುಸಾವಿರ ವರ್ಷ ಧರ್ಮದಿಂದ ರಾಜ್ಯಭಾರವನ್ನು ಮಾಡಿ ಸ್ವರ್ಗಲೋಕವನ್ನು ಹೊಂದಿದನು.



# ಯದುರಾಜನ ಕಥೆ [1]

ತಂದೆಯು ಸ್ವರ್ಗಸ್ಥನಾದ ಮೇಲೆ ಯದುರಾಜನು ಧರ್ಮದಿಂದ ಪ್ರಜೆಗಳ ರಕ್ಷಣೆಯನ್ನು ಮಾಡಿದನು. ಅವನು ಒಂದು ದಿನದಲ್ಲಿ ಸಮುದ್ರದಲ್ಲಿ ಪತ್ನಿಯರಿಂದ ಸಹಿತನಾಗಿ ಜಲಕ್ರೀಡೆಯನ್ನು ಮಾಡಿದನು. ಅವನು ಸಮುದ್ರದಿಂದ ಮೇಲೆ ಬರಬೇಕು ಎಂದಿರುವಾಗ ಧೂಮ್ರವರ್ಣನೆಂದು ಹೆಸರುಳ್ಳ ಪರಾಕ್ರಮಶಾಲಿಯಾದ ಸರ್ಪರಾಜನು ನೀರಿನಲ್ಲಿ ಇರುವ ಮಹತ್ತಾದ ಸರ್ಪಗಳ ಪುರಕ್ಕೆ ವೇಗದಿಂದ ಸೆಳೆದುಕೊಂಡು ಹೋದನು. ಬಂಗಾರ ಮುತ್ತು ರತ್ನಾದಿಗಳಿಂದ ಅಲಂಕೃತವಾದ ಪ್ರಕಾಶಮಾನವಾದ ಸರ್ಪಸ್ತ್ರೀಯರಿಂದ ತುಂಬಿದ್ದ ಆ ನಗರನ್ನು ಪ್ರವೇಶಿಸಿದನು. ಅಲ್ಲಿ ಅವನಿಗೆ ಸುಂದರವಾದ ಆಸನವನ್ನು ಕೊಟ್ಟರು. ಆ ಉತ್ತಮವಾದ ಆಸನದಲ್ಲಿ ಕೂತಿದ್ದ ಅವನೊಡನೆ ಸರ್ಪರಾಜನಾದ ಧೂಮ್ರವರ್ಣನು 'ನಿನ್ನ ತಂದೆಯು ಈ ಮಹಾವಂಶವನ್ನು ಉಂಟುಮಾಡಿ ತೇಜಸ್ವಿಯಾದ ನಿನ್ನನ್ನು ಮಗನನ್ನಾಗಿ ಪಡೆದು ಸ್ವರ್ಗವನ್ನು ಹೊಂದಿದನು. ಯಾದವವಂಶವೆಂದು ನಿನ್ನ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆಯುವ ಈ ವಂಶವನ್ನು ಲೋಕದ ಮಂಗಳಕ್ಕೋಸ್ಕರ ನಿನ್ನ ತಂದೆಯು ಸ್ಥಾಪನೆ ಮಾಡಿದನು. ಈ ವಂಶದಲ್ಲಿ ದೇವತೆಗಳೂ ಋಷಿಗಳೂ ಸರ್ಪಗಳೂ ಮನುಷ್ಯರಾಗಿ ಹುಟ್ಟುವರು.

ಆದುದರಿಂದ ಯೌವನಾಶ್ವರಾಜನ ತಂಗಿಯಲ್ಲಿ ನನ್ನಿಂದ ಹುಟ್ಟಿರುವ ಸದಾಚಾರ ಸಂಪನ್ನರಾದ ಐದು ಕುಮಾರಿಯರನ್ನು ವಿವಾಹ ಮಾಡಿಕೊಳ್ಳುವವನಾಗು. ನಿನ್ನ ವಂಶದವರು ಭೈಮ ಕುಕರ ಭೋಜ ಅಂಧಕ ಯಾದವ ದಾಶಾರ್ಹ ವೃಷ್ಣಿ ಎಂದು ಪ್ರಸಿದ್ಧಿಯನ್ನು ಹೊಂದುವರು' ಎಂದು ಹೇಳಿ ತನ್ನ ಐದು ಜನ ಹೆಣ್ಣುಮಕ್ಕಳನ್ನು ಯದುರಾಜನಿಗೆ ಮದುವೆ ಮಾಡಿಕೊಟ್ಟನು. 'ಈ ಹೆಣ್ಣುಮಕ್ಕಳಲ್ಲಿ ತಂದೆತಾಯಿಗಳ ತೇಜಸ್ಸಿನಿಂದ ಕೂಡಿದ ಐದು ಜನರ ಗಂಡುಮಕ್ಕಳು ನಿನಗೆ ಹುಟ್ಟುವರು. ಅವರು ನನ್ನ ವರದಿಂದ ನೀರಿನ ಒಳಗೆಯೂ ಸಂಚರಿಸುವ ಸಾಮರ್ಥ್ಯವುಳ್ಳವರಾಗುವರು. ನಿನ್ನ ವಂಶದಲ್ಲಿ ಇಚ್ಛಾನುಸಾರವಾದ ರೂಪವುಳ್ಳ ರಾಜರು ಹುಟ್ಟುವರು' ಎಂದು ವರವನ್ನು ಕೊಟ್ಟನು. ಯದುರಾಜನು ವರವನ್ನೂ ಕನ್ಯೆಯರನ್ನೂ ಪಡೆದು ವೇಗದಿಂದ ನೀರಿನಿಂದ ಮೇಲಕ್ಕೆ ಬಂದನು. ಅವನು ಐದು ಕನ್ಯೆಯರ ಮಧ್ಯದಲ್ಲಿ ಐದು ನಕ್ಷತ್ರಗಳಿಂದ ಕೂಡಿದ ಚಂದ್ರನಂತೆ ಶೋಭಿಸಿದನು.

1. ಹ.ವಂ.ಪ. ಅ-33

ವಿವಾಹದ ಅಲಂಕಾರದಿಂದಲೇ ಸಹಿತನಾಗಿ ಬಂದು ಅಂತಃಪುರವನ್ನೆಲ್ಲಾ ನೋಡಿದನು. ಪತ್ನಿಯರನ್ನು ಸಮಾಧಾನಪಡಿಸಿದನು.

ಯದುರಾಜನು ಬಹುಕಾಲದ ಮೇಲೆ ಆ ನಾಗಕನ್ಯೆಯರಲ್ಲಿ ಪರಾಕ್ರಮ ಶಾಲಿಗಳಾದ ವಂಶಕ್ಕೆ ಕಾರಣರಾದ ಮುಚುಕುಂದ, ಪದ್ಮವರ್ಣ, ಮಾಧವ, ಸಾರಸ, ಹರಿತ ಎಂಬ ಐದು ಜನ ಮಕ್ಕಳನ್ನು ಪಡೆದನು. ಅವರನ್ನು ನೋಡುತ್ತಾ ಸಂತೋಷ ದಿಂದ ಇದ್ದನು.

ಆ ಐದು ಜನರೂ ವಯಸ್ಸಾದ ಮೇಲೆ ತಂದೆಯೊಡನೆ 'ನಾವು ಒಳ್ಳೇ ಬಲವುಳ್ಳವರಾಗಿರುವೆವು. ನೀವು ನಮಗೆ ಆಜ್ಞಾ ಮಾಡಬೇಕು. ನಾವು ಯಾವ ಕಾರ್ಯವನ್ನು ಮಾಡಬೇಕು?' ಎಂದು ಕೇಳಿದರು. ಅದಕ್ಕೆ ಯದುರಾಜನು ಪರಮ ಪ್ರೀತಿಯಿಂದ 'ಮುಚುಕುಂದನು ವಿಂಧ್ಯ ಋಕ್ಷವಾನ್ ಎಂಬ ಎರಡು ಪರ್ವತಗಳ ಸುತ್ತಲೂ ಎರಡು ಪಟ್ಟಣಗಳನ್ನು ನಿರ್ಮಿಸಲಿ. ಸಹ್ಯಪರ್ವತದ ಮೇಲೆ ದಕ್ಷಿಣದಿಕ್ಕಿನಲ್ಲಿ ಪದ್ಮವರ್ಣನು ಬೇಗನೆ ಒಂದು ಪಟ್ಟಣವನ್ನು ನಿರ್ಮಿಸಲಿ. ಸಹ್ಯಪರ್ವತದ ಮೇಲೆಯೇ ಪಶ್ಚಿಮದಿಕ್ಕಿನಲ್ಲಿ ಸಂಪಿಗೆ ವೃಕ್ಷಗಳಿಂದ ಅಲಂಕೃತವಾದ ಪ್ರದೇಶದಲ್ಲಿ ಸಾರಸನು ಮನೋಹರವಾದ ಪಟ್ಟಣವನ್ನು ಕಟ್ಟಿಸಲಿ. ಹರಿತನು ಸಮುದ್ರದಲ್ಲಿ ಧೂಮ್ರವರ್ಣ ಎಂಬ ಸರ್ಪರಾಜನ ದ್ವೀಪವನ್ನು ಆಳುತ್ತಾ ಇರಲಿ. ಜ್ಯೇಷ್ಠಪುತ್ರನಾದ ಧರ್ಮವನ್ನು ತಿಳಿದವನಾದ ಮಾಧವನು ಯೌವರಾಜ್ಯವುಳ್ಳವ ನಾಗಿ ನನ್ನ ಪುರವನ್ನೇ ರಕ್ಷಿಸುತ್ತಾ ಇರುವನು' ಎಂದು ಹೇಳಿದನು.

ತಂದೆಯ ಆಜ್ಞೆಯಂತೆ ಅವರೆಲ್ಲರೂ ಪಟ್ಟಣಗಳನ್ನು ಕಟ್ಟಿಸಿದರು. ಮುಚುಕುಂದ ರಾಜನು ತುಂಬಾ ಕಲ್ಲುಗಳಿಂದ ಕೂಡಿದ ನರ್ಮದಾತೀರದಲ್ಲಿ ವಿಂಧ್ಯಮಧ್ಯದಲ್ಲಿ ಪಟ್ಟಣವನ್ನು ಕಟ್ಟಿಸಿದನು. ಆ ಸ್ಥಳವನ್ನು ಶೋಧನ ಮಾಡಿದನು. ಸೇತುವೆಯನ್ನು ಸರಿಯಾಗಿ ಮಾಡಿಸಿದನು. ಪಟ್ಟಣದ ಸುತ್ತಲೂ ತುಂಬಾ ನೀರುಳ್ಳ ಜಲದುರ್ಗವನ್ನು ಮಾಡಿಸಿದನು. ಅಲ್ಲಲ್ಲಿ ದೇವಾಲಯಗಳನ್ನು ಕಟ್ಟಿಸಿದನು. ರಥದ ಮಾರ್ಗಗಳನ್ನು ಇತರ ಮಾರ್ಗಗಳನ್ನು ನಾಲ್ಕು ರಸ್ತೆಗಳನ್ನು ವನಗಳನ್ನು ಮಾಡಿಸಿದನು. ಹಣದಿಂದ ತುಂಬಿದ ಇಂದ್ರದೇವರ ಅಮರಾವತಿಯಂತೆ ಇರುವ ಆ ಪಟ್ಟಣವನ್ನು ಬಹುಬೇಗನೇ ಮಾಡಿಸಿದನು. ಮಹಾಕಲ್ಲುಗಳಿಂದ ಕೂಡಿದ ಆ ಪಟ್ಟಣಕ್ಕೆ ಮಾಹಿಷ್ಮತೀ ಎಂದು ಹೆಸರಿಟ್ಟನು. ಎರಡು ವಿಂಧ್ಯ ಪರ್ವತಗಳ ಭಾಗದ ಮಧ್ಯದಲ್ಲಿ ಆ ಪಟ್ಟಣವನ್ನು ಮಾಡಿಸಿದನು. ಋಕ್ಷವಾನ್ ಎಂಬ ಪರ್ವತದ ಹತ್ತಿರದಲ್ಲೇ ಸುತ್ತಲೂ ಪುರಿಕಾ ಎಂಬ ಪಟ್ಟಣವನ್ನು ಮಾಡಿಸಿದನು. ಮುಚುಕುಂದನು

ಆ ಎರಡು ನಗರಗಳನ್ನು ಧರ್ಮದಿಂದ ಪರಿಪಾಲನೆ ಮಾಡುತ್ತಿದ್ದನು. ಪದ್ಮವರ್ಣನು ಸಹ್ಯಪರ್ವತದ ಮೇಲೆ ವೇಣೂನದಿಯ ತೀರದಲ್ಲಿ ಪದ್ಮಾವತವೆಂದು ಕರವೀರವೆಂದು ಹೆಸರುಳ್ಳ ಪಟ್ಟಣವನ್ನು ಮಾಡಿಸಿದನು. ಅಲ್ಲಿ ಭೂಪ್ರದೇಶವು ಕಡಿಮೆಯಾಗಿದ್ದರೂ ಅಲ್ಲೇ ಹತ್ತಿರಹತ್ತಿರವಾಗಿ ಮನೆಗಳನ್ನೆಲ್ಲಾ ಕಟ್ಟಿಸಿ ಸುತ್ತಲೂ ದೊಡ್ಡ ಪ್ರಾಕಾರವನ್ನು ಮಾಡಿಸಿದನು. ಸಾರಸನೂ ಸಂಪಿಗೆ ಮರಗಳಿಂದಲೂ ಅಶೋಕವೃಕ್ಷಗಳಿಂದಲೂ ತುಂಬಿದ ಕ್ರೌಂಚಪುರವೆಂಬ ಪಟ್ಟಣವನ್ನು ಕಟ್ಟಿಸಿದನು. ಅಲ್ಲಿ ಕೆಂಪುಮಣ್ಣು ಇದ್ದಿತು. ಹರಿತನು ಸಮುದ್ರದ್ವೀಪವನ್ನು ಪರಿಪಾಲಿಸುತ್ತಿದ್ದನು. ಅವನಿಗೆ ಮದ್ಗುರಾ ಎಂದು ಪ್ರಸಿದ್ಧರಾದ ಬೆಸ್ತರು ಸಮುದ್ರದಲ್ಲಿ ಮುಳುಗಿ ಶಂಖಗಳನ್ನು ತಂದುಕೊಡುತ್ತಿದ್ದರು. ಇನ್ನು ಕೆಲವು ಬೆಸ್ತರು ಹವಳಗಳನ್ನು ಪ್ರಕಾಶಮಾನಗಳಾದ ಮುತ್ತುಗಳನ್ನು ತಂದುಕೊಡುತ್ತಿದ್ದರು. ಇನ್ನೂ ಕೆಲವರು ದೋಣಿಯಲ್ಲಿ ಸಂಚರಿಸುತ್ತಾ ನೀರಿನಲ್ಲಿ ಆಗುವ ಅನೇಕರತ್ನಗಳನ್ನು ತಂದುಕೊಡುತ್ತಿದ್ದರು. ಅವರು ಮೀನಿನ ಮಾಂಸದಿಂದ ಜೀವಿಸುತ್ತಾ ರತ್ನಗಳನ್ನು ತಂದುಕೊಡುತ್ತಿದ್ದರು. ಈ ಪ್ರಕಾರವಾಗಿ ಇಕ್ಷ್ವಾಕುವಂಶದಿಂದ ಯದುವಂಶವು ಹೊರಟು ಅವನ ಮಕ್ಕಳಿಂದ ನಾಲ್ಕು ವಿಭಾಗಗಳನ್ನು ಹೊಂದಿತು. ಯದುರಾಜನು ಮಾಧವ ಎಂಬ ಮಗನಿಗೆ ರಾಜ್ಯವನ್ನು ಕೊಟ್ಟು ದೇಹವನ್ನು ಪರಿತ್ಯಜಿಸಿ ಸ್ವರ್ಗಕ್ಕೆ ಹೋದನು. ಯಯಾತಿರಾಜನ ಮಗನಾದ ಯದುರಾಜನೇ ಈರೀತಿಯಾಗಿ ಯೋಗಸಾಮರ್ಥ್ಯದಿಂದ ಇಕ್ಷ್ವಾಕುವಂಶದಲ್ಲಿ ಹುಟ್ಟಿದನು. ಈ ಯದುರಾಜನ ವಂಶದಲ್ಲಿಯೇ ಶ್ರೀಕೃಷ್ಣಪರಮಾತ್ಮನು ಅವತರಿಸಿದನು. ಆ ಮಾಧವನಿಗೆ ಸತ್ವತ ಎಂಬ ಮಗನು ಹುಟ್ಟಿದನು. ಸತ್ವತನಿಗೆ ಭೀಮ ಎಂಬ ಮಗನು ಹುಟ್ಟಿದನು. ಸತ್ವತನಿಂದ ಮುಂದೆ ಬರುವವರಿಗೆಲ್ಲಾ ಸಾತ್ವತರು ಎಂದು ಹೆಸರಾಯಿತು. ಭೀಮನಿಂದಾಗಿ ಭೈಮ ಎಂದು ಹೆಸರಾಯಿತು. ಭೀಮನು ರಾಜನಾಗಿರುವಾಗ ಶತ್ರುಘ್ನನು ಲವಣಾಸುರನನ್ನು ಸಂಹರಿಸಿ ಮಧುವನವನನು ಕಡಿದು ಮಧುರಾಪಟ್ಟಣವನ್ನು ಮಾಡಿಸಿದನು. ರಾಮದೇವರು ವೈಕುಂಠಕ್ಕೆ ಪ್ರಯಾಣ ಮಾಡಿದ ಮೇಲೆ ಮಧುವನವು ಮಧುವಿಗೆ ಸೇರಿದ್ದ ಕಾರಣ ಅವನ ಮಗನಾದ ಲವಣಾಸುರನು ಸಾಯಲು ಭೀಮನು ಮಧುವಿನ ದೌಹಿತ್ರವಂಶದಲ್ಲಿ ಸೇರಿದ್ದ ಕಾರಣ ಆ ಮಧುರಾಪಟ್ಟಣವನ್ನು ಹೊಂದಿದನು. ಅಯೋಧ್ಯೆಯಲ್ಲಿ ಕುಶನು ರಾಜನಾಗಿಯೂ ಲವನು ಯುವರಾಜನಾಗಿಯೂ ಇರುವಾಗ ಭೀಮನ ಮಗನಾದ ಅಂಧಕನು ಮಧುರಾಪಟ್ಟಣದಲ್ಲಿ ರಾಜ್ಯಭಾರ ಮಾಡಿದನು.



# ದಿಲೀಪರಾಜನ ಕಥೆ [1]

ವೈವಸ್ವತಮನುವಿನ ವಂಶದಲ್ಲಿ ದಿಲೀಪನೆಂಬ ರಾಜನಿದ್ದನು. ಅವನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಮಗಧರಾಜನ ಮಗಳಾದ ಸುದಕ್ಷಿಣೆಯೆಂದು ಹೆಸರುಳ್ಳವಳು ಅವನ ಹೆಂಡತಿಯು. ಬಹುದಿವಸಗಳಾದರೂ ರಾಜನಿಗೆ ತನ್ನ ಪತ್ನಿಯಲ್ಲಿ ಸಂತಾನವಾಗಲಿಲ್ಲ. ರಾಜನು 'ತಾನು ಸರಿಯಾದ ಧರ್ಮದಲ್ಲಿ ಇದ್ದರೂ ತನ್ನ ಪತ್ನಿಯಲ್ಲಿ ಏಕೆ ಸಂತಾನವಾಗಲಿಲ್ಲ. ತ್ರಿಕಾಲಜ್ಞಾನಿಗಳಾದ ಗುರುಗಳಾದ ವಸಿಷ್ಠರೇ ಈ ವಿಷಯವನ್ನು ತಿಳಿಯುವರು' ಎಂದು ಯೋಚಿಸಿಕೊಂಡು ರಾಜ್ಯವನ್ನು ಮಂತ್ರಿಗಳಲ್ಲಿ ಒಪ್ಪಿಸಿ ಭಗವಂತನನ್ನು ಪೂಜಿಸಿ ಪತ್ನೀಸಹಿತನಾಗಿ ವಸಿಷ್ಠರ ಆಶ್ರಮಕ್ಕೆ ಹೋದನು. ಅರುಂಧತಿಯಿಂದ ಸಹಿತರಾಗಿ ಕುಳಿತಿದ್ದ ವಸಿಷ್ಠರಿಗೆ ನಮಸ್ಕರಿಸಿದನು. ವಸಿಷ್ಠರೂ ಅರುಂಧತಿಯೂ ಆ ದಂಪತಿಗಳಿಗೆ ಆಶೀರ್ವದಿಸಿದರು. ವಸಿಷ್ಠರು ಮಧುಪರ್ಕಾದಿಗಳಿಂದ ಅತಿಥಿಯಾದ ರಾಜನಿಗೆ ಸತ್ಕರಿಸಿ ಯೋಗಕ್ಷೇಮ ವಿಚಾರವನ್ನು ಮಾಡಿ ತನ್ನ ಯೋಗಪ್ರಭಾವದಿಂದ ಉಂಟಾದ ಭಕ್ಷ್ಯಭೋಜನ ಗಳಿಂದ ರಾಜನಿಗೆ ಭೋಜನ ಮಾಡಿಸಿದರು. ಅರುಂಧತಿಯೂ ಸಹ ಆದರವುಳ್ಳವ ಳಾಗಿ ರಾಣಿಗೆ ನಾನಾ ಭಕ್ಷ್ಯಭೋಜ್ಯದ ಭೋಜನ ಮಾಡಿಸಿದಳು. ಭೋಜನಮಾಡಿ ಸ್ವಸ್ಥನಾಗಿ ಕೂತಿದ್ದ ರಾಜನ ಕೈಯನ್ನು ಹಿಡಿದುಕೊಂಡು ವಸಿಷ್ಠರು 'ರಾಜನೇ! ಇಕ್ಷ್ವಾಕುವಂಶದ ರಾಜರು ಮಕ್ಕಳು ಪಡೆದು ಅವರಲ್ಲಿ ರಾಜ್ಯವನ್ನು ಒಪ್ಪಿಸಿ ಕೊನೆಯ ಕಾಲದಲ್ಲಿ ತಪಸ್ಸು ಮಾಡಲಿಕ್ಕೆ ವನಕ್ಕೆ ಬರುವರು. ನೀನು ಇನ್ನೂ ತರುಣನಾಗಿರುವಿ. ಮಕ್ಕಳಾಗಿಲ್ಲ. ತಪಸ್ಸು ಮಾಡಲಿಕ್ಕೆ ಅಧಿಕಾರಿಯಲ್ಲ. ಹೀಗೆ ಇರುವಾಗ ರಾಜ್ಯವನ್ನು ಬಿಟ್ಟು ಕಾಡಿಗೆ ಏಕೆ ಬಂದಿರುವಿ?' ಎಂದು ಕೇಳಿದರು.

ಅದಕ್ಕೆ ರಾಜನು 'ಪೂಜ್ಯರೇ! ನಾನು ಅಂತಹ ರಾಜ್ಯವನ್ನು ಬಿಟ್ಟು ಸ್ವಇಚ್ಛೆಯಿಂದ ತಪಸ್ಸನ್ನು ಮಾಡಲಿಕ್ಕಾಗಿ ಇಲ್ಲಿಗೆ ಬಂದಿಲ್ಲ. ಇಕ್ಷ್ವಾಕುವಂಶದ ರಾಜರು ಮಕ್ಕಳಲ್ಲಿ ರಾಜ್ಯವನ್ನು ಒಪ್ಪಿಸಿ ತಪೋವನಕ್ಕೆ ಬರುವರೆಂದು ತಾವು ಹೇಳಿದ ಮಾತು ಸತ್ಯವಾದದ್ದು. ನನ್ನ ಪೂರ್ವಿಕರು ಸ್ವರ್ಗಸ್ಥರಾದರೂ ಇಷ್ಟರವರೆಗೆ ಅವರ ಸಂತಾನವಿದೆ. ಲೋಕದಲ್ಲಿ ಬಾಲ್ಯವು ಹೋಗಿ ಯೌವನವು ಬರುವುದು. ಅದೂ ಹೋಗಿ ಮುದಿತನವು ಬರುವುದು. ಆಮೇಲೆ ಮರಣವು ಉಂಟಾಗುವುದು. ಇದರಲ್ಲಿ ಸಂದೇಹವೇ ಇರುವುದಿಲ್ಲ. ಗುರುಗಳೇ! ಆ ರೀತಿಯಾಗಿ ನಾನು

1. ಮ.ತ್ಸ್ಯಪು. 12; ಮಭಾ.ವ.ತ. 107; ವಿ.ಪ.53; ಪ.ಪು.ಉ.ಖಂ.198, 199

ಮೃತ್ಯುವನ್ನು ಹೊಂದಿದ ಮೇಲೆ ಮಕ್ಕಳಿಲ್ಲದ ಕಾರಣ ಈ ರಾಜ್ಯವು ಯಾರಿಗೆ ಸೇರುತ್ತದೋ ತಿಳಿಯಲಿಲ್ಲ. ಆದುದರಿಂದ ಮಕ್ಕಳಿಲ್ಲದ ನನಗೆ ರಾಜ್ಯದಲ್ಲಿ ಇದ್ದರೂ ಮುಂದಿನ ಯೋಜನೆಯನ್ನು ಮಾಡಿ ರಾಜ್ಯದಲ್ಲಿ ಆಸೆಯೇ ಉಂಟಾಗುವುದಿಲ್ಲ. ತಾವು ಧರ್ಮ ಅರ್ಥ ಕಾಮ ಮೂರನ್ನೂ ಉಂಟುಮಾಡಲಿಕ್ಕೆ ಸಮರ್ಥರು. ತಪಸ್ವಿಗಳಾದ ಗುರುಗಳೇ! ನನಗೆ ಯಾವ ದೋಷದಿಂದ ಮಗನಾಗಲಿಲ್ಲ? ಧ್ಯಾನದೃಷ್ಟಿಯಿಂದ ಏನು ದೋಷವಿದೆಯೆಂದು ತಿಳಿದು ಹೇಳಿರಿ. ಅದಕ್ಕೆ ಪ್ರಾಯಶ್ಚಿತ್ತವನ್ನು ಮಾಡುವೆನು' ಎಂದು ಹೇಳಿದನು.

ವಸಿಷ್ಠರು 'ರಾಜಶ್ರೇಷ್ಠನೇ! ನೀನು ಪೂರ್ವದಲ್ಲಿ ಒಂದು ದಿನದಲ್ಲಿ ಇಂದ್ರದೇವರನ್ನು ಸೇವಿಸಿ ಬರುತ್ತಿರುವಾಗ ಋತುಸ್ನಾತಳಾದ ಪತ್ನಿಯನ್ನು ಸ್ಮರಿಸಿಕೊಂಡು ಬರುವವನಾದಿ. ಸಂತಾನವನ್ನು ಹೊಂದಬೇಕೆಂದು ಕುತೂಹಲದಿಂದ ನೀನು ವೇಗದಿಂದ ಬರುತ್ತಿರುವಾಗ ದಾರಿಯಲ್ಲಿ ದೇವವೃಕ್ಷದ ಕೆಳಗೆ ಕಾಮಧೇನುವು ನಿಂತಿತ್ತು. ನೀನು ಅದಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡದೆ ಹೋಗಲು ಅದು ಸಹಿಸಿಕೊಂಡು ತನ್ನ ಸಂತಾನವನ್ನು ಸೇವಿಸುವವರೆಗೆ ನಿನಗೆ ಸಂತಾನವಾಗದೆ ಇರಲೆಂದು ಶಾಪವನ್ನು ಕೊಟ್ಟಿತು. ಸತ್ಪುತ್ರನನ್ನು ಪಡೆಯಬೇಕೆಂದು ಕುತೂಹಲದಿಂದ ಹೋಗುತ್ತಿದ್ದ ನಿನಗೆ ಆ ಶಾಪವು ಕೇಳಿಸಲಿಲ್ಲ. ರಥಚಕ್ರದ ಶಬ್ದದಿಂದ ನಿನ್ನ ಸಾರಥಿಗೂ ಆ ಶಾಪವು ಕೇಳಿಸಲಿಲ್ಲ. ಕಾಮಧೇನುವಿನ ಮಗಳ ಮಗನಾದ ನಂದಿನಿಯನ್ನು ಕರುವಿನಿಂದ ಸಹಿತವಾಗಿ ನೀನು ಹೆಂಡತಿಯಿಂದ ಕೂಡಿಕೊಂಡು ಸೇವಿಸು. ಅವಳು ನಿನಗೆ ಮಗನನ್ನು ಕೊಡುವಳು' ಎಂದರು. ಈರೀತಿಯಾಗಿ ವಸಿಷ್ಠರು ಹೇಳುತ್ತಿರಲು ನಂದಿನಿಯು ಕರುವಿನ ಮೇಲಿನ ಸ್ನೇಹದಿಂದ ಹಾಲನ್ನು ಸುರಿಸುತ್ತಾ ತಪೋವನದಿಂದ ಬಂದಿತು. ಅದನ್ನು ನೋಡಿ ವಸಿಷ್ಠರು ಸಂತೋಷಯುಕ್ತವಾದ ಮನಸ್ಸುಳ್ಳವರಾಗಿ ರಾಜನಿಗೆ ಆ ನಂದಿನಿಯನ್ನು ತೋರಿಸಿ 'ರಾಜನೇ! ಸ್ಮರಣೆಮಾತ್ರದಿಂದಲೇ ಶುಭವನ್ನು ಉಂಟುಮಾಡುವ ನಂದಿನಿಯು ಬಂದೇ ಬಂದಳು. ಆದುದರಿಂದ ನಿನಗೆ ಕಾರ್ಯಸಿದ್ಧಿಯು ಬೇಗನೇ ಆಗುವುದೆಂದು ತಿಳಿಯುವವನಾಗು. ಅರಣ್ಯದಲ್ಲಿಯೂ ಆಶ್ರಮದಲ್ಲಿಯೂ ಇವಳನ್ನು ಅನುಸರಿಸುತ್ತಾ ಆರಾಧನೆ ಮಾಡು. ನಿನಗೆ ನಿಶ್ಚಯವಾಗಿಯೂ ಮಗನನ್ನು ಕೊಡುವಳು. ನೀನು ಧನುರ್ಧಾರಿಯಾಗಿ ಇದ್ದುಕೊಂಡು ಯಾವ ವನದ ಪ್ರಾಣಿಯೂ ಇವಳನ್ನು ಹಿಂಸಿಸದಂತೆ ನೋಡಿಕೊ' ಎಂದು ಹೇಳಿದರು. ಮೃದುವಾಗಿ ಹಾಗೆಯೇ ಆಗಲಿ ಎಂದು ರಾಜನು ಹೇಳಲು ಅವನಿಗೂ ಅವನ ಪತ್ನಿಗೂ ರಾತ್ರಿಯಲ್ಲಿ ಮಲಗಲಿಕ್ಕೆ

ಪರ್ಣಶಾಲೆಯನ್ನು ಕೊಟ್ಟರು. ಅಲ್ಲಿ ರಾಜನು ನೆಲದಮೇಲೆ ದರ್ಭೆಗಳನ್ನು ಹಾಸಿ ಅದರ ಮೇಲೆ ಪತ್ನಿಯ ಸಹ ಮಲಗಿದನು.

ಮರುದಿನ ರಾಜನು ಉಷಃಕಾಲದಲ್ಲಿಯೇ ಎದ್ದು ಪತ್ನಿಯಿಂದ ಪುಷ್ಪಗಳಿಂದ ಪೂಜಿತಳಾದ ನಂದಿನಿಯನ್ನು ಕರೆದುಕೊಂಡು ಅರಣ್ಯಕ್ಕೆ ಹೋದನು. ಅದು ಹೋಗುವಾಗ ನೆರಳಿನಂತೆ ಅದರ ಹಿಂದೆಯೇ ಹೋದನು. ಅದು ಸಸ್ಯಗಳನ್ನು ತಿನ್ನುವಾಗ ತಾನೂ ಗೆಡ್ಡೆಹಣ್ಣುಗಳನ್ನು ಭಕ್ಷಣೆ ಮಾಡಿದನು. ಅದು ಮರದ ನೆರಳಲ್ಲಿ ಮಲಗಿರುವಾಗ ತಾನೂ ಕೂತುಕೊಳ್ಳುವನು. ಅದು ನೀರನ್ನು ಕುಡಿಯುವಾಗ ತಾನೂ ನೀರನ್ನು ಕುಡಿಯುತ್ತಿದ್ದನು. ಮತ್ತು ಅದರ ಬಾಯಿಗೆ ಹುಲ್ಲನ್ನು ಕೊಡುತ್ತಿದ್ದನು. ಸೊಳ್ಳೆಯನ್ನು ಓಡಿಸುತ್ತಿದ್ದನು. ಮೈಯನ್ನು ತುರಿಸುತ್ತಿದ್ದನು. ಈರೀತಿಯಾಗಿ ನಂದಿನಿಯ ಸೇವೆಯನ್ನು ಮಾಡಿದನು. ತರುವಾಯ ಸಾಯಂಕಾಲವಾಗಲು ನಂದಿನಿಯು ತನ್ನ ಪಾದಧೂಳಿಯಿಂದ ರಾಜನ ದೇಹವನ್ನು ಪವಿತ್ರವನ್ನಾಗಿ ಮಾಡುತ್ತಾ ಆಶ್ರಮಕ್ಕೆ ಹಿಂದೆ ತಿರುಗಿಬಂದಳು. ಆಶ್ರಮದ ಸಮೀಪಕ್ಕೆ ಬರುತ್ತಿರಲು ರಾಣಿಯು ಬಂದು ಎದುರುಗೊಂಡು ಗಂಧ ಮಂತ್ರಾಕ್ಷತೆ ನೈವೇದ್ಯ ಧೂಪಾದಿಗಳನ್ನು ತಂದು ಪೂಜಿಸಿ ಪುನಃ ಪುನಃ ನಮಸ್ಕಾರ ಮಾಡಿ ಪ್ರದಕ್ಷಿಣೆ ಬಂದು ಕೈಮುಗಿದುಕೊಂಡು ಮುಂದೆ ನಿಂತಳು. ನಂದಿನಿಯು ರಾಣಿಯ ಶ್ರದ್ಧೆಯಿಂದ ಮಾಡಿದ ಪೂಜೆಯನ್ನು ಸ್ವೀಕರಿಸಿ ಸ್ವಲ್ಪಹೊತ್ತು ನಿಂತು ಆಮೇಲೆ ರಾಣಿಯರಿಂದ ಕೂಡಿಕೊಂಡು ಬಂದಳು. ಇದೇ ರೀತಿಯಾಗಿ ದಿಲೀಪರಾಜನು ನಂದಿನಿಯನ್ನು ಇಪ್ಪತ್ತೊಂದು ದಿವಸ ಸೇವಾ ಮಾಡಿದನು. ತರುವಾಯ ನಂದಿನಿಯು ರಾಜನ ಅಭಿಪ್ರಾಯವನ್ನು ತಿಳಿಯಬೇಕೆಂದು ಅಭಿಪ್ರಾಯವುಳ್ಳವಳಾಗಿ ನಿರ್ಭಯಳಾಗಿ ತುಂಬಾ ಹುಲ್ಲು ಬೆಳೆದಿದ್ದ ಹಿಮವತ್ಪರ್ವತದ ಗುಹೆಗೆ ಹೋದಳು. ರಾಜನು ಹಿಮವತ್ಪರ್ವತದ ಶೋಭೆಯನ್ನು ನೋಡುತ್ತಾ ಇದ್ದನು. ಅಷ್ಟರಲ್ಲಿ ಎಲ್ಲಿಂದಲೋ ಒಂದು ಸಿಂಹವು ಬಂದು ಬಲಾತ್ಕಾರದಿಂದ ನಂದಿನಿಯನ್ನು ಹಿಡಿಯಿತು. ಆಗ ನಂದಿನಿಯು ಬಹು ದುಃಖಪಟ್ಟಂತೆ ತೋರಿಸುತ್ತಾ ಕೇಳುವವರಿಗೆ ದಯೆಯು ಬರುವಂತೆ ಕೂಗಿಕೊಂಡಿತು. ನಂದಿನಿಯ ಕೂಗುವ ಸ್ವರವನ್ನು ಕೇಳಿ ರಾಜನು ಹಿಮವತ್ಪರ್ವತದ ಮೇಲೆ ಇಟ್ಟಿದ್ದ ದೃಷ್ಟಿಯನ್ನು ಅಲ್ಲಿಂದ ತಿರುಗಿಸಿದನು. ನಂದಿನಿಯು ಕಣ್ಣೀರನ್ನು ಸುರಿಸುತ್ತಿರುವುದನ್ನೂ ಅದರ ಮೇಲೆ ಕೂತಿದ್ದ ತೀಕ್ಷ್ಣ ಹಲ್ಲು ಉಗುರುಗಳಿಂದ ಕೂಡಿದ ಸಿಂಹವನ್ನು ನೋಡಿ ತುಂಬಾ ವ್ಯಥೆಯನ್ನು ಹೊಂದಿದನು. ಸಿಂಹದಿಂದ ಹಿಡಿಯಲ್ಪಟ್ಟ ಆ ನಂದಿನಿಯನ್ನು ನೋಡಿ ರಾಜನು ಬತ್ತಳಿಕೆಯಿಂದ

(ಬಾಣದ ಚೀಲದಿಂದ) ಬಾಣವನ್ನು ತೆಗೆಯಲಿಕ್ಕೆ ಬಲಕೈಯನ್ನು ಎತ್ತಿದನು. ಬಾಣವನ್ನು ತೆಗೆದು ಸಿಂಹವನ್ನು ಕೊಲ್ಲಬೇಕೆಂದು ಧನುಸ್ಸಿಗೆ ಜೋಡಿಸಿ ಕಿವಿಯವರೆಗೆ ಸೆಳೆದನು. ಸಿಂಹವನ್ನು ನೋಡಿದ ಕೂಡಲೇ ಸಮಸ್ತ ಅವಯವಗಳೂ ಸ್ತಬ್ಧವಾದವು. ರಾಜನಿಂದ ಬಾಣವನ್ನು ಬಿಡಲಿಕ್ಕೆ ಸಾಧ್ಯವಾಗಲಿಲ್ಲ. ಆಶ್ಚರ್ಯವುಳ್ಳವನಾದನು. ಅಂತಹ ರಾಜನನ್ನು ನೋಡಿ ಸಿಂಹವು ಮತ್ತಷ್ಟು ಆಶ್ಚರ್ಯವನ್ನು ಉಂಟುಮಾಡುತ್ತಾ ಮನುಷ್ಯರು ಮಾತಾಡುವಂತೆ ಮಾತಾಡಿತು. ''ರಾಜನೇ! ನೀನು ಸೂರ್ಯವಂಶದಲ್ಲಿ ಉದ್ಭವಿಸಿದ ದಿಲೀಪರಾಜನೆಂದು ನಾನು ತಿಳಿದಿರುವೆನು. ನೀನು ನನ್ನನ್ನು ಕುಂಭೋದರನೆಂದು ಹೆಸರುಳ್ಳ ರುದ್ರದೇವರ ಗಣವೆಂದು ತಿಳಿಯುವವನಾಗು. ಇಲ್ಲಿ ಒಂದು ದೇವದಾರುವನ್ನು (ಮರವನ್ನು) ನೋಡುತ್ತಿರುವಿಯಲ್ಲಾ! ಅದನ್ನು ಪಾರ್ವತೀದೇವಿಯರು ಸ್ನೇಹಯುಕ್ತವಾದ ಮನಸ್ಸಿನಿಂದ ಮಗುವನ್ನು ರಕ್ಷಿಸುವಂತೆ ರಕ್ಷಿಸಿರುವರು. ಒಂದು ದಿವಸದಲ್ಲಿ ಒಂದು ಕಾಡಿನ ಆನೆಯು ಬಂದು ಇದರಲ್ಲಿ ತುರಿಸಿಕೊಳ್ಳಲು ಈ ಮರದ ಮೃದುವಾಗಿ ತೊಗಲು ಎದ್ದುಹೋಯಿತು. ಅದನ್ನು ನೋಡಿ ಪಾರ್ವತೀದೇವಿಯರು ಕರುಣೆಯುಳ್ಳವರಾಗಿ ನನ್ನನ್ನು ಸಿಂಹವನ್ನಾಗಿ ಮಾಡಿ ಇದನ್ನು ರಕ್ಷಿಸುವುದಕ್ಕಾಗಿ ಇಲ್ಲಿ ಸ್ಥಾಪನೆ ಮಾಡಿದರು. 'ಕುಂಭೋದರ! ನೋಡುತ್ತಾ ಇರು. ನೀನು ಇಲ್ಲಿಯೇ ವಾಸಮಾಡುತ್ತಿದ್ದು ಇಲ್ಲಿಗೆ ಯಾವ ಪ್ರಾಣಿಯು ಬಂದರೂ ತಿಂದುಹಾಕು' ಎಂದಿರುವರು. ಆ ಸಮಯವನ್ನು ಆರಂಭಿಸಿ ನಾನು ಪಾರ್ವತೀ ದೇವಿಯರ ಆಜ್ಞೆಯನ್ನು ಪಾಲಿಸುತ್ತಾ ಆ ಗುಹೆಯಲ್ಲಿ ವಾಸಮಾಡುತ್ತಿರುವೆನು. ನಿನ್ನ ದೇಹವು ಸ್ತಬ್ಧವಾದದ್ದಕ್ಕೆ ಆಶ್ಚರ್ಯಪಡಬೇಡ. ಈ ಪರ್ವತದಲ್ಲಿ ಮಹತ್ತಾದ ರುದ್ರದೇವರ ಮಾಯೆಯಿರುವುದು. ಬೇರೆ ಸಿಂಹಗಳಿಗೆ ಬಡಿದಂತೆ ನೀನು ನನಗೆ ಬಡಿಯಲಿಕ್ಕೆ ಸಮರ್ಥನಾಗಲಾರೆ. ಏಕೆಂದರೆ ನಾನು ರುದ್ರದೇವರಿಗೆ ಪ್ರಿಯನಾದವನು. ಅವರು ನನ್ನ ಬೆನ್ನಿನ ಮೇಲೆ ಪಾದಗಳನ್ನು ಇಟ್ಟುಕೊಂಡೇ ವೃಷಭದ ಮೇಲೆ ಹತ್ತುವರು. ನೀನು ಹಿಂದೆ ತಿರುಗಿ ಹೋಗು. ಸರ್ವಪುರುಷಾರ್ಥಕ್ಕೆ ಸಾಧನವಾದ ನಿನ್ನ ದೇಹವನ್ನು ರಕ್ಷಿಸಿಕೊ. ದೈವೇಚ್ಛೆಯಿಂದ ಈ ದನವು ನನಗೆ ಆಹಾರವಾಗಿರುವುದು' ಎಂದು ಸಿಂಹವು ಹೇಳಿತು.

ಈರೀತಿಯಾಗಿ ಸಿಂಹದ ಮಾತನ್ನು ಕೇಳಿ ಸ್ತಬ್ಧವಾದ ದೇಹವುಳ್ಳ ರಾಜನು 'ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣರಾದ ರುದ್ರದೇವರಿಗೂ ಜಗತ್ತಿಗೆ ತಾಯಿಯಾದ ಪಾರ್ವತೀದೇವಿಯರಿಗೂ ನಮಸ್ಕರಿಸುವೆನು. ಮೃಗರಾಜನೇ! ನೀನೂ ಅವರ ಸೇವಕನಾದ ಕಾರಣ ನನಗೆ ಪೂಜ್ಯನಾಗಿರುವಿ. ನಾನು ಹೇಳುವ ಮಾತನ್ನು ಕೇಳಿ

ಆಮೇಲೆ ನಾನೇನು ಮಾಡಲಿ ಎಂದು ಆಜ್ಞಾಪಿಸು. ಬ್ರಹ್ಮದೇವರ ಮಕ್ಕಳಾದ ವಸಿಷ್ಠರು ನನ್ನ ಗುರುಗಳೆಂದು ನಿನಗೆ ತಿಳಿದಿರುವುದು. ಈ ನಂದಿನಿಯು ಅವರಿಗೆ ಸೇರಿದವಳು. ನನಗೆ ಸಂತಾನವುಂಟಾಗುವುದಕ್ಕಾಗಿ ನನಗೆ ಸೇವೆಯನ್ನು ಮಾಡಲಿಕ್ಕೆ ಇವಳನ್ನು ಗುರುಗಳು ಕೊಟ್ಟಿರುವರು. ಕೆಲವುದಿನ ಇವಳನ್ನು ಚೆನ್ನಾಗಿ ಸೇವಾ ಮಾಡಿರುವೆನು. ಇವಳು ಚಿಕ್ಕ ಕರುವಿನ ತಾಯಿಯು. ಈ ಗುಹೆಯಲ್ಲಿ ರುದ್ರದೇವರ ಭೃತ್ಯನಾದ ನಿನ್ನಿಂದ ಬಲಾತ್ಕಾರದಿಂದ ಇವಳನ್ನು ಬಿಡಿಸಲಿಕ್ಕೆ ನನಗೆ ಶಕ್ಯವಾಗಲಾರದು. ನಾನು ಈ ಗೋವನ್ನು ಬಿಟ್ಟು ಮುನಿಗಳ ಮುಂದೆ ಹೇಗೆ ಹೋಗಲಿ? ಇವಳು ಕಾಮಧೇನುವಿನ ಮೊಮ್ಮಗಳು. ಜಗತ್ತಿನಿಂದಲೇ ಸೇವ್ಯಳು. ಇವಳಿಗೆ ಸಮಾನಗೋವು ಬೇರೆ ಇರುವುದಿಲ್ಲ. ಆದುದರಿಂದ ನಾನು ಗುರುಗಳನ್ನು ಹೇಗೆ ಸಂತೋಷಪಡಿಸಲಿ. ಆದುದರಿಂದ ಈ ಗೋವನ್ನು ಬಿಟ್ಟು ನನ್ನನ್ನು ಆಹಾರವನ್ನಾಗಿ ಸ್ವೀಕರಿಸು. ಗೋವಿಗಾಗಿ ಪ್ರಾಣಗಳನ್ನು ಬಿಡತಕ್ಕ ನನಗೂ ಉತ್ತಮಗತಿಯಾಗುವುದು' ಎಂದು ಹೇಳಿದನು. ಈ ರೀತಿಯಾಗಿ ಹೇಳಿದ ರಾಜನ ಮಾತನ್ನು ಕೇಳಿ ಸಿಂಹವು ಮೌನದಿಂದ ಇರಲು, ರಾಜನು ಸಿಂಹದ ಎದುರಲ್ಲಿ ಮುಖವನ್ನು ತಗ್ಗಿಸಿಕೊಂಡು ಬಿದ್ದುಕೊಂಡನು. ರಾಜನು ತನ್ನ ಮೇಲೆ ಸಿಂಹವು ಹಾರಿಬೀಳುವುದೆಂದು ನಿರೀಕ್ಷಿಸಿಕೊಂಡು ಇರುತ್ತಿರಲು ರಾಜನ ಮೇಲೆ ದೇವತೆಗಳು ಸುರಿಸಿದ ಹೂವಿನ ಮಳೆಯು ಬಿದ್ದಿತು. 'ಮಗು! ಏಳು' ಎಂಬ ಮಾತು ಕೇಳಿಸಿತು. ರಾಜನು ಎದ್ದು ನೋಡುವಾಗ ಸಿಂಹವು ಕಾಣಿಸಲಿಲ್ಲ. ತಾಯಿಯಂತೆ ಇದ್ದ ನಂದಿನಿಯನ್ನು ನೋಡಿದನು. ಆಶ್ಚರ್ಯದಿಂದ ನಿಂತಿದ್ದ ರಾಜನೊಡನೆ ನಂದಿನಿಯು 'ಸಿಂಹರೂಪ ಮಾಯೆಯಿಂದ ನಾನು ನಿನ್ನನ್ನು ಪರೀಕ್ಷಿಸಿದೆನು. ಮುನಿಗಳ ಪ್ರಭಾವದಿಂದ ನನ್ನನ್ನು ಹಿಡಿಯಲು ಒಬ್ಬರೂ ಸಮರ್ಥರು ಇಲ್ಲ. ನನ್ನನ್ನು ಮನಸ್ಸಿನಿಂದಲೂ ಹಿಡಿಯಲಿಕ್ಕೆ ಆಗಲಾರದು. ನೀನು ನಿನ್ನ ದೇಹವನ್ನೇ ಕೊಟ್ಟು ನನ್ನನ್ನು ರಕ್ಷಿಸಲಿಕ್ಕೆ ಉದ್ಯುಕ್ತನಾದಿ. ಆದುದರಿಂದ ನಾನು ನಿನ್ನ ಮೇಲೆ ಸಂತೋಷವುಳ್ಳವಳಾಗಿರುವೆನು. ಬೇಕಾದ ವರವನ್ನು ಕೇಳಿಕೊ' ಎಂದಳು. ಅದಕ್ಕೆ ರಾಜನು 'ತಾಯಿ! ನಿಮ್ಮಂತಿರುವವರಿಗೆ ಜನರ ಮನಸ್ಸಿನಲ್ಲಿ ಇರುವುದು ತಿಳಿಯದೆ ಇರುವುದಿಲ್ಲ. ಆದುದರಿಂದ ನನ್ನ ಅಭೀಷ್ಟವನ್ನು ತಿಳಿದಿರುವಿ. ಅದನ್ನು ಕೊಡು. ಮಗಧರಾಜನ ಮಗಳಲ್ಲಿ ವಂಶಕ್ಕೆ ಕಾರಣನಾದ ಮಗನನ್ನು ದಯಪಾಲಿಸು. ನಿಮ್ಮಂತವರಿಗೆ ಅಶಕ್ಯವಾದ ಕಾರ್ಯವು ಇರುವುದಿಲ್ಲ' ಎಂದು ಹೇಳಿ ಕೈಮುಗಿದುಕೊಂಡು ಉತ್ತರವನ್ನು ನಿರೀಕ್ಷಿಸುತ್ತಾ ನಂದಿನಿಯ ಪಾದವನ್ನೇ ನೋಡುತ್ತಾ

ನಿಂತುಕೊಂಡನು. ರಾಜನ ಮಾತನ್ನು ಕೇಳಿ ನಂದಿನಿಯು 'ಮಗು! ಎಲೆಯ ಪಾತ್ರೆಯಲ್ಲಿ ನನ್ನ ಹಾಲನ್ನು ಕರೆದು ಇಚ್ಛಾನುಸಾರವಾಗಿ ಕುಡಿಯು. ಆಮೇಲೆ ಆಶ್ರಮದಲ್ಲಿ ಗುರುಗಳಿಂದ ಆಜ್ಞೆಯನ್ನು ಹೊಂದಿ ಕುಡಿಯುವಿ. ನಿನಗೆ ವಂಶಕ್ಕೆ ಕಾರಣನಾದ ಶಸ್ತ್ರಾಸ್ತ್ರ ತತ್ವವನ್ನು ತಿಳಿದವನಾದ ಮಗನು ಜನಿಸುವನು' ಎಂದು ಹೇಳಿದಳು. ಅದಕ್ಕೆ ರಾಜನು 'ತಾಯಿಯೇ! ನಿನ್ನ ಸೇವಾಕಾರ್ಯವು ಮುಗಿದ ಮೇಲೆ ಕುಡಿಯುವೆನು. ನಿನ್ನ ವಚನಾಮೃತವನ್ನು ಹೊಂದಿ ತೃಪ್ತಿಯನ್ನು ಹೊಂದಿದೆನು. ತಾಯಿ! ನಿನ್ನ ಸೇವೆಯನ್ನು ಬಿಟ್ಟು ಯಾವುದನ್ನೂ ಅಪೇಕ್ಷಿಸುವುದಿಲ್ಲ. ನಿನ್ನ ಮಾತಾಮಹಿಯಾದ ಕಾಮಧೇನುವು ಕೊಟ್ಟ ಶಾಪವೂ ವರವಾಯಿತು. ಇಲ್ಲದಿದ್ದರೆ ನನಗೆ ಪುತ್ರಲಾಭವು ಹೇಗೆ ಆಗುತ್ತಿತ್ತು. ನಿನ್ನ ದರ್ಶನವು ಹೇಗೆ ಆಗುತ್ತಿತ್ತು' ಇತ್ಯಾದಿ ಹೇಳಿದನು. ಆ ಮಾತನ್ನು ಕೇಳಿ ನಂದಿನಿಯು 'ಸರಿ ಸರಿ' ಎಂದು ಹೇಳಿ ಆ ರಾಜನೊಡನೆ ಆಶ್ರಮಕ್ಕೆ ಹೋದಳು. ಪೂರ್ವದಿವಸದಂತೆ ಆ ದಿನವೂ ಕೂಡ ನಂದಿನಿಯು ರಾಜಪತ್ನಿಯಿಂದ ಪೂಜಿತಳಾಗಿ ಪ್ರಕಾಶಿಸಿದಳು. ರಾಣಿಯು ರಾಜನ ಮುಖವು ಪ್ರಸನ್ನವಾಗಿರುವುದನ್ನು ನೋಡಿ ಕಾರ್ಯಸಿದ್ಧಿಯಾಯಿತೆಂದು ತಿಳಿದುಕೊಂಡಳು. ತರುವಾಯ ದಂಪತಿಗಳಾದ ರಾಜರಾಣಿಯರು ನಂದಿನಿಯಿಂದ ಸಹಿತರಾಗಿ ಗುರುಗಳ ಸಮೀಪಕ್ಕೆ ಹೋದರು. ಪ್ರಸನ್ನವಾದ ಮುಖವನ್ನು ಅವರಿಬ್ಬರನ್ನು ನೋಡಿ ಅತೀಂದ್ರಿಯಜ್ಞಾನವುಳ್ಳ ವಸಿಷ್ಠರು 'ರಾಜನೇ! ಈ ಗೋವು ನಿಮಗಿಬ್ಬರಿಗೆ ಪ್ರಸನ್ನಳಾಗಿರುವಳಷ್ಟೇ! ನಿಮ್ಮ ಮುಖದ ಕಾಂತಿಯು ಅಪೂರ್ವವಾಗಿ ಕಾಣಿಸುತ್ತಿದೆ. ಕಾಮಧೇನುವು ಕಲ್ಪವೃಕ್ಷವು ಅಭೀಷ್ಟಪ್ರದಗಳೆಂದು ಪ್ರಸಿದ್ಧಿಯಿರುವುದು. ಕಾಮಧೇನುವಿನ ಸಂತಾನವನ್ನು ಆರಾಧಿಸಿ ಸಿದ್ಧಿಯನ್ನು ಹೊಂದುವುದರಲ್ಲಿ ಆಶ್ಚರ್ಯವೇನಿದೆ? ದೂರದಲ್ಲಿ ಇವಳ ನಾಮಕೀರ್ತನೆಯನ್ನು ಮಾಡಿದರೆಯೇ ಸರ್ವಾಭಿಷ್ಟವು ಸಿದ್ಧಿಸುವುದು. ಶ್ರದ್ಧೆಯಿಂದ ಹತ್ತಿರದಲ್ಲಿಯೇ ಸೇವಿಸಿದ ಮೇಲೆ ಏನು ಹೇಳಬೇಕು? ನಂದಿನಿಯು ನಿನ್ನನ್ನು ಪರೀಕ್ಷೆ ಮಾಡಿದ್ದನ್ನು ನೀನು ನಿನ್ನ ಧರ್ಮವನ್ನು ರಕ್ಷಿಸಿದ್ದನ್ನು ನಾನು ಜ್ಞಾನದೃಷ್ಟಿಯಿಂದ ತಿಳಿದಿರುವೆನು. ಇಲ್ಲಿ ರಾತ್ರಿಯಲ್ಲಿ ಪತ್ನಿಯಿಂದ ಸಹಿತನಾಗಿ ನಂದಿನಿಯನ್ನು ಪೂಜಿಸುತ್ತಾ ಇರು. ಎಲ್ಲಾ ಸೇವೆಯನ್ನು ಮುಗಿಸಿ ನಾಳೆ ನಿನ್ನ ರಾಜ್ಯಕ್ಕೆ ಹೋಗುವಿ' ಎಂದು ಹೇಳಿದನು. ತರುವಾಯ ರಾಜನು ಪತ್ನೀಸಹಿತನಾಗಿ ನಂದಿನಿಯನ್ನು ಆರಾಧಿಸಿ ಅಭೀಷ್ಟವನ್ನು ಹೊಂದಿ ಬೆಳಿಗ್ಗೆ ಗುರುಗಳ ಆಜ್ಞೆಯನ್ನು ಪಡೆದು ರಥದಲ್ಲಿ ಕೂತುಕೊಂಡು ತನ್ನ ಮನೆಗೆ ಹೋದು. ಕೆಲವು ವರ್ಷಗಳಲ್ಲಿಯೇ ದಿಲೀಪರಾಜನಿಗೆ ರಘು ಎಂಬ ಹೆಸರಿನ ಮಗನು ಹುಟ್ಟಿದನು.

ಅವನ ಹೆಸರಿನಿಂದಲೇ ಆ ವಂಶವು ಭೂಮಿಯಲ್ಲಿ ರಘುವಂಶವೆಂದು ಪ್ರಸಿದ್ಧಿಯನ್ನು ಹೊಂದಿತು. ಯಾರು ದಿಲೀಪರಾಜನ ಕಥೆಯನ್ನು ಓದುವನೋ ಅವನಿಗೆ ಧನವೂ ಧಾನ್ಯವೂ ಮಕ್ಕಳೂ ಲಭಿಸುವರು.



## ಚೋಲರಾಜ ವಿಷ್ಣುದಾಸರ ಕಥೆ [1]

ಧರ್ಮದತ್ತನು ಪುಣ್ಯಶೀಲ ಸುಶೀಲ ಎಂಬ ವಿಷ್ಣುದೂತರೊಡನೆ 'ಲೋಕದಲ್ಲಿ ಎಲ್ಲರೂ ಭಕ್ತರ ದುಃಖವನ್ನು ಪರಿಹರಿಸುವ ನಾರಾಯಣನನ್ನು ಯಜ್ಞ, ದಾನ, ವ್ರತ, ತೀರ್ಥಯಾತ್ರಾ, ತಪಸ್ಸು ಇವುಗಳಿಂದ ಆರಾಧಿಸುವರು. ಇವುಗಳ ಮಧ್ಯದಲ್ಲಿ ಪರಮಾತ್ಮನ ಅತ್ಯಂತ ಪ್ರೀತಿಗೆ ಕಾರಣವಾದದ್ದು ಯಾವುದು? ಯಾವುದನ್ನು ಮಾಡಿದರೆ ಇತರ ಎಲ್ಲಾ ಸಾಧನಗಳನ್ನು ಮಾಡಿದಂತೆ ಆಗುವುದು?' ಎಂದು ಕೇಳಿದನು.

ಆದಕ್ಕೆ ಪುಣ್ಯಶೀಲ ಸುಶೀಲರು 'ಬ್ರಾಹ್ಮಣನೇ! ಸರಿಯಾದ ಪ್ರಶ್ನೆಯನ್ನು ಮಾಡಿರುವಿ. ಏಕಾಗ್ರಮನಸ್ಸಿನಿಂದ ಕೇಳು. ಒಂದು ಇತಿಹಾಸವನ್ನು ಹೇಳುವೆವು. ಪೂರ್ವದಲ್ಲಿ ಕಾಂಚೀಪುರಿಯಲ್ಲಿ ಚೋಲ ಎಂಬ ರಾಜನಿದ್ದನು. ಅವನ ಆಶ್ರಯದಿಂದ ಆ ದೇಶಕ್ಕೇ ಚೋಲದೇಶವೆಂಬ ಹೆಸರು ಬಂದಿರುವುದು. ಆ ರಾಜನು ರಾಜ್ಯಭಾರವನ್ನು ಮಾಡುತ್ತಿರಲು ಒಬ್ಬನೂ ದರಿದ್ರನಿರಲಿಲ್ಲ. ದುಃಖಪಡುವವನಿರಲಿಲ್ಲ. ಪಾಪಬುದ್ಧಿಯುಳ್ಳವನಿರಲಿಲ್ಲ. ರೋಗಿಯು ಇರಲಿಲ್ಲ. ಅವನು ಬಹು ಯಜ್ಞಗಳನ್ನು ಮಾಡುತ್ತಿದ್ದನು. ತಾಮ್ರಪರ್ಣೀನದಿಯ ಎರಡು ಪಾರ್ಶ್ವಗಳಲ್ಲಿಯೂ ಅವನ ಯಜ್ಞಗಳ ಬಂಗಾರದ ಕಂಬಗಳು ಶೋಭಿಸುತ್ತಿದ್ದವು. ಅವನು ಒಂದು ದಿವಸದಲ್ಲಿ ಅನಂತಶಯನಕ್ಕೆ ಹೋದನು. ಅಲ್ಲಿ ದಿವ್ಯಮುತ್ತುರತ್ನಗಳಿಂದಲೂ ಬಂಗಾರದ ಪುಷ್ಪಗಳಿಂದಲೂ ಅನಂತಪದ್ಮನಾಭದೇವರನ್ನು ಪೂಜಿಸಿ ಉದ್ದಕ್ಕೆ ನಮಸ್ಕರಿಸಿ ಅಲ್ಲಿಯೇ ಕೂತಿದ್ದನು. ಅಷ್ಟರಲ್ಲಿಯೇ ಕೈಯಲ್ಲಿ ತುಲಸಿಯನ್ನು ನೀರನ್ನು ಹಿಡಿದುಕೊಂಡು ಪೂಜಾ ಮಾಡಲಿಕ್ಕೆ ಬರುತ್ತಿದ್ದ ತನ್ನ ದೇಶದಲ್ಲಿಯೇ ವಾಸಿಸುವ ವಿಷ್ಣುದಾಸ ಎಂದು ಹೆಸರುಳ್ಳ ಬ್ರಾಹ್ಮಣನನ್ನು ನೋಡಿದನು. ವಿಷ್ಣುದಾಸನು ಬಂದು ವಿಷ್ಣುಸೂಕ್ತವನ್ನು ಹೇಳಿ ದೇವರಿಗೆ ಅಭಿಷೇಕವನ್ನು ಮಾಡಿ ತುಲಸೀದಲಗಳಿಂದ ಪೂಜಿಸಿದನು. ರಾಜನು ಸಮರ್ಪಿಸಿದ್ದ ಬಂಗಾರ ಮತ್ತು ರತ್ನ ಇತ್ಯಾದಿಗಳೆಲ್ಲವನ್ನೂ ತುಲಸೀದಲಗಳಿಂದ ಮರೆಮಾಡಿದನು. ಅದನ್ನು ನೋಡಿ

ರಾಜನು ಕೋಪಿಸಿಕೊಂಡು 'ನಾನು ಮಾಣಿಕ್ಯರತ್ನಗಳಿಂದ ಭಗವಂತನನ್ನು ಪೂಜಿಸಿದ್ದೆನು. ಆ ರತ್ನಗಳೆಲ್ಲವನ್ನು ನೀನು ತುಲಸೀದಲಗಳಿಂದ ಹೇಗೆ ಮರೆ ಮಾಡುವಿ' ನೀಚನಾಗಿದ್ದಿ. ನನ್ನ ವಿಷ್ಣುಭಕ್ತಿಯನ್ನು ತಿಳಿದವನಾಗಿಲ್ಲ. ಅತ್ಯಂತ ಶೋಭಿತ ವಾದ ನನ್ನ ಪೂಜೆಯನ್ನು ಬರೇ ತುಲಸೀದಲಗಳಿಂದ ಮರೆಮಾಡುವಿಯಲ್ಲಾ!' ಎಂದು ಹೇಳಿದನು. ರಾಜನ ಮಾತನ್ನು ಕೇಳಿ ಬ್ರಾಹ್ಮಣನು ಕೋಪವುಳ್ಳವನಾಗಿ ರಾಜನೆಂಬ ಗೌರವವನ್ನು ಬಿಟ್ಟು 'ರಾಜನೇ! ನಿನಗೆ ಭಕ್ತಿಯೇನೆಂದು ತಿಳಿಯ ಲಾರದು. ರಾಜ್ಯಸಂಪತ್ತಿನಿಂದ ಅಹಂಕಾರಿಯಾಗಿರುವಿ. ನೀನು ಈ ಪೂರ್ವದಲ್ಲಿ ವಿಷ್ಣುವ್ರತಗಳನ್ನು ಮಾಡಿರುವಿ? ಹೇಳು' ಎಂದು ಹೇಳಿದನು. ಆ ಮಾತನ್ನು ಕೇಳಿ ರಾಜನು ನಗುವವನಾಗಿ ಗರ್ವದಿಂದ 'ಬ್ರಾಹ್ಮಣ! ವಿಷ್ಣುಭಕ್ತಿಯಿಂದ ಗರ್ವವುಳ್ಳವ ನಾಗಿ ಇಷ್ಟು ಮಾತುಗಳನ್ನು ಆಡುವಿಯಾ? ನೀನು ಭಗವಂತನಿಗೆ ಪ್ರಿಯಗಳಾದ ಯಜ್ಞಗಳನ್ನು ಮಾಡಿಸಲೇ ಇಲ್ಲ. ಒಂದು ದೇವಾಲಯವನ್ನು ಕಟ್ಟಿಸಲಿಲ್ಲ. ಇಂತಹ ದರಿದ್ರನಾದ ನಿನಗೆ ದೇವರಲ್ಲಿ ಭಕ್ತಿಯೆಷ್ಟಿರುವುದು? ಇಂತಹ ನಿನಗೂ ಇಷ್ಟು ಗರ್ವವಿರುವುದಾದರೆ ಇಲ್ಲಿ ಇರುವ ಎಲ್ಲಾ ಬ್ರಾಹ್ಮಣರೂ ಕೇಳಬೇಕು. ನಾನು ಮೊದಲು ವಿಷ್ಣುವಿನ ಸಾಕ್ಷಾತ್ಕಾರವನ್ನು ಹೊಂದುವೆನೋ ಅಥವಾ ಇವನಿಗೆ ಭಗವಂತನು ಮೊದಲು ಸಾಕ್ಷಾತ್ಕಾರವನ್ನು ಕೊಡುವನೋ ನೋಡಿರಿ. ತರುವಾಯ ಯಾರಿಗೆ ಹೆಚ್ಚಿಗೆ ಭಕ್ತಿಯಿದೆಯೆಂದು ತಿಳಿಯುವುದು' ಎಂದು ಹೇಳಿ ಮನೆಗೆ ಹೋಗಿ ಮುದ್ಗಲಋಷಿಗಳನ್ನು ಆಚಾರ್ಯರನ್ನಾಗಿ ಮಾಡಿ ವಿಷ್ಣುಪ್ರಿಯವಾದ ಸತ್ರಯಾಗವನ್ನು ಆರಂಭಿಸಿದನು. ವಿಷ್ಣುದಾಸನೂ ಭಗವಂತನಿಗೆ ಪ್ರಿಯಗಳಾದ ನಿಯಮಗಳನ್ನು ಧರಿಸುವವನಾಗಿ ಆ ದೇವಾಲಯದಲ್ಲಿಯೇ ವಾಸಮಾಡಿದನು. ಮಾಘಮಾಸದ ಕಾರ್ತಿಕಮಾಸದ ವ್ರತಗಳನ್ನು ಮಾಡುತ್ತಿದ್ದನು. ತುಲಸೀವನವನ್ನು ಬೆಳೆಸುತ್ತಿದ್ದನು. ಏಕಾದಶೀ ವ್ರತವನ್ನು ಮಾಡುತ್ತಿದ್ದನು. ದ್ವಾದಶಾಕ್ಷರಮಂತ್ರವನ್ನು ಜಪಿಸುತ್ತಿದ್ದನು. ನಡೆಯುವಾಗಲೂ ಭೋಜನ ಮಾಡುವಾಗಲೂ ಮಲಗುವಾಗಲೂ ಭಗವಂತನನ್ನು ಸ್ಮರಿಸುತ್ತಿದ್ದನು. ಮಾಘಮಾಸದಲ್ಲಿಯೂ ಕಾರ್ತಿಕಮಾಸದಲ್ಲಿಯೂ ಪರಮಾತ್ಮನ ಸಂತೋಷಕ್ಕಾಗಿ ವಿಶೇಷ ನಿಯಮಗಳನ್ನು ಮಾಡಿದನು. ಉದ್ಯಾಪನವನ್ನು ಮಾಡಿದನು. ಈರೀತಿಯಾಗಿ ಬಹುಕಾಲವು ಕಳೆಯಿತು.

ಒಂದು ದಿನದಲ್ಲಿ ವಿಷ್ಣುದಾಸನು ತನ್ನ ಆಹ್ನಿಕವನ್ನು ತೀರಿಸಿಕೊಂಡು ಅಡಿಗೆಯನ್ನು ಮಾಡಿ ಇಟ್ಟುಹೋದನು. ಬಂದು ನೋಡುವಾಗ ಅಡಿಗೆ ಮಾಡಿ ಇಟ್ಟದ್ದು ಕಾಣಿಸದೆ ಹೋಯಿತು. ಯಾರೋ ಅಪಹರಿಸಿದ್ದರು. ಇನ್ನು ಪುನಃ ಅಡಿಗೆ

ಮಾಡುತ್ತಾ ಕೂತರೆ ರಾತ್ರಿಪೂಜೆಗೆ ವಿಘ್ನವಾಗುವುದೆಂದು ಅಡಿಗೆ ಮಾಡಿಕೊಳ್ಳಲಿಲ್ಲ. ಮರುದಿನವೂ ಹಾಗೆಯೇ ಆಯಿತು. ವಿಷ್ಣುದಾಸನಿಗೆ ಆ ದಿವಸವೂ ಉಪವಾಸವೇ ಆಯಿತು. ಹೀಗೆಯೇ ಏಳು ದಿವಸಗಳಲ್ಲಿ ವಿಷ್ಣುದಾಸನು ಅಡಿಗೆ ಮಾಡಿ ಇಟ್ಟದ್ದನ್ನು ಯಾರೋ ಬಂದು ಅಪಹರಿಸಿದನು. ಇದರಿಂದ ವಿಷ್ಣುದಾಸನು ಆಶ್ಚರ್ಯಪಡುವವ ನಾಗಿ ಮನಸ್ಸಿನಲ್ಲಿಯೇ 'ಆಹಾ! ಯಾರು ನಿತ್ಯವೂ ಬಂದು ನನ್ನ ಅಡಿಗೆಯನ್ನು ಅಪಹರಿಸುವರು. ಸಂನ್ಯಾಸಿಗಳು ವಾಸಿಸುವ ಪವಿತ್ರವಾದ ಈ ಕ್ಷೇತ್ರವನ್ನು ಬಿಟ್ಟುಹೋಗುವುದೂ ಸರಿಯಲ್ಲ. ಎರಡನೇ ಬಾರಿ ಅಡಿಗೆ ಮಾಡಿ ಭೋಜನ ಮಾಡುವ ಅಂದರೆ ಸಾಯಂಕಾಲಪೂಜೆಗೆ ವಿಘ್ನವು ಏರ್ಪಡುವುದು. ಪೂಜೆಯೆಲ್ಲ ವನ್ನು ಮಾಡಿ ಅಡಿಗೆಯನ್ನು ಮಾಡುವ ಎಂದರೆ ದೇವರಿಗೆ ಸಮರ್ಪಣೆ ಮಾಡದೆ ಹೇಗೆ ಭೋಜನ ಮಾಡಲಿಕ್ಕೆ ಸಾಧ್ಯವಾಗುವುದು? ಉಪವಾಸದಿಂದಲೇ ಎಷ್ಟು ದಿನವಿರಲಿಕ್ಕೆ ಸಾಧ್ಯವಾಗುವುದು?' ಎಂದು ಯೋಚಿಸಿ 'ಈ ದಿವಸದಲ್ಲಿ ಅಡಿಗೆಯನ್ನು ಮಾಡಿಟ್ಟು ಯಾರು ಅಪಹರಿಸಲಿಕ್ಕೆ ಬರುವರು ಎಂಬುದನ್ನು ನೋಡುತ್ತಿರುವೆನು' ಎಂದು ಹೇಳುತ್ತಾ ಅಡಿಗೆಯನ್ನು ಮಾಡಿ ಇಟ್ಟು ಮರೆಯಲ್ಲಿ ನಿಂತು ನೋಡುತ್ತಿದ್ದನು. ಅಷ್ಟರಲ್ಲಿ ಒಬ್ಬ ಚಂಡಾಲನು ಬಂದು ಅನ್ನವನ್ನು ಎತ್ತಿಕೊಂಡು ಹೋಗುವುದನ್ನು ನೋಡಿದನು. ಆ ಚಂಡಾಲನು ಹಸಿವೆಯಿಂದ ಪೀಡಿತನಾಗಿದ್ದನು. ಅವನ ದೇಹದಲ್ಲಿ ಎಲುಬು ಚರ್ಮ ಮಾತ್ರವಿದ್ದಿತು. ಅವನನ್ನು ನೋಡಿ ವಿಷ್ಣುದಾಸನಿಗೆ ದಯೆಯುಂಟಾಯಿತು. ಅವನು ಅನ್ನವನ್ನು ಎತ್ತಿಕೊಂಡು ಹೋಗುತ್ತಿರುವುದನ್ನು ನೋಡಿ 'ನಿಲ್ಲು ನಿಲ್ಲು' ಎಂದು ಹೇಳಿದನು. 'ಬರೇ ಒರಟು ಅನ್ನವನ್ನು ಹೇಗೆ ತಿನ್ನುವಿ? ಇಗೋ! ಈ ತುಪ್ಪವನ್ನು ತೆಗೆದುಕೊ' ಎಂದು ಹೇಳುತ್ತಾ ಹಿಂದೆಯೇ ಹೋದನು. ಚಂಡಾಲನು ತನ್ನ ಹಿಂದೆಯೇ ಬ್ರಾಹ್ಮಣನು ಬರುತ್ತಿರುವುದನ್ನು ನೋಡಿ ಭಯಪಟ್ಟಂತೆ ಓಡಿದನು. ಮೂರ್ಛಿತನಾಗಿ ಬಿದ್ದನು. ಭಯದಿಂದ ಮೂರ್ಛಿತನಾಗಿ ಬಿದ್ದ ಚಂಡಾಲನನ್ನು ನೋಡಿ ವಿಷ್ಣುದಾಸನು ಬೇಗನೇ ಕೃಪೆಯಿಂದ ಹತ್ತಿರಕ್ಕೆ ಬಂದು ತನ್ನ ವಸ್ತ್ರದಿಂದ ಬೀಸಿದನು. ತರುವಾಯ ಚಂಡಾಲನು ಎದ್ದನು. ವಿಷ್ಣುದಾಸನು ನೋಡುತ್ತಿರುವಂತೆ ಚಂಡಾಲನು ಮರೆಯಾಗಿ ಚಂಡಾಲನ ಸ್ಥಾನದಲ್ಲಿ ಶಂಖಚಕ್ರಗದಾಧಾರಿಯಾದ ಪೀತಾಂಬರವನ್ನು ಉಟ್ಟುಕೊಂಡಿರುವ ನಾಲ್ಕುಕೈಗಳುಳ್ಳ ಶ್ರೀವತ್ಸಚಿಹ್ನೆಯುಳ್ಳ ಕಿರೀಟಧಾರಿಯಾದ ಅಗಸೀಪುಷ್ಪದಂತೆ ಬಣ್ಣವುಳ್ಳ ಕೌಸ್ತುಭ ಮಣಿಯಿಂದ ಶೋಭಿಸುವ ಎದೆಯುಳ್ಳ ಶ್ರೀನಾರಾಯಣನು ಕಾಣಿಸಿಕೊಂಡನು. ಭಗವಂತನನ್ನು ನೋಡಿದ ಕೂಡಲೇ ವಿಷ್ಣುದಾಸನಿಗೆ ಮೈಯೆಲ್ಲಾ ರೋಮಾಂಚ

ವಾಯಿತು. ಸ್ತೋತ್ರ ಮಾಡಲಿಕ್ಕೂ ನಮಸ್ಕಾರ ಮಾಡಲಿಕ್ಕೂ ಸಾಧ್ಯವಾಗಲಿಲ್ಲ. ತರುವಾಯ ಅಲ್ಲಿಗೆ ಇಂದ್ರಾದಿದೇವತೆಗಳು ಬಂದರು. ಗಂಧರ್ವರೂ ಅಪ್ಸರ ಸ್ತ್ರೀಯರೂ ಹಾಡು ಹೇಳಿದರು. ನರ್ತನ ಮಾಡಿದರು. ನೂರಾರು ದೇವತೆಗಳ ವಿಮಾನಗಳು ಬಂದವು. ಗಾಯನವೂ ವಾದ್ಯಘೋಷವೂ ನಡೆಯಿತು. ತರುವಾಯ ಭಗವಂತನು ತನ್ನ ಭಕ್ತನಾದ ವಿಷ್ಣುದಾಸನನ್ನು ಆಲಿಂಗಿಸಿ ತನ್ನ ಸಾರೂಪ್ಯವನ್ನು ಕೊಟ್ಟು ವೈಕುಂಠಲೋಕಕ್ಕೆ ಕರೆದುಕೊಂಡು ಹೋದನು. ವಿಮಾನದಲ್ಲಿ ಕೂತುಕೊಂಡು ಹೋಗುತ್ತಿದ್ದ ವಿಷ್ಣುದಾಸನನ್ನು ಯಜ್ಞದಲ್ಲಿ ದೀಕ್ಷಿತನಾಗಿದ್ದ ಚೋಲರಾಜನು ನೋಡಿ ಬೇಗನೇ ತನ್ನ ಗುರುಗಳಾದ ಮುದ್ಗಲಋಷಿಗಳನ್ನು ಕರೆದು 'ನಾನು ಯಾರ ಮೇಲೆ ಸ್ಪರ್ಧೆಯುಳ್ಳವನಾಗಿ ಯಜ್ಞದಾನಾದಿಗಳನ್ನು ಮಾಡಿದೆನೋ ಆ ವಿಷ್ಣುದಾಸನು ಭಗವಂತನ ಸಾರೂಪ್ಯವನ್ನು ಹೊಂದಿ ವೈಕುಂಠಲೋಕಕ್ಕೆ ಹೋಗುತ್ತಿರುವನು. ನಾನು ದೀಕ್ಷಿತನಾಗಿ ಈ ವೈಷ್ಣವಸತ್ರದಲ್ಲಿ ಚೆನ್ನಾಗಿ ಹೋಮವನ್ನು ಮಾಡಿದೆನು. ಬ್ರಾಹ್ಮಣರಿಗೆ ಬೇಕಾದಷ್ಟು ದಾನಮಾಡಿ ಪ್ರೀತಿಪಡಿಸಿರುವೆನು. ಆದರೂ ಭಗವಂತನು ನನಗೆ ಇನ್ನೂ ಅನುಗ್ರಹಿಸಲಿಲ್ಲ. ಆ ಬ್ರಾಹ್ಮಣನಿಗೆ ಅವನು ಮಾಡಿದ ಭಕ್ತಿಯಿಂದಲೇ ಸಾಕ್ಷಾತ್ಕಾರವನ್ನು ಕೊಟ್ಟನು. ಆದುದರಿಂದ ಭಗವಂತನು ಕೇವಲ ದಾನ ಯಜ್ಞಗಳಿಂದ ಸಂತೋಷವನ್ನು ಹೊಂದುವುದಿಲ್ಲ. ಪರಮಾತ್ಮನನ್ನು ನೋಡಲಿಕ್ಕೆ ಭಕ್ತಿಯೇ ಮುಖ್ಯಕಾರಣವು' ಈರೀತಿಯಾಗಿ ಹೇಳುವವನಾಗಿ ತನ್ನ ಸಹೋದರಿಯ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಅವನು ಬಾಲ್ಯದಿಂದಲೇ ಯಜ್ಞದಲ್ಲಿ ದೀಕ್ಷಿತನಾಗಿದ್ದ ಕಾರಣ ಅವನಿಗೆ ಮಕ್ಕಳಾಗಿರಲಿಲ್ಲ. ಆದುದರಿಂದ ಈಗಲೂ ಆ ದೇಶದಲ್ಲಿ ಅವನು ಮಾಡಿದ ಸಂಪ್ರದಾಯದಿಂದ ಸಹೋದರಿಯ ಮಕ್ಕಳೇ ರಾಜ್ಯವನ್ನು ಹೊಂದುತ್ತಿರುವರು. ತರುವಾಯ ಚೋಲರಾಜನು ಯಜ್ಞಕುಂಡದ ಮುಂದೆ ನಿಂತುಕೊಂಡು ಗಟ್ಟಿಯಾಗಿ 'ವಿಷ್ಣೋ! ನನಗೆ ಮನೋವಾಕ್ಕಾಯ ಕರ್ಮಗಳಿಂದ ಸ್ಥಿರವಾದ ಭಕ್ತಿಯನ್ನು ಕೊಡು' ಎಂದು ಮೂರು ಬಾರಿ ಹೇಳಿ ಎಲ್ಲರೂ ನೋಡುವಂತೆ ಬೆಂಕಿಗೆ ಹಾರಿದನು. ಆಗ ಮುದ್ಗಲರು ಕ್ರೋಧದಿಂದ ಜಟೆಯನ್ನು ಕಿತ್ತಿಕೊಂಡರು. ಆದುದರಿಂದ ಈಗಲೂ ಮುದ್ಗಲಗೋತ್ರದವರು ತಲೆಕೂದಲು ರಹಿತರಾಗಿ ಇರುವರು. ಅಷ್ಟರಲ್ಲಿ ಭಕ್ತವತ್ಸಲನಾದ ಪರಮಾತ್ಮನು ಬೆಂಕಿಯ ಮಧ್ಯದಲ್ಲಿಯೇ ಕಾಣಿಸಿಕೊಂಡನು. ಚೋಲರಾಜನನ್ನು ಆಲಿಂಗಿಸಿ ತನ್ನ ಸಾರೂಪ್ಯವನ್ನು ಕೊಟ್ಟು ವಿಮಾನದಲ್ಲಿ ಕೂತುಕೊಳ್ಳಿಸಿದನು. ಅವನಿಂದ ಸಹಿತನಾಗಿ ದೇವತೆಗಳಿಂದ ಕೂಡಿಕೊಂಡು ವೈಕುಂಠಲೋಕಕ್ಕೆ ಹೋದನು. ಶ್ರೀಭಗವಂತನು

ಭಕ್ತರಾದ ವಿಷ್ಣುದಾಸ ಚೋಲರಾಜನಿಗೆ ಈರೀತಿಯಾಗಿ ತನ್ನ ಸಾರೂಪ್ಯವನ್ನು ಕೊಟ್ಟು ತನ್ನ ದ್ವಾರಪಾಲಕರನ್ನಾಗಿ ಮಾಡಿಕೊಂಡನು. ಆದುದರಿಂದ ಭಗವಂತನನ್ನು ಪ್ರಸನ್ನೀಕರಿಸಲಿಕ್ಕೆ ಭಕ್ತಿಯೇ ಮುಖ್ಯಸಾಧನವು'' ಎಂದು ಹೇಳಿದರು.



## ಅಸಂಗನ ಕಥೆಯು [1]

ಪ್ಲಾಯೋಗಿ ಎಂಬ ಸುಪ್ರಸಿದ್ಧ ರಾಜನೊಬ್ಬನಿದ್ದನು. ಅವನಿಗೆ ಅಸಂಗ ಎಂಬ ಮಗನಿದ್ದನು. ಅವನು ಅತಿಸುಂದರನಾಗಿದ್ದನು. ಬಲಿಷ್ಠನಾಗಿದ್ದನು. ಬೃಹಸ್ಪತ್ಯಾಚಾರ್ಯರು ತಮ್ಮ ತಂಗಿಯಾದ ಶಶ್ವತಿಯನ್ನು ಅಸಂಗನಿಗೆ ಮದುವೆ ಮಾಡಿಕೊಟ್ಟರು. ಯಾದವಕುಲದ ಪಿತೃಪರಂಪರೆಗೆ ಸೇರಿದ ಅಸಂಗನು ತಂದೆಯ ಅನಂತರದಲ್ಲಿ ಸಾಮ್ರಾಜ್ಯಕ್ಕೆ ಸರ್ವಾಧಿಕಾರಿಯಾದನು. ಸಭೆಯಲ್ಲಿ ಅವನನ್ನು ಹೊಗಳುತ್ತಿದ್ದರು. ಸಭೆಯಲ್ಲಿ ಸೇರಿದ ಜನರೆಲ್ಲರೂ ಮಹಾರಾಜನನ್ನು ಹೊಗಳಿದರೂ ಮಹರ್ಷಿಮೇಧಾತಿಥಿಗಳು ಮಾತ್ರ ಅವನನ್ನು ಹೊಗಳಲೇ ಇಲ್ಲ. ಸಾಮಾನ್ಯವಾಗಿ ವಿಜಯಿಯಾಗು ಎಂದು ಆಶೀರ್ವದಿಸುತ್ತಿದ್ದರು.

ಅಸಂಗನೋ ಮಹಾಪ್ರತಿಷ್ಠಾಪ್ರಿಯನು. ಎಷ್ಟು ಹೊಗಳಿದರೂ ಅವನಿಗೆ ಕಡಿಮೆಯೇ. ಮಹಾಕವಿ ಮೇಧಾತಿಥಿಗಳು ತನ್ನ ಬಗ್ಗೆ ಮೌನವಹಿಸಿದ್ದನ್ನು ಕಂಡು ಅವನಿಗೆ ಖೇದವಾಯಿತು. ಆದರಿಂದ ಇತರ ಪಂಡಿತರು ಮಾಡುವ ಸ್ತೋತ್ರಗಳು ವ್ಯರ್ಥವೆನಿಸಿದವು. ಆದರಿಂದ ಅವನ ಅಂತಃಪುರ ವಿಲಾಸ ವಿಭ್ರಮಗಳಿಗೆ ವಿಘ್ನವು ಬರಹತ್ತಿತು. ಇದರಿಂದ ವಿಲಾಸಪ್ರಾಣಳಾದ ಸ್ವರ್ಗದ ಹೆಣ್ಣು ಶಶ್ವತಿಗೆ ದುಃಖವುಂಟಾಯಿತು. ಮೇಧಾತಿಥಿಗಳ ಮೌನದಿಂದ ತನ್ನ ಸುಖಕ್ಕೆ ವಿಘ್ನವು ಬರುವುದೆಂದು ತಿಳಿದುಕೊಂಡಳು. ಆಗ ಅವಳು ತಾನಾಗಿ ಮಹಾಕವಿಮೇಧಾತಿಥಿಗಳ ಆಶ್ರಮಕ್ಕೆ ಬಂದಳು.

ಆ ಆಶ್ರಮದಲ್ಲಿ ದಾರಿದ್ರ್ಯವು ತುಂಬಿತ್ತು. ತಿನ್ನಲು ಅನ್ನವಿಲ್ಲದ ಮಕ್ಕಳು ವಸ್ತ್ರವಿಲ್ಲದೆ ಓಡಾಡುತ್ತಿದ್ದವು. ಅವರ ಪತ್ನಿಗೆ ಉಡಲಿಕ್ಕೆ ಸರಿಯಾದ ಸೀರೆಯೇ ಇರಲಿಲ್ಲ. ಇದೆಲ್ಲವನ್ನು ತಿಳಿದ ಶಶ್ವತಿಯು ಮೊದಲು ಆ ಗೃಹಿಣಿಯ ಪರಿಚಯ ಮಾಡಿಕೊಂಡು ಅವಳ ಮುಖಾಂತರ ಮೇಧಾತಿಥಿಗಳ ದಾನಪರಿಗ್ರಹಕ್ಕೆ ಒಪ್ಪಿಗೆಯನ್ನು

ಸಂಪಾದಿಸಿದಳು. ಪತ್ನಿಯ ಮಾತಿಗೆ ಸೋತು ಮೇಧಾತಿಥಿಗಳು ಮಹಾರಾಣಿಯು ಕೊಟ್ಟ ದಾನವನ್ನು ಸ್ವೀಕರಿಸತೊಡಗಿದರು. ಇದರಿಂದ ಉತ್ಸಾಹಿತಳಾದ ಶಶ್ವತಿಯು ಆ ಮಹಾಕವಿಗಳ ಮುರುಕು ಆಶ್ರಮಕ್ಕೆ ಹಣದ ಹೊಳೆಯನ್ನೇ ಹರಿಸಿದಳು. ಆ ಪರ್ಣಶಾಲೆಯ ಎದುರು ಹತ್ತುಸಾವಿರ ದನಗಳು ಮೇಯತೊಡಗಿದವು. ಬಡತನವು ನೀಗಿದ್ದರಿಂದ ಪರ್ಣಶಾಲೆಯು ಅರಮನೆಯಂತೆ ಶೋಭಿಸುತ್ತಿತ್ತು.

ಮುಂದೆ ಒಂದು ದಿನದಲ್ಲಿ ದೊಡ್ಡ ಸಭೆಯು ಸೇರಿತು. ದೇಶದೇಶದಲ್ಲಿಯ ಕವಿ ಋಷಿಪಂಡಿತರೆಲ್ಲರೂ ಬಂದಿದ್ದರು. ಎಲ್ಲರೂ ಮಹಾರಾಜನನ್ನು ಹೊಗಳಿ ಹರಸಿದರು. ಆಗ ಮೇಧಾತಿಥಿಗಳೂ ತಮ್ಮ ಕಾವ್ಯಮಯವಾದ ಆರ್ಷವಾಣಿಯಿಂದ ಅಸಂಗನನ್ನು ಹೊಗಳಿ ಹರಸಿದರು. ಅದನ್ನು ಕಂಡು ಸಭಿಕರೆಲ್ಲರೂ ಆಶ್ಚರ್ಯವುಳ್ಳವರಾಗಿ ಒಮ್ಮೆ ಮೇಧಾತಿಥಿಗಳನ್ನು ಮತ್ತೊಮ್ಮೆ ಮಹಾರಾಜನನ್ನು ಮೇಧಾತಿಥಿಗಳು ಗಟ್ಟಿಯಾಗಿ 'ಅಸಂಗನು ಅತ್ಯಂತ ಸನ್ಮಾರ್ಗವರ್ತಿಯಾದ ರಾಜನು. ಇವನು ತನ್ನ ಪರಾಕ್ರಮದಿಂದ ಎಂತಹ ವೈರಿಯನ್ನೂ ಸೋಲಿಸಬಲ್ಲನು' ಇತ್ಯಾದಿ ರೀತಿಯಾಗಿ ಸುತ್ತಿಸಿದರು.

ಇದನ್ನು ಕೇಳಿ ಅಸಂಗರಾಜನಿಗೆ ಬಹಳ ಸಂತೋಷವಾಗಿ ರಾಣಿ ಶಶ್ವತಿಯ ಕಡೆಗೆ ನೋಡಿದನು. ಅವರು ಇದೆಲ್ಲವೂ ತಾನು ಮಾಡಿದ ದಾನದ ಪ್ರಭಾವವೆಂದು ಹೆಮ್ಮೆಯಿಂದ ಇದ್ದಳು. ಅವರಿಬ್ಬರ ಈ ಅಭಿಮಾನ ಉದ್ರೇಕವನ್ನು ಕಂಡು ಮೇಧಾತಿಥಿಗಳಿಗೆ ಈ ರಾಜರಾಣಿಯರ ದಾನದಕ್ಷಿಣೆಗೆ ಮರುಳಾಗಿ ತಾವು ರಾಜನನ್ನು ಇಷ್ಟು ಸೂಕ್ತಗಳಿಂದ ಹೊಗಳಿದ್ದು ಹೆಚ್ಚಾಯಿತೋ ಎನ್ನಿಸಿತು. ಆದರೆ ಮಂತ್ರದ್ರಷ್ಟಾರರಾದ ಅವರ ಬಾಯಿಯಿಂದ ಶಬ್ದವು ಹೊರಗೆ ಸಾಧ್ಯವಿಲ್ಲವೆಂದು ಸುಮ್ಮನಾದರು. ಅಂದು ಮನೆಗೆ ಬಂದ ಮೇಲೆ ಮಹಾರಾಜ ಅಸಂಗನು ಆ ಮುನಿಗಳ ಮನೆಗೆ ಬಹಳ ಮುತ್ತು ರತ್ನ ಬಂಗಾರಗಳನ್ನು ಭಕ್ತಿಯಿಂದ ತಂದುಕೊಟ್ಟು ಹೋದನು. ಇದರಿಂದ ಮೇಧಾತಿಥಿಗಳು ಋಷಿಸಮೂಹದಲ್ಲಿಯೇ ಹಣವಂತ ಮುನಿಗಳಾದರು.

ಮೇಧಾತಿಥಿಗಳಿಂದ ಅತ್ಯಂಗ ಹೊಗಳಲ್ಪಟ್ಟ ಅಸಂಗರಾಜನ ಕೀರ್ತಿಯು ಸ್ವರ್ಗಕ್ಕೂ ಮುಟ್ಟಿತು. ದೇವಲೋಕದಲ್ಲಿಯೂ ಅವನ ಕೀರ್ತಿಯನ್ನು ಹೊಗಳುತ್ತಿದ್ದರು. ಆಗ ದೇವತೆಗಳು ಕೆಲವರು ಆ ಅಸಂಗನ ಯೋಗ್ಯತೆಯನ್ನು ತಿಳಿಯಬೇಕೆಂದು ಒಂದು ಸಂದರ್ಭದಲ್ಲಿ ಕೆಲವು ದೈತ್ಯರೊಡನೆ ಯುದ್ಧ ಮಾಡಲು ಅವನನ್ನು ಕೇಳಿಕೊಂಡರು. ಅಷ್ಟು ಶೌರ್ಯಧೈರ್ಯವಿಲ್ಲದ ಕಾರಣ ಅಸಂಗನು

ಅದಕ್ಕೆ ಒಪ್ಪಲಿಲ್ಲ. ಆಗ ದೇವತೆಗಳು 'ಎಲೆ ಹೇಡಿಯೇ! ನೀನು ಹೆಂಗಸಾಗಿ ಹೋಗು' ಎಂದು ಶಾಪವನ್ನು ಕೊಟ್ಟರು. ಕೂಡಲೇ ಅಸಂಗನು ಹೆಂಗಸಿನಂತೆ ನಿಶ್ಶಕ್ತನಾದನು. ನಿರ್ವೀರ್ಯನಾದನು.

ಈರೀತಿಯಾಗಿ ತನ್ನ ಗಂಡನ ಪುರುಷತ್ವವು ಹೋಗಲು ಶಶ್ವತಿಗೆ ಬಹಳ ದುಃಖವಾಯಿತು. ಹೇಗಾದರೂ ಅವನಿಗೆ ಪುರುಷತ್ವವನ್ನು ತಂದುಕೊಡಬೇಕೆಂದು ಬಹಳವಾಗಿ ಪ್ರಯತ್ನಮಾಡಿದರು. ದೇಶದಲ್ಲಿಯ ವೈದ್ಯರು ಮಾಂತ್ರಿಕರು ತಾಂತ್ರಿಕರು ಸಿದ್ಧರು ಎಲ್ಲರ ಪ್ರಯತ್ನಗಳೂ ಮುಗಿದವು. ಆದರೆ ಯಾವುದೂ ಫಲಕಾರಿಯಾಗಲಿಲ್ಲ. ಮಹಾರಾಜನು ದಿನೇದಿನೇ ಕೊರಗುತ್ತಿದ್ದನು. ಕೊನೆಗೆ ಶಶ್ವತಿಯು ಮೇಧಾತಿಥಿಗಳನ್ನು ಮೊರೆಹೊಂದಿದಳು. ತನ್ನ ಅರಮನೆಯ ಸಂಪತ್ತೆಲ್ಲವನ್ನು ಸ್ವೀಕರಿಸಿಯಾದರೂ ತನ್ನ ಗಂಡನಿಗೆ ಪುರುಷತ್ವವನ್ನು ಉಂಟುಮಾಡಬೇಕೆಂದು ಬೇಡಿಕೊಂಡಳು. ಶಶ್ವತಿಯ ದೀನಯಾಚನೆಗೆ ಕರಳು ಕರಗಿದ ಮೇಧಾತಿಥಿಗಳು 'ಇದೆಲ್ಲವೂ ಮುಖಸ್ತುತಿಯ ಹುಚ್ಚಿನ ಪರಿಣಾಮವು. ಆದುದರಿಂದ ಇನ್ನು ಮುಂದಾದರೂ ಈ ಹುಚ್ಚಿಗೆ ಹೋಗಬಾರದು' ಎಂದರು. ಅಸಂಗನು ಪಶ್ಚಾತ್ತಾಪಪಟ್ಟನು. ತನ್ನ ಯೋಗ್ಯತೆಯು ಎಷ್ಟು ಎನ್ನುವುದನ್ನು ತಿಳಿದುಕೊಂಡನು. ಮೇಧಾತಿಥಿಗಳು ಅವನಿಗೆ ಪುರುಷೋತ್ತಮನ ಉಪಾಸನೆಯನ್ನು ಹೇಳಿಕೊಟ್ಟರು. ರಾಜನು ಭಕ್ತಿಯಿಂದ ಪುರುಷೋತ್ತಮನ ಆರಾಧನೆಯನ್ನು ಮಾಡಿದನು. ಆ ಪುರುಷೋತ್ತಮನ ಸೇವೆಯಿಂದ ಅವನಿಗೆ ಪುರುಷತ್ವವು ಲಭಿಸಿತು. ಪತಿಯ ಬಲವೀರ್ಯಪೌರುಷಗಳು ಮೊದಲಿನಂತೆ ಬಂದದ್ದನ್ನು ನೋಡಿ ಶಶ್ವತಿಗೆ ಅತ್ಯಂತ ಆನಂದವಾಯಿತು. ಅವಳು ಕೃತಜ್ಞತೆಯಿಂದ ಮೇಧಾತಿಥಿಗಳಿಗೆ ಸಹಸ್ರವಂದನೆಗಳನ್ನು ಮಾಡಿದಳು.



# ಪುಲಿಂದರಾಜನ ಕಥೆಯು [1]

ಪೂರ್ವದಲ್ಲಿ ಕಾಲಂಜನಗಿರಿಯಲ್ಲಿ ಪುಲಿಂದನೆಂಬ ರಾಜನಿದ್ದನು. ಅವನು ಚೆನ್ನಾಗಿ ರಾಜ್ಯಭಾರವನ್ನು ಮಾಡುತ್ತಿದ್ದನು. ಅವನು ಬಹುಸೈನ್ಯವುಳ್ಳವನಾಗಿದ್ದನು. ಅವನು ಎಲ್ಲಾ ರಾಜ್ಯವನ್ನು ಜಯಿಸಿ ಕಪ್ಪವನ್ನು ತರುತ್ತಿದ್ದನು. ಯಾರು ಯಾರು ಪ್ರಬಲ ರಾಜರೆಂದು ಕೇಳುವನೋ ಅವರೆಲ್ಲರನ್ನೂ ಹೋಗಿ ಜಯಿಸುತ್ತಿದ್ದನು. ಈರೀತಿಯಾಗಿ ಅವನು ಸರ್ವತ್ರ ಸಂಚರಿಸುತ್ತಿರಲು ಕೆಲವು ದೂತರು ಬಂದು 'ಪರಮಧಾರ್ಮಿಕನಾದ ಶ್ರುತಿಸ್ಮೃತಿಗಳನ್ನು ತಿಳಿದವನಾದ ದೇವತಾತಿಥಿ ಪೂಜಕನಾದ ಶೂರನಾದ ಸತ್ಯಪ್ರತಿಜ್ಞೆಯುಳ್ಳ ಯಾರಿಂದಲೂ ಸೋತು ಹೋಗದೆ ಇರುವ ಪ್ರಾಚೀನ ಬರ್ಹಿಃ ಎಂದು ಹೆಸರುಳ್ಳ ರಾಜನೊಬ್ಬನಿರುವನು. ಅವನನ್ನು ಜಯಿಸಿದರೆ ಲೋಕದಲ್ಲಿ ಹೆಚ್ಚಾದ ಕೀರ್ತಿಯು ಬರುವುದು' ಎಂದು ಹೇಳಿದರು. ಅದನ್ನು ಕೇಳಿ ರಾಜನು ಸೈನ್ಯ ಸಹಿತನಾಗಿ ಪ್ರಾಚೀನ ಬರ್ಹಿರಾಜನ ನಗರಿಗೆ ಹೋದರು. ಸೈನಿಕರು ಮುತ್ತಿಗೆ ಹಾಕಿದರು. ಪುರಮಧ್ಯದಲ್ಲಿ ಕೋಲಾಹಲವುಂಟಾಯಿತು. ಆ ದಿವಸ ಜ್ಯೇಷ್ಠಮಾಸದ ಏಕಾದಶಿಯಾಗಿದ್ದಿತು. ಆದುದರಿಂದ ಆ ದಿನದಲ್ಲಿ ರಾಜನೂ ಎಲ್ಲಾ ಜನರೂ ಸ್ನಾನಮಾಡಿ ವಿಷ್ಣುಪೂಜಾ ಮಾಡುತ್ತಿದ್ದರು. ಪರಮಾತ್ಮನ ಪೂಜೆಯಲ್ಲಿಯೇ ಆಸಕ್ತರಾಗಿ ಪರಸ್ಪರವಾಗಿ ಮಾತಾಡುತ್ತಿರಲಿಲ್ಲ. ಆಗ ಪುಲಿಂದರಾಜನು ಸೈನಿಕರೆಲ್ಲರೂ ಪುರವನ್ನು ಪ್ರವೇಶಿಸಿ ಲೂಟಿ ಮಾಡಿದರು. ಗ್ರಾಮವಾಸಿಯಾದ ಒಬ್ಬನು ಮಾತ್ರ ಪುಲಿಂದನ ಬಳಿಗೆ ಹೋಗಿ ನಮಸ್ಕರಿಸಿ ಕೈಮುಗಿದು 'ರಾಜಶ್ರೇಷ್ಠನೇ! ಈದಿವಸ ಪವಿತ್ರವಾದ ಏಕಾದಶಿಯಾಗಿರುವುದು. ರಾಜನ ಆಜ್ಞೆಯಂತೆ ಜನರೆಲ್ಲರೂ ರಾಜನೂ ಏಕಾದಶೀವ್ರತವನ್ನು ಮಾಡುತ್ತಿರುವರು. ಇಂದು ಯಾರೊಬ್ಬರೂ ಭೋಜನ ಮಾಡಲಾರರು. ಮಾತಾಡಲಾರರು. ಒಬ್ಬರ ಹಿಂಸೆಯನ್ನು ಮಾಡಲಾರರು. ಸುಳ್ಳು ಹೇಳಲಾರರು. ಆದುದರಿಂದ ನೀನು ಕ್ಷಮಿಸು. ಈ ದಿನವೂ ನಾಳೆಯೂ ಸ್ವಲ್ಪ ದಯೆಯನ್ನು ಮಾಡು. ನಾನು ರಾಜನ ಅಪ್ಪಣೆಯಿಂದ ಬಂದುದಲ್ಲ. ಈದಿನವೂ ನಾಳೆಯೂ ನೀವೆಲ್ಲರೂ ನಮ್ಮ ರಾಜ್ಯದಲ್ಲಿ ಏನು ಅನ್ಯಾಯವನ್ನು ಮಾಡಿದರೂ ರಾಜನು ಕ್ಷಮಿಸುವನು. ನಾಡದು ಮಾತ್ರ ಏನಾಗುವುದೆಂದು ನೋಡುವವನಾಗು' ಎಂದು ಹೇಳಿದನು.

ಆ ಮಾತನ್ನು ಕೇಳಿ ಪುಲಿಂದನು ಗರ್ವವುಳ್ಳವನಾಗಿ ಏಕಾದಶೀ ವ್ರತವೆಂದರೆ

1. ಭ.ಪು.ಜ್ಯೇ.ಮಾ.ಮಾ. ಅ-18, 19, 20, 21

ಏನದು? ಮೂರ್ಖನೇ! ಸುಳ್ಳು ಹೇಳುವಿ. ನಿನ್ನ ಮನೆಗೆ ಹೊರಟುಹೋಗು. ಇಲ್ಲದಿದ್ದರೆ ನನ್ನ ದೂತರು ಪೀಡಿಸುವರು ಎಂದು ಹೇಳಿ ಓಡಿಸಿದನು. ತರುವಾಯ ಪುಲಿಂದನ ಸೈನಿಕರು ಊರ ಒಳಗೆ ಹೋಗಿ ಅಂಗಡಿಗಳ ಬಾಗಿಲುಗಳನ್ನು ಒಡೆದು ಮತ್ತು ಮನೆಗಳ ಬಾಗಿಲುಗಳನ್ನ ಒಡೆದು ಸಾಮಾನುಗಳೆಲ್ಲವನ್ನು ತೆಗೆದುಕೊಂಡು ಹೋದರು. ಹಣವಂತರ ಮನೆಗೆ ಹೋಗಿ ಹಣವನ್ನು ಅಪಹರಿಸಿದರು. ಊರಲ್ಲಿ ಹಣ್ಣೋ ಗೆಡ್ಡೆಯೋ ಒಂದೂ ಉಳಿಯಲಿಲ್ಲ. ಮಕ್ಕಳಿಗೆ ಹಾಲೂ ಇರಲಿಲ್ಲ. ಊರಲ್ಲಿ ಬಹಳ ಹಾಹಾಕಾರವುಂಟಾಗುತ್ತಿತ್ತು. ವೈಕುಂಠದಲ್ಲಿ ಶೇಷದೇವರ ಮೇಲೆ ಇದ್ದ ಪರಮಾತ್ಮನು ಆಶ್ಚರ್ಯಪಟ್ಟಂತೆ ತೋರಿಸುತ್ತಾ ಗರುಡದೇವರ ಕಿವಿಯಲ್ಲಿ ಎಲ್ಲವನ್ನೂ ಹೇಳಿದನು. ನಾನಾ ವಿಧವಾದ ಸೇನೆಯನ್ನು ನಿರ್ಮಿಸಿದನು. ಮೂರು ಕಣ್ಣುಗಳುಳ್ಳ ಏಳು ಕೈಗಳುಳ್ಳ ನಾಲ್ಕು ಪಾದಗಳುಳ್ಳ ಮೂರುತಲೆಯುಳ್ಳ ಎರಡು ತಲೆಗಳುಳ್ಳ ಹತ್ತು ತಲೆಗಳುಳ್ಳ ಆರು ತಲೆಗಳುಳ್ಳ ಐದು ತಲೆಗಳುಳ್ಳ ಆನೆಯ ಮುಖವುಳ್ಳ ಆನೆಯ ಆಕಾರವುಳ್ಳ ಸಿಂಹದ ಆಕಾರವುಳ್ಳ ನರಸಿಂಹ ಆಕಾರವುಳ್ಳ ಕೋಣದಂತೆ ಆಕಾರವುಳ್ಳ ಕರಳಿನ ಮಾಲೆಯನ್ನು ಧರಿಸಿದ ಆನೆಯ ಚರ್ಮವನ್ನು ಉಟ್ಟುಕೊಂಡಿರುವ ಅಪ್ಸರವರೆಗೆ ಮನುಷ್ಯರು ನೋಡದೆ ಇರುವ ಸೇನೆಯನ್ನು ಪರಮಾತ್ಮನು ನಿರ್ಮಿಸಿದನು. ನನ್ನ ಆಜ್ಞೆಯಿಂದ ರಾಜಾಧಮನಾದ ಪುಲಿಂದನ ಸೈನ್ಯವನ್ನು ನಾಶಮಾಡಿರಿ ಎಂದು ಆಜ್ಞಾಪಿಸಿದನು. ಸೂರ್ಯೋದಯವಾಗುವ ಮೊದಲೇ ನಾಶಮಾಡಿರಿ ಎಂದು ಆಜ್ಞಾಪಿಸಿದನು.

ತರುವಾಯ ಭಗವಂತನ ಆಜ್ಞೆಯಿಂದ ಅವರು ಬಂದು ಪುಲಿಂದನ ಸೇನೆಯನ್ನು ಪ್ರವೇಶಿಸಿದರು. ಎಲ್ಲರನ್ನೂ ಬಡೆದು ಹಾಕಿದರು. ಕೆಲವರನ್ನು ಖಡ್ಗದಿಂದಲೂ ಕಡಿದುಹಾಕಿದರು. ಕೆಲವರನ್ನು ಹಲ್ಲುಗಳಿಂದ ಕಚ್ಚಿದರು. ಕೆಲವರನ್ನು ತಿಂದು ಹಾಕಿದರು. ಓಡಿಹೋಗುತ್ತಿರುವವರ ಕಾಲನ್ನು ಹಿಡಿದು ಬೀಳಿಸಿದರು. ಆನೆಗಳನ್ನೂ, ಕುದುರೆಗಳನ್ನೂ, ರಥಗಳ್ನೂ, ಹಲ್ಲಿನಿಂದ ಕಚ್ಚಿ ಪುಡಿಮಾಡಿದರು. ಡೇರೆಗಳೆಲ್ಲವನ್ನೂ ಸುಟ್ಟು ಹಾಕಿದರು. ಇವರು ಮನುಷ್ಯರಲ್ಲ ಎಂದು ಹೇಳಿಕೊಂಡು ಪುಲಿಂದನ ಸೈನಿಕರು ಓಡಲಿಕ್ಕೆ ಆರಂಭಿಸಿದರು. ಓಡುವವರನ್ನು ಹಿಂದಿನಿಂದ ಅಟ್ಟಿಸಿಕೊಂಡು ಹೋಗಿ ಬಡೆದು ಹಾಕಿದರು. ಈರೀತಿಯಾಗಿ ಪುಲಿಂದನ ಸೈನಿಕರು ಎಲ್ಲರೂ ಮೃತರಾದರು. ಪುಲಿಂದನೂ ಕೋಪಿಸಿಕೊಂಡು ಯುದ್ಧಕ್ಕೆ ಹೋದನು. ಭಯಂಕರ ಶಸ್ತ್ರಾಸ್ತ್ರಗಳಿಂದ ಅರ್ಧಯಾಮ ಯುದ್ಧವನ್ನು ಮಾಡಿದನು. ತರುವಾಯ ಯುದ್ಧಮಾಡಲಿಕ್ಕೆ ಸಮರ್ಥನಾಗಲಿಲ್ಲ. ತರುವಾಯ ಓಡಿಹೋಗುವುದೇ

ಒಳ್ಳೆಯದೆಂದು ಯೋಚಿಸಿದನು. ತರುವಾಯ ಅವನು ಮೇಘಾಸ್ತ್ರವನ್ನು ಬಿಟ್ಟನು. ಅದರಿಂದ ಘೋರವಾದ ಕತ್ತಲೆಯುಂಟಾಯಿತು. ಗಾಳಿಯು ಉಂಟಾಯಿತು. ಮಳೆಯು ಸುರಿಯಿತು. ಅದರಿಂದ ಎಲ್ಲರೂ ಮೋಹಿತರಾಗಿ ಅಲ್ಲಿ ಅಲ್ಲಿ ನಿಂತುಬಿಟ್ಟರು. ಆಗ ಪುಲಿಂದನು ಕುದುರೆಯ ಮೇಲೆ ಕೂತುಕೊಂಡು ಒಬ್ಬನೇ ಹೊರಟು ಹೋದನು. ಸತ್ತು ಉಳಿದ ಕೆಲವು ಸೈನಿಕರು ಅವನ ಹಿಂದೆಯೇ ಓಡಿಹೋದರು. ತರುವಾಯ ಪರಮಾತ್ಮನ ಸೈನಿಕರೆಲ್ಲರೂ ಕಾರ್ಯವನ್ನು ಮಾಡಿ ಹೊರಟುಹೋದರು.

ತರುವಾಯ ಮರುದಿವಸ ಪ್ರಾಚೀನಬರ್ಹಿರಾಜನ ಜನರು ಎದ್ದು ನೋಡುವಾಗ ಶತ್ರುಸೇನೆಯೊಂದು ಕಾಣಿಸಲಿಲ್ಲ. ನಾವು ನೋಡಿದ್ದು ಸ್ವಪ್ನವೆಂದು ಹೇಳಿಕೊಂಡರು. ತರುವಾಯ ಸ್ನಾನಾದಿಗಳನ್ನು ಮುಗಿಸಿಕೊಂಡು ದ್ವಾದಶೀಪಾರಣೆಯನ್ನು ಮುಗಿಸಿಕೊಂಡು ಹೊರಗೆ ಬಂದರು. ಬಹು ಶತ್ರುಗಳ ಹೆಣಗಳು ಬಿದ್ದಿರುವುದನ್ನು ಕಂಡು ಆಶ್ಚರ್ಯಪಟ್ಟರು.

ಪುಲಿಂದರಾಜನು ತನ್ನ ಊರಿಗೆ ಬಂದು ಸೇರಿದವನು ತನ್ನ ಶತ್ರುಪುರದ ಪುರುಷನು ಹೇಳಿದ ಮಾತನ್ನು ಸ್ಮರಿಸಿಕೊಂಡು ತನಗೆ ಅನುಭವಕ್ಕೂ ಬಂದ ಏಕಾದಶಿಯ ಪ್ರಭಾವವನ್ನು ಸ್ಮರಿಸುತ್ತಾ ಚಿಂತಾಮಗ್ನನಾಗಿದ್ದನು. ಹೀಗೆಯೇ ಬಹುಸಮಯವು ಕಳೆಯಲು ರಾಜನು ತುಂಬಾ ಕೃಶನಾಗಿ ಹೋದನು. ಅವನ ದೇಹದಲ್ಲಿ ಎಲುಬು ಚರ್ಮ ಮಾತ್ರ ಉಳಿಯಿತು. ತರುವಾಯ ಅವನು ಮಗನಿಗೆ ರಾಜ್ಯವನ್ನು ಒಪ್ಪಿಸಿ ಪತ್ನಿಯಿಂದ ಸಹಿತನಾಗಿ ವನಕ್ಕೆ ಹೋದನು. ವಾನಪ್ರಸ್ಥಾಶ್ರಮವನ್ನು ವಹಿಸಿದನು. ಅಲ್ಲಿ ಇದ್ದುಕೊಂಡು ಏಕಾದಶೀವ್ರತವನ್ನು ಹೇಗೆ ಮಾಡಲಿ ಎಂದು ಯೋಚನೆ ಮಾಡುತ್ತಿದ್ದನು. ತರುವಾಯ ಒಂದುದಿನದಲ್ಲಿ ಪೂರ್ವಪುಣ್ಯದಿಂದ ಅವನ ಆಶ್ರಮಕ್ಕೆ ದತ್ತಾತ್ರೇಯರು ಬಂದರು. ಎಲ್ಲಾ ಋಷಿಗಳೂ ಅವರಿಗೆ ನಾನಾವಿಧವಾಗಿ ಪೂಜೆಯನ್ನು ಮಾಡಿದರು. ಎಲ್ಲಾ ಋಷಿಗಳೂ ಹೊರಟು ಹೋದಮೇಲೆ ರಾಜನು ಅವರ ಬಳಿಗೆ ಉದ್ದಕ್ಕೆ ನಮಸ್ಕರಿಸಿದನು. ದತ್ತಾತ್ರೇಯರು ಏಳು ಏಳು. ಯಾರು ನೀನು? ಯಾಕೆ ಇಲ್ಲಿಗೆ ಬಂದಿರುವಿ ಎಂದು ಕೇಳಿದರು. ಆಗ ರಾಜನು ಏಳಲಿಲ್ಲ. ತರುವಾಯ ಅವರು ತನ್ನ ಕೈಯಿಂದ ಎಬ್ಬಿಸಿದರು. ತರುವಾಯ ರಾಜನು ನಡೆದ ತನ್ನ ವಿಷಯವೆಲ್ಲವನ್ನು ಹೇಳಿಕೊಂಡು 'ಏಕಾದಶೀವ್ರತವನ್ನು ತಿಳಿಯಬೇಕೆಂದು ಕುತೂಹಲಿಯಾಗಿರುವೆನು. ಅದಕ್ಕಾಗಿ ರಾಜ್ಯವನ್ನು ಧನವನ್ನು ಮಗನನ್ನು ಬಿಟ್ಟು ಬಂದಿರುವೆನು. ಈಗ ತಮ್ಮ ದರ್ಶನವಾಯಿತು. ನಾನು

ಪರಮಧನ್ಯನಾಗಿರುವೆನು. ಏಕಾದಶೀವ್ರತವನ್ನು ಮಾಡುವ ವಿಧಾನವನ್ನು ನನಗೆ ತಿಳಿಸಬೇಕು. ಇಲ್ಲದಿದ್ದರೆ ಪ್ರಾಣವನ್ನು ಬಿಡುವೆನು' ಎಂದು ಹೇಳಿಕೊಂಡನು. ಆಗ ದತ್ತಾತ್ರೇಯರು ಕರುಣಾವುಳ್ಳವರಾಗಿ ಎರಡು ಕೈಗಳಿಂದ ರಾಜನನ್ನು ಆಲಿಂಗಿಸಿದವರಾಗಿ ಏಕಾದಶೀವ್ರತದ ವಿಧಾನವನ್ನು ಹೇಳಿದರು—

'ದಶಮೀದಿನದಲ್ಲಿ ಬೇಗನೇ ಎದ್ದು ಶೌಚವನ್ನು ಮಾಡಿಕೊಳ್ಳಬೇಕು. ಆ ದಿನದಲ್ಲಿ ಹಲ್ಲುಕಡ್ಡಿಯಿಂದ ಹಲ್ಲು ಉಜ್ಜಿಕೊಳ್ಳಬಾರದು. ಮಾವಿನ ಎಲೆ ಇತ್ಯಾದಿಗಳಿಂದ ಉಜ್ಜಿಕೊಳ್ಳಬೇಕು. ಆಮೇಲೆ ಮಹಾನದಿಗೆ ಹೋಗಿ ಪಂಚಗವ್ಯವನ್ನು ತಲೆಗೆ ಹಾಕಿಕೊಂಡು ಮಂತ್ರಪೂರ್ವಕವಾಗಿ ಸ್ನಾನಮಾಡಿ ಸಂಧ್ಯಾವಂದನೆಯನ್ನು ಮಾಡಿ ಬಿಳಿವಸ್ತ್ರವನ್ನು ಧರಿಸಿಕೊಂಡು ಮನೆಗೆ ಬರಬೇಕು. ತಾಮ್ರದ ತಂಬಿಗೆಯಲ್ಲಿ ನೀರನ್ನು ಹಿಡಿದುಕೊಂಡು ಬರಬೇಕು. ದೇವರ ಪೂಜೆಯನ್ನು ಮಾಡಿ ಬ್ರಾಹ್ಮಣರಿಗೆ ನಮಸ್ಕರಿಸಿ ಶ್ರೀಭಗವಂತನೇ ಈದಿನ ಭಕ್ತಿಯಿಂದ ಉತ್ತಮವಾದ ನಿನ್ನ ವ್ರತವನ್ನು ಮಾಡುವೆನು' ಎಂದು ಪ್ರಾರ್ಥಿಸಬೇಕು. ದಶಮೀದಿನದಲ್ಲಿ ಪರಾನ್ನಭೋಜನ ಮಾಡಬಾರದು. ರಾತ್ರಿಯಲ್ಲಿ ಭೋಜನ ಮಾಡಬಾರದು. ಕ್ಷೌರ ಮಾಡಿಕೊಳ್ಳಬಾರದು. ಅಭ್ಯಂಗವನ್ನು ಮಾಡಬಾರದು. ಹವಿಷ್ಯಾನ್ನವನ್ನೇ ಭೋಜನ ಮಾಡಬೇಕು. ಸತ್ಕಥಾ ಶ್ರವಣಾದಿಗಳಿಂದ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು. ತರುವಾಯ ಅರುಣೋದಯವಾಗಲು ಹೋಗಿ ಸ್ನಾನ ಮಾಡಿಕೊಂಡು ಬಂದು ಸಂಧ್ಯಾವಂದನೆಯನ್ನು ಮಾಡಬೇಕು. ಮನಸ್ಸಿನಲ್ಲಿ ಒಂದು ವಿಕಾರವನ್ನು ತಂದುಕೊಳ್ಳಬಾರದು. ನೀಚರನ್ನು ನೋಡಲೇಬಾರದು. ಸಹಸ್ರನಾಮಗಳನ್ನು ಹೇಳುತ್ತಾ ತುಲಸೀದಳಗಳಿಂದ ಪರಮಾತ್ಮನಿಗೆ ಅರ್ಚನೆಯನ್ನು ಮಾಡಬೇಕು. ಪವಮಾನ ಸೂಕ್ತವನ್ನೂ ಜಪಿಸುತ್ತಾ ಅಭಿಷೇಕ ಮಾಡಬೇಕು. ಆದಿನ ವಿಶೇಷವಾಗಿ ಸುಳ್ಳು ಹೇಳಬಾರದು. ಔಷಧವನ್ನು ಸ್ವೀಕರಿಸಬಾರದು. ಮಲಗಬಾರದು. ಹೆಂಗಸರ ಹತ್ತಿರ ಮಾತಾಡಬಾರದು. ಕೋಪವನ್ನು ಕಠಿಣವಾಗಿ ಮಾತಾಡುವುದನ್ನು ಹಲ್ಲುಕಡ್ಡಿಯಿಂದ ಹಲ್ಲು ಉಜ್ಜಿಕೊಳ್ಳುವುದನ್ನು ಬಿಟ್ಟುಬಿಡಬೇಕು. ಒಂದೊಂದು ಯಾಮದಲ್ಲಿಯೂ ಭಗವಂತನ ಪೂಜೆಯನ್ನು ಮಾಡಬೇಕು. ರಾತ್ರಿ ಹಗಲು ಗಾಯನ ವಾದ್ಯಘೋಷಾದಿಗಳನ್ನು ಮಾಡಬೇಕು. ತರುವಾಯ ಬೆಳಗಾದ ಮೇಲೆ ದ್ವಾದಶೀತಿಥಿಯಿರುವಾಗಲೇ ಪಾರಣೆಯನ್ನು ಮಾಡಬೇಕು. ಇಲ್ಲದಿದ್ದರೆ ಎಲ್ಲಾ ಪುಣ್ಯದ ಹಾನಿಯುಂಟಾಗುವುದು. ಆದುದರಿಂದ ಸರ್ವಪ್ರಯತ್ನದಿಂದ ದ್ವಾದಶಿಯಿರುವಾಗಲೇ ಪಾರಣೆಯನ್ನು ಮಾಡಬೇಕು. ಹಾಗೆ ಮಾಡಿದರೆ ವ್ರತದ

ಸಂಪೂರ್ಣ ಫಲವುಂಟಾಗುವುದು. ಪಾರಣೆಯ ದಿವಸದಲ್ಲಿ ಬಹುಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಶಕ್ತಿಯಿಲ್ಲದಿದ್ದರೆ ಹನ್ನೆರಡು ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ತೃಪ್ತಿಯುಂಟಾಗುವಂತೆ ಪಾಯಸದಿಂದ ಭೋಜನ ಮಾಡಿಸಬೇಕು. ಬ್ರಾಹ್ಮಣರ ಭೋಜನ ಮಾಡಿಸಿಯಾದ ಮೇಲೆ ತಾನು ಮೌನದಿಂದ ಭೋಜನ ಮಾಡಬೇಕು. ಆ ದಿನವೂ ಪರಾನ್ನವನ್ನು ಮಾಂಸವನ್ನು ಉದ್ದನ್ನೂ ಎಣ್ಣೆಯನ್ನೂ ಜೇನುತುಪ್ಪವನ್ನೂ ಸ್ತ್ರೀಸಂಬಂಧವನ್ನೂ ಔಷಧವನ್ನೂ ಮಾತ್ಸರ್ಯವನ್ನು ಹಿಂಸೆಯನ್ನು ಕಂಚಿನಪಾತ್ರೆಯನ್ನು ತಾಂಬೂಲಭಕ್ಷಣೆಯನ್ನು ಪರಿತ್ಯಜಿಸಬೇಕು. ರಾತ್ರಿ ಭೋಜನವನ್ನು ಮಾಡಬಾರದು. ಈರೀತಿಯಾಗಿ ಮೂರು ದಿನಗಲ್ಲಿ ಮಾಡುವ ವ್ರತವಿದು. ಏಕಾದಶಿಯಲ್ಲಿ ಸರ್ವಥಾ ಭೋಜನ ಮಾಡಬಾರದು. ಈರೀತಿಯಾಗಿ ಪ್ರತಿಯೊಂದು ಏಕಾದಶಿಯಲ್ಲಿಯೂ ಮಾಡಬೇಕು. ಜ್ಯೇಷ್ಠಮಾಸದ ಶುಕ್ಲಪಕ್ಷದ ಏಕಾದಶಿಯಲ್ಲಿ ವಿಶೇಷವಾಗಿ ಉಪವಾಸ ಮಾಡಬೇಕು. ಆ ಏಕಾದಶಿಗೆ ನಿರ್ಜಲಾ ಎಂದು ಹೆಸರು. ಪ್ರಾಚೀನ ಬರ್ಹಿ ರಾಜನು ನೀರನ್ನು ಸ್ವೀಕರಿಸದೆ ಆ ಏಕಾದಶಿಯಲ್ಲಿ ಉಪವಾಸ ಮಾಡಿರುವನು. ಆದುದರಿಂದ ಅದಕ್ಕೆ ನಿರ್ಜಲಾ ಎಂದು ಹೆಸರು. ಅದನ್ನು ಸ್ಮರಿಸುವುದರಿಂದಲೇ ಸರ್ವಪಾಪಪರಿಹಾರವೂ ಆಗುವುದು ಎಂದು ಹೇಳಿ ಹೊರಟುಹೋದರು. ತರುವಾಯ ಪುಲಿಂದನು ಭಕ್ತಿಯಿಂದ ಆ ಏಕಾದಶೀ ವ್ರತವನ್ನು ಮಾಡಿದನು. ಆ ಪುಣ್ಯಾತಿಶಯದಿಂದ ಅವನು ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನಾಗಿ ಹುಟ್ಟಿದನು.



## ಶತಬಲಿಯ ಕಥೆಯು [1]

ಪೂರ್ವದಲ್ಲಿ ವಂಗದೇಶದಲ್ಲಿ ಶತಬಲಿಯೆಂಬ ರಾಜನಿದ್ದನು. ಅವನು ತನ್ನ ಪರಾಕ್ರಮದಿಂದ ಕಲಿಂಗಾದಿದೇಶಗಳನ್ನು ಜಯಿಸಿದ್ದನು. ಅವನು ಕಾಮರೂಪವೆಂಬ ದೇಶದ ರಾಜನನ್ನು ಜಯಿಸಲಿಕ್ಕಾಗಿ ಹೋದನು. ಅಲ್ಲಿ ಭಯಂಕರವಾದ ಯುದ್ಧವು ನಡೆಯಿತು. ಎರಡು ಪಕ್ಷದ ಸೈನಿಕರೂ ಭಯಂಕರವಾಗಿ ಯುದ್ಧವನ್ನು ಮಾಡಿ ಕೊಂಡರು. ಶತಬಲಿಗೂ ಕಾಮರೂಪದ ರಾಜನಿಗೂ ಯುದ್ಧವು ನಡೆಯಿತು. ಕಾಮರೂಪರಾಜನು ಅರ್ಧಚಂದ್ರಾಕಾರ ಬಾಣದಿಂದ ಶತಬಲಿಯ ಧನುಸ್ಸನ್ನು

1. ಸ್ಕಂ.ಪು. ಆಷಾ. ಮಾ.ಮಾ. ಅ-2

ಛತ್ರವನ್ನು ಕತ್ತರಿಸಿದನು. ಶತಬಲಿಯು ಕೋಪದಿಂದ ಬೇರೊಂದು ಧನುಸ್ಸನ್ನು ತೆಗೆದುಕೊಂಡು ಕಾಮರೂಪನ ಎದೆಗೆ ಬಾಣದಿಂದ ಬಲವಾಗಿ ಬಡೆದನು. ಕಾಮರೂಪನಿಗೆ ಅದರಿಂದ ಮೂರ್ಛೆಯುಂಟಾಯಿತು. ಸ್ವಲ್ಪ ಹೊತ್ತಿನಲ್ಲಿಯೇ ಎಚ್ಚರವನ್ನು ಹೊಂದಿದವನಾಗಿ ಶತಬಲಿಯ ಸಾರಥಿಯನ್ನು ಬಾಣಗಳಿಂದ ಬಡೆದನು. ಸಾರಥಿಯು ಮೃತನಾದನು. ಸಾರಥಿಯು ಮೃತನಾಗಲು ಶತಬಲಿಯು ಕೋಪವುಳ್ಳವನಾಗಿ ತಾನೇ ಕುದುರೆಗಳ ಹಗ್ಗವನ್ನು ಹಿಡಿದುಕೊಂಡು ಯುದ್ಧವನ್ನು ಮಾಡಿದನು. ತೀಕ್ಷ್ಣಗಾದ ನಾಲ್ಕು ಬಾಣಗಳಿಂದ ಕಾಮರೂಪನ ನಾಲ್ಕು ಕುದುರೆಗಳನ್ನು ಸಂಹರಿಸಿದನು. ಐದನೇ ಬಾಣದಿಂದ ಅವನ ಸಾರಥಿಯ ತಲೆಯನ್ನು ಕತ್ತರಿಸಿದನು. ತರುವಾಯ ಕಾಮರೂಪನು ಖಡ್ಗವನ್ನೂ ಚರ್ಮವನ್ನು ಹಿಡಿದುಕೊಂಡು ಬಂದನು. ಆಗ ಶತಬಲಿಯು ಅವನ ಖಡ್ಗವನ್ನು ತುಂಡು ಮಾಡುವವನಾಗಿ ತನ್ನ ಖಡ್ಗದಿಂದ ಅವನ ತಲೆಗೆ ಬಡೆದನು. ಆದರಿಂದ ಕಾಮರೂಪನು ಮೂರ್ಛಿತನಾಗಿ ಬಿದ್ದನು. ತರುವಾಯ ಶತಬಲಿಯು ಕಾಮರೂಪವನ್ನು ಬೆದರಿಸುವವನಾಗಿ ಬದುಕಿರುವಂತೆ ಸೆರೆಹಿಡಿದನು. ಈರೀತಿಯಾಗಿ ಕಾಮರೂಪನು ಶತ್ರುವಶನಾದನು. ಶತಬಲಿಯು ಅವನ ಸರ್ವಸ್ವವನ್ನು ಅಪಹರಿಸಿದನು. ಬಲಿಷ್ಠನಾದ ಶತಬಲಿಯು ತನ್ನ ಸೇನೆಯನ್ನು ಕರೆದುಕೊಂಡು ಹೋಗುತ್ತಾ ಗಂಗಾತೀರದಲ್ಲಿ ವಿಶ್ರಾಂತಿ ಹೊಂದಿದನು. ಅಲ್ಲಿ ತಪಸ್ಸನ್ನು ಮಾಡುತ್ತಿದ್ದ ಅನೇಕ ಋಷಿಗಳನ್ನು ನೋಡಿದನು. ಅವರೆಲ್ಲರಿಗೂ ಪ್ರತ್ಯೇಕವಾಗಿ ಆದರದಿಂದ ನಮಸ್ಕರಿಸಿದನು. ಅವರು ರಾಜನನ್ನು ಬಹಳವಾಗಿ ಹೊಗಳಿ ನೀನು ಉತ್ತಮವಾದ ಕ್ಷತ್ರಿಯಧರ್ಮವನ್ನು ಅನುಷ್ಠಾನ ಮಾಡಿರುವಿ ಎಂದು ಹೇಳಿ ಆದರೂ ಸೋತು ಸಿಕ್ಕಿರುವ ರಾಜನನ್ನು ಸಂಹರಿಸುವುದು ಧರ್ಮವಲ್ಲವೆಂದೂ ಅವನನ್ನು ಹಾಗೆಯೇ ಬಿಟ್ಟು ಬಿಡಬೇಕೆಂದೂ ಹೇಳಿದರು. ಶತಬಲಿಯು ಹಾಗೆಯೇ ಆಗಲಿ ಎಂದು ಒಪ್ಪಿಕೊಂಡು ಕಾಮರೂಪನನ್ನು ಬಂಧನದಿಂದ ಬಿಟ್ಟುಬಿಡುವವನಾಗಿ ಸಂತೋಷದಿಂದ ತನ್ನ ರಾಜ್ಯಕ್ಕೆ ಹೊರಟುಹೋದನು.

ಋಷಿಗಳಿಂದ ಬಿಡಿಸಲ್ಪಟ್ಟ ಕಾಮರೂಪನು ಕೋಪಲಜ್ಜಾಶೋಕ ಪರವಶನಾಗಿ ಗಂಗೆಯಲ್ಲಿ ಸ್ನಾನವನ್ನು ಮಾಡಿದವನಾಗಿ ಹೆಂಡತಿ ಮಕ್ಕಳನ್ನು ರಾಜ್ಯವನ್ನು ಬಿಟ್ಟು ಬ್ರಾಹ್ಮಸರೋವರ ಎಂಬಲ್ಲಿಗೆ ಹೋದನು. ಅಲ್ಲಿ ಲಜ್ಜೆಯಿಂದ ಹೇಗೆ ಪ್ರಾಣವನ್ನು ಬಿಡಲಿ ಎಂದು ಯೋಚಿಸಿದನು. ಕೊನೆಗೆ ರುದ್ರದೇವರನ್ನು ತಪಸ್ಸು ಮಾಡಿ ಸಂತೋಷಪಡಿಸುವೆನೆಂದು ಯೋಚಿಸುವವನಾಗಿ ಅಲ್ಲಿ ಮೂರು ಸಂಧ್ಯೆಗಳಲ್ಲಿಯೂ

ಸ್ನಾನಮಾಡಿ ರುದ್ರದೇವರನ್ನು ಪೂಜಿಸಲಿಕ್ಕೆ ಆರಂಭಿಸಿದನು. ಹೀಗೆಯೇ ಮೂರು ವರ್ಷಗಳು ಕಳೆದವು. ಒಂದು ದಿವಸದಲ್ಲಿ ಮಧ್ಯಾಹ್ನದಲ್ಲಿ ಸ್ನಾನಮಾಡಲಿಕ್ಕೆ ಬಂದಿದ್ದನು. ಆಗ ಒಂದು ಮೃಗವು ಹಿಂದೆ ನೋಡುತ್ತಾ ನೋಡುತ್ತಾ ಓಡಿಬಂದು ದೀನದೃಷ್ಟಿಯಿಂದ ರಾಜನನ್ನು ನೋಡುತ್ತಾ ರಾಜನೇ! ನನ್ನನ್ನು ರಕ್ಷಿಸು, ರಕ್ಷಿಸು ಎಂದು ಪ್ರಾರ್ಥಿಸಿಕೊಂಡಿತು. ರಾಜನೂ ಕೃಪಾದೃಷ್ಟಿಯಿಂದ ರಾಜನನ್ನು ನೋಡುವವನಾಗಿ 'ಮೃಗವೇ! ಭಯಪಡಬೇಡ. ನಿನ್ನ ಭಯವನ್ನು ನಾನು ಪರಿಹರಿಸುವೆನು. ನಿನ್ನ ಪ್ರಾಣವನ್ನು ರಕ್ಷಿಸುವೆನು' ಎಂದು ಹೇಳಿದನು. ಈರೀತಿಯಾಗಿ ರಾಜನು ಹೇಳುತ್ತಿರಲು ಆ ಮೃಗದ ಹಿಂದೆಯೇ ಕೆಲವು ಬೇಡರು ಧನುರ್ಬಾಣಗಳನ್ನು ಹಿಡಿದುಕೊಂಡು ಆ ಮೃಗವನ್ನು ಕೊಲ್ಲಿರಿ ಕೊಲ್ಲಿರಿ ಎಂದು ಹೇಳುತ್ತಾ ಬಂದರು. ಅವರು ರಾಜನನ್ನು ನೋಡಿ ಈ ಮೃಗವನ್ನು ನಮಗೆ ಕೊಟ್ಟು ಬಿಡು. ಇದು ನಮಗೆ ಸೇರಿದ್ದು. ತಪಸ್ವಿಯಾದ ನೀನು ನಮ್ಮ ಸೊತ್ತಾದ ಇದನ್ನು ಅಪಹರಿಸುವುದು ಸರಿಯಲ್ಲ. ಅಥವಾ ನೀನು ತಪಸ್ವಿಯಲ್ಲ. ಹಗಲು ಕಳ್ಳನು. ಈ ಮೃಗಕ್ಕಾಗಿ ನಾವು ಬಹಳ ಸುತ್ತಿಕೊಂಡು ಬರುತ್ತಿರುವೆವು. ಇಲ್ಲಿ ಇದು ನಮ್ಮ ಕಣ್ಣಿಗೆ ಬಿದ್ದಿರುತ್ತದೆ. ನಾವು ಕೊಲ್ಲಲಿಕ್ಕೆ ಬಂದಿರುವೆವು. ನೀನು ಯಾಕೆ ಇದನ್ನು ಅಪಹರಿಸುವಿ? ನೀನು ನಿಶ್ಚಯವಾಗಿಯೂ ಮೃಗವನ್ನು ಸಂಹರಿಸಲಿಕ್ಕೆ ಅಶಕ್ತನಾಗಿ ಕಪಟದಿಂದ ಅಪಹರಿಸಲಿಕ್ಕೆ ಇಚ್ಛಿಸುವಿ. ನೀನು ಮುನಿವೇಷವನ್ನು ಧರಿಸಿರುವ ಕಾರಣವು ತಿಳಿಯಿತು. ಮೃಗಕ್ಕಾಗಿಯೇ ಹೀಗೆ ಕಪಟ ವೇಷವನ್ನು ಧರಿಸಿರುವಿ. ನಾವು ನೋಡುತ್ತಿರುವಾಗ ಈ ಮೃಗವನ್ನು ನಮ್ಮ ಕೈಯಿಂದ ಯಾರು ರಕ್ಷಿಸುವರು? ನೋಡಿಬಿಡುತ್ತೇವೆ. ಬೇಗನೇ ಈ ಮೃಗವನ್ನು ಕೊಟ್ಟು ಬಿಡುವವನಾಗು. ಇಲ್ಲದಿದ್ದರೆ ನಿನ್ನ ಪ್ರಾಣಕ್ಕೇ ಆಪತ್ತು ಬರುವುದು' ಎಂದು ಹೇಳಿದರು.

ಆಗ ಕಾಮರೂಪರಾಜನು 'ನೀವೆಲ್ಲರೂ ಪಾಪಿಗಳು ನಿಮಗೆ ಸರಿಯಾಗಿ ಮಾತಾಡುತ್ತಿರುವಿರಿ. ನಾನು ಕ್ಷತ್ರಿಯನಾಗಿದ್ದರೆ ಸರ್ವಥಾ ಮೃಗವನ್ನು ಕೊಡಲಾರೆನು. ನಾನೇನೂ ಈ ಮೃಗವನ್ನು ಕೂಗಲಿಲ್ಲ. ಅದೇ ಭಯದಿಂದ ಪೀಡಿತನಾಗಿ ನನ್ನನ್ನು ಮರೆಹೊಂದಿತು. ಮೃತ್ಯುಭಯದಿಂದ ಪೀಡಿತವಾದ ಅದನ್ನು ನಾನು ಸಾಯಲಿಕ್ಕೆ ಬಿಡಲಾರೆನು. ನಾನು ದೇಹದಲ್ಲಿ ಪ್ರಾಣವಿರುವವರೆಗೆ ನನ್ನನ್ನು ಮರೆಹೊಂದಿರುವ ಈ ಮೃಗವನ್ನು ಬಿಡಲಾರೆನು. ನಾನು ಅದನ್ನು ಬಿಟ್ಟುಬಿಟ್ಟರೆ ಮಹಾಪಾಪವು ಬರುವುದು. ರಕ್ಷಿಸಿದರೆ ಕೀರ್ತಿಯುಂಟಾಗುವುದು. ಕೀರ್ತಿಯನ್ನು ಪಡೆದವನು ಸ್ವರ್ಗವನ್ನು ಹೊಂದುವನು. ಆದುದರಿಂದ ನಾನು ಸರ್ವಥಾ ಈ ಮೃಗವನ್ನು ಸಂಹರಿಸಲಿಕ್ಕೆ ಬಿಡಲಾರೆನು' ಎಂದು ಹೇಳಿದನು.

ಅದನ್ನು ಕೇಳಿ ಬೇಡರು 'ನೀನು ಮೂರ್ಖನಾಗಿರುವಿಯಲ್ಲಾ, ಮೃಗಕ್ಕಾಗಿ ಪ್ರಾಣವನ್ನು ಬಿಡುವೆಯಲ್ಲಾ! ತಪಸ್ಸನ್ನು ಮಾಡುತ್ತಿರುವ ನೀನು ನಿನ್ನ ದೇಹವನ್ನು ರಕ್ಷಿಸಿಕೊಳ್ಳಬೇಕು. ದೇಹವನ್ನು ರಕ್ಷಿಸಿಕೊಳ್ಳದೆ ನಿನಗೆ ಏನು ಪುಣ್ಯವುಂಟಾಗುವುದು? ಪಾಪವೇ ಉಂಟಾಗುವುದು. ಪಶುಗಳು ಮನುಷ್ಯರ ಆಹಾರವು. ಅದಕ್ಕಾಗಿ ಯಾರು ಸಾಯುವರು? ದೇವತೆಗಳಿಗೂ ಪಿತೃಗಳಿಗೂ ಇರುವ ಈ ಮೃಗವನ್ನು ನೀನು ಹೇಗೆ ರಕ್ಷಿಸುವಿ? ಇದನ್ನು ರಕ್ಷಿಸುವುದರಿಂದ ಪಾಪವೇ ಬರುವುದು. ಇದನ್ನು ಕೊಂದರೆ ಇದಕ್ಕೇ ಸುಖವುಂಟಾಗುವುದು. ಈ ಪಶುವು ದೇವಪಿತೃಕಾರ್ಯಕ್ಕಾಗಿ ಮೃತವಾಗಿ ಸ್ವರ್ಗವನ್ನು ಹೊಂದುವುದು. ನಾವು ಹವ್ಯಕವ್ಯವಾಗಿ ಇದನ್ನು ಸಂಹರಿಸಿ ಬ್ರಾಹ್ಮಣರಿಗೆ ಉಪಯೋಗಿಸುವೆವು. ಇದನ್ನು ನಾವು ಸಂಹಾರ ಮಾಡದೆ ಇದ್ದರೆ ಇದಕ್ಕೆ ಸ್ವರ್ಗವುಂಟಾಗುವುದಿಲ್ಲ. ನೀವೀಗ ನಿನ್ನ ಪ್ರಾಣವನ್ನೇ ಬಿಟ್ಟು ಇದನ್ನು ಬಿಡಿಸಿದರೂ ಇನ್ನೊಬ್ಬರು ಸಂಹರಿಸುವರು. ಈ ಮೃಗಕ್ಕಾಗಿ ಸಾಯುವ ನಿನಗೆ ಏನು ಪುಣ್ಯವು ಬರುತ್ತದೆ? ಆದುದರಿಂದ ನಿನ್ನ ದುರಾಗ್ರಹವನ್ನು ಬಿಡು. ಪುನಃ ಪುನಃ ಹೇಳುವೆವು' ಇತ್ಯಾದಿ ರೀತಿಯಾಗಿ ಹೇಳಿದರು. ಅದಕ್ಕೆ ರಾಜನು ನನ್ನ ಪ್ರಾಣವನ್ನು ಕೊಟ್ಟಾದರೂ ಈ ಮೃಗವನ್ನು ರಕ್ಷಿಸುವೆನು. ಶಿಬಿರಾಜನು ತನ್ನ ದೇಹವನ್ನು ಕೊಟ್ಟು ಪಾರಿವಾಳವನ್ನು ರಕ್ಷಿಸಲಿಲ್ಲವೇ? ಅದರಿಂದ ಇಲ್ಲಿ `ಮಹಾಕೀರ್ತಿಯನ್ನು ಪಡೆಯಲಿಲ್ಲವೇ? ಆದುದರಿಂದ ನೀವು ನನ್ನ ಮೇಲೆ ದೊಡ್ಡ ಮನಸ್ಸನ್ನು ಮಾಡಿ ಈ ಮೃಗದ ಬದಲಿಗೆ ಏನು ಬೇಕೆಂದು ಕೇಳಿರಿ' ಎಂದು ಹೇಳಿದನು. ಅದಕ್ಕೆ ಅವರು ನೀನು ಈ ಮೃಗದ ಬದಲಿಗೆ ನಿನ್ನ ತಲೆಯನ್ನೇ ಕೊಡುವವನಾಗು ಎಂದರು. ಅದಕ್ಕೆ ರಾಜನು ಸಂತೋಷದಿಂದ ಹಾಗಾದರೆ ಬೇಗನೇ ನನ್ನ ತಲೆಯನ್ನು ತೆಗೆದುಕೊಳ್ಳಿರಿ ಎಂದು ಹೇಳಿದನು. ಆ ಮೃಗವನ್ನು ದೂರದವರೆಗೆ ಬಿಟ್ಟನು. ಅದು ಬೇಗನೇ ಬೇರೊಂದು ವನಕ್ಕೆ ಹೋಯಿತು.

ತರುವಾಯ ರಾಜನು ಹಿಂದೆ ತಿರುಗಿ ಬಂದು ಬೇಡರೊಡನೆ ಬೇಗನೇ ನನ್ನ ತಲೆಯನ್ನು ಸ್ವೀಕರಿಸಿರಿ ಎಂದು ಹೇಳಿದನು. ಅದಕ್ಕೆ ಬೇಡರು ನಾವು ತಪಸ್ವಿಯನ್ನು ಯುದ್ಧಮಾಡದೆ ಇರುವವನ್ನು ಶಸ್ತ್ರಹೀನನನ್ನು ಕೊಲ್ಲಲಾರೆವು. ನೀನೇ ನಿನ್ನ ತಲೆಯನ್ನು ಕತ್ತರಿಸಿಕೊಡು' ಎಂದು ಹೇಳಿದರು. ಆಗ ರಾಜನು ತೀಕ್ಷ್ಣವಾದ ಶಸ್ತ್ರದಿಂದ ತನ್ನ ತಲೆಯನ್ನು ಕಡಿದುಕೊಡಲಿಕ್ಕೆ ಆರಂಭಿಸಿದನು. ಆಗ ಐದು ತಲೆಗಳುಳ್ಳ ಹತ್ತು ಕೈಗಳುಳ್ಳ ರುದ್ರದೇವರು ತನ್ನ ಗಣಗಳಿಂದ ಸಹಿತರಾಗಿ ಅಲ್ಲಿಗೆ ಬಂದು ರಾಜನೇ! ಸಾಹಸವನ್ನು ಮಾಡಬೇಡ. ನಿನ್ನ ಮೇಲೆ ಸಂತೋಷ

ವುಳ್ಳವನಾಗಿರುವೆನು. ನಿನಗೆ ಬೇಕಾದುದನ್ನು ಬೇಡು' ಎಂದು ಹೇಳಿದರು. ಅವನ ಕೈಯಿಂದ ಶಸ್ತ್ರವನ್ನು ಸೆಳೆದುಕೊಂಡರು. ಅಷ್ಟರಲ್ಲಿ ರಾಜನು ಮುಂದೆ ನೋಡುತ್ತಿರುವಾಗ ಬೇಡರು ಕಾಣಿಸಲಿಲ್ಲ. ರುದ್ರದೇವರನ್ನು ನೋಡಿದನು. ಅವರಿಗೆ ಪುನಃ ಪುನಃ ನಮಸ್ಕಾರವನ್ನು ಮಾಡಿದನು. ರುದ್ರದೇವರನ್ನು ಸ್ತುತಿಸಿದನು. ರುದ್ರದೇವರು ಸಂತುಷ್ಟರಾಗಿ ಬೇಕಾದ ವರವನ್ನು ಕೇಳೆಂದರು. ಅದಕ್ಕೆ ರಾಜನು 'ಶತಬಲಿಯೆಂಬ ರಾಜನಿಂದ ನಾನು ಪರಾಜಿತನಾಗಿರುವೆನು. ಆ ಶತಬಲಿಯು ರಾಜ್ಯಭ್ರಷ್ಟನಾಗಬೇಕು. ಅವನು ತಪಸ್ಸು ಯಜ್ಞತೀರ್ಥ ಯಾತ್ರೆಯೇ ಮೊದಲಾದ ಯಾವ ಪುಣ್ಯದಿಂದಲೂ ತನ್ನ ಸ್ಥಾನವನ್ನು ಹೊಂದಬಾರದು' ಎಂದು ಕೇಳಿಕೊಂಡನು. ಆಗ ರುದ್ರದೇವರು ಆಷಾಢಮಾಸದಲ್ಲಿ ತಪತೀನದಿಯಲ್ಲಿ ಸ್ನಾನವೊಂದನ್ನು ಬಿಟ್ಟು ಮತ್ತೆ ಯಾವ ಸಾಧನದಿಂದಲೂ ಅವನಿಗೆ ತನ್ನ ಸ್ಥಾನದ ಪ್ರಾಪ್ತಿಯಾಗುವುದಿಲ್ಲ' ಎಂದು ಹೇಳಿ ಅಂತರ್ಧಾನವನ್ನು ಹೊಂದಿದರು. 'ನಿನಗೆ ನಿನ್ನ ರಾಜ್ಯಪ್ರಾಪ್ತಿಯಾಗುವುದು. ಆಮೇಲೆ ನನ್ನ ಲೋಕವನ್ನು ಹೊಂದುವಿ' ಎಂದು ಹೇಳಿಹೋದರು. ತರುವಾಯ ರಾಜನು ರುದ್ರದೇವರ ಅನುಗ್ರಹದಿಂದ ಪೂರ್ವದಂತೆಯೇ ಸಂತೋಷದಿಂದ ಇದ್ದನು.

ತರುವಾಯ ಶತಬಲಿಯು ರುದ್ರದೇವರ ವರದಿಂದ ರಾಜ್ಯಭ್ರಷ್ಟನಾದನು. ಅವನು ದುಃಖದಿಂದ ಸರ್ವತ್ರ ಸಂಚಾರ ಮಾಡಿದನು. ಅವನು ದೈನ್ಯವುಳ್ಳವನಾಗಿ ಕಾಂತಿಹೀನನಾಗಿ ಕಾಲುನಡೆಯಿಂದಲೇ ಸಂಚರಿಸುತ್ತಾ ಮಾರ್ಕಂಡೇಯರ ಆಶ್ರಮಕ್ಕೆ ಹೋದನು. ಮಾರ್ಕಂಡೇಯರು ಅವನಿಗೆ ಆತಿಥ್ಯವನ್ನು ಮಾಡಿದರು. ಶತಬಲಿಯು ಅವರಿಗೆ ನಮಸ್ಕರಿಸಿ ಕೈಮುಗಿದು ನಿಂತುಕೊಂಡನು. ಮಾರ್ಕಂಡೇಯರು 'ರಾಜನೇ! ನಿನಗೇಕೆ ಈ ಅವಸ್ಥೆಯು ಬಂದಿತು? ನಿನ್ನ ಮಹಾರಾಜ್ಯವು ಎಲ್ಲಿಗೆ ಹೋಯಿತು? ನಿನ್ನ ಆನೆಗಳು ಎಲ್ಲಿಗೆ ಹೋದವು? ಸಂಪತ್ತು ಎಲ್ಲಿಗೆ ಹೋಯಿತು? ಮಂತ್ರಿಗಳು ಎಲ್ಲಿಗೆ ಹೋದರು? ಸಹಾಯಕರು ಎಲ್ಲಿಗೆ ಹೋದರು?' ಇತ್ಯಾದಿ ರೀತಿಯಾಗಿ ಕೇಳಿದರು. ಅದಕ್ಕೆ ಶತಬಲಿಯು 'ನನ್ನಿಂದ ಯುದ್ಧದಲ್ಲಿ ಸೋತುಹೋದ ಶತ್ರುವಾದ ಕಾಮರೂಪರಾಜನು ರುದ್ರದೇವರನ್ನು ಕುರಿತು ತಪಸ್ಸನ್ನು ಮಾಡಿ ಅವರಿಂದ ವರವನ್ನು ಪಡೆದನು. ಆ ರುದ್ರದೇವರಿಂದಾಗಿ ತನ್ನ ಪದವಿಯು ಹೋಯಿತು. ರುದ್ರದೇವರು ಜಗತ್ತಿಗೆ ಮಂಗಳವನ್ನು ಮಾಡುವವರು ನನಗೆ ಏಕೆ ಹೀಗೆ ಮಾಡಿದರೋ ಎಂದು ಹೇಳಿದನು. ಅವನ ಮಾತನ್ನು ಕೇಳಿ ಮಾರ್ಕಂಡೇಯರು ಸ್ವಲ್ಪ ಹೊತ್ತು ಯೋಚನೆ ಮಾಡುವವರಾಗಿ

'ರಾಜನೇ! ಎಲ್ಲಾ ವಿಷಯವನ್ನು ತಿಳಿಯುವವನಾದೆನು. ಪೂರ್ವದಲ್ಲಿ ಮಾಡಿದ ಕರ್ಮಕ್ಕೆ ಸರಿಯಾಗಿ ರುದ್ರದೇವರು ಫಲವನ್ನು ಕೊಡುವರು. ನೀನು ಪೂರ್ವದಲ್ಲಿ ಮೂರನೇ ಜನ್ಮದಲ್ಲಿ ಗೌಡದೇಶದಲ್ಲಿ ರಾಜನಾಗಿದ್ದಿ. ಆಗ ನೀನು ಮತ್ತನಾಗಿ ಒಬ್ಬ ಬ್ರಾಹ್ಮಣನನ್ನು ಸ್ಥಾನಭ್ರಷ್ಟನನ್ನಾಗಿ ಮಾಡಿದಿ. ಅವನ ಸರ್ವಸ್ವವನ್ನು ಅಪಹರಿಸಿ ದೇಶದಿಂದ ಹೊರಗೆ ಮಾಡಿದಿ. ಮೃತನಾದ ಮೇಲೆ ನೀನು ಆ ಪಾಪದಿಂದ ನರಕವನ್ನು ಹೊಂದಿದಿ. ನರಕದಲ್ಲಿ ಬಹುಕಾಲ ದುಃಖವನ್ನು ಅನುಭವಿಸಿ ಪಾಪರಹಿತನಾದಿ. ಆಮೇಲೆ ಪೂರ್ವಪುಣ್ಯಾನುಸಾರವಾಗಿ ಬ್ರಾಹ್ಮಣನಾಗಿ ಹುಟ್ಟಿದಿ. ಆ ಜನ್ಮದಲ್ಲಿ ಗಂಗಾಯಮುನಾಸಂಗಮದಲ್ಲಿ ತಪಸ್ಸನ್ನು ಮಾಡಿ ಮುದುಕನಾಗಿ ಮೃತನಾಗಿ ಆ ಪುಣ್ಯದಿಂದ ಭಗವಂತನ ಸನ್ನಿಧಾನದಲ್ಲಿ ಬಹುಕಾಲ ಸುಖದಿಂದ ಇದ್ದವನಾಗಿ ಪುಣ್ಯಶೇಷದಿಂದ ಇಲ್ಲಿ ಹುಟ್ಟುವವನಾದಿ. ನೀನು ಪೂರ್ವದಲ್ಲಿ ಬ್ರಾಹ್ಮಣನನ್ನು ಸ್ಥಾನಭ್ರಷ್ಟನನ್ನಾಗಿ ಮಾಡಿದ ಪಾಪದಿಂದ ನಿನಗೆ ಈಗ ಹೀಗೆ ಆಯಿತು. ಪೂರ್ವಕರ್ಮಾನುಸಾರವಾಗಿಯೇ ದೇವತೆಗಳು ಫಲವನ್ನು ಕೊಡುವರು' ಎಂದು ಹೇಳಿದರು. ಆಗ ರಾಜನು 'ಪೂಜ್ಯರೇ! ನಾನು ಯಾವ ಉಪಾಯದಿಂದ ಸುಖವನ್ನು ಹೊಂದುವೆನೋ ಆ ಉಪಾಯವನ್ನು ಕೃಪೆಯಿಂದ ಹೇಳಬೇಕು ಎಂದು ಹೇಳಿದನು. ಆಗ ಮಾರ್ಕಂಡೇಯರು ಧ್ಯಾನದೃಷ್ಟಿಯಿಂದ ನೋಡುವವರಾಗಿ 'ರಾಜನೇ! ನೀನು ಆಷಾಢಮಾಸದಲ್ಲಿ ತಪತೀ ನದಿಯಲ್ಲಿ ಸ್ನಾನಮಾಡು. ನಿನ್ನ ಸ್ಥಾನಪ್ರಾಪ್ತಿಗೆ ಬೇರೆ ಉಪಾಯವಿಲ್ಲ. ಆಷಾಢ ಸ್ನಾನವನ್ನು ಮಾಡಿದಿಯಾದರೆ ನಿನ್ನ ಸ್ಥಾನವು ಪ್ರಾಪ್ತವಾಗುವುದು. ರುದ್ರದೇವರು ಕಾಮರೂಪ ರಾಜನಿಗೆ ವರವನ್ನು ಕೊಡುವಾಗಲೂ ತಪತೀ ಸ್ನಾನವೊಂದನ್ನು ಬಿಟ್ಟು ಬೇರೆ ಉಪಾಯಗಳಿಂದ ನಿನಗೆ ಸ್ವಪದ ಪ್ರಾಪ್ತಿಯಾಗಲಾರದು ಎಂದು ಹೇಳಿರುವರು' ಎಂದು ಹೇಳಿದರು. ಅದನ್ನು ಕೇಳಿ ಶತಬಲಿಯು ಮಾರ್ಕಂಡೇಯರಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದು ಆಷಾಢಮಾಸದಲ್ಲಿ ತಪತೀನದಿಗೆ ಹೋಗಿ ನಮಸ್ಕರಿಸಿ ಸ್ತೋತ್ರವನ್ನು ಮಾಡಿ ಜ್ಯೇಷ್ಠಮಾಸದ ದಶಮಿಯನ್ನು ಆರಂಭಿಸಿಯೇ ತಪತಿಯಲ್ಲಿ ಸ್ನಾನವನ್ನು ಮಾಡಿದನು. ಬೆಳಿಗ್ಗೆ ಮಧ್ಯಾಹ್ನ ಸಾಯಂಕಾಲ ಮೂರು ಹೊತ್ತು ಸ್ನಾನ ಮಾಡಿದನು. ಭಗವಂತನನ್ನು ಪೂಜಿಸಿದನು. ಆಷಾಢಹುಣ್ಣಿಮೆಯಲ್ಲಿ ಪರಮಾತ್ಮನು ಪ್ರತ್ಯಕ್ಷನಾಗಿ ಬೇಕಾದ ವರಗಳನ್ನು ಕೇಳುವಂತೆ ಹೇಳಿದನು. ರಾಜನು 'ಭಗವಂತನೇ ! ನೀನು ಪ್ರೀತನಾಗಿದ್ದರೆ ಮೊದಲು ನನಗೆ ನನ್ನ ರಾಜ್ಯವು ಸಿಗಲಿ. ಆಮೇಲೆ ನಿನ್ನ ಲೋಕದ ಪ್ರಾಪ್ತಿಯಾಗಲಿ' ಎಂದು ಕೇಳಿಕೊಂಡನು. ಪರಮಾತ್ಮನು ಹಾಗೆಯೇ ಆಗಲಿ ಎಂದು

ಹೇಳಿ ಅಂತರ್ಧಾನವನ್ನು ಹೊಂದಿದನು. ರಾಜನು ತಪತಿಯ ಸ್ನಾನವನ್ನು ಮುಗಿಸಿ ಹೋಗಿ ತನ್ನ ರಾಜ್ಯವನ್ನು ಹೊಂದಿದನು. ಆಮೇಲೆ ಕ್ರಮದಿಂದ ಪರಮಾತ್ಮನ ಲೋಕವನ್ನು ಹೊಂದಿದನು.



## ಸತ್ಯಧ್ವಜರಾಜನ ಕಥೆಯು [1]

ಪೂರ್ವದಲ್ಲಿ ದ್ರಾವಿಡದೇಶದಲ್ಲಿ ಸತ್ಯಧ್ವಜ ಎಂಬ ರಾಜನಿದ್ದನು. ಅವನು ರಾಜಧರ್ಮಗಳಲ್ಲಿ ಆಸಕ್ತನಾಗಿದ್ದನು. ದೇವಬ್ರಾಹ್ಮಣರನ್ನು ಪೂಜಿಸುತ್ತಿದ್ದನು. ದಾನ ಧರ್ಮಗಳನ್ನು ಮಾಡುತ್ತಿದ್ದನು. ಚೆನ್ನಾಗಿ ಪ್ರಜೆಗಳನ್ನು ರಕ್ಷಿಸುತ್ತಿದ್ದನು. ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನಾಗಿದ್ದನು. ಸತ್ಯಪ್ರತಿಜ್ಞೆಯುಳ್ಳವನಾಗಿದ್ದನು. ಇಂತಹ ರಾಜನು ಕುಂಡಿನನಗರದಲ್ಲಿ ವಾಸಮಾಡುತ್ತಿದ್ದನು. ಅವನಿಗೆ ಸುಶೀಲೆಯೆಂಬ ಪತಿವ್ರತೆಯಾದ ಹೆಂಡತಿಯಿದ್ದಳು. ರಾಜನು ಪತ್ನಿಯಿಂದ ಸಹಿತನಾಗಿ ಸಂತೋಷದಿಂದ ರಾಜ್ಯಭಾರ ವನ್ನು ಮಾಡುತ್ತಿದ್ದನು. ಒಂದು ದಿವಸದಲ್ಲಿ ರಾಜನು ಮೃಗಬೇಟೆಗೆ ಹೋದನು. ಮೃಗವನ್ನು ಹುಡುಕುತ್ತಾ ಅಲ್ಲಿ ಇಲ್ಲಿ ಓಡಿದನು. ಅವನಿಗೆ ಮೃಗಗಳು ಸಿಗಲಿಲ್ಲ. ರಾತ್ರಿಯಾಗಿ ಬಿಟ್ಟಿತು. ರಾಜನು ತನಗೆ ವಾಸಮಾಡಲಿಕ್ಕೆ ಎಲ್ಲಿಯಾದರೂ ಸ್ಥಳವಿದೆಯೋ ಎಂದು ಹುಡುಕಿಕೊಂಡು ಹೋದನು. ಕೃಷೀವಲ ಎಂದು ಹೆಸರುಳ್ಳ ಒಬ್ಬ ಋಷಿಗಳ ಆಶ್ರಮವನ್ನು ನೋಡಿ ಅಲ್ಲಿ ಪ್ರವೇಶಮಾಡಿ ಅವರಿಗೆ ನಮಸ್ಕರಿಸಿ ತನ್ನ ಪರಿಚಯವನ್ನು ಹೇಳಿಕೊಂಡನು. ಮುನಿಗಳು ತಾನಿರುವ ದೇಶವನ್ನೇ ಪಾಲಿಸುವ ರಾಜನು ಬಂದಿರುವುದನ್ನು ನೋಡಿ ಸಂತೋಷವುಳ್ಳವರಾಗಿ ಅವನಿಗೆ ಬೇಕಾದ ಆತಿಥ್ಯೋಪಚಾರವನ್ನು ಮಾಡಿದನು. ರಾಜನು ಆ ರಾತ್ರಿಯಲ್ಲಿ ಅವರ ಆಶ್ರಮದಲ್ಲಿಯೇ ವಾಸಮಾಡಿದನು. ಮರುದಿನ ಪ್ರಾತಃಕಾಲದಲ್ಲಿ ಬೇಗನೇ ಶಿಷ್ಯರಿಂದ ಸಹಿತರಾಗಿ ಮುನಿಗಳು ಸ್ನಾನಕ್ಕೆ ಉದ್ಯುಕ್ತರಾಗಿ 'ರಾಜನೇ! ನಾನು ಸ್ನಾನ ಮಾಡಿಕೊಂಡು ಬರುವವರೆಗೆ ಇಲ್ಲಿಯೇ ಇದ್ದು ಆಮೇಲೆ ಸುಖವಾಗಿ ಹೋಗುವವನಾಗು. ಅಥವಾ ನೀನೂ ಕೂಡ ಮನಸ್ಸಿದ್ದರೆ ಸ್ನಾನ ಮಾಡಲಿಕ್ಕೆ ಬರುವವನಾಗು' ಎಂದು ಹೇಳಿದರು. ಅದಕ್ಕೆ ರಾಜನು 'ಸ್ವಾಮಿ! ಛಳಿಯಿಂದ ಕೂಡಿರುವ ಈ ಪ್ರಾತಃಕಾಲದಲ್ಲಿ ಯಾಕೆ ಸ್ನಾನಮಾಡಲಿಕ್ಕೆ ಹೊರಟಿರುವಿರಿ?' ಎಂದು

1. ಪ.

ಕೇಳಿದನು. ಅದಕ್ಕೆ ಮುನಿಗಳು 'ಇದು ಪುಷ್ಯಮಾಸವಾಗಿರುವುದು. ಮಹಾಪುಣ್ಯ ಕಾಲವು. ಈಗ ಸರಸ್ವತೀ ನದಿಯಲ್ಲಿ ಸ್ನಾನಮಾಡಿದರೆ ಮಹಾಪುಣ್ಯವು ಬರುವುದು. ಆದುದರಿಂದ ನಾನು ಶಿಷ್ಯರಿಂದ ಕೂಡಿಕೊಂಡು ಸ್ನಾನಕ್ಕೆ ಹೊರಟಿರುವೆನು. ನೀನೂ ಕೂಡ ಸ್ನಾನಮಾಡಲಿಕ್ಕೆ ಬರುವವನಾಗು' ಎಂದು ಹೇಳಿದರು. ಅದನ್ನು ಕೇಳಿ ಸತ್ಯಧ್ವಜರಾಜನೂ ಸಂತೋಷದಿಂದ ಮುನಿಗಳಿಂದ ಸಹಿತನಾಗಿ ಹೋಗಿ ಪ್ರಾತಃಸ್ನಾನವನ್ನು ಮಾಡಿ ಋಷಿಗಳಿಗೆ ದ್ರವ್ಯವನ್ನು ದಾನಮಾಡಿದನು. ಆಮೇಲೆ ಪ್ರತಿವರ್ಷವೂ ಪುಷ್ಯಮಾಸದಲ್ಲಿ ಹಾಗೆಯೇ ಮಾಡಿದನು. ಕೆಲವು ಸಮಯದಲ್ಲಿ ರಾಜನು ಮೃತನಾದನು. ಆಗ ಯಮದೂತರು ಅವನನ್ನು ಕರೆದುಕೊಂಡು ಯಮಲೋಕಕ್ಕೆ ಹೋದರು. ಆ ರಾಜನನ್ನು ನೋಡುವ ಮಾತ್ರದಿಂದ ನರಕದಲ್ಲಿ ಇದ್ದವರೆಲ್ಲರೂ ಸುಖವನ್ನು ಹೊಂದಿದರು. ಅದನ್ನು ನೋಡಿ ಯಮದೂತರೆಲ್ಲರಿಗೂ ಆಶ್ಚರ್ಯವುಂಟಾಯಿತು. ಆ ವಿಷಯವನ್ನು ಯಮದೇವರ ಬಳಿಗೆ ಬಂದು ತಿಳಿಸಿದರು. ಅದನ್ನು ಕೇಳಿ ಯಮದೇವರು ಹೀಗಾಗಲು ಕಾರಣವೇನೆಂದು ಯೋಚಿಸಿದರು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ನಾರದರು ಬಂದು ಸೇರಿದರು. ಯಮದೇವರೊಡನೆ ಏನು ಯೋಚನೆ ಮಾಡಿಕೊಂಡಿರುವುದೆಂದು ಕೇಳಿದರು. ಯಮದೇವರು ಎಲ್ಲಾ ವಿಷಯವನ್ನು ತಿಳಿಸಿದರು. ಅದಕ್ಕೆ ನಾರದರು 'ಈ ರಾಜನು ಪುಷ್ಯಮಾಸದಲ್ಲಿ ಪ್ರಾತಃಸ್ನಾನವನ್ನು ಮಾಡಿರುವನು. ಸರಸ್ವತೀ ನದೀ ಸಂಗಮಸ್ಥಳದಲ್ಲಿ ಸ್ನಾನ ಮಾಡಿರುವನು. ಆ ಪುಣ್ಯಪ್ರಭಾವದಿಂದ ಪಾಪರಹಿತನಾಗಿರುವನು. ತನ್ನ ದರ್ಶನದಿಂದಲೇ ನರಕದಲ್ಲಿ ಇದ್ದವರೆಲ್ಲರನ್ನು ಪಾಪರಹಿತರನ್ನಾಗಿ ಮಾಡಿರುವನು' ಎಂದು ಹೇಳಿ ಹೊರಟು ಹೋಗುವವರಾದರು. ಯಮದೇವರು ಆಶ್ಚರ್ಯವುಳ್ಳವರಾಗಿ ದೂತರೊಡನೆ 'ಇನ್ನು ಮೇಲೆ ಪುಷ್ಯಮಾಸದಲ್ಲಿ ಪ್ರಾತಃಸ್ನಾನ ಮಾಡುವವರನ್ನು ಮುಟ್ಟಬೇಡಿರಿ' ಎಂದು ಆಜ್ಞಾ ಮಾಡಿದರು. ಆದುದರಿಂದ ಪುಷ್ಯಮಾಸದಲ್ಲಿ ಪ್ರಾತಃಸ್ನಾನವು ಪ್ರಶಸ್ತವಾದದ್ದು.



# ಮಾಲ್ಯವಾನ್ ಎಂಬ ರಾಜನ ಕಥೆಯು [1]

ಪೂರ್ವದಲ್ಲಿ ದ್ರಾವಿಡದೇಶದಲ್ಲಿ ಮಾಲ್ಯವಾನ್ ಎಂಬ ರಾಜನಿದ್ದನು. ಅವನು ಶ್ರುತಿಸ್ಮೃತಿ ಪುರಾಣಗಳನ್ನು ತಿಳಿದವನಾಗಿದ್ದನು. ಕರ್ಣನಂತೆ ನಾನಾ ದಾನಗಳನ್ನು ಮಾಡುತ್ತಿದ್ದನು. ನಾನಾ ಧರ್ಮಗಳನ್ನು ಮಾಡಿದ್ದನು. ಆದರೆ ರಾಜನಿಗೆ ಮಕ್ಕಳು ಮಾತ್ರ ಇರಲಿಲ್ಲ. ಒಂದು ದಿವಸದಲ್ಲಿ ಅವನ ಮನೆಗೆ ದುರ್ವಾಸರು ಬಂದರು. ರಾಜನು ಅವನಿಗೆ ಉದ್ದಕ್ಕೆ ನಮಸ್ಕಾರವನ್ನು ಮಾಡಿದನು. ಬೇಕಾದ ಸತ್ಕಾರವನ್ನು ಮಾಡಿದನು. ದುರ್ವಾಸರು ಅವನ ಪೂಜೆಯನ್ನು ಸ್ವೀಕರಿಸಿ 'ರಾಜನೇ! ನಿನಗೆ ಮಂಗಳವಾಗಲಿ. ನಾನು ಪಾಂಡವರಿದ್ದಲ್ಲಿಗೆ ಹೋಗುವೆನು' ಎಂದು ಹೇಳಿದರು. ಅದಕ್ಕೆ ರಾಜನು 'ಸ್ವಾಮಿ! ನಾಳೆ ನನ್ನ ತಂದೆಯ ಶ್ರಾದ್ಧದಿವಸವು. ಆದುದರಿಂದ ತಾವು ಈ ದಿನ ನನ್ನ ಮನೆಯಲ್ಲಿಯೇ ಇದ್ದು ನಾಳೆ ಭೋಜನ ಮಾಡಿ ಹೋಗಬೇಕು' ಎಂದು ಹೇಳಿದನು. ಅದಕ್ಕೆ ದುರ್ವಾಸರು 'ರಾಜನೇ! ನಿನಗೆ ಮಕ್ಕಳಿಲ್ಲದ ಕಾರಣ ನಿನ್ನ ನೀರನ್ನೇ ಸ್ವೀಕರಿಸಬಾರದು. ಭೋಜನವನ್ನು ಹೇಗೆ ಮಾಡಲಿ? ಆದುದರಿಂದ ನಾನು ಬೇಗನೇ ಹೋಗುವೆನು' ಎಂದು ಹೇಳಿ ಹೊರಡಲು ಉದ್ಯುಕ್ತರಾದರು. ಆಗ ರಾಜನು ತುಂಬಾ ದುಃಖವುಳ್ಳವನಾಗಿ 'ನಾನು ಯಾವ ಕರ್ಮವನ್ನು ಮಾಡಿದರೆ ತಮ್ಮಂತಹ ದೊಡ್ಡವರು ನನ್ನ ಮನೆಯಲ್ಲಿ ಭೋಜನ ಮಾಡುವರೋ ಅಂತಹ ಕರ್ಮವನ್ನು ನನಗೆ ತಾವು ಹೇಳಬೇಕು. ನನಗೆ ಅನುಗ್ರಹ ಮಾಡಬೇಕು' ಎಂದು ಹೇಳಿ ಶೋಕದಿಂದ ಅವರ ಕಾಲಿಗೆ ಬಿದ್ದದನು. ಆಗ ದುರ್ವಾಸರು 'ರಾಜನೇ! ನೀನು ದುಃಖಿಸಬೇಡ. ನೀನು ಪೂರ್ವಜನ್ಮದಲ್ಲಿ ನಾನಾದಾನಗಳನ್ನು ಮಾಡಿರುವಿ. ಆದರೆ ನೆಲ್ಲಿಯ ಮರವನ್ನು ಪೂಜಿಸಲಿಲ್ಲ. ಬ್ರಾಹ್ಮಣರಿಗೆ ನೆಲ್ಲಿಯಮರದ ನೆರಳಿನಲ್ಲಿ ಭೋಜನ ಮಾಡಿಸಲಿಲ್ಲ. ಅದರಿಂದ ಪರಮಾತ್ಮನು ನಿನ್ನಲ್ಲಿ ಅನುಗ್ರಹ ಮಾಡಲಿಲ್ಲ. ಪರಮಾತ್ಮನು ಅನುಗ್ರಹವಾಗದೆ ಹೇಗೆ ಫಲವುಂಟಾಗುವುದು? ಅದರಿಂದಲೇ ನಿನಗೆ ಈ ಜನ್ಮದಲ್ಲಿ ಮಕ್ಕಳಾಗಲಿಲ್ಲ. ಆದುದರಿಂದ ನನ್ನಂತೆ ಇರುವ ನಿನ್ನ ಮನೆಯಲ್ಲಿ ಹೇಗೆ ಭೋಜನ ಮಾಡಲಿ? ಇನ್ನು ಮೇಲೆ ನೀನು ನೆಲ್ಲಿಯಮರದ ಪೂಜೆಯನ್ನು ಮಾಡು. ಅದರಿಂದ ನಿನಗೆ ಸಂತಾನವುಂಟಾಗುವುದು. ಸಜ್ಜನರ ಅನುಗ್ರಹಕ್ಕೆ ಪಾತ್ರನಾಗುವಿ. ಪುಷ್ಯಮಾಸದಲ್ಲಿ ಪ್ರತಿನಿತ್ಯವೋ ಅಥವಾ ಪರ್ವಕಾಲದಲ್ಲಿಯೋ ಸಾವಿರ ಅಥವಾ ಮುನ್ನೂರು ಅಥವಾ ನೂರು ಅಥವಾ ಐವತ್ತು ಜನ ಪತ್ನೀಸಹಿತರಾದ ಬ್ರಾಹ್ಮಣರಿಗೆ

1. ಸ್ಕ.ಪು.ಪುಷ್ಯ.ಮಾ.ಮಾ.ಅ-8

ನೆಲ್ಲಿಯಮರದ ಬುಡದಲ್ಲಿ ಅಲಂಕಾರಮಾಡಿ ಭೋಜನ ಮಾಡಿಸು. ಆಗ ದೀಪದಾನವನ್ನು ವಸ್ತ್ರದಾನವನ್ನು ವಾಯನ ದಾನಗಳನ್ನು ಕೊಡಬೇಕು. ಆಮೇಲೆ ಅವರಿಂದ ಆಶೀರ್ವಾದವನ್ನು ಪಡೆದು ಬ್ರಾಹ್ಮಣರೊಡನೆ ತಾನು ಮಾಡಿದ ವ್ರತವು ಸಂಪೂರ್ಣವಾಗುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಬೇಕು. ಆಮೇಲೆ ನೆಲ್ಲಿಯಮರದ ಬುಡದಲ್ಲಿ ನಾನು ಮಾಡಿದ ವ್ರತವು ಸಂಪೂರ್ಣವಾಗಲೆಂದು ಪರಮಾತ್ಮನನ್ನು ಪ್ರಾರ್ಥಿಸಬೇಕು. ಆಮೇಲೆ ಪತ್ನೀಸಹಿತನಾಗಿ ತಾನು ಭೋಜನ ಮಾಡಬೇಕು' ಎಂದು ಹೇಳಿ ಹೊರಟುಹೋದರು. ರಾಜನು ಹಾಗೆಯೇ ಪುಷ್ಯಮಾಸದಲ್ಲಿ ನೆಲ್ಲಿಯ ಮರದ ಬುಡದಲ್ಲಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದನು. ಅದರಿಂದ ಅವನಿಗೆ ದೀರ್ಘಾಯುಷ್ಯವುಳ್ಳ ಮಗನು ಹುಟ್ಟಿದನು. ಆದುದರಿಂದ ನೆಲ್ಲಿಯಮರದ ಬುಡದಲ್ಲಿ ಬ್ರಾಹ್ಮಣರಿಗೆ ಭೋಜನ ಮಾಡಿಸುವುದು ಪ್ರಶಸ್ತವಾದದ್ದು.



## ಶೃಂಗವಂತನ ಕಥೆಯು [1]

ಪೂರ್ವದಲ್ಲಿ ಕಾನ್ಯಕುಬ್ಜದಲ್ಲಿ ಶೃಂಗವಂತನೆಂಬ ರಾಜನಿದ್ದನು. ಅವನು ಜ್ಞಾನಿಯಾಗಿದ್ದನು. ಅವನಿಗೆ ಬಹುಬಂಧುಗಳು ಇದ್ದರು. ಅವನು ನಾನಾ ಧರ್ಮಗಳನ್ನು ಮಾಡಿದ್ದನು. ಗೋದಾನಗಳನ್ನು ಭೂದಾನಗಳನ್ನು ವಸ್ತ್ರದಾನಗಳನ್ನು ಲೆಕ್ಕವಿಲ್ಲದಷ್ಟು ಮಾಡಿದ್ದನು. ಬೇಕಾದಷ್ಟು ಮರಗಳನ್ನು ನೆಡಿಸಿದ್ದನು. ಅನೇಕ ಭಾವಿಗಳನ್ನು ಇಳಿಭಾವಿಗಳನ್ನು ಸರೋವರಗಳನ್ನು ಧರ್ಮಕ್ಕಾಗಿ ತೋಡಿಸಿದ್ದನು. ಹೀಗೆಯೇ ಬಹುಕಾಲವನ್ನು ಕಳೆಯುವವನಾದನು. ಆದರೂ ದೈವೇಚ್ಛೆಯಿಂದ ಪಾದಗಳಲ್ಲಿ ವೇದನೆಯಿಂದ ಸರಿಯಾಗಿ ನಡೆಯಲಿಕ್ಕೆ ಆಗುತ್ತಿರಲಿಲ್ಲ. ಎದ್ದು ನಿಲ್ಲಲಿಕ್ಕೂ ಆಗುತ್ತಿರಲಿಲ್ಲ. ಏನೇನು ಮಾಡಿದರೂ ಆ ರೋಗವು ವಾಸಿಯಾಗಲಿಲ್ಲ. ರಾಜನು ಇದರಿಂದ ತುಂಬಾ ವ್ಯಸನವುಳ್ಳವನಾದನು. ಹೀಗೆ ಇರಲು ಒಂದು ದಿನದಲ್ಲಿ ಅವನ ಮನೆಗೆ ಕಣ್ವಮುನಿಗಳು ಬಂದರು. ಅವರನ್ನು ನೋಡಿ ರಾಜನು ಎದ್ದು ನಿಲ್ಲಲಿಲ್ಲ. ಇದರಿಂದ ಕಣ್ವರು ಆಶ್ಚರ್ಯವುಳ್ಳವರಾದರು. ಕೋಪಿಸಿ ಕೊಂಡರು. ಶಾಪವನ್ನು ಕೊಡಲಿಕ್ಕೆ ಉದ್ಯುಕ್ತರಾದರು. ಅದನ್ನು ನೋಡಿ ರಾಜನು

1. ಸ್ಕಂ.ಪು.ಪುಷ್ಯ ಮಾ.ಮಾ. ಅ-5

'ಸ್ವಾಮಿ! ನನ್ನ ಅಪರಾಧವನ್ನು ಕ್ಷಮಿಸಬೇಕು. ನನ್ನ ಪಾದಗಳಲ್ಲಿ ತುಂಬಾ ವೇದನೆಯಿದೆ. ನೋಡಬೇಕು. ಆದರಿಂದ ನನಗೆ ಎದ್ದು ನಿಲ್ಲಲಿಕ್ಕೆ ಆಗಲಿಲ್ಲ' ಎಂದು ಹೇಳಿ ತನ್ನ ಪಾದವನ್ನು ಅವರಿಗೆ ತೋರಿಸಿದನು. ಅವನ ಪಾದಗಳನ್ನು ನೋಡಿ ಕಣ್ವರಿಗೆ ಬಹಳ ಕೃಪೆಯುಂಟಾಯಿತು. ಇವನಿಗಿದು ಯಾವ ಪಾಪದ ಫಲವೆಂದು ಧ್ಯಾನದೃಷ್ಟಿಯಿಂದ ನೋಡಿ ತಿಳಿದರು. 'ರಾಜನೇ! ನೀನು ಈ ಜನ್ಮದಲ್ಲಿ ಯಾವ ಪಾಪವನ್ನು ಮಾಡಲಿಲ್ಲ. ಪೂರ್ವಜನ್ಮದಲ್ಲಿಯೂ ಎಲ್ಲಾ ಧರ್ಮಗಳನ್ನು ಮಾಡಿರುವಿ. ಆದರೆ ಪಾದರಕ್ಷೆಗಳನ್ನು ಮಾತ್ರ ದಾನಮಾಡಲಿಲ್ಲ. ಆದುದರಿಂದ ನಿನಗೆ ಪಾದಗಳಿಗೆ ರೋಗವು ಬಂದಿರುವುದು. ಆದರೂ ನೀನು ಈ ಪುಷ್ಯಮಾಸದಲ್ಲಿ ಪಾದರಕ್ಷೆಗಳ ದಾನವನ್ನು ಮಾಡು. ನಿನ್ನ ಪಾದವೇದನೆಯು ಪರಿಹೃತವಾಗುವುದು' ಎಂದು ಹೇಳಿದರು. ರಾಜನು ಅವನಿಗೆ ಭಕ್ತಿಯಿಂದ ಪೂಜಿಸಿ ಕಳುಹಿಸಿದನು. ಪುಷ್ಯಮಾಸದಲ್ಲಿ ವಿಧಿಪ್ರಕಾರವಾಗಿ ಪಾದರಕ್ಷೆಯ ದಾನಮಾಡಿದನು. ಇದರಿಂದ ಅವನ ಪಾದದ ರೋಗವು ಪರಿಹೃತವಾಯಿತು. ಆದುದರಿಂದ ಪುಷ್ಯಮಾಸದಲ್ಲಿ ಪಾದರಕ್ಷೆಯ ದಾನವು ಪ್ರಶಸ್ತವಾದದ್ದು.



## ಚಿರಾಯುವಿನ ಕಥೆಯು [1]

ಪೂರ್ವದಲ್ಲಿ ಕುರುದೇಶದಲ್ಲಿ ಶ್ರುತಕೀರ್ತಿ ಎಂದು ಪ್ರಸಿದ್ಧರಾದ ರಾಜನಿದ್ದನು. ಅವನು ಸಮಸ್ತ ವಿದ್ಯೆಗಳಲ್ಲಿಯೂ ಪಂಡಿತನಾಗಿದ್ದನು. ಧನುರ್ವಿದ್ಯೆಯಲ್ಲಿ ಪಾರಂಗತನಾಗಿದ್ದನು. ಅವನಿಗೆ ಮಕ್ಕಳು ಇರಲಿಲ್ಲ. ಬಹಳ ಯೋಚಿಸಿದನು. ಕೊನೆಗೆ ದೇವಿಯನ್ನು ಆರಾಧಿಸಿದನು. ಅವನು ಮಾಡಿದ ಕಠಿಣವಾದ ತಪಸ್ಸಿನಿಂದ ಪ್ರಸಿದ್ಧಳಾದ ದೇವಿಯು ಬೇಕಾದ ವರವನ್ನು ಕೇಳುವಂತೆ ಹೇಳಿದಳು. ಅದಕ್ಕೆ ರಾಜನು 'ತಾಯಿ! ನೀನು ಪ್ರಸನ್ನಳಾಗಿರುವುದಾದರೆ ನನಗೆ ಉತ್ತಮವಾದ ಮಗನನ್ನು ಕೊಡು. ನಿನ್ನ ಅನುಗ್ರಹದಿಂದ ನನಗೆ ಬೇರೆ ಯಾವುದೂ ಕಡಿಮೆಯಿಲ್ಲ' ಎಂದು ಹೇಳಿಕೊಂಡನು. ರಾಜನ ಮಾತನ್ನು ಕೇಳಿ ದೇವಿಯು ಮುಗುಳುನಗೆಯುಳ್ಳವಳಾಗಿ 'ರಾಜನೇ! ನೀನು ದುರ್ಲಭವಾದ ವರವನ್ನು ಕೇಳಿಕೊಂಡಿರುವಿ. ಆದರೂ ನಿನ್ನ ಮೇಲೆ ಇರುವ ಕೃಪಾಪರವಶಳಾಗಿ ಕೊಡುವೆನು. ನಿನಗೆ ಗುಣವಂತನಾದ ಮಗನು ಬೇಕಾದರೆ ಅವನು ಹದಿನಾರೇ ವರ್ಷ ಜೀವಿಸುವನು. ರೂಪದಿಂದಲೂ ವಿದ್ಯೆಯಿಂದಲೂ ಹೀನನಾದ ಮಗನಾಗಿದ್ದರೆ ಬಹುಕಾಲ ಬದುಕುವನು ಎಂದು

ಹೇಳಿದರು. ಈ ಮಾತನ್ನು ಕೇಳಿ ರಾಜನು ಯೋಚಿಸಿದನು. ಪತ್ನಿಯೊಡನೆ ಯೋಚನೆ ಮಾಡಿ ಗುಣವಂತನಾದ ಸರ್ವಲಕ್ಷಣಯುಕ್ತನಾದ ಹದಿನಾರು ವರ್ಷ ಆಯುಷ್ಯವುಳ್ಳ ಮಗನನ್ನೇ ಕೇಳಿಕೊಂಡನು. ತರುವಾಯ ದೇವಿಯು 'ನನ್ನ ಆಲಯದ ದ್ವಾರದಲ್ಲಿ ಮಾವಿನ ಮರವೊಂದು ಇರುವುದು. ನನ್ನ ಆಜ್ಞೆಯಿಂದ ಅದರ ಒಂದು ಹಣ್ಣನ್ನು ನಿನ್ನ ಹೆಂಡತಿಗೆ ತಿನ್ನಲಿಕ್ಕೆ ಕೊಡು. ಆಗ ಅವಳು ಗರ್ಭಿಣಿಯಾಗುವಳು' ಎಂದು ಹೇಳಿದರು. ಸಂತುಷ್ಟನಾದ ರಾಜನು ಹಾಗೆಯೇ ಮಾಡಿದನು. ರಾಜಪತ್ನಿಯು ಗರ್ಭಿಣಿಯಾದಳು. ಹತ್ತನೇ ತಿಂಗಳಲ್ಲಿ ಅತಿಸುಂದರವಾದ ಮಗನನ್ನು ಹಡೆದಳು. ರಾಜನು ಸಂತೋಷದಿಂದ ಮತ್ತು ಶೋಕದಿಂದ ಕೂಡಿದವನಾಗಿ ಜಾತಕರ್ಮಾದಿ ಗಳನ್ನು ಮಾಡಿದನು. ಅವನಿಗೆ ಚಿರಾಯು ಎಂದು ಹೆಸರನ್ನು ಇಟ್ಟನು. ಕ್ರಮದಿಂದ ಮಗನಿಗೆ ಹದಿನಾರು ವರ್ಷವಾಗುತ್ತಿರಲು ರಾಜನು ಪತ್ನೀ ಸಹಿತನಾಗಿ ಏನು ಮಾಡಲೆಂದು ಯೋಚಿಸಿದನು. 'ಇವನು ಬಹುಶ್ರಮದಿಂದ ಹುಟ್ಟಿದ ಮಗನು. ಇವನು ನಮ್ಮ ಹತ್ತಿರದಲ್ಲಿಯೇ ಸಾಯುವುದನ್ನು ಹೇಗೆ ನೋಡಲಿ' ಎಂದು ವಿಚಾರಮಾಡಿ ಅವನನ್ನು ಅವನ ಸೋದರ ಮಾವನೊಡನೆ ಕಾಶಿಗೆ ಕಳುಹಿಸಿದನು. ರಾಜಪತ್ನಿಯು ತನ್ನ ಸಹೋದರನೊಡನೆ ಹಾಗೆ ಪ್ರಾರ್ಥಿಸಿದಳು. 'ನನ್ನ ಮಗನನ್ನು ಕರೆದುಕೊಂಡು ಕಾಶಿಗೆ ಹೋಗು. ನಾನು ಪೂರ್ವದಲ್ಲಿ ಮಕ್ಕಳಾಗಬೇಕೆಂದು ರುದ್ರದೇವರೊಡನೆ ಪ್ರಾರ್ಥಿಸಿಕೊಂಡು ಇರುವೆನು. ಅಲ್ಲಿಯ ಯಾತ್ರೆಗಾಗಿ ನನ್ನ ಮಗನನ್ನು ಕಳುಹಿಸುತ್ತೇನೆ. ಆದುದರಿಂದ ನನ್ನ ಮಗನನ್ನು ಕರೆದುಕೊಂಡು ಹೋಗಬೇಕು. ನನ್ನ ಮಗನನ್ನು ಪ್ರಯತ್ನಪೂರ್ವಕವಾಗಿ ರಕ್ಷಿಸಬೇಕು' ಎಂದು ರಾಣಿಯು ಸಹೋದರನೊಡನೆ ಹೇಳಿಕೊಂಡಳು. ಅದನ್ನು ಕೇಳಿ ಅವನು ತನ್ನ ಸೋದರಿಯ ಮಗನನ್ನು ಕರೆದುಕೊಂಡು ಹೋದನು.

ಕೆಲವು ದಿವಸ ಹೋಗುತ್ತಾ ದಾರಿಯಲ್ಲಿ ಆನಂದನಗರಕ್ಕೆ ಹೋದನು. ಆ ದೇಶಕ್ಕೆ ವೀರಸೇನನೆಂಬ ರಾಜನಿದ್ದನು. ಅವನಿಗೆ ಮಂಗಳಗೌರಿ ಎಂದು ಹೆಸರುಳ್ಳ ಲಕ್ಷಣಭರಿತಳಾದ ಮಗಳಿದ್ದಳು. ಅವಳು ರೂಪ ಲಾವಣ್ಯವತಿಯಾಗಿದ್ದಳು. ಯೌವನ ಉಳ್ಳವಳಾಗಿದ್ದಳು. ಅವಳು ಸಖಿಯರಿಂದ ಸಹಿತಳಾಗಿ ಮನೋಹರವಾದ ಉಪವನಕ್ಕೆ ಬಂದಿದ್ದಳು. ಆಗ ಆ ಉಪವನಕ್ಕೆ ಚಿರಾಯುವೂ ಅವನ ಸೋದರ ಮಾವನು ಬಂದು ಸೇರಿದ್ದರು. ಆಡುತ್ತಿದ್ದ ಆ ಕನ್ಯೆಯನ್ನು ನೋಡುತ್ತಾ ವಿಶ್ರಾಂತಿ ಹೊಂದಿದರು. ಅಲ್ಲಿ ಕನ್ಯೆಯರು ವಿನೋದದಿಂದ ಕ್ರೀಡೆಯನ್ನು ಮಾಡುತ್ತಿರುವಾಗ ಒಬ್ಬಳು ಕೋಪದಿಂದ ರಾಜಪುತ್ರಿಯನ್ನು ಬೋಳಿ ಎಂದು ಕೆಟ್ಟಮಾತನ್ನು ಆಡಿದಳು.

ಆ ಕೆಟ್ಟಮಾತನ್ನು ಕೇಳಿ ರಾಜಪುತ್ರಿಯು 'ನೀನು ಅಯೋಗ್ಯ ಮಾತನ್ನು ಆಡುವಿ. ನನ್ನ ವಂಶದಲ್ಲಿಯೇ ನೀನು ಹೇಳಿದಂತೆ ಆದವರು ಇಲ್ಲ. ನಾನು ಮಂಗಳಗೌರೀ ವ್ರತವನ್ನು ಮಾಡಿ ಮಂಗಳಗೌರೀದೇವಿಯ ಅನುಗ್ರಹವನ್ನು ಪಡೆದಿರುವೆನು. ಆದರಿಂದ ಮದುವೆಯ ಸಮಯದಲ್ಲಿ ನಾನು ಯಾರ ತಲೆಯಮೇಲೆ ಮಂತ್ರಾಕ್ಷತೆಯನ್ನು ಹಾಕುವೆನೋ ಅವನು ಅಲ್ಪಾಯುಷ್ಯವುಳ್ಳವನಾಗಿದ್ದರೂ ಚಿರಾಯುವಾಗುವನು' ಎಂದು ಹೇಳಿದಳು. ತರುವಾಯ ಕನ್ಯೆಯರು ತಮ್ಮ ತಮ್ಮ ಮನೆಗೆ ಹೋದರು. ವೀರಸೇನರಾಜನು ಆ ದಿನವೇ ಬಾಹ್ಲಿಕದೇಶದ ರಾಜನಾದ ದೃಢವರ್ಮನ ಮಗನಾದ ಸುಕೇತು ಎನ್ನುವವನಿಗೆ ಮಗಳನ್ನು ಕೊಟ್ಟು ಮದುವೆ ಮಾಡುವುದೆಂದು ನಿಶ್ಚಯಿಸಿದ್ದನು. ಆದರೆ ಸುಕೇತುವು ವಿದ್ಯಾಹೀನನಾಗಿಯೂ ಕುರೂಪಿಯಾಗಿಯೂ ಕಿವುಡನಾಗಿಯೂ ಇದ್ದನು.

ಆದುದರಿಂದ ವರನ ಕಡೆಯವರು 'ಈಗ ಯಾರಾದರೂ ಒಬ್ಬ ಸುಂದರನಾದ ವರನನ್ನು ಕರೆದುಕೊಂಡು ಹೋಗುವ. ಮದುವೆಯಾದ ಮೇಲೆ ಸುಕೇತುವು ಅಲ್ಲಿಗೆ ಹೋಗಲಿ' ಎಂದು ಮಾತಾಡಿಕೊಂಡರು. ಅವರು ಚಿರಾಯುವನ್ನು ನೋಡಿ ಅವನ ಸೋದರಮಾವ ನೊಡನೆ 'ನಮಗೀಗ ಈ ಬಾಲಕ ನನ್ನು ಕೊಡಬೇಕು. ಇವನಿಂದ ನಮ್ಮ ಕಾರ್ಯಸಿದ್ಧಿ ಯಾಗುವುದು. ಪರೋಪಕಾರಕ್ಕೆ ಸಮಾನವಾದ ಧರ್ಮವು ಇರುವುದಿಲ್ಲ' ಎಂದು ಹೇಳಿದರು. ಅದನ್ನು ಕೇಳಿ ಸೋದರಮಾವನು ಪೂರ್ವದಲ್ಲಿ ರಾಜಪುತ್ರಿಯು ಉದ್ಯಾನದಲ್ಲಿ ಹೇಳಿದ್ದ ಮಾತನ್ನು ಕೇಳಿದ್ದ ಕಾರಣ ಮನಸ್ಸಿನಲ್ಲಿಯೇ ಸಂತೋಷವನ್ನು ಹೊಂದಿದನು. ಆದರೂ ಎದುರಲ್ಲಿ ಅವರೊಡನೆ 'ನೀವು ಹೇಗೆ ಯಾಚನೆ ಮಾಡುವಿರಿ? ವಸ್ತ್ರಾಲಂಕಾರವನ್ನು ಯಾಚನೆ ಮಾಡುವುದಿದೆ. ವರನನ್ನು ಯಾರಾದರೂ ಯಾಚಿಸುವರೇ? ಆದರೂ ನಿಮ್ಮ ಮೇಲೆ ಗೌರವದಿಂದ ಕೊಡುವೆನು' ಎಂದು ಹೇಳಿದನು. ತರುವಾಯ ಅವರು ಚಿರಾಯುವನ್ನು ಕರೆದುಕೊಂಡು ಹೋಗಿ ಮದುವೆಯ ಕಾರ್ಯವನ್ನು ಮುಗಿಸಿದರು. ಸಪ್ತಪದಿಯೇ ಮೊದಲಾದದ್ದು ಮುಗಿದಮೇಲೆ ರಾತ್ರಿಯಲ್ಲಿ ಚಿರಾಯುವು ಸಂತೋಷದಿಂದ ಮಂಗಳಗೌರಿಯ ಬಳಿಯಲ್ಲಿ ಮಲಗಿದನು. ಆ ದಿನದಲ್ಲಿ ಚಿರಾಯುವಿಗೆ ಸಂಪೂರ್ಣ ಹದಿನಾರು ವರ್ಷಗಳು ಆಗಿದ್ದವು. ಮಧ್ಯರಾತ್ರಿ ಸಮಯದಲ್ಲಿ ಅವನು ಮಲಗಿದ್ದಲ್ಲಿಗೆ ದೊಡ್ಡ ಸರ್ಪವು ಬಂದಿತು. ಆ ಸಮಯದಲ್ಲಿ ದೈವೇಚ್ಛೆಯಿಂದ ಮಂಗಳಗೌರಿಗೆ ಎಚ್ಚರಿಕೆಯಾಯಿತು. ಅವಳು ಆ ದೊಡ್ಡ ಹಾವನ್ನು ನೋಡಿ ಭಯದಿಂದ ನಡುಗಿಹೋದಳು. ಆದರೂ ಧೈರ್ಯವನ್ನು ತಂದುಕೊಂಡು ಅವಳು ಆ ಸರ್ಪಕ್ಕೆ

ಷೋಡಶೋಪಚಾರವನ್ನು ಮಾಡಿದಳು. ಕುಡಿಯಲಿಕ್ಕೆ ಬಹಳ ಹಾಲನ್ನು ಕೊಟ್ಟಳು. ದೈನ್ಯಯುಕ್ತವಾದ ವಾಣಿಯಿಂದ ಆ ಸರ್ಪದೊಡನೆ ಯಾಚಿಸಿಕೊಂಡಳು. ನಾನು ಉತ್ತಮವಾದ ವ್ರತವನ್ನು ಮಾಡುತ್ತಿರುವೆನು. ನನ್ನ ಗಂಡನು ಅದರಿಂದ ಬಹಳ ಕಾಲ ಬದುಕುವಂತೆ ಮಾಡು' ಎಂದು ಹೇಳಿದಳು. ಆ ಸಮಯದಲ್ಲಿ ಆ ಸರ್ಪವು ಒಂದು ಗಡಿಗೆಯ ಒಳಗೆ ಪ್ರವೇಶಿಸಿತು. ಆಗ ಅವಳು ಗಡಿಗೆಯ ಬಾಯಿಯನ್ನು ತನ್ನ ಕುಪ್ಪಸದಿಂದ ಕಟ್ಟಿಬಿಟ್ಟಳು. ಆ ಸಮಯದಲ್ಲಿ ಚಿರಾಯುವಿಗೆ ಎಚ್ಚರವಾಯಿತು. ತನಗೆ ಹಸಿವೆಯಾಗುತ್ತದೆ ಎಂದನು. ಆಗ ಅವಳು ತಾಯಿಯ ಬಳಿಗೆ ಲಡ್ಡಿಗೆ ಮೊದಲಾದ ವನ್ನು ತರಿಸಿಕೊಟ್ಟಳು. ಚಿರಾಯುವು ಅವನ್ನು ತಿಂದು ಕೈತೊಳೆದುಕೊಂಡನು. ಕೈಯನ್ನು ತೊಳೆಯುವಾಗ ಅವನ ಕೈಯ ಉಂಗುರವು ಕೆಳಗೆ ಬಿದ್ದಿತು. ಆಮೇಲೆ ಅವನು ತಾಂಬೂಲವನ್ನು ಭಕ್ಷಿಸಿ ಹಾಗೆಯೇ ಮಲಗಿದನು.

ತರುವಾಯ ಮಂಗಳಗೌರಿಯು ಹಾವು ಹೊಕ್ಕಿರುವ ಗಡಿಗೆಯನ್ನು ಹೊರಗೆ ಹಾಕಲು ಹೋದಳು. ಗಡಿಗೆಯೊಳಗೆ ಹಾವು ಇಲ್ಲದೆ ಒಂದು ಪ್ರಕಾಶಮಾನವಾದ ಮುತ್ತಿನ ಸರವಿರುವುದನ್ನು ನೋಡಿ ಆ ಸರವನ್ನು ಕುತ್ತಿಗೆಯಲ್ಲಿ ಹಾಕಿಕೊಂಡಳು. ಸ್ವಲ್ಪ ರಾತ್ರಿಯಿರುತ್ತಿರಲು ಚಿರಾಯುವಿನ ಸೋದರಮಾವನು ಬಂದು ಚಿರಾಯುವನ್ನು ಕರೆದುಕೊಂಡು ಹೋದನು. ತರುವಾಯ ವರನ ಕಡೆಯವರು ಅಲ್ಲಿಗೆ ಸುಕೇತುವನ್ನು ತಂದುಬಿಟ್ಟರು. ಮಂಗಳಗೌರಿಯು ಸುಕೇತುವನ್ನು ನೋಡಿ ಇವನು ನನ್ನ ಗಂಡನಲ್ಲವೆಂದುಬಿಟ್ಟಳು. ಅದನ್ನು ಕೇಳಿ ವರನ ಕಡೆಯವರು 'ಇದೇಕೆ ಹೀಗೆ ಹೇಳುತ್ತಿರುವಿ? ಯಾಕೆ ಅಲ್ಲವೆಂದು ಹೇಳುತ್ತಿರುವಿ?' ಎಂದು ಕೇಳಿದರು. ಅದಕ್ಕೆ ಅವಳು 'ರಾತ್ರಿಯಲ್ಲಿ ನನ್ನ ಗಂಡನು ನನಗೆ ಉಂಗುರವನ್ನು ಕೊಟ್ಟಿರುವರು. ಅದು ಈಗ ನನ್ನ ಕೈಯಲ್ಲಿಯೇ ಇರುವುದು. ಅದು ಇವನಿಗೆ ಆಗುತ್ತದೋ ನೋಡಿರಿ. ಪತಿಯು ರಾತ್ರಿಯಲ್ಲಿ ಒಂದು ಮುತ್ತಿನಸರವನ್ನು ಕೊಟ್ಟಿರುವರು. ಅದನ್ನು ಹೇಗೆ ಇರುವುದೆಂದು ಇವನು ಹೇಳಲಿ. ಮತ್ತು ರಾತ್ರಿಯಲ್ಲಿ ನನ್ನ ತೊಡೆಯಲ್ಲಿ ನನ್ನ ಪತಿಯ ಕುಂಕುಮದಿಂದ ಪಾದದ ಚಿಹ್ನೆಯಿದೆ. ಅದನ್ನು ನೋಡಿರಿ. ರಾತ್ರಿಯಲ್ಲಿ ನಾನು ಏನು ಮಾತಾಡಿದೆನು? ಏನು ತಿನ್ನಲಿಕ್ಕೆ ಕೊಟ್ಟಿರುವೆನು? ಅದೆಲ್ಲವನ್ನು ಇವನು ಹೇಳಲಿ' ಎಂದು ಹೇಳಿದಳು. ಅದನ್ನು ಕೇಳಿ ಜನರೆಲ್ಲರೂ 'ಸರಿ ಸರಿ' ಎಂದರು. ಸುಕೇತನಿಗೆ ಒಂದನ್ನೂ ಹೇಳಲಿಕ್ಕೆ ತಿಳಿಯಲಿಲ್ಲ. ತರುವಾಯ ಎಲ್ಲರೂ ಇವನು ವರನಲ್ಲವೆಂದು ನಿಷೇಧಿಸಿದರು. ತರುವಾಯ ವರನ ಕಡೆಯವರು ಅವನನ್ನು ಕರೆದುಕೊಂಡು ಹೊರಟುಹೋದರು.

ತರುವಾಯ ವೀರಸೇನನು ವರನನ್ನು ಕಂಡುಹಿಡುಯುವುದಕ್ಕಾಗಿ ಅನ್ನಪಾನಾದಿಗಳ ಛತ್ರವನ್ನು ಮಾಡಿಸಿದನು. ವರನ ಕಡೆಯವರು ತಮ್ಮ ವರನು ಕುರೂಪಿಯಾಗಿದ್ದ ಕಾರಣ ಯಾರೋ ಒಬ್ಬ ಸುಂದರ ವರನನ್ನು ಕರೆದುಕೊಂಡು ಬಂದಿದ್ದರು ಎಂದು ವರ್ತಮಾನವು ರಾಜನಿಗೆ ಗೊತ್ತಾಯಿತು. ಆ ವರವನನ್ನು ಛತ್ರಕ್ಕೆ ಬಂದರೆ ತನ್ನ ಮಗಳು ಕಂಡುಹಿಡಿಯಲಿ ಎಂದು ಅಲ್ಲಿಯೇ ಮಳಿಗೆಯಲ್ಲಿ ಪರದೆಯ ಮರೆಯಲ್ಲಿ ಮಗಳನ್ನು ಇರಿಸಿದನು.

ಈರೀತಿಯಾಗಿ ಬಹುಸಮಯವು ಕಳೆದುಹೋಗಲು ಚಿರಾಯುವು ಸೋದರಮಾವನಿಂದ ಸಹಿತನಾಗಿ ಕಾಶಿಯಾತ್ರೆಯನ್ನು ಮುಗಿಸಿ ಇಲ್ಲಿ ಏನು ನಡೆಯುತೆಂದು ನೋಡುವುದಕ್ಕಾಗಿ ಛತ್ರಕ್ಕೆ ಬಂದು ಸೇರಿದನು. ಆಗ ಪರದೆಯ ಮರೆಯಿಂದ ಮಂಗಳಗೌರಿಯು ಅವನನ್ನು ನೋಡಿ ತನ್ನ ಗಂಡನೆಂದು ತಿಳಿಯುವವಳಾಗಿ ಪರಮಸಂತೋಷದಿಂದ ತನ್ನ ಗಂಡನು ಬಂದಿರುವನೆಂದು ತಂದೆತಾಯಿಗಳ ಹತ್ತಿರ ಹೇಳಿ ಪೂರ್ವದ ಪರಿಚಯವೆಲ್ಲವನ್ನು ಹೇಳಿದಳು. ತರುವಾಯ ರಾಜನು ಸಂತೋಷದಿಂದ ಮಗಳನ್ನು ಚಿರಾಯುವಿಗೆ ಕೊಟ್ಟು ಬಹಳ ಉತ್ಸವವನ್ನು ಮಾಡಿದನು. ವಸ್ತ್ರ ಆಭರಣ ಸೇನೆ ಆನೆ ಕುದುರೆ ಮೊದಲಾದವನ್ನು ಅಳಿಯನಿಗೆ ಕೊಟ್ಟನು. ಮಗಳಿಂದ ಸಹ ಅಳಿಯನನ್ನು ಕಳುಹಿಸಿದನು. ಚಿರಾಯುವು ಪತ್ನಿಯಿಂದಲೂ ಸೋದರಮಾವನಿಂದಲೂ ಸಹಿತನಾಗಿ ಸೇನಾಸಹಿತನಾಗಿ ತನ್ನ ಪುರಕ್ಕೆ ಬಂದು ಸೇರಿದನು. ಜನರು ಬಂದು ಶುತಕೀರ್ತಿ ಮತ್ತು ಅವನ ಹೆಂಡತಿಯರೊಡನೆ ನಿಮ್ಮ ಮಗನು ಬರುತ್ತಿರುವನು ಎಂದು ಹೇಳಿದರು. ಆದರೆ ಅವರು ಆ ಮಾತನ್ನು ನಂಬಲೇ ಇಲ್ಲ. ತರುವಾಯ ಚಿರಾಯುವೇ ತಂದೆತಾಯಿಗಳು ಅವನನ್ನು ಎಬ್ಬಿಸಿ ಶಿರಸ್ಸಿನಲ್ಲಿ ಮೂಸಿ ಪರಮಸಂತೋಷವನ್ನು ಹೊಂದಿದರು. ಮಂಗಳಗೌರಿಯೂ ಅತ್ತೆಮಾವಂದಿರಿಗೆ ನಮಸ್ಕರಿಸಿದಳು. ಅತ್ತೆಯು ಸೊಸೆಯನ್ನು ತೊಡೆಯಮೇಲೆ ಕೂತುಕೊಳ್ಳಿಸಿ ಕೊಂಡು ವರ್ತಮಾನವನ್ನು ಕೇಳಿದಳು. ಆಗ ಮಂಗಳಗೌರಿಯು ಅತ್ತೆಯೊಡನೆ ಮಂಗಳಗೌರೀ ವ್ರತದ ಮಹಿಮೆಯನ್ನು ಹೇಳಿ ನಡೆದ ವೃತ್ತಾಂತವೆಲ್ಲವನ್ನು ಹೇಳಿದಳು. ಎಲ್ಲರೂ ಸಂತೋಷದಿಂದ ಇದ್ದರು.



# ಪರೀಕ್ಷಿದ್ರಾಜ [1]

ಪರೀಕ್ಷಿದ್ರಾಜನು ಅಭಿಮನ್ಯುವಿನ ಮಗನು. ಅವನ ತಾಯಿಯು ವಿರಾಟರಾಜನ ಮಗಳಾದ ಉತ್ತರೆಯು. ಉತ್ತರೆಯು ಗರ್ಭಿಣಿಯಾಗಿರುವಾಗಲೇ ಅಭಿಮನ್ಯುವು ಭಾರತಯುದ್ಧದಲ್ಲಿ ಮರಣವನ್ನು ಹೊಂದಿದನು. ತರುವಾಯ ಭಾರತಯುದ್ಧವು ಮುಗಿದಮೇಲೆ ಅಶ್ವತ್ಥಾಮಾಚಾರ್ಯರು ಪಾಂಡವರ ವಂಶವನ್ನೇ ನಿರ್ಮೂಲವನ್ನಾಗಿ ಮಾಡಬೇಕೆಂದು ಉತ್ತರೆಯ ಗರ್ಭಕ್ಕೆ ಬ್ರಹ್ಮಾಸ್ತ್ರವನ್ನು ಬಿಟ್ಟರು. ಶ್ರೀಪರಮಾತ್ಮನು ಉತ್ತರೆಯ ಗರ್ಭದಲ್ಲಿ ಇದ್ದುಕೊಂಡು ಹದಿನಾರು ವರ್ಷಪ್ರಾಯದಂತೆ ತೋರಿಸುತ್ತಾ ಸುತ್ತಲೂ ಗದೆಯನ್ನು ಬೀಸುತ್ತಾ ಬ್ರಹ್ಮಾಸ್ತ್ರ ತೇಜಸ್ಸನ್ನು ಪರಿಹಾರಮಾಡುತ್ತಾ ಇದ್ದನು. ಪರಿಕ್ಷೀದ್ರಾಜನು ಯಾರು ಇವನು ಎಂದು ಪರೀಕ್ಷಿಸುತ್ತಾ ಇದ್ದನು. ಈ ರೀತಿ ಹತ್ತು ತಿಂಗಳು ಪರಮಾತ್ಮನು ಗರ್ಭದಲ್ಲಿ ಮಗುವನ್ನು ರಕ್ಷಿಸಿದನು. ಹಡೆಯುವ ಕಾಲದಲ್ಲಿ ಮಾತ್ರ ಪರಮಾತ್ಮನು ಬಿಟ್ಟುಬಿಟ್ಟನು. ಆಗ ಬ್ರಹ್ಮಾಸ್ತ್ರವು ಆ ಶಿಶುವನ್ನು ಕೊಂದುಬಿಟ್ಟಿತು. ಉತ್ತರೆಯು ಮೃತವಾದ ಶಿಶುವನ್ನು ಹಡೆದಳು. ಮೃತವಾದ ಶಿಶುವನ್ನು ನೋಡಿ ಕುಂತಿದೇವಿಯರೂ ಸುಭದ್ರೆಯೂ ಉತ್ತರೆಯೂ ಎಲ್ಲರೂ ತುಂಬಾ ಪ್ರಲಾಪಮಾಡಿದರು. ಎಲ್ಲರೂ ದುಃಖಪಟ್ಟರು. ಆಗ ಕರುಣಾಸಾಗರನಾದ ಭಗವಂತನು ಆ ಪರೀಕ್ಷಿದ್ರಾಜನನ್ನು ಬದುಕಿಸಿ ಪಾಂಡವರ ವಂಶವನ್ನು ಉಜ್ಜೀವಿಸಿದನು. ತರುವಾಯ ಪಾಂಡವರು ಎಲ್ಲರೂ ಸಂತೋಷಪಟ್ಟು ಭಗವಂತನನ್ನು ಕೊಂಡಾಡಿದರು. ಜಾತಕವನ್ನು ನೋಡಿದವರು ಪರೀಕ್ಷದ್ರಾಜನ ಗುಣಗಣಗಳ ಗಾನಮಾಡಿದರು. ಧರ್ಮರಾಜನು ಅವರಿಗೆ ಬೇಕಾದ ಉಪಚಾರವನ್ನು ಮಾಡಿದರು. ತರುವಾಯ ಪಾಂಡವರು ಪರೀಕ್ಷಿದ್ರಾಜನಿಗೆ ಪಟ್ಟಾಭಿಷೇಕವನ್ನು ಮಾಡಿ ಹೊರಟುಹೋದರು. ಭಗವದ್ಭಕ್ತನಾದ ಪರೀಕ್ಷಿದ್ರಾಜನು ಧರ್ಮದಿಂದ ರಾಜ್ಯಭಾರ ಮಾಡಿದನು. ದಿಗ್ವಿಜಯಕಾಲದಲ್ಲಿ ಕಲಿಯನ್ನು ನಿಗ್ರಹಿಸಿದಾಗ ಪರೀಕ್ಷಿದ್ರಾಜನಿಗೆ ಅರವತ್ತು ವರ್ಷವಾಗಿತ್ತು.

ಒಂದುದಿನ ಪರೀಕ್ಷಿದ್ರಾಜನು ಮೃಗಬೇಟೆಗೆ ಹೋಗಿದ್ದನು. ಒಂದು ಮೃಗಕ್ಕೆ ಬಾಣವನ್ನು ಬಿಟ್ಟನು. ಆ ಮೃಗವು ಬಾಣಸಹಿತವಾಗಿ ಹೋಯಿತು. ಅದನ್ನು ಅನುಸರಿಸಿ ರಾಜನೂ ಹೋದನು. ಮೃಗವು ಬಹುದೂರ ಓಡಿತು. ರಾಜನೂ ಹಿಂದೆಯೇ ಓಡಿದನು. ರಾಜನಿಗೆ ತುಂಬಾ ಶ್ರಮವಾಯಿತು. ನೀರಡಿಕೆಯಾಯಿತು.

---

1. **ಮಭಾ. ಆಪ.40-44, 49-50, ಭಾಗ.I-11, 16-19, II-1**

ಹತ್ತಿರವೇ ಒಬ್ಬ ಋಷಿಗಳು ಗೋವುಗಳನ್ನು ಕಟ್ಟುವ ಸ್ಥಳದಲ್ಲಿಯೇ ಇದ್ದರು. ಅವರು ದನದ ಕರುಗಳು ಹಾಲು ಕುಡಿಯುವಾಗ ಕರುಗಳ ಬಾಯಿಯಿಂದ ಸುರಿಯುವ ನೊರೆಯನ್ನು ಕುಡಿದು ತಪಸ್ಸು ಮಾಡುತ್ತಿದ್ದರು. ಅವರು ಮೌನದಿಂದ ಕೂತಿದ್ದರು. ಅವರನ್ನು ನೋಡಿ ಶ್ರಮವನ್ನು ಹೊಂದಿರುವ ಪರೀಕ್ಷಿದ್ರಾಜನು 'ಸ್ವಾಮೀ! ನಾನು ಅಭಿಮನ್ಯುಪುತ್ರ ಪರೀಕ್ಷಿದ್ರಾಜನು. ನಾನು ಒಂದು ಮೃಗಕ್ಕೆ ಬಾಣವನ್ನು ಬಿಟ್ಟೆನು. ಅದು ಓಡಿಬಂದಿತು. ಅದನ್ನು ನೀವು ನೋಡಿದಿರಾ' ಎಂದು ಕೇಳಿದನು. ಆ ಮುನಿಗಳು ಮೌನವುಳ್ಳವರಾದ ಪ್ರಯುಕ್ತ ಮಾತಾಡಲಿಲ್ಲ. ದೈವೇಚ್ಛೆಯಿಂದ ಆಗ ಪರೀಕ್ಷಿದ್ರಾಜನಿಗೆ ಸ್ವಲ್ಪ ಕೋಪವು ಬಂದಿತು. ಅವನು ತನ್ನ ಧನುಸ್ಸಿನ ಅಗ್ರಭಾಗದಿಂದ ಒಂದು ಸತ್ತ ಸರ್ಪವನ್ನು ಅವರ ಹೆಗಲಲ್ಲಿ ಹಾಕಿದನು. ಆದರೂ ಆ ಮುನಿಗಳು ಒಂದೂ ಮಾತಾಡಲಿಲ್ಲ ಆಮೇಲೆ ರಾಜನು ಕೋಪರಹಿತನಾಗಿ ಪಶ್ಚಾತ್ತಾಪ ಪಡುತ್ತಾ ಊರಿಗೆ ಹೋದನು. ಆ ಮುನಿಗಳು ಕ್ಷಮಾವುಳ್ಳವರಾದ ಪ್ರಯುಕ್ತ ರಾಜನಿಗೆ ಶಾಪ ಕೊಡಲಿಲ್ಲ. ಅವರ ಹೆಸರು ಶಮೀಕರೆಂದು. ಅವರ ಮಗನಾದ ಶೃಂಗಿ ಎಂದು ಹೆಸರುಳ್ಳವನು ಮಹಾತಪಸ್ವಿಯು. ಪದೇಪದೇ ಬ್ರಹ್ಮದೇವರಿಗೆ ಪೂಜೆಮಾಡಿ ಅವರ ಅನುಜ್ಞೆಯಿಂದ ಮನೆಗೆ ಬರುತ್ತಿದ್ದನು. ಅವನಿಗೆ ಸ್ವಲ್ಪ ಕೋಪವು ಅಧಿಕ. ಅವನೊಡನೆ ಆಟವಾಡುತ್ತಿರುವಾಗ ಕೃಶ ಎಂಬ ಋಷಿಪುತ್ರನು 'ಎಲಾ ಶೃಂಗಿ! ನೀನು ಅಹಂಕಾರಪಡಬೇಡ. ನಿನ್ನ ತಂದೆಯು ಹೆಗಲಲ್ಲಿ ಸರ್ಪದ ಹೆಣವನ್ನು ಧರಿಸಿರುವರು. ನಿನ್ನ ಅಭಿಮಾನವೆಲ್ಲಿ! ನನ್ನ ತಂದೆ ಸರ್ಪದ ಶವವನ್ನು ಹೊತ್ತುಕೊಂಡಿರುವುದೆಲ್ಲಿ?' ಇತ್ಯಾದಿ ರೀತಿಯಿಂದ ಹೇಳಿ ಶೃಂಗಿಗೆ ಕೋಪಬರುವಂತೆ ಮಾಡಿದನು.

ಆಗ ಶೃಂಗಿಯು ಹೇಗೆ ನನ್ನ ಪಿತನು ಮೃತಸರ್ಪವನ್ನು ಧರಿಸಿರುವನು ಎಂದು ಕೇಳಲು ಕೃಶನು 'ಪರೀಕ್ಷಿದ್ರಾಜನು ಮೃಗಬೇಟೆ ಆಡುತ್ತಾ ಬಂದವನು ನಿನ್ನ ತಂದೆಯ ಹೆಗಲಲ್ಲಿ ಸರ್ಪದ ಶವವನ್ನು ಹಾಕಿಹೋದನು' ಎಂದು ಹೇಳಿದನು.

ಶೃಂಗಿಯೂ 'ಆ ದುರಾತ್ಮನಾದ ರಾಜನಿಗೆ ನನ್ನ ತಂದೆಯು ಏನು ಅಪರಾಧ ಮಾಡಿದರು' ಎಂದು ಕೇಳಿದನು. ಕೃಶನು 'ಅಪರಾಧವೊಂದು ಮಾಡಲಿಲ್ಲ. ಪರೀಕ್ಷಿದ್ರಾಜನು ಮೃಗಬೇಟೆ ಆಡುತ್ತಾ ಬರುವಾಗ ಒಂದು ಮೃಗಕ್ಕೆ ಬಾಣಬಿಟ್ಟನು. ಬಾಣಸಹಿತವಾಗಿ ಆ ಮೃಗವು ಓಡಿಹೋಯಿತು. ಮೌನವ್ರತವುಳ್ಳ ನಿನ್ನ ತಂದೆಯ ಹತ್ತಿರ ಆ ಮೃಗವನ್ನು ನೋಡಿದಿರಾ? ಎಂದು ಕೇಳಿದನು. ಅದಕ್ಕೆ ನಿನ್ನ ತಂದೆ ಬದಲು ಕೊಡಲಿಲ್ಲ. ಅದರಿಂದ ರಾಜನು ಕೋಪಿಸಿಕೊಂಡು ಸರ್ಪದ ಶವವನ್ನು ನಿನ್ನ ತಂದೆಯ ಕೊರಳಲ್ಲಿ ಹಾಕಿಹೋದನು' ಎಂದನು.

ಆ ಕೃಶನ ಮಾತನ್ನು ಕೇಳಿ ಶೃಂಗಿಗೆ ಬಹುಕೋಪವು ಬಂದಿತು. ಕೋಪಾವೇಶ ದಿಂದ ಆಚಮನಮಾಡಿ 'ಯಾವ ದುಷ್ಟನು ವೃದ್ಧನಾದ ನಿರಪರಾಧಿಯಾದ ತಂದೆಯ ಕೊರಳಲ್ಲಿ ಸರ್ಪದ ಹೆಣವನ್ನು ಹಾಕಿದನೋ ಆ ಪಾಪಿ ರಾಜನನ್ನು ಈ ದಿನದಿಂದ ಏಳನೇ ದಿವಸದಲ್ಲಿ ನನ್ನ ವಾಕ್ಯದಿಂದ ಪ್ರೇರಿತನಾಗಿ ತಕ್ಷಕ ಎಂಬ ಸರ್ಪನು ಕಚ್ಚಿ ಯಮಪುರಿಗೆ ಕಳುಹಿಸುವನು' ಎಂದು ಶಾಪವನ್ನು ಕೊಟ್ಟನು.

ಶೃಂಗಿಯು ತಂದೆಯ ಸಮೀಪಕ್ಕೆ ಬಂದು ಸರ್ಪದ ಶವವನ್ನು ಧರಿಸಿರುವ ತಂದೆಯನ್ನು ನೋಡಿ ತುಂಬಾ ಕೋಪಿಸಿಕೊಂಡನು. ದುಃಖದಿಂದ ಕಣ್ಣೀರನ್ನು ಸುರಿಸಿದನು. ತಂದೆಯೊಡನೆ 'ಆ ಅಯೋಗ್ಯ ರಾಜನಿಗೆ ಶಾಪವನ್ನು ಕೊಟ್ಟಿರುವೆನು. ಈ ದಿನದಿಂದ ಏಳನೇ ದಿನದಲ್ಲಿ ಆ ಪರೀಕ್ಷಿದ್ರಾಜನನ್ನು ತಕ್ಷಕನು ಕೊಂದು ಹಾಕುವನು' ಎಂದು ಹೇಳಿದನು.

ಅದನ್ನು ಕೇಳಿ ತಂದೆಯು 'ಮಗ! ನೀನು ಮಾಡಿದ್ದು ಸರಿಯಲ್ಲ. ನಾವು ರಾಜನ ದೇಶದಲ್ಲಿ ವಾಸಮಾಡುತ್ತೇವೆ. ನಮ್ಮನ್ನು ನ್ಯಾಯದಿಂದ ರಾಜನು ರಕ್ಷಣೆ ಮಾಡುತ್ತಾನೆ. ಅಂತಹ ಮಹಾರಾಜನಿಗೆ ಅಪರಾಧ ಮಾಡುವುದು ನನಗೆ ಇಷ್ಟವಿಲ್ಲ. ರಾಜನಿಂದಲೇ ಲೋಕಕ್ಕೆ ಕ್ಷೇಮವುಂಟಾಗುತ್ತದೆ. ರಾಜನನ್ನು ಸಂಹಾರಮಾಡುವು ದೆಂದರೆ ಹತ್ತುಜನ ಶ್ರೋತ್ರಿಯ ಬ್ರಾಹ್ಮಣರನ್ನು ಕೊಂದ ಪಾಪವು ಬರುವುದು. ಆ ರಾಜನು ಹಸಿವೆಯಿಂದ ಶ್ರಮವುಳ್ಳವನಾಗಿ, ನಾನು ಮೌನವ್ರತವುಳ್ಳವನೆಂದು ತಿಳಿಯದೆ ಮಾಡಿದನು. ನೀನು ಬಾಲಸ್ವಭಾವದಿಂದ ಏಕೆ ಇಂತಹ ಪಾಪಕಾರ್ಯ ವನ್ನು ಮಾಡಿದಿ? ರಾಜನಿಗೆ ನೀನು ಶಾಪಕೊಟ್ಟಿದ್ದು ಸರ್ವಥಾ ಸರಿಯಲ್ಲ' ಎಂದರು.

ಶಂಗಿಯು 'ತಂದೆಯೇ ನಾನು ಮಾಡಿದ್ದು ಸಾಹಸವೋ ದುಷ್ಕೃತ್ಯವೋ? ಪ್ರಿಯವೋ ಅಪ್ರಿಯವೋ ಹೇಗೆ ಇದ್ದರೂ ನಾನು ಹೇಳಿದ ಮಾತು ಸುಳ್ಳಾಗಲಾರದು. ನಾನು ಯಾವಾಗಲೂ ಸುಳ್ಳು ಹೇಳಿದ್ದೇ ಇಲ್ಲ' ಎಂದನು.

ತಂದೆಯು 'ನಿನ್ನ ಸ್ವಭಾವವನ್ನು ನಾನು ತಿಳಿದವನಾಗಿದ್ದೇನೆ. ನೀನು ಕೋಪವನ್ನು ಬಿಡಬೇಕು. ಕ್ಷಮಾಗುಣವುಳ್ಳವನಾಗು. ನಾನು ಕ್ಷಮಾಗುಣವುಳ್ಳವನಾಗಿ ನನ್ನಿಂದ ಶಕ್ಯವಾದ ಕಾರ್ಯವನ್ನು ಮಾಡುತ್ತೇನೆ. 'ಮಹಾರಾಜ ನೀನು ನನಗೆ ಮಾಡಿದ ಅಪರಾಧವನ್ನು ನೋಡಿ ಸರಿಯಾದ ಬುದ್ಧಿಯಿಲ್ಲದ ನನ್ನ ಮಗನು ನಿನಗೆ ಶಾಪಕೊಟ್ಟಿದ್ದಾನೆ' ಎಂದು ಒಬ್ಬ ಶಿಷ್ಯನನ್ನು ಕೊಟ್ಟು ಕಳುಹಿಸುತ್ತೇನೆ ಎಂದು ಹೇಳಿದರು.

ಶಮೀಕರು ಈರೀತಿ ಹೇಳಿ ಗೌರಮುಖ ಎಂಬ ಶಿಷ್ಯನನ್ನು ಕೊಟ್ಟು ಕಳುಹಿಸಿದರು. ಗೌರಮುಖನು ಬಂದು 'ಮಹಾರಾಜ! ನಿಮ್ಮ ದೇಶದಲ್ಲಿ ಶಮೀಕ ಎಂಬ ಋಷಿಗಳಿದ್ದಾರೆ. ಧರ್ಮಿಷ್ಠರು. ಅವರು ಮೌನವ್ರತವುಳ್ಳವರಾಗಿದ್ದರು. ಅವರ ಕುತ್ತಿಗೆಯಲ್ಲಿ ನೀನು ಸರ್ಪದ ಶವವನ್ನು ಹಾಕಿ ಬರತಕ್ಕವನಾದಿ. ಆ ಋಷಿಗಳು ಅದನ್ನು ಕ್ಷಮಿಸಿದರು. ಆದರೆ ಅವರ ಮಗನು ಅದನ್ನು ನೋಡಿ ಕ್ಷಮಿಸಲಿಲ್ಲ. ತಂದೆಗೆ ತಿಳಿಯದಂತೆ ಮಗನು ನಿನಗೆ ಈ ದಿನದಿಂದ ಏಳನೇ ದಿನದಲ್ಲಿ ತಕ್ಷಕನು ಕೊಂದುಹಾಕುವಂತೆ ಶಾಪಕೊಟ್ಟಿರುವನು. ಶಮೀಕರು ಕೋಪಿಷ್ಠನಾದ ತನ್ನ ಮಗನನ್ನು ಸಮಾಧಾನಮಾಡಲಿಕ್ಕಾಗದೆ, ಆ ಶಾಪವು ಅಪರಿಹಾರ್ಯವೆಂದು ನೀನು ಏನಾದರೂ ರಕ್ಷಣೆ ಮಾಡಿಕೊಳ್ಳಬೇಕೆಂದು ಹೇಳಲು ನನ್ನನ್ನು ಕಳುಹಿಸಿದ್ದಾರೆ. ನಿನಗೆ ಹಿತವಾಗಬೇಕೆಂದು ಶಮೀಕರು ನನ್ನನ್ನು ಕಳುಹಿಸಿದ್ದಾರೆ' ಎಂದು ಹೇಳಿದನು.

ಈ ಘೋರವಾದ ಮಾತನ್ನು ಕೇಳಿ ರಾಜನು ತುಂಬಾ ಪಶ್ಚಾತ್ತಾಪವನ್ನು ಹೊಂದಿದನು. ಆ ಶಮೀಕರ ದಯಾಯುಕ್ತವಾದ ಹೃದಯವನ್ನು ತಿಳಿದು ತುಂಬಾ ಪಶ್ಚಾತ್ತಾಪವನ್ನು ಹೊಂದಿದನು. ಅವರು ಮೌನವ್ರತದಿಂದ ಇದ್ದವರು ಎಂದು ಕೇಳಿಯಂತೂ ತುಂಬಾ ದುಃಖವನ್ನು ಹೊಂದಿದನು. ರಾಜನಿಗೆ ತಾನು ಮಾಡಿದ ಅಕಾರ್ಯವನ್ನು ಜ್ಞಾಪಿಸಿಕೊಂಡು ಆದ ದುಃಖವು ತನಗೆ ಶಾಪಬಂದಿದ್ದನ್ನು ಕೇಳಿಯೂ ಆಗಲಿಲ್ಲ. ಆಮೇಲೆ ರಾಜನು ಗೌರಮುಖನೊಡನೆ 'ನನಗೆ ಮತ್ತು ಅನುಗ್ರಹಮಾಡುವಂತೆ ನಾನು ಪ್ರಾರ್ಥನಾಮಾಡಿದೆನೆಂದು ಋಷಿಗಳೊಡನೆ ಹೇಳಬೇಕೆಂದು ನುಡಿದು, ಕಳುಹಿಸಿದನು.

ಗೌರಮುಖನು ಹೊರಟುಹೋದ ಮೇಲೆ ಮಂತ್ರಿಗಳೊಡನೆ ಯೋಚನೆ ಮಾಡಿ ಗಂಗೆಯಲ್ಲಿ ನೀರಿನ ಮಧ್ಯದಲ್ಲಿ ಒಂದೇ ಕಂಭದಮೇಲೆ ಒಂದು ಮನೆಯನ್ನು ಕಟ್ಟಿಸಿ, ಅಲ್ಲಿಯೇ ಅನೇಕ ಔಷಧಗಳೂ ವೈದ್ಯರೂ ಮಂತ್ರ ತಿಳಿದವರೂ ಎಲ್ಲರೂ ಇರುವಂತೆ ಮಾಡಿದನು. ಆ ಸಮಯದಲ್ಲಿಯೇ ಶುಕಾಚಾರ್ಯರಿಂದ ಭಾಗವತ ಪುರಾಣವನ್ನು ಕೇಳಿದನು.

ಏಳನೇ ದಿವಸದಲ್ಲಿ ಕಾಶ್ಯಪ ಎಂಬ ಬ್ರಾಹ್ಮಣರು ತಕ್ಷಕನು ಕಟ್ಟಿದ ರಾಜನನ್ನು ನಾನು ಬದುಕಿಸುವೆನು. ಅದರಿಂದ ನನಗೆ ಧರ್ಮವೂ ಧನವೂ ಲಭಿಸುವುದು ಎಂದು ಯೋಚನೆಮಾಡಿ ಬಂದರು. ಆ ಸಮಯದಲ್ಲಿ ತಕ್ಷಕನೂ ಮುದುಕ ಬ್ರಾಹ್ಮಣರೂಪ ದಿಂದ ಬರುತ್ತಿದ್ದನು. ಕಾಶ್ಯಪರನ್ನು ನೋಡಿ ಇಷ್ಟು ಅವಸರದಿಂದ ಎಲ್ಲಿಗೆ ಹೋಗುವುದು? ಎಂದು ಕೇಳಿದನು.

ಕಾಶ್ಯಪರು 'ಕುರುವಂಶದಲ್ಲಿ ಹುಟ್ಟಿದ ಪರೀಕ್ಷಿದ್ರಾಜನನ್ನು ತಕ್ಷಕನು ಈದಿನ ಕಚ್ಚುವನು. ನಾನು ಆ ರಾಜನನ್ನು ಬದುಕಿಸಲಿಕ್ಕೆ ಹೋಗುತ್ತಿರುವೆನು' ಎಂದರು. ಆಗ ತಕ್ಷಕನು 'ನಾನೇ ತಕ್ಷಕನು. ನಾನು ರಾಜನನ್ನು ಕಚ್ಚುವೆನು. ನೀನು ಹಿಂದೆ ಹೋಗು. ನಾನು ಕಚ್ಚಿದವನನ್ನು ನಿನಗೆ ಬದುಕಿಸಲಿಕ್ಕೆ ಆಗಲಾರದು' ಎಂದನು. ಕಶ್ಯಪನು ಆರಾಜನನ್ನು ಬದುಕಿಸುವ ಸಾಮರ್ಥ್ಯವು ನನಗೆ ಇದೆಯೆಂದು ಆಗ ತಕ್ಷಕನು ನಾನು ಕಚ್ಚಿದ ರಾಜನನ್ನು ರಕ್ಷಿಸಲಿಕ್ಕೆ ನಿನಗೆ ಶಕ್ತಿಯಿರುವ ಪಕ್ಷದಲ್ಲಿ ಈ ಆಲದ ಮರವನ್ನು ಕಚ್ಚುವೆನು. ನೀನು ಬದುಕಿಸು. ನಿನ್ನ ಮಂತ್ರಬಲವನ್ನು ತೋರಿಸು' ಎಂದನು.

ಆಗ ಕಾಶ್ಯಪರು ನೀನು ಕಚ್ಚು. ನಾನು ಬದುಕಿಸುತ್ತೇನೆ ಎಂದರು. ಆಗ ತಕ್ಷಕನು ಆ ಮರವನ್ನು ಕಚ್ಚಿದನು. ಆಗ ಮರವು ವಿಷದಜ್ವಾಲೆಯಿಂದ ಉರಿದುಹೋಯಿತು. ಈರೀತಿ ಭಸ್ಮವನ್ನು ಮಾಡಿದ ಈ ಮರವನ್ನು ಬದುಕಿಸು. ನಿನ್ನ ಪ್ರಯತ್ನವನ್ನು ಮಾಡು ಎಂದನು.

ಕಾಶ್ಯಪರು ನನ್ನ ವಿದ್ಯಾಸಾಮಥರ್ಯವನ್ನು ನೋಡಬೇಕು ಎಂದು ಹೇಳಿ ಬೂದಿಯಾಗಿ ಬಿದ್ದಿರುವ ಆಮರವನ್ನು ವಿದ್ಯಾಬಲದಿಂದ ಬದುಕಿಸಿದರು. ಆ ಬೂದಿಯಿಂದ ಮೊದಲು ಅಂಕುರವಾಗಿ ಗಿಡವಾಗಿ ದೊಡ್ಡಮರವಾಯಿತು. ಈರೀತಿಯಾಗಿ ಕಾಶ್ಯಪರು ಮಾಡಲು ತಕ್ಷಕನು 'ಮಹಾನುಭಾವರಾದ ನಿಮಗೆ ಇದು ಆಶ್ಚರ್ಯವಲ್ಲ. ನೀವು ನನ್ನ ಅಥವಾ ನನ್ನಂತೆ ಇರುವ ಇನ್ನೊಬ್ಬರ ವಿಷವನ್ನು ಪರಿಹಾರಮಾಡುವಿರಿ. ಆದರೆ ನಿಮಗೆ ರಾಜನಿಂದ ಏನು ಹಣವು ಅಪೇಕ್ಷಿತವೋ ಅದನ್ನು ನಾನೇ ಕೊಡುತ್ತೇನೆ. ಮಾತ್ರವಲ್ಲದೆ ರಾಜನು ಬ್ರಾಹ್ಮಣ ಶಾಪಗ್ರಸ್ತನಾಗಿದ್ದಾನೆ. ಅವನಲ್ಲಿ ನಿಮ್ಮ ವಿದ್ಯೆಯು ಫಲಿಸುತ್ತದೋ ಇಲ್ಲವೋ ಸಂದೇಹ. ಹಾಗೆ ಏನಾದರೂ ಫಲಿಸದೆ ಹೋದರೆ ನಿಮ್ಮ ಕೀರ್ತಿಗೆ ಕುಂದಕವುಂಟಾಗುವುದು' ಎಂದನು.

ದಿವ್ಯಜ್ಞಾನವುಳ್ಳ ಕಾಶ್ಯಪರು ಯೋಚನೆ ಮಾಡಿದರು. ರಾಜನ ಆಯುಷ್ಯವೂ ಮುಗಿದಿದೆ ಎಂದು ತಿಳಿದರು. ತರುವಾಯ ತಕ್ಷಕನು ಕೊಟ್ಟ ಧನವನ್ನು ಹಿಡಿದುಕೊಂಡು ಹಿಂದೆ ತಿರುಗಿದರು.

ತಕ್ಷಕನು ಬೇಗನೆ ಹಸ್ತಿನಾವತಿಗೆ ಹೋದನು. ಹೋಗುವಾಗಲೇ ಅನೇಕ ವಿಷ ವೈದ್ಯರು ರಕ್ಷಿಸುತ್ತಿದ್ದಾರೆ ಎಂದು ಕೇಳಿದನು. ರಾಜನನ್ನು ವಂಚನೆಮಾಡಬೇಕೆಂದು ಯೋಚಿಸಿದನು. ಅನೇಕ ಸರ್ಪಗಳನ್ನು ಋಷಿವೇಷವನ್ನು ಧರಿಸಲಿಕ್ಕೆ ಅವರ ಕೈಯಿಂದ ಹಣ್ಣುಗಳು ಎಲೆಗಳು ಇತ್ಯಾದಿಗಳನ್ನು ರಾಜನಿಗೆ ಕೊಟ್ಟು ಕಳುಹಿಸಿದನು. ಅವರು ಹೋಗಿ ರಾಜನಿಗೆ ಹಣ್ಣು ಮೊದಲಾದವನ್ನು ಕೊಟ್ಟರು. ತಪಸ್ವಿಗಳ

ವೇಷವುಳ್ಳ ಆ ಸರ್ಪಗಳು ಹೊರಟುಹೋದಮೇಲೆ ರಾಜನು ಮಂತ್ರಿಗಳೊಡನೆ ಋಷಿಗಳು ತಂದುಕೊಟ್ಟಿರುವ ನಾವೆಲ್ಲರೂ ತಿನ್ನೋಣ ಎಂದನು. ಅವುಗಳಲ್ಲಿ ಒಂದು ಹಣ್ಣಿನಲ್ಲಿ ತಕ್ಷಕನು ಸೂಕ್ಷ್ಮರೂಪದಿಂದ ಇದ್ದನು. ದೈವೇಚ್ಛೆಯಿಂದ ಅದೇ ಹಣ್ಣಿನಿಂದ ಕಪ್ಪಾದ ಕಣ್ಣುಳ್ಳ ಕೆಂಪಾದ ಕ್ರಿಮಿಯು ಬಂದಿತು. ರಾಜನು ಆ ಕ್ರಿಮಿಯನ್ನು ಹಿಡಿದುಕೊಂಡು ಮಂತ್ರಿಗಳೊಡನೆ 'ಸೂರ್ಯನು ಮುಳುಗುತ್ತಾ ಇದ್ದಾನೆ. ನನಗೆ ಈಗ ವಿಷದ ಭಯವಿಲ್ಲ. ಆ ಮುನಿಗಳ ಮಾತು ಸತ್ಯವಾಗಲಿ. ಈ ಕ್ರಿಮಿಯೇ ತಕ್ಷಕನಾಗಿ ನನ್ನನ್ನು ಕಚ್ಚಲಿ' ಎಂದು ಹೇಳಿದನು. ಮಂತ್ರಿಗಳೂ ಸರಿಯೆಂದರು. ರಾಜನು ಆ ಕ್ರಿಮಿಯನ್ನು ಕುತ್ತಿಗೆಯಲ್ಲಿ ಇಟ್ಟುಕೊಂಡನು. ರಾಜನು ನಗುತ್ತಲೇ ಇದ್ದನು. ಆ ಕ್ಷಣ ತಕ್ಷಕನು ನಿಜರೂಪವನ್ನು ಧರಿಸಿ ರಾಜನನ್ನು ಕಟ್ಟಿ ಆಕಾಶಮಾರ್ಗದಲ್ಲಿ ಹೋದನು. ಎಲ್ಲರೂ ಅಂಜಿಕೆಯಿಂದ ಅಲ್ಲಿಂದ ದೂರ ಓಡಿದರು. ಆ ಮನೆಯೇ ವಿಷಜ್ವಾಲೆಯಿಂದ ಉರಿದುಬಿತ್ತು.

ರಾಜಪುರೋಹಿತರು ಮೃತನಾದ ರಾಜನಿಗೆ ಮಾಡುವ ಪರಲೋಕಸಾಧನ ಕಾರ್ಯಗಳನ್ನು ಮಾಡಿದರು. ತರುವಾಯ ಮಂತ್ರಿಗಳು ಎಲ್ಲಾ ಜನರೂ ಶಿಶುವಾದ ಜನಮೇಜಯನನ್ನು ಅರಸನನ್ನಾಗಿ ಮಾಡಿದರು. ಸುವರ್ಣವರ್ಮ ಎಂಬ ಕಾಶಿರಾಜನ ಮಗಳಾದ ವಪುಷ್ಟಮಾ ಎಂಬ ಕನ್ಯೆಯನ್ನು ಜನಮೇಜಯ ರಾಜನಿಗೆ ಮದುವೆ ಮಾಡಿದರು. ಜನಮೇಜಯ ರಾಜನು ಪತ್ನಿಯೊಡನೆ ಸಂತೋಷದಿಂದ ಇದ್ದನು.



## ಉಗ್ರಾಯುಧನು [1]

ಅಜಮೀಢರಾಜನ ವಂಶದಲ್ಲಿ ಕೃತ ಎಂಬ ರಾಜನಿದ್ದನು. ಅವನು ಮಹಾಬಲವುಳ್ಳವನಾಗಿದ್ದನು. ಹಿರಣ್ಯನಾಭ ಎಂಬುವರ ಶಿಷ್ಯನಾಗಿದ್ದನು. ಸಾಮಶಾಖೆಗಳನ್ನು ತಿಳಿದವನಾಗಿದ್ದನು. ಅವನ ಮಗನು ಉಗ್ರಾಯುಧನು. ಅವನು ಮಹಾಪರಾಕ್ರಮಶಾಲಿಯಾದವನು. ಪೂರುವಂಶದವನು. ಅವನು ಪಾಂಚಾಲ ದೇಶದ ರಾಜನಾದ ಪೃಷತರಾಜನ ಪಿತಾಮಹನಾದ ನೀಪ ಎಂಬ ರಾಜನನ್ನು ಸಂಹಾರಮಾಡಿದನು. ಆ ಉಗ್ರಾಯುಧನು ದುರ್ಬುದ್ಧಿಯುಳ್ಳವನಾಗಿದ್ದನು.

1. ಹ.ವಂ.ಪ. ಅ-20

ಯುದ್ಧದಲ್ಲಿ ನೀಪ ಎಂಬ ರಾಜನನ್ನು ಇತರ ಅನೇಕ ರಾಜರನ್ನು ಕೊಂದಿದ್ದನು. ಬಹಳ ಸೈನ್ಯವುಳ್ಳವನಾದ್ದನು.

ಶಂತನು ಮಹಾರಾಜನು ಮೃತನಾಗಿರಲು ಮಂತ್ರಿಗಳೊಡನೆ ಭೂಮಿಯಲ್ಲಿ ಮಲಗಿರುವ ಭೀಷ್ಮಾಚಾರ್ಯರಿದ್ದಲ್ಲಿಗೆ ಉಗ್ರಾಯುಧನ ದೂತನು ಬಂದು ಹೇಳಿದನು. 'ನಮ್ಮ ಮಹಾರಾಜರು ಈ ಪ್ರಕಾರವಾಗಿ ಹೇಳಿಕಳುಹಿಸಿರುವರು. ಭೀಷ್ಮ! ಸ್ತ್ರೀರತ್ನಳಾದ ಯಶಸ್ವಿನಿಯಾದ ನಿನ್ನ ತಾಯಿ ಸತ್ಯವತಿಯನ್ನು ನನಗೆ ಹೆಂಡತಿಯನ್ನಾಗಿ ಕಳುಹಿಸು. ಹೀಗೆ ಮಾಡಿದರೆ ಮಾತ್ರ ನಾನು ನಿನಗೆ ರಾಜ್ಯವನ್ನೂ ಹಣವನ್ನೂ ಕೊಡುವೆನು. ಭೂಮಿಯಲ್ಲಿರುವ ಶ್ರೇಷ್ಠ ಪದಾರ್ಥಗಳೆಲ್ಲವೂ ನನಗೆ ಸೇರಿದವು. ಸತ್ಯವತಿಯು ಸುಂದರಸ್ತ್ರೀಯಳಾಗಿರುವಳು. ಯುದ್ಧದಲ್ಲಿ ನನ್ನ ಸೈನ್ಯವನ್ನು ನೋಡುವ ಮಾತ್ರದಿಂದಲೇ ಶತ್ರುಗಳು ಓಡಿಹೋಗುವರು. ನಿನ್ನ ರಾಜ್ಯಕ್ಕೆ ನಿನ್ನ ಪ್ರಾಣಗಳಿಗೆ ನಿನ್ನ ಕುಲಕ್ಕೆ ಕ್ಷೇಮವನ್ನು ಇಚ್ಛಿಸುವ ಪಕ್ಷದಲ್ಲಿ ನಾನು ಹೇಳಿದಂತೆ ಮಾಡು. ಇಲ್ಲದಿದ್ದರೆ ನಿನಗೆ ಕ್ಷೇಮವಾಗಲಾರದು' ಎಂದು ಆ ದೂತನು ಹೇಳಿದನು.

ತಂದೆಯ ದುಃಖದಿಂದ ನೆಲದ ಮೇಲೆ ಮಲಗಿರುವ ಭೀಷ್ಮಾಚಾರ್ಯರು ದೂತನ ಮೂಲಕ ಹೇಳಿ ಕಳುಹಿಸಿದ ಉಗ್ರಾಯುಧನ ಕ್ರೂರವಾದ ಮಾತನ್ನು ಕೇಳಿ, ಅವನ ಮನಸ್ಸಿನ ಅಭಿಪ್ರಾಯವನ್ನು ತಿಳಿದು, ಬಾಲಕನಾದ ತನ್ನನ್ನು ಆಶ್ರಯಿಸಿ ಇರುವ ವಿಚಿತ್ರವೀರ್ಯನನ್ನೂ ನೋಡಿ, ಬಹುಕೋಪವುಳ್ಳವರಾಗಿ, ಯುದ್ಧಕ್ಕೆ ಹೊರಡಬೇಕೆಂದು ಸೇನಾನಾಯಕರಿಗೆ ಆಜ್ಞಾಪಿಸಿದರು. ಆಗ ಮಂತ್ರಿಗಳೂ ಪುರೋಹಿತರೂ ಮಿತ್ರರೂ ಈಗ ಯುದ್ಧವು ಬೇಡವೆಂದರು. 'ಆ ರಾಜನು ಇಚ್ಛಾನುಸಾರವಾಗಿ ಇರುವವನು. ನಿಮಗೋ ಈಗ ತಂದೆಯು ಸತ್ತಪ್ರಯುಕ್ತ ಸೂತಕವಿದೆ. ಸೂತಕದಲ್ಲಿ ಅಸ್ತ್ರಮಂತ್ರವನ್ನು ಹೇಳಲಿಕ್ಕಿಲ್ಲ. ಯುದ್ಧರಂಗಕ್ಕೆ ಪ್ರವೇಶ ಮಾಡುವುದೂ ಸರಿಯಲ್ಲ. ಸೂತಕವು ಮುಗಿದ ಮೇಲೆ ಮಂಗಳಕಾರ್ಯವನ್ನು ಮಾಡಿಕೊಂಡು ಅಗ್ನಿಯಲ್ಲಿ ಹೋಮಮಾಡಿ, ಬ್ರಾಹ್ಮಣರನ್ನು ಪೂಜಿಸಿ ಅವರ ಆಶೀರ್ವಾದವನ್ನು ಪಡೆದು ಜಯಕ್ಕಾಗಿ ಯುದ್ಧಕ್ಕೆ ಹೋಗಬಹುದು' ಎಂದು ಮಂತ್ರಿಗಳು ಹೇಳಿದರು. ನಾವು ಅಷ್ಟರವರೆಗೆ ಸಮಾಧಾನಪಡಿಸುತ್ತೇವೆ ಎಂದರು.

ತರುವಾಯ ಆ ರಾಜನೊಡನೆ ಎಷ್ಟು ಸಮಾಧಾನಹೇಳಿದರೂ ಕೇಳಲಿಲ್ಲ. ತರುವಾಯ ಸೂತಕವು ಮುಗಿದ ಮೇಲೆ ಭೀಷ್ಮಾಚಾರ್ಯರು ಪುಣ್ಯಾಹವಾಚನ ಮಾಡಿಕೊಂಡು ಬ್ರಾಹ್ಮಣರ ಆಶೀರ್ವಾದವನ್ನು ಪಡೆದು ಯುದ್ಧಕ್ಕೆ ಹೋದರು. ತರುವಾಯ ಮೂರುದಿನ ದೇವಾಸುರರ ಯುದ್ಧದಂತೆ ಭಯಂಕರವಾಗಿ ಯುದ್ಧವು

ನಡೆಯಿತು. ತರುವಾಯ ಉಗ್ರಾಯುಧನು ಭೀಷ್ಮಾಚಾರ್ಯರ ಅಸ್ತ್ರಪ್ರತಾಪದಿಂದ ಸತ್ತು ಕೆಳಗೆ ಬಿದ್ದನು. ಆ ಸಂದರ್ಭದಲ್ಲಿ ಕಾಂಪಿಲ್ಯದಲ್ಲಿ ದ್ರುಪದರಾಜನ ತಂದೆಯಾದ ಪೃಷತರಾಜನು ಇದ್ದನು. ಅವನು ಭೀಷ್ಮಾಚಾರ್ಯರ ಅನುಮತಿಯಿಂದ ಪಾಂಚಾಲದೇಶವನ್ನು ಹೊಂದಿದನು.



## ಚಿತ್ರಕೇತುರಾಜನು [1]

ಪೂರ್ವದಲ್ಲಿ ಚಿತ್ರಕೇತುರಾಜನು ಇದ್ದನು. ಅವನಿಗೆ ಅನೇಕ ಹೆಂಡತಿಯರು ಇದ್ದರು. ಜ್ಯೇಷ್ಠಪುತ್ರಿಯ ಹೆಸರು ಕೃತದ್ಯುತಿ ಎಂದು. ರಾಜನಿಗೆ ಅಷ್ಟು ಜನ ಪತ್ನಿಯರಲ್ಲಿಯೂ ಮಕ್ಕಳಾಗಲಿಲ್ಲ. ಇದರಿಂದ ರಾಜನು ಬಹಳ ದುಃಖದಿಂದ ಇದ್ದನು. ಹೀಗಿರಲು ಒಂದು ದಿನ ಅಂಗಿರ ಎಂಬ ಋಷಿಗಳು ಬಂದರು. ಅವರನ್ನು ನೋಡಿ ಎದ್ದು ನಿಂತು ಶಾಸ್ತ್ರದಲ್ಲಿ ಹೇಳಿದಂತೆ ಉಪಚಾರವನ್ನು ಮಾಡಿದನು. ಅಂಗಿರಋಷಿಗಳು ರಾಜನೊಡನೆ ಕುಶಲಪ್ರಶ್ನೆ ಮಾಡಿದರು. ರಾಜನು ತನಗೆ ಎಲ್ಲಾ ವಿಷಯಗಳಲ್ಲಿಯೂ ಕಡಿಮೆಯಿಲ್ಲದಿದ್ದರೂ ಮಕ್ಕಳಿಲ್ಲವೆಂಬ ದುಃಖವು ಅಧಿಕವಾಗಿರುವುದೆಂದು ತಿಳಿಸಿದನು. ಅದಕ್ಕೆ ಅಂಗಿರಋಷಿಗಳು ಒಂದು ಇಷ್ಟಿಯನ್ನು ಮಾಡಿ ನಿನಗೆ ಸುಖಕ್ಕೂ ದುಃಖಕ್ಕೂ ಕಾರಣನಾದ ಒಬ್ಬ ಮಗನು ಹುಟ್ಟುವನು ಎಂದು ಹೇಳಿ ಹೊರಟುಹೋದನು.

ರಾಜನ ಜ್ಯೇಷ್ಠಪತ್ನಿಯಾದ ಕೃತದ್ಯುತಿಯು ಗರ್ಭಿಣಿಯಾದಳು. ಕ್ರಮದಿಂದ ಸುಂದರವಾದ ಮಗುವನ್ನು ಹಡೆದಳು. ಮಗುವಿನ ಮೇಲೆ ತುಂಬಾ ಪ್ರೇಮ ವುಂಟಾಯಿತು. ಮಗುವಿನ ಮೇಲಿನ ಪ್ರೇಮದಿಂದ ಮಗುವಿನ ತಾಯಿಯ ಮೇಲೆಯೂ ಇತರ ಸ್ತ್ರೀಯರಿಗಿಂತ ಹೆಚ್ಚಾಗಿ ಪ್ರೇಮವನ್ನು ರಾಜನು ಮಾಡತೊಡಗಿದನು. ಇದರಿಂದ ರಾಜನ ಇತರ ಸ್ತ್ರೀಯರು ತುಂಬಾ ದುಃಖನ್ನು ಹೊಂದಿದರು. ಅವರಿಗೆ ರಾಜನ ಮೇಲೆ ದ್ವೇಷವುಂಟಾಯಿತು. ದ್ವೇಷದಿಂದ ಬುದ್ಧಿಗೆಟ್ಟವರಾಗಿ ಮಗುವಿಗೆ ವಿಷವನ್ನು ಹಾಕಿದರು.

ಕೃತದ್ಯುತಿಯು ಎಂದಿನಂತೆ ಮಗುವು ನಿದ್ದೆ ಮಾಡುತ್ತಿರುವುದೆಂದು ನಂಬಿದಳು. ಬಹುಹೊತ್ತಾದರೂ ಮಗುವು ಏಳಲೇ ಇಲ್ಲ. ದಾಸಿಯ ಹತ್ತಿರ ಮಗುವನ್ನು ತರಲಿಕ್ಕೆ

1. ಭಾಗ. VI-14

ಹೇಳಿದಳು. ದಾಸಿಯು ಹೋಗಿ ತೊಟ್ಟಿಲನ್ನು ನೋಡುತ್ತಾಳೆ. ಮಗುವು ಪ್ರಾಣವನ್ನು ಬಿಟ್ಟಿದೆ. ದಾಸಿಯು ಬೆದರಿಹೋದಳು. ಕೂಗಿದಳು. ಕೃತದ್ಯುತಿಯು ಮಗುವಿನ ಬಳಿಗೆ ಹೋದಳು. ಮೃತವಾಗಿರುವ ಮಗುವನ್ನು ಕಂಡು ತುಂಬಾ ದುಃಖಪಟ್ಟಳು. ಅಂತಃಪುರದಲ್ಲಿದ್ದ ಎಲ್ಲರೂ ಗೋಳಿಟ್ಟರು. ಅಳುವ ಶಬ್ದವನ್ನು ಕೇಳಿ ರಾಜನೂ ಅಂತಃಪುರಕ್ಕೆ ಬಂದನು. ರಾಜನನ್ನು ನೋಡಿ ಕೃತದ್ಯುತಿಗೆ ದುಃಖವು ಎರಡು ಪಾಲಾಯಿತು. ಗಟ್ಟಿಯಾಗಿ ಅತ್ತಳು. ರಾಜನೂ ಗಟ್ಟಿಯಾಗಿ ಅಳಲಾರಂಭಿಸಿದನು. ಇದನ್ನು ನೋಡಿ ವಿಷಹಾಕಿದ ಸ್ತ್ರೀಯರೂ ಕಪಟದಿಂದ ಅಳಲಿಕ್ಕೆ ಆರಂಭಿಸಿದರು. ಈಪ್ರಕಾರವಾಗಿ ಎಲ್ಲರೂ ದುಃಖಾಕ್ರಾಂತರಾಗಲು ಅಲ್ಲಿಗೆ ನಾರದರೂ ಅಂಗಿರ ಋಷಿಗಳೂ ಬಂದರು. ರಾಜನಿಗೆ ದುಃಖವು ಪರಿಹಾರವಾಗುವಂತೆ ತತ್ವೋಪದೇಶ ವನ್ನು ಮಾಡಿದರು. ರಾಜನು ನೀವು ಯಾರು? ಎಂದು ಕೇಳಿದನು.

ಆಗ ಅಂಗಿರಋಷಿಗಳು ನಾನು ನಿನಗೆ ಮಗುವಾಗುವಂತೆ ಅನುಗ್ರಹಿಸಿದ ಅಂಗಿರಋಷಿಯು. ಇವರು ಬ್ರಹ್ಮದೇವರ ಮಕ್ಕಳಾದ ನಾರದರು. ನಾನು ಆಗಲೇ ನಿನಗೆ ತತ್ವೋಪದೇಶವನ್ನು ಮಾಡುವುದಕ್ಕಾಗಿ ಬಂದೆನು. ಆಗ ನಿನಗೆ ಮಕ್ಕಳಲ್ಲಿ ಇರುವ ಆಸೆಯನ್ನು ನೋಡಿ, ನಿನಗೆ ಹಾಗೆಯೇ ಅನುಗ್ರಹಿಸಿದೆನು. ಈಗ ನಿನಗೆ ಮಕ್ಕಳಿರುವವರ ಸುಖವು ಅನುಭವಕ್ಕೆ ಬಂತಲ್ಲಾ. ಹೀಗೆಯೇ ಹೆಂಡತಿ ರಾಜ್ಯ ಕೋಶ ಎಲ್ಲವೂ ನಶ್ವರವಾದ ಪ್ರಯುಕ್ತ ದುಃಖಕ್ಕೆ ಕಾರಣವಾದವುಗಳು. ಆದುದರಿಂದ ಇವುಗಳಲ್ಲಿ ವೈರಾಗ್ಯವಿರಬೇಕು ಇತ್ಯಾದಿಯಾಗಿ ಉಪದೇಶ ಮಾಡಿದರು.

ನಾರದರು ತನ್ನ ಯೋಗಸಾಮರ್ಥ್ಯದಿಂದ ಮೃತನಾದ ಜೀವನನ್ನು ಎಲ್ಲರಿಗೂ ತೋರಿಸಿ 'ಜೀವನೇ! ನೋಡು. ನಿನ್ನ ತಂದೆತಾಯಿಗಳು ಎಷ್ಟು ದುಃಖಪಡುತ್ತಿರು ವರು. ಸ್ವಲ್ಪಕಾಲ ನಿನ್ನ ದೇಹವನ್ನು ಪ್ರವೇಶಿಸಿ ಇವರು ಸಂತೋಷಪಡುವಂತೆ ಮಾಡು' ಎಂದರು. ಅದಕ್ಕೆ ಜೀವನು 'ಸ್ವಾಮಿನ್! ನನಗೆ ಎಷ್ಟು ಜನ್ಮವು ಉಂಟಾಗಿಲ್ಲ. ಪೂರ್ವದಲ್ಲಿ ಯಾವ ಜನ್ಮದಲ್ಲಿ ಇವರು ತಂದೆತಾಯಿಗಳಾಗಿದ್ದಾರೆ? ಕರ್ಮವನ್ನು ಅನುಸರಿಸಿ ಅಲ್ಲಲ್ಲಿ ಹುಟ್ಟುವಾಗ ಎಷ್ಟೋ ತಂದೆತಾಯಿಗಳಾಗುವರು ಇತ್ಯಾದಿ ಹೇಳಿ ಜೀವನು ಹೊರಟುಹೋದನು. ಎಲ್ಲರೂ ಇದನ್ನು ಕೇಳಿ ಆಶ್ಚರ್ಯಪಟ್ಟು ವೈರಾಗ್ಯವನ್ನು ಹೊಂದಿದರು. ಮೃತವಾದ ಮಗುವಿಗೆ ಮಾಡುವ ಕಾರ್ಯವನ್ನು ಮಾಡಿದರು. ನಾರದರು ಚಿತ್ರಕೇತುವಿಗೆ ಉಪದೇಶಮಾಡಿ ಈ ಪ್ರಕಾರವಾಗಿ ಮಾಡು. ನೀನು ವಿದ್ಯಾಧರನಿಗೆ ಅಧಿಪತಿಯಾಗುವಿ. ಏಳು ದಿವಸ ಧ್ಯಾನ ಮಾಡು ಎಂದು ಹೇಳಿ ಹೊರಟುಹೋದರು. ಕೂಸಿಗೆ ವಿಷವನ್ನು ಹಾಕಿದ ಸ್ತ್ರೀಯು

ಪಶ್ಚಾತ್ತಾಪವುಳ್ಳವರಾಗಿ ಬಾಲಹತ್ಯಾಪರಿಹಾರಕ ವ್ರತವನ್ನು ಮಾಡಿದರು. ಚಿತ್ರಕೇತು ರಾಜನು ನಾರದರು ಹೇಳಿದಂತೆ ಧ್ಯಾನಮಾಡಿ ವಿದ್ಯಾಧರ ಆಧಿಪತ್ಯವನ್ನು ಹೊಂದಿದನು. ಆ ವಿದ್ಯಾಸಾಮರ್ಥ್ಯದಿಂದ ಶೇಷದೇವರಿದ್ದಲ್ಲಿಗೆ ಹೋಗಿ ಶೇಷದೇವರಲ್ಲಿ ಅಂತರ್ಯಾಮಿಯಾದ ಭಗವಂತನನ್ನು ಸ್ತೋತ್ರ ಮಾಡಿದನು.

ಹೀಗೆ ವಿದ್ಯಾಧರರಿಗೆ ಅಧಿಪತಿಯಾಗಿ ವಿಮಾನದಲ್ಲಿ ಸಂಚರಿಸುತ್ತಾ ಬಹುಕಾಲ ಸಂತೋಷದಿಂದ ಇದ್ದನು. ಒಂದು ದಿವಸ ರುದ್ರದೇವರು ಸಭೆಯಲ್ಲಿ ಪಾರ್ವತಿ ದೇವಿಯನ್ನು ತೊಡೆಯಲ್ಲಿ ಕೂತುಕೊಂಡಿಸಿ ಇರಲು ಅದನ್ನು ನೋಡಿ ನಿಂದಿಸಿದನು. ಅದರಿಂದ ರುದ್ರದೇವರು ಸುಮ್ಮನೆ ಇದ್ದರೂ ಪಾರ್ವತಿದೇವಿಯು ಕೋಪಿಸಿಕೊಂಡು ಅಸುರನಾಗಿ ಹುಟ್ಟು ಎಂಬ ಶಾಪವನ್ನು ಕೊಟ್ಟರು. ಚಿತ್ರಕೇತುವು ಕೆಳಗಿಳಿದುಕೊಂಡು ಬಂದು ಪಾರ್ವತಿದೇವಿಗೆ ನಮಸ್ಕರಿಸಿ ಅಮ್ಮಾ! ಅಂಬಿಕೆ! ನಾನು ಶಾಪಬಿಡಿಸು ಎಂದು ಪ್ರಾರ್ಥಿಸುವುದಿಲ್ಲ. ಏಕೆಂದರೆ ದೇವತೆಗಳು ಕೊಟ್ಟ ಶಾಪವೋ ವರವೋ ಅವರವರ ಕರ್ಮಾನುಸಾರವಾಗಿ ಇರುತ್ತದೆ. ನಾನು ಹೇಳಿದ ಮಾತು ತಪ್ಪಾಗಿದ್ದರೆ ಕ್ಷಮಿಸಿರಿ' ಎಂದು ಹೇಳಿ ಹೊರಟುಹೋದನು. ಆಮೇಲೆ ಅವನೇ ತ್ವಷ್ಟಾ ಎಂಬ ಆದಿತ್ಯನು ಮಾಡಿದ ಹೋಮದಲ್ಲಿ ವೃತ್ರಾಸುರ ಎಂಬ ಹೆಸರಿನಿಂದ ಅಸುರನಾಗಿ ಹುಟ್ಟಿದನು. ಇಂದ್ರಾದಿಗಳನ್ನು ಪೀಡಿಸಿದನು. ಆಗ ಇಂದ್ರದೇವರು ಭಗವದಾಜ್ಞೆಯಿಂದ ದಧೀಚಿ ಋಷಿಗಳ ಎಲುಬಿನಿಂದ ವಜ್ರಾಯುಧವನ್ನು ಮಾಡಿಸಿ ಅದರಿಂದ ವೃತ್ರಾಸುರನನ್ನು ಸಂಹರಿಸಿ ಸ್ವರ್ಗದಲ್ಲಿ ಸುಖವಾಗಿದ್ದರು.



## ಮರುತ್ತರಾಜನ ಕಥೆ [1]

ತ್ರೇತಾಯುಗದಲ್ಲಿ ಅವೀಕ್ಷಿತ್ ಎಂದು ಹೆಸರುಳ್ಳ ಚಕ್ರವರ್ತಿಯಿದ್ದನು. ಅವನು ಇಂದ್ರದೇವರಂತೆ ಪರಾಕ್ರಮಶಾಲಿಯಾಗಿದ್ದನು. ಅವನು ನೂರು ಅಶ್ವಮೇಧ ಯಾಗಗಳನ್ನು ಮಾಡಿದ್ದನು. ಅವನಿಗೆ ಅಂಗಿರಋಷಿಗಳೇ ಪೌರೋಹಿತ್ಯವನ್ನು ಮಾಡಿದ್ದರು. ಆ ರಾಜನಿಗೆ ಮಹಿತ್ತ ಎಂಬ ಮಗನು ಹುಟ್ಟಿದನು. ಅವನು ಸರ್ವಗುಣ ಗಳಿಂದ ತಂದೆಯನ್ನು ಮೀರಿದ್ದನು. ಹತ್ತು ಸಾವಿರ ಆನೆಗಳ ಬಲವುಳ್ಳವನಾಗಿದ್ದನು.

ಅಂಗಿರಋಷಿಗಳಿಗೆ ಇಬ್ಬರು ಮಕ್ಕಳು. ದೊಡ್ಡವರು ಬೃಹಸ್ಪತ್ಯಾಚಾರ್ಯರು.

---

1. ಮ.ಭಾ.ಸ.ಪ. -78. ಆಶ್ವ.ಪ. 4-10

ಚಿಕ್ಕವರು ಸಂವರ್ತ ಎಂದು ಹೆಸರುಳ್ಳವರು. ಅಣ್ಣತಮ್ಮಂದಿರು ಇಬ್ಬರೂ ಜಗಳಾಡುತ್ತಿದ್ದರು. ಬೃಹಸ್ಪತ್ಯಾಚಾರ್ಯರು ತಮ್ಮನನ್ನು ತುಂಬಾ ಹೊಟ್ಟೆ ಉರಿಸುತ್ತಿದ್ದರು. ಇದರಿಂದ ಸಂವರ್ತರು ತನ್ನ ಸೊತ್ತನ್ನೆಲ್ಲಾ ಬಿಟ್ಟುಬಿಟ್ಟು ದಿಗಂಬರರಾಗಿ ಕಾಡಿನಲ್ಲಿ ವಾಸಮಾಡುತ್ತಿದ್ದರು.

ಇಂದ್ರದೇವರು ಅಸುರರನ್ನೆಲ್ಲಾ ಜಯಿಸಿ ಲೋಕಗಳಿಗೆ ಅಧಿಪತಿಯಾದರು. ಅವರು ಬೃಹಸ್ಪತ್ಯಾಚಾರ್ಯರನ್ನು ಪುರೋಹಿತನನ್ನಾಗಿ ಸ್ವೀಕರಿಸಿದರು. ಮರುತ್ತ ರಾಜನು ಇಂದ್ರದೇವರನ್ನು ಸ್ಪರ್ಧಿಸುತ್ತಿದ್ದನು. ಇಂದ್ರದೇವರೂ ಅವನೊಡನೆ ಸ್ಪರ್ಧಾ ಮಾಡುತ್ತಿದ್ದರು. ಮರುತ್ತರಾಜನು ಪರಮಶುದ್ಧನಾಗಿದ್ದನು. ಸರ್ವಗುಣಭರಿತನಾಗಿದ್ದರು. ಇಂದ್ರದೇವರು ಪ್ರಯತ್ನ ಮಾಡಿದರೂ ಯಾವ ಗುಣದಿಂದಲೂ ಅವನನ್ನು ಮೀರಲಿಕ್ಕೆ ಸಾಧ್ಯವಾಗಿಲ್ಲ. ತರುವಾಯ ಇಂದ್ರದೇವರು ದೇವತೆಗಳಿಂದ ಸಹಿತರಾಗಿ ಬೃಹಸ್ಪತ್ಯಾಚಾರ್ಯರೊಡನೆ 'ಆಚಾರ್ಯರೇ! ನೀವು ಇನ್ನು ಮುಂದೆ ಮರುತ್ತರಾಜನ ಮನೆಗೆ ಶ್ರಾದ್ಧವನ್ನೋ ಯಜ್ಞ ಮೊದಲಾದ ಶುಭಕಾರ್ಯಗಳನ್ನೋ ಮಾಡಿಸಬಾರದು. ನೀವು ಆ ರಾಜನ ಮನೆಗೆ ಹೋಗುವುದು ನನಗೆ ಸರಿಬೀಳಲಾರದು. ನಾನು ಮೂರುಲೋಕಗಳಲ್ಲಿ ದೇವತೆಗಳಿಗೂ ಇಂದ್ರನಾಗಿದ್ದೇನೆ. ಅವನು ಒಬ್ಬ ರಾಜನು. ನೀವು ಸಾವು ಇಲ್ಲದ ದೇವತೆಯಾದ ನನಗೆ ಪೌರೋಹಿತ್ಯವನ್ನು ಮಾಡಿಸಿ ಕೊಂಚ ಕೂಡ ಯೋಚನೆಯಿಲ್ಲದೆ ಸಾವು ಉಳ್ಳ ಆ ರಾಜನಿಗೆ ಹೇಗೆ ಪೌರೋಹಿತ್ಯಮಾಡುವಿರಿ. ಒಂದೋ ಮರುತ್ತರಾಜನನ್ನು ಬಿಟ್ಟು ನನಗೇ ಪೌರೋಹಿತ್ಯ ಮಾಡಿಸಿರಿ. ಅಥವಾ ನನ್ನನ್ನು ಬಿಟ್ಟು ಆ ರಾಜನಿದ್ದಲ್ಲಿಗೇ ಹೋಗಿರಿ. ಅಲ್ಲಿಯೂ ಇಲ್ಲಿಯೂ ಎರಡು ಸ್ಥಳದಲ್ಲಿಯೂ ಪೌರೋಹಿತ್ಯ ಮಾಡಿಸುವುದು ನನಗೆ ಸರಿಬೀಳಲಾರದು ಎಂದರು.

ಆಗ ಬೃಹಸ್ಪತ್ಯಾಚಾರ್ಯರು ಸ್ವಲ್ಪ ಹೊತ್ತು ಯೋಚನೆ ಮಾಡಿ 'ದೇವೇಂದ್ರ! ನೀನು ಮೂರುಲೋಕಗಳಿಗೂ ಅಧಿಪತಿಯಾಗಿರುವಿ. ದೇವತೆಗಳಿಗೆ ಪ್ರಭುವಾಗಿರುವಿ. ನಿನ್ನಂತಹ ದೇವತಾಪ್ರಭುವಿಗೆ ಪೌರೋಹಿತ್ಯವನ್ನು ಮಾಡಿ ಆ ಮನುಷ್ಯನಿಗೆ ನಾನೇಕೆ ಮಾಡಲಿ. ನೀನು ಸಮಾಧಾನದಿಂದ ಇರು. ನಾನು ಯಾವ ಮನುಷ್ಯನಿಗೂ ಪೌರೋಹಿತ್ಯವನ್ನು ಮಾಡಿಸಲಾರೆನು. ಅಗ್ನಿಯು ತಣ್ಣಗಾಗಲಿ, ಭೂಮಿಯೇ ತಿರುಗಿ ಬೀಳಲಿ, ಸೂರ್ಯನು ಪ್ರಕಾಶಿಸದೆ ಇರಲಿ, ನಾನು ಆಡಿದ ಮಾತನ್ನು ಮೀರಲಾರೆನು' ಎಂದರು.

ಇಂದ್ರದೇವರು ಆ ಮಾತನ್ನು ಕೇಳಿ ಸಂತೋಷದಿಂದ ಅವರನ್ನು ಹೊಗಳಿ ತನ್ನ

ಮನೆಯೊಳಗೆ ಹೋದರು.

ಬೃಹಸ್ಪತ್ಯಾಚಾರ್ಯರು ಈ ಪ್ರಕಾರವಾಗಿ ಇಂದ್ರದೇವರ ಹತ್ತಿರ ಹೊಕ್ಕಾದ ವಿಷಯವನ್ನು ಮರುತ್ತರಾಜನು ತಿಳಿದು ತುಂಬಾ ದೈನ್ಯವನ್ನು ಹೊಂದಿದನು. ಮನಸ್ಸಿನಿಂದ ಯಜ್ಞಮಾಡಬೇಕೆಂಬ ಸಂಕಲ್ಪವನ್ನು ಮಾಡಿಕೊಂಡು ಬೃಹಸ್ಪತ್ಯಾಚಾರ್ಯರಿದ್ದಲ್ಲಿಗೆ ಹೋಗಿ 'ಸ್ವಾಮಿ! ನಾನು ತಮಗೆ ಮೊದಲೇ ತಿಳಿಸಿದಂತೆ ಯಜ್ಞಮಾಡಲಿಕ್ಕೆ ಬೇಕಾದ ಸಾಮಗ್ರಿಗಳನ್ನೆಲ್ಲಾ ಸಂಗ್ರಹಿಸಿದ್ದೇನೆ. ತಮ್ಮ ಶಿಷ್ಯನು ನಾನು. ತಾವು ಬಂದು ಯಜ್ಞವನ್ನು ಮಾಡಿಸಬೇಕು' ಎಂದನು.

ಅದಕ್ಕೆ ಬೃಹಸ್ಪತ್ಯಾಚಾರ್ಯರು 'ನಾನು ನಿನಗೆ ಪೌರೋಹಿತ್ಯವನ್ನು ಮಾಡುವ ಅಭಿಪ್ರಾಯವಿಲ್ಲ, ಇಂದ್ರದೇವರು ಹಾಗೆ ನನ್ನ ಹತ್ತಿರ ಹಾಗೆ ಹೇಳಿದ್ದಾರೆ. ನಾನು ಅವರಿಗೆ ಹಾಗೆ ಮಾತುಕೊಟ್ಟಿದ್ದೇನೆ' ಎಂದರು.

ಆಗ ಮರುತ್ತನು 'ಸ್ವಾಮಿ! ತಮ್ಮ ಹಿರಿಯರಿಂದ ಆರಂಭಿಸಿ ಪೌರೋಹಿತ್ಯ ಮಾಡಿಸುತ್ತಾ ಇದ್ದಿರಿ. ನಾನು ತಮಗೆ ಬಹುಮಾನ ಮಾಡುತ್ತಲೇ ಇದ್ದೇನೆ. ನಾನು ತಮ್ಮ ಶಿಷ್ಯನು. ಈಪ್ರಕಾರ ನೀವು ನನ್ನನ್ನು ಕೈಬಿಡಬಾರದು' ಎಂದು ಹೇಳಿದನು.

ಆಗ ಬೃಹಸ್ಪತ್ಯಾಚಾರ್ಯರು 'ಮರುತ್ತ! ದೇವತೆಯಾದ ಇಂದ್ರದೇವರಿಗೆ ಪೌರೋಹಿತ್ಯವನ್ನು ಮಾಡಿ, ನಾನು ಮನುಷ್ಯನಾದ ನಿನಗೆ ಹೇಗೆ ಮಾಡಿಸಲಿ? ನೀನು ಹೋಗು ಅಥವಾ ಬಿಡು. ನಾನು ನಿನ್ನ ಮನೆಯ ಪೌರೋಹಿತ್ಯವನ್ನು ಬಿಟ್ಟಿದ್ದೇನೆ. ನಾನು ನಿನಗೆ ಯಜ್ಞಮಾಡಿಸುವುದಿಲ್ಲ, ಯಜ್ಞಮಾಡಿಸುವ ಬೇರೆ ಪುರೋಹಿತರನ್ನು ನೀನು ನೋಡಿಕೊ' ಎಂದರು.

ಈ ರೀತಿಯಾಗಿ ಬೃಹಸ್ಪತ್ಯಾಚಾರ್ಯರಿಂದ ನಿರಾಕೃತನಾದ ಮರುತ್ತರಾಜನು ತುಂಬಾ ಅವಮಾನವನ್ನು ಹೊಂದಿ ದುಃಖದಿಂದ ಬರುತ್ತಾ ದಾರಿಯಲ್ಲಿ ನಾರದರನ್ನು ನೋಡಿ, ಅವರಿಗೆ ಕೈಮುಗಿದು ನಿಂತನು. ಆಗ ನಾರದರು ಮಹಾರಾಜ! ಮುಖವೇಕೆ ಬಾಡಿದೆ? ನಿನಗೆ ಆರೋಗ್ಯವಷ್ಟೆ! ಎಲ್ಲಿಗೆ ಹೋಗಿದ್ದಿ? ಏನಾಯಿತು? ನಾನು ಕೇಳುವ ವಿಷಯವಾಗಿದ್ದರೆ ಅವಶ್ಯವಾಗಿ ಹೇಳು. ಸರ್ವಪ್ರಯತ್ನದಿಂದ ನಿನ್ನ ದುಃಖವನ್ನು ಪರಿಹರಿಸುವೆನು' ಎಂದರು.

ಮರುತ್ತರಾಜನು 'ಪೂಜ್ಯರೇ! ನಾನು ಒಂದು ಯಾಗವನ್ನು ಮಾಡಬೇಕೆಂದು ದೇವತಾಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಪೌರೋಹಿತ್ಯಕ್ಕಾಗಿ ಕರೆಯಲು ಹೋಗಿದ್ದರು. ಅವರು ಅಂಗೀಕರಿಸಲಿಲ್ಲ, ಅವರು ನನ್ನನ್ನು ನಿರಾಕರಣೆ ಮಾಡಿದರು.

ದೂಷಿಸಿದರು. ಆದುದರಿಂದ ನನಗೆ ಬದುಕಲಿಕ್ಕೇ ಇಷ್ಟವಿಲ್ಲ' ಎಂದನು.

ನಾರದರು 'ರಾಜ! ಹಾಗಾದರೆ ನಿನಗೊಂದು ಉಪಾಯವನ್ನು ಹೇಳುವೆನು. ಬೃಹಸ್ಪತ್ಯಾಚಾರ್ಯರ ತಮ್ಮ ಸಂವರ್ತ ಎಂಬುವರ ದಿಗಂಬರರಾಗಿ ದಿಕ್ಕುಗಳನ್ನೆಲ್ಲಾ ಸಂಚರಿಸುತ್ತಿರುವರು. ಬೃಹಸ್ಪತ್ಯಾಚಾರ್ಯರು ಪೌರೋಹಿತ್ಯವನ್ನು ಅಂಗೀಕರಿಸ ದಿದ್ದರೆ ಅವರ ಹತ್ತಿರ ಹೋಗು. ಮಹಾತೇಜಸ್ವಿಯಾದ ಅವರು ನಿನಗೆ ಯಾಗ ಮಾಡಿಸುವರು' ಎಂದರು.

ಮರುತ್ತರಾಜನು 'ತಮ್ಮ ಮಾತಿನಿಂದ ನಾನು ಬದುಕಿದೆನು. ಅವರನ್ನು ನಾನು ಎಲ್ಲಿ ನೋಡಲಿ? ನೀವು ಹೇಳಬೇಕು. ಅವರಲ್ಲಿ ನಾನು ಹೇಗೆ ನಡಕೊಳ್ಳಬೇಕು? ಅವರು ಹೇಗೆ ನನ್ನನ್ನು ಪರಿತ್ಯಜಿಸಲಾರರು. ಅವರೂ ನಿರಾಕರಿಸಿದರೆ ನಾನು ಆಮೇಲೆ ಬದುಕಿರಲಾರೆನು' ಎಂದನು.

ನಾರದರು 'ಅವರು ಹುಚ್ಚರ ವೇಷದಿಂದ ಸಂಚರಿಸುತ್ತಾ ಇರುವರು. ಆಗಾಗ್ಗೆ ಕಾಶಿಗೆ ಬರುತ್ತಿರುವರು. ಬರುವ ಮಾರ್ಗದಲ್ಲಿ ಒಂದು ಹೆಣವನ್ನು ಇಟ್ಟು ನೋಡುತ್ತಾ ಇರು. ಆ ಹೆಣವನ್ನು ನೋಡಿ ಹಿಂದೆ ತಿರುಗಿ ಹೋಗುತ್ತಾರೋ ಅವರೇ ಸಂವರ್ತರು. ಅವರು ಹೋದಲ್ಲಿಗೆಲ್ಲಾ ನೀನು ಹಿಂದೆಯೇ ಹೋಗು. ಒಬ್ಬರೂ ಇಲ್ಲದ ಸ್ಥಳದಲ್ಲಿ ಕೈಮುಗಿದು ಅವರ ಮರೆಹೊಂದು. ಆಗ ಅವರು ಯಾರು ನಿನಗೆ ನಿನ್ನ ವಿಷಯವನ್ನು ಹೇಳಿದರು ಎಂದು ಕೇಳಬಹುದು. ಆಗ ನಾರದರು ಹೇಳಿದರು ಎಂದು ಹೇಳು. ಆಗ ಅವರು ನನ್ನನ್ನು ಬೆನ್ನಟ್ಟಿ ಬರಬೇಕು ಎಂದು ಅಭಿಪ್ರಾಯದಿಂದ ನಾರದರು ಎಲ್ಲಿದ್ದಾರೆ ಎಂದು ಕೇಳಬಹುದು. ಹಾಗೆ ಕೇಳಿದರೆ ಅವರು ಬೆಂಕಿಯಲ್ಲಿ ಹಾರಿಬಿಟ್ಟರು ಎಂದು ಸಂಕೋಚವಿಲ್ಲದೆ ಹೇಳಿಬಿಡು' ಎಂದರು.

ಮರುತ್ತರಾಜನು ಹಾಗೆಯೇ ಆಗಲಿ ಎಂದು ಹೇಳಿ ನಾರದರಿಗೆ ಪೂಜೆಯನ್ನು ಮಾಡಿ, ಅವರ ಅನುಜ್ಞೆಯನ್ನು ಪಡೆದು ಕಾಶಿಗೆ ಹೋದನು. ನಾರದರು ಹೇಳಿದಂತೆ ಊರ ದ್ವಾರದಲ್ಲಿ ಒಂದು ಹೆಣವನ್ನು ಇಡಿಸಿದನು. ಆಗಲೇ ಸಂವರ್ತರೂ ಬಂದರು. ಹೆಣವನ್ನು ನೋಡಿ ಬೇಗನೇ ಹಿಂದೆ ತಿರುಗಿದರು. ಆಗ ಅವರ ಹಿಂದೆಯೇ ಮರುತ್ತರಾಜನು ಕೈಮುಗಿದುಕೊಂಡು ಹೋದನು. ಸಂವರ್ತಕರು ಒಬ್ಬರೂ ಇಲ್ಲದ ಸ್ಥಳದಲ್ಲಿ ಆ ರಾಜನ ಮೇಲೆ ಧೂಳಿಯನ್ನು ಎರಚಿದರು, ಕೆಸರನ್ನು ಚೆಲ್ಲಿದರು, ಥೂ ಎಂದು ಉಗುಳಿದರು. ಏನೇನು ಮಾಡಿದರೂ ಮರುತ್ತರಾಜನು ಮಾತಾಡದೆ ಕೈಮುಗಿದುಕೊಂಡು ಅವರ ಹಿಂದೆಯೇ ಹೋದನು. ತರುವಾಯ ಸಂವರ್ತರು ಶ್ರಮವುಳ್ಳವರಾಗಿ ತಣ್ಣಗಿರುವ ಒಂದು ಆಲದಮರದ ಬುಡದಲ್ಲಿ ಕೂತುಕೊಂಡರು.

'ನನ್ನ ವಿಷಯ ನಿನಗೆ ಹೇಗೆ ತಿಳಿಯಿತು. ಯಾರು ನಿನಗೆ ಹೇಳಿದರು? ನನ್ನ ಪ್ರಿಯವನ್ನು ಇಚ್ಛಿಸುವ ಪಕ್ಷದಲ್ಲಿ ಸತ್ಯವನ್ನು ಹೇಳು. ಸತ್ಯವನ್ನು ಹೇಳಿದಿಯಾದರೆ ನಿನ್ನ ಮನಸ್ಸಿನ ಅಭೀಷ್ಟವೆಲ್ಲಾ ಸಿದ್ಧಿಸುವುದು. ಸುಳ್ಳನ್ನು ಹೇಳಿದಿಯಾದರೆ ತಲೆಯು ನೂರಾಗಿ ಸೀಳಿಹೋಗುವುದು' ಎಂದು ಸಂವರ್ತರು ಕೇಳಿದರು.

ರಾಜನು 'ದಾರಿಯಲ್ಲಿ ಸಂಚಾರಮಾಡುತ್ತಿದ್ದ ನಾರದರು ತಾವು ನನ್ನ ಗುರುಪುತ್ರರು ಎಂದುಹೇಳಿದರು. ಆದುದರಿಂದ ನನಗೆ ತಮ್ಮ ಮೇಲೆ ತುಂಬಾ ಪ್ರೀತಿಯು' ಎಂದನು.

'ನೀನು ಹೇಳಿದ ಮಾತು ಸತ್ಯವು. ಕಪಟವೇಷದಿಂದ ಇರುವ ನನ್ನನ್ನು ನಾರದರು ತಿಳಿದಿರುವರು. ಈ ನಾರದರು ಎಲ್ಲಿದ್ದಾರೆ ಎಂದು ಹೇಳು' ಎಂದು ಸಂವರ್ತರು ಕೇಳಿದರು.

ರಾಜನು 'ನಾರದರು ತಮ್ಮನ್ನು ನನ್ನ ಹತ್ತಿರ ಹೇಳಿ. ನನಗೆ ಅನುಜ್ಞಾಕೊಟ್ಟು ಅಗ್ನಿಪ್ರವೇಶ ಮಾಡಿದರು' ಎಂದನು.

ಆಗ ಸಂವರ್ತರು ಹುಚ್ಚರಂತೆ ತೋರಿಸುತ್ತಾ ಕ್ರೂರವಾಗಿ ಮಾತಾಡಿದರು 'ಎಲಾ! ಹುಚ್ಚನಂತೆ ವಿಕಾರರೂಪವುಳ್ಳ ನನ್ನಿಂದ ಯಾಗ ಮಾಡಿಸಲಿಕ್ಕೆ ಹೇಗೆ ಇಚ್ಛಿಸುವಿ? ನನ್ನ ಅಣ್ಣನು ಸಮರ್ಥನಾಗಿದ್ದಾನೆ. ಅವನು ಇಂದ್ರನ ಹತ್ತಿರ ಇದ್ದಾನೆ. ಇಂದ್ರದೇವರಿಗೆ ಯಾಗ ಮಾಡಿಸುತ್ತಾನೆ. ಅವನ ಹತ್ತಿರ ಮಾಡಿಸು ನನ್ನ ಸೊತ್ತೆಲ್ಲಾ ಅವನು ಅಪಹರಿಸಿದನು. ದೇಹವನ್ನೂ ಮಾತ್ರ ಬಿಟ್ಟಿದ್ದಾನೆ. ಅವನು ನನಗೆ ಪೂಜ್ಯನು ಆದುದರಿಂದ ಅವನ ಅನುಜ್ಞೆಯಿರದೆ ನಾನು ನಿನಗೆ ಯಾಗವನ್ನು ಮಾಡಿಸಲಾರೆನು. ನನ್ನ ಅಣ್ಣ ಬೃಹಸ್ಪತ್ಯಾಚಾರ್ಯರ ಬಳಿಗೆ ಹೋಗು. ಅವರ ಅನುಜ್ಞಾಪಡೆದು ಬಾ. ಆಮೇಲೆ ನಿನಗೆ ಅಪೇಕ್ಷೆಯಿದ್ದರೆ ನಿನಗೆ ಯಾಗವನ್ನು ಮಾಡುಸುವೆನು' ಎಂದರು.

ರಾಜನು 'ನಾನು ಮೊದಲು ಬೃಹಸ್ಪತ್ಯಾಚಾರ್ಯರು ಇದ್ದಲ್ಲಿಗೇ ಹೋಗಿದ್ದೆನು. ಇಂದ್ರದೇವರು ನನಗೆ ಯಾಗಮಾಡಿಸಬಾರದು ಎಂದು ಹೇಳಿದ್ದರಂತೆ. ಏಕೆಂದರೆ ಇಂದ್ರದೇವರು ಯಾವಾಗಲೂ ನನ್ನೊಡನೆ ಸ್ಪರ್ಧಿಸುತ್ತಿದ್ದಾರೆ. ಬೃಹಸ್ಪತ್ಯಾಚಾರ್ಯರು ಇಂದ್ರದೇವರ ಮಾತನ್ನು ಅಂಗೀಕಾರ ಮಾಡಿದ್ದರು. ಆದುದರಿಂದ ನನ್ನನ್ನು ನಿರಾಕರಿಸಿದರು. ನಾನಾದರೂ ಈಗ ತಮ್ಮ ಸಹಾಯದಿಂದ ಯಾಗ ಮಾಡಬೇಕೆಂದು ಅಪೇಕ್ಷಿಸುತ್ತೇನೆ. ತಮ್ಮ ಅನುಗ್ರಹದಿಂದ ಇಂದ್ರದೇವರನ್ನು ಅತಿಕ್ರಮಿಸಲು ಇಚ್ಛಿಸುತ್ತೇನೆ. ನಿರಪರಾಧಿಯಾದ ನನ್ನನ್ನು ಬೃಹಸ್ಪತ್ಯಾಚಾರ್ಯರು ಒಂದು ಸಲ

ನಿರಾಕರಣೆ ಮಾಡಿರುವ ಪ್ರಯುಕ್ತ ಪುನಃ ಅವರಿದ್ದಲ್ಲಿಗೆ ಹೋಗಲಿಕ್ಕೆ ನನಗೆ ಅಭಿಪ್ರಾಯವಿಲ್ಲ' ಎಂದನು.

'ರಾಜನು ನನ್ನ ಅಭಿಪ್ರಾಯದಂತೆ ನಡೆದರೆ ನಿನ್ನ ಅಭೀಷ್ಟವೆಲ್ಲಾ ಸಿದ್ಧಿಸುವುದು. ನಿನಗೆ ನಾನು ಪೌರೋಹಿತ್ಯ ಮಾಡಿಸಿದರೆ ಇಂದ್ರದೇವರೂ ಬೃಹಸ್ಪತ್ಯಾಚಾರ್ಯರೂ ನಿನ್ನನ್ನು ದ್ವೇಷಿಸುವರು. ಆಗ ನೀನು ನನ್ನನ್ನು ಮಧ್ಯೇ ಬಿಟ್ಟು ಬಿಡಬಾರದು. ನಿನ್ನನ್ನು ನಾನು ಹೇಗೆ ನಂಬಲಿ. ಕೋಪಬಂದರೆ ನಾನು ಬಂಧುಗಳಿಂದ ಸಹಿತನಾದ ನಿನ್ನನ್ನು ಈಗಲೇ ಭಸ್ಮವನ್ನಾಗಿ ಮಾಡುವೆನು' ಎಂದರು.

'ತಮ್ಮನ್ನು ನಾನು ಮಧ್ಯೇ ಬಿಟ್ಟ ಪಕ್ಷದಲ್ಲಿ ಸೂರ್ಯನು ಇರುವ ಪರ್ಯಂತವೂ ಪರ್ವತಗಳು ಇರುವವರೆಗೂ ನಾನು ಉತ್ತಮಲೋಕಗಳನ್ನು ಹೊಂದಲಾರೆನು. ಒಳ್ಳೆಯ ಬುದ್ಧಿಯನ್ನು ಹೊಂದಲಾರೆನು' ಇತ್ಯಾದಿ ರೀತಿಯಾಗಿ ರಾಜನು ಪ್ರತಿಜ್ಞಾ ಮಾಡಿದನು.

ಆಗ ಸಂವರ್ತರು 'ರಾಜ! ನಿನಗೆ ಸರ್ವಕರ್ಮಗಳಲ್ಲಿಯೂ ಶುಭವಾದ ಬುದ್ಧಿಯಿರಲಿ. ನನಗೂ ಪೌರೋಹಿತ್ಯ ಮಾಡಿಸಬೇಕು ಎಂಬ ಅಭಿಪ್ರಾಯವು ಮನಸ್ಸಿನಲ್ಲಿ ಇದೆ. ನಿನಗೆ ಅಕ್ಷಯವಾದ ಹಣವನ್ನು ಹೇಳುತ್ತೇನೆ. ಅದರಿಂದ ನೀನು ದೇವತೆಗಳನ್ನೂ ಗಂಧರ್ವರನ್ನೂ ದೇವೇಂದ್ರನನ್ನು ಅತಿಕ್ರಮಿಸುವಿ. ನನಗೆ ಹಣಬೇಕು. ಪೌರೋಹಿತ್ಯ ಬೇಕು ಎಂಬ ಆಸೆಯಿಲ್ಲ. ನನ್ನ ಅಣ್ಣನಿಗೂ ಇಂದ್ರದೇವರಿಗೂ ಅಪ್ರಿಯವನ್ನು ಮಾಡಬೇಕೆಂಬ ಅಭಿಪ್ರಾಯವಿದೆ. ಇಂದ್ರದೇವರ ಸಾಮ್ಯವನ್ನು ನಿನಗೆ ತಂದುಕೊಡುವೆನು. ಇದು ಸತ್ಯವಾದ ಮಾತು' ಎಂದರು. ಮತ್ತು 'ರಾಜನ್! ಹಿಮವತ್ಪರ್ವತದ ಹಿಂದೆ ಮುಂಜವಾನ್ ಎಂಬ ಪರ್ವತವಿದೆ. ಅಲ್ಲಿ ಯಾವಾಗಲೂ ರುದ್ರದೇವರು ತಪಸ್ಸು ಮಾಡುತ್ತಿರುವರು. ಅಲ್ಲಿ ಮರಗಳ ಬುಡದಲ್ಲಿ ಗುಹೆಗಳಲ್ಲಿ ಪಾರ್ವತೀದೇವಿಯಿಂದ ಕೂಡಿಕೊಂಡು ರುದ್ರದೇವರು ಸುಖವಾಗಿ ಇರುವರು. ಅಲ್ಲಿ ವರುಣದೇವರು, ಕುಬೇರ, ಗಂಧರ್ವರು, ಅಪ್ಸರಸ್ತ್ರೀಯರು, ದೇವರ್ಷಿಗಳು, ಆದಿತ್ಯರು ಮರುತ್ತುಗಳೂ ಎಲ್ಲರೂ ರುದ್ರದೇವರನ್ನು ಸೇವಿಸುತ್ತಿರುವರು. ಆ ಸ್ಥಳವು ಅತ್ಯಂತ ಮನೋಹರವಾಗಿರುವುದು. ಆ ಪರ್ವತದ ಪಾರ್ಶ್ವಗಳಲ್ಲಿ ಬೇಕಾದ ಬಂಗಾರಗಳು ಬಿದ್ದಿರುವುವು. ಅವುಗಳನ್ನು ಕುಬೇರನ ಭೃತ್ಯರು ಆಯುಧಧಾರಿಗಳಾಗಿ ರಕ್ಷಿಸುತ್ತಿರುವರು. ನೀನು ಅಲ್ಲಿಗೆ ಹೋಗಿ ರುದ್ರದೇವರನ್ನು ನಾನು ಹೇಳಿದ ರೀತಿಯಾಗಿ ವಿಶೇಷವಾಗಿ ಸ್ತೋತ್ರ ಮಾಡು. ನಮಸ್ಕಾರ ಮಾಡು. ಆಗ ನೀನು ಬೇಕಾದಷ್ಟು ಬಂಗಾರವನ್ನು ಹೊಂದುವಿ' ಎಂದು

ಹೇಳಿದ ರುದ್ರದೇವರ ಸ್ತೋತ್ರವನ್ನು ಉಪದೇಶಿಸಿದರು–

ಮರುತ್ತರಾಜನು ಅದೇ ಪ್ರಕಾರವಾಗಿ ಅಲ್ಲಿಗೆ ಹೋಗಿ ರುದ್ರದೇವರನ್ನು ಸ್ತುತಿಸಿ ನಮಸ್ಕರಿಸಿ, ಬೇಕಾದ ಬಂಗಾರವನ್ನು ತಂದನು. ತರುವಾಯ ಬೇಕಾದ ಬಂಗಾರದ ಪಾತ್ರೆಗಳನ್ನು ಮಾಡಿಸಿದನು. ಸಂವರ್ತರ ಆಜ್ಞೆಯಿಂದ ಯಜ್ಞಕ್ಕೆ ಬೇಕಾದ ಸಾಮಗ್ರಿಯನ್ನು ಸಿದ್ಧಪಡಿಸಿದರು. ಬೃಹಸ್ಪತ್ಯಾಚಾರ್ಯರು ದೇವತೆಗಳನ್ನು ಅತಿಕ್ರಮಿಸಿ ಮರುತ್ತರಾಜನಲ್ಲಿರುವ ಸಂಪತ್ತನ್ನು ಕೇಳಿ ತುಂಬಾ ಮನಸ್ಸಿನಲ್ಲಿ ನೊಂದುಕೊಂಡರು. ನನ್ನ ಶತ್ರುವಾದ ಸಂವರ್ತನು ಹಣವಂತನಾಗುತ್ತಾನೆಂದು ತುಂಬಾ ಕೃಶರಾದರು. ಮೈಯೆಲ್ಲಾ ಬೆಳ್ಳಗಾಯಿತು.

ಈಪ್ರಕಾರವಾಗಿ ಬೃಹಸ್ಪತ್ಯಾಚಾರ್ಯರು ಕೃಶರಾದದ್ದನ್ನು ತಿಳಿದು ಇಂದ್ರದೇವರು ದೇವತೆಗಳಿಂದ ಸಹಿತರಾಗಿ ಬಂದು ನಿಮ್ಮ ದುಃಖಕ್ಕೆ ಕಾರಣವೇನೆಂದು ಕೇಳಿದರು. ಅದಕ್ಕೆ ಬೃಹಸ್ಪತ್ಯಾಚಾರ್ಯರು 'ದೇವೇಂದ್ರ! ಮರುತ್ತರಾಜನು ತುಂಬಾ ದಕ್ಷಿಣೆಯನ್ನು ಕೊಟ್ಟು ದೊಡ್ಡ ಯಾಗವನ್ನು ಮಾಡುವನಂತೆ. ಸಂವರ್ತನು ಪೌರೋಹಿತ್ಯವನ್ನು ಮಾಡಿಸುವನಂತೆ. ಸಂವರ್ತನು ಪೌರೋಹಿತ್ಯವನ್ನು ಮಾಡಿಸದಂತೆ ಮಾಡಬೇಕೆಂದು ನನ್ನ ಅಭಿಪ್ರಾಯ'.

ಇಂದ್ರದೇವರು 'ಯಾಕೆ ಇಷ್ಟು ಶ್ರಮಪಡುತ್ತೀರಿ? ನಿಮಗೇನು ಕಡಿಮೆಯಿದೆ? ದೇವತೆಗಳಿಗೆಲ್ಲಾ ಪುರೋಹಿತರಾಗಿದ್ದೀರಿ. ಜರಾಮರಣಗಳಿಂದ ರಹಿತರಾಗಿದ್ದೀರಿ. ಸಂವರ್ತರು ನಿಮಗೆ ಏನು ಮಾಡುವರು?' ಎಂದರು.

ಬೃಹಸ್ಪತ್ಯಾಚಾರ್ಯರು 'ದೇವೇಂದ್ರ! ನೀನು ಅಸುರರನ್ನು ಸಂಹರಿಸುವು ದಿಲ್ಲವೇ? ಹಾಗೆಯೇ ಎಲ್ಲರಿಗೂ ಶತ್ರುಗಳ ಸಮೃದ್ಧಿಯನ್ನು ನೋಡಿದರೆ ಸಹಿಸಲಿಕ್ಕೆ ಆಗಲಾರದು. ಏನಾದರೂ ಮಾಡಿ ಸಂವರ್ತನು ಮರುತ್ತರಾಜನಿಗೆ ಪೌರೋಹಿತ್ಯ ಮಾಡಿಸದಂತೆ ಮಾಡಬೇಕು' ಎಂದರು.

ಆಗ ಇಂದ್ರದೇವರು ಅಗ್ನಿದೇವರನ್ನು ಕೂಗಿ 'ಅಗ್ನಿ! ನೀನು ಮರುತ್ತರಾಜನ ಹತ್ತಿರ ಹೋಗಿ 'ಬೃಹಸ್ಪತ್ಯಾಚಾರ್ಯರು ನಿನಗೆ ಪೌರೋಹಿತ್ಯವನ್ನು ಮಾಡುತ್ತಾರೆ. ನಿನಗೆ ಅಮರತ್ವವನ್ನು ಕೊಡುವರು ಎಂದು ಹೇಳು' ಎಂದು ಕಳುಹಿಸಿದರು.

ಆಗ ಅಗ್ನಿದೇವರು ವಾಯುವಿನಂತೆ ಗರ್ಜನೆ ಮಾಡುತ್ತಾ ಹೋದರು. ಆಗ ಮರುತ್ತರಾಜನು 'ಆಶ್ಚರ್ಯವನ್ನು ನೋಡುತ್ತಾ ಇದ್ದೇನೆ. ಅಗ್ನಿದೇವರೇ ಬಂದುಬಿಟ್ಟರು. ಮುನಿಗಳೇ! ಅವರಿಗೆ ಆಸನ ಪಾದ್ಯ ಎಲ್ಲಾ ಕೊಡಿರಿ ಎಂದನು.

ಅದಕ್ಕೆ ಅಗ್ನಿದೇವರು 'ಆಸನಾದಿಗಳೊಂದೂ ಬೇಡ. ಇಂದ್ರದೇವರಿಂದ ಕಳುಹಿಸಲ್ಪಟ್ಟ ದೂತನಾಗಿ ಬಂದಿದ್ದೇನೆ' ಎಂದರು. ಮರುತ್ತನು 'ಇಂದ್ರದೇವರು ಸೌಖ್ಯದಿಂದ ಇದ್ದಾರೋ? ನನ್ನ ಮೇಲೆ ಪ್ರೀತಿಯುಳ್ಳವರಾಗಿದ್ದಾರೋ? ದೇವತೆಗಳೆಲ್ಲಾ ಅವರ ವಶವಾಗಿದ್ದಾರೋ?' ಎಂದು ಕೇಳಿದನು. ಅಗ್ನಿಯು 'ಇಂದ್ರ ದೇವರು ಸುಖದಿಂದ ಇದ್ದಾರೆ. ನಿನ್ನೊಡನೆ ಅಕ್ಷಯವಾದ ಪ್ರೀತಿಯನ್ನು ಇಚ್ಛಿಸುತ್ತಾರೆ. ದೇವತೆಗಳೆಲ್ಲಾ ಅವರ ವಶರಾಗಿಯೇ ಇದ್ದಾರೆ. ಅವರು ಹೇಳಿಕಳುಹಿಸಿದ ಮಾತನ್ನು ಕೇಳು. ಬೃಹಸ್ಪತ್ಯಾಚಾರ್ಯರು ನಿನಗೆ ಪೌರೋಹಿತ್ಯವನ್ನು ಮಾಡಲಿ. ಮರಣವುಳ್ಳ ನಿನ್ನನ್ನು ಮರಣ ರಹಿತನನ್ನಾಗಿ ಮಾಡಲಿ' ಎಂದನು.

ಅದಕ್ಕೆ ಮರುತ್ತರಾಜನು 'ಈ ಸಂವರ್ತರು ನನಗೆ ಪೌರೋಹಿತ್ಯವನ್ನು ಮಾಡಲಿ. ಬೃಹಸ್ಪತ್ಯಾಚಾರ್ಯರಿಗೆ ನಾನು ಕೈಮುಗಿಯುತ್ತೇನೆ. ಅವರು ದೇವೇಂದ್ರ ನಿಗೆ ಪೌರೋಹಿತ್ಯ ಮಾಡಿದವರು. ಮನುಷ್ಯನಾದ ನನಗೆ ಯಾಗ ಮಾಡಿಸಿದರೆ ಅವರ ಗೌರವಕ್ಕೆ ಕಡಿಮೆ' ಎಂದನು.

ಅಗ್ನಿದೇವರು 'ರಾಜನೇ! ಬೃಹಸ್ಪತ್ಯಾಚಾರ್ಯರಿಗೆ ನಾನು ಕೈಮುಗಿಯುತ್ತೇನೆ. ಅವರು ದೇವೇಂದ್ರನಿಗೆ ಪೌರೋಹಿತ್ಯ ಮಾಡಿದವರು. ಮನುಷ್ಯನಾದ ನನಗೆ ಯಾಗ ಮಾಡಿಸಿದರೆ ಅವರ ಗೌರವಕ್ಕೆ ಕಡಿಮೆ' ಎಂದನು.

ಅಗ್ನಿದೇವರು 'ರಾಜನೇ! ಬೃಹಸ್ಪತ್ಯಾಚಾರ್ಯರು ಯಾಗವನ್ನು ಮಾಡಿಸಿದ ಪಕ್ಷದಲ್ಲಿ ಇಂದ್ರದೇವರ ಅನುಗ್ರಹದಿಂದ ಸ್ವರ್ಗದಲ್ಲಿರುವ ಉತ್ತಮಲೋಕಗಳನ್ನು ಹೊಂದುವಿ. ಸ್ವರ್ಗವನ್ನು ಹೊಂದುವಿ. ಭೂಮಿಯಲ್ಲಿ ಎಲ್ಲಾ ಲೋಕಗಳನ್ನೂ ಹೊಂದುವಿ' ಎಂದರು.

ಸಂವರ್ತರು 'ಅಗ್ನಿ! ಬೃಹಸ್ಪತ್ಯಾಚಾರ್ಯರಿಂದ ಪೌರೋಹಿತ್ಯ ಮಾಡಿಸಲಿಕ್ಕೆ ಹೇಳಲು ಪುನಃ ಇಲ್ಲಿಗೆ ಬರಬೇಡ. ನನಗೆ ಕೋಪ ಬಂದರೆ ಕ್ರೂರವಾದ ದೃಷ್ಟಿಯಿಂದ ನಿನ್ನನ್ನು ಸುಟ್ಟುಹಾಕುವೆನು' ಎಂದರು.

ಆಗ ಅಗ್ನಿದೇವರು ಅಂಜಿಕೆಯಿಂದ ನಡುಗುತ್ತಾ ಹೋಗಿ ಇಂದ್ರದೇವರ ಹತ್ತಿರ ಬೃಹಸ್ಪತ್ಯಾಚಾರ್ಯರು ಇರುವಾಗಲೇ ನಡೆದ ವಿಷಯವನ್ನೆಲ್ಲಾ ಹೇಳಿದರು.

ಇಂದ್ರದೇವರು 'ಅಗ್ನಿ! ಇನ್ನೊಂದು ಬಾರಿ ಆ ರಾಜನಿದ್ದಲ್ಲಿಗೆ ಹೋಗು. ಪುನಃ ನಾನು ಹೇಳಿದ ಮಾತನ್ನು ಕೇಳದಿದ್ದರೆ ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸುವೆನು' ಎಂದರು.

ಅದಕ್ಕೆ ಅಗ್ನಿದೇವರು 'ಪುನಃ ಬೃಹಸ್ಪತ್ಯಾಚಾರ್ಯರ ಪೌರೋಹಿತ್ಯವನ್ನು ಸ್ವೀಕರಿಸಲು ಹೇಳಬಂದರೆ ನಿನ್ನನ್ನು ಸುಟ್ಟು ಹಾಕುವೆನೆಂದು ಸಂವರ್ತರು ಕಣ್ಣು ಕೆಂಪಗೆ ಮಾಡಿ ಹೇಳಿದ್ದರು. ಆದುದರಿಂದ ನನಗೆ ಅಲ್ಲಿಗೆ ಹೋಗಲಿಕ್ಕೆ ಭಯವಾಗುತ್ತದೆ. ಈ ಗಂಧರ್ವರಾಜನು ಹೋಗಿ ಹೇಳು' ಎಂದರು.

ಇಂದ್ರದೇವರು 'ಅಗ್ನಿಯಂತೆ ಸುಳ್ಳು ಮಾತು ಹೇಳುತ್ತಿ? ಎಲ್ಲರನ್ನೂ ನೀನು ಸುಡುವವನಷ್ಟೆ! ನೀನು ಯಾರು ಭಸ್ಮವನ್ನಾಗಿ ಮಾಡುವರು? ನಿನ್ನ ಸ್ಪರ್ಶದಿಂದ ಎಲ್ಲಾ ಜಗತ್ತು ಭಯಪಡುತ್ತದೆ' ಎಂದರು.

ಅಗ್ನಿದೇವರು 'ನೀವು ವೃತ್ರಾಸುರನಿಂದ ಭಯಪಡಲಿಲ್ಲ, ಮಾತ್ರವಲ್ಲದೆ ಶರ್ಯಾತಿಯ ಯಜ್ಞವನ್ನು ಜ್ಞಾಪಿಸಿಕೊಳ್ಳಬಾರದೇ? ಚ್ಯವನಋಷಿಗಳು ಸೃಷ್ಟಿಮಾಡಿದ ಮದ ಎಂಬ ರಾಕ್ಷಸನನ್ನು ನೋಡಿಯೇ ಕಣ್ಣುಮುಚ್ಚಲಿಲ್ಲವೇ? ಆದುದರಿಂದ ಬ್ರಹ್ಮ ತೇಜಸ್ಸು ಮಾನ್ಯವಲ್ಲವೇ?' ಎಂದರು.

ಇಂದ್ರದೇವರು 'ಸರಿ, ಬ್ರಾಹ್ಮಣರು ಮಾನ್ಯರೇ! ಆದರೆ ಆ ಮರುತ್ತರಾಜನ ಬಲವನ್ನು ಲಕ್ಷಿಸಲಾರೆನು. ಅವನಿಗೆ ಘೋರವಾದ ವಜ್ರವನ್ನು ಉಪಯೋಗಿಸುವೆನು' ಎಂದರು. 'ಧೃತರಾಷ್ಟ್ರ! ಗಂಧರ್ವ! ಬೇಗನೆ ಮರುತ್ತನ ಬಳಿಗೆ ಹೋಗು. ಸಂವರ್ತನಿಂದ ಸಹಿತನಾದ ರಾಜನೊಡನೆ ಬೃಹಸ್ಪತ್ಯಾಚಾರ್ಯರನ್ನು ಪೌರೋ ಹಿತ್ಯಕ್ಕೆ ಸೇರಿಸಿಕೊಳ್ಳಲಿಕ್ಕೆ ಹೇಳು. ಇಲ್ಲದಿದ್ದರೆ ವಜ್ರಾಯುಧವನ್ನು ಪ್ರಯೋಗಿಸುವೆ ನೆಂದು ತಿಳಿಸು' ಎಂದರು.

ಧೃತರಾಷ್ಟ್ರನೆಂಬ ಗಂಧರ್ವನು ಮರುತ್ತರಾಜನ ಬಳಿಗೆ ಹೋಗಿ 'ಬೃಹಸ್ಪತ್ಯಾಚಾರ್ಯರನ್ನು ಪೌರೋಹಿತ್ಯಕ್ಕೆ ಸೇರಿಸಿಕೋ. ಇಲ್ಲದಿದ್ದರೆ ನಿನ್ನ ತಲೆಯ ಮೇಲೆ ವಜ್ರಾಯುಧವನ್ನು ಉಪಯೋಗಿಸುವರು. ಇಂದ್ರದೇವರ ಮಾತಿನಿಂದ ಬಂದಿದ್ದೇನೆ. ನಾನು ಧೃತರಾಷ್ಟ್ರನೆಂಬ ಗಂಧರ್ವನು' ಎಂದನು.

ಅದಕ್ಕೆ ಮರುತ್ತರಾಜನು 'ಮಿತ್ರದ್ರೋಹಕ್ಕೆ ಪ್ರಾಯಶ್ಚಿತ್ತವಿಲ್ಲವೆಂದು ಇಂದ್ರ ದೇವರೂ ಎಲ್ಲ ದೇವತೆಗಳೂ ತಿಳಿದಿದ್ದಾರಷ್ಟೆ! ಆದುದರಿಂದ ಸಂವರ್ತರನ್ನು ಹೇಗೆ ಬಿಡಲಿ? ಬೃಹಸ್ಪತ್ಯಾಚಾರ್ಯರು ದೇವೇಂದ್ರನಿಗೆ ಪುರೋಹಿತರಾಗಲಿ. ಸಂವರ್ತರು ನನಗೆ ಯಾಗವನ್ನು ಮಾಡಿಸಲಿ. ನಾನು ನಿನ್ನ ಮಾತನ್ನೂ ಅವರ ಮಾತನ್ನೂ ಅಂಗೀಕರಿಸುವುದಿಲ್ಲ' ಎಂದರು.

ಗಂಧರ್ವರು 'ರಾಜ! ನೋಡು! ಆಕಾಶದಲ್ಲಿ ಇಂದ್ರದೇವರು ಗರ್ಜಿಸುವ

ಶಬ್ದವು ಕೇಳಿಸುತ್ತದೆ. ನಿಶ್ಚಯವಾಗಿಯೂ ವಜ್ರವನ್ನು ಪ್ರಯೋಗಿಸುವರು. ಯೋಚನೆಮಾಡು' ಎಂದನು.

ಈರೀತಿಯಾಗಿ ಗಂಧರ್ವರು ಹೇಳಲು ಗರ್ಜನೆ ಮಾಡುತ್ತಿರುವ ಇಂದ್ರದೇವರ ಶಬ್ದವನ್ನು ಕೇಳಿ ಸಂವರ್ತರೊಡನೆ 'ನಾನು ತುಂಬಾ ಭಯಗ್ರಸ್ತನಾಗಿದ್ದೇನೆ. ನಿಮ್ಮಿಂದ ಸುಖವಾಗಬೇಕು. ಅಭಯಪ್ರದಾನ ಮಾಡಬೇಕು. ಇಂದ್ರದೇವರು ವಜ್ರವನ್ನು ಹಿಡಿದುಕೊಂಡು ಹತ್ತುದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಾ ಬರುತ್ತಾರೆ. ಸಭಿಕರೆಲ್ಲಾ ಭಯಪಡುತ್ತಾರೆ ಎಂದು ಮರುತ್ತರಾಜನು ಹೇಳಿದನು.

ಸಂವರ್ತರು 'ರಾಜ! ಭಯಪಡದಿರು. ನಾನು ವಿದ್ಯಾಸಾಮರ್ಥ್ಯದಿಂದ ಸ್ತಂಭನೆ ಮಾಡುತ್ತೇನೆ. ಇಂದ್ರದೇವರ ಭಯವನ್ನು ಬಿಡು. ಎಲ್ಲಾ ದೇವತೆಗಳ ಆಯುಧವನ್ನೂ ನಾಶಮಾಡುವೆನು' ಎಂದರು.

ಮರುತ್ತರಾಜನು 'ಘೋರವಾದ ಶಬ್ದವು ಕೇಳಿಸುತ್ತದೆ. ವಜ್ರಾಯುಧದ ಶಬ್ದವೆಂದು ತಿಳಿಯುತ್ತದೆ. ನನ್ನ ಮನಸ್ಸಿಗೆ ತುಂಬಾ ಭಯವಾಗುತ್ತದೆ' ಎಂದನು.

ಸಂವರ್ತರು 'ವಜ್ರದ ಭಯವನ್ನು ಬಿಡು. ವಜ್ರವು ಗಾಳಿಯಾಗಿ ಹೋಗಲಿ. ಭಯವನ್ನು ಬಿಟ್ಟು ಬೇರೊಂದು ವರವನ್ನು ಕೇಳು. ತಪಸ್ಸಿನ ಸಾಮರ್ಥ್ಯದಿಂದ ನಿನ್ನ ಯಾವ ಅಭೀಷ್ಟವನ್ನು ಪೂರೈಸಲಿ' ಎಂದರು.

ರಾಜನು 'ಇಂದ್ರದೇವರು ಇಲ್ಲಿಗೆ ಬರಲಿ. ಯಜ್ಞದಲ್ಲಿ ಹವಿರ್ಭಾಗವನ್ನು ಸ್ವೀಕರಿಸಲು. ಎಲ್ಲಾ ದೇವತೆಗಳೂ ತಮ್ಮ ತಮ್ಮ ಹವಿಸ್ಸನ್ನು ಸ್ವೀಕರಿಸಲಿ' ಎಂದನು.

ಸಂವರ್ತರು 'ನೋಡು ನಾನು ಮಂತ್ರದಿಂದ ಆಹ್ವಾನ ಮಾಡಲು ಇಂದ್ರದೇವತೆಗಳು ಎಲ್ಲಾ ದೇವತೆಗಳಿಂದಲೂ ಸಹಿತರಾಗಿ ಸ್ತೋತ್ರಮಾಡಲ್ಪಡುತ್ತಾ ಬರುತ್ತಿದ್ದಾರೆ' ಎಂದರು.

ಆಗ ಇಂದ್ರದೇವರು ರಥದಲ್ಲಿ ಕೂತುಕೊಂಡು ಎಲ್ಲಾ ದೇವತೆಗಳಿಂದ ಸಹಿತರಾಗಿ ಯಾಗದಲ್ಲಿ ಸೋಮಪಾನವನ್ನು ಮಾಡಲಿಕ್ಕೆ ಬಂದರು. ದೇವತೆಗಳಿಂದ ಸಹಿತರಾಗಿ ಬರುತ್ತಿರುವ ಇಂದ್ರದೇವರನ್ನು ನೋಡಿ ಮರುತ್ತರಾಜನು ಪುರೋಹಿತರಿಂದ ಸಹಿತನಾಗಿ ಎದುರುಗೊಂಡು ಕರಕೊಂಡು ಬಂದು ಶಾಸ್ತ್ರೋಕ್ತರೀತಿಯಿಂದ ಪೂಜೆ ಮಾಡಿದನು.

ಸಂವರ್ತರು 'ದೇವೇಂದ್ರ! ಬರಬೇಕು! ನೀವು ಬಂದರೆ ತಾನೇ ಈ ಯಜ್ಞವು ಶೋಭಿಸುತ್ತದೆ. ನಾನು ಕೊಡುವ ಸೋಮವನ್ನು ಪಾನಮಾಡಬೇಕು' ಎಂದರು.

ಮರುತ್ತರಾಜನು 'ಶಾಂತವಾದ ದೃಷ್ಟಿಯಿಂದ ನನ್ನನ್ನು ನೋಡಬೇಕು. ನಮಗೆ ನಮಸ್ಕಾರವು. ನನ್ನ ಯಜ್ಞವು ಸಿದ್ಧಿಸಿತು. ನಾನು ಜೀವಿಸಿದ್ದು ಸಾರ್ಥಕವಾಯಿತು. ಇವರು ಬೃಹಸ್ಪತ್ಯಾಚಾರ್ಯರ ತಮ್ಮಂದಿರು ಯಜ್ಞವನ್ನು ಮಾಡಿಸುತ್ತಾರೆ' ಎಂದರು.

ಇಂದ್ರದೇವರು 'ನಿನ್ನ ಗುರುವಾದ ತಪಸ್ವಿಯಾದ ಮಹಾತೇಜಸ್ವಿಯಾದ ಬೃಹಸ್ಪತ್ಯಾಚಾರ್ಯರ ತಮ್ಮಂದಿರಾದ ಇವರನ್ನು ನಾನು ತಿಳಿದಿದ್ದೇನೆ. ಇವರ ಆಹ್ವಾನದಿಂದಲೇ ನಾನು ಬಂದಿರುವೆನು. ಈಗ ನಿನ್ನ ಮೇಲೆ ಪ್ರೀತಿಯೇ ಉಂಟಾಗಿದೆ. ಕೋಪವು ನಷ್ಟವಾಗಿದೆ' ಎಂದರು.

ಸಂವರ್ತರು 'ದೇವೇಂದ್ರ! ನೀವು ಸಂತುಷ್ಟರಾಗಿದ್ದರೆ ಯಜ್ಞದ ವಿಧಾನವನ್ನು ನೀವೇ ಮಾಡಿಸಬೇಕು. ಎಲ್ಲಾ ಭಾಗಗಳನ್ನೂ ಮಾಡಿರಿ. ಎಲ್ಲಾ ಜನರಿಗೂ ತಿಳಿಯಲಿ' ಎಂದರು.

ಆಗ ಇಂದ್ರದೇವರು ದೇವತೆಗಳೊಡನೆ 'ಸಭೆಗಳನ್ನೂ ಮಾಡಿರಿ. ಗಂಧರ್ವರೂ ಅಪ್ಸರಸ್ತ್ರೀಯರೂ ನರ್ತನಮಾಡಲಿಕ್ಕೆ ಸ್ಥಳಗಳನ್ನು ಮಾಡಿರಿ. ಬೇಕಾದದ್ದನ್ನೆಲ್ಲಾ ಸರಿಮಾಡಿರಿ' ಎಂದರು. ಇಂದ್ರದೇವರ ಆಜ್ಞೆಯಂತೆ ದೇವತೆಗಳು ಎಲ್ಲವನ್ನೂ ಸರಿಪಡಿಸಿದರು.

ತರುವಾಯ ಸತ್ಕೃತರಾದ ಇಂದ್ರದೇವರು ರಾಜನೊಡನೆ 'ರಾಜನ್! ನಾನೂ ಮತ್ತೂ ಎಲ್ಲಾ ದೇವತೆಗಳೂ ನಿನ್ನ ಹವಿಸ್ಸನ್ನು ಸ್ವೀಕರಿಸುವೆವು ಎಂದರು. ತರುವಾಯ ಮಹಾವೈಭವದಿಂದ ಯಜ್ಞವು ನಡೆಯಿತು. ಆ ಯಜ್ಞದಲ್ಲಿ ದೇವತೆಗಳು ಅನ್ನಗಳನ್ನು ಬಡಿಸಿದರು. ಇಂದ್ರದೇವರು ಬ್ರಾಹ್ಮಣರಿಂದ ಸತ್ಕೃತರಾಗಿ ಸದಸ್ಯರಾಗಿದ್ದರು. ಸಂವರ್ತರು ಎರಡನೇ ಅಗ್ನಿಯಂತೆ ಯಜ್ಞಶಾಲೆಯಲ್ಲಿ ಪ್ರಕಾಶಿಸುತ್ತಿದ್ದರು. ಮಂತ್ರದಿಂದ ದೇವತೆಗಳನ್ನು ಆಹ್ವಾನಮಾಡಿ ಹವಿರ್ಭಾಗಗಳನ್ನು ಕೊಟ್ಟರು.

ತರುವಾಯ ಇಂದ್ರದೇವರೂ ಎಲ್ಲಾ ದೇವತೆಗಳೂ ಸೋಮಪಾನವನ್ನು ಮಾಡಿ ಸಂತೋಷಹೊಂದಿ ರಾಜನಿಂದ ಅನುಜ್ಞೆಯನ್ನು ಹೊಂದಿ ಹೊರಟು ಹೋದರು.

ರಾಜನು ಬಂಗಾರದ ರಾಶಿಗಳನ್ನೇ ಬ್ರಾಹ್ಮಣರಿಗೆ ದಾನಮಾಡಿದನು. ಬಹಳವಾದ ಬಂಗಾರವನ್ನು ಅಲ್ಲಿಯೇ ಬಿಟ್ಟು ಗುರುಗಳಿಂದ ಅನುಜ್ಞೆಯನ್ನು ಪಡೆದು ಬಂದು ರಾಜ್ಯಭಾರ ಮಾಡುತ್ತಾ ಇದ್ದನು.



# ಶ್ವೇತಕಿರಾಜನ ಕಥೆ [1]

ಇಂದ್ರದೇವರಂತೆ ಬಲಪರಾಕ್ರಮಶಾಲಿಯಾದ ಶ್ವೇತಕಿ ಎಂದು ಹೆಸರುಳ್ಳ ಪ್ರಸಿದ್ಧನಾದ ರಾಜನೊಬ್ಬನಿದ್ದನು. ಅವನು ಬಹುಯಾಗಗಳನ್ನು ಮಾಡುತ್ತಿದ್ದನು. ಅವನಂತೆ ಯಾಗಮಾಡುವವರೇ ಇರಲಿಲ್ಲ. ಒಂದು ಸಲ ಅವನು ಹನ್ನೆರಡು ವರ್ಷಕಾಲ ದೀಕ್ಷಿತನಾಗಿ ಯಾಗವನ್ನು ಮಾಡಿದನು. ಅವನಿಗೆ ದಿನೇದಿನೇ ಯಾಗಮಾಡುವುದರಲ್ಲಿ ಹೊರತು ಬೇರೆ ಕಾರ್ಯಗಳಲ್ಲಿ ಮನಸ್ಸೇ ಹೋಗಲಾರದು. ಪುರೋಹಿತರಿಂದ ಕೂಡಿಕೊಂಡು ಅನೇಕ ಯಾಗಗಳನ್ನು ಮಾಡಿದನು. ತರುವಾಯ ಈರೀತಿ ಎಡೆಬಿಡದೆ ಯಾಗಗಳನ್ನು ಮಾಡಿದ ಕಾರಣ ಯಾಗವನ್ನು ಮಾಡಿಸುವ ಋತ್ವಿಕ್‌ಗಳಿಗೆ ಹೊಗೆಯಿಂದ ಕಣ್ಣು ಉರಿಯಲಿಕ್ಕೆ ಆರಂಭವಾಯಿತು. ಅವರ ಕಣ್ಣೇ ಕೆಟ್ಟುಹೋಯಿತು. ಅವರು ಅವನ ಯಾಗಕ್ಕೆ ಬರಲಿಲ್ಲ. ತರುವಾಯ ಶ್ವೇತಕಿರಾಜನು ಅವರ ಅನುಮತಿಯನ್ನು ಪಡೆದು ಬೇರೆ ಬ್ರಾಹ್ಮಣರಿಂದ ತಾನು ಆರಂಭಿಸಿದ ಯಾಗವನ್ನು ಮುಗಿಸಿದನು.

ಹೀಗೆಯೇ ಇರುತ್ತಿರಲು, ಕೆಲವು ಕಾಲವಾದ ಮೇಲೆ ರಾಜನಿಗೆ ನೂರುವರ್ಷಕಾಲ ಎಡೆಬಿಡದೆ ಯಾಗವನ್ನು ಮಾಡಬೇಕೆಂದು ಆಸೆಯುಂಟಾಯಿತು. ಅದಕ್ಕಾಗಿ ರಾಜನು ಬಹಳ ಪ್ರಯತ್ನ ಮಾಡಿದನು. ಬ್ರಾಹ್ಮಣರಿಗೆ ಹೋಗಿ ಹೇಳಿದನು. ಒಬ್ಬ ಬ್ರಾಹ್ಮಣರೂ ಅವನಿಗೆ ಯಾಗಮಾಡಿಸಲಿಕ್ಕೆ ಕೇಳಲಿಲ್ಲ. ರಾಜನು ನಮಸ್ಕಾರಮಾಡಿದನು. ಸಮಾಧಾನಪಡಿಸಿದನು. ತುಂಬಾ ಹಣವನ್ನು ಕೊಡುವೆನೆಂದನು. ಏನೇನು ಹೇಳಿದರೂ ಋಷಿಗಳು ಆ ರಾಜನಿಗೆ ಯಾಗವನ್ನು ಮಾಡಿಸಲಿಕ್ಕೆ ಒಪ್ಪಲಿಲ್ಲ.

ತರುವಾಯ ರಾಜನು ಸ್ವಲ್ಪ ಕೋಪಿಸಿಕೊಂಡು ಆಶ್ರಮಗಳಲ್ಲಿ ಇದ್ದ ಋಷಿಗಳ ಹತ್ತಿರ 'ಋಷಿಗಳೇ! ನಾನು ಜಾತಿಭ್ರಷ್ಟನಾಗಿದ್ದರೆ, ಅಥವಾ ನಿಮ್ಮ ಸೇವೆಯನ್ನು ಮಾಡದೆ ಇದ್ದವನಾಗಿದ್ದರೆ, ನನ್ನನ್ನು ನೀವು ಪರಿತ್ಯಾಗ ಮಾಡಬಹುದಿತ್ತು. ನಾನು ಹಾಗೊಂದೂ ಮಾಡದೆ ಇರುವಾಗ ನೀವು ನನಗೆ ಇರುವ ಯಜ್ಞದಲ್ಲಿ ಶ್ರದ್ಧೆಯನ್ನು ನಾಶಮಾಡುವುದು ಸರಿಯಲ್ಲ. ನನ್ನನ್ನು ಇಂತಹ ಸಮಯದಲ್ಲಿ ನೀವು ಕೈಬಿಡುವುದು ಸರಿಯಲ್ಲ. ನಾನು ನಿಮ್ಮನ್ನೇ ನಂಬಿದ್ದೇನೆ. ನೀವು ನನ್ನಲ್ಲಿ ಅನುಗ್ರಹಮಾಡಬೇಕು' ಎಂದು ಹೇಳಿದನು. ಮತ್ತು 'ನಾನು ನಿಮ್ಮನ್ನು ತುಂಬಾ ಕೇಳಿಕೊಳ್ಳುತ್ತೇನೆ. ಆದರೂ

---

1. ಮಭಾ. ಆ.ಪ. ಅ-222

ನೀವು ನನ್ನಲ್ಲಿ ದ್ವೇಷದಿಂದ ಪರಿತ್ಯಾಗ ಮಾಡುವ ಪಕ್ಷದಲ್ಲಿ ಬೇರೆ ಋಷಿಗಳ ಹತ್ತಿರ ಯಾಗಮಾಡಿಸಬೇಕೆಂದು ಹೇಳುವೆನು' ಎಂದು ಹೇಳಿ ಸುಮ್ಮನೆ ಆದನು.

ಋಷಿಗಳು 'ರಾಜನೇ! ನಿನಗೆ ಯಾಗ ಮಾಡುವ ಆಸೆಯು ತೀರುವಂತೆಯೇ ಇಲ್ಲ. ನಮ್ಮಿಂದ ಆಗಲಾರದು. ನಮ್ಮ ಕಣ್ಣೆಲ್ಲಾ ಕೆಟ್ಟುಹೋಯಿತು. ನಮಗೆ ತುಂಬಾ ಶ್ರಮವಾಗಿದೆ. ನಮ್ಮನ್ನು ಬಿಟ್ಟುಬಿಡು. ನಿನಗೆ ತುಂಬಾ ಅವಸರದಿಂದ ಯಾಗವಾಗಬೇಕಾಗಿದ್ದರೆ ರುದ್ರದೇವರ ಬಳಿಗೆ ಹೋಗು. ಅವರು ನಿನಗೆ ಯಾಗಮಾಡಿಸುವರು' ಎಂದು ಕೋಪಿಸಿಕೊಂಡು ಹೇಳಿದರು.

ಈರೀತಿಯಾಗಿ ಋಷಿಗಳ ಮಾತನ್ನು ಕೇಳಿ ರಾಜನು ಕೋಪಿಸಿಕೊಂಡನು. ಕೈಲಾಸಕ್ಕೆ ಹೋಗಿ ಉಪವಾಸಮಾಡಿ ಬಹುಕಾಲ ತಪಸ್ಸು ಮಾಡಿದನು. ಆಮೇಲೆ ಹನ್ನೆರಡು ದಿವಸಕ್ಕೊಂದು ಸಲ, ಹದಿನಾರದಿವಸಕ್ಕೊಂದು ಸಲ ಗೆಡ್ಡೆ ಹಣ್ಣುಗಳನ್ನು ಸ್ವೀಕರಿಸುತ್ತಾ, ಕೈಮೇಲೆ ಎತ್ತಿಕೊಂಡು, ಕಣ್ಣುಮುಚ್ಚದೆ ಆರುತಿಂಗಳು ತಪಸ್ಸು ಮಾಡಿದನು. ತರುವಾಯ ರುದ್ರದೇವರು ಪ್ರತ್ಯಕ್ಷವಾಗಿ ಬೇಕಾದ ವರವನ್ನು ಕೇಳಿಕೊ ಎಂದರು. ರಾಜನು ರುದ್ರದೇವರಿಗೆ ನಮಸ್ಕಾರವನ್ನು ಮಾಡಿ, ಸರ್ವಲೋಕ ನಮಸ್ಕೃತರಾದ ನೀವು ಸಂತುಷ್ಟರಾಗಿದ್ದರೆ ತಾವು ನನ್ನಿಂದ ಯಾಗವನ್ನು ಮಾಡಿಸಬೇಕು ಎಂದನು. ಅದನ್ನು ಕೇಳಿ ರುದ್ರದೇವರು ಪ್ರೀತರಾಗಿ ಮಂದಹಾಸ ವನ್ನು ಮಾಡುತ್ತಾ 'ನಾವೆಲ್ಲ ಯಾಗವನ್ನು ಮಾಡಿಸುವಂತೆ ಇಲ್ಲ. ನೀನಾದರೂ ಮಹಾತಪಸ್ಸನ್ನು ಮಾಡಿರುವಿ. ನಾನು ಹೇಳಿದ ರೀತಿ ಮಾಡಿದರೆ ನಿನಗೆ ಯಾಗವನ್ನು ಮಾಡಿಸುವೆನು. ನೀನು ಹನ್ನೆರಡುವರ್ಷಕಾಲ ಬ್ರಹ್ಮಚಾರಿಯಾಗಿ ಇದ್ದುಕೊಂಡು ಎಡಬಿಡದೆ ತುಪ್ಪದ ಧಾರೆಯನ್ನು ಅಗ್ನಿಗೆ ಸುರಿಯುವಂತೆ ಮಾಡು. ಆಮೇಲೆ ನನ್ನಿಂದ ಬೇಕಾದ ವರವನ್ನು ಪಡೆಯುವಿ' ಎಂದರು.

ಶ್ವೇತಕಿರಾಜನು ರುದ್ರದೇವರು ಹೇಳಿದಂತ ಮಾಡಿದನು. ಹನ್ನೆರಡು ವರ್ಷ ವಾಗಲು ರುದ್ರದೇವರು ಬಂದರು. ಪರಮಪ್ರೀತಿಯುಳ್ಳವರಾಗಿ ರಾಜ ನೊಡನೆ 'ರಾಜನ್! ನೀನು ಮಾಡಿದ ಕಾರ್ಯದಿಂದ ನಾನು ಬಹಳಸಂತೋಷವುಳ್ಳವ ನಾದೆನು. ಯಾಗಮಾಡಿಸುವುದು ಬ್ರಾಹ್ಮಣರಿಗೆ ಶಾಸ್ತ್ರದಲ್ಲಿ ವಿಹಿತವಾದದ್ದು. ಆದುದರಿಂದ ನಾನು ಸ್ವಯಂ ಯಾಗವನ್ನು ಮಾಡಿಸುವುದಿಲ್ಲ. ನನ್ನ ಅಂಶಭೂತರಾದ ದುರ್ವಾಸ ಎಂಬ ಋಷಿಗಳು ಭೂಮಿಯಲ್ಲಿ ಇದ್ದಾರೆ. ಮಹಾತೇಜಸ್ವಿಯಾದ ಅವರು ನನ್ನ ಆಜ್ಞೆಯಿಂದ ಮಾಡಿಸುವರು. ಯಾಗಕ್ಕೆ ಬೇಕಾದ ಸಾಮಗ್ರಿಗಳು ಸಂಗ್ರಹಿಸು ಎಂದರು.

ರುದ್ರದೇವರು ಹೇಳಿದ ಮಾತನ್ನು ಕೇಳಿ ರಾಜನು ಊರಿಗೆ ಬಂದು ಸಾಮಗ್ರಿಗಳನ್ನು ಸಿದ್ಧಪಡಿಸಿದನು. ಪುನಃ ರುದ್ರದೇವರಿದ್ದಲ್ಲಿಗೆ ಬಂದು ಕೈಮುಗಿದು ನಾನು ಯಾಗಕ್ಕೆ ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಿದ್ದೇನೆ. ತಮ್ಮ ಅನುಗ್ರಹದಿಂದ ನನಗೆ ನಾಳೆಯೇ ಯಾಗದಲ್ಲಿ ದೀಕ್ಷಾ ಆರಂಭವಾಗಬೇಕು ಎಂದು ಕೇಳಿಕೊಂಡನು. ಆ ಮಾತನ್ನು ಕೇಳಿ ರುದ್ರದೇವರು ದುರ್ವಾಸರನ್ನು ಕರೆದು, ಶ್ವೇತಕಿ ಎಂಬ ರಾಜನು ಮಹಾನುಭಾವನಾಗಿದ್ದಾನೆ. ನನ್ನ ಆಜ್ಞೆಯಿಂದ ಅವನಿಗೆ ಯಾಗವನ್ನು ಮಾಡಿಸು ಎಂದರು. ದುರ್ವಾಸರು ರುದ್ರದೇವರೊಡನೆ ಹಾಗೆಯೇ ಆಗಲಿ ಎಂದರು.

ತರುವಾಯ ಶಾಸ್ತ್ರದಲ್ಲಿ ಹೇಳಿದ ರೀತಿಯಾಗಿಯೇ ಮಹಾನುಭಾವನಾದ ಶ್ವೇತಕಿರಾಜನ ಸತ್ರಯಾಗವು ನಡೆಯಿತು. ರಾಜನು ಬಹುದಕ್ಷಿಣೆಯನ್ನು ಕೊಟ್ಟನು. ಮಹಾನುಭಾವನಾದ ಆ ರಾಜನ ಯಾಗವು ಮುಗಿದ ಮೇಲೆ ದುರ್ವಾಸರಿಂದ ಅನುಜ್ಞೆಯನ್ನು ಪಡೆದು, ಋತ್ವಿಕ್‌ಗಳು ಹೊರಟುಹೋದರು. ರಾಜನೂ ತನ್ನ ಊರಿಗೆ ಹೊರಟುಹೋದನು. ವೇದಶಾಸ್ತ್ರಪಾರಂಗತರಾದ ಬ್ರಾಹ್ಮಣರು ಊರ ಜನರು ಅವನನ್ನು ತುಂಬಾ ಹೊಗಳಿದರು. ಈ ಪ್ರಕಾರವಾಗಿ ಇದ್ದ ಶ್ವೇತಕಿರಾಜನು ಬಹುಕಾಲವಾದ ಮೇಲೆ ತನಗೆ ಯಾಗವನ್ನು ಮಾಡಿಸಿದ ಋತ್ವಿಕ್‌ಗಳಿಂದ ಕೂಡಿಕೊಂಡು ಸ್ವರ್ಗಕ್ಕೆ ಹೋದನು.

ಆ ರಾಜನ ಸತ್ರಯಾಗದಲ್ಲಿ ಅಗ್ನಿದೇವರು ಹನ್ನೆರಡು ವರ್ಷಕಾಲ ಸರ್ವದಾ ತುಪ್ಪದ ಧಾರೆಯನ್ನು ಸ್ವೀಕರಿಸಿದನು. ಇದರಿಂದ ಅವರಿಗೆ ಅಜೀರ್ಣವಾಗಿ ಬಲವಿಲ್ಲದಂತಾಯಿತು. ಬೆಳ್ಳಗೆ ಬಣ್ಣವಾಯಿತು. ಚೆನ್ನಾಗಿ ಜ್ವಲಿಸಲಿಲ್ಲ. ತುಂಬಾ ಶ್ರಮವುಂಟಾಯಿತು. ಇದಕ್ಕೆ ಇನ್ನೊಂದು ಕಾರಣವೂ ಇದೆ. ಅಗ್ನಿದೇವರು ದೇವತೆಗಳೊಡನೆ 'ನಾನು ನಿಮಗೆ ಆಹುತಿಗಳನ್ನು ತಂದುಕೊಡುವುದಕ್ಕೆ ಸ್ವಲ್ಪ ಸಂಬಳವನ್ನು ಹೆಚ್ಚಿಸಬೇಕು. ಅಂದರೆ ನನಗೆ ಪ್ರಯಾಜ ಅನುಯಾಜ ಎಂಬ ಎರಡು ಆಹುತಿಗಳು ನನಗೆ ಸಿಗುವಂತೆ ಮಾಡಬೇಕು ಎಂದು ಕೇಳಿಕೊಂಡರು. ಅದಕ್ಕೆ ದೇವತೆಗಳು ಹಾಗೆಯೇ ಆಗಲಿ ಎಂದು ಹೇಳಿ ನಿನಗೆ ಬಲವು ಕಡಿಮೆಯಾಗಲಿ ಎಂದು ಶಾಪವನ್ನು ಕೊಟ್ಟರು. ಆ ಕಾಲಕ್ಕೆ ಸರಿಯಾಗಿ ಶ್ವೇತಕಿರಾಜನ ಸತ್ರಯಾಗವೂ ನಡೆಯಿತು. ಅಜೀರ್ಣವಾಯಿತು. ಇದರಿಂದ ಅಗ್ನಿದೇವರು ಶ್ರಮವುಳ್ಳವರಾಗಿ ಬ್ರಹ್ಮದೇವರ ಬಳಿಗೆ ಹೋಗಿ ಹೇಳಿಕೊಂಡರು. ಬ್ರಹ್ಮದೇವರು ಖಾಂಡವವನವನ್ನು ಭಕ್ಷಿಸಿದರೆ ಬಲಬರುವುದು ಎಂದರು. ತರುವಾಯ ಅಗ್ನಿದೇವರು ಅರ್ಜುನನ ಸಹಾಯದಿಂದ ಖಾಂಡವವನವನ್ನು ಭಕ್ಷಿಸಿ ಬಲಪೂರ್ತಿಯುಳ್ಳವರಾದರು.

# ವ್ಯುಶಿತಾಶ್ವ[1]

ಪೂರ್ವದಲ್ಲಿ ವ್ಯುಶಿತಾಶ್ವ ಎಂದು ಪ್ರಸಿದ್ಧನಾದ ಒಬ್ಬ ರಾಜನಿದ್ದನು. ಅವನು ಅತ್ಯಂತ ಧರ್ಮಿಷ್ಠನಾಗಿದ್ದನು. ಪೂರುರಾಜನ ವಂಶದಲ್ಲಿ ಜನಿಸಿದ್ದನು. ಆ ರಾಜನು ಯಜ್ಞವನ್ನು ಮಾಡಿದಾಗ ಇಂದ್ರಾದಿದೇವತೆಗಳೂ ದೇವರ್ಷಿಗಳೂ ಬಂದಿದ್ದರು. ಇಂದ್ರದೇವರು ಸೋಮಪಾನವನ್ನು ಮಾಡಿ ಬಹುತೃಪ್ತಿಯನ್ನು ಹೊಂದಿದರು. ಬ್ರಾಹ್ಮಣರು ದಕ್ಷಿಣೆಯಿಂದ ತೃಪ್ತರಾದರು. ಆ ಮಹಾರಾಜನು ಮಾಡಿದ ಯಜ್ಞದಲ್ಲಿ ದೇವತೆಗಳೂ ಬ್ರಹ್ಮರ್ಷಿಗಳೂ ತಾವೇ ಕರ್ಮಗಳನ್ನು ಮಾಡಿದರು. ಇದರಿಂದ ವ್ಯುಶಿತಾಶ್ವರಾಜನು ಎಲ್ಲಾ ಮನುಷ್ಯರನ್ನೂ ಮೀರಿದನು. ಆ ರಾಜನು ತಾನು ಮಾಡಿದ ಅಶ್ವಮೇಧಯಾಗದಲ್ಲಿ ಪೂರ್ವ ದಕ್ಷಿಣ ಪಶ್ಚಿಮ ಉತ್ತರದಿಕ್ಕಿನ ಎಲ್ಲಾ ರಾಜರನ್ನೂ ಜಯಿಸಿದ್ದನು. ಮಹಾಪ್ರತಾಪಶಾಲಿಯಾಗಿದ್ದನು. ಆ ಮಹಾರಾಜನು ಹತ್ತು ಆನೆಗಳ ಬಲವುಳ್ಳವನಾಗಿದ್ದನು. ಅವನು ಸಮುದ್ರಪರ್ಯಂತ ಸಮಸ್ತಭೂಮಿಯನ್ನೂ ಜಯಿಸಿ, ಪ್ರಜೆಗಳನ್ನು ತನ್ನ ಮಕ್ಕಳನ್ನು ರಕ್ಷಿಸುವಂತೆ ರಕ್ಷಿಸಿದನು. ಅನೇಕ ಯಾಗಗಳನ್ನು ಮಾಡಿ ಬ್ರಾಹ್ಮಣರಿಗೆ ಬಹುದಕ್ಷಿಣೆಯನ್ನು ಕೊಟ್ಟನು.

ಆ ರಾಜನಿಗೆ ಕಕ್ಷೀವಾನ್ ಎಂಬ ರಾಜನ ಮಗಳಾದ ಭದ್ರಾ ಎಂಬ ಹೆಂಡತಿಯಿದ್ದಳು. ಅವಳು ಪರಮಸುಂದರಿಯಾಗದ್ದಳು. ದಂಪತಿಗಳು ಪರಸ್ಪರ ಅತ್ಯಂತ ಸ್ನೇಹದಿಂದ ಇದ್ದರು. ರಾಜನು ತನ್ನ ಪತ್ನಿಯನ್ನು ವಿಹಾರಮಾಡುತ್ತಾ ಇದ್ದು ಕ್ಷಯರೋಗವುಳ್ಳವನಾದನು. ಆ ರೋಗದಲ್ಲಿ ರಾಜನು ಮರಣವನ್ನು ಹೊಂದಿದನು. ಈ ರೀತಿಯಾಗಿ ಆ ಮಹಾರಾಜನು ಮೃತ್ಯುವಶನಾಗಲು ಅವನ ಹೆಂಡತಿಯಾದ ಭದ್ರೆಯು ತುಂಬಾ ವಿಲಾಪವನ್ನು ಮಾಡಿದಳು.

'ಸ್ವಾಮಿಯೇ! ಯಾವ ಸ್ತ್ರೀಯು ಗಂಡನಿಲ್ಲದೆ ಬದುಕುವಳೋ ಅವಳು ಬಹಳ ದುಃಖದಿಂದ ಜೀವಿಸುವಳು. ಪತಿಯಿಲ್ಲದೆ ಸತಿಗೆ ಮರಣವೇ ಲೇಸು. ನೀವು ಹೋದಲ್ಲಿಗೆ ನಾನೂ ಬರುವೆನು. ಕರಕೊಂಡು ಹೋಗಿರಿ. ನೀವಿಲ್ಲದೆ ಒಂದು ಕ್ಷಣವೂ ನಾನು ಇರಲಾರೆನು. ನೀವು ಹೋಗುವಲ್ಲಿಗೆ ನಾನು ನಿಮ್ಮ ಹಿಂದೆಯೇ ಬರುವೆನು. ನೆರಳಿನಂತೆ ನಿಮ್ಮನ್ನು ಅನುಸರಿಸಿ ಬರುವೆನು. ನಿಮಗೆ ನಿತ್ಯವೂ ನಾನು ಪ್ರಿಯಹಿತವನ್ನು ಮಾಡುವವಳು. ಇನ್ನು ನಿಮ್ಮಿಂದ ರಹಿತಳಾದ ನನಗೆ ಹೃದಯವನ್ನು ಒಣಗಿಸುವ ಅನೇಕ ಕಷ್ಟಗಳೂ ಮನೋವ್ಯಥೆಗಳೂ ಬಂದು ಸೇರುವುವು.

1. ಮಭಾ. ಆಪ. ಅ-220

ನಿರ್ಭಾಗ್ಯಳಾದ ನಾನು ಜನ್ಮಾಂತರದಲ್ಲಿ ದಂಪತಿಗಳನ್ನು ವಿಯೋಗಪಡಿಸಿರುವೆನು. ಆದುದರಿಂದಲೇ ಈರೀತಿಯಾಗಿ ನನಗೆ ನಿಮ್ಮ ವಿರಹವು ಏರ್ಪಟ್ಟಿತು. ಪತಿಯಿಲ್ಲದೆ ಯಾವ ಸ್ತ್ರೀಯು ಒಂದು ಮುಹೂರ್ತವಾದರೂ ಜಯಿಸುವಳೋ ಅವಳು ನರಕದಲ್ಲಿರುವವರಂತೆ ಬಹುದುಃಖದಿಂದ ಜೀವಿಸುವಳು. ಹಿಂದಿನ ಜನ್ಮಗಳಲ್ಲಿ ಮಾಡಿದ ಮಹಾಪಾಪಗಳಿಂದ ಈ ವಿಧವಾದ ಮಹಾದುಃಖವು ಬಂದು ಸೇರಿತು. ಈ ದಿವಸವಾರಂಭಿಸಿ ನಿಮ್ಮನ್ನು ನೋಡಬೇಕೆಂಬ ಆಸೆಯಿಂದ ದುಃಖದಿಂದ ಧರ್ಭೆಗಳ ಮೇಲೆ ಮಲಗಿರುವೆನು. ಸ್ವಾಮಿಯೇ! ನನಗೆ ನಿಮ್ಮ ದರ್ಶನವನ್ನು ಕೊಡಿರಿ. ಅಳುತ್ತಾ ಇರುವ ದುಃಖದಿಂದ ಇರುವ ನನ್ನನ್ನು ರಕ್ಷಿಸಿರಿ'.

ಈಪ್ರಕಾರವಾಗಿ ಆ ಭದ್ರಾ ಎಂಬ ಸ್ತ್ರೀಯು ಬಹಳವಾಗಿ ವಿಲಾಪವನ್ನು ಮಾಡಿದಳು. ಆ ಗಂಡನ ಶವವನ್ನು ಅಲಂಗಿಸಿಕೊಂಡೇ ಇದ್ದಳು. ಆಗ ಅವಳಿಗೆ ಮಾತು ಮಾತ್ರ ಕೇಳಿಸಿತು. 'ಭದ್ರೆ! ಏಳು. ನಿನಗೆ ವರವನ್ನು ಕೊಡುವೆನು. ನಿನ್ನಲ್ಲಿ ನಾನು ಮಕ್ಕಳನ್ನು ಉಂಟುಮಾಡುವೆನು. ನೀನು ಋತುಸ್ನಾನ ಮಾಡಿದಮೇಲೆ ಎಂಟನೆಯ ದಿವಸವೋ ಅಥವಾ ಹದಿನಾಲ್ಕನೇ ದಿವಸವೋ ನಿನ್ನ ಶಯನದಲ್ಲಿ ನನ್ನ ಶವದೊಡನೆ ಶಯನವನ್ನು ಮಾಡು'.

ಪತಿವ್ರತೆಯಾದ ಭದ್ರೆಯು ಈ ಮಾತನ್ನು ಕೇಳಿ, ಸತ್ಪುತ್ರರನ್ನು ಪಡೆಯಬೇಕೆಂಬ ಆಸೆಯಿಂದ ಹಾಗೆಯೇ ಮಾಡಿದಳು. ಅವಳು ಆ ಶವದಿಂದಲೇ ಶಾಲ್ವ ಎಂದು ಹೆಸರುಳ್ಳ ಮೂರು ಮಕ್ಕಳನ್ನೂ ಮದ್ರ ಎಂಬ ಹೆಸರುಳ್ಳ ನಾಲ್ಕು ಮಕ್ಕಳನ್ನು ಹಡೆದಳು.



## ಚಂದ್ರಹಾಸ [1]

ಕೇರಲದೇಶಕ್ಕೆ ಮೇಧಾವಿ ಎಂಬ ರಾಜನು ಇದ್ದನು. ಇವನು ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದನು. ಅವನಿಗೆ ಮೂಲನಕ್ಷತ್ರದಲ್ಲಿ ಬಹುಭಾಗ್ಯವಂತನಾದ ಒಬ್ಬ ಮಗನು ಹುಟ್ಟಿದನು. ಮಗನು ಹುಟ್ಟಿದ ಕೆಲವು ದಿವಸಗಳಲ್ಲಿಯೇ ಶತ್ರುರಾಜರು ಬಂದು ಯುದ್ಧವನ್ನು ಮಾಡಿ ಮೇಧಾವಿ ರಾಜನನ್ನು ಸಂಹಾರಮಾಡಿದರು. ರಾಜಪತ್ನಿಯು ಗಂಡನು ಮೃತನಾದದ್ದನ್ನು ಕೇಳಿ ಸಹಗಮನ

1. ಜೈ.ಭಾ. ಅ-50 ರಿಂದ 59

ಮಾಡಿದಳು. ತಾಯಿ ತಂದೆಗಳಿಂದ ರಹಿತವಾದ ಆ ಮಗುವನ್ನು ದಾದಿಯು ಕುಂತಲಪುರಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಸಾಕುತ್ತಿದ್ದಳು. ಮಗುವಿಗೆ ಮೂರು ವರ್ಷಗಳಾದವು. ದಾದಿಯು ನಿತ್ಯವೂ ಮಗುವನ್ನು ಮೃತನಾದ ರಾಜನನ್ನು ಸ್ಮರಿಸಿಕೊಂಡು ದುಃಖಪಡುತ್ತಾ ಇದ್ದಳು. ತರುವಾಯ ಆ ದಾದಿಯೂ ಮೃತಳಾದಳು. ಆ ಮಗುವಿಗೆ ಆಗ ಮೂರುವರ್ಷವಾಗಿತ್ತು. ಮಗುವು ಒಳ್ಳೆ ಬೆಳ್ಳಗೆ ಇತ್ತು. ಲಕ್ಷಣಯುಕ್ತವಾಗಿತ್ತು. ಎಡಪಾದದಲ್ಲಿ ಮಾತ್ರ ಆರು ಬೆರಳುಗಳಿದ್ದವು. ಕೆಲವು ಹೆಂಗಸರು ಸುಂದರವಾದ ಆ ಮಗುವನ್ನು ಸ್ವಲ್ಪ ದಿವಸ ಬೆಳೆಸಿದರು. ಮಗುವಿಗೆ ಐದು ವರ್ಷಗಳಾದವು.

ತರುವಾಯ ಅವನು ಇಚ್ಛಾನುಸಾರವಾಗಿ ಸಂಚರಿಸುತ್ತಿದ್ದನು. ರಸ್ತೆಯಲ್ಲಿ ಹುಡುಗರೊಡನೆ ಆಡುತ್ತಿದ್ದನು. ಅವನಿಗೆ ಕೆಲವು ಹೆಂಗಸರು ಸ್ನಾನ ಮಾಡಿಸುವರು. ಕೆಲವರು ಗಂಧ ಹಚ್ಚುವರು. ಕೆಲವರು ಭೋಜನ ಮಾಡಿಸುವರು. ಕೆಲವರು ಅಂಗಿ ಕೊಡುವರು. ಕಾಲಿಗೆ ಮೆಟ್ಟನ್ನು ಕೊಡುವರು. ಒಂದು ದಿವಸ ಆ ಬಾಲಕನು ದೈವೇಚ್ಛೆಯಿಂದ ಶಾಂತರಾದ ಅನೇಕ ಮುನಿಗಳಿಂದ ಅಲಂಕೃತವಾದ ಆ ಊರಿನ ಮಂತ್ರಿಯಾದ ಧೃಷ್ಟಬುದ್ಧಿಯ ಮನೆಗೆ ಹೋದನು. ಮುನಿಗಳು ಲಕ್ಷಣಭರಿತನಾದ ಆ ಬಾಲಕನನ್ನು ನೋಡಿ ಆಶ್ಚರ್ಯಪಟ್ಟರು. ಆ ಬಾಲಕನ ಸಹಿತವಾಗಿಯೇ ಮುನಿಗಳು ಭೋಜನ ಮಾಡಿದರು. ಧೃಷ್ಟಬುದ್ಧಿಯು ವಿನಯದಿಂದ ಮುನಿಗಳಿಗೆಲ್ಲಾ ಅರ್ಘ್ಯಪಾದ್ಯಾದಿ ಪೂಜೆಗಳನ್ನು ಮಾಡಿ ನಾನಾವಿಧಗಳಾದ ಭಕ್ಷ್ಯಭೋಜ್ಯಗಳಿಂದ ಭೋಜನ ಮಾಡಿಸಿದನು. ಮುನಿಗಳು ಭೋಜನ ಮಾಡಿದ ಮೇಲೆ ಆಚಮನಮಾಡಿ ಧೃಷ್ಟಬುದ್ಧಿಯು ಕೊಟ್ಟ ಒಳ್ಳೇ ಗಂಧವನ್ನು ಹಚ್ಚಿಕೊಂಡು ಅವನು ಕೊಟ್ಟ ವಸ್ತ್ರಾಭರಣಾದಿಗಳನ್ನು ಸಂತೋಷವುಳ್ಳವರಾಗಿ ಧೃಷ್ಟಬುದ್ಧಿಯೇ! ತುಂಬಾ ಸಂತೋಷವನ್ನು ಹೊಂದಿದೆವು. ಬಹುಕಾಲ ಸುಖವಾಗಿರು. ಈ ಐದು ವರ್ಷದ ಬಾಲಕನು ಯಾರು? ಯಾರ ಮಗನು? ಯಾವ ದೇಶದಿಂದ ಬರುವನು' ಎಂದು ಕೇಳಲು ಧೃಷ್ಟಬುದ್ಧಿಯು 'ಸ್ವಾಮಿ! ನಮ್ಮ ದೇಶದಲ್ಲಿ ಎಷ್ಟು ಅನಾಥಬಾಲಕರಿಲ್ಲ? ಆದುದರಿಂದ ನನಗೆ ಇವನ ಪರಿಚಯವಿಲ್ಲವಲ್ಲಾ ಎಂದನು. ಆಗ ಮುನಿಗಳು ಮಂತ್ರಿ! ಆ ಬಾಲಕನು ಲಕ್ಷಣಯುಕ್ತನಾಗಿರುವನು. ನಿಶ್ಚಯವಾಗಿಯೂ ಈ ರಾಜ್ಯಕ್ಕೆ ಅಧಿಕಾರಿಯಾಗುವನು. ನಿಮ್ಮ ಸಂಪತ್ತನ್ನೆಲ್ಲಾ ರಕ್ಷಿಸುವನು. ಇವನನ್ನು ಚೆನ್ನಾಗಿ ನೋಡಿಕೊಂಡಿರು ಎಂದು ಹೇಳಿ ಹೊರಟು ಹೋದರು.

ಮುನಿಗಳು ಹೋದಮೇಲೆ ಮಂತ್ರಿಯು ಮುನಿಗಳು ಈ ಬಾಲಕನು ಮುಂದೆ

ಈ ರಾಜ್ಯಕ್ಕೆ ರಾಜನಾಗುವನೆಂದು ಹೇಳುವರಲ್ಲಾ! ಏನು ಮಾಡಲಿ? ಎಂದು ಯೋಚಿಸಿ ಚಂಡಾಲರನ್ನು ಕರೆದು ನೀವು ಈ ಬಾಲಕನನ್ನು ಕಾಡಿಗೆ ಕರೆದುಕೊಂಡು ಹೋಗಿ ಕೊಂದು ಬರಬೇಕು. ಇವನನ್ನು ಕೊಂದದ್ದಕ್ಕೆ ಏನಾದರೂ ಗುರುತನ್ನು ತರಬೇಕು. ಹಾಗೆ ಮಾಡಿದರೆ ನಿಮಗೆ ತಂಬಿಗೆ ತುಂಬಾ ಹಾಲು ಕೊಡುವ ಎಮ್ಮೆಗಳನ್ನು ಕೊಡುವೆನು' ಎಂದನು.

ಈರೀತಿಯಾಗಿ ಮಂತ್ರಿಯು ಹೇಳಲು ಚಂಡಾಲರು ಆಡುತ್ತಿದ್ದ ಆ ಬಾಲಕನನ್ನು ಮೋಸಗೊಳಿಸಿ ಕಾಡಿಗೆ ಕರೆದುಕೊಂಡು ಹೋದರು. ಭಯಂಕರವಾದ ಕಾಡಿಗೆ ಹೋಗಿ ಅವನನ್ನು ಸಂಹಾರ ಮಾಡುವುದಕ್ಕಾಗಿ ಕತ್ತಿಯನ್ನು ತೆಗೆದರು. ಆ ಬಾಲಕನು ಪೂರ್ವದಲ್ಲಿ ಎಲ್ಲಾ ಹುಡುಗರೊಡನೆ ಗೋಲಿ ಆಡುವಾಗ ತನಗೆ ಸಿಕ್ಕಿದ ಸಾಲಿಗ್ರಾಮದಿಂದ ಆಡುತ್ತಾ ಇದ್ದನು. ಇತರ ಸಮಯದಲ್ಲಿ ಅದನ್ನು ಬಾಯಲ್ಲೇ ಇಟ್ಟುಕೊಳ್ಳುತ್ತಿದ್ದನು. ಆ ಬಾಲಕನು ಪರಮಾತ್ಮನ ಅನುಗ್ರಹದಿಂದ ಅವನಲ್ಲಿ ಭಕ್ತಿಯುಳ್ಳವನಾಗಿದ್ದನು. ಚಂಡಾಲರು ಕತ್ತಿಯನ್ನು ತೆಗೆದದ್ದನ್ನು ನೋಡಿ 'ಕೃಷ್ಣ! ಕೃಷ್ಣ! ಜಗತ್ಪತೇ! ಚಂಡಾಲರು ಕತ್ತಿಹಿಡಿದುಕೊಂಡು ನನ್ನನ್ನು ಕೊಲ್ಲಲಿಕ್ಕೆ ಬರುತ್ತಿರುವರು. ನೀನೇ ರಕ್ಷಿಸಬೇಕು. ನೀನು ಧ್ರುವರಾಯನನ್ನು ರಕ್ಷಿಸಲಿಲ್ಲವೇ? ಪ್ರಹ್ಲಾದನನ್ನು ಪೊರೆಯಲಿಲ್ಲವೇ? ಗಜೇಂದ್ರನನ್ನು ಬಿಡಿಸಲಿಲ್ಲವೇ? ನೀನು ದೀನನಾಥನಲ್ಲವೇ? ನನಗೆ ತಾಯಿಯಿಲ್ಲ. ತಂದೆಯಿಲ್ಲ. ಬಂಧುಗಳಿಲ್ಲ. ಗೋತ್ರದವರೂ ಇಲ್ಲ. ನೀನು ಕೈಬಿಟ್ಟರೆ ನನ್ನನ್ನು ಇನ್ನಾರು ಕಾಪಾಡುವರು? ಸರ್ವವ್ಯಾಪ್ತನೇ! ನನ್ನನ್ನು ರಕ್ಷಿಸು' ಎಂದು ಭಗವಂತನಲ್ಲಿ ಮೊರೆಯಿಟ್ಟನು. ತರುವಾಯ ಭಗವಂತನು ಚಂಡಾಲರ ಬುದ್ಧಿಯನ್ನು ಮೋಹಿಸಿದನು. ಆಗ ಚಂಡಾಲರು 'ಈ ಬಾಲಕನು ಅತ್ಯಂತ ಸುಂದರನಾಗಿದ್ದಾನೆ. ಧೃಷ್ಟಬುದ್ಧಿಯು ಇವನನ್ನು ಕೊಲ್ಲಲಿಕ್ಕೆ ಹೇಳಿರುವರು. ನಾವು ಜನ್ಮಾಂತರದಲ್ಲಿ ಪಾಪವನ್ನು ಮಾಡಿ ಈಗ ಚಂಡಾಲರಾಗಿ ಹುಟ್ಟಿರುವೆವು. ಈ ಬಾಲಕನನ್ನೂ ಕೊಂದರೆ ಮುಂದೆ ಏನು ಗತಿಯಾಗುವುದೋ? ಈ ಹುಡುಗನಿಗೆ ಯಾವ ದೋಷದಿಂದ ತಂದೆತಾಯಿಗಳು ಮೃತರಾಗಿರಬಹುದು' ಎಂದಂದುಕೊಂಡು ಹುಡುಗನ ದೇಹವನ್ನೆಲ್ಲಾ ನೋಡಿದರು. ಎಡಪಾದದಲ್ಲಿ ಚಿಕ್ಕದಾದ ಆರನೇ ಬೆರಳನ್ನು ನೋಡಿದರು. ಧೃಷ್ಟಬುದ್ಧಿಯ ನಂಬಿಕೆಗಾಗಿ ಈ ಬೆರಳನ್ನು ಕತ್ತರಿಸಿ ತೆಗೆದುಕೊಂಡು ಹೋಗುವ ಎಂದು ಹೇಳಿಕೊಂಡು ಆ ಬಾಲಕನ ಆರನೇಬೆರಳನ್ನು ಕತ್ತರಿಸಿ ಬಾಲಕನನ್ನು ಹಾಗೆಯೇ ಬಿಟ್ಟು ಊರಿಗೆ ಹೋದರು. ಮಂತ್ರಿಯೊಡನೆ ಆ ಬೆರಳನ್ನು ತೋರಿಸಿದರು. ದುರ್ಬುದ್ಧಿಯು ಬಹಳ ಸಂತೋಷವನ್ನು ಹೊಂದಿದನು. ಮುನಿಗಳ

ಮಾತನ್ನು ವ್ಯರ್ಥವನ್ನಾಗಿ ಮಾಡಿದೆನು ಎಂದುಕೊಂಡನು. ಚಂಡಾಲರಿಗೆ ಬೇಕಾದ ಎಮ್ಮೆಗಳನ್ನು ಬಹುಮಾನವಾಗಿ ಕೊಟ್ಟನು.

ತರುವಾಯ ಬಾಲಕನು ಪಾದದಲ್ಲಿ ಬೆರಳು ಕತ್ತರಿಸಿದ ಭಾಗದಿಂದ ರಕ್ತವು ಸುರಿಯಲು ಭಗವಂತನಲ್ಲಿ ಮೊರೆಯಿಡುತ್ತಾ ಅಳಲಿಕ್ಕೆ ಆರಂಭಿಸಿದನು. ಆಗ ಜಿಂಕೆಗಳು ಬಂದು ಕಾಲನ್ನು ನೆಕ್ಕಲಿಕ್ಕೆ ಆರಂಭಿಸಿದವು. ಪಕ್ಷಿಗಳೆಲ್ಲ ದುಃಖಪಡುತ್ತಾ ನೆರಳನ್ನು ಉಂಟುಮಾಡಿದವು. ಈ ಸಮಯದಲ್ಲಿ ಆ ಪ್ರಾಂತದ ರಾಜನಾದ ಕುಲಿಂದನು ಮೃಗಬೇಟೆಯಾಡುತ್ತಾ ಬಂದಿದ್ದನು. ಕಣ್ಣೀರು ಸುರಿಸುತ್ತಾ ಭಗವಂತನ ನಾಮಗಳನ್ನು ಉಚ್ಚರಿಸುತ್ತಾ ಅಳುತ್ತಿರುವ ಬಾಲಕನನ್ನು ನೋಡಿದನು. ಭಗವನ್ನಾಮವನ್ನು ಉಚ್ಚರಿಸುತ್ತಾ ಅಳುತ್ತಿರುವ ಬಾಲಕನ ಧ್ವನಿಯನ್ನು ಕೇಳಿ ಇಳಿದು ಬಾಲಕನನ್ನು ಸಮಾಧಾನಪಡಿಸಿದನು. ಕಣ್ಣೀರನ್ನು ಒರಸುತ್ತಾ ಮಗು ನಿನ್ನ ತಂದೆಯಾರು? ತಾಯಿಯಾರು? ಮಿತ್ರರು ಯಾರು? ವನದಲ್ಲಿ ಒಬ್ಬನೇ ಯಾಕೆ ಇರುವಿ? ಎಂದು ಕೇಳಿದನು. ಅದಕ್ಕೆ ಬಾಲಕನು ನನಗೆ ಭಗವಂತನೇ ತಂದೆಯು. ಅವನೇ ತಾಯಿಯು. ಅವನನ್ನು ಕಾಣದೆ ಅಳುತ್ತಿರುವೆನು ಎಂದನು. ಆ ಮಾತನ್ನು ಕೇಳಿ ರಾಜನು ನನಗೆ ಮಕ್ಕಳಿಲ್ಲ. ಈ ವಿಷ್ಣುಭಕ್ತನೇ ಮಗನಾಗಲಿ ಎಂದು ಹೇಳಿ ಹುಡುಗನನ್ನು ಆಲಿಂಗಿಸಿ ಕುದುರೆಯ ಮೇಲೆ ಕೂತುಕೊಳ್ಳಿಸಿ ತಾನೂ ಕೂತುಕೊಂಡು ಚಂದನಾಪತಿ ಎಂದು ಹೆಸರುಳ್ಳ ತನ್ನ ಊರಿಗೆ ಬಂದು ಸೇರಿದನು. ತನ್ನ ಪತ್ನಿಗೆ ಮಗುವನ್ನು ಒಪ್ಪಿಸಿದನು. ಅವಳೂ ಮಗುವನ್ನು ನೋಡಿ ಸಂತೋಷಪಟ್ಟಳು. ಕುಲಿಂದನು ಬ್ರಾಹ್ಮಣರನ್ನು ಕರೆದು ದೊಡ್ಡ ಉತ್ಸವವನ್ನು ಮಾಡಿದನು. ಜ್ಯೋತಿಷ್ಯರು ಸಂತೋಷದಿಂದ 'ರಾಜನೇ! ನಿನ್ನ ಮಗನು ಕೀರ್ತಿವಂತನಾಗುವನು. ವಿಷ್ಣುಭಕ್ತನು ಇವನು ನಗುತ್ತಿರುವ ಸಮಯ ಚಂದ್ರನೂ ತಿರಸ್ಕೃತನಾಗುವನು. ಆದುದರಿಂದ ಚಂದ್ರಹಾಸ ಎಂಬ ಹೆಸರುಳ್ಳವನಾಗುವನು ಎಂದು ಹೇಳಿದರು. ತರುವಾಯ ಚಂದ್ರಹಾಸನು ದಿನೇ ದಿನೇ ಅಭಿವೃದ್ಧನಾದನು. ಚಂದ್ರಹಾಸನು ಬಂದು ಸೇರಿದ್ದರಿಂದ ಚಂದನಾವತಿಯಲ್ಲಿ ಒಳ್ಳೆ ಸುಭಿಕ್ಷೆಯುಂಟಾಗಿತ್ತು. ಪ್ರಜೆಗಳೆಲ್ಲರೂ ಸಂತೋಷವನ್ನು ಹೊಂದಿದರು. ಚಂದ್ರಹಾಸರಿಗೆ ಏಳು ವರ್ಷಗಳಾದವು. ಚಂದ್ರಹಾಸನಿಗೆ ಗುರುಗಳ ಪಾಠವನ್ನು ಹೇಳಲಿಕ್ಕೆ ಆರಂಭಿಸಿದರು. ಚಂದ್ರಹಾಸನು ಏನು ಹೇಳಿಕೊಟ್ಟರೂ ಹರಿ ಎಂದು ಹೇಳುವನು. ಗುರುಗಳು ಕೋಪಿಸಿಕೊಂಡು 'ಚಂದ್ರಹಾಸ! ರಾತ್ರಿ ಹಗಲು ಹರಿ ಎಂದು ಹೇಳಿವಿಯಲ್ಲಾ! ಬೇರೆ ಯಾವ ಅಕ್ಷರವನ್ನೂ ಏಕೆ ಹೇಳಲೊಲ್ಲೆ? ಎಂದರು. ಆಗ ಚಂದ್ರಹಾಸನು ನನ್ನ ಬಾಯಿಯಿಂದ

ಹರಿ ಎಂಬ ಅಕ್ಷರವಿಲ್ಲದೆ ಬೇರೆ ಅಕ್ಷರವು ಬಾರಲಾರದಲ್ಲ' ನಾನು ಏನು ಮಾಡಲಿ? ನಾನು ನಿಮ್ಮ ಭೃತ್ಯನು ಎಂದನು. ಆಗ ಗುರುಗಳು ಕೈಯಲ್ಲಿ ಕೋಲು ಹಿಡಿದುಕೊಂಡು ಕಕ ಎಂದು ಹೇಳು ಎಂದರು. ಚಂದ್ರಹಾಸನು ಭಯಪಡುತ್ತಾ ಮೆಲ್ಲನೆ ನನ್ನ ನಾಲಿಗೆಯಲ್ಲಿ ಯಾವಾಗಲೂ ಬರಲಾರದಲ್ಲಾ! ಹರಿನಾಮವನ್ನು ಜಪಿಸುವೆನು. ಬೇರೆ ಶಾಸ್ತ್ರಗಳಿಂದ ಏನು ಪ್ರಯೋಜನವಿದೆ? ಹರಿನಾಮವಿಲ್ಲದ ಶಾಸ್ತ್ರಪುರಾಣಗಳನ್ನು ಸಾಕ್ಷಾತ್ ಬ್ರಹ್ಮದೇವರು ಹೇಳಿದರೂ ಕೇಳಬಾರದು ಎಂದನು.

ಆಗ ಗುರುಗಳು ಕೋಪಿಸಿಕೊಂಡು ಕುಲಿಂದರಾಜನಿದ್ದಲ್ಲಿಗೆ ಬಂದು 'ರಾಜನೇ! ನೀನು ಮಗನು ಪಿಶಾಚ ಹಿಡಿದವನಾಗಿ ರಾತ್ರಿಹಗಲು ಹರಿ ಎಂದು ಕೂಗುತ್ತಾ ಇರುವನು. ನಾನು ಹೇಳಿಕೊಟ್ಟರೂ ಶಾಸ್ತ್ರವನ್ನು ಓದುವುದಿಲ್ಲ. ನೀನು ಆಜ್ಞಾ ಕೊಟ್ಟರೆ ಅವನನ್ನು ಶಿಕ್ಷಿಸಿ ಪಾಠಹೇಳುವೆನು ಎಂದರು. ಅದಕ್ಕೆ ಕುಲಿಂದರಾಜನು 'ಗುರುಗಳೇ! ದೈವೇಚ್ಛೆಯಿಂದ ನನಗೆ ಮಗನು ಸಿಕ್ಕಿದ್ದಾನೆ. ಅವನನ್ನು ಹೇಗೆ ಬಡಿಯಲಿಕ್ಕೆ ನಾನು ಸಮ್ಮತಿಕೊಡುವೆನು. ನಿತ್ಯವು ಹರಿಯೆಂದು ಹೇಳುವ ಪಿಶಾಚಿಯು ಹಿಡಿದಿದ್ದರೆ ಹಿಡಿಯಲಿ. ಗುರುಗಳೇ ನನ್ನ ಮಗನ ಚರಿತ್ರೆಯು ನಿಮಗೆ ತಿಳಿಯದು. ಏಕಾದಶೀದಿನದಲ್ಲಿ ಅವನು ಭೋಜನವನ್ನು ಮಾಡಲಾರನು. ಆದುದರಿಂದ ತಾವು ಮನೆಗೆ ಹೋಗಬೇಕು. ನನ್ನ ಮಗ ಚಂದ್ರಹಾಸನು ತನ್ನ ಇಚ್ಛೆಯಂತೆ ಇರಲಿ. ಎಂಟನೇ ವರ್ಷದಲ್ಲಿ ಉಪನಯನವನ್ನು ಮಾಡುವೆನು. ಆಮೇಲೆ ವೇದಾಭ್ಯಾಸ ವನ್ನು ಮಾಡುವನು' ಎಂದರು. ಗುರುಗಳು ಮನೆಗೆ ಹೋದರು.

ತರುವಾಯ ಎಂಟನೇ ವರ್ಷದಲ್ಲಿ ಕುಲಿಂದನು ಚಂದ್ರಹಾಸನಿಗೆ ಉಪನಯನ ವನ್ನು ಮಾಡಿದನು. ವೇದಾಧ್ಯಯನವನ್ನು ಮಾಡಿಸಿದನು. ವಿಷ್ಣುಭಕ್ತನಾದ ಚಂದ್ರಹಾಸನು ಭಗವಂತನನ್ನು ಮನಸ್ಸಿನಲ್ಲಿ ಇಟ್ಟುಕೊಂಡು ವೇದಾಧ್ಯಯನ ಮಾಡಿದನು. ವೇದವನ್ನು ಪಠನೆಮಾಡಿ ಭಗವಂತನು ಪ್ರೀತನಾಗಲಿ ಎಂದು ಹೇಳುವನು. ಭಗವಂತನೇ ಸರ್ವತ್ರ ವ್ಯಾಪ್ತನಾಗಿರುವನು ಇತ್ಯಾದಿ ವೇದಾರ್ಥವನ್ನು ಮನಸ್ಸಿನಲ್ಲಿ ಮಾಡಿಕೊಂಡು ವೇದಪಠನೆಯನ್ನು ಮಾಡಿದನು. ಆಮೇಲೆ ಧನುರ್ವೇದವನ್ನೂ ಕಲಿತನು. ಹೀಗೆ ಚಂದ್ರಹಾಸನು ಸರ್ವವಿದ್ಯಾ ಪಾರಂಗತನಾದನು.

ತರುವಾಯ ಚಂದ್ರಹಾಸನಿಗೆ ಹದಿನಾರು ವರ್ಷಗಳಾದವು. ತಂದೆಯಾದ ಕುಲಿಂದನೊಡನೆ ನನಗೆ ಆಜ್ಞೆಯನ್ನು ಕೊಡುವ ಪಕ್ಷದಲ್ಲಿ ನಾನು ದಿಗ್ವಿಜಯವನ್ನು ಮಾಡಿಕೊಂಡು ತುಂಬಾ ಹಣವನ್ನು ತರುವೆನು ಎಂದನು. ಅದಕ್ಕೆ ಕುಲಿಂದನು ನೀನು

ಒಬ್ಬನೇ ಹೇಗೆ ಹೋಗುವಿ? ಬಹುಶತ್ರುಗಳಿದ್ದಾರೆ. ನಮಗೆ ಸ್ವಾಮಿಯು ಕುಂತಲದೇಶದ ರಾಜನ ಮಂತ್ರಿ ಧೃಷ್ಟಬುದ್ಧಿಯು, ನೂರು ಗ್ರಾಮಗಳುಳ್ಳ ಈ ದೇಶವನ್ನು ಅವನು ನನಗೆ ಒಪ್ಪಿಸಿರುವನು. ಅವನಿಗೆ ಅನೇಕ ಶತ್ರುಗಳಿದ್ದಾರೆ. ಆಗಲಿ ಭಗವಂತನನ್ನು ಸ್ಮರಿಸಿಕೊಂಡು ಹೋಗು ಎಂದನು.

ಚಂದ್ರಹಾಸನು ತಂದೆಯ ಆಜ್ಞೆಯನ್ನು ಪಡೆದು ಎಲ್ಲಾ ರಾಜರನ್ನೂ ಜಯಿಸಿ ಆನೆ ಕುದುರೆ ರಥ ಬಂಗಾರ ಮುತ್ತು ರತ್ನ ಇತ್ಯಾದಿಗಳನ್ನೆಲ್ಲಾ ತೆಗೆದುಕೊಂಡು ಬಂದನು. ಊರಿಗೆ ಬರುವಾಗ ತಂದೆತಾಯಿಗಳ ಮೇಲೆ ಭಕ್ತಿಯಿಂದ ಕಾಲು ನಡೆಯಿಂದಲೇ ಬಂದನು. ಊರ ಹೆಂಗಸರೆಲ್ಲರೂ ಚಂದ್ರಹಾಸನು ಬರುವುದನ್ನು ನೋಡಿ ಹೊಗಳಿದರು. ಚಂದ್ರಹಾಸನು ಊರ ಪ್ರವೇಶ ಮಾಡಿದನು. ತರುವಾಯ ಕುಲಿಂದನು ತನ್ನ ಸ್ಥಾನದಲ್ಲಿ ಚಂದ್ರಹಾಸನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಊರ ಜನರಿಂದ ಸತ್ಕೃತನಾದ ಚಂದ್ರಹಾಸನು ಎಲ್ಲರೂ ಏಕಾದಶೀವ್ರತವನ್ನು ಅನುಷ್ಠಾನ ಮಾಡಬೇಕು ಎಂದು ಆಜ್ಞಾಪಿಸಿದನು. ಜನರೆಲ್ಲರೂ ಅಂಗೀಕರಿಸಿದರು. ದರಿದ್ರರಾದ ಜನರಿಗೆ ಬೇಕಾದ ಹಣವನ್ನು ಕೊಟ್ಟನು. ಬ್ರಾಹ್ಮಣರಿಗೆ ಬೇಕಾದ ಗೃಹದಾನಗಳನ್ನು ಮಾಡಿದನು. ಜನರ ಉಪಕಾರಕ್ಕಾಗಿ ಇಳಿಭಾವಿ ಭಾವಿ ಸರೋವರ ಇತ್ಯಾದಿಗಳನ್ನು ಕಟ್ಟಿಸಿದನು. ಎಷ್ಟೋ ವಿಷ್ಣು ದೇವಾಲಯಗಳನ್ನೂ ಶಿವದೇವಾಲಯಗಳನ್ನು ಕಟ್ಟಿಸಿದನು. ಎಷ್ಟೋ ಮುನಿಗಳಿಗೆ ಆಶ್ರಮಗಳನ್ನು ಮಾಡಿಸಿದನು. ನೀರಿನ ಅರವಟ್ಟಿಗೆಗಳನ್ನು ಮಾಡಿಸಿದನು. ತರುವಾಯ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಮೊದಲಾದ ಜನರೆಲ್ಲರೂ ಚಂದನಾವತಿಗೆ ಬಂದು ನೆಲೆಸಿದರು. ಚಂದ್ರಹಾಸನು ಊರಲ್ಲೆಲ್ಲಾ ಹರಿಭಕ್ತಿಯು ಹೆಚ್ಚುವಂತೆ ಮಾಡಿದನು. ಒಂದು ದಿನ ಕುಲಿಂದನು ಚಂದ್ರಹಾಸನೊಡನೆ ಮಗ! ನಾವು ಹತ್ತು ಸಾವಿರ ಬಂಗಾರದ ನಾಣ್ಯಗಳನ್ನು ಕುಂತಲದೇಶದ ರಾಜನಿಗೆ ಕೊಡಬೇಕು. ಅದರ ಅರ್ಧವನ್ನು ನಮ್ಮ ಪ್ರಭುವಾದ ಧೃಷ್ಟಬುದ್ಧಿಗೆ ಕೊಡಬೇಕು. ಅದರ ಅರ್ಧವನ್ನು ಅವನ ಪತ್ನಿಗೆ ಕೊಡಬೇಕು. ರಾಜನೂ ಮಂತ್ರಿಯೂ ಇಬ್ಬರೂ ಪ್ರೀತಿಯನ್ನು ಹೊಂದುವಂತೆ ಬೇಗನೇ ಕಳುಹಿಸು. ಇಲ್ಲಿಂದ ಅರುವತ್ತು ಮೈಲು ದೂರದಲ್ಲಿ ಕುಂತಲಪುರವಿದೆ. ಅಲ್ಲಿ ರಾಜನು ಗಾಲವ ಎಂಬ ಪುರೋಹಿತರಿಂದ ಕೂಡಿಕೊಂಡು ಧೃಷ್ಟಬುದ್ಧಿಯೆಂಬ ಮಂತ್ರಿಯಿಂದಲೂ ಸಹಿತನಾಗಿ ರಾಜ್ಯಭಾರವನ್ನು ಮಾಡುತ್ತಾ ಇದ್ದಾನೆ ಎಂದು ಹೇಳಲು ಚಂದ್ರಹಾಸನು ರಾಜನಿಗೂ ಮಂತ್ರಿಗೂ ಅವನ ಪತ್ನಿಗೂ ಕೊಡುವಷ್ಟು ಹಣವನ್ನು ಗಾಲವರಿಗೂ ಕಳುಹಿಸುತ್ತೇನೆ ಎಂದು ಹೇಳಿ ರಾಜನಿಗೂ ಮಂತ್ರಿಗೂ ವಿಜ್ಞಾಪನಾಪತ್ರವನ್ನಿಟ್ಟು ಸೇವಕರ ಮೂಲಕ ಬೇಕಾದ ಧನವನ್ನು ಕೊಟ್ಟು ಕಳುಹಿಸಿದನು.

ಚಂದ್ರಹಾಸನ ಸೇವಕರು ಕುಂತಲಪುರಕ್ಕೆ ಹೋದರು. ಹೋಗುವಾಗ ದಾರಿಯಲ್ಲಿ ಏಕಾದಶಿಯು ಬರಲು ದಾರಿಯಲ್ಲಿ ಒಂದು ನದಿಯನ್ನು ನೋಡಿ ನದಿಯಲ್ಲಿ ಸ್ನಾನವನ್ನು ಮಾಡಿ ಭಗವಂತನ ಪೂಜೆಯನ್ನು ಮಾಡಿ ತುಳಸೀದಳವನ್ನು ಶಿರಸ್ಸಿನಲ್ಲಿ ಇಟ್ಟುಕೊಂಡು ಒದ್ದೆವಸ್ತ್ರವನ್ನು ಉಟ್ಟುಕೊಂಡು ಧೃಷ್ಟಬುದ್ಧಿಯ ಮನೆಗೆ ಬಂದರು. ಧೃಷ್ಟಬುದ್ಧಿಯು ನಮಸ್ಕಾರ ಮಾಡಿದ ಭೃತ್ಯರನ್ನು ನೋಡಿ ನಿಮ್ಮ ರಾಜನಾದ ಕುಳಿಂದನು ಯಾವಾಗ ಸತ್ತನು? ಎಷ್ಟು ದಿವಸವಾಯಿತು? ಮಹಾ ಅನಿಷ್ಟವುಂಟಾಯಿತಲ್ಲ ಎಂದನು. ಅದಕ್ಕೆ ಭೃತ್ಯರು ಅನಿಷ್ಟವು ಶತ್ರುಗಳಿಗೆ ಆಗಲಿ. ಕುಳಿಂದ ರಾಜರಿಗೆ ಆಗುವುದು ಬೇಡ. ಕುಳಿಂದ ರಾಜರ ಸತ್ಪುತ್ರನಾದ ಚಂದ್ರಹಾಸನು ದಿಗ್ವಿಜಯ ಮಾಡಿಕೊಂಡು ಬಂದು ನಿಮಗೆ ಕೊಡಬೇಕಾದ ಪದಾರ್ಥಗಳನ್ನು ಕಳುಹಿಸಿದ್ದಾನೆ. ಹಿಂದಿನಿಂದ ಭಂಡಿಗಳಲ್ಲಿ ಬಂಗಾರದ ಕೊಡೆಗಳೂ ಪಚ್ಚಕರ್ಪೂರ ಗಂಧ ಪಟ್ಟೆವಸ್ತ್ರ ಇತ್ಯಾದಿಗಳೆಲ್ಲಾ ಬರುತ್ತಾ ಇವೆ ಎಂದರು.

ಅದನ್ನು ಕೇಳಿ ಧೃಷ್ಟಬುದ್ಧಿಯು ಆಶ್ಚರ್ಯವುಳ್ಳವನಾಗಿ ಸಂತೋಷದಿಂದ ಹಣವನ್ನು ಸ್ವೀಕರಿಸಿದನು. ಅಡಿಗೆಯವರನ್ನು ಕರೆದು ಇವರಿಗೆಲ್ಲಾ ಒಳ್ಳೇ ಅಡಿಗೆ ಮಾಡಿ ಭೋಜನ ಮಾಡಿಸಿರಿ ಎಂದರು. ಅಡಿಗೆಯವರು ಊಟಕ್ಕೆ ಕರೆಯಲು ಊಟಕ್ಕೆ ಹೋಗಲಿಲ್ಲ. ಅಡಿಗೆಯವರು ಧೃಷ್ಟಬುದ್ಧಿಯೊಡನೆ ಹಾಗೆಯೇ ತಿಳಿಸಿದರು. ಆಗ ಮಂತ್ರಿಯು ಕಣ್ಣುಕೆಂಪಗೆ ಮಾಡಿ ಭೃತ್ಯರನ್ನು ಕರೆದು 'ಏನು ಹಾಕಿಸಿದ ಅನ್ನವನ್ನು ಗರ್ವದಿಂದ ಭೋಜನ ಮಾಡದೆ ಇದ್ದೀರಿ? ಕುಳಿಂದನನ್ನು ಬಂಧನದಲ್ಲಿ ಇಟ್ಟು ಹಣವಿಲ್ಲದವನನ್ನಾಗಿ ಮಾಡುವೆನು ಎಂದನು. ಅದಕ್ಕೆ ಭೃತ್ಯರು ನಮಗೆ ಅಹಂಕಾರವಿಲ್ಲ, ನಾವು ಈದಿನ ಏಕಾದಶಿ ಆದುದರಿಂದ ಭೋಜನ ಮಾಡಲಾರೆವು ಎಂದರು. ಅವರ ಮಾತನ್ನು ಕೇಳಿ ಮಂತ್ರಿಯು ಪ್ರೀತಿಯುಳ್ಳವನಾಗಿ ಮರುದಿವಸ ಪ್ರಾತಃಕಾಲದಲ್ಲಿ ಭೋಜನ ಮಾಡಿಸಿದನು. ಆಮೇಲೆ ಧೃಷ್ಟಬುದ್ಧಿಯು ರಾಜನೊಡನೆ ಯೋಚನೆ ಮಾಡಿ ರಾಜನ ಕಾರ್ಯದಲ್ಲಿ ತನ್ನ ಮಗನಾದ ಮದನನಿಗೆ ಆಜ್ಞಾಪಿಸಿ ಚಂದನಾವತಿಗೆ ಹೊರಟನು. ಆಗ ಯೌವನವನ್ನು ಹೊಂದಿರುವ ಅವನ ಮಗಳು ವಿಷಯಾ ಎನ್ನುವವಳು ತಂದೆಯೇ ನಾನು ಬೆಳೆಸಿರುವ ಮರವು ಫಲಕೊಡುವುದರಲ್ಲಿದೆ. ನೀವು ಅದನ್ನು ರಕ್ಷಿಸಬೇಕು. ನಿಮಗೆ ಯಾವಾಗಲೂ ರಾಜಕಾರ್ಯವು ಮುಗಿಯುವುದೇ ಇಲ್ಲ ಎಂದಳು. ಮಂತ್ರಿಯು ಮಗಳಿಗೆ ಸಮಾಧಾನವನ್ನು ಹೇಳಿ ಕಳುಹಿಸಿ ಸೇವಕರಿಂದ ಕೂಡಿಕೊಂಡು ಎರಡು ದಿವಸದಲ್ಲಿ ಚಂದನಾವತಿಗೆ ಬಂದನು. ಇದೇನು ದೊಡ್ಡ ಕಾಡಾಗಿದ್ದದ್ದು ಈಗ ದೊಡ್ಡ ಊರಾಗಿದೆ

ಎಂದು ಆಶ್ಚರ್ಯಪಟ್ಟನು. ಆಗ ಕುಳಿಂದನು ತನ್ನ ಮಗ ಚಂದ್ರಹಾಸನಿಂದ ಸಹಿತನಾಗಿ ಬಂದು ನಮಸ್ಕರಿಸಿ ಶಾಸ್ತ್ರೋಕ್ತರೀತಿಯಿಂದ ಪೂಜಾ ಮಾಡಿದನು.

ಮಂತ್ರಿಯು ಕುಳಿಂದನೊಡನೆ ನಿನಗೆ ಈ ಮಗನು ಯಾವಾಗ ಹುಟ್ಟಿದನು. ನಮ್ಮ ಹತ್ತಿರ ಏಕೆ ಮಗನು ಹುಟ್ಟಿದ ವಿಷಯವನ್ನು ತಿಳಿಸಲಿಲ್ಲ ಎಂದನು. ಕುಳಿಂದನು ನನಗೆ ಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲ. ನಾನು ಒಂದು ದಿನ ಮೃಗಬೇಟೆಗೆ ಹೋಗಿದ್ದೆನು. ಕುಂತಲಪುರದಿಂದ ಎರಡು ಯೋಜನದೂರದಲ್ಲಿರುವ ಕಾಡಿಗೆ ಹೋದೆನು. ಅಲ್ಲಿ ಪಾದದ ಆರನೇ ಬೆರಳು ಕತ್ತರಿಸಲ್ಪಟ್ಟು ಅಳುತ್ತಾ ಇರುವ ಈ ಬಾಲಕನನ್ನು ನೋಡಿದೆನು. ಐದುವರ್ಷದ ಬಾಲಕನು. ವಿಷ್ಣುಭಕ್ತನು. ಅವನನ್ನು ಕರೆದುಕೊಂಡು ಬಂದೆನು ಎಂದನು. ಧೃಷ್ಟಬುದ್ಧಿಯು ಯೋಚಿಸಿದನು. ಅದೇ ಬಾಲಕನು ಇವನು ಈಗ ಹದಿನಾರು ವರ್ಷವನಾಗಿದ್ದಾನೆ. ಚಂಡಾಲರು ನನಗೆ ಮೋಸಮಾಡಿದರು. ಮುನಿಗಳು ಹೇಳುವಂತೆ ಇವನು ನನ್ನ ಸಂಪತ್ತಿಗೆ ಅಧಿಕಾರಿಯಾಗಲು ಪಕ್ಷದಲ್ಲಿ ನನ್ನ ಇಬ್ಬರು ಮಕ್ಕಳು ಮದನ ಅಮಲ ಎನ್ನುವವರು ಏನು ಮಾಡಲಿ? ಇನ್ನು ಮುಂದೆಯಾರೂ ಮುನಿಗಳ ಮಾತನ್ನು ಸುಳ್ಳು ಮಾಡುವೆನು ಎಂದಂದುಕೊಂಡು ಮನಸ್ಸಿನಲ್ಲಿ ದುಷ್ಟ ಅಭಿಪ್ರಾಯವುಳ್ಳವನಾದರೂ ಹೊರಗೆ ಸಂತೋಷವನ್ನು ತೋರಿ ಕುಲಿಂದ! ನಿನ್ನ ಜನ್ಮವು ಸಫಲವಾಯಿತು. ನಿನಗೆ ಒಳ್ಳೇ ಮಗನು ಸಿಕ್ಕಿದನು. ನಿನ್ನ ಮಗನನ್ನು ನೋಡಿ ನನಗೂ ಬಹಳ ಸಂತೋಷವಾಯಿತು ಎಂದು ಕಪಟದಿಂದ ಹೇಳಿದನು.

ತರುವಾಯ ದುರ್ಬುದ್ಧಿಯುಳ್ಳ ಧೃಷ್ಟಬುದ್ಧಿಯು ಈ ಚಂದ್ರಹಾಸನನ್ನು ನಾನು ಸಂಹರಿಸಲಿ? ಮುನಿಗಳ ಮಾತನ್ನು ಹೇಗೆ ಸುಳ್ಳುಮಾಡಲಿ? ಈಗಲೇ ಎಲ್ಲರ ಎದುರಲ್ಲಿ ಇವನನ್ನು ನಾನು ಕೊಂದರೆ ಎಲ್ಲರೂ ಸೇರಿ ನನಗೆ ಹಿಂಸೆಯನ್ನು ಮಾಡಬಹುದು. ಆದುದರಿಂದ ಉಪಾಯದಿಂದ ವಿಷವನ್ನು ಕೊಡಿಸಿ ಸಂಹರಿಸುವೆನು. ಈರೀತಿಯಾಗಿ ಯೋಚಿಸಿ 'ಚಂದ್ರಹಾಸ! ಒಂದು ಪತ್ರವನ್ನೂ ಲೇಖನಿಯನ್ನೂ ತಾ. ಒಂದು ಪತ್ರವನ್ನು ಬರೆದುಕೊಡುವೆನು. ಅದನ್ನು ನೀನು ನೋಡಬೇಡ. ಮದನನ ಹತ್ತಿರ ಕೊಡು. ನಿನಗೆ ಇದರಿಂದ ಹಿತವಾಗುವುದು ಎಂದು ಹೇಳಿ ಏಕಾಂತದಲ್ಲಿ ಪತ್ರವನ್ನು ಬರೆದು ಕೊಟ್ಟನು. ಅದರಲ್ಲಿ ಈ ಪ್ರಕಾರವಾಗಿ ಬರೆದಿದ್ದನು.

'ಸ್ವಸ್ತಿ ಶೀರಸ್ತು ಮದನ ವಕ್ತುಂ ಕಾರಣಮೀದೃಶಂ ।

ಚಂದ್ರಹಾಸೋಽಹಿತೋಽತೀವ ಮಮಾಯಂ ಸಂಪದಾಂ ಪದಂ ।

**ಜ್ಞಾತವ್ಯೋ ನಾತ್ರ ಸಂದೇಹಃ ಪುತ್ರ ಕಾರ್ಯಂ ತ್ವಯೇದೃಶಂ ।**
**ಮಾರೂಪಂ ಮಾವಯೋ ದ್ರಾಕ್ಷೀಃ ಕುಲಂ ಶೀಲಂ ಪರಾಕ್ರಮಂ ।**
**ವಿದ್ಯಾಂ ವಿತ್ತಂ ವಿಲಂಬಂ ಮಾಽಮಿತ್ರಸ್ಯಾಸ್ಯ ಕುರುಧ್ರುವಂ ।**
**ವಿಷಮಸ್ಮೈ ಪ್ರದಾತವ್ಯಂ ತ್ವಯಾ ಮದನಶತ್ರವೇ ॥**

ಈರೀತಿಯಾಗಿ ಬರೆದು ಚಂದ್ರಹಾಸನ ಕೈಯಲ್ಲಿ ಪತ್ರವನ್ನು ಕೊಟ್ಟು ಕಳುಹಿಸಿದನು.

ಚಂದ್ರಹಾಸನು ಪತ್ರವನ್ನು ತೆಗೆದುಕೊಂಡು ಮಂತ್ರಿಗೆ ನಮಸ್ಕಾರ ಮಾಡಿ ತಂದೆಯಾದ ಕುಲಿಂದನಿಗೂ ತಾಯಿಯಾದ ಮೇಧಾವತಿಗೂ ನಮಸ್ಕರಿಸಿ ಆಶೀರ್ವಾದವನ್ನು ಪಡೆದು ಕುದುರೆಯನ್ನು ಏರಿ ತನ್ನ ಮಿತ್ರರೊಡನೆ ಹೊರಟುಹೋದನು. ಹೋಗುವ ದಾರಿಯಲ್ಲಿ ಅನೇಕ ಶುಭಶಕುನಗಳು ಆದವು. ಅರಸಿನಕುಂಕುಮ ಹಚ್ಚಿಕೊಂಡು ವಧೂವರರು ಬರುತ್ತಿದ್ದರು. ದನಕರುಗಳು ಬರುತ್ತಿದ್ದವು. ವನದವರು ಕೆಲವರು ಅವನಿಗೆ ದಾಳಿಂಬ ಫಲವನ್ನು ಕೊಟ್ಟರು. ಕೆಲವರು ಸಂಪಿಗೆ ಹೂವಿನ ಮಾಲೆಯನ್ನು ಕೊಟ್ಟರು. ಕೆಲವರು ಹೂವಿನ ಕಿರೀಟವನ್ನು ಮಾಡಿ ಅಲಂಕರಿಸಿದರು. ಈರೀತಿಯಾಗಿ ಚಂದ್ರಹಾಸನು ವರನಂತೆ ಶೋಭಿಸುತ್ತಾ ಕೌಂತಲದೇಶದ ಹತ್ತಿರ ಒಂದು ಉದ್ಯಾನವನ್ನು ಪ್ರವೇಶಿಸಿದನು. ಅಲ್ಲಿರುವ ಅನೇಕ ಪುಷ್ಪಗಳು ಸರೋವರ ಇತ್ಯಾದಿಗಳನ್ನು ನೋಡಿ ಸ್ನಾನವನ್ನು ಮಾಡಿ ಪುಷ್ಪಗಳಿಂದ ಪೂಜೆಯನ್ನು ಮಾಡಿ ದಾರಿಯಲ್ಲಿ ಆಹಾರವನ್ನಾಗಿ ತಂದದ್ದನ್ನು ಭಗವಂತನಿಗೆ ಸಮರ್ಪಿಸಿ ಭೋಜನ ಮಾಡಿದರು. ಸೇವಕರು ತಂದ ಹುಲ್ಲನ್ನು ಕುದುರೆಗೆ ಹಾಕಿ ಕುದುರೆಯನ್ನು ಒಂದು ಮರಕ್ಕೆ ಕಟ್ಟಿದನು. ನಿದ್ರಾವಶನಾಗಿ ಮಲಗಿದನು.

ತರುವಾಯ ಅಲ್ಲಿಗೆ ಕುಂತಲರಾಜನ ಮಗಳಾದ ಚಂಪಕಮಾಲಿನಿಯೂ ಧೃಷ್ಟಬುದ್ಧಿಯ ಮಗಳಾದ ವಿಷಯೆಯೂ ಅನೇಕ ಸಖಿಯರಿಂದ ಕೂಡಿಕೊಂಡು ಪುಷ್ಪವನ್ನು ಕೊಯ್ಯುತ್ತಾ ಬಂದರು. ಅವರು ಹಾಡು ಹೇಳುತ್ತಾ ನರ್ತನಮಾಡುತ್ತಾ ಕ್ರೀಡಾಮಾಡಿದರು. ತರುವಾಯ ವಿಷಯೆಯು ಈಗ ಮಧ್ಯಾಹ್ನವಾಯಿತು. ಹೋಗೋಣ ಎಂದಳು. ತರುವಾಯ ಎಲ್ಲರೂ ಸರೋವರದಲ್ಲಿ ಜಲಕ್ರೀಡೆ ಮಾಡಿದರು. ತರುವಾಯ ಎಲ್ಲರೂ ಹೊರಟುಹೋದರು. ಧೃಷ್ಟಬುದ್ಧಿಯ ಮಗಳಾದ ವಿಷಯೆಯು ಮಾತ್ರ ಮಲಗಿದ್ದ ಚಂದ್ರಹಾಸನನ್ನು ನೋಡಿ ಹೋಗಲಿಲ್ಲ. ಎಲ್ಲರೂ

ಹೊರಟುಹೋದ ಮೇಲೆ ಪರಮಸುಂದರನಾದ ಚಂದ್ರಹಾಸನನ್ನು ನೋಡಿ ಮೋಹಿತಳಾದಳು. ಮಲಗಿರುವ ಅವನನ್ನು ಬಂದು ಪರೀಕ್ಷಿಸಿದಳು. ಅವನ ಅಂಗಿಯ ಚೀಲದಲ್ಲಿ ಸ್ವಲ್ಪ ಹೊರಗೆ ಬಂದಿರುವ ಒಂದು ಪತ್ರವನ್ನು ನೋಡಿದಳು. ಬಿಡಿಸಿ ನೋಡಿದಳು. ಧೃಷ್ಟಬುದ್ಧಿಯು ಪತ್ರದಲ್ಲಿ ಇವನು ಅಹಿತನು. ಇವನ ವಯಸ್ಸು ಇತ್ಯಾದಿಗಳನ್ನು ನೋಡದೆ ವಿಷವನ್ನು ಕೊಡು ಎಂದು ಬರೆದಿದ್ದನು. ಮೊದಲಲ್ಲಿ ಬರದದ್ದು ನಮಗೆ ಹಿತವನ್ನು ಮಾಡುವವನು ಎಂಬ ಅರ್ಥವೂ ಆಗುವಂತೆ ಇತ್ತು. ಅದರಿಂದ ಅವಳು ಇದು ನನ್ನ ತಂದೆಯು ತಪ್ಪಿ ಬರೆದಿರಬೇಕು. ವಿಷವನ್ನು ಕೊಡು ಎಂದು ಬರೆದಿರಲಾರನು ಎಂದಂದುಕೊಂಡು ತನ್ನ ಉಗುರಿನಿಂದ ಮರದ ರಸದಿಂದ **'ವಿಷಮಸ್ಮೈ ಪ್ರದಾತವ್ಯಂ'** ಎಂಬ ಸ್ಥಾನದಲ್ಲಿ **'ವಿಷಯಾಸ್ಮೈಪ್ರದಾತವ್ಯಾ'** ಎಂದು ಬರೆದು ಹಾಗೇ ಕಾಗದವು ಮುಚ್ಚಿ ಅಂಗಿಯ ಚೀಲದಲ್ಲಿಯೇ ಇಟ್ಟು ಬಿಟ್ಟು ಹಾಗೆಯೇ ಹೊರಟುಹೋದಳು. ಮನೆಗೆ ಹೋಗಿ ಸೇರಿದಳು.

ಸಾಯಂಕಾಲದಲ್ಲಿ ಚಂದ್ರಹಾಸನಿಗೆ ಎಚ್ಚರವಾಯಿತು. ಮುಖವನ್ನು ತೊಳೆದುಕೊಂಡು ಕುದುರೆಯನ್ನು ಏರಿ ಊರನ್ನು ಪ್ರವೇಶಿಸಿದನು. ದ್ವಾರಪಾಲಕನ ಮೂಲಕ ತನ್ನ ಆಗಮವನ್ನು ತಿಳಿಸಿದನು. ಮದನನು ಹರಿಭಕ್ತನಾದ ಚಂದ್ರಹಾಸನನ್ನು ಒಳಗೆ ಬರಲಿಕ್ಕೆ ಹೇಳಿ ನಮಸ್ಕರಿಸಿ ಉತ್ತಮವಾದ ಆಸನದಲ್ಲಿ ಕೂತುಕೊಳ್ಳಿಸಿ ಕುಶಲಪ್ರಶ್ನೆಯನ್ನು ಮಾಡಿದನು. ಇಲ್ಲಿಗೆ ಬಂದ ಕಾರ್ಯವೇನು ಎಂದು ಕೇಳಿದನು. ಚಂದ್ರಹಾಸನು ಕ್ಷೇಮವನ್ನು ತಿಳಿಸಿ ನಿಮ್ಮ ತಂದೆಯು ಒಂದು ಪತ್ರವನ್ನು ಕೊಟ್ಟು ಕಳುಹಿಸಿರುವರು ಎಂದು ಕೇಳಿ ಕೊಟ್ಟನು. ಏನೋ ರಹಸ್ಯವಾದ ಮಹಾಕಾರ್ಯ ವನ್ನು ಅದರಲ್ಲಿ ಬರೆದಿರುವಂತೆ ಎಂದನು. ಮದನನು ಪತ್ರವನ್ನು ನೋಡಿ 'ವಿಷಯಾಸ್ಮೈಪ್ರದಾತವ್ಯಾ' ಅಂದರೆ ವಿಷಯೆಯನ್ನು ಇವನಿಗೆ ಮದುವೆ ಮಾಡಿಕೊಡಬೇಕು' ಎಂದು ಬರೆದದ್ದನ್ನು ನೋಡಿ ಸಂತೋಷದಿಂದ ಪತ್ರವನ್ನು ಗಟ್ಟಿಯಾಗಿ ಓದಿ ನಮ್ಮ ಪಿತೃಗಳೆಲ್ಲಾ ಉದ್ಧೃತರಾದರು. ನಾನು ಯೋಚನೆ ಮಾಡಿದ ಕಾರ್ಯವೇ ಆಯಿತು ಎಂದು ಹೇಳಿದನು. ಏಳನೇ ಮಾಡಿಯಲ್ಲಿದ್ದ ಕಾಮ ಮೋಹಿತಳಾದ ವಿಷಯೆಯು ಚಂದ್ರಹಾಸನನ್ನು ನೋಡಿದಳು. ಪಾರ್ವತಿದೇವಿ ಯನ್ನು ನನಗೆ ಇವರೇ ಗಂಡನಾಗುವಂತೆ ಅನುಗ್ರಹಿಸು ಎಂದು ಪ್ರಾರ್ಥಿಸಿದಳು.

ತರುವಾಯ ಮದನನು ಜ್ಯೋತಿಃ ಶಾಸ್ತ್ರದಲ್ಲಿ ಪಂಡಿತರಾದ ಬ್ರಾಹ್ಮಣರನ್ನು ಕರೆದು ಮದುವೆಗೆ ಮುಹೂರ್ತವನ್ನು ಕೇಳಿದನು. ಆಗ ಅವರು ಈ ದಿವಸವೇ ಒಳ್ಳೆಯ ದಿನವಾಗಿದೆ. ಗೋಧೂಳಿ ಲಗ್ನವು ಪ್ರಶಸ್ತವಾಗಿದೆ ಎಂದನು. ತರುವಾಯ

ಮದನನು ತನ್ನ ಪತ್ನಿಯಾದ ತಾರಕಾಕ್ಷಿಯಿಂದ ಕೂಡಿಕೊಂಡು ಚಂದ್ರಹಾಸನ ಪಾದವನ್ನು ತೊಳೆದು ಮಹಾವೈಭವದಿಂದ ಮದುವೆ ಮಾಡಿದನು. ದಂಪತಿಗಳು ಬ್ರಾಹ್ಮಣರಿಗೆ ನಮಸ್ಕರಿಸಿದರು. ಬ್ರಾಹ್ಮಣರು ಆಶೀರ್ವಾದವನ್ನು ಮಾಡಿದರು. ಮದನನು ವಧೂವರರಿಗೆ ಮುತ್ತುರತ್ನ ಮೊದಲಾದ ಬೇಕಾದ ದ್ರವ್ಯವನ್ನು ಕೊಟ್ಟನು. ಚಂದ್ರಹಾಸನಿಗೆ ಸರ್ವಸ್ವವನ್ನು ಒಪ್ಪಿಸಿ ನಿನಗೆ ಕಾಲಾಂತರದಲ್ಲಿ ನನ್ನ ತಲೆಯನ್ನು ಕೊಡಲಿಕ್ಕೂ ಸಿದ್ಧನಿದ್ದೇನೆ. ಚಂದ್ರಹಾಸನು ಮಕ್ಕಳು ಮೊಮ್ಮಕ್ಕಳಿಂದ ಕೂಡಿಕೊಂಡು ಬಹುಕಾಲ ರಾಜ್ಯವನ್ನಾಳಲಿ ಎಂದು ಹೇಳಿದನು. ನಾನಾ ವಸ್ತ್ರಾಲಂಕಾರಾದಿಗಳನ್ನು ಗಾಲವರನ್ನು ಪೂಜಿಸಿ ಇತರ ಬ್ರಾಹ್ಮಣರೊಡನೆ ನಾಳೆ ತಾವೆಲ್ಲರೂ ಬರಬೇಕು. ನಾನು ತಮ್ಮ ಕಿಂಕರನು ಯಥಾಶಕ್ತಿ ತಮ್ಮನ್ನೆಲ್ಲಾ ಪೂಜಿಸುವೆನು ಎಂದನು. ವಿಷಯೆಯಿಂದ ಹಿತನಾದ ಚಂದ್ರಹಾಸನಿಗೆ ಭೋಜನ ಮಾಡಿಸಿದನು. ಬಂಧುಗಳಿಂದ ಕೂಡಿಕೊಂಡು ಭೋಜನವನ್ನು ಮಾಡಿದನು. ಮನೆಯನ್ನು ಅಲಂಕರಿಸಿ ಮರುದಿನ ಬೆಳಗ್ಗೆ ದಂಪತಿಗಳಿಗೆ ಮಂಗಳಸ್ನಾನ ಮಾಡಿಸಿ ಕೂತುಕೊಳ್ಳಿಸಿದನು. ಬಂದ ಬ್ರಾಹ್ಮಣರಿಗೆ ಬೇಕಾದ ಸತ್ಕಾರವನ್ನು ಮಾಡಿದನು. ಮಹಾವೈಭವದಿಂದ ಮದುವೆಯು ನಡೆಯಿತು. ಕುಂತಲಪುರವೇ ಸಂತುಷ್ಟರಾದ ಜನರಿಂದ ತುಂಬಿಹೋಯಿತು. ವಿಷ್ಣುಭಕ್ತಿಯ ಮಹಿಮೆಯು ಹೀಗಿದೆ.

ಇಲ್ಲಿ ಧೃಷ್ಟಬುದ್ಧಿಯು ಚಂದನಾವತಿಯಲ್ಲಿ ಕುಲಿಂದನನ್ನು ಬಂಧನದಲ್ಲಿ ಇಟ್ಟನು. ಪ್ರಜೆಗಳನ್ನೆಲ್ಲಾ ಶಿಕ್ಷಿಸಿದನು. ಎಷ್ಟೋ ಜನರ ಕುತ್ತಿಗೆಗೆ ಕಲ್ಲುಕಟ್ಟಿ ನೀರಿನಲ್ಲಿ ಮುಳುಗಿಸಿ ಹಣವನ್ನು ಕೊಡಲು ಹೇಳಿದನು. ಹಣಕ್ಕೋಸ್ಕರ ಕೆಲವರನ್ನು ಉರಿಯುವ ಬೆಂಕಿಯಲ್ಲಿ ಹಾಕಿದನು. ಕೆಲವರ ಮಾಂಸದಲ್ಲಿ ಕಿತ್ತಿಸಿದನು. ಕೆಲವರ ಮೂಗಿನ ದ್ವಾರಕ್ಕೆ ಸುಣ್ಣದ ನೀರನ್ನು ಹಾಕಿಸಿದನು. ಈರೀತಿಯಾಗಿ ಪ್ರಜೆಗಳನ್ನು ಶಿಕ್ಷಿಸಿ ಕುಲಿಂದನೊಡನೆ–

ಎಲೋ ಮೂರ್ಖ! ನಾನು ಕ್ರೂರಸ್ವಭಾವವುಳ್ಳವನೆಂದು ತಿಳಿಯಲಿಲ್ಲವೇ? ಚಂದ್ರಹಾಸನ ಆಶ್ರಯದಿಂದ ಹಣಬಂತು ಎಂದು ಅಹಂಕಾರವುಳ್ಳವನಾಗಿದ್ದಿ. ಹಣವನ್ನು ಕಳುಹಿಸಿದಿಯಲ್ಲ. ಅವರೊಡನೆ ನೀನು ಯಾಕೆ ಬರಬಾರದು?' ಭೃತ್ಯರನನು ಕಳುಹಿಸಿದಿ. ಆ ಭೃತ್ಯರೂ ನಾನು ಹಾಕಿಸಿದ ಅನ್ನವನ್ನು ಊಟ ಮಾಡಲಿಲ್ಲ. ಹಣದ ಗರ್ವದಿಂದ ಬಹುದಾನವನ್ನು ಮಾಡುತ್ತಾ ಇರುವಿ. ನನ್ನ ಹಣವನ್ನು ತುಂಬಾ ನಷ್ಟಪಡಿಸಿದಿ. ನನ್ನ ಬಾಲ್ಯದಿಂದ ಈ ಊರಿನಲ್ಲಿ ಒಂದು ಶಿವಾಲಯವಿರಲಿಲ್ಲ. ವಿಷ್ಣ್ವಾಲಯವೂ ಇರಲಿಲ್ಲ. ಕೆರೆ ಇಳಿ ಭಾವಿಗಳೂ ಇರಲಿಲ್ಲ.

ಬ್ರಾಹ್ಮಣರ ಮನೆಗಳಲ್ಲಿ ಪುರಾಣಪಠನೆಗಳೂ ನಡೆಯುತ್ತಾ ಇರಲಿಲ್ಲ. ನನ್ನ ಹಣವನ್ನೆಲ್ಲಾ ವೆಚ್ಚ ಮಾಡಿ ಈ ಪ್ರಕಾರ ಮಾಡಿದಿಯಲ್ಲಾ! ಇಷ್ಟು ಹಣಗಳನ್ನು ತಿಂದು ಹಾಕಿದ ಆ ದುಷ್ಟಬ್ರಾಹ್ಮಣರು ಎಲ್ಲಿ? ಶಿಲ್ಪಿಗಳು ಎಲ್ಲಿ? ಹೀಗೆಲ್ಲಾ ಬೆದರಿಸಿದನು. ಲೋಭ ಎಂದು ಹೆಸರುಳ್ಳ ತನ್ನ ಒಬ್ಬ ಸೇವಕನೊಡನೆ ತೃಷ್ಣಾ ಎಂಬ ನಿನ್ನ ಹೆಂಡತಿಯಿಂದ ಕೂಡಿಕೊಂಡು ಚಂದನಾವತಿಯನ್ನು ಆಳುತ್ತಾ ಇರು ಎಂದು ಆಜ್ಞಾಪಿಸಿ ಬಹು ಸಂತೋಷದಿಂದ ಅಲ್ಲಿಂದ ಬಹು ಹಣವನ್ನು ಸಂಗ್ರಹಿಸಿಕೊಂಡು ತನ್ನ ಮಗನಾದ ಮದನನನ್ನೂ ಚಂದ್ರಹಾಸನನ್ನೂ ಮನಸ್ಸಿನಲ್ಲಿಯೇ ಸ್ಮರಿಸಿ ನನ್ನ ಮಗನಾದ ಮದನನು ಚಂದ್ರಹಾಸನಿಗೆ ವಿಷವನ್ನು ಹಾಕುವನು.

ಈದಿನ ಚಂದ್ರಹಾಸನು ಇಲ್ಲಿಂದ ಹೋಗಿ ಮೂರನೆಯ ದಿವಸ. ಎರಡನೆಯ ದಿವಸ ಚಂದ್ರಹಾಸನು ಕುಂತಲನಗರಕ್ಕೆ ಸೇರಿರಬಹುದು. ಸಾಯಂಕಾಲವೇ ಮದನನು ವಿಷವನ್ನು ಹಾಕಿರಬಹುದು. ನಾನಿನ್ನು ರಾಜ್ಯಕ್ಕೆ ಹೋಗುತ್ತೇನೆ. ಹೀಗೆ ಹೇಳಿಕೊಂಡು ಮುನ್ನೂರು ಜನ ಬೆಸ್ತರು (ಮೀನು ಹಿಡಿಯುವವರು) ಹೊರುವ ಮೇನೆಯಲ್ಲಿ ಕೂತುಕೊಂಡು ಹೋದನು. ದಾರಿಯಲ್ಲಿ ಹೋಗುವಾಗ ಮಂತ್ರಿಯು ಒಂದು ದೊಡ್ಡಕೋಲನ್ನು ಹಿಡಿದುಕೊಂಡು ದುಷ್ಟರೇ ಬೇಗನೇ ಹೋಗಿರಿ ಎಂದು ಸುಮ್ಮನೆ ಹೊತ್ತುಕೊಂಡು ಹೋಗುವವರನ್ನು ಬಡಿಯುತ್ತಿದ್ದನು. ಸ್ವಾಮಿ! ನಾವು ಬೇಗನೇ ಹೋಗುತ್ತೇವಲ್ಲ! ಹೋಗುತ್ತಾ ಇರುವ ನಮ್ಮನ್ನು ಸುಮ್ಮನೆ ಬಡಿಯಬೇಡ. ನೀವು ನಹುಷರಾಜನ ವಂಶದಲ್ಲಿ ಹುಟ್ಟಿದ್ದೀರಾ? ನಾವು ಸಪ್ತಋಷಿಗಳು ಅಲ್ಲವಲ್ಲ. ನಾವು ಕೋಪಿಸಿಕೊಂಡು ಹೆಬ್ಬಾವನ್ನಾಗಿ ಮಾಡುವ ಶಕ್ತಿಯೂ ಇಲ್ಲವಲ್ಲ' ಎಂದು ಹೇಳುತ್ತಾ ಬೇಗನೇ ಹೋಗುತ್ತಾ ಇದ್ದರು.

ಆಗ ಮೇನೆಯ ಮೇಲೆ ಕಾಗೆಗಳು ಹಾರುತ್ತಾ ಇದ್ದವು. ತನ್ನ ಕೊಕ್ಕಿನಿಂದ ಮಂತ್ರಿಯನ್ನು ಕುಕ್ಕಿದವು. ಮುಂದೆ ಹೋಗಲು ಒಂದು ದೊಡ್ಡ ಹಾವು ಸಿಕ್ಕಿತು. ಅದು ಮನುಷ್ಯಮಾತಿನಿಂದ ಹೇಳಿತು. ಸ್ವಾಮಿ! ನೀನು ಇಷ್ಟು ದಿನ ಸಂಗ್ರಹ ಮಾಡಿಟ್ಟಿದ್ದ ಬಂಗಾರದ ಕೊಡಗಳಲ್ಲಿ ನಾನು ವಾಸ ಮಾಡಿದ್ದೆನು. ನಿನ್ನ ಮಗನು ಆ ಬಂಗಾರವನ್ನೆಲ್ಲಾ ವೆಚ್ಚಮಾಡಿದನು. ನಾನು ಹೋಗುತ್ತೇನೆ. ನಿನಗೆ ಮಂಗಳವಾಗಲಿ ದುಃಖಪಡಬೇಡ ಎಂದು ಹೇಳಿ ಆ ಸರ್ಪವು ಪಾತಾಳವನ್ನು ಪ್ರವೇಶಿಸಿತು. ಧೃಷ್ಟಬುದ್ಧಿಯು ಆಶ್ಚರ್ಯವುಳ್ಳವನಾಗಿ, ಬೇಗನೇ ನಡೆಯಿರಿ ಎಂದು ಮತ್ತು ಆಳುಗಳಿಗೆ ಕೋಲಿನಿಂದ ಬಡೆದನು. ನಿಮಗೆ ಕಾಲು ಮುರಿಸುತ್ತೇನೆ. ಊರಿಗೆ ಹೋಗಿ ಸೇರುತ್ತೇನೆ. ಹೀಗೆಲ್ಲಾ ಬೆದರಿಸುತ್ತಾ ಪೀಡಿಸುತ್ತಾ ಕುಂತಲನಗರವನ್ನು

ಹೋಗಿ ಸೇರಿದನು. ನಗರದ ಹತ್ತಿರ ಹೋಗುತ್ತಿರುವಾಗ ಮಹತ್ತಾದ ವಾದ್ಯ ಘೋಷವು ಕೇಳಿಸುತ್ತಿತ್ತು. ಏನಿದು ಎಂದು ಮಂತ್ರಿಯು ಯೋಚಿಸಿದನು. ತರುವಾಯ ಮಂತ್ರಿಯು ಮೇನೆಯಿಂದ ಇಳಿದು ಕಾಲು ನಡೆಯಿಂದಲೇ ಕೋಲು ಹಿಡಿದುಕೊಂಡು ಹೋದನು. ದಾರಿಯಲ್ಲಿ ಸೂತರೂ ಮಾಗಧರೂ ಬಂದಿಗಳೂ ವಸ್ತ್ರಗಳಿಂದ ಅಲಂಕೃತರಾಗಿ ಬರುತ್ತಿದ್ದರು. ಅವರು ಧೃಷ್ಟಬುದ್ಧಿಯನ್ನು ನೋಡಿ 'ಧೃಷ್ಟಬುದ್ಧಿಗಳೇ ಬರಬೇಕು. ನಿಮ್ಮ ಮಗನು ಎಲ್ಲಾ ಕಾರ್ಯವನ್ನು ಚೆನ್ನಾಗಿ ಮಾಡಿರುವನು. ಚಂದ್ರಹಾಸನಿಗೆ ದೀರ್ಘಾಯುಷ್ಯವಿರಲಿ ತುಂಬಾ ದಾನಮಾಡು ತ್ತಿರುವ ಮದನನಿಗೂ ದೀರ್ಘಾಯುಷ್ಯವುಂಟಾಗಲಿ ಎಂದರು.

ಆಗ ಧೃಷ್ಟಬುದ್ಧಿಯು ಪಾಪಿಗಳೇ! ಯಾರವನು ಚಂದ್ರಹಾಸನು? ನಿಮ್ಮ ತಲೆ ಒಡೆದು ಹಾಕುತ್ತೇನೆ ಎಂದನು. ಅಷ್ಟರಲ್ಲಿ ನಾನಾಪಟ್ಟೆ ಪಸ್ತ್ರಗಳಿಂದಲೂ ಆಭರಣ ಗಳಿಂದಲೂ ಅಲಂಕೃತರಾದ ಬ್ರಾಹ್ಮಣರು ಬಂದರು. ಬ್ರಾಹ್ಮಣರು ಮಂತ್ರಿಗಳೇ ಬರಬೇಕು. ನಿಮಗೆ ಚಂದ್ರಹಾಸನು ವರನು ಹೇಗೆ ಸಿಕ್ಕಿದನು? ನಿಮಗೆ ಒಳ್ಳೇ ಭಾಗ್ಯವುಂಟಾಯಿತು ಎಂದರು. ಮಂತ್ರಿಯು ಕೋಲನ್ನು ಎತ್ತಿ ಹೋಗಿರಿ ನೀವೆಲ್ಲ ಎಂದು ಬೆದರಿಸಿದನು. ಬ್ರಾಹ್ಮಣರು ವಸ್ತ್ರ ಇತ್ಯಾದಿಗಳನ್ನು ಬಿಟ್ಟು ಕೃಷ್ಣಾಜಿನವನ್ನು ಹಿಡಿದುಕೊಂಡು ಎಡವುತ್ತಾ ಓಡಿದರು. ತರುವಾಯ ಗಾಯಕರು ಬಂದು ಮಂತ್ರಿಗಳೇ ಚಂದ್ರಹಾಸನೇ ರಾಜ್ಯಭಾರವನ್ನು ಮಾಡಲಿ ಎಂದರು. ಮಂತ್ರಿಯು ಅವರ ವೀಣಾದಿವಾದ್ಯಗಳನ್ನು ಒಡೆದು ಹಾಕಿದನು. ಮುಂದೆ ಹೋಗಲು ಹೆಂಗಸರು ಆರತಿಯನ್ನು ತಂದರು. ಮಂತ್ರಿಯು ಅವರೊಡನೆ ಮದನನಿಗೆ ಏನು ಸಿಕ್ಕಿತು? ಯಾಕೆ ಈ ಉತ್ಸವವನ್ನು ಮಾಡಿದನು? ಎಂದು ಕೇಳಿದನು.

ಅದಕ್ಕೆ ಹೆಂಗಸರು ನಿಮ್ಮ ಮಗನಿಗೆ, ನಿಮ್ಮ ವಂಶಕ್ಕೆ ಹಿತವನ್ನು ಉಂಟುಮಾಡುವ ಚಂದ್ರಹಾಸನು ಸಿಕ್ಕಿದನು ಎಂದರು. ಅದಕ್ಕೆ ಮಂತ್ರಿಯು ಮೂರ್ಖನಾಗಿ ಮದನನು ಚಂದ್ರಹಾಸನಿಗೆ ಹಣವನ್ನು ಕೊಟ್ಟನೆ? ಎಂದನು. ಸ್ತ್ರೀಯರು ಹಾಗೆ ಹೇಳಬೇಡಿ ಹಣವನ್ನು ಕೊಟ್ಟಿದ್ದಲ್ಲ.

ನಿಮ್ಮ ಮಗನು ತಂಗಿಯಾದ ವಿಷಯೆಯನ್ನೇ ಚಂದ್ರಹಾಸನಿಗೆ ಕೊಟ್ಟು ವಿವಾಹಮಾಡಿದ್ದಾನೆ ಎಂದರು. ಆ ಮಾತನ್ನು ಕೇಳಿ ಮಂತ್ರಿಗೆ ಎದೆಗೆ ಆಣೆಬಡೆದಂತೆ ಆಯಿತು. ಮನೆಯ ಒಳಗೆ ಹೋದನು. ಮಂಟಪದಲ್ಲಿ ಕೂತಿರುವ ಚಂದ್ರಹಾಸ ನನ್ನೂ ವಿಷಯೆಯನ್ನೂ ನೋಡಿದನು. ಅವರನ್ನು ನೋಡಿ ಮಂತ್ರಿಯಲ್ಲಿ ಬೆವರು ಸುರಿಯಿತು. ಮೈಯು ನಡುಗಿತು. ಮುಖವು ಒಣಗಿತು. ಕೋಪಿಸಿಕೊಂಡು ನನ್ನ

ಮಗನು ಏನು ಮಾಡಿಬಿಟ್ಟನು. ನಾನು ಬರೆದ ಗೂಢಪತ್ರವನ್ನು ನೋಡಿಲ್ಲವೇ? ಎಂದುಕೊಂಡನು. ತರುವಾಯ ಅಳಿಯನಾದ ಚಂದ್ರಹಾಸನು ಕೂಡಲೇ ಎದ್ದು ಬಂದು ನಮಸ್ಕಾರ ಮಾಡಿದನು. ಮಂತ್ರಿಯು ಬಾಯಿಯಿಂದ ಆಶೀರ್ವಾದವನ್ನು ಮಾಡಲು ದುರಾತ್ಮನಾದ ಮಗನೇ! ನೀನು ಏನು ಮಾಡಿದಿ? ನೀನು ಮಾಡಿದ ಕಾರ್ಯದಿಂದ ನನ್ನ ಮನಸ್ಸು ಸಂತೋಷವನ್ನು ಹೊಂದಲಿಲ್ಲ ಎಂದನು.

ಆಗ ಮದನನು ತಂದೆಯೇ! ನಿಮ್ಮ ಪತ್ರವನ್ನು ನೋಡಿ ತಂಗಿಯನ್ನು ಚಂದ್ರಹಾಸನಿಗೆ ಮದುವೆ ಮಾಡಿದೆನು. ಚಂದ್ರಹಾಸನಿಗೆ ಬೇಕಾದ ಗೋವುಗಳು ಎಮ್ಮೆಗಳು ಬಂಗಾರ ರತ್ನ ಎಲ್ಲ ಕೊಟ್ಟಿದ್ದೇನೆ. ನಾನಾ ದೇಶದಿಂದ ಬಂದಿರುವ ಯಾಚಕರಾದ ಬ್ರಾಹ್ಮಣರಿಗೆ ಬೇಕಾದ ಹಣವನ್ನು ಕೊಟ್ಟು ಕೋಶಾಗಾರವನ್ನು ಶೂನ್ಯವಾಗಿ ಮಾಡಿಟ್ಟಿರುವೆನು ಎಂದನು.

ಧೃಷ್ಟಬುದ್ಧಿಯು ಕೋಪದಿಂದ ಶ್ವಾಸಬಿಡುತ್ತಾ ಕೈಯನ್ನು ಕೈಯಿಂದ ತಿಕ್ಕಿಕೊಂಡು ಹಾಗಾದರೆ ನೀನು ಘೋರವಾದ ವನಕ್ಕೆ ಹೋಗು. ಕೃಷ್ಣಾಜಿನವನ್ನು ಧರಿಸಿಕೊಂಡು ಭಿಕ್ಷೆಯನ್ನು ಬೇಡು ಎಂದನು.

ಅದಕ್ಕೆ ಮದನನು 'ಸರಿ. ಅದಕ್ಕೇನು ಬಂತು? ರಾಮದೇವರು ತಂದೆಯ ಆಜ್ಞೆಯಿಂದ ವನಕ್ಕೆ ಹೋಗಿಲ್ಲವೇ? ಹಾಗೆಯೇ ನಾನು ನಿಮ್ಮ ಮಾತಿನಿಂದ ವನಕ್ಕೆ ಹೋಗುವೆನು. ಆದರೆ ನಾನು ಏನು ಕಡಿಮೆ ಮಾಡಿದೆನೆಂದು ತಿಳಿಯಲಿಲ್ಲ. ಕುಲಿಂದ ರಾಜನನ್ನೂ ಅವನ ಪತ್ನಿಯನ್ನೂ ಕರೆಯಲಿಲ್ಲ. ಅದು ತಪ್ಪು ಹೌದು. ಆದರೆ ಮುಹೂರ್ತವು ಬೇಗನೇ ಇದ್ದುದರಿಂದ ಅವರನ್ನು ತರಿಸುವ ಸಮಯವಿರಲಿಲ್ಲವಲ್ಲಾ! ಈಗಲಾದರೂ ಹೋಗಿ ಅವನನ್ನು ಇಲ್ಲಿ ಕರೆದುಕೊಂಡು ಬರುತ್ತೇನೆ. ನಮ್ಮ ವಿಷಯೆಯ ಮದುವೆಯಲ್ಲಿ ಮತ್ತೆ ಏನು ಕಡಿಮೆಯಾಗಲಿಲ್ಲ. ಆನೆ ಕುದುರೆ ಎಲ್ಲವನ್ನೂ ಕೊಟ್ಟಿದ್ದೇನೆ. ಪೂಜ್ಯನಾದ ಹರಿಭಕ್ತನಾದ ಚಂದ್ರಹಾಸನಿಗೆ ನನ್ನ ತಲೆಯನ್ನೂ ಕೈಗಳನ್ನೂ ಸಮರ್ಪಿಸಿದ್ದೇನೆ ಎಂದನು.

ಮಂತ್ರಿಯು ನೀನು ದೂರಹೋಗು. ನಿನ್ನ ಮುಖವನ್ನು ನನಗೆ ತೋರಿಸಬೇಡ. ನಾನು ಬರೆದು ಕಳುಹಿಸಿದ ಪತ್ರವನ್ನು ತಂದು ತೋರಿಸು ಎಂದನು. ಮದನನು ತಂದು ತೋರಿಸಲು ಮಂತ್ರಿಯು ನೋಡಿ ಇದು ಬ್ರಹ್ಮದೇವರ ಬರಹವಾಗಿದೆ ಎಂದು ತಿಳಿದುಕೊಂಡನು. ಒಂದು ಕ್ಷಣ ಯೋಚನೆ ಮಾಡಿದನು. ಆಮೇಲೆ ಮಗನನ್ನು ಸಮಾಧಾನಪಡಿಸಿದನು. ಮಗ! ನೀನು ಪತ್ರದಲ್ಲಿ ಇದ್ದಂತೆ ಮಾಡಿದಿ. ನಾನು ಗೂಢಾಭಿಪ್ರಾಯವುಳ್ಳ ಪತ್ರವನ್ನು ಬರೆದು ಚಂದ್ರಹಾಸನನ್ನು ಕಳುಹಿಸಿದೆನು.

ದೈವೇಚ್ಛೆಯಿಂದ ವಿಷಯೆಯ ವಿವಾಹವಾಯಿತು. ನೀನೂ ಮಾಡಿದ್ದಲ್ಲ, ನಾನು ಮಾಡಿದ್ದಲ್ಲ' ಎಂದು ಹೇಳಿ ಸಮಾಧಾನಪಡಿಸಿದನು. ಡಂಭದಿಂದ ಚಂದ್ರಹಾಸನನ್ನೂ ಸತ್ಕರಿಸಿದನು. ನಾಲ್ಕನೇ ದಿವಸದಲ್ಲಿ ಮಂತ್ರಿಯು ಕಪಟಯುಕ್ತವಾದ ಮನಸ್ಸುಳ್ಳವ ನಾಗಿಯೇ ಮಗಳಿಗೆ ನಾಕಬಲಿಯನ್ನು ಮಾಡಿದನು.

ತರುವಾಯ ಧೃಷ್ಟಬುದ್ಧಿಯು 'ನಾನು ಯೋಚನೆ ಮಾಡಿದ್ದೆಲ್ಲಾ ವಿಪರೀತವಾಯಿತು. ನಾನು ಯಾರನ್ನು ಕೊಲ್ಲಬೇಕೆಂದು ಯೋಚಿಸುತ್ತಿದ್ದೇನೋ ಅಂತಹ ಶತ್ರುವಿಗೆ ನನ್ನ ಮಗಳನ್ನೇ ಕೊಟ್ಟು ವಿವಾಹವಾಯಿತು. ಇನ್ನು ಮುಂದೆ ಮದನ ಅಮಲ ಇಬ್ಬರೂ ನನ್ನ ವಶದಲ್ಲಿ ಇಲ್ಲ. ಇವರಿಬ್ಬರು ಮಕ್ಕಳೂ ನನ್ನ ಕುಲವನ್ನು ಹಾಳುಮಾಡಿದರು. ಚಂದ್ರಹಾಸನು ವಿಶೇಷವಾಗಿ ನನ್ನ ಕುಲವನ್ನು ನಾಶಮಾಡುತ್ತಾನೆ. ಇರಲಿ. ನನ್ನ ಮಗಳು ವಿಧವೆಯಾದರೂ ಚಿಂತೆಯಿಲ್ಲ. ಮುನಿಗಳ ಮಾತನ್ನು ಸುಳ್ಳು ಮಾಡಿಯೇ ಮಾಡುವೆನು, ಎಂದು ಯೋಚನೆ ಮಾಡಿ ಚಂಡಾಲರನ್ನು ಕರೆದನು. ಏಕಾಂತದಲ್ಲಿ ಅವರೊಡನೆ 'ಸಂಧ್ಯಾಕಾಲದಲ್ಲಿ ಕಾಳಿಕಾಗುಡಿಗೆ ಯಾರು ಬರುತ್ತಾನೋ ಅವನನ್ನು ಕೊಂದೇ ಹಾಕಿರಿ. ಪೂರ್ವದಲ್ಲಿ ಒಂದುಬಾರಿ ಮೋಸಮಾಡಿದಂತೆ ಮಾಡಬೇಡಿರಿ. ನಿಮಗೆ ಮದನನಿಗೆ ಸಿಗುವ ಸಂಪತ್ತಿನಲ್ಲಿ ಅರ್ಧಾಂಶವನ್ನೇ ಕೊಡುತ್ತೇನೆ ಎಂದನು. ಅದನ್ನು ಕೇಳಿ ಚಂಡಾಲರು ಹಾಗೆಯೇ ಆಗಲಿ ಎಂದು ಒಪ್ಪಿಕೊಂಡು ಸಾಯಂಕಾಲದಲ್ಲಿ ಮರೆಯಾಗಿ ಕಾಳಿಕಾಗುಡಿಗೆ ಹೋದರು.

ಧೃಷ್ಟಬುದ್ಧಿಯು ಚಂದ್ರಹಾಸನೊಡನೆ ವಿನಯವನ್ನು ತೋರಿಸುತ್ತಾ ಚಂದ್ರಹಾಸ! ನಾನು ಹೇಳುವ ಹಿತಕರವಾದ ಮಾತನ್ನು ಕೇಳು. ನಮಗೆ ಕಾಳಿಕಾಂಬೆಯು ಕುಲದೇವತೆಯು. ನೀನು ಮದುವೆಯಾದವನು ಹೋಗಿ ಆ ತಾಯಿಗೆ ನಮಸ್ಕರಿಸಬೇಕು. ನೀನು ಸಾಯಂಸಂಧ್ಯಾವಂದನೆಯನ್ನು ತೀರಿಸಿಕೊಂಡು ಗಂಧಪುಷ್ಪಗಳನ್ನು ಹಿಡಿದುಕೊಂಡು ಆ ಕಾಳಿಕೆಗೆ ನಮಸ್ಕರಿಸಿ ಪೂಜಿಸುವುದಕ್ಕೆ ಒಬ್ಬನೇ ಹೋಗು ಎಂದು ಹೇಳಿದನು. ಚಂದ್ರಹಾಸನು ಹಾಗೆಯೇ ಆಗಲಿ ಎಂದು ಸಂಧ್ಯಾವಂದನೆಯನ್ನು ಮಾಡಿ ಕಾಳಿಕಾಗುಡಿಗೆ ಹೋಗಲಿಕ್ಕೆ ಉದ್ಯುಕ್ತನಾದನು.

ಆ ಸಮಯದಲ್ಲಿ ಕುಂತಲರಾಜನು ಗಾಲವಮುನಿಗಳನ್ನು ಕರೆದು ಸ್ವಾಮಿ! ಭೂಮಿಯಲ್ಲಿ ರಾಜ್ಯಭಾರವನ್ನು ಮಾಡುವ ನನಗೆ ಸುಖವಿಲ್ಲ. ನನ್ನ ನೆರಳನ್ನು ನೋಡಿದರೆ ಅದರಲ್ಲಿ ತಲೆಯು ಕಾಣಿಸುವುದಿಲ್ಲ. ನಾನು ಸಾಯುವ ಸಮಯವು ಬಂದಿತು ಎಂದು ತಿಳಿಯುತ್ತದೆ. ಅರಿಷ್ಟಾಧ್ಯಾಯವನ್ನು ಹೇಳಿರಿ. ಅದನ್ನು ಕೇಳಿ ನಾನು ಸ್ವಲ್ಪ ಸಂತೋಷವನ್ನು ಹೊಂದುತ್ತೇನೆ ಎಂದನು.

ಆದಕ್ಕೆ ಗಾಲವರು 'ರಾಜನ್ ದತ್ತಾತ್ರೇಯರು ಅಲರ್ಕ ಎಂಬ ಶಿಷ್ಯನಿಗೆ ಹೇಳಿರುವ ಅರಿಷ್ಟಾಧ್ಯಾಯವನ್ನು ಹೇಳುತ್ತೇನೆ.

ಆಕಾಶದಲ್ಲಿ ಧ್ರುವನಕ್ಷತ್ರವನ್ನೂ ಶುಕ್ರಗ್ರಹವನ್ನೂ ಅರುಂಧತೀನಕ್ಷತ್ರವನ್ನೂ ನೋಡುವುದಿಲ್ಲವೋ ಅವನು ಒಂದು ವರ್ಷ ಮೇಲೆ ಬದುಕಲಾರನು.

ಕಿರಣವಿಲ್ಲದಿರುವ ಸೂರ್ಯಮಂಡಲವನ್ನೂ, ಕಿರಣಗಳಿಂದ ಸಹಿತವಾದ ಅಗ್ನಿಯನ್ನೂ ನೋಡುವನೋ ಅವನು ಹನ್ನೊಂದು ತಿಂಗಳ ಮೇಲೆ ಬದುಕಲಾರನು.

ಮರಗಳನ್ನೆಲ್ಲಾ ಬಂಗಾರದ ಬಣ್ಣವುಳ್ಳವುಗಳನ್ನು ನೋಡುವವನು ಒಂಬತ್ತು ತಿಂಗಳು ಬದುಕುವನು.

ದಪ್ಪವಾಗಿದ್ದವನು ಇದ್ದಕ್ಕಿದ್ದಂತೆ ಕಾರಣವಿಲ್ಲದೆ ಸಣ್ಣಗೆ ಆಗುವನೋ ಸಣ್ಣಗೆ ಇದ್ದವನು ದಪ್ಪವಾಗುವನೋ ಅವನ ಸ್ವಭಾವವೇ ಬೇರೆ ವಿಧವಾಗಿ ಆಗುವುದೋ ಅವನು ಎಂಟು ತಿಂಗಳು ಬದುಕುವನು.

ಪಾರಿವಾಳವೂ ಹದ್ದುಪಕ್ಷಿಯೂ ಗಂಗೆಯೂ ಕಾಗೆಯೂ ಯಾರ ತಲೆಯಮೇಲೆ ಬಂದು ಕೂತುಕೊಳ್ಳುವುದೋ ಅವನು ಆರು ತಿಂಗಳು ಬದುಕುವನು.

ಯಾರ ಚರ್ಮವೂ ಸ್ತನದ ಮೇಲಿನ ಎದೆಯಭಾಗವೂ ಒಳ್ಳೇ ಪ್ರಕಾಶಿಸುವುದೋ ಅವನು ಐದು ತಿಂಗಳಲ್ಲಿ ಸಾಯುವನು.

ತನ್ನ ನೆರಳನ್ನು ವಿಪರೀತವಾಗಿ ನೋಡಿದರೆ ನಾಲ್ಕು ತಿಂಗಳು ಆಯುಷ್ಯವು. ದಕ್ಷಿಣ ದಿಕ್ಕಿನಲ್ಲಿ ಮೇಘವಿಲ್ಲದೆ ಮಿಂಚನ್ನು ಮಾತ್ರ ಕಂಡರೂ ರಾತ್ರಿಯಲ್ಲಿ ಇಂದ್ರಚಾಪವನ್ನು ಕಂಡರೂ ಎರಡುಮೂರು ತಿಂಗಳು ಬದುಕುವನು.

ತುಪ್ಪದಲ್ಲೋ ಎಣ್ಣೆಯಲ್ಲೋ ಕನ್ನಡಿಯಲ್ಲೋ ನೀರಿನಲ್ಲೋ ಶಿರಸ್ಸಿನಿಂದ ರಹಿತವಾದ ಪ್ರತಿಬಿಂಬವನ್ನು ನೋಡುವನೋ ಅವನು ಅರ್ಧಮಾಸವೂ ಜೀವಿಸಲಾರನು.

ಯಾರ ದೇಹದಲ್ಲಿ ಎಲುಬಿನ ವಾಸನೆಯೂ ಶವದ ವಾಸನೆಯೂ ಬರುವುದೋ ಅವನೂ ಹದಿನೈದು ದಿವಸ ಬದುಕುವನು.

ಯಾರಿಗೆ ಸ್ನಾನಮಾಡಿದ ಕೂಡಲೆ ಎದೆಯು ಒಣಗಿ ಹೋಗುತ್ತದೋ ನೀರನ್ನು ಕುಡಿದರೂ ಗಂಟಲು ಒಣಗುತ್ತದೋ ಅವನು ಹತ್ತು ದಿನ ಬದುಕುವನು.

ಕರಡಿಯಮೇಲೆ ಕಪಿಯಮೇಲೆ ಕೂತುಕೊಂಡು ಹಾಡು ಹೇಳುತ್ತಾ ಯಾರು

ಸ್ವಪ್ನದಲ್ಲಿ ದಕ್ಷಿಣದಿಕ್ಕಿಗೆ ಹೋಗುತ್ತಾನೋ ಅವನು ಆಗಲೇ ಮರಣವನ್ನು ಹೊಂದುವನು.

ಸ್ವಪ್ನದಲ್ಲಿ ಕಪ್ಪು ಕೆಂಪು ವಸ್ತ್ರವನ್ನು ಧರಿಸಿರುವ ಹೆಂಗಸು ನಗುತ್ತಾ ದಕ್ಷಿಣದಿಕ್ಕಿಗೆ ಕರದುಕೊಂಡು ಹೋದಂತೆ ಕಾಣುವುದೋ ಅವನೂ ಬದುಕಲಾರನು.

ಯಾವಾತನು ಸ್ವಪ್ನದಲ್ಲಿ ವಸ್ತ್ರರಹಿತನಾದ ನಗುತ್ತಾ ಇರುವ ಜೈನಸನ್ಯಾಸಿಯನ್ನು ಕಂಡರೂ ಆಗಲೇ ಮರಣವುಂಟಾಗುವುದು.

ಸ್ವಪ್ನದಲ್ಲಿ ತಲೆಯ ಪರ್ಯಂತ ಕೆಸರಿನಲ್ಲಿ ಮುಳುಗಿದಂತೆ ತನ್ನನ್ನು ಕಂಡರೆ ಆಗಲೇ ಸಾಯುವನು.

ಹಣವಿರುವ ಮನೆಯೂ ರಥಶಾಲೆಯೂ ತನ್ನ ತಲೆಯೂ ಸುಟ್ಟಂತೆ ಸ್ವಪ್ನದಲ್ಲಿ ಕಂಡರೆ ಹತ್ತುದಿವಸವೇ ಬದುಕುವನು.

ಕಪ್ಪಾದ ಕ್ರೂರರಾದ ಭಯಂಕರರಾದ ಆಯುಧಧಾರಿಗಳಾದ ಪುರುಷರು ಕಲ್ಲುಗಳಿಂದ ಬಡೆದಂತೆ ಕಂಡರೆ ಆಗಲೇ ಸಾಯುವನು.

ಇನ್ನೊಬ್ಬರ ಕಣ್ಣಿನಲ್ಲಿ ತನ್ನ ಪ್ರತಿಬಿಂಬವು ಕಾಣದಿದ್ದರೆ ಅವನು ಬದುಕಲಾರನು.

ಕಿವಿಯನ್ನು ಮುಚ್ಚಿಕೊಳ್ಳುವಾಗ ಘೋ ಎಂಬ ಶಬ್ದವನ್ನು ಕೇಳದಿದ್ದರೆ ಅವನು ಬದುಕುವುದಿಲ್ಲ.

ಯಾರು ದೇವತೆಗಳನ್ನೂ ಬ್ರಾಹ್ಮಣರನ್ನೂ ವೃದ್ಧರನ್ನೂ ಗುರುಗಳನ್ನೂ ನಿಂದಿಸುವನೋ ತಂದೆತಾಯಿಗಳಿಗೆ ಅಳಿಯಂದಿರಿಗೆ ಅಸತ್ಕಾರವನ್ನು ಮಾಡುವನೋ ಜ್ಞಾನಿಗಳಿಗೆ ಅಸತ್ಕಾರವನ್ನು ಮಾಡುವನೋ ಅವನೂ ಬದುಕಲಾರನು.

ಇಂತಹ ಶಕುನಗಳಾದರೆ ಸ್ಥಿರವಾದ ಆಸನದಲ್ಲಿ ಕೂತುಕೊಂಡು ಭಗವಂತನನ್ನು ಧ್ಯಾನಮಾಡಬೇಕು.

ಈ ಪ್ರಕಾರವಾಗಿ ಉಪದೇಶಿಸಲು ರಾಜ್ಯವನ್ನು ಪರಿತ್ಯಜಿಸುವ ಅಭಿಪ್ರಾಯ ವುಳ್ಳವನಾಗಿ ಅಲ್ಲಿಯೇ ಕೂತಿದ್ದ ಮದನನನ್ನು ಕರೆದು ಕುಂತಲರಾಜನು ಮದನ! ಬೇಗನೇ ಅಳಿಯ ಚಂದ್ರಹಾಸನನ್ನು ಕರೆದುಕೊಂಡು ಬಾ. ನನಗೆ ಹಿತವನ್ನು ಮಾಡಿಕೊಳ್ಳುವೆನು ಎಂದನು. ಮದನನು ಹಾಗೆಯೇ ಆಗಲಿ ಎಂದು ಹೇಳಿ ಸೂರ್ಯನು ಮುಳುಗುವ ಸಮಯದಲ್ಲಿ ಸಂಧ್ಯಾವಂದನೆಯನ್ನು ತೀರಿಸಿರುವ ಚಂದ್ರಹಾಸನನ್ನು ನೋಡಿದನು. ಪುಷ್ಪಗಂಧ ಇತ್ಯಾದಿಗಳನ್ನು ಹಿಡಿದುಕೊಂಡು ಒಬ್ಬನೇ ಬರುತ್ತಿರುವ ಚಂದ್ರಹಾಸನನ್ನು ನೋಡಿ ಮದನನು ಚಂದ್ರಹಾಸ! ಎಲ್ಲಿಗೆ

ಹೋಗುತ್ತಿರುವಿ? ಎಂದು ಕೇಳಿದನು. ಚಂದ್ರಹಾಸನು ಚಂಡಿಕಾದೇವಿಗೆ ನಮಸ್ಕರಿಸಲು ಹೋಗುತ್ತಿರುವೆನು ಎಂದನು. ಅದಕ್ಕೆ ಮದನನು ಚಂದ್ರಹಾಸ! ನೀನೀಗ ಗಂಧಪುಷ್ಪಗಳನ್ನು ನನ್ನ ಕೈಯಲ್ಲಿ ಕೊಡು. ನಾನು ಕಾಳಿಕಾಲಯಕ್ಕೆ ಹೋಗುವೆನು. ನೀನು ಮಹಾರಾಜರಿದ್ದಲ್ಲಿಗೆ ಹೋಗು ಎಂದು ಹೇಳಿ ತಾನು ಕೂತುಕೊಂಡು ಬಂದಿದ್ದ ಕುದುರೆಯಿಂದ ಇಳಿದು ಚಂದ್ರಹಾಸನ ಕೈಯಿಂದ ಗಂಧಪುಷ್ಪಾದಿಗಳನ್ನು ಸೆಳೆದುಕೊಂಡು ಕಾಳಿಕಾಲಯಕ್ಕೆ ಹೋದನು. ಚಂದ್ರಹಾಸನು ಅದೇ ಕುದುರೆಯ ಮೇಲೆ ಕೂತುಕೊಂಡು ಛತ್ರಚಾಮರಾದಿ ವೈಭವಗಳಿಂದ ಕುಂತಲರಾಜನಿದ್ದಲ್ಲಿಗೆ ಬಂದನು. ನಮಸ್ಕಾರ ಮಾಡಿ ನಿಂತನು. ಚಂದ್ರಹಾಸನನ್ನು ನೋಡಿ ರಾಜನು, ಗಾಲವರನ್ನು ನೋಡಿ ಸ್ವಾಮಿ! ನಾನು ಸಮಸ್ತರಾಜ್ಯವನ್ನೂ ಪರಿತ್ಯಾಗ ಮಾಡಿ ವನಕ್ಕೆ ಹೋಗುವೆನು. ವಿಷ್ಣುಭಕ್ತನಲ್ಲಿ ಸಮಸ್ತವನ್ನೂ ಪರಿತ್ಯಾಗ ಮಾಡುವೆನು ಎಂದನು. ಅದಕ್ಕೆ ಗಾಲವರು ಸರಿಯೆಂದರು. ತರುವಾಯ ಆಗಲೇ ಮಗಳಾದ ಚಂಪಕಮಾಲಿನಿಯನ್ನು ಚಂದ್ರಹಾಸನಿಗೆ ಕೊಟ್ಟನು. ಚಂದ್ರಹಾಸನಿಗೆ ಸಮಸ್ತ ರಾಜ್ಯವನ್ನೂ ಒಪ್ಪಿಸಿ ತಾನು ವಸ್ತ್ರವನ್ನೂ ಸಹ ಪರಿತ್ಯಾಗ ಮಾಡಿ ಕೇವಲ ವೈರಾಗ್ಯವುಳ್ಳವನಾಗಿ ವನಕ್ಕೆ ಹೊರಟು ಹೋದನು.

ಚಂದ್ರಹಾಸನಿಗೆ ಸಿಂಹಾಸನದಲ್ಲಿ ಗಾಲವರು ಪಟ್ಟಾಭಿಷೇಕವನ್ನು ಮಾಡಿದರು. ಚಂದ್ರಹಾಸನು ಸಾಯಂಕಾಲದಲ್ಲಿ ಚಂಪಕಮಾಲಿನಿಯನ್ನು ಗಾಂಧರ್ವ ವಿವಾಹ ಮಾಡಿಕೊಂಡನು.

ಇತ್ತ ಮದನನು ಪುಷ್ಪಗಳನ್ನು ಹಿಡಿದುಕೊಂಡು ಬರುತ್ತಿರುವಾಗ ದಾರಿಯಲ್ಲಿ ಎರಡು ಬೆಕ್ಕುಗಳನ್ನು ಜಗಳಾಡುವುದನ್ನು ಕಂಡನು. ಸ್ವಲ್ಪದೂರ ಹೋಗುವಾಗ ಕೈಯಲ್ಲಿ ಇದ್ದ ಪುಷ್ಪದ ಪಾತ್ರೆಯು ಕೆಳಗೆ ಬಿದ್ದಿತು. ಕಣ್ಣಿನಿಂದ ರಕ್ತವು ಸುರಿಯಿತು. ಗೂಗೆಯು ಶಬ್ದಮಾಡುತ್ತಾ ಬಂದು ತಲೆಯ ಮೇಲೆ ಕೂತುಕೊಂಡಿತು. ಆದರೂ ಮದನನು ಲಕ್ಷ್ಯಮಾಡದೆ ವಿಷ್ಣುಭಕ್ತನಾದ ಜ್ಞಾನಿಯಾದ ಚಂದ್ರಹಾಸನಿಗೆ ಕ್ಷೇಮವಾಗಬೇಕಲ್ಲ ಎಂದು ಯೋಚನೆ ಮಾಡುತ್ತಾ ಕಾಳಿಕಾಲಯಕ್ಕೆ ಹೋಗಿ ಸೇರಿದನು. ಹೋಗಿ ಗುಡಿಯ ಬಾಗಿಲನ್ನ ಕೈಯಿಂದ ಬಡೆದನು. ಆ ಶಬ್ದವನ್ನು ಕೇಳಿ ಚಂಡಾಲರು ಓಡಿ ಬಂದು ಶೂಲದಿಂದ ಖಡ್ಗದಿಂದ ಪಟ್ಟಿಶ ಎಂಬ ಆಯುಧದಿಂದ ಮದನನನ್ನು ಚೆನ್ನಾಗಿ ಬಡೆದರು. ಮದನನು 'ಅಮ್ಮ ತಾಯಿ ಚಂಡಿಕೆ! ನಾನು ಕೋಣವಲ್ಲ, ನಿಶುಂಭ ಎಂಬ ದೈತ್ಯನಲ್ಲ, ಶುಂಭನೂ ಅಲ್ಲ, ರಕ್ತಬೀಜನೂ ಅಲ್ಲವಲ್ಲಾ! ನನ್ನನ್ನು ಯಾಕೆ ಶೂಲದಿಂದ ಕುಕ್ಕುವಿ? ನಾನೀಗ ಬದುಕಬೇಕೆಂದು ಆಸೆ

ಪಡುವುದಿಲ್ಲ. ನೀನು ನನಗೆ ಸಾಕ್ಷಿಯಾಗು. ನಾನು ಪೂರ್ವದಲ್ಲಿ ಚಂದ್ರಹಾಸನಿಗಾಗಿ ಶಿರಸ್ಸನ್ನೂ ಕೈಗಳನ್ನೂ ಕೊಟ್ಟಿದ್ದೇನೆ ಎಂದಿರುವೆನು. ನನ್ನ ಋಣವು ಪರಿಹೃತವಾಯಿತು. ಹೀಗೆ ಹೇಳುತ್ತಾ ಪ್ರಾಣವನ್ನು ಬಿಟ್ಟನು. ಮಾಧವ ಎಂದು ಕೂಗುತ್ತಾ ಮರಣವನ್ನು ಹೊಂದಿದೆನು. ಆ ಧ್ವನಿಯನ್ನು ಕೇಳಿ ಚಂಡಾಲರು ಭಯಪಡುತ್ತಾ ನಾವು ಯಾರನ್ನು ಕೊಂದೆವು ಎಂದು ಹೇಳುತ್ತಾ ಹೊರಟುಹೋದರು.

ಚಂದ್ರಹಾಸನು ರಾಜ್ಯವನ್ನು ಪಡೆದು ಚಂಪಕಮಾಲಿನಿಯನ್ನು ಮದುವೆ ಮಾಡಿಕೊಂಡು ರಾತ್ರಿಯಲ್ಲಿ ಆನೆಯ ಮೇಲೆ ಕೂತುಕೊಂಡು ಮಹಾ ವೈಭವದಿಂದ ಧೃಷ್ಟಬುದ್ಧಿಗೆ ನಮಸ್ಕಾರ ಮಾಡಲಿಕ್ಕೆ ಬಂದನು. ಆಗ ದೂತರು ಮಂತ್ರಿಗಳೇ ಹೊಸರಾಜರು ಕುಂತಲರಾಜನ ಅಳಿಯ ನಿಮಗೂ ಅಳಿಯ ಚಂದ್ರಹಾಸ ಮಹಾರಾಜರು ಬರುತ್ತಿರುವರು ನೋಡಿರಿ ಎಂದರು. ಆಗ ಮಂತ್ರಿಯು ನಿಮ್ಮ ನಾಲಿಗೆಯನ್ನು ಕತ್ತರಿಸಿ ಬಿಡುತ್ತೇನೆ. ಯಾರು ಇನ್ನೊಬ್ಬ ಕುಂತಲದೇಶಕ್ಕೆ ರಾಜನಾಗಿ ಬರುವವನು ಯಾರು? ಎಂದನು. ಆಗ ದೂತನು ಸ್ವಾಮಿ! ಕಣ್ಣಿನಿಂದಲೇ ನೋಡಿರಿ ಎಂದರು. ಆ ಸಮಯದಲ್ಲಿ ಚಂದ್ರಹಾಸನು ಪತ್ನಿಯಿಂದ ಸಹಿತನಾಗಿ ಬಂದನು. ಧೃಷ್ಟಬುದ್ಧಿಯು ಕಣ್ಣು ಒರಸಿಕೊಂಡು ನೋಡಿದನು. ನನ್ನ ಮಗ ಮದನನೇ ಇರಬಹುದು. ಎದುರಲ್ಲಿ ರಾಜಕನ್ಯಾ ಚಂಪಕಮಾಲಿನೀ ಇದ್ದಾಳೆ ಹೀಗಂದುಕೊಂಡು ಗಟ್ಟಿಯಾಗಿ ಮದನ! ಏನು ಮಾಡಿದಿ ಎಂದು ಕೇಳಿದನು.

ಆಗ ಚಂದ್ರಹಾಸನು ಆನೆಯಿಂದ ಕೆಳಗೆ ಇಳಿದು ಬಂದು ಮಂತ್ರಿಯ ಕಾಲ ಮುಟ್ಟಿ ನಮಸ್ಕರಿಸಿದನು. ಧೃಷ್ಟಬುದ್ಧಿಯು ನೀನು ಕಾಳಿಕಾಲಯಕ್ಕೆ ಹೋಗಿಲ್ಲವೇ? ವಂಶವನ್ನೇ ನಾಶಮಾಡಿದಿ ಎಂದನು.

ಅದಕ್ಕೆ ಚಂದ್ರಹಾಸನು 'ನಾನು ಗಂಧಪುಷ್ಪಗಳನ್ನು ಹಿಡಿದುಕೊಂಡು ಹೋಗುತ್ತಿದ್ದೆನು. ಆಗ ಕುಂತಲರಾಜರ ಆಜ್ಞಾಧಾರಕನಾಗಿ ಮದನನು ಬಂದು ನನ್ನನ್ನು ತಡೆದು ತಾನೇ ಕಾಲಿಕಾಲಯಕ್ಕೆ ಹೋದನು ಎಂದನು.

ಧೃಷ್ಟಬುದ್ಧಿಯು ಕಠೋರವಾದ ಈ ಮಾತನ್ನು ಕೇಳಿದ ಕೂಡಲೇ ಕೈಮೇಲೆ ಎತ್ತಿಕೊಂಡು ತಲೆ ಬಿಚ್ಚಿಕೊಂಡು ವಿಲಾಪವನ್ನು ಮಾಡುತ್ತಾ ಓಡಿದನು. ಇನ್ನೊಬ್ಬರಿಗೋಸ್ಕರ ಮಾಡಿದ ಹೊಂಡದಲ್ಲಿ ಆ ಪುರುಷನೇ ಬೀಳುವನು. ಆದುದರಿಂದ ಇನ್ನೊಬ್ಬರಿಗೆ ಹಿತವನ್ನೇ ಮಾಡಬೇಕು. ಧೃಷ್ಟಬುದ್ಧಿಯು ಬೀಳುತ್ತಾ ಏಳುತ್ತಾ ಘೋರವಾದ ಮಾರ್ಗದಲ್ಲಿ ಓಡಿದನು. ದಾರಿಯಲ್ಲಿ ಸ್ಮಶಾನ ದಾರಿಯಲ್ಲಿ ಅನೇಕ ಭೂತಪ್ರೇತಭೇತಾಳಗಳು ಇವನು ನಮ್ಮನ್ನು ಮೀರಿ ಅಯೋಗ್ಯನು ಎಂದು

ಹೇಳುತ್ತಾ ಓಡಿಹೋದವು. ಧೃಷ್ಟಬುದ್ಧಿಯು ಚಿತೆಯ ಕಟ್ಟಿಗೆಗಳನ್ನೇ ಸೇರಿಸಿ ಬೆಂಕಿ ಮಾಡಿ ಹಿಡಿದುಕೊಂಡು ಕಾಳಿಕಾಲಯಕ್ಕೆ ಬಂದು ಖಡ್ಗ ಶೂಲಗಳಿಂದ ಸೀಳಲ್ಪಟ್ಟು ಕಾಳಿಕೆಯ ಮುಂಭಾಗದಲ್ಲಿ ಬಿದ್ದಿರುವ ಮದನನನ್ನು ನೋಡಿದನು. ತುಂಬಾ ವಿಲಾಪವನ್ನು ಮಾಡಿದನು. ವೈಷ್ಣವ ದ್ರೋಹವು ತನಗೆ ಫಲಿಸಿತು ಎಂದುಕೊಂಡನು. ಕಂಬಕ್ಕೆ ತಲೆಯನ್ನು ಬಡೆದುಕೊಂಡು ತಲೆ ಒಡೆದು ಪ್ರಾಣಬಿಟ್ಟನು.

ಮರುದಿವಸ ಪೂಜೆಗೆ ಬಂದ ಬ್ರಾಹ್ಮಣನು ಮಂತ್ರಿಯೂ ಅವನ ಮಗನೂ ಮೃತರಾಗಿರುವುದನ್ನು ನೋಡಿ ಚಂದ್ರಹಾಸನಿದ್ದಲ್ಲಿಗೆ ಬಂದು ಸಮಸ್ತವನ್ನೂ ತಿಳಿಸಿದನು. ಆ ಮಾತನ್ನು ಕೇಳಿ ಚಂದ್ರಹಾಸನು ಅತ್ಯಂತ ದುಃಖವುಳ್ಳವನಾಗಿ ಕಾಳಿಕಾಗುಡಿಗೆ ಬರುವವನಾಗಿ ಕಾಳಿಯ ಮುಂಭಾಗದಲ್ಲಿ ಬಿದ್ದಿರುವ ಎರಡು ಹೆಣಗಳನ್ನು ನೋಡಿದನು. ತ

ತರುವಾಯ ಚಂದ್ರಹಾಸನು ಅಮ್ಮ ಚಂಡಿಕೆ! ನೀನು ಕ್ರುದ್ಧಳಾಗಿದ್ದರೆ ನನ್ನನ್ನೇ ಸ್ವೀಕರಿಸು. ಇವರನ್ನೇಕೆ ವೃಥಾ ಸಂಹರಿಸಿದೆ? ಎಂದು ಹೇಳಿ ಸ್ನಾನ ಮಾಡಿ ಶುದ್ಧನಾಗಿ ಪುಣ್ಯಾಹವಾಚನೆಯನ್ನು ಮಾಡಿಕೊಂಡು ಅಗ್ನಿಕುಂಡವನ್ನು ಮಾಡಿ ಅಗ್ನಿಪ್ರತಿಷ್ಠೆಯನ್ನು ಮಾಡಿ ತುಪ್ಪ ಪಾಯಸ ಸಾಸಿವೆ ಇವುಗಳನ್ನು ಹೋಮಿಸಿ ತನ್ನ ದೇಹದ ಮಾಂಸವನ್ನೆಲ್ಲಾ ಕಿತ್ತಿ ಹೋಮಿಸಿದನು. ತಲೆ ಮತ್ತು ಎಲುಬು ಮಾತ್ರ ಉಳಿಯಿತು. ತರುವಾಯ ಚಂದ್ರಹಾಸನು ಅಮ್ಮ! ಭಗವಂತನ ಸನ್ನಿಧಾನ ಪಾತ್ರಳೇ. ಈಗ ನನ್ನ ಶಿರಸ್ಸನ್ನೇ ಕತ್ತರಿಸಿಕೊಳ್ಳುವೆನು. ಇದರಿಂದ ನಿನ್ನಲ್ಲಿ ಅಂತರ್ಹಿತನಾದ ಭಗವಂತನು ಪ್ರೀತನಾಗಲಿ' ಎಂದು ಹೇಳಿ ಖಡ್ಗವನ್ನು ಕುತ್ತಿಗೆಯಲ್ಲಿ ಇಟ್ಟುಕೊಳ್ಳುವಷ್ಟರಲ್ಲಿಯೇ ಕಾಳಿಕಾದೇವಿಯು ಪ್ರತ್ಯಕ್ಷಳಾದಳು. ಚಂದ್ರಹಾಸನೊಡನೆ ನಿನ್ನ ಸಂಹಾರವನ್ನು ಮಾಡಿಕೊಳ್ಳಬೇಡ. ಈ ಮಂತ್ರಿಯು ಮಹಾಪಾಪಿಯು ತನ್ನ ಪಾಪದಿಂದ ಮೃತನಾದನು. ಅವನ ಮಗನು ನಿನಗೆ ತಲೆಯನ್ನೂ ಕೈಗಳನ್ನೂ ಕೊಡುತ್ತೇನೆ ಎಂದಿರುವನು. ಆದುದರಿಂದ ತನ್ನ ಋಣವನ್ನು ಪರಿಹರಿಸಿಕೊಂಡಿರುವನು. ನಿನಗೆ ತನ್ನ ತಂಗಿಯನ್ನು ಮದುವೆ ಮಾಡಿಕೊಡುವ ಸಮಯದಲ್ಲಿ ನಿನಗಾಗಿ ತನ್ನ ತಲೆಯನ್ನೂ ಕೈಗಳನ್ನೂ ಕೊಡುತ್ತೇನೆ ಎಂದು ಹೇಳಿರುವನು. ಚಂದ್ರಹಾಸ! ನಿನಗೆ ನಾನೀಗ ಪ್ರಸನ್ನಳಾಗಿರುವೆನು. ಬೇಕಾದ ಎರಡು ವರಗಳನ್ನು ಕೇಳಿಕೊ. ನಿನಗೆ ನಾನು ಕೊಡುವೆನು ಎಂದು ಕಾಳಿಕಾದೇವಿಯು ಹೇಳಿದಳು. ಅದಕ್ಕೆ ಚಂದ್ರಹಾಸನು 'ನನಗೆ ಪ್ರತಿಜನ್ಮದಲ್ಲಿಯೂ ಹರಿಭಕ್ತಿಯು ಉಂಟಾಗಲಿ. ಇದು ಮೊದಲನೇ ವರ. ಎರಡನೇ ವರದಿಂದ ಈ ಸತ್ತವರೂ ಇಬ್ಬರೂ ಬದುಕಬೇಕು' ಎಂದನು.

ಆದಕ್ಕೆ ಕಾಳಿಕಾದೇವಿಯು ಚಂದ್ರಹಾಸ! ನಿನಗೆ ಪರಮಾತ್ಮನಲ್ಲಿ ದೃಢವಾದ ಭಕ್ತಿಯುಂಟಾಗುತ್ತದೆ. ನಿನಗೆ ಪರಾಕ್ರಮಶಾಲಿಯಾದ ಒಬ್ಬ ಮಗನು ಹುಟ್ಟುವನು. ಅವನು ಬಾಲ್ಯದಿಂದಲೇ ಭಗವಂತನನ್ನು ಸಂತೋಷಪಡಿಸುವನು. ಕಲಿಯುಗದಲ್ಲಿ ಯಾರು ನಿನ್ನ ಚರಿತ್ರೆಯನ್ನು ಪರಮಾತ್ಮನನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಪಠನೆ ಮಾಡುವರೋ ಅವರಿಗೆ ಪರಮಾತ್ಮನಲ್ಲಿ ಅತ್ಯಂತ ದೃಢವಾದ ಭಕ್ತಿಯು ಉಂಟಾಗುವುದು. ಚಂದ್ರಹಾಸ! ನನ್ನ ಮುಂದೆ ಬಾ. ಒಂದು ಮುಹೂರ್ತಕಾಲ ಕಣ್ಣು ಮುಚ್ಚಿಕೊಂಡು ಸುಮ್ಮನೆ ಇರು ಎಂದು ಹೇಳಿದಳು. ಚಂದ್ರಹಾಸನು ಹಾಗೆಯೇ ಮಾಡಲು ಖಡ್ಗಶಕ್ತಿಗದಾದಿ ಆಯುಧಗಳಿಂದ ಕೂಡಿದ ಕಾಳಿಕಾದೇವಿಯು ಅರ್ಧಮುಹೂರ್ತ ಚಂದ್ರಹಾಸನ ತಲೆಯ ಮೇಲೆ ಜ್ಞಾನಪ್ರದವಾದ ಹಸ್ತವನ್ನು ಇಟ್ಟರು. ತರುವಾಯ ಚಂದ್ರಹಾಸನು ಬದುಕಿಬಂದ ಧೃಷ್ಟಬುದ್ಧಿ ಮದನರನ್ನು ನೋಡಿದನು. ತಾನು ಪೂರ್ವದಂತೆಯೇ ಪುಷ್ಪದ ಮಳೆಯನ್ನು ಸುರಿಸಿದರು.

ತರುವಾಯ ಚಂದ್ರಹಾಸನು ಧೃಷ್ಟಬುದ್ಧಿಗೂ ಮದನನಿಗೂ ನಮಸ್ಕಾರವನ್ನು ಮಾಡಿದನು. ಮಾವನಾದ ಧೃಷ್ಟಬುದ್ಧಿಯನ್ನು ನಮಸ್ಕಾರಮಾಡಿ ಆಲಿಂಗನ ಮಾಡಿ 'ಇದೆಲ್ಲಾ ಭಗವಂತನ ಇಚ್ಛೆಯು. ಅವನ ಇಚ್ಛೆಯಿಲ್ಲದೆ ಯಾರು ಮೃತನಾಗುವನು. ಯಾರು ಬದುಕುವನು? ಆದುದರಿಂದ ಸರ್ವಪ್ರಯತ್ನದಿಂದ ಆ ಭಗವಂತನನ್ನೇ ಭಜಿಸುವ' ಎಂದನು. ತರುವಾಯ ಚಂದ್ರಹಾಸನು ಧೃಷ್ಟಬುದ್ಧಿ ಮದನರಿಂದ ಕೂಡಿಕೊಂಡು ಊರಿಗೆ ಬಂದನು.

ಪೂರ್ವದಲ್ಲಿ ಚಂದ್ರಹಾಸನು ಕುಂತಲಪುರಕ್ಕೆ ಬಂದಿರುವ ಸಮಯ ಧೃಷ್ಟಬುದ್ಧಿಯಿಂದ ಪೀಡಿಸಲ್ಪಟ್ಟ ಕುಳಿಂದನು ತುಂಬಾ ವೈರಾಗ್ಯವುಳ್ಳವನಾಗಿ 'ಭಗವಂತನೇ ನಿನ್ನ ಭಕ್ತನಾದ ನನ್ನ ಮಗನಾಗಿ ಕೊಡಲ್ಪಟ್ಟ ಚಂದ್ರಹಾಸನನ್ನು ಈ ಪಾಪಿಯಿಂದ ರಕ್ಷಣೆ ಮಾಡು ಎಂದು ಹೇಳಿ ಪತ್ನೀಸಹಿತನಾಗಿ ಬಂಧುಗಳಿಂದ ಸಹಿತನಾಗಿ ಅಗ್ನಿಪ್ರವೇಶ ಮಾಡಿದನು. ಸಮಯದಲ್ಲಿ ಜನರು ಹೋಗಿ ಧೃಷ್ಟಬುದ್ಧಿಯೊಡನೆ ನಿಮಗೆ ಸರ್ವದಾ ಹಿತವನ್ನು ಮಾಡುತ್ತಿದ್ದ ಕುಳಿಂದರಾಜನು ದುಃಖದಿಂದ ಪರಿವಾರ ಸಹಿತನಾಗಿ ಅಗ್ನಿಪ್ರವೇಶ ಮಾಡುತ್ತಿರುವನು ಎಂದು ಹೇಳಿದರು.

ಆದನ್ನು ಕೇಳಿ ಧೃಷ್ಟಬುದ್ಧಿಯು ಭಗವಂತನಿಂದ ಪ್ರೇರಿತನಾಗಿ ಹೀಗೆ ಯೋಚಿಸಿದನು. 'ಇವನ ಮಗನನ್ನು ನಾನು ಕೊಲ್ಲಿಸಿ ಆಯಿತು. ವಯಸ್ಸಾದ ಹಣರಹಿತನಾದ ಇವನನ್ನು ಏಕೆ ಕೊಲ್ಲಿಸಬೇಕು? ಪುತ್ರಹೀನನಾದ ಇವನು

ಮೃತಪ್ರಾಯನೇ ಆಗಿರುವನು' ಈ ಪ್ರಕಾರವಾಗಿ ಯೋಚಿಸಿ ಬೇಗನೇ ಹೋಗಿ ಅವನನ್ನು ತಡೆದನು. ಕುಳಿಂದ! ನಿನ್ನ ಹಣ ಹೋಯಿತೆಂದು ದುಃಖಪಡಬೇಡ. ನಿನ್ನ ಹಣವನ್ನು ರಾಜ್ಯವನ್ನು ತಿರುಗಿ ನಿನಗೇ ಕೊಡುತ್ತೇನೆ ಎಂದು ನಾನಾ ವಿಧವಾಗಿ ಸಮಾಧಾನಪಡಿಸಿದನು. ತರುವಾಯ ಕುಳಿಂದನು ಮಗನ ಮೇಲೆ ಆಸೆಯಿಂದ ಬೆಂಕಿಯಿಂದ ಎದ್ದು ದುಷ್ಟಬುದ್ಧಿಗೆ ನಮಸ್ಕರಿಸಿದನು. ಆಮೇಲೆ ಧೃಷ್ಟಬುದ್ಧಿಯು ತನ್ನ ರಾಜ್ಯಕ್ಕೆ ಹೋದನು.

ತರುವಾಯ ಕುಳಿಂದನು ಚಂದ್ರಹಾಸನಿಗೆ ಮದುವೆಯು ನಡೆದ ವಿಷಯ ಇತ್ಯಾದಿಗಳನ್ನು ಕೇಳಿ ಸಂತೋಷವುಳ್ಳವನಾಗಿ ದೇವರಿಗೆ ನಮಸ್ಕಾರವನ್ನು ಬ್ರಾಹ್ಮಣರಿಗೆ ಬೇಕಾದ ದ್ರವ್ಯವನ್ನು ಕೊಟ್ಟನು. ಚಂದ್ರಹಾಸನು ರಾಜ್ಯವನ್ನು ಹೊಂದಿ ಬ್ರಾಹ್ಮಣರನ್ನು ಸತ್ಕರಿಸಿದನು. ತನ್ನ ಬಂಧುಗಳಿಂದ ಕೂಡಿಕೊಂಡು ಮದನನಿಂದಲೂ ಬ್ರಾಹ್ಮಣರಿಂದಲೂ ಕೂಡಿಕೊಂಡು ರಾಜ್ಯಭಾರವನ್ನು ಮಾಡಿದನು. ತಂದೆಯಾದ ಕುಳಿಂದನನ್ನು ತಾಯಿಯಾದ ಮೇಧಾವತಿಯನ್ನೂ ತಾನಿದ್ದಲ್ಲಿಗೆ ತರಿಸಿಕೊಂಡನು. ಈಪ್ರಕಾರವಾಗಿ ಕುಂತಲದೇಶದಲ್ಲಿ ಮುನ್ನೂರುವರ್ಷ ರಾಜ್ಯಭಾರವನ್ನು ಮಾಡಿದನು. ವಿಷಯೆಯು ಚಂದ್ರಹಾಸನಿಂದ ಮಕರಧ್ವಜ ಎಂಬ ಮಗನನ್ನು ಹಡೆದಳು. ಚಂಪಕಮಾಲಿನಿಯು ಪದ್ಮಾಕ್ಷ ಎಂಬ ಮಗನನ್ನು ಹಡೆದಳು. ಈರೀತಿಯಾಗಿ ಚಂದ್ರಹಾಸನು ಬಾಲ್ಯದಲ್ಲಿ ಗೋಲಿ ಆಟಕ್ಕಾಗಿ ಸಾಲಿಗ್ರಾಮವನ್ನು ಇಟ್ಟುಕೊಂಡು ಆದರಲ್ಲಿ ಅಂದರೆ ಆದರಲ್ಲಿ ಅಂತರ್ಯಾಮಿಯಾದ ಪರಮಾತ್ಮನಲ್ಲಿ ಭಕ್ತಿಯುಳ್ಳವನಾಗಿ ಸಂಸಾರಸಮುದ್ರವನ್ನೇ ದಾಟಿದನು.

ಆದುದರಿಂದ ನಿತ್ಯವೂ ಸಾಲಿಗ್ರಾಮವನ್ನು ಪೂಜಿಸಬೇಕು. ಕಲಿಯುಗದಲ್ಲಿ ಪರಮಾತ್ಮನು ಸಾಲಿಗ್ರಾಮದಲ್ಲಿಯೂ ಯತಿಗಳಲ್ಲಿಯೂ ಸನ್ನಿಹಿತನಾಗಿರುವನು. ಪರಮಾತ್ಮನಿಗೆ ಎರಡು ವಿಧ ಪ್ರತಿಮೆಗಳು. ಚರಪ್ರತಿಮೆಗಳು ಅಚರಪ್ರತಿಮೆಗಳು. ಚರಪ್ರತಿಮೆಯು ಯತಿಗಳು ಅಚರ ಪ್ರತಿಮೆಯು ಸಾಲಿಗ್ರಾಮವು. ಸಂಸಾರಸಾಗರವನ್ನು ದಾಟಬೇಕೆಂಬ ಅಭಿಪ್ರಾಯವಿರುವ ಪಕ್ಷದಲ್ಲಿ ಭಕ್ತಿಯಿಂದ ಸಾಲಗ್ರಾಮವನ್ನು ಪೂಜಿಸಬೇಕು. ವಿಷ್ಣುಭಕ್ತರಾದ ಬ್ರಾಹ್ಮಣರಿಗೆ ಸಾಲಿಗ್ರಾಮದಾನ ಮಾಡುವುದರಿಂದ ಕ್ರಮದಿಂದ ಮೋಕ್ಷ ಉಂಟಾಗುವುದು. ಇತ್ಯಾದಿ ಮಹಾಮಹಿಮೆಯುಳ್ಳದ್ದು ಸಾಲಿಗ್ರಾಮವು.

ಚಂದ್ರಹಾಸನು ಈ ರೀತಿ ರಾಜ್ಯಭಾರವನ್ನು ಮಾಡುತ್ತಿರಲು ಧರ್ಮರಾಜನು ದುರ್ಯೋಧನಾದಿಗಳ ಸಂಹಾರವಾದ ಮೇಲೆ ಅಶ್ವಮೇಧಯಾಗವನ್ನು

ಮಾಡಿದನು. ಅದಕ್ಕೆ ಕುದುರೆಯನ್ನು ಬಿಟ್ಟಿರಲು ಕುದುರೆಯು ಅಲ್ಲಲ್ಲಿ ಸಂಚರಿಸುತ್ತಾ ಕುಂತಲನಗರಕ್ಕೂ ಬಂದಿತು. ಆ ಕುದುರೆಯನ್ನು ನೋಡಿ ಚಂದ್ರಹಾಸನ ಮಕ್ಕಳು ಆ ಕುದುರೆಯನ್ನು ಕಟ್ಟಿಹಾಕಿದರು. ಅದರ ಹಣೆಯಲ್ಲಿ ಪತ್ರದಲ್ಲಿ ಧರ್ಮರಾಜನು ಅಶ್ವಮೇಧಯಾಗವನ್ನು ಮಾಡುವನೆಂದೂ ಅದಕ್ಕೆ ಸಮರ್ಥರಾದ ರಾಜರು ಕುದುರೆಯನ್ನು ಕಟ್ಟಿಹಾಕಿದರೆ ಅರ್ಜುನನು ಯುದ್ಧಮಾಡಿ ಬಿಡಿಸಿಕೊಳ್ಳುವನೆಂದೂ ಅಸಮರ್ಥರಾದವರು ಕಪ್ಪವನ್ನು ಕೊಡಬೇಕೆಂದೂ ಬರೆದಿದ್ದಿತು. ಆ ವಿಷಯವನ್ನು ತಂದೆಯಾದ ಚಂದ್ರಹಾಸನೊಡನೆ ಹೇಳಿದರು. ಚಂದ್ರಹಾಸನು ಅದನ್ನು ಕೇಳಿ ಸಂತೋಷಪಟ್ಟನು. ಬಾಲ್ಯದಿಂದ ನಾನು ಸ್ಮರಿಸುತ್ತಿದ್ದ ಪರಮಾತ್ಮನನ್ನು ಪ್ರತ್ಯಕ್ಷವಾಗಿ ನೋಡುವ ಸುಯೋಗವು ಬಂದಿತು. ಅರ್ಜುನನೊಡನೆ ಕೃಷ್ಣಪರಮಾತ್ಮನು ಇಲ್ಲಿಗೆ ಬಂದೇ ಬರುವನು ಹೀಗೆಂದು ಹೇಳಿ ಕುದುರೆಯನ್ನು ಕಟ್ಟಿಹಾಕಲಿಕ್ಕೆ ಹೇಳಿದನು.

ಚಂದ್ರಹಾಸನು ಸೈನ್ಯಸಹಿತವಾಗಿ ನಗರದ ಹೊರಗೆ ನಿಂತಿದ್ದನು. ಆ ಸಮಯ ದಲ್ಲಿ ಕೃಷ್ಣಸಾರಥಿಯಾಗಿ ಅರ್ಜುನನು ಅಲ್ಲಿಗೆ ಬಂದನು. ಶಂಖಚಕ್ರಮುದ್ರೆಗಳನ್ನು ಧರಿಸಿಕೊಂಡು ದ್ವಾದಶನಾಮಗಳನ್ನು ಧರಿಸಿರುವ ಭಗವಂತನಿಗೆ ಸಮರ್ಪಿಸಿರುವ ತುಳಸೀದಳವನ್ನು ಶಿರಸ್ಸಿನಲ್ಲಿ ಧರಿಸಿರುವ ವಯೋವೃದ್ಧನಾದ ಜ್ಞಾನವೃದ್ಧನಾದ ವಿಷ್ಣುಭಕ್ತನಾದ ಚಂದ್ರಹಾಸನನ್ನು ಅರ್ಜುನನು ನೋಡಿ ಸಂತೋಷಪಟ್ಟನು. ಬಾಲ್ಯದಿಂದ ವಿಷ್ಣುಭಕ್ತನಾದ ಚಂದ್ರಹಾಸನನ್ನು ನೋಡಿ ನನ್ನ ಜನ್ಮವು ಸಫಲ ವಾಯಿತು. ಶ್ರೀಕೃಷ್ಣಪರಮಾತ್ಮನು ಶಂಖಚಕ್ರಗದಾಪದ್ಮಗಳನ್ನು ಧರಿಸಿ ಚತುರ್ಭುಜ ಗಳುಳ್ಳವನಾಗಿ ರಥದಲ್ಲಿ ಕಾಣಿಸಿಕೊಂಡನು. ಶ್ರೀಕೃಷ್ಣಪರಮಾತ್ಮನನ್ನು ನೋಡಿ ಚಂದ್ರಹಾಸನು ರಥದಿಂದ ಕೆಳಗೆ ಇಳಿದು ಅರ್ಜುನನು ನೋಡುವಂತೆ ನಮಸ್ಕರಿಸಿ ದನು.

ಶ್ರೀಭಗವಂತನು ಕೈಗಳಿಂದ ಚಂದ್ರಹಾಸನನ್ನು ಆಲಿಂಗನ ಮಾಡಿದನು. ಮತ್ತು ಪರಮಾತ್ಮನು ಅರ್ಜುನನೊಡನೆ 'ಅರ್ಜುನ! ಏಳು. ನನ್ನ ಭಕ್ತನಾದ ಧ್ರುವನಂತೆ ಇರುವ ಮಹಾಬಾಹುವಾದ ವೃದ್ಧನಾದ ಚಂದ್ರಹಾಸನನ್ನು ಆಲಿಂಗನ ಮಾಡು' ಎಂದನು. ಆಗ ಅರ್ಜುನನು 'ಭಗವಂತನೇ! ನಾನೀಗ ಯುದ್ಧ ಮಾಡತಕ್ಕವನಲ್ಲವೇ! ಹೇಗೆ ಆಲಿಂಗನ ಮಾಡಲಿ. ವಯಸ್ಸಾದವನಾದ ಪ್ರಯುಕ್ತ ಈ ರಾಜನಿಗೆ ನಮಸ್ಕಾರವನ್ನು ಮಾಡುವೆನು ಎಂದನು. ಆಗ ಭಗವಂತನು ನನ್ನ ಭಕ್ತನಿಗೆ ನಮಸ್ಕಾರವನ್ನೂ ಮಾಡಬೇಕು. ಆಲಿಂಗನೆಯನ್ನೂ ಮಾಡಬೇಕು. ವೈಷ್ಣವನ ಆಲಿಂಗನದಿಂದ ನೂರು ಕಪಿಲಾಗೋದಾನ ಮಾಡಿದ ಫಲವನ್ನು ಹೊಂದುವನು.

ನನ್ನ ಭಕ್ತರಲ್ಲಿ ಪ್ರೀತಿಯನ್ನು ಮಾಡುವುದು ಮಹಾಧರ್ಮವು. ವಿಷ್ಣುಭಕ್ತನಾದ ಈ ಚಂದ್ರಹಾಸನನ್ನು ಆಲಿಂಗಿಸು' ಎಂದು ಹೇಳಿದನು.

ತರುವಾಯ ಅರ್ಜುನನು ಪರಮಾತ್ಮನ ಮಾತಿನಂತೆ ಸಂತೋಷದಿಂದ ಚಂದ್ರಹಾಸನನ್ನು ಆಲಿಂಗನ ಮಾಡಿದನು. ಆಗ ಚಂದ್ರಹಾಸನು ಅರ್ಜುನ! ನಾನು ಯುದ್ಧಮಾಡಬೇಕೆಂದು ಬಂದೆನು. ಪರಮಾತ್ಮನ ಮಾತುಗಳಿಂದ ನಮಗಿಬ್ಬರಿಗೂ ಸಖ್ಯವು ಏರ್ಪಟ್ಟಿತು. ಆ ಭಗವಂತನನ್ನೇ ಆಶ್ರಯಿಸೋಣ ಎಂದನು. ತರುವಾಯ ಚಂದ್ರಹಾಸನು ಮಹಾಸಂಭ್ರಮದಿಂದ ಕೃಷ್ಣಾರ್ಜುನರನ್ನು ರಾಜ್ಯಕ್ಕೆ ಕರಕೊಂಡು ಹೋದನು. ತರುವಾಯ ಗಾಲವರನ್ನು ಕರೆದು ಭಗವಂತನ ಪೂಜೆಯನ್ನು ಮಾಡಿದನು. ಗಾಲವರಿಗೆ ಪರಮಾತ್ಮನು ಲೋಕಶಿಕ್ಷೆಗಾಗಿ ನಮಸ್ಕರಿಸಿದನು. ಗಾಲವರು ಪರಮಾತ್ಮನಿಗೆ ನಮಸ್ಕರಿಸಿದರು. ಕೃಷ್ಣಪರಮಾತ್ಮನು ಚಂದ್ರಹಾಸನಿಂದ ಪೂಜಿತನಾಗಿ ಮೂರು ರಾತ್ರಿ ಅಲ್ಲಿಯೇ ವಾಸಮಾಡಿದನು. ಆಮೇಲೆ ಗಾಲವರಿಂದ ಅನುಜ್ಞಾಪಡೆದು ಆ ನಗರದಿಂದ ಹೊರಟುಹೋದನು.

ಚಂದ್ರಹಾಸನು ಆ ರಾಜ್ಯವನ್ನೇ ಕೃಷ್ಣಪರಮಾತ್ಮನಿಗೆ ಸಮರ್ಪಿಸಿದನು. ಕೃಷ್ಣಪರಮಾತ್ಮನು ಅರ್ಜುನನ ಅನುಜ್ಞೆಯಿಂದ ರಾಜ್ಯವನ್ನು ಅವನ ಮಗನಿಗೆ ಒಪ್ಪಿಸಿದನು. ಅರ್ಜುನನು ಚಂದ್ರಹಾಸನ ದರ್ಶನದಿಂದ ಅತ್ಯಂತ ಸಂತೋಷವನ್ನು ಹೊಂದಿದನು. ಚಂದ್ರಹಾಸನ ಆಶ್ರಯದಿಂದ ಊರಿನ ಜನರೂ ಧೃಷ್ಟಬುದ್ಧಿಯೂ ಮದನನೂ ಕೃಷ್ಣಪರಮಾತ್ಮನ ದರ್ಶನವನ್ನು ಮಾಡಿ ಸಂತೋಷಪಟ್ಟು ಕೃತಾರ್ಥ ರಾದರು. ಈಪ್ರಕಾರವಾದ ಚಂದ್ರಹಾನ ಚರಿತ್ರೆಯನ್ನು ಭಕ್ತಿಯಿಂದ ಯಾರು ಕೇಳುತ್ತಾನೋ ಹೇಳುತ್ತಾನೋ ಅವನು ಬಲವನ್ನೂ ಆಯುಷ್ಯವನ್ನೂ ಈ ಸದಾಚಾರ ಸಂಪನ್ನರಾದ ವಿಷ್ಣುಭಕ್ತರಾದ ಮಕ್ಕಳನ್ನೂ ಹೊಂದುವನು. ಅಂತವನಿಗೆ ಪರಮಾತ್ಮ ನಲ್ಲಿ ದೃಢವಾದ ಭಕ್ತಿಯುಂಟಾಗಿ ಕ್ರಮದಿಂದ ಮೋಕ್ಷವು ಉಂಟಾಗುವುದು. ತರುವಾಯ ಚಂದ್ರಹಾಸನು ಮಗನಿಗೆ ಪಟ್ಟ ಕಟ್ಟಿ ಅರ್ಜುನನ ಸೈನ್ಯದೊಡನೆ ಕುದುರೆಯ ಹಿಂದೆಯೇ ಹೋದನು.



# ನೀಲಧ್ವಜರಾಜನು [1]

ಮಾಹಿಷ್ಮತೀನಗರದಲ್ಲಿ ನೀಲಧ್ವಜ ಎಂಬ ರಾಜನಿದ್ದನು. ಅವನ ಪತ್ನಿಯ ಹೆಸರು ಜ್ವಾಲಾ. ಅವನಿಗೆ ಪ್ರವೀರ ಎಂಬ ಮಗನಿದ್ದನು. ರಾಜಪತ್ನಿಯಾದ ಜ್ವಾಲೆಯು ಸರ್ವಲಕ್ಷಣಸಂಪನ್ನಳಾದ ಪರಮಸುಂದರಿಯಾದ ಸ್ವಾಹಾ ಎಂಬ ಮಗಳನ್ನು ಹಡೆದಳು. ಅವಳು ಯೌವನವನ್ನು ಹೊಂದಿದಳು. ಮೂರುಲೋಕವನ್ನೂ ಮೋಹಗೊಳಿಸುವಂತೆ ಇದ್ದಳು. ತಂದೆಯು ಮಗಳನ್ನು ನೋಡಿ ಯಾರಿಗೆ ಮದುವೆ ಮಾಡಿಕೊಡಲಿ? ಎಂದು ಯೋಚನೆ ಮಾಡಿದನು. ಅಮ್ಮ! ನಿನಗೆ ಯಾರು ಗಂಡನಾಗಬಹುದು? ಸಾವಿರಾರು ರಾಜರೂ ರಾಜಪುತ್ರರೂ ಇದ್ದಾರೆ. ಅವರ ಚಿತ್ರಗಳನ್ನು ತೋರಿಸುತ್ತೇನೆ. ನೋಡಿ ಹೇಳು ಎಂದನು. ಅದಕ್ಕೆ ಅವಳು ಸ್ವಲ್ಪ ಲಜ್ಜಾ ಉಳ್ಳವಳಾಗಿ 'ನಾನು ಯಾವ ಮನುಷ್ಯನನ್ನೂ ಇಚ್ಛಿಸುವುದಿಲ್ಲ. ದೇವತೆಗಳಲ್ಲಿ ನನಗೆ ಯೋಗ್ಯನಾಗಿರುವ ವರನನ್ನು ಯೋಚಿಸು ಎಂದರು. ತಂದೆಯು ಹಾಗಾದರೆ ದೇವೇಂದ್ರನನ್ನು ಸ್ವೀಕರಿಸು. ದೇವೇಂದ್ರನು ಮಾನುಷಸ್ತ್ರೀಯರಲ್ಲಿ ಕಾಮುಕನಾಗಬರುವನು. ಮದಭರಿತವಾದ ಆನೆಯಲ್ಲಿ ಕೂತುಕೊಂಡು ಬರುವನು ಎಂದನು.

ಅದಕ್ಕೆ ಸ್ವಾಹಾದೇವಿಯು ನಾನು ಇಂದ್ರದೇವರನ್ನು ಅಪೇಕ್ಷಿಸುವುದಿಲ್ಲ. ಮನುಷ್ಯರನ್ನು ಅಪೇಕ್ಷಿಸದೆ ಇರಲಿಕ್ಕೆ ಕಾರಣವನ್ನು ಹೇಳುತ್ತೇನೆ. ಸ್ತ್ರೀಯಾದವಳು ಒಬ್ಬ ಪತಿಯನ್ನು ಹೊಂದಿ ಮತ್ತೊಬ್ಬ ಪುರುಷನ ಸ್ಪರ್ಶವನ್ನು ಮಾಡಿದರೆ ಅವಳು ಘೋರವಾದ ನರಕವನ್ನು ಹೊಂದುವಳು. ಪತಿಯ ಮರಣಾನಂತರದಲ್ಲಿ ಅಗ್ನಿಯ ಸ್ಪರ್ಶವನ್ನು ಅವಶ್ಯವಾಗಿ ಮಾಡಬೇಕು. ಅಂತಹ ಅಗ್ನಿದೇವರೇ ನನಗೆ ಪತಿಯಾಗಬೇಕು. ಬೇರೆ ದೇವತೆಯನ್ನಾಗಲೀ ಮನುಷ್ಯನನ್ನೋ ಯಾರನ್ನೂ ಅಪೇಕ್ಷಿಸುವುದಿಲ್ಲ. ಅಗ್ನಿದೇವರು ತಾನಾಗಿ ಬಂದು ನನ್ನನ್ನು ಕೇಳಿದ ಪಕ್ಷದಲ್ಲಿ ಅವರಿಗೇನೇ ಕೊಡಬೇಕು ಎಂದು ಹೇಳಿದಳು. ಅದನ್ನು ಕೇಳಿ ನೀಲಧ್ವಜರಾಜನು ಸಂತೋಷವನ್ನು ಹೊಂದಿದನು. ಕನ್ಯೆಯರೆಲ್ಲಾ ಅಪಹಾಸವನ್ನು ಮಾಡಿದರು. ಮಡ್ಡಳೇ! ಏನು ವಿಪರೀತವಾಗಿ ಹೇಳುವಿ? ಸರ್ವಭಕ್ಷಕನಾದ ಅಗ್ನಿಯನ್ನು ಹೇಗೆ ಅಪೇಕ್ಷಿಸುವಿ ಎಂದು ಕೇಳಿದರು.

ಸ್ವಾಹೆಯು ಅವರ ಮಾತನ್ನು ಕೇಳಿ ಬೇಗನೇ ಶುಭ್ರವಾದ ಸೀರೆಯನ್ನು ಧರಿಸಿ

1. ಜೈ.ಭಾ.ಅ.ಶ್ವ-15

ಅಗ್ನಿಸ್ಥಾಪನಾಮಾಡಿ ಬ್ರಾಹ್ಮಣರಿಂದ ಕೂಡಿಕೊಂಡು ಧ್ಯಾನಮಾಡುತ್ತಾ ಉಪವನದಲ್ಲಿ ಇದ್ದಳು. ಬೇಕಾದ ಫಲಗಳನ್ನು ಸಮರ್ಪಿಸಿ ಅಗ್ನಿದೇವರ ಪೂಜೆಯನ್ನು ಮಾಡುತ್ತಾ ಇದ್ದಳು. ಬಹುಕಾಲದ ಮೇಲೆ ನಾರದರಿಂದ ಬೋಧಿತರಾಗಿ ಅಗ್ನಿದೇವರು ಬ್ರಾಹ್ಮಣರೂಪದಿಂದ ನೀಲಧ್ವಜರಾಜನ ಬಳಿಗೆ ಬಂದರು. ರಾಜನು ಬ್ರಾಹ್ಮಣರನ್ನು ಸತ್ಕರಿಸಿ ಆಸನದಲ್ಲಿ ಕೂತುಕೊಳ್ಳಿಸಿ ಬಂದಿರುವ ಕಾರಣವನ್ನು ಕೇಳಿದನು. ಅದಕ್ಕೆ ಅಗ್ನಿದೇವರು ನಾನು ಕನ್ಯಾರ್ಥಿಯಾಗಿ ಬಂದಿರುವೆನು. ನಾನು ಶಾಂಡಿಲ್ಯಗೋತ್ರ ದವನು. ನಿನ್ನ ಮನೆಯಲ್ಲಿ ಕನ್ಯೆಯು ಇರುವಳು. ಅವಳನ್ನು ನನಗೆ ಕೊಡು ಎಂದು ಕೇಳಿದರು. ಅದಕ್ಕೆ ರಾಜನು ನನ್ನ ಮಗಳು ಮನುಷ್ಯರನ್ನು ವರಿಸುವುದಿಲ್ಲ. ಅವಳಿಗೆ ಅಗ್ನಿದೇವರಲ್ಲಿ ಆಸೆಯಿದೆ ಎಂದನು. ಅದಕ್ಕೆ ಅಗ್ನಿದೇವರು ಸ್ವಾಹಾಳ ಸತ್ಯದಿಂದ ಸಂತುಷ್ಟನಾಗಿ ಅವಳ ಅಭೀಷ್ಟವನ್ನು ಪೂರೈಸಲು ಬಂದಿರುವ ಬ್ರಾಹ್ಮಣ ರೂಪಿಯಾದ ಅಗ್ನಿಯು ನಾನು ಎಂದರು. ಈರೀತಿಯಾಗಿ ಅಗ್ನಿದೇವರ ಮಾತನ್ನು ಕೇಳಿ ಅಲ್ಲಿದ್ದ ಜನರು ಮಂದಹಾಸವುಳ್ಳವರಾಗಿ ಕನ್ಯಾನಿಮಿತ್ತವಾಗಿ ಅಗ್ನಿದೇವರು ಬ್ರಾಹ್ಮಣರೂಪ ದಿಂದ ಬಂದಿದ್ದ ಪಕ್ಷದಲ್ಲಿ ಮಂತ್ರಿಗಳಿಗೆ ಪರೀಕ್ಷಾ ಮಾಡಲಿಕ್ಕೆ ತಿಳಿಯದೆ ಇರುತ್ತದೆಯಾ ಎಂದರು. ಅದಕ್ಕೆ ಮಂತ್ರಿಯು ನಾವೆಲ್ಲರೂ ನಿಮ್ಮನ್ನು ಅಗ್ನಿಯೆಂದು ನಾವು ತಿಳಿಯಲಿಲ್ಲ. ನಿಮ್ಮ ಅಗ್ನಿರೂಪವನ್ನು ನಾವು ನೋಡಬೇಕು ಎಂದನು.

ತರುವಾಯ ಆ ಬ್ರಾಹ್ಮಣರ ಮುಖದಿಂದ ಬೆಂಕಿಯು ಬಂದಿತು. ಮಂತ್ರಿಯ ಮೀಸೆಯೂ ಸುಟ್ಟುಹೋಯಿತು. ಎಲ್ಲರೂ ನಡುಗಿ ಹೋದರು. ರಾಜನು ಅಗ್ನಿಸೂಕ್ತವನ್ನು ಜಪಿಸಿ ಆಗಲೇ ಶಾಂತ ಮಾಡಿದನು. ಆ ಸಮಯದಲ್ಲಿ ಒಂದು ವಿನೋದವುಂಟಾಯಿತು. ಕನ್ಯೆಯ ಚಿಕ್ಕತಾಯಿಯು ರಾಜನ ಹತ್ತಿರ ಹೇಳಿದಳು. ಈ ಬ್ರಾಹ್ಮಣರಿಗೆ ಹೆಣ್ಣನ್ನು ಕೊಡಬೇಡಿರಿ. ಐಂದ್ರಜಾಲಿಕ ವಿದ್ಯೆಯಿಂದ ಬೆಂಕಿಯನ್ನು ಉಂಟುಮಾಡಿರಬಹುದು ಎಂದು ಹೇಳಲು ರಾಜನು ನಗುತ್ತಾ ನನ್ನ ಅಳಿಯನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗು. ಅಗ್ನಿದೇವರೋ ಅಲ್ಲವೋ ನೀನೇ ಪರೀಕ್ಷಾ ಮಾಡು ಎಂದನು. ತರುವಾಯ ಅವಳು ಬ್ರಾಹ್ಮಣನನ್ನು ಕರೆದುಕೊಂಡು ತನ್ನ ಮನೆಗೆ ಹೋದಳು. ಬ್ರಾಹ್ಮಣರೇ! ನನಗೆ ಪರೀಕ್ಷಾಕೊಡಿರಿ ಎಂದಳು. ಆಗ ಅಗ್ನಿದೇವರು ಕೋಪಿಸಿ ಅವಳ ಮನೆಯನ್ನು ಸುಟ್ಟರು. ನಿಲ್ಲು ನಿಲ್ಲು ಎಂದು ಹೇಳಿ ಅವಳು ಉಟ್ಟಿರುವ ಪಟ್ಟೆಯ ಸೀರೆಯನ್ನೇ ಸುಟ್ಟರು. ಅವಳು ಉರಿಯುತ್ತಿರುವ ಸೀರೆಯನ್ನು ಬಿಚ್ಚಿ ಬಿಸಾಡಿ ಓಡಿಹೋದಳು. ಮಹತ್ತಾದ ಕೋಲಾಹಲವುಂಟಾಯಿತು. ಜನರೆಲ್ಲರೂ ಭಯದಿಂದ ಪೀಡಿತರಾಗಿ ಓಡಿಹೋದರು. ತರುವಾಯ ರಾಜನ

ಪತ್ನಿಯ ಸಹೋದರಿಯು ಅಳುತ್ತಾ ರಾಜನಿದ್ದಲ್ಲಿಗೆ ಬಂದು ನನ್ನ ಮನೆಯಿಂದ ಅಗ್ನಿಯನ್ನು ಆರಿಸು ಎಂದಳು. ರಾಜನು ಅಮ್ಮ ನೀನು ಪರೀಕ್ಷಿಸಿದೆಯಲ್ಲಾ ಎಂದನು. ಅದಕ್ಕೆ ಅವಳು ಒಳ್ಳೆಯ ಕೆಲಸವಾಯಿತು. ನಿಮ್ಮ ಅಳಿಯನು ನಿಮಗೇನೇ ಇರಲಿ ಎಂದಳು.

ಆಗ ರಾಜನು ಅಗ್ನಿದೇವರ ಹತ್ತಿರ ನೀವು ನಮ್ಮ ಪಟ್ಟಣವನ್ನು ಬಿಟ್ಟು ಹೋಗಬಾರದು. ಯಾರಾದರೂ ಯುದ್ಧಕ್ಕೆ ಬಂದರೆ ನನ್ನ ಮಾತಿನಂತೆ ಅವರನ್ನು ಸುಟ್ಟುಹಾಕಬೇಕು ಎಂದು ಹೇಳಿಕೊಂಡು ಅಗ್ನಿದೇವರು ಸುಮ್ಮತಿಯನ್ನು ತೋರಿಸಿದರು. ತರುವಾಯ ರಾಜನು ಒಳ್ಳೆಯ ಲಗ್ನವನ್ನು ನೋಡಿ ಮಗಳನ್ನು ಕೊಟ್ಟು ಮದುವೆ ಮಾಡಿದನು. ಮದುವೆಯಾಗಲು ಅಗ್ನಿದೇವರು ಸುಖವಾಗಿ ರಾಜನ ಮನೆಯಲ್ಲಿಯೇ ವಾಸಮಾಡಿಕೊಂಡು ಇದ್ದರು.

ಧರ್ಮರಾಜನ ಅಶ್ವಮೇಧಯಾಗದ ಕುದುರೆಯು ಸಂಚರಿಸುತ್ತಾ ಮಾಹಿಷ್ಮತೀ ನಗರವನ್ನು ಪ್ರವೇಶಿಸಿತು. ಆ ಸಮಯದಲ್ಲಿ ನೀಲಧ್ವಜನ ಮಗನಾದ ಪ್ರವೀರನು ವನದಲ್ಲಿ ಸ್ತ್ರೀಯರೊಡನೆ ವಿಹಾರವನ್ನು ಮಾಡುತ್ತಾ ಇದ್ದನು. ಅವನ ಪತ್ನಿಯಾದ ಮದನಮಂಜರಿಯು ವನದಲ್ಲಿ ತನ್ನ ಇಚ್ಛೆಯಿಂದ ಬಂದಿರುವ ಕುದುರೆಯನ್ನು ನೋಡಿದಳು. ರತ್ನಮಾಲೆಗಳಿಂದ ಅಲಂಕೃತವಾದ ಬೆಳಗಿರುವ ಹಣೆಯಲ್ಲಿ ಪತ್ರಿಕೆಯಿಂದ ಕೂಡಿರುವ ಆ ಕುದುರೆಯನ್ನು ತನ್ನ ಗಂಡನೊಡನೆ ತಿಳಿಸಿದಳು. ಪ್ರವೀರನು ಬಂದು ಆ ಕುದುರೆಯನ್ನು ಹಿಡಿದನು. ಅದರ ಹಣೆಯಲ್ಲಿ ಇದ್ದ ಪತ್ರವನ್ನು ಓದಿದನು. ಅದರಲ್ಲಿ ಧರ್ಮರಾಜನ ಅಶ್ವಮೇಧಯಾಗಕ್ಕಾಗಿ ಬಿಟ್ಟ ಕುದುರೆಯಿದು. ಇದನ್ನು ಅರ್ಜುನನು ರಕ್ಷಣೆ ಮಾಡುತ್ತಾ ಬರುತ್ತಿರುವನು. ರಾಜರು ಇದನ್ನು ಬಲಾತ್ಕಾರದಿಂದ ಹಿಡಿಯಲಿ ಎಂದು ಬರೆದಿತ್ತು. ಅದನ್ನು ನೋಡಿ ಪ್ರವೀರನು ಹೆಂಗಸರನ್ನು ಮನೆಗೆ ಕಳುಹಿಸಿ ಕುದುರೆಯನ್ನು ಕಟ್ಟಿ ಯುದ್ಧಕ್ಕೆ ಸಿದ್ಧನಾಗಿದ್ದನು.

ತರುವಾಯ ಅರ್ಜುನನು ಅನುಶಾಲ್ವ ಪ್ರದ್ಯುಮ್ನ ಯೌವನಾಶ್ವ ವೃಷಕೇತು ಇವರಿಂದ ಸಹಿತನಾಗಿ ಕುದುರೆಯನ್ನು ನೋಡುತ್ತಾ ಬಂದನು. ಎಲ್ಲರ ಮುಂದೆ ಕರ್ಣನ ಮಗನಾದ ವೃಷಕೇತುವು ಬರುತ್ತಿದ್ದನು. ಸೈನ್ಯ ಸಹಿತವಾಗಿ ನಿಲ್ಲು ನಿಲ್ಲು ಎಂದು ಹೇಳುತ್ತಾ ಧನುರ್ಧಾರಿಯಾಗಿ ನಿಂತಿರುವ ಪ್ರವೀರನನ್ನು ನೋಡಿದನು. ನೀಲಧ್ವಜನ ಮಗನಾದ ಪ್ರವೀರನು ಕುದುರೆಯನ್ನು ಊರಿನ ಒಳಗೆ ತೆಗೆದುಕೊಂಡು ಹೋಗಿದ್ದಾನೆ. ಅರ್ಜುನನು ಬಂದು ಬಿಡಿಸಲಿ ಎಂದನು. ಆಗ ವೃಷಕೇತುವು ಬಂದು ಮೊದಲು ನನ್ನೊಡನೆ ಯುದ್ಧವನ್ನು ಮಾಡು. ಆಮೇಲೆ ಅರ್ಜುನನ ಹತ್ತಿರ ಯುದ್ಧ

ಮಾಡುವಿಯಂತೆ ಎಂದನು. ತರುವಾಯ ಪ್ರವೀರನಿಗೂ ವೃಷಕೇತುವಿಗೂ ಭಯಂಕರ ಯುದ್ಧವಾಯಿತು. ಪ್ರವೀರನ ಬಾಣದಿಂದ ವೃಷಕೇತುವು ಮೂರ್ಛೆಯನ್ನು ಹೊಂದಿದನು. ಪ್ರವೀರನು ತರುವಾದ ಅನುಶಾಲ್ವನಿಗೆ ಒಂದು ಬಾಣವನ್ನು ಬಿಟ್ಟನು. ಅನುಶಾಲ್ವನು ಬಿಟ್ಟ ಘೋರಬಾಣಗಳಿಂದ ಪ್ರವೀರನು ಕಾಣಸದೇ ಹೋದನು.

ತರುವಾಯ ನೀಲಧ್ವಜನೇ ಅಗ್ನಿದೇವರಿಂದ ಸಹಿತನಾಗಿ ಮೂರು ಅಕ್ಷೌಹಿಣೀ ಸೈನ್ಯದಿಂದ ಕೂಡಿಕೊಂಡು ಯುದ್ಧಕ್ಕೆ ಬಂದನು. ಅನುಶಾಲ್ವನ ವಶನಾದ ತನ್ನ ಮಗನಾದ ಪ್ರವೀರನನ್ನು ಬಿಡಿಸಿದನು. ನೀಲಧ್ವಜನು ಸೈನ್ಯವನ್ನು ಬಡೆದನು. ಅದನ್ನು ನೋಡಿ ಅರ್ಜುನನು ರೋಷವುಳ್ಳವನಾಗಿ ನೀಲಧ್ವಜನ ಸಮೀಪಕ್ಕೆ ಹೋಗಿ ನಿಲ್ಲು ನಿಲ್ಲು ಎಂದು ಹೇಳಿ ಯುದ್ಧವನ್ನು ಮಾಡಿದನು. ಭಯಂಕರವಾದ ಯುದ್ಧವು ನಡೆಯಿತು. ಅರ್ಜುನನು ತನ್ನ ಅತಿಪೌರುಷವನ್ನು ತೋರಿಸಿದನು. ಸಾವಿರಾರು ಬಾಣಗಳಿಂದ ನೀಲಧ್ವಜನನ್ನು ಮೂರ್ಛಿತನನ್ನಾಗಿ ಮಾಡಿದನು. ತರುವಾಯ ನೀಲಧ್ವಜನು ಮೂರ್ಛೆಯಿಂದ ಎದ್ದು ಅಳಿಯನಾದ ಅಗ್ನಿದೇವನನ್ನು ಯುದ್ಧಮಾಡುವಂತೆ ಪ್ರೇರಿಸಿದನು. ಆಗ ಅಗ್ನಿದೇವರು ಸೈನ್ಯವನ್ನು ಸುಡಲಿಕ್ಕೆ ಆರಂಭಿಸಿದರು. ಜನರು ಓಡಲಿಕ್ಕೆ ಆರಂಭಿಸಿದರು.

ಆಗ ಅರ್ಜುನನು ಅಗ್ನಿಯ ಶಾಂತಿಗೋಸ್ಕರ ವಾರುಣಾಸ್ತ್ರವನ್ನು ಬಿಟ್ಟನು. ಆದರೂ ಅಗ್ನಿಯು ಶಾಂತವಾಗಲಿಲ್ಲ. ಆಗ ಅರ್ಜುನು 'ಅಗ್ನಿದೇವರೇ! ನೀವು ಎಲ್ಲಾ ದೇವತೆಗಳ ಮುಖದಂತೆ ಇರುವವರು. ನಿಮಗೆ ನಮಸ್ಕಾರವು. ನಿಮ್ಮ ಪ್ರೀತಿಗೋಸ್ಕರ ಧರ್ಮರಾಜರು ಅಶ್ವಮೇಧಯಾಗವನ್ನು ಮಾಡುವರು. ನೀವೇ ನನಗೆ ಗಾಂಡೀವ ಧನುಸ್ಸನ್ನು ಕೊಟ್ಟವರು. ದಿವ್ಯವಾದ ರಥವನ್ನು ಕೊಟ್ಟಿರುವಿರಿ. ಯಾವಾಗಲೂ ನನ್ನಲ್ಲಿ ಅತ್ಯಂತ ಸ್ನೇಹವುಳ್ಳವರಾಗಿದ್ದೀರಿ. ಈಗ ನನ್ನ ಸೈನ್ಯವನ್ನು ನಾಶಮಾಡಿದಿರಿ. ನನ್ನಲ್ಲಿ ಈಗ ಪ್ರೀತಿಯನ್ನು ಬಿಟ್ಟಿರುವಿರಷ್ಟೆ? ಎಂದನು. ಆದರೂ ಅಗ್ನಿದೇವರು ಸೈನ್ಯವನ್ನು ಸುಡುವುದನ್ನು ಬಿಡಲಿಲ್ಲ. ಆಗ ನಾರಾಯಣಾಸ್ತ್ರವನ್ನು ಅನುಸಂಧಾನ ಮಾಡಿದನು. ಆಗ ಅಗ್ನಿದೇವರು ಶಾಂತರಾದರು. ಅರ್ಜುನನ ಮುಂದೆ ನಿಂತರು.

ಅರ್ಜುನ! ನಾನು ಈಗ ಜ್ವಲಿಸಲಿಕ್ಕೆ ಕಾರಣ ನಿನ್ನನ್ನು ಶಿಕ್ಷಿಸಬೇಕೆಂದೇ. ಶ್ರೀಕೃಷ್ಣಪರಮಾತ್ಮನು ಹತ್ತಿರದಲ್ಲಿಯೇ ಇರುವಾಗ ಅಶ್ವಮೇಧಯಾಗವನ್ನು ಮಾಡುವಿಯಷ್ಟೆ! ಭಗವಂತನನ್ನು ಬಿಟ್ಟು ಯಾಗಗಳೂ ದೇವತೆಗಳೂ ಮಂತ್ರಗಳೂ

ಪವಿತ್ರವನ್ನಾಗಿ ಮಾಡಲು ಸಮರ್ಥಗಳಾಗವು. ಕ್ಷೀರಸಮುದ್ರವನ್ನು ಹೊಂದಿದ ಪುರುಷನು ಮೇಕೆಯ ಹಾಲನ್ನು ಕರೆಯುವಂತೆ ಇದೆ. ಅರ್ಜುನ ನಾನು ನಿನಗೆ ಮಿತ್ರನಾಗಿಯೇ ಇದ್ದೇನೆ. ಕೃತಘ್ನನಲ್ಲ. ನೀನೂ ಮೊದಲೆ ನಾರಾಯಣಾಸ್ತ್ರವನ್ನು ಬಿಟ್ಟಿದ್ದರೆ ಆಗಲೇ ಶಾಂತನಾಗುತ್ತಿದ್ದೆನು. ನಿನ್ನ ಸೈನ್ಯವನ್ನು ಸುಡುತ್ತಿರಲಿಲ್ಲ. ಯಾರೂ ಭಗವಂತನನ್ನು ಸ್ಮರಿಸುವರೋ ಅವರ ಸಂಸಾರ ಸಂತಾಪವೇ ಪರಿಹಾರವಾಗುವುದು. ನಾನು ಸುಟ್ಟಿರುವ ನಿನ್ನ ಸೈನ್ಯವೆಲ್ಲ ಪೂರ್ವದಂತೆಯೇ ಆಗುವುದು. ಅಂದರೆ ಪುನಃ ಬದುಕುವುದು. ನೀಲಧ್ವಜ ರಾಜನು ನನ್ನನ್ನು ಯುದ್ಧವನ್ನು ಮಾಡುವಂತೆ ಪ್ರೇರಿಸಿ ಮನೆಗೆ ಹೋಗಿರುವನು. ಅವನು ನಿನಗೆ ಕುದುರೆಯನ್ನು ತಂದುಕೊಡುವಂತೆ ಹೇಳುತ್ತೇನೆ.

ಈ ಪ್ರಕಾರವಾಗಿ ಹೇಳಿ ಅರ್ಜುನನೊಡನೆ ಕ್ಷಮಿಸುವಂತೆ ಹೇಳಿ ನೀಲಧ್ವಜರಾಜನ ಸಮೀಪಕ್ಕೆ ಹೋಗಿ ಅಗ್ನಿದೇವರು ನಿಂತರು. ಅಹಂಕಾರವುಳ್ಳ ರಾಜನು ಅಗ್ನಿದೇವರೊಡನೆ ಅರ್ಜುನನ ಸೈನ್ಯವನ್ನೆಲ್ಲಾ ಸುಟ್ಟುಹಾಕಿದಿರಿ. ಒಳ್ಳೆಯ ಕೆಲಸವನ್ನು ಮಾಡಿದಿರಿ. ನನ್ನ ಸಾಮರ್ಥ್ಯವನ್ನು ಅರ್ಜುನನು ತಿಳಿಯಲಿಲ್ಲ. ಮಂದಬುದ್ಧಿಯುಳ್ಳ ಅರ್ಜುನನು ನನ್ನನ್ನೂ ನನ್ನ ಅಳಿಯನಾದ ನಿಮ್ಮನ್ನೂ ಜಯಿಸಿ ಕುದುರೆಯನ್ನು ಬಿಡಿಸಿಕೊಂಡು ಹೋಗುವನೇ? ಎಂದನು.

ಆಗ ಅಗ್ನಿದೇವರು ನಗುತ್ತಾ ಅರ್ಜುನನ ಸೈನ್ಯವನ್ನು ನಾಶಮಾಡಲಿಕ್ಕೆ ಯಾರಿಂದ ಸಾಧ್ಯವಾಗುವುದು? ಅವನ ಮನಸ್ಸಿನಲ್ಲಿ ಸರ್ವಪಾಪ ಪರಿಹಾರಕನಾದ ಭಗವಂತನಿದ್ದಾನೆ. ರಾಜನ್! ಏಳು ಅರ್ಜುನನ ಹತ್ತಿರ ಕ್ಷಮೆಯನ್ನು ಕೇಳಿಕೊ. ಅವನ ಕುದುರೆಯನ್ನು ಕೊಟ್ಟುಬಿಡು. ಹಾಗೆ ಮಾಡಿದರೆಯೇ ನಿನಗೆ ಕ್ಷೇಮವುಂಟಾಗುವುದು. ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನ ಮಿತ್ರನಾದ ಅರ್ಜುನನ ಮುಂದೆ ನಾನು ಯಾರು? ಇಂದ್ರದೇವರ ಖಾಂಡವವನವನ್ನು ಬಾಣಗಳಿಂದ ತುಂಬಿಸಿದ್ದಾನೆ. ಮನೆಯ ಅಳಿಯ ಎಂಬ ಭಾವನೆಯಿಂದ ನಾನು ಸ್ನೇಹವನ್ನು ಬಿಟ್ಟು ಅರ್ಜುನನೊಡನೆ ಯುದ್ಧವನ್ನು ಮಾಡಿದೆನು ಎಂದು ಹೇಳಿದರು.

ನೀಲಧ್ವಜರಾಜನು ತನ್ನ ಪತ್ನಿಯಾದ ಜ್ವಾಲೆಯೊಡನೆ ನಾನು ಅರ್ಜುನನಿಗೆ ಕುದುರೆಯನ್ನು ಒಪ್ಪಿಸುವೆನು ಎಂದನು. ಅದಕ್ಕೆ ಅವಳು ನೀವು ಯಾಕೆ ಒಪ್ಪಿಸುವಿರಿ? ನಿಮಗೆ ಸಹಾಯಕ್ಕೆ ಮಕ್ಕಳು ಮೊಮ್ಮಕ್ಕಳು ಮಿತ್ರರು ಎಲ್ಲರೂ ಇದ್ದಾರೆ. ನೀವೂ ಪರಾಕ್ರಮಶಾಲಿಗಳಾಗಿದ್ದೀರಿ. ಬೇಕಾದ ಹಣವಿದೆ. ಕ್ಷತ್ರಿಯರಾಗಿದ್ದೀರಿ. ಮನುಷ್ಯರ ಜೀವನವು ಹೇಗಾದರೂ ಅನಿತ್ಯವು. ಈ ದಿವಸವೋ ನೂರು ವರ್ಷದ ಮೇಲೋ

ಸತ್ತೇ ಆಗಬೇಕು. ಆದುದರಿಂದ ಪರಾಕ್ರಮವನ್ನು ತೋರಿಸಬೇಕು. ಕುದುರೆಯನ್ನು ಎಷ್ಟು ಮಾತ್ರಕ್ಕೂ ಕೊಡಬಾರದು ಎಂದಳು. ಅದನ್ನು ಕೇಳಿ ರಾಜನು ಅವಳ ಮಾತಿಗೆ ವಶನಾಗಿ ಪುನಃ ಸೈನ್ಯ ಸಹಿತನಾಗಿ ಯುದ್ಧಕ್ಕೆ ಹೋದನು. ಅರ್ಜುನನು ಪುನಃ ಯುದ್ಧಕ್ಕೆ ಬಂದಿರುವ ನೀಲಧ್ವಜರಾಜನನ್ನು ನೋಡಿ ತುಂಬಾ ಕೋಪಿಸಿಕೊಂಡನು. ಭಯಂಕರವಾದ ಯುದ್ಧವು ನಡೆಯಿತು. ನೀಲಧ್ವಜನ ಮಕ್ಕಳೂ ಸಹೋದರರೂ ಸತ್ತರು. ನೀಲಧ್ವಜನ ರಥವು ಮುರಿದುಹೋಯಿತು. ಸಾರಥಿಯು ಬಿದ್ದನು. ಇನ್ನೊಂದು ರಥದಲ್ಲಿ ಕೂತುಕೊಂಡು ಯುದ್ಧವನ್ನು ಮಾಡಿದನು. ನೀಲಧ್ವಜವೇ ಮೂರ್ಛಿತನಾಗಿ ರಥದಲ್ಲಿ ಬಿದ್ದನು. ಸಾರಥಿಯು ಅವನನ್ನು ಯುದ್ಧರಂಗದಿಂದ ದೂರಕ್ಕೆ ಕರಕೊಂಡು ಹೋದನು. ತರುವಾಯ ರಾತ್ರಿಯಾಯಿತು.

ರಾಜನು ಹೆಂಡತಿಯೊಡನೆ ನಿನ್ನ ದುರ್ಬುದ್ಧಿಯಿಂದ ನನ್ನ ಮಿತ್ರರೂ ಮಕ್ಕಳೂ ಸತ್ತರು. ದುಷ್ಟಳೆ! ನೀನು ಇರುವುದಾದರೆ ಇರು ಎಲ್ಲಿಗಾದರೂ ಹೋಗುವುದಾದರೆ ಹೋಗು. ನಾನು ಕುದುರೆಯನ್ನು ಕೊಟ್ಟೇ ಕೊಡುವೆನು' ಎಂದು ಕೋಪಿಸಿಕೊಂಡು ಹೇಳಿ ಮರುದಿನ ಕುದುರೆಯನ್ನು ಕರೆದುಕೊಂಡು ಮಂತ್ರಿಯಿಂದ ಸಹಿತನಾಗಿ ಅನೇಕ ರತ್ನಗಳನ್ನೂ ಬಂಗಾರವನ್ನೂ ಸಾವಿರ ಸ್ತ್ರೀಯರನ್ನೂ ನಾನಾವಿಧ ವಸ್ತ್ರಗಳನ್ನೂ ಹಿಡಿದುಕೊಂಡು ಹೋಗಿ ಅರ್ಜುನನನ್ನು ನಮಸ್ಕರಿಸಿ ಕ್ಷಮಿಸಬೇಕು ಎಂದನು. ಅರ್ಜುನ! ನಾನು ನಿನ್ನ ಕಿಂಕರನು. ನಾನು ನಿನಗೆ ಯಾವ ಪ್ರಿಯವನ್ನು ಆಡಲಿ ಎಂದನು. ಅದಕ್ಕೆ ಅರ್ಜುನನು ರಾಜ! ನೀನು ಮಹಾಪರಾಕ್ರಮಶಾಲಿಯಾಗಿರುವಿ. ನಮ್ಮ ಕುದುರೆಯನ್ನು ರಕ್ಷಿಸುತ್ತಾ ನಮ್ಮೊಡನೆಯೇ ಬರತಕ್ಕವನಾಗು ಎಂದನು. ತರುವಾಯ ಅರ್ಜುನನ ಕುದುರೆಯು ದಕ್ಷಿಣಾಭಿಮುಖವಾಗಿ ಹೊರಟಿತು. ಅರ್ಜುನನು ನೀಲಧ್ವಜನಿಂದ ಸಹಿತನಾಗಿ ಕುದುರೆಯ ಹಿಂದೆಯೇ ಹೋದನು.

ಜ್ವಾಲೆಯು ಕೋಪಿಸಿಕೊಂಡು ಉಲ್ಮುಕ ಎಂಬ ತನ್ನ ಸಹೋದರನ ರಾಜ್ಯಕ್ಕೆ ಹೋದಳು. ತನ್ನ ಸಹೋದರನ ಸಮೀಪಕ್ಕೆ ಅಳುತ್ತಾ ಹೋದಳು. ಅಣ್ಣನಿಗೆ ನಮಸ್ಕರಿಸುತ್ತಾ ಅಳುತ್ತಾ ಅರ್ಜುನನಿಂದಾಗಿ ನನ್ನ ಮನೆಯು ಮುಳುಗಿಹೋಯಿತು. ನನ್ನ ಗಂಡನು ಸೋತುಹೋದರು ಮಕ್ಕಳು ಸತ್ತರು. ಮೈದುನರು ಮೃತರಾದರು. ಸೈನ್ಯವು ನಷ್ಟವಾಯಿತು. ಕುದುರೆಯನ್ನು ಬಿಡಿಸಿಕೊಂಡು ಹೋದನು. ರಾಜನನ್ನೇ (ಅರ್ಜುನನು)ಕರೆದುಕೊಂಡು ಹೋದನು. ಅಂತಹ ಅರ್ಜುನನ್ನು ಕೊಂದರೆ ತಾನೇ ನೀನು ನನ್ನ ಅಣ್ಣನು ಎಂದನು. ಉಲ್ಮುಕನು ದೂತನ ಮಾತಿನಿಂದ ಜ್ವಾಲೆಯ ವಿಷಯವನ್ನೆಲ್ಲಾ ತಿಳಿದುಕೊಂಡು ತಂಗಿಯನ್ನು ಸಮಾಧಾನಪಡಿಸಿ ಅಮ್ಮ! ನೀನು

ಇಲ್ಲೇ ಇರು. ಇದು ನಿನ್ನ ರಾಜ್ಯವೆಂದೇ ತಿಳಿದುಕೋ. ಸ್ವಲ್ಪ ಸಮಯದಲ್ಲೇ ನಿನಗೆ ನಾನು ಪ್ರಿಯವನ್ನು ಮಾಡುವೆನು ಎಂದನು. ಅದಕ್ಕೆ ಜ್ವಾಲೆಯು ಕೋಪಿಸಿಕೊಂಡು ಈಗಲೇ ನೀನು ಯಾಕೆ ಹೋಗಲಾರೆ ಎಂದು ಕೇಳಿದಳು. ಆಗ ಉಲ್ಮುಕನು ಕೋಪಿಸಿಕೊಂಡು ದುಷ್ಟಳೇ ನಿನ್ನ ಮನೆಯನ್ನು ಮುಳುಗಿಸಿ ನನ್ನ ಮನೆಯನ್ನು ಮುಳುಗಿಸಲಿಕ್ಕೆ ಬಂದಿರುವಿಯಾ? ಈಗಲೇ ನನ್ನ ಮನೆಯನ್ನು ಬಿಟ್ಟುಹೋಗು ಎಂದನು.

ಜ್ವಾಲೆಯು ಅವನ ಮಾತನ್ನು ಕೇಳಿ ಕೂಡಲೇ ಅಲ್ಲಿಂದ ಹೊರಟುಹೋದಳು. ಗಂಗಾತೀರಕ್ಕೆ ಹೋದಳು. ಅಲ್ಲಿ ದೋಣಿಯನ್ನು ಹತ್ತಿ ಗಂಗೆಯನ್ನು ದಾಟುತ್ತಿರುವಾಗ ನನ್ನ ಎಡಪಾದಕ್ಕೆ ಒಂದಿಷ್ಟು ಗಂಗಾಜಲವು ತಾಗಿತು. ಆದರಿಂದ ನನಗೆ ಮಹಾಪಾಪವು ಬಂದಿತು ಎಂದಳು. ಆಗ ಹತ್ತಿರವಿದ್ದ ಜನರು ದುಷ್ಟಳೇ! ದೋಣಿಯಲ್ಲಿ ಕೂತುಕೊಂಡು ಏನು ಕ್ರೂರವಾದ ಮಾತನ್ನು ಆಡುವಿ? ಗಂಗಾಜಲವು ಸರ್ವಪಾಪಸಂಹಾರಕವೆಂದು ನಿನಗೆ ತಿಳಿಯಲಾರದೇ? ಗಂಗೆಯಲ್ಲಿ ಸ್ನಾನಮಾಡುವ ಮಾತ್ರದಿಂದ ಪಾಪಿಗಳೂ ಪಾಪರಹಿತರಾಗಿ ಸ್ವರ್ಗವನ್ನು ಹೊಂದುವರು. ಗಂಗಾ ಎಂಬ ಸ್ಮರಣೆ ಮಾಡುವ ಮಾತ್ರದಿಂದಲೇ ಪಾಪಿಯು ನರಕವನ್ನು ಹೊಂದಲಾರನು ಎಂದು ಹೇಳಿದರು. ಆಗ ಗಂಗಾಜಲದಿಂದ ನೀನು ಏನು ಹೇಳುತ್ತಿರುವೆ ಎಂದು ಮಾತು ಕೇಳಿಸಿತು. ಆಗ ಜ್ವಾಲೆಯು 'ಅಪುತ್ರಳೇ! ನನ್ನ ಮಾತನ್ನು ಕೇಳು. ನೀನೆ ಏಳು ಜನ ಮಕ್ಕಳನ್ನು ಕೊಂದಿರುವಿ. ಒಬ್ಬ ಮಗನು ಭೀಷ್ಮನು ಇದ್ದನು. ಅವನನ್ನೂ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಕೊಂದು ಹಾಕಿದನು. ಆದುದರಿಂದ ಮಕ್ಕಳಿಲ್ಲದಿರುವ ನಿನ್ನ ನೀರನ್ನು ದೂಷಿಸಿದೆನು ಎಂದಳು. ಅದನ್ನು ಕೇಳಿ ಗಂಗಾದೇವಿಯು ಕೋಪಿಸಿಕೊಂಡು ಆರನೇ ತಿಂಗಳಲ್ಲಿ ಅರ್ಜುನನ ತಲೆಯು ಬಿದ್ದುಹೋಗಲಿ ಎಂದು ಶಾಪವನ್ನು ಕೊಟ್ಟಳು. ಜ್ವಾಲೆಯು ಅಗ್ನಿಯಲ್ಲಿ ಪ್ರವೇಶಿಸಿ ಭಯಂಕರವಾದ ಬಾಣವಾಗಿ ಅರ್ಜುನನ ಮೃತ್ಯುವಿಗಾಗಿ ಬಭ್ರುವಾಹನನ ಬತ್ತಳಿಗೆಯನ್ನು ಸೇರಿಕೊಂಡಳು.



# ಹಂಸಧ್ವಜನ ಕಥೆ [1]

ಮುಂದೆ ಹೋದ ಅರ್ಜುನನ ಕುದುರೆಯು ಚಂಪಕಾಪುರಿಗೆ ಹೋಯಿತು. ಆ ಊರಿಗೆ ಹಂಸಧ್ವಜ ಎಂಬ ರಾಜನು. ಅವನು ದೂತರಮುಖದಿಂದ ತನ್ನ ರಾಜ್ಯಕ್ಕೆ ಕುದುರೆಯು ಬಂದಿತೆಂದೂ ಕುದುರೆಯ ಹಿಂದೆಯೇ ಅದನ್ನು ರಕ್ಷಿಸುತ್ತಾ ಸೈನ್ಯಸಹಿತನಾಗಿ ಅರ್ಜುನನು ಬರುತ್ತಿರುವನು ಎಂದೂ ವರ್ತಮಾನವನ್ನು ಕೇಳಿದನು. ಅದನ್ನು ಕೇಳಿ ಹಂಸಧ್ವಜನು ಮಂತ್ರಿಗಳಿಂದಲೂ ಮಕ್ಕಳಿಂದಲೂ ಸಹಿತನಾಗಿ ಯೋಚಿಸಿದನು.

ನಮ್ಮ ರಾಜ್ಯಕ್ಕೆ ಬಂದಿರುವ ಅರ್ಜುನನು ನೋಡ ಸಿಗುವನು. ಅರ್ಜುನನು ಇದ್ದಲ್ಲಿ ಕೃಷ್ಣಪರಮಾತ್ಮನು ಇದ್ದೇ ಇರುವನು. ನನಗೆ ಇಷ್ಟು ವಯಸ್ಸಾದರೂ ಕಣ್ಣಿನಿಂದ ಕೃಷ್ಣಪರಮಾತ್ಮನನ್ನು ನೋಡಲೇ ಇಲ್ಲ. ಆದುದರಿಂದ ನಮ್ಮ ಸೈನಿಕರೆಲ್ಲರೂ ಯುದ್ಧಕ್ಕೆ ಹೋಗಲಿ. ಈ ಪ್ರಕಾರವಾಗಿ ಹಂಸಧ್ವಜರಾಜನು ಹೇಳಿ ಸಂತೋಷದಿಂದ ಬಂದನು. ಆ ರಾಜನು ಪರಮ ವಿಷ್ಣುಭಕ್ತನಾಗಿದ್ದನು. ಅವನ ದೇಶದ ಜನರೆಲ್ಲರೂ ವಿಷ್ಣುಭಕ್ತರಾಗಿದ್ದರು. ಪರಸ್ಥಳದಿಂದ ಯಾರಾದರೂ ಬಂದರೂ ಅವರು ಏಕಪತ್ನೀ ವ್ರತವುಳ್ಳವರಾಗಿ ವಿಷ್ಣುಭಕ್ತರಾಗಿದ್ದರೆ ಮಾತ್ರ ತನ್ನ ರಾಜ್ಯದಲ್ಲಿ ಆಶ್ರಯ ಕೊಡುತ್ತಿದ್ದನು. ತನ್ನ ಭೃತ್ಯರಿಗೆ ಬೇಕಾದಷ್ಟು ಹಣವನ್ನು ಕೊಡುತ್ತಾ ಇದ್ದನು. ಸುಗತಿ, ಸುಮತಿ, ತುಷ್ಟ, ಶ್ರದ್ಧಾಲು ಎಂಬ ಮಂತ್ರಿಗಳು ಚಂದ್ರಸೇನ, ಚಂದ್ರಕೇತು, ಚಂದ್ರದೇವ, ಮಹಾಬಲ ,ನ್ಯಾಯವರ್ತಿ, ಘನಬಲ, ಧರ್ಮವಾಹ, ಅತಿಸುಂದರ ಎಂಬ ಮಕ್ಕಳೂ ಮತ್ತು ಸುಬಲ, ಸುರಥ, ಸಮ, ಸುದರ್ಶನ, ಸುಧನ್ವ ಎಂಬ ಐದು ಜನ ಬೇರೆ ಮಕ್ಕಳೂ ಇದ್ದರು. ಹಂಸಧ್ವಜನು ಎಲ್ಲರಿಗೂ ಯುದ್ಧಕ್ಕೆ ಹೊರಟುಹೋಗಬೇಕೆಂದು ಆಜ್ಞಾಮಾಡಿದನು. ಎಲ್ಲರೂ ಯುದ್ಧಕ್ಕೆ ಹೊರಟರು.

ರಾಜನು ದೊಡ್ಡ ಕೊಪ್ಪರಿಗೆಯಲ್ಲಿ ತುಂಬಾ ಎಣ್ಣೆಯನ್ನು ಹಾಕಿಸಿ ಅದನ್ನು ಒಲೆಯಲ್ಲಿಟ್ಟು ಕುದಿಸಿದನು. ಯಾರು ಸರಿಯಾದ ಸಮಯದಲ್ಲಿ ಯುದ್ಧಕ್ಕೆ ಬರುವುದಿಲ್ಲವೋ ಅವರನ್ನು ಕುದಿಯುವ ಎಣ್ಣೆಯಲ್ಲಿ ಹಾಕಿಸುತ್ತೇನೆ. ಅವನು ಮಗನಾಗಲಿ ಮೊಮ್ಮಗನಾಗಲಿ ಬಿಡುವಂತಿಲ್ಲ ಎಂದು ರಾಜನು ಆಜ್ಞಾಪಿಸಿದನು. ಇದನ್ನು ನೋಡಿಕೊಳ್ಳಲಿಕ್ಕೆ ಶಂಖ ಎಂಬ ಪುರೋಹಿತರೊಡನೆ ಹೇಳಿದನು. ಆ ಪುರೋಹಿತರ ವಶನಾಗಿಯೇ ರಾಜನು ರಾಜ್ಯವನ್ನು ಪರಿಪಾಲಿಸುತ್ತಿದ್ದನು. ರಾಜನ

1. ಜೈ.ಭಾ. ಅಶ್ವ. ಅ.17-21.

ಮಗನಾದ ಸುಧನ್ವನು ತಂದೆಗೆ ನಮಸ್ಕಾರ ಮಾಡಿ ತಾಯಿಗೂ ನಮಸ್ಕರಿಸಿದನು. ಕೈಯಲ್ಲಿ ಧನುಸ್ಸನ್ನು ಹಿಡಿದುಕೊಂಡು ತಾಯಿಗೆ ನಮಸ್ಕಾರ ಮಾಡಿ ಅಮ್ಮ! ನಾನು ಅರ್ಜುನನ ಹತ್ತಿರ ಯುದ್ಧಮಾಡಲಿಕ್ಕೆ ಹೋಗುತ್ತಿರುವೆನು ಎಂದನು. ಅದಕ್ಕೆ ತಾಯಿಯು ಮಗ! ಅರ್ಜುನನ ಹತ್ತಿರ ಯುದ್ಧವನ್ನು ಮಾಡು ಕೃಷ್ಣಪರಮಾತ್ಮನನ್ನು ಕರೆದುಕೊಂಡು ಬಾ. ಆ ಶ್ರೀಕೃಷ್ಣನ ಮಹಿಮೆಯನ್ನು ನಾರದರು ಬಹಳವಾಗಿ ಹೇಳಿರುತ್ತಾರೆ. ನನ್ನ ಯಜಮಾನರು ಅನೇಕ ಪರಾಕ್ರಮಶಾಲಿಗಳನ್ನು ಜಯಿಸಿರುವರು. ಆದರೆ ಶ್ರೀಕೃಷ್ಣಪರಮಾತ್ಮನನ್ನು ನೋಡಲೇ ಇಲ್ಲ. ನಾನು ಆ ಭಗವಂತನನ್ನು ನೋಡುವಂತೆ ಮಾಡು ಎಂದು ಹೇಳಿದಳು.

ಅದಕ್ಕೆ ಸುಧನ್ವನು ಅಮ್ಮನೇ! ನೀನು ಹೇಳಿದಂತೆ ನಾನು ಮಾಡುವೆನು. ಪೌರುಷನನ್ನು ನಾನು ತೋರಿಸುವೆನು. ಜಯವು ದೈವಾಧೀನವು. ನಾನು ಅಲ್ಲಿ ಕೃಷ್ಣಪರಮಾತ್ಮನನ್ನು ನೋಡಿ ವಿಮುಖನಾದರೆ ನಿನ್ನ ಹೊಟ್ಟೆಯಲ್ಲಿ ಹುಟ್ಟಿದವನಲ್ಲ. ಸದ್ಗತಿಯನ್ನು ಹೊಂದಲಾರೆನು. ಈಪ್ರಕಾರವಾಗಿ ಹೇಳಿ ಹೊರಗೆ ಬರುವಾಗ ಕುವಲಾ ಎಂಬ ಅಕ್ಕನು ಸಿಕ್ಕಿದಳು. ಅವನು ಸುಧನ್ವನಿಗೆ ಹೂವಿನ ಮಾಲೆಯನ್ನು ಹಾಕಿ ಅರ್ಜುನನ ಹತ್ತಿರ ಯುದ್ಧಕ್ಕೆ ಹೊರಟಿದ್ದಿ. ಸರಿಯಾಗಿ ಯುದ್ಧವನ್ನು ಮಾಡು. ಅತ್ತೆಯ ಮನೆಯಲ್ಲಿ ನನ್ನನ್ನೆಲ್ಲಾ ಅಪಹಾಸ ಮಾಡುತ್ತಾರೆ. ನಿನ್ನ ಅಪ್ಪನು ಮೂರ್ಖನಾಗಿದ್ದಾನೆ. ಕೃಷ್ಣನನ್ನು ಜಯಿಸುತ್ತೇನೆ ಎಂದು ಹೇಳುತ್ತಾನೆ. ದ್ವಾರಕಿಗೆ ಹೋಗಲಿಕ್ಕೆ ಸಮರ್ಥನಲ್ಲ. ಜಯಿಸಲಿಕ್ಕೆ ಇಚ್ಛಿಸುತ್ತಾನೆ ಎಂದು ನನ್ನೊಡನೆ ಎಲ್ಲರೂ ಹೇಳುತ್ತಾರೆ ಎಂದಳು. ತಂದೆಯು ಹೇಳಿದ ಮಾತನ್ನು ಸತ್ಯವನ್ನಾಗಿ ಮಾಡುತ್ತೇನೆ. ನಿನಗೆ ನಮಸ್ಕಾರವನ್ನು ಮಾಡಿ ಯುದ್ಧಕ್ಕೆ ಹೋಗುವೆನು ಎಂದು ಹೇಳಿ ಹೊರಗೆ ಹೋದನು. ಅಲ್ಲಿ ಸುಧನ್ವನ ಹೆಂಡತಿಯಾದ ಪ್ರಭಾವತಿಯು ಗಂಡನಿಗೆ ಆರತಿಯನ್ನು ಮಾಡಿದಳು. ಅನೇಕ ಸರಸ ಮಾತುಗಳನ್ನಾಡಿ ನಾನು ಋತುಸ್ನಾತಳಾಗಿದ್ದೇನೆ. ತಾವು ಕೃಷ್ಣಪರಮಾತ್ಮನ ದರ್ಶನೆಗೆ ಹೋಗುವಿರಿ. ಹಿಂತಿರುಗಿ ಬರಲಾರಿರಿ. ಆದುದರಿಂದ ವಂಶಕ್ಕೆ ಕಾರಣವಾದ ಸಂತತಿಯನ್ನು ಅನುಗ್ರಹಿಸಿ ಹೋಗಬೇಕು ಎಂದು ಹೇಳಿದಳು. ಸುಧನ್ವನು ಏನು ಹೇಳಿದರೂ ಪ್ರಭಾವತಿಯು ಕೇಳಲೇ ಇಲ್ಲ. ಕೊನೆಗೆ ಸುಧನ್ವನು ಅವಳ ಮನಸ್ಸಿನ ಅಭೀಷ್ಟದಂತೆಯೇ ನಡೆದು ಹೋಗಬೇಕಾಯಿತು.

ಅಂತಹ ಸಂದರ್ಭದಲ್ಲಿ ಹಂಸಧ್ವಜನು ಬಂದಿರುವ ವೀರರನ್ನೆಲ್ಲಾ ನೋಡಿ ಸುಧನ್ವನನ್ನು ಕಾಣದೆ ಎಲ್ಲಿ ಸುಧನ್ವನು ಕಾಣುವುದಿಲ್ಲ? ನನ್ನ ಆಜ್ಞೆಯು ಅವನಿಗೆ ತಿಳಿಯಲಿಲ್ಲವೇ? ಕುದಿಯುತ್ತಿರುವ ಎಣ್ಣೆಯ ಕೊಪ್ಪರಿಗೆಯು ಮರೆತುಹೋಯಿತೇ?

ಪ್ರಯಾಣ ಸೂಚಕವಾದ ದುಂದುಭಿಯ ಶಬ್ದವು ಅವನ ಕಿವಿಗಿ ಬೀಳಲಿಲ್ಲವೇ? ಅವನನ್ನು ಕೂದಲಿನಲ್ಲಿ ಹಿಡಿದು ಎಳೆದುಕೊಂಡು ಬನ್ನಿರಿ ಎಂದು ಆಜ್ಞಾಪಿಸಿದರು. ಆ ಸಮಯಕ್ಕೆ ಸರಿಯಾಗಿ ಸುಧನ್ವನೂ ಪತ್ನಿಯನ್ನು ಸಮಾಧಾನಪಡಿಸಿ ಬರುತ್ತಿದ್ದನು. ಜನರು ರಾಜನ ಆಜ್ಞೆಯನ್ನು ತಿಳಿಸಿ ಅವನನ್ನು ರಾಜನ ಬಳಿಗೆ ಕರೆದುಕೊಂಡು ಬಂದರು. ಸಮುದ್ರದಂತೆ ನಿಂತಿರುವ ಸೈನ್ಯವನ್ನು ನೋಡುತ್ತಾ ನನ್ನ ಆಜ್ಞೆಯನ್ನು ಯಾಕೆ ಮೀರಿದಿ? ಅದಕ್ಕೆ ಮಗನು ನಿಮ್ಮ ಸೊಸೆಯು ಋತುಸ್ನಾತಳಾದವಳು ಸಂತಾನವನ್ನು ಅಪೇಕ್ಷಿಸಿದಳು ಎಂದನು.

ಆಗ ರಾಜನು ನೀನು ಮೂರ್ಖನಾಗಿದ್ದಿಯಲ್ಲ! ಯುದ್ಧದಲ್ಲಿ ಸಾಕ್ಷಾತ್ ಕೃಷ್ಣಪರಮಾತ್ಮನನ್ನು ನೋಡದೆ ಇದ್ದಲ್ಲಿ ಸಂತಾನದಿಂದ ಏನು ಉಪಯೋಗ? ನೀನು ಕುಲವನ್ನೇ ವಂಚನೆ ಮಾಡಿದವನಾಗುವಿ. ನಿನ್ನಿಂದ ಪೂರ್ವಿಕರಿಗೆ ಪ್ರೀತಿಯುಂಟಾಗ ಲಾರದು. ಬರೀ ಮಕ್ಕಳಿಂದಲೇ ಸದ್ಗತಿಯಾಗುವ ಪಕ್ಷದಲ್ಲಿ ಹಂದಿಗಳಿಗೂ ನಾಯಿ ಗಳಿಗೂ ಸ್ವರ್ಗವಾಗಬೇಕು. ಕುದುರೆಯನ್ನು ರಕ್ಷಿಸಲಿಕ್ಕೆ ಅರ್ಜುನನು ಬರುತ್ತಿರುವನು. ಅವನನ್ನು ಒಂದು ಕ್ಷಣವೂ ಜಗತ್ಸ್ವಾಮಿಯಾದ ಶ್ರೀಕೃಷ್ಣಪರಮಾತ್ಮನು ಬಿಡಲಾರನು. ಇಂತಹ ಸಂದರ್ಭದಲ್ಲಿ ಉತ್ಸಾಹದಿಂದ ಬರುವುದನ್ನು ಬಿಟ್ಟು ಕಾಮುಕ ನಾಗಿರುವೆಯಾ? ಇಂತಹ ಕೃಷ್ಣಪರಾಙ್ಮುಖನನ್ನು ನಾನು ಕುದಿಯುವ ಕೊಪ್ಪರಿಗೆಯಲ್ಲಿ ಹಾಕಿ ಕುದಿಸುವೆನು. ದೂತರು ಬೇಗನೇ ಹೋಗಿ ಪುರೋಹಿತರಾದ ಶಂಖಲಿಖಿತರೊಡನೆ ಹೇಳಲಿ. ಅವರು ಹೇಳಿದಂತೆ ನಾನು ಮಾಡುವೆನು ಎಂದನು. ದೂತರು ಹೋಗಿ ಧರ್ಮಸಂಕಟದಲ್ಲಿ ರಾಜರು ಪ್ರಶ್ನೆಮಾಡುವರು. ಸುಧನ್ವನು ಸರಿಯಾದ ಸಮಯಕ್ಕೆ ಬರಲಿಲ್ಲ, ಸಂತಾನಾಪೇಕ್ಷಿಯಾಗಿ ಸಾವಕಾಶ ಮಾಡಿದನು. ತಂದೆಯ ಆಜ್ಞೆಯನ್ನು ಮೀರಿದನು. ಅವನಿಗೆ ಈಗ ಏನು ಮಾಡಬೇಕು ಎಂದು ಹೇಳಬೇಕು ಎಂದು ರಾಜರು ಕೇಳಿರುವರು ಎಂದರು.

ಅದಕ್ಕೆ ಲಿಖಿತರು ರಾಜನು ಮಗನ ಮೇಲಿನ ಸ್ನೇಹವನ್ನು ನೋಡದೆ ಕೊಪ್ಪರಿಗೆಗೆ ಹಾಕಬೇಕು. ಇಲ್ಲದಿದ್ದರೆ ಸುಳ್ಳುಹೇಳುವ ಆ ರಾಜನ ಬಳಿಯಲ್ಲಿ ನಾವು ಇರಲಾರೆವು. ಈ ಪ್ರಕಾರವಾಗಿ ಹೇಳಿ ಶಂಖ ಮತ್ತು ಲಿಖಿತರು ಅಲ್ಲಿಂದ ಹೊರಟುಹೋದರು. ದೂತರು ಬಂದು ತಿಳಿಸಲು ರಾಜನು ಮಂತ್ರಿಯೊಡನೆ ಮಗನನ್ನು ಕುದಿಯುವ ಎಣ್ಣೆಯುಳ್ಳ ಕೊಪ್ಪರಿಗೆ ಹಾಕಲಿಕ್ಕೆ ಹೇಳಿ ತಾನು ಶಂಖಲಿಕಿತರನ್ನು ಸಮಾಧಾನಪಡಿಸಿ ಕರತರಲಿಕ್ಕೆ ಹೋದನು. ಹೋಗಿ ಎಣ್ಣೆಯು ಕುದಿಯುತ್ತಿರುವ ಕೊಪ್ಪರಿಗೆಯ ಬಳಿಗೆ ಶಂಖಲಿಖಿತರನ್ನು ಕರೆದುತಂದನು.

ಸುಮತಿಯೆಂಬ ಮಂತ್ರಿಯು ಸುಧನ್ವನೊಡನೆ ಸುಧನ್ವ! ನಾನೇನು ಮಾಡಲಿ? ರಾಜರ ಆಜ್ಞೆಯು ಮೀರಲಾಗದಿದೆ ಎಂದನು. ಅದಕ್ಕೆ ಸುಧನ್ವನು ಏನು ಮಾಡಲಿದೆ? ರಾಜಾಜ್ಞೆಯನ್ನು ಅವಶ್ಯವಾಗಿ ನಡೆಸಬೇಕಾಗಿದೆ. ನನಗೆ ಮರಣದಿಂದ ಭಯವಿಲ್ಲ, ನನ್ನನ್ನು ಕುದಿಯುವ ಎಣ್ಣೆಯಲ್ಲಿ ಹಾಕಿಬಿಡು ಎಂದನು.

ಸುಮತಿಯು ಸ್ನಾನವನ್ನು ಮಾಡಿ ಶುಚಿರ್ಭೂತನಾಗಿ ತುಳಸೀಮಾಲೆಯನ್ನು ಧರಿಸಿರುವ ಭಗವಂತನನ್ನು ಸ್ಮರಿಸುತ್ತಿರುವ ಸುಧನ್ವನನ್ನು ಎತ್ತಿ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿದನು. ಸುಧನ್ವನು ಭಗವಂತನನ್ನು ನಾನಾ ವಿಧವಾಗಿ ಸ್ಮರಿಸಿ ನಾನು ನಿನ್ನನ್ನು ಅರ್ಜುನನ್ನೂ ನೋಡದೆ ಅರ್ಜುನನ ಬಾಣದಿಂದ ಸಾಯದೆ ಕಳ್ಳನಂತೆ ಸಾಯುವುದು ನನಗೆ ಸಂತೋಷಕರವಾಗಿಲ್ಲ, ನನ್ನನ್ನು ರಕ್ಷಿಸು ಎಂದು ಸ್ತೋತ್ರವನ್ನು ಮಾಡಿದನು. ಈರೀತಿಯಾಗಿ ಭಗವಂತನ ಸ್ಮರಣೆಯನ್ನು ಮಾಡಿದ್ದ ರಿಂದ ಎಣ್ಣೆಯು ತಣ್ಣಗಾಯಿತು. ಸುಧನ್ವನ ಮುಖವನ್ನು ನೋಡಿ ಜನರೆಲ್ಲರೂ ನೋಡಿ ಆಶ್ಚರ್ಯಪಟ್ಟರು. ಕಣ್ಣೀರು ಸುರಿಸಿದದರು. ಎದೆಗೆ ಬಡೆದುಕೊಂಡರು. ಸುಧನ್ವನಿಗೋಸ್ಕರ ರಾಜನು ನಮ್ಮನ್ನೇಕೆ ಎಣ್ಣೆಯಲ್ಲಿ ಹಾಕಬಾರದು ಎಂದು ಕೊಂಡರು. ಹಂಸಧ್ವಜನು ಶಂಖದಿಂದ ಕೂಡಿಕೊಂಡು ಬಂದು ಎಣ್ಣೆಯ ಮಧ್ಯದಲ್ಲಿ ಈಜುತ್ತಾ ಗೋವಿಂದ ದಾಮೋದರ ಮಾಧವ ಎಂದು ಭಗವನ್ನಾಮವನ್ನು ಜಪಿಸುತ್ತಾ ಇರುವ ಮಗನನ್ನು ನೋಡಿದರು.

ಆಗ ಶಂಖರು ರಾಜನೇ ಏನಿದು ಬೆಂಕಿಯು ಉರಿಯುತ್ತಾ ಇದ್ದರೂ ಎಣ್ಣೆಯು ಕುದಿಯಲಿಲ್ಲವೋ? ಔಷಧವನ್ನೇನಾದರೂ ನಿನ್ನ ಮಗನು ಹಾಕಿರುವನೋ! ಏನಾದರೂ ಮಂತ್ರವನ್ನು ತಿಳಿದಿರುವನೋ? ಅಥವಾ ಏನಾದರೂ ಇದರಲ್ಲಿ ಮೋಸವಿದೆಯಾ? ಇದರಲ್ಲಿ ಒಂದು ತೆಂಗಿನಕಾಯಿಯನ್ನು ಹಾಕಿ ಎಣ್ಣೆಯನ್ನು ಪರೀಕ್ಷಿಸುವ ಎಂದರು. ಈ ಮಾತನ್ನು ಕೇಳಿ ಜನರು ಸಂತಾಪವುಳ್ಳವರಾಗಿ ಆದರೂ ಮುನಿಗಳ ಭಯದಿಂದ ಆ ಶಂಖಋಷಿಗಳು ನೋಡುವಂತೆ ಒಂದು ತೆಂಗಿನಕಾಯಿ ಯನ್ನು ಆ ಎಣ್ಣೆಗೆ ಹಾಕಿದರು. ಆ ತೆಂಗಿನಕಾಯಿಯು ಒಡೆದುಹೋಯಿತು. ಒಂದು ತುಂಡು ಶಂಖರ ಹಣೆಗೆ ಬಂದು ತಾಗಿತು. ಎರಡನೇ ತುಂಡು ಲಿಖಿತರ ಹಣೆಗೆ ತಾಗಿತು. ಎಣ್ಣೆಯ ಧಾರೆಯು ಮೇಲೆ ಸಿಡಿಯಿತು.

ತರುವಾಯ ಶಂಖರು ಜನರೊಡನೆ ಸುಧನ್ವನನ್ನು ಎಣ್ಣೆಯಲ್ಲಿ ಹಾಕುವಾಗ ಏನು ಸ್ಮರಿಸಿಕೊಂಡನು. ಔಷಧವೇನಾದರೂ ಹಾಕಿದನೋ? ಅಥವಾ ಏನಾದರೂ ಮೂಲಿಕೆಯನ್ನು ಕಟ್ಟಿಕೊಂಡಿದ್ದಾನೋ? ಎಂದು ಕೇಳಿದರು. ಅದಕ್ಕೆ ದೂತರು

ಸುಧನ್ವನು ಮತ್ತೆ ಯಾವುದನ್ನು ಸ್ಮರಿಸಲಿಲ್ಲ. ಭಗವಂತನನ್ನು ಮಾತ್ರ ಸ್ಮರಿಸುತ್ತಿರುವನು ಎಂದರು. ಆಗ ಶಂಖರು ನನಗೆ ಧಿಕ್ಕಾರವಿರಲಿ. ನಾನು ತುಂಬಾ ಕಠಿಣವಾದವನು. ನನಗೆ ಸರಿಯಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವೆನು ಎಂದು ಹೇಳಿ ಎಣ್ಣೆಯ ಮಧ್ಯದಲ್ಲಿ ಹಾರಿದರು. ಸುಧನ್ವನನ್ನು ಆಲಿಂಗಿಸಿ ಕ್ಷತ್ರಿಯವೀರ! ಸಾಧು. ನಾನು ಅಯೋಗ್ಯನು. ನಿನ್ನನ್ನು ಕುದಿಯುವ ಎಣ್ಣೆಯಲ್ಲಿ ಹಾಕಿಸಿದೆನು. ಪರಮವೈಷ್ಣವನಾದ ನಿನ್ನನ್ನು ಸುಡಲಿಕ್ಕೆ ಹೇಗೆ ಸಾಧ್ಯವು ಎಂದು ಹೇಳುತ್ತಾ ಸುಧನ್ವನನ್ನು ಕರೆದುಕೊಂಡು ರಾಜನ ಬಳಿಗೆ ಬಂದು ನಿನ್ನ ಮಗನನ್ನು ನೋಡು. ಇವನಿಂದ ನಿನ್ನ ವಂಶವು ಉದ್ಧೃತವಾಗಿದೆ ಎಂದರು. ಹಂಸಧ್ವಜನೂ ಮಗನನ್ನು ಆಲಿಂಗಿಸಿ ಮಗ! ವಿಷ್ಣುಭಕ್ತನಾಗಿದ್ದಿ. ಏಳು ರಥವನ್ನು ಏರಿ ಯುದ್ಧದಲ್ಲಿ ಅರ್ಜುನನ ಸಾರಥಿಯಾದ ನನ್ನ ಅತಿಥಿಯಾದ ಕೃಷ್ಣಪರಮಾತ್ಮನನ್ನು ತೋರಿಸು ಎಂದು ಹೇಳಿದನು.

ತರುವಾಯ ಅತ್ಯಂತ ಅಲಂಕೃತವಾದ ಸರ್ವಸಾಮಗ್ರಿಯಿಂದ ಕೂಡಿದ ರಥವನ್ನು ಏರಿದನು. ಎಲ್ಲ ಸೈನಿಕರಿಂದ ಸಹಿತನಾದ ಹಂಸಧ್ವಜನು ವೀರರೇ ಆ ಕುದುರೆಯನ್ನು ಕಟ್ಟಿ ತನ್ನಿರಿ ಎಂದರು. ಅವನ ಮಾತಿನಿಂದ ಸೈನಿಕರು ಅಲಂಕೃತವಾದ ಆ ಕುದುರೆಯನ್ನು ಹಿಡಿದುಕೊಂಡು ಬಂದರು. ಸುಧನ್ವಾ ಸುರಥ ಇತ್ಯಾದಿಗಳೆಲ್ಲರೂ ಯುದ್ಧಕ್ಕೆ ಸಿದ್ಧರಾಗಿದ್ದರು. ಎಲ್ಲರೂ ಅರ್ಜುನನೊಡನೆ ಯುದ್ಧವನ್ನು ಮಾಡಲಿಕ್ಕೆ ಕುತೂಹಲವುಳ್ಳವರಾಗಿದ್ದರು. ನಾನಾ ವಿಧವಾದ ವಾದ್ಯಗಳನ್ನು ಬಾರಿಸಿದರು.

ಆ ಸಮಯದಲ್ಲಿ ಅರ್ಜುನನು ಪ್ರದ್ಯುಮ್ನನೊಡನೆ 'ಪ್ರದ್ಯುಮ್ನ! ಹಂಸಧ್ವಜನು ನಮ್ಮ ಕುದುರೆಯನ್ನು ಅಪಹರಿಸಿರುವನು. ಅದನ್ನು ಬಿಡಿಸಲಿಕ್ಕೆ ಯಾರು ಹೋಗುವುದು? ನೀನು ಯೌವನಾಶ್ವ ಅನುಶಾಲ್ವ ಕೃತವರ್ಮ ಸಾತ್ಯಕಿ ವೃಷಕೇತು ಅನಿರುದ್ಧ ನೀಲಧ್ವಜ ಎಲ್ಲರೂ ಇದ್ದೀರಿ. ನಾನೂ ಇದ್ದೇನೆ. ನೀನು ನಮಗೆಲ್ಲರಿಗೂ ನಾಥನಾಗಿದ್ದಿ. ನಾನು ಮೊದಲು ಯುದ್ಧಕ್ಕೆ ಹೋಗುವೆನು ಎಂದನು. ಅದಕ್ಕೆ ಪ್ರದ್ಯುಮ್ನನು ಹಾಗೆ ಹೇಳಬಾರದು. ಶ್ರೀಭಗವಂತನು ನೀನೇ ಪಾಂಡವರನ್ನು ನೋಡಿಕೊಂಡು ಬರಬೇಕೆಂದು ಹೇಳಿರುವನು. ನನ್ನ ಭುಜದ ಬಲವನ್ನು ನೋಡು. ಎಲ್ಲರನ್ನೂ ಜಯಿಸುತ್ತೇನೆ. ಎನ್ನಲು ವೃಷಕೇತುವು ನಮಸ್ಕಾರವನ್ನು ಮಾಡಿ ನಿಮ್ಮ ಮಾತು ಸರಿಯಲ್ಲ. ಬಾಯಿಯಿಂದ ಫೂ ಎಂದು ಊದಿ ಮಾಡಲಿಕ್ಕೆ ಆಗುವ ಕಾರ್ಯವಿದು. ಅದಕ್ಕೆ ಬಡಬಾಗ್ನಿಯನ್ನು ಬಿಡುವುದುಂಟೆ? ನಿಮ್ಮಿಂದ ಆಜ್ಞಪ್ತನಾಗಿ ಕುದುರೆಯನ್ನು ನಾನು ತರುವೆನು. ಈಪ್ರಕಾರವಾಗಿ ಹೇಳಿ ಅರ್ಜುನನು ಬೇಡವೆಂದು ಹೇಳಿದರೂ ಬಿಡದೆ ಯುದ್ಧಕ್ಕೆ ಹೋದನು. ಹಂಸಧ್ವಜನ ಬಲವನ್ನು ಕುರಿತು

ಶಂಖವನ್ನು ಊದಿದನು. ಯುದ್ಧಕ್ಕೆ ಬರುತ್ತಿರುವ ವೃಷಕೇತುವನ್ನು ನೋಡಿ ಸುಧನ್ವನು ಎದುರಿಸಿಕೊಂಡು ಬಂದನು. ಸುಧನ್ವನು ವೃಷಕೇತುವಿನೊಡನೆ ನೀನು ಯಾರು? ಯಾರ ಮಗನು? ನಿನ್ನ ಹೆಸರೇನು ಎಂದು ಕೇಳಿದನು. ಅದಕ್ಕೆ ವೃಷಕೇತುವು ನೀನು ಯಾರನ್ನು ಭೇದಿಸಿಕೊಂಡು ಹೋಗಲು ಉದ್ಯುಕ್ತನಾಗಿದ್ದಿಯೋ ಆ ಸೂರ್ಯದೇವರೇ ನನಗೆ ಪಿತಾಮಹರು. ದಾನಮಾಡುವವರಲ್ಲಿ ಶೂರನಾದ ಕರ್ಣನೇ ನನ್ನ ತಂದೆಯು. ಕಶ್ಯಪಕುಲದಲ್ಲಿ ಹುಟ್ಟಿದವನು. ನನ್ನ ಹೆಸರು ವೃಷಕೇತುವು.

ಆಗ ಸುಧನ್ವನು ನಾನು ಹಂಸಧ್ವಜನ ಮಗನು. ಸುಧನ್ವ ಎಂದು ನನ್ನ ಹೆಸರು. ಮಧುಚ್ಛಂದ ಎಂಬ ಋಷಿಗಳು ನಮ್ಮ ವಂಶಕ್ಕೆ ಕಾರಣರು. ನನ್ನ ಹತ್ತಿರ ಯುದ್ಧಮಾಡು. ಈಪ್ರಕಾರವಾಗಿ ಹೇಳಿ ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ವೃಷಕೇತುವಿನ ಪರಾಕ್ರಮವನ್ನು ನೋಡಿ ಸುಧನ್ವನು ಮೆಚ್ಚಿದನು. ಕೊನೆಗೆ ವೃಷಕೇತುವು ಸುಧನ್ವನಿಂದ ಮೂರ್ಛಿತನಾದನು. ಮೂರ್ಛಿತನಾದ ಅವನನ್ನು ಸಾರಥಿಯು ದೂರಕ್ಕೆ ಕರೆದುಕೊಂಡು ಹೋದನು. ತರುವಾಯ ಪ್ರದ್ಯುಮ್ನನು ಯುದ್ಧಕ್ಕೆ ಬಂದನು. ಇಬ್ಬರೂ ಸಮಸಮವಾಗಿ ಭಯಂಕರವಾಗಿ ಕಾದಾಡಿದರು. ಇಬ್ಬರೂ ಮೂರ್ಛಿತರಾಗಿ ಬಿದ್ದರು. ಸುಧನ್ವನು ಎದ್ದು ಮತ್ತೊಂದು ರಥವನ್ನು ಏರಿ ಸಾವಿರಾರು ವೀರರನ್ನು ಬಡೆದನು. ಕೃತವರ್ಮನನ್ನು ಬಡೆದನು. ಇಬ್ಬರಿಗೂ ಭಯಂಕರವಾದ ಕಾಳಗವು ನಡೆಯಿತು. ಕೃತವರ್ಮನ ರಥವನ್ನು ಮುರಿದು, ಕುದುರೆಗಳನ್ನೂ ಸಾರಥಿಯನ್ನೂ ಕೊಂದನು. ಕೃತವರ್ಮನು ಸುಧನ್ವನ ಬಾಣಗಳಿಂದ ಪೀಡಿತನಾಗಿ ಓಡಿಹೋದನು.

ತರುವಾಯ ಅನುಸಾಲ್ವನು ಸುಧನ್ವನ ಹತ್ತಿರ ಯುದ್ಧಕ್ಕೆ ಬಂದನು. ಅನುಸಾಲ್ವನು ಅನೇಕರನ್ನು ಕೊಂದನು. ಕೊನೆಗೆ ಅನುಶಾಲ್ವನು ಸುಧನ್ವನ ಬಾಣದಿಂದ ಸೀಳಲ್ಪಟ್ಟವನಾಗಿ ಭೂಮಿಯಲ್ಲಿ ಬಿದ್ದನು.

ತರುವಾಯ ಸಾತ್ಯಕಿಯು ಯುದ್ಧಕ್ಕೆ ಬಂದನು. ಬಹು ಯುದ್ಧವನ್ನು ಮಾಡಿದನು. ಕೊನೆಗೆ ಮೂರ್ಛಿತನಾದನು.

ಕೊನೆಗೆ ಅರ್ಜುನನೇ ಯುದ್ಧಕ್ಕೆ ಬಂದನು. ಬಹು ಜನರನ್ನು ಯುದ್ಧದಲ್ಲಿ ಜಯಿಸಿದಿ. ಇಂದ್ರದೇವರ ಬಲದಂತೆ ನಿನ್ನ ಬಲವು ಅಧಿಕವಾಗಿರುವುದು. ನಾನು ಅನೇಕ ಯುದ್ಧಗಳನ್ನು ಮಾಡಿರುವೆನು. ದ್ರೋಣಾಚಾರ್ಯರು ಭೀಷ್ಮಾಚಾರ್ಯರು ಕೃಪಾಚಾರ್ಯರು ಕರ್ಣ ಇವರೊಡನೆ ಮತ್ತು ದೇವತೆಗಳ ಹತ್ತಿರ ರುದ್ರದೇವರ

ಹತ್ತಿರವೂ ಯುದ್ಧವನ್ನು ಮಾಡಿರುತ್ತೇನೆ. ಆಗೆಲ್ಲ ಈಗ ನಿನ್ನನ್ನು ನೋಡಿ ಆಗುವಷ್ಟು ಆಶ್ಚರ್ಯವಾಗಿಲ್ಲ ಎಂದನು. ಆಗ ಸುಧನ್ವನು ಅರ್ಜುನ ಆ ಯುದ್ಧಗಳಲ್ಲಿ ನಿನಗೆ ಕೃಷ್ಣಪರಮಾತ್ಮನು ಸಾರಥಿಯಾಗಿ ಸಹಾಯಕನಾಗಿದ್ದನು. ಈಗ ಕೃಷ್ಣಪರಮಾತ್ಮನು ಇಲ್ಲ, ಆದುದರಿಂದ ಆಶ್ಚರ್ಯವಾಗುತ್ತದೆ. ಈಗ ಭಗವಂತನನ್ನು ಬಿಟ್ಟು ಬಂದಿದ್ದಿ. ಆದುದರಿಂದ ನಿನ್ನ ಕುದುರೆಯನ್ನು ಕಟ್ಟಿ ಹಂಸಧ್ವಜರಾಜರು ಅಶ್ವಮೇಧಯಾಗವನ್ನು ಮಾಡುವರು ಎಂದು ಹೇಳಿದನು. ತರುವಾಯ ಅರ್ಜುನನಿಗೂ ಸುಧನ್ವನಿಗೂ ವಿಚಿತ್ರವಾದ ಯುದ್ಧವು ನಡೆಯಿತು. ಕೊನೆಗೆ ಸುಧನ್ವನು ಅರ್ಜುನನ ಧನುಸ್ಸಿನ ಹಗ್ಗವನ್ನು ಅರ್ಧಚಂದ್ರಾಕಾರ ಬಾಣದಿಂದ ಕತ್ತರಿಸಿ ಮೂರು ಬಾಣಗಳಿಂದ ಸಾರಥಿಯನ್ನು ಸಂಹರಿಸಿ ಬಾಣರಹಿತನನ್ನಾಗಿ ಮಾಡಿದನು.

ಅರ್ಜುನ! ನಿನಗೀಗ ಸಾರಥಿಯಿಲ್ಲ, ನಿನ್ನ ಪೌರುಷವು ಎಲ್ಲಿಗೆ ಹೋಯಿತು? ಸರ್ವತ್ರ ವ್ಯಾಪ್ತನಾದ ಸಾರಥಿಯನ್ನು ಬಿಟ್ಟು ಒಬ್ಬ ಪ್ರಾಕೃತ ಪುರುಷನನ್ನು ಸಾರಥಿಯನ್ನಾಗಿ ಮಾಡಿಕೊಂಡೆಯಲ್ಲಾ! ನಿನ್ನ ಸಾರಥಿಯಾದ ಕೃಷ್ಣನನ್ನು ಸ್ಮರಿಸು ಎಂದನು. ತರುವಾಯ ಅರ್ಜುನನೇ ಕುದುರೆಗಳ ಹಗ್ಗವನ್ನು ಹಿಡಿದುಕೊಂಡು ಯುದ್ಧವನ್ನೂ ಮಾಡಲಿಕ್ಕೆ ಆರಂಭಿಸಿದನು. ಆಮೇಲೆ ಭಗವಂತನನ್ನು ಸ್ಮರಿಸಿದನು. ಅಷ್ಟರಲ್ಲಿ ರಥದಲ್ಲಿ ಕೃಷ್ಣಪರಮಾತ್ಮನು ಕಾಣಿಸಿದನು. ಅರ್ಜುನ! ಕುದುರೆಗಳ ಹಗ್ಗವನ್ನು ಬಿಡು. ನಾನು ಬಂದಿದ್ದೇನೆ ಎಂದು ಕರುಣಾಳುವಾದ ಭಗವಂತನು ನುಡಿದನು. ಅರ್ಜುನನು ಭಗವಂತನಿಗೆ ನಮಸ್ಕರಿಸಿ ಕುದುರೆಗಳ ಹಗ್ಗವನ್ನು ಬಿಟ್ಟು ಸುಧನ್ವನಿಗೆ ಬಾಣಬಿಡಲು ಆರಂಭಿಸಿದನು.

ಸುಧನ್ವನು ಅರ್ಜುನನ ರಥದಲ್ಲಿ ಕೂತಿರುವ ಶ್ರೀಕೃಷ್ಣಪರಮಾತ್ಮನನ್ನು ನೋಡಿ ಭಗವಂತನೇ! ಅರ್ಜುನನಿಗೋಸ್ಕರ ಬಂದಿರುವ ನಿನ್ನನ್ನು ನೋಡುತ್ತಿರುವೆನು. ನಿನ್ನ ಸರ್ವಗತತ್ವವನ್ನು ತಿಳಿದೆನು. ಅರ್ಜುನ! ಪರಮಾತ್ಮನನ್ನು ಹೊಂದಿ ನನ್ನನ್ನು ಜಯಿಸುವ ವಿಷಯದಲ್ಲಿ ಪ್ರತಿಜ್ಞೆಯನ್ನು ಮಾಡು. ನಾನು ಪೌರುಷದಿಂದ ಜಗತ್ತನ್ನೇ ಸಂತೋಷಪಡಿಸುತ್ತೇನೆ ಎಂದನು.

ಅರ್ಜುನನು ಮೂರುಬಾಣಗಳಿಂದ ನಿನ್ನ ತಲೆಯನ್ನು ಬೀಳಿಸದಿದ್ದರೆ ನನ್ನ ಪೂರ್ವಿಕರು ಪುಣ್ಯಹೀನರಾಗಿ ನರಕಕ್ಕೆ ಬೀಳಲಿ. ನನ್ನ ಮಾತು ಸತ್ಯವಾದದ್ದು. ನಿನ್ನನ್ನು ನೀನು ರಕ್ಷಣೆ ಮಾಡಿಕೊ. ನಿನ್ನ ಪ್ರತಿಜ್ಞೆಯನ್ನು ಮಾಡಲು ಬಂದನು.

ಸುಧನ್ವನು ನಿನ್ನ ಮೂರು ಬಾಣಗಳನ್ನೂ ನಾನು ಕತ್ತರಿಸದೆ ಇದ್ದರೆ ನಾನು ಘೋರವಾದ ಗತಿಯನ್ನು ಹೊಂದುವೆನು. ಅದಕ್ಕೆ ಕೃಷ್ಣಪರಮಾತ್ಮನು ಲೋಕಜನ

ರನ್ನು ಮೋಹಗೊಳಿಸುತ್ತಾ ಅರ್ಜುನ ಏನು ನನ್ನ ಹತ್ತಿರ ಕೇಳದೆ ಪ್ರತಿಜ್ಞಾ ಮಾಡುವಿ. ಜಯದ್ರಥನ ಪ್ರತಿಜ್ಞೆಯಲ್ಲಿ ಬಹಳ ಶ್ರಮವಾಯಿತು ಎಂದನು. ಅರ್ಜುನನು ಭಗವಂತನೇ! ನಿನ್ನ ಅನುಗ್ರಹದಿಂದ ಮೂರು ಬಾಣಗಳಿಂದ ಅವನನ್ನು ಬೀಳಿಸುವೆನು ಎಂದನು.

ಅರ್ಜುನನು ಒಂದು 'ಪ್ರಲಯಕಾಲದ ಅಗ್ನಿಯಂತೆ' ಇರುವ ಬಾಣವನ್ನು ತೆಗೆದುಬಿಟ್ಟನು. ಆಗ ಭಗವಂತನು 'ಗೋವರ್ಧನ ಪರ್ವತವನ್ನು ಎತ್ತಿದ ಗೋವುಗಳನ್ನು ರಕ್ಷಣೆ ಮಾಡಿದ ಪುಣ್ಯವನ್ನು' ಅದರಲ್ಲಿ ಇಟ್ಟನು. ಆಗ ಆಕಾಶದಲ್ಲಿ ದೇವತೆಗಳು ಇವರ ಯುದ್ಧಗಳನ್ನು ನೋಡಲಿಕ್ಕೆ ಬಂದರು. ಅಪ್ಸರ ಸ್ತ್ರೀಯರೂ ಕುತೂಹಲದಿಂದ ಬಂದರು. ಸುಧನ್ವನು ಬಹುಪುಣ್ಯದಿಂದ ಕೂಡಿರುವ ಈ ಬಾಣಗಳನ್ನು ಬೀಳಿಸದೆ ಇದ್ದ ಪಕ್ಷದಲ್ಲಿ ನನ್ನ ಪುಣ್ಯವು ರಾಕ್ಷಸರಿಂದ ಅಪಹೃತವಾಗಲಿ ಎಂದನು. ಅರ್ಧಚಂದ್ರಬಾಣದಿಂದ ಅರ್ಜುನನ ಬಾಣವನ್ನು ಕತ್ತರಿಸಿದನು. ದೇವತೆಗಳೆಲ್ಲರೂ ಆಶ್ಚರ್ಯವನ್ನು ಹೊಂದಿದರು.

ಆಮೇಲೆ ಅರ್ಜುನನು ಎರಡನೆಯ ಬಾಣವನ್ನು ಜೋಡಿಸಿದನು. ಆಗ 'ಪರಮಾತ್ಮನು ಪರಶುರಾಮಾವತಾರದಲ್ಲಿ ಪೃಥಿವೀ ದಾನವನ್ನು ಮಾಡಿದ ಪುಣ್ಯವನ್ನು' ಕೊಟ್ಟನು. ಆಗ ಸುಧನ್ವನು ಭಗವಂತನೇ ನೀನು ಈ ಬಾಣದಲ್ಲಿ ಪುಣ್ಯವನ್ನು ಜೋಡಿಸಿದ್ದರೆ ನಾನು ಪ್ರತಿಜ್ಞೆ ಮಾಡುವೆನು. ಅರ್ಜುನ! ನನ್ನ ಪ್ರತಿಜ್ಞೆಯನ್ನು ಕೇಳು. ನಾನು ಈ ಬಾಣವನ್ನು ಕತ್ತರಿಸದೆ ಇದ್ದರೆ ಅರುಂಧತೀ ದೇವಿಯಿಂದ ಸಹಿತರಾದ ವಸಿಷ್ಠರನ್ನು ಕೊಂದ ಪಾಪವು ಬರಲಿ. ಅರ್ಜುನ! ನೀನು ಪರಮಧನ್ಯನು. ನಿನಗೋಸ್ಕರ ಪರಮಾತ್ಮನು ಪುಣ್ಯವನ್ನು ಕೊಡುವನು ಎಂದು ಹೇಳಿದನು. ತರುವಾಯ ಅರ್ಜುನನು ಆ ಸೂರ್ಯಮಂಡಲದಂತೆ ಪ್ರಕಾಶಿಸುತ್ತಿರುವ ಆ ಬಾಣವನ್ನು ಬಿಟ್ಟನು. ಆಕಾಶಮಾರ್ಗದಲ್ಲಿ ದೇವತೆಗಳೂ ಭೂಮಿಯಲ್ಲಿ ಮನುಷ್ಯರೂ 'ಏನಾಗುತ್ತದೋ? ಇಬ್ಬರಲ್ಲಿ ಯಾರು ಜಯಿಸುತ್ತಾರೋ' ಎಂದು ಹೇಳುತ್ತಿದ್ದರು. ಆಗ ಸುಧನ್ವನು ಆ ಎರಡನೇ ಬಾಣವನ್ನು ಕತ್ತರಿಸಿದನು. ಶಂಖವನ್ನು ಊದಿದನು. ಆ ಬಾಣವನ್ನು ಕತ್ತರಿಸಲು ಭೂಮಿಯೆ ನಡುಗಿತು.

ತರುವಾಯ ಪರಮಾತ್ಮನು ಅರ್ಜುನನೊಡನೆ ಮೂರನೇ ಬಾಣವನ್ನು ಬಿಡು. ನಾನು ಪಾಂಚಜನ್ಯವನ್ನು ಊದುತ್ತೇನೆ. ನೀನು ದೇವದತ್ತ ಎಂಬ ಶಂಖವನ್ನು ಊದು ಎಂದನು. ತರುವಾಯ ಅರ್ಜುನನು ಮೂರನೇಯ ಅತಿದೃಢವಾದ ಬಾಣವನ್ನು ತೆಗೆದನು. ಭಗವಂತನು 'ಬಾಣದ ಹಿಂದಿನ ಬ್ರಹ್ಮದೇವರನ್ನೂ ಮಧ್ಯೇ ರುದ್ರ

ದೇವರನ್ನೂ ನಿಲ್ಲಿಸಿ ಕೊನೆಯಲ್ಲಿ ತಾನೇ ಸನ್ನಿಹಿತನಾದನು'. 'ರಾಮಾವತಾರದ ಪುಣ್ಯವನ್ನು ಇಟ್ಟನು'. ಆ ಬಾಣವನ್ನು ಅರ್ಜುನನು ಧನುಸ್ಸಿನಲ್ಲಿ ಜೋಡಿಸಲು ಎಲ್ಲರೂ ಹಾಹಾಕಾರವನ್ನು ಮಾಡಿದರು. ತರುವಾಯ ಅರ್ಜುನನು ಸುಧನ್ವನೊಡನೆ ಈ ಬಾಣದಿಂದ ನಿನ್ನ ತಲೆಯನ್ನು ಕೆಳಗೆ ಬೀಳಿಸದೆ ಇದ್ದರೆ ಶ್ರೀಭಗವಂತನನ್ನೂ ರುದ್ರದೇವರನ್ನೂ ಸೀಳಿಹಾಕಿದ ಪಾಪವನ್ನು ಹೊಂದುವೆನು ಎಂದನು. ಆಗ ಸುಧನ್ವನು ಯಾವಾತನು ಕಾಶಿಗೆ ಹೋಗಿ ರಾತ್ರಿಯಲ್ಲಿ ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನಮಾಡಿ ರಾತ್ರಿಯಲ್ಲಿ ರುದ್ರದೇವರಿಗೆ ಪೂಜಾ ಮಾಡುತ್ತಾನೋ ಅವನನ್ನು ಕಾಲಿನಿಂದ ಒದೆದವನಿಗೆ ಬರುವ ಪಾಪವು ಈ ಬಾಣವನ್ನು ಕತ್ತರಿಸದೆ ಇದ್ದ ಪಕ್ಷದಲ್ಲಿ ನನಗೆ ಬರಲಿ ಎಂದನು. ತರುವಾಯ ಅರ್ಜುನನು ಬಾಣವನ್ನು ಬಿಟ್ಟನು. ಬಾಣವು ಆಕಾಶದಲ್ಲಿ ಬರುವಾಗ ದೇವತೆಗಳೂ ಅಪ್ಸರಸ್ತ್ರೀಯರೂ ದಾರಿ ಬಿಟ್ಟುಬಿಟ್ಟರು. ಬಾಣವು ಬೆಂಕಿಯ ಜ್ವಾಲೆಯನ್ನು ಕಾರುತ್ತಾ ಬರುತ್ತಾ ಇತ್ತು. ಆ ಬಾಣದ ಶಬ್ದದಿಂದ ವಾದ್ಯಗಳ ಶಬ್ದಗಳೂ ಮರೆಯಾದವು. ಆಗ ಸುಧನ್ವನು ಮಂತ್ರ ಭಯಪಡದೆ ಕೋಪಿಸಿಕೊಂಡು ಭಗವಂತನೇ! ನೀನು ಅರ್ಜುನನ್ನು ಬಿಟ್ಟು ಹೋಗಬೇಡ. ಅರ್ಜುನ! ನಾನು ಈ ಬಾಣವನ್ನೂ ಕತ್ತರಿಸುವೆನು ಎಂದು ಹೇಳಿ ಆ ಬಾಣದ ಮಧ್ಯದಲ್ಲಿಯೇ ಕತ್ತರಿಸಿದನು. ಆ ಬಾಣವನ್ನು ಕತ್ತರಿಸಲು ಮಹತ್ತಾದ ಹಾಹಾಕಾರವು ಉಂಟಾಯಿತು. ಸುಧನ್ವನು ತನ್ನ ಬಾಹುವನ್ನು ತಟ್ಟಿಕೊಂಡನು. ಬಾಣವನ್ನು ಕತ್ತರಿಸಲು ಚಂದ್ರಮಂಡಲವೇ ನಡುಗಿತು. ಅತ್ಯದ್ಭುತವಾಗಿ ಕಂಡಿತು. ಬಾಣದ ಮುಂದಿನ ಅರ್ಧಭಾಗವು ಮಾತ್ರ ಸುಧನ್ವನ ತಲೆಯನ್ನು ಕತ್ತರಿಸಿತು. ಈರೀತಿಯಾಗಿ ಭಗವಂತನು ಅರ್ಜುನ ಸುಧನ್ವ ಎಂಬ ಇಬ್ಬರು ಭಕ್ತರ ಪ್ರತಿಜ್ಞೆಯನ್ನು ಪೂರೈಸಿದನು.

ಈಪ್ರಕಾರವಾಗಿ ಕತ್ತರಿಸಲ್ಪಟ್ಟ ಸುಧನ್ವನ ತಲೆಯು ಕೇಶವ ರಾಮ ನರಸಿಂಹ ಎಂದು ಹೇಳುತ್ತಾ ಕೃಷ್ಣಪರಮಾತ್ಮನ ಪಾದದಲ್ಲಿ ಬಂದು ಬಿದ್ದಿತು. ಮುಂಡವು ಬಹುಸೈನ್ಯವನ್ನು ನಾಶಮಾಡಿತು. ಭಗವಂತನು ಪಾದದಲ್ಲಿ ಬಿದ್ದಿರುವ ಆ ತಲೆಯಲ್ಲಿ(ನ್ನು) ಎರಡು ಕೈಗಳಿಂದ ಎತ್ತಿದನು. ಆಗ ಆ ಶಿರಸ್ಸಿನಿಂದ ಒಂದು ತೇಜಸ್ಸು ಹೊರಟು ಭಗವಂತನನ್ನು ಪ್ರವೇಶಿಸಿತು. ಅದು ಭಗವಂತನಿಗೆ ಹೊರತು ಇನ್ನೊಬ್ಬರಿಗೆ ತಿಳಿಯಲಿಲ್ಲ. ಪರಮಾತ್ಮನು ಆ ಶಿರಸ್ಸನ್ನು ಹಂಸಧ್ವಜನ ರಥಕ್ಕೆ ಬಿಸಾಡಿದನು. ಹಂಸಧ್ವಜನು ಮಗನ ತಲೆಯನ್ನು ಎತ್ತಿಕೊಂಡು ತುಂಬಾ ದುಃಖವನ್ನು ಹೊಂದಿದನು. ಆಗ ಸುರಥನು ಯುದ್ಧದಲ್ಲಿ ಮೃತನಾದವನ ತಲೆಯನ್ನು ಹಿಡಿದುಕೊಂಡು ಯಾಕೆ ದುಃಖಪಡುವೆ ಎಂದು ಕೇಳಿದನು. ಹಂಸಧ್ವಜನು ಶಿರಸ್ಸು

ಪರಮಾತ್ಮನ ಪಾದವನ್ನು ಸೇರಿತು. ಅದು ಈಗ ಪರಮಾತ್ಮನ ಪಾದದಿಂದ ವಿಯೋಗವನ್ನು ಹೊಂದಿದೆ. ಇದನ್ನು ಪುನಃ ಕೃಷ್ಣಪರಮಾತ್ಮನ ಪಾದದಲ್ಲಿಯೇ ಸಮರ್ಪಿಸುವೆನು ಎಂದು ಹೇಳಿ ಭಗವಂತನ ಪಾದದಲ್ಲಿಯೇ ಆ ಶಿರಸ್ಸನ್ನು ಹಾಕಿದನು. ಶ್ರೀಪರಮಾತ್ಮನು ಆ ತಲೆಯನ್ನು ತೆಗೆದು ಮೇಲೆ ಬಿಸಾಡಿದನು. ಅದು ಮರೆಯಾಯಿತು. ಅದನ್ನು ರುದ್ರದೇವರು ಹಿಡಿದು ತನ್ನ ರುಂಡಮಾಲೆಯಲ್ಲಿ ಸೇರಿಸಿಕೊಂಡರು.

ತರುವಾಯ ಸುರಥನು ತಂದೆಯನ್ನು ಸಮಾಧಾನಪಡಿಸಿ ಯುದ್ಧರಂಗಕ್ಕೆ ಬಂದು ಅರ್ಜುನನೊಡನೆ ಭಯಂಕರವಾದ ಯುದ್ಧವನ್ನು ಮಾಡಿದನು. ಯುದ್ಧದಲ್ಲಿ ಸುರಥನು ಮೂರ್ಛಿತನಾದನು. ಆಮೇಲೆ ಎದ್ದು ಮತ್ತೊಂದು ರಥದಲ್ಲಿ ಕೂತುಕೊಂಡು ಯುದ್ಧವನ್ನು ಮಾಡಿದನು.

ಸುರಥನು ಅರ್ಜುನ ನೀನು ಪ್ರತಿಜ್ಞಾಮಾಡು. ನಿನ್ನ ಪ್ರತಿಜ್ಞೆಯು ಯಾವಾಗಲೂ ಸುಳ್ಳಾಗಿಲ್ಲವೆಂದು ನಾನು ಕೇಳಿರುವೆನು. ಆಗ ಅರ್ಜುನನು ನಿನ್ನ ತಂದೆಯ ಮುಂದೆ ನಿನ್ನನ್ನು ಬೀಳಿಸುತ್ತೇನೆ. ನೀನು ಪ್ರತಿಜ್ಞೆಯನ್ನು ಮಾಡು ಎಂದನು. 'ನಾನು ನಿನ್ನನ್ನು ರಥದಿಂದ ಕೆಳಗೆ ಬೀಳಿಸುತ್ತೇನೆ. ಹಾಗೆ ಮಾಡದೆ ಇದ್ದರೆ ನನ್ನ ಪುಣ್ಯವೆಲ್ಲ ನಷ್ಟವಾಗಲಿ' ಎಂದು ಸುರಥನು ಪ್ರತಿಜ್ಞೆಯನ್ನು ಮಾಡಿದನು. ತರುವಾಯ ಭಯಂಕರವಾದ ಯುದ್ಧವು ನಡೆಯಿತು. ಅರ್ಜುನನು ಮೊದಲು ಸುರಥನ ಬಲಕೈಯನ್ನು ಕತ್ತರಿಸಿದನು. ಆಮೇಲೆ ಎಡಕೈಯನ್ನು ಕತ್ತರಿಸಿದನು. ಕಾಲುಗಳನ್ನು ಕತ್ತರಿಸಿದನು. ಕೊನೆಗೆ ಶಿರಸ್ಸನ್ನೂ ಕತ್ತರಿಸಿದನು. ಆ ಶಿರಸ್ಸು ಬಂದು ಅರ್ಜುನನ ಹಣೆಯನ್ನು ಬಂದು ಕಚ್ಚಿತು. ಅರ್ಜುನನು ಮೂರ್ಛಿತನಾಗಿ ರಥದಿಂದ ಕೆಳಗೆ ಬಿದ್ದನು. ಪರಮಾತ್ಮನು ಅರ್ಜುನನನ್ನು ಗರುಡದೇವರನ್ನು ಸ್ಮರಿಸಿದನು. ಗರುಡದೇವರು ಬರಲು ಪ್ರಯಾಗದಲ್ಲಿ ಹಾಕು ಎಂದು ಆ ಶಿರಸ್ಸನ್ನು ಗರುಡದೇವರ ಕೈಯಲ್ಲಿ ಕೊಟ್ಟನು. ಗರುಡದೇವರು ಅದನ್ನು ತೆಗೆದುಕೊಂಡು ಹೋಗಿ ಪ್ರಯಾಗದಲ್ಲಿ ಹಾಕಿದರು. ನಂದಿಯು ಅಲ್ಲಿಂದ ಆ ಶಿರಸ್ಸನ್ನು ತೆಗೆದುಕೊಂಡು ಹೋಗಿ ರುದ್ರದೇವರಿಗೆ ಒಪ್ಪಿಸಿದನು. ರುದ್ರದೇವರು ಭಕ್ತನೆಂದು ಅವನ ತಲೆಯನ್ನೂ ರುಂಡಮಾಲೆಯಲ್ಲಿ ಸೇರಿಸಿಕೊಂಡರು.

ತರುವಾಯ ಹಂಸಧ್ವಜನು ಮಹಾಕೋಪದಿಂದ ರಥಾರೂಢನಾಗಿ ಯುದ್ಧಕ್ಕೆ ಬಂದನು. ಆಗ ಶ್ರೀಕೃಷ್ಣಪರಮಾತ್ಮನು ರಥದಿಂದ ಕೆಳಗೆ ಇಳಿದು ಕೈಗಳನ್ನು ಮುಂದೆ ನೀಡಿ ಮಹಾರಾಜನೇ ನನಗೆ ಆಲಿಂಗನವನ್ನು ಕೊಡು. ಕೋಪವನ್ನೂ

ಪುತ್ರಶೋಕವನ್ನೂ ಬಿಡು ಎಂದನು. ಹಂಸಧ್ವಜನು ಪರಮಾತ್ಮನನ್ನು ನೋಡಿ ರಥದಿಂದ ಕೆಳಗೆ ಇಳಿದು ಬಂದು ಆಲಿಂಗನ ಮಾಡಿ ನಗುತ್ತಾ ಹೇಳಿದನು. ಭಗವಂತನೇ! ಅನಾಥನಾದ ನಾನು ನಾಥನಾದ ನಿನ್ನನ್ನು ಹೊಂದಿರುವೆನು. ನಿನ್ನನ್ನು ಹೊಂದಿದ ನನಗೆ ಪುತ್ರಶೋಕವೂ ಇಲ್ಲ, ಸಂಸಾರಭಯವೂ ಇಲ್ಲ, ಯಮದೇವರ ಭಯವೂ ಇಲ್ಲ ಎಂದನು.

ಕೃಷ್ಣಪರಮಾತ್ಮನು ರಾಜನೇ! ಕುದುರೆಯನ್ನು ಬಿಡು. ಅರ್ಜುನನನ್ನು ರಕ್ಷಣೆ ಮಾಡು. ನಾನು ಧರ್ಮರಾಜನಿದ್ದಲ್ಲಿಗೆ ಹೋಗುತ್ತೇನೆ. ನನ್ನಂತೆಯೇ ನೀನು ಯುದ್ಧದಲ್ಲಿ ಅರ್ಜುನನನ್ನು ರಕ್ಷಿಸಬೇಕು ಎಂದು ಹೇಳಿ ಅರ್ಜುನನನ್ನು ಕರತಂದು ಇಬ್ಬರಿಗೂ ಸ್ನೇಹವನ್ನು ಉಂಟುಮಾಡಿ ಕುದುರೆಯನ್ನು ಬಿಡಿಸಿ ಐದು ರಾತ್ರಿಯಲ್ಲಿ ಹಂಸಧ್ವಜನ ನಗರದಲ್ಲಿ ಇದ್ದು ಆಮೇಲೆ ಧರ್ಮರಾಜನಿದ್ದಲ್ಲಿಗೆ ಹೋಗಿ ಸಮಸ್ತವನ್ನೂ ತಿಳಿಸಿದನು. ತರುವಾಯ ಕುದುರೆಯು ಅಲ್ಲಿಂದ ಮುಂದೆ ಸಂಚರಿಸುತ್ತಾ ಹೋಯಿತು. ಅದರ ಹಿಂದೆಯೇ ಹಂಸಧ್ವಜನಿಂದ ಸಹಿತನಾಗಿ ಪ್ರದ್ಯುಮ್ನಾದಿಗಳಿಂದಲೂ ಸಹಿತನಾಗಿ ಅರ್ಜುನನು ಹೋದನು.



## ಪ್ರಮೀಳಾ [1]

ಚಂಪಕಾಪುರಿಯಿಂದ ಹೊರಟ ಕುದುರೆಯು ಉತ್ತರದಿಕ್ಕಿಗೆ ಹೋಯಿತು. ಅದರ ಹಿಂದೆಯೇ ಹಂಸಧ್ವಜ ಪ್ರದ್ಯುಮ್ನ ಅನುಶಾಲ್ವ ವೃಷಕೇತು ಸುವೇಗ ಎಂಬ ಐದು ಜನರು ರಕ್ಷಿಸುತ್ತಾ ಹೋದರು. ಕುದುರೆಯು ನೀರನ್ನು ಕುಡಿಯುವುದಕ್ಕೆ ದೊಡ್ಡ ಸರೋವರವನ್ನು ಪ್ರವೇಶಿಸಿತು. ತರುವಾಯ ಅದು ಹೆಣ್ಣುಕುದುರೆಯಾಗಿ ಮೇಲಕ್ಕೆ ಬಂದಿತು. ಅದನ್ನು ನೋಡಿ ಎಲ್ಲರೂ ಆಶ್ಚರ್ಯವನ್ನು ಹೊಂದಿದರು. ಅದರ ಹಿಂದೆಯೇ ಹೋದರು. ಆಮೇಲೆ ಅದು ಮತ್ತೊಂದು ಸರೋವರವನ್ನು ಪ್ರವೇಶಿಸಿತು. ಅಲ್ಲಿಂದ ದೊಡ್ಡ ಹುಲಿಯಾಗಿ ಮೇಲೆ ಬಂದಿತು. ಎಲ್ಲರೂ ಏನಿದು? ಮುಂದೇನು ಆಗುತ್ತದೆಯೋ ಎಂದುಕೊಂಡರು. ಆ ಹುಲಿಯು ಮುಂದೆ ಹೋಯಿತು.

ಹೀಗಾಗಲು ಕಾರಣವೇನೆಂದರೆ ಪೂರ್ವದಲ್ಲಿ ಮೊದಲಿದ್ದ ಸರೋವರವಿದ್ದ

1. ಜೈ.ಭಾ.ಅ.ಪ. ಅ-22

ವನದಲ್ಲಿ ಉಮಾದೇವಿಯು ರುದ್ರದೇವರು ಪ್ರಸನ್ನರಾಗಬೇಕೆಂದು ತಪಸ್ಸು ಮಾಡಿದರು. ಅಲ್ಲಿ ಒಬ್ಬ ದುಷ್ಟದೈತ್ಯನು ತಪಸ್ಸಿಗೆ ವಿಘ್ನಮಾಡಲಿಕ್ಕೆ ಬಂದನು. ಅವನು ಬಂದು ಸುಂದರಿ! ಯಾಕೆ ತಪಸ್ಸು ಮಾಡುವಿ? ನಿನ್ನ ದೇಹವು ಪರಮಸುಂದರವಾಗಿದೆ. ನಿನಗೆ ದುರ್ಲಭವಾದ್ದರಿಂದ ನಿನಗೆ ನಾನು ಬೇಕಾದುದನ್ನು ಕೊಡುತ್ತೇನೆ. ನನ್ನ ಹೆಂಡತಿಯಾಗು ಎಂದು ಹೇಳಿದನು. ಅದನ್ನು ಕೇಳಿ ಉಮಾದೇವಿಯು ರೋಷದಿಂದ ಕಣ್ಣನ್ನು ಕೆಂಪು ಮಾಡಿಕೊಂಡು ಭಸ್ಮವಾಗಿ ಹೋಗು ಎಂದು ಶಾಪವನ್ನು ಕೊಟ್ಟರು. ಮತ್ತು ಇನ್ನು ಮುಂದೆ ಯಾರು ಈ ವನದಲ್ಲಿ ಸರೋವರದಲ್ಲಿ ಪ್ರವೇಶಿಸುವರೋ ಅವರು ಸ್ತ್ರೀತ್ವವನ್ನು ಹೊಂದಲಿ ಎಂದು ಶಾಪವನ್ನು ಕೊಟ್ಟರು. ಆ ಶಾಪದಿಂದ ಕುದುರೆಯು ಹೆಣ್ಣುಕುದುರೆಯಾಯಿತು.

ಎರಡನೆಯ ಸರೋವರವಿದ್ದ ವನದಲ್ಲಿ ಅಕೃತವ್ರಣ ಎಂಬ ಋಷಿಗಳು ಭೂಸಂಚಾರ ಮಾಡುತ್ತಾ ಬಂದವರು ಕೆಲವು ಸಮಯ ತಪಸ್ಸು ಮಾಡುತ್ತಾ ಇದ್ದರು. ಒಂದು ದಿನ ಅವರು ಆ ಸರೋವರದಲ್ಲಿ ಸ್ನಾನಮಾಡಲಿಕ್ಕೆ ಪ್ರವೇಶಿಸಿದರು. ನೀರಿನಲ್ಲಿ ಒಂದು ಮೊಸಳೆಯು ಬಂದು ಕಾಲಲ್ಲಿ ಹಿಡಿಯಿತು. ಆಗ ಋಷಿಗಳು ಇವನು ದುಷ್ಟನು ಯಾರು? ದೈತ್ಯನೋ ದಾನವನೋ ಮತ್ಸ್ಯವೊ ನನಗೇಕೆ ಈ ಸರೋವರದಲ್ಲಿ ಇಳಿಯಲಿಕ್ಕೆ ಮನಸ್ಸು ಬಂದಿತು. ಈರೀತಿಯಾಗಿ ಯೋಚನೆಮಾಡಿ ಕೋಪವುಳ್ಳವ ರಾಗಿ ಈ ನೀರಿನಲ್ಲಿ ಸ್ಪರ್ಶವನ್ನು ಮಾಡುವವನು ಹುಲಿಯಾಗಲಿ ಎಂದು ಶಾಪವನ್ನು ಕೊಟ್ಟರು. ಅದರಿಂದ ಕುದುರೆಯು ಹುಲಿಯಾಯಿತು.

ಅರ್ಜುನನು ಕುದುರೆಯು ಹುಲಿಯಾದದ್ದನ್ನು ನೋಡಿ 'ನಾವು ಯಾರ ಅನುಗ್ರಹದಿಂದ ದುರ್ಯೋಧನಾದಿಗಳ ಭಯದಿಂದ ಬಿಡಲ್ಪಟ್ಟಿದ್ದೇವೋ ಆ ಭಗವಂತನೇ ನಮ್ಮನ್ನು ರಕ್ಷಿಸಬೇಕು. ಧರ್ಮರಾಜರ ಕಾರ್ಯಸಿದ್ಧಿಯಾಗುವಂತೆ ಮಾಡಬೇಕು ಎಂದು ಹೇಳಿಕೊಂಡನು. ಆಗಲೇ ಆ ಹುಲಿಯ ರೂಪವು ಹೋಗಿ ಕುದುರೆಯಾಯಿತು.

ತರುವಾಯ ಕುದುರೆಯು ಮುಂದೆ ಸ್ತ್ರೀದೇಶಕ್ಕೆ ಹೋಯಿತು. ಅಲ್ಲಿ ಎಲ್ಲರೂ ಸ್ತ್ರೀಯರೇ ಪುರುಷರೇ ಇಲ್ಲ. ಯಾರಾದರೂ ಪುರುಷರು ಬಂದರೆ ಅವನೊಡನೆ ವಿಹಾರವನ್ನು ಮಾಡಿ ಒಂದು ಮಾಸವಿದ್ದು ನಾನಾ ವಿಲಾಸವನ್ನು ತೋರಿಸಿ ಅವನನ್ನು ಕೊಂದು ತಾವೂ ಸಾಯುವರು. ಯಾರಾದರೂ ಒಬ್ಬಳು ಗರ್ಭಿಣಿಯಾಗುವಳು. ಅವಳು ಹೆಣ್ಣನ್ನೇ ಹಡೆಯುವಳು. ಇಂತಹ ದೇಶಕ್ಕೆ ಕುದುರೆಯು ಪ್ರವೇಶಿಸಿತು. ಅರ್ಜುನನೂ ಐದು ಜನ ವೀರರಿಂದ ಕೂಡಿಕೊಂಡು ಪ್ರವೇಶಿಸಿದನು. ಅರ್ಜುನನು

ಹೇಳಿದನು. ಇಲ್ಲಿ ವಿಷ ಕನ್ಯೆಯರಿದ್ದಾರೆ. ಅವರು ಕುದುರೆಯನ್ನು ಅಪಹಾರ ಮಾಡಿಕೊಂಡು ಹೋಗುವದು ಕಷ್ಟ! ಏನು ಮಾಡಲಿ ಎಂದನು. ಹೀಗೆ ಅರ್ಜುನನು ಹೇಳುತ್ತಿರುವಾಗಲೇ ಹೆಂಗಸರು ಬಂದು ಕುದುರೆಯನ್ನು ಹಿಡಿದು ಎಳೆದುಕೊಂಡೇ ಹೋದರು. ತಮ್ಮ ರಾಣಿಯ ಹತ್ತಿರ ಕರೆದುಕೊಂಡು ಹೋದರು. ಧರ್ಮರಾಜನ ತಮ್ಮನಾದ ಅರ್ಜುನನು ಈ ಕುದುರೆಯನ್ನು ರಕ್ಷಿಸುತ್ತಾ ಬಂದಿರುವನು ಎಂದು ಹೇಳಿದರು. ಆಗ ರಾಣಿಯು ಕುದುರೆಯನ್ನು ಕುದುರೆಯ ಶಾಲೆಯಲ್ಲಿ ಕಟ್ಟಿರಿ. ನಾನು ಅರ್ಜುನನ ಹತ್ತಿರ ಯುದ್ಧಮಾಡಲಿಕ್ಕೆ ಹೋಗುವೆನು ಎಂದಳು.

ತರುವಾಯ ಕುದುರೆಯನ್ನು ಏರಿರುವ ಲಕ್ಷಜನ ಪರಮಸುಂದರಿಯರಿಂದ ಸಹಿತಳಾಗಿ ನವಯೌವನವುಳ್ಳವಳಾದ ಪರಮಸುಂದರಿಯಾದ ಪ್ರಮೀಳಾ ಎಂದು ಹೆಸರುಳ್ಳ ರಾಣಿಯು ಯುದ್ಧಕ್ಕೆ ಹೋದಳು. ಅವಳ ಸುತ್ತಲೂ ಆನೆಯಲ್ಲಿ ಕೂತಿರುವ ಲಕ್ಷ ಯುವತಿಯರಿದ್ದರು. ಹಾಗೆಯೇ ರಥಾರೂಢರಾದ ಸ್ತ್ರೀಯರು ಲಕ್ಷಜನವಿದ್ದರು. ಈರೀತಿ ಮೂರು ಲಕ್ಷ ಯುವತಿಯರಿಂದ ಸಹಿತಳಾಗಿ ಅರ್ಜುನನನ್ನು ಸುತ್ತುಕರಿಸಿ ಹೇಳಿದಳು. 'ನಾನು ನಿನ್ನ ಕುದುರೆಯನ್ನು ಕಟ್ಟಿಹಾಕಿಸಿರುವೆನು. ನೀನು ಅದನ್ನು ಬಿಡಿಸಬೇಕೆಂದು ಆಸೆಯಿರುವ ಪಕ್ಷದಲ್ಲಿ ಯುದ್ಧವನ್ನು ಮಾಡು. ನಿನ್ನ ಸಾಮರ್ಥ್ಯವನ್ನು ನಾಶಮಾಡುತ್ತೇನೆ. ನನ್ನ ಪ್ರಹಾರವನ್ನು ಮಹತ್ತಾದ ಧೈರ್ಯದಿಂದ ಸಹಿಸು ಎಂದು ಹೇಳಿದಳು. ಮೊದಲು ಮನಸ್ಸು ಅಪಹಾರ ಮಾಡುವ ಕಟಾಕ್ಷದಿಂದ ಬಡೆದು ಆಮೇಲೆ ಬಾಣಗಳಿಂದ ಅರ್ಜುನನನ್ನು ಬಡೆದಳು. ಐದುಜನ ವೀರರನ್ನೂ ಬಡೆದಳು.

ಆಮೇಲೆ ರಾಣಿಯು ಅರ್ಜುನ! ನಿನಗೆ ನನ್ನ ವಿಷಯವು ತಿಳಿಯದು. ನಾನು ನಿನ್ನನ್ನು ಜಯಿಸಿ ನನ್ನ ದಾಸನನ್ನಾಗಿ ಮಾಡಿಕೊಳ್ಳುವೆನು. ಯಾಗವನ್ನು ಮಾಡಿ ಏನು ಮಾಡುವಿ? ನನ್ನೊಡನೆ ಮಧುಪಾನವನ್ನು ಮಾಡು. ನೀನು ಇಷ್ಟರವರೆಗೆ ಅನುಭವಿಸದೆ ಇರುವ ಸುಖವನ್ನು ತೋರಿಸುವೆನು ಎಂದಳು. ಅರ್ಜುನನು ನಿನ್ನ ಸಂಗದಿಂದ ಮರಣವೇ ಉಂಟಾಗುತ್ತದೆ ಎಂದು ನಾವು ಕೇಳಿರುವೆನು. ನಾನಿಲ್ಲದೆ ಯಾಗದ ಈ ಕುದುರೆಯನ್ನು ಯಾರು ರಕ್ಷಿಸುವರು? ಎಂದನು. ಅದಕ್ಕೆ ಪ್ರಮೀಳೆಯು ನಿನಗೆ ಹೇಗಾದರೂ ಮರಣವು ಸಹಜವು. ಒಂದೋ ನನ್ನ ಬಾಣಗಳಿಂದ ಸಾಯುವಿ. ಅಥವಾ ನನ್ನ ಕಟಾಕ್ಷದಿಂದ. ಕಟಾಕ್ಷದಿಂದ ಆದರೆ ನನ್ನ ಸಂಗಮದಿಂದ ಸುಖವಾಗುವುದು. ಆಮೇಲೆ ನನ್ನ ಸಹಿತವಾಗಿ ಸಾಯುವಿ. ಬಾಣಗಳಿಂದ ವ್ಯರ್ಥವಾಗಿ ಏಕೆ ಸಾಯುವಿ? ಅರ್ಜುನ! ನಾನು ವ್ಯರ್ಥವಾದ ಮಾತನ್ನು

ಆಡುವುದಿಲ್ಲ. ನಿನ್ನನ್ನು ಒಂದೋ ಬಾಣಗಳಿಂದ ಬೀಳಿಸುತ್ತೇನೆ. ಅಥವಾ ಕ್ರೀಡೆಯಿಂದ ಜಯಿಸುವೆನು. ನೀನಿಲ್ಲದೆ ನಾನೂ ಪ್ರಾಣವನ್ನು ಬಿಡುವೆನು. ನಮ್ಮಿಬ್ಬರಿಗೂ ದರ್ಶನ ಮಾತ್ರದಿಂದ ಮರಣವು ಏರ್ಪಟ್ಟಿದೆ. ನನ್ನ ಮನೋಹರವಾದ ಯೌವನವನ್ನು ಅನುಭವಿಸು ಎಂದು ಹೇಳಿದಳು.

ಅರ್ಜುನನು ಈ ಪ್ರಕಾರವಾಗಿ ಕಾಮಬಾಣಪೀಡಿತಳಾಗಿ ಹೇಳುತ್ತಿರುವ ಪ್ರಮೀಳೆಯನ್ನು ನೋಡಿ ಮನಸ್ಸಿನಲ್ಲೇ ಲಕ್ಷ್ಮಣನನ್ನೂ ಶೂರ್ಪನಖಿಯನ್ನೂ ಸ್ಮರಿಸಿಕೊಂಡು ಆರು ಬಾಣಗಳನ್ನು ಬಿಟ್ಟನು. ಅವುಗಳನ್ನು ಅವಳು ಕತ್ತರಿಸಿ ಅರ್ಜುನನನ್ನು ಏಳು ಬಾಣಗಳಿಂದ ಬಡೆದಳು. ಮತ್ತು ಸಾವಿರಬಾಣಗಳನ್ನು ಬಿಟ್ಟು ಅರ್ಜುನನನ್ನು ಮರೆಮಾಡಿದಳು. ಅರ್ಜುನನು ಮೋಹನಾಸ್ತ್ರವನ್ನು ಜೋಡಿಸಿದನು. ಪ್ರಮಿಳೆಯು ಮೋಹನಾಸ್ತ್ರವನ್ನು ಮೂರು ಬಾಣಗಳಿಂದ ಕತ್ತರಿಸಿದಳು. ಧನುಸ್ಸಿನ ಹಗ್ಗವನ್ನೂ ಕತ್ತರಿಸಿದಳು. ತರುವಾಯ ಅರ್ಜುನನು ಧನುಸ್ಸಿನ ಹಗ್ಗವನ್ನು ಬಿಗಿದು ಬಾಣವನ್ನು ಬಿಡಲಿಕ್ಕೆ ಪ್ರಯತ್ನಮಾಡಲು ಅಶರೀರವಾಣಿಯಾಯಿತು.

'ಅರ್ಜುನ! ಸಾಹಸ ಕಾರ್ಯವನ್ನು ಮಾಡಬೇಡ. ಸ್ತ್ರೀಹತ್ಯಾವನ್ನು ಮಾಡದಿರು. ಹತ್ತುಸಾವಿರ ವರ್ಷವಾದರೂ ಇವಳನ್ನು ಜಯಿಸಲಿಕ್ಕೆ ಆಗಲಾರದು. ನಿನಗೆ ಜೀವಿಸುವ ಇಚ್ಛೆಯಿದ್ದರೆ ಇವಳನ್ನು ಮದುವೆ ಮಾಡಿಕೊ. ಇವಳೊಡನೆ ಊರಿಗೆ ಕರಕೊಂಡು ಹೋಗುತ್ತೇನೆ ಎಂದು ಹೇಳು' ಎಂದು ಅಶರೀರವಾಣಿಯನ್ನು ಅರ್ಜುನನು ಕೇಳಿದನು. ತರುವಾಯ ಅರ್ಜುನನು ಪ್ರಮೀಳೆಯೊಡನೆ ವಿವಾಹ ಮಾಡಿಕೊಂಡನು. ಸುಂದರಿ! ನಾನೀಗ ಕುದುರೆಯನ್ನು ರಕ್ಷಣೆ ಮಾಡುವ ವಿಷಯದಲ್ಲಿ ದೀಕ್ಷಿತನಾಗಿರುವೆನು. ಹಸ್ತಿನಾವತಿಯಲ್ಲಿ ನಿನಗೆ ನನ್ನ ಸಮಾಗಮವಾಗುವುದು. ಅಲ್ಲಿ ಕೃಷ್ಣಪರಮಾತ್ಮನ ದರ್ಶನದಿಂದ ನಿನ್ನ ದೋಷಗಳೆಲ್ಲಾ ಪರಿಹೃತವಾಗುವುವು. ನಿನ್ನ ಎಲ್ಲಾ ಸ್ತ್ರೀಯರಿಗೂ ನನ್ನ ಊರಲ್ಲಿ ಪತಿಗಳು ಸಿಕ್ಕುವರು. ಕುದುರೆಯನ್ನು ಬಿಡು. ನಾನು ಹೋಗುವೆನು. ನೀನು ನನ್ನೊಟ್ಟಿಗೆ ಬಾ ಅಥವಾ ಹಸ್ತಿನಾವತಿಗೆ ಹೋಗು ಎಂದು ಹೇಳಿದನು. ತರುವಾಯ ಪ್ರಮೀಳೆಯು ಕುದುರೆಯನ್ನು ಬಿಟ್ಟು ಹಸ್ತಿನಾವತಿಗೆ ಧರ್ಮರಾಜನಿದ್ದಲ್ಲಿಗೆ ಹೋದಳು. ಕುದುರೆಯು ಮುಂದೆ ಹೋಯಿತು.



# ಭೀಷಣನು [1]

ಮುಂದೆ ಕುದುರೆಯು ಅನೇಕ ವಿಚಿತ್ರ ಪ್ರದೇಶಗಳಲ್ಲಿ ಸಂಚರಿಸಿ ಭೀಷಣ ಎಂಬ ರಾಕ್ಷಸನಿರುವ ಊರಿಗೆ ಹೋಯಿತು. ಅಲ್ಲಿ ಪಾಪಿಗಳಾದ ರಾಕ್ಷಸರು ವಾಸಮಾಡುತ್ತಿದ್ದರು. ಭೀಷಣನ ಪುರೋಹಿತ ಮೇದೋಹ ಎಂಬ ಬ್ರಹ್ಮರಾಕ್ಷಸನು ಆ ಕುದುರೆಯನ್ನು ನೋಡಿದನು. ಅರ್ಜುನನ ಕುದುರೆಯು ಬಂದಿರುವುದು ಎಂದು ತಿಳಿದುಕೊಂಡು ಭೀಷಣನ ಸಮೀಪಕ್ಕೆ ಹೋದನು.

ಮನುಷ್ಯರ ಕರಳಿನಿಂದ ಯಜ್ಞೋಪವೀತವನ್ನು ಹಾಕಿಕೊಂಡನು. ಮನುಷ್ಯರ ಕಪಾಲದ ಜಪಮಾಲೆಯನ್ನು ಧರಿಸಿದನು. ಒಣಗಿದ ಆನೆಯ ತಲೆಯಿಂದ ಕಮಂಡಲುವನ್ನು ಮಾಡಿಕೊಂಡನು. ಕಣ್ಣುಗಳಿಂದ ಮಾಲೆಯನ್ನು ಮಾಡಿಕೊಂಡು ಹಾಕಿಕೊಂಡಿದ್ದನು. ಆನೆಯ ಬೆನ್ನಿನ ಎಲುಬನ್ನು ದಂಡವನ್ನಾಗಿ ಮಾಡಿಕೊಂಡಿದ್ದನು. ಈ ವೇಷದಿಂದ ಹೋಗಿ ಭೀಷಣನೊಡನೆ 'ನಿನ್ನ ಶತ್ರುವಾದ ಅರ್ಜುನನು ಕುದುರೆಯನ್ನು ರಕ್ಷಿಸುತ್ತಾ ನಮ್ಮ ಊರಿಗೆ ಬರುತ್ತಿರುವನು. ಅವನ ಅಣ್ಣನು ನಿನ್ನ ತಂದೆಯಾದ ಬಕಾಸುರನನ್ನು ಕೊಂದಿರುವನು. ಭೀಮನು ತಮ್ಮನಾದ ಅವನನ್ನು ಕೊಂದು ನನ್ನ ಆಜ್ಞೆಯಿಂದ ನರಮೇಧ ಎಂಬ ಯಾಗವನ್ನು ಮಾಡು. ನಾನು ಆಚಾರ್ಯನಾಗುತ್ತೇನೆ. ಇತರ ಒಳ್ಳೇ ಬ್ರಹ್ಮರಾಕ್ಷಸರೂ ಇದ್ದಾರೆ. ಎಷ್ಟೋ ಜನರು ಚಾತುರ್ಮಾಸ್ಯವ್ರತವನ್ನು ಮಾಡಿದವರು. ಅವರು ಮೊದಲಿನ ಶ್ರಾವಣಮಾಸದಲ್ಲಿ ಮದ್ಯಪಾನ ರಕ್ತಪಾನ ಮಾಡುತ್ತಾ ಇರುವರು. ಮಾಸೋಪವಾಸಿಗಳ ಮಾಂಸವನ್ನು ಭಕ್ಷಣೆ ಮಾಡುತ್ತಾ ಇರುವರು. ಭಾದ್ರಪದಮಾಸದಲ್ಲಿ ಬ್ರಹ್ಮಚಾರಿಗಳ ಯತಿಗಳ ಮಾಂಸವನ್ನು ಭಕ್ಷಣೆ ಮಾಡುತ್ತಾ ಇರುವರು. ಆಶ್ವಿಜಮಾಸದಲ್ಲಿ ಜಟಾಧಾರಿಗಳ ಮಾಂಸವನ್ನು ತಿನ್ನುವರು. ಕಾರ್ತಿಕಮಾಸದಲ್ಲಿ ಬಾಲಕರ ಮಾಂಸವನ್ನು ಸೇವಿಸುವರು. ಈಪ್ರಕಾರ ಚಾತುರ್ಮಾಸ್ಯವ್ರತವನ್ನು ಮಾಡಿರುವರು. ಆದುದರಿಂದ ಸೈನ್ಯಸಹಿತನಾದ ಅರ್ಜುನನನ್ನು ನಿಲ್ಲಿಸು. ಎಷ್ಟೋ ರಾಕ್ಷಸರು ವ್ರತಮಾಡುತ್ತಾ ಇದ್ದಾರೆ. ಅವರು ಅರ್ಜುನನ ಆನೆಗಳನ್ನೂ ಕುದುರೆಗಳನ್ನೂ ತಿನ್ನಲಿ. ಮನುಷ್ಯರ ರಕ್ತದಿಂದ ಸಂತೋಷಪಡಲಿ. ಮಹಾನುಭಾವನಾದ ರಾವಣನೊಬ್ಬನು ಈ ನರಮೇಧವನ್ನು ಮಾಡಿರುವನು. ಈಗ ನೀನು ಮಾಡು. ನಾವೆಲ್ಲರೂ ತೃಪ್ತಿಯನ್ನು ಹೊಂದುವೆವು ಎಂದು ಹೇಳಿದನು. ಭೀಷಣನು ಹಾಗೆಯೇ ಆಗಲಿ ಮಾಡುತ್ತೇನೆ ಎಂದನು.

---

1. ಜೈ. ಅ.ಪ. ಅ.22

ಯಜ್ಞಕ್ಕೋಸ್ಕರ ಪುರೋಹಿತರಿಂದ ಮಂಟಪವನ್ನು ಮಾಡಿಸಿದನು. ಯಜ್ಞಕ್ಕಾಗಿ ಅರ್ಜುನನೊಡನೆ ಯುದ್ಧವನ್ನು ಮಾಡಲಿಕ್ಕೆ ಹೋದನು. ರಾಕ್ಷಸಿಯರು ಪರ್ವತ ವನ್ನು ಹತ್ತಿ ಬಂದಿರುವ ಅರ್ಜುನನನ್ನು ನೋಡಿದರು. ಒಬ್ಬಳು ಹನುಮಂತ ದೇವರನ್ನು ನೋಡಿ ಓಡಿರಿ ಓಡಿರಿ. ನೀವೆಲ್ಲರೂ ಸಾಯುವಿರಿ. ಲಂಕೆಯಲ್ಲಿ ರಾಕ್ಷಸರನ್ನು ಕೊಂದಿರುವ ಕಪಿಯು ಬಂದಿದೆ ಎಂದಳು. ಮತ್ತೊಬ್ಬಳು ನಾನು ಆ ಕಪಿಯನ್ನೇ ನುಂಗಿಬಿಡುತ್ತೇನೆ. ಮತ್ತೊಬ್ಬಳು ನನ್ನ ಸ್ತನಗಳಿಂದಲೇ ಎಲ್ಲರನ್ನೂ ಕೊಲ್ಲುವೆನು ಎಂದಳು.

ರಾಕ್ಷಸಿಯರೂ ರಾಕ್ಷಸರೂ ಯುದ್ಧಕ್ಕೆ ಬಂದರು. ಹನುಮಂತದೇವರು ರಾಕ್ಷಸಿಯರನ್ನೆಲ್ಲಾ ಬಾಲದಿಂದ ಸುತ್ತಿ ನೆಲಕ್ಕೆ ಒಡಿದರು. ಅನೇಕರು ಸತ್ತರು. ಉಳಿದವರು ಭಯದಿಂದ ಓಡಿಹೋದರು. ಭೀಷಣನು 'ಅರ್ಜುನ! ನಿನ್ನ ಅಣ್ಣ ಭೀಮನು ನನ್ನ ತಂದೆಯನ್ನು ಕೊಂದನು. ಆಗ ನಾನು ಹತ್ತಿರದಲ್ಲಿ ಇರಲಿಲ್ಲ. ಈಗ ನಿನ್ನನ್ನು ಕೊಂದು ನರಮೇಧವನ್ನು ಮಾಡುತ್ತೇನೆ. ಆಮೇಲೆ ಭೀಮನನ್ನು ಕೊಲ್ಲುತ್ತೇನೆ. ರಕ್ತಪಾನವನ್ನು ಮಾಡುತ್ತೇನೆ ಎಂದು ಹೇಳಿ ಅನೇಕ ಬಾಣಗಳನ್ನೂ ಮುದ್ಗರಗಳನ್ನೂ ಪರ್ವತಗಳನ್ನೂ ಮರಗಳನ್ನೂ ಬಿಟ್ಟನು. ರಾಕ್ಷಸರಿಂದ ಕೂಡಿ ಕೊಂಡು ಅರ್ಜುನನನ್ನು ಪೀಡಿಸಿದನು. ಅರ್ಜುನನು ರಾಕ್ಷಸರನ್ನು ಸಂಹರಿಸುವ ಮಂತ್ರದಿಂದ ಅಭಿಮಂತ್ರಿಸಿ ಬಾಣಗಳನ್ನು ಬಿಟ್ಟನು. ರಾಕ್ಷಸರು ಭೀತರಾಗಿ ಕಾಡಿಗೆ ಓಡಿಹೋದರು.

ಭೀಷಣನು ಕೋಪದಿಂದ ಮಾಯೆಯನ್ನು ಉಂಟುಮಾಡಿದನು. ಆಗಲೇ ಅನೇಕ ಪರ್ವತಗಳೂ ಸಿಂಹಗಳೂ ಹುಲಿಗಳೂ ಮಿಂಚುಗಳೂ ಭೀಷಣನ ಮಾಯೆಯಿಂದ ಕಂಡವು. ಭೀಷಣನು ಗಂಗಾತೀರದಲ್ಲಿ ಶಿಷ್ಯರಿಗೆ ಪಾಠಹೇಳುತ್ತಾ ಋಷಿರೂಪದಿಂದ ಕೂಡಿದ್ದನು. ಅರ್ಜುನನೊಡನೆ ಅರ್ಜುನ! ನಾವು ರಾಕ್ಷಸರಿಂದ ತುಂಬಾ ಭಯವನ್ನು ಹೊಂದಿದ್ದೇವೆ. ತಪಸ್ಸು ಮಾಡಲಿಕ್ಕೇ ಆಗುವುದಿಲ್ಲ. ನೀನು ಇಲ್ಲಿಯೇ ವಾಸಮಾಡು. ಋಷಿಗಳ ಆಶ್ರಮಗಳಲ್ಲಿ ಇದ್ದು ಕ್ಷತ್ರಿಯರಿಗೆ ಬಲವು ಬರುವುದು. ಸ್ವಲ್ಪ ಸಮಯ ನನ್ನ ಬಳಿಯಲ್ಲೇ ಇದ್ದು ನನ್ನ ಹತ್ತಿರವಿಧ್ಯಾಭ್ಯಾಸವನ್ನು ಮಾಡಿ ಆಮೇಲೆ ಆ ವಿದ್ಯೆಯ ಸಾಮರ್ಥ್ಯದಿಂದ ರಾಕ್ಷಸರನ್ನು ಸಂಹರಿಸು' ಎಂದನು. ಅರ್ಜುನ ಇದೆಲ್ಲವೂ ರಾಕ್ಷಸನ ಮಾಯೆಯೆಂದು ತಿಳಿದವನಾಗಿ ಆ ಭೀಷಣ ಎಂಬ ರಾಕ್ಷಸನನ್ನು ಸಂಹಾರಮಾಡಿ ಬೇಕಾದ ಬಂಗಾರವನ್ನು ರತ್ನಗಳನ್ನೂ ಕುದುರೆಗಳನ್ನೂ ದಿವ್ಯವಾದ ಛತ್ರಕುಂಡಲ ಇವುಗಳನ್ನೂ ತೆಗೆದುಕೊಂಡು ಮುಂದೆ ಹೋದನು.

# ಬಭ್ರುವಾಹನನು [1]

ಭೀಷಣನ ವನದಿಂದ ಮುಂದೆ ಹೊರಟ ಕುದುರೆಯು ಮನೋಹರವಾದ ಮಣಿಪುರಕ್ಕೆ ಹೋಗಿ ಸೇರಿತು. ಆ ಊರಲ್ಲಿ ಬಭ್ರುವಾಹನನೆಂಬ ರಾಜನು ಊರ ಜನರೆಲ್ಲರೂ ಸತ್ಯವಂತರು. ವೇದಶಾಸ್ತ್ರಗಳಲ್ಲಿ ಪಂಡಿತರು ಸರ್ವದಾ ಪರಮಾತ್ಮನ ಧ್ಯಾನವನ್ನು ಮಾಡುತ್ತಿರುವರು. ಮಹಾಪರಾಕ್ರಮಶಾಲಿಗಳೂ ಆಗಿದ್ದರು. ಸ್ತ್ರೀಯರೆಲ್ಲರೂ ಪತಿವ್ರತೆಯಾಗಿರುವರು. ಮಹಾಸಂಪತ್ತಿನಿಂದ ಕೂಡಿರುವ ಪಟ್ಟಣವದು. ಎರಡನೆಯ ವೈಕುಂಠದಂತೆಯೇ ಇರುವ ಅದನ್ನು ನೋಡಿ ಅರ್ಜುನನು ಹಂಸಧ್ವಜನೊಡನೆ ನಾವು ಯಾವ ಊರಿಗೆ ಬಂದು ಸೇರಿರುವೆವು ಎಂದು ಕೇಳಿದನು.

ಅದಕ್ಕೆ ಹಂಸಧ್ವಜನು ಅರ್ಜುನ! ಈ ಊರಿಗೆ ಬಭ್ರುವಾಹನ ಎಂಬ ರಾಜನು. ಮಹಾಬಲಿಷ್ಠನು. ಇವನಿಗೆ ನಾನು ಪ್ರತಿವರ್ಷವೂ ಕೂಡ ಸಹಸ್ರ ಬಂಡಿಗಳಲ್ಲಿ ತುಂಬಾ ಬಂಗಾರವನ್ನು ಕಪ್ಪವನ್ನು ಕೊಡುತ್ತಿರುವೆನು. ಈ ಊರಿಗೆ ಮಣಿಪುರ ಎಂದು ಹೆಸರು. ಇಲ್ಲಿ ಪ್ರಸಿದ್ಧನಾದ ಮಹಾಪರಾಕ್ರಮಶಾಲಿಯಾದ ಸುಮತಿ ಎಂಬ ಮಂತ್ರಿಯಿರುವನು. ಇಲ್ಲಿಯ ರಾಜನ ಸೈನಿಕರು ಕುದುರೆಯನ್ನು ಹಿಡಿಯುವ ಪಕ್ಷದಲ್ಲಿ ಕುದುರೆಯನ್ನು ಬಿಡಿಸಲಿಕ್ಕೆ ಬಹಳ ಶ್ರಮವುಂಟಾಗಬಹುದು ಎಂದನು.

ಈ ರೀತಿಯಾಗಿ ಹೇಳುತ್ತಾ ಇರುವ ಸಮಯದಲ್ಲಿಯೇ ಒಂದು ಹದ್ದುಪಕ್ಷಿಯು ಬಂದು ಅರ್ಜುನನ ಕಿರೀಟದ ಮೇಲೆ ಕೂತು ಮರಣವನ್ನು ಸೂಚಿಸಿತು. ಎಲ್ಲರೂ ಆಶ್ಚರ್ಯಪಟ್ಟರು. ಎಲ್ಲರೂ ಭಯಪಟ್ಟರು.

ಕುದುರೆಯು ನಗರಕ್ಕೆ ಬಂದಿರುವ ವಿಷಯವನ್ನು ತಿಳಿದ ಬಭ್ರುವಾಹನನು ತನ್ನ ಸೈನಿಕರಿಂದ ಕಟ್ಟಿತರಲಿಕ್ಕೆ ಹೇಳಿದನು. ರಾತ್ರಿಕಾಲದಲ್ಲಿ ಸಾವಿರ ಸೈನಿಕರು ಕುದುರೆಯನ್ನು ಕರೆದುಕೊಂಡು ಬಂದು ತೋರಿಸಿದರು. ರಾತ್ರಿಯಲ್ಲಿ ಬಭ್ರುವಾಹನನು ಬಂಗಾರ ರತ್ನಗಳಿಂದ ನಿರ್ಮಿತವಾದ ಸಿಂಹಾಸನದಲ್ಲಿ ಕೂತಿದ್ದನು. ಸಭೆಯಲ್ಲಿ ಎಲ್ಲರೂ ಸೇರಿರುವರು. ಸಭೆಯು ಅತ್ಯಂತ ವಿಚಿತ್ರವಾಗಿತ್ತು. ಬಭ್ರುವಾಹನನು ಕುದುರೆಯ ತಲೆಯಲ್ಲಿ ಕಟ್ಟಿರುವ ಪತ್ರವನ್ನು ಓದಿ ಇದು ಧರ್ಮರಾಜನ ಕುದುರೆಯು. ಅರ್ಜುನನಿಂದ ರಕ್ಷಿತವಾಗಿದೆ ಎಂಬುದನ್ನು ತಿಳಿದು ಮಂತ್ರಿಯಾದ ಸುಬುದ್ಧಿಯ ಹತ್ತಿರ ಕೇಳಿದನು. ನನ್ನ ತಾಯಿಯು ತಂದೆಯ ಮನೆಯಲ್ಲಿ ನರ್ತನ

---

1. ಜೈ.ಭಾ. ಅಶ್ವ. ಅ-23, 24

ಮಾಡುವಾಗ ತಾಳವು ತಪ್ಪಿಹೋಯಿತೆಂದು 'ನೀನು ನೀರಿನಲ್ಲಿ ಮೊಸಳೆಯಾಗಿ ಬಹುಕಾಲ ವಾಸಮಾಡು. ದೈವೇಚ್ಛೆಯಿಂದ ಅರ್ಜುನನ ಪಾದಗಳನ್ನು ಹೊಂದಿ ಸ್ತ್ರೀರೂಪವನ್ನು ಹೊಂದುವಿ. ಆಮೇಲೆ ಅರ್ಜುನನ ಹೆಂಡತಿಯಾಗುವಿ' ಎಂದು ತಂದೆಯು ಶಾಪಕೊಟ್ಟರು. ಅದೇ ಪ್ರಕಾರವಾಗಿ ಆಗಿ ನಾನು ಅರ್ಜುನರಿಂದ ಹುಟ್ಟಿರುವೆನು. ನಮ್ಮ ತಾಯಿಯು ನನ್ನನ್ನು ಬಿಟ್ಟು ಹಸ್ತಿನಾವತಿಗೆ ಹೋಗಿರುವಳು. ನಾನು ಅರ್ಜುನರ ಮಗನು ಮಹಾರಾಜ್ಯವನ್ನು ಹೊಂದಿರುವೆನು. ನಾನೀಗ ಏನು ಮಾಡಲಿ? ಕಾರ್ಯವನ್ನು ಕೆಡಿಸಿದೆನಲ್ಲ! ವಿಚಾರಮಾಡದೆ ತಂದೆಯ ಕುದುರೆಯನ್ನು ತರಿಸಿದೆನು ಎಂದು ಹೇಳಿದನು.

ಆಗ ಮಂತ್ರಿಯಾದ ಸುಬುದ್ಧಿಯು ನೀನು ಹೇಳಿದ ಮಾತು ಸರಿ. ನಾವು ಮೊದಲು ವಿಚಾರಿಸಲಿಲ್ಲ. ನೀನೇ ಒಂದು ವರ್ಷಕಾಲ ಈ ಕುದುರೆಯನ್ನು ರಕ್ಷಿಸ ಬೇಕು. ತಂದೆಯ ಆಜ್ಞೆಯಂತೆ ನಡೆಯಬೇಕು. ಕುದುರೆಯನ್ನು ಅಪಹರಿಸುವವರನ್ನು ಸಂಹರಿಸಬೇಕು. ಪುತ್ರರಿಗೆ ಪಿತೃಗಳನ್ನು ಪೂಜಿಸುವುದೇ ಪ್ರಥಮ ಧರ್ಮವು. ಈಗ ಸಮಸ್ತರಾಜ್ಯವನ್ನು ಧನವನ್ನೂ ತಂದೆಗೆ ಒಪ್ಪಿಸು. ತಂದೆಯಾದ ಅರ್ಜುನನನ್ನು ಸಂತೋಷಪಡಿಸು. ಬ್ರಾಹ್ಮಣರು ಆ ಕನ್ಯೆಯರು ಇತ್ಯಾದಿ ಸಮಸ್ತರನ್ನೂ ಕರೆದುಕೊಂಡು ಮಹಾವೈಭವದಿಂದ ಹೋಗಿ ತಂದೆಗೆ ಬಹುಮಾನವನ್ನು ಮಾಡಿ ಕುದುರೆಯನ್ನು ಒಪ್ಪಿಸು. ಹೀಗೆ ಮಾಡಿದರೆ ಕ್ಷೇಮವುಂಟಾಗುವುದು ಎಂದನು. ಈ ರೀತಿಯಾಗಿ ಸುಬುದ್ಧಿಯು ಹೇಳಲು ಅದೇ ಪ್ರಕಾರವಾಗಿ ಬಭ್ರುವಾಹನನು ಮಹಾವೈಭವದಿಂದ ಮುತ್ತು ರತ್ನಾದಿ ಧನವನ್ನೂ ಕುದುರೆಯನ್ನೂ ತಂದು ಅರ್ಜುನನಿಗೆ ಒಪ್ಪಿಸಿದನು. ಬಭ್ರುವಾಹನನು ಆನೆಯಿಂದ ಕೆಳಗಿಳಿದು ಎಲ್ಲ ರಾಜರೂ ನೋಡುವಂತೆ ಕಾಲು ನಡೆಯಿಂದ ಅರ್ಜುನನಿಗೆ ನಮಸ್ಕರಿಸುತ್ತಾ ಬಂದನು. ತಾನು ತಂದಿರುವ ಸಮಸ್ತವಸ್ತುವನ್ನೂ ಅರ್ಜುನನಿಗೆ ಒಪ್ಪಿಸಿದನು. ಅರ್ಜುನನ ಪಾದದಲ್ಲಿ ಬಿದ್ದನು.

ತರುವಾಯ ಎದ್ದು ನಾನು ನಿಮ್ಮ ಮಗನು. ಚಿತ್ರಾಂಗದೆಯಲ್ಲಿ ಹುಟ್ಟಿದವನು. ನೀವು ತೀರ್ಥಯಾತ್ರೆಗೆ ಬಂದಿರುವ ಕಾಲದಲ್ಲಿ ಹುಟ್ಟಿದೆನು. ನಾಗಕನ್ಯೆಯಾದ ಉಲೂಪಿಯು ನನ್ನನ್ನು ಬೆಳೆಸಿದರು. ನನ್ನ ಹೆಸರು ಬಭ್ರುವಾಹನ ಎಂದು. ನಿಮ್ಮ ಕುದುರೆ ಎಂದು ನನಗೆ ತಿಳಿಯಲಿಲ್ಲ. ರಾಜ್ಯವನ್ನೆಲ್ಲಾ ನೀವೇ ಸ್ವೀಕರಿಸಬೇಕು. ನನಗೆ ಆಜ್ಞಾಪಿಸಬೇಕು ಎಂದು ಇನ್ನೊಂದು ಬಾರಿ ಅರ್ಜುನನ ಮುಂಭಾಗದಲ್ಲಿ ಅಡ್ಡಬಿದ್ದನು. ಕ್ಷಮಿಸಬೇಕು ಎಂದನು. ಇದನ್ನು ನೋಡಿ ಅರ್ಜುನನ ಸೈನ್ಯದವರು

ಪ್ರದ್ಯುಮ್ನನೇ ಮೊದಲಾದವರು ಅರ್ಜುನ! ಈರೀತಿಯಾಗಿ ನಿನಗೆ ಹಿತವನ್ನು ಹೇಳುತ್ತಿರುವ ಮಗನನ್ನು ಯಾಕೆ ಅಂಗೀಕರಿಸುವುದಿಲ್ಲ? ಅಭಿಮಾನವುಳ್ಳವನಾದ ಇವನು ನಿನ್ನ ಕಾಲ ಮುಂದೆ ಬಿದ್ದಿರುವನು. ಎಬ್ಬಿಸು. ನಿನ್ನ ಮಗನ ಮಹತ್ತಾದ ಸಂಪತ್ತನ್ನು ನೋಡು ಎಂದು ಹೇಳಿದರು.

ಅವರ ಮಾತನ್ನು ಕೇಳಿ ಅರ್ಜುನನು ಕೋಪವುಳ್ಳವನಾಗಿ ನಮಸ್ಕರಿಸಿರುವ ಮಗನಾದ ಬಭ್ರುವಾಹನನನ್ನು ತನ್ನ ಪಾದದಿಂದ ತಲೆಯಲ್ಲಿ ಬಡೆಯತಕ್ಕವನಾಗಿ ಬಭ್ರುವಾಹನನೊಡನೆ 'ನೀನು ನನ್ನ ಹೊಟ್ಟೆಯಿಂದ ಹುಟ್ಟಿದ ಮಗನಲ್ಲ. ಭಯದಿಂದ ನಡುಗುತ್ತಿರುವೆಯಲ್ಲಾ! ಚಿತ್ರಾಂಗದೆಯು ನಿನ್ನನ್ನು ನನ್ನಿಂದ ಹಡೆಯಲಿಲ್ಲ. ಯಾರೋ ವೈಶ್ಯನಿಂದ ಹಡೆದಿದ್ದಾಳೆ. ಅಷ್ಟು ಅಂಜಿಕೆಉಳ್ಳವನು ಮೊದಲು ಏಕೆ ಕುದುರೆಯನ್ನು ಕಟ್ಟಿದಿ? ವೈಶ್ಯನಂತೆ ಈಗ ಕುದುರೆಯನ್ನು ಕೊಡಲಿಕ್ಕೆ ಇಚ್ಛಿಸುವಿಯಷ್ಟೆ! ನಿನ್ನಂತಹ ನಪುಂಸಕನು ನನ್ನಿಂದ ಹುಟ್ಟಿದ ಮಗನಲ್ಲ. ನನಗೆ ಹುಟ್ಟಿದ ಮಗನು ಮಹಾಪರಾಕ್ರಮಶಾಲಿಯಾದ ಕೃಷ್ಣಭಕ್ತನಾದ ಸುಭದ್ರೆಯ ಮಗನು. ಅಭಿಮನ್ಯುವು ಕ್ಷತ್ರಿಯರನ್ನು ಸಂಹರಿಸಿದವನು. ಯುದ್ಧದಲ್ಲಿ ದ್ರೋಣಾಚಾರ್ಯರೇ ಮೊದಲಾದವರನ್ನು ಹಿಂದೆ ತಿರುಗಿಸಿದನು. ಚಕ್ರವ್ಯೂಹವನ್ನು ಭೇದಿಸಿ ಒಳಗೆ ಪ್ರವೇಶಿಸಿದನು. ನೀನು ನರಿ, ನನ್ನ ಮಗ ಅಭಿಮನ್ಯುವು ಸಿಂಹವು. ಮೂಢನೇ ಇನ್ನೂ ನಿನ್ನ ಸೈನ್ಯವು ಬೀಳಲಿಲ್ಲ. ನಿನ್ನ ಎದೆಗೆ ಬಾಣವು ತಾಗಲಿಲ್ಲ. ಯಾಕೆ ಇಷ್ಟು ಭಯಪಡುವಿ. ಯಾರೋ ಗಂಧರ್ವರಾಜನ ಮಗಳು ನಿನ್ನ ತಾಯಿ ನರ್ತಕಿಯು. ನೀನು ನಟನು. ರಾಜ್ಯವನ್ನು ಧನುಸ್ಸನ್ನೂ ಬಿಟ್ಟು ಮನೆಗೆ ಹೋಗು. ತಾಯಿಯ ವಂಶವನ್ನು ಹೊಂದು. ಕುತ್ತಿಗೆಯಲ್ಲಿ ವಾದ್ಯವನ್ನು ಕಟ್ಟಿಕೊ ಎಂದನು.

ತರುವಾಯ ಬಭ್ರುವಾಹನನು ಅರ್ಜುನನು ಹೇಳಿದ ಮಾತುಗಳನ್ನೆಲ್ಲಾ ಮನಸ್ಸಿಗೆ ತಂದುಕೊಂಡನು. ಕೋಪವುಳ್ಳವನಾಗಿ ನಗುತ್ತಾ ಹೇಳಿದನು. ಪಾರ್ಥ! ನೀನು ಹೇಳಿದ ಎಲ್ಲಾ ಮಾತನ್ನೂ ಕ್ಷಮಿಸಿದೆನು. ತಾಯಿಯನ್ನು ದೂಷಿಸಿದ್ದನ್ನು ಮಾತ್ರ ಸಹಿಸಲಾರೆನು. ನನ್ನನ್ನು ವೈಶ್ಯನಿಗೆ ಹುಟ್ಟಿದ ಮಗನೆಂದಿಯಾ? ನಾನು ಯುದ್ಧದಲ್ಲಿ ನಿನ್ನ ಮುಂಭಾಗದಲ್ಲಿ ಕ್ಷತ್ರಿಯನೆಂದು ತೋರಿಸುವೆನು. ಕನ್ಯೆಯರೂ ಜನರೂ ಎಲ್ಲರೂ ಹೋಗಲಿ, ಸೈನಿಕರು ಇಲ್ಲಿಯೇ ಇರಲಿ. ಕುದುರೆಯನ್ನು ಕಟ್ಟಿರಿ. ನಾನು ಕಟ್ಟಿರುವ ಕುದುರೆಯನ್ನು ಅರ್ಜುನನು ಹೇಗೆ ಬಿಡಿಸುವನು? ಎಂದು ನೋಡುವೆನು ಎಂದು ಹೇಳಿದನು. ಎಲ್ಲ ಸೈನಿಕರೂ ಯುದ್ಧಕ್ಕೆ ಸಿದ್ಧರಾದರು.

ಬಭ್ರುವಾಹನನು ಅರ್ಜುನ! ಧನುಸ್ಸನ್ನು ಧರಿಸು. ನನ್ನ ಪೌರುಷವನ್ನು

ನೋಡು. ತಂದೆಯೆಂಬ ಭಾವದಿಂದ ಕುದುರೆಯನ್ನು ತಂದೆನು. ರಾಜ್ಯವನ್ನು ಒಪ್ಪಿಸಿದೆನು. ನಿನ್ನನ್ನು ಮೊರೆ ಹೊಂದಿದೆನು. ಅದು ನಿನಗೆ ಸರಿಯಾಗಲಿಲ್ಲ. ಯುದ್ಧಮಾಡುವುದೇ ನಿನಗೆ ಇಷ್ಟವಾಗಿದ್ದರೆ ನಾನು ಯುದ್ಧಕ್ಕೆ ಸಿದ್ಧನಿದ್ದೇನೆ. ನಿನ್ನನ್ನು ಯಾರು ರಕ್ಷಿಸುವವರಿದ್ದಾರೆ? ಎಂದು ಹೇಳಿದನು.

ಈರೀತಿಯಾಗಿ ಯುದ್ಧಕ್ಕೆ ಸನ್ನದ್ಧನಾದ ಬಭ್ರುವಾಹನನೊಡನೆ ಅನುಸಾಲ್ವನು ರಥಾರೂಢನಾಗಿ ಯುದ್ಧಕ್ಕೆ ಬಂದನು. ಭಯಂಕರವಾದ ಯುದ್ಧವು ನಡೆದು ಕೊನೆಗೆ ಅನುಸಾಲ್ವನು ಮೂರ್ಛಿತನಾದನು. ತರುವಾಯ ಪ್ರದ್ಯುಮ್ನನು ಯುದ್ಧಕ್ಕೆ ಬಂದನು. ಬಭ್ರುವಾಹನನಿಗೂ ಅವನಿಗೂ ಭಯಂಕರವಾದ ಯುದ್ಧವು ನಡೆಯಿತು. ಬಭ್ರುವಾಹನನು ಅನೇಕ ರಥಿಕರನ್ನೂ ಆನೆಗಳನ್ನೂ ಕುದುರೆಗಳನ್ನೂ ಪದಾತಿಗಳನ್ನೂ ಸಂಹರಿಸಿದನು. ಅನುಶಾಲ್ವನು ಎದ್ದು ಪುನಃ ಯುದ್ಧಕ್ಕೆ ಬಂದನು. ಪ್ರದ್ಯುಮ್ನ ನೀಲಧ್ವಜ ಯೌವನಾಶ್ವ ಹಂಸಧ್ವಜ ಇವರೆಲ್ಲರೂ ಒಬ್ಬನಾದ ಬಭ್ರುವಾಹನನ ಹತ್ತಿರ ಯುದ್ಧವನ್ನು ಮಾಡಲು ಸಮರ್ಥರಾಗಲಿಲ್ಲ. ಒಬ್ಬನೇ ಎಲ್ಲರ ರಥ ಆನೆ ಕುದುರೆಗಳನ್ನೆಲ್ಲಾ ಪುಡಿಮಾಡಿದನು. ಅನೇಕರು ಓಡಿದರು. ವೀರರು ಯುದ್ಧವನ್ನು ಮಾಡಿ ಪ್ರಾಣಬಿಟ್ಟು ಸ್ವರ್ಗವನ್ನು ಹೊಂದಿದರು. ಪ್ರದ್ಯುಮ್ನನೇ ಮೊದಲಾದ ವೀರರು ಬಾಣದ ಮಳೆಗಳಿಂದ ಮೂರ್ಛಿತರಾದರು. ತರುವಾಯ ಅರ್ಜುನನಿಗೂ ಬಭ್ರುವಾಹನನಿಗೂ ಭಯಂಕರವಾದ ಯುದ್ಧವು ನಡೆಯಿತು.

ಹಂಸಧ್ವಜನೂ ಸುವೇಗ ಎನ್ನುವವನೂ ಯುದ್ಧವನ್ನು ಮಾಡಿದನು. ಎಲ್ಲರೂ ಭಯಂಕರ ಯುದ್ಧವನ್ನು ಮಾಡಿದರು. ಕೊನೆಗೆ ಮೂರ್ಛಿತರಾದರು. ಅನೇಕರು ಮೃತರಾದರು. ಕೆಲವರನ್ನು ಉಲೂಪಿಯು ದೂರ ಕರೆದುಕೊಂಡು ಔಷಧದಿಂದ ರಕ್ಷಣೆ ಮಾಡಿದಳು.

ಕೊನೆಗೆ ಅರ್ಜುನನು ವೃಷಕೇತುವಿನೊಡನೆ 'ವೃಷಕೇತು! ನಮ್ಮ ಸೈನ್ಯವೆಲ್ಲ ನಷ್ಟವಾಯಿತು. ನಮ್ಮ ವಸ್ತುವೆಲ್ಲ ಅಪಹೃತವಾಯಿತು. ಹಂಸಧ್ವಜನೇ ಮೊದಲಾಗಿ ಉಳ್ಳ ಪರಾಕ್ರಮಶಾಲಿಗಳೆಲ್ಲರೂ ನನ್ನ ಎದುರಲ್ಲಿಯೇ ಬಿದ್ದಿರುವರು. ಪ್ರದ್ಯುಮ್ನನೂ ಅವನ ಮಗನೂ ನನಗೋಸ್ಕರ ಯುದ್ಧ ಮಾಡಿದರು. ಅವರನ್ನು ಮಣಿಪುರಕ್ಕೆ ಕರಕೊಂಡು ಹೋದರು. ಅನುಶಾಲ್ವನು ಯುದ್ಧದಲ್ಲಿ ಬಿದ್ದವನು ಕಾಣಿಸುವುದೇ ಇಲ್ಲ. ಸುವೇಗನೂ ಸತ್ತನು. ಎಲ್ಲರೂ ಹೋದರು. ಮಗ! ನೀನೊಬ್ಬನೇ ಕಾಣಿಸುವಿ. ಮತ್ತೆ ಯಾರೂ ಇಲ್ಲ. ಕೃಷ್ಣಪರಮಾತ್ಮನೂ ಧರ್ಮರಾಜರೂ ಇರುವಲ್ಲಿಗೆ ನೀನು ಹೋಗು. ನೀನೊಬ್ಬನೇ ಕುಲಪುತ್ರನಾಗಿದ್ದಿ. ಈರೀತಿಯಾಗಿ ಅರ್ಜುನನು

ಹೇಳುತ್ತಿರಲು ಒಂದು ಹದ್ದು ಬಂದು ಅರ್ಜುನನ ಕಿರೀಟದಲ್ಲಿ ಕೂತುಕೊಂಡು ಕೂಗಿತು. ಅದನ್ನು ನೋಡಿ ಅರ್ಜುನನು ರಥದಲ್ಲಿ ಪಾರಿವಾಳಪಕ್ಷಿಯು ಬಂದದ್ದನ್ನೂ ತನ್ನ ನೆರಳಲ್ಲಿ ತಲೆಕಾಣಿಸದೆ ಇರುವುದನ್ನು ಇನ್ನೂ ಅನೇಕ ಮರಣಸೂಚಕ ಶಕುನಗಳನ್ನು ನೋಡಿ ವೃಷಕೇತುವಿನೊಡನೆ 'ಮಗ! ನೀನು ಹೊರಟುಹೋಗು. ಧರ್ಮರಾಜ ಭೀಮಸೇನದೇವರು ಪರಮಾತ್ಮ ಇವರ ಹತ್ತಿರ ಈ ಭಯಂಕರವಾದ ಹಿಂಸೆಯನ್ನು ತಿಳಿಸು. ಈ ದುರ್ನಿಮಿತ್ತಗಳನ್ನು ತಿಳಿಸು. ನೀನೂ ನನ್ನೊಡನೆ ಯುದ್ಧದಲ್ಲಿ ಮರಣವನ್ನು ಹೊಂದುವ ಪಕ್ಷದಲ್ಲಿ ಎಲ್ಲರೂ ನಾಶವನ್ನು ಹೊಂದಿದಂತೆಯೇ, ನೀನು ಬಹಳ ಯುದ್ಧ ಮಾಡಿದ್ದಿ. ಮೈಯೆಲ್ಲಾ ಗಾಯವಾಗಿದೆ. ನೀನು ಇಲ್ಲದಿದ್ದರೆ ಕುಂತಿದೇವಿಯು ಬದುಕಲಾರಳು. ಆದುದರಿಂದ ನನ್ನನ್ನು ಬಿಟ್ಟು ಹೋಗು. ನನ್ನಿಂದ ಮಹತ್ತಾದ ಅಕಾರ್ಯವು ಸಂಭವಿಸಿತು. ಧರ್ಮರಾಜರು ದೀಕ್ಷಿತರಾಗಿದ್ದಾರೆ. ಯಜ್ಞವು ಹೇಗೆ ನಡೆಯಬೇಕು. ನನ್ನಿಂದ ಒಂದು ಕಾರ್ಯವೂ ಆಗಲಿಲ್ಲ. ಯಜ್ಞದ ಅವಭೃಥಸ್ನಾನ ಒಂದೂ ನಡೆಯುವಂತಿಲ್ಲ. ನನ್ನ ಬದುಕಿಗೆ ಧಿಕ್ಕಾರವಿರಲಿ ಎಂದನು.

ಅದಕ್ಕೆ ವೃಷಕೇತುವು ನಾನು ಮರಣಭಯದಿಂದ ನಿಮ್ಮನ್ನು ಬಿಟ್ಟು ಹೋಗಲಾರೆನು. ನನ್ನ ಪೌರುಷವನ್ನು ನೋಡಬೇಕು. ಬಭ್ರುವಾಹನನ ಹತ್ತಿರ ಯುದ್ಧವನ್ನು ಮಾಡುವೆನು. ಸ್ವಾಮಿಕಾರ್ಯಕ್ಕಾಗಿ ಯುದ್ಧದಲ್ಲಿ ಸತ್ತರೆ ಉತ್ತಮ ಲೋಕಗಳು ಲಭಿಸುವುವು. ಇತ್ಯಾದಿ ಮಾತುಗಳನ್ನು ಹೇಳಿ ಬಭ್ರುವಾಹನನನ್ನು ಯುದ್ಧಕ್ಕೆ ಕರೆದನು. ಬಭ್ರುವಾಹನನಿಗೂ ವೃಷಕೇತುವಿಗೂ ಅತಿವಿಚಿತ್ರವಾದ ಯುದ್ಧವು ನಡೆಯಿತು.ಕೊನೆಗೆ ಬಭ್ರುವಾಹನನು ಅರ್ಧಚಂದ್ರಾಕಾರವುಳ್ಳ ಬಾಣವನ್ನು ವೃಷಕೇತುವಿಗೆ ಬಿಟ್ಟನು. ಬರುತ್ತಾ ಇರುವ ಬಾಣವನ್ನು ಮೂರನ್ನಾಗಿ ಕತ್ತರಿಸಿ ವೃಷಕೇತುವು ಗರ್ಜಿಸುತ್ತಿರುವಷ್ಟರಲ್ಲಿ ಬಭ್ರುವಾಹನನು ಮತ್ತೊಂದು ಬಾಣವನ್ನು ಬಿಟ್ಟುಬಿಟ್ಟನು. ಆ ಬಾಣವು ಬಂದು ವೃಷಕೇತುವಿನ ಕಂಠ ನಾಲವನ್ನೇ ಕತ್ತರಿಸಿ ಬಿಟ್ಟಿತು. ಆ ಕತ್ತರಿಸಲ್ಪಟ್ಟ ವೃಷಕೇತುವಿನ ತಲೆ ಬಭ್ರುವಾಹನನ ಎದೆಯ ಮೇಲೆ ಬಿದ್ದು ಕಚ್ಚಿ ಅವನನ್ನು ಕೆಳಗೆ ಬೀಳಿಸಿ ಚೆಂಡಿನಂತೆ ಅರ್ಜುನನ ಪಾದದ ಬುಡಕ್ಕೆ ಬಂದುಬಿದ್ದಿತು.

ವೃಷಕೇತುವಿನ ತಲೆಯು ಕೇಶವ, ರಾಮ, ನರಸಿಂಹ ಎಂದು ಜಪಿಸುತ್ತಾ ಬಿದ್ದಿತು. ಅರ್ಜುನನು ಎರಡು ಕೈಗಳಿಂದ ತಲೆಯನ್ನು ಎತ್ತಿಕೊಂಡನು. ವೃಷಕೇತುವಿನ ಮುಂಡವು ಓಡುತ್ತಾ ಅನೇಕ ಶತ್ರುಗಳನ್ನು ಸಂಹರಿಸಿತು.

ಅರ್ಜುನನು ನೋಡಿ ತುಂಬಾ ದುಃಖಪಟ್ಟನು. 'ಹಾ ಮಗ ! ನಾನು

ಧರ್ಮರಾಜನ ಹತ್ತಿರ ಹೋಗಿ ಏನು ಹೇಳಲಿ? ನೀನಿಲ್ಲದೆ ಹೋಗಿ ಕುಂತೀದೇವಿಯ ಹತ್ತಿರ ದ್ರೌಪದಿಯ ಹತ್ತಿರ ನಾನು ಏನೆಂದು ಹೇಳಲಿ? ತಾಯಿ ಕುಂತೀದೇವಿಯು ಮಗುವನ್ನು ನೋಡಿಕೊ ಎಂದು ಹೇಳಿದ್ದಳಲ್ಲ. ಭೀಮಸೇನರ ಹತ್ತಿರ ಏನು ಹೇಳಲಿ? ಕೃಷ್ಣಪರಮಾತ್ಮನೂ ಕೈಬಿಟ್ಟನೇ? ನಿನ್ನ ತಂದೆಯನ್ನು ನಾನು ಕೊಂದೆನೆಂದು ನನ್ನನ್ನು ಈರೀತಿಯಾಗಿ ದುಃಖದಲ್ಲಿ ಮುಳುಗಿಸಿ ಹೋದೆಯಾ? ಇತ್ಯಾದಿ ಬಹುವಿಧವಾಗಿ ವಿಲಾಪಮಾಡುತ್ತಾ ವೃಷಕೇತುವಿನ ತಲೆಯನ್ನು ಎದೆಯಲ್ಲಿ ಇಟ್ಟುಕೊಂಡು ಮೂರ್ಛಿತನಾಗಿ ನೆಲದಲ್ಲಿ ಬಿದ್ದನು. ತರುವಾಯ ಬಭ್ರುವಾಹನನು ಧನುಸ್ಸಿನ ಅಗ್ರಭಾಗದಿಂದ ಬಡಿದು ನಗುತ್ತಾ ಅರ್ಜುನ! ವೈಶ್ಯಪುತ್ರರು ನಿನ್ನ ಸಮಾನತ್ವವನ್ನು ಹೊಂದಿದರು? ನಾನೀಗ ಯುದ್ಧ ಸಮುದ್ರದಲ್ಲಿ ಕೀರ್ತಿಯೆಂಬ ದೋಣಿಯನ್ನು ಏರಿದ್ದೇನೆ. ಎಲ್ಲ ಹಣಕ್ಕೂ ಎಲ್ಲರ ಶಿರಸ್ಸಿಗೂ ಸಮಾನವಾದದ್ದು ವೃಷಕೇತುವಿನ ಶಿರಸ್ಸು ಅದನ್ನು ರುದ್ರದೇವರಿಗೆ ಸಮರ್ಪಿಸು. ಅವರು ನಿನಗೆ ಪಾಶುಪತಾಸ್ತ್ರವನ್ನು ಕೊಡಲಿ ಇತ್ಯಾದಿ ರೀತಿಯಾಗಿ ಹೇಳಿದನು.

ತರುವಾಯ ಅರ್ಜುನನು ಕೋಪದಿಂದ ಎದ್ದವನಾಗಿ ಸಂಹಾರಮೂರ್ತಿಯಾದ ನನ್ನ ಮುಂದೆ ಎಲ್ಲಿಗೆ ಹೋಗುವಿ? ನನ್ನ ವೀರರೆಲ್ಲಾ ನಿನ್ನಿಂದ ಬಿದ್ದಿದ್ದಾರೆ. ನಿನ್ನನ್ನು ಕೊಂದು ಅವರನ್ನೆಲ್ಲಾ ಎಬ್ಬಿಸುತ್ತೇನೆ. ನನ್ನ ಪ್ರಹಾರವನ್ನು ಸಹಿಸು. ಹೀಗೆಂದು ಹೇಳುತ್ತಾ ಬಾಣಗಳ ಸಮೂಹವನ್ನು ಬಿಟ್ಟನು. ಬಭ್ರುವಾಹನನಿಗೂ ಅರ್ಜುನನಿಗೂ ಅತಿಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ಅರ್ಜುನನಿಗೆ ಗಂಗಾದೇವಿಯ ಶಾಪದಿಂದ ಎಲ್ಲಾ ಮರೆತುಹೋಯಿತು. ಅರ್ಜುನನು ಸಂಧಾನಮಾಡಿದ ಅಸ್ತ್ರವನ್ನೆಲ್ಲಾ ಬಭ್ರುವಾಹನನು ಕತ್ತರಿಸಿದನು. ತರುವಾಯ ಬಭ್ರುವಾಹನನು ಜ್ವಾಲೆಯಿಂದ ಕೂಡಿದ ಯಮನಂತಿರುವ ವಡವಾಗ್ನಿಯಂತೆ ಇರುವ ಅರ್ಧಚಂದ್ರಾಕಾರವುಳ್ಳ ಬಾಣವನ್ನು ಧನುಸ್ಸಿನಲ್ಲಿ ಜೋಡಿಸಿದನು. ಆಗ ಇಂದ್ರಾದಿದೇವತೆಗಳೂ ಪಿತೃಗಳೂ ಗ್ರಹಗಳೂ ಎಲ್ಲರೂ ನಡುಗಿದರು. ಅನೇಕ ಅಪಶಕುನಗಳಾದವು. ಅರ್ಜುನನು ಬಾಣವನ್ನು ನೋಡಿ ತನ್ನ ಭಯಂಕರವಾದ ಬಾಣಗಳಿಂದಲೂ ತಡೆಯಲಿಕ್ಕೆ ಸಮರ್ಥನಾಗಲಿಲ್ಲ. ಶ್ರೀಭಗವಂತನನ್ನು ಸ್ಮರಿಸಿದನು. ಅಷ್ಟರಲ್ಲೇ ಬಭ್ರುವಾಹನನ ಬಾಣವು ಬಂದು ಅರ್ಜುನನ ಶಿರಸ್ಸನ್ನು ಕತ್ತರಿಸಿತು. ಕಾರ್ತಿಕಮಾಸದ ಏಕಾದಶಿ ದಿವಸದಲ್ಲಿ ಅರ್ಜುನನ ತಲೆಯು ಕೆಳಗೆ ಬಿದ್ದಿತು. ವೃಷಕೇತು ಮತ್ತು ಅರ್ಜುನನ ತಲೆಗಳು ಕೆಳಗೆ ಬಿದ್ದದ್ದನ್ನು ನೋಡಿ ಜನರು ಎರಡು ಸೂರ್ಯರು ಕೆಳಗೆ ಬಿದ್ದಂತೆ ತಿಳಿದುಕೊಂಡರು.

ಆ ಕಾಲದಲ್ಲಿ ಮಹತ್ತಾದ ಹಾಹಾಕಾರವುಂಟಾಯಿತು. ಬಭ್ರುವಾಹನನ ಸೈನ್ಯದಲ್ಲಿ ಬಹಳ ಸಂತೋಷವಾಯಿತು. ವಾದ್ಯಘೋಷವನ್ನು ಮಾಡಿದರು. ಕನ್ಯೆಯರು ಪುಷ್ಪದ ಮಳೆಯನ್ನು ಸುರಿಸಿದರು. ಎಲ್ಲರೂ ಬಭ್ರುವಾಹನನ ಪೌರುಷವನ್ನು ಸ್ತುತಿಸಿದರು. ಬಭ್ರುವಾಹನನು ಸಂತೋಷವುಳ್ಳವನಾಗಿ ತಂದೆಯೆಂಬ ಸ್ನೇಹವನ್ನು ಮರೆತು ಬಿಡುವವನಾಗಿ ಮನೋಹರವಾದ ತನ್ನ ಪಟ್ಟಣವನ್ನು ಪ್ರವೇಶಿಸಿದನು. ಊರನ್ನೆಲ್ಲಾ ಅಲಂಕರಿಸಿದ್ದರು.

ಈ ಸಂದರ್ಭದಲ್ಲಿ ಹಸ್ತಿನಾವತಿಯಲ್ಲಿ ಇದ್ದ ಚಿತ್ರಾಂಗದೆಯು ಅರ್ಜುನನಿಗೆ ಗಂಗಾದೇವಿಯಿಂದ ಬಂದ ಶಾಪವನ್ನೂ, ಅರ್ಜುನನ ಅನಾದರದಿಂದಲೇ ಯುದ್ಧದ ಆರಂಭವಾದದ್ದನ್ನೂ ಕೇಳಿ ಧರ್ಮರಾಜನಿಗೆ ತಿಳಿಸದೆಯೇ ರಥಾರೂಢಳಾಗಿ ಸ್ವಲ್ಪ ಪರಿಹಾರವುಳ್ಳವಳಾಗಿ ಮಣಿಪುರಕ್ಕೆ ಬಂದಿದ್ದಳು.

ಮಗನು ಜಯಶೀಲನಾಗಿ ಬರುತ್ತಿರುವನೆಂದು ತಿಳಿದು ಚಿತ್ರಾಂಗದೆಯು ಉಲೂಪಿಯೊಡನೆ ಆರತಿಯನ್ನು ಹಿಡಿದುಕೊಂಡು ಬಂದಳು. ಆಗ ಜನರೆಲ್ಲರೂ ಚಿತ್ರಾಂಗದೆಯೊಡನೆ 'ದೇವಿ! ನೀನು ಪರಮಧನ್ಯಳಾಗಿದ್ದಿ. ಯಾವಾಗಲೂ ಭೂಮಿಯಲ್ಲಿ ಜಯಶೀಲನಾಗಿಯೇ ಇರುವ ಅರ್ಜುನನನ್ನು ಸಂಹರಿಸಿ ಬಂದ ಮಗನನ್ನು ಹಡೆದಿರುವಿ' ಎಂದು ಹೇಳಲು ಆರತಿ ಹಿಡಿದುಕೊಂಡಿರುವ ಚಿತ್ರಾಂಗದೆಯು ಅಲ್ಲಿಯೇ ಬಿದ್ದುಬಿಟ್ಟಳು.

ಸಂತೋಷಯುಕ್ತವಾದ ಬಭ್ರುವಾಹನನ ಮಂದಿರದಲ್ಲಿ ವಿಷಾದವುಂಟಾಯಿತು. ಎಲ್ಲಾ ಹೆಂಗಸರೂ ಅಳುತ್ತಾ ಬಂದು ನೀರು ಹಾಕಿದರು. ಗಾಳಿ ಬೀಸಿದರು. ಕೆಲವರು ಬಭ್ರುವಾಹನನ ಬಳಿಗೆ ಹೋಗಿ, ಮಹಾರಾಜ! ಏನೆಂದು ತಿಳಿಯಲಿಲ್ಲ. ನಿಮ್ಮ ತಾಯಿಯೂ ಉಲೂಪಿಯೂ ಬಿದ್ದುಕೊಂಡಿದ್ದಾರೆ. ಎಬ್ಬಿಸಿರಿ ಎಂದು ಹೇಳಿದರು. ಬಭ್ರುವಾಹನನು ರಥದಿಂದ ಕೆಳಗೆ ಇಳಿದು ಬಂದು ನೋಡಿದನು. ತಾಯಿಯ ಕುತ್ತಿಗೆಯಲ್ಲಿ ಮಂಗಳಸೂತ್ರವಿರಲಿಲ್ಲ. ಕಿವಿಯಲ್ಲಿ ತೋಡೂ (ಬೆಂಡೋಲೆಯೂ) ಇರಲಿಲ್ಲ. ಉಲೂಪಿಯೂ ಹಾಗೆಯೇ ಇದ್ದಳು. ಇಬ್ಬರೂ ದೀರ್ಘಶ್ವಾಸವನ್ನು ಬಿಡುತ್ತಾ ಇದ್ದರು. ಬಭ್ರುವಾಹನನು ಅವರಿಬ್ಬರನ್ನೂ ಎಬ್ಬಿಸಿ, ಅಮ್ಮ! ಆನಂದಪಡುವ ಕಾಲದಲ್ಲಿ ನೀವೇಕೆ ದುಃಖಪಡುವಿರಿ? ಕೇಳಿರಿ. ನಾನು ಕುದುರೆಗೋಸ್ಕರ ಯುದ್ಧವನ್ನು ಮಾಡಿದೆನು. ಅರ್ಜುನ ಎಂಬುವನು ಮಹಾಪರಾಕ್ರಮಶಾಲಿಗಳಾದ ಪ್ರದ್ಯುಮ್ನ ಮೊದಲಾದವರಿಂದ ಕೂಡಿಕೊಂಡು ಕುದುರೆಯ ರಕ್ಷಣೆಗೆ ಬಂದಿದ್ದನು. ಅವರೆಲ್ಲರನ್ನೂ ನಾನು ಜಯಿಸಿದೆನು. ಆ

ಅರ್ಜುನನನ್ನೂ ವೃಷಕೇತು ಎಂದು ಪ್ರಸಿದ್ಧನಾದ ಕರ್ಣನ ಮಗನನ್ನೂ ಸಂಹರಿಸಿದೆನು. ತಾಯಿ! ಕಂಠ ಸೂತ್ರವನ್ನೂ ತೋಡನ್ನೂ ಸ್ವೀಕರಿಸು. ಅಮಂಗಳೆಯಾಗಿ ಕಾಣಿಸುವಿಯಲ್ಲಾ' ಎಂದು ಹೇಳಿದನು.

ಅದಕ್ಕೆ ಚಿತ್ರಾಂಗದೆಯು 'ಪಾಪ ರೂಪಿಯಾದ ಮಗನಾದ ನೀನು ಏನು ಮಾಡಿದೆ?ತಂದೆಯನ್ನು ಕೊಂದು ಹಾಕಿದವನಾಗಿ ನನ್ನ ಮಂಗಳವನ್ನು ನಾಶಮಾಡಿದಿ. ಕಂಠಸೂತ್ರಕ್ಕೆ ಭಂಗವನ್ನು ಉಂಟುಮಾಡಿದಿ. ನಿನ್ನ ಬಲಕ್ಕೆ ನಿನ್ನ ತೇಜಸ್ಸಿಗೆ ಧಿಕ್ಕಾರವಿರಲಿ. ಈಗ ಧರ್ಮರಾಜರು ಯಾವ ಅವಸ್ಥೆಯನ್ನು ಹೊಂದುವರು? ತಂದೆಯ ಮೇಲೆ ನಿನಗೆ ಸ್ವಲ್ಪವೂ ದಯಾವುಂಟಾಗುವುದು ಬೇಡವೇ? ನನ್ನ ಹತ್ತಿರ ಒಂದು ಮಾತನ್ನು ಕೇಳದೆ ಯಾಕೆ ಯುದ್ಧ ಮಾಡಿದಿ? ನೀನು ಶಸ್ತ್ರವನ್ನು ಅಭ್ಯಾಸ ಮಾಡಿದ್ದು ತಂದೆಯನ್ನು ಕೊಲ್ಲಲಿಕ್ಕೆ ಆಯಿತು. ತಂದೆಯನ್ನು ಕೊಂದವನ ನಿನ್ನ ಎದೆ ಏಕೆ ಸೀಳಿ ಹೋಗಬಾರದು? ದುರ್ಬುದ್ಧಿಯುಳ್ಳವನೇ! ಕಿವಿಗೆ ಕೋಡು ಹಾಕಿಕೊ ಎಂದು ಯಾವ ಬಾಯಿಯಿಂದ ಹೇಳುವಿ? ನನ್ನ ಕುತ್ತಿಗೆಗೆ ಕಾಸಿದ ಕಬ್ಬಿಣವನ್ನು ಹಾಕು. ಅಯೋಗ್ಯ! ನನ್ನ ಪತಿಯನ್ನು ಎಲ್ಲಿ, ಕೊಂದು ಹಾಕಿದಿ? ತೋರಿಸು. ನಾನೂ ಪತಿಲೋಕವನ್ನು ಹೊಂದುವೆನು ಎಂದು ಹೇಳಿದಳು.

ತರುವಾಯ ಚಿತ್ರಾಂಗದೆಯಿಂದ ಕೂಡಿಕೊಂಡು ಉಲೂಪಿಯು ಹಾಹಾ ಎಂದು ಅಳುತ್ತಾ ಅರ್ಜುನನ ಶಿರಸ್ಸಿನ ಹತ್ತಿರ ಹೋಗಿ ಬಿದ್ದಳು. ತಲೆಬಿಚ್ಚಿಕೊಂಡು ಚಿತ್ರಾಂಗದೆಯು ಬಿದ್ದಿರುವ ಅರ್ಜುನನನ್ನು ನೋಡಿದಳು. ಅರ್ಜುನನ ದೇಹದ ಕಾಲಿನ ಮೇಲೆ ಬಿದ್ದು ವಿಲಾಪವನ್ನು ಮಾಡಿದಳು. ಮಗನನ್ನು ನೋಡಿ 'ಬಭ್ರುವಾಹನ! ನಿನಗೆ ಮಂಗಳವಾಗಲಿ. ನಿನ್ನ ಮನಸ್ಸಿನಲ್ಲಿ ಇದ್ದಂತೆಯೇ ಮಾಡು. ಖಡ್ಗದಿಂದ ನನ್ನ ತಲೆಯನ್ನೂ ಕಡಿದುಬಿಡು. ಪರಶುರಾಮದೇವರಿಗಿಂತಲೂ ಶ್ರೇಷ್ಠನಾಗು. ಪರಶುರಾಮದೇವರು ತಾಯಿಯನ್ನು ಮಾತ್ರ ಕೊಂದರು. ನೀನು ತಂದೆಯನ್ನೂ ತಾಯಿಯನ್ನೂ ಕೊಂದುಹಾಕು. ಕಟ್ಟಿಗೆಯ ರಾಶಿಯನ್ನು ತಂದುಹಾಕಿ ಬೆಂಕಿಹಚ್ಚು, ನನ್ನನ್ನೂ ಉಲೂಪಿಯನ್ನೂ ಸುಟ್ಟುಹಾಕು. ಮಗ! ನಾನು ಬಹು ಆಸೆಯಿಂದ ಇದ್ದೆನು. 'ನಾನು ಹಸ್ತಿನಾವತಿಗೆ ಹೋಗುವೆನು. ಅಲ್ಲಿ ಯಜ್ಞಾರಂಭವಾಗುವಾಗ ಅರ್ಜುನನೊಡನೆ ಇರುವೆನು. ಕೃಷ್ಣಪರಮಾತ್ಮ ರುಕ್ಮಿಣೀದೇವಿಯರು ಸತ್ಯಭಾಮಾದೇವಿಯರು ದ್ರೌಪದೀದೇವಿಯರು ಉತ್ತರಾ ಉಷಾ ಎಲ್ಲರನ್ನೂ ನೋಡುವೆನು. ಬೇಕಾದಷ್ಟು ಹಣವನ್ನು ಓದಿಸಬೇಕು. ಹೀಗೆಲ್ಲಾ ಆಸೆಪಡುತ್ತಿದ್ದೆನು. ನನ್ನ ಆಸೆಯನ್ನೆಲ್ಲಾ ನಾಶಮಾಡಿದಿಯಲ್ಲಾ ಎಂದು ಹೇಳಿದಳು.

ಆಗ ಬಭ್ರುವಾಹನನು 'ಅಮ್ಮ! ನನಗೆ ಅವರು ತಂದೆಯೆಂದು ತಿಳಿಯಿತು. ನಾನು ಕುದುರೆಯನ್ನು ಹಿಡಿದುಕೊಂಡು ಅರ್ಜುನನಿಗೆ ನಮಸ್ಕಾರ ಮಾಡಲಿಕ್ಕೆ ಹೋದೆನು. ಆಗ ನನಗೆ ಅತ್ಯಂತ ದುಷ್ಟವಾದ ಮಾತನ್ನು ಆಡಿದರು. ಆದರಿಂದ ನಾನು ಹೀಗೆ ಮಾಡಿದೆನು. ತಂದೆಯನ್ನು ಕೊಂದ ನನಗೆ ಪ್ರಾಯಶ್ಚಿತ್ತವೇ ಇಲ್ಲ. ಯಾವ ದಾನವ್ರತ ಹೋಮಗಳೂ ನನ್ನನ್ನು ಪವಿತ್ರವನ್ನಾಗಿ ಮಾಡಲಾರವು. ನಾನು ಹುಟ್ಟಿದ ಕೂಡಲೇ ನನ್ನನ್ನು ಕೊಂದು ಹಾಕಬೇಕಿತ್ತು. ನಾನು ತಾಯಿಯ ವೈಧವ್ಯಕ್ಕೆ ಕಾರಣನಾದೆನು. ಆದುದರಿಂದ ಅಗ್ನಿಯಲ್ಲಿ ಪ್ರವೇಶಿಸುವೆನು ಎಂದು ಹೇಳಿ ದೂತರ ಹತ್ತಿರ ಕಾಷ್ಠವನ್ನು ಸಂಗ್ರಹಮಾಡಿರಿ. ಅಗ್ನಿಪ್ರವೇಶ ಮಾಡುವೆನು ಎಂದು ಹೇಳಿದನು. ಆ ಚಿತ್ರಾಂಗದೆಯು ಪಿತೃಹತ್ಯಾ ಮಾಡಿದವನೇ ಸ್ವಲ್ಪ ಇರು. ಅರ್ಜುನರು ಬದುಕುವಂತೆ ಏನಾದರೂ ಉಪಾಯವಿದೆಯೋ ನೋಡು ಎಂದಳು. ಆಗ ಉಲೂಪಿಯು ಅರ್ಜುನರನ್ನು ಬದುಕಿಸಲಿಕ್ಕೆ ಉಪಾಯವಿದೆ. ಪಾತಾಳದಲ್ಲಿ ಮೃತಸಂಜೀವನ ಮಣಿಯಿರುವುದು. ಶೇಷದೇವರ ಕೋಶದಲ್ಲಿ ಇದೆ. ಮಹಾವಿಷವುಳ್ಳ ಸರ್ಪಗಳು ರಕ್ಷಿಸುತ್ತಾ ಇವೆ. ಆದರಿಂದ ಸತ್ತ ಸರ್ಪಗಳನ್ನೆಲ್ಲಾ ಬದುಕಿಸುತ್ತಾರೆ. ಪೂರ್ವದಲ್ಲಿ ರುದ್ರದೇವರು ಗರುಡದೇವರಿಂದ ಭಯವನ್ನು ಹೊಂದಿದ ಸರ್ಪಗಳಿಗೋಸ್ಕರ ಸಂಜೀವನ ಮಣಿಯನ್ನು ಕೊಟ್ಟರು. ಆದರೆ ಆ ಸರ್ಪಗಳು ಅರ್ಜುನರಿಗೋಸ್ಕರ ಮಣಿಯನ್ನು ಕೊಡಲಾರವಲ್ಲಾ ಎಂದು ಹೇಳಿದಳು.

ಆಗ ಬಬ್ರುವಾಹನನು ನಾನು ಕೋಪಿಸಿಕೊಂಡರೆ ಯಾವ ಅಲ್ಪ ಸರ್ಪಗಳು ಮಣಿಯನ್ನು ಕೊಡದೆ ಇರುವುವು. ಎಲ್ಲಾ ಸರ್ಪಗಳನ್ನೂ ಕೊಂದು ಮಣಿಯನ್ನು ತರುವೆನು. ವೃಷಕೇತು ಮೊದಲಾದ ಎಲ್ಲರನ್ನೂ ಬದುಕಿಸುವೆನು. ನನ್ನ ವೀರ್ಯವನ್ನು ಎಲ್ಲರೂ ನೋಡಲಿ ಎಂದನು.

ಉಲೂಪಿಯು ಮೂರ್ಖ! ಏನು ಪೌರುಷವನ್ನು ಹೇಳಿಕೊಳ್ಳುವಿ? ಮಹಾವಿಷವುಳ್ಳ ಸರ್ಪಗಳನ್ನು ಹೇಗೆ ಅವಮಾನ ಮಾಡುವಿ? ಎಂದಳು. ಆಗ ಊಲೂಪಿಯು 'ಮಗ! ಸಾಹಸವನ್ನು ಮಾಡಬೇಡ. ನನಗೆ ಮಿತ್ರನಾದವನು ಪುಂಡರೀಕ ಎಂಬವನಿದ್ದಾನೆ. ಅವನನ್ನು ನನ್ನ ತಂದೆಯ ಹತ್ತಿರ ಕಳುಹಿಸುತ್ತೇನೆ. ಬುದ್ಧಿಸಾಮರ್ಥ್ಯದಿಂದ ಆಗುವ ಕಾರ್ಯಕ್ಕೆ ಯಾಕೆ ಶ್ರಮಪಡಬೇಕು' ಎಂದು ಹೇಳಿ ಪುಂಡರೀಕನನ್ನು ತನ್ನ ಕಂಠಸೂತ್ರವನ್ನು ಕೈಯಲ್ಲಿ ಕೊಟ್ಟು ಕಳುಹಿಸಿದಳು. ಪುಂಡರೀಕನು ವಿತಲಕ್ಕೆ ಹೋಗಿ ಶೇಷದೇವರನ್ನು ಉಲೂಪಿಯ ಕಂಠಸೂತ್ರವನ್ನು

ತೋರಿಸಿ ಮೊಮ್ಮಗ ಬಭ್ರುವಾಹನನು ತಂದೆಯನ್ನು ಯುದ್ಧದಲ್ಲಿ ಕೊಂದನು. ಅದಕ್ಕಾಗಿ ಅವನನ್ನು ಬದುಕಿಸುವುದಕ್ಕಾಗಿ ಸಂಜೀವನ ಮಣಿಯನ್ನು ಕೊಡುವೆನು ಎಂದರು. ಆಗ ಧೃತರಾಷ್ಟ್ರ ಎಂಬ ಸರ್ಪವು ಅನೇಕ ಕಾರಣಗಳನ್ನು ಹೇಳಿ ಮಣಿಯನ್ನು ಕೊಡಲಾಗದು. ಅದನ್ನು ಕೊಟ್ಟರೆ ಹೀಗೆಯೇ ಎಲ್ಲರೂ ಕೇಳುವರು. ಕೃಷ್ಣಪರಮಾತ್ಮನು ಇರುವಾಗ ಮಣಿ ಏನು ಬೇಕಾಗಿದೆ ಎಂದು ಹೇಳಿದರು. ಪುಂಡರೀಕನು ಉಲೂಪಿಯಿದ್ದಲ್ಲಿಗೆ ಬಂದು ಅಮ್ಮ! ಮಗನ ಹತ್ತಿರ ಬೆಂಕಿಯನ್ನು ಮಾಡಲಿಕ್ಕೆ ಹೇಳಿ ಹಾರು. ಬೇರೆ ಉಪಾಯವಿಲ್ಲ. ಶೇಷದೇವರು ಮಣಿಯನ್ನು ಕೊಡಲಿಲ್ಲ ಎಂದನು.

ಆಗ ಬಭ್ರುವಾಹನನು ಕೋಪಿಸಿಕೊಂಡು ವರಬಲದಿಂದ ಶೇಷಲೋಕಕ್ಕೆ ಸೈನ್ಯಸಹಿತವಾಗಿ ಯುದ್ಧಕ್ಕೆ ಹೋದನು. ಅಲ್ಲಿ ಧೃತರಾಷ್ಟ್ರ ಎಂಬ ಸರ್ಪನು ಇತರ ಸರ್ಪಗಳೊಡನೆ ಯುದ್ಧಕ್ಕೆ ಬಂದನು. ಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ಬಭ್ರುವಾಹನನು ಪಿಪೀಲಿಕಾಸ್ತ್ರವನ್ನು ಬಿಡಲು ಹಾವುಗಳ ದೇಹದಲ್ಲಿ ಇರುವೆಗಳು ಮುತ್ತಿ ಮಾಂಸವನ್ನು ತಿನ್ನಲಿಕ್ಕೆ ಆರಂಭಿಸಿದವು. ಎಲ್ಲ ಸರ್ಪಗಳೂ ಓಡಿಹೋದವು. ಶೇಷದೇವರು ಮಣಿಯನ್ನು ಅನೇಕ ರತ್ನಗಳನ್ನೂ ಹಿಡಿದುಕೊಂಡು ಬಭ್ರುವಾಹನನಿದ್ದಲ್ಲಿಗೆ ಬಂದರು. ತರುವಾಯ ಶೇಷದೇವರಿಂದ ಸಹಿತನಾಗಿ ಬಭ್ರುವಾಹನನು ಅರ್ಜುನನು ಬಿದ್ದಲ್ಲಿಗೆ ಬಂದನು.

ಆ ಸಮಯದಲ್ಲಿ ಸೋತುಹೋದ ಧೃತರಾಷ್ಟ್ರನು ತನ್ನ ಪ್ರಯತ್ನವು ವ್ಯರ್ಥವಾಯಿತಲ್ಲಾ! ಅರ್ಜುನನು ಬದುಕುವನಲ್ಲಾ ಎಂದು ದುಃಖವನ್ನು ಹೊಂದಲು ಅವನ ಮಗನಾದ ದುರ್ಬುದ್ಧಿಯು ನಾನು ಅರ್ಜುನನ ತಲೆಯನ್ನು ಹಿಡಿದುಕೊಂಡು ಹೋಗುತ್ತೇನೆ. ಆಮೇಲೆ ಸಂಜೀವನ ಮಣಿಯಿಂದ ಹೇಗೆ ಬದುಕಿಸುತ್ತಾರೆ? ನೋಡುತ್ತೇನೆ ಎಂದು ಹೇಳಿ ಆ ದುರ್ಬುದ್ಧಿಯೂ ಅವನ ತಮ್ಮನೂ ಅರ್ಜುನನ (ಮತ್ತು ವೃಷಕೇತುವಿನ ತಲೆಯನ್ನು) ಹಿಡಿದುಕೊಂಡು ದೂರಹೋಗಿ ಬಕದಾಲ್ಭ್ಯರ ವನದಲ್ಲಿ ಹಾಕಿದವು. ತಲೆಯು ಕಾಣದೆ ಹೋಗಲು ಚಿತ್ರಾಂಗದೆಯೂ ಉಲೂಪಿಯೂ ದುಃಖದಿಂದ ಬಿದ್ದರು. ಅಷ್ಟರಲ್ಲಿ ಬಭ್ರುವಾಹನನೂ ಶೇಷದೇವ ರಿಂದ ಸಹಿತನಾಗಿ ಮಣಿಯನ್ನು ಹಿಡಿದುಕೊಂಡು ಬಂದನು. ಅರ್ಜುನನ ತಲೆಯನ್ನು ಕಾಣದೆ ಬಭ್ರುವಾಹನನೂ ಕೆಳಗೆ ಬಿದ್ದನು.

ಅರ್ಜುನನು ಯಾವ ದಿವಸದಲ್ಲಿ ಮೃತನಾಗಿ ಬಿದ್ದನೋ ಅದೇ ದಿನ ಮಧ್ಯ ರಾತ್ರಿಯಲ್ಲಿ ಕುಂತೀದೇವಿಯು ಒಂದು ದುಃಸ್ವಪ್ನವನ್ನು ನೋಡಿ ಧರ್ಮರಾಜ

ನೊಡನೆಯೂ ಕೃಷ್ಣಪರಮಾತ್ಮನೊಡನೆಯೂ ಹೇಳಿದಳು. 'ಅರ್ಜುನನು ಎಣ್ಣೆಯ ಭಾವಿಯಲ್ಲಿ ಮುಳುಗಿದಂತೆಯೂ, ಕತ್ತೆಯ ಮೇಲೆ ಕೂತುಕೊಂಡು ದಕ್ಷಿಣದಿಕ್ಕಿಗೆ ಹೋದಂತೆಯೂ, ಗೋಮಯವನ್ನು ಹಚ್ಚಿಕೊಂಡು ಕೆಂಪೂಹೂಗಳ ಮಾಲೆಯನ್ನು ಹಾಕಿಕೊಂಡಂತೆಯೂ, ಸ್ವಪ್ನವನ್ನು ನೋಡಿದೆನು. ಕೃಷ್ಣ! ನಿಶ್ಚಯವಾಗಿಯೂ ನಿನ್ನ ಮಿತ್ರನಾದ ಅರ್ಜುನನು ಇಲ್ಲ. ನನ್ನ ಎದೆಯೂ ಸೀಳುವಂತೆ ಆಗುತ್ತಿದೆ. ಸುಭದ್ರೆಯ ಕೈಬಳೆಗಳು ಕೆಳಗೆ ಬಿದ್ದು ಹೋದವು' ಎಂದು ಈ ಪ್ರಕಾರವಾಗಿ ಹೇಳಿದ ಮಾತನ್ನು ಕೇಳಿ ಕೃಷ್ಣಪರಮಾತ್ಮನು ಗರುಡದೇವರವನ್ನು ಸ್ಮರಿಸಿದನು. ಆ ಕ್ಷಣದಲ್ಲಿ ಗರುಡ ದೇವರು ಬಂದರು. ಶ್ರೀಭಗವಂತನು ಗರುಡಾರೂಢನಾದನು. ಕುಂತೀ ದೇವಕೀ ಯಶೋದಾ ಭೀಮಸೇನ ದೇವರನ್ನೂ ಕೂತುಕೊಳ್ಳಿಸಿ ಅರ್ಜುನನು ಬಿದ್ದಲ್ಲಿಗೆ ಬಂದರು. ಎಲ್ಲರೂ ದುಃಖವನ್ನು ಹೊಂದಿದರು. ಭೀಮಸೇನದೇವರೂ ವಿಲಾಪವನ್ನು ಮಾಡುವಂತೆ ನಟಿಸಿದರು. ಕುಂತೀದೇವಿಯೂ ಬಹಳ ದುಃಖವನ್ನು ಹೊಂದಿದರು. ಭೀಮಸೇನದೇವರು ಯಾರು ನನ್ನ ತಮ್ಮನನ್ನು ಕೊಂದರು ಎಂದರು. ಅಷ್ಟರಲ್ಲಿ ಬಭ್ರುವಾಹನನು ಎದ್ದು ಅತ್ಯಂತ ದುಃಖದಿಂದ ಭೀಮಸೇನದೇವರ ಹತ್ತಿರ ನಾನು ಪಾಪಿ ಮಗನು ತಂದೆಯನ್ನು ಕೊಂದಿರುವೆನು. ಅಪರಾಧಿಯಾದ ನನ್ನನ್ನು ಗದೆಯಿಂದ ಬಡೆಯಿರಿ. ಸಂಜೀವನ ಮಣಿಯನ್ನು ಹಿಡಿದುಕೊಂಡು ಶೇಷದೇವರೇ ಬಂದಿರುವರು. ಈ ಸಮಯದಲ್ಲಿ ಯಾರೋ ಅರ್ಜುನನ ತಲೆಯನ್ನು ಅಪಹರಿಸಿಕೊಂಡು ಹೋಗಿರುವರು. ಭಗವಂತನೇ! ನಿನಗೆ ನಮಸ್ಕರಿಸುವೆನು. ಚಕ್ರಾಯುಧದಿಂದ ನನ್ನ ತಲೆಯನ್ನು ಕತ್ತರಿಸು. ಎಂದು ಹೇಳಿದರು. ಎಲ್ಲರೂ ಅರ್ಜುನ ಅರ್ಜುನ ಎಂದು ಅಳಲಿಕ್ಕೆ ಆರಂಭಿಸಿದರು. ತರುವಾಯ ಶೇಷದೇವರು ಕೃಷ್ಣಪರಮಾತ್ಮನಿಗೆ ನಮಸ್ಕಾರ ಮಾಡಿ ಭಗವಂತನೇ ಏನು ನೋಡುತ್ತಿರುವಿ? ಧರ್ಮರಾಜನ ಕುಲವೇ ಮುಳುಗುವಂತೆ ಇದೆ. ಎಲ್ಲರೂ ಅಳುತ್ತಾ ಇದ್ದಾರೆ. ಅರ್ಜುನನ ತಲೆಯು ಕಾಣಿಸುವುದಿಲ್ಲವಲ್ಲಾ! ಯಾರು ತೆಗೆದುಕೊಂಡು ಹೋದರು ತಿಳಿಯಲಿಲ್ಲ. ಮುಂದಿನ ಕಾರ್ಯವನ್ನು ಭಗವಂತನೇ ಮಾಡಬೇಕು' ಎಂದು ಹೇಳಿದರು.

ಆಗ ಶ್ರೀಕೃಷ್ಣಪರಮಾತ್ಮನು 'ನಾನು ಹೇಳುವ ಮಾತನ್ನು ಎಲ್ಲರೂ ಕೇಳಬೇಕು. ನಾನು ಬ್ರಹ್ಮಚಾರಿಯಾಗಿದ್ದರೆ ಆ ಪುಣ್ಯದಿಂದ ಅರ್ಜುನನ ಶಿರಸ್ಸು ಬರಲಿ. ಯಾರು ಆ ತಲೆಯನ್ನು ಅಪಹರಿಸಿರುವರೋ ಅವರ ತಲೆಯು ಸೀಳಿಹೋಗಲಿ ಎಂದರು. ಈಪ್ರಕಾರವಾಗಿ ಪರಮಾತ್ಮನು ಹೇಳಲು ಅರ್ಜುನನ ಶಿರಸ್ಸನ್ನು ಅಪಹಾರ

ಮಾಡಿರುವ ಧೃತರಾಷ್ಟ್ರನ ಮಕ್ಕಳಾದ ಸರ್ಪಗಳು ಮೃತಗಳಾದವು. ಅರ್ಜುನನ ಶಿರಸ್ಸು ಅಲ್ಲಿಗೆ ಬಂದಿತು. ಶ್ರೀಭಗವಂತನು ಶೇಷದೇವರ ಕೈಯಿಂದ ಮಣಿಯನ್ನು ತೆಗೆದುಕೊಂಡು ಮೊದಲು ಕರ್ಣಪುತ್ರನ ಆಮೇಲೆ ಅರ್ಜುನನ ಎದೆಯಲ್ಲಿ ಮಣಿಯನ್ನು ಇಟ್ಟರು. ಇಬ್ಬರೂ ಎದ್ದರು. ದೇವತೆಗಳು ಅರ್ಜುನನ ತಲೆಯಮಲೆ ಹೂವಿನ ಮಳೆಯನ್ನು ಸುರಿಸಿದರು. ಎಲ್ಲಾ ಸೈನಿಕರೂ ಸಂತುಷ್ಟರಾದರು. ವೃಷಕೇತುವು ಭೀಮಸೇನದೇವರು ಕುಂತೀ ಇವರಿಗೆಲ್ಲಾ ನಮಸ್ಕರಿಸಿದನು. ಅರ್ಜುನನು ಕೃಷ್ಣಪರಮಾತ್ಮನಿಂದ ಆಲಿಂಗಿತನಾದನು.

ಎಲ್ಲರೂ ಬಭ್ರುವಾಹನನ ಸಭೆಯಲ್ಲಿ ಕೂತಿದ್ದರು. ಜನರೆಲ್ಲರೂ ಕೃಷ್ಣಪರಮಾತ್ಮನಿಂದ ಸಹಿತನಾದ ಅರ್ಜುನನನ್ನು ಸಭೆಯಲ್ಲಿ ಕೂತುಕೊಳ್ಳಿಸಿ 'ಅರ್ಜುನ! ಲಜ್ಜೆಯನ್ನು ಹೊಂದಬಾರದು. ಮಗನಿಂದ ಸೈನ್ಯಸಹಿತನಾಗಿ ಮೃತನಾದೆ ನೆಂದು ನಾಚಿಕೆಯನ್ನು ಹೊಂದಬೇಡ. ಎಲ್ಲರಿಂದಲೂ ಜಯವನ್ನು ಇಚ್ಛಿಸಬೇಕು. ಮಗನಿಂದ ಪರಾಜಯವನ್ನೇ ಇಚ್ಛಿಸಬೇಕು. ಮಾತ್ರವಲ್ಲದೆ ಗಂಗಾಶಾಪದಿಂದ ನಿನಗೆ ಹೀಗೆ ಆಯಿತು. ಕೃಷ್ಣಪರಮಾನುಗ್ರಹದಿಂದ ಬದುಕಿದಿ. ಭೀಮಸೇನದೇವರಿಂದ ಕೂಡಿಕೊಂಡು ಮಗನ ವೈಭವವನ್ನು ನೋಡು. ಚಿತ್ರಾಂಗದೆಯನ್ನೂ ಉಲೂಪಿ ಯನ್ನೂ ಸತ್ಕರಿಸು. ಲಜ್ಜಾಪಡುತ್ತಿರುವ ಮಗನಾದ ಬಭ್ರುವಾಹನನನ್ನೂ ಸಮಾಧಾನ ಪಡಿಸು. ಮಗನು ಸಮರ್ಪಿಸಿರುವ ಸಕಲರಾಜ್ಯವನ್ನು ಅಂಗೀಕರಿಸು. ಭಗವಂತನೇ! ನೀವು ಸ್ವಲ್ಪ ಅರ್ಜುನನಿಗೆ ಹೇಳಬೇಕು' ಎಂದು ಹೇಳಿದರು.

ಬಭ್ರುವಾಹನನು ತಂದೆಯನ್ನೂ ಕೃಷ್ಣಪರಮಾತ್ಮನನ್ನೂ ಸಿಂಹಾಸನದಲ್ಲಿ ಕೂತುಕೊಳ್ಳಿಸಿ 'ನಾನು ಹಿಮವತ್ಪರ್ವತಕ್ಕೆ ಹೋಗಿ ಕೆಳಗೆ ಹಾರಿ ಪ್ರಾಣಬಿಡುವೆನು. ಇಲ್ಲದಿದ್ದರೆ ನನ್ನ ಪಾಪವು ಪರಿಹೃತವಾಗಲಾರದು. ಪರಮಾತ್ಮನ ಭಕ್ತನಾದ ಧರ್ಮಕಾರ್ಯವನ್ನು ಮಾಡುವ ತಂದೆಯ ಸಂಹಾರವನ್ನು ಮಾಡಿದ ಈ ದೇಹವನ್ನು ಪರಿತ್ಯಾಗ ಮಾಡುವೆನು' ಎಂದು ಹೇಳಿದನು. ಆಗ ಭೀಮಸೇನದೇವರು ನಾವೂ ಕೂಡ ತಾತನಾದ ಭೀಷ್ಮಾಚಾರ್ಯರೂ ಗುರುಗಳಾದ ದ್ರೋಣಾಚಾರ್ಯರೂ ಅಣ್ಣನಾದ ಕರ್ಣನೂ ಇವರನ್ನು ಸಂಹಾರಮಾಡಿದರೂ ಪರಮಾತ್ಮನಿಂದ ವೀಕ್ಷಿತರಾಗಿ ಶುದ್ಧರಾದೆವು. ಅದೇ ರೀತಿಯಾಗಿ ನೀನೂ ಪರಮಾತ್ಮನ ದರ್ಶನದಿಂದ ಪವಿತ್ರನಾಗಿರುವಿ. ಧರ್ಮರಾಜರ ಕುದುರೆಯನ್ನು ರಕ್ಷಿಸು. ಶೋಕವನ್ನು ಬಿಡು' ಇತ್ಯಾದಿ ರೀತಿಯಿಂದ ಸಮಾಧಾನಪಡಿಸಿದರು.

ಈ ಪ್ರಕಾರವಾಗಿ ಕೃಷ್ಣಪರಮಾತ್ಮನ ಅನುಗ್ರಹದಿಂದ ಎಲ್ಲರೂ ಸಂತೋಷವನ್ನು

ಹೊಂದಿದರು. ತರುವಾಯ ಐದನೇ ದಿವಸದಲ್ಲಿ ಕೃಷ್ಣಪರಮಾತ್ಮನು ಕುದುರೆಯನ್ನು ಬಿಟ್ಟನು. ಕುಂತೀದೇವಿಯು ಸೊಸೆಯಂದಿರಿಂದ ಕೂಡಿಕೊಂಡು ಮೊಮ್ಮಗನ ಮನೆಯಲ್ಲಿ ಸಂತೋಷದಿಂದ ಇದ್ದಳು. ಗಾಯನ ನರ್ತನ ಎಲ್ಲಾ ನಡೆಯುತ್ತಿದ್ದವು. ಶ್ರೀಭಗವಂತನು ಮಗನಿಂದ ಸಹಿತನಾದ ಅರ್ಜುನನೊಡನೆ 'ಅರ್ಜುನ! ಸುಖವಾಗಿ ಐದು ದಿವಸಗಳು ಕಳೆದವು. ಈಗ ಭೀಮಸೇನನು ಕುಂತೀದೇವಿಯನ್ನು ಯಶೋದೆಯನ್ನೂ ಕರಕೊಂಡು ಉಲೂಪಿಯನ್ನೂ ಕರೆದುಕೊಂಡು ಧರ್ಮರಾಜನ ರಾಜ್ಯಕ್ಕೆ ಹೋಗಲಿ. ಚಿತ್ರಾಂಗದೆಯೂ ಬೇಕಾದ ಹಣವನ್ನು ಹಿಡಿದುಕೊಂಡು ಹೋಗಲಿ. ಇವರೆಲ್ಲರೂ ಹೋಗಿ ಯಜ್ಞದ ಆರಂಭವನ್ನು ಮಾಡಲಿ. ನೀನು ನಿನ್ನ ಮಗ ನಾನು ವೃಷಕೇತು ಹಂಸಧ್ವಜ ಇನ್ನು ಇತರರೂ ಕುದುರೆಯನ್ನು ರಕ್ಷಿಸಬೇಕು. ಇನ್ನು ಮುಂದೆ ಅನೇಕ ವೈಷ್ಣವರಾಜರು ಇರುವರು. ಅವರನ್ನು ಜಯಿಸುವುದು ಕಠಿಣವಾದದ್ದು. ಈರೀತಿಯಾಗಿ ಭಗವಂತನು ಹೇಳಿದನು. ಕುದುರೆಯ ರಕ್ಷಣೆಗೆ ತಾನೇ ನಿಂತನು. ಶೇಷಾದಿಗಳು ಪರಮಾತ್ಮನ ಆಜ್ಞೆಯಿಂದ ಹೊರಟುಹೋದರು. ಈರೀತಿಯಾಗಿ ಅರ್ಜುನನನ್ನು ಬದುಕಿಸಿದ ಭಗವನ್ಮಹಿಮೆಯನ್ನು ಕೇಳಿದವರಿಗೆ ಅಪಮೃತ್ಯು ಪರಿಹಾರವಾಗುವುದು.



## ಮಯೂರಧ್ವಜನು [1]

ಮಣಿಪುರದಿಂದ ಹೊರಟ ಅರ್ಜುನನ ಕುದುರೆಯು ಮುಂದೆ ಹೊರಟು ಹೋಯಿತು. ಆ ಸಮಯದಲ್ಲಿ ರತ್ನಪುರಿಯ ರಾಜನಾದ ಮಯೂರಧ್ವಜನು ಅಶ್ವಮೇಧಯಾಗವನ್ನು ಮಾಡಲು ಆರಂಭಿಸಿದ್ದನು. ಅವನೂ ಒಂದು ಕುದುರೆಯನ್ನು ಬಿಟ್ಟಿದ್ದನು. ಅದನ್ನು ರಕ್ಷಿಸುತ್ತಾ ಅವನ ಮಗನಾದ ತಾಮ್ರಧ್ವಜನು ಬಂದಿದ್ದನು. ಆ ಕುದುರೆಯು ಅರ್ಜುನನ ಕುದುರೆಯ ಬಳಿಗೆ ಬಂದಿತು. ಅದರ ಮುಖವನ್ನು ಮೂಸಿತು. ಕಿವಿಯನ್ನು ನಿಗುರಿಸಿ ಕೂಗಿತು. ಕಾಲನ್ನು ಎತ್ತಿ ಒದೆಯಿತು. ಸೊಂಟವನ್ನು ಕಚ್ಚಿತು. ಆಗ ಅರ್ಜುನನ ಕುದುರೆಯೂ ಅದನ್ನು ಒದೆಯಿತು. ಆಮೇಲೆ ಪರಸ್ಪರ ಬೆನ್ನನ್ನು ತುರುಸಿಕೊಂಡವು. ತಾಮ್ರಧ್ವಜನು ಅರ್ಜುನನ ಕುದುರೆಯನ್ನು ನೋಡಿದನು. ಇದು ಯಾರ ಕುದುರೆಯೆಂದು ಪ್ರಧಾನನಾದ

1. ಜೈ.ಭಾ.ಅಶ್ವ.ಅ-44 ರಿಂದ 46

ಬಹುಲಧ್ವಜನೊಡನೆ ಕೇಳಿದನು. ಬಹುಲಧ್ವಜನೇ! ಇದು ಯಾರ ಯಜ್ಞಕ್ಕೋಸ್ಕರ ಬಿಟ್ಟಿರುವ ಕುದುರೆಯು? ಅದರ ಹಣೆಯಲ್ಲಿರುವ ಪತ್ರವನ್ನು ಓದಿಹೇಳು ಎಂದನು. ಪ್ರಧಾನನು ಪತ್ರವನ್ನು ಓದಿ ಅಭಿಪ್ರಾಯವನ್ನು ಹೇಳಿದನು. ಅದನ್ನು ಕೇಳಿ ತಾಮ್ರಧ್ವಜನು ಕೋಪಿಸಿಕೊಂಡು ಆ ಕುದುರೆಯನ್ನು ಕಟ್ಟಿಹಾಕಿದನು. ತನ್ನ ಸೈನ್ಯವನ್ನೆಲ್ಲಾ ಸೇರಿಸಿ 'ನನ್ನ ತಂದೆಯು ಏಳು ಅಶ್ವಮೇಧಯಾಗವನ್ನು ಮಾಡಿದರು. ಎಂಟನೇ ಯಜ್ಞವನ್ನು ಮಾಡಲಿಕ್ಕೆ ಆರಂಭಿಸಿರುವರು. ಏಳು ಯಜ್ಞಗಳು ಕೃಷ್ಣಪರಮಾತ್ಮನಿಂದ ರಹಿತಗಳಾಗಿ ಆದವು. ಎಂಟನೇ ಈ ಯಾಗವು ಶ್ರೀಕೃಷ್ಣಪರಮಾತ್ಮನಿಂದ ಸಹಿತವಾಗಿ ಆಗಲಿ. ನೀವೆಲ್ಲರೂ ಯುದ್ಧಕ್ಕೆ ಸಿದ್ಧರಾಗಿರಿ ಎಂದನು.

ಆಗ ಬಹುಲಾಶ್ವನು ನಿಮ್ಮ ಮಹಾಸೈನ್ಯದಿಂದ ಅರ್ಜುನನ ಅಲ್ಪವಾದ ಸೈನ್ಯವು ಕಾಣಿಸದೆ ಹೋಗುವುದು. ಬಭ್ರುವಾಹನನಿಗೆ ನಿಮ್ಮ ರಾಜ್ಯದ ವಿಷಯ ಸರಿಯಾಗಿ ಗೊತ್ತಿದೆಯೋ ಇಲ್ಲವೋ! ಅವನು ನಿಮ್ಮ ತಂದೆಗೆ ಮುತ್ತುಗಳ ಸಮೂಹವನ್ನು ಕಪ್ಪವನ್ನು ಕೊಡುವನು. ಈ ಅರ್ಜುನನ ಸೈನಿಕರು ಏನು ಯುದ್ಧವನ್ನು ಮಾಡಲಿಕ್ಕೆ ಹೋಗುವರು? ಎಂದನು.

ತಾಮ್ರಧ್ವಜನು ಇತರ ವೀರರು ಯಾರಿರುವರು? ಬಭ್ರುವಾಹನ ಕರ್ಣಪುತ್ರನಾದ ವೃಷಕೇತು ಇವರಿಬ್ಬರು ಪರಾಕ್ರಮಶಾಲಿಗಳು. ರಾತ್ರಿಯಲ್ಲಿ ನಾರದರ ಮುಖದಿಂದ ಇವರ ಪೌರುಷವನ್ನು ಕೇಳಿರುವೆನು. ನರನಾರಾಯಣರು ಕೃಷ್ಣಾರ್ಜುನರಾಗಿದ್ದಾರೆ. ಪ್ರದ್ಯುಮ್ನ ಅನಿರುದ್ಧ ಸಾತ್ಯಕಿ ಇವರೆಲ್ಲರೂ ಮಹಾಪರಾಕ್ರಮಶಾಲಿಗಳು. ಭಗವಂತನು ಪಾಂಚಜನ್ಯಶಂಖವನ್ನು ಊದುವನು. ಅರ್ಜುನನು ದೇವದತ್ತ ಎಂಬ ಶಂಖವನ್ನು ಊದುವನು. ಕುದುರೆಯನ್ನು ಬಿಡಿಸಿಕೊಳ್ಳುವುದಕ್ಕಾಗಿ ಎಲ್ಲರೂ ಯುದ್ಧಕ್ಕೆ ಬರುವರು ಎಂದನು.

ಶ್ರೀಭಗವಂತನು ಸೈನ್ಯಸಹಿತನಾಗಿ ಬಂದು ಅರ್ಜುನನ ಕೈಹಿಡಿದುಕೊಂಡು 'ಅರ್ಜುನ! ಮಯೂರಧ್ವಜನ ಮಗನಾದ ತಾಮ್ರಧ್ವಜನನ್ನು ನೋಡು. ಇವನು ನಿನ್ನ ಕುದುರೆಯನ್ನು ಕಟ್ಟಿಹಾಕಿರುವನು. ಇಲ್ಲಿ ಮಹಾಯುದ್ಧವು ನಡೆಯುವುದು. ಕುದುರೆಯನ್ನು ಬಿಡಿಸು. ಪ್ರದ್ಯುಮ್ನನೇ ಮೊದಲಾದ ಎಲ್ಲರೂ ಬಭ್ರುವಾಹನನೂ ಯುದ್ಧವನ್ನು ಮಾಡಲಿ. ನೀನು, ನಾನು ಹೋಗುವಲ್ಲಿ ಬಾ. ಇವನ ತಂದೆಯು ನರ್ಮದಾತೀರದಲ್ಲಿ ದೀಕ್ಷಿತನಾಗಿ ಇದ್ದಾನೆ. ಅವನನ್ನು ಜಯಿಸುವುದು ಕಷ್ಟ. ನಾನೂ ರಥಾರೂಢನಾಗಿ ಯುದ್ಧವನ್ನು ಮಾಡುವೆನು. ನೀನು ಶ್ರಮಪಟ್ಟಿದ್ದಿ ಎಂದು

ಹೇಳಿದನು. ತರುವಾಯ ಪರಮಾತ್ಮನೂ ರಥಾರೂಢನಾದನು. ಹಂಸಧ್ವಜ ಬಭ್ರುವಾಹನ ಇತ್ಯಾದಿ ಎಲ್ಲರೂ ಗೃಧ್ರವ್ಯೂಹವನ್ನು ಮಾಡಿ ಯುದ್ಧಕ್ಕೆ ಸಿದ್ಧರಾದರು. ತಾಮ್ರಧ್ವಜನು ಎಲ್ಲರ ಹತ್ತಿರವೂ ಭಯಂಕರವಾದ ಯುದ್ಧವನ್ನು ಮಾಡಿದನು. ಕೊನೆಗೆ ಭಕ್ತನಾದ ತಾಮ್ರಧ್ವಜನು ಬಲಕೈಯಿಂದ ಪರಮಾತ್ಮನ ಕೈಯನ್ನು ಹಿಡಿದನು. ಎಡಕೈಯಿಂದ ಪಾದವನ್ನು ದೇವರ ಪಾದವನ್ನು ಹಣೆಯಲ್ಲಿಟ್ಟುಕೊಂಡು ಎತ್ತಿಕೊಂಡು ಅರ್ಜುನನಿದ್ದಲ್ಲಿಗೆ ಬಂದನು. ಅರ್ಜುನನು ನೂರು ಬಾಣಗಳನ್ನು ಬಿಟ್ಟನು. ತಾಮ್ರಧ್ವಜನು ಅರ್ಜುನನನ್ನು ಕಾಲಿನಿಂದ ಒದೆದನು. ಕೃಷ್ಣ ಅರ್ಜುನ ಇಬ್ಬರನ್ನೂ ಹಿಡಿದನು. ಕೃಷ್ಣಪರಮಾತ್ಮನು ತಾಮ್ರಧ್ವಜನನ್ನು ತಳ್ಳಿದನು. ಅವನು ಬಿದ್ದನು. ಬೀಳುವಾಗ ಅವರಿಬ್ಬರನ್ನೂ ಹಿಡಿದು ಸೆಳೆದನು. ಆಗ ಅರ್ಜುನನೂ ಬಿದ್ದು ಮೂರ್ಛಿತನಾದನು. ಪರಮಾತ್ಮನೂ ಭಕ್ತನ ಮಹಿಮೆಯನ್ನು ತಿಳಿಸುವುದಕ್ಕೋಸ್ಕರ ಮೂರ್ಛೆ ಬಂದಂತೆ ತೋರಿಸಿದನು. ತಾಮ್ರಧ್ವಜನು ಎದ್ದು ನೋಡುವಾಗ ಎರಡು ಕುದುರೆಗಳೂ ನಗರಕ್ಕೆ ಹೋಗಿದ್ದವು.

ಆಮೇಲೆ ತಾಮ್ರಧ್ವಜನು ಸತ್ತು ಉಳಿದ ಸೈನಿಕರಿಂದ ಸಹಿತನಾಗಿ ಊರಿಗೆ ಬಂದನು. ಯಜ್ಞಮಂಟಪದಲ್ಲಿ ಮಯೂರಧ್ವಜನು ಕೂತಿದ್ದನು. ಮಯೂರಧ್ವಜನು ಎರಡು ಕುದುರೆಗಳು ಬಂದಿರುವುದನ್ನು ನೋಡಿ ಮಗನೊಡನೆ ಹೇಳಿದನು. ಒಂದು ವರ್ಷದ ಒಳಗೇನೆ ಕುದುರೆಯೇ? ಬಂದಿತು? ಇದು ಎರಡನೇ ಕುದುರೆಯು ಯಾರದ್ದು?

ಆಗ ತಾಮ್ರಧ್ವಜನು ಯಜ್ಞಕ್ಕೋಸ್ಕರ ಧರ್ಮರಾಜನು ಈ ಕುದುರೆಯನ್ನು ಬಿಟ್ಟಿದ್ದಾನೆ. ಕುದುರೆಯ ರಕ್ಷಣೆಗಾಗಿ ಕೃಷ್ಣಪರಮಾತ್ಮನಿಂದ ಸಹಿತನಾಗಿ ಅರ್ಜುನನು ಬಂದಿರುವನು. ಬಭ್ರುವಾಹನನೂ ಬಂದಿದ್ದಾನೆ. ಅಲ್ಲಿ ಮಹಾಯುದ್ಧವು ನಡೆಯಿತು. ಯುದ್ಧದ ವಿಷಯವನ್ನು ಈ ಬಹುಲಧ್ವಜನು ಹೇಳುವನು ಎಂದನು.

ಆಗ ಬಹುಲಾಶ್ವನು 'ಪ್ರದ್ಯುಮ್ನನೇ ಮೊದಲಾದ ಮಹಾವೀರರು ನಿನ್ನ ಮಗನ ಹತ್ತಿರ ಯುದ್ಧವನ್ನು ಮಾಡಿ ಬಿದ್ದರು. ಕೃಷ್ಣಾರ್ಜುನರೂ ಯುದ್ಧವನ್ನು ಮಾಡಿದರು. ನಿನ್ನ ಮಗನು ಯುದ್ಧದಲ್ಲಿ ಕೃಷ್ಣಾರ್ಜುನರನ್ನೂ ಮೂರ್ಛೆಯನ್ನು ಹೊಂದಿಸಿದನು. ತರುವಾಯ ಎರಡು ಕುದುರೆಗಳೂ ಇಲ್ಲಿಗೆ ಬಂದುಬಿಟ್ಟವು. ಇವುಗಳ ಹಿಂದೆಯೇ ನಿನ್ನ ಮಗನೂ ಇಲ್ಲಿಗೆ ಬಂದಿರುವನು. ಮೂರ್ಛೆಯನ್ನು ಬಿಟ್ಟು ಎದ್ದಮೇಲೆ ಏನು ಮಾಡುತ್ತಾರೋ ಏನೋ? ನಾವು ಸೌಖ್ಯದಿಂದ ಬಂದು ಸೇರಿದ್ದೇವೆ ಎಂದನು.

ಮಯೂರಧ್ವಜನು ಮೂರ್ಖನಾದ ನನ್ನ ಮಗನು ಮಹಾ ಅಕಾರ್ಯವನ್ನು

ಮಾಡಿ ಎರಡು ಕುದುರೆಗಳನ್ನು ಹಿಡಿದುಕೊಂಡು ನನ್ನ ಬಳಿಗೆ ಬಂದನು. ಸಿಕ್ಕಿದ ಕೃಷ್ಣ ಅರ್ಜುನರನ್ನು ಬಿಟ್ಟು ಬಂದಿದ್ದಾನೆ. ಬರೀ ಕುದುರೆಗಳಿಂದ ಯಜ್ಞವು ನಡೆಯಲಾರದು ಎಂದು ನನ್ನ ಅಭಿಪ್ರಾಯವು. ಮಗನು ನನಗೆ ಶತ್ರುರೂಪದಿಂದ ಬಂದು ಸೇರಿದನು. ಯುದ್ಧರಂಗದಲ್ಲಿ ಭಗವಂತನನ್ನೂ ಅರ್ಜುನನನ್ನೂ ನೋಡಿದಮೇಲೆ ಅವರನ್ನು ಏಕೆ ಕರಕೊಂಡುಬರಲಿಲ್ಲ. ದೇವರನ್ನು ಬಿಟ್ಟು ಬಂದಿರುವಿ. ನನ್ನ ಮನೆಯನ್ನು ಬಿಟ್ಟು ದೂರ ಹೋಗು. ಕುದುರೆಯನ್ನು ತಂದ ಮಾತ್ರದಿಂದ ಧನ್ಯನಾದೆನೆಂದು ತಿಳಿದುಕೊಂಡಿರುವಿ. ಸಂಪಿಗೆಹೂವನ್ನು ಬಿಟ್ಟು ಉಮ್ಮತ್ತದ ಹೂವನ್ನು ತಂದಂತೆ ಇದೆ. ನನಗೆ ಯಜ್ಞವು ಬೇಡ. ಕುದುರೆಗಳನ್ನು ದೂರಕ್ಕೆ ಓಡಿಸಿ ಬಿಡುವೆನು. ದುರ್ಬುದ್ಧಿಯುಳ್ಳವನೇ! ಕೃಷ್ಣಾರ್ಜುನರು ಎಲ್ಲಿ ಇದ್ದಾರೆ? ಆ ಸ್ಥಳವನ್ನಾದರೂ ಹೇಳು ಎಂದು ಹೇಳಿ ಪತ್ನೀಸಹಿತನಾಗಿ ಕೃಷ್ಣಪರಮಾತ್ಮನನ್ನು ನೋಡಬೇಕೆಂಬ ಆಸೆಯುಳ್ಳವನಾಗಿ ಮಗನನ್ನು ಪುನಃ ಪುನಃ ನಿಂದಿಸುತ್ತಾ ಇದ್ದನು.

ತರುವಾಯ ಕೃಷ್ಣಪರಮಾತ್ಮನು ಮೂರ್ಛೆಯಿಂದ ಎಚ್ಚತ್ತಂತೆ ತೋರಿಸಿದನು. ಅರ್ಜುನನೂ ಎಚ್ಚತ್ತನು. ಎಲ್ಲರೂ ಎದ್ದರು. ಆಗ ಅರ್ಜುನನು ಭಗವಂತನೊಡನೆ ಕುದುರೆಗಳು ಎಲ್ಲಿಗೆ ಹೋದವು? ಆ ರಾಜನು ಎಲ್ಲಿಗೆ ಹೋದನು? ಎಲ್ಲಿ ಯುದ್ಧವು ನಡೆಯುತ್ತದೋ ಅಲ್ಲಿಗೆ ಕರೆದುಕೊಂಡು ಹೋಗು ಎಂದನು

ಆಗ ಭಗವಂತನು 'ಅರ್ಜುನ! ಕುದುರೆಗಳು ರತ್ನಪುರಕ್ಕೆ ಹೋಗಿರುವುವು. ಮಯೂರಧ್ವಜನಿಂದ ರಕ್ಷಿತವಾದ ಅಲ್ಲಿಗೆ ನಾವು ಹೋಗೋಣ. ನಾವು ಮುಂದೆ ಹೋಗೋಣ. ಸೈನಿಕರು ಹಿಂದಿನಿಂದ ಬರಲಿ. ನಾನು ನಿನಗೆ ಮಯೂರಧ್ವಜನ ಮಹತ್ವವನ್ನು ತೋರಿಸುತ್ತೇನೆ' ಎಂದು ಹೇಳಿ ಅರ್ಜುನನ ಕೈಹಿಡಿದುಕೊಂಡು ಮುಂದೆ ಹೋದನು. ಹಿಂದಿನಿಂದ ಸೈನ್ಯವು ಹೋಯಿತು.

ತರುವಾಯ ಕೃಷ್ಣಪರಮಾತ್ಮನು ಅರ್ಜುನ! ದೀಕ್ಷಿತನಾದ ಮಯೂರಧ್ವಜನ ಮನೋಹರವಾದ ಪಟ್ಟಣವನ್ನು ನೋಡು. ಅವನು ಏನಾದರೂ ಸತ್ಯವನ್ನು ಬಿಡುವುದಿಲ್ಲ. ನೋಡು. ನಾನು ವೃದ್ಧಬ್ರಾಹ್ಮಣರೂಪದಿಂದ ರಾಜನನ್ನು ಯಾಚನೆ ಮಾಡುತ್ತೇನೆ. ನಿನ್ನ ಹಿತಕ್ಕೋಸ್ಕರ ನಿನ್ನನ್ನು ಬಾಲಕನನ್ನಾಗಿ ಮಾಡುತ್ತೇನೆ. ನನ್ನೊಡನೆ ಬಾ. ರಾತ್ರಿಯಲ್ಲಿ ಹೋಗೋಣ ಎಂದು ಹೇಳಿದನು.

ತರುವಾಯ ಅದೇರೀತಿಯಾಗಿ ತಾನು ವೃದ್ಧಬ್ರಾಹ್ಮಣರೂಪವನ್ನು ಧರಿಸಿ ಅರ್ಜುನನನ್ನು ಬಾಲಕನನ್ನಾಗಿ ಮಾಡಿಕೊಂಡು ರಾತ್ರಿಕಾಲದಲ್ಲಿ ಊರನ್ನು ಪ್ರವೇಶಿಸಿದರು. ಆಗ ಎಲ್ಲಾ ಹೆಂಗಸರೂ ಗಂಡಸರು ಕೃಷ್ಣಪರಮಾತ್ಮನ ಮಹಿಮೆಯಲ್ಲಿಯೇ

ಹೇಳಿದನು. ತರುವಾಯ ಪರಮಾತ್ಮನೂ ರಥಾರೂಢನಾದನು. ಹಂಸಧ್ವಜ ಬಭ್ರುವಾಹನ ಇತ್ಯಾದಿ ಎಲ್ಲರೂ ಗೃಧ್ರವ್ಯೂಹವನ್ನು ಮಾಡಿ ಯುದ್ಧಕ್ಕೆ ಸಿದ್ಧರಾದರು. ತಾಮ್ರಧ್ವಜನು ಎಲ್ಲರ ಹತ್ತಿರವೂ ಭಯಂಕರವಾದ ಯುದ್ಧವನ್ನು ಮಾಡಿದನು. ಕೊನೆಗೆ ಭಕ್ತನಾದ ತಾಮ್ರಧ್ವಜನು ಬಲಕೈಯಿಂದ ಪರಮಾತ್ಮನ ಕೈಯನ್ನು ಹಿಡಿದನು. ಎಡಕೈಯಿಂದ ಪಾದವನ್ನು ದೇವರ ಪಾದವನ್ನು ಹಣೆಯಲ್ಲಿಟ್ಟುಕೊಂಡು ಎತ್ತಿಕೊಂಡು ಅರ್ಜುನನಿದ್ದಲ್ಲಿಗೆ ಬಂದನು. ಅರ್ಜುನನು ನೂರು ಬಾಣಗಳನ್ನು ಬಿಟ್ಟನು. ತಾಮ್ರಧ್ವಜನು ಅರ್ಜುನನನ್ನು ಕಾಲಿನಿಂದ ಒದೆದನು. ಕೃಷ್ಣ ಅರ್ಜುನ ಇಬ್ಬರನ್ನೂ ಹಿಡಿದನು. ಕೃಷ್ಣಪರಮಾತ್ಮನು ತಾಮ್ರಧ್ವಜನನ್ನು ತಳ್ಳಿದನು. ಅವನು ಬಿದ್ದನು. ಬೀಳುವಾಗ ಅವರಿಬ್ಬರನ್ನೂ ಹಿಡಿದು ಸೆಳೆದನು. ಆಗ ಅರ್ಜುನನೂ ಬಿದ್ದು ಮೂರ್ಛಿತನಾದನು. ಪರಮಾತ್ಮನೂ ಭಕ್ತನ ಮಹಿಮೆಯನ್ನು ತಿಳಿಸುವುದಕ್ಕೋಸ್ಕರ ಮೂರ್ಛೆ ಬಂದಂತೆ ತೋರಿಸಿದನು. ತಾಮ್ರಧ್ವಜನು ಎದ್ದು ನೋಡುವಾಗ ಎರಡು ಕುದುರೆಗಳೂ ನಗರಕ್ಕೆ ಹೋಗಿದ್ದವು.

ಆಮೇಲೆ ತಾಮ್ರಧ್ವಜನು ಸತ್ತು ಉಳಿದ ಸೈನಿಕರಿಂದ ಸಹಿತನಾಗಿ ಊರಿಗೆ ಬಂದನು. ಯಜ್ಞಮಂಟಪದಲ್ಲಿ ಮಯೂರಧ್ವಜನು ಕೂತಿದ್ದನು. ಮಯೂರಧ್ವಜನು ಎರಡು ಕುದುರೆಗಳು ಬಂದಿರುವುದನ್ನು ನೋಡಿ ಮಗನೊಡನೆ ಹೇಳಿದನು. ಒಂದು ವರ್ಷದ ಒಳಗೇನೆ ಕುದುರೆಯೇ? ಬಂದಿತು? ಇದು ಎರಡನೇ ಕುದುರೆಯು ಯಾರದ್ದು?

ಆಗ ತಾಮ್ರಧ್ವಜನು ಯಜ್ಞಕ್ಕೋಸ್ಕರ ಧರ್ಮರಾಜನು ಈ ಕುದುರೆಯನ್ನು ಬಿಟ್ಟಿದ್ದಾನೆ. ಕುದುರೆಯ ರಕ್ಷಣೆಗಾಗಿ ಕೃಷ್ಣಪರಮಾತ್ಮನಿಂದ ಸಹಿತನಾಗಿ ಅರ್ಜುನನು ಬಂದಿರುವನು. ಬಭ್ರುವಾಹನನೂ ಬಂದಿದ್ದಾನೆ. ಅಲ್ಲಿ ಮಹಾಯುದ್ಧವು ನಡೆಯಿತು. ಯುದ್ಧದ ವಿಷಯವನ್ನು ಈ ಬಹುಲಧ್ವಜನು ಹೇಳುವನು ಎಂದನು.

ಆಗ ಬಹುಲಾಶ್ವನು 'ಪ್ರದ್ಯುಮ್ನನೇ ಮೊದಲಾದ ಮಹಾವೀರರು ನಿನ್ನ ಮಗನ ಹತ್ತಿರ ಯುದ್ಧವನ್ನು ಮಾಡಿ ಬಿದ್ದರು. ಕೃಷ್ಣಾರ್ಜುನರೂ ಯುದ್ಧವನ್ನು ಮಾಡಿದರು. ನಿನ್ನ ಮಗನು ಯುದ್ಧದಲ್ಲಿ ಕೃಷ್ಣಾರ್ಜುನರನ್ನೂ ಮೂರ್ಛೆಯನ್ನು ಹೊಂದಿಸಿದನು. ತರುವಾಯ ಎರಡು ಕುದುರೆಗಳೂ ಇಲ್ಲಿಗೆ ಬಂದುಬಿಟ್ಟವು. ಇವುಗಳ ಹಿಂದೆಯೇ ನಿನ್ನ ಮಗನೂ ಇಲ್ಲಿಗೆ ಬಂದಿರುವನು. ಮೂರ್ಛೆಯನ್ನು ಬಿಟ್ಟು ಎದ್ದಮೇಲೆ ಏನು ಮಾಡುತ್ತಾರೋ ಏನೋ? ನಾವು ಸೌಖ್ಯದಿಂದ ಬಂದು ಸೇರಿದ್ದೇವೆ ಎಂದನು.

ಮಯೂರಧ್ವಜನು ಮೂರ್ಖನಾದ ನನ್ನ ಮಗನು ಮಹಾ ಅಕಾರ್ಯವನ್ನು

ಮಾಡಿ ಎರಡು ಕುದುರೆಗಳನ್ನು ಹಿಡಿದುಕೊಂಡು ನನ್ನ ಬಳಿಗೆ ಬಂದನು. ಸಿಕ್ಕಿದ ಕೃಷ್ಣ ಅರ್ಜುನರನ್ನು ಬಿಟ್ಟು ಬಂದಿದ್ದಾನೆ. ಬರೀ ಕುದುರೆಗಳಿಂದ ಯಜ್ಞವು ನಡೆಯಲಾರದು ಎಂದು ನನ್ನ ಅಭಿಪ್ರಾಯವು. ಮಗನು ನನಗೆ ಶತ್ರುರೂಪದಿಂದ ಬಂದು ಸೇರಿದನು. ಯುದ್ಧರಂಗದಲ್ಲಿ ಭಗವಂತನನ್ನೂ ಅರ್ಜುನನನ್ನೂ ನೋಡಿದಮೇಲೆ ಅವರನ್ನು ಏಕೆ ಕರಕೊಂಡುಬರಲಿಲ್ಲ. ದೇವರನ್ನು ಬಿಟ್ಟು ಬಂದಿರುವಿ. ನನ್ನ ಮನೆಯನ್ನು ಬಿಟ್ಟು ದೂರ ಹೋಗು. ಕುದುರೆಯನ್ನು ತಂದ ಮಾತ್ರದಿಂದ ಧನ್ಯನಾದೆನೆಂದು ತಿಳಿದುಕೊಂಡಿರುವಿ. ಸಂಪಿಗೆಹೂವನ್ನು ಬಿಟ್ಟು ಉಮ್ಮತ್ತದ ಹೂವನ್ನು ತಂದಂತೆ ಇದೆ. ನನಗೆ ಯಜ್ಞವು ಬೇಡ. ಕುದುರೆಗಳನ್ನು ದೂರಕ್ಕೆ ಓಡಿಸಿಬಿಡುವೆನು. ದುರ್ಬುದ್ಧಿಯುಳ್ಳವನೇ! ಕೃಷ್ಣಾರ್ಜುನರು ಎಲ್ಲಿ ಇದ್ದಾರೆ? ಆ ಸ್ಥಳವನ್ನಾದರೂ ಹೇಳು ಎಂದು ಹೇಳಿ ಪತ್ನೀಸಹಿತನಾಗಿ ಕೃಷ್ಣಪರಮಾತ್ಮನನ್ನು ನೋಡಬೇಕೆಂಬ ಆಸೆಯುಳ್ಳವನಾಗಿ ಮಗನನ್ನು ಪುನಃ ಪುನಃ ನಿಂದಿಸುತ್ತಾ ಇದ್ದನು.

ತರುವಾಯ ಕೃಷ್ಣಪರಮಾತ್ಮನು ಮೂರ್ಛೆಯಿಂದ ಎಚ್ಚತ್ತಂತೆ ತೋರಿಸಿದನು. ಅರ್ಜುನನೂ ಎಚ್ಚತ್ತನು. ಎಲ್ಲರೂ ಎದ್ದರು. ಆಗ ಅರ್ಜುನನು ಭಗವಂತನೊಡನೆ ಕುದುರೆಗಳು ಎಲ್ಲಿಗೆ ಹೋದವು? ಆ ರಾಜನು ಎಲ್ಲಿಗೆ ಹೋದನು? ಎಲ್ಲಿ ಯುದ್ಧವು ನಡೆಯುತ್ತದೋ ಅಲ್ಲಿಗೆ ಕರೆದುಕೊಂಡು ಹೋಗು ಎಂದನು

ಆಗ ಭಗವಂತನು 'ಅರ್ಜುನ! ಕುದುರೆಗಳು ರತ್ನಪುರಕ್ಕೆ ಹೋಗಿರುವುವು. ಮಯೂರಧ್ವಜನಿಂದ ರಕ್ಷಿತವಾದ ಅಲ್ಲಿಗೆ ನಾವು ಹೋಗೋಣ. ನಾವು ಮುಂದೆ ಹೋಗೋಣ. ಸೈನಿಕರು ಹಿಂದಿನಿಂದ ಬರಲಿ. ನಾನು ನಿನಗೆ ಮಯೂರಧ್ವಜನ ಮಹತ್ವವನ್ನು ತೋರಿಸುತ್ತೇನೆ' ಎಂದು ಹೇಳಿ ಅರ್ಜುನನ ಕೈಹಿಡಿದುಕೊಂಡು ಮುಂದೆ ಹೋದನು. ಹಿಂದಿನಿಂದ ಸೈನ್ಯವು ಹೋಯಿತು.

ತರುವಾಯ ಕೃಷ್ಣಪರಮಾತ್ಮನು ಅರ್ಜುನ! ದೀಕ್ಷಿತನಾದ ಮಯೂರಧ್ವಜನ ಮನೋಹರವಾದ ಪಟ್ಟಣವನ್ನು ನೋಡು. ಅವನು ಏನಾದರೂ ಸತ್ಯವನ್ನು ಬಿಡುವುದಿಲ್ಲ, ನೋಡು. ನಾನು ವೃದ್ಧಬ್ರಾಹ್ಮಣರೂಪದಿಂದ ರಾಜನನ್ನು ಯಾಚನೆ ಮಾಡುತ್ತೇನೆ. ನಿನ್ನ ಹಿತಕ್ಕೋಸ್ಕರ ನಿನ್ನನ್ನು ಬಾಲಕನನ್ನಾಗಿ ಮಾಡುತ್ತೇನೆ. ನನ್ನೊಡನೆ ಬಾ. ರಾತ್ರಿಯಲ್ಲಿ ಹೋಗೋಣ ಎಂದು ಹೇಳಿದನು.

ತರುವಾಯ ಅದೇರೀತಿಯಾಗಿ ತಾನು ವೃದ್ಧಬ್ರಾಹ್ಮಣರೂಪವನ್ನು ಧರಿಸಿ ಅರ್ಜುನನನ್ನು ಬಾಲಕನನ್ನಾಗಿ ಮಾಡಿಕೊಂಡು ರಾತ್ರಿಕಾಲದಲ್ಲಿ ಊರನ್ನು ಪ್ರವೇಶಿಸಿದರು. ಆಗ ಎಲ್ಲಾ ಹೆಂಗಸರೂ ಗಂಡಸರು ಕೃಷ್ಣಪರಮಾತ್ಮನ ಮಹಿಮೆಯಲ್ಲಿಯೇ

ಆಸಕ್ತರಾಗಿರುವುದನ್ನು ಕಂಡನು. ಮರುದಿವಸ ಬೆಳಿಗ್ಗೆ ಕೃಷ್ಣಾರ್ಜುನರು ನಾನಾ ರಾಜರಿಂದ ಕೂಡಿಕೊಂಡು ಉತ್ತಮವಾದ ಆಸನದಲ್ಲಿ ಕೂತಿರುವ ದೀಕ್ಷಿತನಾದ ಎರಡು ಕುದುರೆಗಳಿಂದ ಸಹಿತನಾಗಿರುವ ಪತ್ನೀಸಹಿತವಾದ ರಾಜನನ್ನು ನೋಡಿ ನೋಡಿದರು.

ಬ್ರಾಹ್ಮಣರೂಪಿಯಾದ ಭಗವಂತನು ಮೊದಲೇ 'ಮಹಾರಾಜ! ನಿನಗೆ ಮಂಗಳವಾಗಲಿ. ಶಿಷ್ಯಸಹಿತನಾಗಿ ನಿನ್ನ ಯಜ್ಞಶಾಲೆಗೆ ಬಂದಿರುವ ನನ್ನನ್ನು ನೋಡು ಎಂದನು.

ರಾಜನು 'ನಾನು ನಮಸ್ಕರಿಸಲು ಏಳುವ ಮೊದಲೇ ಆಶೀರ್ವಾದವನ್ನು ಮಾಡಿದಿರಷ್ಟೆ! ನಮಸ್ಕಾರ ಮಾಡದೆ ಮೊದಲೇ ಆಶೀರ್ವಾದ ಮಾಡಿದರೆ ಅದಕ್ಕಿಂತ ಬೇರೆ ಶಾಪವು ಬೇಕಾಗಿದೆಯೇ?' ಎಂದು ಹೇಳಿ ಎದ್ದು ಉದ್ದಕ್ಕೆ ನಮಸ್ಕರಿಸಿದನು. ಕೃಷ್ಣಪರಮಾತ್ಮನು ಅವನನ್ನು ಹಿಡಿದು ಎಬ್ಬಿಸಿದನು. ಆಮೇಲೆ ರಾಜನು ಬ್ರಾಹ್ಮಣರೂಪದಿಂದ ಇರುವ ಭಗವಂತನೊಡನೆ ಶಿಷ್ಯನಿಂದ ಕೂಡಿಕೊಂಡು ಪೂಜ್ಯರಾದ ತಾವು ನನ್ನ ಯಜ್ಞಶಾಲೆಗೆ ಬರಲಿಕ್ಕೆ ಕಾರಣವೇನು? ತಮಗೆ ಯಾವ ಪ್ರಿಯವಸ್ತುವು ಬೇಕಾಗಿದೆ? ನಾನು ಧನ್ಯನಾದೆನು. ತಮಗೆ ಕೊಡದೆ ಇರುವ ವಸ್ತುವೇ ಇರುವುದಿಲ್ಲ. ಯಾವ ವಸ್ತುವನ್ನು ಬೇಕಾದರೂ ಕೊಡಲು ಸಿದ್ಧರಾಗಿದ್ದೇನೆ ಎಂದನು.

ಭಗವಂತನು 'ರಾಜರ ಹತ್ತಿರ ಏನಾದರೂ ಕಾರ್ಯವನ್ನು ವಿಜ್ಞಾಪನ ಮಾಡಿಕೊಳ್ಳುವ ಸಂದರ್ಭದಲ್ಲಿ ಮೊದಲೇ ಆಶೀರ್ವಾದವನ್ನು ಮಾಡಬಹುದು.

ರಾಜನು 'ತಾವು ಸ್ವಲ್ಪವೂ ಸಂದೇಹವಿಲ್ಲದೆ ನನಗೆ ಆಜ್ಞೆಯನ್ನು ಮಾಡಬೇಕು. ತಮ್ಮ ಸಕಲ ಕಾರ್ಯವನ್ನೂ ನನ್ನ ಜೀವಿತದಿಂದಲೂ ಧನದಿಂದಲೂ ಮಾಡುವೆನು.

ಭಗವಂತನು 'ರಾಜನೇ! ನಾನು ಇಲ್ಲಿಗೆ ಬಂದಿರುವ ಕಾರಣವನ್ನು ಹೇಳುತ್ತೇನೆ. ಮನೋಹರವಾದ ಧರ್ಮಪುರದಿಂದ ನಾನು ಬರುತ್ತಾ ಇದ್ದೇನೆ. ನಿನ್ನ ಪುರೋಹಿತರು ಕೃಷ್ಣಶರ್ಮಾ ಎನ್ನುವ ಬ್ರಾಹ್ಮಣರಲ್ಲಿ ಕನ್ಯಾ ಇದೆ ಎಂದು ತಿಳಿದು ಕೊಂಡು ನನ್ನ ಮಗನಿಗೆ ಮದುವೆ ಮಾಡಿಕೊಂಡು ಹೋಗಬೇಕೆಂದು ಮಗನನ್ನು ಕರೆದುಕೊಂಡು ನಿನ್ನ ಊರಿಗೆ ಬರುತ್ತಿದ್ದೆನು. ಮಧ್ಯೇ ದಾರಿಯಲ್ಲಿ ಒಂದು ಸಿಂಹವು ವನದಲ್ಲಿ ನಾನು ನೋಡುತ್ತಾ ಇರುವಾಗಲೇ ಕೋಪದಿಂದ ಬಂದು ನನ್ನ ಮಗನನ್ನು ಹಿಡಿಯಿತು. ತರುವಾಯ ನಾನು ಮಗನನ್ನು ಬಿಡಿಸಲಿಕ್ಕೆ ಪ್ರಯತ್ನವನ್ನು ಮಾಡಿದೆನು. ನಾನು ನರಸಿಂಹದೇವರನ್ನು ಸ್ಮರಿಸಿದೆನು. ನರಸಿಂಹದೇವರೂ ಬರಲಿಲ್ಲ. ನಾನು

ತುಂಬಾ ದುಃಖವನ್ನು ಹೊಂದಿದೆನು. ಆಗ ಸಿಂಹವು ದುಃಖವುಳ್ಳ ನನ್ನೊಡನೆ ನಗುತ್ತಾ 'ತನ್ನ ಉಗುರುಗಳಿಂದ ನನ್ನ ಮಗನನ್ನು ಪೀಡಿಸುತ್ತಾ ಭಯಂಕರಗಳಾದ ಕೋರೆ ಹಲ್ಲುಗಳಿಂದಲೂ ಬಾಲದಿಂದಲೂ ನನ್ನನ್ನು ಭಯಪಡಿಸುತ್ತಾ ಮನುಷ್ಯ ಭಾಷೆಯಿಂದ ''ಬ್ರಾಹ್ಮಣಶ್ರೇಷ್ಠ! ಮಗನಿಗೋಸ್ಕರ ವ್ಯರ್ಥವಾಗಿ ಶ್ರಮ ಹೊಂದುವಿ. ನನ್ನಲ್ಲಿ ಸಿಕ್ಕಿದವನನ್ನು ಬಿಡಿಸಲಿಕ್ಕೆ ಇನ್ನೊಬ್ಬನು ಸಮರ್ಥನಾಗಲಾರನು. ಶಿಷ್ಯನನ್ನು ಕರಕೊಂಡು ಮನೆಗೆ ಹೋಗು. ವಿಚಾರ ಮಾಡಬೇಡ. ಹಿಂಸಾ ಮಾಡುವ ನಮ್ಮಂತಹರ ಮೇಲೆ ನಿಲ್ಲುವುದು ಸುಖಕ್ಕೆ ಕಾರಣವಲ್ಲ. ನಿನಗೆ ಪರಲೋಕ ಸುಖಕ್ಕೆ ಕಾರಣನಾದ ಬೇರೊಂದು ಮಗನನ್ನು ಹೊಂದು. ಮಕ್ಕಳಿಲ್ಲದಿದ್ದವರಿಗೆ ಗತಿಯಿಲ್ಲವೆಂದು ಸಾಮಾನ್ಯವಾಗಿ ಶಾಸ್ತ್ರವು ಹೇಳುತ್ತದೆ'' ಎಂದಿತು.

ಆದಕ್ಕೆ ನಾನು 'ಸಿಂಹವೇ! ನನ್ನನ್ನು ತಿಂದು ನನಗೆ ಸದ್ಗತಿಗೆ ಕಾರಣನಾದ ಮಗನನ್ನು ಬಿಟ್ಟುಬಿಡು. ಮಗನನ್ನು ಕಳೆದುಕೊಂಡು ಮುದುಕನಾದ ನಾನು ಬದುಕಿರುವುದು ವ್ಯರ್ಥವು' ಎಂದೆನು. ಆದಕ್ಕೆ ಸಿಂಹವು 'ನಾವು ಆಯುಷ್ಯ ಕಡಿಮೆಯಾದವರನ್ನು ಮಾತ್ರ ಹಿಡಿಯುವವರು. ನಿನಗೆ ಬೇಕಾದ ಆಯುಷ್ಯವಿದೆ. ನಿನ್ನ ಮಗನಿಗೆ ಆಯುಷ್ಯವಿಲ್ಲ. ಆದುದರಿಂದ ನನ್ನ ಆಜ್ಞೆಯಿಂದ ಹೊರಟುಹೋಗು' ಎಂದು ಹೇಳಿತು. ಆದಕ್ಕೆ ನಾನು 'ಯಾವ ದಾನದಿಂದ ತಪಸ್ಸಿನಿಂದಲೋ ಮಗನನ್ನು ಬಿಡುವಿ' ಎಂದು ಕೇಳಿದೆನು. ಆದಕ್ಕೆ ಸಿಂಹವು ಹೇಳಿದ್ದನ್ನು ನಿನ್ನ ಮುಂದೆ ಪ್ರಾರ್ಥಿಸಬಹುದೇ' ಎಂದು ಹೇಳಿದನು. ಭಗವಂತನ ಮಾತನ್ನು ಕೇಳಿ ರಾಜನು 'ನಮ್ಮ ರಾಜ್ಯದಲ್ಲಿ ನೀಚವಾದ ಸಿಂಹವೇ ಇಲ್ಲವಲ್ಲ. ನರಸಿಂಹದೇವರು ಹೊರತು ನಿಮ್ಮ ಮಗನನ್ನು ಯಾರು ಹಿಡಿಯಬೇಕು?' ಎಂದನು.

ಭಗವಂತನು 'ರಾಜನೇ! ಸಿಂಹವಾದದ್ದು ನಿನ್ನಿಂದ ಒಂದು ವಸ್ತುವನ್ನು ಯಾಚನೆ ಮಾಡಿದೆ. ಆದರೆ ಸಿಂಹದ ವಸ್ತುವು ನೀನು ಕೊಡತಕ್ಕದ್ದಲ್ಲ' ಎಂದನು.

ರಾಜನು 'ಬ್ರಾಹ್ಮಣರೇ! ನನ್ನಿಂದ ಸಿಂಹವು ಏನನ್ನು ಪ್ರಾರ್ಥಿಸಿತು? ನಾನು ಕೊಡುತ್ತೇನೆ. ಬೇಗನೇ ಹೇಳಿರಿ. ನಾನು ಸುಳ್ಳು ಹೇಳಲಾರೆನು' ಎಂದನು.

ಆದಕ್ಕೆ ಭಗವಂತನು 'ರಾಜನೇ! ನಾನು ಪ್ರಾರ್ಥಿಸಿದ ವಸ್ತುವನ್ನು ಹೇಗೆ ಕೊಡುವಿ? ಆದರೆ ಮಗನಿಲ್ಲದೆ ಹೋಗುವುದು ತುಂಬಾ ದುಃಖಕರವಾದ ಪ್ರಯುಕ್ತ ಕೇಳಬೇಕಾಗಿದೆ. ಸಿಂಹವು ಪ್ರಾರ್ಥಿಸಿದ್ದನ್ನು ಕೊಡುವ ಪಕ್ಷದಲ್ಲಿ ಹೇಳುತ್ತೇನೆ. ಸಿಂಹವು ಹೇಳಿದ ಕ್ರೂರವಾದ ಮಾತನ್ನು ಕೇಳು. ಆ ಮಹಾಅರಣ್ಯದಲ್ಲಿ ಸಿಂಹವು 'ಮಯೂರಧ್ವಜರಾಜನ ಶರೀರದ ಅರ್ಧಭಾಗವನ್ನು ತೆಗೆದುಕೊಂಡು ಬಾ.

ಹಾಗಾದರೆ ನಿನ್ನ ಮಗನನ್ನು ಬಿಡುವೆನು. ನಿನ್ನ ದೇಹವು ತಪಸ್ಸು ಮಾಡಿ ಸುಟ್ಟು ಹೋದ ಮುದಿದೇಹ ಅದು ನನಗೆ ಬೇಡ. ರಾಜನ ದೇಹವಾದರೋ ನಾನಾಫಲಗಳಿಂದ ಹಾಲಿನಿಂದ ಪುಷ್ಟವಾಗಿದೆ. ಆದುದರಿಂದ ಮಯೂರಧ್ವಜನ ಅರ್ಧಮಾಡಿದ ದೇಹವೇ ನನಗೆ ಪ್ರಿಯವಾದದ್ದು. ನನಗೆ ತಂದುಕೊಡು. ಆ ದೇಹವನ್ನು ನೀನು ತರುವವರೆಗೆ ನಿನ್ನ ಮಗನನ್ನು ನಾನು ತಿನ್ನುವುದಿಲ್ಲ, ಸತ್ಯವನ್ನೇ ಹೇಳುತ್ತೇನೆ' ಎಂದು ಹೇಳಿತು.

ಅದಕ್ಕೆ ನಾನು 'ರಾಜನು ಸುಂದರವಾದ ತನ್ನ ದೇಹವನ್ನು ಇನ್ನೊಬ್ಬರಿಗೋಸ್ಕರ ಸೀಳಿಕೊಡುತ್ತಾನೆ? ನಾನು ರಾಜನ ಬಳಿಗೆ ಹೋಗಲಾರೆನು' ಎಂದೆನು. ಅದಕ್ಕೆ ಸಿಂಹವು 'ಬ್ರಾಹ್ಮಣ! ರಾಜನ ಬಳಿಗೆ ಹೋಗು. ಅವನು ನಿನಗೆ ಅರ್ಧಶರೀರವನ್ನು ಕೊಡುವನು. ನೀನು ಹೋಗುವುದು ವ್ಯರ್ಥವಾಗುವುದಿಲ್ಲ, ದಧೀಚಿಋಷಿಗಳು ತನ್ನ ದೇಹವನ್ನು ಕೊಡಲಿಲ್ಲವೇ? ಕವಚವನ್ನು ಕರ್ಣನು ಕೊಡಲಿಲ್ಲವೇ? ಹಾಗೇ ರಾಜನು ದೇಹಾರ್ಧವನ್ನು ಕೊಡುವನು. ಕೀರ್ತಿವಂತರಿಗೆ ತಮ್ಮ ದೇಹದ ಮೇಲೆ ಆಸೆಯಿರುವುದಿಲ್ಲ. ಕ್ಷತ್ರಿಯರು ಯದ್ಧಮಧ್ಯದಲ್ಲಿ ಬ್ರಾಹ್ಮಣರಿಗೋಸ್ಕರ ದೇಹವನ್ನು ಪರಿತ್ಯಜಿಸುವರು. ನಿನಗೆ ಮಗನಿಲ್ಲವೆಂದಾಗುವುದು. ಆದುದರಿಂದ ನೀನು ಆ ರಾಜನ ಬಳಿಗೆ ಹೋಗು. ಆ ರಾಜನ ಹತ್ತಿರ ಪ್ರಾರ್ಥಿಸು. ಅವನಿಗೇ ಅನೇಕ ಮಕ್ಕಳು ಹುಟ್ಟಿದ್ದಾರೆ. ಬಹುಕಾಲ ರಾಜ್ಯಭಾರವನ್ನು ಮಾಡಿದ್ದಾನೆ. ನಿನ್ನನ್ನು ನೋಡಿ ಕೃಪಾವುಳ್ಳವನಾಗುವನು. ಮತ್ತು ಯಾಚಕರು ಕೇಳುವುದನ್ನು ಕೇಳಿಬಿಡಬೇಕು. ಅವರು ಕೊಡಲಿ ಅಥವಾ ಕೊಡದೆ ಇರಲಿ' ಎಂದಿತು. ಈರೀತಿಯಾಗಿ ಸಿಂಹವು ನನ್ನನ್ನು ಪ್ರೇರಿಸಿತು.

ನಾನು ಪುತ್ರಶೋಕದಿಂದ ನೀನಿದ್ದಲ್ಲಿಗೆ ಶಿಷ್ಯನನ್ನು ಕರೆದುಕೊಂಡು ಬಂದಿದ್ದೇನೆ. ಏನಾದರೂ ಮಾಡಿ ಮಗನನ್ನು ಬಿಡಿಸಬೇಕೆಂಬ ಆಸೆಯು ನನಗೆ ಬಲವಾಗಿದೆ. ಆಮೇಲೆ ನಾನು ಬರುವಾಗ ಪುನಃ ಸಿಂಹವು 'ರಾಜನ ಅರ್ಧಶರೀರವನ್ನು ಬಿಟ್ಟು ಬರಬೇಡ. ಅರ್ಧಶರೀರವಿಲ್ಲದೆ ಬಂದರೆ ನಿನ್ನ ಮಗನನ್ನು ನಾನು ಬಿಡಲಾರೆನು' ಎಂದು ಹೇಳಿ ಕಣ್ಣಿಗೆ ಕಾಣಿಸದೆ ಹೋಯಿತು. ನಾನು ಇಲ್ಲಿಗೆ ಬಂದೆನು. ನನ್ನಂತಹ ದುರ್ಬಲನು ಮತ್ತೇನು ಮಾಡಲಿಕ್ಕೆ ಆಗುವುದು? ತಮ್ಮ ದುಃಖವನ್ನು ರಾಜರ ಹತ್ತಿರ ತಿಳಿಸಬೇಕು. ರಾಮಚಂದ್ರದೇವರು ಮೃತನಾದ ಬ್ರಾಹ್ಮಣನ ಪುತ್ರನನ್ನು ಬದುಕಿಸಿದರು. ನೀನೂ ಕೂಡ ಮಗನ ಮೇಲಿನ ಆಸೆಯಿಂದ ನಾನು ಇಲ್ಲಿಗೆ ಬಂದು ಸೇರಿದೆನು' ಎಂದು ಹೇಳಿದನು.

ಈರೀತಿಯಾಗಿ ಬ್ರಾಹ್ಮಣರೂಪಿಯಾದ ಕೃಷ್ಣಪರಮಾತ್ಮನು ಹೇಳಿದ್ದನ್ನು ಕೇಳಿ ಮಯೂರಧ್ವಜರಾಜನು 'ಬ್ರಾಹ್ಮಣರೇ! ನಿಲ್ಲಿರಿ. ಈ ಯಜ್ಞಮಂಟಪದಲ್ಲಿಯೇ ಶರೀರಾರ್ಧವನ್ನು ಕೊಡುವೆನು. ಎಲ್ಲಾ ಬ್ರಾಹ್ಮಣರ ಮುಂಭಾಗದಲ್ಲಿ ಸತ್ಯವಾದ ಮಾತನ್ನೇ ಹೇಳುತ್ತೇನೆ' ಎಂದು ಹೇಳಿ ಮಗನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ತಾನು ಗಂಗಾಜಲದಿಂದಲೂ ಸಾಲಗ್ರಾಮತೀರ್ಥದಿಂದಲೂ ಸ್ನಾನ ಮಾಡಿ ತುಲಸೀಮಾಲೆಯನ್ನುಕುತ್ತಿಗೆಯಲ್ಲಿ ಹಾಕಿಕೊಂಡನು. ದ್ವಾದಶನಾಮಗಳನ್ನು ಧರಿಸಿ ಶಂಖ ಚಕ್ರ ಮುದ್ರೆಗಳನ್ನೂ ಧರಿಸಿದನು. ಸಂತೋಷದಿಂದ ಸಭಾಮಂಟಪಕ್ಕೆ ಬಂದು ಎಲ್ಲಾ ಬ್ರಾಹ್ಮಣರೊಡನೆ ಮಯೂರಧ್ವಜನು 'ಈ ಬ್ರಾಹ್ಮಣ ರೂಪಿಯಾದ ಪುತ್ರನಿಗೋಸ್ಕರ ಬಂದಿರುವ ಭಗವಂತನನ್ನು ನನ್ನ ದೇಹಾರ್ಧದಿಂದ ಪೂಜಿಸುವೆನು. ಈ ಬ್ರಾಹ್ಮಣರು ಪುತ್ರಯುಕ್ತರಾಗಬೇಕು. ಎಲ್ಲಾ ಬ್ರಾಹ್ಮಣರೂ ಯಜ್ಞಶಾಲೆಯಲ್ಲಿ ನಡೆಯುವ ಕುತೂಹಲವನ್ನು ನೋಡಬೇಕು. ಮರಸೀಳುವ ಆಚಾರಿಗಳು ಬರಲಿ. ಗರಗಸವನ್ನು (ರಂಪಾವನ್ನು) ಹಿಡಿದುಕೊಂಡು ಬರಲಿ. ಎರಡು ಕಂಬವನ್ನು ನಿಲ್ಲಿಸಿ ನನ್ನ ತಲೆಯ ಮೇಲೆ ಗರಗಸವನ್ನು ಇಟ್ಟು ಸೀಳಲಿ. ನಾನು ಯಾರಿಗೆ ಪ್ರಿಯನಾಗಿರುವೆನೋ ಅವರು ಈ ಕಾರ್ಯಕ್ಕೆ ವಿಘ್ನವನ್ನು ಮಾಡಬಾರದು' ಎಂದು ಹೇಳಿದನು.

ರಾಜನ ಮಾತನ್ನು ಕೇಳಿ ಮಂತ್ರಿಗಳೂ ಬ್ರಾಹ್ಮಣರೂ ಭಯದಿಂದ ನಡುಗಿಹೋದರು. ಕರುಣೆಯಿಂದ ಮಾತಾಡಿಕೊಂಡರು. 'ಯಮನಂತೆ ಇರುವ ದಯಾಶೂನ್ಯನಾದ ನಮ್ಮ ರಾಜರ ಪ್ರಾಣತೆಗೆಯುವ ಈ ಬ್ರಾಹ್ಮಣನು ಎಲ್ಲಿಂದ ಬಂದು ಸೇರಿದನು? ನಾವು ಅನೇಕ ಯಾಚಕರನ್ನು ನೋಡಿದ್ದೇವೆ. ಇಂತವನನ್ನು ನೋಡಿದ್ದೇ ಇಲ್ಲ. ಲಜ್ಜಾ ಶೂನ್ಯನಾಗಿ ದಯಾಶೂನ್ಯನಾಗಿ ರಾಜರ ದೇಹವನ್ನು ಯಾರು ಯಾಚಿಸುವರು? ಸಿಂಹವಾದದ್ದು ಮಾಂಸಭಕ್ಷಕವಾದದ್ದು ಹಿಂಸಕಪ್ರಾಣಿ ಎಂದು ಪ್ರಸಿದ್ಧವಾಗಿದೆ. ಇವನು ಜಾತಿಯಿಂದ ಮನುಷ್ಯನಾಗಿದ್ದಾನೆ. ಜ್ಞಾನವುಳ್ಳವ ನಾಗಿದ್ದಾನೆ. ಬ್ರಾಹ್ಮಣಜಾತಿಯವನಾಗಿದ್ದುಕೊಂಡು ಹೀಗೆ ಸ್ವಾರ್ಥಪರನಾಗಿ ಹೇಗೆ ಆದನು? ನಾವೇನು ಮಾಡಲಿ? ಸತ್ಯಮಾತಾಡುವ ಅತಿಥಿಗಳಲ್ಲಿ ಪ್ರೀತಿಯುಳ್ಳ ಮಹಾರಾಜರನ್ನು ಹೇಗೆ ತಡೆಯಲಿಕ್ಕೆ ಸಾಧ್ಯವಾಗುತ್ತದೆ? ಭಗವಂತನೇ ವಾಮನ ರೂಪದಿಂದ ಬಲಿಯನ್ನು ಯಾಚನೆ ಮಾಡಲಿಕ್ಕೆ ಬಂದಂತೆ ಪರಮಾತ್ಮನೇ ಬ್ರಾಹ್ಮಣ ರೂಪದಿಂದ ನಮ್ಮ ರಾಜರ ಹತ್ತಿರ ಯಾಚನೆ ಮಾಡಲಿಕ್ಕೆ ಬಂದಿರಬಹುದೇ? ಈ ಪ್ರಕಾರವಾಗಿ ಜನರು ಮಾತಾಡಲು ರಾಜನು ಒಬ್ಬರೂ ಮಾತಾಡಬಾರದು ಎಂದನು.

ರಾಜನು ಸಂತೋಷವುಳ್ಳವನಾಗಿ ಅನೇಕ ದಾನಗಳನ್ನು ಕೊಟ್ಟನು. ಆಚಾರಿಗಳು ಬಂದು ಎರಡು ಕಂಭವನ್ನು ಇಟ್ಟರು. ರಾಜನು ಎಲ್ಲರೂ ನೋಡುವಂತೆ ಸಂತೋಷವುಳ್ಳವನಾಗಿಯೇ ನನ್ನ ತಲೆಯಮೇಲೆ ಗರಗಸವನ್ನು ಇಡಲಿಕ್ಕೆ ಹೇಳಿದನು. ಬ್ರಾಹ್ಮಣರೂಪವನ್ನು ಧರಿಸಿರುವ ಕೃಷ್ಣಪರಮಾತ್ಮನ ಪಾದಗಳನ್ನು ತೊಳೆದು ನನ್ನ ಈ ಅರ್ಧದೇಹದಿಂದ ಯಜ್ಞಸ್ವಾಮಿಯಾದ ಪರಮಾತ್ಮನು ಸಂತುಷ್ಟನಾಗಲಿ ಎಂದನು. ಬ್ರಾಹ್ಮಣಶ್ರೇಷ್ಠರೇ ಸೀಳಿದ ನನ್ನ ಅರ್ಧದೇಹವನ್ನು ಸ್ವೀಕರಿಸಿರಿ. ನರಸಿಂಹದೇವರು ಸಂತುಷ್ಟರಾಗಲಿ. ನನ್ನ ಶರೀರವನ್ನು ಸೀಳಿಸುವೆನು. ಬೇಗನೇ ನನ್ನ ದೇಹವನ್ನು ಸೀಳಿರಿ. ಬ್ರಾಹ್ಮಣರಿಗೆ ತಡ ಮಾಡಬಾರದು. ಈ ಬ್ರಾಹ್ಮಣರಿಂದ ನಾನು ಜಗತ್ತಿನಲ್ಲಿ ಪರಮ ಧನ್ಯನಾದೆನು. ಎಲ್ಲ ಜನರೂ ನನ್ನ ಮಾತನ್ನು ಕೇಳಬೇಕು. ಶರೀರವೂ ಧನವೂ ಪರೋಪಕಾರಕ್ಕಾಗಿ ಉಪಯೋಗಿಸಲ್ಪಡುವುದು ಶ್ರೇಷ್ಠವಾದದ್ದು. ಇಲ್ಲದಿದ್ದರೆ ಅದು ನೀಚವಾದದ್ದು. ಆದುದರಿಂದ ನನ್ನನ್ನು ನೋಡಿ ಎಲ್ಲಾ ಸಭಿಕರೂ ಸಂತೋಷವನ್ನು ಹೊಂದಬೇಕು' ಎಂದು ಹೇಳಿದನು.

ಈ ಪ್ರಕಾರವಾಗಿ ಹೇಳುತ್ತಿರುವ ರಾಜನನ್ನು ನೋಡಿ ಎಲ್ಲರೂ ಹಾಹಾಕಾರವನ್ನು ಮಾಡುತ್ತಾ ಅಳಲಿಕ್ಕೆ ಆರಂಭಿಸಿದರು. ಆಗ ರಾಜನ ಪತ್ನಿಯಾದ ಕುಮುದ್ವತಿಯು ಬಂದು ಬ್ರಾಹ್ಮಣರೂಪಿ ಪರಮಾತ್ಮನ ಮುಂಭಾಗದಲ್ಲಿ ಸಂತೋಷದಿಂದ ಪತಿಯೊಡನೆ ''ಮಹಾರಾಜರೇ! ನೀವು ಈ ಬ್ರಾಹ್ಮಣರಿಗೆ ಅರ್ಧದೇಹವನ್ನು ಕೊಡುವೆನೆಂದು ಪ್ರತಿಜ್ಞಾಮಾಡಿದ್ದನ್ನು ನಾನು ಕೇಳಿದ್ದೇನೆ. ನಿಮ್ಮ ಅರ್ಧದೇಹವು ನಾನು. ನನ್ನನ್ನು ಕೊಟ್ಟು ಸತ್ಯವಾದ ಮಾತುಳ್ಳವರಾಗಿರಿ. ನನ್ನನ್ನಾದರೆ ಜೀವಸಹಿತ ವಾಗಿಯೇ ದಾನ ಮಾಡಬಹುದು. ನಿಮ್ಮ ದೇಹದ ಅರ್ಧಭಾಗವನ್ನಾದರೆ ಜೀವ ರಹಿತವಾದದ್ದನ್ನು ದಾನಮಾಡಬೇಕು. ಮತ್ತು ಇನ್ನೊಬ್ಬರು ಸೀಳಿದ್ದನ್ನು ಸಿಂಹವು ಮುಟ್ಟಲಾರದು ಎಂದು ನನ್ನ ಅಭಿಪ್ರಾಯ. ಸಿಂಹವು ನಿಮ್ಮ ದೇಹದ ನಾಲ್ಕನೇ ಒಂದು ಭಾಗವನ್ನು ಕೇಳಿದ್ದರೆ ನಿಮ್ಮ ದೇಹವನ್ನು ಸೀಳಬೇಕಾದದ್ದು ನ್ಯಾಯವೇ! ಆದರೆ ಸಿಂಹವು ಹಾಗೆ ಕೇಳಲಿಲ್ಲವಲ್ಲಾ! ಅರ್ಧಶರೀರವನ್ನು ಕೇಳಿದೆ. ಸ್ತ್ರೀಯಾದವಳು ಪುರುಷನ ಅರ್ಧಶರೀರ. ಪತಿಯ ಮುಂಭಾಗದಲ್ಲಿ ಸತಿಯ ದೇಹವನ್ನು ಬಿಟ್ಟರೆ ಉತ್ತಮವಾದ ಲೋಕವನ್ನು ಹೊಂದುವಳು'' ಈರೀತಿಯಾಗಿ ಹೇಳಿದಳು.

ಕುಮುದ್ವತಿಯ ಮಾತನ್ನು ಕೇಳಿ ಕೂಡಲೇ ಭಗವಂತನು ''ರಾಜನೇ! ಸಿಂಹವು ನನ್ನೊಡನೆ ರಾಜನ ಬಲಭಾಗವನ್ನು ತರಬೇಕು ಎಂದು ಹೇಳಿದೆ. ಸ್ತ್ರೀಯಾದವಳು

ಪುರುಷನಿಗೆ ಎಡಭಾಗವಷ್ಟೆ! ನಾನು ಎಡಭಾಗವನ್ನು ಹೇಗೆ ತೆಗೆದುಕೊಂಡು ಹೋಗಲಿ? ಆದುದರಿಂದ ನಿನ್ನ ದೇಹದ ಬಲಭಾಗವನ್ನು ಸಿಂಹಕ್ಕಾಗಿ ಕೊಡಬೇಕು. ಇಲ್ಲ ಎಂದು ಹೇಳುವ ಪಕ್ಷದಲ್ಲಿ ನಾನು ಮಗನ ಆಸೆಯನ್ನು ಬಿಟ್ಟು ಹೋಗುವೆನು. ಆ ಸಿಂಹವೇ ನನ್ನನ್ನು ನಿನ್ನ ಬಳಿಗೆ ಕಳುಹಿಸಿತು. ಅದರ ಹತ್ತಿರವೇ ಹೋಗಿ ನನ್ನ ಮಗನನ್ನು ತಿಂದುಬಿಡು(ಎಂದು) ಹೇಳುತ್ತೇನಷ್ಟೆ. ಮತ್ತೆ ನಾನೇನು ಮಾಡಲಿ'' ಎಂದನು.

ಈರೀತಿಯಾಗಿ ಭಗವಂತನು ಹೇಳಲು ರಾಜಪುತ್ರನಾದ ತಾಮ್ರಧ್ವಜನು ಪರಮಸಂತೋಷದಿಂದ ತಂದೆಯ ಕೀರ್ತಿಯನ್ನು ಸಂಪಾದಿಸುವುದಕ್ಕಾಗಿ ಶಿಷ್ಯಯುಕ್ತನಾದ ಆ ಬ್ರಾಹ್ಮಣರೂಪಿ ಭಗವಂತನೊಡನೆ ಮೃದುವಾದ ಮಾತಿನಿಂದ 'ಪೂಜ್ಯರೇ! ತಂದೆಯೇ ಮಗನು ಎಂದು ವೇದದಲ್ಲಿಯೇ ಹೇಳುವುದು. ಬ್ರಾಹ್ಮಣನಿಮಿತ್ತವಾಗಿ ನನ್ನ ತಂದೆಯವರು ಶರೀರಾರ್ಧವನ್ನು ಸಮರ್ಪಿಸಿರುವರು. ಮಗನು ತಂದೆಗೆ ಸಂಪೂರ್ಣವಾದ ಅರ್ಧಶರೀರವಾಗುವನು. ತರುಣನಾದ ಮಾಂಸದಿಂದ ಪುಷ್ಟನಾದ ನನ್ನನ್ನು ನೋಡಿ ಸಿಂಹವೂ ಸಂತೋಷವನ್ನು ಹೊಂದುವುದು. ಮಗನಾದ ನನಗೂ ಮಹತ್ತಾದ ಕೀರ್ತಿಯು ಉಂಟಾಗುವುದು. ಭೀಷ್ಮಾಚಾರ್ಯರೂ ರಾಮದೇವರೂ ತಂದೆಯ ಮಾತಿನಂತೆ ನಡೆದು ಕೀರ್ತಿಯನ್ನು ಹೊಂದಿರುವರು ಎಂದು ಹೇಳಿದನು.

ಅದಕ್ಕೆ ಭಗವಂತನು 'ವತ್ಸ! ನೀನು ಹೇಳುವ ಮಾತು ಸತ್ಯ. ಆದರೆ ಸಿಂಹವು ಹೇಳಿದ ಮಾತನ್ನು ಹೇಳುತ್ತೇನೆ ಕೇಳು. ಮಗನೂ ಪತ್ನಿಯೂ ಇಬ್ಬರು ಸೇರಿ ರಾಜನ ದೇಹವನ್ನು ಸೀಳಬೇಕು. ಸೀಳಿದ ಭಾಗದಲ್ಲಿ ಎರಡನೇ ಭಾಗವನ್ನು ನನಗೆ ತಂದುಕೊಡಬೇಕು ಎಂದು ಸಿಂಹವು ಹೇಳಿತು. ಅದರ ಮಾತನ್ನು ನನ್ನಂತವನು ಹೇಗೆ ಮೀರುವುದು' ಎಂದು ಹೇಳಿದನು.

ತರುವಾಯ ಮಯೂರಧ್ವಜನು ಹೆಂಡತಿಯನ್ನೂ ಮಗನನ್ನೂ ತಡೆದು ಅವರ ಕೈಯಲ್ಲಿ ಗರಗಸವನ್ನು ಕೊಟ್ಟನು. ಕೇಶವ, ರಾಮ, ನರಸಿಂಹ ಎಂದು ಜಪಿಸುತ್ತಾ ಧೈರ್ಯದಿಂದ ಕೂತುಕೊಂಡನು. ಆ ಪ್ರಕಾರವಾಗಿ ಕೂತಿರುವ ರಾಜನನ್ನು ಇಂದ್ರಾದಿದೇವತೆಗಳು ಬಂದು ನೋಡಿದರು. ರಾಜನ ತಲೆಯ ಮೇಲೆ ಗರಗಸವನ್ನಿಡಲು ಜ್ಞಾನಿಗಳಿಗೂ ಶ್ರಮವಾಯಿತು. ಊರಜನರೆಲ್ಲರೂ ದುಃಖವನ್ನು ಹೊಂದಿದ್ದರು. ರಾಜನ ಮಾತಿನಿಂದ ಕುಮುದ್ವತಿಯು ಗರಗಸವನ್ನು ಹಿಡಿದಳು. ರಾಮ ರಾಮ ಎಂದು ಗಾಯನ ಮಾಡುತ್ತಾ ಆ ಬ್ರಾಹ್ಮಣನೊಡನೆ ಎಲ್ಲರೂ ಕೇಳುವಂತೆ 'ನೃಸಿಂಹ ದೇವರು ಪೂರ್ವದಲ್ಲಿ ಕಂಭವನ್ನು ಸೀಳಿಕೊಂಡು ಬಂದು

ಹಿರಣ್ಯಕಶಿಪುವನ್ನು ಸೀಳಿದಂತೆ ನಾನು ನನ್ನ ಪತಿಯನ್ನು ಸೀಳುವೆನು' ಎಂದು ಹೇಳಿದಳು.

ಆಗ ರಾಜನು ನನ್ನ ತಲೆಯ ಮೇಲೆ ತಾಳೆಹೂವನ್ನು ಇಟ್ಟಂತೆಯೇ ಆಗಿದೆ. ನನಗೆ ಸ್ವಲ್ಪವೂ ನೋವಿಲ್ಲ. ನನ್ನ ತಲೆಯನ್ನು ಸೀಳು ಎಂದನು. ಹಾಗೆಯೇ ಕುಮುದ್ವತಿಯು ಪುತ್ರನಿಂದ ಸಹಿತಳಾಗಿ ಕೃಷ್ಣಾರ್ಜುನರ ಎದುರಿನಲ್ಲಿ ರಾಜನನ್ನು ಸೀಳಿದಳು. ಈ ರೀತಿಯಾಗಿ ರಾಜನನ್ನು ಸೀಳುತ್ತಿರಲು ಮಹತ್ತಾದ ಹಾಹಾಕಾರ ವುಂಟಾಯಿತು. ರಾಜನ ಎಡಕಣ್ಣಿನಲ್ಲಿ ನೀರು ಸುರಿಯಿತು. ಅದನ್ನು ನೋಡಿ ಬ್ರಾಹ್ಮಣರೂಪಿ ಭಗವಂತನು ತಲೆಯು ಸೀಳಲ್ಪಟ್ಟು ಕಣ್ಣು ಸುತ್ತುತ್ತಾ ಇರುವ ರಾಜನೊಡನೆ 'ನನಗೆ ಈ ದಾನವು ಬೇಡ ನೀನು ಅಳುತ್ತಾ ಕೊಡುತ್ತಿರುವೆ. ದುಃಖಪಟ್ಟುಕೊಡುವ ದಾನವನ್ನು ಜ್ಞಾನಿಗಳು ಸ್ವೀಕರಿಸಲಾರರು. ನನಗೆ ಮಗನಿಲ್ಲದೆ ಸ್ವರ್ಗವು ಸಿಗದೆ ಇದ್ದರೆ ಬೇಡ. ಸಿಂಹವು ನನ್ನ ಮಗನನ್ನು ತಿಂದು ತನ್ನ ಸ್ಥಾನಕ್ಕೆ ಹೋಗಲಿ. ಎಡಗಣ್ಣಿನಲ್ಲಿ ನೀರು ಸುರಿಸುತ್ತಾ ಅಳುತ್ತಾ ರಾಜನು ಅರ್ಧದೇಹವನ್ನು ಕೊಡುವನು. ಬ್ರಾಹ್ಮಣನಾದ ನಾನು ಅದನ್ನು ಹೇಗೆ ಸ್ವೀಕರಿಸಲಿ' ಎಂದು ಹೇಳಿ ನನಗೆ ಈ ದಾನವು ಬೇಡ ಎಂದು ಹೇಳುತ್ತಾ ಜನರೆಲ್ಲರೂ ನೋಡುವಂತೆ ಶಿಷ್ಯರೂಪದಿಂದ ಇದ್ದ ಅರ್ಜುನನನ್ನು ಕರೆದುಕೊಂಡು ಹೊರಟೇಹೋದನು.

ಹೋಗುತ್ತಿರುವ ಬ್ರಾಹ್ಮಣನನ್ನು ನೋಡಿ ಕುಮುದ್ವತಿಯು ಸೀಳಿಹೋದ ತಲೆಯನ್ನು ಎರಡು ಕೈಗಳಿಂದ ಒತ್ತಿಹಿಡಿದು ಸುಮುಖಳಾಗಿ 'ಸತ್ಯವ್ರತವುಳ್ಳವರೇ! ದಾನಮಾಡುವವರಲ್ಲಿ ಶ್ರೇಷ್ಠರಾದವರೇ! ನಾನು ಸೀಳಿದ ನಿಮ್ಮನ್ನು ಬ್ರಾಹ್ಮಣರು ಬಿಟ್ಟು ಹೋಗುತ್ತಿದ್ದಾರೆ. ದೇಹಾರ್ಧವನ್ನು ಯಾಚಿಸಿರುವ ಅವರನ್ನು ಹೋಗದಂತೆ ನಿಲ್ಲಿಸಿರಿ. ಅವರು ದೇಹವನ್ನು ಸ್ವೀಕರಿಸದೆ ಹೋದರೆ ನಿಮ್ಮ ಕೀರ್ತಿಯು ನಿಷ್ಫಲವಾಗುವುದು ಎಂದು ಹೇಳಿದಳು.

ಆಗ ರಾಜನು 'ಸೀಳಲ್ಪಟ್ಟ ತಲೆಯನ್ನು ಒತ್ತಿಹಿಡಿದುಕೊಂಡಿದ್ದಿ. ಆದುದರಿಂದ ಕಾಡಿಗೆ ಹೋಗುವ ಬ್ರಾಹ್ಮಣರ ಹತ್ತಿರ ಹೇಳುತ್ತೇನೆ. ಬ್ರಾಹ್ಮಣರೇ ಹೋಗಬೇಡಿರಿ. ನನ್ನ ಮಾತನ್ನು ಕೇಳಿ ಹೋಗಿರಿ. ನನ್ನ ಎಡಕಣ್ಣಿನಲ್ಲಿ ನೀರು ಬರಲಿಕ್ಕೆ ಕಾರಣವನ್ನು ಹೇಳುತ್ತೇನೆ. ನನ್ನ ಬಲಭಾಗವು ಬ್ರಾಹ್ಮಣರಿಗೋಸ್ಕರ ಸಾರ್ಥಕವಾಯಿತು. ಎಡಭಾಗವು ವ್ಯರ್ಥವಾಗಿ ಹೋಗುವುದಲ್ಲಾ ಎಂದು ದುಃಖವುಂಟಾಗಿ ಕಣ್ಣೀರು ಬಂತು. ತೀಕ್ಷ್ಣವಾದ ಗರಗಸದಿಂದ ಆದ ಗಾಯದಿಂದ ಕಣ್ಣೀರು ಬರುವುದಲ್ಲ.

ಆದ್ದರಿಂದಲೇ ಬ್ರಾಹ್ಮಣರಿಗೆ ಉಪಯೋಗವಿಲ್ಲದ ಎಡಭಾಗದ ಕಣ್ಣಿನಿಂದಲೇ ನೀರು ಬರುತ್ತಿದೆ' ಎಂದು ಹೇಳಿದನು.

ಈ ಪ್ರಕಾರವಾಗಿ ರಾಜನು ಹೇಳಲು ಭಗವಂತನು ತನ್ನ ನಿಜರೂಪವನ್ನು ತೋರಿಸಿದನು. ವೀರನಾದ ಮಯೂರಧ್ವಜನನ್ನು ಆಲಿಂಗನ ಮಾಡುವವನಾಗಿ 'ರಾಜಶ್ರೇಷ್ಠ! ಮಯೂರಧ್ವಜ! ಬಹಳವಾಗಿ ನಿನ್ನನ್ನು ಪರೀಕ್ಷಿಸಿದೆನು. ಪತ್ನೀಪುತ್ರರಿಂದ ಸಹಿತನಾಗಿ ಯಜ್ಞವನ್ನು ಮಾಡು. ನಿನ್ನ ಮಗ ತಾಮ್ರಧ್ವಜನಿಂದ ಯುದ್ಧದಲ್ಲಿ ನಾನೂ ಅರ್ಜುನನೂ ಸಂತೋಷವನ್ನು ಹೊಂದಿದೆವು. ಸೈನ್ಯಸಹಿತರಾದ ನಾವು ಮೂರ್ಛಿತರಾದೆವು. ನನಗೆ ಅರ್ಧದೇಹವನ್ನು ಕೊಟ್ಟೆ, ಆದುದರಿಂದ ನಿನ್ನ ಯಾಗದಲ್ಲಿ ನಾನು ಕೆಲಸವನ್ನು ಮಾಡುವೆನು. ನಾನು ಭಕ್ತಪರಾಧೀನನು. ನಿನ್ನ ಮಗನಿಂದ ಭಕ್ತಿಯಿಂದ ಜಿತನಾಗಿದ್ದೇನೆ. ಧರ್ಮರಾಜನ ಕುದುರೆಯನ್ನೂ ನೀನೇ ತೆಗೆದುಕೊ. ಎರಡು ಕುದುರೆಗಳನ್ನು ಹೋಮಮಾಡಿ ಕೀರ್ತಿಯನ್ನು ಹೊಂದುವವನಾಗು' ಎಂದು ಹೇಳಿದನು.

ಆಗ ಮಯೂರಧ್ವಜರಾಜನು ''ಶ್ರೀಪತೇ! ವಾಸುದೇವ! ನಾನು ಪರಮಧನ್ಯನಾದೆನು. ಗೋವಿಂದ! ನಿನ್ನನ್ನು ನೋಡಿದ ಮೇಲೆ ನನಗೆ ಯಜ್ಞವೇನು ಬೇಕಾಗಿದೆ? ನಿನ್ನನ್ನು ನೋಡಿದ ಮೇಲೆ ಕೀರ್ತನ ಮಾಡಿದ ಮೇಲೆ ಸ್ತೋತ್ರ ಮಾಡಿದ ಮೇಲೆ ಕೋಟಿಯಜ್ಞಗಳನ್ನು ಮಾಡಿದ ಪುಣ್ಯವು ಬರುವುದು. ಭಗವಂತನೇ! ನೀನು ಕಾರ್ಯವನ್ನು ಮಾಡುವೆನೆಂದು ಹೇಳಿದೆಯಲ್ಲ! ಹಾಗಿದ್ದರೆ ನನ್ನನ್ನೂ ನನ್ನ ಮಕ್ಕಳನ್ನೂ ಪತ್ನಿಯನ್ನೂ ಎಲ್ಲರನ್ನೂ ನಿನ್ನ ಹೃದಯದಲ್ಲಿ ಇಟ್ಟುಕೊ. ನಿನ್ನನ್ನು ಹೊಂದಿದ ಮೇಲೆ ನಾನು ಯಜ್ಞವನ್ನು ಮಾಡಿದ ಪಕ್ಷದಲ್ಲಿ ವೇದವೇದಾಂಗಶಾಸ್ತ್ರಪಾರಂಗತರಾದ ಬ್ರಾಹ್ಮಣರು ನಗುವರು. ಛಳಿಯಿಂದ ಪೀಡಿತರಾದವನು ಉರಿಯುವ ದೊಡ್ಡ ಬೆಂಕಿಯನ್ನು ಬಿಟ್ಟು ಬೆಂಕಿಯ ಕಿಡಿಯನ್ನು ಆಶ್ರಯಿಸುವುದುಂಟೆ? ಭಗವಂತನಾದ ನಿನ್ನನ್ನೇ ಹೊಂದಿ ಯಾಗವನ್ನು ಮಾಡಿದ ಪಕ್ಷದಲ್ಲಿ ಯಮದೇವರು ಶಿಕ್ಷಿಸುವರು. ನನ್ನ ಮಗನು ಕೃಷ್ಣಾರ್ಜುನರನ್ನು ಬಿಟ್ಟು ಬಂದನು. ನನ್ನ ಭಾಗ್ಯೋದಯದಿಂದ ನರನಾರಾಯಣರು ಬಂದಿದ್ದೀರಿ. ಭಗವಂತನೇ ನಿನಗೆ ನಮಸ್ಕಾರವು. ಇತ್ಯಾದಿ ರೀತಿಯಿಂದ ಸ್ತೋತ್ರ ಮಾಡಿದನು.

ಈ ರೀತಿಯಿಂದ ಸ್ತೋತ್ರ ಮಾಡಲ್ಪಟ್ಟ ಭಗವಂತನು ಸಂತುಷ್ಟನಾಗಿ ಅರ್ಜುನನಿಗೆ ಆ ರಾಜನ ಭಕ್ತಿಯನ್ನು ತೋರಿಸುವವನಾಗಿ ಅವನ ಭಕ್ತಿಗೆ ಮೆಚ್ಚಿ ಮೂರು ರಾತ್ರಿ ಅಲ್ಲಿಯೇ ವಾಸಮಾಡಿದನು. ಮಯೂರಧ್ವಜರಾಜನು ಸಮಸ್ತ

ಧನವನ್ನೂ ಜೀವಿತವನ್ನೂ ಭಗವಂತನಿಗೆ ಸಮರ್ಪಿಸಿ ಅರ್ಜುನನನ್ನು ಆಲಿಂಗಿಸಿ ಮಿತ್ರರಿಂದ ಕೂಡಿಕೊಂಡು ಭಗವಂತನಿಂದ ಸಹಿತನಾಗಿ ಅರ್ಜುನನ ಕುದುರೆಯನ್ನು ರಕ್ಷಿಸುತ್ತಾ ಮುಂದೆ ಹೋದನು.



## ಸುವರ್ಣಷ್ಠೀವಿಯ ಕಥೆ [1]

ನಾರದರೂ ಪರ್ವತರೂ ಸೃಂಜಯನ ಮನೆಯಲ್ಲಿ ಅವನಿಂದ ಸತ್ಕೃತರಾಗಿ ಸ್ವಲ್ಪ ಸಮಯವಾಸ ಮಾಡಿದರು. ಆ ರಾಜನಿಂದ ವಿಧಿಪ್ರಕಾರವಾಗಿ ಕೆಲವು ಸಮಯ ಪೂಜಿಸಲ್ಪಟ್ಟವರಾಗಿ ಮಳೆಗಾಲವು ಮುಗಿದಮೇಲೆ ಆ ರಾಜನ ಮನೆಯಿಂದ ಹೊರಟುಹೋಗುವಾಗ ಪರ್ವತರು ನಾರದರೊಡನೆ ನಾವು ಈ ರಾಜನ ಮನೆಯಲ್ಲಿ ಅತ್ಯಂತ ಸತ್ಕೃತರಾಗಿ ವಾಸಮಾಡಿದೆವು. ಅದಕ್ಕೆ ನಾವು ಮಾಡಬೇಕಾದುದನ್ನು ಯೋಚಿಸಿರಿ ಎಂದರು. ಅದಕ್ಕೆ ನಾರದರು ತನ್ನ ಸೋದರಅಳಿಯನಾದ ಪರ್ವತರೊಡನೆ 'ಎಲ್ಲಕ್ಕೂ ನೀನು ಸಮರ್ಥನಾಗಿದ್ದಿ. ರಾಜನ ಹತ್ತಿರ ವರವನ್ನು ಕೇಳುವಂತೆ ಹೇಳು. ಯಾವುದನ್ನು ಇಚ್ಛಿಸುತ್ತಾನೋ ಅದನ್ನು ಹೊಂದಲಿ. ನಿನಗೆ ಅಭಿಪ್ರಾಯವಿದ್ದರೆ ನಮ್ಮ ತಪಸ್ಸಿನಿಂದ ಅವನು ಸಿದ್ಧಿಯನ್ನು ಹೊಂದಲಿ ಎಂದರು. ತರುವಾಯ ನಾರದರ ಅನುಮತಿಯನ್ನು ಪಡೆದು ಪರ್ವತರು ರಾಜನನ್ನು ಕರೆದು 'ರಾಜನೇ! ನೀನು ಮಾಡಿರುವ ಸತ್ಕಾರಗಳಿಂದ ನಾವು ಸಂತೋಷವನ್ನು ಹೊಂದಿರುವೆವು. ನಮ್ಮ ಅನುಜ್ಞೆಯಿಂದ ವರವನ್ನು ಕೇಳು. ಇದರಿಂದ ದೇವತೆಗಳಿಗೆ ಹಿಂಸೆಯಿರಬಾರದು. ಅದು ಮನುಷ್ಯರಿಗೂ ನಾಶವಾಗಬಾರದು' ಎಂದು ಹೇಳಿದರು. ಆಗ ಸೃಂಜಯನು 'ತಾವು ನನ್ನ ಮೇಲೆ ಸಂತುಷ್ಟರಾಗಿದ್ದರೆ ಅಷ್ಟೇ ಸಾಕು. ಅದೇ ನನಗೆ ವರವು. ಅದೇ ನನಗೆ ಪರಮಲಾಭವು' ಎಂದನು.

ಆ ಪ್ರಕಾರವಾಗಿ ಹೇಳುವ ರಾಜನ ಹತ್ತಿರ ಪರ್ವತರು 'ರಾಜನೇ! ನಿನ್ನ ಮನಸ್ಸಿನಲ್ಲಿ ಬಹುಕಾಲದಿಂದ ಇರುವ ಸಂಕಲ್ಪವು ಸಿದ್ಧಿಸುವುದು. ಅಂದರೆ ಒಳ್ಳೇ ವೀರ್ಯವುಳ್ಳ ದೃಢವ್ರತವುಳ್ಳ ಇಂದ್ರದೇವರಂತೆ ಕಾಂತಿಯುಳ್ಳ ಮಗನನ್ನು ಹೊಂದುವಿ. ಈರೀತಿಯಾಗಿ ನಿನ್ನ ಇಷ್ಟವು ನಡೆಯುವುದು. ಆದರೆ ಅವನು ಆಯುಷ್ಯವುಳ್ಳವನಾಗಲಾರನು. ಇಂದ್ರದೇವರನ್ನು ತಿರಸ್ಕಾರ ಮಾಡಬೇಕೆಂದು ನಿನಗೆ

1. ಮ.ಭಾ.ಶಾಂ.ಪ. (ಅಪ) ಅ-31

ಈ ರೀತಿ ಸಂಕಲ್ಪವಿರುವುದು. ನಿನ್ನ ಮಗನು ಬಂಗಾರವನ್ನೇ ಉಗುಳುವನು. ಆದುದರಿಂದ ಸುವರ್ಣಷ್ಠೀವಿ ಎಂದು ಹೆಸರಾಗುವುದು. ಅವನು ಇಂದ್ರದೇವರಂತೆ ಕಾಂತಿಉಳ್ಳವನು. ಅವನನ್ನು ದೇವೇಂದ್ರನಿಂದ ರಕ್ಷಿಸಬೇಕು' ಎಂದು ಹೇಳಿದರು. ಆ ಮಾತನ್ನು ಕೇಳಿ ಸೃಂಜಯನು 'ನನ್ನ ಮಗನು ಅಲ್ಪಾಯುಷ್ಯವುಳ್ಳವನಾಗಬಾರದು. ನಿಮ್ಮಿಬ್ಬರ ತಪೋಬಲದಿಂದ ಪೂರ್ಣವಾದ ಆಯುಷ್ಯವುಳ್ಳವನಾಗಬೇಕು' ಎಂದು ಕೇಳಿಕೊಂಡನು. ಆಗ ಪರ್ವತರು ಇಂದ್ರದೇವರ ಅಭಿಪ್ರಾಯದಿಂದ ಅಂದರೆ ಇಂದ್ರದೇವರಿಗೆ ತಾನು ವರ ಕೊಡುವುದರಿಂದ ಅಸಮಾಧಾನವುಂಟಾಗಬಹುದು ಎಂಬ ಅಭಿಪ್ರಾಯದಿಂದ ಒಂದೂ ಮಾತಾಡಲಿಲ್ಲ. ನಾರದರು ದೀನನಾದ ಆ ರಾಜನೊಡನೆ ಯಮಲೋಕವನ್ನು ಹೊಂದಿರುವ ನಿನ್ನ ಪ್ರಿಯಪುತ್ರನನ್ನು ನಾನು ಪುನಃ ತಂದುಕೊಡುವೆನು. ನೀನು ದುಃಖಪಡದಿರು ಎಂದು ರಾಜನೊಡನೆ ಹೇಳಿ ಇಬ್ಬರೂ ಅಂದರೆ ನಾರದರೂ ಪರ್ವತರೂ ಇಚ್ಛಾನುಸಾರವಾಗಿ ಹೊರಟುಹೋದರು. ಸೃಂಜಯನೂ ತನ್ನ ಮನೆಯನ್ನು ಪ್ರವೇಶಿಸಿದನು.

ಸೃಂಜಯನಿಗೆ ಸ್ವಲ್ಪ ಸಮಯದಲ್ಲಿ ಮಹಾವೀರ್ಯವುಳ್ಳ ತೇಜಸ್ಸಿನಿಂದ ಜ್ವಲಿಸುವಂತೆ ಇರುವ ಮಗನು ಹುಟ್ಟಿದನು. ಅವನು ಕಾಲಕ್ರಮದಿಂದ ಬೆಳೆದನು. ಅವನಿಗೆ ಸುವರ್ಣಷ್ಠೀವಿ ಎಂಬ ಸಾರ್ಥಕವಾದ ಹೆಸರು ಅಂದರೆ ಬಂಗಾರವನ್ನೇ ಉಗುಳುತ್ತಿದ್ದನು. ಈ ಅದ್ಭುತವಾದ ವಿಷಯವು ಲೋಕದಲ್ಲೆಲ್ಲಾ ಪ್ರಸಿದ್ಧವಾಯಿತು. ಪರ್ವತರೂ ನಾರದರೂ ವರವನ್ನು ಕೊಟ್ಟ ವಿಷಯವು ಇಂದ್ರದೇವರಿಗೆ ತಿಳಿಯಿತು. ಇಂದ್ರದೇವರು ತನಗೆ ತಿರಸ್ಕಾರವುಂಟಾಗುವುದೆಂದು ಯೋಚಿಸಿ ಬೃಹಸ್ಪತ್ಯಾಚಾರ್ಯರ ಹತ್ತಿರ ಕೇಳಿ ಅವರ ಅಭಿಪ್ರಾಯದಂತೆ ಆ ಮಗುವನ್ನು ಕೊಲ್ಲಬೇಕೆಂದು ಮೂರ್ತಿಮತ್ತಾದ ವಜ್ರಾಯುಧದೊಡನೆ ನೀನು ಹುಲಿಯಾಗಿ ಹೋಗಿ ಆ ರಾಜಪುತ್ರನನ್ನು ಸಂಹರಿಸು ಎಂದರು. ಸೃಂಜಯನ ಮಗನು ಒಳ್ಳೇ ಹಣವಂತನಾಗಿ ತನ್ನನ್ನೇ ಮೀರಬಹುದು ಎಂಬ ಇಂದ್ರದೇವರ ಅಭಿಪ್ರಾಯವಿದ್ದಿತು. ಈ ಅಭಿಪ್ರಾಯದಿಂದಲೇ ಆ ಮಗುವನ್ನು ಕೊಲ್ಲಬೇಕೆಂದು ಹೇಳಲು ವಜ್ರಾಯುಧವು ಅವಕಾಶವನ್ನು ನೋಡುತ್ತಿತ್ತು. ಸೃಂಜಯನು ಇಂದ್ರದೇವರಂತೆ ಕಾಂತಿಯುಳ್ಳ ಮಗನನ್ನು ಹೊಂದಿ ಅಂತಃಪುರ ಸಹಿತನಾಗಿ ವನದಲ್ಲಿಯೇ ನಿತ್ಯವೂ ವಾಸಿಸುತ್ತಿದ್ದನು. ತರುವಾಯ ಒಂದುದಿನ ಭಾಗೀರಥಿಯ ತೀರದಲ್ಲಿ ದಾದಿಯಿಂದ ಸಹಿತನಾಗಿ ಗಜಶ್ರೇಷ್ಠದಂತೆ ಪರಾಕ್ರಮಿಯಾದ ಐದು ವರ್ಷದ ಆ ಬಾಲಕನು ಆಡುತ್ತಿದ್ದನು. ಆಗ ವಜ್ರಾಯುಧವು ದೊಡ್ಡ ಹುಲಿಯ ರೂಪವುಳ್ಳದ್ದಾಗಿ ಮಹಾಬಲಿಷ್ಠನಾದ ಆ

ಬಾಲಕನ ಮೇಲೆ ಹಾರಿ ನಡುಗುತ್ತಿರುವ ಆ ಬಾಲಕನನ್ನು ಪುಡಿಪುಡಿ ಮಾಡಿ ಕೊಂದು ಹಾಕಿ ಇಂದ್ರದೇವರ ಇಚ್ಛೆಯಿಂದ ಮರೆಯಾಗಿ ಹೋಯಿತು. ಮಗನು ಸತ್ತು ಕೆಳಗೆ ಬಿದ್ದನು. ದಾದಿಯು ಗಟ್ಟಿಯಾಗಿ ಕೂಗಿಕೊಂಡಳು. ದಾದಿಯು ಅಳುವ ಶಬ್ದವನ್ನು ಕೇಳಿ ಸೃಂಜಯರಾಜನೇ ಓಡಿಬಂದನು. ಸತ್ತು ಬಿದ್ದಿರುವ ಮಗನನ್ನು ನೋಡಿದನು. ಎದೆಸೀಳಿ ಹೋಗಿರುವ ಮೈಯೆಲ್ಲಾ ರಕ್ತವಾಗಿರುವ ಮಗನನ್ನು ತೊಡೆಯಲ್ಲಿ ಇಟ್ಟು ತುಂಬಾ ದುಃಖವನ್ನು ಹೊಂದಿ ಅಳುತ್ತಾ ಕೂತನು. ತಾಯಿಯರೂ ಅಳುತ್ತಾ ಶೋಕದಿಂದ ಓಡಿಬಂದರು. ತರುವಾಯ ಆ ರಾಜನು ನಾರದರನ್ನು ಸ್ಮರಿಸಿದನು. ನಾರದರು ರಾಜನು ತನ್ನನ್ನು ಸ್ಮರಿಸಿದ್ದನ್ನು ತಿಳಿದುಕೊಂಡು ಅಲ್ಲಿಗೆ ಬಂದರು. ರಾಜನಿಗೆ ಉಪದೇಶಿಸಿದರು.

ರಾಜನೇ! ಯಾಕೆ ದುಃಖಪಡುವಿ? ನೀನೂ ನಾನೂ ಎಲ್ಲ ಪ್ರಜೆಗಳೂ ಒಂದುದಿನ ಸಾಯಲೇಬೇಕು. ಪೂರ್ವದ ರಾಜರು ಎಷ್ಟು ಜನರು ಮೃತರಾಗಿರುವರು ಕೇಳು. ಪೂರ್ವದಲ್ಲಿ ಅವೀಕ್ಷಿತ್ ರಾಜನ ಮಗನಾದ ಮರುತ್ತ ಎಂಬ ರಾಜನು ಇದ್ದನು. ಅವನು ಇಂದ್ರದೇವರನ್ನೇ ಸ್ಪರ್ಧಿಸಿದ್ದನು. ಇಂದ್ರದೇವರ ಪ್ರಿಯವನ್ನು ಇಚ್ಛಿಸಿ ಬೃಹಸ್ಪತ್ಯಾಚಾರ್ಯರು ಅವನಿಂದ ಯಜ್ಞಮಾಡಿಸಲಿಕ್ಕೆ ಇಚ್ಛಿಸಲಿಲ್ಲ. ಆಗ ಬೃಹಸ್ಪತ್ಯಾಚಾರ್ಯರಿಗೆ ಕ್ಲೇಶವನ್ನು ಉಂಟುಮಾಡುವುದಕ್ಕೋಸ್ಕರ ಅವರ ತಮ್ಮನಾದ ಸಂವರ್ತನೇ ಅವನಿಂದ ಯಜ್ಞವನ್ನು ಮಾಡಿಸಿದನು. ಆ ರಾಜನ ಕಾಲದಲ್ಲಿ ಕೃಷಿ ಮಾಡದೇನೇ ಭೂಮಿಯಲ್ಲಿ ಸಸ್ಯಗಳು ಬೆಳೆಯುತ್ತಿದ್ದವು. ಆ ರಾಜನು ಮಾಡಿದ ಯಜ್ಞದಲ್ಲಿ ವಿಶ್ವೇದೇವತೆಗಳೇ ಸಭಿಕರಾಗಿದ್ದರು. ಮರುತ್ತುಗಳು ಬಡಿಸುತ್ತಿದ್ದರು. ದೇವತೆಗಳೆಲ್ಲ ಸೋಮಪಾನ ಮಾಡಿದರು. ಆ ರಾಜನು ದೇವತೆಗಳು ಗಂಧರ್ವರು ಇತ್ಯಾದಿ ಸಮಸ್ತರನ್ನೂ ಅತಿಕ್ರಮಿಸಿ ದಕ್ಷಿಣೆ ಕೊಟ್ಟನು. ಆ ರಾಜನು ಧರ್ಮ ಜ್ಞಾನ ವೈರಾಗ್ಯ ಐಶ್ವರ್ಯ ಈ ನಾಲ್ಕು ಗುಣಗಳಿಂದಲೂ ನಿನಗಿಂತಲೂ ಅತಿಶ್ರೇಷ್ಠನಾದವನು. ಅಂತಹ ರಾಜನೂ ಮೃತನಾಗಿರುವನು. ಅವನು ನಿನ್ನ ಮಗನಿಕಿಂತಲೂ ಅತ್ಯಂತ ಶ್ರೇಷ್ಠನಾದವನು. ನಿನ್ನ ಮಗನು ಒಬ್ಬ ಬ್ರಾಹ್ಮಣನಿಗೆ ದಕ್ಷಿಣೆ ಕೊಡಲಿಲ್ಲ. ಒಂದು ಯಜ್ಞವನ್ನೂ ಮಾಡಿಲ್ಲ. ಅಂತಹ ಮಗನು ಮೃತನಾದನು ಎಂದು ದುಃಖವನ್ನು ಹೊಂದಬೇಡ.

ಮತ್ತೂ ಅನೇಕ ಬಂಗಾರವನ್ನು ಕುರುಕ್ಷೇತ್ರದಲ್ಲಿ ಯಜ್ಞವನ್ನು ಮಾಡಿ ಬ್ರಾಹ್ಮಣರಿಗೆ ದಾನಮಾಡಿದ ಸುಹೋತ್ರ ಎಂಬ ರಾಜನೂ, ಸಾವಿರಾರು ಕುದುರೆ ಗೋವು ಇತ್ಯಾದಿಗಳನ್ನು ದಾನಮಾಡಿ ಅನೇಕ ಯಾಗಗಳನ್ನು ಮಾಡಿದ

ಅಂಗರಾಜನೂ, ಅನೇಕ ದಾನಮಾಡಿದ ಶಿಬಿರಾಜನೂ, ಸಾವಿರ ಅಶ್ವಮೇಧ ಯಾಗಗಳನ್ನೂ ನೂರು ರಾಜಸೂಯಯಾಗಗಳನ್ನೂ ಮಾಡಿರುವ ಭರತರಾಜನೂ, ಮೃತನಾಗಿರುವರು. ಶ್ರೀರಾಮಚಂದ್ರದೇವರೂ ಧರ್ಮದಿಂದ ರಾಜ್ಯಪರಿಪಾಲನೆ ಮಾಡಿ ಹನ್ನೊಂದು ಸಾವಿರ ವರ್ಷ ರಾಜ್ಯಪರಿಪಾಲನೆ ಮಾಡಿ ವೈಕುಂಠಲೋಕಕ್ಕೆ ಹೋಗಿರುವರು. ಹಾಗೆಯೇ ಭಗೀರಥರಾಜನೂ, ದಿಲೀಪರಾಜನೂ, ಮಾಂಧಾತ ರಾಜನೂ, ಯಯಾತಿರಾಜನೂ, ಸಗರರಾಜನೂ, ಪೃಥುರಾಜನೂ, ಎಲ್ಲರೂ ಅನೇಕ ಯಾಗಗಳನ್ನು ಮಾಡಿದವರು ಅನೇಕ ದಾನಗಳನ್ನು ಮಾಡಿರುವರು. ನಿನಗಿಂತ ಧರ್ಮಜ್ಞಾನ ವೈರಾಗ್ಯ ಐಶ್ವರ್ಯ ಎಂಬ ನಾಲ್ಕು ಗುಣಗಳಿಂದಲೂ ಶ್ರೇಷ್ಠರಾದವರು. ನಿನ್ನ ಮಗನಿಗಿಂತ ಅತ್ಯಂತ ಶ್ರೇಷ್ಠರಾದವರು. ಅವರೆಲ್ಲರೂ ಮೃತರಾಗಿರುವರು. ನಿನ್ನ ಮಗನು ಮೃತನಾದನೆಂದು ದುಃಖಿಸಬೇಡ ಎಂದು ಸಮಾಧಾನಪಡಿಸಿ, ತರುವಾಯ ಇಂದ್ರದೇವರ ಅನುಮತಿಯಿಂದ ಅವನನ್ನು ಬದುಕಿಸಿದರು. ತರುವಾಯ ಸುವರ್ಣಷ್ಠೀವಿಯು ತಂದೆಯನ್ನು ಸಂತೋಷಪಡಿಸಿದನು. ತಂದೆಯು ಅನಂತರ ಸಾವಿರದ ನೂರು ವರ್ಷ ರಾಜ್ಯಭಾರ ಮಾಡಿದನು. ಅನೇಕ ಯಾಗಗಳನ್ನು ಮಾಡಿ ಅನೇಕ ಮಕ್ಕಳನ್ನು ಪಡೆದು ಸ್ವರ್ಗವನ್ನು ಹೊಂದಿದನು.



## ಶೀಲದ ಶ್ರೇಷ್ಠತ್ವವು [1]

ಪ್ರಹ್ಲಾದನು ತನ್ನ ಉತ್ತಮವಾದ ಶೀಲದಿಂದ ಇಂದ್ರದೇವರ ರಾಜ್ಯವನ್ನು ಅಪಹರಿಸಿದನು. ಮೂರುಲೋಕಗಳನ್ನೂ ತನ್ನ ವಶಮಾಡಿಕೊಂಡನು. ತರುವಾಯ ಇಂದ್ರದೇವರು ಬೃಹಸ್ಪತ್ಯಾಚಾರ್ಯರ ಬಳಿಗೆ ಹೋಗಿ ಕೈ ಮುಗಿದುಕೊಂಡು ತನಗೆ ಶ್ರೇಯಸ್ಸನ್ನು ಉಪದೇಶಿಸಬೇಕೆಂದು ಕೇಳಿದರು. ಅದಕ್ಕೆ ಬೃಹಸ್ಪತ್ಯಾಚಾರ್ಯರು ಇಂದ್ರದೇವರಿಗೆ ಶೇಯಸ್ಸನ್ನು ಉಪದೇಶಿಸಿದರು. ಇನ್ನೂ ವಿಶೇಷವಿದೆಯಾ? ಎಂದು ಇಂದ್ರದೇವರು ಕೇಳಿದರು. ಅದಕ್ಕೆ ಬೃಹಸ್ಪತ್ಯಾಚಾರ್ಯರು 'ಇದೆ. ಶುಕ್ರಾಚಾರ್ಯರ ಹತ್ತಿರ ಹೋಗಿ ಕೇಳು' ಎಂದರು. ಶುಕ್ರಾಚಾರ್ಯರು ಇಂದ್ರದೇವರಿಗೆ ಶ್ರೇಯಸ್ಸನ್ನು ಹೇಳಿ ಇನ್ನೂ ಹೆಚ್ಚಿನ ವಿಶೇಷವನ್ನು ಪ್ರಹ್ಲಾದನ ಹತ್ತಿರ ಕೇಳಬೇಕೆಂದರು.

---

1. ಮ.ಭಾ. ಶಾಂ.ಪ. ಅ-124

ತರುವಾಯ ಇಂದ್ರದೇವರು ಬ್ರಾಹ್ಮಣರೂಪದಿಂದ ಪ್ರಹ್ಲಾದನಿದ್ದಲ್ಲಿಗೆ ಬಂದು ಪ್ರಹ್ಲಾದನನ್ನು ಸ್ತೋತ್ರಮಾಡಿ ಶ್ರೇಯಸ್ಸನ್ನು ತಿಳಿಯಲಿಕ್ಕೆ ಇಚ್ಛಿಸುತ್ತೇನೆ ಎಂದು ಹೇಳಿದರು. ಆಗ ಪ್ರಹ್ಲಾದನು ನನಗೆ ಮೂರು ಲೋಕಗಳನ್ನು ಆಳಬೇಕು. ನನಗೆ ಸಮಯವೇ ಇಲ್ಲ. ಆದುದರಿಂದ ನಾನು ನಿನಗೆ ಉಪದೇಶಿಸಲಾರೆನು ಎಂದನು. ಆಗ ಇಂದ್ರದೇವರು ರಾಜನ್! ನಿನಗೆ ಈಗ ಸಮಯವಿಲ್ಲದೆ ಯಾವಾಗ ಸಮಯವಿದೆಯೋ ಆಗ ಬರುವೆನು. ಆಗ ಉಪದೇಶಮಾಡಿದರೆ ಸಾಕು ಎಂದರು. ತರುವಾಯ ಪ್ರಹ್ಲಾದನು ಆ ಬ್ರಾಹ್ಮಣನಲ್ಲಿ ಪ್ರೀತಿಯುಳ್ಳವನಾಗಿ ಉಪದೇಶ ಮಾಡಿದನು. ಬ್ರಾಹ್ಮಣನೂ ಪ್ರಹ್ಲಾದನಿಗೆ ಅವನ ಇಚ್ಛಾನುಸಾರವಾಗಿ ಗುರುಶೂಶ್ರೂಷೆಯನ್ನು ಮಾಡಿದನು. ಅನೇಕಸಲ ಪ್ರಹ್ಲಾದನೊಡನೆ ನಿನಗೆ ಈ ಮೂರುಲೋಕದ ರಾಜ್ಯವು ಹೇಗೆ ಬಂದಿತು ಎಂದು ಕೇಳಿದನು.

ಅದಕ್ಕೆ ಪ್ರಹ್ಲಾದನು 'ನಾನು ರಾಜನೆಂದು ಯಾರ ಬಗ್ಗೆಯೂ ಅಸೂಯ ಪಡುವುದಿಲ್ಲ. ಅವರಿಗೆ ಬೇಕಾದದ್ದನ್ನು ನಾನು ಕೊಡುವೆನು. ಆದರಿಂದ ಎಲ್ಲರೂ ನನ್ನೊಡನೆ ವಿಶ್ವಾಸದಿಂದ ಮಾತಾಡುತ್ತಾರೆ. ಬೇಕಾದ್ದನ್ನು ತಂದುಕೊಡುತ್ತಾರೆ. ಅವರ ಕಾರ್ಯವನ್ನು ಮಾಡುವ, ಸೇವಾಮಾಡುವ, ಅಹಂಕಾರರಹಿತನಾದ, ಧರ್ಮದಲ್ಲಿ ಮನಸ್ಸುಳ್ಳ, ಕ್ರೋಧವನ್ನು ಜಯಿಸಿರುವ, ಇಂದ್ರಿಯನಿಗ್ರಹವುಳ್ಳ ನನಗೆ ಶಾಸ್ತ್ರಜ್ಞರು ಬೇಕಾದದ್ದನ್ನೆಲ್ಲಾ ಉಪದೇಶಿಸುವರು ಇತ್ಯಾದಿಗಳನ್ನು ಹೇಳಿದನು. ತರುವಾಯ ಪ್ರಹ್ಲಾದನು ಬ್ರಾಹ್ಮಣನೊಡನೆ ನೀನು ನನ್ನನ್ನು ಸರಿಯಾಗಿ ಸೇವಾಮಾಡಿರುವಿ. ಆದುದರಿಂದ ನಿನ್ನ ಮೇಲೆ ಪ್ರೀತಿಯುಳ್ಳವನಾಗಿರುವೆನು. ಬೇಕಾದ ವರವನ್ನು ಕೇಳಿಕೊ. ಕೊಡುವೆನು ಎಂದು ಹೇಳಿದನು. ಆಗ ಬ್ರಾಹ್ಮಣನು ಇಷ್ಟು ಕೇಳಿದ್ದೇ ಸಾಕು ಎಂದನು. ಪ್ರಹ್ಲಾದನು ಅವಶ್ಯವಾಗಿ ವರವನ್ನು ಕೇಳಬೇಕು ಎಂದನು.

ಆಗ ಬ್ರಾಹ್ಮಣನು ರಾಜನೇ! ನೀನು ಪ್ರಸನ್ನನಾಗಿರುವ ಪಕ್ಷದಲ್ಲಿ ನನಗೆ ಪ್ರಿಯವನ್ನು ಇಚ್ಛಿಸುವ ಪಕ್ಷದಲ್ಲಿ ನಿನ್ನ ಶೀಲವನ್ನು ಕೊಡು. ಅದನ್ನು ನಾನು ಅಪೇಕ್ಷಿಸುವೆನು ಎಂದನು. ಅದನ್ನು ಕೇಳಿ ಪ್ರಹ್ಲಾದನು ಈ ಬ್ರಾಹ್ಮಣನು ಸಾಮಾನ್ಯ ಮನಸ್ಸುಳ್ಳವನಲ್ಲ ಎಂದು ಭಯವನ್ನು ಹೊಂದಿದನು. ಆಶ್ಚರ್ಯವುಳ್ಳವನಾಗಿ ಹಾಗೆಯೇ ಆಗಲಿ ಎಂದನು. ಈ ರೀತಿಯಾಗಿ ವರವನ್ನು ಕೊಟ್ಟು ಪ್ರಹ್ಲಾದನು ದುಃಖವನ್ನು ಹೊಂದಿದನು. ವರವನ್ನು ಪಡೆದು ಆ ಬ್ರಾಹ್ಮಣನು ಹೊರಟುಹೋದಮೇಲೆ ಪ್ರಹ್ಲಾದನು ಯೋಚನೆ ಮಾಡುತ್ತಾ ಇದ್ದನು. ಈರೀತಿಯಾಗಿ ಪ್ರಹ್ಲಾದನು ಯೋಚನೆ ಮಾಡುತ್ತಾ ಇರಲು ಅವನ ದೇಹದಿಂದ

ತೇಜೋಮಯವಾದ ರೂಪವು ಹೊರಟಿತು. ಅದನ್ನು ನೋಡಿ ಪ್ರಹ್ಲಾದನು ನೀನು ಯಾರು? ಎಂದು ಕೇಳಿದರು. ಅದಕ್ಕೆ ಆ ರೂಪವು ನಾನು ಶೀಲವು. ನೀನು ನನ್ನನ್ನು ಪರಿತ್ಯಾಗ ಮಾಡಿದಿ. ನಾನು ಹೊರಟುಹೋಗುತ್ತೇನೆ. ಯಾವ ಬ್ರಾಹ್ಮಣಶ್ರೇಷ್ಠನು ನಿನ್ನ ಶಿಷ್ಯತ್ವವನ್ನು ಹೊಂದಿ ಇದ್ದನೋ ಆ ಬ್ರಾಹ್ಮಣನಲ್ಲಿ ಹೋಗಿ ವಾಸಮಾಡುತ್ತೇನೆ ಎಂದು ಹೇಳಿ ಮರೆಯಾಗಿ ಹೋಯಿತು. ಬ್ರಾಹ್ಮಣರೂಪವನ್ನು ಧರಿಸಿ ಬಂದ ಇಂದ್ರದೇವರಲ್ಲಿ ಪ್ರವೇಶಿಸಿತು.

ಈ ರೀತಿಯಾಗಿ ಆ ತೇಜೋಮಯವಾದ ರೂಪವು ಹೊರಟುಹೋದ ಮೇಲೆ ಅದೇ ರೀತಿಯಾಗಿ ಇರುವ ಮತ್ತೊಂದು ತೇಜೋಮಯರೂಪವು ಪ್ರಹ್ಲಾದನ ದೇಹದಿಂದ ಹೊರಟಿತು. ಪ್ರಹ್ಲಾದನು ನೀನು ಯಾರು ಎಂದು ಕೇಳಲು ರೂಪವು 'ನಾನು ಧರ್ಮವು ನಾನು ಆ ಬ್ರಾಹ್ಮಣನಲ್ಲಿಯೇ ಹೋಗಿ ವಾಸಮಾಡುವೆನು. ಶೀಲವಿದ್ದಲ್ಲಿ ನಾನು ವಾಸಿಸುವೆನು. ಎಂದು ಹೇಳಿ ಹೊರಟುಹೋಯಿತು. ಅದು ಹೋದಮೇಲೆ ಮತ್ತೊಂದು ದೊಡ್ಡ ತೇಜೋರೂಪವು ಹೊರಟುಹೋಯಿತು. ನೀನು ಯಾರು? ಎಂದು ಕೇಳಲು ನಾನು ಸತ್ಯವು, ಧರ್ಮವನ್ನು ಅನುಸರಿಸಿ ಹೋಗುವೆನು ಎಂದು ಹೇಳಿಹೋಯಿತು. ಆಮೇಲೆ ಮತ್ತೊಂದು ತೇಜೋರೂಪವು ಹೊರಟಿತು. ನೀನು ಯಾರು? ಎನ್ನಲು, ನಾನು ವೃತ್ತ? ಅಂದರೆ ಸದಾಚಾರವು ಸತ್ಯವನ್ನು ಅನುಸರಿಸಿ ಹೋಗುವೆನು ಎಂದಿತು. ತರುವಾಯ ಅದು ಹೋದಮೇಲೆ ಒಂದು ಬೆಳ್ಳಗಿರುವ ರೂಪವು ಬಂದಿತು. ನೀನು ಯಾರು? ಎನ್ನಲು. ನಾನು ಬಲವು ವೃತ್ತವನ್ನು ಅನುಸರಿಸಿ ನಾನು ಇರುವೆನು ಎಂದುಹೇಳಿ ಹೋಯಿತು. ತರುವಾಯ ಪ್ರಹ್ಲಾದನ ದೇಹದಿಂದ ಮಹಾತೇಜಸ್ವಿನಿಯಾದ ದೇವಿಯು ಹೊರಟಳು. ಪ್ರಹ್ಲಾದನು ಅಮ್ಮ ನೀನು ಯಾರು? ಎಂದು ಕೇಳಲು, 'ನಾನು ಶ್ರೀದೇವಿಯು. ನಿನ್ನಲ್ಲಿಯೇ ನಿತ್ಯವೂ ಸುಖವಾಗಿ ವಾಸಮಾಡುತ್ತಿದ್ದೆನು. ನಿನ್ನಿಂದ ಬಿಡಲ್ಪಟ್ಟವಳಾಗಿ ನಾನು ಹೋಗುವೆನು. ನಾನು ಬಲವನ್ನು ಅನುಸರಿಸಿ ಹೋಗುವವಳು ಎಂದಳು. ತರುವಾಯ ಪ್ರಹ್ಲಾದನಿಗೆ ಭಯವುಂಟಾಯಿತು. ಹೇದೇವಿ! ಕಮಲಾಲಯೇ! ಎಲ್ಲಿಗೆ ಹೋಗುವಿ? ನೀನು ಸತ್ಯವ್ರತವುಳ್ಳವಳು. ಲೋಕಕ್ಕೆ ಪರಮೇಶ್ವರಿಯು. ನನ್ನಲ್ಲಿ ಸೇವಾಮಾಡುತ್ತಾ ವಾಸಮಾಡಿದ ಆ ಬ್ರಾಹ್ಮಣನು ಯಾರು? ಸತ್ಯವನ್ನು ತಿಳಿಯಲು ಇಚ್ಛಿಸುತ್ತೇನೆ ಎಂದನು.

ಅದಕ್ಕೆ ಶ್ರೀದೇವಿಯು ಇಂದ್ರನು ಬ್ರಹ್ಮಚಾರಿರೂಪದಿಂದ ನಿನ್ನಿಂದ ಶಿಕ್ಷಿತನಾದನು. ನಿನ್ನ ಮೂರು ಲೋಕದ ಐಶ್ವರ್ಯವನ್ನು ಅಪಹರಿಸಿದನು. ನೀನು

ಶೀಲದಿಂದ ಮೂರು ಲೋಕಗಳನ್ನೂ ಜಯಿಸಿದಿ. ಅದನ್ನು ತಿಳಿದು ಇಂದ್ರನು ನಿನ್ನ ಶೀಲವನ್ನು ಅಪಹರಿಸಿದನು. ಧರ್ಮ, ಸತ್ಯ, ವೃತ್ತ, ಬಲ, ನಾನು ಎಲ್ಲರೂ ಶೀಲದಿಂದ ಇರತಕ್ಕವರು. ಶೀಲವಿಲ್ಲದಿದ್ದರೆ ಇರಲಾರೆವು' ಎಂದು ಹೇಳಿ ಹೊರಟುಹೋದರು.

ಈರೀತಿಯಾಗಿ ಧೃತರಾಷ್ಟ್ರನು ದುರ್ಯೋಧನನಿಗೆ ಹೇಳಿ 'ಮಗನೇ! ಶೀಲವನ್ನು ಹೊಂದಬೇಕಾದರೆ ಕರ್ಮದಿಂದಲೂ ಮನಸ್ಸಿನಿಂದಲೂ ಮಾತಿನಿಂದಲೂ ಸರ್ವಪ್ರಾಣಿಗಳಲ್ಲಿಯೂ ದ್ರೋಹ ಮಾಡಬಾರದು. ಎಲ್ಲರಿಗೂ ಸಹಾಯ ಮಾಡಬೇಕು. ದಾನಮಾಡಬೇಕು. ತನ್ನ ಯಾವ ಕಾರ್ಯದಿಂದ ಇತರರಿಗೆ ಹಿತವಾಗಲಾರದೋ, ಇತರರು ಲಜ್ಜಾಪಡುವರೋ ಅಂತಹ ಕಾರ್ಯವನ್ನು ಮಾಡಬಾರದು. ಇಂತಹ ಶೀಲವು ಇಲ್ಲದಿದ್ದರೆ ಒಂದು ಪಕ್ಷದಲ್ಲಿ ಸಂಪತ್ತು ಬಂದರೂ ಅದನ್ನು ಬಹುಕಾಲ ಅನುಭವಿಸಿಕೊಂಡಿರಲು ಆಗಲಾರದು. ಸಮೂಲ ನಾಶವೇ ಉಂಟಾಗುವುದು. ಮಗನೇ! ನೀನು ಇದನ್ನೆಲ್ಲಾ ತಿಳಿದುಕೊಂಡು ಶೀಲವುಳ್ಳವನಾಗು. ಧರ್ಮರಾಜನಿಗಿಂತಲೂ ಹೆಚ್ಚಾದ ಸಂಪತ್ತನ್ನು ಅಪೇಕ್ಷಿಸುವುದಾದರೆ ಶೀಲವುಳ್ಳವನಾಗು ಎಂದು ಹೇಳಿದನು.



## ಕೇಕಯರಾಜನ ಕಥೆ [1]

ಭೀಷ್ಮಾಚಾರ್ಯರು ಧರ್ಮರಾಜನಿಗೆ ಹೇಳಿದರು. 'ಧರ್ಮರಾಜ! ರಾಜನು ಬ್ರಾಹ್ಮಣರಿಂದ ಇತರರಾದವರ ಹಣಕ್ಕೆ ಮಾತ್ರ ಪ್ರಭುವು. ದುರ್ಮಾರ್ಗದಲ್ಲಿ ಇರುವ ಬ್ರಾಹ್ಮಣರ ಹಣಕ್ಕೂ ಪ್ರಭುವು. ಆದರೆ ರಾಜನು ತನ್ನ ರಾಜ್ಯದಲ್ಲಿ ಬ್ರಾಹ್ಮಣರು ದುರ್ಮಾರ್ಗದಲ್ಲಿ ಇಳಿಯಲಿಕ್ಕೆ ಬಿಡಬಾರದು. ಯಾವರಾಜನ ದೇಶದಲ್ಲಿ ಬ್ರಾಹ್ಮಣನು ಕಳ್ಳತನವನ್ನು ಮಾಡುವನೋ ಅದು ಆ ರಾಜನ ದೋಷವನ್ನು ಹೇಳುವನು.(ತ್ತದೆ) ಅದರಿಂದ ರಾಜನು ನಿಂದ್ಯನಾಗುವನು. ಆದುದರಿಂದ ಪೂರ್ವದ ರಾಜರೆಲ್ಲರೂ ಬ್ರಾಹ್ಮಣರನ್ನು ರಕ್ಷಿಸುತ್ತಿದ್ದರು. ಈ ವಿಷಯದಲ್ಲಿ ನಿನಗೊಂದು ಕಥೆಯನ್ನು ಹೇಳುವೆನು.

ಒಂದುದಿನ ಕೇಕಯದೇಶದ ಅರಸನು ಅಧ್ಯಯನ ಮಾಡಿದವನು

1. ಮಭಾ. ಶಾಂ.ಪ. (ಅಪ) ಅ-117

ಉತ್ತಮವ್ರತವುಳ್ಳವನು. ಅರಣ್ಯದಲ್ಲಿ ಇರುವಾಗ ಅವನನ್ನು ಒಬ್ಬ ರಾಕ್ಷಸನು ಹಿಡಿದನು. ಆಗ ಕೇಕಯರಾಜನು ನನ್ನ ದೇಶದಲ್ಲಿ ಕಳ್ಳನು ಇಲ್ಲ. ಲೋಭಿಯು ಇಲ್ಲ. ಮದ್ಯಪಾನ ಮಾಡುವವನು ಇಲ್ಲ. ಅಗ್ನಿಹೋತ್ರ ಮಾಡದವನು ಇಲ್ಲ. ಯಾಗಮಾಡದೇ ಇದ್ದವನು ಇಲ್ಲ. ಓದಿಕೊಳ್ಳದೆ ಇರುವ ಬ್ರಾಹ್ಮಣನು ಇಲ್ಲ. ವ್ರತಮಾಡದೇ ಇದ್ದವನೂ, ಸೋಮಪಾನ ಮಾಡದೆ ಇದ್ದವನೂ ಆದ ಬ್ರಾಹ್ಮಣನು ನನ್ನ ದೇಶದಲ್ಲಿ ಇಲ್ಲ. ನನ್ನ ದೇಶದಲ್ಲಿ ಸರಿಯಾದ ದಕ್ಷಿಣೆಯನ್ನು ಕೊಡದೆ ಯಾಗ ಮಾಡುವುದಿಲ್ಲ. ನನ್ನ ದೇಶದಲ್ಲಿ ಬ್ರಾಹ್ಮಣರು ತಾವು ಅಧ್ಯಯನ ಮಾಡುತ್ತಾರೆ. ಇನ್ನೊಬ್ಬರಿಗೆ ಅಧ್ಯಯನ ಮಾಡಿಸುತ್ತಾರೆ. ಯಜ್ಞ ಮಾಡುತ್ತಾರೆ. ಯಜ್ಞವನ್ನು ಮಾಡಿಸುತ್ತಾರೆ. ದಾನ ಮಾಡುತ್ತಾರೆ. ದಾನವನ್ನು ತೆಗೆದುಕೊಳ್ಳುತ್ತಾರೆ. ಹೀಗೆ ಆರು ಕರ್ಮಗಳನ್ನು ಮಾಡುತ್ತಾರೆ. ನನ್ನ ದೇಶದ ಬ್ರಾಹ್ಮಣರು ನನ್ನಿಂದ ಸತ್ಕೃತರಾಗಿ ಮೃದುಸ್ವಭಾವವುಳ್ಳವಾಗಿ ಸತ್ಯವಚನವುಳ್ಳವರಾಗಿ ತಮ್ಮ ವಿಹಿತಕಾರ್ಯದಲ್ಲೇ ಆಸಕ್ತರಾಗಿರುವರು. ಕ್ಷತ್ರಿಯರು ಒಬ್ಬರ ಹತ್ತಿರವೂ ಬೇಡುವುದಿಲ್ಲ. ತಾವೇ ಇನ್ನೊಬ್ಬರಿಗೆ ದಾನಮಾಡುತ್ತಾರೆ. ತಾವು ಅಧ್ಯಯನ ಮಾಡುತ್ತಾರೆ. ಇನ್ನೊಬ್ಬರು ಪಾಠಹೇಳಲಾರರು. ಯಜ್ಞ ಮಾಡುವರು. ಇನ್ನೊಬ್ಬರಿಂದ ತಾವು ಮಾಡಿಸಲಾರರು. ನನ್ನ ರಾಜ್ಯದಲ್ಲಿ ವೈಶ್ಯರು ಕೃಷಿ ಗೋರಕ್ಷಕ ವ್ಯಾಪಾರ ಇವುಗಳನ್ನು ಮಾಡುವವರು ಒಬ್ಬರನ್ನು ಮೋಸಮಾಡಲಾರರು. ಮರೆಯದೆ ವಿಹಿತಕಾರ್ಯವನ್ನು ಮಾಡುವರು. ಶೂದ್ರರು ಅಸೂಯಾ ಇಲ್ಲದೆ ಮೂರು ಜಾತಿಯವರನ್ನು ಸೇವಿಸುವರು. ದರಿದ್ರರಿಗೂ ಅನಾಥರಿಗೂ ಮುದುಕರಿಗೂ ದುರ್ಬಲರಿಗೂ ರೋಗಿಗಳೂ ಹೆಂಗಸರಿಗೂ ಬೇಕಾದ ಹಣವನ್ನು ಕೊಡುವೆನು. ಎಲ್ಲರ ಕುಲಕರ್ಮಗಳನ್ನು ಕೆಡಿಸಲಾರೆನು. ನನ್ನ ದೇಶದಲ್ಲಿ ಯಾರು ತಪಸ್ಸನ್ನು ಮಾಡುವರೋ ಅವರಿಗೆ ನಾನು ತುಂಬಾ ಮರ್ಯಾದೆ ಮಾಡುವೆನು. ಇತರರಿಗೆಲ್ಲಾ ಸಹಾಯ ಮಾಡದೆ ನಾನೊಬ್ಬನೇ ಭೋಗಗಳನ್ನು ಅನುಭವಿಸಲಾರೆನು. ನಾನು ಪರಸ್ತ್ರೀ ಗಮನ ಮಾಡಲಾರೆನು. ಗೃಹಸ್ಥನು ಯಾಚನೆ ಮಾಡಲಾರನು. ಸನ್ಯಾಸಿಯು ಬ್ರಹ್ಮಚರ್ಯರಹಿತನಾಗಿರಲಾರನು. ನಾನು ಸತ್ಯವನ್ನು ಬಿಡಲಾರೆನು. ನಾನು ಪಂಡಿತರನ್ನು ದ್ವೇಷಿಸುವುದಿಲ್ಲ. ಮದುಕರನ್ನು ದ್ವೇಷಿಸುವುದಿಲ್ಲ. ನಾನು ರಾಜ್ಯದಲ್ಲಿ ಜಾಗ್ರತೆಯಿಂದ ಇರುವೆನು. ಧರ್ಮವನ್ನು ಮಾಡುವೆನು. ಗೃಹಸ್ಥಧರ್ಮ ವುಳ್ಳವನಾಗಿರುವೆನು. ವೇದಾಧ್ಯಯನವನ್ನು ಮಾಡಿರುವೆನು. ತಪಸ್ವಿಯು ಎಲ್ಲಾ ಧರ್ಮಗಳನ್ನು ಮಾಡುವೆನು. ರಾಜ್ಯಕ್ಕೆ ಸ್ವಾಮಿಯಾಗಿರುವೆನು. ದಾನವನ್ನು ಮಾಡಿ

ಆದರಿಂದ ಉತ್ತಮಲೋಕವನ್ನು ಸಂಪಾದಿಸಲು ಬಯಸುವೆನು. ಸತ್ಯವಚನದಿಂದ ಬ್ರಾಹ್ಮಣರ ರಕ್ಷಣೆಯಿಂದ ಗುರುಗಳ ಸೇವೆಯಿಂದ ಉತ್ತಮಲೋಕವನ್ನು ಹೊಂದುವೆನು. ನನಗೆ ರಾಕ್ಷಸರ ಭಯವಿಲ್ಲ. ನನ್ನ ರಾಜ್ಯದಲ್ಲಿ ವಿಧವಾಸ್ತ್ರೀಯರಿಲ್ಲ. ಧರ್ಮಭ್ರಷ್ಟ ಬ್ರಾಹ್ಮಣನಿಲ್ಲ. ಪಗಡೆ ಆಟ ಆಡುವ ಬ್ರಾಹ್ಮಣನಿಲ್ಲ. ಕಳ್ಳತನ ಮಾಡುವ ಬ್ರಾಹ್ಮಣನಿಲ್ಲ. ಅಯೋಗ್ಯರಿಗೆ ಪೌರೋಹಿತ್ಯಮಾಡಿಸುವ ಬ್ರಾಹ್ಮಣನು ಇಲ್ಲ. ಪಾಪಮಾಡುವ ಬ್ರಾಹ್ಮಣರಿಲ್ಲ. ನನ್ನ ದೇಹದಲ್ಲಿ ಧರ್ಮಕ್ಕೆ ಯುದ್ಧಮಾಡಿ ಎರಡು ಅಂಗುಲಸ್ಥಳವೂ ಗಾಯವಾಗದೆ ಇದ್ದ ಭಾಗವಿಲ್ಲ. ಆದುದರಿಂದ ನನಗೆ ರಾಕ್ಷಸರ ಭಯವಿಲ್ಲ' ಎಂದು ಹೇಳಿದನು.

ಆಗ ರಾಕ್ಷಸನು 'ರಾಜ್ಯದಲ್ಲಿ ಹೆಂಗಸರ ವ್ಯಭಿಚಾರದಿಂದಲೂ ರಾಜರ ಅನ್ಯಾಯದಿಂದಲೂ ಬ್ರಾಹ್ಮಣರ ಕರ್ಮದೋಷದಿಂದಲೂ ಪ್ರಜೆಗಳಿಗೆ ಭಯವು ಉಂಟಾಗುವುದು. ಆ ರಾಜ್ಯದಲ್ಲಿ ಸರಿಯಾಗಿ ಮಳೆಯಾಗಲಾರದು. ನಾನಾ ರೋಗಗಳು ಬರುವುವು. ಪ್ರಜೆಗಳಿಗೆ ಹಸಿವು ಭಯ ಉಂಟಾಗುವುದು. ಆ ದೇಶದಲ್ಲಿ ಯಾವಾಗಲೂ ಭಯಂಕರವಾದ ಜಗಳವಾಗುತ್ತಿರುವುದು. ಎಲ್ಲಿ ಬ್ರಾಹ್ಮಣರು ಧರ್ಮದಲ್ಲಿ ಇರುವರೋ ಅಲ್ಲಿ ಯಕ್ಷರಾಕ್ಷಸ ಪಿಶಾಚಗಳಿಂದ ಭಯವುಂಟಾಗಲಾರದು. ಯಾವ ದೇಶದಲ್ಲಿ ಹೆಂಗಸರು ಪತಿವ್ರತೆಯಾಗಿರುವರೋ ಆ ದೇಶದಲ್ಲಿ ಗಂಧರ್ವರೂ ಅಪ್ಸರಸ್ತ್ರೀಯರೂ ಸಿದ್ಧರೂ ಸರ್ಪಗಳೂ ಪೀಡೆಯನ್ನು ಕೊಡಲಾರರು. ಯಾವ ಊರಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ತಮ್ಮ ಧರ್ಮದಲ್ಲಿ ಇರುವರೋ ಅಲ್ಲಿ ಮಳೆಯಿಲ್ಲವೆಂಬ ಭಯವಿಲ್ಲ. ದುರ್ಭಿಕ್ಷೆಯ ಭಯವಿಲ್ಲ. ಯಾವ ರಾಜ್ಯದಲ್ಲಿ ರಾಜನು ಧಾರ್ಮಿಕನಾಗಿರುವನೋ ಅಲ್ಲಿ ಪರಾಜಯವಿಲ್ಲ. ಅಲ್ಲಿ ಯಾವ ಅಪಶಕುನಗಳೂ ಕಾಣಲಾರವು. ಕೇಕಯರಾಜನೇ! ನೀನು ಸರ್ವಾವಸ್ಥೆಯಲ್ಲಿಯೂ ಧಾರ್ಮಿಕನಾಗಿರುವಿಯೋ ಆದುದರಿಂದ ನಿನ್ನ (ನೀನು) ಕ್ಷೇಮದಿಂದ ಮನೆಗೆ ಹೋಗಿಸೇರು. ನಾನು ಹೋಗುವೆನು—ಯಾವ ರಾಜನು ಗೋಬ್ರಾಹ್ಮಣರನ್ನೂ ಪ್ರಜೆಗಳನ್ನೂ ರಕ್ಷಿಸುವನೋ ಅವನಿಗೆ ರಾಕ್ಷಸರ ಭಯವಿಲ್ಲ. ಅವನಿಗೆ ಪಾಪವೇ ಇಲ್ಲ. ಯಾವ ರಾಜರಿಗೆ ಬ್ರಾಹ್ಮಣರು ಉಪದೇಶಕ ರಾಗಿರುವರೋ ಬ್ರಾಹ್ಮಣರೇ ಬಲಕ್ಕೆ ಕಾರಣರಾಗಿರುವರೋ, ಯಾವ ರಾಜರು ಬ್ರಾಹ್ಮಣರನ್ನು ರಕ್ಷಿಸುವರೋ ಆ ರಾಜರೆಲ್ಲರೂ ಸ್ವರ್ಗವನ್ನು ಹೊಂದುವರು. ಈ ರೀತಿಯಾಗಿ ರಾಕ್ಷಸನು ಹೊರಟುಹೋದನು. ಕೇಕಯರಾಜನು ತನ್ನ ಮನೆಗೆ ಹೋದನು. ಆದುದರಿಂದ ಧರ್ಮರಾಜ! ಬ್ರಾಹ್ಮಣರನ್ನು ರಕ್ಷಿಸಬೇಕು. ಆಗ

ಬ್ರಾಹ್ಮಣರೂ ರಾಜರನ್ನು ರಕ್ಷಿಸುವರು. ಈರೀತಿ ಬ್ರಾಹ್ಮಣರನ್ನು ರಕ್ಷಿಸಿ ಧರ್ಮದಿಂದ ರಾಜ್ಯಭಾರವನ್ನು ಹೊಂದುವನೋ ಆ ರಾಜನು ಇಂದ್ರಲೋಕವನ್ನು ಹೊಂದುವನು' ಈರೀತಿಯಾಗಿ ಭೀಷ್ಮರು ಧರ್ಮರಾಜನಿಗೆ ಉಪದೇಶಿಸಿದರು.



## ಸೋಮಕರಾಜನ ಕಥೆ [1]

ಪೂರ್ವದಲ್ಲಿ ಸೋಮಕ ಎಂಬ ರಾಜನಿದ್ದನು. ಅವನಿಗೆ ಒಂದೇರೀತಿಯಾಗಿ ಇರುವ ನೂರು ಜನ ಹೆಂಡತಿಯರಿದ್ದರು. ರಾಜನು ಬಹುಸಮಯ ಆ ಹೆಂಡತಿಯ ರಲ್ಲಿ ಮಕ್ಕಳೇ ಆಗಲಿಲ್ಲ. ಬಹುಕಾಲವಾದ ಮೇಲೆ ರಾಜನು ಮುದುಕನಾದ ಮೇಲೆ ದೊಡ್ಡ ಹೆಂಡತಿಯಲ್ಲಿ ಜಂತು ಎಂಬ ಒಬ್ಬ ಮಗನು ಹುಟ್ಟಿದನು. ಆ ಮಗುವನ್ನು ನೂರು ಜನ ರಾಜಪತ್ನಿಯರೂ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಅವರು ತಮ್ಮ ಭೋಗಗಳನ್ನು ಬಿಟ್ಟೂ ಆ ಮಗುವಿನ ಹತ್ತಿರವೇ ಇರುತ್ತಿದ್ದರು. ಒಂದುದಿನ ಆ ಮಗುವಿಗೆ ಇರುವೆಯು ಕಚ್ಚಿತು. ಆ ದುಃಖದಿಂದ ಮಗುವು ಅಳಲಿಕ್ಕೆ ಆರಂಭಿಸಿತು. ಅದನ್ನು ನೋಡಿ ನೂರು ಜನ ರಾಜಪತ್ನಿಯರೂ ದುಃಖದಿಂದ ಅಳಲಿಕ್ಕೆ ಆರಂಭಿಸಿದರು. ಸಭಾಮಧ್ಯದಲ್ಲಿ ಮಂತ್ರಿಗಳೊಡನೆ ಪುರೋಹಿತರೊಂಡನೆ ಕೂಡಿಕೊಂಡು ಕೂತಿರುವ ರಾಜನಿಗೆ ಈ ಗಟ್ಟಿಯಾಗಿ ಅಳುವ ಧ್ವನಿಯು ಕೇಳಿಸಿತು. ಇದೇನು ಎಂದು ತಿಳಿದುಕೊಂಡು ಬರುವುದಕ್ಕಾಗಿ ದೂತನನ್ನು ಕಳುಹಿಸಿದನು. ಆ ದೂತನು ಬಂದು ನಡೆದ ವಿಷಯವನ್ನು ಹೇಳಿದನು. ಆಗ ಸೋಮಕರಾಜನು ಮಂತ್ರಿಗಳಿಂದ ಕೂಡಿಕೊಂಡು ಅಂತಃಪುರಕ್ಕೆ ಹೋಗಿ ಮಗುವನ್ನು ಸಮಾಧಾನಪಡಿಸಿದನು.

ಮಗುವನ್ನು ಸಮಾಧಾನಪಡಿಸಿ ಅಂತಃಪುರದಿಂದ ಹೊರಗೆ ಬಂದು ಮಂತ್ರಿಗಳಿಂದಲೂ ಪುರೋಹಿತರಿಂದಲೂ ಕೂಡಿಕೊಂಡು ಕೂತು ಕೊಂಡನು. ರಾಜನು 'ಒಬ್ಬನು ಮಗನಿರುವುದು ಬಹುಕಷ್ಟವಾಗಿದೆ. ಇದಕ್ಕಿಂತ ಮಕ್ಕಳೇ ಇಲ್ಲದಿರುವುದು ಲೇಸು. ಒಬ್ಬ ಮಗನಿರುವುದು ನಿತ್ಯ ದುಃಖಕ್ಕೆ ಕಾರಣ ವಾಗಿದೆ. ನಾನು ಮಕ್ಕಳನ್ನು ಪಡೆಯಬೇಕೆಂದು ಪರೀಕ್ಷಾಮಾಡಿ ನೂರು ಜನ ಸ್ತ್ರೀಯರನ್ನು ಮದುವೆ ಮಾಡಿಕೊಂಡೆನು. ಅವರಲ್ಲಿ ಮಕ್ಕಳೇ ಆಗಲಿಲ್ಲ. ಕೊನೆಗೆ ಈ ಜಂತುವು

1. ಮಭಾ. ವ.ಪ. ಅ-127, 128

ಹುಟ್ಟಿರುವನು. ನನಗೋ ವಯಸ್ಸು ಆಯಿತು. ಇವರು ನೂರುಜನ ಸ್ತ್ರೀಯರ ಮತ್ತು ನನ್ನ ಪ್ರಾಣಗಳೆಲ್ಲಾ ಈ ಒಬ್ಬ ಮಗನಲ್ಲಿ ಇದೆ. ನನಗೆ ನೂರು ಮಕ್ಕಳಾಗುವಂತೆ ಮಾಡುವ ಏನಾದರೂ ಕರ್ಮವಿರಬಹುದೇ ಎಂದನು.

ಅದಕ್ಕೆ ಪುರೋಹಿತರು 'ರಾಜನೇ! ನಿನಗೆ ನೂರು ಮಕ್ಕಳಾಗುವಂತೆ ಮಾಡುವ ಒಂದು ಕರ್ಮವಿದೆ. ಅದನ್ನು ನೀನು ಮಾಡಲಿಕ್ಕೆ ಶಕ್ತನಾದರೆ ಹೇಳುವೆನು' ಎಂದರು.

ರಾಜನು ಅದು ಏನೇ ಇರಲಿ. ನನಗೆ ನೂರು ಮಕ್ಕಳಾಗುವುದಕ್ಕೆ ಕಾರಣವಾದ ಕರ್ಮವನ್ನು ನಾನು ಮಾಡಿಯೇ ಮಾಡುವೆನು. ತಾವು ಹೇಳಬೇಕು ಎಂದನು.

ಪುರೋಹಿತರು ಈ ಜಂತುವೆಂಬ ಮಗನನ್ನೇ ಕೊಂದು ಯಾಗವನ್ನು ಮಾಡು. ಅದರಿಂದ ನಿನಗೆ ಬೇಗನೇ ನೂರು ಮಕ್ಕಳಾಗುವರು. ಈ ಜಂತುವಿನ ವಪಾ(ಕರುಳು) ಹೋಮ ಮಾಡುವಾಗ ಅದರ ಹೊಗೆಯನ್ನು ಮೂಸಿ ನಿನ್ನ ಪತ್ನಿಯರೆಲ್ಲರೂ ಮಕ್ಕಳನ್ನು ಪಡೆಯುವರು. ನಿನ್ನ ದೊಡ್ಡ ಹೆಂಡತಿಯಲ್ಲಿಯೇ ಪುನಃ ಇದೇ ಜಂತುವು ಹುಟ್ಟುವನು. ಈಗ ಇವನ ಉತ್ತರ ಪಾರ್ಶ್ವದಲ್ಲಿ ಬಂಗಾರದ ಚಿಹ್ನೆಯನ್ನು ಆಗಲೂ ನೋಡಬಹುದು' ಎಂದರು.

ಅದಕ್ಕೆ ರಾಜನು ಪೂಜ್ಯರೇ ಮಕ್ಕಳಾಗುವುದಕ್ಕೋಸ್ಕರ ತಾವು ಹೇಳಿದಂತೆ ಎಲ್ಲವನ್ನೂ ಮಾಡುವೆನು ಎಂದನು.

ತರುವಾಯ ಪುರೋಹಿತರು ಜಂತುವಿನಿಂದ ಯಾಗವನ್ನು ಮಾಡಿಸಿದರು. ರಾಜಪತ್ನಿಯರು ಕೃಪೆಯಿಂದ ಬಲಾತ್ಕಾರದಿಂದ ಸೆಳೆದುಕೊಂಡರು. ಹಾ ಸತ್ತೆವು ಎಂದು ಕೂಗಿಕೊಂಡರು. ಮಗುವಿನ ಬಲಕೈಯಿಂದ ಹಿಡಿದು ಸೆಳೆದರು. ಪುರೋಹಿತನು ಎಡಕೈಯಲ್ಲಿ ಹಿಡಿದು ಎಳೆದನು. ರಾಜನ ಪತ್ನಿಯರೆಲ್ಲರೂ ಅಳುತ್ತಿರುವಂತೆ ಮಗುವನ್ನು ಸೀಳಿ ಅದರ ಕರುಳನ್ನು ತೆಗೆದು ಹೋಮವನ್ನು ಮಾಡಿದರು. ಆ ಕರುಳನ್ನು ಹೋಮಮಾಡಲು ಅದರ ವಾಸನೆಯನ್ನು ಮೂಸಿ ರಾಜಪತ್ನಿಯರು ದುಃಖದಿಂದ ಹಾಗೆಯೇ ಬಿದ್ದುಬಿಟ್ಟರು. ತರುವಾಯ ರಾಜಪತ್ನಿಯರೆಲ್ಲರೂ ಗರ್ಭಿಣಿಯರಾದರು. ತರುವಾಯ ಹತ್ತು ತಿಂಗಳಾದ ಮೇಲೆ ಸೋಮಕ ರಾಜನಿಗೆ ನೂರು ಮಕ್ಕಳು ಹುಟ್ಟಿದರು. ಜ್ಯೇಷ್ಠಪತ್ನಿಯಲ್ಲೇ ಅದೇ ಜಂತುವು ಹುಟ್ಟಿದನು. ಎಲ್ಲರಿಗೂ ಅವನೇ ಇಷ್ಟನಾಗಿದ್ದನು. ಅವನಷ್ಟು ಇತರ ಮಕ್ಕಳು ಪ್ರಿಯರಾಗಿರಲಿಲ್ಲ. ಪೂರ್ವದಂತೆ ಉತ್ತರ ಪಾರ್ಶ್ವದಲ್ಲಿ ಬಂಗಾರದ ಚಿಹ್ನೆಯೂ ಇದ್ದಿತು. ಆ ನೂರು ಮಕ್ಕಳಲ್ಲಿ ಅವನೇ ಗುಣಗಳಿಂದಲೂ ಶ್ರೇಷ್ಠನಾಗಿದ್ದನು.

ತರುವಾಯ ಸೋಮಕನ ಪುರೋಹಿತನು ಮರಣವನ್ನು ಹೊಂದಿದನು. ಆಮೇಲೆ ಸೋಮಕರಾಜನೂ ಮೃತನಾದನು. ಸೋಮಕನು ನರಕದಲ್ಲಿ ಯಾತನೆಯನ್ನು ಅನುಭವಿಸುತ್ತಾ ಇದ್ದ ಪುರೋಹಿತನನ್ನು ನೋಡಿದನು. ಏಕೆ ಹೀಗೆ ದುಃಖವನ್ನು ಅನುಭವಿಸುವಿರಿ ಎಂದು ಕೇಳಿದನು. ಅದಕ್ಕೆ ಪುರೋಹಿತನು ರಾಜನೇ! ನಾನು ನಿನ್ನಿಂದ ನಿನ್ನ ಮಗನನ್ನು ಕೊಂದು ಯಾಗವನ್ನು ಮಾಡಿಸಿದೆನು. ಅದರ ಫಲವು ಇದು ಎಂದನು. ಅದನ್ನು ಕೇಳಿ ರಾಜನು ಯಮದೇವರೊಡನೆ ನನ್ನ ಪುರೋಹಿತರನ್ನು ಬಿಟ್ಟುಬಿಡಿ. ನನ್ನಿಂದಾಗಿ ದುಃಖವನ್ನು ಅನುಭವಿಸುತ್ತಿರುವರು. ನಾನು ನರಕವನ್ನು ಹೊಂದುವೆನು. ನನ್ನ ಗುರುಗಳನ್ನು ಬಿಟ್ಟುಬಿಡಿ ಎಂದನು.

ಅದಕ್ಕೆ 'ರಾಜನೇ! ಇನ್ನೊಬ್ಬರು ಮಾಡಿದ ಕರ್ಮದ ಫಲವನ್ನು ಅನುಭವಿಸುವುದು ಆಗಲಾರದು. ನಿನಗೆ ಸಿದ್ಧವಾಗಿರುವ ಫಲಗಳು ಕಾಣಿಸುತ್ತಿರುವುವು' ಎಂದು ಯಮದೇವರು ಹೇಳಿದರು.

ರಾಜನು 'ಈ ಬ್ರಾಹ್ಮಣರನ್ನು ಬಿಟ್ಟು ಪುಣ್ಯಲೋಕಗಳನ್ನು ನಾನು ಅಪೇಕ್ಷಿಸುವುದಿಲ್ಲ. ದೇವಲೋಕದಲ್ಲಿಯೋ ನರಕದಲ್ಲಿಯೋ ಇವರೊಡನೆಯೇ ವಾಸಿಸಲಿಕ್ಕೆ ಇಚ್ಛಿಸುವೆನು. ಪುಣ್ಯಪಾಪಗಳ ಫಲವು ನಮಗಿಬ್ಬರಿಗೂ ಸಮವಾಗಲಿ' ಎಂದನು.

ಯಮದೇವರು 'ಹಾಗಿದ್ದರೆ ಸ್ವಲ್ಪ ಈ ಬ್ರಾಹ್ಮಣರ ಪಾಪದ ಫಲವನ್ನು ನೀನೂ ಅನುಭವಿಸು. ಆಮೇಲೆ ಈ ಬ್ರಾಹ್ಮಣನೊಡನೆ ನೀನು ಸದ್ಗತಿಯನ್ನು ಹೊಂದುವಿ' ಎಂದರು.

ರಾಜನು ಅದೇ ಪ್ರಕಾರವಾಗಿ ಮಾಡಿ ಪಾಪರಹಿತನಾಗಿ ಗುರುಗಳಿಂದ ಸಹಿತನಾಗಿ ನರಕದಿಂದ ಮೇಲೆ ಬಂದವನಾಗಿ ತನ್ನ ಕರ್ಮದಿಂದ ಸಂಪಾದಿತಗಳಾದ ಪುಣ್ಯಲೋಕಗಳನ್ನೂ ತನ್ನ ಗುರುಗಳೊಡನೆಯೇ ಅನುಭವಿಸಿದನು.



# ಶಿಬಿರಾಜನ ಕಥೆ

ಪೂರ್ವದಲ್ಲಿ ಶಿಬಿ ಎಂದು ಹೆಸರುಳ್ಳ ಧರ್ಮಿಷ್ಠನಾದ ರಾಜನಿದ್ದನು. ಒಂದುದಿನ ಅವನನ್ನು ಪರೀಕ್ಷಿಸಬೇಕೆಂದು ಇಂದ್ರದೇವರು ಹದ್ದುಪಕ್ಷಿಯ ರೂಪವನ್ನೂ ಅಗ್ನಿದೇವರು ಪಾರಿವಾಳಪಕ್ಷಿಯ ರೂಪವನ್ನು ಧರಿಸಿಬಂದರು. ಪಾರಿವಾಳ ಪಕ್ಷಿಯು ಹದ್ದಿನ ಭಯದಿಂದ ರಾಜನ ತೊಡೆಯಲ್ಲಿ ಹೋಗಿ ಅಡಗಿ ಕೂತುಕೊಂಡಿತು.

ಆಗ ಹದ್ದುಪಕ್ಷಿಯು ರಾಜನೊಡನೆ 'ರಾಜನೇ! ಎಲ್ಲಾ ರಾಜರೂ ನಿನ್ನನ್ನು ಧರ್ಮಿಷ್ಠನೆನ್ನುವರು. ಅಂತಹ ನೀನು ಧರ್ಮವಿರುದ್ಧವಾದ ಕಾರ್ಯವನ್ನೇಕೆ ಮಾಡುವಿ? ಹಸಿವೆಯಿಂದ ಪೀಡಿತನಾದ ನನ್ನ ಆಹಾರವನ್ನು ನೀನು ಧರ್ಮದ ಲೋಭದಿಂದ ಕೆಡಿಸಬೇಡ. ಧರ್ಮವನ್ನು ಬಿಟ್ಟು ನಾಶವನ್ನು ಹೊಂದಬೇಡ' ಎಂದಿತು.

ಅದಕ್ಕೆ ರಾಜನು 'ಪಕ್ಷಿರಾಜನೇ! ಈ ಪಾರಿವಾಳವು ನಿನ್ನಿಂದ ಭಯವನ್ನು ಹೊಂದಿ ಬದುಕಿರಬೇಕೆಂಬ ಆಸೆಯಿಂದ ನನ್ನನ್ನು ಮರೆಹೊಂದಿರುವುದು. ಈರೀತಿಯಾಗಿ ನನ್ನನ್ನು ಮರೆಹೊಂದಿರುವ ಈ ಪಕ್ಷಿಗೆ ಅಭಯಪ್ರಧಾನವನ್ನು ಮಾಡದೆ ಇರುವುದು ಹೇಗೆ ಧರ್ಮವಾಗುವುದು? ಅಂಜಿಕೆಯಿಂದ ನಡುಗುತ್ತಾ ನನ್ನ ಹತ್ತಿರ ಬಂದು ಕೂತಿದೆ. ಅದನ್ನು ಬಿಟ್ಟುಬಿಡುವುದು ನಿಂದ್ಯವಾಗಿದೆ. ಬ್ರಾಹ್ಮಣರನ್ನು ಕೊಲ್ಲುವುದೂ ಗೋವನ್ನು ಕೊಲ್ಲುವುದೂ ಶರಣಾಗತರನ್ನು ಬಿಡುವುದೂ ಮೂರೂ ಸಮಾನ ಪಾಪಕಾರ್ಯಗಳು' ಎಂದನು.

ಆಗ ಹದ್ದು 'ರಾಜನೇ! ಎಲ್ಲರೂ ಆಹಾರದಿಂದ ಹುಟ್ಟುತ್ತಾರೆ. ಆಹಾರದಿಂದ ಬೆಳೆಯುತ್ತಾರೆ. ಆಹಾರದಿಂದ ಬದುಕುತ್ತಾರೆ. ನಮಗೆ ಬೇಕಾದ ಯಾವ ಪದಾರ್ಥವನ್ನು ಬಿಟ್ಟು ಬಹುಕಾಲ ಜೀವಿಸಲಿಕ್ಕೆ ಸಾಧ್ಯವಾಗುವುದು. ಆದರೆ ಭೋಜನವಿಲ್ಲದೆ ಬಹುಕಾಲ ಬದುಕಲಾಗಲಾರದು. ನನ್ನ ಆಹಾರಕ್ಕೆ ನೀನು ಲೋಪಮಾಡಿದರೆ ನನ್ನ ಪ್ರಾಣವು ಹೋಗುವುದು. ನನ್ನ ಪ್ರಾಣವು ಹೋದರೆ ನನ್ನ ಹೆಂಡತಿ ಮಕ್ಕಳೆಲ್ಲಾ ಸಾಯುವರು. ನೀನು ಒಂದು ಪಾರಿವಾಳವನ್ನು ರಕ್ಷಣೆ ಮಾಡಲಿಕ್ಕೆ ಹೋಗಿ ಅನೇಕ ಪ್ರಾಣಿಗಳ ಪ್ರಾಣ ತೆಗೆಯುವಿ. ಬಹುಜನರಿಗೆ ವಿರೋಧಿ ಯಾದದ್ದು ಧರ್ಮವಾಗಲಾರದು. ಅವಿರೋಧಿಯಾದದ್ದೇ ಸರಿಯಾದ ಧರ್ಮವು.

1. ಮಭಾ. ವ.ಪ. ಅ. 130, 131

ಧರ್ಮಾಧರ್ಮವಿಷಯದಲ್ಲಿ ಗೌರವಲಾಘವಗಳನ್ನು ಯೋಚಿಸಿ ನಿಶ್ಚಯಮಾಡು' ಎಂದಿತು.

ರಾಜನು 'ಪಕ್ಷಿಶ್ರೇಷ್ಠನೇ! ಬಹುಚೆಂದಾಗಿ ಮಾತಾಡುವೆಯಲ್ಲಾ! ನೀನು ಪಕ್ಷಿರಾಜನಾದ ಗರುಡನೇ? ಧರ್ಮವನ್ನು ತಿಳಿಯದೇ ಮಾತಾಡುವಿ! ಬಹುವಿಚಿತ್ರ ವಾಗಿ ಮಾತಾಡುವಿ. ನಿನಗೆ ತಿಳಿಯದೇ ಇರುವುದು ಒಂದೂ ಇರಲಾರದು ಎಂದು ನಾನು ತಿಳಿಯಲಾರೆನು. ಆದರೆ ಶರಣಾಗತನನ್ನು ಪರಿತ್ಯಾಗ ಮಾಡುವುದು ಧರ್ಮವೆಂದು ಹೇಗೆ ತಿಳಿಯುವಿ? ನಿನಗೆ ಆಹಾರಕ್ಕಾಗಿಯಷ್ಟೆ ಇಷ್ಟು ಪ್ರಯತ್ನ ಮಾಡುತ್ತಿರುವಿ. ಪಾರಿವಾಳವಿಲ್ಲದೆಯೂ ಇದಕ್ಕಿಂತ ಹೆಚ್ಚಾಗಿಯೇ ನಿನಗೆ ಆಹಾರ ವನ್ನು ಕೊಡುವೆನು. ನೀನು ಯಾವುದನ್ನು ಅಪೇಕ್ಷಿಸುವಿ? ಎತ್ತನ್ನೋ ಹಂದಿಯನ್ನೋ ಕೋಣವನ್ನೋ ಯಾವುದನ್ನು ಬೇಕಾದರೂ ನಿನಗೆ ಕೊಡಿಸುವೆನು ಎಂದನು.

ಹದ್ದು 'ರಾಜನೇ! ನನಗೆ ಹಂದಿಯು ಬೇಡ. ಎತ್ತೂ ಬೇಡ. ಬೇರೆ ಯಾವ ಮೃಗಗಳೂ ಬೇಡ. ದೇವರು ಕೊಟ್ಟಿರುವ ಆಹಾರವು ಪಾರಿವಾಳವು ಅದನ್ನು ಬಿಟ್ಟು ಬಿಡು. ಹದ್ದುಗಳು ಪಾರಿವಾಳಗಳನ್ನು ತಿನ್ನುವುದೆಂದು ಶ್ರುತಿಯೇ ಹೇಳುತ್ತದೆ' ಎಂದಿತು.

ಆದಕ್ಕೆ ರಾಜನು 'ಪಕ್ಷಿಗಳಿಂದ ಸತ್ಕೃತನಾದ ನೀನು ಈ ರಾಜ್ಯವನ್ನೇ ಆಳು. ಈ ರಾಜ್ಯವನ್ನೇ ನಿನಗೆ ನಾನು ಕೊಡುವೆನು. ಅಥವಾ ಇನ್ನು ಯಾವುದನ್ನು ಅಪೇಕ್ಷಿಸುವಿಯೋ ಅದನ್ನು ಕೊಡುವೆನು. ಮರೆಹೊಂದಿರುವ ಈ ಪಾರಿವಾಳವನ್ನು ಮಾತ್ರ ಕೇಳಬೇಡ. ಈ ಪಾರಿವಾಳವನ್ನು ಯಾವ ಕರ್ಮದಿಂದ ಬದುಕಿಸುವಿ? ಅದನ್ನು ಹೇಳು. ಈ ಪಾರಿವಾಳವನ್ನು ಮಾತ್ರ ನಾನು ಸರ್ವಥಾ ಕೊಡಲಾರೆನು' ಎಂದನು.

ಹದ್ದು 'ರಾಜನೇ! ನಿನಗೆ ಪಾರಿವಾಳದಲ್ಲಿ ಅಷ್ಟು ಸ್ನೇಹವಿರುವುದಾದರೆ ಪಾರಿವಾಳದ ಭಾರದಷ್ಟು ಭಾರವುಳ್ಳ ನಿನ್ನ ದೇಹದ ಮಾಂಸವನ್ನು ಕೊಡು. ತಕ್ಕಡಿಯಲ್ಲಿ ತೂಕಿ ಪಾರಿವಾಳದಷ್ಟು ಭಾರವುಳ್ಳ ಮಾಂಸವನ್ನು ಕೊಟ್ಟರೆ ನನಗೆ ಸಂತೋಷವಾಗುವುದು' ಎಂದಿತು.

ಆದಕ್ಕೆ ರಾಜನು ಪಕ್ಷಿರಾಜನೇ! ಪರಮಾನುಗ್ರಹವನ್ನು ಮಾಡಿದಿ. ತಕ್ಕಡಿಯಲ್ಲಿ ತೂಗಿಸಿ ನನ್ನ ಮಾಂಸವನ್ನು ಕೊಡುವೆನು ಎಂದನು.

ತರುವಾಯ ಪರಮಧರ್ಮಜ್ಞನಾದ ರಾಜನು ತಕ್ಕಡಿಯಲ್ಲಿ ಪಾರಿವಾಳವನ್ನು

ಇಟ್ಟು ತನ್ನ ಮಾಂಸವನ್ನು ತೂಕಮಾಡಿದನು. ಎಷ್ಟು ಮಾಂಸವನ್ನು ಹಾಕಿದರೂ ಪಾರಿವಾಳದ ಭಾರವೇ ಹೆಚ್ಚಾಯಿತು. ತನ್ನ ದೇಹದ ಮಾಂಸವನ್ನೆಲ್ಲಾ ಕಿತ್ತಿಕಿತ್ತಿ ಹಾಕಿದನು. ಕೊನೆಗೆ ತಾನೇ ತಕ್ಕಡಿಯಲ್ಲಿ ಕೂತುಕೊಂಡನು.

ಆಗ ಹದ್ದು 'ಧರ್ಮವನ್ನು ತಿಳಿದ ರಾಜನೇ! ನಾನು ದೇವೇಂದ್ರನು. ಈ ಪಾರಿವಾಳವು ಅಗ್ನಿಯು. ನಿನ್ನನ್ನು ಪರೀಕ್ಷಾ ಮಾಡಲು ನಿನ್ನ ಈ ಯಜ್ಞಶಾಲೆಗೆ ಬಂದಿರುವೆವು. ನೀನು ದೇಹದಿಂದ ಮಾಂಸವನ್ನು ಕಿತ್ತಿದ ಕಾರಣ ನಿನ್ನ ಕೀರ್ತಿಯು ಶಾಶ್ವತವಾಗಿ ಇರುವುದು. ಎಷ್ಟು ಕಾಲ ಲೋಕದಲ್ಲಿ ನಿನ್ನನ್ನು ಜನರು ಹೇಳುತ್ತಾ ಇರುವರೋ ಅಷ್ಟುಕಾಲ ನಿನ್ನ ಕೀರ್ತಿಯೂ ಇರುವುದು. ನಿನಗೆ ಶಾಶ್ವತಲೋಕಗಳೂ ಇರುವುವ' ಎಂದು ಹೇಳಿ ಇಂದ್ರಾಗ್ನಿಗಳು ಸಂತೋಷವುಳ್ಳವರಾಗಿ ರಾಜನಿಗೆ ವರವನ್ನು ಕೊಟ್ಟು ಹೊರಟುಹೋದರು. ರಾಜನು ತನ್ನ ಧರ್ಮದಿಂದ ಸ್ವರ್ಗಲೋಕವನ್ನು ಹೊಂದಿದನು.



## ಯುದ್ಧದಿಂದ ಸುದೇವನಿಗೆ ಸ್ವರ್ಗ ಪ್ರಾಪ್ತಿಯು [1]

ಅಂಬರೀಷರಾಜನು ಸ್ವರ್ಗಕ್ಕೆ ಹೋದವನು ಅಲ್ಲಿ ಈ ಇಂದ್ರದೇವರೊಡನೆ ಸ್ವರ್ಗಲೋಕದಲ್ಲಿ ಇದ್ದ ತೇಜೋಮಯವಾದ ವಿಮಾನದಲ್ಲಿ ಕೂತುಕೊಂಡು ಮೇಲೆಮೇಲೆ ಇರುವ ಸ್ಥಾನಕ್ಕೆ ಹೋಗುತ್ತಿರುವ ತನ್ನ ಸೇನಾಧಿಪತಿಯಾದ ಸುದೇವನನ್ನು ನೋಡಿದನು. ಸುದೇವನ ಅಂತಹ ವೈಭವವನ್ನು ನೋಡಿ ಅಂಬರೀಷರಾಜನು ಆಶ್ಚರ್ಯವುಳ್ಳವನಾಗಿ ಇಂದ್ರದೇವರೊಡನೆ 'ನಾನು ಸಮುದ್ರ ಪರ್ಯಂತವಾದ ಸಮಸ್ತ ಭೂಮಿಯನ್ನು ಆಳತಕ್ಕವನಾಗಿದ್ದೇನೆ. ನಾಲ್ಕು ವರ್ಣದವರನ್ನು ಅವರವರ ಧರ್ಮದಲ್ಲಿ ಸ್ಥಾಪಿಸಿದ್ದೇನೆ. ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡಿದ್ದೇನೆ. ಗುರುಗಳ ಸೇವೆಯನ್ನು ಮಾಡಿದ್ದೇನೆ. ವೇದಗಳನ್ನು ಅಧ್ಯಯನ ಮಾಡಿದ್ದೇನೆ. ರಾಜಧರ್ಮಗಳನ್ನು ತಿಳಿದಿದ್ದೇನೆ. ಅತಿಥಿಗಳನ್ನು ಅನುಪಾನಗಳಿಂದಲೂ ಪಿತೃಗಳನ್ನು ಶ್ರಾದ್ಧಗಳಿಂದಲೂ ಋಷಿಗಳನ್ನು ಶಾಸ್ತ್ರಾಧ್ಯಯನ ದಿಂದಲೂ ದೇವತೆಗಳನ್ನು ಉತ್ತಮಯಜ್ಞಗಳಿಂದಲೂ ಸಂತೋಷಪಡಿಸಿದ್ದೇನೆ. ಕ್ಷತ್ರಿಯಧರ್ಮದಲ್ಲಿ ಇದ್ದು ಯುದ್ಧದಲ್ಲಿ ಶತ್ರುಸೇನೆಯನ್ನು ಜಯಿಸಿದ್ದೇನೆ.

1. ಶ.ವ.

ದೇವೇಂದ್ರ, ಈ ಸುದೇವನು ನನ್ನ ಸೇನಾಧಿಪತಿಯಾಗಿದ್ದನು. ಯುದ್ಧಮಾಡಿ ಸಾಯತಕ್ಕವನಾಗಿ ದ್ದಾನೆ. ಇವನು ಏಕೆ ನನ್ನನ್ನು ಅತಿಕ್ರಮಿಸಿ ಸೂರ್ಯನಂತೆ ಪ್ರಕಾಶಿಸುವ ವಿಮಾನದಲ್ಲಿ ಕೂತುಕೊಂಡು ಪ್ರಕಾಶಿಸುತ್ತಾನೆ? ಇವನು ನನ್ನಂತೆ ಯಾಗಗಳನ್ನು ಮಾಡಲಿಲ್ಲ. ಬ್ರಾಹ್ಮಣರನ್ನು ತೃಪ್ತಿಪಡಿಸಲಿಲ್ಲ. ಹೀಗಿರುವಾಗ ನನ್ನನ್ನು ಅತಿಕ್ರಮಿಸಿ ದೇವತೆಗಳಿಗೂ ದುರ್ಲಭವಾದ ಐಶ್ವರ್ಯವನ್ನು ಹೇಗೆ ಹೊಂದಿದನು? ಎಂದು ಕೇಳಿದನು.

ಅದಕ್ಕೆ ಇಂದ್ರದೇವರು 'ಇವನು ಮಾಡಿದ ಕಾರ್ಯವು ನಿನಗೇ ಪ್ರತ್ಯಕ್ಷವಾಗಿದೆ ಯಲ್ಲಾ! ನೀನು ಪೂರ್ವದಲ್ಲಿ ರಾಜ್ಯಭಾರವನ್ನು ಮಾಡುತ್ತಿರುವಾಗ ನಿನಗೆ ಅಹಿತವನ್ನು ಮಾಡುವ ಶತ್ರುಗಳನ್ನೆಲ್ಲಾ ಜಯಿಸಿರುವನು. ಆ ಸಮಯದಲ್ಲಿ ಶತಶೃಂಗ ಎಂಬ ರಾಕ್ಷಸನ ಸಂಯಮ ವಿಯಮ ಸುಯಮ ಎಂಬ ಮೂರು ಜನ ಮಕ್ಕಳಾದ ರಾಕ್ಷಸರು ಲೋಕದಲ್ಲಿ ಪರಾಜಯ ಶೂನ್ಯರಾಗಿದ್ದರು. ನೀನು ಒಂದೇ ಶುಭಕಾಲದಲ್ಲಿ ಅಶ್ವಮೇಧಯಾಗವನ್ನು ಮಾಡಿದಿ. ಆಗ ಆ ರಾಕ್ಷಸರು ನಿನ್ನ ಯಾಗಕ್ಕೆ ವಿಘ್ನ ಮಾಡಲಿಕ್ಕೆ ಬಂದರು. ಆ ಮೂರು ಜನ ರಾಕ್ಷಸರು ನೂರು ಕೋಟಿ ರಾಕ್ಷಸರಿಂದ ಕೂಡಿದ ಸೈನ್ಯದಿಂದ ಸಹಿತರಾಗಿ ಬಂದು ನಿನ್ನ ಪ್ರಜೆಗಳನ್ನೆಲ್ಲಾ ಹಿಡಿದರು. ಎಲ್ಲಾ ಪ್ರಜೆಗಳೂ ನಿನ್ನ ಸೈನ್ಯದವರೂ ಪರವಶರಾದರು. ಆ ಸಮಯದಲ್ಲಿ ನೀನು ಮಂತ್ರಿಯ ಮಾತನ್ನು ಕೇಳಿ ಸೇನಾಪತಿಯಾಗಿದ್ದ ಈ ಸುದೇವನನ್ನು ನಿರಾಕರಣೆ ಮಾಡಿದ್ದಿ. ಆಗ ಮಂತ್ರಿಗಳ ಮಾತನ್ನು ಕೇಳಿ ನೀನು ರಾಕ್ಷಸರನ್ನು ಜಯಿಸಿಕೊಂಡು ಬರಬೇಕೆಂದು ಸೈನ್ಯಸಹಿತನಾದ ಸುದೇವನಿಗೆ ಆಜ್ಞಾ ಮಾಡಿದಿ. ಬಂಧಿಸಲ್ಪಟ್ಟ ಜನರನ್ನು ಬಿಡಿಸದೆ ನೀನು ಇಲ್ಲಿಗೆ ಹಿಂತಿರುಗಿ ಬರಬಾರದು ಎಂದು ಸುದೇವನಿಗೆ ಆಜ್ಞಾಪಿಸಿದಿ. ಸುದೇವನು ನಿನ್ನ ಮಾತನ್ನು ಕೇಳಿ ಪ್ರಜೆಗಳ ಬಂಧಿಸಲ್ಪಟ್ಟು ಇದ್ದ ಸ್ಥಳಕ್ಕೆ ಹೋದನು. ಅಲ್ಲಿ ಇದ್ದ ಭಯಂಕರವಾದ ರಾಕ್ಷಸಸೈನ್ಯವನ್ನು ನೋಡಿದನು. ಆ ರಾಕ್ಷಸಸೈನ್ಯವನ್ನು ನೋಡಿ ಸೇನಾಪತಿಯಾದ ಸುದೇವನು 'ಈ ಸೈನ್ಯವನ್ನು ಇಂದ್ರಾದಿದೇವತೆಗಳೂ ಜಯಿಸಲಿಕ್ಕೆ ಆಗಲಾರದು. ಅಂಬರೀಷರಾಜನು ಈ ಸೈನ್ಯಕರಲ್ಲಿ ಹದಿನಾರನೇ ಒಂದು ಭಾಗವನ್ನು ನಾಶಮಾಡಲಿಕ್ಕೆ ಸಮರ್ಥನಲ್ಲ. ದಿವ್ಯಾಸ್ತ್ರಬಲವುಳ್ಳ ರಾಜನೇ ಹಾಗಿರುವಾಗ ನನ್ನಂತಹರ ಪಾಡೇನು ಎಂದು ಹೇಳಿಕೊಂಡನು. ತರುವಾಯ ನೀನು ಯಜ್ಞಮಾಡುತ್ತಿರುವ ಸ್ಥಳಕ್ಕೇನೇ ಎಲ್ಲಾ ಸೈನ್ಯವನ್ನೂ ಹಿಂದೆ ಕಳುಹಿಸಿದನು. ಸೇನಾಪತಿಯ ಮೇಲೆ ಚಾಡಿಹೇಳಿರುವ ಮಂತ್ರಿಗಳೊಡನೆ ನೀನು ಕೂಡಿರುವ ಸ್ಥಳಕ್ಕೆ ಸೈನ್ಯವನ್ನು ಕಳುಹಿಸಿದನು.

ತರುವಾಯ ಸ್ಮಶಾನವಾಸಿಯಾದ ಜಗತ್ತಿಗೆ ಸ್ವಾಮಿಯಾದ ರುದ್ರದೇವರನ್ನು ಸ್ತೋತ್ರ ಮಾಡಿ ಶಸ್ತ್ರವನ್ನು ತೆಗೆದು ತನ್ನ ತಲೆಯನ್ನು ಕಡಿದುಕೊಳ್ಳಲಿಕ್ಕೆ ಉದ್ಯುಕ್ತನಾದನು. ಆಗ ಕೃಪೆಯಿಂದ ರುದ್ರದೇವರು ಶಸ್ತ್ರಹಿಡಿದುಕೊಂಡಿರುವ ಬಲಕೈಯನ್ನು ಹಿಡಿದು 'ವತ್ಸ! ಯಾಕೆ ಈ ಸಾಹಸಕಾರ್ಯವನ್ನು ಮಾಡುವಿ? ನಿನಗೆ ಏನಾಗಬೇಕಾಗಿದೆ?' ಎಂದು ಕೇಳಿದರು. ಆಗ ಸುದೇವನು ರುದ್ರದೇವರಿಗೆ ಉದ್ದಕ್ಕೆ ನಮಸ್ಕಾರ ಮಾಡಿ 'ಪೂಜ್ಯರೇ! ಈ ರಾಕ್ಷಸರ ಸೈನ್ಯವನ್ನು ನಾಶಮಾಡಲಿಕ್ಕೆ ಅಸಮರ್ಥನಾಗಿದ್ದೇನೆ. ಆದುದರದಿಂದ ಪ್ರಾಣಬಿಡುವೆನು. ನೀವೇ ನನಗೆ ರಕ್ಷಕರಾಗಬೇಕು. ಅಂಬರೀಷರಾಜನು ಮಂತ್ರಿಗಳ ಚಾಡಿ ಮಾತುಗಳಿಗೆ ಕಿವಿಕೊಟ್ಟು, ಈ ರಾಕ್ಷಸಸೈನ್ಯವನ್ನು ಜಯಿಸದೆ ಹಿಂದೆ ತಿರುಗಿ ಬರಬಾರದು ಎಂದು ಹೇಳಿರುವನು' ಎಂದು ಹೇಳಿದನು.

ಆದಕ್ಕೆ ರುದ್ರದೇವರು ತಾನು ತ್ರಿಪುರಾಸುರನನ್ನು ಸಂಹರಿಸಿದ ರಥವನ್ನೂ ಪಿನಾಕಧನುಸ್ಸನ್ನು ಖಡ್ಗವನ್ನೂ ರೌದ್ರಾಸ್ತ್ರವನ್ನೂ ಕೊಟ್ಟು ಸುದೇವನೊಡನೆ 'ರಾಕ್ಷಸರ ಮಾಯೆಯಿಂದ ಮೋಹಿತನಾಗಿ ಭೂಮಿಯಲ್ಲಿ ಪಾದವನ್ನು ಇಡದೆ ರಥದಲ್ಲಿಯೇ ಕೂತುಕೊಂಡು ಯುದ್ಧವನ್ನು ಮಾಡಿದರೆ ನಿನ್ನನ್ನು ದೇವತೆಗಳಾಗಲೀ ಅಸುರರಾಗಲೀ ಜಯಿಸಲಿಕ್ಕೆ ಆಗಲಾರದು. ರಥದಲ್ಲಿ ಕೂತುಕೊಂಡು ಎಲ್ಲಾ ಅಸುರರನ್ನು ಜಯಿಸುವಿ. ಸಾವಿರ ಸೂರ್ಯರಂತೆ ಕಾಂತಿಯುಳ್ಳ ರಥವನ್ನು ರಾಕ್ಷಸರೂ ಪಿಶಾಚಿಗಳೂ ನೋಡಲಿಕ್ಕೇನೇ ಸಮರ್ಥಗಳಾಗಲಾರವು. ಯುದ್ಧಮಾಡಲಿಕ್ಕೆ ಹೇಗೆ ಸಾಧ್ಯವಾಗುವುದು?' ಎಂದು ಅನುಗ್ರಹಿಸಿ ಹೊರಟುಹೋದರು.

ತರುವಾಯ ಎಲ್ಲಾ ರಾಕ್ಷಸರನ್ನೂ ಜಯಿಸಿ, ಎಲ್ಲರನ್ನೂ ಬಂಧನದಿಂದ ಬಿಡಿಸಿ ವಿಯಮನೊಡನೆ ಬಾಹುಯುದ್ಧವನ್ನು ಮಾಡಿ ವಿಯಮನಿಂದ ಮೃತನಾದನು. ವಿಯಮನೂ ಮೃತನಾದನು. ಈರೀತಿಯಾಗಿ ಸಂಗ್ರಾಮಯಜ್ಞವನ್ನು ಮಾಡಿದವನಾದ ಪ್ರಯುಕ್ತ ಇಂತಹ ಉತ್ತಮಸ್ಥಾನವನ್ನು ಹೊಂದಿರುವನು' ಎಂದು ಹೇಳಿ ಯುದ್ಧವನ್ನು ಯಾಗಕ್ಕೆ ಹೋಲಿಸಿ ವರ್ಣನೆ ಮಾಡಿದರು. ಆದುದರಿಂದ ಯುದ್ಧದಲ್ಲಿ ಮೃತರಾದ ವೀರರಿಗೆ ಉಚಿತವಾದ ಸ್ವರ್ಗವು ಸಿಗುವುದು.



# ಆಸೆಯ ಕಥೆ [1]

ಪೂರ್ವದಲ್ಲಿ ಹೇಹಯವಂಶದ ಸುಮಿತ್ರ ಎಂಬ ರಾಜನು ಇದ್ದನು. ಅವನು ಒಂದುದಿನ ಮೃಗಬೇಟೆಗೆ ಹೋದನು. ಅಲ್ಲಿ ಒಂದು ಮೃಗಕ್ಕೆ ಬಾಣವನ್ನು ಬಿಟ್ಟನು. ಆ ಮೃಗವು ಬಾಣಸಹಿತವಾಗಿ ಅನೇಕ ವನಗಳನ್ನು ದಾಟಿ ಓಡಿಹೋಯಿತು. ರಾಜನೂ ಅಟ್ಟಿಸಿಕೊಂಡು ಹೋದನು. ಬಹುದೂರ ಹೋದಮೇಲೆ ರಾಜನು ಒಂದು ದೊಡ್ಡ ಬಾಣವನ್ನು ಬಿಟ್ಟನು. ಮೃಗವು ಬಾಣದ ಮಾರ್ಗವನ್ನು ಬಿಟ್ಟು ನೆಗುತ್ತಾ ನಿಂತಿತು. ರಾಜನು ಬಿಟ್ಟ ಬಾಣವು ಭೂಮಿಯಲ್ಲಿ ಬಿದ್ದಿತು. ಮೃಗವು ಕಾಡಿನೊಳಗೆ ಹೊರಟುಹೋಯಿತು.

ರಾಜನು ಆ ಕಾಡಿನಲ್ಲಿ ಋಷಿಗಳ ಆಶ್ರಮವನ್ನು ಪ್ರವೇಶಿಸಿ ಶ್ರಮದಿಂದ ಕೂತುಕೊಂಡು ಬಿಟ್ಟನು. ಧನುರ್ಧಾರಿಯಾಗಿ ಹಸಿವೆ ದಾಹದಿಂದ ಬಂದಿರುವ ರಾಜನನ್ನು ನೋಡಿ ಋಷಿಗಳು ಅವನಿಗೆ ವಿಧಿಪ್ರಕಾರವಾಗಿ ಪೂಜಾ ಮಾಡಿದರು. ರಾಜನು ಋಷಿಗಳು ಮಾಡಿದ ಪೂಜೆಯನ್ನು ಸ್ವೀಕರಿಸಿ ವಿಘ್ನವಿಲ್ಲದೆ ತಪಸ್ಸು ಮಾಡುತ್ತಿರುವಿರಾ? ಎಂದು ಪ್ರಶ್ನೆ ಮಾಡಿದನು. ಋಷಿಗಳು ರಾಜನೊಡನೆ ತಮ್ಮ ಕುಶಲವನ್ನು ತಿಳಿಸಿ 'ಯಾವ ಕಾರ್ಯಕ್ಕಾಗಿ ಕವಚಧಾರಿಯಾಗಿ ಧನುರ್ಬಾಣಧಾರಿಯಾಗಿ ಪದಾತಿಯಾಗಿ ವನಕ್ಕೆ ಬಂದಿರುವಿ? ನೀನು ಯಾವ ಕುಲದಲ್ಲಿ ಹುಟ್ಟಿದವನು? ನಿನ್ನ ಹೆಸರೇನು?' ಎಂದು ಕೇಳಿದರು.

ಆದಕ್ಕೆ ಆ ರಾಜನು ಅವರೊಡನೆ ನಾನು ಹೈಹಯಕುಲದ ರಾಜನು. ಸುಮಿತ್ರ ಎಂದು ಹೆಸರುಳ್ಳವನು. ಬೇಟೆ ಆಡುತ್ತಾ ಬಂದೆನು. ಒಂದು ಮೃಗವನ್ನು ಅಟ್ಟಿಸಿಕೊಂಡು ಬಂದೆನು. ಮೃಗದ ಆಸೆಯಿಂದ ಬಂದೆನು. ಮೃಗವು ಕಾಣಿಸದೆ ಹೋಯಿತು. ನನ್ನ ಆಸೆಯು ವ್ಯರ್ಥವಾಯಿತೆಂದು ತುಂಬಾ ದುಃಖವಾಗುತ್ತದೆ. ಆಸೆಯು ದೊಡ್ಡದೋ? ಆಕಾಶವು ದೊಡ್ಡದೋ? ತಮಗೆ ತಪಸ್ಸಿಗೆ ವಿಘ್ನವುಂಟಾಗದಿದ್ದರೆ ಈ ವಿಷಯವನ್ನು ಹೇಳಿರಿ' ಎಂದು ಕೇಳಿದನು.

ಆದಕ್ಕೆ ಋಷಿಗಳು ಸೇರಿರುವ ಸ್ಥಳದಲ್ಲಿ ಋಷಭ ಎಂಬ ಋಷಿಯು ಆಶ್ಚರ್ಯವುಳ್ಳವನಾಗಿ ಹೇಳಿದನು. ರಾಜಶ್ರೇಷ್ಠನೇ! ನಾನು ತೀರ್ಥಯಾತ್ರಾ ಮಾಡುತ್ತಾ ಬದರಿಕಾಶ್ರಮಕ್ಕೆ ಹೋಗಿದ್ದೆನು. ಅಲ್ಲಿ ವೈಹಾಯಸ ಎಂಬ ಸರೋವರದಲ್ಲಿ ಸ್ನಾನಮಾಡಿ ದೇವರ್ಷಿ ಪಿತೃತರ್ಪಣವನ್ನು ಬಿಟ್ಟು ನರನಾರಾಯಣಾಶ್ರಮಕ್ಕಿಂತ

1. ಮಭಾ. ಶಾಂ.ಪ. ಅಪ. ಅ-125-128

ಸ್ವಲ್ಪದೂರಕ್ಕೆ ವಾಸಮಾಡಲಿಕ್ಕೆ ಹೋದೆನು. ಅಲ್ಲಿ ನಾರುವಸ್ತ್ರವನ್ನು ಉಟ್ಟುಕೊಂಡು ಕೃಷ್ಣಾಜಿನವನ್ನು ಧರಿಸಿಕೊಂಡು ಬರುವ ಒಬ್ಬ ಅತ್ಯಂತ ಕೃಶನಾದ ಋಷಿಯನ್ನು ನೋಡಿದೆನು. ಅವನ ಹೆಸರು ತನು ಎಂದು. ಅಷ್ಟು ಕೃಶನಾಗಿರುವ ಯಾರನ್ನೂ ನಾನು ಅಷ್ಟರವರೆಗೆ ನೋಡಿದ್ದೇ ಇಲ್ಲ. ಕುತ್ತಿಗೆ ಕೈಕಾಲು ಎಲ್ಲವೂ ಅತ್ಯಂತ ಸಪುರವಾಗಿದ್ದವು. ಆ ಋಷಿಯನ್ನು ನೋಡಿ ನಾನು ಭಯವುಳ್ಳವನಾಗಿ ನಮಸ್ಕಾರ ಮಾಡಿದೆನು. ನನ್ನ ನಾಮಗೋತ್ರಗಳನ್ನು ಹೇಳಿ ನನ್ನ ಕಾರ್ಯವನ್ನು ತಿಳಿಸಿ ಪಾದಕ್ಕೆ ಉದ್ದಕ್ಕೆ ನಮಸ್ಕಾರ ಮಾಡಿದೆನು. ಆ ಮುನಿಯು ತೋರಿಸಿದ ಆಸನದಲ್ಲಿ ಕೂತುಕೊಂಡೆನು.

ತರುವಾಯ ಆ ಮುನಿಯು ಅನೇಕ ಧರ್ಮಾರ್ಥಯುಕ್ತ ಕಥೆಗಳನ್ನು ಹೇಳಿದನು. ಆಮುನಿಯು ಹಾಗೆ ಹೇಳುತ್ತಿರುವಾಗ ಒಬ್ಬ ರಾಜನು ಕುದುರೆಯ ಮೇಲೆ ಕೂತುಕೊಂಡು ಸೈನ್ಯ ಸಮೇತನಾಗಿ ಅಂತಃಪುರದ ಜನರಿಂದ ಕೂಡಿಕೊಂಡು ಅಲ್ಲಿಗೆ ಬಂದನು. ಅವನ ಹೆಸರು ವೀರದ್ಯುಮ್ನ ಎಂದು. ಅವನ ಮಗನು ಭೂರಿದ್ಯುಮ್ನನು ಕಾಣಿಸದೆ ಹೋಗಿದ್ದನು. ಅವನನ್ನು ಹುಡುಕುತ್ತಾ ರಾಜನು ಅಲ್ಲಿಗೆ ಬಂದನು. 'ಮಗನನ್ನು ಇಲ್ಲಿ ನೋಡುವೆನಾ' ಇಲ್ಲಿ ನೋಡುವೆನಾ' ಎಂದು ಆಸೆಯಿಂದ ಈ ವನವನ್ನೆಲ್ಲಾ ಸಂಚರಿಸಿದೆನು. ಪುನಃ ಆ ಮಗನನ್ನು ನೋಡಲು ಸಾಧ್ಯವಾಗದು ಎಂದು ಕಾಣುತ್ತದೆ. ನನಗೆ ಒಬ್ಬನೇ ಮಗನು. ಮರೆಯಾಗಿ ಹೋದನು. ಅವನನ್ನು ನಾನು ನೋಡಲಿಕ್ಕೆ ಆಗಲಾರದೇ? ಅವನನ್ನು ನೋಡಬೇಕೆಂದು ನನಗೆ ಬಹಳ ಆಸೆಯಿದೆ. ಆ ಆಸೆಯಿಂದ ಕೂಡಿದ ಸಾಯುವಂತೆ ಆಗಿದ್ದೇನೆ' ಎಂದು ಆ ರಾಜನು ಅಲ್ಲಿ ಹೇಳಿದನು. ಅದನ್ನು ಕೇಳಿ ಆ ಕೃಶನಾದ ಮುನಿಯು ಮುಖವನ್ನು ತಗ್ಗಿಸಿಕೊಂಡು ಯೋಚನೆಮಾಡುತ್ತಾ ಒಂದು ಮುಹೂರ್ತಕಾಲ ಕೂತಿದ್ದನು. ಮಾತಾಡದೆ ಯೋಚಿಸುತ್ತಿರುವ ಆ ಮುನಿಯನ್ನು ನೋಡಿ ರಾಜನು ಪರಮದುಃಖವುಳ್ಳವನಾಗಿ 'ದೇವರ್ಷಿಗಳೇ! ದುರ್ಲಭವಾದದ್ದು ಯಾವುದು? ಆಸೆಯಿಂದ ದೊಡ್ಡದಾದದ್ದು ಯಾವುದು? ಇದು ರಹಸ್ಯವಾಗಿರದಿದ್ದರೆ ನನಗೆ ಹೇಳಬೇಕು' ಎಂದು ಕೇಳಿದನು.

ಅದಕ್ಕೆ ಆ ಋಷಿಯು 'ನಿನ್ನ ಮಗನು ತನ್ನ ಮಂದಭಾಗ್ಯದಿಂದ ಬಾಲ ಬುದ್ಧಿಯುಳ್ಳವನಾಗಿ ತನ್ನೊಡನೆ ಹಣವನ್ನೂ ನಾರುವಸ್ತ್ರವನ್ನೂ ಯಾಚನೆ ಮಾಡಲಿಕ್ಕೆ ಬಂದ ಒಬ್ಬ ಮಹರ್ಷಿಯನ್ನು ಅವಮಾನ ಮಾಡಿದನು. ತಿರಸ್ಕಾರ ಮಾಡಿಯೂ ಆ ಋಷಿಗಳಿಗೆ ಬೇಕಾದ್ದನ್ನು ಕೊಡಲಿಲ್ಲ. ಇದರಿಂದ ಆ ಋಷಿಗಳು ವೈರಾಗ್ಯ ಹೊಂದಿದರು. ನಿರಾಶರಾದರು' ಎಂದು ಹೇಳಿದನು. ಈ ಮಾತನ್ನು ಕೇಳಿ ಆ ರಾಜನು ಆ ಋಷಿಗೆ ನಮಸ್ಕಾರ ಮಾಡಿ ಶ್ರಮದಿಂದ ಅಲ್ಲಿಯೇ ಕೂತುಕೊಂಡು ಬಿಟ್ಟನು. ಆ

ರಾಜನಿಗೆ ಋಷಿಯು ಅರ್ಘ್ಯಪಾದ್ಯಗಳನ್ನು ಕೊಟ್ಟು ಅರಣ್ಯದಲ್ಲಿ ಸಿಗುವ ಹಣ್ಣುಗೆಡ್ಡೆ ಇವುಗಳಿಂದ ಸತ್ಕರಿಸಿದನು. ತರುವಾಯ ಎಲ್ಲಾ ಋಷಿಗಳೂ ಅವನ ಸುತ್ತಲೂ ಕೂತುಕೊಂಡು ಈ ಆಶ್ರಮಕ್ಕೆ ಬರಲು ಏನು ಕಾರಣವೆಂದು ಕೇಳಿದನು.

ಅದಕ್ಕೆ ಅವನು 'ನಾನು ವೀರದ್ಯುಮ್ನನೆಂಬ ಸರ್ವತ್ರ ಪ್ರಸಿದ್ಧನಾದ ರಾಜನು. ನನ್ನ ಮಗನಾದ ಭೂರಿದ್ಯುಮ್ನನು ಮರೆಯಾಗಿ ಹೋದನು. ಅವನನ್ನು ಹುಡುಕುತ್ತಾ ಈ ವನಕ್ಕೆ ಬಂದೆನು. ನನಗೆ ಒಬ್ಬನೇ ಮಗನು. ಅವನು ಚಿಕ್ಕಹುಡುಗನು. ನಿರ್ದೋಷಿಯು. ಈ ವನದಲ್ಲಿಯೂ ಅವನು ಕಾಣಿಸಲಿಲ್ಲ. ಅವನನ್ನು ಹುಡುಕುತ್ತಾ ಸಂಚರಿಸುತ್ತಿರುವೆನು' ಎಂದನು.

ಇದನ್ನು ಕೇಳಿ ಆ ಕೃಶನಾದ ಮುನಿಯು ಮುಖವನ್ನು ತಗ್ಗಿಸಿಕೊಂಡು ಸುಮ್ಮಗೆ ಇದ್ದನು. ಒಂದು ಮಾತನ್ನೂ ಆಡಲಿಲ್ಲ. ಈ ಮುನಿಯನ್ನೇ ಪೂರ್ವದಲ್ಲಿ ಅತ್ಯಂತ ಬಹುಮಾನವನ್ನು ಹೊಂದಿರಲಿಲ್ಲ. ಆಶಾಭಂಗವನ್ನು ಹೊಂದಿದ್ದನು. ಅದರಿಂದ ದೀರ್ಘತಪಸ್ಸು ಮಾಡಿದ್ದನು. 'ನಾನು ಇನ್ನು ಮುಂದೆ ರಾಜರಿಂದ ಯಾವದಾನವನ್ನೂ ತೆಗೆದುಕೊಳ್ಳುವುದಿಲ್ಲ. ಇತರರಿಂದಲೂ ತೆಗೆದುಕೊಳ್ಳುವುದಿಲ್ಲ. ಆಸೆಯು ಅಜ್ಞಾನಿಯನ್ನು ದುಃಖಪಡಿಸುತ್ತದೆ. ನಾನು ಸರ್ವಥಾ ಪರಿತ್ಯಾಗ ಮಾಡುತ್ತೇನೆ' ಎಂದು ನಿಶ್ಚಯಿಸಿಕೊಂಡಿದ್ದನು. ರಾಜನು ಅವನೊಡನೆ 'ಆಸೆಯು ಹೇಗೆ ಇರುವುದು' ಲೋಕದಲ್ಲಿ ದುರ್ಲಭವಾದದ್ದು ಯಾವುದು' ಎಂದು ಕೇಳಿದನು.

ಆಗ ಆ ಮುನಿಯು ತನಗೆ ಆ ರಾಜನು ಅವಮಾಡಿದ್ದನ್ನು ಜ್ಞಾಪಕಪಡಿಸುವುದ ಕ್ಕೋಸ್ಕರ 'ಆಸೆಯುಳ್ಳವರಿಗೆ ಸಮವಾಗಿ ಕೃಶನಾದವನು ಇಲ್ಲ. ಆಸೆಪಡುವ ವಸ್ತುವು ದುರ್ಲಭವಾದ ಕಾರಣವೇ ನಾನು ರಾಜನೊಡನೆ ಒಂದು ವಸ್ತುವನ್ನು ಪ್ರಾರ್ಥಿಸಿದೆನು' ಎಂದರು.

ರಾಜನು 'ಆಸೆಗೆ ವಶನಾದವನು ಕೃಶನು. ಆಸೆಯನ್ನು ಜಯಿಸಿದವನು ಕೃಶನಲ್ಲ ಎಂಬುದನ್ನು ತಿಳಿದೆನು. ಪೂಜ್ಯರೇ! ನನಗೆ ಇನ್ನೊಂದು ಸಂದೇಹ ಬಂದಿದೆ. ನೀವು ತುಂಬಾ ಕೃಶರಾಗಿದ್ದೀರಿ. ನಿಮಗಿಂತ ಕೃಶರಾದವರು ಯಾರಾದರೂ ಇದ್ದರೆ ರಹಸ್ಯವಲ್ಲದಿದ್ದರೆ ನನಗೆ ತಿಳಿಸಬೇಕು' ಎಂದನು.

ಮುನಿಯು 'ಯಾಚನೆ ಮಾಡುವವನು ಧೈರ್ಯದಿಂದ ಇರುವವನು ದುರ್ಲಭ. ಅಥವಾ ಇಲ್ಲ. ಅದಕ್ಕಿಂತಲೂ ಯಾಚನೆ ಮಾಡಿದವನನ್ನು ಅವಮಾನ ಮಾಡದೆ ಇದ್ದವನು ಅತ್ಯಂತ ದುರ್ಲಭನು. ಮೊದಲು ಯಾಚಕನಿಗೆ ಆದರದಿಂದ ಆಸೆ ತೋರಿಸಿ ಆಮೇಲೆ ಇಲ್ಲವೆಂದು ಹೇಳಿದರೆ ಆ ಯಾಚಕನಲ್ಲಿ ಇರುವ ಆಸೆಯು

ಸ್ವಲ್ಪದೂರಕ್ಕೆ ವಾಸಮಾಡಲಿಕ್ಕೆ ಹೋದೆನು. ಅಲ್ಲಿ ನಾರುವಸ್ತ್ರವನ್ನು ಉಟ್ಟುಕೊಂಡು ಕೃಷ್ಣಾಜಿನವನ್ನು ಧರಿಸಿಕೊಂಡು ಬರುವ ಒಬ್ಬ ಅತ್ಯಂತ ಕೃಶನಾದ ಋಷಿಯನ್ನು ನೋಡಿದೆನು. ಅವನ ಹೆಸರು ತನು ಎಂದು. ಅಷ್ಟು ಕೃಶನಾಗಿರುವ ಯಾರನ್ನೂ ನಾನು ಅಷ್ಟರವರೆಗೆ ನೋಡಿದ್ದೇ ಇಲ್ಲ. ಕುತ್ತಿಗೆ ಕೈಕಾಲು ಎಲ್ಲವೂ ಅತ್ಯಂತ ಸಪುರವಾಗಿದ್ದವು. ಆ ಋಷಿಯನ್ನು ನೋಡಿ ನಾನು ಭಯವುಳ್ಳವನಾಗಿ ನಮಸ್ಕಾರ ಮಾಡಿದೆನು. ನನ್ನ ನಾಮಗೋತ್ರಗಳನ್ನು ಹೇಳಿ ನನ್ನ ಕಾರ್ಯವನ್ನು ತಿಳಿಸಿ ಪಾದಕ್ಕೆ ಉದ್ದಕ್ಕೆ ನಮಸ್ಕಾರ ಮಾಡಿದೆನು. ಆ ಮುನಿಯು ತೋರಿಸಿದ ಆಸನದಲ್ಲಿ ಕೂತುಕೊಂಡೆನು.

ತರುವಾಯ ಆ ಮುನಿಯು ಅನೇಕ ಧರ್ಮಾರ್ಥಯುಕ್ತ ಕಥೆಗಳನ್ನು ಹೇಳಿದನು. ಆಮುನಿಯು ಹಾಗೆ ಹೇಳುತ್ತಿರುವಾಗ ಒಬ್ಬ ರಾಜನು ಕುದುರೆಯ ಮೇಲೆ ಕೂತುಕೊಂಡು ಸೈನ್ಯ ಸಮೇತನಾಗಿ ಅಂತಃಪುರದ ಜನರಿಂದ ಕೂಡಿಕೊಂಡು ಅಲ್ಲಿಗೆ ಬಂದನು. ಅವನ ಹೆಸರು ವೀರದ್ಯುಮ್ನ ಎಂದು. ಅವನ ಮಗನು ಭೂರಿದ್ಯುಮ್ನನು ಕಾಣಿಸದೆ ಹೋಗಿದ್ದನು. ಅವನನ್ನು ಹುಡುಕುತ್ತಾ ರಾಜನು ಅಲ್ಲಿಗೆ ಬಂದನು. 'ಮಗನನ್ನು ಇಲ್ಲಿ ನೋಡುವೆನಾ' ಇಲ್ಲಿ ನೋಡುವೆನಾ' ಎಂದು ಆಸೆಯಿಂದ ಈ ವನವನ್ನೆಲ್ಲಾ ಸಂಚರಿಸಿದೆನು. ಪುನಃ ಆ ಮಗನನ್ನು ನೋಡಲು ಸಾಧ್ಯವಾಗದು ಎಂದು ಕಾಣುತ್ತದೆ. ನನಗೆ ಒಬ್ಬನೇ ಮಗನು. ಮರೆಯಾಗಿ ಹೋದನು. ಅವನನ್ನು ನಾನು ನೋಡಲಿಕ್ಕೆ ಆಗಲಾರದೇ? ಅವನನ್ನು ನೋಡಬೇಕೆಂದು ನನಗೆ ಬಹಳ ಆಸೆಯಿದೆ. ಆ ಆಸೆಯಿಂದ ಕೂಡಿದ ಸಾಯುವಂತೆ ಆಗಿದ್ದೇನೆ' ಎಂದು ಆ ರಾಜನು ಅಲ್ಲಿ ಹೇಳಿದನು. ಅದನ್ನು ಕೇಳಿ ಆ ಕೃಶನಾದ ಮುನಿಯು ಮುಖವನ್ನು ತಗ್ಗಿಸಿಕೊಂಡು ಯೋಚನೆಮಾಡುತ್ತಾ ಒಂದು ಮುಹೂರ್ತಕಾಲ ಕೂತಿದ್ದನು. ಮಾತಾಡದೆ ಯೋಚಿಸುತ್ತಿರುವ ಆ ಮುನಿಯನ್ನು ನೋಡಿ ರಾಜನು ಪರಮದುಃಖವುಳ್ಳವನಾಗಿ 'ದೇವರ್ಷಿಗಳೇ! ದುರ್ಲಭವಾದದ್ದು ಯಾವುದು? ಆಸೆಯಿಂದ ದೊಡ್ಡದಾದದ್ದು ಯಾವುದು? ಇದು ರಹಸ್ಯವಾಗಿರದಿದ್ದರೆ ನನಗೆ ಹೇಳಬೇಕು' ಎಂದು ಕೇಳಿದನು.

ಅದಕ್ಕೆ ಆ ಋಷಿಯು 'ನಿನ್ನ ಮಗನು ತನ್ನ ಮಂದಭಾಗ್ಯದಿಂದ ಬಾಲ ಬುದ್ಧಿಯುಳ್ಳವನಾಗಿ ತನ್ನೊಡನೆ ಹಣವನ್ನೂ ನಾರುವಸ್ತ್ರವನ್ನೂ ಯಾಚನೆ ಮಾಡಲಿಕ್ಕೆ ಬಂದ ಒಬ್ಬ ಮಹರ್ಷಿಯನ್ನು ಅವಮಾನ ಮಾಡಿದನು. ತಿರಸ್ಕಾರ ಮಾಡಿಯೂ ಆ ಋಷಿಗಳಿಗೆ ಬೇಕಾದ್ದನ್ನು ಕೊಡಲಿಲ್ಲ. ಇದರಿಂದ ಆ ಋಷಿಗಳು ವೈರಾಗ್ಯ ಹೊಂದಿದರು. ನಿರಾಶರಾದರು' ಎಂದು ಹೇಳಿದನು. ಈ ಮಾತನ್ನು ಕೇಳಿ ಆ ರಾಜನು ಆ ಋಷಿಗೆ ನಮಸ್ಕಾರ ಮಾಡಿ ಶ್ರಮದಿಂದ ಅಲ್ಲಿಯೇ ಕೂತುಕೊಂಡು ಬಿಟ್ಟನು. ಆ

ರಾಜನಿಗೆ ಋಷಿಯು ಅರ್ಘ್ಯಪಾದ್ಯಗಳನ್ನು ಕೊಟ್ಟು ಅರಣ್ಯದಲ್ಲಿ ಸಿಗುವ ಹಣ್ಣುಗೆಡ್ಡೆ ಇವುಗಳಿಂದ ಸತ್ಕರಿಸಿದನು. ತರುವಾಯ ಎಲ್ಲಾ ಋಷಿಗಳೂ ಅವನ ಸುತ್ತಲೂ ಕೂತುಕೊಂಡು ಈ ಆಶ್ರಮಕ್ಕೆ ಬರಲು ಏನು ಕಾರಣವೆಂದು ಕೇಳಿದನು.

ಅದಕ್ಕೆ ಅವನು 'ನಾನು ವೀರದ್ಯುಮ್ನನೆಂಬ ಸರ್ವತ್ರ ಪ್ರಸಿದ್ಧನಾದ ರಾಜನು. ನನ್ನ ಮಗನಾದ ಭೂರಿದ್ಯುಮ್ನನು ಮರೆಯಾಗಿ ಹೋದನು. ಅವನನ್ನು ಹುಡುಕುತ್ತಾ ಈ ವನಕ್ಕೆ ಬಂದೆನು. ನನಗೆ ಒಬ್ಬನೇ ಮಗನು. ಅವನು ಚಿಕ್ಕಹುಡುಗನು. ನಿರ್ದೋಷಿಯು. ಈ ವನದಲ್ಲಿಯೂ ಅವನು ಕಾಣಸಲಿಲ್ಲ. ಅವನನ್ನು ಹುಡುಕುತ್ತಾ ಸಂಚರಿಸುತ್ತಿರುವೆನು' ಎಂದನು.

ಇದನ್ನು ಕೇಳಿ ಆ ಕೃಶನಾದ ಮುನಿಯು ಮುಖವನ್ನು ತಗ್ಗಿಸಿಕೊಂಡು ಸುಮ್ಮಗೆ ಇದ್ದನು. ಒಂದು ಮಾತನ್ನೂ ಆಡಲಿಲ್ಲ. ಈ ಮುನಿಯನ್ನೇ ಪೂರ್ವದಲ್ಲಿ ಅತ್ಯಂತ ಬಹುಮಾನವನ್ನು ಹೊಂದಿರಲಿಲ್ಲ. ಆಶಾಭಂಗವನ್ನು ಹೊಂದಿದ್ದನು. ಅದರಿಂದ ದೀರ್ಘತಪಸ್ಸು ಮಾಡಿದ್ದನು. 'ನಾನು ಇನ್ನು ಮುಂದೆ ರಾಜರಿಂದ ಯಾವದಾನವನ್ನೂ ತೆಗೆದುಕೊಳ್ಳುವುದಿಲ್ಲ, ಇತರರಿಂದಲೂ ತೆಗೆದುಕೊಳ್ಳುವುದಿಲ್ಲ, ಆಸೆಯು ಅಜ್ಞಾನಿಯನ್ನು ದುಃಖಪಡಿಸುತ್ತದೆ. ನಾನು ಸರ್ವಥಾ ಪರಿತ್ಯಾಗ ಮಾಡುತ್ತೇನೆ' ಎಂದು ನಿಶ್ಚಯಿಸಿಕೊಂಡಿದ್ದನು. ರಾಜನು ಅವನೊಡನೆ 'ಆಸೆಯು ಹೇಗೆ ಇರುವುದು' ಲೋಕದಲ್ಲಿ ದುರ್ಲಭವಾದದ್ದು ಯಾವುದು' ಎಂದು ಕೇಳಿದನು.

ಆಗ ಆ ಮುನಿಯು ತನಗೆ ಆ ರಾಜನು ಅವಮಾಡಿದ್ದನ್ನು ಜ್ಞಾಪಕಪಡಿಸುವುದ ಕ್ಕೋಸ್ಕರ 'ಆಸೆಯುಳ್ಳವರಿಗೆ ಸಮವಾಗಿ ಕೃಶನಾದವನು ಇಲ್ಲ, ಆಸೆಪಡುವ ವಸ್ತುವು ದುರ್ಲಭವಾದ ಕಾರಣವೇ ನಾನು ರಾಜನೊಡನೆ ಒಂದು ವಸ್ತುವನ್ನು ಪ್ರಾರ್ಥಿಸಿದೆನು' ಎಂದರು.

ರಾಜನು 'ಆಸೆಗೆ ವಶನಾದವನು ಕೃಶನು. ಆಸೆಯನ್ನು ಜಯಿಸಿದವನು ಕೃಶನಲ್ಲ ಎಂಬುದನ್ನು ತಿಳಿದೆನು. ಪೂಜ್ಯರೇ! ನನಗೆ ಇನ್ನೊಂದು ಸಂದೇಹ ಬಂದಿದೆ. ನೀವು ತುಂಬಾ ಕೃಶರಾಗಿದ್ದೀರಿ. ನಿಮಗಿಂತ ಕೃಶರಾದವರು ಯಾರಾದರೂ ಇದ್ದರೆ ರಹಸ್ಯವಲ್ಲದಿದ್ದರೆ ನನಗೆ ತಿಳಿಸಬೇಕು' ಎಂದನು.

ಮುನಿಯು 'ಯಾಚನೆ ಮಾಡುವವನು ಧೈರ್ಯದಿಂದ ಇರುವವನು ದುರ್ಲಭ. ಅಥವಾ ಇಲ್ಲ. ಅದಕ್ಕಿಂತಲೂ ಯಾಚನೆ ಮಾಡಿದವನನ್ನು ಅವಮಾನ ಮಾಡದೆ ಇದ್ದವನು ಅತ್ಯಂತ ದುರ್ಲಭನು. ಮೊದಲು ಯಾಚಕನಿಗೆ ಆದರದಿಂದ ಆಸೆ ತೋರಿಸಿ ಆಮೇಲೆ ಇಲ್ಲವೆಂದು ಹೇಳಿದರೆ ಆ ಯಾಚಕನಲ್ಲಿ ಇರುವ ಆಸೆಯು

ನನಗಿಂತಲೂ ಕೃಶವಾದದ್ದು. ಕೃತಘ್ನನಲ್ಲಿ ಕ್ರೂರಪುರುಷರಲ್ಲಿ ಸೋಮಾರಿಗಳಲ್ಲಿ ಅಪಕಾರಿಗಳಲ್ಲಿ ಮಾಡಿದ ಆಸೆಯು ನನಗಿಂತ ಕೃಶವಾದದ್ದು. ಒಬ್ಬ ಮಗನುಳ್ಳ ರಾಜನು ಮಗನು ಮರೆಯಾಗಿ ಹೋಗಲು ಕಾಡಿನಲ್ಲಿ ಮಗನನ್ನು ಹುಡುಕಿಕೊಂಡು ಬರುವಾಗ ಮಗನೂ ಸಿಗದಿದ್ದರೆ ಅವನಲ್ಲಿರುವ ಆಸೆಯು ನಮಗಿಂತಲೂ ಕೃಶವಾದದ್ದು. ಸ್ತ್ರೀಯರಿಗೆ ಒಳ್ಳೇ ಮಕ್ಕಳಾಗಬೇಕೆಂಬ ಆಸೆಯೂ ವಯಸ್ಸಾದವರಿಗೆ ಮಕ್ಕಳಾಗಬೇಕೆಂಬ ಆಸೆಯೂ ಹಣವಂತರಿಗೆ ಹಣದ ಆಸೆಯೂ ವಿವಾಹಕಾಲದಲ್ಲಿ ಕನ್ಯೆಯರಿಗೆ ವಿವಾಹವಾಗಬೇಕೆಂಬ ಅಭಿಪ್ರಾಯವಿರುವಾಗ ಮದುವೆಯು ನಿಂತುಹೋಯಿತು ಎಂಬ ಮಾತನ್ನು ಕೇಳಿ ಆ ಕನ್ಯೆಯರಿಗೆ ಇರುವ ಆಸೆಯೂ ಅತ್ಯಂತ ಕೃಶವಾದದ್ದು. ಆದರೆ ಈ ಆಸೆಗಳೆಲ್ಲ ಆಸೆಯುಳ್ಳವರನ್ನು ನನಗಿಂತಲೂ ಕೃಶರನ್ನಾಗಿ ಮಾಡುವುವು' ಎಂದು ಹೇಳಿದರು.

ಆಗ ರಾಜನು 'ಸ್ವಾಮಿ! ನಾನು ನಿಮ್ಮ ಹತ್ತಿರ ಕ್ಷಮಾ ಕೇಳಿಕೊಳ್ಳುತ್ತೇನೆ. ನನ್ನ ಮಗನು ಬಂದು ಸೇರಬೇಕೆಂದು ಇಚ್ಛಿಸುತ್ತೇನೆ. ನೀವು ಬೇಕಾದ ವರವನ್ನು ಕೇಳಿರಿ, ಕೊಡುವೆನು' ಎಂದು ಹೇಳಿದನು. ನೀವು ಹೇಳಿದ ಮಾತೆಲ್ಲಾ ಸತ್ಯವು ಎಂದೂ ಹೇಳಿದನು.

ತರುವಾಯ ಆ ಮುನಿಯು ಮಂದಹಾಸವನ್ನು ಮಾಡಿ ತನ್ನ ತಪಃಸಾಮರ್ಥ್ಯ ದಿಂದ ರಾಜಪುತ್ರನನ್ನು ತರಿಸಿಕೊಟ್ಟನು. ರಾಜನು ಋಷಿಗಳನ್ನು ಅವಮಾನ ಮಾಡಿದ್ದು ತಪ್ಪು ಎಂದೂ ಸ್ಥಾಪನಮಾಡಿ, ತಾನು ಧರ್ಮದೇವತೆಯು ಎಂದು ಅದ್ಭುತವಾದ ತನ್ನ ರೂಪವನ್ನು ತೋರಿಸಿ ಕ್ರೋಧರಹಿತನಾಗಿ ಆ ಆಶ್ರಮದ ಬಳಿಯಲ್ಲೇ ಸಂಚಾರ ಮಾಡುತ್ತಾ ಹೋದನು.

ಈ ರೀತಿಯಾಗಿ ಆಸೆಯು ಅತ್ಯಂತ ಕೃಶರಾಗಿ ಮಾಡಲಿಕ್ಕೆ ಕಾರಣವಾದ ಪ್ರಯುಕ್ತ ಆಸೆಯನ್ನು ಬಿಟ್ಟುಬಿಡಬೇಕು. ಹಾಗೆ ಬಿಟ್ಟರೇನೇ ಸುಖವುಂಟಾಗುವುದು.



# ಪ್ರಾಣಿ, ಪಕ್ಷಿ, ಕೀಟ ಸರ್ಪ ಪರಿಚ್ಛೇದ

## ರುರುವಿನ ಕಥೆಯು [1]

ಚ್ಯವನ ಋಷಿಗಳ ಮಗನಾದ ಪ್ರಮತಿ ಎಂಬ ಋಷಿಗಳು ಘೃತಾಚೀ ಎಂಬ ಅಪ್ಸರ ಸ್ತ್ರೀಯರಲ್ಲಿ ರುರು ಎಂಬ ಮಗನನ್ನು ಪಡೆದರು. ಆ ರುರು ಋಷಿಗಳು ಪ್ರಮದ್ವರಾ ಎಂಬ ಕನ್ಯೆಯನ್ನು ವಿವಾಹ ಮಾಡಿಕೊಂಡರು.

ಪ್ರಮದ್ವರೆಯ ಚರಿತ್ರೆಯು ಈ ಪ್ರಕಾರವಾಗಿದೆ. ಪೂರ್ವದಲ್ಲಿ ಸ್ಥೂಲಕೇಶ ಎಂಬ ಹೆಸರುಳ್ಳ ಜ್ಞಾನಿಗಳೊಬ್ಬರು ಇದ್ದರು. ಈ ಸಮಯದಲ್ಲಿ ಗಂಧರ್ವ ರಾಜನಾದ ವಿಶ್ವಾವಸುವು ಮೇನಕಾ ಎಂಬ ಅಪ್ಸರಸ್ತ್ರೀಯೊಡನೆ ವಿಹಾರ ಮಾಡಿದನು. ಮೇನಕೆಯು ಗರ್ಭಿಣಿಯಾಗಿ, ಸ್ಥೂಲಕೇಶ ಋಷಿಗಳ ಆಶ್ರಮದ ಸಮೀಪದಲ್ಲಿ ನದೀತೀರದಲ್ಲಿ ತನ್ನ ಶಿಶುವನ್ನು ಪರಿತ್ಯಾಗಮಾಡಿ ಹೊರಟುಹೋದರು. ಸ್ಥೂಲಕೇಶ ಋಷಿಗಳು ತನ್ನ ಆಶ್ರಮದ ಸಮೀಪದಲ್ಲಿರುವ ಬಂಧುಗಳಿಲ್ಲದಿರುವ ಆ ಹೆಣ್ಣುಕೂಸನ್ನು ಆಶ್ರಮಕ್ಕೆ ತೆಗೆದುಕೊಂಡು ಬಂದು ಬೆಳೆಸಿದರು. ಆ ಮಗುವಿಗೆ ಜಾತಕರ್ಮನಾಮಕರಣಾದಿಗಳನ್ನೂ ಮಾಡಿದರು. ಸ್ತ್ರೀಯರಲ್ಲಿ ಶ್ರೇಷ್ಠಳಾದ ಆ ಹೆಣ್ಣುಕೂಸಿಗೆ ಪ್ರಮುದ್ವರಾ ಎಂದು ಹೆಸರನ್ನಿಟ್ಟರು. ಯೌವನವನ್ನು ಹೊಂದಿರುವ ಆ ಪ್ರಮದ್ವರೆಯನ್ನು ರುರುವು ನೋಡಿ ಮೋಹಿತರಾದರು. ತಂದೆಯ ಹತ್ತಿರ ಈ ವಿಷಯವನ್ನು ತಿಳಿಸಿದರು. ತಂದೆಯಾದ ಪ್ರಮತಿಯು ಪ್ರಮದ್ವರೆಯ ಸಾಕಿದ ತಂದೆಯಾದ ಸ್ಥೂಳಕೇಶಋಷಿಗಳ ಹತ್ತಿರ ಕೇಳಿದರು. ಆಗ ಸ್ಥೂಲಕೇಶ ಋಷಿಗಳು ಕೊಡುತ್ತೇನೆ ಎಂದು ಹೇಳಿ ವಿವಾಹಕ್ಕೆ ಮುಹೂರ್ತವಿಟ್ಟರು. ಮದುವೆಯ ಮುಹೂರ್ತದ ಪೂರ್ವದಲ್ಲಿ ಒಂದುದಿನ ಪ್ರವದ್ವರೆಯು ಸಖಿಯರಿಂದ ಕೂಡಿಕೊಂಡು ಆಡುತ್ತಾ ಹೋದಳು.

ಆಗ ಅವಳು ದಾರಿಯಲ್ಲಿ ಬಿದ್ದಿರುವ ಒಂದು ಹಾವನ್ನು ನೋಡದೆ ಅದರ ಮೇಲೆ ಕಾಲನ್ನು ಇಟ್ಟಳು. ಆಗಲೇ ದೈವೇಚ್ಛೆಯಿಂದ ಹಾವು ಅವಳನ್ನು ಕಚ್ಚಿತು. ಅವಳು ವಿಷವೇರಿ ಹಾಗೇ ಬಿದ್ದು ಬಿಟ್ಟಳು. ಮರಣವನ್ನು ಹೊಂದಿದಳು. ಭೂಮಿಯಲ್ಲಿ ಹೊರಳಾಡುತ್ತಿದ್ದ ಅವಳನ್ನು ತಂದೆಯೂ ಇತರ ಋಷಿಗಳೂ ಬಂದು ನೋಡಿದರು. ಅನೇಕ ಋಷಿಗಳು ಕೃಪೆಯಿಂದ ಆ ಕನ್ಯೆಯ ಬಳಿಗೆ ಬಂದರು. ಪ್ರಮತಿಯೂ ಮಗನನ್ನು ಕರೆದುಕೊಂಡು ಬಂದು ಮೃತಳಾದ ಅವಳನ್ನು ನೋಡುತ್ತಾ

1. ಮಭಾ. ಆಪ. ಅ.8-12

ಬಹಳ ಅಳುವವನಾದನು. ಎಲ್ಲ ಋಷಿಗಳೂ ಅಲ್ಲಿಯೇ ಕೂತುಕೊಂಡು ದುಃಖ ಪಟ್ಟರು. ರುರುವು ಮಾತ್ರ ಅಲ್ಲಿಂದ ಹೊರಗೆ ದೂರಕ್ಕೆ ವನಕ್ಕೆ ಹೋಗಿ ಬಹಳ ಅಳತಕ್ಕವನಾದನು.

ರುರುವು ಅನೇಕವಾಗಿ ಅಳುತ್ತಿರಲು ದೇವತೆಗಳು ದೂತನನ್ನು ಕಳುಹಿಸಿದರು. ಆ ದೂತನು ಬಂದು 'ರುರು! ದೇವತೆಗಳು ಹೇಳಿಕಳುಹಿಸಿದ್ದಾರೆ. ಪ್ರಮದ್ವರೆಯ ಆಯುಷ್ಯವು ಸಂಪೂರ್ಣವಾಗಿ ಮುಗಿದಿದೆ. ಆದುದರಿಂದ ಅವಳಲ್ಲಿ ಮನಸ್ಸನ್ನು ಇಡಬೇಡ. ಅಥವಾ ನಿನಗೆ ಅವಳು ಬೇಕಾಗಿದ್ದರೆ ಒಂದು ಉಪಾಯವಿದೆ. ಆ ಉಪಾಯವನ್ನು ನೀನು ಮಾಡುವುದಾದರೆ ಪ್ರಮದ್ವರೆಯನ್ನು ಹೊಂದಬಹುದು' ಎಂದರು.

ರುರುವು 'ದೇವತೆಗಳು ಹೇಳಿರುವ ಉಪಾಯವನ್ನು ಹೇಳಬೇಕು. ನಾನು ಹಾಗೆಯೇ ಮಾಡುತ್ತೇನೆ. ನನ್ನನ್ನು ಕಾಪಾಡಬೇಕು' ಎಂದನು.

ದೇವದೂತನು 'ರುರೋ! ನಿನ್ನ ಅರ್ಧ ಆಯುಷ್ಯವನ್ನು ಪ್ರಮದ್ವರೆಗೆ ಕೊಡಬೇಕು. ಹಾಗಾದರೆ ನಿನ್ನ ಹೆಂಡತಿಯು ಪ್ರಮದ್ವರೆಯು ಏಳುವಳು' ಎಂದನು.

ರುರುವು 'ನಾನು ಆಯುಷ್ಯದ ಅರ್ಧವನ್ನು ಕೊಡುತ್ತೇನೆ ನನ್ನ ಪ್ರಿಯೆಯು ಏಳಲಿ' ಎಂದನು.

ತರುವಾಯ ಗಂಧರ್ವರಾಜನಾದ ವಿಶ್ವಾವಸುವೂ ಆ ದೇವದೂತನೂ ಯಮಧರ್ಮರಾಜನ ಬಳಿಗೆ ಹೋಗಿ 'ರುರುವಿನ ಪತ್ನಿಯಾದ ಪ್ರಮದ್ವರೆಯು ರುರುವಿನ ಅರ್ಧಾಯುಷ್ಯದಿಂದ ಬದುಕಲಿ' ಎಂದರು. ಯಮದೇವರು ಹಾಗೆಯೇ ಆಗಲಿ ಎಂದರು.

ಅನಂತರ ಪ್ರಮದ್ವರೆಯು ರುರುವಿನ ಅರ್ಧಾಯುಷ್ಯದಿಂದ ಬದುಕಿದಳು. ರುರುವಿನ ಅರ್ಧಾಯುಷ್ಯವು ಹೋಯಿತು. ತರುವಾಯ ಒಳ್ಳೆ ಮುಹೂರ್ತದಲ್ಲಿ ತಂದೆತಾಯಿಗಳು, ಮದುವೆಮಾಡಿದರು. ದಂಪತಿಗಳು ಪರಸ್ಪರ ಹಿತೈಷಿಗಳಾಗಿ ಸಂತೋಷದಿಂದ ಇದ್ದರು. ರುರುವು ಈ ಪ್ರಕಾರ ದುಲರ್ಭಳಾದ ಪತ್ನಿಯನ್ನು ಹೊಂದಿ, ಕೋಪದಿಂದ ಎಲ್ಲಾ ಹಾವುಗಳನ್ನು ಕೊಲ್ಲಲಿಕ್ಕೆ ಆರಂಭಿಸಿದನು.

ಒಂದುದಿನ ರುರುವು ಕಾಡಿಗೆ ಹೋಗಿದ್ದನು. ಅಲ್ಲಿ ಒಂದು ಮುದಿ ನೀರಿನ ಹಾವು ಮಲಗಿತ್ತು. ಕೂಡಲೇ ಒಂದು ದೊಡ್ಡ ಕೋಲನ್ನು ಎತ್ತಿಕೊಂಡು ಕೊಲ್ಲಲಿಕ್ಕೆ ಹೋದನು. ಆಗ ಆ ಹಾವು 'ನಾನು ಒಂದು ಅಪರಾಧವನ್ನು ಮಾಡಿಲ್ಲ, ನನ್ನನ್ನು ಯಾಕೆ ಕೋಪಿಸಿಕೊಂಡು ಕೊಲ್ಲುವಿ' ಎಂದು ಕೇಳಿತು.

ಆಗ ರುರುವು ನನ್ನ ಪ್ರಾಣಪ್ರಿಯೆಯನ್ನು ಒಂದು ಹಾವು ಕೊಂದಿತು. ಆದುದರಿಂದ ನಾನು 'ನೋಡಿದ ಹಾವುಗಳನ್ನೆಲ್ಲಾ ಕೊಲ್ಲುವೆನೆಂದು ಪ್ರತಿಜ್ಞಾಮಾಡಿರುವೆನು. ಈಗಲೇ ನಿನ್ನನ್ನು ಕೊಂದುಹಾಕುವೆನು' ಎಂದನು.

'ಜನರನ್ನು ಬೇರೆ ಹಾವುಗಳನ್ನು ಕಚ್ಚುತ್ತವೆ. ನಾನು ಕಚ್ಚುವವನಲ್ಲ. ನೀನು ಧರ್ಮವನ್ನು ತಿಳಿದವನು. ನೀರು ಹಾವುಗಳನ್ನು ಹಾವು ಎಂದು ಹೆಸರಿರುವ ಪ್ರಯುಕ್ತ ಕೊಲ್ಲಬಾರದು ಎಂದು ಆ ನೀರಿನ ಹಾವು ಹೇಳಿತು.

ಆಗ ರುರುವು ಭಯದಿಂದ ನಡುಗುವ ಆ ನೀರಹಾವನ್ನು ಕೊಲ್ಲದೆ ನೀನು ಯಾರು! ನಿನಗೆ ಈ ನೀರುಹಾವಿನ ದೇಹವು ಯಾಕೆ ಬಂದಿತು ಎಂದು ಕೇಳಿದನು.

ನೀರಿನಹಾವು ' ನಾವು ಸಹಸ್ರಪಾತ್ ಎಂದು ಹೆಸರುಳ್ಳ ಋಷಿಯು ಒಬ್ಬ ಬ್ರಾಹ್ಮಣರ ಶಾಪದಿಂದ ಹಾವಾದೆನು' ಎಂದಿತು.

ಆ ಬ್ರಾಹ್ಮಣರು ನಿನ್ನನ್ನು ಯಾಕೆ ಶಪಿಸಿದರು? ನಿನಗೆ ಎಷ್ಟು ಕಾಲ ಹೀಗೆ ನೀರಿನಹಾವಿನ ದೇಹವಿರುವುದು? ಎಂದು ರುರುವು ಕೇಳಿದನು.

ಅದಕ್ಕೆ ನೀರಿನ ಹಾವು 'ನನಗೆ ಪೂರ್ವದಲ್ಲಿ ಖಗಮ ಎಂಬ ಒಳ್ಳೆ ತಪಸ್ವಿಯಾದ ಬ್ರಾಹ್ಮಣರು ಮಿತ್ರರಾಗಿದ್ದರು. ಅವರು ಒಂದು ದಿವಸ ಅಗ್ನಿಹೋತ್ರವನ್ನು ಮಾಡುತ್ತಾ ಇದ್ದರು. ನಾನು ಬಾಲ್ಯದಲ್ಲಿ ಕ್ರೀಡೆಯಿಂದ ಒಂದು ಹುಲ್ಲಿನಿಂದ ಹಾವನ್ನು ಮಾಡಿ ಅವರ ಮೈಮೇಲೆ ಹಾಕಿಬಿಟ್ಟೆನು. ಆಗ ಅವರು ಹಾವೇ ಮೈಮೇಲೆ ಬಿತ್ತು ಎಂದು ಹೆದರಿ ಮೂರ್ಛಿತರಾದರು. ಮೂರ್ಛೆಯಿಂದ ಆ ಹುಲ್ಲಿನ ಹಾವನ್ನು ನೋಡಿ ತುಂಬಾ ಕೋಪಿಸಿಕೊಂಡವರಾಗಿ 'ನೀನು ಎಂತಹ ಸಾಮರ್ಥ್ಯವುಳ್ಳ ಹಾವನ್ನು ನನ್ನ ಮೈಮೇಲೆ ಹಾಕಿದ್ದಿಯೋ ಅಂತಹ ಸಾಮರ್ಥ್ಯವುಳ್ಳ ಹಾವೇ ನನ್ನ ಶಾಪದಿಂದ ನೀನು ಆಗುವಿ' ಎಂದರು.

ಆಗ ಅವರ ತಪಸ್ಸಿನ ಸಾಮರ್ಥ್ಯವನ್ನು ತಿಳಿದ ನಾನು ಕೂಡಲೇ ಅವರಿಗೆ ನಮಸ್ಕಾರಮಾಡಿ ಕೈಮುಗಿದು 'ನಾನು ಮಿತ್ರ ಎಂದು ತಮಾಷೆಗಾಗಿ ಮಾಡಿದೆನು. ನೀವು ಕ್ಷಮಿಸಬೇಕು. ಶಾಪವನ್ನು ಪರಿಹಾರಮಾಡಬೇಕು' ಎಂದು ತುಂಬಾ ಕೇಳಿಕೊಂಡೆನು.

ತುಂಬಾ ದುಃಖಪಡುತ್ತಾ ಇರುವ ನನ್ನನ್ನು ನೋಡಿ ಆ ಬ್ರಾಹ್ಮಣರು ದೀರ್ಘಶ್ವಾಸವನ್ನು ಬಿಟ್ಟು 'ನಾನು ಹೇಳಿದ ಮಾತು ಸುಳ್ಳಾಗಲಾರದು. ನಾನು ಹೇಳುವ ಮಾತು ಮನಸ್ಸಿನಲ್ಲೇ ಇರಲಿ. ಇನ್ನು ಮುಂದೆ ಪ್ರಮತಿಯ ಮಗ

ರುರುವೆಂಬುವನು ಹುಟ್ಟುವನು. ಅವನನ್ನು ನೋಡಿ ನಿನ್ನ ಶಾಪದ ಬಿಡುಗಡೆಯಾಗುವುದು' ಎಂದರು. ನೀನೇ ಪ್ರಮತಿಯ ಮಗನಾದ ರುರುವು. ನಾನು ಈಗ ನನ್ನ ಸ್ವರೂಪವನ್ನು ಹೊಂದಿ ನಿನಗೆ ಹಿತವನ್ನು ಹೇಳುವೆನು' ಎಂದುಹೇಳಿ, ನೀರಿನ ಹಾವಿನ ರೂಪವನ್ನು ಬಿಟ್ಟು ತೇಜಸ್ವಿಯಾದ ಋಷಿಯಾದರು.

ರುರುವಿನ ಹತ್ತಿರ, 'ಅಹಿಂಸೆಯೇ ಉತ್ತಮಧರ್ಮವು. ಬ್ರಾಹ್ಮಣನು ಯಾವಾಗಲೂ ಹಿಂಸೆಯನ್ನು ಮಾಡಬಾರದು. ಅಹಿಂಸೆಯೇ ಬ್ರಾಹ್ಮಣರಿಗೆ ಮುಖ್ಯ ಧರ್ಮವು. ಶಿಕ್ಷಾಮಾಡುವುದು ಕ್ಷತ್ರಿಯಧರ್ಮವು. ಜನಮೇಜಯರಾಜನು ಸರ್ಪ ಯಾಗದಲ್ಲಿ ಸರ್ಪಗಳ ಹಿಂಸೆಯನ್ನು ಮಾಡಿದನು. ಆಸ್ತಿಕ ಎಂಬ ಬ್ರಾಹ್ಮಣರೂ ಆ ಹಿಂಸೆಯನ್ನು ನಿಲ್ಲಿಸಿದರು' ಎಂದು ಆ ಋಷಿಗಳೂ ಹೇಳಿದರು.

'ಜನಮೇಜಯನು ಸರ್ಪಗಳನ್ನು ಯಾಕೆ ಹಿಂಸಾ ಮಾಡಿದನು? ಆಸ್ತೀಕರು ಯಾಕೆ ಬಿಡಿಸಿದರು? ಇದನ್ನೆಲ್ಲಾ ನನಗೆ ಹೇಳಬೇಕು' ಎಂದು ರುರುವು ಕೇಳಿಕೊಳ್ಳಲು, ಆ ಋಷಿಗಳು 'ಬ್ರಾಹ್ಮಣರ ಮುಖದಿಂದ ಆ ಚರಿತ್ರೆಯನ್ನು ಕೇಳುವಿ. ನನಗೆ ಹೋಗಲಿಕ್ಕೆ ತುಂಬಾ ಅವಸರವಾಗಿದೆ' ಎಂದು ಹೇಳುತ್ತಾ ಯೋಗ ಸಾಮರ್ಥ್ಯದಿಂದ ಅಲ್ಲಿಯೇ ಮರೆಯಾದರು.

ರುರುವು ಅವರನ್ನು ನೋಡಬೇಕೆಂದು ಸುತ್ತಲೂ ಓಡಿದರು. ಎಲ್ಲಿ ಓಡಿದರೂ ಅವರನ್ನು ನೋಡದೆ, ಶ್ರಮದಿಂದ ಮೂರ್ಛಿತನಾಗಿಬಿಟ್ಟನು. ತರುವಾಯ ಎದ್ದು ಮನೆಗೆ ಬಂದು ತಂದೆಯಾದ ಪ್ರಮತಿಯ ಮುಖದಿಂದ ಆಸ್ತಿಕರ ಚರಿತ್ರೆಯನ್ನು ಕೇಳಿ ತಿಳಿದುಕೊಂಡನು.



## ಆಸ್ತೀಕರ ಕಥೆ [1]

ಪೂರ್ವದಲ್ಲಿ ಜರತ್ಕಾರು ಎಂಬ ಹೆಸರುಳ್ಳ ಋಷಿಗಳಿದ್ದರು. ಅವರು ಬ್ರಹ್ಮಚಾರಿ ಗಳಾಗಿದ್ದರು. ಉಗ್ರವಾದ ತಪಸ್ಸು ಮಾಡುತ್ತಿದ್ದರು. ಅವರು ತೀರ್ಥಸ್ನಾನಮಾಡುತ್ತಾ ಎಲ್ಲಿ ಸಾಯಂಕಾಲವಾಗುತ್ತದೋ ಅಲ್ಲಿಯೇ ಇರುತ್ತಾ ಕೇವಲ ಗಾಳಿ ಆಹಾರವುಳ್ಳವ ರಾಗಿ ಸಂಚಾರಮಾಡುತ್ತಾ ಇದ್ದರು. ಸಂಚಾರಮಾಡುತ್ತಾ ಒಂದು ದಿನ ಒಂದು ದೊಡ್ಡ ಭಾವಿಯಲ್ಲಿ ಕಾಲುಮೇಲೆ ತಲೆಕೆಳಗಾಗಿ ಜೋಲುತ್ತಿರುವ ತನ್ನ ಪಿತಾಮಹರನ್ನು ನೋಡಿದರು.

1. ಮಭಾ. ಆಪ. 13-15; 45-48

ಜರತ್ಕಾರು ಋಷಿಗಳು ತಲೆಕೆಳಗಾಗಿ ಜೋಲುತ್ತಿರುವ ಪಿತೃಗಳನ್ನು ನೋಡಿ ನೀವು ಯಾರು ಈ ಪ್ರಕಾರವಾಗಿ ಒಂದು ಹುಲ್ಲಿನ ಸಮೂಹವನ್ನು ಹಿಡಿದು ಜೋಲುತ್ತಿರುವವರು? ಆ ಹುಲ್ಲಿನ ಸಮಯವನ್ನೂ ಈ ಭಾವಿಯಲ್ಲಿ ವಾಸಿಸುವ ಒಂದು ಇಲಿಯೂ ತಿನ್ನುತ್ತಾ ಇದೆ. ಎಂದು ಕೇಳಿದರು.

ಅದಕ್ಕೆ ಅವರು 'ನಾವು ಯಾಯಾವರ ಎಂಬ ಋಷಿಗಳು. ನಾವು ಸಂತಾನಕ್ಷಯದಿಂದ ಕೆಳಗೆ ಹೋಗುತ್ತಿದ್ದೇವೆ. ನಮ್ಮ ಸಂತಾನದಲ್ಲಿ ಒಬ್ಬನು ಮಾತ್ರ ಇದ್ದಾನೆ. ಅವನ ಹೆಸರು ಜರತ್ಕಾರುವೆಂದು. ಅಲ್ಪಭಾಗ್ಯವುಳ್ಳ ನಮ್ಮ ವಂಶದಲ್ಲಿ ಮಂದಭಾಗ್ಯನಾಗಿದ್ದಾನೆ. ಅವನು ಮಕ್ಕಳನ್ನು ಪಡೆಯಲಿಕ್ಕೆ ಮದುವೆಯಾಗಲಿಕ್ಕೆ ಇಚ್ಛಿಸಲಿಲ್ಲ. ಈ ರೀತಿಯಾಗಿ ಸಂತಾನಕ್ಷಯದಿಂದ ನಾವು ಹೀಗೆ ಜೋಲುತ್ತಿದ್ದೇವೆ. ಅಯೋಗ್ಯನಿಂದ ನಾವು ಅನಾಥರಾಗಿದ್ದೇವೆ. ನೀನು ಯಾರು ಬಂಧುವಿನಂತೆ ನಮ್ಮನ್ನು ನೋಡಿ ದುಃಖವನ್ನು ಹೊಂದುವಿ? ಎಂದು ಹೇಳಿದರು.

ಜರತ್ಕಾರು ಋಷಿಗಳು 'ನೀವು ನಮ್ಮ ಪೂರ್ವಿಕರಾಗಿದ್ದೀರಿ. ನಾನೇ ಜರತ್ಕಾರುವು. ನಾನು ತಮಗೆ ಏನು ಮಾಡಲಿ' ಎಂದರು.

ಆಗ ಪಿತೃಗಳು 'ನೀನು ಸಂತಾನವನ್ನು ಹೊಂದಲಿಕ್ಕೆ ಪ್ರಯತ್ನಮಾಡು. ನಮಗೋಸ್ಕರವೋ, ನಿನಗೋಸ್ಕರವೋ, ಧರ್ಮಕ್ಕಾಗಿಯೋ ಸಂತಾನವನ್ನು ಹೊಂದು. ಪುತ್ರರುಳ್ಳವರು ಹೊಂದುವ ಗತಿಯನ್ನು ಧರ್ಮ ತಪಸ್ಸು ಇವುಗಳಿಂದ ಹೊಂದಲಾರರು. ಮಗ! ಆದುದರಿಂದ ನೀನು ನಮ್ಮ ಆಜ್ಞೆಯಿಂದ ಮದುವೆಮಾಡಿಕೊಂಡು ಸಂತಾನವನ್ನು ಹೊಂದಲಿಕ್ಕೆ ಪ್ರಯತ್ನಮಾಡು ಎಂದರು.

ಜರತ್ಕಾರು ಋಷಿಗಳು 'ನಾನು ನನಗೋಸ್ಕರ ಮದುವೆ ಮಾಡಿಕೊಳ್ಳಲಾರೆನು. ಹಣಸಂಪಾದಿಸಲಾರೆನು. ನಿಮ್ಮ ಹಿತಕ್ಕೋಸ್ಕರ ಮದುವೆಮಾಡಿಕೊಳ್ಳುತ್ತೇನೆ. ನನ್ನ ಹೆಸರೇ ಉಳ್ಳ ಕನ್ಯೆಯನ್ನು ಅವಳ ಬಂಧುಗಳು ತಾವಾಗಿಯೇ ಬಂದು ಕೊಡುವ ಪಕ್ಷದಲ್ಲಿ ಭಿಕ್ಷೆಯನ್ನು ಸ್ವೀಕರಿಸುವಂತೆ ಮದುವೆ ಮಾಡಿಕೊಳ್ಳುವೆನು. ಇಲ್ಲದಿದ್ದರೆ ಮದುವೆ ಮಾಡಿಕೊಳ್ಳಲಾರೆನು. ದರಿದ್ರನಾದ ನನಗೆ ಯಾರು ಕನ್ಯೆಯನ್ನು ಕೊಡುವರು? ಯಾರಾದರೂ ಭಿಕ್ಷಾರೂಪವಾಗಿ ಕೊಟ್ಟರೆ ಸ್ವೀಕರಿಸುವೆನು. ಈ ಪ್ರಕಾರವಾಗಿ ಮದುವೆ ಮಾಡಿಕೊಳ್ಳಲಿಕ್ಕೆ ಪ್ರಯತ್ನಿಸುವೆ. ಹಾಗೆ ಹುಟ್ಟುವ ಮಗನು ನಿಮ್ಮ ಉದ್ಧಾರಕ್ಕೆ ಕಾರಣನಾಗುವನು. ನೀವು ಶಾಶ್ವತವಾದ ಸ್ಥಾನವನ್ನು ಹೊಂದಿ ಸಂತೋಷದಿಂದ ಇರಬಹುದು' ಎಂದು ಹೇಳಿದರು.

ಈ ಪ್ರಕಾರವಾಗಿ ಆ ಜರತ್ಕಾರು ಋಷಿಗಳು ಪಿತೃಗಳೊಡನೆ ಹೇಳಿ ಭೂಮಿಯಲ್ಲೆಲ್ಲಾ ಸಂಚಾರಮಾಡುತ್ತಾ ಹೋದರು. ಮುದುಕರು ಎಂದು ಅವರಿ ಗೆ ಯಾರೂ ಕನ್ಯೆಯನ್ನು ಕೊಡಲಿಲ್ಲ. ಕೊನೆಗೆ ದುಃಖವುಳ್ಳವರಾಗಿ ಕಾಡಿಗೆ ಹೋಗಿ 'ನಾನು ಪಿತೃಗಳ ಹಿತಕ್ಕೋಸ್ಕರ 'ನಾನು ಕನ್ಯೆಯನ್ನು ಯಾಚಿಸುತ್ತೇನೆ. ಸ್ಥಾವರಜಂಗಮ ಪ್ರಾಣಿಗಳು ಅಂತರ್ಧಾನವನ್ನು ಹೊಂದಿರುವವರು ನನ್ನ ಮಾತನ್ನು ಕೇಳಬೇಕು. ಉಗ್ರತಪಸ್ಸಿನಲ್ಲಿರುವ ನನ್ನನ್ನು ಪಿತೃಗಳು ಮದುವೆ ಮಾಡಿಕೊಳ್ಳಬೇಕೆಂದು ಹೇಳುತ್ತಾರೆ. ಆದುದರಿಂದ ಕನ್ಯಾಭಿಕ್ಷೆಯನ್ನು ಕೇಳುತ್ತೇನೆ. ನಾನು ದರಿದ್ರನು. ದುಃಖವುಳ್ಳವನು. ಪಿತೃಗಳೋ ನನ್ನನ್ನು ಮದುವೆ ಮಾಡಿಕೊಳ್ಳಲು ಪ್ರೇರಿಸುತ್ತಾರೆ. ಯಾರಿಗೆ ಕನ್ಯಾ ಇದೆಯೋ ಅವರು ನನಗೆ ಕನ್ಯೆಯನ್ನು ಕೊಡಲಿ. ಆ ಕನ್ಯೆಯು ನನ್ನ ಹೆಸರುಳ್ಳವಳಾಗಬೇಕು. ಅವಳನ್ನು ಭಿಕ್ಷಾಕೊಡುವಂತೆ ಕೊಡಬೇಕು. ಅವಳಿಗೆ ನನ್ನ ಹೆಸರೇ ಇರಬೇಕು. ಮದುವೆಯಾದ ಮೇಲೆ ಅನ್ನಹಾಕಿ ಅವಳನ್ನು ಸಾಕಲಾರೆನು' ಈ ಪ್ರಕಾರ ಹೇಳಿದರು.

ವಾಸುಕಿಯ ಆಜ್ಞೆಯಿಂದ ನಿರೀಕ್ಷಣೆ ಮಾಡುತ್ತಿದ್ದ ಸರ್ಪಗಳು ಈ ಪ್ರಕಾರ ಜರತ್ಕಾರುವು ಹೇಳಲು, ಹೋಗಿ ವಾಸುಕಿಯ ಹತ್ತಿರ ತಿಳಿಸಿದರು. ಅವರ ಮಾತನ್ನು ಕೇಳಿ ವಾಸುಕಿಯು ತನ್ನ ತಂಗಿಯಾದ ಜರತ್ಕಾರು ಎಂಬವಳನ್ನು ಅಲಂಕಾರಮಾಡಿ ಅರಣ್ಯಕ್ಕೆ ಜರತ್ಕಾರುವಿನ ಸಮೀಪಕ್ಕೆ ಕರೆದುಕೊಂಡು ಹೋಗಿ ಭಿಕ್ಷಾ ಕೊಡುವಂತೆ ಆ ಮುನಿಗಳಿಗೆ ಕೊಟ್ಟನು. ಆಗ ಜರತ್ಕಾರು ಋಷಿಗಳು 'ಇವಳ ಹೆಸರು ಬೇರೆ ಇರಬಹುದು. ಮದುವೆಯಾದ ಮೇಲೆ ಸಾಕುವ ವಿಷಯವನ್ನು ತಿಳಿಯಲಿಲ್ಲ' ಎಂದು ಯೋಚನೆ ಮಾಡಿ ಇವಳ ಹೆಸರೇನು ಎಂದು ಕೇಳಿದರು. ಮತ್ತು ನಾನು ಮದುವೆ ಮಾಡಿಕೊಂಡ ಮೇಲೆ ಇವಳನ್ನು ಸಾಕಲಾರೆನು ಎಂದರು.

ಆಗ ವಾಸುಕಿಯು ಜರತ್ಕಾರು ಋಷಿಗಳೊಡನೆ 'ಇವಳ ಹೆಸರೂ ಜರತ್ಕಾರುವೆಂದು. ಇವಳನ್ನು ನಾನೇ ರಕ್ಷಣೆ ಮಾಡುತ್ತೇನೆ. ಇವಳನ್ನು ನೀವು ಮದುವೆಮಾಡಿಕೊಳ್ಳಬೇಕು' ಎಂದನು.

ಜರತ್ಕಾರು ಋಷಿಗಳು 'ಮದುವೆ ಮಾಡಿಕೊಂಡ ಮೇಲೆ ನಾನು ರಕ್ಷಣೆ ಮಾಡಲಾರೆನು. ನನಗೆ ಅಪ್ರಿಯವನ್ನು ಮಾಡಬಾರದು. ಹಾಗೆ ಮಾಡಿದರೆ ನಾನು ಬಿಟ್ಟುಹೋಗುವೆನು' ಎಂದು ಹೇಳಿದರು.

ಈರೀತಿಯಾಗಿ ವಾಸುಕಿಯು ನಾನೇ ತಂಗಿಯನ್ನು ರಕ್ಷಣೆ ಮಾಡುತ್ತೇನೆಂದು ಒಪ್ಪಿಕೊಂಡ ಮೇಲೆ ಜರತ್ಕಾರು ಋಷಿಗಳು ವಾಸುಕಿಯ ಮನೆಗೆ ಬಂದರು. ಅಲ್ಲಿ ವಿಧಿ

ಪ್ರಕಾರವಾಗಿ ಜರತ್ಕಾರುವಿನ ಮದುವೆಯನ್ನು ಮಾಡಿಕೊಂಡರು. ಅಲ್ಲಿಯೇ ಪತ್ನೀಸಹಿತವಾಗಿ ವಾಸಮಾಡಿದರು. ಹೆಂಡತಿಯೊಡನೆ ನೀನು ನನಗೆ ಅಪ್ರಿಯವನ್ನು ಮಾಡಬಾರದು. ಅಪ್ರಿಯವನ್ನು ಹೇಳಬಾರದು. ಹಾಗೆ ಮಾಡಿದರೆ ನಿನ್ನನ್ನೂ ಬಿಟ್ಟುಬಿಡುವೆನು. ನಿನ್ನ ಮನೆಯನ್ನೇ ಬಿಟ್ಟು ಹೋಗುವೆನು. ಈ ಮಾತನ್ನು ಮನಸ್ಸಿನಲ್ಲಿಟ್ಟುಕೊ' ಎಂದರು. ಆಗ ವಾಸುಕಿಯ ತಂಗಿಯು ಭಯವುಳ್ಳವಳಾಗಿ ತುಂಬಾ ಕಷ್ಟದಿಂದ ಹಾಗೆಯೇ ಆಗಲಿ ಎಂದು ಹೇಳಿದಳು. ಹಾಗೆಯೇ ಬಹಳ ಜಾಗ್ರತೆಯಿಂದ ಗಂಡನನ್ನು ಸೇವಿಸುತ್ತಿದ್ದಳು.

ಜರತ್ಕಾರುವು ಒಂದು ದಿನ ಋತುಸ್ನಾತಳಾಗಿ ಪತಿಯ ಸೇವೆಯನ್ನು ಮಾಡಿದಳು. ತರುವಾಯ ಅವಳು ಗರ್ಭಿಣಿಯಾದಳು. ಆ ಗರ್ಭವು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿತ್ತು. ಒಂದು ದಿವಸ ಜರತ್ಕಾರು ಋಷಿಗಳು ಶ್ರಮವುಳ್ಳವರಂತೆ ಹೆಂಡತಿಯ ತೊಡೆಯಮೇಲೆ ತಲೆಯಿಟ್ಟುಕೊಂಡು ಮಲಗಿದರು. ಅವರಿಗೆ ನಿದ್ರೆ ಬಂದಿತು. ಆಗ ಸಾಯಂಕಾಲವಾಯಿತು. ಸಂಧ್ಯಾಕಾಲವು ಬಂದಿತು. ಆಗ ವಾಸುಕಿಯ ತಂಗಿಯು 'ಈಗ ಇವರನ್ನು ಎಬ್ಬಿಸದಿದ್ದರೆ ಇವರಿಗೆ ಧರ್ಮಲೋಪವೇರ್ಪಡು ವುದು. ಸಂಧ್ಯಾವಂದನೆಯ ಕಾಲವು ಮೀರುವುದು. ಎಬ್ಬಿಸಿದರೆ ಕೋಪಬರುವುದು. ಆದರೂ ಧರ್ಮಲೋಪವು ಮಹತ್ತು. ಆದುದರಿಂದ ಇವರನ್ನು ಎಬ್ಬಿಸುತ್ತೇನೆ' ಎಂದು ಯೋಚನೆ ಮಾಡಿ 'ಏಳಿರಿ. ಸೂರ್ಯನು ಮುಳುಗುತ್ತಾ ಇದ್ದಾನೆ. ಸಂಧ್ಯಾಕಾಲವು ಬಂದಿದೆ. ಸಂಧ್ಯಾವಂದನೆ ಮಾಡುವ ಕಾಲವು ಮೀರಿಹೋಗುವುದು' ಎಂದು ಕೂಗಿದಳು. ಆಗ ಜರತ್ಕಾರು ಋಷಿಗಳು ಎದ್ದರು. ಕೋಪದಿಂದ ತುಟಿಯನ್ನು ನಡುಗಿಸುತ್ತಾ 'ನನಗೆ ಈ ರೀತಿ ಅವಮಾನವನ್ನು ಮಾಡಿದಿ. ಆದುದರಿಂದ ನಾನು ನಿನ್ನ ಬಳಿಯಲ್ಲಿ ಇರಲಾರೆನು. ಇಚ್ಛಾನುಸಾರವಾಗಿ ಹೊರಟುಹೋಗುವೆ. ನಾನು ಮಲಗಿರುವಾಗ ಸೂರ್ಯನಿಗೆ ಮುಳುಗಲಿಕ್ಕೆ ಶಕ್ತಿಯಿರಲಾರದು ಎಂದು ನನ್ನ ಅಭಿಪ್ರಾಯವಿದೆ. ಹೀಗಿರುವಾಗ ನನ್ನನ್ನು ಎಬ್ಬಿಸಿ ನನಗೆ ಅವಮಾನ ಮಾಡಿದಿ. ನನ್ನಂತೆ ಇರುವವರು ಅವಮಾನವನ್ನು ಹೊಂದಿದ ಮೇಲೆ ಅಲ್ಲಿ ಇರಲಾರರು' ಎಂದು ಹೇಳಿದರು. ಆ ಮಾತನ್ನು ಕೇಳಿದ ಹೆಂಡತಿಗೆ ಎದೆಯು ನಡುಗಿಹೋಯಿತು. ವಿನಯದಿಂದ ಹೇಳಿಕೊಂಡಳು. 'ನಾನು ತಮಗೆ ಅವಮಾನ ಮಾಡಬೇಕೆಂದು ಅಭಿಪ್ರಾಯಪಟ್ಟಿಲ್ಲ. ತಮಗೆ ಸಂಧ್ಯಾವಂದನೆಯ ಸುಮಯವು ಮೀರುತ್ತದೆ ಎಂದು ಎಬ್ಬಿಸಿದೆನು'. ಈ ಪ್ರಕಾರವಾಗಿ ಹೇಳಿದರೂ ಜರತ್ಕಾರು ಋಷಿಗಳು ಕೋಪವುಳ್ಳವರಾಗಿಯೇ ಪತ್ನಿಯನ್ನು ಬಿಟ್ಟುಹೋಗಬೇಕೆಂದು

ಅಭಿಪ್ರಾಯವುಳ್ಳವರಾಗಿ 'ನನ್ನ ಮಾತು ಯಾವಾಗಲೂ ಸುಳ್ಳಾಗಲಾರದು. ನಾನು ನಿನಗೆ ಮೊದಲೇ ತಿಳಿಸಿದ್ದೇನೆ. ನಾನು ಇಷ್ಟುದಿವಸ ಇಲ್ಲಿ ಸುಖವಾಗಿ ಇದ್ದೆನು. ನಾನು ಹೋದಮೇಲೆ ನಿನ್ನ ಅಣ್ಣನ ಹತ್ತಿರ ನಾನು ಹೊರಟುಹೋದೆನು ಎಂಬುದನ್ನು ತಿಳಿಸು. ನಾನು ಹೋದಮೇಲೆ ನೀನೂ ದುಃಖಪಡಬೇಡ' ಎಂದರು.

ಈಪ್ರಕಾರ ಹೇಳೋಣ ವಾಸುಕಿಯ ತಂಗಿಯು ಕೈಮುಗಿದುಕೊಂಡು ಕಣ್ಣೀರು ಸುರಿಸುತ್ತಾ ಮುಖವು ಬಾಡಿಹೋಗಿ, ಗದ್ಗದಸ್ವರದಿಂದ 'ತಾವು ನಿರಪರಾಧಿನಿಯಾದ ನನ್ನನ್ನು ಬಿಟ್ಟು ಹೋಗಬಾರದು. ನಾನು ಧರ್ಮದಲ್ಲಿ ಇರತಕ್ಕವಳು. ತಮ್ಮ ಧರ್ಮದಲ್ಲಿಯೂ ಹಿತದಲ್ಲಿಯೂ ಆಸಕ್ತಳು. ನನ್ನನ್ನು ಅಣ್ಣನು ಯಾವ ಕಾರಣದಿಂದ ಮದುವೆ ಮಾಡಿದನೋ ಆ ಕಾರ್ಯವು ಇನ್ನೂ ಆಗಲಿಲ್ಲ. ತಾವು ಈಗ ಹೊರಟುಹೋದರೆ ನನ್ನ ಅಣ್ಣನು ಏನು ಹೇಳುವನು? ತಾಯಿಯ ಶಾಪದಿಂದ ಕೂಡಿದ ನನ್ನ ಜ್ಞಾತಿಗಳಾದ ಸರ್ಪಗಳಿಗೋಸ್ಕರ ತಮ್ಮಿಂದ ಸತ್ಪುತ್ರನು ಅಪೇಕ್ಷಿತನು. ತಮ್ಮಿಂದ ನಾನು ಮಗನನ್ನು ಪಡೆದರೆ ಮಾತ್ರ ನನ್ನ ಜ್ಞಾತಿಗಳಿಗೆ ಹಿತವಾಗುವುದು. ತಮ್ಮನ್ನು ನಾನು ಮದುವೆಯಾದದ್ದು ವ್ಯರ್ಥವಾಗಬಾರದು. ಇನ್ನೂ ನನ್ನ ಗರ್ಭವು ಸ್ಪಷ್ಟವಾಗಿಲ್ಲ. ಈ ಸಂದರ್ಭದಲ್ಲಿ ತಾವು ನನ್ನನ್ನು ಬಿಟ್ಟು ಹೇಗೆ ಹೋಗುವಿರಿ' ಎಂದಳು.

ಆಗ ಋಷಿಗಳು 'ಸುಂದರಿ! ನಿನ್ನ ಉದರದಲ್ಲಿ ಅಗ್ನಿಯಂತೆ ತೇಜಸ್ವಿಯಾದ ವೇದವೇದಾಂಗಶಾಸ್ತ್ರಪಾರಂಗತನಾದ ಋಷಿಯು ಇರುವನು' ಎಂದು ಹೇಳಿ ಉಗ್ರವಾದ ತಪಸ್ಸಿಗೆ ಹೊರಟುಹೋದನು.

ತರುವಾಯ ಜರತ್ಕಾರುವು ತನ್ನ ಅಣ್ಣನ ಹತ್ತಿರ ತನ್ನ ಪತಿಗಳು ಕೋಪಿಸಿಕೊಂಡು ಹೋದ ವಿಷಯವನ್ನು ತಿಳಿಸಿದಳು. ಅದನ್ನು ಕೇಳಿ ವಾಸುಕಿಗೆ ತುಂಬಾ ವ್ಯಸನವಾಯಿತು. 'ತಂಗಿ! ನಿನ್ನನ್ನು ಮದುವೆ ಮಾಡಿಕೊಡಲಿಕ್ಕೆ ಕಾರಣವನ್ನು ನೀನು ತಿಳಿದಿರುವೆಯಲ್ಲಾ' ನಿನ್ನಲ್ಲಿ ಹುಟ್ಟಿದ ಮಗನು ಸರ್ಪಯಾಗದಲ್ಲಿ ನಮ್ಮನ್ನೆಲ್ಲಾ ಬಿಡಿಸುವನೆಂದು. ಬ್ರಹ್ಮದೇವರು ಹೇಳಿರುವರು. ನಿನ್ನಲ್ಲಿ ಗರ್ಭವಿದೆಯಾ? ಅಂತಹ ಮಹಾನುಭಾವರನ್ನು ನೀನು ಮದುವೆಯಾದದ್ದು ವ್ಯರ್ಥವಾಗಲಾರದು. ನಿಜವನ್ನು ಹೇಳು. ನನ್ನ ಮನಸ್ಸಿನ ದುಃಖವನ್ನು ಪರಿಹರಿಸು' ಎಂದು ಕೇಳಿದನು.

ಅದಕ್ಕೆ ಜರತ್ಕಾರುವು 'ನಾನು ಅವರ ಹತ್ತಿರ ಮಗನ ವಿಷಯವಾಗಿ ನಾನು ಕೇಳಿದ್ದೇನೆ. ಅದಕ್ಕೆ ಅವರು 'ಇದೆ' ಎಂದು ಹೇಳಿ ಹೊರಟುಹೋದರು. ಅವರು ಇಷ್ಟರವರೆಗೆ ಯಾವಾಗಲೂ ತಮಾಷೆಗಾಗಿಯೂ ಸುಳ್ಳು ಹೇಳಿದ್ದಿಲ್ಲ. ಆದುದರಿಂದ

ಈಗ ಮಾತ್ರ ಯಾಕೆ ಸುಳ್ಳುಹೇಳುವರು? ಅವರು ಹೋಗುವಾಗ ನನ್ನೊಡನೆ 'ನೀನು ದುಃಖಪಡಬೇಡ. ಅಗ್ನಿಯಂತೆ ತೇಜಸ್ವಿಯಾದ ಮಗನು ನಿನಗೆ ಹುಟ್ಟುವನು' ಎಂದು ಹೇಳಿ ಹೊರಟುಹೋದರು. ಆದುದರಿಂದ ಅಣ್ಣ! ನಿನ್ನ ಮನಸ್ಸಿನಲ್ಲಿರುವ ದುಃಖವನ್ನು ಬಿಡು' ಎಂದು ಹೇಳಿದಳು.

ಆ ಮಾತನ್ನು ಕೇಳಿ ವಾಸುಕಿಯು ಪರಮಸಂತೋಷವುಳ್ಳವನಾದನು. ತಂಗಿಯನ್ನು ಸತ್ಕಾರಮಾಡಿದನು. ಸರಿಯಾದ ಕಾಲದಲ್ಲಿ ವಾಸುಕಿಯ ತಂಗಿಯು ಪುತ್ರರತ್ನವನ್ನು ಹಡೆದಳು. ಆ ಮಗನು ನಾಗರಾಜನ ಮನೆಯಲ್ಲಿಯೇ ಬೆಳೆದನು. ಭಾರ್ಗವಚ್ಯವನ ಋಷಿಗಳನ್ನು(ಲ್ಲಿ) ವೇದಗಳನ್ನೂ ಅಂಗಶಾಸ್ತ್ರಗಳನ್ನೂ ಅಭ್ಯಾಸ ಮಾಡಿದರು. ಒಳ್ಳೆಯ ಬುದ್ಧಿವಂತನಾಗಿದ್ದನು. ತಂದೆಯು ಹೋಗುವಾಗ 'ಅಸ್ತಿ' ಎಂದರೆ ಇದೆ ಎಂದು ಹೇಳಿ ಹೋಗಿರುವ ಪ್ರಯುಕ್ತ ಆಸ್ತೀಕ ಎಂದು ಆ ಬಾಲಕನಿಗೆ ಹೆಸರು ಪ್ರಸಿದ್ಧವಾಯಿತು. ಆ ಆಸ್ತೀಕರೇ ಮುಂದೆ ಸರ್ಪಯಾಗದಲ್ಲಿ ಹೋಗಿ ಸರ್ಪಯಾಗವನ್ನು ನಿಲ್ಲಿಸಿ ಸರ್ಪಗಳನ್ನು ಬದುಕಿಸಿದರು. ಇದರಿಂದ ಸರ್ಪಗಳೆಲ್ಲಾ ಆಸ್ತೀಕರಲ್ಲಿ ತುಂಬಾ ಸಂತೋಷಪಟ್ಟರು. ಎಲ್ಲಾ ಸರ್ಪಗಳೂ ಸೇರಿ 'ಜ್ಞಾನಿಯೇ! ನಿಮ್ಮಿಂದ ನಾವೆಲ್ಲರೂ ಬದುಕಿದೆವು. ಬೇಕಾದ ವರವನ್ನು ಕೇಳಿಕೊಳ್ಳಬೇಕು' ಎಂದು ಹೇಳಿದವು. ಆಗ ಆಸ್ತೀಕರು ನನ್ನ ಈ ಧರ್ಮಯುಕ್ತವಾದ ಚರಿತ್ರೆಯನ್ನು ಕೇಳುವವರಿಗೂ, ಆಸ್ತೀಕ ಎಂದು ನನ್ನ ಹೆಸರನ್ನು ಹೇಳುವವರಿಗೂ ಸರ್ಪಭಯವುಂಟಾಗಲಾರದು ಎಂದು ವರವನ್ನು ಕೇಳಿಕೊಂಡರು. ಸರ್ಪಗಳು ಹಾಗೆಯೇ ವರವನ್ನು ಕೊಟ್ಟವು. ಈ ಪ್ರಕಾರವಾಗಿ ಆಸ್ತೀಕರು ಸರ್ಪಯಾಗದಿಂದ ಸರ್ಪಗಳನ್ನು ಬಿಡಿಸಿ, ಸರ್ಪಗಳ ಪ್ರೀತಿಯನ್ನು ಸಂಪಾದಿಸಿ ಹೊರಟುಹೋದರು.



## ಸರ್ಪಯಾಗ [1]

ಜನಮೇಜಯರಾಜನು ಪರೀಕ್ಷಿದ್ರಾಜನ ಮಗನು. ಅವನ ತಾಯಿಯು ಉತ್ತರನ ಮಗಳಾದ ಇರಾವತೀದೇವಿಯು. ಇವನು ಚಿಕ್ಕವನಾಗಿರುವಾಗಲೇ ತಂದೆಯಾದ ಪರೀಕ್ಷಿದ್ರಾಜನು ತಕ್ಷಕನು ಕಚ್ಚಿ ಸತ್ತುಹೋಗಿದ್ದನು. ಇವನನ್ನು ಚಿಕ್ಕ ಹುಡುಗನನ್ನೇ ಮಂತ್ರಿಗಳೂ ಪ್ರಜೆಗಳೂ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದ್ದರು.

1. ಮಭಾ. ಆಪ. ಅ-50 ರಿಂದ 58

ಒಂದುದಿನ ಜನಮೇಜಯರಾಜನು ಆಸ್ಥಾನದಲ್ಲಿ ಕೂತಿದ್ದನು. ಆಗ ಉತ್ತಂಕ ಋಷಿಗಳು ಬಂದು 'ರಾಜ! ಪಾಪಿಯಾದ ತಕ್ಷಕನು ನಾನು ಗುರುದಕ್ಷಿಣೆಕೊಡಲಿಕ್ಕೆ ತುಂಬಾ ವಿಘ್ನಮಾಡಿದನು. ಅವನೇ ನಿನ್ನ ತಂದೆಯನ್ನು ಕೊಂದವನು. ಅವನನ್ನು ನೀನು ಸರ್ಪಯಾಗವನ್ನು ಸುಟ್ಟುಹಾಕು' ಎಂದು ಹೇಳಿ ಹೊರಟುಹೋದನು.

ಜನಮೇಜಯರಾಜನು ಮಂತ್ರಿಗಳೊಡನೆ ತಂದೆಯ ಮರಣದ ವಿಷಯವನ್ನು ಕೇಳಿದನು. ಮಂತ್ರಿಗಳು ವಿಸ್ತಾರವಾಗಿ ಪರೀಕ್ಷಿದ್ರಾಜನು ಮೃಗಬೇಟೆಗೆ ಹೋದ ವಿಷಯವನ್ನು ಶಾಪಬಂದ ವಿಷಯವನ್ನೂ ತಿಳಿಸಿ, ತಕ್ಷಕನು ಕಾಶ್ಯಪಬ್ರಾಹ್ಮಣರನ್ನು ಧನವನ್ನು ಕೊಟ್ಟು ಹಿಂದೆ ಕಳುಹಿಸಿದ ವಿಷಯವನ್ನೂ ವಿಸ್ತಾರವಾಗಿ ತಿಳಿಸಿದರು. ಆಮೇಲೆ ತಕ್ಷಕನು ಕಚ್ಚಿ ಪರೀಕ್ಷಿದ್ರಾಜನು ನಿರ್ಯಾಣವನ್ನು ಹೊಂದಿದ ವಿಷಯವನ್ನೂ ವಿವರಿಸಿದರು.

ಆಗ ಜನಮೇಜಯರಾಜನು ಒಬ್ಬರೂ ಇಲ್ಲದಿರುವ ಸ್ಥಳದಲ್ಲಿ ತಕ್ಷಕನು ಮರವನ್ನು ಕಚ್ಚಿದ್ದೂ, ಅದರಿಂದ ಮರವು ಭಸ್ಮವಾದದ್ದೂ, ಅದನ್ನು ಕಾಶ್ಯಪರು ಬದುಕಿಸಿದ್ದೂ, ಆಮೇಲೆ ತಕ್ಷಕನು ಅವರಿಗೆ ಹಣವನ್ನು ಕೊಟ್ಟು ಹಿಂದೆ ಕಳುಹಿಸಿದ್ದೂ ನಿಮಗೆ ಹೇಗೆ ತಿಳಿಯಿತು' ಎಂದು ಕೇಳಿದನು.

ಮಂತ್ರಿಗಳು ನಮಗೆ ಈ ವಿಷಯವು ತಿಳಿದ ಕ್ರಮವನ್ನು ಹೇಳುವೆವು. ತಕ್ಷಕನು ಕಚ್ಚಿದ ಒಣಗಿದ್ದ ಆ ಮರದಲ್ಲಿ ಕಟ್ಟಿಗೆ ಕಡಿಯಲಿಕ್ಕೆ ಒಬ್ಬ ಪುರುಷನು ಏರಿದ್ದನು. ಆ ಪುರುಷನು ಆ ಮರದ ಮೇಲೆ ಇದ್ದ ವಿಷಯವನ್ನು ತಕ್ಷಕನೂ ಕಾಶ್ಯಪರೂ ಇಬ್ಬರೂ ತಿಳಿದಿರಲಿಲ್ಲ. ಅದರಿಂದ ಆ ಮರವು ಭಸ್ಮವಾಗುವಾಗ ಆ ಮನುಷ್ಯನೂ ಭಸ್ಮನಾದನು. ಆಮೇಲೆ ಕಾಶ್ಯಪರ ಪ್ರಭಾವದಿಂದ ಮರವು ಬದುಕಿದಾಗ ಆ ಮನುಷ್ಯನೂ ಬದುಕಿದನು. ಆ ಪುರುಷನು ಬಂದು ನಮ್ಮೊಡನೆ ಎಲ್ಲಾ ವಿಷಯವನ್ನೂ ತಿಳಿಸಿದನು. ಈ ರೀತಿ ನಾವು ನೋಡಿದ ಕೇಳಿದ ವಿಷಯಗಳನ್ನು ಹೇಳಿದ್ದೇವೆ. ಇನ್ನು ಮುಂದೆ ಮಾಡಬೇಕಾದ ಕಾರ್ಯವನ್ನು ನೀವು ಮಾಡಬೇಕು' ಎಂದರು.

ಇಂತಹ ಮಾತನ್ನು ಕೇಳಿ ಜನಮೇಜಯರಾಜನಿಗೆ ತಡೆಯಲಾರದ ದುಃಖವುಂಟಾಯಿತು. ದೀರ್ಘಶ್ವಾಸವನ್ನು ಬಿಟ್ಟನು. ಧಾರೆಧಾರೆಯಾಗಿ ಕಣ್ಣೀರನ್ನು ಸುರಿಸಿದನು. ಒಂದು ಮುಹೂರ್ತಕಾಲ ಯೋಚನೆ ಮಾಡಿದನು. ಆಮೇಲೆ ತುಂಬಾ ಕೋಪವುಳ್ಳವನಾಗಿ ಮಂತ್ರಿಗಳೊಡನೆ 'ಮಂತ್ರಿಗಳೇ! ನಿಮ್ಮ ಮಾತನ್ನು ಕೇಳಿ ನಾನು ನಿಶ್ಚಯಮಾಡಿದ ವಿಷಯವನ್ನು ಹೇಳುತ್ತೇನೆ ಕೇಳಿರಿ. ನನ್ನ ತಂದೆಯನ್ನು ಕೊಂದ ದುರಾತ್ಮನಾದ ಆ ತಕ್ಷಕನಿಗೆ ಸರಿಯಾದ ಪ್ರತೀಕಾರವನ್ನು ಮಾಡಬೇಕು. ಶೃಂಗಿಯೆಂಬ

ಋಷಿಗಳನ್ನು ಹೇತುಮಾಡಿಕೊಂಡು ನಮ್ಮ ತಂದೆಯನ್ನು ಸುಟ್ಟುಹಾಕಿದನು. ಆದರಲ್ಲೂ ಬದುಕಿಸುತ್ತೇನೆಂದು ಬಂದ ಕಾಶ್ಯಪರಿಗೆ ಹಣವನ್ನು ಕೊಟ್ಟು ಹಿಂದೆ ಕಳುಹಿಸಿದ್ದು ತುಂಬಾ ದುಷ್ಟತನವಾಗಿದೆ. ಆ ಕಾಶ್ಯಪರು ಬಂದು ನನ್ನ ತಂದೆಯನ್ನು ಬದುಕಿಸಿದ್ದರೆ ಅವನಿಗೇನು ಮುಳುಗಿಹೋಗುತ್ತಿತ್ತು? ಕಾಶ್ಯಪರನ್ನು ಹಣಕೊಟ್ಟು ಹಿಂದೆ ಕಳುಹಿಸಿ ಬಹು ಅನ್ಯಾಯವನ್ನು ಮಾಡಿದನು. ಆದುದರಿಂದ ಉತ್ತಂಕ ಋಷಿಗಳಿಗೆ ಪ್ರಿಯವನ್ನು ಮಾಡುವುದಕ್ಕೂ ನನ್ನ ಪ್ರಿಯಕ್ಕೂ ಎಲ್ಲರ ಪ್ರಿಯಕ್ಕೂ ಆ ತಕ್ಷಕನಿಗೆ ಸರಿಯಾದ ಪ್ರತೀಕಾರವನ್ನು ಮಾಡುವೆನು' ಎಂದು ಹೇಳಿದನು.

ತರುವಾಯ ರಾಜನು ಪುರೋಹಿತರನ್ನು ಕೂಗಿ 'ಆ ದುರಾತ್ಮನಾದ ತಕ್ಷಕನಿಗೆ ಸರಿಯಾದ ಪ್ರತೀಕಾರವನ್ನು ಮಾಡಬೇಕು. ಆ ಪಾಪಿಯು ಹೇಗೆ ನನ್ನ ತಂದೆಯನ್ನು ವಿಷಾಗ್ನಿಯಿಂದ ಸುಟ್ಟುಹಾಕಿದನೋ ಹಾಗೆಯೇ ಅವನನ್ನು ಉರಿಯುವ ಬೆಂಕಿಯಲ್ಲಿ ಸುಡಬೇಕೆಂದು ನನಗೆ ಅಪೇಕ್ಷೆಯಿದೆ. ಆ ತಕ್ಷಕನು ಬಂಧುಗಳ ಸಹಿತವಾಗಿ ಅಗ್ನಿಯಲ್ಲಿ ಬಂದು ಬೀಳಬೇಕು. ಆ ರೀತಿಯಾಗಿ ಮಾಡಲಿಕ್ಕೆ ತಮಗೇನಾದರೂ ಉಪಾಯವು ತಿಳಿದಿದಿಯಾ?' ಎಂದು ಕೇಳಿದನು.

ಆಗ ಪುರೋಹಿತರು 'ರಾಜನ್! ಸರ್ಪಯಾಗವೆಂಬ ಮಹಾಯಾಗವೊಂದಿದೆ. ಪುರಾಣದಲ್ಲಿ ಹೇಳಲ್ಪಟ್ಟಿತು. ಅದನ್ನು ನೀನು(ನಿನ್ನ) ಹೊರತು ಮತ್ತೊಬ್ಬರು ಮಾಡುವವರಿಲ್ಲ' ಎಂದರು. ಆಗ ರಾಜನು ಹಾಗಾದರೆ ತಕ್ಷಕನು ಅಗ್ನಿಯಲ್ಲಿ ಬಿದ್ದಂತೆಯೇ ಎಂದು ನಿಶ್ಚಯಿಸಿದನು. ಬ್ರಾಹ್ಮಣರೊಡನೆ 'ನಾನು ಆ ಯಾಗವನ್ನು ಮಾಡುವೆನು! ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸಿ' ಎಂದನು.

ತರುವಾಯ ಪುರೋಹಿತರು ಯಜ್ಞಕ್ಕೆ ಯೋಗ್ಯವಾದ ಸ್ಥಳವನ್ನು ಅಳೆದರು. ವಿಧಿಪ್ರಕಾರವಾಗಿ ಯಜ್ಞಶಾಲೆಯನ್ನು ಮಾಡಿಸಿದರು. ಸರ್ಪಯಾಗಕ್ಕೆ ರಾಜನನ್ನು ದೀಕ್ಷಿತನನ್ನಾಗಿ ಮಾಡಿದರು. ಆದರೆ ಆರಂಭದಲ್ಲೇ ಒಂದು ಅಪಶಕುನವಾಯಿತು. ಶಿಲ್ಪಶಾಸ್ತ್ರವನ್ನು ತಿಳಿದ ಒಬ್ಬ ಪುರುಷನು 'ನೀವು ಯಜ್ಞಶಾಲೆಯನ್ನು ಮಾಡಿದ ದೇಶಕಾಲಗಳನ್ನು ನೋಡಿದರೆ ಒಬ್ಬ ಬ್ರಾಹ್ಮಣರ ನಿಮಿತ್ತದಿಂದ ಈ ಯಜ್ಞವು ಅರ್ಧದಲ್ಲಿಯೇ ನಿಂತುಹೋಗುವುದು' ಎಂದನು. ಆಗ ರಾಜನು ದೀಕ್ಷಿತನಾಗುವ ಮೊದಲೇ ತನ್ನ ಸಾರಥಿಯೊಡನೆ 'ನನಗೆ ತಿಳಿಯದಂತೆ ಒಬ್ಬರನ್ನೂ ಒಳಗೆ ಬಿಡಬಾರದು' ಎಂದನು.

ಆ ಯಾಗದಲ್ಲಿ ಚ್ಯವನ ಋಷಿಗಳ ವಂಶದಲ್ಲಿ ಪ್ರಸಿದ್ಧವಾದ ಚಂಡಭಾರ್ಗವ ಎಂಬ ಋಷಿಗಳು ಹೋತೃ ಆಗಿದ್ದರು. ಕೌತ್ಸಋಷಿಗಳು ಉದ್ಗಾತೃ ಜೈಮಿನ್ಯಾ

ಚಾರ್ಯರು ಬ್ರಹ್ಮಾ. ಶಾಂರ್ಗರವಋಷಿಗಳು ಅಧ್ವರ್ಯು. ವೇದವ್ಯಾಸದೇವರು ಅವರ ಮಕ್ಕಳು ಶುಕಾಚಾರ್ಯರು ಶಿಷ್ಯರು ಇನ್ನೂ ಅನೇಕ ಋಷಿಗಳು ಸದಸ್ಯರಾಗಿದ್ದರು. ಪುರೋಹಿತರು ಹೋಮಮಾಡುತ್ತಿದ್ದರು. ಅನೇಕ ಚಿಕ್ಕ ದೊಡ್ಡ ಸರ್ಪಗಳು ಮಂತ್ರಬಲದಿಂದ ಬೆಂಕಿಯಲ್ಲಿ ಬಂದು ಬೀಳುತ್ತಿದ್ದವು. ಆಕಾಶದಲ್ಲಿ ಬಂದು ಬೀಳುವ ಶಬ್ದಗಳು ಭಯಂಕರವಾಗಿ ಕೇಳುತ್ತಿದ್ದವು. ತಕ್ಷಕನು ಇಂದ್ರದೇವರ ಲೋಕಕ್ಕೆ ಹೋಗಿದ್ದನು. ಅಲ್ಲಿಯೇ ಭೂಮಿಯಲ್ಲಿ ಜನಮೇಜಯರಾಜನು ಸರ್ಪಯಾಗಕ್ಕೆ ದೀಕ್ಷಿತನಾಗಿದ್ದಾನೆ ಎಂದು ಕೇಳಿಯೇ ಇಂದ್ರದೇವರ ಹತ್ತಿರ ಎಲ್ಲಾ ವಿಷಯವನ್ನೂ ಹೇಳಿ ಇಂದ್ರದೇವರನ್ನೂ ರಕ್ಷಣೆ ಮಾಡಬೇಕೆಂದು ಮರೆಹೊಂದಿದನು. ಆಗ ಇಂದ್ರದೇವರು ನಾಗೇಂದ್ರ! ನಿನಗೆ ಸರ್ಪಯಾಗದಿಂದ ಭಯವಿಲ್ಲ. ನಿನಗೋಸ್ಕರ ನಾನು ಈ ಮೊದಲೇ ಬ್ರಹ್ಮದೇವರ ಹತ್ತಿರ ಕೇಳಿಕೊಂಡಿದ್ದೇನೆ. ಆದುದರಿಂದ ನಿನಗೆ ಭಯವಿಲ್ಲ ಎಂದು ಹೇಳಿದರು. ಈರೀತಿ ಇಂದ್ರದೇವರು ಹೇಳಲು ತಕ್ಷಕನು ಸಂತೋಷದಿಂದ ಇಂದ್ರದೇವರ ಮಂದಿರದಲ್ಲೇ ಸುಖವಾಗಿ ಇದ್ದನು.

ಸರ್ಪಯಾಗದಲ್ಲಿ ಬಹುಸರ್ಪಗಳು ಅಗ್ನಿಯಲ್ಲಿ ಬಿದ್ದು ಸತ್ತವು. ಇದರಿಂದ ವಾಸುಕಿಯ ಪರಿವಾರವು ಬಹಳ ಕಡಿಮೆಯಾಯಿತು. ವಾಸುಕಿಗೆ ಮೂರ್ಛಾ ಬರುವಂತೆ ಆಯಿತು. ಎದೆಯು ನಡುಗಿತು. ತಂಗಿಯಾದ ಜರತ್ಕಾರುವಿನೊಡನೆ ಹೇಳಿದನು. 'ತಂಗಿ! ನನ್ನ ಮೈಯೆಲ್ಲಾ ಉರಿಯುತ್ತದೆ. ಕಣ್ಣು ಸುತ್ತುತ್ತದೆ. ಎದೆಯು ಒಡೆಯುವಂತೆ ಇದೆ. ನಾನು ಉರಿಯುವ ಬೆಂಕಿಯಲ್ಲಿ ಬೀಳುವೆನು. ನಮ್ಮನ್ನೆಲ್ಲಾ ಕೊಲ್ಲಲಿಕ್ಕೆ ಜನಮೇಜಯರಾಜನ ಯಾಗವು ನಡೆಯುತ್ತಾ ಇದೆ. ನಾನೂ ಯಮಲೋಕಕ್ಕೆ ಹೋಗಬೇಕಾಗಿದೆ. ತಂಗಿ! ನಿನ್ನನ್ನು ಜರತ್ಕಾರು ಋಷಿಗಳಿಗೆ ಮದುವೆಮಾಡಿಕೊಟ್ಟ ಪ್ರಯೋಜನವು ಈಗ ನಡೆಯಬೇಕಾಗಿದೆ. ತಂಗಿ. ನಮ್ಮನ್ನೆಲ್ಲಾ ರಕ್ಷಣೆ ಮಾಡು. ನಿನ್ನ ಮಗನಾದ ಆಸ್ತೀಕನು ಆ ಸರ್ಪಯಾಗವನ್ನು ನಿಲ್ಲಿಸುವೆನೆಂದೂ ಬ್ರಹ್ಮದೇವರು ಹೇಳಿದ್ದಾರೆ. ಆದುದರಿಂದ ನಿನ್ನ ಮಗನೊಡನೆ ಬಂಧುಗಳಿಂದ ಸಹಿತನಾದ ನನ್ನನ್ನು ಈ ಬೆಂಕಿಯಿಂದ ಬಿಡಿಸುವಂತೆ ಹೇಳು'.

ಈ ರೀತಿಯಾಗಿ ವಾಸುಕಿಯು ಹೇಳಲು ಜರತ್ಕಾರುವು ತನ್ನ ಮಗನಾದ ಆಸ್ತಿಕರನ್ನು ಕರೆದು 'ಮಗು! ನಿನ್ನ ಸೋದರಮಾವನು ನಿನ್ನ ತಂದೆಗೆ ನನ್ನನ್ನು ಯಾವ ಕಾರಣದಿಂದ ಮದುವೆ ಮಾಡಿಕೊಟ್ಟರು? ಆ ಕಾರ್ಯವು ಈಗ ಆಗಬೇಕಾಗಿದೆ. ಸರ್ಪಗಳಿಗೆಲ್ಲಾ ತಾಯಿಯಿಂದ ಜನಮೇಜಯನರಾಜನು ಸರ್ಪಯಾಗದಲ್ಲಿ

ನಿಮ್ಮನ್ನೆಲ್ಲಾ ಸುಟ್ಟುಹಾಕಲಿ ಎಂಬ ಶಾಪವು ಪ್ರಾಪ್ತವಾಯಿತು. ಆಗ ನನ್ನ ಅಣ್ಣ ವಾಸುಕಿಯು ತುಂಬಾ ದುಃಖವುಳ್ಳವನಾಗಿ ಬ್ರಹ್ಮದೇವರ ಬಳಿ ಹೋಗಿ ತಾಯಿ ಶಾಪವು ಹೇಗೆ ಪರಿಹಾರವಾಗುವುದೆಂದು ಕೇಳಿದನು. ಆಗ ಬ್ರಹ್ಮದೇವರು ವಾಸುಕಿಯ ತಂಗಿ ಜರತ್ಕಾರುವಿನಲ್ಲಿ ಜರತ್ಕಾರು ಋಷಿಗಳಿಂದ ಹುಟ್ಟಿದ ಮಗನು ಸರ್ಪಯಾಗದಿಂದ ಸರ್ಪಗಳನ್ನು ಬಿಡಿಸುವನು ಎಂದರು. ಆ ಕಾರಣದಿಂದ ನನ್ನ ಅಣ್ಣನು ನನ್ನನ್ನು ನಿನ್ನ ತಂದೆಗೆ ಮದುವೆ ಮಾಡಿದನು. ಆ ಕಾಲವು ಈಗ ಬಂದಿದೆ. ಜನಮೇಜಯರಾಜನು ಸರ್ಪಯಾಗವನ್ನು ಮಾಡುತ್ತಿರುವನು. ನೀನು ನಮ್ಮನ್ನೆಲ್ಲಾ ರಕ್ಷಣೆ ಮಾಡು. ನನ್ನ ಅಣ್ಣನನ್ನು ರಕ್ಷಣೆ ಮಾಡು. ನನ್ನ ಅಣ್ಣನು ನನ್ನನ್ನು ಮದುವೆ ಮಾಡಿಕೊಟ್ಟದ್ದು ವ್ಯರ್ಥವಾಗಬಾರದು' ಎಂದು ಹೇಳಿದಳು.

ಆಗ ಆಸ್ತೀಕರು 'ಆಗಲಿ ಅಮ್ಮ! ಹಾಗೇ ಮಾಡುತ್ತೇನೆ' ಎಂದು ಹೇಳಿ ವಾಸುಕಿಯ ಹತ್ತಿರ 'ನಾನೀಗ ನಿನ್ನನ್ನು ಶಾಪದಿಂದ ಬಿಡಿಸುತ್ತೇನೆ. ಸ್ವಸ್ಥನಾಗಿರಬೇಕು. ನಿಮ್ಮೆಲ್ಲರಿಗೂ ಶ್ರೇಯಸ್ಸಾಗುವಂತೆ ಪ್ರಯತ್ನ ಮಾಡುತ್ತೇನೆ. ನನ್ನ ಮಾತು ಸುಳ್ಳಾಗಲಾರದು. ಮಾವ! ನಾನು ಈಗ ಹೋಗಿ ಜನಮೇಜಯರಾಜನನ್ನು ಸ್ತೋತ್ರದಿಂದ ಸಂತೋಷಪಡಿಸುತ್ತೇನೆ. ರಾಜನ ಯಾಗವು ನಿಂತುಹೋಗುವಂತೆ ಮಾಡುತ್ತೇನೆ' ಎಂದರು.

ಆಗ ವಾಸುಕಿಯು 'ಆಸ್ತೀಕ' ನನ್ನ ಎದೆಯು ಒಡೆದುಹೋಗುವಂತೆ ಆಗುತ್ತದೆ. ದಿಕ್ಕೇ ತೋರುವುದಿಲ್ಲ' ಎಂದನು.

ಆಸ್ತೀಕರು 'ನೀವು ಸ್ವಲ್ಪವೂ ದುಃಖಪಡುವುದು ಬೇಡ. ಉರಿಯುವ ಬೆಂಕಿಯಿಂದ ನಿಮಗೆ ಭಯವು ಬೇಡ' ಎಂದು ಹೋಗಿ ಜನಮೇಜಯರಾಜನು ಮಾಡುವ ಯಾಗಕ್ಕೆ ಹೋದರು. ಅಲ್ಲಿ ಸೂರ್ಯಾಗ್ನಿಗಳಂತೆ ಪ್ರಕಾಶಮಾನರಾದ ಸದಸ್ಯರಿಂದ ಯುಕ್ತನಾದ ಯಜ್ಞಶಾಲೆಯಲ್ಲಿ ನೋಡಿದರು. ಅಲ್ಲಿ ಒಳಗೆ ಹೋಗುವಾಗ ದ್ವಾರಪಾಲಕರು ತಡೆದರು. ಆಗ ಆಸ್ತೀಕರು ಒಳಗೆ ಪ್ರವೇಶ ಮಾಡಬೇಕೆಂದು ಯಜ್ಞವನ್ನು ಸ್ತೋತ್ರ ಮಾಡಿದನು. ಯಜ್ಞಶಾಲೆಯನ್ನೂ ರಾಜನನ್ನೂ ಋತ್ವಿಕ್‌ಗಳನ್ನೂ ಸದಸ್ಯರನ್ನೂ ಅಗ್ನಿಯನ್ನೂ ಸ್ತೋತ್ರಮಾಡಿದರು.

ಈ ಪ್ರಕಾರವಾಗಿ ಸ್ತೋತ್ರಮಾಡಲು ರಾಜನೂ ಸದಸ್ಯರೂ ಋತ್ವಿಕ್‌ಗಳೂ ಅಗ್ನಿಯೂ ಎಲ್ಲರೂ ಸಂತೋಷವನ್ನು ಹೊಂದಿದರು. ರಾಜನೂ ಅವರೆಲ್ಲರ ಅಭಿಪ್ರಾಯವನ್ನು ತಿಳಿದು 'ಇವನು ಬಾಲಕನಾದರೂ ವೃದ್ಧರಂತೆ ಮಾತಾಡುತ್ತಾನೆ.

ಇವನಿಗೆ ವರವನ್ನು ಕೊಡಬೇಕೆಂದು ಅಭಿಪ್ರಾಯವನ್ನು ಹೊಂದುತ್ತೇನೆ. ಅದಕ್ಕೆ ನೀವು ಸಂಮತಿಯನ್ನು ಕೊಡಬೇಕು.

ಆಗ ಸದಸ್ಯರು ಬ್ರಾಹ್ಮಣರು ಬಾಲಕನಾದರೂ ಬಹುಮಾನಕ್ಕೆ ಅರ್ಹನೇ. ಈ ಬ್ರಾಹ್ಮಣನು ಸರ್ವಾಭೀಷ್ಟವನ್ನು ನಿನ್ನಿಂದ ಹೊಂದಲಿ. ತಕ್ಷಕನು ಬೇಗನೆ ನಮ್ಮ ಬಳಿಗೆ ಬರಲಿ.

ಆಗ ಜನಮೇಜಯರಾಜನು 'ವರವನ್ನು ಕೇಳಿಕೊ' ಎಂದು ಹೇಳಬೇಕೆಂದು ಉದ್ಯುಕ್ತನಾಗಿದ್ದಾನೆ. ಆಗ ಹೋತೃ ಎಂಬ ಋತ್ವಿಕ್ ಅಸಂತುಷ್ಟನಾಗಿ ತಕ್ಷಕನು ಇನ್ನೂ ಬಂದಿಲ್ಲ ಎಂದನು.

ಜನಮೇಜಯರಾಜನು 'ನೀವೆಲ್ಲರೂ ಮಹಾಪ್ರಯತ್ನದಿಂದ ತಕ್ಷಕನು ಬೇಗನೆ ಬರುವಂತೆ ಮಾಡಿರಿ. ಅವನೇ ನನಗೆ ಬಹಳ ದ್ವೇಷಿಯಾದವನು' ಎಂದನು.

ಋತ್ವಿಕ್‌ಗಳು ಶಸ್ತ್ರಮಂತ್ರಗಳ ಅಭಿಮಾನಿದೇವತೆಗಳೂ ಅಗ್ನಿ ದೇವರೂ ತಕ್ಷಕನು ಭಯಪೀಡಿತನಾಗಿ ಇಂದ್ರದೇವರ ಮಂದಿರದಲ್ಲಿ ಇದ್ದಾನೆ ಎಂದು ಸೂಚಿಸುತ್ತಾರೆ. ಇಂದ್ರದೇವರು ಅವನಿಗೆ ವರವನ್ನು ಕೊಟ್ಟಿದ್ದಾರೆ. ನನ್ನ ಸಮೀಪದಲ್ಲಿ ಸುರಕ್ಷಿತವಾಗಿ ವಾಸಮಾಡು. ನಿನ್ನನ್ನು ಅಗ್ನಿಯು ಸುಡುವುದಿಲ್ಲ ಎಂದು ಹೇಳಿರುವರು.

ಈ ಮಾತನ್ನು ಕೇಳಿ ಜನಮೇಜಯರಾಜನು ಇಂದ್ರನಿಂದ ಸಹಿತವಾಗಿಯೇ ತಕ್ಷಕನನ್ನು ಬೆಂಕಿಯಲ್ಲಿ ಹಾಕಿರಿ. ಅವನನ್ನು ಎಷ್ಟು ಮಾತ್ರಕ್ಕೂ ಬಿಡಬಾರದು ಎಂದನು.

ಹೋತೃ ಎಂಬ ಋತ್ವಿಕ್ ತಕ್ಷಕನಿಂದ ಸಹಿತರಾಗಿ ಇಂದ್ರದೇವರೇ ಅಗ್ನಿಗೆ ಬಂದು ಬೀಳಲಿ ಎಂದನು. ಆಗ ಇಂದ್ರದೇವರು ಅರ್ಜುನನ ಮೂಲಕ ತನ್ನ ವಂಶದವನಾದ ಜನಮೇಜಯರಾಜನಿಗೆ ಕೀರ್ತಿಯನ್ನು ಉಂಟುಮಾಡುವುದ ಕ್ಕೋಸ್ಕರ ವಿಮಾನದಲ್ಲಿ ಕೂತುಕೊಂಡು, ದೇವತೆಗಳಿಂದ ಸ್ತೋತ್ರಮಾಡಲ್ಪಡುವವ ರಾಗಿ ಬಂದರು. ಇಂದ್ರದೇವರು ಹೊದ್ದುಕೊಂಡಿರುವ ವಸ್ತ್ರದಲ್ಲಿ — ತಕ್ಷಕನು ಭಯದಿಂದ ಸುಖವನ್ನೇ ಹೊಂದಲಿಲ್ಲ.

ತರುವಾಯ ರಾಜನು ಕೋಪದಿಂದ ತಕ್ಷಕನನ್ನು ಸಂಹಾರ ಮಾಡುವ ಇಚ್ಛಾವುಳ್ಳವನಾಗಿ 'ಬ್ರಾಹ್ಮಣರೇ ತಕ್ಷಕನು ಇಂದ್ರದೇವರ ಮನೆಯಲ್ಲಿ ಇದ್ದರೆ ಇಂದ್ರದೇವರಿಂದ ಸಹಿತವಾಗಿಯೇ ತಕ್ಷಕನನ್ನು ಬೆಂಕಿಗೆ ಹಾಕಿರಿ' ಎಂದನು.

ಆಗ ಹೋತೃ ಎಂಬ ಋತ್ವಿಕ್ ತಕ್ಷಕನು ಬರಲಿಕ್ಕೆ ಮಂತ್ರವನ್ನು ಹೇಳಿದನು. ಹೋಮಮಾಡುವಾಗ ಇಂದ್ರದೇವರಿಂದ ಸಹಿತನಾದ ತಕ್ಷಕನು ಒಂದುಕ್ಷಣ

ದುಃಖವುಳ್ಳವರಾಗಿ ಆಕಾಶದಲ್ಲಿ ಕಾಣಿಸಿಕೊಂಡರು. ಇಂದ್ರದೇವರು ಆ ಯಜ್ಞವನ್ನು ನೋಡಿ ಭಯವನ್ನು ಹೊಂದಿದರು. ತಕ್ಷಕನನ್ನು ಅಲ್ಲಿಯೇ ಬಿಟ್ಟು ತನ್ನ ಲೋಕಕ್ಕೆ ಹೊರಟುಹೋದರು. ಇಂದ್ರದೇವರು ಹೊರಟುಹೋಗಲು ಭಯದಿಂದ ಮೋಹಿತ ನಾದ ತಕ್ಷಕನು ಮಂತ್ರಶಕ್ತಿಯಿಂದ ಅಗ್ನಿಯ ಜ್ವಾಲೆಯ ಸಮೀಪಕ್ಕೆ ಬಂದನು.

ಋತ್ವಿಕ್‌ಗಳು ಹೇಳಿದರು 'ರಾಜನ್, ತಕ್ಷಕನು ನಿನ್ನ ವಶ ಬರುತ್ತಿದ್ದಾನೆ. ಭಯಂಕರವಾಗಿ ಕೂಗುವ ಅವನ ಗರ್ಜನೆಯು ಕೇಳಿಸುತ್ತಾ ಇದೆ. ಇಂದ್ರದೇವರು ಅವನನ್ನು ಬಿಟ್ಟುಬಿಟ್ಟರು. ಜ್ಞಾನಶೂನ್ಯವಾಗಿ ದೀರ್ಘಶ್ವಾಸಬಿಡುತ್ತಾ ಆಕಾಶದಲ್ಲಿ ಬರುತ್ತಾ ಇದ್ದಾನೆ. ಇನ್ನು ಬೇಕಾದರೆ ಈ ಬ್ರಾಹ್ಮಣಕುಮಾರನಿಗೆ ವರವನ್ನು ಕೊಡು' ಎಂದರು.

ಜನಮೇಜಯರಾಜನು ಆಸ್ತೀಕರೊಡನೆ 'ಬೇಕಾದ ವರವನ್ನು ಕೇಳಿಕೊ' ಎಂದನು. ರಾಜನು ಈ ರೀತಿ ವರವನ್ನು ಕೊಡಲು ಆಸ್ತೀಕರು ಈಯಾಗವನ್ನು ಇಷ್ಟರಲ್ಲಿಯೇ ನಿಲ್ಲಿಸಬೇಕು. ಇನ್ನು ಮುಂದೆ ಸರ್ಪಗಳು ಅಗ್ನಿಯಲ್ಲಿ ಬಂದು ಬೀಳಬಾರದು ಎಂದರು. ರಾಜನು ಅಸಂತುಷ್ಟನಾಗಿ 'ನಿಮಗೆ ಬಂಗಾರ ಬೆಳ್ಳಿ ಗೋವುಗಳೋ ಬೇಕಾದ್ದನ್ನು ಕೊಡುತ್ತೇನೆ. ಯಾಗವನ್ನು ನಿಲ್ಲಿಸಬೇಡಿರಿ' ಎಂದನು. ಆಸ್ತೀಕರು ನನಗೆ ಬಂಗಾರ ಬೆಳ್ಳಿಗೋವುಗಳೂ ಬೇಡ. ಯಾಗವು ಇಷ್ಟರಲ್ಲೇ ನಿಲ್ಲಬೇಕು. ನನ್ನ ತಾಯಿಯ ಕಡೆಯವರಿಗೆ ಕ್ಷೇಮವಾಗಬೇಕು' ಎಂದರು ರಾಜನು ಪುನಃ ಪುನಃ ಈ ವರವನ್ನು ಬಿಟ್ಟು ಬೇರೆ ಏನಾದರೂ ಕೇಳು ಎಂದು ಪುನಃ ಪುನಃ ಹೇಳಿದನು. ಆಸ್ತೀಕರು ಅದನ್ನು ಹೊರತು ಬೇರೆ ವರವನ್ನು ಕೇಳಲೇ ಇಲ್ಲ.

ತರುವಾಯ ಸದಸ್ಯರೆಲ್ಲರೂ 'ಬ್ರಾಹ್ಮಣರಿಗೆ ಬೇಕಾದ ವರವನ್ನು ಕೊಟ್ಟು ಬಿಡು ಎಂದರು. ಆಮೇಲೆ ರಾಜನು 'ಸರಿ. ಆಸ್ತೀಕರ ಮಾತಿನಂತೆಯೇ ಆಗಲಿ. ಈ ಯಾಗವು ಇಲ್ಲಿಯೇ ಸಮಾಪ್ತವಾಗಲಿ. ಸರ್ಪಗಳಿಗೆ ಕ್ಷೇಮವಾಗಲಿ. ಆಸ್ತೀಕರಿಗೆ ಪ್ರೀತಿಯಾಗಲಿ. ಶಿಲ್ಪಿಯು ಹೇಳಿದ ಮಾತು ಸತ್ಯವಾಗಲಿ' ಎಂದನು. ಈ ರೀತಿಯಾಗಿ ರಾಜನು ಹೇಳಲು ಕೋಲಾಹಲವುಂಟಾಯಿತು. ಎಲ್ಲರಿಗೂ ಸಂತೋಷವಾಯಿತು. ರಾಜನೂ ಪ್ರೀತಿಯುಳ್ಳವನಾದನು. ಋತ್ವಿಕ್‌ಗಳಿಗೆ ಸದಸ್ಯರಿಗೆ ಆ ಶಿಲ್ಪಿಗೆ ಎಲ್ಲಾ ಬ್ರಾಹ್ಮಣರಿಗೂ ಬೇಕಾದಷ್ಟು ಹಣವನ್ನು ಕೊಟ್ಟನು. ಆಮೇಲೆ ರಾಜನು ಸಂತೋಷದಿಂದ ಅವಭೃಥಸ್ನಾನ ಮಾಡಿದನು. ಆಸ್ತೀಕರಿಗೆ ಬೇಕಾದ ಸತ್ಕಾರವನ್ನು ಮಾಡಿ ನಾನೊಂದು ಅಶ್ವಮೇಧಯಾಗವನ್ನು ಮಾಡುವೆನು. ಅದಕ್ಕೆ ನೀವು ಸದಸ್ಯರಾಗಿ ಬರಬೇಕು' ಎಂದು ಹೇಳಿಕೊಂಡನು. ಹಾಗೆಯೇ ಆಗಲಿ ಎಂದು ಹೇಳಿ

ಆಸ್ತೀಕರು ರಾಜನನ್ನು ಸಂತೋಷಪಡಿಸಿ ತಾಯಿ ಮತ್ತು ಸೋದರಮಾವನ ಬಳಿಗೆ ಹೋಗಿ ನಡೆದ ವಿಷಯವನ್ನೆಲ್ಲಾ ತಿಳಿಸಿದರು.

ಅದನ್ನು ಕೇಳಿ ಎಲ್ಲರೂ ಸಂತೋಷಪಟ್ಟರು. ಎಲ್ಲ ಸರ್ಪಗಳೂ ಆಸ್ತೀಕರಿಗೆ 'ನಿಮ್ಮ ಸ್ಮರಣೆ ಮಾತ್ರದಿಂದ ಸರ್ಪಗಳ ಭಯವಿಲ್ಲದಂತಾಗಲಿ' ಇತ್ಯಾದಿ ವರಗಳನ್ನು ಕೊಟ್ಟರು. ಈಪ್ರಕಾರವಾಗಿ ಆಸ್ತೀಕರು ಸರ್ಪಗಳನ್ನು ಸರ್ಪಯಾಗದಿಂದ ಬಿಡಿಸಿ ಹೊರಟುಹೋದನು.



## ಸರ್ಪಗಳ ಶಾಪ [1]

ಪೂರ್ವದಲ್ಲಿ ಕೃತಯುಗದಲ್ಲಿ ದಕ್ಷಪ್ರಜೇಶ್ವರ ಹೆಣ್ಣುಮಕ್ಕಳಿಬ್ಬರಿದ್ದರು. ಅವರ ಹೆಸರು ಕದ್ರೂ ವಿನತಾ ಎಂದು. ಅವರಿಬ್ಬರೂ ಪರಮಸುಂದರಿಯರು. ಅವರಿಬ್ಬರನ್ನೂ ಕಶ್ಯಪರು ಮದುವೆ ಮಾಡಿಕೊಂಡರು. ಕಶ್ಯಪರು ತನ್ನ ಧರ್ಮಪತ್ನಿಯರಾದ ಅವರಿಗೆ ಬೇಕಾದ ವರವನ್ನು ಕೇಳಿಕೊಳ್ಳಿರಿ ಎಂದು ಹೇಳಿದರು. ಅದನ್ನು ಕೇಳಿ ಇಬ್ಬರೂ ತುಂಬಾ ಸಂತೋಷವನ್ನು ಹೊಂದಿದರು. ಕದ್ರೂದೇವಿಯು ತನಗೆ ಸಾವಿರ ಸರ್ಪಗಳು ಮಕ್ಕಳಾಗುವಂತೆ ವರವನ್ನು ಕೇಳಿಕೊಂಡಳು. ವಿನತಾದೇವಿಯು ಕದ್ರೂದೇವಿಯ ಮಕ್ಕಳಿಗಿಂತ ಅಧಿಕಬಲವುಳ್ಳ ಇಬ್ಬರು ಮಕ್ಕಳನ್ನು ಕೇಳಿಕೊಂಡಳು. ಕಶ್ಯಪರು ಇಬ್ಬರಿಗೂ ಆ ವರಗಳನ್ನು ಕೊಟ್ಟರು. ಇಬ್ಬರೂ ಪ್ರಯತ್ನಪೂರ್ವಕವಾಗಿ ಗರ್ಭವನ್ನು ಧರಿಸಿಕೊಂಡು ಇರಿ ಎಂದು ಹೇಳಿ ಕಶ್ಯಪರು ತಪಸ್ಸಿಗಾಗಿ ವನಕ್ಕೆ ಹೋದರು.

ಬಹುಕಾಲ ಕಳೆದ ಮೇಲೆ ಕದ್ರೂದೇವಿಯು ಸಾವಿರ ಮೊಟ್ಟೆಗಳನ್ನು ಹಡೆದಳು. ವಿನತಾದೇವಿಯು ಎರಡು ಮೊಟ್ಟೆಗಳನ್ನು ಹಡೆದಳು. ಅವರ ಮೊಟ್ಟೆಗಳನ್ನು ದಾಸಿಯರು ಬಿಸಿಯುಳ್ಳ ಗಡಿಗೆಗಳಲ್ಲಿ ಐನೂರು ವರ್ಷಕಾಲ ಇಟ್ಟರು. ಐನೂರು ವರ್ಷವಾಗಲು ಕದ್ರೂವಿನ ಮಕ್ಕಳು ಮೊಟ್ಟೆಗಳಿಂದ ಹೊರಗೆ ಬಂದವು. ಆದರೆ ವಿನತೆಯ ಮೊಟ್ಟೆಗಳಿಂದ ಮಕ್ಕಳು ಕಾಣಿಸಲಿಲ್ಲ. ಆಗ ವಿನತೆಯು ಮಗುವಿನಲ್ಲಿ ಆಸೆಯುಳ್ಳವಳಾಗಿ ಲಜ್ಜಾವುಳ್ಳವಳಾಗಿ ಒಂದು ಮೊಟ್ಟೆಯನ್ನು ಒಡೆದಳು. ಅದರಲ್ಲಿ

1. ಮಭಾ. ಆಪ. ಅ.15,16,20

ಮಗನನ್ನು ನೋಡಿದಳು. ತಲೆ ಮೊದಲಾದ ಮೇಲಿನ ಭಾಗವೆಲ್ಲ ಸರಿಯಾಗಿತ್ತು. ಕಾಲು ಮೊದಲಾದ ಕೆಳಗಿನ ಭಾಗವು ಇನ್ನೂ ಸರಿಯಾಗಿರಲಿಲ್ಲ. ಆ ಮಗನು ಕೋಪವುಳ್ಳವನಾಗಿ 'ಅಮ್ಮ! ನೀನು ಈ ಪ್ರಕಾರ ಲೋಭವುಳ್ಳವಳಾಗಿ ನನ್ನ ಶರೀರವನ್ನು ಅಸಂಪೂರ್ಣವನ್ನಾಗಿ ಮಾಡಿದಿಯಾದ ಕಾರಣ ಯಾರ ಹತ್ತಿರ ಸ್ಪರ್ಧಿಸುವಿಯೋ ಅವಳಿಗೆ ಐನೂರು ವರ್ಷ ದಾಸಿಯಾಗಿರುವಿ. ಇನ್ನೊಬ್ಬ ಮಗನನ್ನೂ ನನ್ನನ್ನು ಮಾಡಿದಂತೆ ಅಂಗಹೀನನನ್ನಾಗಿ ಮಾಡದೆ ಇದ್ದರೆ ಅವನು ನಿನ್ನನ್ನು ದಾಸೀತ್ವದಿಂದ ಬಿಡಿಸುವನು. ಅವನಿಗೆ ಉತ್ತಮ ಬಲ ಬರುವಂತೆ ಇನ್ನು ಐನೂರು ವರ್ಷ ಅವನು ಹುಟ್ಟುವ ಕಾಲವನ್ನು ನಿರೀಕ್ಷಿಸಬೇಕು' ಎಂದು ಹೇಳಿದನು. ಅವನ ಹೆಸರು ಅರುಣ ಎಂದು. ಅವನು ಪ್ರಾತಃಕಾಲದಲ್ಲಿ ಕಾಣಿಸಿಕೊಂಡನು. ತರುವಾಯ ಉದಯಿಸಿದ ಸೂರ್ಯನು ತನ್ನಂತೆ ತೇಜಸ್ಸಿನಿಂದ ಕೂಡಿದ ಅರುಣನನ್ನು ನೋಡಿ, ತನಗೆ ಸಾರಥಿಯನ್ನಾಗಿ ಮಾಡಿಕೊಂಡನು. ಅರುಣನು ಸರ್ವಲೋಕಪ್ರಕಾಶಕನಾದ ಸೂರ್ಯನ ರಥದಲ್ಲಿ ಕೂತುಕೊಂಡು ಸಾರಥ್ಯವನ್ನು ಮಾಡಿದನು. ಆಮೇಲೆ ಸರಿಯಾದ ಕಾಲದಲ್ಲಿ ಗರುಡದೇವರು ಹುಟ್ಟಿದರು. ಹುಟ್ಟಿದ ಕೂಡಲೇ ಹಸಿವೆಯುಳ್ಳವನಾಗಿ ತಾಯಿಯನ್ನು ಬಿಟ್ಟು ಆಹಾರಕ್ಕಾಗಿ ಮೇಲೆ ಹಾರಿದರು.

ಒಂದು ಸಮಯದಲ್ಲಿ ಕದ್ರೂವಿನತಾ ಇಬ್ಬರೂ ಸಮುದ್ರಮಥನಕಾಲದಲ್ಲಿ ಸಮುದ್ರದಲ್ಲಿ ಹುಟ್ಟಿದ ಉಚ್ಚೈಃಶ್ರವಾ ಎಂಬ ಕುದುರೆಯನ್ನು ನೋಡಿದರು. ದೂರದಲ್ಲಿ ಆ ಕುದುರೆಯನ್ನು ನೋಡಿ ಕದ್ರೂದೇವಿಯು ವಿನತೆಯೊಡನೆ ಉಚ್ಚೈಃಶ್ರವಾ ಎಂಬ ಈ ಕುದುರೆಯ ಬಣ್ಣವೇನು ಎಂದು ಕೇಳಿದಳು. ವಿನತೆಯು 'ಇದು ಬೆಳ್ಳಗಿರುವುದು. ನಿನ್ನ ಅಭಿಪ್ರಾಯವೇನು? ಹೇಳು ಪಂಥ ಹಾಕಿಕೊಳ್ಳುವ' ಎಂದಳು. ನನ್ನ ಅಭಿಪ್ರಾಯವು ಬಾಲಮಾತ್ರ ಕಪ್ಪಾಗಿದೆಯೆಂದು. ನೋಡೋಣ. ಸೋತವರು ಜೈಸಿದವರ ದಾಸಿಯಾಗಬೇಕು. ಎಂದು ಕದ್ರೂ ಹೇಳಿದಳು. ಸರಿ. ನಾಳೆ ಪರೀಕ್ಷಿಸಿ ನೋಡುವ ಎಂದು ಹೇಳಿ ಇಬ್ಬರೂ ಹೊರಟುಹೋದರು.

ಕದ್ರೂದೇವಿಯು ಮೋಸಮಾಡುವ ಇಚ್ಛೆಯಿಂದ ಸಾವಿರ ಸರ್ಪಗಳನ್ನೂ ಉಚ್ಚೈಃಶ್ರವದ ಬಾಲದಲ್ಲಿ ಜೋಲುತ್ತಾ ಬಾಲವು ಕಪ್ಪಾಗಿ ಕಾಣುವಂತೆ ಮಾಡಬೇಕು ಎಂದಳು. ಇಲ್ಲದಿದ್ದರೆ ನಾನು ದಾಸಿಯಾಗಬೇಕಾಗುವುದು. ನಾನು ದಾಸಿಯಾಗದಂತೆ ಮಾಡಿರಿ ಎಂದಳು. ಆಗ ಯಾವ ಸರ್ಪಗಳು ತಾಯಿಯ ಮಾತನ್ನು ಅಂಗೀಕರಿಸಲಿಲ್ಲವೋ ಅವುಗಳಿಗೆಲ್ಲಾ ನಿಮ್ಮನ್ನೆಲ್ಲಾ ಜನಮೇಜಯರಾಜನು ಸರ್ಪಯಾಗದಲ್ಲಿ ಸುಟ್ಟುಹಾಕುವನು' ಎಂದು ಶಪಿಸಿದಳು. ದೈವೇಚ್ಛೆಯಿಂದ ಕದ್ರೂ

ಕೊಟ್ಟ ಶಾಪವನ್ನು ಬ್ರಹ್ಮದೇವರು ಕೇಳಿದರು. ಸಮಸ್ತದೇವತೆಗಳಿಂದ ಕೂಡಿಕೊಂಡು ಕದ್ರೂವಿನ ಶಾಪವನ್ನು ಅಂಗೀಕರಿಸಿದರು. ಸರ್ಪಗಳು ಬಹಳವಾಗಿವೆ. ತೀಕ್ಷ್ಣವಿಷವುಳ್ಳವಾಗಿವೆ. ಆದುದರಿಂದ ಪ್ರಜೆಗಳ ಹಿತಕ್ಕೋಸ್ಕರ ಬ್ರಹ್ಮದೇವರು ಅಂಗೀಕರಿಸಿದರು. ಇನ್ನೊಬ್ಬರಿಗೆ ಪೀಡೆಯನ್ನುಂಟುಮಾಡುವ ಸರ್ಪಗಳಿಗೆ ತಾಯಿಯು ಕೊಟ್ಟ ಶಾಪವು ಸರಿಯಾಗಿದೆ. ಎಂದು ಹೇಳಿ ಬ್ರಹ್ಮದೇವರು ಕದ್ರೂನನ್ನು ಸತ್ಕರಿಸಿ ಕಶ್ಯಪರನ್ನು ಕರೆದು ನಿಮ್ಮ ಮಕ್ಕಳಾದ ವಿಷದಿಂದ ಕ್ರೂರಗಳಾದ ಸರ್ಪಗಳಿಗೆ ತಾಯಿಯ ಶಾಪವನ್ನು ಕೊಟ್ಟಿದ್ದಳು. ಆ ವಿಷಯದಲ್ಲಿ ನೀನು ಕೋಪಿಸಬಾರದು. ಸರ್ಪಗಳಿಗೆ ಈ ಪ್ರಕಾರವಾದ ನಾಶವು ಮೊದಲೇ ನಿಶ್ಚಿತವಾಗಿದೆ ಎಂದು ಹೇಳಿ ಸಂತೋಷಪಡಿಸಿ ಕಶ್ಯಪರಿಗೆ ವಿಷಪರಿಹಾರಕವಾದ ವಿದ್ಯೆಯನ್ನು ಉಪದೇಶಿಸಿ ಹೊರಟುಹೋದರು. ಈರೀತಿಯಾದ ತಾಯಿಯ ಶಾಪದಿಂದ ಭಯಗ್ರಸ್ತನಾಗಿ ಕರ್ಕೋಟಕನು ನಾನು ಕುದುರೆಯ ಬಾಲದಲ್ಲಿ ಇದ್ದುಕೊಂಡು ಕಪ್ಪಾಗುವಂತೆ ತೋರಿಸುವೆನು ಎಂದು ಹೇಳಿದನು.

ತರುವಾಯ ಕದ್ರೂವಿನತಾ ಇಬ್ಬರೂ ಪಂಥ ಹಾಕಿಕೊಂಡಂತೆ ಕುದುರೆಯನ್ನು ಪರೀಕ್ಷಾ ಮಾಡಿನೋಡುವುದಕ್ಕಾಗಿ ಸಮುದ್ರತೀರಕ್ಕೆ ಹೋದರು. ದೂರದಲ್ಲಿ ಕುದುರೆಯನ್ನು ನೋಡಿದರು. ಆಗ ಸರ್ಪಗಳು ಬಾಲದಲ್ಲಿ ಜೋಲುತ್ತಾ ಇದ್ದಪ್ರಯುಕ್ತ ಬಾಲಮಾತ್ರ ಕಪ್ಪಾಗಿ ಕಂಡಿತು. ಬಾಲವು ಕಪ್ಪಾಗಿರುವುದನ್ನು ಕಂಡು ವಿನತೆಯು ವಿಷಣ್ಣಳಾದಳು. ದಾಸೀಭಾವವನ್ನು ಹೊಂದಿದಳು. ಕೊನೆಗೆ ಗರುಡದೇವರು ಅಮೃತವನ್ನು ತಂದು ತಾಯಿಯ ದಾಸ್ಯವನ್ನು ಬಿಡಿಸಿದರು.



## ವಿನತೆಯ ದಾಸ್ಯದ ಪರಿಹಾರ [1]

ಗರುಡದೇವರು ಪಂಥದಲ್ಲಿ ಸೋತುಹೋಗಿ ಕದ್ರೂವಿನ ದಾಸ್ಯವನ್ನು ಮಾಡುತ್ತಾ ಇರುವ ತಾಯಿ ವಿನತೆಯ ಸಮೀಪಕ್ಕೆ ಹೋದರು. ಒಂದು ದಿನ ಕದ್ರೂ ವಿನತೆಯ ಹತ್ತಿರ ಸಮುದ್ರಮಧ್ಯದಲ್ಲಿರುವ ಸರ್ಪಗಳ ಸ್ಥಾನಕ್ಕೆ ಹೋಗಬೇಕು. ನನ್ನನ್ನು ಎತ್ತಿಕೊಂಡು ಹೋಗು ಎಂದಳು. ಹಾಗೆಯೇ ವಿನತೆಯು ಕದ್ರೂವನ್ನು ಹೊತ್ತುಕೊಂಡಳು. ತಾಯಿಯ ಮಾತಿನಿಂದ ಗರುಡದೇವರು ಸರ್ಪಗಳನ್ನು

1. ಮಭಾ. ಆಪ. ಅ-25 ರಿಂದ 34

ಹೊತ್ತುಕೊಂಡರು. ಗರುಡದೇವರು ಸರ್ಪಗಳನ್ನು ಸೂರ್ಯನ ಹತ್ತಿರ ಎತ್ತಿಕೊಂಡು ಹೋದರು. ಆಗ ಸರ್ಪಗಳು ಸೂರ್ಯರಶ್ಮಿಯಿಂದ ಮೂರ್ಛಿತಗಳಾದವು. ಅದನ್ನು ನೋಡಿ ಕದ್ರೂದೇವಿಯು ತನ್ನ ಮಕ್ಕಳಿಗೆ ಸುಖವುಂಟುಮಾಡುವಂತೆ ಇಂದ್ರ ದೇವರನ್ನು ಸ್ತುತಿಸಿದಳು. ಆಗ ಇಂದ್ರದೇವರು ತುಂಬಾ ಮಳೆಸುರಿಸಿದರು. ಇದರಿಂದ ಸರ್ಪಗಳು ಸಂತೋಷದಿಂದ ಗರುಡದೇವರ ಮೇಲೆ ಕೂತುಕೊಂಡು ಆ ದ್ವೀಪಕ್ಕೆ ಹೋಗಿ ಸೇರಿದವು.

ಆ ದ್ವೀಪಗಳಲ್ಲಿ ಸರ್ಪಗಳು ಇಚ್ಛಾನುಸಾರವಾಗಿ ಕ್ರೀಡಾಮಾಡಿದವು. ಆಮೇಲೆ ಮತ್ತೊಂದು ದ್ವೀಪಕ್ಕೆ ಕರೆದುಕೊಂಡು ಹೋಗಲಿಕ್ಕೆ ಹೇಳಿದವು. ಆಗ ಗರುಡ ದೇವರು 'ಅಮ್ಮ! ನಾನು ಏಕೆ ಸರ್ಪಗಳ ಮಾತನ್ನು ಕೇಳಬೇಕು' ಎಂದು ಕೇಳಿದರು. ವಿನತೆಯು ನನ್ನ ದೌರ್ಭಾಗ್ಯದಿಂದ ಸಪತ್ನಿಯ ಹತ್ತಿರ ಪಂಥಹಾಕಿ ಸೋತು ಹೋದೆನು. ಸರ್ಪಗಳು ಕಪಟದಿಂದ ನನ್ನನ್ನು ಸೋಲುವಂತೆ ಮಾಡಿದವು. ಆದುದ ರಿಂದ ನಾವು ಅವರ ಮಾತನ್ನು ಕೇಳಬೇಕಾಗಿದೆ ಎಂದು ಎಲ್ಲಾ ವಿಷಯಗಳನ್ನು ತಿಳಿಸಿದಳು.

ಈರೀತಿಯಾಗಿ ಕಾರಣವನ್ನು ಹೇಳಲು ಗರುಡದೇವರು ದುಃಖಿತರಾಗಿ ನಿಮಗೆ ಏನು ತಂದುಕೊಟ್ಟರೆ ನಿಮ್ಮ ದಾಸ್ಯದಿಂದ ಬಿಡುಗಡೆಯಾಗುವುದು ಎಂದು ಸರ್ಪಗಳೊಡನೆ ಕೇಳಿದರು. ಆಗ ಸರ್ಪಗಳು ನಮಗೆ ಅಮೃತವನ್ನು ತಂದುಕೊಡು. ಆಗ ನಿನಗೆ ದಾಸ್ಯದಿಂದ ಬಿಡುಗಡೆಯಾಗುವುದು ಎಂದವು.

ಈರೀತಿಯಾಗಿ ಸರ್ಪಗಳು ಹೇಳಲು ಗರುಡದೇವರು ತಾಯಿಯೊಡನೆ 'ಅಮ್ಮ! ನಾನು ಅಮೃತವನ್ನು ತರಲಿಕ್ಕೆ ಹೋಗುವೆನು. ತಿನ್ನಲಿಕ್ಕೆ ಆಹಾರವನ್ನು ಹೇಳು' ಎಂದರು. ಆಗ ವಿನತೆಯು 'ಸಮುದ್ರದ ಮಧ್ಯದಲ್ಲಿ ಬೇಡರು ವಾಸಮಾಡುವ ಸ್ಥಳವಿದೆ. ಅಲ್ಲಿ ಪಾಪಿಗಳಾದ ದಯಾಶೂನ್ಯರಾದ ಅನೇಕ ಸಾವಿರ ಬೇಡರಿದ್ದಾರೆ. ಅವರನ್ನು ತಿಂದು ಅಮೃತವನ್ನು ತಾ. ಆದರೆ ಬ್ರಾಹ್ಮಣರನ್ನು ಕೊಲ್ಲಲಿಕ್ಕೆ ಮಾತ್ರ ನಿನಗೆ ಮನಸ್ಸು ಬರಬಾರದು. ಬ್ರಾಹ್ಮಣರು ಸರ್ವಥಾ ಅವಧ್ಯರು. ಬ್ರಾಹ್ಮಣರ ದ್ರೋಹವನ್ನು ಮಾಡಬಾರದು. ಬ್ರಾಹ್ಮಣರನ್ನು ನುಂಗಿದರೆ ಬೆಂಕಿಯ ಕೆಂಡದಂತೆ ಕುತ್ತಿಗೆಯು ಸುಡುವುದು. ಅಂತವನನ್ನು ಬ್ರಾಹ್ಮಣನೆಂದು ತಿಳಿ. ಯಾವಾತನು ನಿನ್ನ ಉದರದಲ್ಲಿ ಜೀರ್ಣನಾಗುವುದಿಲ್ಲವೋ ಅವನನ್ನು ಬ್ರಾಹ್ಮಣನೆಂದು ತಿಳಿ. ದೇವತೆಗಳು ನಿನಗೆ ಮಂಗಳವನ್ನು ಮಾಡಲಿ. ನಿನಗೆ ಕ್ಷೇಮಚಿಂತನೆ ಮಾಡುತ್ತಾ ಇಲ್ಲಿಯೇ ಇರುತ್ತೇನೆ. ಈರೀತಿಯಾಗಿ ಹೇಳಿದಳು.

ಗರುಡದೇವರು ತಾಯಿಯ ಮಾತನ್ನು ಕೇಳಿ ರೆಕ್ಕೆಯನ್ನು ಅರಳಿಸಿಕೊಂಡು ಮೇಲೆ ಹಾರಿದರು. ಹಸಿವೆಯಿಂದ ಆ ಬೇಡರು ಇದ್ದ ಸ್ಥಳಕ್ಕೆ ಹೋದರು. ತರುವಾಯ ತುಂಬಾ ಧೂಳಿಯನ್ನು ಉಂಟುಮಾಡಿ ಸಮುದ್ರದ ನೀರನ್ನು ಆರಿಸುತ್ತಾ ಹತ್ತಿರದ ಪರ್ವತಗಳನ್ನು ನಡುಗಿಸುತ್ತಾ ದೊಡ್ಡ ಬಾಯಿಯನ್ನು ತೆರೆದು ಬೇಡರ ಮಾರ್ಗದಲ್ಲಿ ನಿಂತರು. ಆ ಗಾಳಿ ಧೂಳಿಯಿಂದ ಮೋಹಿತರಾದ ಬೇಡರು ಗರುಡದೇವರ ಬಾಯಿಯೊಳಗೆ ಪ್ರವೇಶಿಸಿದರು. ಎಲ್ಲರೂ ಪ್ರವೇಶಿಸಿದ ಮೇಲೆ ಗರುಡದೇವರು ಬಾಯಿಯನ್ನು ಮುಚ್ಚಿದರು.

ಆಗ ಒಬ್ಬ ಬ್ರಾಹ್ಮಣನು ಪತ್ನೀಸಹಿತನಾಗಿ ಬೆಂಕಿಕೆಂಡದಂತೆ ಸುಡುತ್ತಾ ಕಂಠವನ್ನು ಹೊಂದಿದನು. ಆಗ ಗರುಡದೇವರು ಬಾಯಿ ತೆರೆದು ಬ್ರಾಹ್ಮಣಶ್ರೇಷ್ಠ ! ನನ್ನ ಬಾಯಿಯಿಂದ ಹೊರಗೆ ಬಂದು ಬಿಡು. ನಾನು ಬ್ರಾಹ್ಮಣನನ್ನು ಕೊಲ್ಲಲಾರೆನು. ಅವನು ಪಾಪದಲ್ಲಿ ಆಸಕ್ತನಾಗಿದ್ದರೂ ನಾನು ಸಂಹಾರಮಾಡಲಾರೆನು' ಎಂದರು. ಆಗ ಬ್ರಾಹ್ಮಣನು ನನ್ನ ಹೆಂಡತಿ ಬೇಡಸ್ತ್ರೀಯು ಇದ್ದಾಳೆ. ಅವಳೂ ನನ್ನೊಡನೆ ಬರಬೇಕು ಎಂದಳು. ಗರುಡದೇವರು 'ಸರಿ! ಅವಳನ್ನೂ ಕರಕೊಂಡು ಬೇಗನೇ ಹೊರಗೆ ಬಂದುಬಿಡು. ನನ್ನ ತೇಜಸ್ಸಿನಿಂದ ಜೀರ್ಣನಾಗಬೇಡ' ಎಂದರು. ತರುವಾಯ ಆ ಬ್ರಾಹ್ಮಣನು ತನ್ನ ಪತ್ನಿಯಾದ ಬೇಡಸ್ತ್ರೀಯನ್ನು ಕರೆದುಕೊಂಡು ಹೊರಗೆ ಬಂದು ಗರುಡದೇವರಿಗೆ ಆಶೀರ್ವಾದ ಮಾಡಿ ಬೇಕಾದ ಸ್ಥಳಕ್ಕೆ ಹೋದನು. ಅನಂತರ ಗರುಡದೇವರು ಎಲ್ಲರನ್ನೂ ನುಂಗಿ ಶಕ್ತಿಯನ್ನು ಅರಳಿಸಿಕೊಂಡು ಮೇಲೆ ಹಾರುತ್ತಾ ತಂದೆಯಾದ ಕಶ್ಯಪರನ್ನು ನೋಡಿದರು–

ಕಶ್ಯಪರು 'ಗರುಡ! ಕ್ಷೇಮವೋ? ನಿನಗೆ ಆಹಾರವು ಸರಿಯಾಗಿದೆಯಾ? ಎಲ್ಲಿಗೆ ಹೋಗುವಿ?' ಎಂದು ಕೇಳಿದರು.

ಗರುಡದೇವರು 'ತಾಯಿ ಅಣ್ಣ ಸೌಖ್ಯದಿಂದ ಇದ್ದಾರೆ. ನನಗೆ ಬೇಕಾದಷ್ಟು ಆಹಾರವು ಸಿಗಲಿಲ್ಲ. ತಾಯಿಯ ದಾಸ್ಯವನ್ನು ಬಿಡಿಸುವುದಕ್ಕೋಸ್ಕರ ಅಮೃತವನ್ನು ತಂದುಕೊಡಬೇಕೆಂದು ಸರ್ಪಗಳು ಹೇಳಿದವು. ತಾಯಿಯು ಬೇಡರನ್ನು ತಿನ್ನಲಿಕ್ಕೆ ಹೇಳಿದಳು. ನನಗೆ ಅದರಿಂದ ತೃಪ್ತಿಯಾಗಲಿಲ್ಲ ನನಗೆ ಬೇರೊಂದು ಆಹಾರವನ್ನು ಹೇಳಬೇಕು. ಆ ಆಹಾರವನ್ನು ಸ್ವೀಕಾರ ಮಾಡಿ ಅಮೃತವನ್ನು ತರಲಿಕ್ಕೆ ಸಮರ್ಥವಾಗಿ ಹೋಗಬೇಕು' ಎಂದು ಹೇಳಿದರು.

ಆಗ ಕಶ್ಯಪರು 'ಪವಿತ್ರವಾದ ದೇವಲೋಕದಲ್ಲಿಯೂ ಪ್ರಸಿದ್ಧವಾದ ಸರೋವರವಿದೆ. ಅದರಲ್ಲಿ ಒಂದು ಆಮೆಯೂ ಇದೆ. ಅದನ್ನು ಒಂದು ಆನೆಯು

ಬಂದು ಸೆಳೆಯುತ್ತಾ ಇರುತ್ತದೆ. ಅವರು ಯಾರು ಎಂಬ ಚರಿತ್ರೆಯನ್ನು ಹೇಳುತ್ತೇನೆ. ಪೂರ್ವದಲ್ಲಿ ವಿಭಾವಸು ಎಂದು ಹೆಸರುಳ್ಳ ಕೋಪಶೀಲರಾದ ಋಷಿಗಳಿದ್ದರು. ಅವರಿಗೆ ಸುಪ್ರತೀಕ ಎಂಬ ಋಷಿಗಳಿದ್ದರು. ಆ ಋಷಿಗಳು ಅಣ್ಣನ ಹತ್ತಿರ ನನಗೆ ಸೊತ್ತಿನಲ್ಲಿ ವಿಭಾಗ ಮಾಡಬೇಕು ಎನ್ನುತ್ತಿದ್ದರು. ಅಣ್ಣನು ಬೇಡವೆಂದು ತುಂಬಾ ನಿರ್ಬಂಧಮಾಡಿದರು. ಆದರೂ ತಮ್ಮನು ವಿಭಾಗ ಮಾಡಲೇಬೇಕು ಎಂದು ಹಟಹಿಡಿದರು. ಆಗ ಅಣ್ಣನು 'ನಾನು ಹೇಳಿದ ಮಾತು ಕೇಳುವುದಿಲ್ಲ. ಜಗಳಮಾಡಿ ಹಣವನ್ನು ಅಪೇಕ್ಷಿಸುವಿ. ಆದುದರಿಂದ ಆನೆಯಾಗು ಎಂದು ಶಾಪವನ್ನೂ ಕೊಟ್ಟರು. ಆಗ ತಮ್ಮನು ನೀನು ಆಮೆಯಾಗು ಎಂದು ಶಾಪಕೊಟ್ಟರು.

ಈ ಪ್ರಕಾರವಾಗಿ ಇಬ್ಬರೂ ಪರಸ್ಪರ ಶಾಪದಿಂದ ಆಮೆ ಆನೆಗಳಾದರು ಆ ತಿರ್ಯಗ್ ಜನ್ಮದಲ್ಲಿ ಪರಸ್ಪರ ದ್ವೇಷದಿಂದ ಯುಕ್ತಗಳಾಗಿದ್ದವು. ಆ ದೊಡ್ಡ ಸರೋವರದಲ್ಲಿ ಆನೆಯು ಬರುವುದು. ಅದರ ಶಬ್ದವನ್ನು ಕೇಳಿ ಸರೋವರದ ಒಳಗಿನಿಂದ ಆಮೆಯು ಹೊರಗೆ ಬರುವುದು. ಎರಡೂ ಜಗಳಾಡಿಕೊಳ್ಳುವುವು. ಆಮೆಯು ಮೂವತ್ತುಮೈಲು ವಿಸ್ತರವಾಗಿಯೂ ನೂರುಮೈಲು ವಿಶಾಲವಾಗಿಯೂ ಇರುವುದು. ಆನೆಯು ಅರವತ್ತು ಎತ್ತರವೂ ನೂರ ಇಪ್ಪತ್ತು ಮೈಲು ವಿಶಾಲವಾಗಿಯೂ ಇರುವುದು. ಅವುಗಳು ಎರಡನ್ನೂ ನೀನು ಭಕ್ಷಣೆಮಾಡಿ ನಿನ್ನ ಕಾರ್ಯವನ್ನು ಸಾಧಿಸು ಎಂದು ಹೇಳಿದರು. ಈ ರೀತಿಯಾಗಿ ಹೇಳಿ ಗರುಡದೇವರಿಗೆ ದೇವತೆಗಳೊಡನೆ ಯುದ್ಧಮಾಡುವಾಗ ಮಂಗಲವಾಗಲಿ ಎಂದು ಹರಸಿದರು.

ಗರುಡದೇವರು ತಂದೆಯ ಮಾತಿನಂತೆ ಸರೋವರದ ಹತ್ತಿರ ಹೋಗಿ ಒಂದು ಪಾದದಿಂದ ಆನೆಯನ್ನೂ ಮತ್ತೊಂದು ಪಾದದಿಂದ ಆಮೆಯನ್ನೂ ಹಿಡಿದುಕೊಂಡು ಮೇಲೆ ಹಾರಿದರು. ಆಮೇಲೆ ಕೂತುಕೊಂಡು ಅವುಗಳನ್ನು ತಿನ್ನುವುದಕ್ಕೋಸ್ಕರ ಮರವನ್ನು ಹುಡುಕಿದರು. ಎಲ್ಲಾ ಮರಗಳೂ ಗರುಡದೇವರ ರೆಕ್ಕೆಯ ಗಾಳಿಯಿಂದಲೂ ನಮ್ಮನ್ನು ಮುರಿದುಹಾಕಬಾರದಲ್ಲಾ ಎಂದು ನಡುಗುತ್ತಾ ಇದ್ದವು. ತರುವಾಯ ಗರುಡದೇವರು ಆಕಾಶದಲ್ಲೇ ಹಾರುತ್ತಾ ಹೋಗಿ ಹತ್ತುಸಾವಿರ ಮೈಲು ಎತ್ತರವಾಗಿದ್ದ ಬಹು ಕೊಂಬೆಗಳಿಂದ ಕೂಡಿದ ರೌಹಿಣವೆಂಬ ಮರದಿಂದ ಆಹೂತರಾಗಿ ಅರ್ಧ ಸಾವಿರ ಮೈಲು ವಿಶಾಲವಾದ ಕೊಂಬೆಯಲ್ಲಿ ಕೂತುಕೊಂಡರು. ಆ ಕೊಂಬೆಯು ಹಾಗೆಯೇ ಮುರಿದುಹೋಯಿತು.

ಗರುಡದೇವರು ಕಾಲಿನಿಂದ ಮುಟ್ಟುವ ಮಾತ್ರದಿಂದಲೇ ಆ ಕೊಂಬೆಯು ಮುರಿದುಹೋಯಿತು. ಮುರಿದ ಆ ಕೊಂಬೆಯಲ್ಲಿ ವಾಲಖಿಲ್ಯರೆಂಬ ಋಷಿಗಳು

ತಲೆಕೆಳಗಾಗಿ ಜೋಲುತ್ತಾ ಇರುವುದನ್ನು ನೋಡಿದರು. ಕೊಂಬೆಯನ್ನು ಕೆಳಗೆ ಹಾಕಿದರೆ ಋಷಿಗಳು ಸಾಯುವರೆಂದು ತಪಸ್ಸು ಮಾಡುತ್ತಾ ಇರುವ ಆ ಋಷಿಗಳ ಸಹಿತವಾಗಿಯೇ ಬಾಯಿಯಿಂದ ಆ ಕೊಂಬೆಯನ್ನು ಕಚ್ಚಿಕೊಂಡು ಆಕಾಶದಲ್ಲಿ ಹಾರಿದರು. ಹೀಗೆಯೇ ಗರುಡದೇವರು ಕಾಲಿನ ಉಗುರುಗಳಿಂದ ಅಷ್ಟುದೊಡ್ಡ ಆನೆ ಆಮೆಗಳನ್ನು ಹಿಡಿದುಕೊಂಡು ಬಾಯಿಯಿಂದ ದೊಡ್ಡಮರದ ಕೊಂಬೆಯನ್ನು ಹಿಡಿದುಕೊಂಡು ಬಹುದೂರ ಹಾರಿದರು. ತರುವಾಯ ಗಂಧಮಾದನ ಪರ್ವತಕ್ಕೆ ಹೋಗಿ ಅಲ್ಲಿತ ಪಸ್ಸು ಮಾಡುತ್ತಾ ಇರುವ ತಂದೆಯಾದ ಕಶ್ಯಪರನ್ನು ನೋಡಿದರು. ಕಶ್ಯಪರು ಗರುಡದೇವರನ್ನು ನೋಡಿ 'ಗರುಡ! ಸಾಹಸವನ್ನು ಮಾಡಬೇಡ' ಈ ವಾಲಖಿಲ್ಯ ಋಷಿಗಳು ಕೋಪಿಸಿಕೊಂಡರೆ ನಿನ್ನನ್ನು ಸುಟ್ಟು ಹಾಕುವರು' ಎಂದು ಹೇಳಿ ವಾಲಖಿಲ್ಯರೊಡನೆ ಗರುಡನು ಪ್ರಜಾಹಿತಕ್ಕೋಸ್ಕರ ಆರಂಭಿಸಿದ್ದಾನೆ. ಮಹಾ ಕಾರ್ಯವನ್ನು ಮಾಡಲಿಕ್ಕೆ ಹೊರಟಿದ್ದಾನೆ. ತಾವು ಅನುಜ್ಞಾ ಕೊಡಬೇಕು ಎಂದು ಹೇಳಿದರು. ಆಗ ವಾಲಖಿಲ್ಯರು ಕೊಂಬೆಯಿಂದ ಕೆಳಗೆ ಇಳಿದು ತಪಸ್ಸು ಮಾಡಲಿಕ್ಕೆ ಹಿಮವತ್ಪರ್ವತಕ್ಕೆ ಹೋದರು. ಗರುಡದೇವರು ಈ ಕೊಂಬೆಯನ್ನು ಎಲ್ಲಿ ಹಾಕಲಿ ಎಂದು ಕೇಳಿದರು. ತರುವಾಯ ತಂದೆಯ ಮಾತಿನಿಂದ ಹಿಮದಿಂದ ತುಂಬಿದ ಗುಹೆಗಳುಳ್ಳ ಇತರರಿಂದ ಮನಸ್ಸಿನಿಂದಲೂ ಹೊಂದಲಿಕ್ಕೆ ಅಶಕ್ಯಪರ್ವತದ ಪ್ರದೇಶಕ್ಕೆ ಹೋಗಿ ಆ ಮರದ ಕೊಂಬೆಯನ್ನು ಕೆಳಗೆ ಹಾಕಿದರು. ಇದರಿಂದ ಆ ಪರ್ವತದ ಶಿಖರಗಳೆಲ್ಲಾ ಸೀಳಿದವು. ಆ ಪರ್ವತದ ಒಂದು ಶಿಖರದಲ್ಲಿ ಕೂತುಕೊಂಡು ಆನೆಯನ್ನೂ ಆಮೆಯನ್ನೂ ಭಕ್ಷಣೆ ಮಾಡಿದರು.

ತರುವಾಯ ಗರುಡದೇವರು ಆ ಪರ್ವತಶಿಖರದಿಂದ ಮೇಲೆ ಹಾರಿದರು. ಆಗ ದೇವಲೋಕದಲ್ಲಿ ಅನೇಕ ಅಶುಭಸೂಚಕ ಉತ್ಪಾದಗಳು ಉಂಟಾದವು. ದೇವತೆಗಳಿಂದ ಸಹಿತರಾದ ಇಂದ್ರದೇವರು ಈ ಉತ್ಪಾತಗಳಿಗೆ ಕಾರಣವೇನೆಂದು ಬೃಹಸ್ಪತ್ಯಾಚಾರ್ಯರ ಹತ್ತಿರ ಕೇಳಿದರು. ಆಗ ಬೃಹಸ್ಪತ್ಯಾಚಾರ್ಯರು "ದೇವೇಂದ್ರ! ನಿನ್ನ ಅಪರಾಧದಿಂದ ಪ್ರಮಾದದಿಂದ ಮಹರ್ಷಿಗಳಾದ ವಾಲಖಿಲ್ಯರ ತಪಸ್ಸಿನಿಂದ ಕಶ್ಯಪನಿಗೆ ವಿನತಾದೇವಿಯಲ್ಲಿ ಹುಟ್ಟಿದ ಗರುಡದೇವರು ಅಮೃತವನ್ನು ಅಪಹಾರ ಮಾಡಲಿಕ್ಕೆ ಬರುತ್ತಿರುವರು ಎಂದರು.

ಆಗ ಇಂದ್ರದೇವರು ಅಮೃತರಕ್ಷಣೆ ಮಾಡುವವರೊಡನೆ ಮಹಾಬಲಿಷ್ಠವಾದ ಪಕ್ಷಿಯು ಅಮೃತ ಅಪಹಾರ ಮಾಡಲಿಕ್ಕೆ ಬರುತ್ತಿರುವುದು. ಜಾಗ್ರತೆಯಿಂದ ಇರಬೇಕು ಎಂದು ಆಜ್ಞಾಪಿಸಿದರು.

ದೇವತೆಗಳು ಆ ಮಾತನ್ನು ಕೇಳಿ ಆಶ್ಚರ್ಯವುಳ್ಳವರಾಗಿ ಪ್ರಯತ್ನಪೂರ್ವಕವಾಗಿ ಅಮೃತ ಸುತ್ತಲೂ ನಿಂತರು. ಇಂದ್ರದೇವರು ನಿಂತರು. ಎಲ್ಲರೂ ನಾನಾವಿಧಗಳಾದ ಆಯುಧಗಳನ್ನು ಧರಿಸಿಕೊಂಡು ನಿಂತರು.

ಗರುಡದೇವರು ದೇವತೆಗಳಿದ್ದಲ್ಲಿಗೆ ಓಡಿಬಂದರು. ಅತಿಬಲಿಷ್ಠರಾದ ಆ ಗರುಡದೇವರನ್ನು ನೋಡಿ ಎಲ್ಲಾ ದೇವತೆಗಳೂ ನಡುಗಿಹೋದರು. ವಿಶ್ವಕರ್ಮನು ಅಮೃತವನ್ನು ರಕ್ಷಣೆಮಾಡುತ್ತಿದ್ದನು. ಗರುಡದೇವರು ರೆಕ್ಕೆಗಳಿಂದ ಮುಖದಿಂದ ಉಗುರುಗಳಿಂದ ಅವನಿಗೆ ಗಾಯಮಾಡಿದರು. ತನ್ನ ರೆಕ್ಕೆಯ ಗಾಳಿಯಿಂದ ಬಹಳ ಧೂಳಿಯನ್ನು ಎಬ್ಬಿಸಿದರು. ಅದರಿಂದ ಕತ್ತಲೆಯಾಯಿತು. ಒಬ್ಬರನ್ನೊಬ್ಬರು ನೋಡಿಕೊಳ್ಳಲಿಕ್ಕೆ ಆಗಲಿಲ್ಲ. ಎಲ್ಲ ದೇವತೆಗಳನ್ನೂ ರೆಕ್ಕೆಗಳಿಂದಲೂ ಕಾಲುಗಳಿಂದಲೂ ಬಡೆದರು. ಆಗ ಇಂದ್ರದೇವರು ಕೋಣದಿಕ್ಕಿನ ವಾಯುದೇವರ ಹತ್ತಿರ ಆ ಧೂಳಿಯನ್ನು ನಾಶಮಾಡುವಂತೆ ಹೇಳಿದರು. ಆ ವಾಯುದೇವರು ಹಾಗೆಯೇ ಮಾಡಿದರು. ದೇವತೆಗಳೆಲ್ಲಾ ಗರುಡದೇವರಿಗೆ ಬಡೆದರು. ಎಲ್ಲಾ ದೇವತೆಗಳೂ ಬಡೆಯಲು ಎಲ್ಲರನ್ನೂ ಭಯಪಡಿಸುತ್ತಾ ಮೇಲೆ ಹಾರಿದರು. ದೇವತೆಗಳು ಮೇಲೆ ಅಂತರಿಕ್ಷದಲ್ಲಿ ಇದ್ದ ಗರುಡದೇವರನ್ನು ನಾನಾವಿಧವಾಗಿ ಬಡೆದರು. ಗರುಡದೇವರು ಎಲ್ಲಾ ದೇವತೆಗಳನ್ನು ಬಡೆದುಹಾಕಿ ಅಮೃತಕ್ಕಾಗಿ ಹೋದವರಾಗಿ ಮಹಾಜ್ವಾಲೆಯಿಂದ ಕೂಡಿದ ಬೆಂಕಿಯನ್ನು ನೋಡಿದರು. ಆಗ ಎಂಟುಸಾವಿರದ ಮೂರು ಮುಖಗಳನ್ನು ಮಾಡಿಕೊಂಡು ಆ ಮುಖಗಳಿಂದ ನದಿಗಳ ನೀರುಗಳನ್ನು ತುಂಬಿಸಿಕೊಂಡು ಆ ಅಗ್ನಿಯಮೇಲೆ ನೀರನ್ನು ಹಾಕಿ ಶಾಂತಮಾಡಿದರು. ಆಮೇಲೆ ಮುಂದೆ ಹೋಗಲಿಕ್ಕೆ ಚಿಕ್ಕರೂಪವನ್ನು ಧರಿಸಿದರು.

ವೇಗದಿಂದ ಒಳಗೆ ಪ್ರವೇಶಿಸಿದರು. ಅಲ್ಲಿ ಅಮೃತದ ಹತ್ತಿರ ಕತ್ತಿಯಂತೆ ಬಾಯಿಯುಳ್ಳ ಚಕ್ರವು ಸುತ್ತುತ್ತಾ ಇರುವುದನ್ನು ನೋಡಿದರು. ಅಮೃತವನ್ನು ಅಪಹಾರಮಾಡಲಿಕ್ಕೆ ಬಂದವರನ್ನು ಸೀಳಿಹಾಕುವುದಕ್ಕಾಗಿ ದೇವತೆಗಳು ಆ ಚಕ್ರವನ್ನು ಅಲ್ಲಿ ಇಟ್ಟಿದ್ದರು. ಗರುಡದೇವರು ಚಿಕ್ಕರೂಪವನ್ನು ಧರಿಸಿ, ಸಮಯನೋಡಿ ಚಕ್ರದ ಸಂದಿನಿಂದ ಒಳಗೆ ಹೋದರು.

ಚಕ್ರದ ಕೆಳಗಡೆ ಭಯಂಕರವಾದ ಎರಡು ಸರ್ಪಗಳು ಇದ್ದವು. ಅವುಗಳು ಯಾರನ್ನಾದರೂ ನೋಡಿದರೆ ಸಾಕು ಅವರು ಸುಟ್ಟುಹೋಗಬೇಕು. ಅಂತಹ ಭಯಂಕರ ವಿಷಯುಕ್ತವಾಗಿದ್ದವು. ಗರುಡದೇವರು ಅವುಗಳನ್ನು ನೋಡಿ ಏನು ಮಾಡಲಿ ಎಂದು ಯೋಚಿಸಿ, ಕೊನೆಗೆ ಅವುಗಳ ಕಣ್ಣುಗಳಿಗೆ ಧೂಳಿಯನ್ನು

ಹಾಕಿಸಿದರು. ಅವುಗಳಿಗೆ ಕಾಣಿಸದಂತೆ ಚೆನ್ನಾಗಿ ಬಡೆದರು. ಅವುಗಳ ದೇಹವನ್ನು ಎರಡು ತುಂಡು ಮಾಡಿದರು. ತರುವಾಯ ಅಮೃತವನ್ನು ಹಿಡಿದುಕೊಂಡು ಅಲ್ಲಿದ್ದ ಯಂತ್ರವನ್ನು ಭೇದಿಸಿಕೊಂಡು ವೇಗದಿಂದ ಮೇಲೆ ಹಾರಿದರು. ಅಮೃತವನ್ನು ಕುಡಿಯದೆಯೇ ಅನಾಯಸದಿಂದ ಅದನ್ನು ಹಿಡಿದುಕೊಂಡು ಹೋದರು. ದಾರಿಯಲ್ಲಿ ಪರಮಾತ್ಮನು ಗರುಡದೇವರೊಡನೆ ನಾನು ನಿನ್ನ ಮೇಲೆ ತುಂಬಾ ಸಂತೋಷವನ್ನು ಹೊಂದಿದೆನು. ಬೇಕಾದ ವರವನ್ನು ಕೇಳಿಕೊ ಎಂದರು. ಆಗ ಗರುಡದೇವರು ನಾನು ನಿಮ್ಮ ಮೇಲೆ ಇರಬೇಕು. ಅಮೃತವನ್ನು ಕುಡಿಯದೆಯೇ ಜರಾಮರಣ ರಹಿತನಾಗಬೇಕು ಎಂದು ಕೇಳಿಕೊಂಡರು. ಪರಮಾತ್ಮನು ಹಾಗೆಯೇ ಆಗಲಿ ಎಂದನು. ಆಗ ಗರುಡದೇವರು ನನ್ನಿಂದಲೂ ಒಂದು ಸೇವೆಯನ್ನು ನೀವು ತೆಗೆದುಕೊಳ್ಳಬೇಕು ಎಂದರು. ಪರಮಾತ್ಮನು ನನಗೆ ವಾಹನವಾಗು ಎಂದು ಹೇಳಿ ಗರುಡದೇವರನ್ನು ರಥದಲ್ಲಿ ಧ್ವಜವನ್ನಾಗಿಯೂ ಮಾಡಿಕೊಂಡನು.

ಗರುಡದೇವರು ಹಾಗೆಯೇ ಆಗಲಿ ಎಂದು ಪರಮಾತ್ಮನ ಹತ್ತಿರ ಹೇಳಿ ವೇಗದಿಂದ ಮುಂದೆ ಹೋದರು. ಆಗ ಇಂದ್ರದೇವರು ರೋಷದಿಂದ ವಜ್ರಾಯುಧವನ್ನು ಗರುಡದೇವರ ಮೇಲೆ ಹಾಕಿದರು. ಆಗ ಗರುಡದೇವರು ಮಂದಹಾಸವನ್ನು ಮಾಡುತ್ತಾ ದೇವೇಂದ್ರ ಯಾವ ದಧೀಚಿ ಋಷಿಗಳ ಎಲುಬಿನಿಂದ ಉಂಟಾದದ್ದು ಈ ವಜ್ರವೋ ಅಂತಹ ಮುನಿಗಳಿಗೆ ಬಹುಮಾನ ಮಾಡಲಿಕ್ಕೆ ಮತ್ತು ನಿನಗೂ ಗೌರವವನ್ನು ಕೊಡುವುದಕ್ಕೆ ರೆಕ್ಕೆಯಿಂದ ಒಂದು ಗರಿಯನ್ನು ಕೆಳಗೆ ಬಿಡುತ್ತೇನೆ. ಅದರ ಕೊನೆಯೇ ನಿನಗೆ ತಿಳಿಯಲಾರದು. ನಿನ್ನ ವಜ್ರಪ್ರಹಾರದಿಂದ ನನಗೊಂದು ನೋವು ಇಲ್ಲ ಎಂದು ಹೇಳಿ ಒಂದುಗರಿಯನ್ನು ಬಿಟ್ಟರು. ಪರಮಸುಂದರವಾದ ಆ ಗರಿಯನ್ನು ನೋಡಿ ಎಲ್ಲರೂ ಗರುಡದೇವರಿಗೆ ಸುಪರ್ಣ ಎಂದು ಹೆಸರನ್ನಿಟ್ಟರು. ಇಂದ್ರದೇವರು ಈ ಮಹಾಶ್ಚರ್ಯವನ್ನು ನೋಡಿ ಈ ಪಕ್ಷಿಯು ಮಹಾಸಾಮರ್ಥ್ಯವುಳ್ಳದ್ದು ಎಂದು ತಿಳಿದುಕೊಂಡು, ನಿನ್ನ ಉತ್ತಮವಾದ ಬಲವನ್ನು ತಿಳಿಯಲು ಇಚ್ಛಿಸುತ್ತೇನೆ. ಅನಂತವಾದ ನಿನ್ನ ಸಖ್ಯವನ್ನೂ ಹೊಂದಲಿಕ್ಕೆ ಇಚ್ಛಿಸುತ್ತೇನೆ ಎಂದರು.

ಆಗ ಗರುಡದೇವರು 'ದೇವೇಂದ್ರ! ನಿನ್ನ ಇಚ್ಛೆಯಂತೆಯೇ ನನ್ನ ಸಖ್ಯವಿರಲಿ. ನನ್ನ ಬಲವನ್ನು ಹೇಳುತ್ತೇನೆ. ಸಜ್ಜನರು ತಮ್ಮ ಬಲವನ್ನು ಹೊಗಳಿಕೊಳ್ಳಲಾರರು. ಆದರೂ ನೀನು ಕೇಳಿದ ಕಾರಣ ನೀನು ಮಿತ್ರ ಎಂಬ ಭಾವನೆಯಿಂದ ಹೇಳುತ್ತೇನೆ. ಪರ್ವತವನಗಳಿಂದ ಕೂಡಿದ ಸಮುದ್ರದಿಂದ ಕೂಡಿದ ಸಮಸ್ತ ಭೂಮಿಯನ್ನೂ

ನಿನ್ನನ್ನೂ ಸಹ ಸ್ಥಾವರಜಂಗಮ ಸಮಸ್ತ ಪ್ರಾಣಿಗಳನ್ನು ಅನಾಯಾಸದಿಂದ ಒಂದು ರೆಕ್ಕೆಯಿಂದ ಹೊತ್ತುಕೊಂಡು ಹೋಗಬಲ್ಲೆನು. ಅಂತಹ ಸಾಮರ್ಥ್ಯವು ನನ್ನದು ಎಂದರು.

ಇಂದ್ರದೇವರು 'ನಿಮ್ಮಲ್ಲಿ ಎಲ್ಲಾ ಸಾಮರ್ಥ್ಯವೂ ಸಂಭಾವಿತವಾಗಿದೆ. ನನ್ನಲ್ಲಿ ಸ್ನೇಹವನ್ನಿಡಬೇಕು. ಅಮೃತವು ನಿಮಗೆ ಬೇಡದೆ ಇದ್ದರೆ ನನಗೆ ಕೊಡಬೇಕು. ನೀವು ಬೇರೆಯಾರಿಗಾದರೂ ಅಮೃತವನ್ನು ಕೊಟ್ಟರೆ ಅವರು ನಮ್ಮನ್ನು ಪೀಡಿಸುವರು.

ಗರುಡದೇವರು 'ದೇವೇಂದ್ರ! ನಾನು ಒಂದು ಕಾರಣದಿಂದ ಅಮೃತವನ್ನು ತೆಗೆದುಕೊಂಡು ಹೋಗುತ್ತೇನೆ. ಯಾರಿಗೂ ನಾನು ಅಮೃತವನ್ನು ಕುಡಿಯಲಿಕ್ಕೆ ಕೊಡುವುದಿಲ್ಲ. ನಾನು ಇದನ್ನು ತೆಗೆದುಕೊಂಡು ಹೋಗಿ ಎಲ್ಲಿ ಇಡುತ್ತೇನೋ ಅಲ್ಲಿಂದ ನೀನು ತೆಗೆದುಕೊಂಡು ಬಂದುಬಿಡು' ಎಂದರು.

ಇಂದ್ರದೇವರು 'ನಿಮ್ಮ ಮಾತನ್ನು ಕೇಳಿ ಸಂತೋಷವಾಯಿತು. ನನ್ನ ಗೌರವಕ್ಕಾಗಿ ನನ್ನೊಡನೆ ಒಂದು ವರವನ್ನು ಕೇಳಬೇಕು ಎಂದರು.

ಆಗ ಗರುಡದೇವರು .ಇಂದ್ರದೇವರಿಗಿಂತ ಎಷ್ಟೋ ದೊಡ್ಡವರಾದರೂ ಅವರಿಗೆ ಲೋಕರೀತ್ಯಾ ಒಂದು ಗೌರವವನ್ನು ಕೊಡಲಿಕ್ಕೆ ಸರ್ಪಗಳು ಕಪಟಮಾಡಿ ನನ್ನ ದಾಸ್ಯಕ್ಕೆ ಕಾರಣವಾದವು. ಆದುದರಿಂದ ಅವುಗಳು ನನ್ನ ಆಹಾರವಾಗಲಿ ಎಂದರು. ಇಂದ್ರದೇವರು ಸರಿ ಎಂದರು. ನೀವು ಎಲ್ಲಿ ಅಮೃತವನ್ನು ಇಡುತ್ತಿರೋ ಅಲ್ಲಿಂದಲೇ ನಾನು ಅಪಹಾರ ಮಾಡಿಕೊಂಡು ಬರುತ್ತೇನೆ ಎಂದರು. ಗರುಡದೇವರು ಬೇಗನೇ ತಾಯಿಯ ಬಳಿಗೆ ಬಂದರು. ಅಮ್ಮ! ದೇವಲೋಕದಿಂದ ಅಮೃತವನ್ನು ತಂದಿದ್ದೇನೆ. ಮುಂದೇನು ಮಾಡಲಿ! ಆಜ್ಞಾಮಾಡು ಎಂದರು.

ವಿನತೆಯು 'ಮಗ! ನೀನು ಮಾಡಿದ ಕಾರ್ಯದಿಂದ ನಾನು ಸಂತುಷ್ಟಳಾದೆನು. ನೀನು ಜರಾಮರಣ ರಹಿತನಾಗಿಯೂ ದೇವತೆಗಳಿಗೆ ಪ್ರಿಯನಾಗಿಯೂ ಆಗು ಎಂದು ಆಶೀರ್ವದಿಸಿದಳು.

ತರುವಾಯ ಗರುಡದೇವರು ಪರಮಸಂತೋಷವುಳ್ಳವರಂತೆ ತೋರಿಸುತ್ತಾ ಸರ್ಪಗಳೊಡನೆ ಈಗ ನಿಮಗಾಗಿ ದರ್ಭೆಗಳನ್ನು ಅಮೃತವನ್ನು ಇಟ್ಟಿದ್ದೇನೆ. ನೀವು ಸ್ನಾನಮಾಡಿ ಮಂಗಳಯುಕ್ತರಾಗಿ ಅಮೃತಪ್ರಾಶನಮಾಡಿರಿ. ನೀವು ಹೇಳಿದ ರೀತಿಯಾಗಿಯೇ ನನ್ನ ತಾಯಿಯು ಇಂದಿಗೆ ದಾಸ್ಯದಿಂದ ವಿಮುಕ್ತಳಾದಳು ಎಂದರು.

ಸರ್ಪಗಳು ಹಾಗೆಯೇ ಆಗಲಿ ಎಂದುಹೇಳಿ ಸ್ನಾನ ಮಾಡಲಿಕ್ಕೆ ಹೋದವು.

ಇಂದ್ರದೇವರು ಬಂದು ಅಮೃತವನ್ನು ಹಿಡಿದುಕೊಂಡು ಹೋದರು. ಸರ್ಪಗಳು ಸ್ನಾನಮಾಡಿ ಮಂಗಳಕಾರ್ಯವನ್ನು ಮಾಡಿಕೊಂಡು ನಾನು ಮುಂದೆ, ನಾನು ಮುಂದೆ ಎಂದು ಅಮೃತಪ್ರಾಶನೆಗಾಗಿ ಬಂದವು. ಎಲ್ಲಿ ದರ್ಭೆಯ ಮೇಲೆ ಅಮೃತವನ್ನು ಇಟ್ಟಿದ್ದರೋ ಅಲ್ಲಿಗೆ ಬಂದು ಅಮೃತವು ಅಪಹೃತವಾದದ್ದನ್ನು ನೋಡಿ ಇದು ಅಮೃತವಿಟ್ಟ ಸ್ಥಳವೆಂದು ದರ್ಭೆಗಳನ್ನು ನೆಕ್ಕಿದವು. ಇದರಿಂದ ಸರ್ಪಗಳ ನಾಲಗೆಗಳು ಸೀಳಿಹೋಗಿ ಎರಡು ನಾಲಿಗೆವುಳ್ಳವಾದವು. ಅಮೃತದ ಸ್ಪರ್ಶದಿಂದ ದರ್ಭೆಗಳು ಪವಿತ್ರವಾದವು.

ತರುವಾಯ ಗರುಡದೇವರು ಪರಮಸಂತೋಷದಿಂದ ತಾಯಿಯೊಡನೆ ಕಾಡಿನಲ್ಲಿ ವಿಹಾರಮಾಡುವವರಾಗಿ ಸರ್ಪಗಳನ್ನು ಭಕ್ಷಣೆ ಮಾಡುವವರಾಗಿ ಪಕ್ಷಿಗಳಿಂದ ಪೂಜಿತರಾಗಿ ತಾಯಿಯನ್ನು ಸಂತೋಷಪಡಿಸಿದರು. ಈರೀತಿಯಾಗಿ ಗರುಡದೇವರಿಂದ ವಿನತಾದೇವಿಯ ದಾಸ್ಯವು ಪರಿಹೃತವಾಯಿತು.



## ಸರ್ಪಗಳ ಮಾತೃಶಾಪ ಪರಿಹಾರೋಪಾಯ [1]

ಕದ್ರೂದೇವಿಯು ತನ್ನ ಮಕ್ಕಳಾದ ಸರ್ಪಗಳು ಉಚ್ಚೈಃಶ್ರವ ಎಂಬ ಕುದುರೆಯ ಬಾಲದಲ್ಲಿ ಜೋತಾಡಿ ಬಾಲವು ಕಪ್ಪಾಗಿ ಕಾಣಿಸುವಂತೆ ಮಾಡಬೇಕೆಂದು ಹೇಳಿದ ಮಾತನ್ನು ಕೇಳಿಲ್ಲವೆಂದು ಕೋಪಿಸಿಕೊಂಡು ಜನಮೇಜಯರಾಜನು ನಿಮ್ಮನ್ನು ಯಾಗದಲ್ಲಿ ಸುಟ್ಟುಹಾಕಲಿ ಎಂದು ಶಾಪವನ್ನು ಕೊಟ್ಟಳು. ಈ ಪ್ರಕಾರವಾದ ತಾಯಿಯ ಶಾಪವನ್ನು ಕೇಳಿ ಸರ್ಪರಾಜನಾದ ವಾಸುಕಿಯು ಐರಾವತ ಮೊದಲಾದ ಧರ್ಮಿಷ್ಠರಾದ ತನ್ನ ಸಹೋದರರಿಂದ ಕೂಡಿಕೊಂಡು ಈ ಶಾಪವು ಹೇಗೆ ಪರಿಹೃತವಾಗುವುದು ಎಂದು ಯೋಚಿಸಿದನು. 'ನಮಗೆ ತಾಯಿಯ ಶಾಪವು ಹೇಗೆ ನಡೆಯಲಾರದು ಅದನ್ನು ಯೋಚಿಸಬೇಕು. ಎಲ್ಲಾ ಶಾಪಕ್ಕೂ ಪರಿಹಾರವಿದೆ. ಆದರೆ ತಾಯಿಯ ಶಾಪಕ್ಕೆ ಮಾತ್ರ ಏನು ಮಾಡಿದರೂ ಪರಿಹಾರವಿಲ್ಲ. ತಾಯಿಯು ಶಪಿಸಿದಳು ಎಂದು ಮಾತನ್ನು ಕೇಳಿಯೇ ನನ್ನ ಎದೆಯು ನಡುಗಿತು. ನಮಗೆ ಸರ್ವನಾಶ ಏರ್ಪಡುವುದು. ಬ್ರಹ್ಮದೇವರೂ ಕೂಡ ಶಾಪಕೊಡುತ್ತಿದ್ದ ನಮ್ಮ ತಾಯಿಯನ್ನು ನಿಷೇಧಿಸಲಿಲ್ಲ. ನಮಗೆ ಹೇಗೆ ಕ್ಷೇಮವಾಗುವುದೆಂದು ಯೋಚಿಸುವ' ಎಂದನು.

---

1. ಮಭಾ. ಆಪ ಅ.15, 37-39, 53-56, 58

ಈ ಮಾತನ್ನು ಕೇಳಿ ಎಲ್ಲಾ ಸರ್ಪಗಳೂ ತಮ್ಮ ತಮ್ಮ ಯೋಚನೆಗಳನ್ನು ಹೇಳಿದರು. ಕೆಲವು ಸರ್ಪಗಳು ನಾವು ಬ್ರಾಹ್ಮಣಶ್ರೇಷ್ಠರ ರೂಪವನ್ನು ಧರಿಸಿ ಜನಮೇಜಯರಾಜನ ಬಳಿಗೆ ಹೋಗಿ ಸರ್ಪಯಾಗವನ್ನು ಮಾಡಬಾರದು ಎಂದು ಬೇಡಿಕೊಳ್ಳುವ ಎಂದವು.

ಇನ್ನು ಕೆಲವು ಸರ್ಪಗಳು ನಾವು ಜನಮೇಜಯರಾಜನಿಗೆ ಮಂತ್ರಿಗಳಾಗುವ. ನಮ್ಮ ಹತ್ತಿರ ರಾಜನು ಯೋಚನೆಯನ್ನು ಕೇಳುವನು. ಆಗ ನಾವು ಯಾಗವನ್ನು ಮಾಡದಂತೆ ಯೋಚನೆಯನ್ನು ಹೇಳುವ ಎಂದವು.

ಇನ್ನು ಕೆಲವು ಸರ್ಪಗಳು 'ಸರ್ಪಯಾಗ ವಿಧಾನವನ್ನು ತಿಳಿದ ಪುರೋಹಿತರನ್ನು ಯಾರಾದರೂ ಹೋಗಿ ಕಚ್ಚಲಿ. ಅವನು ಸತ್ತರೆ ಯಾಗ ನಡೆಯಲಾರದು ಎಂದವು.

ಇನ್ನು ಕೆಲವು ಸರ್ಪಗಳು ಈ ದುರ್ಬುದ್ಧಿಯನ್ನು ಬಿಡಿರಿ. ಬ್ರಹ್ಮ ಹತ್ಯೆಯನ್ನು ಮಾಡಬಾರದು ಎಂದವು.

ಇನ್ನು ಕೆಲವು ಸರ್ಪಗಳು ಯಾಗವು ನಡೆಯುತ್ತಾ ಇರುವಾಗ ಮಿಂಚು ಸಹಿತ ಮೇಘಗಳಾಗಿ ಮಳೆಸುರಿಸಿ ಯಜ್ಞದ ಬೆಂಕಿಯನ್ನು ಆರಿಸುವ ಅಥವಾ ಯಜ್ಞಸಾಮಗ್ರಿಯನ್ನು ಅಪಹರಿಸುವ.

ಯಜ್ಞದಲ್ಲಿ ನೂರಾರು ಸಾವಿರಾರು ಸರ್ಪಗಳು ಜನರನ್ನೆಲ್ಲಾ ಕಚ್ಚಲಿ.

ಅಲ್ಲಿರುವ ಭಕ್ಷ್ಯಭೋಜ್ಯಗಳನ್ನು ಮಲಮೂತ್ರದಿಂದ ಕೆಡಿಸಲಿ.

ಋತ್ವಿಕ್ಕಾಗಿ ದಕ್ಷಿಣೆ ಕೊಡು ಎಂದು ಕೇಳಿ ಯಜ್ಞಕ್ಕೆ ವಿಘ್ನವನ್ನು ಮಾಡುವ.

ಆ ಜನಮೇಜಯರಾಜನನ್ನೇ ಕಚ್ಚುವ. ಆಗ ಹೇಗೆ ಯಾಗವು ನಡೆಯುವುದು?

ರಾಜನ್! ಇದೆಲ್ಲಾ ನಮ್ಮ ಮನಸ್ಸಿಗೆ ತೋರಿದ್ದನ್ನು ಹೇಳಿದೆವು. ನಿನ್ನ ಅಭಿಪ್ರಾಯವು ಹೇಗಿದೆ? ಎಂದವು.

ಆಗ ವಾಸುಕಿಯು 'ನೀವು ಹೇಳುವುದೊಂದೂ ನನ್ನ ಮನಸ್ಸಿಗೆ ಬರಲಿಲ್ಲ. ನಮ್ಮ ತಂದೆಯನ್ನೇ ಸಂತೋಷಪಡಿಸುವುದು ಉಚಿತವಾಗಿ ತೋರುತ್ತದೆ. ಹೇಗಾದರೂ ನಿಮಗೆಲ್ಲಾ ಹಿತವಾಗುವಂತೆ ನಾನು ಮಾಡಬೇಕು ಎಂದನು.

ಈ ಪ್ರಕಾರವಾಗಿ ಎಲ್ಲಾ ಸರ್ಪಗಳು ಹೇಳಿದ ಮಾತನ್ನೂ ವಾಸುಕಿಯ ಮಾತನ್ನೂ ಕೇಳಿ ಏಲಾಪತ್ರ ಎಂಬ ಸರ್ಪನು 'ನನಗೊಂದು ಉಪಾಯವು ಮನಸ್ಸಿಗೆ ತೋರಿದೆ. ನಾನು ಹೇಳುವ ಮಾತನ್ನು ಕೇಳಬೇಕು. ಆ ಯಜ್ಞವು ನಡೆಯದೆ ಹೋಗುವುದೂ ಇಲ್ಲ, ಆ ಜನಮೇಜಯರಾಜನು ಬರದೆ ಹೋಗುವುದೂ ಇಲ್ಲ,

ದೈವದಿಂದ ಭಯವನ್ನು ಹೊಂದಿದವನ್ನು ಅದರ ಪರಿಹಾರಕ್ಕೂ ದೈವವನ್ನೇ ಆಶ್ರಯಿಸಬೇಕು. ನಾವೂ ಹಾಗೆಯೇ ಮಾಡಬೇಕು. ನಮ್ಮ ತಾಯಿಯು ಶಾಪವನ್ನು ಕೊಡುವಾಗ ನಾನು ತಾಯಿಯ ತೊಡೆಯಲ್ಲೇ ಇದ್ದೆನು. ಆಗ ದೇವತೆಗಳು ಹೆಂಗಸರ ಅತ್ಯಂತ ಕ್ರೂರರು ಎಂದು ಹೇಳುವ ಮಾತನ್ನು ಕೇಳಿದೆನು. ದೇವತೆಗಳು ಕೃಪೆಯುಳ್ಳವರಾಗಿ ಬ್ರಹ್ಮದೇವರ ಸಮೀಪಕ್ಕೆ ಹೋಗಿ 'ಅತ್ಯಂತ ಕ್ರೂರಳಾದ ಕದ್ರೂವನ್ನು ಹೊರತು ಯಾವ ಹೆಂಗಸಾದವಳು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗೆ ಅಂತಹ ಶಾಪವನ್ನು ಕೊಡುವಳು. ತಮ್ಮ ಮುಂಭಾಗದಲ್ಲಿಯೇ ಅವಳು ಶಾಪವನ್ನು ಕೊಟ್ಟಳಲ್ಲ. ಆಗ ತಾವೂ ಕೂಡ ಹಾಗೆಯೇ ಆಗಲಿ ಎಂದು ಹೇಳೋಣವಾಯಿತು. ಬೇಡವೆಂದು ತಡೆಯಲಿಲ್ಲ. ಏನು ಕಾರಣವೆಂದು ನಮಗೆ ತಿಳಿಯಲಿಲ್ಲ ಎಂದರು.

ಆಗ ಬ್ರಹ್ಮದೇವರು ಹಾವುಗಳು ಬಹಳ ಇವೆ. ತುಂಬಾ ಕ್ರೂರವಾಗಿವೆ. ಜನರಿಗೆ ಅವುಗಳಿಂದ ತುಂಬಾ ಅಪಾಯವಾಗಲಿದೆ. ಜನರ ಹಿತದೃಷ್ಟಿಯಿಂದ ನಾನು ಕದ್ರೂವನ್ನು ತಡೆಯಲಿಲ್ಲ. ಯಾವ ಸರ್ಪಗಳು ಭಯಂಕರ ವಿಷವುಳ್ಳವಾಗಿ ಪಾಪಿಗಳಾಗಿವೆಯೋ ಅವುಗಳನ್ನೆಲ್ಲಾ ಯಜ್ಞದಲ್ಲಿ ಸಾಯುವುವು. ಧರ್ಮಯುಕ್ತಳಾದ ಹಾವುಗಳು ಸಾಯುವುದಿಲ್ಲ. ಅವುಗಳಿಗೆ ಮಹಾಭಯದಿಂದ ಹೇಗೆ ಬಿಡುಗಡೆಯಾಗುತ್ತದೆ? ಎಂದು ಹೇಳುತ್ತೇನೆ. ಇನ್ನು ಮುಂದೆ ಜರತ್ಕಾರು ಎಂಬ ಋಷಿಯು ಬರುವನು. ಆ ಮುನಿಗೆ ಆಸ್ತೀಕ ಎಂಬ ಮಗು ಹುಟ್ಟುವನು. ಆ ಆಸ್ತೀಕನು ಯಜ್ಞವನ್ನು ನಿಲ್ಲಿಸಿ ಸರ್ಪಗಳನ್ನು ಯಾಗದಿಂದ ಬಿಡಿಸುವನು ಎಂದರು.

ಆಗ ದೇವರು 'ಆ ಜರತ್ಕಾರು ಋಷಿಗಳು ಯಾವ ಹೆಂಗಸಲ್ಲಿ ಆಸ್ತೀಕರೆಂಬ ಮಗನನ್ನು ಪಡೆಯುವರು' ಎಂದು ಕೇಳಿದರು.

ಬ್ರಹ್ಮದೇವರು 'ವಾಸುಕಿಯು ತನ್ನ ತಂಗಿಯನ್ನು ಆ ಜರಾತ್ಕಾರು ಋಷಿಗೆ ಮದುವೆ ಮಾಡಿಕೊಡುತ್ತಾನೆ. ಆ ತಂಗಿಯ ಹೆಸರೂ ಜರತ್ಕಾರು ಎಂದೇ. ಅವಳಲ್ಲಿ ಆಸ್ತೀಕನು ಹುಟ್ಟುವನು' ಎಂದರು. ಅದಕ್ಕೆ ದೇವತೆಗಳು ಹಾಗೆ ಆಗಲಿ ಎಂದು ಹೇಳಿದರು. ಆದುದರಿಂದ ವಾಸುಕಿಯೇ! ನೀನು ಸರ್ಪಗಳ ಕ್ಷೇಮಕ್ಕಾಗಿ ನಿನ್ನ ತಂಗಿಯನ್ನು ಆ ಋಷಿಗಳಿಗೆ ಮದುವೆ ಮಾಡಿಕೊಡಬೇಕು ಎಂದು ಹೇಳಿದನು.

ಈ ರೀತಿಯಾಗಿ ಏಲಾಪುತ್ರನ ಮಾತನ್ನು ಕೇಳಿ ಎಲ್ಲಾ ಸರ್ಪಗಳೂ ಸರಿಸರಿ ಎಂದವು. ವಾಸುಕಿಯೂ ಸಂತೋಷಪಟ್ಟನು. ತರುವಾಯ ಸ್ವಲ್ಪ ಸಮಯದಲ್ಲಿಯೇ ದೇವಾಸುರರು ಸೇರಿ ಅಮೃತ ಮಥನ ಮಾಡಿದರು. ಆಗ ವಾಸುಕಿಯನ್ನು ಹಗ್ಗವನ್ನಾಗಿ ಮಾಡಿಕೊಂಡರು. ಸಮುದ್ರಮಥನವು ಮುಗಿದ ಮೇಲೆ ದೇವತೆಗಳು ವಾಸುಕಿಯನ್ನು

ಕರಕೊಂಡು ಹೋಗಿ ಬ್ರಹ್ಮದೇವರ ಹತ್ತಿರ 'ಪೂಜ್ಯರೇ! ವಾಸುಕಿಯ ಶಾಪಭಯದಿಂದ ತುಂಬಾ ದುಃಖಿಪಡುತ್ತಾನೆ. ತಾಯಿಯ ಶಾಪದಿಂದ ತನ್ನವರಿಗಾದ ದುಃಖವನ್ನು ಸಹಿಸದೆ ಇದ್ದಾನೆ. ಇವನು ನಮಗೆ ಯಾವಾಗಲೂ ಪ್ರಿಯವನ್ನು ಮಾಡುವವನು. ಇವನ ದುಃಖವನ್ನು ಪರಿಹರಿಸಬೇಕು ಎಂದರು.

ಅದಕ್ಕೆ ಬ್ರಹ್ಮದೇವರು 'ಇದಕ್ಕೆ ಮೊದಲೇ ನಾನು ಪ್ರತೀಕಾರವನ್ನು ಮನಸ್ಸಿನಿಂದ ಯೋಚಿಸಿದ್ದೇನೆ. ಪೂರ್ವದಲ್ಲಿ ಇವನೊಡನೆ ಏಲಾಪತ್ರನು ಹೇಳಿದ್ದಾನಲ್ಲಾ! ಆ ಪ್ರಕಾರವಾಗಿ ಮಾಡಲಿ. ಪಾಪಿಗಳಾದ ಸರ್ಪಗಳು ಮಾತ್ರ ಸಾಯುವುವು. ಧರ್ಮಯುಕ್ತಳಾದ ಹಾವುಗಳ ಸಾಯಲಾರವು. ಆ ಜರತ್ಕಾರು ಋಷಿಯ ತಪಸ್ಸಿನಲ್ಲಿ ಇದ್ದಾನೆ. ಅವನಿಗೆ ವಾಸುಕಿಯು ತನ್ನ ತಂಗಿಯನ್ನು ಮದುವೆಮಾಡಿಕೊಡಲಿ. ಏಲಾಪುತ್ರನು ಹೇಳಿದ ರೀತಿಯಾಗಿಯೇ ಸರ್ಪಗಳಿಗೆ ಹಿತವಾಗುತ್ತದೆ' ಎಂದರು.

ಈರೀತಿಯಾಗಿ ಬ್ರಹ್ಮದೇವರ ಮಾತನ್ನು ಕೇಳಿ ವಾಸುಕಿಯು ಸರ್ಪಗಳ ಹತ್ತಿರ ಜರತ್ಕಾರು ಋಷಿಗಳು ಯಾವಾಗ ಮದುವೆಯಾಗಲು ಬಯಸುವರೋ ಅದನ್ನು ನೀವು ನೋಡುತ್ತಾ ಇದ್ದು ನನ್ನ ಹತ್ತಿರ ತಿಳಿಸಬೇಕು ಎಂದನು. ಅದೇ ರೀತಿಯಾಗಿ ಸರ್ಪಗಳು ನಿರೀಕ್ಷಿಸುತ್ತಿದ್ದವು.

ತರುವಾಯ ವಾಸುಕಿಯು ತನ್ನ ತಂಗಿಯನ್ನು ಜರತ್ಕಾರು ಋಷಿಗಳಿಗೆ ಮದುವೆ ಮಾಡಿಕೊಟ್ಟು ಆಸ್ತೀಕರು ಹುಟ್ಟಿದರು. ಅವರು ಸರ್ಪಯಾಗವನ್ನು ನಿಲ್ಲಿಸಿ ಸರ್ಪಗಳಿಗೆ ಹಿತವನ್ನು ಮಾಡಿದರು.



## ನರಿಯ ಕಥೆ [1]

ಒಂದು ಕಾಡಿನಲ್ಲಿ ಒಂದು ಬುದ್ಧಿಯುಳ್ಳ ನರಿಯು ಹುಲಿ ಇಲಿ ತೋಳ ಮುಂಗುಸಿಗಳಿಂದ ಕೂಡಿಕೊಂಡು ವಾಸಮಾಡುತ್ತಿತ್ತು. ಅದೇ ಕಾಡಿನಲ್ಲಿ ಒಂದು ಬಲಿಷ್ಠವಾದ ಜಿಂಕೆಯಿತ್ತು. ಅದನ್ನು ನರಿ ಹುಲಿ ಮೊದಲಾದವುಗಳು ಹಿಡಿಯ ಬೇಕೆಂದು ಪ್ರಯತ್ನ ಮಾಡಿದವು. ಸಾಧ್ಯವಾಗದೆ ಎಲ್ಲವೂ ಸೇರಿ ಯೋಚನೆ ಮಾಡಿದವು.

ನರಿಯು ಹುಲಿಯೊಡನೆ ನೀನು ಅನೇಕಬಾರಿ ಈ ಜಿಂಕೆಯನ್ನು

1. ಮ.ಭಾ.

ಹಿಡಿಯಬೇಕೆಂದು ಪ್ರಯತ್ನ ಮಾಡಿದಿ. ಆದರೆ ಒಳ್ಳೆ ಯೌವನಯುಕ್ತವಾಗಿದೆ. ವೇಗವುಳ್ಳದಾಗಿದೆ. ಒಳ್ಳೆ ಬುದ್ಧಿಶಾಲಿಯಾಗಿದೆ. ಆದುದರಿಂದ ಹಿಡಿಯಲು ಸಿಗುವುದಿಲ್ಲ. ಅದಕ್ಕೆ ಒಂದು ಉಪಾಯವನ್ನು ಮಾಡುವ. ಅದು ಮಲಗಿರುವಾಗ ಈ ಇಲಿಯು ಹೋಗಿ ಅದರ ಕಾಲುಗಳನ್ನು ಚೆನ್ನಾಗಿ ಕಚ್ಚಿಹಾಕಲಿ. ಆಮೇಲೆ ಓಡಲಿಕ್ಕೆ ಆಗದಿರುವ ಅದನ್ನು ನೀನು ಕೊಂದು ಹಾಕು. ನಾವೆಲ್ಲರೂ ಸಂತೋಷದಿಂದ ತಿನ್ನುವ ಎಂದಿತು.

ನರಿಯ ಮಾತನ್ನು ಕೇಳಿ ಹಾಗೆಯೇ ಮಾಡಿದವು. ಇಲಿಯು ಹೋಗಿ ಜಿಂಕೆಯ ಕಾಲುಗಳನ್ನು ಕಚ್ಚಿತು. ಇದರಿಂದ ಓಡಲಿಕ್ಕೆ ಆಗದ ಆ ಜಿಂಕೆಯನ್ನು ಹುಲಿಯು ಕೊಂದಿತು. ಭೂಮಿಯಲ್ಲಿ ಹೊರಳಾಡುತ್ತಿದ್ದ ಆ ಜಿಂಕೆಯನ್ನು ನೋಡಿ ನರಿಯು ನೀವೆಲ್ಲಾ ಸ್ನಾನಮಾಡಿಕೊಂಡು ಬನ್ನಿರಿ. ನಾನು ಇದನ್ನು ರಕ್ಷಿಸುತ್ತಾ ಇರುತ್ತೇನೆ ಎಂದಿತು. ನರಿಯ ಮಾತನ್ನು ಕೇಳಿ ಎಲ್ಲವೂ ನದಿಗೆ ಸ್ನಾನ ಮಾಡಲಿಕ್ಕೆ ಹೋದವು. ನರಿಯು ಅಲ್ಲಿಯೇ ಯೋಚನೆಮಾಡುತ್ತಾ ಕೂತುಕೊಂಡಿತು. ಮೊದಲು ಮಹಾಬಲಿಷ್ಠವಾದ ಹುಲಿಯು ಸ್ನಾನಮಾಡಿ ಬಂದಿತು. ಯೋಚನೆ ಮಾಡುತ್ತಾ ಕುಳಿತಿರುವ ನರಿಯನ್ನು ಕಂಡು 'ನೀನು ನಮ್ಮ ಮಧ್ಯೆದಲ್ಲಿ ಒಳ್ಳೇ ಬುದ್ಧಿವಂತನಾಗಿರುವೆ. ಏನು ಯೋಚನೆ ಮಾಡುತ್ತಿರುವೆ? ನಾವೆಲ್ಲರೂ ಇದರ ಮಾಂಸವನ್ನು ತಿಂದು ಸುಖದಿಂದ ಇರೋಣ' ಎಂದಿತು.

ಅದಕ್ಕೆ ನರಿಯು 'ಮಹಾಬಲಿಷ್ಠನೇ! ಇಲಿಯು ಹೇಳಿದ ಮಾತನ್ನು ಕೇಳು. ಮೃಗರಾಜನಾದ ಹುಲಿಯ ಬಲಕ್ಕೆ ಧಿಕ್ಕಾರವಿರಲಿ. ನನ್ನ ಸಹಾಯದಿಂದ ಜಿಂಕೆಯನ್ನು ಕೊಂದು ಈಗ ತೃಪ್ತಿಯನ್ನು ಹೊಂದುವನು' ಎಂದು ಗರ್ಜನೆ ಮಾಡಿತು. ಅದರ ಗರ್ಜನೆಯನ್ನು ಕೇಳಿ ನನಗೆ ಇದನ್ನು ತಿನ್ನಲಿಕ್ಕೆ ಆಸೆಯೇ ಇಲ್ಲ' ಎಂದಿತು.

ಹುಲಿಯು 'ಇಲಿಯು ಹೀಗೆ ಹೇಳಿತೇ? ಒಳ್ಳೆಯ ಸಮಯದಲ್ಲಿ ಎಚ್ಚರಿಸಿದೆ. ನಾನು ನನ್ನ ಬಾಹುಬಲದಿಂದ ಅನೇಕ ಮೃಗಗಳನ್ನು ಕೊಲ್ಲುವೆನು. ಅವುಗಳ ಮಾಂಸವನ್ನು ತಿನ್ನುವೆನು ಎಂದು ಹೇಳಿ ಕಾಡಿಗೆ ಹೊರಟುಹೋಯಿತು.

ಅದೇ ಸಮಯದಲ್ಲಿ ಅಲ್ಲಿಗೆ ಇಲಿಯು ಬಂದಿತು. ನರಿಯು 'ಇಲಿಯೇ! ನಿನಗೆ ಮಂಗಳವಾಗಬೇಕು. ಮುಂಗುಸಿಯು ಹೇಳಿದ ಮಾತನ್ನು ಕೇಳು. ನಾನು ಜಿಂಕೆಯ ಮಾಂಸವನ್ನು ತಿನ್ನಲಾರೆನು. ಇಲಿಯು ಕಚ್ಚಿದ ಕಾರಣ ಅದು ನನಗೆ ವಿಷವು. ನಾನು ಅದನ್ನು ತಿನ್ನಲಾರೆನು. ನಾನು ಇಲಿಯನ್ನೇ ತಿನ್ನುವೆನು. ಅದಕ್ಕೆ ನೀನು ಅನುಮತಿಯನ್ನು ಕೊಡಬೇಕು ಎಂದು ನನ್ನೊಡನೆ ಹೇಳಿತು ಎಂದು ನುಡಿಯಿತು. ಅದನ್ನು ಕೇಳಿ ಇಲಿಯು ಭಯದಿಂದ ತನ್ನ ಬಿಲವನ್ನು ಪ್ರವೇಶಿಸಿತು.

ತರುವಾಯ ತೋಳವು ಸ್ನಾನಮಾಡಿ ಬಂದಿತು. ಹುಲಿಯು ನಿನ್ನ ಮೇಲೆ ತುಂಬಾ ಕೋಪಿಸಿಕೊಂಡಿರುವನು. ನಿನಗೆ ಶ್ರೇಯಸ್ಸಾಗಲಾರದು. ಹುಲಿಯು ತನ್ನ ಪತ್ನೀಸಹಿತವಾಗಿ ಇಲ್ಲಿಗೆ ಬರುವುದು. ನೀನು ಏನು ಬೇಕಾದರೂ ಮಾಡಿಕೊ ಎಂದಿತು. ಈರೀತಿಯಾಗಿ ನರಿಯು ಹೇಳಲು ತೋಳವು ತನ್ನ ದೇಹವನ್ನು ಸಂಕೋಚಮಾಡಿಕೊಂಡು ಓಡಿಹೋಯಿತು.

ಅದೇ ಕಾಲದಲ್ಲಿ ಮುಂಗುಸಿಯು ಬಂದಿತು. ಅದನ್ನು ನೋಡಿ ನರಿಯು ತನ್ನ ಬಾಹುಬಲದಿಂದ ಎಲ್ಲರೊಡನೆಯೂ ಯುದ್ಧಮಾಡಿ ಓಡಿಸಿದೆನು. ನೀನೂ ಕೂಡ ನನ್ನೊಡನೆ ಯುದ್ಧವನ್ನು ಮಾಡಿ ಆಮೇಲೆ ಇಚ್ಛಾನುಸಾರವಾಗಿ ಮಾಂಸವನ್ನು ಭಕ್ಷಿಸು ಎಂದಿತು.

ಅದಕ್ಕೆ ಮುಂಗುಸಿಯು ಹುಲಿಯೂ ತೋಳವೂ ಬುದ್ಧಿವಂತನಾದ ಇಲಿಯೂ ನಿನ್ನಿಂದ ಸೋತುಹೋದಮೇಲೆ ನೀನು ಮಹಾಪರಾಕ್ರಮಶಾಲಿಯೇ ಸರಿ. ನನಗೂ ನಿನ್ನೊಡನೆ ಯುದ್ಧಮಾಡಲಿಕ್ಕೆ ಆಗಲಾರದು ಎಂದು ಹೇಳಿ ಹೊರಟುಹೋಯಿತು.

ಈ ಪ್ರಕಾರವಾಗಿ ಎಲ್ಲವೂ ಹೊರಟು ಹೋಗಲು ನರಿಯು ಒಂದೇ ಸಂತೋಷದಿಂದ ಆ ಮಾಂಸವನ್ನು ತಿಂದಿತು. ಈರೀತಿಯಾಗಿ ಭಯಪಡುವವರನ್ನು ಭಯಪಡಿಸಬೇಕು. ಪರಾಕ್ರಮಶಾಲಿಗಳಿಗೆ ಕೈ ಮುಗಿಯಬೇಕು. ಲೋಭಿಗಳಿಗೆ ಹಣಕೊಡಬೇಕು. ಸಮಾನರನ್ನೂ ತನಗಿಂತ ಕಡಿಮೆಯಾದವರನ್ನೂ ಪರಾಕ್ರಮ ದಿಂದ ವಶಮಾಡಿಕೊಳ್ಳಬೇಕು. ಹೀಗೆ ಮಾಡುವವನು ಸುಖದಿಂದ ಇರುವನು. ಎಂಬ ಕಥೆಯನ್ನು ಕಣಿಕ ಎಂಬ ಬ್ರಾಹ್ಮಣನು ದುರ್ಯೋಧನನಿಗೆ ಹೇಳಿದನು.



## ಗುಬ್ಬಿಯ ಕಥೆ [1]

ಬ್ರಹ್ಮದತ್ತರಾಜನ ಮನೆಯಲ್ಲಿ ಒಂದು ಗುಬ್ಬಿ ಪಕ್ಷಿಯಿತ್ತು. ಅದು ರಾಜನಿಗೆ ಸಖಿಯಾಗಿತ್ತು. ಅದು ರಾಜನ ಮನೆಯಲ್ಲಿ ತನ್ನ ಗೂಡನ್ನು ಕಟ್ಟಿತ್ತು. ಅದು ಯಾವಾಗಲೂ ಹಗಲಲ್ಲಿ ಸಮುದ್ರತೀರದಲ್ಲಿ ಪರ್ವತಾದಿಗಳಲ್ಲಿ ಸಂಚರಿಸಿ ರಾತ್ರಿಯಲ್ಲಿ ರಾಜನ ಮನೆಗೆ ಬರುತ್ತಿತ್ತು. ರಾಜನೊಡನೆ ತಾನು ನೋಡಿದ ಅನೇಕ ಆಶ್ಚರ್ಯವಿಷಯಗಳನ್ನು ಹೇಳುತ್ತಿತ್ತು.

1. ಮಭಾ. ಶಾಂ.ಪ. ಅನುಪ ಅ-139

ಹೀಗಿರಲು ಸ್ವಲ್ಪ ಸಮಯವಾದ ಮೇಲೆ ಬ್ರಹ್ಮದತ್ತರಾಜನಿಗೆ ಸರ್ವಸೇನ ಎಂಬ ಮಗನು ಹುಟ್ಟಿದನು. ಆ ಗುಬ್ಬಿಪಕ್ಷಿಯೂ ಗರ್ಭಿಣಿಯಾಗಿ ಗೂಡಿನಲ್ಲಿ ಮೊಟ್ಟೆಯಿಟ್ಟಿತು. ಕ್ರಮದಿಂದ ಆ ಮೊಟ್ಟೆಗಳು ಒಡೆದು ಶಿಶುವು ಹೊರಗೆ ಬಂದಿತು. ಆ ಶಿಶುವಿಗೆ ಇನ್ನೂ ಕಣ್ಣು ಬಂದಿಲ್ಲ. ಶ್ರಮದಿಂದ ಕಣ್ಣೂ ಬಂದಿತು. ತರುವಾಯ ಆ ಗುಬ್ಬಿಪಕ್ಷಿಯು ತನ್ನ ಶಿಶುವಿನಲ್ಲಿಯೂ ರಾಜನ ಮಗುವಿನಲ್ಲಿ ಸಮಾನವಾದ ಸ್ನೇಹವುಳ್ಳದಾಗಿತ್ತು. ನಿತ್ಯವೂ ಹಗಲು ಹಾರಿಕೊಂಡು ಹೋಗಿ ಅಮೃತದಂತೆ ರುಚಿಕರವಾದ ಎರಡು ಹಣ್ಣುಗಳನ್ನು ತರುತ್ತಿತ್ತು. ಒಂದು ಹಣ್ಣನ್ನು ರಾಜಪುತ್ರನಿಗೆ ಕೊಡುತ್ತಿತ್ತು. ಒಂದು ಹಣ್ಣನ್ನು ತನ್ನ ಮಗುವಿಗೆ ಕೊಡುತ್ತಿತ್ತು. ಹೀಗೆಯೇ ಕೆಲವು ದಿವಸಗಳು ಕಳೆದವು.

ಒಂದುದಿನ ಗುಬ್ಬಿಯು ಹಾರಿಹೋಗಿರುವ ಸಮಯದಲ್ಲಿ ರಾಜನ ಮಗುವನ್ನು ಆಡಿಸುವ ದಾದಿಯು ಗುಬ್ಬಿಯ ಶಿಶುವಿನೊಡನೆ ರಾಜಪುತ್ರನನ್ನು ಆಡಿಸುತ್ತಾ ಇದ್ದಳು. ರಾಜನ ಮಗುವು ಆಡುತ್ತಾ ಗುಬ್ಬಿಯ ಗೂಡಿನಿಂದ ಗುಬ್ಬಿನ ಮರಿಯನ್ನು ಕುತ್ತಿಗೆಯಲ್ಲಿ ಹಿಡಿದು ಸೆಳೆಯಿತು. ಕೂಸಿನ ದೃಢಮುಷ್ಟಿಯನ್ನು ಬಿಡಿಸಲಿಕ್ಕೆ ಆಗಲಿಲ್ಲ. ಅಷ್ಟರಲ್ಲಿಯೇ ಕುತ್ತಿಗೆಯಲ್ಲಿಯೇ ಗಟ್ಟಿಯಾಗಿ ಹಿಡಿಯಲ್ಪಟ್ಟ ಆ ಗುಬ್ಬಿಯ ಮರಿಯು ಪ್ರಾಣವನ್ನು ಬಿಟ್ಟಿತು. ರಾಜನು ಇದನ್ನು ನೋಡಿ ತುಂಬಾ ದುಃಖಪಟ್ಟನು. ದಾದಿಯನ್ನು ತುಂಬಾ ನಿಂದಿಸಿದನು. ಆ ಮರಿಯನ್ನೇ ನೋಡುತ್ತಾ ದುಃಖಪಡುತ್ತಾ ನಿಂತುಕೊಂಡನು. ಆ ಸಮಯಕ್ಕೆ ಸರಿಯಾಗಿ ಗುಬ್ಬಿಯು ಅಲ್ಲಿಗೆ ಬಂದು ಸೇರಿತು. ಅಲ್ಲಿ ಸತ್ತು ಬಿದ್ದಿರುವ ಮರಿಯನ್ನು ನೋಡಿ ದುಃಖದಿಂದ ಮೂರ್ಛೆಯನ್ನು ಹೊಂದಿತು.

ಆಮೇಲೆ ಜ್ಞಾನವನ್ನು ಹೊಂದಿ ವಿಲಾಪವನ್ನು ಮಾಡಿತು. 'ಮಗು! ನಾನು ಬರುವಾಗ ಚೀಚೀ ಎಂದು ಕೂಗುತ್ತಾ ಬಾಯಿ ತೆರೆದುಕೊಂಡು ನನ್ನ ಹತ್ತಿರ ಬರುತ್ತಿದ್ದಿಯಲ್ಲಾ! ನಾನೂ ನಿನ್ನನ್ನು ರೆಕ್ಕೆಗಳಿಂದ ಆಲಂಗಿಸಿಕೊಂಡು ಕೂಗುತ್ತಿದ್ದೆನಲ್ಲಾ! ನಾನು ಯಾವಾಗ ಬಾಯಿತೆರೆದುಕೊಂಡು ಬರುವ ಮಗುವನ್ನು ನೋಡುವೆನೆಂದು ಯೋಚಿಸಿಕೊಂಡು ಬಂದೆನಲ್ಲಾ! ನನ್ನ ಮನಸ್ಸಿನ ಆಸೆಯೆಲ್ಲಾ ಮಣ್ಣುಪಾಲಾಯಿತಲ್ಲಾ!' ಹೀಗೆಲ್ಲಾ ವಿಲಾಪಿಸಿ 'ರಾಜನ್! ನೀನು ಧರ್ಮವನ್ನು ತಿಳಿದವನಲ್ಲಾ! ನನ್ನ ಕೂಸನ್ನು ಏಕೆ ನಿನ್ನ ದಾದಿಯ ಕೈಯಿಂದ ಸಂಹಾರಮಾಡಿಸಿದಿ? ನಿನ್ನ ಮಗನ ಕೈಯಿಂದ ಸೆಳೆಯಿಸಿ ಯಾಕೆ ಕೊಲ್ಲಿಸಿದಿ? ಶರಣಾಗತರನ್ನೂ ಹಸಿವೆಯುಳ್ಳವನನ್ನೂ ಶತ್ರುಗಳಿಂದ ಪೀಡಿತನಾದವನನ್ನೂ ಬಹುಕಾಲ ತಮ್ಮ ಮನೆಯಲ್ಲಿ ವಾಸಮಾಡಿದವನನ್ನೂ ರಾಜನು ರಕ್ಷಿಸಬೇಕು. ಇಲ್ಲದಿದ್ದರೆ ಅವನಿಗೆ ಕುಂಭೀಪಾಕನರಕವಾಗುವುದೆಂಬುದನ್ನು ನೀನು

ಕೇಳಲಿಲ್ಲವೇ?' ಈ ಪ್ರಕಾರವಾಗಿ ಹೇಳಿ ಆ ಗುಬ್ಬಿಯು ದುಃಖವನ್ನು ತಡೆಯಲಾಗದೆ ಆ ರಾಜಪುತ್ರನ ಎರಡು ಕಣ್ಣುಗಳನ್ನೂ ತನ್ನ ಕಾಲುಗಳಿಂದ ಕುಕ್ಕಿ ಕುರುಡನನ್ನಾಗಿ ಮಾಡಿತು. ಮೇಲೆ ಹಾರಿ ಹೋಯಿತು.

ಆಗ ಬ್ರಹ್ಮದತ್ತರಾಜನು ಗುಬ್ಬಿಯೊಡನೆ 'ಕಲ್ಯಾಣಿ! ದುಃಖರಹಿತಳಾಗು. ನೀನು ಒಳ್ಳೇ ಕೆಲಸ ಮಾಡಿದಿ. ನಮ್ಮ ಸ್ನೇಹವು ಪೂರ್ವದಂತೆಯೇ ಇರಲಿ. ನನ್ನ ಮನೆಗೇ ತಿರುಗಿ ಬಂದುಬಿಡು. ನನ್ನ ಮಗನ ಕಣ್ಣನ್ನು ತೆಗೆದಿ ಎಂದು ನನಗೆ ಕೋಪವಿಲ್ಲ. ನೀನು ಮಾಡಬೇಕಾದ ಕಾರ್ಯವನ್ನು ಮಾಡಿದಿ' ಎಂದನು.

ಆಗ ಗುಬ್ಬಿಯು 'ರಾಜ! ನನ್ನ ಮಗುವನ್ನು ಕೊಂದ ಪ್ರಯುಕ್ತ ನನಗೆ ದುಃಖವು ಆದಂತೆಯೇ ನಿನ್ನ ಮಗನ ಕಣ್ಣನ್ನು ತೆಗೆದ ಪ್ರಯುಕ್ತ ನಿನಗೆ ದುಃಖವಾಗಿದೆಯೆಂದೂ ತಿಳಿದೇ ಇದ್ದೇನೆ. ಈ ಪ್ರಕಾರವಾಗಿ ನಿನ್ನ ಮಗನ ಕಣ್ಣು ತೆಗೆದು ಇನ್ನು ಮೇಲೆ ನಿನ್ನ ಮನೆಯಲ್ಲಿ ನಾನು ವಾಸಮಾಡಲಾರೆನು. ನಾನು ನಿನ್ನ ಮಗನ ಕಣ್ಣನ್ನು ತೆಗೆದಕಾರಣ ನಿನಗೆ ಬಹಳ ಅಪರಾಧ ಮಾಡಿರುವೆನು. ಆದುದರಿಂದ ನೀನು ನನಗೆ ಬಹಳ ಶಿಕ್ಷೆಯನ್ನು ಮಾಡಿಯೇ ಮಾಡುವಿ. ನಿನ್ನ ಮಾತಿನಲ್ಲಿ ನನಗೆ ನಂಬಿಕೆ ಉಂಟಾಗಲಾರದು' ಎಂದು ಹೇಳಿ ಆಕಾಶದಲ್ಲಿ ಹಾರಿಹೋಯಿತು.



## ಬೇಡನೂ ಪಾರಿವಾಳವೂ [1]

### (ಭಾರತ ಶಾಂತಿಪರ್ವ)

ಒಂದು ಸಮಯದಲ್ಲಿ ಯಮದೇವರಂತೆ ಭಯಂಕರವಾದ ಎಲ್ಲಾ ಪ್ರಾಣಿಗಳನ್ನೂ ಸಂಹರಿಸುತ್ತಾ ಇದ್ದ ಒಬ್ಬ ಬೇಡನು ಇದ್ದನು. ಅವನು ಪರಮಕ್ರೂರನಾಗಿದ್ದನು. ಅವನ ಕ್ರೂರಕ್ರಮದಿಂದ ಬಂಧುಗಳೆಲ್ಲರೂ ಅವನನ್ನು ಬಿಟ್ಟಿದ್ದರು. ಈರೀತಿಯಿಂದ ಅಧರ್ಮದಲ್ಲಿ ಆಸಕ್ತನಾಗಿ ಪತ್ನೀಸಹಿತನಾಗಿ ಬಹುಕಾಲವನ್ನು ಕಳೆಯತಕ್ಕವನಾದನು. ಒಂದುದಿನದ ಅವನು ಕಾಡಿನಲ್ಲಿರುವಾಗ ಭಯಂಕರವಾದ ಗಾಳಿಯು ಬಂದಿತು. ತರುವಾಯ ಆಕಾಶದಲ್ಲಿ ಮೇಘಗಳು ಕಾಣಿಸಿಕೊಂಡವು. ಮಿಂಚು ಗುಡುಗು ಬಂದಿತು. ಹಾಗೆಯೇ ಭಯಂಕರವಾದ ಮಳೆಯು ಸುರಿಯಿತು. ನೀರಿನಿಂದ ಎತ್ತರ ತಗ್ಗು ತಿಳಿಯಲಿಲ್ಲ. ಅಷ್ಟು ಪ್ರವಾಹವು ಹರಿಯಿತು. ಎಲ್ಲಾ ಪ್ರಾಣಿಗಳೂ ಮಳೆಯಿಂದ

1. ಮಭಾ. ಶಾಂ.ಪ. ಅ.144-149

ಭಯವನ್ನು ಹೊಂದಿದವು. ಬೇಡನು ಛಳಿಯಿಂದ ನಡುಗುತ್ತಾ ಹೋಗುತ್ತಲೇ ಇದ್ದನು. ಎಲ್ಲಿಯೂ ನಿಲ್ಲಲೇ ಇಲ್ಲ. ಒಂದು ಸ್ಥಳದಲ್ಲಿ ಛಳಿಯಿಂದ ಬಿದ್ದಿರುವ ಒಂದು ಹೆಣ್ಣು ಪಾರಿವಾಳ ಪಕ್ಷಿಯನ್ನು ನೋಡಿದನು. ಪಾಪಿಯಾದ ಬೇಡನು ತಾನು ದುಃಖದಿಂದ ಇದ್ದರೂ ಇನ್ನೊಬ್ಬರಿಗೆ ದುಃಖವನ್ನೇ ಉಂಟುಮಾಡಿದನು. ತರುವಾಯ ಸಮೀಪದಲ್ಲಿ ದೊಡ್ಡ ಒಂದು ಮರವನ್ನು ನೋಡಿದನು. ಅಷ್ಟರಲ್ಲಿ ಮಳೆಯು ನಿಂತಿತು. ಆಕಾಶದಲ್ಲಿ ಮೇಘಗಳು ಕಾಣಿಸದೆ ಹೋದವು. ದಿಕ್ಕುಗಳನ್ನು ನೋಡಿದನು. ಸಮಯವನ್ನು ನೋಡಿದನು. ಗ್ರಾಮವು ದೂರದಲ್ಲಿ ಇದೆ. ಮರದ ಬುಡದಲ್ಲಿಯೇ ವಾಸಮಾಡುವೆನು ಎಂದುಕೊಂಡನು. ಅಲ್ಲಿಯೇ ನೆಲದ ಮೇಲೆ ಎಲೆಗಳನ್ನು ಹಾಸಿ ಒಂದು ಕಲ್ಲಿನ ಮೇಲೆ ತಲೆಯನ್ನು ಇಟ್ಟುಕೊಂಡು ದುಃಖದಿಂದ ಮಲಗಿದನು.

ಆ ಬೇಡನು ಯಾವ ಮರದ ಬುಡದಲ್ಲಿ ಮಲಗಿದನೋ ಆ ಮರದ ಮೇಲೆ ಒಂದು ಗಂಡುಪಾರಿವಾಳ ಪಕ್ಷಿಯು ವಾಸಮಾಡುತ್ತಿತ್ತು. ಬೆಳಗ್ಗೆ ಸಂಚರಿಸಲಿಕ್ಕೆ ಹೋದ ಹೆಂಡತಿಯು ಬಾರದೆ ಇದ್ದದ್ದನ್ನು ನೋಡಿ ಮತ್ತೆ ಗಾಳಿ ಮಳೆಯೂ ಬಂದದ್ದನ್ನು ನೋಡಿ ತುಂಬಾ ದುಃಖವನ್ನು ಹೊಂದಿತು. ರಾತ್ರಿಯೂ ಆದದ್ದನ್ನು ನೋಡಿ ಮತ್ತಷ್ಟು ಭಯವನ್ನು ಹೊಂದಿತು.

'ಮಹತ್ತಾದ ಗಾಳಿಮಳೆಯು ಬಂದಿತು. ನನ್ನ ಪ್ರಿಯೆಯು ಇನ್ನೂ ಬರಲಿಲ್ಲವಲ್ಲಾ' ಯಾಕೆ ಬರಲಿಲ್ಲವೆಂದು ತಿಳಿಯಲಿಲ್ಲವಲ್ಲಾ' ಅವಳು ಕ್ಷೇಮದಿದ ಇರಬಹುದೇ? ಅವಳಿಲ್ಲದೆ ನನ್ನ ಈ ಮನೆಯು ಶೂನ್ಯವಾಗಿದೆ. ಮಕ್ಕಳು ಮೊಮ್ಮಕ್ಕಳು ಭೃತ್ಯರು ಎಲ್ಲರೂ ಇದ್ದರೂ ಪತ್ನಿಯಿಂದ ರಹಿತವಾದ ಮನೆಯು ಶೂನ್ಯವೇ ಸರಿ. ಮನೆಗೆ ಸರಿಯಾಗಿ ಗೃಹವೆಂಬ ಹೆಸರಲ್ಲ. ಹೆಂಡತಿಗೇನೇ ಗೃಹ ಎಂದು ಹೆಸರು. ನನ್ನ ಪ್ರಿಯೆಯು ಇನ್ನೂ ಬರಲಿಲ್ಲವಲ್ಲಾ! ನಾನು ಬದುಕಿ ಏನು ಪ್ರಯೋಜನ? ಅವಳು ಪರಮಪತಿವ್ರತೆಯಾಗಿದ್ದಳು. ನಾನು ಭೋಜನಮಾಡದ ಮೊದಲು ಅವಳು ಭೋಜನಮಾಡಲಾರಳು. ನಾನು ದುಃಖಪಟ್ಟರೆ ಅವಳೂ ದುಃಖಪಡುತ್ತಾ ಇದ್ದಳು. ಯಾರಿಗೆ ಅಂತಹ ಹೆಂಡತಿ ಇರುವಳೋ ಅವನೇ ಪರಮ ಧನ್ಯನು. ಯಾರಿಗೆ ಪತಿವ್ರತೆಯಾದ ಪ್ರಿಯವಾಗಿ ಮಾತಾಡುವ ಪತ್ನಿಯಿಲ್ಲವೋ ಅವನು ಕಾಡಿಗೆ ಹೋಗಬೇಕು. ಅವನಿಗೆ ಮನೆಯೂ ಕಾಡಿನಂತೆ ಆಗುವುದು'.

ಈ ರೀತಿಯಾಗಿ ಮರದಮೇಲೆ ಗಂಡುಪಾರಿವಾಳವು ಹೇಳುತ್ತಾ ದುಃಖ ಪಡುತ್ತಾ ಇರಲು ಅದೇ ಮರದ ಬುಡದಲ್ಲಿ ಮಲಗಿದ್ದ ಬೇಡನ ಪಂಜರದಲ್ಲಿ

ಸಿಕ್ಕಿಬಿದ್ದಿದ್ದ ಅದರ ಹೆಂಡತಿಯೂ ಈ ಪ್ರಕಾರವಾಗಿ ಹೇಳಿತು. 'ನಾನೇ ಪರಮ ಧನ್ಯಳು. ಯಾವ ನನ್ನ ಪತಿಯು ನನ್ನಲ್ಲಿ ಉಂಟೋ ಇಲ್ಲವೋ ಆದರೂ ಗುಣಗಳನ್ನು ಹೇಳುತ್ತಾರೆ. ಯಾರಮೇಲೆ ಗಂಡನು ಸಂತುಷ್ಟನಾಗುವನೋ ಅವಳೇ ಸರಿಯಾದ ಸ್ತ್ರೀಯು. ಸ್ತ್ರೀಯರಿಗೆ ಪತಿಯು ಸಂತುಷ್ಟನಾದರೆ ಎಲ್ಲ ದೇವತೆಗಳೂ ಸಂತುಷ್ಟ ರಾಗುವರು. ಯಾವ ಹೆಂಗಸಿಗೆ ಗಂಡನು ಸಂತುಷ್ಟನಾಗುವುದಿಲ್ಲವೋ ಅವಳು ದಾವಾಗ್ನಿಯಿಂದ ಲತೆಯು ಸುಟ್ಟುಹೋಗುವಂತೆ ಸುಟ್ಟು ಹೋಗುವಳು. ಈ ರೀತಿ ಯಾಗಿ ಯೋಚಿಸಿ ಗಂಡನನ್ನು ಕರೆದು 'ನಾನು ನಿಮಗೆ ಶ್ರೇಯಸ್ಸನ್ನು ಹೇಳುವೆನು. ಶರಣಾಗತರನ್ನು ನೀವು ರಕ್ಷಿಸಿರಿ. ಈ ಬೇಡನು ನಿಮ್ಮ ವಾಸಸ್ಥಾನವನ್ನು ಆಶ್ರಯಿಸಿದ್ದಾನೆ. ಛಳಿಯಿಂದ ನಡುಗುತ್ತಾನೆ. ಹಸಿವೆಯಿಂದ ಶ್ರಮಪಡುತ್ತಾನೆ. ಯಾರು ಬ್ರಾಹ್ಮಣನನ್ನು ಕೊಲ್ಲುವನೋ ಗೋವನ್ನು ಕೊಲ್ಲುವನೋ ಯಾರು ಶರಣಾಗತನನ್ನು ಕೊಲ್ಲುವನೋ ಮೂರು ಜನರಿಗೂ ಸಮಾನವಾದ ಪಾಪವು. ಯಾವ ಗೃಹಸ್ಥನು ಯಥಾಶಕ್ತಿ ಗೃಹಸ್ಥಧರ್ಮವನ್ನು ಅನುಸರಿಸುವನೋ ಅವನು ಅಕ್ಷಯಲೋಕಗಳನ್ನು ಹೊಂದುವನು. ನೀವು ಮಕ್ಕಳನ್ನು ಪಡೆದಿರುವಿರಿ. ದೇಹದ ಮೇಲೆ ದಯೆಯನ್ನು ಬಿಟ್ಟು ಅತಿಥಿಯ ಮನಸ್ಸು ತೃಪ್ತಿಯನ್ನು ಹೊಂದುವಂತೆ ಪೂಜಾಮಾಡಿರಿ'. ಈರೀತಿಯಾಗಿ ಪಂಜರದಲ್ಲಿದ್ದ ಆ ಹೆಣ್ಣು ಪಾರಿವಾಳವು ಹೇಳಿ ಗಂಡನ ಮುಖವನ್ನು ನೋಡಿತು.

ಗಂಡುಪಾರಿವಾಳವು ಹೆಂಡತಿಯ ಮಾತನ್ನು ಕೇಳಿ ಬಹುಸಂತೋಷದಿಂದ ಆ ಬೇಡನನ್ನು ನೋಡಿ ಸತ್ಕಾರ ಮಾಡಿತು. ಆ ಬೇಡನೊಡನೆ 'ನಿನಗೆ ಸ್ವಾಗತವು. ನಿನಗೆ ನಾನು ಏನು ಮಾಡಬೇಕು? ನನ್ನ ಮನೆಯಲ್ಲಿ ಇರುವಿ. ಆದುದರಿಂದ ನೀನು ದುಃಖಪಡಬಾರದು. ನೀನು ಯಾವುದನ್ನು ಅಪೇಕ್ಷಿಸುವಿ? ನಾನು ಏನು ಮಾಡಲಿ? ಶತ್ರುವಾದರೂ ಮನೆಗೆ ಬಂದರೆ ಆತಿಥ್ಯವನ್ನು ಮಾಡಬೇಕು. ಮರವನ್ನು ಕಡಿಯಲಿಕ್ಕೆ ಬಂದರೂ ನೆರಳನ್ನು ಉಂಟುಮಾಡುವುದಿಲ್ಲವೋ? ಗೃಹಸ್ಥನು ಪಂಚಯಜ್ಞವನ್ನು ಮಾಡತಕ್ಕವನು. ಅತಿಥಿಗಳಿಗೆ ಸತ್ಕಾರಮಾಡಬೇಕು. ಯಾವ ಗೃಹಸ್ಥನು ಪಂಚಯಜ್ಞ ಗಳನ್ನು ಮಾಡುವುದಿಲ್ಲವೋ ಅವನಿಗೆ ಈ ಲೋಕದಲ್ಲಿಯೂ ಸುಖವಿರದು. ಪರ ಲೋಕದಲ್ಲಿಯೂ ಸುಖವುಂಟಾಗಲಾರದು. ಆದುದರಿಂದ ವಿಶ್ವಾಸದಿಂದ ಹೇಳಿ. ನೀನು ಹೇಳಿದಂತೆ ನಾನು ಮಾಡುತ್ತೇನೆ. ದುಃಖವನ್ನು ಹೊಂದಬೇಡ' ಎಂದು ಹೇಳಿತು.

ಅದಕ್ಕೆ ಬೇಡನು ನನಗೆ ತುಂಬಾ ಛಳಿಯಾಗುತ್ತದೆ. ಛಳಿಯಾಗದಂತೆ ಮಾಡು

ಎಂದನು. ಆಗ ಒಣಗಿದ ಎಲೆಗಳನ್ನು ತಂದು ಅವನ ಸಮೀಪದಲ್ಲಿ ರಾಶಿಹಾಕಿತು. ಒಬ್ಬ ಕಮ್ಮಾರನ ಮನೆಯ ಬಳಿಗೆ ಹೋಗಿ ಅಲ್ಲಿಂದ ಬೆಂಕಿಯನ್ನು ತಂದು ಒಣಗಿದ ಎಲೆಗೆ ಬೆಂಕಿ ಹಚ್ಚಿತು. ಬೆಂಕಿಯನ್ನು ಉರಿಸಿ ಚೆನ್ನಾಗಿ ಛಳಿಕಾಸಿಕೊ. ಅಂಜಿಕೆಬೇಡ ಎಂದಿತು. ಅದೇರೀತಿಯಾಗಿ ಬೇಡನು ಛಳಿ ಕಾಸಿಕೊಂಡನು. ಅವನಿಗೆ ಜೀವವು ಬಂದಂತಾಯಿತು. ಆಮೇಲೆ ಬಹಳ ಸಂತೋಷವುಳ್ಳವನಾಗಿ ಪಕ್ಷಿಯನ್ನು ನೋಡಿ ನನಗೆ ಹಸಿವೆಯಾಗುತ್ತದೆ. ಆಹಾರವನ್ನು ಅಪೇಕ್ಷಿಸುತ್ತೇನೆ ಎಂದನು. ಅವನ ಮಾತನ್ನು ಕೇಳಿ ಪಕ್ಷಿಯು ನನಗೆ ಅಂತಹ ಐಶ್ವರ್ಯವಿಲ್ಲ. ನಿನ್ನ ಹಸಿವೆಯನ್ನು ನಾನು ಹೇಗೆ ಪರಿಹರಿಸಲಿ? ಮುನಿಗಳಂತೆ ನಾವು ಸಂಗ್ರಹಮಾಡುವವರಲ್ಲ. ಆವಾವ ದಿನ ಸಿಕ್ಕಿದ್ದರಿಂದ ಜೀವಿಸುತ್ತಾ ಇರುವೆವು. ನಾನು ಏನು ಮಾಡಲಿ? ಎಂದು ಸ್ವಲ್ಪ ಹೊತ್ತು ಯೋಚಿಸಿತು. ಒಂದು ಮುಹೂರ್ತವಾದ ಮೇಲೆ ಬೇಡನೊಡನೆ ನಿನ್ನನ್ನು ಸಂತೋಷಪಡಿಸುತ್ತೇನೆ. ಒಂದು ಮುಹೂರ್ತಕಾಲ ತಡಿ! ಎಂದು ಹೇಳಿ ಒಣಗಿದ ಎಲೆಗಳಿಂದ ಬೆಂಕಿಯನ್ನು ಉರಿಸಿತು. ಆಮೇಲೆ ಬಹಳ ಸಂತೋಷವುಳ್ಳದ್ದಾಗಿ ನನಗೆ ಅನುಗ್ರಹ ಮಾಡು. ನಿನಗೆ ಅತಿಥಿಸತ್ಕಾರ ಮಾಡಲಿಕ್ಕೆ ನನಗೆ ಇಚ್ಛೆಯುಂಟಾಗಿದೆ. ಈರೀತಿಯಾಗಿ ಹೇಳಿ ಆ ಪಕ್ಷಿಯು ನೆಗುತ್ತಾ ಆ ಬೆಂಕಿಗೆ ಮೂರು ಪ್ರದಕ್ಷಿಣೆ ಬಂದು ಬೆಂಕಿಯಲ್ಲಿ ಪ್ರವೇಶಮಾಡಿತು. ಬೆಂಕಿಯ ಮಧ್ಯದಲ್ಲಿ ಪ್ರವೇಶಿಸಿರುವ ಪಕ್ಷಿಯನ್ನು ನೋಡಿ ಬೇಡನು ಮನಸ್ಸಿನಲ್ಲಿಯೇ 'ಆಹಾ! ನಾನು ಏನು ಮಾಡಿಬಿಟ್ಟೆನು. ಪಾಪಿಯಾದ ನನಗೆ ಮಹಾ ಘೋರವಾದ ಅಧರ್ಮವು ಉಂಟಾಗುವುದು. ಈರೀತಿಯಾಗಿ ಪಕ್ಷಿಯು ತನಗೋಸ್ಕರ ಬೆಂಕಿಯಲ್ಲಿ ಪ್ರವೇಶಿಸಿದ್ದನ್ನು ನೋಡಿ ಬಹಳವಾಗಿ ವಿಲಾಪವನ್ನು ಮಾಡಿದನು.

ಆ ಬೇಡನು ಹಸಿವೆಯಿಂದ ಪೀಡಿತನಾಗಿದ್ದರೂ ಅಗ್ನಿಯಲ್ಲಿ ಪ್ರವೇಶಿಸಿದ ಪಕ್ಷಿಯನ್ನು ನೋಡಿ ನನಗೆ ಮಹಾಪಾಪವು ಬರುವುದು. ದುರ್ಬುದ್ಧಿಯುಳ್ಳ ನನಗೆ ಧಿಕ್ಕಾರವಿರಲಿ. ಕ್ರೂರನಾದ ನನಗೆ ಈ ಪಾರಿವಾಳವು ಧಿಕ್ಕಾರಪೂರ್ವಕವಾಗಿ ಉಪದೇಶಮಾಡಿತು. ನನಗೆ ತನ್ನ ದೇಹದ ಮಾಂಸವನ್ನೇ ಕೊಟ್ಟಿತು. ನಾನು ಹೆಂಡತಿ ಮಕ್ಕಳನ್ನೂ ಪ್ರಾಣವನ್ನೂ ಬಿಡುವೆನು. ಧರ್ಮವನ್ನು ತಿಳಿದ ಈ ಪಾರಿವಾಳವು ನನಗೆ ಧರ್ಮವನ್ನು ಉಪದೇಶಿಸಿತು. ಈ ದಿವಸ ಆರಂಭಿಸಿ ನಾನು ಈ ದೇಹವನ್ನು ಒಣಗಿಸಿಕೊಳ್ಳುವೆನು. ಬಹು ಉಪವಾಸವನ್ನು ಮಾಡುವೆನು. ಆಹಾ! ತನ್ನ ದೇಹವನ್ನೇ ಕೊಟ್ಟು ಪಾರಿವಾಳವು ಅತಿಥಿಪೂಜೆಯನ್ನು ಮಾಡಿತಲ್ಲಾ! ನಾನು ಮಹಾಪ್ರಸ್ಥಾನವನ್ನು ಮಾಡುವೆನು. ಅಂದರೆ ಸಾಯುವವರೆಗೂ ನಡೆದುಕೊಂಡೇ

ಹೋಗುವೆನು. ಎಂದು ಹೇಳಿ ತನ್ನ ಕೈಯಲ್ಲಿ ಇದ್ದ ಕೋಲನ್ನೂ ಪಂಜರವನ್ನೂ ಅದರಲ್ಲಿ ಇದ್ದ ಪಾರಿವಾಳವನ್ನು ಬಿಟ್ಟುಬಿಟ್ಟನು. ಅಲ್ಲಿಂದ ಹೊರಟುಹೋದನು.

ತರುವಾಯ ಬೇಡನು ಹೊರಟುಹೋದಮೇಲೆ ಹೆಣ್ಣು ಪಾರಿವಾಳ ಪಕ್ಷಿಯು ಗಂಡನನ್ನು ಕುರಿತು ಬಹಳ ವಿಲಾಪವನ್ನು ಆಡಿ ಅಗ್ನಿಯಲ್ಲಿ ಪ್ರವೇಶಿಸಿತು. ವಿಮಾನದಲ್ಲಿ ಪುಣ್ಯವಂತರಿಂದ ಸತ್ಕರಿಸಲ್ಪಡುತ್ತಿದ್ದ ತನ್ನ ಗಂಡನನ್ನು ಹೊಂದಿತು. ಆ ಗಂಡುಪಾರಿವಾಳವು ತನ್ನ ಹೆಂಡತಿಯೊಡನೆ ಸ್ವರ್ಗಕ್ಕೆ ಹೋಗಿ ಸುಖದಿಂದ ಇದ್ದಿತು. ವಿಮಾನದಲ್ಲಿ ಕೂತುಕೊಂಡು ಅವರಿಬ್ಬರು ಹೋಗುವುದನ್ನು ಆ ಬೇಡನು ನೋಡಿ ನಾನು ಯಾವ ತಪಸ್ಸಿನಿಂದ ಉತ್ತಮವಾದ ಗತಿಯನ್ನು ಹೊಂದಲಿ ಎಂದು ಯೋಚಿಸಿ ಹಾಗೆಯೇ ಉಪವಾಸದಿಂದ ಕೃಶನಾಗಿದ್ದನು. ದಾರಿಯಲ್ಲಿ ಒಂದು ಕಾಡು ಬಂತು. ಅದನ್ನು ಪ್ರವೇಶಿಸಿತು.(ದನು) ಮೈಯೆಲ್ಲಾ ಮುಳ್ಳು ತಾಗಿ ಗಾಯವಾಯಿತು. ಮೈಯೆಲ್ಲಾ ರಕ್ತವು ಸುರಿಯಿತು. ಹಾಗೆಯೇ ಮುಂದೆ ಹೋದನು. ಒಂದು ಸ್ಥಳದಲ್ಲಿ ಕಾಡಿನಲ್ಲಿ ಬೆಂಕಿ ಉರಿಯುತ್ತಿತ್ತು. ಆ ಬೆಂಕಿಯಲ್ಲಿ ಪ್ರವೇಶಿಸಿ ಬೇಡನು ದೋಷ ರಹಿತನಾಗಿ ಸ್ವರ್ಗವನ್ನು ಹೊಂದಿದನು. ಈ ರೀತಿಯಾಗಿ ಅತಿಥಿ ಸತ್ಕಾರ ಮಾಡಿದ ಪಾರಿವಾಳವೂ ಪತಿವ್ರತೆಯಾದ ಹೆಣ್ಣು ಪಾರಿವಾಳವೂ ಆ ಬೇಡನೂ ಮೂವರೂ ಸ್ವರ್ಗವನ್ನು ಹೊಂದಿದರು.



## ಒಂಟೆಯ ಕಥೆ [1]

ಪೂರ್ವದಲ್ಲಿ ಪ್ರಜಾಪತಿಕುಲದಲ್ಲಿ [2]ಜಾತಿಸ್ಮರಣೆಯುಳ್ಳ ಒಂದು ಒಂಟೆಯಿತ್ತು. ಅದು ಅರಣ್ಯದಲ್ಲಿ ಒಳ್ಳೇ ವ್ರತಗಳನ್ನು ಮಾಡುತ್ತಾ ತಪಸ್ಸು ಮಾಡಿತು. ಆ ಒಂಟೆಯ ತಪಸ್ಸಿನಿಂದ ಬ್ರಹ್ಮದೇವರು ಸಂತುಷ್ಟರಾದರು. ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದರು. ಅದಕ್ಕೆ ಒಂಟೆಯು ಸ್ವಾಮಿ! ನನಗೆ ನಿಮ್ಮ ಅನುಗ್ರಹದಿಂದ ನೂರು ಯೋಜನರೂಪವುಳ್ಳ ಕುತ್ತಿಗೆಯಾಗಬೇಕು ಎಂದು ಕೇಳಿಕೊಂಡಿತು. ಅದಕ್ಕೆ ಬ್ರಹ್ಮದೇವರು ಹಾಗೆಯೇ ಆಗಲಿ ಎಂದು ಹೇಳಿ ಹೋದರು. ಈರೀತಿ ವರವನ್ನು ಪಡೆದು ಒಂಟೆಯು ತನ್ನ ಕಾಡಿಗೆ ಹೋಯಿತು.

ದುರ್ಬುದ್ಧಿಯುಳ್ಳ ಆ ಒಂಟೆಯು ಆಲಸ್ಯವನ್ನು ಹೊಂದಿತು. ಅದು ಆಹಾರ

1. ಮಭಾ. ಶಾಂ.ಪ. ಅ-112. 2. ಹಿಂದಿನ ಜನ್ಮಸ್ಮರಣೆ

ಕ್ಕಾಗಿ ಸಂಚಾರಮಾಡುವುದನ್ನೇ ಬಿಟ್ಟಿತು. ಒಂದು ದಿವಸ ಆ ಒಂಟೆಯು ನೂರು ಯೋಜನದೂರ ಉದ್ದವುಳ್ಳ ತನ್ನ ಕುತ್ತಿಗೆಯನ್ನು ನೀಡಿಕೊಂಡು ಸುಮ್ಮನೆ ಮಲಗಿಕೊಂಡಿತು. ಆಗ ಒಳ್ಳೇ ಗಾಳಿಯು ಬಂದಿತು. ಆಗ ಅದು ತನ್ನ ಕುತ್ತಿಗೆಯನ್ನೂ ತಲೆಯನ್ನೂ ಒಂದು ಗುಹೆಯ ಒಳಗೆ ಇಟ್ಟು ಮಲಗಿತು. ಆಗ ಮಹತ್ತಾದ ಮಳೆಯೂ ಬಂದಿತು. ಆಗ ಛಳಿಯಿಂದ ನಡುಗುತ್ತಾ ಹಸಿವೆಯಿಂದ ಕೂಡಿದ ಒಂದು ನರಿಯು ತನ್ನ ಹೆಂಡತಿಯಿಂದ ಆ ಗುಹೆಯನ್ನು ಪ್ರವೇಶಿಸಿತು. ಮಾಂಸಜೀವಿಯಾದ ಅತ್ಯಂತ ಹಸಿವೆಯಿಂದ ಕೂಡಿದ ಆ ನರಿಯು ಒಂಟಯ ಕುತ್ತಿಗೆಯನ್ನು ನೋಡಿ ಅದನ್ನು ತಿನ್ನಲಿಕ್ಕೆ ಆರಂಭಿಸಿತು. ಸೋಮಾರಿಯಾಗಿದ್ದ ಮಲಗಿದ್ದ ಆ ಒಂಟೆಯು ತನ್ನ ಕುತ್ತಿಗೆಯನ್ನು ಯಾರೋ ತಿನ್ನುತ್ತಿರುವರೆಂದು ತಿಳಿದು ಬಹು ಕಷ್ಟದಿಂದ ಸೆಳೆದುಕೊಳ್ಳಲಿಕ್ಕೆ ಪ್ರಯತ್ನ ಮಾಡಿತು. ಆ ಒಂಟೆಯು ತನ್ನ ಕುತ್ತಿಗೆಯನ್ನು ಮೇಲೆ ಕೆಳಗೆ ಮಾಡುವಷ್ಟರಲ್ಲಿ ನರಿಯೂ ಹೆಂಡತಿಯೂ ತಿಂದು ಹಾಕಿದವು. ಈರೀತಿಯಾಗ ನರಿಯು ಆ ಒಂಟೆಯನ್ನು ತಿಂದು ಹಾಕಿ ಗಾಳಿಮಳೆಯು ನಿಂತ ಮೇಲೆ ಗುಹೆಯಿಂದ ಹೊರಗೆ ಹೋಯಿತು. ಈರೀತಿಯಾಗಿ ಆ ಒಂಟೆಯು ಆಲಸ್ಯದಿಂದ ಪ್ರಾಣವನ್ನು ಕಳೆದುಕೊಂಡಿತು.



# ನರಿಯೂ ಕಾಶ್ಯಪರೂ [1]

ಒಂದು ದಿನ ಕಾಶ್ಯಪ ಎಂಬ ಒಬ್ಬ ಬ್ರಾಹ್ಮಣನು ದಾರಿಯಲ್ಲಿ ಹೋಗುತ್ತಿದ್ದನು. ಆಗ ಒಬ್ಬ ಹಣವಂತನಾದ ವೈಶ್ಯನು ರಥವನ್ನು ಓಡಿಸಿಕೊಂಡು ಹೋಗಿ ಆ ಬ್ರಾಹ್ಮಣನನ್ನು ಬೀಳಿಸಿದನು. ಬಿದ್ದ ಆ ಕಾಶ್ಯಪನು ತುಂಬಾ ದುಃಖವುಳ್ಳವನಾದನು. ಆಮೇಲೆ ಅವನು 'ನನ್ನಂತಹ ಬಡವರು ಜೀವಿಸಬಾರದು. ನಾನು ಇಲ್ಲಿಯೇ ಸಾಯುವೆನು' ಎಂದು ಹೇಳಿ ಶಬ್ದವಿಲ್ಲದೆ ಬಿದ್ದುಕೊಂಡನು.

ಆಗ ಅಲ್ಲಿಗೆ ಒಂದು ನರಿಯು ಬಂದಿತು. ಆ ನರಿಯು ಸಾಯುವೆನೆಂದು ಬಿದ್ದಿರುವ ಕಾಶ್ಯಪರನ್ನು ನೋಡಿ ''ಬ್ರಾಹ್ಮಣ! ಲೋಕದಲ್ಲಿ ಎಲ್ಲರೂ ಪ್ರಾಣಿಗಳೂ ಮನುಷ್ಯರಾಗಿ ಹುಟ್ಟಬೇಕೆಂದು ಆಸೆಪಡುವರು. ಮನುಷ್ಯರಲ್ಲಿಯೂ ಬ್ರಾಹ್ಮಣ ರಾಗಬೇಕೆಂದು ಆಸೆಪಡುವರು. ನೀನು ಬ್ರಾಹ್ಮಣನಾಗಿದ್ದಿ. ಓದಿಕೊಂಡವನಾಗಿದ್ದಿ.

ಈರೀತಿಯಾಗಿ ದುರ್ಲಭವಾದ ಈ ದೇಹವನ್ನು ಹೊಂದಿ ನೀನು ಸಾಯುವುದು ಸರಿಯಲ್ಲ. ಲೋಕದಲ್ಲಿ ಯಾರೂ ತನ್ನ ಹತ್ತಿರ ಇದ್ದದ್ದನ್ನು ಅವಮಾನ ಮಾಡುವರು? ಎಂಬುದು ಸತ್ಯವಾದ ಮಾತು. ಆದುರಿಂದಲೇ ಸಂತೋಷಪಡಲಿಕ್ಕೆ ಯೋಗ್ಯವಾದ ನಿನ್ನ ರೂಪವನ್ನು ಸಾಯುತ್ತೇನೆ ಎಂದುಕೊಂಡು ಅವಮಾನಮಾಡುತ್ತಿ. ಯಾರಿಗೆ ಕೈಗಳು ಇವೆಯೋ ಅವರು ಏನು ಪುಣ್ಯಮಾಡಿದವರು? ನಾವು ಕೈಉಳ್ಳವರಾಗ ಬೇಕೆಂದು ಆಸೆಪಡುತ್ತೇವೆ. ನೀನು ಹೇಗೆ ಹಣವಂತನನ್ನು ನೋಡಿ ಹಣವನ್ನು ಅಪೇಕ್ಷಿಸುವಿಯೋ ಹಾಗೆ ನಾವು ನಿನ್ನನ್ನು ನೋಡಿ ಕೈಬೇಕು ಎಂದು ಆಸೆಪಡುವೆವು. ಕೈಯನ್ನು ಹೊಂದುವುದಕ್ಕಿಂತ ಹೆಚ್ಚಾದ ಲಾಭವಿಲ್ಲ. ಬ್ರಾಹ್ಮಣ! ನಮಗೆ ಕೈಯಿಲ್ಲದ ಕಾರಣ ಕಾಲಿಗೆ ಮುಳ್ಳುತಾಗಿದರೆ ಅದನ್ನು ತೆಗೆಯಲಾರೆವು. ನನ್ನ ಮೈಯ ಮೇಲೆ ಕೂತುಕೊಂಡು ಕಚ್ಚುವ ಸೊಳ್ಳೆಗಳನ್ನು ಓಡಿಸಲಾರೆವು. ಮೈಯನ್ನು ತುರಿಸಿಕೊಳ್ಳ ಲಾರೆವು. ಯಾರಿಗೆ ದೇವರು ಕೊಟ್ಟ ಹತ್ತುಬೆರಳುಗಳುಳ್ಳ ಎರಡು ಕೈಗಳು ಇವೆಯೋ ಅವರು ಸೊಳ್ಳೆಗಳು ಓಡಿಸುವರು. ಮೈಯನ್ನು ತುರಿಸಿಕೊಳ್ಳುವರು. ಗಾಳಿ ಮಳೆ ಬಿಸಿಲುಗಳಿಂದ ರಕ್ಷಣೆಯನ್ನು ಮಾಡಿಕೊಳ್ಳುವರು. ವಸ್ತ್ರವನ್ನು ಉಟ್ಟುಕೊಳ್ಳುವರು. ಊಟಮಾಡುವರು. ಎತ್ತಿನ ಮೇಲೆ ಭಾರ ಹೊರಿಸುವರು. ಬಹು ಉಪಾಯದಿಂದ ಎಲ್ಲರನ್ನೂ ತನ್ನ ವಶಮಾಡಿಕೊಳ್ಳುವರು. ಕೈಯಿಲ್ಲದವರು ಈ ದುಃಖಗಳನ್ನೆಲ್ಲಾ ಅನುಭವಿಸುವರು.

ಬ್ರಾಹ್ಮಣ! ನೀನು ದೈವೇಚ್ಛೆಯಿಂದ ಹಾಗೆ ಇಲ್ಲವಲ್ಲಾ! ನೀನು ನರಿಯಲ್ಲ. ಕೃಮಿಯಲ್ಲ. ಇಲಿಯಲ್ಲ. ಸರ್ಪವಲ್ಲ. ಕಪ್ಪೆಯಲ್ಲ. ಬೇರೆ ಯಾವ ಪಾಪಯೋನಿ ಯಲ್ಲಿಯೂ ಹುಟ್ಟಿಲ್ಲ. ಈರೀತಿಯಾಗಿ ನರಿ ಇತ್ಯಾದಿ ಯೋನಿಯಲ್ಲಿ ಹುಟ್ಟಿದ ಕಾರಣದಿಂದಲೇ ಸಂತೋಷವನ್ನು ಹೊಂದು. ಬ್ರಾಹ್ಮಣ ಶ್ರೇಷ್ಠನಾಗಿ ಹುಟ್ಟಿರುವಿ. ಇದಕ್ಕೆ ಏನು ಹೇಳಬೇಕಾಗಿದೆ? ನೋಡು, ನನ್ನನ್ನು ಕೃಮಿಗಳು ಕಚ್ಚುತ್ತಾ ಇವೆ. ಆದರೆ ಕೈ ಇಲ್ಲದೆ ಇರುವ ಪ್ರಯುಕ್ತ ಓಡಿಸಲಿಕ್ಕೆ ಆಗುವುದಿಲ್ಲ. ನಾನು ಎಷ್ಟು ಕಷ್ಟಪಡು ತ್ತಿರುವೆನು ನೋಡು. ಆದರೂ ನಾನು ಅಕಾರ್ಯವೆಂದು ತಿಳಿದುಕೊಂಡು ಪ್ರಾಣ ಬಿಡಲಿಕ್ಕೆ ಇಚ್ಛಿಸುವುದಿಲ್ಲ. ಈಗ ಸತ್ತರೆ ಇದಕ್ಕಿಂತಲೂ ಪಾಪಕರವಾದ ಯೋನಿಯನ್ನು ಹೊಂದಬಹುದೆಂದು ಭಯವಾಗುತ್ತದೆ. ಪಾಪಯೋನಿಗಳ ಮಧ್ಯದಲ್ಲಿ ನರಿಯಾಗಿ ಹುಟ್ಟಿರುವೆನು. ಇದಕ್ಕಿಂತ ನೀಚಯೋನಿಗಳು ಎಷ್ಟೋ ಇವೆ. ಸ್ವಭಾವದಿಂದ ಕೆಲವರು ತುಂಬಾ ಸುಖವನ್ನು ಹೊಂದುವರು. ಕೆಲವರು ತುಂಬಾ ದುಃಖವನ್ನು ಹೊಂದುವರು. ಯಾರೊಬ್ಬನೂ ಯಾವಾಗಲೂ ಸುಖದಿಂದಲೇ ಇರಲಾರನು.

ಮನುಷ್ಯರು ಹಣವಂತರಾದ ಮೇಲೆ ರಾಜ್ಯವನ್ನು ಅಪೇಕ್ಷಿಸುವರು. ರಾಜ್ಯವು ಸಿಕ್ಕಿದರೆ ದೇವತೆಯಾಗಬೇಕೆನ್ನುವರು. ದೇವತೆಯಾದರೆ ಇಂದ್ರನಾಗಬೇಕೆನ್ನುವರು. ನೀನು ಒಂದು ಪಕ್ಷದಲ್ಲಿ ಹಣವಂತನಾದರೂ ರಾಜನಾಗಿಲ್ಲವೆಂದು ಸಂತೋಷ ಪಡಲಾರೆ! ರಾಜನಾದರೂ ದೇವತೆಯಾಗಿಲ್ಲವೆಂದೂ, ದೇವತೆಯಾದರೂ ಇಂದ್ರನಾಗಿಲ್ಲವೆಂದೂ ಸಂತೋಷವನ್ನು ಹೊಂದಲಾರೆ! ಪ್ರಿಯವಸ್ತುವು ಸಿಕ್ಕಿದರೂ ತೃಪ್ತಿಯಾಗಲಾರದು. ಆಸೆಯು ಶಾಂತವಾಗಲಾರದು. ಕಟ್ಟಿಗೆಯಿಂದ ಬೆಂಕಿಯು ಉರಿಯುವಂತೆ ಆಸೆಯು ಹೆಚ್ಚುತ್ತಲೇ ಇರುವುದು. ನಿನ್ನಲ್ಲೇ ಶೋಕವಿದೆ. ಹರ್ಷವಿದೆ. ಸುಖವಿದೆ. ದುಃಖವಿದೆ. ಯಾಕೆ ಅಳಬೇಕು? ನಾನಾ ವಿಧಗಳಾದ ಕಾಮಗಳಿಗೆ ಕಾರಣವಾದ ಇಂದ್ರಿಯ ಸಮೂಹವನ್ನು ನಿಗ್ರಹಮಾಡಿರುವವನಿಗೆ ಭಯವೇ ಇರಲಾರದು! ರಸವನ್ನು ತಿಳಿಯದೆ ಇದ್ದವನಿಗೆ ಆಸೆಯು ಉಂಟಾಗ ಲಾರದು!

ನೀನು ಬ್ರಾಹ್ಮಣನಾದ ಪ್ರಯುಕ್ತ ಮದ್ಯದ, ಮಾಂಸದ ರುಚಿಯನ್ನು ತಿಳಿಯದವನಾದ ಪ್ರಯುಕ್ತ ಅದರಲ್ಲಿ ನಿನಗೆ ಆಸೆಯುಂಟಾಗಲಾರದು. ಕೈಯುಳ್ಳ ಬಲವುಳ್ಳ ಹಣವುಳ್ಳ ಮನುಷ್ಯರೇ ಬೇರೆ ಮನುಷ್ಯರಿಗೆ ದಾಸರಾಗುವರು. ವಧ, ಬಂಧ ಇತ್ಯಾದಿಗಳಿಂದ ಕಷ್ಟಪಡುತ್ತಾರೆ. ಅವರೇ ಸಂತೋಷಪಡುತ್ತಾರೆ. ಕ್ರೀಡಾ ಮಾಡುತ್ತಾರೆ. ಎಷ್ಟೋ ಬಾಹುಬಲವುಳ್ಳವರು ವಿದ್ಯಾವಂತರು ನಿಂದ್ಯವಾದ ಪಾಪವ್ಯಾಪಾರವನ್ನು ಮಾಡುತ್ತಾರೆ. ಅವರವರ ಕರ್ಮಾನುಸಾರವಾಗಿ ಎಲ್ಲವೂ ನಡೆಯುವುದು. ನೀನು ಸಾಯಬೇಕೆಂದು ಯಾಕೆ ಇಚ್ಛಿಸುವಿ? ನೀನು ಚಂಡಾಲ ನಾಗಿಲ್ಲ, ಇತರ ಹೀನಯೋನಿಯವನಾಗಿಲ್ಲ. ನಿನಗೆ ಬ್ರಾಹ್ಮಣದೇಹವಿದೆ. ಒಂದೂ ಆತಂಕವಿಲ್ಲ. ರೋಗವಿಲ್ಲ. ಕೈಕಾಲು ಸರಿಯಾಗಿದೆ. ಲೋಕದಲ್ಲಿ ನಿನ್ನನ್ನು ಒಬ್ಬರೂ ಧಿಕ್ಕಾರ ಮಾಡುವವರಿಲ್ಲ. ಜಾತಿಹೋಗುವ ಒಂದು ಅಪವಾದವೂ ನಿನಗೆ ಬಂದಿಲ್ಲ. ಆದುದರಿಂದ ಏಳು ಸಾಯಬೇಡ! ಏಳು ವೇದಾಧ್ಯಯನವನ್ನು ಮಾಡು! ವೇದ್ಯಾಧ್ಯಯನ ಯಜ್ಞ ಇತ್ಯಾದಿ ಸತ್ಕಾರ್ಯಗಳನ್ನು ಮಾಡುವವರು ಸುಖವನ್ನು ಹೊಂದುವರು. ಯಜ್ಞಾದಿಗಳನ್ನು ಬಿಟ್ಟವರು ದೈತ್ಯರಾಗಿ ಹುಟ್ಟುವರು.

ನಾನು ಒಬ್ಬ ವೇದವನ್ನು ನಿಂದಿಸುವ ಕುಯುಕ್ತಿಯನ್ನು ಹೇಳುವ ಪಂಡಿತ ನಾಗಿದ್ದೆನು. ವ್ಯರ್ಥವಾದ ತರ್ಕಶಾಸ್ತ್ರವನ್ನು ಓದಿದೆನು. ಸಭೆಗಳಲ್ಲಿ ಕುಯುಕ್ತಿಗಳನ್ನು ಹೇಳುತ್ತಿದ್ದೆನು. ಬ್ರಾಹ್ಮಣರ ಹತ್ತಿರ ಕಠಿಣವಾಗಿ ಗಟ್ಟಿಯಾಗಿ ಮಾತಾಡುತ್ತಿದ್ದೆನು. ಪರಲೋಕವೇ ಇಲ್ಲವೆನ್ನುತ್ತಿದ್ದೆನು. ಮೂರ್ಖನಾಗಿದ್ದೆನು. ಪಂಡಿತ ಎಂದು

ಅಭಿಮಾನವುಳ್ಳವನಾಗಿದ್ದೆನು. ಅದರ ಫಲವಾಗಿ ನಾನು ಈಗ ನರಿಯಾಗಿರುವೆನು. ನಾನು ನರಿಯಾಗಿರುವವನು ಪುನಃ ಯಾವಾಗ ಯಜ್ಞದಾನಗಳಲ್ಲಿ ಆಸಕ್ತನಾದ ಮನುಷ್ಯನಾಗುವೆನೋ ಎಂದು ಆಸೆಪಡುತ್ತೇನೆ''. ಈ ಪ್ರಕಾರವಾಗಿ ನರಿಯು ಹೇಳಲು ಆ ಕಾಶ್ಯಪ ಎಂಬ ಬ್ರಾಹ್ಮಣರು ಎದ್ದು ತುಂಬಾ ಆಶ್ಚರ್ಯಪಟ್ಟರು. ನೀನು ಸಮರ್ಥನಾಗಿದ್ದಿ. ಬುದ್ಧಿವಂತನಾಗಿದ್ದಿ ಎಂದರು. ಆಮೇಲೆ ಆ ಕಾಶ್ಯಪರು ಜ್ಞಾನದೃಷ್ಟಿಯಿಂದ ನೋಡುವಾಗ ಇಂದ್ರದೇವರೇ ನರಿಯರೂಪದಿಂದ ಬಂದಿರುವರೆಂದು ತಿಳಿದುಕೊಂಡರು. ತರುವಾಯ ಕಾಶ್ಯಪರು ಇಂದ್ರದೇವರನ್ನು ಪೂಜಿಸಿದರು. ಇಂದ್ರದೇವರಿಂದ ಅನುಜ್ಞೆಯನ್ನು ಪಡೆದು ತನ್ನ ಮನೆಗೆ ಹೋದರು.



## ಬೆಕ್ಕೂ ಇಲಿಯೂ [1]

ಒಂದು ದೊಡ್ಡ ಕಾಡಿನಲ್ಲಿ ದೊಡ್ಡ ಆಲದ ಮರವಿತ್ತು. ನಾನಾ ಪಕ್ಷಿಗಳು ಅದರಲ್ಲಿ ವಾಸಮಾಡುತ್ತಿದ್ದವು. ಆ ಮರವು ಆ ಕಾಡಿನಲ್ಲೆಲ್ಲಾ ವ್ಯಾಪಿಸಿತ್ತು. ಆ ಮರದ ಬುಡದಲ್ಲಿ ಅನೇಕ ಬಿಲಗಳನ್ನು ಮಾಡಿಕೊಂಡು ಪಲಿತ ಎಂದು ಹೆಸರುಳ್ಳ ಒಂದು ಇಲಿಯು ಇದ್ದಿತು. ಆ ಮರದ ಕೊಂಬೆಯಲ್ಲಿ ಲೋಮಶ ಎಂಬ ಒಂದು ಬೆಕ್ಕು ವಾಸಮಾಡುತ್ತಿತ್ತು. ಅಲ್ಲಿಗೆ ಒಬ್ಬ ಚಂಡಾಲನು ಬಂದು ನಿತ್ಯವೂ ಸಾಯಂಕಾಲ ಪಶುಪಕ್ಷಿಗಳನ್ನು ಹಿಡಿಯಲಿಕ್ಕೆ ಒಂದು ಯಂತ್ರವನ್ನು ಇಟ್ಟು ಹೋಗುತ್ತಿದ್ದನು. ಅದರಲ್ಲಿ ನಿತ್ಯವೂ ರಾತ್ರಿಯಲ್ಲಿ ಬಹುಮೃಗಗಳು ಸಿಕ್ಕಿಬೀಳುತ್ತಿದ್ದವು. ಒಂದು ದಿವಸ ಮರದ ಮೇಲೆ ವಾಸಿಸುತ್ತಿದ್ದ ಬೆಕ್ಕು ಆ ಯಂತ್ರದಲ್ಲಿ ಸಿಕ್ಕಿಬಿದ್ದಿತು. ಇಲಿಯು ತನ್ನ ಶತ್ರುವಾದ ಬೆಕ್ಕು ಈ ರೀತಿಯಾಗಿ ಯಂತ್ರದಲ್ಲಿ ಸಿಕ್ಕಿಬಿದ್ದಿರಲು ಇಲಿಯು ಭಯರಹಿತವಾಗಿ ಆಹಾರವನ್ನು ಹುಡುಕುತ್ತಾ ಸಂಚಾರ ಮಾಡುತ್ತಾ ಹೋಯಿತು. ಆ ಯಂತ್ರದ ಮೇಲೆ ಹೋಗಿ ಸಿಕ್ಕಿಬಿದ್ದಿರುವ ತನ್ನ ಶತ್ರುವನ್ನು ನೋಡುತ್ತಾ ನಗುತ್ತಾ ಮಾಂಸವನ್ನು ತಿನ್ನಲಿಕ್ಕೆ ಆರಂಭಿಸಿತು. ಮಾಂಸದಲ್ಲಿಯೇ ಆಸಕ್ತವಾಗಿರುವ ಇಲಿಯು ತನ್ನನ್ನು ತಿನ್ನಲಿಕ್ಕೆ ಬರುತ್ತಿರುವ ಬೆಳ್ಳಗಿರುವ ಕೆಂಪಾದ ಕಣ್ಣು ಇರುವ ಹರಿಣ[2] ಎಂದು ಹೆಸರುಳ್ಳ ಮುಂಗುಸಿಯನ್ನು ನೋಡಿತು. ಅದು ಇಲಿಯ ವಾಸನೆಯಿಂದ ಬೇಗನೆ ಬಂದು ತುಟಿಯನ್ನು ನೆಕ್ಕಿಕೊಂಡು ಮುಖವನ್ನು ಮೇಲೆ ಮಾಡಿಕೊಂಡು ನಿಂತುಕೊಂಡಿತು. ಆ

1. ಮಭಾ. ಶಾಂ.ಪ. ಅ.138. 2. ಅ.138-31

ಮೇಲೆ ಇಲಿಯು ಮೇಲೆ ನೋಡುವಾಗ ಮರದ ಕೊಂಬೆಯಲ್ಲಿ ಒಂದು ಕೋಟರದಲ್ಲಿ (ಪೊಂದಿನಲ್ಲಿ) ವಾಸಿಸುವ ಗೂಗೆ ಪಕ್ಷಿಯನ್ನು ನೋಡಿತು. ಈ ರೀತಿಯಾಗಿ ಮೇಲೆ ಕೆಳಗೆ ಶತ್ರುಗಳಿಂದ ಮರಣವು ಸಮೀಪಿಸಲು ಇಲಿಯು ಏನು ಮಾಡಲಿ ಎಂದು ಯೋಚಿಸಿತು. ಈ ಸಮಯದಲ್ಲಿ ಬೆಕ್ಕಿನೊಡನೆ ರಾಜಿ ಮಾಡಿಕೊಳ್ಳುವುದೇ ನ್ಯಾಯವೆಂದು ತಿಳಿದುಕೊಂಡು ಸಮಾಧಾನದಿಂದ ಬೆಕ್ಕಿನೊಡನೆ 'ಮಾರ್ಜಾರ' ಪ್ರೇಮದಿಂದ ನಾನು ಮಾತಾಡುತ್ತೇನೆ. ಬದುಕಿದ್ದೀಯಾ? ನೀನು ಬದುಕಿರಬೇಕಾಗಿ ಅಪೇಕ್ಷಿಸುತ್ತೇನೆ. ನಾನು ನಿನ್ನನ್ನು ಉದ್ಧಾರಮಾಡುತ್ತೇನೆ. ನಿನಗೋಸ್ಕರವಾಗಿ ನಾನು ಪ್ರಾಣಬಿಡುವೆನು. ನನಗೊಂದು ಉಪಾಯವು ತೋರುತ್ತದೆ. ಅದರಿಂದ ನೀನೂ ತಪ್ಪಿಸಿಕೊಳ್ಳಲಿಕ್ಕೆ ಆಗುವುದು. ನನಗೂ ತಪ್ಪಿಸಿಕೊಳ್ಳಲಿಕ್ಕೆ ಆಗುವುದು. ಈ ಮುಂಗುಸಿಯೂ ಗೂಗೆಯೂ ನನ್ನನ್ನು ತಿನ್ನಬೇಕೆಂದು ಇರುವುವು. ನಿನ್ನ ಹತ್ತಿರವಿರುವ ಪ್ರಯುಕ್ತ ನನ್ನ ಹತ್ತಿರ ಬರುವುದಿಲ್ಲ. ನಿನಗೆ ಮಂಗಳವಾಗಲಿ. ಮರದ ಕೊಂಬೆಯಲ್ಲಿ ಗೂಗೆಯು ನನ್ನನ್ನೇ ನೋಡುತ್ತಾ ಕೂಗುತ್ತಾ ಇದೆ. ನನಗೆ ತುಂಬಾ ಭಯವಾಗುತ್ತದೆ. ನಾನು ನಿನಗೆ ಸಹಾಯವನ್ನು ಮಾಡುತ್ತೇನೆ. ನಿನಗೆ ಪ್ರಾಣಭಯವಿಲ್ಲ. ನಿನಗೆ ಈ ಯಂತ್ರದ ಪಾಶಗಳನ್ನು ಕತ್ತರಿಸಿಕೊಂಡು ಹೋಗಲಿಕ್ಕೆ ಶಕ್ತಿಯಿಲ್ಲ. ನೀನು ನನ್ನನ್ನು ಹಿಂಸಾಮಾಡದೆ ಇದ್ದರೆ ನಿನ್ನ ಪಾಶಗಳನ್ನು ನಾನು ಕತ್ತರಿಸುತ್ತೇವೆ. ನೀನು ಈ ಮರದ ಮೇಲೆ ವಾಸಿಸುತ್ತಿದ್ದಿ. ನಾನು ಕೆಳಗೆ ವಾಸಿಸುತ್ತಿದ್ದೆನು. ನಾವಿಬ್ಬರೂ ಮಿತ್ರರು. ನಾನು ನಿನ್ನನ್ನು ರಕ್ಷಿಸುತ್ತೇನೆ. ನೀನು ನನ್ನನ್ನು ರಕ್ಷಿಸು ಎಂದು ಹೇಳಿತು.

ಅದಕ್ಕೆ ಬೆಕ್ಕು ಮೆಲ್ಲನೆ ಇಲಿಯನ್ನು ನೋಡಿ ತನ್ನ ಅವಸ್ಥೆಯನ್ನು ನೋಡಿಕೊಂಡು 'ನಿನಗೆ ಮಂಗಳವಾಗಲಿ. ನನ್ನ ಜೀವನವನ್ನು ನೀನು ಇಚ್ಛಿಸುವಿಯಷ್ಟೆ! ಏನು ಮಾಡಿದರೆ ಶ್ರೇಯಸ್ಸಾಗುವುದೋ ಹಾಗೆ ಮಾಡು. ನಾನು ತುಂಬಾ ಆಪತ್ತನ್ನು ಹೊಂದಿರುವೆನು. ನೀನೂ ಆಪತ್ತು ಉಳ್ಳವನಾಗಿರುವಿ. ಇಬ್ಬರು, ಆಪತ್ತುಳ್ಳವರಿಗೆ ರಾಜಿಯಾಗಲಿ ವಿಚಾರಮಾಡಬೇಡ. ನಮ್ಮ ಇಬ್ಬರ ಕಾರ್ಯವೂ ಸಿದ್ಧವಾಗಲಿ. ನಾನು ಆಪತ್ತಿನಿಂದ ರಹಿತನಾದರೆ ನೀನು ನನಗೆ ಮಾಡಿದ ಉಪಕಾರವು ವ್ಯರ್ಥವಾಗಲಾರದು. ನಿನ್ನ ಭಕ್ತನಾಗಿದ್ದೇನೆ, ನಿನ್ನ ಶಿಷ್ಯನಾಗಿದ್ದೇನೆ. ನಿನ್ನ ಆಜ್ಞೆಯಂತೆ ಇರುತ್ತೇನೆ. ನಿನ್ನನ್ನೇ ಮೊರೆಹೊಂದಿರುವೆನು' ಎಂದು ಹೇಳಿತು.

ಅದಕ್ಕೆ ಇಲಿಯು 'ನಾನು ನಿನ್ನನ್ನು ಆಶ್ರಯಿಸುತ್ತೇನೆ. ನನಗೆ ಮುಂಗುಸಿಯಿಂದ ಭಯ. ನೀನು ನನ್ನನ್ನು ಕೊಲ್ಲಬೇಡ. ನಾನು ನಿನ್ನನ್ನು ರಕ್ಷಿಸಲಿಕ್ಕೆ ಸಮರ್ಥನಿದ್ದೇನೆ.

ಗೂಗೆಯಿಂದಲೂ ನನ್ನನ್ನು ರಕ್ಷಿಸು. ನಾನು ನಿನ್ನ ಪಾಶಗಳನ್ನು ಕತ್ತರಿಸುತ್ತೇನೆ' ಎಂದು ಹೇಳಿತು.

ಬೆಕ್ಕು ಇಲಿಯ ಮಾತು ಸರಿಯಾಗಿದೆ ಎಂದು ತಿಳಿದುಕೊಂಡು ಸಂತೋಷ ದಿಂದ ನೋಡಿ ಹತ್ತಿರ ಬರಲಿಕ್ಕೆ ಹೇಳಿತು. 'ಮಿತ್ರನೇ ಬೇಗನೆ ಹತ್ತಿರ ಬಾ. ನಿನ್ನ ಅನುಗ್ರಹದಿಂದ ನಾನೂ ಪ್ರಾಣವನ್ನು ಹೊಂದುವೆನು. ಈ ಆಪತ್ತು ಪರಿಹಾರವಾದ ಮೇಲೆ ನಿನಗೆ ಬೇಕಾದ ಪ್ರತ್ಯುಪಕಾರವನ್ನು ಮಾಡುವೆನು' ಎಂದು ಹೇಳಿತು.

ತರುವಾಯ ಇಲಿಯು ಬೆಕ್ಕಿನ ಬಳಿಗೆ ಬಂದಿತು. ಬೆಕ್ಕಿನ ಹೊಟ್ಟೆಯನ್ನು ಆಲಂಗಿಸಿಕೊಂಡು ಮಗುವಿನಂತೆ ಮಲಗಿಬಿಟ್ಟಿತು. ಈರೀತಿಯಾಗಿ ಬೆಕ್ಕಿನ ದೇಹದಲ್ಲಿ ಅಡಗಿಕೊಂಡು ಇಲಿಯನ್ನು ನೋಡಿ ಮುಂಗುಸಿಯೂ ಗೂಗೆಯೂ ಇಲಿಯ ಮೇಲಿನ ಆಸೆಯನ್ನು ಬಿಟ್ಟವು. ಭಯವನ್ನು ಹೊಂದಿದವು. ಅವುಗಳ ಪರಸ್ಪರ ಪ್ರೀತಿಯನ್ನು ನೋಡಿ ಆಶ್ಚರ್ಯಪಟ್ಟವು. ಈರೀತಿಯಾಗಿ ತಮ್ಮ ತಮ್ಮ ಕಾರ್ಯಕ್ಕಾಗಿ ರಾಜಿಮಾಡಿಕೊಂಡಿರುವುದನ್ನು ನೋಡಿ ಗೂಗೆಯೂ ಮುಂಗುಸಿಯೂ ಹೊರಟುಹೋದವು.

ಆಮೇಲೆ ಇಲಿಯು ಮೆಲ್ಲನೆ ಬೆಕ್ಕಿನ ಯಂತ್ರದ ಪಾಶಗಳನ್ನು ಕತ್ತರಿಸಲಿಕ್ಕೆ ಆರಂಭಿಸಿತು. ಬೆಕ್ಕು ಈ ರೀತಿಯಾಗಿ ಮೆಲ್ಲನೆ ಪಾಶವನ್ನು ಕತ್ತರಿಸುತ್ತಿರುವ ಇಲಿಯನ್ನು ಬೇಗನೇ ಕತ್ತರಿಸುವಂತೆ ಅವಸರಪಡಿಸಿತು. ಮಿತ್ರ! ಬೇಗನೇ ಪಾಶಗಳನ್ನು ಕತ್ತರಿಸು. ಈಗಲೇ ಚಂಡಾಲನು ಬರುವನು ಎಂದಿತು. ಆಗ ಇಲಿಯು 'ಸುಮ್ಮನೆ ಇರು. ಅವಸರಪಡಬೇಡ. ನನಗೆ ಸಮಯವು ತಿಳಿಯುವುದು. ಸಮಯವು ಇನ್ನೂ ಮೀರಿಲ್ಲ. ಅಕಾಲದಲ್ಲಿ ನಿನ್ನನ್ನು ಬಿಡಿಸಿದರೆ ನಿನ್ನಿಂದ ನನಗೇ ಆಪತ್ತು ಉಂಟಾಗುವುದು. ಆದುದರಿಂದ ಅವಸರಪಡಬೇಡ. ಚಂಡಾಲನು ಕೈಯಲ್ಲಿ ಶಸ್ತ್ರವನ್ನು ಹಿಡಿದುಕೊಂಡು ಬರುವುದನ್ನು ನೋಡಿದ ಕೂಡಲೇ ಪಾಶವನ್ನೆಲ್ಲಾ ಕತ್ತರಿಸುವೆನು. ಆಗ ನಿನ್ನನ್ನು ಬಿಡಿಸಿದರೆ ಚಂಡಾಲನ ಭಯದಿಂದ ಮರವನ್ನೇ ಹತ್ತಿಹೋಗುವಿ. ಆಗ ನಿನಗೆ ಪ್ರಾಣರಕ್ಷಣೆ ಮಾಡಿಕೊಳ್ಳುವುದಲ್ಲದೆ ಬೇರೆ ಕಾರ್ಯವಿರಲಾರದು. ನೀನು ಮರವನ್ನು ಹತ್ತಿಹೋಗಲು ನಾನೂ ಬಿಲವನ್ನು ಪ್ರವೇಶಿಸುವೆನು' ಎಂದು ಹೇಳಿತು.

ಅದಕ್ಕೆ ಬೆಕ್ಕು 'ಮಿತ್ರರು ಹಾಗೆ ಮಾಡಬಾರದು. ನಾನು ನಿನ್ನ ಕಾರ್ಯವನ್ನು ಅವಸರದಿಂದ ಮಾಡಿದೆನು. ಹಾಗೆಯೇ ನೀನೂ ಮಾಡಬೇಕು. ಅಥವಾ ನೀನೂ ಪೂರ್ವವೈರವನ್ನು ಸ್ಮರಿಸಿಕೊಂಡು ಸಾವಕಾಶವನ್ನು ಮಾಡುವಿಯಾದರೆ ನನ್ನ

ಆಯುಷ್ಯವು ತೀರಿಹೋಗುವುದು. ನಾನು ಏನಾದರೂ ತಿಳಿಯದೆ ಅಪರಾಧವನ್ನು ಮಾಡಿದ್ದ ಪಕ್ಷದಲ್ಲಿ ಅದನ್ನು ನೀನು ಕ್ಷಮಿಸಬೇಕು' ಎಂದು ಹೇಳಿತು.

ಅದಕ್ಕೆ ಇಲಿಯು 'ನಿನ್ನ ಸ್ವಾರ್ಥಕ್ಕಾಗಿ ಹೇಳಿದ ಮಾತನ್ನು ನಾನು ಕೇಳಿದೆನು. ನನ್ನ ಸ್ವಾರ್ಥಕ್ಕಾಗಿ ಹೇಳುವ ಮಾತನ್ನು ಕೇಳು. ಯಾರು ಯಾರಿಗೂ ಕಾರಣವಿಲ್ಲದೆ ಮಿತ್ರರಾಗುವುದೂ ಇಲ್ಲ, ಶತ್ರುಗಳಾಗುವುದೂ ಇಲ್ಲ. ಒಂದು ಪ್ರಯೋಜನದಿಂದಲೇ ಮಿತ್ರರೂ ಶತ್ರುಗಳೂ ಆಗುತ್ತಾರೆ. ಯಾರೂ ತಮ್ಮ ಕಾರ್ಯವಾದ ಮೇಲೆ ತಮಗೆ ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಮಾಡುವುದಿಲ್ಲ ನಿರೀಕ್ಷಿಸುವುದಿಲ್ಲ. ಅದಕ್ಕಾಗಿ ಯಾವ ಕಾರ್ಯವನ್ನು ಸಂಪೂರ್ಣಮಾಡಿ ಮುಗಿಸಬಾರದು. ಆ ಚಂಡಾಲನು ಬರುವ ಸಮಯದಲ್ಲಿ ನಿನ್ನನ್ನು ಬಿಡಿಸಿದ ಪಕ್ಷದಲ್ಲಿ ಭಯದಿಂದ ಮರವನ್ನು ಹತ್ತುವಿ. ನನ್ನನ್ನು ಹಿಡಿಯಲಾರೆ. ಎಲ್ಲಾ ಪಾಶಗಳನ್ನೂ ಕತ್ತರಿಸಿ ಆಯಿತು. ಒಂದು ಪಾಶವು ಮಾತ್ರ ಇದೆ. ಅದನ್ನು ಕತ್ತರಿಸುತ್ತೇನೆ ಎಂದು ಹೇಳಿತು.

ಈರೀತಿಯಾಗಿ ಇಬ್ಬರು ಮಾತಾಡುತ್ತಿರಲು ರಾತ್ರಿಯು ಕಳೆದು ಹೋಯಿತು. ಬೆಕ್ಕಿಗೆ ಅಂಜಿಕೆಯಾಯಿತು. ಬೆಳಗಾಗಲು ಕಪ್ಪಿಗಿರುವ ಭಯಂಕರವಾದ ಅನೇಕ ನಾಯಿಗಳಿಂದ ಕೂಡಿದ ಪರಿಘ ಎಂದು ಹೆಸರುಳ್ಳ ಚಂಡಾಲನು ಕೈಯಲ್ಲಿ ಆಯುಧವನ್ನು ಹಿಡಿದುಕೊಂಡು ಕಾಣಿಸಿದನು. ಯಮದೂತನಂತೆ ಇರುವ ಆ ಚಂಡಾಲನನ್ನು ನೋಡಿ ಭಯಪಟ್ಟು ಇಲಿಯೊಡನೆ 'ಮಿತ್ರ! ಈಗ ಏನು ಮಾಡುವಿ?' ಎಂದು ಕೇಳಿತು. ತರುವಾಯ ಇಲಿಯು ಉಳಿದ ಒಂದು ಪಾಶವನ್ನು ಕತ್ತರಿಸಿತು. ಕೂಡಲೇ ಬೆಕ್ಕು ಮರದ ಮೇಲೆ ಹತ್ತಿ ಓಡಿಹೋಯಿತು. ಇಲಿಯೂ ಆಘೋರ ಶತ್ರುವಿನಿಂದ ಬಿಡಲ್ಪಟ್ಟ ತನ್ನ ಬಿಲವನ್ನು ಪ್ರವೇಶಿಸಿತು. ಬೆಕ್ಕು ಕೊಂಬೆಯನ್ನು ಹೊಂದಿತು. ಚಂಡಾಲನು ಬಂದು ಯಂತ್ರವನ್ನು ನೋಡಿ ನಿರಾಶನಾಗಿ ತನ್ನ ಮನೆಗೆ ಹೋದನು. ತರುವಾಯ ಉಪಾಯದಿಂದ ಇಲಿಯನ್ನು ಹೊರಗೆ ಬರುವಂತೆ ಬಹಳವಾಗಿ ಹೇಳಿತು. ಆದರೆ ಇಲಿಯು ಕಾರಣವನ್ನು ತಿಳಿಸಿ ಹೊರಗೆ ಬರಲೇ ಇಲ್ಲ. ಆದುದರಿಂದ ಸಮಯಬಂದಾಗ ಶತ್ರುವಿನೊಡನೆಯೂ ರಾಜಿಮಾಡಿಕೊಳ್ಳಬೇಕು.



# ನಾಯಿಯ ಕಥೆ [1]

ಒಬ್ಬ ಋಷಿಗಳು ಮನುಷ್ಯ ಸಂಚಾರವಿಲ್ಲದಿರುವ ಒಂದು ದೊಡ್ಡ ಕಾಡಿನಲ್ಲಿ ಗೆಡ್ಡೆ ಹಣ್ಣುಗಳನ್ನು ತಿನ್ನುತ್ತಾ ತಪಸ್ಸು ಮಾಡುತ್ತಾ ಇದ್ದರು. ವೇದವನ್ನು ಉಚ್ಚರಿಸುತ್ತಾ ಇದ್ದರು. ಉತ್ತಮ ಸ್ವಭಾವವುಳ್ಳ ಅವರು ಕೂತಿರಲು ಅವರ ಸುತ್ತಲೂ ಸಿಂಹ ಹುಲಿ ಶರಭ ಆನೆ ಖಡ್ಗಮೃಗ ಕರಡಿ ಇತ್ಯಾದಿ ಭಯಂಕರ ಪ್ರಾಣಿಗಳು ಸುತ್ತಲೂ ಸಮೀಪದಲ್ಲಿ ಬಂದಿರುವುವು. ನೀವು ಸುಖವಾಗಿರುವಿರಾ ಎಂದು ಋಷಿಗಳು ಪ್ರಶ್ನೆ ಮಾಡಿದರೆ ಆ ದುಷ್ಟಮೃಗಗಳು ನಾವು ಸುಖವಾಗಿರುವೆವು ಎಂದು ಹೇಳುತ್ತಿದ್ದವು. ಒಂದು ನಾಯಿಯು ಆ ಮುನಿಗಳ ಹತ್ತಿರವೇ ಯಾವಾಗಲೂ ಇರುತ್ತಿತ್ತು. ಅವರನ್ನು ಬಿಡಲೇ ಇಲ್ಲ, ಆ ಮುನಿಗಳ ಪಾದಮೂಲದಲ್ಲಿಯೇ ಇದ್ದು ಮನುಷ್ಯರಂತೆಯೇ ಅವರಲ್ಲಿ ಸ್ನೇಹವುಳ್ಳದ್ದಾಗಿತ್ತು.

ಹೀಗಿರುವಾಗ ಒಂದುದಿನ ರಕ್ತಭೋಜನ ಮಾಡುವ ಚಿಕ್ಕಹುಲಿಯೊಂದು ಆ ನಾಯಿಯನ್ನು ತಿನ್ನಬೇಕೆಂದು ಗರ್ಜಿಸುತ್ತಾ ಬಾಯಿತೆರೆದುಕೊಂಡು ಬಂದಿತು. ಅದನ್ನು ನೋಡಿ ನಾಯಿಯು ಮುನಿಗಳೊಡನೆ ಈ ಚಿಕ್ಕಹುಲಿಯು ನನ್ನನ್ನು ತಿನ್ನಲಿಕ್ಕೆ ಬರುತ್ತಿರುವುದು. ಇದರಿಂದ ನನಗೆ ತುಂಬಾ ಭಯವಾಗುತ್ತದೆ ಎಂದಿತು. ಅದಕ್ಕೆ ಮುನಿಗಳು 'ಮಗು! ನೀನು ಈ ಚಿಕ್ಕಹುಲಿಯಿಂದ ಸಾಯುವೆನೆಂದು ಭಯಪಡ ಬೇಡ. ನೀನು ಈ ನಾಯಿಯ ರೂಪವನ್ನು ಬಿಟ್ಟು ಚಿಕ್ಕಹುಲಿಯಾಗುವೆ ಎಂದು ಹೇಳಿದರು. ಕೂಡಲೇ ಆ ನಾಯಿಯು ವಿಚಿತ್ರವಾದ ಅಂಗವುಳ್ಳ ಚಿಕ್ಕಹುಲಿ ಯಾಯಿತು. ವನದಲ್ಲಿ ಭಯರಹಿತವಾಗಿ ಇತ್ತು. ಆಗ ಅಲ್ಲಿಗೆ ಬಂದ ಚಿಕ್ಕಹುಲಿಯು ಇದನ್ನು ನೋಡಿ ತನಗೆ ಸಜಾತೀಯನೆಂದು ವಿರೋಧವನ್ನು ಮಾಡದೆ ಹೊರಟುಹೋಯಿತು. ತರುವಾಯ ಒಂದು ದೊಡ್ಡ ಹುಲಿಯು ಈ ಚಿಕ್ಕಹುಲಿಯನ್ನು ನೋಡಿ ತಿನ್ನುತ್ತೇನೆ ಎಂದು ಬಂದಿತು. ಆಗ ಚಿಕ್ಕಹುಲಿಯು ಮುನಿಗಳನ್ನು ಮೊರೆಹೊಂದಿತು ಆಗ ಮುನಿಗಳು ಅದನ್ನು ದೊಡ್ಡ ಹುಲಿಯನ್ನಾಗಿ ಮಾಡಿದರು. ತರುವಾಯ ಬಂದ ಹುಲಿಯು ಹಾಗೆಯೇ ಹೊರಟುಹೋಯಿತು. ಈರೀತಿಯಾಗಿ ನಾಯಿಯು ದೊಡ್ಡಹುಲಿಯಾಗಿ ಆ ಕಾಡಿನಲ್ಲಿ ವಾಸಮಾಡುತ್ತಿತ್ತು. ಆ ಹುಲಿಯು ಆಶ್ರಮದ ಸಮೀಪದಲ್ಲೇ ಇದ್ದುಕೊಂಡು ಸತ್ತುಹೋಗಿರುವ ಮೃಗಗಳನ್ನು ತಿನ್ನುತ್ತಾ ಸುಖವಾಗಿತ್ತು.

---

1. ಮಭಾ. ಶಾಂ.ಪ. ಅ-116, 117

ಹೀಗಿರಲು ಒಂದು ದೊಡ್ಡ ಭಯಂಕರವಾದ ಆನೆಯು ಅಲ್ಲಿಗೆ ಬಂದಿತು. ಆಗ ಹುಲಿಯು ಬರುತ್ತಿರುವ ಆನೆಯಿಂದ ಭಯಪಟ್ಟು ಮುನಿಗಳನ್ನು ಮೊರೆಹೊಂದಿತು. ಆಗ ಮುನಿಗಳು ಅದನ್ನು ದೊಡ್ಡ ಆನೆಯನ್ನಾಗಿ ಮಾಡಿದರು. ದೊಡ್ಡ ಮೇಘದಂತೆ ಇರುವ ಈ ದೊಡ್ಡ ಆನೆಯನ್ನು ನೋಡಿ ಬಂದ ಆನೆಯು ಭಯದಿಂದ ಓಡಿಹೋಯಿತು. ತರುವಾಯ ಈ ಆನೆಯು ಸಂತೋಷದಿಂದ ಅಲ್ಲಿ ಸಂಚರಿಸುತ್ತಿತ್ತು. ತರುವಾಯ ಅಲ್ಲಿಗೆ ಒಂದು ಭಯಂಕರವಾದ ಸಿಂಹವು ಬಂದಿತು. ಅದನ್ನು ನೋಡಿ ಆನೆಯು ಮುನಿಗಳನ್ನು ಮೊರೆಹೊಂದಿತು. ಮುನಿಗಳು ಅದನ್ನು ಸಿಂಹವನ್ನಾಗಿ ಮಾಡಿದರು. ಬಂದ ಸಿಂಹವನ್ನು ಅದು ಲಕ್ಷ್ಯವೇ ಮಾಡಲಿಲ್ಲ. ತರುವಾಯ ಬಂದ ಸಿಂಹವು ಹೊರಟುಹೋಯಿತು. ತರುವಾಯ ಸಿಂಹವು ಆಶ್ರಮದಲ್ಲಿಯೇ ಸುಖವಾಗಿ ವಾಸಮಾಡಿಕೊಂಡಿತ್ತು. ಅಲ್ಲಿಗೆ ಒಂದು ಕ್ಷುದ್ರಮೃಗವೂ ಬರುತ್ತಿರಲಿಲ್ಲ. ಒಂದುದಿನ ಅಲ್ಲಿಗೆ ಎಂಟು ಕಾಲುಉಳ್ಳ ಮೇಲೆ ಕಣ್ಣುಗಳುಳ್ಳ ಸಿಂಹವನ್ನು ಕೊಲ್ಲುವ ಶರಭ ಎಂಬ ಮೃಗವು ಬಂದಿತು. ಅದನ್ನು ನೋಡಿ ಸಿಂಹವು ಮುನಿಗಳನ್ನು ಮೊರೆಹೊಂದಿತು. ಆಗ ಮುನಿಗಳು ಅದನ್ನು ಶರಭವನ್ನಾಗಿ ಮಾಡಿದರು. ಬಂದ ಶರಭವು ಬಲಿಷ್ಠವಾಗಿದ್ದ ಈ ಶರಭವನ್ನು ನೋಡಿ ಓಡಿಹೋಯಿತು. ಈರೀತಿಯಾಗಿ ಶರಭವಾದ ನಾಯಿಯು ಮುನಿಗಳ ಹತ್ತಿರವೇ ಸುಖವಾಗಿ ಇರುತ್ತಿತ್ತು.

ತರುವಾಯ ಆ ಶರಭದಿಂದ ಭಯವುಳ್ಳವುಗಳಾಗಿ ಎಲ್ಲಾ ಪ್ರಾಣಿಗಳೂ ಬದುಕುವ ಆಸೆಯಿಂದ ಬೇರೆ ಕಾಡಿಗೆ ಹೋದವು. ಆ ಶರಭವು ನಿತ್ಯವೂ ಪ್ರಾಣಿಗಳನ್ನು ಕೊಂದು ತಿನ್ನುತ್ತಾ ಗೆಡ್ಡೆ ಹಣ್ಣುಗಳಲ್ಲಿ ಆಸೆಪಡಲಿಲ್ಲ. ತರುವಾಯ ಕ್ಷುದ್ರವಾದ ವಿಚಾರವುಳ್ಳ ಆ ಶರಭವು ಆ ಮುನಿಗಳನ್ನು ಕೊಲ್ಲಲಿಕ್ಕೆ ಇಚ್ಛಿಸಿತು. 'ಈ ಮುನಿಗಳು ಕೇವಲ ಮಾತಿನಿಂದಲೇ ನನಗೆ ಈ ಶರಭರೂಪವನ್ನು ಕೊಟ್ಟರು. ಇನ್ನು ಈ ಆಶ್ರಮದಲ್ಲಿ ಅನೇಕ ಭಯವುಳ್ಳಪ್ರಾಣಿಗಳು ಇವೆ. ಅವುಗಳನ್ನು ಈ ಮುನಿಗಳು ಶರಭವನ್ನಾಗಿ ಮಾಡಬಹುದು. ಹಾಗೆಯೇ ಪಕ್ಷಿಗಳಿಗೆಲ್ಲಾ ಗರುಡದೇವರ ಬಲವನ್ನು ಕೊಡಬಹುದು. ಆದುದರಿಂದ ಇತರರಿಗೆ ಮಹಾಬಲ ವನ್ನು ಕೊಡುವ ಪೂರ್ವದಲ್ಲಿಯೇ ಈ ಮುನಿಗಳನ್ನು ಕೊಂದುಬಿಡುವೆನು. ಈ ಮುನಿಗಳನ್ನು ಕೊಂದು ನಾನು ಸುಖವಾಗಿ ಇರಬಹುದು' ಹೀಗೆ ಆ ಶರಭವು ಯೋಚಿಸಿತು. ಆಗ ಇದನ್ನು ತಿಳಿದು ಆ ಮುನಿಗಳು ಕೋಪಿಸಿಕೊಂಡು 'ನಾನು ಅಗ್ನಿಪ್ರಭ ಎಂಬ ಮುನಿಯು. ನೀನು ನಾಯಿಯಾಗಿದ್ದವನು ನನ್ನಿಂದ ಚಿಕ್ಕ ಹುಲಿಯಾಗಿಯೂ ದೊಡ್ಡ

ಹುಲಿಯಾಗಿಯೂ ಆನೆಯಾಗಿಯೂ ಸಿಂಹವಾಗಿಯೂ ಈ ಶರಭವಾಗಿಯೂ ಆಗಿರುವಿ. ನೀನು ನನ್ನನ್ನೇ ಕೊಲ್ಲಲಿಕ್ಕೆ ಇಚ್ಛಿಸುವೆಯಾ? ಪಾಪರಹಿತನಾದ ನನ್ನನ್ನು ನೀನೂ ಕೊಲ್ಲಲು ಬಯಸಿದಿಯಾದ ಕಾರಣ ಪುನಃ ನಾಯಿಯೇ ಆಗುವಿ ಎಂದು ಹೇಳಿದರು.

ಈರೀತಿಯಾಗಿ ಮುನಿಗಳಿಂದ ಶಾಪವನ್ನು ಹೊಂದಿ ಈ ಶರಭನಾಗಿದ್ದವನು ನಾಯಿಯಾಗಿಯೇ ಆದನು. ತರುವಾಯ ನಾಯಿಯಾಗಿ ಪರಮದೈನ್ಯವನ್ನು ಹೊಂದಿತು. ಆ ಮುನಿಗಳು ಹುಂಕಾರವನ್ನು ಮಾಡಲು ಆ ನಾಯಿಯು ಆ ತಪೋವನದಿಂದ ಹೊರಟುಹೋಯಿತು. ಆದುದರಿಂದ ನೀಚರಿಗೆ ಉತ್ತಮ ಅಧಿಕಾರವು ದೊರಕಿದರೆ ನೀಚಕಾರ್ಯವನ್ನೇ ಮಾಡುವರು. ಆದಕಾರಣ ರಾಜನು ಒಳ್ಳೇ ಕುಲದಲ್ಲಿ ಹುಟ್ಟಿದ ಉತ್ತಮರನ್ನು ನೋಡಿಯೇ ಅಧಿಕಾರವನ್ನು ಕೊಡಬೇಕು.



## ನರಿಹದ್ದುಗಳ ಕಥೆ [1]

ವಿದಿಶಾ ಎಂಬ ನಗರದಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಆ ಬ್ರಾಹ್ಮಣನಿಗೆ ಬಹುಕಾಲದ ಮೇಲೆ ಒಬ್ಬ ಮಗನು ಹುಟ್ಟಿದನು. ಆ ಮಗನು ಬಾಲಗ್ರಹದಿಂದ ಮೃತನಾದನು. ಬಂಧುಗಳು ಬಹಳ ದುಃಖವುಳ್ಳವರಾಗಿ ಆ ಚಿಕ್ಕಮಗುವನ್ನು ಹಿಡಿದುಕೊಂಡು ಸ್ಮಶಾನಕ್ಕೆ ಕರೆದುಕೊಂಡು ಹೋದರು. ಅಲ್ಲಿ ಮಗುವಿನ ದೇಹವನ್ನು ಇಟ್ಟು, ಆ ಮಗುವಿನ ಆಟಪಾಟವನ್ನು ವರ್ಣನೆ ಮಾಡುತ್ತಾ ಬಿಟ್ಟುಹೋಗಲು ಅಶಕ್ತರಾಗಿ ಅಳುತ್ತಾ ಕೂತುಕೊಂಡರು. ಅವರು ಅಳುವ ಶಬ್ದವನ್ನು ಕೇಳಿ ಒಂದು ಹದ್ದುಪಕ್ಷಿಯು ಅಲ್ಲಿಗೆ ಬಂದು ನೀವು ಈ ದೇಹವನ್ನು ಇಲ್ಲಿಯೇ ಬಿಟ್ಟು ಬೇಗನೇ ಹೋಗಿರಿ. ಇಲ್ಲಿ ಸಾವಿರಾರು ಹೆಂಗಸರು ಮತ್ತು ಗಂಡಸರ ದೇಹಗಳನ್ನು ತಂದು ಬಂಧುಗಳು ಇಲ್ಲಿಯೇ ಬಿಟ್ಟುಹೋಗುತ್ತಾರೆ. ನೋಡಿರಿ. ಜಗತ್ತಿನಲ್ಲಿ ದುಃಖವೂ ಸುಖವೂ ಎರಡೂ ಇರುವುದು. ಎಲ್ಲರೂ ಆಯುಷ್ಯವು ಮುಗಿದ ಮೇಲೆ ಸಾಯುವರು. ಹದ್ದು ನರಿಗಳಿಂದ ಭಯಂಕರವಾದ ಸರ್ವರಿಗೂ ಭಯಂಕರವಾದ ಈ ಸ್ಮಶಾನದಲ್ಲಿ ಇರಬೇಡಿರಿ. ನಮಗೆ ಬೇಕಾದವನಾಗಲೀ ಬೇಡದಿದ್ದವನೇ ಆಗಲಿ ಇಷ್ಟರವರೆಗೆ ಸತ್ತವನು ಬದುಕಿರುವನಲ್ಲ. ಮನುಷ್ಯಲೋಕದಲ್ಲಿ ಹುಟ್ಟಿದವನು ಪ್ರತಿಯೊಬ್ಬನೂ

1. ಮಭಾ. ಶಾಂ.ಪ. ಅ.153

ಸಾಯಲೇಬೇಕು. ಸತ್ತವನನ್ನು ಯಾರು ಬದುಕಿಸುವರು? ಸೂರ್ಯನು ಮುಳುಗಲಿಕ್ಕೆ ಹೋಗಿರುವನು. ನೀವು ಬೇಗನೆ ಮಗುವಿನ ಮೇಲಿನ ಸ್ನೇಹವನ್ನು ಬಿಟ್ಟು ನಿಮ್ಮ ಮನೆಗೆ ಹೊರಟುಹೋಗಿರಿ.

ಈ ರೀತಿಯಾಗಿ ಹದ್ದು ಹೇಳಲು ಬಂಧುಗಳು ಮಗುವು ಇನ್ನು ಬದುಕಲಾರದು ಎಂದು ನಿಶ್ಚಯಿಸಿ ಮಗುವಿನ ಮೇಲಿನ ಆಸೆಯನ್ನು ಬಿಟ್ಟು ಅಳುತ್ತಾ ಹೋದರು. ಅಷ್ಟರಲ್ಲಿ ಕಾಗೆಯ ರೆಕ್ಕೆಯಂತೆ ಕಪ್ಪು ಬಣ್ಣವುಳ್ಳ ಒಂದು ನರಿಯು ಗುಹೆಯಿಂದ ಹೊರಗೆ ಬಂದು ಹೋಗುತ್ತಿರುವ ಬಂಧುಗಳನ್ನು ನೋಡಿ 'ಮನುಷ್ಯರಿಗೆ ಸ್ವಲ್ಪವೂ ದಯೆಯಿಲ್ಲ. ಇನ್ನೂ ಸೂರ್ಯನು ಮುಳುಗಲಿಲ್ಲ. ಭಯವನ್ನು ಹೊಂದಬೇಡಿ. ಮಗುವಿನ ಮೇಲಿನ ಸ್ನೇಹವನ್ನು ಬಿಡಬೇಡಿ. ಇನ್ನೊಂದು ಮುಹೂರ್ತದಲ್ಲಿ ನಿಮ್ಮ ಮಗುವು ಬದುಕಬಹುದು. ನೆಲದ ಮೇಲೆ ದರ್ಭೆಯನ್ನು ಹಾಸಿ ಅದರ ಮೇಲೆ ಮಗುವನ್ನು ಮಲಗಿಸಿ ಮಗುವಿನ ಮೇಲಿನ ಸ್ನೇಹವನ್ನು ಬಿಟ್ಟು ದಯಾಹೀನವಾಗಿ ಹೇಗೆ ಹೋಗುವಿರಿ? ಯಾವ ಮಗುವಿನ ತೊದಲು ಮಾತನ್ನು ಕೇಳಿ ಸಂತೋಷಪಡುತ್ತಿದ್ದಿರೋ ಆ ಮಗುವಿನಲ್ಲಿ ನಿಮಗೆ ಸ್ವಲ್ಪವೂ ದಯೆಯು ಬೇಡವೇ? ಪಶುಪಕ್ಷಿಗಳಿಗೂ ಕೂಡ ಮಕ್ಕಳ ಮೇಲೆ ಎಷ್ಟು ಪ್ರೇಮವಿದೆ? ಈ ವಂಶಕ್ಕೆ ಕಾರಣನಾದ ಮಗನನ್ನು ಬಿಟ್ಟು ಎಲ್ಲಿಗೆ ಹೋಗುವಿರಿ? ಬಹುಹೊತ್ತು ಕಣ್ಣೀರು ಸುರಿಸಿರಿ. ಬಹುಹೊತ್ತು ಸ್ನೇಹದಿಂದ ನೋಡುತ್ತಾ ಇರಿ. ಇಂತಹ ಮಗುವನ್ನು ಬಿಟ್ಟು ಹೇಗೆ ಹೋಗುವಿರಿ? ಎಂದು ಹೇಳಲು ಬಂಧುಗಳು ನರಿಯ ಮಾತನ್ನು ಕೇಳಿ ಅಳುತ್ತಾ ಮಗುವಿನ ಸಮೀಪಕ್ಕೆ ಬಂದರು.

ಆಗ ಹದ್ದು ಪಕ್ಷಿಯು ಅಲ್ಪಬುದ್ಧಿಯುಳ್ಳ ಕ್ರೂರವಾದ ಕ್ಷುದ್ರನಾದ ಈ ನರಿಯ ಮಾತನ್ನು ಕೇಳಿ ನೀವು ಏಕೆ ಹಿಂದೆ ಬಂದಿರಿ? ಈ ಹೆಣವನ್ನು ನೋಡಿಕೊಂಡು ಏಕೆ ಅಳುವಿರಿ? ತಪಸ್ಸು ಮಾಡಿರಿ. ತಪಸ್ಸು ಮಾಡಿದರೆ ಪಾಪವು ಪರಿಹಾರವಾಗುವುದು. ತಪಸ್ಸಿನಿಂದ ಎಲ್ಲಾ ಫಲವೂ ಸಿಗುವುದು. ನೀವು ಅಳುವುದರಿಂದ ಏನು ಫಲವಿದೆ? ಹಣವು ದನವು ಮಕ್ಕಳು ಎಲ್ಲವೂ ತಪಸ್ಸಿನಿಂದ ಸಿಗುವುದು. ತಾವು ಮಾಡಿದ ಕರ್ಮವನ್ನು ಅನುಸರಿಸಿ ಸುಖವೋ ದುಃಖವೋ ಉಂಟಾಗುವುದು. ತಂದೆಯ ಕರ್ಮದ ಫಲವು ಮಗನಿಗಿಲ್ಲ. ಮಗನ ಕರ್ಮದ ಫಲವು ತಂದೆಗಿಲ್ಲ. ಆದುದರಿಂದ ಧರ್ಮವನ್ನು ಮಾಡಿರಿ. ಅಧರ್ಮವನ್ನು ಮಾಡಬೇಡಿರಿ. ಶೋಕವನ್ನು ಬಿಡಿರಿ. ಮಗುವಿನ ಮೇಲಿರುವ ಪ್ರೇಮವನ್ನು ಬಿಡಿರಿ. ಇಲ್ಲಿ ಯಾವ ಬಾಂಧವರೂ ಬಂದು ನಿಲ್ಲುವುದಿಲ್ಲ. ಎಲ್ಲರೂ ಕಣ್ಣೀರು ಸುರಿಸುತ್ತಾ ಸ್ನೇಹವನ್ನು ಬಿಟ್ಟು ಹೋಗುವರು.

ಜ್ಞಾನಿಯಾಗಲೀ ಅಜ್ಞಾನಿಯಾಗಲೀ ಹಣವಂತನಾಗಲೀ ದರಿದ್ರನಾಗಲೀ ಎಲ್ಲರೂ ಕಾಲವಶವನ್ನು ಹೊಂದುವರು. ಅತ್ತು ಏನು ಮಾಡುವಿರಿ? ಸತ್ತಮಗುವನ್ನು ಕುರಿತು ಏಕೆ ಅಳುವಿರಿ? ಸರ್ವರೂ ಕಾಲಾಧೀನರು. ಯೌವನವುಳ್ಳವರನ್ನೂ ಬಾಲಕರನ್ನೂ ಮುದುಕರನ್ನೂ ಗರ್ಭದಲ್ಲಿ ಇದ್ದವರನ್ನೂ ಮೃತ್ಯುವು ನುಂಗುವುದು ಎಂದು ಹೇಳಿತು.

ಅದಕ್ಕೆ ನರಿಯು 'ಆಹಾ! ಈ ಅಲ್ಪಬುದ್ಧಿಯುಳ್ಳ ಹದ್ದು ನಿಮಗೆ ಮಗುವಿನ ಮೇಲಿನ ಸ್ನೇಹವನ್ನೇ ಕೆಡಿಸಿತಲ್ಲಾ! ಹೋಗಬೇಡಿರಿ. ನಾವು ಪ್ರಯತ್ನವನ್ನು ಮಾಡಬೇಕು. ಅದರಿಂದ ದೇವತಾನುಗ್ರಹದಿಂದ ಕಾರ್ಯಸಿದ್ಧಿಯಾಗುವುದು. ನಿಮ್ಮ ಮಗುವನ್ನು ನೋಡಿ ನನಗೂ ಕಣ್ಣೀರು ಬರುತ್ತದೆ. ನಿಮ್ಮ ಮಾಂಸದಿಂದಲೇ ಹುಟ್ಟಿದ ಪಿತೃಗಳ ವಂಶಕ್ಕೆ ಕಾರಣನಾದ ಮಗುವನ್ನು ಈ ವನದಲ್ಲಿ ಬಿಟ್ಟು ಎಲ್ಲಿಗೆ ಹೋಗುವಿರಿ? ಅಥವಾ ಇನ್ನೂ ಸೂರ್ಯನು ಮುಳುಗಲಿಲ್ಲ. ಸೂರ್ಯನು ಮುಳಿಗಿದ ಮೇಲೆ ಬೇಕಾದರೆ ಮಗುವನ್ನು ತೆಗೆದುಕೊಂಡು ಹೋಗಿರಿ. ಅಥವಾ ಇಲ್ಲಿಯೇ ಇರಿ' ಎಂದಿತು.

ಅದಕ್ಕೆ ಹದ್ದು 'ನಾನು ಹುಟ್ಟಿ ಸಾವಿರ ವರ್ಷಕ್ಕಿಂತ ಹೆಚ್ಚಿಗೆಯೇ ಆಯಿತು. ನಾನು ಇಷ್ಟರವರೆಗೆ ಸತ್ತ ಹೆಂಗಸೋ ಗಂಡಸೋ ಬದುಕಿದ್ದನ್ನು ನೋಡಲಿಲ್ಲ. ಎಷ್ಟೋ ಜನರು ಗರ್ಭದಲ್ಲಿಯೇ ಸಾಯುತ್ತಾರೆ. ಕೆಲವರು ಹುಟ್ಟಿದ ಕೂಡಲೇ ಸಾಯುವರು. ನಡೆಯುತ್ತಾ ಸಾಯುವರು. ಯೌವನದಲ್ಲಿ ಸಾಯುವರು. ಎಲ್ಲರ ಭಾಗ್ಯಗಳು ಅನಿತ್ಯಗಳು. ಹೆಂಡತಿ ಮಕ್ಕಳು ಬಂಧುಗಳಿಗಿಂತ ರಹಿತರಾಗಿ ಎಷ್ಟು ಜನರು ಇಲ್ಲಿಗೆ ಬಂದು ನಿತ್ಯವೂ ಅಳುತ್ತಾ ಹೋಗುವುದಿಲ್ಲ? ಆದುದರಿಂದ ನೀವೂ ಕಾಂತಿಹೀನವಾದ ಕಟ್ಟಿಗೆಯಂತೆ ಇರುವ ಈ ಶಿಶುವಿನ ದೇಹವನ್ನು ಬಿಟ್ಟುಹೋಗಿರಿ. ಕೂಸು ಮೃತವಾಯಿತು. ಒಂದಿಷ್ಟು ಕಣ್ಣೀರು ಸುರಿಸಿ ಹೊರಟುಹೋಗಬಾರದೇ? ನೀವು ಹೀಗೆ ಅಳುತ್ತಾ ಕೂತರೂ ನಿಮ್ಮ ಮಗನು ಕಣ್ಣಿನಿಂದ ನೋಡಲಾರನು. ಕಿವಿಯಿಂದ ಕೇಳಲಾರನು. ಆದುದರಿಂದ ಇವನನ್ನು ಬಿಟ್ಟು ನೀವು ಮನೆಗೆ ಯಾಕೆ ಹೋಗುವುದಿಲ್ಲ?' ಎಂದು ಹೇಳಿತು. ಈ ಪ್ರಕಾರವಾಗಿ ಹದ್ದಿನ ಮಾತನ್ನು ಕೇಳಿ ಬಂಧುಜನರು ಮಗುವಿನ ಹತ್ತಿರದಿಂದ ಬಿಟ್ಟು ಪುನಃ ಹೊರಟರು.

ಆಗ ನರಿಯು 'ಈ ಬಂಗಾರದಂತೆ ಇರುವ ಬಂಗಾರದಿಂದ ಅಲಂಕೃತವಾದ ಈ ಮಗುವನ್ನು ಬಿಟ್ಟು ಹೇಗೆ ಹೋಗುವಿರಿ? ಹದ್ದಿನ ಮಾತನ್ನು ಕೇಳಿ ಪಿತೃಗಳ ಪಿಂಡಕ್ಕೆ ಕಾರಣವಾದ ಈ ಮಗುವನ್ನು ಬಿಟ್ಟು ಹೋಗುವಿರಾ? ಶಂಬೂಕ ಎಂಬ ಶೂದ್ರನನ್ನು ಕೊಂದು ರಾಮಚಂದ್ರದೇವರು ಬ್ರಾಹ್ಮಣಪುತ್ರನನ್ನು ಬದುಕಿಸಲಿಲ್ಲವೇ? ಶ್ವೇತ್ಯ

ಎಂಬ ರಾಜನ ಮಗನನ್ನು ಸತ್ತವನನ್ನು ನಾರದರು ಬದುಕಿಸಲಿಲ್ಲವೇ? ಅದೇರೀತಿ ನೀವು ಇಲ್ಲಿ ಅಳುತ್ತಾ ಇದ್ದರೆ ಯಾರಾದರೂ ಒಬ್ಬ ಸಿದ್ಧಪುರುಷನೋ ಮುನಿಯೋ ದೇವತೆಯೋ ನಿಮ್ಮ ಮಗುವನ್ನು ಬದುಕಿಸಬಹುದು' ಎಂದು ಹೇಳಿತು.

ಈ ಮಾತನ್ನು ಕೇಳಿ ಬಂಧುಗಳು ಪುನಃ ಬಂದು ಮಗುವಿನ ತಲೆಯನ್ನು ತೊಡೆಯ ಮೇಲೆ ಇಟ್ಟುಕೊಂಡು ಅಳುತ್ತಾ ಕೂತರು. ಅವಳು ಶಬ್ದವನ್ನು ಕೇಳಿ ಹದ್ದು ಬಂದು 'ಯಾಕೆ ಸುಮ್ಮನೆ ಅಳುವಿರಿ. ನಿಮಗೇಕೆ ಇಷ್ಟು ಅಪನಂಬಿಕೆ? ನಿಮ್ಮ ಮಗು ಪುನಃ ಎಲ್ಲಿ ಬದುಕುವುದು? ಈ ನರಿಯ ಮಾತಿನಿಂದ ನಿಮ್ಮ ಮಗುವು ಬದುಕಲಾರದು. ರುದ್ರದೇವರೋ ಬ್ರಹ್ಮದೇವರೋ ಪರಮಾತ್ಮನೋ ವರಕೊಟ್ಟರೆ ಮಾತ್ರ ಬದುಕಬಹುದು. ನೀವು ಸುಮ್ಮನೆ ಕಣ್ಣೀರು ಸುರಿಸುವುದರಿಂದ ದೀರ್ಘಶ್ವಾಸ ಬಿಡುವುದರಿಂದ ಗಟ್ಟಿಯಾಗಿ ಅಳುವುದರಿಂದ ನಿಮ್ಮ ಮಗುವು ಬದುಕಲಾರದು. ನಾನು ಈ ನರಿಯು ನೀವು ಎಲ್ಲರೂ ಪುಣ್ಯಪಾಪಾನುಸಾರವಾಗಿ ಇರುವವರು. ಅಪ್ರಿಯವನ್ನು ಕಠಿಣ ಮಾತನ್ನು ಪರದ್ರೋಹವನ್ನೂ ಪರಸ್ತ್ರೀಯರನ್ನೂ ಅಧರ್ಮವನ್ನೂ ಸುಳ್ಳು ಹೇಳುವುದನ್ನೂ ಪಂಡಿತನು ದೂರದಲ್ಲಿಯೇ ಬಿಡಬೇಕು. ಧರ್ಮ ಸತ್ಯ ನ್ಯಾಯ ಪ್ರಾಣಿಗಳಲ್ಲಿ ದಯೆ ಕಪಟ ಇಲ್ಲದೆ ಇರುವಿಕೆ ಇವುಗಳನ್ನೆಲ್ಲಾ ಪ್ರಯತ್ನದಿಂದ ಸಂಪಾದಿಸಿರಿ. ನೀವು ಅಳುವುದನ್ನು ಈ ಮಗುವು ಕೇಳುವುದಿಲ್ಲ. ನಿಮ್ಮನ್ನು ನೋಡುವುದಿಲ್ಲ. ಈ ಹೆಣದ ಮೇಲೆ ಸುಮ್ಮನೆ ಅತ್ತು ಏನು ಮಾಡುವಿರಿ?' ಎಂದು ಹೇಳಿತು. ಆ ಮಾತನ್ನು ಕೇಳಿ ಬಂಧುಗಳು ಮಗುವಿನ ದೇಹವನ್ನು ಭೂಮಿಯಲ್ಲಿ ಇಟ್ಟು ಅಳುತ್ತಾ ಹೋಗಲಿಕ್ಕೆ ಆರಂಭಿಸಿದರು.

ಆಗ ನರಿಯು ಬಂದು 'ಈ ಮನುಷ್ಯರೇ ಕ್ರೂರ ಸ್ವಭಾವವುಳ್ಳವರು. ಇವರನ್ನು ನೋಡಿದರೇ ನನಗೆ ರುಚಿಸುವುದಿಲ್ಲ. ಈ ಹದ್ದಿನ ಮಾತನ್ನು ಕೇಳಿ ಬುದ್ಧಿಯಿಲ್ಲದವರಂತೆ ಹೋಗುವಿರಲ್ಲಾ! ಮಗುವಿನ ಮೇಲಿನ ಪ್ರೇಮವನ್ನು ಬಿಟ್ಟು ಹೇಗೆ ಹೋಗುವಿರಿ? ಈ ಲೋಕದಲಿ ಸುಖದ ಮೇಲೆ ದುಃಖದ ಮೇಲೆ ಸುಖವೂ ಬರುತ್ತಿರುವುದು. ಈ ಲೋಕದಲ್ಲಿ ಯಾವಾಗಲೂ ಸುಖವೇ ಇರಲಾರದು. ಬಂಗಾರದಂತೆ ಇರುವ ಈ ಮಗುವನ್ನು ನೆಲದ ಮೇಲೆ ಇಟ್ಟು ಹೇಗೆ ಹೋಗುವಿರಿ? ಈ ಮಗುವನ್ನು ನೋಡುವಾಗ ಬದುಕಿರುವಂತೆಯೇ ತೋರುತ್ತದೆ. ಪುತ್ರಶೋಕ ದಿಂದ ಪೀಡಿತರಾಗಿ ಬದುಕುವುದಕ್ಕಿಂತ ನೀವು ಸಾಯುವುದೇ ಲೇಸು. ಅಲ್ಪಬುದ್ಧಿಯುಳ್ಳವರಂತೆ ಈ ಮಗುವನ್ನು ಬಿಟ್ಟು ಎಲ್ಲಿಗೆ ಹೋಗುವಿರಿ? ಎಂದಿತು.

ಈ ರೀತಿಯಾಗಿ ಹಗಲಲ್ಲಿಯೇ ಬಂಧುಗಳು ಹೊರಟುಹೋದರೆ ಹದ್ದು ಆ

ಹೆಣವನ್ನು ತಿಂದು ಬಿಡುವುದೆಂದೂ, ರಾತ್ರಿಯಾದರೆ ಹದ್ದು ಹೊರಟುಹೋಗಲು ತಾನೇ ತಿನ್ನಬಹುದೆಂದು ನರಿಯು ಬಂಧುಗಳನ್ನು ಅಲ್ಲಿಯೇ ಇರುವಂತೆ ಹೇಳಿತು.

ಆಗ ಹದ್ದು ಪುನಃ 'ಈ ವನವು ಪ್ರೇತಗಣಗಳಿಂದ ಸೇವಿತವಾದದ್ದು. ಇಲ್ಲಿಗೆ ಅನೇಕ ರಾಕ್ಷಸರು ಯಕ್ಷರೂ ಸಂಚರಿಸುವರು. ಅತಿಭಯಂಕರವಾದದ್ದು. ಇಲ್ಲಿಯೇ ಶವವನ್ನು ಬಿಟ್ಟು ಪ್ರೇತಕಾರ್ಯವನ್ನು ಮಾಡಿರಿ. ಸೂರ್ಯನು ಮುಳುಗುವ ಮೊದಲೇ ಹೊರಟುಹೋಗಿರಿ. ಹದ್ದುಗಳು ಕ್ರೂರವಾಗಿ ಕೂಗುತ್ತವೆ. ನರಿಗಳು ಕೂಗುತ್ತವೆ. ಸಿಂಹಗಳು ಗರ್ಜನೆ ಮಾಡುತ್ತವೆ. ಈಗಲೇ ಸೂರ್ಯನು ಮುಳುಗುವನು. ಹೆಣವು ಸುಡುವ ಹೊಗೆಯಿಂದ ಮರಗಳೆಲ್ಲಾ ನೀಲವಾಗಿ ಕಾಣುವುವು. ಸ್ಮಶಾನದಲ್ಲಿ ಆಹಾರ ರಹಿತ ದೇವತೆಗಳು ಗರ್ಜನೆ ಮಾಡುವರು. ಎಲ್ಲರೂ ಮಾಂಸ ಭಕ್ಷಣೆ ಮಾಡುವವರು. ನೀವು ಇಲ್ಲಿಯೇ ಇದ್ದರೆ ನಿಮ್ಮನ್ನು ತಿಂದು ಹಾಕುವರು. ಈ ನರಿಯ ಮಾತನ್ನು ಕೇಳಿ ಇಲ್ಲಿಯೇ ಇದ್ದರೆ ಪ್ರಾಣವನ್ನು ಕಳೆದುಕೊಳ್ಳುವಿರಿ' ಎಂದು ಹೇಳಿತು. ಹದ್ದಿಗೆ ಸೂರ್ಯನು ಮುಳುಗಿದರೆ ಕಣ್ಣು ಕಾಣಿಸುವುದಿಲ್ಲ. ಆದುದರಿಂದ ಮೊದಲೇ ಬಂಧುಗಳು ಹೊರಟುಹೋದರೆ ತಾನು ಆ ಹೆಣವನ್ನು ತಿನ್ನಬಹುದೆಂದು ಬೇಗನೇ ಹೋಗಿರಿ ಎಂದು ಈಪ್ರಕಾರವಾಗಿ ಉಪದೇಶಿಸುತ್ತಿತ್ತು.

ಅದಕ್ಕೆ ನರಿಯು 'ನೀವು ಹೋಗಬೇಡಿರಿ. ನಿಮಗೆ ಭಯವು ಬೇಡ. ಇನ್ನೂ ಸೂರ್ಯನು ಮುಳಗಲಿಲ್ಲ. ಸೂರ್ಯನು ಮುಳುಗುವವರೆಗೆ ಮಗುವಿನ ಮೇಲಿನ ಪ್ರೇಮದಿಂದ ಇಲ್ಲೇ ಇರಿ. ಅಳುತ್ತಾ ಕೂತುಕೊಂಡಿರಿ. ಈ ಹದ್ದಿನ ಮಾತು ಕೇಳಿದರೆ ನಿಮಗೆ ಮಗು ಇಲ್ಲವೆಂದು ಆಗುತ್ತದಷ್ಟೆ!' ಎಂದಿತು.

ಈ ರೀತಿಯಾಗಿ ಹಸಿವೆಯಿಂದ ಕೂಡಿರುವ ಹದ್ದು ನರಿಗಳು ತಮ್ಮ ಕಾರ್ಯಕ್ಕಾಗಿ ಶಾಸ್ತ್ರವನ್ನು ಅನುಸರಿಸಿ ಹೇಳುತ್ತಿದ್ದವು. ಅವುಗಳ ಮಾತನ್ನು ಕೇಳಿ ಆ ಬಂಧುಗಳು ಒಂದು ಸಲ ಅಲ್ಲಿಂದ ಹೊರಟುಹೋಗುವರು. ಮತ್ತೊಂದು ಸಲ ಅಲ್ಲಿಗೆ ಬರುವರು. ಈ ರೀತಿಯಾಗಿ ಮಾಡುತ್ತಾ ಇದ್ದರು. ಈರೀತಿಯಾಗಿ ನರಿಯೂ ಹದ್ದೂ ವಿವಾದ ಮಾಡುತ್ತಿರಲು ಬಾಂಧವರು ಅಳುತ್ತಿರಲು ಪಾರ್ವತೀದೇವಿಯ ರಿಂದ ಪ್ರೇರಿತರಾಗಿ ಕರುಣೆಯುಳ್ಳವರಾಗಿ ರುದ್ರದೇವರು ಪ್ರತ್ಯಕ್ಷವಾಗಿ ಆ ಬಂಧುಗಳ ಹತ್ತಿರ ಬಂದು ಬೇಕಾದ ವರವನ್ನು ಕೇಳಿಕೊಳ್ಳಿರಿ ಎಂದರು. ಆಗ ಅವರು ನಮಸ್ಕಾರವನ್ನು ಮಾಡಿ ನಮ್ಮ ಮಗನಿಗೆ ಜೀವದಾನವನ್ನು ಮಾಡಬೇಕೆಂದು ಬೇಡಿಕೊಂಡರು. ರುದ್ರದೇವರು ಆ ಮಗುವಿಗೆ ಅನೇಕ ನೂರುವರ್ಷ

ಆಯುಷ್ಯವನ್ನು ಕೊಟ್ಟರು. ಹದ್ದು ಪಕ್ಷಿಗೂ ನರಿಗೂ ಹಸಿವೆಯುಂಟಾಗದಂತೆ ವರವನ್ನು ಕೊಟ್ಟರು. ತರುವಾಯ ಅವರು ರುದ್ರದೇವರಿಗೆ ನಮಸ್ಕರಿಸಿ ಕೃತಾರ್ಥರಾಗಿ ಸಂತೋಷವುಳ್ಳವರಾಗಿ ಹೊರಟುಹೋದರು.

ಈ ರೀತಿಯಾಗಿ ಬಂಧುಗಳು ರುದ್ರದೇವರಿಂದ ಅನುಗ್ರಹವನ್ನು ಪಡೆದು ದುಃಖದಿಂದ ಇದ್ದವರು ಸುಖವನ್ನು ಹೊಂದಿದರು. ಮಗುವನ್ನು ಬದುಕಿಸಿದ್ದರಿಂದ ಆಶ್ಚರ್ಯವುಳ್ಳವರಾಗಿಯೂ ಸಂತೋಷವುಳ್ಳವರಾಗಿಯೂ ಆದರು. ತರುವಾಯ ಮಗುವನ್ನು ಕರೆದುಕೊಂಡು ಸಂತೋಷದಿಂದ ಊರಿಗೆ ಹೋದರು.



## ಶಾಲ್ಮಲಿ ಮರದ ಕಥೆ [1]

ಹಿಮವತ್ಪರ್ವತದಲ್ಲಿ ಶಾಲ್ಮಲೀ ಎಂಬ ಒಂದು ದೊಡ್ಡ ಮರವಿದ್ದಿತು. ಬಹುವರ್ಷದಿಂದ ಬೆಳೆದಿತ್ತು. ದೊಡ್ಡ ಕೊಂಬೆಗಳಿಂದ ವಿಸ್ತಾರವಾಗಿ ಬೆಳೆದಿತ್ತು. ಬಿಸಿಲಿನಿಂದ ಶ್ರಮಪಟ್ಟ ಆನೆಗಳೂ ಇತರ ಮೃಗಗಳೂ ಅದರ ನೆರಳಿನಲ್ಲಿ ವಿಶ್ರಾಂತಿಯನ್ನು ಹೊಂದುತ್ತಿದ್ದವು. ಬಹುದೊಡ್ಡದಾಗಿತ್ತು. ಅದರ ಅಡಿಯಲ್ಲಿ ತುಂಬಾನೆರಳಿತ್ತು. ಆ ಮರದಲ್ಲಿ ಗಿಳಿ ಮೊದಲಾದ ಪಕ್ಷಿಗಳು ಶಬ್ದಮಾಡುತ್ತಾ ಇದ್ದವು. ವ್ಯಾಪಾರಕ್ಕೆ ಹೋಗುವ ವರ್ತಕರೂ ಋಷಿಗಳೂ ಮನೋಹರವಾದ ಆ ಮರದ ಬುಡದಲ್ಲಿಯೇ ಕೂತುಕೊಳ್ಳುತ್ತಿದ್ದರು. ಈಪ್ರಕಾರವಾದ ಮರದ ಮಹತ್ತಾದ ಕೊಂಬೆಗಳನ್ನು ನೋಡಿ ನಾರದರು 'ವೃಕ್ಷರಾಜನೇ! ನೀನೆಷ್ಟು ಮನೋಹರ ನಾಗಿರುವೆ. ನಿನ್ನನ್ನು ನೋಡಿ ಬಹುಸಂತೋಷವಾಗುತ್ತದೆ. ಯಾವಾಗಲೂ ಮನೋಹರಗಳಾದ ಮೃಗಗಳೂ ಪಕ್ಷಿಗಳೂ ನಿನ್ನಲ್ಲಿ ವಾಸಮಾಡುತ್ತವೆ. ನಿನ್ನ ಕೊಂಬೆಗಳನ್ನು ವಾಯುವು ಮುರಿದದ್ದನ್ನು ನೋಡಲೇ ಇಲ್ಲ. ನಿನ್ನಲ್ಲಿ ವಾಯು ದೇವರು ಪ್ರೀತಿಯುಳ್ಳವರಾಗಿದ್ದಾರೋ? ನಿನಗೆ ಮಿತ್ರರಾಗಿರುವರೋ? ನಿನ್ನನ್ನು ಯಾಕೆ ವಾಯುದೇವರು ರಕ್ಷಿಸುವರು? ವಾಯುದೇವರು ವೇಗದಿಂದ ದೊಡ್ಡ ಚಿಕ್ಕ ಮರಗಳನ್ನೂ ಪರ್ವತಗಳ ಶಿಖರಗಳನ್ನೂ ನಡುಗಿಸುವರು. ಪಾತಾಲವನ್ನೇ ಒಣಗಿಸುವರು. ಸಮುದ್ರವನ್ನೂ ಒಣಗಿಸುವ ಸಾಮರ್ಥ್ಯವುಳ್ಳವರೂ ನಿನ್ನನ್ನು ಮಿತ್ರನಾದ ಪ್ರಯುಕ್ತವೇ ರಕ್ಷಿಸುವರು. ಆದುದರಿಂದಲೇ ನೀನು ಬಹುಕೊಂಬೆಗಳುಳ್ಳ

1. ಮಭಾ. ಶಾಂ.ಪ. ಅ.154 ರಿಂದ 157

ವನಾಗಿ ಎಲೆಗಳಿಂದಲೂ ಪುಷ್ಪಗಳಿಂದಲೂ ಶೋಭಿಸುತ್ತಿರುವಿ. ಪಕ್ಷಿಗಳೆಲ್ಲಾ ಸಂತೋಷದಿಂದ ಕ್ರೀಡಾಮಾಡುತ್ತಾ ಇವೆ. ಮೃಗಗಳಿಂದ ಪಕ್ಷಿಗಳಿಂದ ಋಷಿಗಳಿಂದ ಶೋಭಿಸುತ್ತಿರುವಿ. ಸ್ವರ್ಗಲೋಕದಂತೆ ಕಾಣಿಸುವೆ' ಎಂದು ಹೇಳಿದರು. ಮತ್ತು 'ವಾಯುದೇವರು ಬಂಧುತ್ವದಿಂದಲೋ ಸಖಿತ್ವದಿಂದಲೋ ನಿನ್ನನ್ನು ರಕ್ಷಿಸುತ್ತಿರುವರು. ನನ್ನವನು ಎಂದು ವಾಯುದೇವರಿಗೆ ನಿನ್ನಮೇಲೆ ಪ್ರೇಮವುಂಟಾಗಿರಬೇಕು. ವಾಯುದೇವರ ಬಲದಿಂದ ಮುರಿಯದೆ ಹೋಗಿರುವ ಯಾವ ಮರವೂ ಇರುವುದಿಲ್ಲ. ನೀನು ಮಾತ್ರ ಹೀಗಿರುವಿ ಎಂದು ಹೇಳಿದರು.

ಅದಕ್ಕೆ ಶಾಲ್ಮಲೀವೃಕ್ಷವು 'ಪೂಜ್ಯರೇ! ನನಗೆ ವಾಯುವು ಮಿತ್ರನೂ ಅಲ್ಲ. ಬಂಧುವೂ ಅಲ್ಲ. ನನ್ನನ್ನು ಪ್ರೇಮದಿಂದ ರಕ್ಷಿಸುತ್ತಲೂ ಇಲ್ಲ. ವಾಯುವಿಗಿಂತಲೂ ನನ್ನ ಬಲವು ಭಯಂಕರವಾದದ್ದು. ನನ್ನ ಬಲದ ಹದಿನೆಂಟನೇ ಒಂದು ಭಾಗವೂ ವಾಯುವಿಗೆ ಇಲ್ಲ. ಬಲವಾಗಿ ಬೀಸುತ್ತಾ ಬರುವಾಗ ನಾನು ಬಲದಿಂದ ತಡೆದುಬಿಡುವೆನು. ಇತರ ಮಂಗಗಳನ್ನೋ ಪರ್ವತವನ್ನೋ ಮುರಿಯುತ್ತಾ ಹೋಗುವನು. ವಾಯುವು ನನ್ನಿಂದಲೇ ಭಗ್ನನಾಗುವನು. ದೇವರ್ಷಿಗಳೇ! ವಾಯುವು ಕೋಪಿಸಿಕೊಂಡರೂ ನನಗೆ ಅಂಜಿಕೆಯಿಲ್ಲ' ಎಂದಿತು.

ಅದಕ್ಕೆ ನಾರದರು 'ಶಾಲ್ಮಲೀ ವೃಕ್ಷವೇ! ನಿನಗೆ ವಿಪರೀತ ಜ್ಞಾನವಿರುವುದು. ವಾಯುದೇವರ ಬಲಕ್ಕೆ ಸಮಾನವಾದ ಬಲವು ಯಾರಿಗೂ ಇಲ್ಲ. ಇಂದ್ರ ಯಮ ಕುಬೇರ ವರುಣ ಈ ದೇವತೆಗಳೂ ವಾಯುದೇವರಿಗೆ ಸಮಾನರಲ್ಲ. ವಾಯುದೇವರೇ ಎಲ್ಲರಿಂದಲೂ ಎಲ್ಲಾ ವ್ಯಾಪಾರಗಳನ್ನು ಆಡಿಸುವವರು. ಈರೀತಿಯಾಗಿ ಎಲ್ಲರಿಂದಲೂ ಪೂಜ್ಯರಾದ ವಾಯುದೇವರನ್ನು ದುರ್ಬುದ್ಧಿಯಿಂದ ಪೂಜಿಸದೆ ಇರುವಿ. ನೀನು ಅಸಾರನಾಗಿರುವಿ. ದುರ್ಬುದ್ಧಿಯುಳ್ಳವನಾಗಿರುವಿ. ಬಹುಕೆಟ್ಟ ಮಾತುಗಳನ್ನು ಆಡುತ್ತಿರುವಿ. ಇದನ್ನು ಕೇಳಿ ನನಗೇ ಕೋಪಬಂದಿರುವುದು. ನಿನ್ನ ಕೆಟ್ಟ ಮಾತುಗಳನ್ನು ವಾಯುದೇವರ ಹತ್ತಿರವೇ ಹೇಳುವೆನು. ಗಂಧದಮರಗಳು ದೇವದಾರುಗಳು ಇತ್ಯಾದಿ, ನಿನಗಿಂತ ಶ್ರೇಷ್ಠ ಮರಗಳೂ ಕೂಡ ವಾಯುದೇವರನ್ನು ನಿಂದಾ ಮಾಡಿದ್ದಿಲ್ಲ. ಅವುಗಳೆಲ್ಲವೂ ವಾಯುದೇವರ ಬಲವನ್ನು ತಿಳಿದಿರುವುವು. ಆದುದರಿಂದಲೇ ವಾಯುದೇವರನ್ನು ಅವಮಾನ ಮಾಡುವುದಿಲ್ಲ. ನೀನು ಮಾತ್ರ ಅಜ್ಞಾನದಿಂದ ವಾಯುದೇವರ ಅನಂತ ಬಲವನ್ನು ತಿಳಿಯಲಿಲ್ಲ. ಆದುದರಿಂದ ಈಗಲೇ ವಾಯುದೇವರ ಸಮೀಪಕ್ಕೆ ಹೋಗುವೆನು.

ಈರೀತಿಯಾಗಿ ನಾರದರು ಶಾಲ್ಮಲೀಮರದ ಹತ್ತಿರ ಹೇಳಿ ವಾಯುದೇವರ

ಹತ್ತಿರ ಹೋಗಿ ಎಲ್ಲವನ್ನೂ ಹೇಳಿದರು. ಅದನ್ನು ಕೇಳಿ ವಾಯುದೇವರು ಆ ಮರದ ಬಳಿಗೆ ಬಂದು 'ಶಾಲ್ಮಲಿಯೇ! ನಾರದರು ನೀನು ನನ್ನನ್ನು ನಿಂದಿಸಿದ್ದನ್ನು ತಿಳಿಸಿದ್ದಾರೆ. ನಾನು ವಾಯುವು. ನನ್ನ ಬಲವನ್ನು ನಿನಗೆ ತೋರಿಸುತ್ತೇನೆ. ನನಗೆ ನಿನ್ನ ಪರಿಚಯವಿಲ್ಲವೆಂದಲ್ಲ. ಒಂದು ಸಲ ಬ್ರಹ್ಮದೇವರು ನಿನ್ನಲ್ಲಿ ಸ್ವಲ್ಪ ವಿಶ್ರಾಂತಿ ಹೊಂದಿರುವರು. ಅದಕ್ಕಾಗಿ ನಾನು ನಿನಗೆ ಅನುಗ್ರಹವನ್ನು ಮಾಡಿರುವೆನು. ಅನುಗ್ರಹದಿಂದ ನಾನು ನಿನ್ನನ್ನು ಮುರಿಯದೆ ಇದ್ದೇನೆ. ಆದರಿಂದ ನೀನು ಇತರರನ್ನು ಅವಮಾನ ಮಾಡುವಂತೆ ನನ್ನನ್ನು ಅವಮಾನ ಮಾಡಿದಿರಿ. ಇನ್ನು ಮುಂದೆ ನನ್ನನ್ನು ಅವಮಾನ ಮಾಡದಂತೆ ನನ್ನ ಬಲವನ್ನು ತೋರಿಸುವೆನು ಎಂದರು.

ಆಗ ಶಾಲ್ಮಲೀವೃಕ್ಷವು ನೆಗ್ಗುತ್ತಾ 'ವಾಯೋ! ನೀನು ಕೋಪಿಸಿಕೊಂಡು ವನದಲ್ಲಿ ನಿನ್ನ ಬಲವನ್ನು ತೋರಿಸು. ನನ್ನ ಮೇಲೆ ಕೋಪಿಸಿಕೊಂಡು ಏನು ಮಾಡುವಿ? ನೀನು ಸಮರ್ಥನಾಗಿರಬಹುದು. ಆದರೆ ನಾನು ನಿನಗೆ ಭಯಪಡುವುದಿಲ್ಲ. ನಾನು ನಿನಗಿಂತ ಹೆಚ್ಚು ಬಲವುಳ್ಳವನು. ನಿನಗೆ ನಾನು ಭಯಪಡಬೇಕಾಗಿಲ್ಲ. ಬುದ್ಧಿಯಿಂದ ಬಲಿಷ್ಠರೇ ಬಲಿಷ್ಠರು. ಬರೇ ದೇಹಬಲದಿಂದ ಬಲಿಷ್ಠರಲ್ಲ' ಎಂದು ಹೇಳಿತು. ಅದಕ್ಕೆ ವಾಯುದೇವರು 'ನಾಳೆಯಾಗಲಿ! ನನ್ನ ಸಾಮರ್ಥ್ಯವನ್ನು ನಿನಗೆ ತೋರಿಸುವೆನು' ಎಂದು ಹೇಳಿ ಹೊರಟುಹೋದರು.

ರಾತ್ರಿಯಾಯಿತು. ಶಾಲ್ಮಲೀವೃಕ್ಷವು ವಾಯುದೇವರೊಡನೆ ವಿರೋಧವನ್ನು ಮಾಡಿದ್ದನ್ನು ಯೋಚನೆ ಮಾಡಿಕೊಂಡು ವಾಯುದೇವರಿಗೆ ತಾನು ಸಮಾನನಲ್ಲವೆಂದೂ ತಿಳಿದುಕೊಂಡು 'ನಾನು ನಾರದರ ಹತ್ತಿರ ಹೇಳಿದ ಮಾತು ಸುಳ್ಳು. ನಾನು ಸಮರ್ಥನಲ್ಲ. ವಾಯುದೇವರಿಗಿಂತ ಹೆಚ್ಚು ಬಲವುಳ್ಳವನಲ್ಲ. ನಾರದರು ಹೇಳಿದಂತೆ ವಾಯುದೇವರು ಮಹಾಬಲವುಳ್ಳವರು. ನಾನು ಇತರ ಮರಗಳಿಗಿಂತಲೂ ದುರ್ಬಲನು. ಆದರೆ ನನಗೆ ಸಮಾನ ಬುದ್ಧಿವಂತರಿಲ್ಲ' ಹೀಗೆಲ್ಲಾ ಹೇಳಿಕೊಂಡು ತನ್ನ ಕೊಂಬೆಗಳನ್ನು ಚಿಕ್ಕ ಕೊಂಬೆಗಳನ್ನೂ ತಾನಾಗಿಯೇ ಬೀಳಿಸಿಕೊಂಡಿತು. ಕೊಂಬೆಗಳನ್ನು ಪುಷ್ಪಗಳನ್ನೂ ಎಲೆಗಳನ್ನೂ ಉದುರಿಸಿಕೊಂಡು ಮರುದಿನ ಬೆಳಿಗ್ಗೆ ವಾಯುದೇವರು ಬರುವುದನ್ನೇ ಎದುರು ನೋಡುತ್ತಿತ್ತು.

ವಾಯುದೇವರು ಕೋಪಿಸಿಕೊಂಡು ಗಾಳಿಯ ರೂಪದಿಂದ ಮರಗಳನ್ನೆಲ್ಲಾ ಬೀಳಿಸುತ್ತಾ ಆ ಸ್ಥಳಕ್ಕೆ ಬಂದರು. ಎಲೆಗಳಿಂದಲೂ ಪುಷ್ಪಗಳಿಂದಲೂ ಕೊಂಬೆಗಳಿಂದಲೂ ರಹಿತವಾಗಿ ನಿಂತಿರುವ ಶಾಲ್ಮಲೀಮರವನ್ನು ನೋಡಿ ನಗುತ್ತಾ 'ಶಾಲ್ಮಲಿಯೇ! ನಾನೂ ರೋಷದಿಂದ ನಿನ್ನನ್ನು ಹೀಗೆಯೇ ಮಾಡುತ್ತಿದ್ದೆನು. ನೀನೇ

ಪುಷ್ಪಗಳನ್ನು ಕೊಂಬೆಗಳನ್ನೂ ಎಲೆಗಳನ್ನೂ ಉದುರಿಸಿಕೊಂಡಿ. ನನ್ನ ಸಮೀಪದಲ್ಲಿ ಜಗಳಾಡಿ ನನ್ನ ಪರಾಕ್ರಮದಿಂದಲೇ ನೀನು ಹೀಗಾಗಿರುವಿ' ಎಂದು ಹೇಳಿದರು.

ಈ ವಾಯುದೇವರ ಮಾತನ್ನು ಕೇಳಿ ಶಾಲ್ಮಲಿಯು ನಾರದರ ಮಾತನ್ನು ಸ್ಮರಿಸಿಕೊಡು ಪಶ್ಚಾತ್ತಾಪವನ್ನು ಹೊಂದಿತು. ಆದುದರಿಂದ ದುರ್ಬಲನು ಬಲಿಷ್ಠರೊಡನೆ ವಿರೋಧ ಮಾಡಿಕೊಳ್ಳಬಾರದು. ಮಾಡಿಕೊಂಡರೆ ಶಾಲ್ಮಲಿಯಂತೆ ದುಃಖಪಡಬೇಕಾಗುವುದು.



## ಹುಲಿ ನರಿಗಳ ಕಥೆ [1]

ಪುರಿಕಾ ಎಂಬ ಪಟ್ಟಣದಲ್ಲಿ ಪೌರಿಕ ಎಂದು ಹೆಸರುಳ್ಳ ಒಬ್ಬ ರಾಜನು ಇದ್ದನು. ಅವನು ಇನ್ನೊಬ್ಬರನ್ನು ಹಿಂಸಾಮಾಡುತ್ತಾ ಪರಮಕ್ರೂರನಾಗಿದ್ದನು. ಅವನು ಆಯುಷ್ಯಕ್ಷಯವನ್ನು ಹೊಂದಿ ಸತ್ತು ಒಂದು ನರಿಯಾಗಿ ಹುಟ್ಟಿದನು. ಆ ನರಿಯಾದರೋ ಪೂರ್ವಜನ್ಮ ಸ್ಮರಣೆಯುಳ್ಳದ್ದಾಗಿ ಅತ್ಯಂತ ವೈರಾಗ್ಯವನ್ನು ಹೊಂದಿತು. ಇನ್ನೊಬ್ಬರು ತಂದುಕೊಟ್ಟರೂ ಮಾಂಸವನ್ನು ತಿನ್ನಲಾರದು. ಒಬ್ಬರಿಗೂ ಹಿಂಸಾ ಮಾಡಬಾರದು. ಸತ್ಯವನ್ನೇ ಹೇಳುವುದು. ಕೇವಲ ಕೆಳಗೆ ಬಿದ್ದಿರುವ ಹಣ್ಣುಗಳನ್ನೋ ಅಥವಾ ಎಲೆಗಳನ್ನೋ ತಿನ್ನುತ್ತಾ ಕಾಲ ಕಳೆಯುತ್ತಿತ್ತು. ಕೆಲವು ಸಮಯ ಬರೇ ನೀರನ್ನೂ ಕುಡಿಯುತ್ತಿತ್ತು. ತಾನು ಹುಟ್ಟಿದ ಸ್ಥಳವಾದ ಪ್ರಯುಕ್ತ ಸ್ಮಶಾನದಲ್ಲಿಯೇ ವಾಸಮಾಡುತ್ತಿತ್ತು. ಬೇರೆ ಸ್ಥಳವು ಅದಕ್ಕೆ ರುಚಿಸಲಿಲ್ಲ.

ಅದರ ಶುದ್ಧಸ್ವಭಾವವನ್ನು ನೋಡಿ ಇತರ ನರಿಗಳು ನಾನಾ ವಿಧವಾಗಿ ಅದರ ಬುದ್ಧಿಯನ್ನು ಕೆಡಿಸಲಿಕ್ಕೆ ಪ್ರಯತ್ನ ಮಾಡಿದವು. 'ಎಲಾ! ನೀನು ವಾಸಮಾಡುವುದು ಸ್ಮಶಾನದಲ್ಲಿ. ನಿನಗೆ ಮಡಿಯೇನು ಬೇಕಾಗಿದೆ? ನಿನಗೆ ಇದು ವಿಪರೀತಬುದ್ಧಿಯು. ನೀನು ನಮ್ಮಂತೆ ಮಾಂಸವನ್ನು ತಿನ್ನುವ ಜಾತಿಯವನಾಗಿದ್ದಿ. ನಿನಗೆ ನಾವು ಮಾಂಸವನ್ನು ತಂದುಕೊಡುವೆವು ತಿನ್ನು. ನಿನ್ನ ಮಡಿಯೆಲ್ಲಾ ಬೇಡ. ಈಗ ತಿಂದದ್ದೇ ಬಂತು' ಎಂದು ಹೇಳಿದವು. ಈರೀತಿಯಾಗಿ ಅವುಗಳ ಮಾತನ್ನು ಕೇಳಿ ನರಿಯು ಮಧುರವಾದ ಯುಕ್ತಿಯುಕ್ತಗಳಾದ ಮಾತನ್ನು 'ಹುಟ್ಟಿದ ಕುಲವು ಮುಖ್ಯವಲ್ಲ. ಶೀಲದಿಂದ ಕುಲವನ್ನು ಸಂಪಾದಿಸಬೇಕು. ಯಾವುದರಿಂದ ಕೀರ್ತಿಯುಂಟಾಗು

1. ಮ.ಭಾ. ಶಾಂ.ಪ. ಅನು.ಪ. ಅ-111

ವುದೋ ಅಂತಹ ಕರ್ಮವನ್ನು ಅಪೇಕ್ಷಿಸುವೆನು. ಸ್ಮಶಾನದಲ್ಲಿ ವಾಸಮಾಡಿದರೂ ನನ್ನ ಮನಸ್ಸಿನ ಸಮಾಧಾನವನ್ನು ನೋಡಿರಿ. ಸ್ಥಳವು ಏನು ಮಾಡಿತು? ಒಳ್ಳೇ ಆಶ್ರಮದಲ್ಲಿ ಬ್ರಾಹ್ಮಣನನ್ನು ಕೊಂದರೆ ಪಾಪವು ಬರಲಾರದೇ! ಕೆಟ್ಟಸ್ಥಳದಲ್ಲಿ ದಾನಮಾಡಿದರೆ ಪುಣ್ಯಬರಲಾರದೇ? ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅನಿಷ್ಟಕರವಾದ ಜೀವನೋಪಾಯವನ್ನು ನಾನು ಮಾಡಲಾರೆನು' ಎಂದು ಹೇಳಿತು.

ತರುವಾಯ ಒಂದು ಹುಲಿಯು ಈ ನರಿಯು ಶುದ್ಧವಾಗಿದೆ ಬುದ್ಧಿಯುಳ್ಳದ್ದಾಗಿದೆ ಎಂದು ತಿಳಿದುಕೊಂಡು ಒಂದು ಹುಲಿಯು, ತನಗೆ ಇತರರು ಪೂಜಿಸುವಂತೆ ಆ ನರಿಗೆ ಪೂಜೆಯನ್ನು ಮಾಡಿ ನರಿಯೊಡನೆ 'ಮಿತ್ರ ನನಗೆ ನೀನು ಮಂತ್ರಿಯಾಗು. ನಿನ್ನ ಸ್ವಭಾವವನ್ನು ನಾನು ತಿಳಿದುಕೊಂಡಿರುವೆನು. ನೀನು ನನ್ನೊಡನೆ ರಾಜಕಾರ್ಯವನ್ನು ಮಾಡು. ನಾವೆಲ್ಲರೂ ಕ್ರೂರಸ್ವಭಾವವುಳ್ಳವರು ಎಂದು ಪ್ರಸಿದ್ಧರಾಗಿದ್ದೇವೆ. ಮೃದುವಾಗಿ ರಾಜ್ಯಕಾರ್ಯವನ್ನು ಮಾಡು. ನಿನಗೆ ಶ್ರೇಯಸ್ಸಾಗುವುದು. ನಿನಗೆ ಬೇಕಾದ ಭೋಗಗಳನ್ನು ಕೇಳಿಕೋ' ಎಂದು ಹೇಳಿತು.

ಆಗ ನರಿಯು ಹುಲಿಯ ಮಾತನ್ನು ಸತ್ಕರಿಸಿ 'ಮೃಗರಾಜನೇ! ಧರ್ಮಾರ್ಥಗಳಲ್ಲಿ ಪಂಡಿತರಾದ ಸಹಾಯಕರನ್ನು ಹುಡುಕುವುದು ನ್ಯಾಯವೇ! ಮಂತ್ರಿಯಿಲ್ಲದೆಯೂ ದುಷ್ಟಮಂತ್ರಿಯ ಸಹಾಯದಿಂದಲೂ ಮಹಾಕಾರ್ಯವನ್ನು ಮಾಡಲಿಕ್ಕೆ ಆಗಲಾರದು. ಸಹಾಯ ಮಾಡುವವರಾದ ನೀತಿಯನ್ನು ತಿಳಿದವರಾದ ಲಂಚವನ್ನು ತೆಗೆದುಕೊಳ್ಳದೆ ಇರುವ ಯೋಗ್ಯರಾದ ಮಂತ್ರಿಗಳನ್ನು ಸಹೋದರರಂತೆ ಸತ್ಕರಿಸು. ನಾನಾದರೋ ಮಂತ್ರಿಪದವಿಯನ್ನಾಗಲೀ ಭೋಗಗಳನ್ನೋ ಐಶ್ವರ್ಯವನ್ನೋ ಅಪೇಕ್ಷಿಸುವುದಿಲ್ಲ. ನಿನಗೆ ಪೂರ್ವದ ಭೃತ್ಯರಿಂದಾಗಿ ನನ್ನ ಶೀಲವು ಹಿಡಿಯಲಾರದು. ಅವರು ನಿನಗೂ ನನಗೂ ವಿರೋಧವು ಉಂಟಾಗುವಂತೆ ಮಾಡುವರು. ನೀನು ಒಳ್ಳೇ ಆಶ್ರಯಿಸಲಿಕ್ಕೆ ಯೋಗ್ಯನಾದವನು. ಅತ್ಯಂತ ಸ್ತುತ್ಯನು. ಅಪರಾಧಮಾಡಿದವರಲ್ಲಿ ಶಾಂತನಾಗಿರುವವನು. ಒಳ್ಳೇ ಸ್ವಭಾವವುಳ್ಳವನು. ಉಪಕಾರವನ್ನು ಮಾಡಿದವರಿಗೆ ಪ್ರತ್ಯುಪಕಾರವನ್ನು ಮಾಡುವವನು. ಭಾಗ್ಯವಂತನು. ನಾನು ನನ್ನ ವೃತ್ತಿಯಿಂದಲೇ ಸಂತುಷ್ಟನಾಗಿದ್ದೇನೆ. ನನಗೆ ಒಬ್ಬ ಸೇವಾಮಾಡಲಿಕ್ಕೂ ತಿಳಿಯದು. ಇಚ್ಛಾನುಸಾರವಾಗಿ ವನದಲ್ಲಿ ಸಂಚರಿಸಿಕೊಂಡು ಇದ್ದವನು. ಒಬ್ಬರನ್ನು ಆಶ್ರಯಿಸಿಕೊಂಡು ಇರುವಾಗ ಎಷ್ಟೋ ನಿಂದಾದಿಗಳನ್ನು ಕೇಳಬೇಕಾಗುವುದು. ವನದಲ್ಲಿ ಇಚ್ಛಾನುಸಾರವಾಗಿ ಇದ್ದರೆ ಒಂದು ಭಯವೂ ಇರುವುದಿಲ್ಲ. ರಾಜನ ಸಮೀಪದಲ್ಲಿ ಇರುವವರಿಗೆ ಇರುವ ಭಯವು ಕಾಡಿನಲ್ಲಿ ಗೆಡ್ಡೆ ಹಣ್ಣುಗಳನ್ನು ತಿನ್ನುತ್ತಾ

ಇರುವವರಿಗೆ ಇರುವುದಿಲ್ಲ. ಅಥವಾ ನಾನು ಅವಶ್ಯವಾಗಿ ಮಂತ್ರಿಕಾರ್ಯವನ್ನು ಮಾಡಲೇ ಬೇಕೆಂದು ಇದ್ದರೆ ನಾನು ಕೆಲವು ಮಾತುಗಳನ್ನು ಮೊದಲೇ ಹೇಳುವೆನು. ಅವುಗಳನ್ನು ನಡೆಸಿಕೊಡಬೇಕು. ನಮ್ಮವರನ್ನು ಬಹುಮಾನ ಮಾಡಬೇಕು. ನಾನು ಹೇಳುವ ಹಿತವಚನವನ್ನು ಕೇಳಬೇಕು. ನನಗೆ ನೀನು ಕೊಡುವ ವೃತ್ತಿಯು ಸ್ಥಿರವಾಗಿರಬೇಕು. ನೀನು ಬೇರೆ ಮಂತ್ರಿಗಳೊಡನೆ ಯೋಚನೆ ಕೇಳಬಾರದು. ಅವರು ನನ್ನ ಮೇಲೆ ವ್ಯರ್ಥವಾಗಿ ಏನಾದರೂ ಹೇಳುವರು. ನಾನು ಒಬ್ಬನೇ ನೀನೊಬ್ಬನೊಡನೆಯೇ ಯೋಚನೆಯನ್ನು ಹೇಳುವೆನು. ನಿನ್ನ ಬಂಧುಗಳ ವಿಷಯದಲ್ಲಿ ನನ್ನ ಹತ್ತಿರ ಹಿತಾಹಿತಗಳನ್ನು ಕೇಳಬಾರದು. ನನ್ನ ಹತ್ತಿರ ಯೋಚನೆ ಕೇಳಿ ಆಮೇಲೆ ನಿನ್ನ ಇತರ ಮಂತ್ರಿಗಳನ್ನು ಹಿಂಸಿಸಬಾರದು. ನನ್ನವರಿಗೆ ಕೋಪಿಸಿಕೊಂಡು ಶಿಕ್ಷಾ ಮಾಡಬಾರದು' ಎಂದು ಹೇಳಿತು.

ಆಗ ಹುಲಿಯು ಹಾಗೆಯೇ ಆಗಲಿ ಎಂದು ಹೇಳಲು ನರಿಯು ಹುಲಿಯಿಂದ ಸತ್ಕೃತವಾಗಿ ಮಂತ್ರಿಪದವಿಯನ್ನು ಹೊಂದಿತು. ಈ ರೀತಿ ಸತ್ಕರಿಸಲ್ಪಟ್ಟ ಯೋಗ್ಯಕಾರ್ಯದಲ್ಲಿ ನಿಯಮಿಸಲ್ಪಟ್ಟ ನರಿಯನ್ನು ನೋಡಿ ಆ ಹುಲಿಯ ಪೂರ್ವದ ಭೃತ್ಯರು ನರಿಯನ್ನು ದ್ವೇಷಿಸಿದರು. ಆ ನರಿಗೆ ಮಿತ್ರರೆಂದು ತೋರಿಸಿಕೊಂಡು ಏನಾದರೂ ದೋಷವನ್ನು ನರಿಯಲ್ಲಿ ತೋರಿಸಿಕೊಡಬೇಕೆಂದು ಪ್ರಯತ್ನಪಟ್ಟರು. ಪೂರ್ವದಲ್ಲಿ ಅವರು ರಾಜನಿಗೆ ತಿಳಿಯದಂತೆ ಮೋಸಮಾಡಿ ಎಷ್ಟೋ ಹಣವನ್ನು ಅಪಹಾರ ಮಾಡುತ್ತಿದ್ದರು. ನರಿಯು ಬಂದಮೇಲೆ ಅದಕ್ಕೆ ಸಾಧ್ಯವಾಗಲಿಲ್ಲ. ನರಿಗೆ ಎಷ್ಟು ಲಂಚ ಕೊಡುತ್ತೇವೆಂದು ಹೇಳಿದರೂ ಅದು ವಶವಾಗಲೇ ಇಲ್ಲ. ಕೊನೆಗೆ ಹೇಗಾದರೂ ಮಾಡಿ ಆ ನರಿಯನ್ನು ಕೊಲ್ಲಿಸಬೇಕೆಂದು ಯೋಚನೆ ಮಾಡಿದರು. ಹುಲಿಗೆ ತುಂಬಾ ಪ್ರಿಯವಾದ ಒಳ್ಳೇ ಮಾಂಸವನ್ನು ಆಭೃತ್ಯರು ಅಪಹಾರ ಮಾಡಿ ಅದನ್ನು ನರಿಯ ಮನೆಯಲ್ಲಿ ಇಟ್ಟರು.

ನರಿಯು ಆ ಮಾಂಸವನ್ನು ಏಕೆ ಅಪಹರಿಸಿದರು. ಏಕೆ ತನ್ನ ಮನೆಯಲ್ಲಿ ಇಟ್ಟರು ಎಂಬ ವಿಷಯವನ್ನೆಲ್ಲಾ ತಿಳಿದುಕೊಂಡೇ ಇದ್ದಿತು. ತನಗೆ ಈ ಸಂಬಂಧವು ಬಿಟ್ಟುಹೋಗಲಿ ಎಂದೇ ಸುಮ್ಮನೆ ಇದ್ದಿತು. ಹುಲಿಯು ಭೋಜನ ಮಾಡುವ ಆ ಮಾಂಸವು ಕಾಣದೆ ಹೋಗಲು ಯಾವ ಕಳ್ಳನು ಅಪಹರಿಸಿದನು! ಹುಡುಕಿರಿ ಎಂದು ಹೇಳಿತು. ಭೃತ್ಯರು ನಿನ್ನ ಜ್ಞಾನಿಯಾದ ಮಂತ್ರಿಯು ಇದನ್ನು ಅಪಹರಿಸಿರುವನು ಎಂದರು. ನರಿಯ ಈ ವ್ಯಾಪಾರವನ್ನು ಕೇಳಿ ಹುಲುಯು ರೋಷವುಳ್ಳದ್ದಾಗಿ ಅದನ್ನು ಕೊಲ್ಲಿಸಬೇಕೆಂದು ಅಭಿಪ್ರಾಯಪಟ್ಟರು. ಈ ಅವಕಾಶವನ್ನು ನೋಡಿ ಪೂರ್ವದ

ಮಂತ್ರಿಗಳು ನರಿಯು ತಮ್ಮ ವೃತ್ತಿಯನ್ನೆಲ್ಲಾ ಕೆಡಿಸಬಹುದೆಂದು ನಿಶ್ಚಯಿಸಿ ಹುಲಿಯೊಡನೆ 'ಮಹಾಪ್ರಭೋ! ಇದು ಆ ನರಿಯ ಕೆಲಸ. ಅವನು ಯಾವ ಕಾರ್ಯವನ್ನು ಮಾಡಲಾರನು? ಸ್ವಾಮಿಯು ಅವನ ವಿಷಯ ಹೇಗೆ ಕೇಳೋಣವಾಗಿತ್ತೋ ಹಾಗೆ ಅವನು ಅಲ್ಲ. ಮಾತಿನಿಂದ ಮಾತ್ರ ಧರ್ಮಿಷ್ಠನು. ಸ್ವಭಾವದಿಂದ ಅತ್ಯಂತ ಕ್ರೂರಿಯು. ಮಹಾಕಪಟಿಯು. ವ್ಯರ್ಥವಾಗಿ ಆಚಾರವಂತ ಎಂದು ಹೇಳಿಕೊಳ್ಳುವನು. ಏನೋ ಕಾರ್ಯಕ್ಕೋಸ್ಕರ ಭೋಜನಾದಿಗಳಲ್ಲಿ ನಿಯಮವನ್ನು ತೋರಿಸುವನು. ನಿಮಗೆ ನಮ್ಮ ಮಾತಿನಲ್ಲಿ ಅವಿಶ್ವಾಸವಿದೆ. ಪ್ರತ್ಯಕ್ಷವಾಗಿ ತೋರಿಸುವೆವು ಎಂದು ಹೇಳಿ ಆಗಲೇ ನರಿಯ ಮನೆಯಿಂದ ಆ ಮಾಂಸವನ್ನು ತಂದು ತೋರಿಸಿದವು. ತಾನು ತಿನ್ನವ ಮಾಂಸವನ್ನು ನರಿಯು ಅಪಹಾರ ಮಾಡಿತು ಎಂಬ ಮಾತನ್ನು ಹುಲಿಯು ನಂಬಿ ಆ ನರಿಯನ್ನು ಕೊಂದು ಹಾಕಿರಿ ಎಂದು ಆಜ್ಞಾಪಿಸಿತು.

ನರಿಗೆ ಬಂದ ಆಪತ್ತನ್ನು ತಿಳಿದು ಹುಲಿಯ ತಾಯಿಯು ಮಗನಿಗೆ ಹಿತವಾದ ವಾಕ್ಯಗಳನ್ನು ಹೇಳಿತು. 'ಮಗ! ನೀನು ಈ ಕಪಟಿಗಳ ಮಾತನ್ನು ನಂಬಬೇಡ. ಯಾರಿಗಾದರೂ ಒಳ್ಳೆಯದಾದರೆ ಅದನ್ನು ಇತರರು ಸಹಿಸಲಾರರು. ಅವನಲ್ಲಿ ವೈರವನ್ನು ಮಾಡುವರು. ಏನಾದರೂ ದೋಷವನ್ನು ತಂದು ಹಾಕುವರು. ಲೋಕದಲ್ಲಿ ಮೂರ್ಖರಿಗೆ ಪಂಡಿತರೂ, ದರಿದ್ರರಿಗೆ ಹಣವಂತೂ, ಅಧರ್ಮಿಷ್ಠರಿಗೆ ಧರ್ಮಿಷ್ಠರೂ, ಕುರೂಪಿಗಳಿಗೆ ಸುರೂಪಿಗಳೂ, ದ್ವೇಷಕ್ಕೆ ವಿಷಯರಾಗುವರು. ನಿನ್ನ ಮನೆಯೊಳಗಿದ್ದ ಮಾಂಸವು ಹೇಗೆ ಅಪಹೃತವಾಯಿತು. ಮಾಂಸವನ್ನು ನೀನಾಗಿ ಕೊಟ್ಟರೂ ಆ ನರಿಯು ತೆಗೆದುಕೊಳ್ಳುವುದಿಲ್ಲ, ಆದುದರಿಂದ ಇದರಲ್ಲಿ ಏನೋ ಕಪಟವಿರಬೇಕು. ಆದುದರಿಂದ ಪರೀಕ್ಷಾ ಮಾಡಿ ನೋಡು. ಮಗ! ರಾಜನು ಇನ್ನೊಬ್ಬರನ್ನು ಕೊಲ್ಲಿಸುವುದು ಕಷ್ಟವಲ್ಲ. ಆದರೆ ಕ್ಷಮಿಸುವುದೇ ಸ್ತುತ್ಯವಾದದ್ದು ಕೀರ್ತಿಗೂ ಕಾರಣವಾದದ್ದು' ಎಂದು ಹೇಳಿತು.

ತರುವಾಯ ಪರೀಕ್ಷಿಸುವಾಗ ಹುಲಿಗೆ ಈ ಕಪಟವೆಲ್ಲಾ ಗೊತ್ತಾಯಿತು. ವಿಷಯವು ತಿಳಿದ ಮೇಲೆ ಹುಲಿಯು ನರಿಯನ್ನು ಆಲಂಗಿಸಿ, ಸತ್ಕಾರಮಾಡಿತು. ನರಿಯು ಮಾತ್ರ ಕೋಪದಿಂದ ತಾನು ಉಪವಾಸ ಮಾಡಿ ಸಾಯುವನೆಂದು ಕೂತುಕೊಂಡಿತು. ಆಗ ಹುಲಿಯು ಸ್ನೇಹದಿಂದ ಹಾಗೆ ಮಾಡಬಾರದೆಂದು ಹೇಳಿತು. ಸತ್ಕಾರ ಮಾಡಿತು. ಆಗ ನರಿಯು ಹುಲಿಯನ್ನು ನೋಡಿ ಸ್ನೇಹದಿಂದ ಸಂಭ್ರಮದಿಂದ ನಮಸ್ಕಾರ ಮಾಡಿ ಕಣ್ಣೀರಿನಿಂದ ಗದ್ಗದ ಸ್ವರದಿಂದ 'ರಾಜನೇ! ಮೊದಲು ನನಗೆ

ಸತ್ಕಾರ ಮಾಡಿದಿ. ಆಮೇಲೆ ನನಗೆ ಅವಮಾನ ಮಾಡಿದಿ. ಆದುದರಿಂದ ಇನ್ನು ಮುಂದೆ ನಿನ್ನ ಸಮೀಪದಲ್ಲಿ ವಾಸಮಾಡಲಿಕ್ಕೆ ನಾನು ಯೋಗ್ಯನಲ್ಲ. ಒಂದು ಸಲ ಅವಮಾನಮಾಡಿ ಪುನಃ ನನಗೆ ಅಧಿಕಾರ ಕೊಟ್ಟರೆ ನಿನಗೆ ಹೇಗೆ ನಂಬಿಕೆ ಉಂಟಾಗುವುದು? ನನಗಾದರೂ ನಿನ್ನಲ್ಲಿ ಹೇಗೆ ವಿಶ್ವಾಸವಿರುವುದು? ಮಾಡಲು ನನ್ನನ್ನು ಸಮರ್ಥನೆಂದು ತಿಳಿದು ನನಗೆ ಅಧಿಕಾರ ಕೊಟ್ಟು ಆಮೇಲೆ ನಾನು ಹೇಳಿದ ಮಾತನ್ನು ಮೀರಿ ನನಗೆ ಅವಮಾನ ಮಾಡಿದಿ. ಮೊದಲು ಯಾರು ಸಭೆಯಲ್ಲಿ ಉತ್ತಮವಾದ ಶೀಲವಳ್ಳವನೆಂದು ಪ್ರಸಿದ್ಧನಾಗಿರುವನೋ ಅವನ ದೋಷವನ್ನು ಹೇಳಬಾರದು. ಈ ರೀತಿಯಾಗಿ ಅವಮಾನ ಮಾಡಿದ ಮೇಲೆ ನಿನಗೆ ನನ್ನಲ್ಲಿ ವಿಶ್ವಾಸವುಂಟಾಗಲಾರದು. ನಿನಗೆ ವಿಶ್ವಾಸವಿಲ್ಲದಿರುವಾಗ ನೀನು ಯಾವಾಗ ಏನು ಮಾಡುವಿ ಎಂದು ಭಯವೇ ಇರುವುದು' ಇತ್ಯಾದಿ ರೀತಿಯಾಗಿ ಹೇಳಿ ರಾಜನನ್ನು ಸಮಾಧಾನಪಡಿಸಿ ಕಾಡಿಗೆ ಹೋಯಿತು. ಅಲ್ಲಿ ಉಪವಾಸ ಮಾಡಿ ದೇಹವನ್ನು ಪರಿತ್ಯಾಗ ಮಾಡಿ ಸ್ವರ್ಗವನ್ನು ಹೊಂದಿತು.



## ಕಾಪಚ್ಯನ ಕಥೆ [1]

ಭೀಷ್ಮಾಚಾರ್ಯರು ಹೇಳಿದರು. 'ಧರ್ಮರಾಜ! ಬೇಡರೂ ಕೂಡ ಶಾಸ್ತ್ರದಲ್ಲಿ ಹೇಳಿದ ಧರ್ಮವನ್ನು ಅನುಸರಿಸಿದರೆ ಸಿದ್ಧಿಯನ್ನು ಹೊಂದಬಹುದು. ಅದಕ್ಕೆ ಒಂದು ಕಥೆಯನ್ನು ಹೇಳುತ್ತೇನೆ. ಕೇಳು.

ಬೇಡಸ್ತ್ರೀಯಲ್ಲಿ ಒಬ್ಬ ಕ್ಷತ್ರಿಯನಿಂದ ಹುಟ್ಟಿದ ಕಾಪಚ್ಯ ಎಂಬ ಬೇಡನಿದ್ದನು. ಅವನು ಬೇಡನಾದರೂ ಬೇಡರ ಧರ್ಮದಿಂದಲೇ ಸಿದ್ಧಿಯನ್ನು ಹೊಂದಿದನು. ಅವನು ಒಳ್ಳೇ ಬುದ್ಧಿವಂತನು. ಚೆನ್ನಾಗಿ ಯುದ್ಧಮಾಡುವನು. ಶಾಸ್ತ್ರೋಕ್ತಧರ್ಮವನ್ನು ಕೇಳಿದ್ದನು. ಬ್ರಾಹ್ಮಣರಲ್ಲಿ ಪ್ರೀತಿಉಳ್ಳವನಾಗಿದ್ದನು. ಗುರುಗಳ ಪೂಜೆಯನ್ನು ಮಾಡುತ್ತಿದ್ದನು. ಅರಣ್ಯದಲ್ಲಿ ಬೆಳಿಗ್ಗೆ ಸಾಯಂಕಾಲ ಮೃಗಗಳನ್ನು ಓಡಿಸುವನು. ಮೃಗಗಳ ಜಾತಿಗಳನ್ನೆಲ್ಲಾ ತಿಳಿದಿದ್ದನು. ಮೃಗಬೇಟೆಯ ಕ್ರಮವನ್ನೆಲ್ಲಾ ತಿಳಿದಿದ್ದನು. ಸರ್ವವರ್ಣಗಳ ಧರ್ಮಗಳನ್ನು ತಿಳಿದಿದ್ದನು. ಅವನ ಒಂದು ಬಾಣವೂ ವ್ಯರ್ಥವಾಗಲಾರದು. ದೃಢವಾದ ಆಯುಧವುಳ್ಳವನಾಗಿದ್ದನು. ಅನೇಕ ನೂರು

1. ಮ.ಭಾ.

ಮಂತ್ರಿಗಳು ನರಿಯು ತಮ್ಮ ವೃತ್ತಿಯನ್ನೆಲ್ಲಾ ಕೆಡಿಸಬಹುದೆಂದು ನಿಶ್ಚಯಿಸಿ ಹುಲಿಯೊಡನೆ 'ಮಹಾಪ್ರಭೋ! ಇದು ಆ ನರಿಯ ಕೆಲಸ. ಅವನು ಯಾವ ಕಾರ್ಯವನ್ನು ಮಾಡಲಾರನು? ಸ್ವಾಮಿಯು ಅವನ ವಿಷಯ ಹೇಗೆ ಕೇಳ್ಪೋಣವಾಗಿತ್ತೋ ಹಾಗೆ ಅವನು ಅಲ್ಲ. ಮಾತಿನಿಂದ ಮಾತ್ರ ಧರ್ಮಿಷ್ಠನು. ಸ್ವಭಾವದಿಂದ ಅತ್ಯಂತ ಕ್ರೂರಿಯು. ಮಹಾಕಪಟಿಯು. ವ್ಯರ್ಥವಾಗಿ ಆಚಾರವಂತ ಎಂದು ಹೇಳಿಕೊಳ್ಳುವನು. ಏನೋ ಕಾರ್ಯಕ್ಕೋಸ್ಕರ ಭೋಜನಾದಿಗಳಲ್ಲಿ ನಿಯಮವನ್ನು ತೋರಿಸುವನು. ನಿಮಗೆ ನಮ್ಮ ಮಾತಿನಲ್ಲಿ ಅವಿಶ್ವಾಸವಿದೆ. ಪ್ರತ್ಯಕ್ಷವಾಗಿ ತೋರಿಸುವೆವು ಎಂದು ಹೇಳಿ ಆಗಲೇ ನರಿಯ ಮನೆಯಿಂದ ಆ ಮಾಂಸವನ್ನು ತಂದು ತೋರಿಸಿದವು. ತಾನು ತಿನ್ನವ ಮಾಂಸವನ್ನು ನರಿಯು ಅಪಹಾರ ಮಾಡಿತು ಎಂಬ ಮಾತನ್ನು ಹುಲಿಯು ನಂಬಿ ಆ ನರಿಯನ್ನು ಕೊಂದು ಹಾಕಿರಿ ಎಂದು ಆಜ್ಞಾಪಿಸಿತು.

ನರಿಗೆ ಬಂದ ಆಪತ್ತನ್ನು ತಿಳಿದು ಹುಲಿಯ ತಾಯಿಯು ಮಗನಿಗೆ ಹಿತವಾದ ವಾಕ್ಯಗಳನ್ನು ಹೇಳಿತು. 'ಮಗ! ನೀನು ಈ ಕಪಟಿಗಳ ಮಾತನ್ನು ನಂಬಬೇಡ. ಯಾರಿಗಾದರೂ ಒಳ್ಳೆಯದಾದರೆ ಅದನ್ನು ಇತರರು ಸಹಿಸಲಾರರು. ಅವನಲ್ಲಿ ವೈರವನ್ನು ಮಾಡುವರು. ಏನಾದರೂ ದೋಷವನ್ನು ತಂದು ಹಾಕುವರು. ಲೋಕದಲ್ಲಿ ಮೂರ್ಖರಿಗೆ ಪಂಡಿತರೂ, ದರಿದ್ರರಿಗೆ ಹಣವಂತೂ, ಅಧರ್ಮಿಷ್ಠರಿಗೆ ಧರ್ಮಿಷ್ಠರೂ, ಕುರೂಪಿಗಳಿಗೆ ಸುರೂಪಿಗಳೂ, ದ್ವೇಷಕ್ಕೆ ವಿಷಯರಾಗುವರು. ನಿನ್ನ ಮನೆಯೊಳಗಿದ್ದ ಮಾಂಸವು ಹೇಗೆ ಅಪಹೃತವಾಯಿತು. ಮಾಂಸವನ್ನು ನೀನಾಗಿ ಕೊಟ್ಟರೂ ಆ ನರಿಯು ತೆಗೆದುಕೊಳ್ಳುವುದಿಲ್ಲ. ಆದುದರಿಂದ ಇದರಲ್ಲಿ ಏನೋ ಕಪಟವಿರಬೇಕು. ಆದುದರಿಂದ ಪರೀಕ್ಷಾ ಮಾಡಿ ನೋಡು. ಮಗ! ರಾಜನು ಇನ್ನೊಬ್ಬರನ್ನು ಕೊಲ್ಲಿಸುವುದು ಕಷ್ಟವಲ್ಲ. ಆದರೆ ಕ್ಷಮಿಸುವುದೇ ಸ್ತುತ್ಯವಾದದ್ದು ಕೀರ್ತಿಗೂ ಕಾರಣವಾದದ್ದು' ಎಂದು ಹೇಳಿತು.

ತರುವಾಯ ಪರೀಕ್ಷಿಸುವಾಗ ಹುಲಿಗೆ ಈ ಕಪಟವೆಲ್ಲಾ ಗೊತ್ತಾಯಿತು. ವಿಷಯವು ತಿಳಿದ ಮೇಲೆ ಹುಲಿಯು ನರಿಯನ್ನು ಆಲಂಗಿಸಿ, ಸತ್ಕಾರಮಾಡಿತು. ನರಿಯು ಮಾತ್ರ ಕೋಪದಿಂದ ತಾನು ಉಪವಾಸ ಮಾಡಿ ಸಾಯುವನೆಂದು ಕೂತುಕೊಂಡಿತು. ಆಗ ಹುಲಿಯು ಸ್ನೇಹದಿಂದ ಹಾಗೆ ಮಾಡಬಾರದೆಂದು ಹೇಳಿತು. ಸತ್ಕಾರ ಮಾಡಿತು. ಆಗ ನರಿಯು ಹುಲಿಯನ್ನು ನೋಡಿ ಸ್ನೇಹದಿಂದ ಸಂಭ್ರಮದಿಂದ ನಮಸ್ಕಾರ ಮಾಡಿ ಕಣ್ಣೀರಿನಿಂದ ಗದ್ಗದ ಸ್ವರದಿಂದ 'ರಾಜನೇ! ಮೊದಲು ನನಗೆ

ಸತ್ಕಾರ ಮಾಡಿದಿ. ಆಮೇಲೆ ನನಗೆ ಅವಮಾನ ಮಾಡಿದಿ. ಆದುದರಿಂದ ಇನ್ನು ಮುಂದೆ ನಿನ್ನ ಸಮೀಪದಲ್ಲಿ ವಾಸಮಾಡಲಿಕ್ಕೆ ನಾನು ಯೋಗ್ಯನಲ್ಲ. ಒಂದು ಸಲ ಅವಮಾನಮಾಡಿ ಪುನಃ ನನಗೆ ಅಧಿಕಾರ ಕೊಟ್ಟರೆ ನಿನಗೆ ಹೇಗೆ ನಂಬಿಕೆ ಉಂಟಾಗುವುದು? ನನಗಾದರೂ ನಿನ್ನಲ್ಲಿ ಹೇಗೆ ವಿಶ್ವಾಸವಿರುವುದು? ಮಾಡಲು ನನ್ನನ್ನು ಸಮರ್ಥನೆಂದು ತಿಳಿದು ನನಗೆ ಅಧಿಕಾರ ಕೊಟ್ಟು ಆಮೇಲೆ ನಾನು ಹೇಳಿದ ಮಾತನ್ನು ಮೀರಿ ನನಗೆ ಅವಮಾನ ಮಾಡಿದಿ. ಮೊದಲು ಯಾರು ಸಭೆಯಲ್ಲಿ ಉತ್ತಮವಾದ ಶೀಲವಳ್ಳವನೆಂದು ಪ್ರಸಿದ್ಧನಾಗಿರುವನೋ ಅವನ ದೋಷವನ್ನು ಹೇಳಬಾರದು. ಈ ರೀತಿಯಾಗಿ ಅವಮಾನ ಮಾಡಿದ ಮೇಲೆ ನಿನಗೆ ನನ್ನಲ್ಲಿ ವಿಶ್ವಾಸವುಂಟಾಗಲಾರದು. ನಿನಗೆ ವಿಶ್ವಾಸವಿಲ್ಲದಿರುವಾಗ ನೀನು ಯಾವಾಗ ಏನು ಮಾಡುವಿ ಎಂದು ಭಯವೇ ಇರುವುದು' ಇತ್ಯಾದಿ ರೀತಿಯಾಗಿ ಹೇಳಿ ರಾಜನನ್ನು ಸಮಾಧಾನಪಡಿಸಿ ಕಾಡಿಗೆ ಹೋಯಿತು. ಅಲ್ಲಿ ಉಪವಾಸ ಮಾಡಿ ದೇಹವನ್ನು ಪರಿತ್ಯಾಗ ಮಾಡಿ ಸ್ವರ್ಗವನ್ನು ಹೊಂದಿತು.



## ಕಾಪಚ್ಯನ ಕಥೆ [1]

ಭೀಷ್ಮಾಚಾರ್ಯರು ಹೇಳಿದರು. 'ಧರ್ಮರಾಜ! ಬೇಡರೂ ಕೂಡ ಶಾಸ್ತ್ರದಲ್ಲಿ ಹೇಳಿದ ಧರ್ಮವನ್ನು ಅನುಸರಿಸಿದರೆ ಸಿದ್ಧಿಯನ್ನು ಹೊಂದಬಹುದು. ಅದಕ್ಕೆ ಒಂದು ಕಥೆಯನ್ನು ಹೇಳುತ್ತೇನೆ. ಕೇಳು.

ಬೇಡಸ್ತ್ರೀಯಲ್ಲಿ ಒಬ್ಬ ಕ್ಷತ್ರಿಯನಿಂದ ಹುಟ್ಟಿದ ಕಾಪಚ್ಯ ಎಂಬ ಬೇಡನಿದ್ದನು. ಅವನು ಬೇಡನಾದರೂ ಬೇಡರ ಧರ್ಮದಿಂದಲೇ ಸಿದ್ಧಿಯನ್ನು ಹೊಂದಿದನು. ಅವನು ಒಳ್ಳೇ ಬುದ್ಧಿವಂತನು. ಚೆನ್ನಾಗಿ ಯುದ್ಧಮಾಡುವನು. ಶಾಸ್ತ್ರೋಕ್ತಧರ್ಮವನ್ನು ಕೇಳಿದ್ದನು. ಬ್ರಾಹ್ಮಣರಲ್ಲಿ ಪ್ರೀತಿಉಳ್ಳವನಾಗಿದ್ದನು. ಗುರುಗಳ ಪೂಜೆಯನ್ನು ಮಾಡುತ್ತಿದ್ದನು. ಅರಣ್ಯದಲ್ಲಿ ಬೆಳಿಗ್ಗೆ ಸಾಯಂಕಾಲ ಮೃಗಗಳನ್ನು ಓಡಿಸುವನು. ಮೃಗಗಳ ಜಾತಿಗಳನ್ನೆಲ್ಲಾ ತಿಳಿದಿದ್ದನು. ಮೃಗಬೇಟೆಯ ಕ್ರಮವನ್ನೆಲ್ಲಾ ತಿಳಿದಿದ್ದನು. ಸರ್ವವರ್ಣಗಳ ಧರ್ಮಗಳನ್ನು ತಿಳಿದಿದ್ದನು. ಅವನ ಒಂದು ಬಾಣವೂ ವ್ಯರ್ಥವಾಗಲಾರದು. ದೃಢವಾದ ಆಯುಧವುಳ್ಳವನಾಗಿದ್ದನು. ಅನೇಕ ನೂರು

1. ಮ.ಭಾ.

ಸೈನಿಕರನ್ನು ಒಬ್ಬನೇ ಜಯಿಸುತ್ತಿದ್ದನು. ಕಾಡಿನಲ್ಲಿಯೇ ವೃದ್ಧರಾದ ತಂದೆತಾಯಿಗಳನ್ನು ಜೇನುತುಪ್ಪ ಮಾಂಸ ಹಣ್ಣುಗೆಡ್ಡೆ ಅನ್ನ ಅವುಗಳಿಂದ ಸತ್ಕರಿಸಿ ಭೋಜನ ಮಾಡಿಸುತ್ತಾ ಇದ್ದನು.

ಅರಣ್ಯದಲ್ಲಿರುವ ಬ್ರಾಹ್ಮಣರನ್ನೂ ಸನ್ಯಾಸಿಗಳನ್ನೂ ರಕ್ಷಿಸುತ್ತಿದ್ದನು. ವನದಲ್ಲಿ ಮೃಗಗಳನ್ನು ಕೊಂದು ಮಾಂಸವನ್ನು ಅವರಿಗೆ ಕೊಡುತ್ತಿದ್ದನು. ಬೇಡನು ಕೊಟ್ಟದ್ದನ್ನು ತೆಗೆದುಕೊಳ್ಳಬಾರದು ಎಂದು ಯಾರು ಸಂದೇಹಪಡುವರೋ ಅವರ ಮನೆಯಲ್ಲಿ ಬೆಳಿಗ್ಗೆ ಬೇಗನೇ ಎಲ್ಲಿಯಾದರೂ ಹಾಕಿ ಹೋಗುತ್ತಿದ್ದನು. ಅನೇಕ ಸಾವಿರ ಬೇಡರು ಅವನನ್ನು ತಮಗೆ ಯಜಮಾನನಾಗಬೇಕೆಂದು ಕೇಳಿಕೊಂಡರು. 'ನೀನು ದೇಶಕಾಲವನ್ನೆಲ್ಲಾ ತಿಳಿದವನು. ಪಂಡಿತನು. ಶೂರನು. ದೃಢವ್ರತವುಳ್ಳವನು. ನಮಗೆಲ್ಲಾ ನೀನು ಯಜಮಾನನಾಗು. ನೀನು ಹೇಳಿದ ರೀತಿಯಾಗಿ ನಾವು ಮಾಡುವೆವು. ತಂದೆತಾಯಿಗಳಂತೆ ನೀನು ನಮ್ಮನ್ನು ರಕ್ಷಿಸಬೇಕು' ಎಂದರು.

ಅದಕ್ಕೆ ಕಾಪಚ್ಯನು 'ನೀವು ಹೆಂಗಸನ್ನು ಕೊಲ್ಲಬಾರದು. ಭಯವುಳ್ಳವನನ್ನೂ ಶಿಶುವನ್ನೂ ಕೊಲ್ಲಬಾರದು. ಯುದ್ಧಮಾಡದೆ ಇದ್ದವನನ್ನೂ ಕೊಲ್ಲಬಾರದು. ಹೆಂಗಸರನ್ನು ಬಲಾತ್ಕಾರ ಮಾಡಬಾರದು. ಸರ್ವಪ್ರಾಣಿಗಳಲ್ಲಿಯೂ ಸ್ತ್ರೀಯನ್ನು ಕೊಲ್ಲಬಾರದು. ಗೋವುಗಳಿಗೂ ಬ್ರಾಹ್ಮಣರಿಗೂ ಹಿತವನ್ನು ಮಾಡಬೇಕು. ಅವರಿಗೋಸ್ಕರ ಯುದ್ಧಮಾಡಬೇಕು. ಸತ್ಯವನ್ನು ಬಿಡಬಾರದು. ಮದುವೆ ಮುಂಜಿ ಇತ್ಯಾದಿ ಶುಭಕಾರ್ಯಕ್ಕೆ ವಿಘ್ನ ಮಾಡಬಾರದು. ದೇವತೆಗಳನ್ನೂ ಋಷಿಗಳನ್ನೂ ಪಿತೃಗಳನ್ನೂ ಪೂಜಿಸಬೇಕು. ಬ್ರಾಹ್ಮಣರನ್ನು ಸರ್ವಸ್ವರಿಂದಲೂ ಪೂಜಿಸಬೇಕು. ಬ್ರಾಹ್ಮಣರು ಯಾರಿಗೆ ಸಂತೋಷಹೊಂದುವುದಿಲ್ಲವೋ ಅವನಿಗೆ ಪರಾಜಯವು ಏರ್ಪಡಿಸುವುದು. ಅವನನ್ನು ಮೂರುಲೋಕದಲ್ಲಿಯೂ ಒಬ್ಬನೂ ರಕ್ಷಿಸಲಾರನು. ಯಾರು ಬ್ರಾಹ್ಮಣರನ್ನು ತಿರಸ್ಕರಿಸುವನೋ, ಅವರು ಸಾಯಲಿ ಎಂದು ಇಚ್ಛಿಸುವನೋ ಸೂರ್ಯೋದಯವಾಗಲು ಕತ್ತಲೆಯು ನಾಶವನ್ನು ಹೊಂದುವಂತೆ ಅವನು ಪರಾಜಯವನ್ನು ಹೊಂದುವನು. ಯಾರು ಶಿಷ್ಟರನ್ನು ಪೀಡಿಸುವರೋ ಅವರನ್ನು ಕೊಲ್ಲುವುದೇ ಧರ್ಮವು. ಬೇಡರಾದರೂ ಧರ್ಮಶಾಸ್ತ್ರದಲ್ಲಿ ಹೇಳಿದ ರೀತಿಯಾಗಿದ್ದರೆ ಶೀಘ್ರವಾಗಿಯೇ ಸಿದ್ಧಿಯನ್ನು ಹೊಂದುವರು' ಎಂದು ಹೇಳಿದನು.

ತರುವಾಯ ಬೇಡರೆಲ್ಲರೂ ಕಾಪಚ್ಯನು ಹೇಳಿದ ರೀತಿಯಾಗಿಯೇ ನಡೆದರು. ಪಾಪಕಾರ್ಯವನ್ನು ಬಿಟ್ಟರು. ಅಭಿವೃದ್ಧಿಯನ್ನು ಹೊಂದಿದರು. ಕಾಪಚ್ಯನೂ ಸಜ್ಜನರಿಗೆ ಕ್ಷೇಮವನ್ನು ಉಂಟುಮಾಡುತ್ತಾ ಬೇಡರನ್ನು ಪಾಪದಿಂದ ಬಿಡಿಸುತ್ತಾ ತನ್ನ

ಧರ್ಮದಿಂದ ಮಹಾಸಿದ್ಧಿಯನ್ನು ಹೊಂದಿದನು. ಈ ಕಾಪಚ್ಯನ ಚರಿತೆಯನ್ನು ನಿತ್ಯವೂ ಮನಸ್ಸಿನಲ್ಲಿ ತಂದುಕೊಂಡರೆ ಅವನಿಗೆ ಕಾಡಿನ ಪ್ರಾಣಿಗಳಿಗೆ ಭಯವುಂಟಾಗಲಾರದು. ಅವನಿಗೆ ಮನುಷ್ಯರಿಂದ ರಾಕ್ಷಸರಿಂದ ಯಾರಿಂದಲೂ ಭಯವುಂಟಗಲಾರದು.



## ಮೀನುಗಳ ಕಥೆ [1]

ಭೀಷ್ಮಾಚಾರ್ಯರು ಹೇಳಿದರು—ಧರ್ಮರಾಜ! ಮುಂದೆ ಬರುವ ಆಪತ್ತನ್ನು ಮೊದಲು ತಿಳಿದುಕೊಂಡು ಅದಕ್ಕೆ ಪರಿಹಾರವನ್ನು ಮೊದಲೇ ಮಾಡಿಕೊಳ್ಳುವವನೋ, ಆಪತ್ತು ಬಂದ ಕಾಲದಲ್ಲಿಯೇ ಪರಿಹಾರ ಮಾಡಿಕೊಳ್ಳುವ ಉಪಾಯವನ್ನು ತಿಳಿದವನೂ ಸುಖವನ್ನು ಹೊಂದುವರು. ಆಮೇಲೆ ಆಗಲಿ ಎಂದು ಸಾವಕಾಶಮಾಡುವ ಸೋಮಾರಿಯಾದವನು ಅನರ್ಥವನ್ನು ಹೊಂದುವನು. ಈ ವಿಷಯದಲ್ಲಿ ಒಂದು ಕತೆಯನ್ನು ಹೇಳುವೆನು.

ತುಂಬಾ ಆಳವಿಲ್ಲದಿರುವ ಒಂದು ಸರೋವರದಲ್ಲಿ ಅನೇಕ ಮೀನುಗಳ ಮಧ್ಯದಲ್ಲಿ ದೀರ್ಘದರ್ಶಿ, ಪ್ರಾಪ್ತಕಾಲಜ್ಞ, ದೀರ್ಘಸೂತ್ರಿ ಎಂಬ ಮೂರು ಮೀನುಗಳು ಇದ್ದವು. ದೀರ್ಘದರ್ಶಿಯು ಬಹುಕಾಲದ ಮೇಲೂ ಬರುವ ಆಪತ್ತನ್ನು ಮೊದಲೇ ತಿಳಿದು ಪರಿಹಾರ ಮಾಡುವ ಸ್ವಭಾವವುಳ್ಳದ್ದು. ಪ್ರಾಪ್ತಕಾಲಜ್ಞ ಎಂಬ ಮೀನು ತತ್ಕಾಲದಲ್ಲಿ ಬಂದ ಆಪತ್ತನ್ನು ಪರಿಹಾರ ಮಾಡಿಕೊಳ್ಳುವ ಸ್ವಭಾವವುಳ್ಳದ್ದು. ದೀರ್ಘಸೂತ್ರಿಯು ಸೋಮಾರಿಯು. ಹೀಗೆ ಮೂರು ಮೀನುಗಳೂ ಆ ಸರೋವರದಲ್ಲಿ ಇರುವಾಗ ಒಂದು ದಿನ ಮೀನು ಹಿಡಿಯುವರು ಬಂದು ಆ ಕೆರೆಯ ನೀರನ್ನು ಹೊರಗೆ ತಗ್ಗಾದ ಸ್ಥಳಕ್ಕೆ ಹೋಗುವಂತೆ ಮಾಡಿದರು. ಕೆರೆಯಲ್ಲಿ ನೀರು ಕಡಿಮೆಯಾಗುವುದನ್ನು ನೋಡಿ ದೀರ್ಘದರ್ಶಿಯು ಇಬ್ಬರು ಮಿತ್ರರೊಡನೆ ನಮಗೆಲ್ಲಾ ಮಹಾ ಆಪತ್ತು ಬಂದು ಸೇರಿದೆ. ನೀರೆಲ್ಲಾ ಬತ್ತಿಹೋಗುವ ಒಳಗೆ ದಾರಿಯು ಒಣಗುವ ಮೊದಲು ಬೇಗನೇ ನಾವು ಬೇರೆ ಸ್ಥಳಕ್ಕೆ ಹೋಗುವ. ಯಾರು ಮುಂದೆ ಬರುವ ಆಪತ್ತನ್ನು ನೀತಿಯಿಂದ ಮೊದಲೇ ಪರಿಹಾರಮಾಡಲಿಕ್ಕೆ ಪ್ರಯತ್ನಮಾಡುವನೋ ಅವನು ಸಂಶಯವನ್ನು ಹೊಂದಲಾರನು. ನಾವು ಬೇರೆ

1. ಮಭಾ. ಶಾಂ. ಆಪ. ಅ.137

ಎಲ್ಲಿಗಾದರೂ ಹೋಗುವ ಎಂದಿತು. ದೀರ್ಘಸೂತ್ರಿಯು ಧೈರ್ಯದಿಂದ ಇರುವ. ಅವರಸವೊಂದೂ ಇಲ್ಲ ಎಂದಿತು. ಪ್ರಾಪ್ತಕಾಲಜ್ಞನು ಸಮಯಬರಲಿ. ಆಗ ಮಾಡಬೇಕಾದದ್ದನ್ನು ಮಾಡಿದರಾಯಿತು ಎಂದಿತು. ಈರೀತಿಯಾಗಿ ಹೇಳಲು ದೀರ್ಘದರ್ಶಿಯು ಬೇಗನೆ ಪ್ರವಾಹದಿಂದ ಮತ್ತೊಂದು ಆಳವಾದ ಪ್ರದೇಶಕ್ಕೆ ಹೋಯಿತು. ತರುವಾಯ ನೀರೆಲ್ಲಾ ಹೋದದ್ದನ್ನು ನೋಡಿ ಬೆಸ್ತರು ಬಲೆ ಹಾಕಿದರು. ಆಗ ದೀರ್ಘಸೂತ್ರನು ಇತರ ಮೀನುಗಳೊಡನೆ ಬಲೆಯಲ್ಲಿ ಸಿಕ್ಕಿಬಿದ್ದಿತು. ಪ್ರಾಪ್ತಕಾಲಜ್ಞನು ಹೊರಗಿನಿಂದಲೇ ಬಲೆಯ ಹಗ್ಗವನ್ನು ಕಚ್ಚಿಕೊಂಡಿತ್ತು. ಅದೂ ಸಿಕ್ಕಿಬಿದ್ದಿದೆಯೆಂದೂ ತಿಳಿದುಕೊಂಡು ಬೆಸ್ತರು ಎಲ್ಲಾ ಮೀನುಗಳೊಡನೆ ಅದನ್ನು ತುಂಬಾ ನೀರು ಉಳ್ಳ ಸ್ಥಳಕ್ಕೆ ತೆಗೆದು ಮೀನುಗಳನ್ನು ತೊಳೆಯುತ್ತಿರಲು ಪ್ರಾಪ್ತಕಾಲಜ್ಞನು ನೀರಿನಲ್ಲಿ ಹಾರಿ ತಪ್ಪಿಸಿಕೊಂಡು ಹೋಯಿತು. ದೀರ್ಘಸೂತ್ರನು ಮಾತ್ರ ಪ್ರಾಣಬಿಟ್ಟಿತು.

ಆದುದರಿಂದ ಬರುವ ಆಪತ್ತನ್ನು ಯಾರು ಯೋಚಿಸಿ ತಿಳಿದುಕೊಳ್ಳುವುದೇ ಇಲ್ಲವೋ ಅವನು ದೀರ್ಘಸೂತ್ರದಂತೆ ನಾಶವನ್ನು ಹೊಂದುವನು. ನಾನು ಸಮರ್ಥನಾಗಿರುವೆನೆಂದು ತಿಳಿದುಕೊಂಡು ಮೊದಲೇ ಆದಕ್ಕೆ ಪರಿಹಾರೋಪಾಯ ವನ್ನು ಮಾಡುವುದಿಲ್ಲವೋ ಪ್ರಾಪ್ತಕಾಲಜ್ಞನಂತೆ ಸಂಶಯಗ್ರಸ್ತನಾಗುವನು. ಅಂದರೆ ಬದುಕಿದರೂ ಬದುಕಬಹುದು. ಸತ್ತರೂ ಸಾಯಬಹುದು. ನಿಶ್ಚಯವನ್ನು ಹೇಳಲಿಕ್ಕೆ ಆಗಲಾರದು. ಮೊದಲೇ ಪರಿಹಾರಮಾಡಿಕೊಳ್ಳುವವನು ದೀರ್ಘದರ್ಶಿಯಂತೆ ಸುಖವಾಗಿರುವನು.



## ಗಿಳಿಯ ಕಥೆ [1]

ಪೂರ್ವದಲ್ಲಿ ಕಾಶಿದೇಶದಲ್ಲಿ ಒಬ್ಬ ಬೇಡನು ವಿಷವನ್ನು ಹಚ್ಚಿರುವ ಬಾಣವನ್ನು ಹಿಡಿದುಕೊಂಡು ಮೃಗಗಳನ್ನು ಹುಡುಕುತ್ತಾ ಹೋದನು. ಹತ್ತಿರದಲ್ಲೇ ಮೃಗಗಳನ್ನು ನೋಡಿ ಬಾಣವನ್ನು ಬಿಟ್ಟನು. ಆ ಬಾಣವು ಗುರಿತಪ್ಪಿಹೋಗಿ ಮೃಗಗಳಿಗೆ ತಾಗದೆ ದೊಡ್ಡ ಒಂದು ಮರಕ್ಕೆ ಹೋಗಿ ತಾಗಿತು. ವಿಷಹಚ್ಚಿದ ಬಾಣದಿಂದ ಬಲವಾಗಿ ಬಡಿಯಲ್ಪಟ್ಟ ಮರದಲ್ಲಿ ವಿಷ ಸಾಮರ್ಥ್ಯದಿಂದ ಹಣ್ಣುಗಳು ಎಲೆಗಳು ಎಲ್ಲವೂ

1. ಮಭಾ. ಅನುಪ. ಅ.15

ಉದುರಿಹೋದವು. ಮರವೂ ಒಣಗಿಹೋಯಿತು. ಆ ಮರದ ಕೋಟರ (ಪೊಂದು)ದಲ್ಲಿ ಬಹುಕಾಲದಿಂದ ಒಂದು ಗಿಳಿಯು ವಾಸಮಾಡುತ್ತಿತ್ತು. ಅದು ಮರವು ಒಣಗಿಹೋದರೂ ಕೂಡ ಆ ಮರದ ಮೇಲಿನ ಪ್ರೀತಿಯಿಂದ ಆ ಮರವನ್ನು ಬಿಟ್ಟು ಹೋಗಲೇ ಇಲ್ಲ. ವಯಸ್ಸಾಗಿ ಆ ಪಕ್ಷಿಗೆ ಹಾರಲಿಕ್ಕೆ ಆಗಲಿಲ್ಲ. ಅಲ್ಲಿ ಆಹಾರವು ಸಿಗಲಿಲ್ಲ. ಮಾತಾಡಲಿಕ್ಕೂ ಆಗಲಿಲ್ಲ. ಆದರೂ ಆ ಮರದ ಮೇಲಿನ ಪ್ರೀತಿಯಿಂದ ಅದನ್ನು ಬಿಟ್ಟು ಹೋಗಲೇ ಇಲ್ಲ. ಇಷ್ಟು ಕಾಲ ಇದರಲ್ಲಿ ಸುಖವಾಗಿ ಇದ್ದು ಈಗ ಇದು ಒಣಗಿಹೋಯಿತು ಎಂದು ಇದನ್ನು ಬಿಟ್ಟು ಹೋಗುವುದು ಧರ್ಮವಲ್ಲವೆಂದು ಅಲ್ಲಿಯೇ ಇದ್ದಿತು.

ಈರೀತಿಯಾಗಿ ಇರುತ್ತಿದ್ದ ಆ ಪಕ್ಷಿಯನ್ನು ನೋಡಿ ಇಂದ್ರದೇವರು ಆಶ್ಚರ್ಯವನ್ನು ಹೊಂದಿದರು. ಪಕ್ಷಿ ಮೊದಲಾದ ಪ್ರಾಣಿಗಳಲ್ಲಿಯೂ ಇಂತಹ ಒಳ್ಳೇ ಸ್ವಭಾವವುಳ್ಳ ಪ್ರಾಣಿಗಳು ಇರುವುವೇ ಎಂದುಕೊಂಡರು. ತರುವಾಯ ತಾನು ಬ್ರಾಹ್ಮಣವೇಷವನ್ನು ಹಾಕಿಕೊಂಡು ಇಂದ್ರದೇವರು ಪಕ್ಷಿಯ ಬಳಿಗೆ ಬಂದು 'ಪಕ್ಷಿಶ್ರೇಷ್ಠನಾದ ಗಿಳಿಯೇ! ನಿನ್ನಿಂದಾಗಿ ನಿನ್ನ ತಾಯಿ ದಕ್ಷಪ್ರಜೇಶ್ವರನ ಮಗಳು ಸತ್ಪುತ್ರವತಿಯಾಗಿರುವಳು. ನಿನ್ನ ಹತ್ತಿರ ನಾನೊಂದು ಕೇಳುತ್ತೇನೆ. ನೀನು ಈ ಮರವನ್ನು ಬಿಟ್ಟು ಯಾಕೆ ಹೋಗಲಾರೆ?' ಎಂದು ಕೇಳಿದರು.

ಈ ರೀತಿಯಾಗಿ ಇಂದ್ರದೇವರು ಕೇಳಲು ಆ ಪಕ್ಷಿಯು ಇಂದ್ರದೇವರಿಗೆ ಶಿರಸ್ಸಿನಿಂದ ನಮಸ್ಕಾರ ಮಾಡಿ 'ದೇವರಾಜ! ಬರಬೇಕು. ನನಗೆ ತಪಸ್ಸಿನಿಂದ ನೀವು ಇಂದ್ರದೇವರು ಎಂದು ತಿಳಿದಿದೆ' ಎಂದು ಹೇಳಿತು. ಆಗ ಇಂದ್ರದೇವರು ಸಾಧು ಸಾಧು ಎಂದು ಹೇಳಿ ಮನಸ್ಸಿನಲ್ಲಿ 'ಏನು ಈ ಪಕ್ಷಿಗೆ ಜ್ಞಾನವು!' ಎಂದು ಸತ್ಕರಿಸಿದರು. ಶುಭಕರ್ಮವುಳ್ಳ ಪರಮಧಾರ್ಮಿಕನಾದ ಆ ಗಿಳಿಯನ್ನು ತಿಳಿದರೂ ಇಂದ್ರದೇವರು 'ಎಲೆಯಿಂದಲೂ ಹಣ್ಣುಗಳಿಂದಲೂ ರಹಿತವಾದ ಒಣಗಿಹೋದ ಈ ಮರದಲ್ಲೇ ಏಕೆ ಇರುವಿ? ಈ ದೊಡ್ಡ ಕಾಡಿನಲ್ಲಿ ಎಲೆಗಳಿಂದ ಹಣ್ಣುಗಳಿಂದ ಪೊಂದುಗಳಿಂದ ಕೂಡಿರುವ ಅನೇಕ ಮರಗಳಿವೆಯಲ್ಲಾ! ಆಯುಷ್ಯಹೀನವಾದ ಸಾಮರ್ಥ್ಯದಿಂದ ರಹಿತವಾದ ನಿಃಸಾರವಾದ ಕಾಂತಿರಹಿತವಾದ ಈ ಮರವನ್ನು ಬಿಟ್ಟು ಬಿಡತಕ್ಕವನಾಗು' ಎಂದು ಹೇಳಿದರು.

ಅದಕ್ಕೆ ಗಿಳಿಯು ದೈನ್ಯದಿಂದ ದೀರ್ಘಶ್ವಾಸವನ್ನು ಬಿಟ್ಟು 'ದೇವರ ಇಚ್ಛೆಯನ್ನು ಮೀರಲಿಕ್ಕೆ ಆಗುವುದಿಲ್ಲ. ನಿಮ್ಮ ಮಾತಿಗೆ ನಾನು ಉತ್ತರವನ್ನು ಹೇಳುತ್ತೇನೆ. ನಾನು ಇದೇ ಮರದಲ್ಲಿ ಹುಟ್ಟಿದೆನು. ಇಲ್ಲಿಯೇ ಒಳ್ಳೇ ಗುಣಗಳಿಂದ ಯುಕ್ತನಾಗಿದ್ದೇನೆ.

ಇಲ್ಲಿಯೇ ಸುರಕ್ಷಿತನಾಗಿದ್ದೇನೆ. ಶತ್ರುಗಳ ವಶನಾಗಿಲ್ಲ. ಇದರ ಮೇಲೆ ಪ್ರೇಮವುಳ್ಳ ನನಗೆ ಯಾಕೆ ಇದರ ಮೇಲಿನ ಭಕ್ತಿಯನ್ನು ತಪ್ಪಿಸುವಿರಿ? ದಯೆಯು ಉತ್ತಮವಾದ ಧರ್ಮವು. ದಯೆಯು ಯಾವಾಗಲೂ ಸಜ್ಜನರಿಗೆ ಪ್ರೀತಿಯನ್ನು ಉಂಟುಮಾಡುವುದು. ನೀವೇ ದೇವತೆಗಳೆಲ್ಲರೂ ಧರ್ಮ ಸಂಶಯವನ್ನು ಕೇಳುವಾಗ ಉತ್ತರವನ್ನು ಹೇಳುವಿರಿ. ಆದುದರಿಂದ ನೀವು ನನ್ನ ಹತ್ತಿರ ಈ ಮರವನ್ನು ಬಿಟ್ಟು ಹೋಗಲಿಕ್ಕೆ ಹೇಳುವುದು ಸರಿಯಲ್ಲ. ಇಷ್ಟರವರೆಗೆ ಇದನ್ನೇ ಆಶ್ರಯಿಸಿಕೊಂಡು ಇದ್ದು ಈಗ ಹೇಗೆ ಬಿಟ್ಟುಹೋಗಲಿ?' ಎಂದು ಹೇಳಿತು.

ಈ ಪ್ರಕಾರವಾಗಿ ಹೇಳಿದ ಗಿಳಿಯ ಮಾತನ್ನು ಕೇಳಿ ಇಂದ್ರದೇವರು ಸಂತೋಷವುಳ್ಳವರಾಗಿ ಬೇಕಾದ ವರವನ್ನು ಕೇಳಿಕೊ ಎಂದರು. ಆಗ ಗಿಳಿಯು ಈ ಮರವು ಬದುಕುವಂತೆ ಮಾಡಬೇಕೆಂದು ಕೇಳಿಕೊಂಡಿತು. ಇಂದ್ರದೇವರು ಆ ಗಿಳಿಯ ದೃಢವಾದ ಭಕ್ತಿಯನ್ನೂ ಒಳ್ಳೆ ಸ್ವಭಾವವನ್ನು ನೋಡಿ ಸಂತೋಷವುಳ್ಳವರಾಗಿ ಆ ಮರದ ಮೇಲೆ ಅಮೃತವನ್ನು ಸುರಿಸಿದರು. ಇದರಿಂದ ಮರವು ಬದುಕಿತು. ಎಲೆಗಳು ಹಣ್ಣುಗಳು ಕೊಂಬೆಗಳು ಉಂಟಾದವು. ಗಿಳಿಯ ಸಂವಾದದಿಂದ ಆ ಮರವು ಬದುಕಿತು. ಗಿಳಿಯೂ ಆ ಉತ್ತಮ ಸ್ವಭಾವದಿಂದ ಆಯುಷ್ಯವು ಮುಗಿದ ಮೇಲೆ ಇಂದ್ರಲೋಕವನ್ನು ಹೊಂದಿತು.



## ಕೀಟದ ಕಥೆ [1]

ಪೂಜ್ಯರಾದ ವೇದವ್ಯಾಸದೇವರು ಸಂಚರಿಸುತ್ತಾ ಗಾಡಿಯು ಬರುವ ದಾರಿಯಲ್ಲಿ ಓಡುತ್ತಾ ಇರುವ ಒಂದು ಕೀಟವನ್ನು ನೋಡಿದರು. ಸರ್ವಜ್ಞರಾದ ವೇದವ್ಯಾಸ ದೇವರು'ಕೀಟವೇ! ನೀನು ಬಹಳ ಭಯವುಳ್ಳವನಾಗಿ ಇಷ್ಟು ಅವಸರದಿಂದ ಎಲ್ಲಿಗೆ ಓಡುತ್ತಿರುವಿ? ನಿನಗೇನು ಭಯವು ಬಂದಿದೆ? ಎಂದು ಕೇಳಿದರು.

ಅದಕ್ಕೆ ಕೀಟವು 'ಗಾಡಿಯು ಬರುವ ಶಬ್ದವನ್ನು ಕೇಳಿ ನನಗೆ ಮಹಾಭಯವಾಗುತ್ತದೆ. ಭಯಂಕರವಾದ ಶಬ್ದವು ಹತ್ತಿರ ಬರುತ್ತಿದೆ. ನನ್ನನ್ನು ಕೊಲ್ಲುವುದು ಎಂದು ಭಯವಾಗುತ್ತದೆ. ಎತ್ತುಗಳು ಶ್ವಾಸಬಿಡುವ ಶಬ್ದವೂ ಕೇಳಿಸುವುದು. ಗಾಡಿಯನ್ನು ಓಡಿಸುವವರ ಶಬ್ದವೂ ಕೇಳಿಸುತ್ತಿದೆ. ಈ ಶಬ್ದವನ್ನು ನನ್ನಿಂದ ಕೇಳಲು

1. ಮಭಾ. ಅನುಪ ಅ. 117-119

ಆಗುವುದಿಲ್ಲ. ಅದರಿಂದ ನಾನು ಭಯದಿಂದ ಓಡುತ್ತಿದ್ದೇನೆ. ಎಲ್ಲರಿಗೂ ಸಾಯುವುದೆಂದರೆ ಭಯವಷ್ಟೆ! ಆದುದರಿಂದ ನಾನು ಭಯದಿಂದ ಓಡುತ್ತಾ ಇದ್ದೇನೆ' ಎಂದಿತು.

ಆಗ ವೇದವ್ಯಾಸದೇವರು 'ಕೀಟವೇ! ನಿನಗೆ ಈ ದೇಹದಲ್ಲಿ ಸುಖವೆಲ್ಲಿದೆ? ನೀನು ಸಾಯುವದೇ ಸುಖಕರವೆಂದು ತೋರುತ್ತದೆ. ನೀನೊಂದು ಭೋಗವನ್ನು ಅನುಭವಿಸುವಂತೆ ಇಲ್ಲ. ಆದುದರಿಂದ ನೀನು ಸಾಯುವುದೇ ಶ್ರೇಷ್ಠವು' ಎಂದರು.

ಅದಕ್ಕೆ ಕೀಟವು 'ಜೀವರು ಎಲ್ಲಾ ಜಾತಿಯವರೂ ಇರುವರು. ನನಗೆ ಈ ದೇಹದಲ್ಲಿಯೂ ಸುಖವಿದೆ. ಆದುದರಿಂದ ಬದುಕಲಿಕ್ಕೆ ಇಚ್ಛಿಸುತ್ತೇನೆ. ನಾನು ಪೂರ್ವದಲ್ಲಿ ಒಬ್ಬ ಶೂದ್ರನಾಗಿದ್ದೆನು. ಬಹು ಹಣವಂತನಾಗಿದ್ದೆನು. ಹಾಗೆಯೇ ಬ್ರಾಹ್ಮಣದ್ವೇಷಿಯಾಗಿಯೂ ಕ್ರೂರನಾಗಿಯೂ ಲೋಭಿಯಾಗಿಯೂ ಬಡ್ಡಿಯಿಂದ ಜೀವಿಸುವವನಾಗಿಯೂ ಕ್ರೂರ ಮಾತುಳ್ಳವನಾಗಿಯೂ ಕಪಟಿಯಾಗಿಯೂ ಎಲ್ಲರನ್ನೂ ದ್ವೇಷಿಸುವವನಾಗಿಯೂ ಇನ್ನೊಬ್ಬರ ಹಣವನ್ನು ಅಪಹರಿಸುವವ ನಾಗಿಯೂ ಇದ್ದೆನು. ನಾನು ಒಬ್ಬರಿಗೂ ಸಹಾಯ ಮಾಡಿದವನಲ್ಲ. ನಾನು ಮನುಷ್ಯರ ಹಣ ಪತ್ನೀಪುತ್ರಾದಿಗಳನ್ನು ನೋಡಿ ಅಸೂಯಾಪಡುತ್ತಿದ್ದೆನು. ನಾನು ಪೂರ್ವದಲ್ಲಿ ಮಾಡಿರುವ ಕ್ರೂರಕರ್ಮಗಳನ್ನು ಸ್ಮರಿಸಿಕೊಂಡರೆ ತುಂಬಾ ಪಶ್ಚಾತ್ತಾಪ ಉಂಟಾಗುತ್ತದೆ. ನಾನು ಶುಭಕರ್ಮವೊಂದನ್ನು ಮಾಡಿದ್ದೂ ಸ್ಮರಣೆಗೆ ಬರುವುದಿಲ್ಲ. ನಾನು ತಂದೆತಾಯಿಗಳನ್ನು ಪೂಜಿಸಿದ್ದೇನೆ. ಒಂದು ಬಾರಿ ಮಾತ್ರ ಮನೆಗೆ ಬಂದ ಅತಿಥಿಯನ್ನು ಪೂಜಿಸಿದ್ದೇನೆ. ಅದರಿಂದ ನನಗೆ ಪೂರ್ವಸ್ಮರಣೆ ಇದೆ. ಇನ್ನು ಮುಂದೆ ನನಗೆ ಸುಖವಾಗುವುದೆಂದು ತಿಳಿಯುತ್ತೇನೆ. ಅದಕ್ಕೆ ನಿಮ್ಮ ಹತ್ತಿರ ಶ್ರೇಯಸ್ಸನ್ನು ಕೇಳಬೇಕೆಂದು ಇಚ್ಛಿಸುತ್ತೇನೆ' ಎಂದಿತು.

ಆಗ ವೇದವ್ಯಾಸದೇವರು ನನ್ನ ಅನುಗ್ರಹದಿಂದ ನಿನಗೆ ಈ ಕೀಟ ಯೋನಿಯಲ್ಲಿ ಪೂರ್ವಸ್ಮರಣೆಯಿದೆ. ನಿನ್ನನ್ನು ನಾನು ನೋಡುವ ಮಾತ್ರದಿಂದ ಉದ್ಧಾರ ಮಾಡುವೆನು. ನೀನು ಪೂರ್ವದಲ್ಲಿ ಮಾಡಿದ ಪಾಪದಿಂದ ಕೀಟವಾಗಿ ಹುಟ್ಟಿರುವಿ. ಧರ್ಮದಿಂದ ಒಳ್ಳೇ ಜನ್ಮವನ್ನು ಹೊಂದುವಿ. ನಿನ್ನನ್ನು ಪ್ರತಿಜನ್ಮ ದಲ್ಲಿಯೂ ಉದ್ಧರಿಸುವೆನು. ಕೊನೆಗೆ ಕ್ಷತ್ರಿಯನಾಗಿ ಆಮೇಲೆ ಬ್ರಾಹ್ಮಣನಾಗುವಿ' ಎಂದರು.

ತರುವಾಯ ಆ ಕೀಟವು ಅಲ್ಲಿಯೇ ಇದ್ದಿತು. ಅಷ್ಟರಲ್ಲಿ ಅಲ್ಲಿಗೆ ಗಾಡಿಯು ಬಂದೇ ಬಂತು. ಕೀಟದ ಮೇಲೆ ಚಕ್ರವು ಉರುಳುತ್ತಾ ಬಂದು ಪ್ರಾಣಬಿಟ್ಟಿತು.

ಆಮೇಲೆ ಆಳಿಲು, ಹಳ್ಳಿ ಹಂದಿ, ಮೃಗ, ಪಕ್ಷಿ, ಚಂಡಾಲ, ಶೂದ್ರ, ವೈಶ್ಯ ದೇಹದಲ್ಲಿ ವೇದವ್ಯಾಸದೇವರ ದರ್ಶನವನ್ನು ಮಾಡಿತು. ಆಮೇಲೆ ಕ್ಷತ್ರಿಯನಾಗಿ ಹುಟ್ಟಿ ವೇದವ್ಯಾಸದೇವರ ಬಳಿಗೆ ಬಂದು 'ನಾನು ಕೀಟನಾಗಿದ್ದವನು ಈ ಕ್ಷತ್ರಿಯ ನಾಗಿದ್ದೇನೆ. ನನ್ನನ್ನು ಈಗ ಆನೆಗಳು ಹೊತ್ತುಕೊಂಡು ಹೋಗುತ್ತವೆ. ಬೇಕಾದ ಐಶ್ವರ್ಯದಿಂದಲೂ ಪತ್ನೀಪುತ್ರಾದಿ ಬಂಧುಗಳಿಂದಲೂ ಸುಖದಿಂದ ಇದ್ದೇನೆ. ಕೀಟವಾಗಿ ಇದ್ದವನು ತಮ್ಮ ಅನುಗ್ರಹದಿಂದ ರಾಜಪುತ್ರನಾಗಿದ್ದೇನೆ. ತಮಗೆ ನಮಸ್ಕಾರವು. ತಮಗೆ ನಾನೇನು ಮಾಡಲಿ? ಆಜ್ಞಾಪಿಸಬೇಕು' ಎಂದು ಹೇಳಿದನು.

ಅದಕ್ಕೆ ವೇದವ್ಯಾಸದೇವರು 'ರಾಜನೇ! ನಿನ್ನಿಂದ ನಾನು ಬಹಳ ಸ್ತೋತ್ರ ಮಾಡಲ್ಪಟ್ಟೆನು. ನಿನಗೀಗಲೂ ಕೀಟಜನ್ಮದ ಸ್ಮರಣೆಯುಂಟಾಗಿದೆ. ಆದರೆ ನೀನು ಶೂದ್ರನಾಗಿರುವಾಗ ಮಾಡಿರುವ ಪಾಪವು ನಾಶವನ್ನು ಹೊಂದಿಲ್ಲ. ನೀನು ತಿರ್ಯಗ್ ಯೋನಿಯಲ್ಲಿ ನನ್ನ ದರ್ಶನವನ್ನು ಹೊಂದಿದಿ. ಆದರಿಂದ ನಿನಗೆ ಪುಣ್ಯವುಂಟಾ ಯಿತು. ಇನ್ನು ನೀನು ಈ ರಾಜದೇಹವು ಹೋದಮೇಲೆ ಬ್ರಾಹ್ಮಣದೇಹವನ್ನು ಹೊಂದುವಿ. ಗೋಬ್ರಾಹ್ಮಣನಿಮಿತ್ತದಿಂದ ಯುದ್ಧದಲ್ಲಿ ದೇಹವನ್ನು ಪರಿತ್ಯಾಗ ಮಾಡಿ ಬ್ರಾಹ್ಮಣನಾಗುವಿ. ಆಮೇಲೆ ಬೇಕಾದ ಯಜ್ಞಗಳನ್ನು ಮಾಡಿ ಸ್ವರ್ಗವನ್ನು ಹೊಂದುವಿ. ಕರ್ಮವನ್ನು ಮಾಡುವವನು ತಿರ್ಯಗ್ ಯೋನಿಯಿಂದ ಶೂದ್ರನಾಗಿ ಹುಟ್ಟುವನು. ಶೂದ್ರಯೋನಿಯಿಂದ ವೈಶ್ಯನಾಗಿ ಆಮೇಲೆ ಕ್ಷತ್ರಿಯನಾಗಿ ಆಮೇಲೆ ಬ್ರಾಹ್ಮಣನಾಗಿ ಹುಟ್ಟಿ ಧರ್ಮಾನುಷ್ಠಾನವನ್ನು ಮಾಡಿ ಸ್ವರ್ಗವನ್ನು ಹೊಂದುವನು.

ತರುವಾಯ ಆ ರಾಜನು ಬಹಳ ತಪಸ್ಸನ್ನು ಮಾಡಿದನು. ತರುವಾಯ ವೇದವ್ಯಾಸದೇವರು ಬಂದು 'ನೀನು ಧರ್ಮದಿಂದ ಪ್ರಜೆಗಳನ್ನು ಪರಿಪಾಲನೆ ಮಾಡಿ ಆಮೇಲೆ ಕ್ಷತ್ರಿಯ ದೇಹವನ್ನು ಬಿಟ್ಟು ಬ್ರಾಹ್ಮಣನಾಗುವಿ' ಎಂದರು.

ಅದೇರೀತಿಯಾಗಿ ಆ ರಾಜನು ವೇದವ್ಯಾಸರ ಮಾತಿನಂತೆ ಧರ್ಮದಿಂದ ರಾಜ್ಯಪರಿಪಾಲನೆ ಮಾಡಿದನು. ತರುವಾಯ ದೇಹವನ್ನು ಬಿಟ್ಟು ಬ್ರಾಹ್ಮಣನಾಗಿ ಹುಟ್ಟಿದನು. ಆಗ ಪುನಃ ವೇದವ್ಯಾಸದೇವರು ಬಂದರು. ಬ್ರಾಹ್ಮಣ ದುಃಖಪಡ ಬೇಡ. ಪುಣ್ಯಮಾಡಿದವನು ಒಳ್ಳೇ ಜನ್ಮವನ್ನು ಹೊಂದುವನು. ಪಾಪಮಾಡಿದವನು ನೀಚಜನ್ಮವನ್ನು ಹೊಂದುವನು. ನೀನು ಧರ್ಮವನ್ನು ಮಾಡು' ಎಂದನು. ಬ್ರಾಹ್ಮಣನು 'ನಾನು ತಮ್ಮಿಂದ ಅತ್ಯಂತ ಸುಖವನ್ನು ಹೊಂದಿದೆನು. ಧರ್ಮವನ್ನು ಮಾಡಿ ನನ್ನ ಪಾಪವು ಪರಿಹೃತವಾಯಿತು'ಎಂದು ಹೇಳಿದನು.

ಈ ರೀತಿಯಾಗಿ ಮೊದಲು ಕೀಟವಾಗಿದ್ದದ್ದು ವೇದವ್ಯಾಸದೇವರ ಅನುಗ್ರಹ

ದಿಂದ ಬ್ರಾಹ್ಮಣ್ಯವನ್ನು ಹೊಂದಿ ಬಹಳ ಯಜ್ಞಗಳನ್ನು ಮಾಡಿ ಉತ್ತಮ ಸಾಧನೆಗಳನ್ನು ಮಾಡಿ ಪರಮಾತ್ಮನ ಸಾಲೋಕ್ಯವನ್ನು ಹೊಂದಿತು. (ಶ್ರೀಮದಾಚಾರ್ಯರು ಭಾರತತಾತ್ಪರ್ಯ ನಿರ್ಣಯದಲ್ಲಿ ಪೂರ್ವಜನ್ಮದಲ್ಲಿ ಅತ್ಯಂತಲೋಭಿಯಾದ ವಿಷ್ಣುಭಕ್ತನಾದ ಒಬ್ಬ ಶೂದ್ರನು ಕೀಟವಾಗಿ ಹುಟ್ಟಿದ್ದನು. ಆ ಕೀಟವನ್ನು ನೋಡಿ ವೇದವ್ಯಾಸದೇವರು ನೀನು ಈ ದೇಹವನ್ನು ಪರಿತ್ಯಾಗಮಾಡು. ನಿನ್ನನ್ನು ರಾಜನನ್ನಾಗಿ ಮಾಡುತ್ತೇನೆ ಎಂದರು. ಅದಕ್ಕೆ ಕೀಟವು ದೇಹವನ್ನು ಪರಿತ್ಯಾಗ ಮಾಡಲಿಕ್ಕೆ ಇಚ್ಛಿಸಲಿಲ್ಲ. ಕೊನೆಗೆ ಕೀಟದೇಹದಿಂದಲೇ ರಾಜ್ಯಭಾರ ಮಾಡಿಸಿದರು. ಆಮೇಲೆ ಬ್ರಾಹ್ಮಣದೇಹವನ್ನು ಕೊಟ್ಟು ಸದ್ಗತಿಯನ್ನು ಕೊಟ್ಟರೆಂದು ಪುರಾಣಾಂತರದ ಕಥೆಯನ್ನು ನಿರೂಪಿಸಿರುವರು)



## ಶಂಬುಕನ ಕಥೆ [1]

ಪರಮಪವಿತ್ರವಾದ ಕಾಶೀನಗರದಲ್ಲಿ ಶಂಬುಕನೆಂಬ ಶೂದ್ರನಿದ್ದನು. ಅವನು ಅತ್ಯಂತ ದರಿದ್ರನಾದ್ದನು. ದೀರ್ಘರೋಗವುಳ್ಳವನಾಗಿದ್ದನು. ಅವನಿಗೆ ಮಕ್ಕಳು ಹುಟ್ಟಿ ಸಾಯುತ್ತಿದ್ದವು. ಅವನ ಹೆಂಡತಿಯು ಒಂದು ದಿನದಲ್ಲಿ ಅತ್ಯಂತ ಹಸಿವೆಯಿಂದ ಪೀಡಿತಳಾಗಿ ಹರಕು ವಸ್ತ್ರವನ್ನು ಧರಿಸಿಕೊಂಡು ಅಳುತ್ತಾ ಗಂಡನೊಡನೆ ಮಾತಾಡಿದಳು. ಆಗ ಒಂದು ಮಗುವೂ ಅವಳಿಗೆ ಇದ್ದಿತು. ಆ ಮಗುವು ಹಸಿವೆಯಿಂದ ಅಳುತ್ತಾ ಅವಳನ್ನು ಎಳೆಯುತ್ತಿತ್ತು. ಅವಳು ಅತ್ಯಂತ ದುಃಖದಿಂದ 'ಉಡಲಿಕ್ಕೆ ವಸ್ತ್ರವಿಲ್ಲದೆ ಅನ್ನವೂ ಇಲ್ಲದೆ ನಾನು ಏನು ಮಾಡಲಿ? ಮಗುವೂ ಹಸಿವೆಯಾಗುತ್ತದೆ ಎಂದು ನನ್ನನ್ನು ಎಳೆಯುತ್ತಿದೆ. ಈ ನನ್ನ ಅವಸ್ಥೆಯನ್ನು ನೋಡಿ ಸಹಿಸಲಿಕ್ಕೆ ಆಗುವುದಿಲ್ಲ. ಗಂಡನಿಗೆ ಆಪತ್ತು ಬಂದಿರುವ ಸಮಯದಲ್ಲಿ ಹೆಂಡತಿಯು ಗಂಡನನ್ನು ಬಿಟ್ಟು ಇನ್ನೊಬ್ಬ ಪುರುಷನನ್ನು ಆಶ್ರಯಿಸಿದರೆ ಅವಳು ರೌರವನರಕದಲ್ಲಿ ದುಃಖವನ್ನು ಅನುಭವಿಸುವಳು ಎಂದು ಹೇಳಿದುದನ್ನು ಕೇಳಿದ್ದೇನೆ. ಆದುದರಿಂದ ಈ ಅವಸ್ಥೆಯುಳ್ಳ ನಿಮ್ಮನ್ನು ಬಿಟ್ಟು ಹೋಗುವುದೂ ಸರಿಯಲ್ಲ. ಆದರೆ ದಾರಿದ್ರ್ಯದಿಂದ ಉಂಟಾಗಿರುವ ದುಃಖವನ್ನು ಸಹಿಸಲಿಕ್ಕೂ ಶಕ್ತಳಾಗಿಲ್ಲ. ಜನರಿಗೆ ಅನ್ನವೇ ಪ್ರಾಣವನ್ನು ಧರಿಸಿಕೊಂಡಿರಲು ಕಾರಣವಾದದ್ದು.

1. ಪ.

ಅನ್ನವಿಲ್ಲದೆ ಬದುಕಲಿಕ್ಕೆ ಆಗಲಾರದು. ಆ ಅನ್ನವೇ ನನಗೆ ಸಿಗಲಾರದಾಗಿದೆ. ಆದುದರಿಂದ ನನ್ನಿಂದ ಸಹಿಸಲಿಕ್ಕೆ ಆಗಲಾರದು. ಆದುದರಿಂದ ನಾನು ಕುತ್ತಿಗೆಗೆ ಕಲ್ಲು ಕಟ್ಟಿಕೊಂಡು ನದಿಗೆ ಹಾರುವೆನು. ನದಿಯ ತೀರದಲ್ಲಿ ಮಗುವನ್ನು ಇಡುವೆನು. ಅಳುತ್ತಾ ಇರುವ ಮಗುವನ್ನು ತಾಯಿಯಿಲ್ಲದ ಮಗುವೆಂದು ದಯೆಯಿಂದ ಯಾರಾದರೂ ತೆಗೆದುಕೊಂಡು ಹೋಗಿ ಪೋಷಿಸುವ ಪಕ್ಷದಲ್ಲಿ ಪೋಷಿಸಲಿ. ಮಗುವು ಬದುಕಿದರೆ ಬದುಕಲಿ ಅಥವಾ ಸತ್ತರೆ ಸಾಯಲಿ. ನಾನು ನಿಮ್ಮ ಪಾದಗಳಿಗೆ ನಮಸ್ಕರಿಸಿ ನದಿಯಲ್ಲಿ ಹಾರುವೆನು' ಎಂದು ಹೇಳಿದಳು.

ಹೆಂಡತಿಯು ಹೇಳಿದ ಮಾತನ್ನು ಕೇಳಿ ಶಂಬುಕನು ತುಂಬಾ ದೈನ್ಯವುಳ್ಳವನಾಗಿ ತನ್ನ ಕೈಗಳಿಂದ ಹೆಂಡತಿಯನ್ನು ಕಟ್ಟಿಕೊಂಡು ಗಟ್ಟಿಯಾಗಿ ಅಳಲಿಕ್ಕೆ ಆರಂಭಿಸಿದನು. ಗಂಡಹೆಂಡತಿಯರಿಬ್ಬರೂ ಅಳತೊಡಗಿದರು. ಅವರಿಬ್ಬರು ಅಳುವುದನ್ನು ನೋಡಿ ಮಗುವೂ ಅಳಲಿಕ್ಕೆ ಆರಂಭಿಸಿತು. ಈರೀತಿಯಾಗಿ ಅಳುವ ಶಬ್ದವನ್ನು ಕೇಳಿ ಹೆಂಗಸರೂ ಗಂಡಸರೂ ಅವರನ್ನು ನೋಡಲಿಕ್ಕೆ ಓಡಿಬಂದರು. ಬಂದವರು ಏಕೆ ಅಳುತ್ತಿರುವಿರಿ? ಎಂದು ಕೇಳಿದರು. ಅದಕ್ಕೆ ಶಂಬುಕನು ತನ್ನ ದುಃಖವನ್ನು ಹೇಳಿಕೊಂಡು ಆಮೇಲೆ ನಮಗೆ ಒಂದು ಹೊತ್ತಿನ ಆಹಾರವನ್ನು ಯಾರಾದರೂ ಕೊಟ್ಟರೆ ಆಮೇಲೆ ನಾವು ಕಾಡಿಗೆ ಹೋಗಿ ಕಟ್ಟಿಗೆಯನ್ನು ತಂದು ಜೀವನವನ್ನು ಮಾಡುತ್ತಿದ್ದೆವು' ಎಂದನು.

ಆಗ ಅಲ್ಲಿ ಬಂದಿದ್ದ ಒಬ್ಬನೇ ಮಗನುಳ್ಳ ಗಂಡನಿಲ್ಲದೆ ಇದ್ದ ಗೌತಮೀ ಎಂಬ ಬ್ರಾಹ್ಮಣಿಯು ದಯೆಯುಳ್ಳವಳಾಗಿ ಮಗನ ಸಂಮತಿಯಿಂದ 'ಶಂಬುಕ! ನನ್ನ ಮನೆಗೆ ಬಾ. ನಿನ್ನ ಹೆಂಡತಿಗೂ ಮಗುವಿಗೂ ನಿನಗೂ ಅನ್ನವನ್ನು ಹಾಕುವೆನು. ನಾಳೆಗೂ ಬೇಕಾದಷ್ಟು ಅನ್ನವನ್ನು ಕೊಡುವೆನು. ಅದನ್ನು ಹಿಡಿದುಕೊಂಡು ನಾಳೆಯ ದಿವಸ ಬೆಳಿಗ್ಗೆ ಹೆಂಡತಿಯೊಡನೆ ಕಾಡಿಗೆ ಹೋಗು. ಕಟ್ಟಿಗೆಯನ್ನು ಕಡಿದುಕೊಂಡು ಬಂದು ಮಾರಿ ಜೀವನಮಾಡು' ಎಂದಳು. ಗೌತಮಿಯು ಈಪ್ರಕಾರವಾಗಿ ಹೇಳಿ ಹಾಗೆಯೇ ಮಾಡಿದಳು. ಶಂಬುಕನು ಬೆಳಿಗ್ಗೆ ಕಟ್ಟಿಗೆಯನ್ನು ತರುವುದಕ್ಕಾಗಿ ಕಾಡಿಗೆ ಹೋದನು. ಅವನ ಹಿಂದೆಯೇ ಅವನ ಹೆಂಡತಿಯು ಮಗುವನ್ನು ಎತ್ತಿಕೊಂಡು ಹಗ್ಗವನ್ನು ಹಿಡಿದುಕೊಂಡು ಹೋದಳು. ದಂಪತಿಗಳಿಬ್ಬರೂ ವನಕ್ಕೆ ಹೋಗಿ ಕಟ್ಟಿಗೆಯನ್ನು ಸಂಗ್ರಹಿಸಿ ಅನ್ನವನ್ನು ಭೋಜನ ಮಾಡಿ ನೀರನ್ನು ಕುಡಿದು ಕಟ್ಟಿಗೆಯ ಎರಡು ಹೊರೆಯನ್ನು ಮಾಡಿ ಹೊತ್ತುಕೊಂಡು ಮಧ್ಯಾಹ್ನದಲ್ಲಿ ಬಂದರು. ಬಿಸಿಲಿನಿಂದ ಮುಖವು ಒಣಗಿಹೋಯಿತು. ಬೆವರು ಮೈಯಲ್ಲಿ ಎಲ್ಲಾ ಸುರಿಯಿತು. ಅವರ

ಕೈಯಲ್ಲಿ ಅನ್ನವಿದ್ದಿತು. ಊಟಮಾಡಲಿಕ್ಕೆ ಮರದ ನೆರಳನ್ನೂ ನೀರನ್ನು ಅಪೇಕ್ಷಿಸಿದರು. ತರುವಾಯ ದಾರಿಯಲ್ಲಿ ತುಂಬಾ ನೆರಳುಳ್ಳ ಒಂದು ಮರವನ್ನು ಕಂಡರು. ಬಾಯಾರಿಕೆಯುಳ್ಳವರಾಗಿ ಆ ಮರದ ನೆರಳಲ್ಲಿ ಕೂತುಕೊಂಡರು. ಕಟ್ಟಿಗೆಯ ಹೊರೆಯಟ್ಟು ಕೆಳಗೆ ಇಟ್ಟು ಮಗುವನ್ನು ಬಿಚ್ಚಿ ಎದೆಯಮೇಲೆ ಇಟ್ಟುಕೊಂಡು ಮೈಬೆವರಿನ ಧಾರೆಯಿಂದ ಕೂಡಿದವರಾಗಿ ಸತ್ತವರಂತೆ ಮಲಗಿಕೊಂಡರು.

ದೈವೇಚ್ಛೆಯಿಂದ ಅಲ್ಲಿಗೆ ಗಾಲವ ಮುನಿಗಳು ಶಿಷ್ಯರಿಂದ ಸಹಿತರಾಗಿ ಆ ದಾರಿಯಲ್ಲಿ ಬಂದರು. ಬಿಸಿಲಿನಿಂದ ತಪ್ತರಾಗಿ ಬಹುಕ್ಲೇಶದಿಂದ ಮಲಗಿರುವ ಅವರನ್ನು ನೋಡಿ ದಯೆಯುಳ್ಳವರಾಗಿ ಅವರಿಗೆ ಕುಡಿಯಲಿಕ್ಕೆ ತನ್ನ ಕಮಂಡಲುವಿನ ನೀರನ್ನು ಕೊಟ್ಟರು. ತರುವಾಯ ಶಂಬುಕನು ಗಾಲವರಿಗೆ ನಮಸ್ಕರಿಸಿ 'ಪೂಜ್ಯರೇ! ಪೂರ್ವದಲ್ಲಿ ನಾನು ಯಾವ ಪಾಪವನ್ನು ಮಾಡಿರುವೆನು? ನನಗೂ ನನ್ನ ಹೆಂಡತಿಗೂ ಯಾಕೆ ಹೀಗೆ ದುಃಖವು ಬರುತ್ತಿದೆ? ಪಾಪಿಯಾದ ನನ್ನ ದುಃಖದ ಪರಿಹಾರವು ಹೇಗೆ ಆಗುವುದು? ನಾನು ನಿಮ್ಮನ್ನೇ ಮರೆಹೊಂದಿರುವೆನು. ನಮ್ಮನ್ನು ದುಃಖಸಾಗರದಿಂದ ಉದ್ಧಾರ ಮಾಡಿರಿ' ಎಂದು ಹೇಳಿಕೊಂಡನು.

ಗಾಲವರು ಹೇಳಿದರು. ''ಶಂಬುಕ! ಪೂರ್ವದಲ್ಲಿ ವಿದೇಹನಗರದಲ್ಲಿ ಸುದಾಸ ಎಂಬ ವೈಶ್ಯನಿದ್ದನು. ಅವನು ತುಂಬಾ ಹಣವಂತನಾಗಿದ್ದನು. ಅವನಿಗೆ ಇಬ್ಬರು ಹೆಂಡತಿಯರಿದ್ದರು. ಅವನು ಚಿಕ್ಕಹೆಂಡತಿಯಲ್ಲೇ ಆಸಕ್ತನಾಗಿ ದೊಡ್ಡ ಹೆಂಡತಿಗೆ ತುಂಬಾ ದ್ರೋಹವನ್ನು ಮಾಡುತ್ತಿದ್ದನು. ಸುಮ್ಮನೆ ಅವಳ ಮೇಲೆ ಕೋಪಿಸಿಕೊಳ್ಳುತ್ತಿದ್ದನು. ಕಾರಣವಿಲ್ಲದೆ ಆಗಾಗ್ಗೆ ಬಡಿಯುತ್ತಾ ಇದ್ದನು. ಋತುಸ್ನಾನ ಮಾಡಿದವಳನ್ನೂ ದ್ವೇಷಿಸುತ್ತಿದ್ದನು. ಯಾವಾಗಲೂ ಬಯ್ಯುತ್ತಿದ್ದನು. ಅವಳಿಗೆ ಮನೆಯಲ್ಲಿ ಒಂದು ಅಧಿಕಾರವನ್ನೂ ಕೊಡಲಿಲ್ಲ, ಚಿಕ್ಕ ಹೆಂಡತಿಗೆಯೇ ಅಧಿ ಕಾರವನ್ನು ಕೊಟ್ಟಿದ್ದನು. ದೊಡ್ಡವಳಿಗೆ ಹಾಳುವಸ್ತ್ರವನ್ನು ಕೊಡುತ್ತಿದ್ದನು. ಕದನ್ನವನ್ನು ಹಾಕುತ್ತಿದ್ದನು. ಅವಳು ಮಾತಾಡಿದರೆ ಕೋಪಿಸಿಕೊಳ್ಳುತ್ತಿದ್ದನು. ಮಾತಾಡಿದಾಗಲೆಲ್ಲಾ ಅವಮಾನ ಮಾಡುತ್ತಿದ್ದನು. ಅವಳಾದರೂ ಹಾಕಿದ ಅನ್ನವನ್ನು ಊಟಮಾಡುವಳು. ದೇವಲ ಮನೆಯಲ್ಲೇ ಇದ್ದುಕೊಂಡು ಸೇವಾಮಾಡುವಳು. ನಿಯಮವುಳ್ಳವಳಾಗಿ ದೇವರ ಎದುರಲ್ಲಿ ರಂಗೋಲೆ ಹಾಕುವಳು. ಪ್ರದಕ್ಷಿಣೆ ನಮಸ್ಕಾರ ಮಾಡುವಳು. ದೇವರ ಮುಂದೆ ದೀಪವಿಡುವಳು. ಈರೀತಿಯಾಗಿ ಆಯುಷ್ಯವನ್ನು ಸಾರ್ಥಕ ಮಾಡಿಕೊಳ್ಳುತ್ತಿದ್ದಳು. ಅತಿರೂಪವತಿಯಾಗಿದ್ದಳು. ಮಕ್ಕಳು ಮಾತ್ರ ಇರಲಿಲ್ಲ. ಒಂದು ದಿವಸ ಮಾತ್ರ ದೈವೇಚ್ಛೆಯಿಂದ ಋತುಸ್ನಾನಮಾಡಿದ ಅವಳನ್ನು ಸುದಾಸನು

ಹೊಂದಿದನು. ಇದರಿಂದ ಅವಳು ಗರ್ಭಿಣಿಯಾಗಿ ಸುಂದರವಾದ ಮಗುವನ್ನು ಹಡೆದಳು. ಇದರಿಂದ ಚಿಕ್ಕವಳು ಕೋಪಿಸಿಕೊಂಡು ಆ ಮಗುವನ್ನು ಕೊಲ್ಲಬೇಕೆಂದು ಪ್ರಯತ್ನಿಸಿದಳು. ಇದನ್ನು ತಿಳಿದು ದೊಡ್ಡವಳು ಮಗುವನ್ನು ಎತ್ತಿಕೊಂಡು ತಂದೆಯ ಮನೆಗೆ ಹೋಗಿಬಿಟ್ಟಳು. ಅವಳ ಸಹೋದರರು ಅವಳನ್ನು ಬಹುಮಾನಿಸಿದರು. ಅವಳು ತಂದೆಯ ಮನೆಯಲ್ಲಿಯೇ ಮಗನನ್ನು ಬೆಳೆಸುತ್ತಾ ಇದ್ದಳು. ಮಗನ ಹೆಸರು ನಂದಕ ಎಂದು. ನಂದಕನು ದಿನೇದಿನೇ ಅಭಿವೃದ್ಧಿಗೆ ಬಂದನು. ಯೌವನವನ್ನು ಹೊಂದಿದನು. ವ್ಯಾಪಾರವನ್ನು ಮಾಡಿ ತುಂಬಾ ಹಣವಂತನಾದನು. ಪ್ರಸಿದ್ಧ ವ್ಯಾಪಾರಿಯಾದನು.

ಸ್ವಲ್ಪಕಾಲವು ಕಳೆಯಲು ಸುದಾಸನ ಮನೆಗೆ ರಾತ್ರಿಯಲ್ಲಿ ಕಳ್ಳರು ಬಂದು ಅವನಿಗೂ ಅವನ ಹೆಂಡತಿಗೂ ಚೆನ್ನಾಗಿ ಬಡೆದು ಇದ್ದ ಹಣವನ್ನೆಲ್ಲಾ ಅಪಹರಿಸಿಕೊಂಡು ಹೋದರು. ಸುದಾಸನು ದರಿದ್ರನಾದನು. ಮುದುಕನಾಗಿ ಕಣ್ಣು ಹೋಯಿತು. ತರುವಾಯ ಚಿಕ್ಕಹೆಂಡತಿಯಿಂದ ಕೂಡಿಕೊಂಡು ಹಸಿವೆಯಿಂದ ಪೀಡಿತನಾಗಿ ಭಿಕ್ಷಾಬೇಡಿದನು. ಆದರೆ ಹಣವಂತನಾಗಿ ಮೆರೆಯುತ್ತಿದ್ದ ತನ್ನ ಊರಲ್ಲಿ ಭಿಕ್ಷೆಬೇಡಲಿಕ್ಕೆ ನಾಚಿಕೆಯಿಂದ ಸಾಧ್ಯವಾಗದೆ ಗ್ರಾಮಾಂತರಕ್ಕೆ ಹೋದನು. ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಹೀಗೆ ಹೋಗುತ್ತಾ ತನ್ನ ಮಗನಾದ ನಂದಕನು ವ್ಯಾಪಾರಮಾಡುತ್ತಾ ಇದ್ದ ಊರಿಗೇ ಹೋಗಿ ಸೇರಿದನು. ಆ ಊರಲ್ಲಿ ಭಿಕ್ಷೆ ಬೇಡುತ್ತಾ ಮಗನ ಮನೆಗೇ ಹೋದನು. ಕುರುಡನಾಗಿ ಚಿಕ್ಕಹೆಂಡತಿಯೊಡನೆ ಬರುತ್ತಿದ್ದ ಅವನನ್ನು ಅವನ ದೊಡ್ಡ ಹೆಂಡತಿಯು ನೋಡಿದಳು. ತನ್ನ ಗಂಡನು ತನ್ನ ತಂಗಿಯು ಎಂದು ತಿಳಿದುಕೊಂಡು ಬಂದು ಗಂಡನ ಪಾದಮುಟ್ಟಿ ನಮಸ್ಕಾರ ಮಾಡಿದಳು. ತಂಗಿಯನ್ನು ಆಲಿಂಗನ ಮಾಡಿಕೊಂಡಳು. ತನ್ನ ಮಗನೊಡನೆ ಅವರಿಬ್ಬರಿಗೂ ನಮಸ್ಕಾರ ಮಾಡಿಸಿ ಇಬ್ಬರನ್ನು ಆಸನದಲ್ಲಿ ಕೂತುಕೊಳ್ಳಿಸಿದರು. ಮಗನಿಂದ ಕೂಡಿಕೊಂಡು ಇಬ್ಬರ ಸೇವೆಯನ್ನು ಮಾಡಿದರು. ಅವರಿಬ್ಬರಿಗೆ ತಾವು ಮೊದಲು ಮಾಡಿದ ಅನ್ಯಾಯದಿಂದ ತುಂಬ ಲಜ್ಜೆಯಾಗುತ್ತಿತ್ತು. ಅವರಿಗೆ ಕಾಲಕಾಲದಲ್ಲಿ ಬೇಕಾದ ರುಚಿಕರವಾದ ಅನ್ನವನ್ನೂ ವಸ್ತ್ರನ್ನೂ ಬೇಕಾದ್ದನ್ನು ಕೊಡುತ್ತಾ ಇದ್ದಳು. ನಿತ್ಯವೂ ಸೇವಿಸುತ್ತಾ ಇದ್ದಳು. ಹೀಗೆ ಬಹುಕಾಲದವಾದ ಮೇಲೆ ಸುದಾಸನಿಗೆ ರೋಗವುಂಟಾಯಿತು. ಮೈಯೆಲ್ಲಾ ಕ್ರಿಮಿಗಳು ಬಂದವು. ಅವನಿಗೆ ಸಾಯುವ ಸಮಯವು ಬಂದಿತು. ಆ ಸಮಯದಲ್ಲಿ ರಾತ್ರಿಯಲ್ಲಿ ನಂದಕನ ಮನೆಗೆ ಕೆಲವು ಬ್ರಾಹ್ಮಣರು ಬಂದರು. ನಂದಕನು ಅವರ ಕಾಲನ್ನು ತೊಳೆದು ನೀರನ್ನು

ಸುದಾಸನಿಗೂ ಪ್ರೋಕ್ಷಣೆ ಮಾಡಿದನು. ಅವರು ನೋಡುತ್ತಿರುವಂತೆ ಸುದಾಸನು ಪ್ರಾಣಬಿಟ್ಟನು. ನಂದಕನು ತಂದೆಗೆ ಚೆನ್ನಾಗಿ ಉತ್ತರಕ್ರಿಯೆಯನ್ನು ಮಾಡಿದನು. ಸ್ವಲ್ಪ ಸಮಯದಲ್ಲಿಯೇ ಚಿಕ್ಕಹೆಂಡತಿಯೂ ಮರಣವನ್ನು ಹೊಂದಿದಳು.

ತಂದೆಯ ಸೇವೆ ಮೊದಲಾದ ಪುಣ್ಯಕಾರ್ಯಗಳನ್ನು ಮಾಡಿದ ಪ್ರಭಾವದಿಂದ ಚೇದಿದೇಶದ ರಾಜನಾದ ಸುದಾಮನಿಗೆ ಮಗನಾದವನಾಗಿ ಹುಟ್ಟಿದನು. ಅವನ ಹೆಸರು ಸುಬಾಹುವೆಂದು. ಆಗಲೂ ಅವನಿಗೆ ಪೂರ್ವಜನ್ಮದ ತಾಯಿಯೇ ತಾಯಿಯಾದಳು. ಸುದಾಸನು ಸಾಯುವ ಸಮಯದಲ್ಲಿ ಬ್ರಾಹ್ಮಣರ ದರ್ಶನವಾದ್ದರಿಂದಲೂ ಬ್ರಾಹ್ಮಣರ ಪಾದವನ್ನು ತೊಳೆದ ನೀರಿನ ಸ್ಪರ್ಶದಿಂದಲೂ ವಿಷ್ಣುಶರ್ಮಾ ಎಂದು ಹೆಸರುಳ್ಳ ಬ್ರಾಹ್ಮಣನಾಗಿ ಹುಟ್ಟಿದನು. ಪೂರ್ವಜನ್ಮದಲ್ಲಿ ಚಿಕ್ಕಹೆಂಡತಿಯಾಗಿದ್ದವಳು ಆಗಲೂ ಹೆಂಡತಿಯಾದಳು. ಸುದಾಸನಾಗಿರುವಾಗ ದೊಡ್ಡಹೆಂಡತಿಯನ್ನು ಪೀಡಿಸಿದ ದೋಷದಿಂದ ವಿಷ್ಣುಶರ್ಮನು ಅತ್ಯಂತ ದರಿದ್ರನಾಗಿದ್ದನು. ಎಷ್ಟುಸಲ ಓದಿದರೂ ಅವನ ಬಾಯಿಗೆ ವೇದವೇ ಬರಲಾರದು. ತರುವಾಯ ವೈರಾಗ್ಯವುಳ್ಳವನಾಗಿ ದಾರಿದ್ರ್ಯದಿಂದ ಅತ್ಯಂತ ಪೀಡಿತನಾಗಿ ಹೆಂಡತಿಯನ್ನು ಕರೆದುಕೊಂಡು ನರ್ಮದಾನದಿಯ ತೀರಕ್ಕೆ ಹೋಗಿ ಕಠಿಣವಾದ ತಪಸ್ಸನ್ನು ಮಾಡಿದನು. ಹಾಗೆಯೇ ಮುದುಕನಾಗಿ ಸತ್ತನು. ಹೆಂಡತಿಯು ಸಹಗಮನ ಮಾಡಿದಳು.

ವಿಷ್ಣುಶರ್ಮನು ತನಗೆ ಬಹಳ ಹಣಬೇಕೆಂದು ಆಸೆಪಡುತ್ತಾ ಅದೇ ಯೋಚನೆಯಿಂದ ಸತ್ತವನು ಆಮೇಲೆ ಧನದ ಎಂಬ ಹೆಸರುಳ್ಳ ವೈಶ್ಯನಾಗಿ ಹುಟ್ಟಿದನು. ಅವನು ದೊಡ್ಡ ಹಣವಂತನಾಗಿ ಮಾಹಿಷ್ಮತೀನಗರದಲ್ಲಿ ಇದ್ದನು. ಆಗಲೂ ಅವನಿಗೆ ಪೂರ್ವಜನ್ಮದಲ್ಲಿ ಹೆಂಡತಿಯಾಗಿದ್ದವಳೇ ಹೆಂಡತಿಯಾದಳು. ಧನದನು ಹಣವಂತನಾಗಿದ್ದರೂ ಪತ್ನಿಯಿಂದ ಸಹಿತನಾಗಿ ಬ್ರಾಹ್ಮಣರಿಗೆ ಅವಮಾನ ಮಾಡುತ್ತಾ ಇದ್ದನು. ಒಬ್ಬರಿಗೂ ಸ್ವಲ್ಪವೂ ದಾನ ಮಾಡುತ್ತಿರಲಿಲ್ಲ. ಮನೆಗೆ ಬಂದ ಬ್ರಾಹ್ಮಣರಿಗೆ ಬೇಕಾದಷ್ಟು ಕೆಟ್ಟಮಾತುಗಳನ್ನು ಆಡುವನು. ಯೌವನವುಳ್ಳವಾಗಿ ರೂಪವಂತನಾಗಿ ಇದ್ದುಕೊಂಡು ಬೇಕಾದ ಭೋಗಗಳನ್ನು ಅನುಭವಿಸುತ್ತಿದ್ದನಲ್ಲದೆ ತನಗೆ ಪರಲೋಕದ ಹಿತವನ್ನು ಮಾಡಿಕೊಳ್ಳಲೇ ಇಲ್ಲ. ಒಂದುದಿನದಲ್ಲಿ ಹಣವಂತರ ಸಭೆಯಲ್ಲಿ ಬ್ರಾಹ್ಮಣನು ತನ್ನ ಮಗಳಿಗೆ ಮದುವೆ ಮಾಡಬೇಕೆಂದು ಹಣವನ್ನು ಯಾಚಿಸುತ್ತಾ ಬಂದನು. ಇತರ ಹಣವಂತರು ಅವನಿಗೆ ಹಣವನ್ನು ಕೊಟ್ಟು ಸಂತೋಷಪಡಿಸಿದರು. ಧನದನು ಮಾತ್ರ ಸ್ವಲ್ಪ ಹಣವನ್ನೂ ಕೊಡಲಿಲ್ಲ. ಜನರು

ಏನಾದರೂ ಹೇಳುವರು ಎಂಬ ಲಜ್ಜೆಯಿಂದ ಮನೆಗೆ ಬಾ ಸ್ವಲ್ಪ ಹಣವನ್ನು ಕೊಡುವೆನು ಎಂದನು. ಮುಕುಂದನು ಅವನ ಮಾತಿನಿಂದ ಹಣ ಸಿಕ್ಕುವುದು ಎಂಬ ಆಸೆಯಿಂದ ಅವನ ಮನೆಗೆ ಹೋದನು. ಆದರೆ ಧನದನು ಅವನಿಗೆ ಸ್ವಲ್ಪವೂ ಹಣವನ್ನು ಕೊಡಲಿಲ್ಲ. 'ಭಿಕ್ಷುಕ! ಮೂಢ' ಹೊರಟುಹೋಗು. ಮಗಳಿಗೆ ಮದುವೆ ಮಾಡಲಿಕ್ಕೆ ಗತಿಯಿಲ್ಲದವನು. ಹೆಂಡತಿಯೊಡನೆ ಏಕೆ ಮಲಗಿದಿ? ನಿನ್ನ ಸುಖಕ್ಕಾಗಿ ಹೆಂಡತಿಯನ್ನು ಹೊಂದಿ ಮಗಳನ್ನು ಪಡೆದು ಮದುವೆಮಾಡಬೇಕೆಂದು ಹಣಕ್ಕಾಗಿ ನಮ್ಮನ್ನೆಲ್ಲಾ ಏಕೆ ಪೀಡಿಸುತ್ತಿರುವಿರಿ?' ಇತ್ಯಾದಿ ಬಹುಕೆಟ್ಟ ಮಾತುಗಳನ್ನು ಆಡಿದನು. ಅಪಹಾಸ ಮಾಡಿದನು. ಕೋಪಿಸಿಕೊಂಡವನಾಗಿ ಸ್ವಲ್ಪ ಹಣವನ್ನೂ ಕೊಡಲಿಲ್ಲ.

ತರುವಾಯ ಬಹುಕಾಲದ ಮೇಲೆ ಮಾಯಾವರದಲ್ಲಿ ವಾಸಮಾಡುತ್ತಿದ್ದ ಚಂದ್ರಶರ್ಮನು ಬಂದು ಇವನನ್ನು ಹಣವಂತನೆಂದು ತಿಳಿದು ಹಣವನ್ನು ಯಾಚನೆ ಮಾಡಿದನು. ಆಗ ದೈವೇಚ್ಛೆಯಿಂದ ಕಾಲು ನಾಣ್ಯವನ್ನು ಕೊಟ್ಟನು. ಚಂದ್ರಶರ್ಮನು ಅವಮಾನ ಕೊಟ್ಟ ಕಾರಣವೂ ಸ್ವಲ್ಪ ಕೊಟ್ಟ ಕಾರಣೂ ಕೋಪಿಸಿಕೊಂಡು ನನಗೆ ಬೇಡವೇ ಬೇಡವೆಂದು ಬಿಟ್ಟು ಹೋದನು. ಧನದನು ಆ ಹಣವನ್ನು ಪೆಟ್ಟಿಗೆಯ ಒಳಗೆ ಹಾಕಿಕೊಂಡನು. 'ನನಗೇ ಲಾಭವುಂಟಾಯಿತು. ಬ್ರಾಹ್ಮಣನಿಗೆ ಕೊಟ್ಟ ಹಣವು ನನ್ನ ಪೆಟ್ಟಿಗೆಯಲ್ಲೇ ಬಂದು ಸೇರಿತು' ಎಂದು ಹೇಳಿಕೊಂಡನು. ಬ್ರಾಹ್ಮಣನ ಹತ್ತಿರ ಕ್ಷಮಾಕೇಳಿಕೊಳ್ಳಲಿಲ್ಲ. ಈರೀತಿಯಾಗಿ ಬ್ರಾಹ್ಮಣ ಕೋಪಪಾತ್ರವಾದ ಆ ಹಣವು ಉರಿಯುವ ಬೆಂಕಿಯಂತೆ ಅವನ ಹಣವನ್ನೆಲ್ಲಾ ನಾಶಮಾಡಿತು. ಎಂದರೆ ಅವನಿಗೆ ಬಡ್ಡಿಗೆ ಕೊಟ್ಟ ಹಣವೆಲ್ಲಾ ಹಾಗೆಯೇ ಮುಳುಗಿಹೋಯಿತು. ವ್ಯಾಪಾರ ಮಾಡಲು ಯಾವ ವಸ್ತುವನ್ನು ತಂದರೂ ಕಳ್ಳರು ಬಂದು ಅದನ್ನು ಅಪಹರಿಸಿಕೊಂಡು ಹೋಗುತ್ತಿದ್ದರು. ಅಥವಾ ಆ ವಸ್ತುವಿನ ಕ್ರಯವು ಅವನ್ನು ಕೊಟ್ಟದ್ದಕ್ಕಿಂತ ಕಡಿಮೆಯಾಗಿ ಬಿಡುವುದು. ಇದೇರೀತಿ ಹಣವೆಲ್ಲವೂ ನಾಶವನ್ನು ಹೊಂದಿತು. ಮಕ್ಕಳೂ ಇರಲಿಲ್ಲ. ಪತ್ನೀಸಹಿತನಾಗಿ ಬಹುಕಷ್ಟವನ್ನು ಹೊಂದಿದನು. ಊರನ್ನೇ ಬಿಟ್ಟುಹೋದನು.

ಕಾಡಿನಲ್ಲಿ ಹೆಂಡತಿಯನ್ನು ಕರೆದುಕೊಂಡು ಹೋಗುತ್ತಾ ಇದ್ದನು. ತುಂಬಾ ಶ್ರಮವನ್ನು ಹೊಂದಿದನು. ನೀರಡಿಕೆಯು ಅವನಿಗಾಯಿತು. ಬಿಸಿಲಿನ ತಾಪವನ್ನು ತಡೆಯಲಾಗದೆ ಒಂದು ಮರದ ನೆರಳಿನಲ್ಲಿ ನಿಂತನು. ಆಮೇಲೆ ನೀರನ್ನು ಹುಡುಕುತ್ತಾ ಮೇಲಿನಿಂದ ನೀರು ಬೀಳುತ್ತಾ ಇರುವ ಒಂದು ಆಶ್ಚರ್ಯಕರವಾದ ಕುಂಡವನ್ನು ನೋಡಿದನು. ನೀರು ತರಲಿಕ್ಕಾಗಿ ಅಲ್ಲಿಗೆ ತಂಬಿಗೆಯನ್ನು

ಹಿಡಿದುಕೊಂಡು ಹೋದನು. ದೈವೇಚ್ಛೆಯಿಂದ ಅಲ್ಲಿಗೆ ಒಂದು ಹುಲಿಯು ಬಂದಿತು. ಒಳ್ಳೇ ಹಸಿದಿದ್ದ ಆ ಹುಲಿಯು ಅವನನ್ನು ಹಿಡಿದುಬಿಟ್ಟಿತು. 'ಪ್ರಿಯೇ! ನಾನು ಸತ್ತೆನು. ನನ್ನನ್ನು ಹುಲಿಯು ಹಿಡಿದುಬಿಟ್ಟಿತು. ದೀನಳಾದ ನಿನಗೆ ಅರಣ್ಯದಲ್ಲಿ ಯಾರು ನೀರು ಕುಡಿಸುವರು? ಅಯ್ಯೋ!ಸತ್ತೆನು ಸತ್ತೆನು' ಎಂದು ಕೂಗುತ್ತಿರುವಂತೆ ಹುಲಿಯು ಕೊಂದು ತಿಂದುಬಿಟ್ಟಿತು. ಈ ಧನದನ ಮಾತು ಹೆಂಡತಿಯ ಕಿವಿಗೆ ಬಿದ್ದಿತು. ಹುಲಿಯಿದ್ದಲ್ಲಿಗೆ ಓಡಿದಳು. ಸತ್ತುಬಿದ್ದಿದ್ದ ಗಂಡನ ದೇಹವನ್ನು ನೋಡಿದಳು. ''ಹುಲಿಯೇ! ನನ್ನನ್ನು ಬೇಗನೇ ತಿನ್ನು ನನ್ನ ಜನರ ಒಬ್ಬರೂ ಇಲ್ಲ. ನಾನು ಗಂಡನಿಲ್ಲದೆ ಇರಲಾರೆನು. ನೀರಡಿಕೆಯಾಗುತ್ತಿದೆ'' ಎಂದು ಅಳುತ್ತಾ ಹುಲಿಯ ಎದುರಿಗೇ ಹೋದಳು. ಆದರೆ ಹುಲಿಗೆ ಹೊಟ್ಟೆ ತುಂಬಿದ್ದ ಕಾರಣ ಅವಳನ್ನು ಮುಟ್ಟದೆ ಹೊರಟುಹೋಯಿತು.

ಅವಳು ಅಲ್ಲಿಯೇ ಕೂತುಕೊಂಡು ಬಿಟ್ಟಳು. ಹುಲಿಯು ಸತ್ತು ಉಳಿದ ಗಂಡನ ದೇಹವನ್ನು ತೊಡೆಯಲ್ಲಿ ಇಟ್ಟುಕೊಂಡು ಅಳುವವಳಾದಳು. 'ನೀವು ಹಣವಂತರಾಗಿ ಮಾಹಿಷ್ಮತೀನಗರದಲ್ಲಿ ಇದ್ದದ್ದು ಎಲ್ಲಿ? ಈ ಜನರಹಿತವಾದ ಅರಣ್ಯದಲ್ಲಿ ಹುಲಿಯ ಬಾಯಿಗೆ ಸಿಕ್ಕಿ ಸಾಯುವುದು ಎಲ್ಲಿ?' ಎಂದು ಬಹಳ ವಿಲಾಪವನ್ನು ಮಾಡಿ ದೀರ್ಘಶ್ವಾಸವನ್ನು ಬಿಟ್ಟು ಗಂಡನ ದೇಹವನ್ನು ಎದೆಯಮೇಲೆ ಇಟ್ಟುಕೊಂಡು ಪರ್ವತದಿಂದ ಕೆಳಗೆ ಹಾರಿದಳು. ಶಂಬುಕ! ಆ ಧನದನೇ ನೀನು ಹುಟ್ಟಿರುವಿ. ಆ ಹೆಂಡತಿ ನೀನು ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣರಿಗೂ ದಾನ ಮಾಡಲಿಲ್ಲ. ಅದುದರಿಂದ ದರಿದ್ರನಾಗಿರುವಿ. ಬ್ರಾಹ್ಮಣರ ಅವಮಾನ ಮಾಡಿದ ಕಾರಣ ದೀರ್ಘರೋಗವನ್ನು ಹೊಂದಿರುವಿ. ಬ್ರಾಹ್ಮಣನಿಗೆ ಕೊಡುತ್ತೇನೆ ಎಂದು ಹೇಳಿದ ಹಣವನ್ನು ಕೊಡದೆ ಇದ್ದ ಕಾರಣ ನಿನ್ನ ಮಕ್ಕಳು ಹುಟ್ಟಿದಂತೆ ಸಾಯುವರು. ಬ್ರಾಹ್ಮಣರನ್ನು ಅಪಹಾಸ ಮಾಡಿದ ದೋಷದಿಂದ ನಿನ್ನ ಮುಖದಲ್ಲಿ ಕುಷ್ಠರೋಗವು ಉಂಟಾಗಿರುವುದು. ಬ್ರಾಹ್ಮಣರು ಬಿಟ್ಟ ಹಣವನ್ನು ನೀನು ಪೆಟ್ಟಿಗೆಯಲ್ಲಿ ಹಾಕಿಕೊಂಡಿರುವ ಕಾರಣ ಬ್ರಾಹ್ಮಣ ಕೋಪದಿಂದ ನೀನು ಯಾವ ಕೆಲಸವನ್ನು ಮಾಡಲಿಕ್ಕೆ ಹೋದರೂ ವಿಘ್ನವು ಬರುವುದು. ನಿನ್ನ ಕೈಗೆ ಬಂದಂತೆ ಇರುವ ಹಣವು ಮರೆಯಾಗುವುದು. ನೀನು ಯಾವ ಉದ್ಯೋಗಕ್ಕೆ ಹೋದರೂ ನಡೆಯುವುದಿಲ್ಲ. ದಾನವನ್ನು ಮಾಡದೆ ಈಗ ಸಿಗಲಾರದು. ಬೀಜವನ್ನು ಬಿತ್ತದೆ ಧಾನ್ಯವು ಸಿಗಲಾರದು. ದುಃಖಪಟ್ಟು ಏನು ಪ್ರಯೋಜನವಿದೆ? ಮನೆಮನೆಗಳ ಬಾಗಿಲಲ್ಲಿ ಭಿಕ್ಷುಕರು ಭಿಕ್ಷಾಪಾತ್ರೆಗಳನ್ನು ಹಿಡಿದುಕೊಂಡು ದಾನಮಾಡದೆ ಇದ್ದವರಿಗೆ ನಮ್ಮ ಗತಿಯೇ

ಆಗುವುದೆಂದು ತಿಳಿಸುವಂತೆ ಇದ್ದಾರೆ. ದಾನಕ್ಕಿಂತ ಹಿತಕರವಾದ ವಸ್ತುವು ಬೇರೆ ಇರುವುದಿಲ್ಲ. ಭಯದಿಂದಲೋ ಲಜ್ಜೆಯಿಂದಲೋ ಅಶ್ರದ್ಧೆಯಿಂದಲೋ ಅವಶ್ಯವಾಗಿ ದಾನವನ್ನು ಮಾಡಲೇಬೇಕು ಎಂದು ವೇದದಲ್ಲಿಯೇ ಹೇಳುತ್ತದೆ. ಇನ್ನು ಮುಂದೆ ನಿನಗೆ ಹಿತವನ್ನು ಹೇಳುವೆನು. (ತೈ.ಉ.ಶೀ.ವ.23)

ಶಂಬುಕ! ಮಂತ್ರಗಳಿಂದ ಪವಿತ್ರವಾದ ನನ್ನ ಕಮಂಡಲುವಿನಲ್ಲಿದ್ದ ನೀರನ್ನು ಕುಡಿದ ಕಾರಣದಿಂದ ನಿನ್ನ ರೋಗವೆಲ್ಲವೂ ಪರಿಹೃತವಾಯಿತು. ಇನ್ನು ನಿನಗೆ ದೇಹದಲ್ಲಿ ಬಲವು ಬರುವುದು. ಈ ನಿನ್ನ ಮಗನೂ ಕಮಂಡಲುವಿನ ನೀರನ್ನು ಕುಡಿದ ಕಾರಣ ಬದುಕುವನು. ನಿನ್ನ ಹೆಂಡತಿಗೂ ದೇಹದಲ್ಲಿ ಬಲವು ಬರುವುದು. ನೀನು ನಿತ್ಯವೂ ಹೆಂಡತಿಯಿಂದ ಸಹಿತನಾಗಿ ಕಾಡಿಗೆ ಹೋಗಿ ಕಟ್ಟಿಗೆಯನ್ನು ತೆಗೆದುಕೊಂಡು ಬಂದು ಮಾರಿ ಗಂಗೆಯಲ್ಲಿ ಸ್ನಾನಮಾಡಿ ಕಟ್ಟಿಗೆಯನ್ನು ಮಾರಿ ಬಂದ ಹಣದಲ್ಲಿ ನಾಲ್ಕನೇ ಒಂದು ಭಾಗವನ್ನು ಬ್ರಾಹ್ಮಣರಿಗೆ ಕೊಡು. ಉಳಿದ ಮೂರು ಭಾಗಗಳಿಂದ ಜೀವನವನ್ನು ಮಾಡುತ್ತಿರು. ಅಷ್ಟೇ ಜೀವನಕ್ಕೆ ಸಾಕಾಗುವುದು. ಅರವತ್ತು ವರ್ಷಕಾಲ ಹೀಗೆಯೇ ಇರು. ಸಾಯುವವರೆಗೂ ಗಂಗಾತೀರದಲ್ಲಿಯೇ ವಾಸಮಾಡುತ್ತಾ ಇರು. ಅಲ್ಲಿಯೇ ನಿನ್ನೊಡನೆ ನಿನ್ನ ಹೆಂಡತಿಯೂ ಸಾಯುವಳು. ಆಮೇಲೆ ನೀನು ವೇದಶಾಸ್ತ್ರಪಾರಂಗತನಾದ ಬ್ರಾಹ್ಮಣಾಗಿ ಹುಟ್ಟುವಿ. ಆಗಲೂ ನಿನಗೆ ಇವಳೇ ಹೆಂಡತಿಯಾಗುವಳು. ಇವನೇ ಮಗನಾಗಿ ಹುಟ್ಟುವನು. ನನ್ನ ಅನುಗ್ರಹ ದಿಂದ ನಿನಗೆ ಆಗ ಪೂರ್ವಜನ್ಮದ ಸ್ಮರಣೆಯೂ ಇರುವುದು. ಆಗ ನನ್ನ ಮಾತನ್ನೆಲ್ಲಾ ಸ್ಮರಿಸು. ಆಗ ಯಾಚಕಬ್ರಾಹ್ಮಣರನ್ನು ನೋಡಿ ಅಸೂಯೆಯನ್ನು ಹೊಂದಬೇಡ. ಸಂತೋಷದಿಂದ ದಾನ ಮಾಡು. ದಾನಮಾಡುವುದರಿಂದ ಭಗವಂತನು ಸಂತೋಷವನ್ನು ಹೊಂದುವನೆಂದು ತಿಳಿಯು. ನಿನ್ನ ಅಭೀಷ್ಟವು ಸಿದ್ಧಿಸುವುದು. ಶಂಬುಕ! ಏಳು ದುಃಖಪಡಬೇಡ. ನಿನ್ನ ಗ್ರಾಮಕ್ಕೆ ಹೋಗು. ನಾನು ಹೇಳಿದ ರೀತಿಯಾಗಿ ಜೀವನ ಮಾಡು. ಇದರಿಂದ ನಿನ್ನ ಅಭೀಷ್ಟವೆಲ್ಲವೂ ಸಿದ್ಧಿಸುವುದು'.

ಈರೀತಿಯಾಗ ಗಾಲವರ ಮಾತನ್ನುಕೇಳಿ ಶಂಬುಕನು ಸಂತೋಷಯುಕ್ತವಾದ ಮನಸ್ಸುಳ್ಳವನಾಗಿ ಪತ್ನೀಯಿಂದ ಸಹಿತನಾಗಿ ಉದ್ದಕ್ಕೆ ಗಾಲವರಿಗೆ ನಮಸ್ಕರಿಸಿದನು. ಆಮೇಲೆ ಕಟ್ಟಿಗೆಯನ್ನು ಹೊತ್ತುಕೊಂಡು ಊರಿಗೆ ಹೋದನು. ತರುವಾಯ ಗಾಲವರು ಹೇಳಿದಂತೆಯೇ ಮಾಡಿಕೊಂಡು ಬಂದನು. ಹೀಗೆಯೇ ಅರವತ್ತು ವರ್ಷ ಆಯುಷ್ಯವು ಕಳೆದುಹೋಯಿತು. ಗಂಗಾತೀರದಲ್ಲಿಯೇ ಮೃತನಾದನು. ಅವನ ಹೆಂಡತಿಯು ಸಹಗಮನ ಮಾಡಿದಳು.

# ಕಪಿಲನ ಕಥೆ [1]

ಮಹಾನುಭಾವನಾದ ಶಂಬುಕನು ಕಾಶಿಯಲ್ಲಿ ವಾಸಮಾಡಿಕೊಂಡು ಇರುವಾಗ ಒಂದು ಆಶ್ಚರ್ಯಕರವಾದ ಕಾರ್ಯವು ನಡೆಯಿತು. ಆ ಸಮಯದಲ್ಲಿ ಮನೋಹರವಾದ ಅವಂತೀನಗರದಲ್ಲಿ ಹಣವಂತನಾದ ಕಪಿಲ ಎಂಬ ಬ್ರಾಹ್ಮಣನು ವಾಸಿಸುತ್ತಿದ್ದನು. ಅವನ ಹೆಂಡತಿಯ ಹೆಸರು ಸುಶೀಲಾ ಎಂದು. ಕಪಿಲನು ತುಂಬಾ ಹಣದ ಆಸೆಯುಳ್ಳವನಾಗಿದ್ದನು. ಹಣವಂತನಾಗಿದ್ದರೂ ತುಂಬಾ ಲೋಭಿಯಾಗಿದ್ದನು. ಪೌರೋಹಿತ್ಯವನ್ನು ಮಾಡಿಸುವನು. ಭಿಕ್ಷೆಯನ್ನೂ ಬೇಡುವನು. ಹಣವನ್ನು ಬಡ್ಡಿಗೆ ಹಾಕುವನು. ಹೀಗೆಯೇ ಮಾಡಿ ಬಹು ಹಣವನ್ನು ಸಂಪಾದಿಸಿದ್ದನು. ಒಬ್ಬ ಬ್ರಾಹ್ಮಣನಿಗೂ ಸ್ವಲ್ಪ ದಾನಮಾಡಿದವನಲ್ಲ. ತಾನೂ ಹೊಟ್ಟೆತುಂಬಾ ಊಟವನ್ನು ಮಾಡಲಾರನು. ಯಾವಾಗಲೂ ಇನ್ನೊಬ್ಬರ ಮನೆಯಲ್ಲಿಯೇ ಊಟ ಮಾಡುವನು. ಎಲ್ಲಿಯೂ ಊಟವು ಸಿಗದೆ ಇದ್ದರೆ ಹಣದ ಲೋಭದಿಂದ ಸಾಯಂಕಾಲದ ಹೊತ್ತಿಗೆ ಒಂದಿಷ್ಟು ಕದನ್ನವನ್ನು ಮಾಡಿ ಊಟ ಮಾಡುವನು. ತಂದೆತಾಯಿಗಳ ಶ್ರಾದ್ಧವು ಬಂದರೆ ಗ್ರಾಮಾಂತರಕ್ಕೆ ಹೋಗುವನು. ಶ್ರಾದ್ಧವನ್ನು ಮಾಡುವನೋ ಇಲ್ಲವೋ ಒಬ್ಬರಿಗೂ ತಿಳಿಯಲಾರದು. ನಿತ್ಯವೂ ಬೆಳಿಗ್ಗೆ ಮನೆಬಿಟ್ಟು ಹೋದರೆ ಸಾಯಂಕಾಲಕ್ಕೆ ಸರಿಯಾಗಿ ಮನೆಗೆ ಬಂದು ಸೇರುವನು. ಅವನ ಮನೆಯಲ್ಲಿ ಒಂದು ದಿವಸವೂ ಒಬ್ಬ ಅತಿಥಿಯು ಭೋಜನಮಾಡಿಲ್ಲ. ಅವನ ಹೆಂಡತಿಯಾದ ಸುಶೀಲೆಯೂ ಗಂಡನ ಭಯದಿಂದ ಭಿಕ್ಷುಕರಿಗೆ ಭಿಕ್ಷೆಯನ್ನೂ ಹಾಕಿದ್ದಿಲ್ಲ. ತಾನು ಮಾತ್ರ ಗಂಡನ ಆಜ್ಞೆಯಿಂದ ಸರಿಯಾಗಿ ಭೋಜನ ಮಾಡುತ್ತಿದ್ದಳು. ಒಳ್ಳೇ ಸೀರೆಗಳನ್ನೂ ಉಡುತ್ತಿದ್ದಳು. ಯಾವಾಗಲೂ ತುಳಸೀವೃಂದಾವನದ ಬಳಿಯಲ್ಲಿಯೇ ಇರುವಳು. ದೇವರ ಸೇವೆಯನ್ನು ಮಾಡುವಳು. ಪ್ರದಕ್ಷಿಣೆ ಬರುವಳು. ನಮಸ್ಕಾರ ಮಾಡುವಳು. ರಂಗೋಲೆ ಹಾಕುವಳು. ಈರೀತಿಯಾಗಿ ದಿವಸವನ್ನು ಸಾರ್ಥಕವಾಗಿ ಕಳೆಯುತ್ತಿದ್ದಳು. ದೇವಾಲಯಕ್ಕೆ ಹೋಗುವಳು. ದೇವರ ಪೂಜೆಯನ್ನು ನೋಡುವಳು. ಹರಿಕಥೆಯನ್ನು ಕೇಳುವಳು. ಪುರಾಣಗಳನ್ನು ಕೇಳುವಳು. ಕೇಳುವಾಗ ಬ್ರಾಹ್ಮಣರಿಗೆ ದಾನವನ್ನು ಮಾಡಬೇಕೆಂದು ತೋರುತ್ತಿತ್ತು. ಆದರೆ ಗಂಡನ ಭಯದಿಂದ ದಾನಮಾಡಲಿಕ್ಕೆ ಮಾತ್ರ ಆಗುತ್ತಿರಲಿಲ್ಲ.

ಒಂದು ದಿವಸದಲ್ಲಿ ಪರ್ಣಾದ ಎಂಬ ಬ್ರಾಹ್ಮಣನು ಬಿಸಿಲಿನಲ್ಲಿ ಅಲೆಯುತ್ತಾ ಬಂದನು. ಅವನು ವೇದವೇದಾರ್ಥ ತತ್ವಗಳನ್ನು ತಿಳಿದವನಾಗಿದ್ದನು. ದರಿದ್ರನಾಗಿದ್ದನು. ಹಣದ ಆಸೆಯಿಂದ ಸಂಚರಿಸುತ್ತಾ ಮಧ್ಯಾಹ್ನ ಸಮಯದಲ್ಲಿ ಕಪಿಲನ ಮನೆಗೆ

ಬಂದನು. ಸುಶೀಲೆಯು ಮನೆಗೆ ಬಂದಿರುವ ಬ್ರಾಹ್ಮಣರನ್ನು ನೋಡಿ ಪರಮ ಭಕ್ತಿಯಿಂದ ಅರ್ಘ್ಯಪಾದ್ಯಾದಿಗಳಿಂದ ಪೂಜೆಯನ್ನು ಮಾಡಿದಳು. ತರುವಾಯ ಸುಶೀಲೆಯು ಪರ್ಣಾದನೊಡನೆ 'ನೀವು ನನ್ನ ಮೇಲೆ ಕೃಪೆಯಿಂದ ನನ್ನ ಗಂಡನಿಗೆ ತಿಳಿಯದಂತೆ ಮನೆಯ ಒಂದು ಮೂಲೆಯಲ್ಲಿ ಅಡಿಗೆ ಮಾಡಿಕೊಂಡು ಊಟಮಾಡಿ ಹೋಗಬೇಕು. ಹಸಿವೆಯಿಂದ ಮಧ್ಯಾಹ್ನದಲ್ಲಿ ಮನೆಗೆ ಬಂದಿರುವ ನಿಮ್ಮನ್ನು ಉಪವಾಸದಿಂದ ಹಿಂದೆ ಕಳುಹಿಸಲಾರೆನು' ಎಂದು ಹೇಳಿದಳು.

ಪರ್ಣಾದನು ಸಂತೋಷಯುಕ್ತವಾದ ಮನಸ್ಸುಳ್ಳನಾಗಿ 'ಹಾಗೇ ಆಗಲಮ್ಮ' ಎಂದು ಹೇಳಿ ಮನೆಯ ಹಿಂದಿನ ಪಾರ್ಶ್ವದಲ್ಲಿ ಅಡಿಗೆ ಮಾಡಿಕೊಳ್ಳಲಿಕ್ಕೆ ಆರಂಭಿಸಿದನು. ಸುಶೀಲೆಯು 'ನಿಮಗೆ ಏನು ಸಾಮಾನು ಬೇಕಾದರೂ ನನ್ನೊಡನೆ ದಾಕ್ಷಿಣ್ಯವಿಲ್ಲದೆ ಕೇಳಿರಿ. ಸ್ವಲ್ಪವೂ ಸಂಕೋಚವನ್ನು ಮಾಡಬೇಡಿರಿ. ನಾನು ಬ್ರಾಹ್ಮಣರಲ್ಲಿ ಭಕ್ತಿಉಳ್ಳವಳು' ಎಂದು ಹೇಳಿದಳು. ಪರ್ಣಾದನು ಅವನ ಈ ಮಾತನ್ನು ಕೇಳಿ ಬಹುಸಂತೋಷವನ್ನು ಹೊಂದಿದನು. ಅಡಿಗೆಯನ್ನು ಮುಗಿಸಿ ಇಚ್ಛಾನುಸಾರವಾಗಿ ಭೋಜನ ಮಾಡಿ ಶುದ್ಧವಾದ ನೀರನ್ನು ಕುಡಿದು ಶ್ರಮಪರಿಹಾರಮಾಡಿಕೊಂಡನು. ತರುವಾಯ ಸುಶೀಲೆಯು ಪರ್ಣಾದನೊಡನೆ 'ನೀವು ಈ ಬಿಸಿಲಿನಲ್ಲಿ ಯಾಕೆ ಸಂಚರಿಸುತ್ತಿರುವಿರಿ? ಏನು ಸಿಕ್ಕಿದರೆ ನೀವು ಕೃತಾರ್ಥರಾಗುವಿರಿ? ಅದನ್ನು ನನ್ನೊಡನೆ ಹೇಳಿರಿ' ಎಂದಳು.

ಅದಕ್ಕೆ ಪರ್ಣಾದನು 'ತಾಯಿ! ನನಗೆ ವೇದ ಅಧ್ಯಯನ ಮಾಡಬೇಕು. ವೇದಾರ್ಥವನ್ನು ತಿಳಿದುಕೊಳ್ಳಬೇಕು ಎಂದು ತುಂಬಾ ಆಸೆಯಾಗಿದೆ. ಆದರೆ ದಾರಿದ್ರ್ಯದಿಂದ ತುಂಬಾ ಪೀಡಿತನಾಗಿದ್ದೇನೆ. ನನಗೆ ಹದಿನೆರಡು ವರ್ಷಗಳಿಗೆ ಬೇಕಾಗುವಷ್ಟು ಹಣವು ಸಿಕ್ಕಿದರೆ ಕೃತಾರ್ಥನಾಗುವೆನು' ಎಂದನು. ಸುಶೀಲೆಯು ಪರ್ಣಾದನ ಮಾತನ್ನು ಕೇಳಿ ಯೋಚನೆಮಾಡಿ 'ಇಲ್ಲಿ ಬನ್ನಿರಿ. ನಮ್ಮ ಹಣವಿಡುವ ಮನೆಯಿದು. ಇಲ್ಲಿ ನೀವು ಪ್ರವೇಶಿಸಿ ಸಂಕೋಚವಿಲ್ಲದೆ ಬೇಕಾದಷ್ಟು ಹಣವನ್ನು ಹಿಡಿದುಕೊಂಡು ಬೇಗನೇ ಇಲ್ಲಿಂದ ಹೊರಟುಹೋಗಿರಿ' ಎಂದಳು. ತರುವಾಯ ಪರ್ಣಾದನು ಸಂತೋಷದಿಂದ ಅಲ್ಲಿಗೆ ಪ್ರವೇಶಿಸಿ ಹಣವನ್ನು ತೆಗೆಯಲಿಕ್ಕೆ ಕೈಹಾಕಲು ಸರ್ಪವು ತಡೆಯಿತು. ಕೋಪಿಸಿಕೊಂಡ ಬ್ರಾಹ್ಮಣನನ್ನು ನೋಡಿ ಶಾಪವನ್ನು ಕೊಡಬಹುದೆಂಬ ಭಯದಿಂದ ಮನುಷ್ಯರು ಮಾತಾಡುವಂತೆ 'ಬ್ರಾಹ್ಮಣೋತ್ತಮ! ಕ್ಷಮಿಸು. ಈ ಮನೆಯಲ್ಲಿ ಕುಬೇರನು ಯಕ್ಷರು ನನ್ನನ್ನು ಸ್ಥಾಪಿಸಿರುವರು. ಇದು ಕಪಿಲನಿಗೆ ಸೇರುವ ಹಣವಲ್ಲ. ಸುಶೀಲೆಯ ಹಣವೂ ಅಲ್ಲ. ಇದು ಕಾಶಿಯಲ್ಲಿ ಕಟ್ಟಿಗೆ

ಮಾರಿ ಬಂದ ಹಣದಲ್ಲಿ ನಾಲ್ಕನೇ ಒಂದು ಭಾಗವನ್ನು ನಿತ್ಯವೂ ದಾನಮಾಡುತ್ತಿರುವ ಶಂಬುಕನ ಹಣವು. ಬ್ರಾಹ್ಮಣ! ನಿನಗೆ ಹಣಬೇಕೆಂಬ ಆಸೆಯಿದ್ದರೆ ಬೇಗನೇ ಕಾಶಿಗೆ ಹೋಗು. ಅವನ ಆಜ್ಞೆಯನ್ನು ಸ್ವೀಕರಿಸಿ ಇಚ್ಛಾನುಸಾರವಾಗಿ ಹಣವನ್ನು ಸ್ವೀಕರಿಸು' ಎಂದು ಹೇಳಿತು. ಈರೀತಿಯಾಗಿ ಆಶ್ಚರ್ಯಕರವಾದ ಸರ್ಪದ ಮಾತನ್ನು ಕೇಳಿದನು. ಸುಶೀಲೆಯೂ ಈ ಮಾತನ್ನು ಕೇಳಿ ಮನಸ್ಸಿನಲ್ಲಿ ಸಂತಾಪವನ್ನು ಹೊಂದಿದಳು. ದೈನ್ಯಯುಕ್ತವಾದ ವಾಣಿಯಿಂದ ಸುಶೀಲೆಯು ಪರ್ಣಾದನೊಡನೆ 'ಬ್ರಾಹ್ಮಣರೇ! ನಿಮಗೆ ನಮಸ್ಕಾರಗಳು. ಈಗಲೇ ನೀವು ಕಾಶಿಗೆ ಹೋಗಬೇಕು. ನನಗೆ ಸರ್ಪದ ಮಾತಿನಲ್ಲಿ ವಿಶ್ವಾಸವುಂಟಾಗುವಂತೆ ಮಾಡಿರಿ. ಇದರಿಂದ ನಿಮಗೂ ಕಾರ್ಯಸಿದ್ಧಿ ಯಾಗುವುದು' ಎಂದು ಹೇಳಿದಳು.

ಪರ್ಣಾದನು ಸುಶೀಲೆಯ ಮಾತನ್ನು ಕೇಳಿ ಬೇಗನೇ ಕಾಶಿಗೆ ಹೋದನು. ಅಲ್ಲಿರುವ ಜನರ ಹತ್ತಿರ ವಿಚಾರಿಸಿಕೊಂಡು ಶಂಬುಕನಿದ್ದಲ್ಲಿಗೆ ಹೋಗಿ ಶಂಬುಕನನ್ನು ನೋಡಿದನು. ತನ್ನ ಎದುರಾಗಿ ಬರುತ್ತಿರುವ ಪರ್ಣಾದನನ್ನು ನೋಡಿ ಶಂಬುಕನು ಎದ್ದು ಬಂದು ನಮಸ್ಕರಿಸಿದನು. ಬರಬೇಕು ಎಂದು ಹೇಳಿ ಆ ದಿವಸ ಕಟ್ಟಿಗೆ ಮಾರಿಬಂದ ಹಣದಲ್ಲಿ ನಾಲ್ಕನೇ ಭಾಗವನ್ನು ದಾನಮಾಡಲಿಕ್ಕೆ ಉದ್ಯುಕ್ತನಾದನು. ಅದನ್ನು ನೋಡಿ ಪರ್ಣಾದನು 'ನಾನು ಪಾಂಚಾಲದೇಶದ ದರಿದ್ರನಾದ ಬ್ರಾಹ್ಮಣನು. ದೂರದಿಂದ ನಿನ್ನ ಕೀರ್ತಿಯನ್ನು ಕೇಳಿ ಬಂದಿರುವೆನು' ಎಂದು ಹೇಳಿದನು. ಅದನ್ನು ಕೇಳಿ ಶಂಬುಕನು 'ಬ್ರಾಹ್ಮಣರೇ! ಮಂದಭಾಗ್ಯನಾದ ನನ್ನಿಂದಾಗಿ ಬಹುಶ್ರಮಪಟ್ಟಿರುವಿರಲ್ಲಾ! ನಾನೇನು ಮಾಡಲಿ? ನಿಮ್ಮ ಸಂತೋಷಕ್ಕೆ ಕಾರಣವಾದ ಹಣವನ್ನು ಕಾಣೆನಲ್ಲಾ' ಅದುದರಿಂದ ಈದಿವಸದಲ್ಲಿ ಕಟ್ಟಿಗೆಯನ್ನು ಮಾರಿ ಬಂದ ಹಣವನ್ನೆಲ್ಲಾ ನಿಮಗೆ ಕೊಡುವೆನು. ನನ್ನ ಮೇಲೆ ಅನುಗ್ರಹ ಮಾಡಬೇಕು. ದಯೆಯನ್ನು ತೋರಿಸಬೇಕು' ಎಂದನು. ಅದನ್ನು ಕೇಳಿ ಪರ್ಣಾದನು 'ಶಂಬುಕ! ಇಷ್ಟು ಸ್ವಲ್ಪವಾದ ಹಣಕ್ಕೋಸ್ಕರ ನಾನು ಬಂದಿಲ್ಲ. ನಿನಗೆ ಬಹಳ ಹಣವಿದೆ. ಅದರಲ್ಲಿ ಇಪ್ಪತ್ತೈದು ತೊಲೆ ಬಂಗಾರವನ್ನು ನನಗೆ ಕೊಡು. ನಾನು ಕೊಟ್ಟಿದ್ದೇನೆಂದು ಹೇಳಿ ನೀರಿನ ಧಾರೆಯನ್ನು ಬಿಡು. ಇಲ್ಲದಿದ್ದರೆ ನಾನು ಇಲ್ಲಿಂದ ಹೋಗಲಾರೆನು. ಇಲ್ಲಿ ನೀನು 'ಹಣವನ್ನು ಕೊಟ್ಟೆನು' ಎಂದು ನೀರಿನ ಧಾರೆಯನ್ನು ಬಿಟ್ಟರೆ ನಿನ್ನ ಹಣವು ಎಲ್ಲಿ ಇರುವದೋ ಅಲ್ಲಿಗೆ ಹೋಗಿ ತೆಗೆದುಕೊಳ್ಳುವೆನು. ಈ ವಿಷಯದಲ್ಲಿ ಸಂದೇಹವನ್ನು ಹೊಂದಬೇಡ. ನಾನು ಸುಳ್ಳು ಹೇಳುವವನಲ್ಲ' ಎಂದು ಹೇಳಿದನು.

ಅತ್ಯಾಶ್ಚರ್ಯಕರವಾದ ಆ ಮಾತನ್ನು ಕೇಳಿ ಶಂಬುಕನು ಪರ್ಣಾದನಿಗೆ

ಇಪ್ಪತ್ತೈದು ತೊಲೆ ಬಂಗಾರವನ್ನು ಕೊಡುವೆನೆಂದು ಸಂಕಲ್ಪವನ್ನು ಮಾಡಿದನು. ತರುವಾಯ ಶಂಬುಕನು ಪರ್ಣಾದನಿಗೆ ನಮಸ್ಕರಿಸಿ 'ಸ್ವಾಮಿ! ನನ್ನನ್ನು ಅಪಹಾಸ ಮಾಡುವಂತೆ ಇದೆ. ಸತ್ಯವಾದ ವಿಷಯವನ್ನು ತಿಳಿಸಿರಿ' ಎಂದು ಕೇಳಿದನು. ತರುವಾಯ ಪರ್ಣಾದನು ನಡೆದ ವಿಷಯವನ್ನೆಲ್ಲಾ ತಿಳಿಸಿದನು. ಶಂಬುಕನು ಸಂತೋಷದಿಂದ ಯುಕ್ತವಾದ ಮನಸ್ಸುಳ್ಳವನಾಗಿ ಪರ್ಣಾದನನ್ನು ಕಳುಹಿಸಿದನು.

ತರುವಾಯ ಪರ್ಣಾದನು ಅವಂತೀದೇಶಕ್ಕೆ ಬಂದು ಸುಶೀಲೆಯೊಡನೆ ಎಲ್ಲವನ್ನೂ ತಿಳಿಸಿದನು. ಸುಶೀಲೆಯು ಅದರಿಂದ ತುಂಬಾ ಆಶ್ಚರ್ಯವುಳ್ಳವಳಾದಳು. ಆ ಸಮಯದಲ್ಲಿ ದೈವೇಚ್ಛೆಯಿಂದ ಕಪಿಲನು ಬಂದನು. ಸುಶೀಲೆಯು ಕಪಿಲನಿಗೆ ಕೈಮುಗಿದುಕೊಂಡು 'ನೀವು ಕೋಪಿಸಿಕೊಳ್ಳದಿದ್ದರೆ ಒಂದು ಆಶ್ಚರ್ಯಕರವಾದ ವಿಷಯವನ್ನು ಹೇಳುವೆನು. ನೀವು ಮನಸ್ಸಿನಲ್ಲಿ ಮಹಾವಿವೇಕವನ್ನು ತಂದುಕೊಂಡು ಕ್ಷಮಿಸುವ ಪಕ್ಷದಲ್ಲಿ ಹೇಳುವೆನು' ಎಂದಳು. ಅದಕ್ಕೆ ಕಪಿಲನು ಪ್ರೀತಿಯುಕ್ತವಾದ ಮನಸ್ಸಿನಿಂದ ಸುಶೀಲೆಯೊಡನೆ 'ಸುಂದರಿ! ನೀನು ಸತ್ಯವನ್ನು ಹೇಳು. ಈ ಬ್ರಾಹ್ಮಣನು ಯಾರು? ಏನು ಆಶ್ಚರ್ಯವು ನಡೆಯಿತು? ಎಲ್ಲವನ್ನೂ ತಿಳಿಸು' ಎಂದನು. 'ನಿನ್ನ ಮೇಲೆ ನನಗೆ ಕೋಪವಿಲ್ಲ. ನೀನು ಯಾವಾಗಲೂ ನನ್ನಲ್ಲಿ ಭಕ್ತಿಉಳ್ಳವಳಾಗಿರುವಿ' ಎಂದು ಹೇಳಿದನು. ಸುಶೀಲೆಯು ಎಲ್ಲವನ್ನೂ ತಿಳಿಸಿದಳು. ಅದನ್ನು ಕೇಳಿ ಕಪಿಲನಿಗೆ ಕೋಪವೂ ಆಶ್ಚರ್ಯವೂ ಆಯಿತು. ಕುತೂಹಲದಿಂದ ಹಣದ ಮನೆಗೆ ಹೋಗಿ ಪ್ರವೇಶಿಸಿದನು. ಹೋಗಿ ಅಲ್ಲಿಯ ಹಣವನ್ನು ತೆಗೆಯಲು ಇಚ್ಛಿಸಿದನು. ಆಗ ಸರ್ಪವು ತಡೆಯಿತು. ಸುಶೀಲೆಯು ಆಶ್ಚರ್ಯ ಉಳ್ಳವಳಾಗಿ ಪರ್ಣಾದನನ್ನು ಕರೆದಳು. 'ಬ್ರಾಹ್ಮಣರೇ! ನೀವು ಬನ್ನಿರಿ. ನಿಮಗೆ ಬೇಕಾದ ಹಣವನ್ನು ತೆಗೆಯಿರಿ' ಎಂದಳು.

ತರುವಾಯ ಪರ್ಣಾದನು ಹೋಗಿ ಆ ಸರ್ಪವು ನೋಡುತ್ತಿರುವಂತೆ ಬಂಗಾರದ ರಾಶಿಯಿಂದ ಬಂಗಾರವನ್ನು ತೆಗೆದು ವಸ್ತ್ರದಲ್ಲಿ ಹಾಕಿಕೊಂಡನು. ಇಪ್ಪತ್ತೈದು ತೊಲೆಯಷ್ಟು ಬಂಗಾರವನ್ನು ತೆಗೆದು ಮತ್ತು ತೆಗೆಯಲಿಕ್ಕೆ ಕೈಹಾಕಿದನು. ಆಗ ಸರ್ಪವು ತಡೆಯಿತು. ಮನುಷ್ಯರ ಮಾತಿನಿಂದ ನಗುತ್ತಾ 'ಬ್ರಾಹ್ಮಣ! ನೀವು ಆಸೆಪಟ್ಟ ಹಣಕ್ಕಿಂತ ಹೆಚ್ಚಾದ ಹಣವನ್ನು ಹೊಂದಿಯೂ ಇನ್ನೂ ಹೆಚ್ಚಿಗೆ ಬೇಕೆಂದು ಆಸೆಪಡುವಿರಾ? ಇದು ನಿಮಗೆ ಉಚಿತವಲ್ಲ. ನೀವು ಹೆಚ್ಚಿಗೆ ಆಸೆಪಟ್ಟು ಪ್ರಯೋಜನವಿಲ್ಲ. ಬಹುಶ್ರಮಪಟ್ಟು ಹಣವನ್ನು ಸಂಗ್ರಹಿಸಿರುವ ಕಪಿಲನೂ ಕೂಡ ಈ ಹಣವನ್ನು ಮುಟ್ಟಲಿಕ್ಕೆ ಆಗಲಾರದು. ನಿಮ್ಮ ಪಾಡೇನು? ಯಾವ ಕಪಿಲನು

ಬಿಸಿಲುಕಾಲದಲ್ಲಿ ಬಿಸಿಲನ್ನು ಛಳಿಕಾಲದಲ್ಲಿ ಛಳಿಯನ್ನು ಮಳೆ ಕಾಲದಲ್ಲಿ ಮಳೆಯನ್ನು ಸಹಿಸಿಕೊಂಡು ಹಣವಂತರ ಮನೆಗಳಿಗೆ ರಾತ್ರಿಹಗಲೂ ನಡೆದು ಹುಲಿಕಳ್ಳರ ಭಯವುಳ್ಳ ದಾರಿಯಲ್ಲಿ ನಡೆದು ಅವಮಾನವನ್ನು ಪಡೆಯುತ್ತಾ ಧರ್ಮವೋ ಅಧರ್ಮವೋ ಎಂದು ವಿಚಾರಿಸಿದರೆ ಕೇವಲ ಹಣವೇ ಪ್ರಧಾನವೆಂಬ ಭಾವನೆಯಿಂದ ಸಂಗ್ರಹಮಾಡಿರುವನೋ ಅವನೂ ಕೂಡ ಈ ಹಣವನ್ನು ಮುಟ್ಟಬಾರದು. ನೀವು ಇದನ್ನು ಹೇಗೆ ಮುಟ್ಟಲಿಕ್ಕೆ ಆಗುವುದು? ದಾನವನ್ನು ಮಾಡಿದವನೇ ಧನವನ್ನು ಹೊಂದಬಹುದು. ದಾನವನ್ನು ಮಾಡದೆ ಇದ್ದವನು ಹೊಂದಲಿಕ್ಕೆ ಆಗಲಾರದು. ಭೂಮಿಯಲ್ಲಿ ಬಿತ್ತಿದ ಬೀಜವು ಹೇಗೆ ಬಹಳವಾಗಿ ವೃದ್ಧಿಯನ್ನು ಹೊಂದುವುದೋ ಹಾಗೆಯೇ ದಾನದಿಂದ ಅಭೀಷ್ಟವೆಲ್ಲ ಲಭಿಸುವುದು. ಪುರುಷನು ತಾನು ಅನುಭವಿಸಿದ್ದು ಇನ್ನೊಬ್ಬರಿಗೆ ದಾನವನ್ನು ಮಾಡ್ದಿದೂ ಅವನಿಗೆ ಸೇರಿದ್ದು. ಉಳಿದದ್ದು ಯಾರಿಗೋ ಸೇರಿದ್ದು. ಹಣಕ್ಕೆ ಮೂರು ಗತಿಗಳು. ದಾನ ಭೋಗ ನಾಶ ಎಂದು. ದಾನವನ್ನೂ ಮಾಡದೆ ಭೋಗವೂ ಇಲ್ಲದೆ ಇದ್ದರೆ ಆ ಹಣಕ್ಕೆ ಮೂರನೇ ಗತಿಯಾದ ನಾಶವೇ ಉಂಟಾಗುವುದು. ಹಾಗೆ ಕಪಿಲನ ಹಣಕ್ಕೆ ನಾಶವೇ ಗತಿಯು. ಪರ್ಣಾದ! ನಿಮ್ಮ ಕಾರ್ಯವಾಯಿತು. ಮನೆಗೆ ಹೋಗಿರಿ. ನನ್ನ ಮಾತನ್ನು ಯೋಚಿಸಿಕೊಂಡು ಹಿತವನ್ನು ಮಾಡಿಕೊಳ್ಳಿ' ಎಂದಿತು.

ತರುವಾಯ ಕಪಿಲನು ದೈನ್ಯವುಳ್ಳವನಾಗಿ ಕೈಮುಗಿದು ತನಗೆ ಧರ್ಮವನ್ನು ಉಪದೇಶಿಸಬೇಕೆಂದು ಕೇಳಿಕೊಂಡನು. ಸರ್ಪನು ಕಪಿಲನಿಗೆ ವಿಸ್ತಾರವಾಗಿ ಧರ್ಮೋಪದೇಶವನ್ನು ಮಾಡಿತು. ಕಪಿಲನು 'ನಾನು ಧನ್ಯನಾದೆನು. ನಿನ್ನ ಮಾತಿನಂತೆ ನಾನು ವ್ರತಗಳನ್ನು ಮಾಡುವೆನು' ಎಂದನು. ತರುವಾಯ ಸರ್ಪವು 'ಬ್ರಾಹ್ಮಣ1 ನಾನಿನ್ನು ನಿನ್ನ ಸ್ಥಾನಕ್ಕೆ ಹೋಗುವೆನು. ನೀನು ಹೋಗು. ಪುಣ್ಯಕಾರ್ಯವನ್ನು ಮಾಡು' ಎಂದು ಹೇಳಿ ತನ್ನ ಬಿಲವನ್ನು ಪ್ರವೇಶಿಸಿತು. ಕಪಿಲನು ತರುವಾಯ ಚಾತುರ್ಮಾಸ್ಯವ್ರತವನ್ನೂ ಇತರ ವ್ರತಗಳನ್ನು ಮಾಡಿದನು. ಅನೇಕ ಧರ್ಮಗಳನ್ನು ಮಾಡಿದನು.

ಅನಂತರ ಸ್ವಲ್ಪ ಸಮಯದಲ್ಲೇ ಶಂಬುಕನು ಮೃತನಾದನು. ಅವನ ಹೆಂಡತಿಯೂ ಸಹಗಮನ ಮಾಡಿದಳು. ಯಮದೂತರು ಪತ್ನೀ ಸಹಿತನಾದ ಅವನನ್ನು ಯಮಲೋಕಕ್ಕೆ ಕರೆದುಕೊಂಡು ಹೋದರು. ಯಮದೇವರು ದೂತರೊಡನೆ ಇವನನ್ನು ಕಪಿಲದೇಹದ ಒಳಗೆ ಪ್ರವೇಶಪಡಿಸಿರಿ ಎಂದು ಹೇಳಿದರು. ದೂತರು ನೀರಿನೊಡನೆ ಅವನನ್ನು ಕೆಳಗೆ ಹಾಕಿದರು. ಮೂರು ತಿಂಗಳು

ಕಪಿಲದೇಹದಲ್ಲಿ ಇದ್ದು ಆಮೇಲೆ ಋತುಕಾಲದಲ್ಲಿ ಅವನ ಹೆಂಡತಿಯಾದ ಸುಶೀಲೆಯು ಗರ್ಭವನ್ನು ಪ್ರವೇಶಿಸಿದರು. ಸುಶೀಲೆಯು ಸರಿಯಾದ ಕಾಲದಲ್ಲಿ ಗಂಡುಕೂಸನ್ನು ಹಡೆದಳು. ಕಪಿಲನು ಮಗನಿಗೆ ಜಾತಕರ್ಮನಾಮಕರಣಾದಿಗಳನ್ನು ಮಾಡಿದನು. ದೇವಶರ್ಮ ಎಂದು ಹೆಸರನ್ನು ಇಟ್ಟನು. ಮಗನಿಗೆ ಐದನೇ ವರ್ಷದಲ್ಲಿ ಉಪಯನವನ್ನು ಮಾಡಿದನು. ದೇವಶರ್ಮನು ವೇದಾಧ್ಯಯನವನ್ನು ಮಾಡಿದನು. ತರುವಾಯ ಅವನಿಗೆ ಇಪ್ಪತ್ತನೇ ವರ್ಷದಲ್ಲಿ ಮದುವೆ ಮಾಡಿದನು. ಒಂದು ದಿನದಲ್ಲಿ ಯೌವನವನ್ನು ಹೊಂದಿರುವ ಗೃಹಸ್ಥಾಶ್ರಮಿಯಾದ ಮಗನನ್ನು ನೋಡಿ ಕಪಿಲನು ಸುಶೀಲೆಯಿಂದ ಸಹಿತನಾಗಿ ಒಬ್ಬರೂ ಇಲ್ಲದ ಸ್ಥಳಕ್ಕೆ ಕರೆದು ಮಗ! ನಿನಗೋಸ್ಕರ ಸಂಗ್ರಹಮಾಡಿರುವ ಬಹಳ ಹಣವು ಇಲ್ಲಿರುವುದು. ಇನ್ನು ನೀನು ತೆಗೆದುಕೊ. ನಿನ್ನ ಇಚ್ಛೆ ಬಂದಂತೆ ಈ ಹಣವನ್ನು ಉಪಯೋಗಿಸು' ಎಂದನು. ಈರೀತಿಯಾಗಿ ಹೇಳಿ ಪ್ರೀತಿಯಿಂದ ಮಗನನ್ನು ಕರೆದುಕೊಂಡು ಹೋಗಿ ಹಣದ ಮನೆಯ ಬಾಗಿಲನ್ನು ತೆರೆದನು. ಆಗ ಸರ್ಪವು ಬಂದು ದೇವಶರ್ಮನೊಡನೆ 'ಇಷ್ಟು ಕಾಲಪರ್ಯಂತ ನಿನ್ನ ಹಣವನ್ನು ನಾನು ಕಾಪಾಡುತ್ತಿದ್ದೆನು. ನಿನ್ನ ತಂದೆಯು ಸಂಪಾದಿಸಿರುವ ಈ ಹಣವನ್ನು ಕುಬೇರನ ಆಜ್ಞೆಯಿಂದ ರಕ್ಷಿಸುತ್ತಾ ಇದ್ದೆನು. ಈಗ ಇದನ್ನು ನಿನಗೆ ಒಪ್ಪಿಸಿದ್ದೇನೆ. ನಿನಗೆ ಮಂಗಳವಾಗಲಿ' ಎಂದು ಹೇಳಿ ಸರ್ಪದೇಹವನ್ನು ಬಿಟ್ಟು ದಿವ್ಯರೂಪವುಳ್ಳ ಯಕ್ಷರೂಪವುಳ್ಳವನಾಗಿ ಕುಬೇರನ ಲೋಕಕ್ಕೆ ಹೊರಟುಹೋದನು.

ದೇವಶರ್ಮನು ತಂದೆಯು ಕಷ್ಟಪಟ್ಟು ಸಂಪಾದಿಸಿದ ಹಣವನ್ನು ಬ್ರಾಹ್ಮಣನಿಗೆ ಕೊಡಬೇಕೆಂದು ಯೋಚಿಸಿದನು. ಮಾರ್ಗಶೀರ್ಷಾದಿ ಮಾಸಗಳಲ್ಲಿ ಕೇಶವಾದಿ ಭಗವನ್ಮೂರ್ತಿಗಳಿಗೆ ಪೂಜಾ ಮಾಡಿದನು. ದೇವಶರ್ಮನಿಗೆ ಪೂರ್ವಜನ್ಮದಲ್ಲಿ ಹೆಂಡತಿಯಾಗಿದ್ದವಳೇ ಗೌರೀ ಎಂಬ ಹೆಸರಿನಿಂದ ಹೆಂಡತಿಯಾದಳು. ಅವಳಲ್ಲಿ ದೇವಶರ್ಮನಿಗೆ ಐದು ಜನ ಮಕ್ಕಳು ಹುಟ್ಟಿದರು. ಕಪಿಲ ಸುಶೀಲೆಯರು ಮುದುಕರಾದಾಗ ದೇವಶರ್ಮನು ಕಾಶಿಗೆ ಹೋಗಲು ಪ್ರಯತ್ನಿಸಿದನು. ಬ್ರಾಹ್ಮಣರಿಗೆ ದಾನ ಮಾಡಿ ಉಳಿದ ಹಣವನ್ನು ತೆಗೆದುಕೊಂಡು ಕಾಶಿಗೆ ಹೋದನು. ತಂದೆತಾಯಿಗಳ ಮರಣ ಸಮಯದಲ್ಲಿ ಬಹುದಾನಗಳನ್ನು ಮಾಡಿದನು. ಚೆನ್ನಾಗಿ ಉತ್ತರಕ್ರಿಯೆಗಳನ್ನು ಮಾಡಿದನು. ಗಯೆಗೆ ಹೋಗಿ ಪಿಂಡಪ್ರದಾನ ಮಾಡಿ ಕಾಶಿಗೆ ಬಂದು ಅಲ್ಲಿಯೇ ಸ್ಥಿರವಾಗಿ ಇದ್ದನು. ಇದ್ದ ಹಣವನ್ನೆಲ್ಲಾ ಬ್ರಾಹ್ಮಣರಿಗೆ ದಾನ ಮಾಡಿ ದೈವೇಚ್ಛೆಯಿಂದ ಸಿಕ್ಕಿದ ಹಣದಿಂದ ಜೀವಿಸುತ್ತಾ ದಾನ ಅಧ್ಯಯನ ಇತ್ಯಾದಿ

ಕರ್ಮಗಳಿಂದ ಆಯುಷ್ಯವನ್ನು ಸಾರ್ಥಕ ಮಾಡಿಕೊಂಡನು. ಕೊನೆಗೆ ಪತ್ನೀಸಹಿತನಾಗಿ ವಿಷ್ಣುಲೋಕವನ್ನು ಹೊಂದಿದನು.



## ಗೋಪತಿಯ ಕಥೆ [1]

(ಚಾತುರ್ಮಾಸ್ಯ ಪುರಾಣ)

ಪೂರ್ವದಲ್ಲಿ ವಿದರ್ಭನಗರದಲ್ಲಿ ಗೋಪತಿಯೆಂಬ ವೈಶ್ಯನಿದ್ದನು. ಅವನು ಹಣವಂತನಾಗಿದ್ದನು. ರೂಪವಂತನಾಗಿದ್ದನು. ಯೌವನವುಳ್ಳವನಾಗಿದ್ದನು. ಧರ್ಮದಲ್ಲಿ ಆಸಕ್ತನಾಗಿದ್ದನು. ಒಂದು ದಿವಸದಲ್ಲಿ ಅವನು ಮಿತ್ರರಿಂದ ಕೂಡಿಕೊಂಡು ದಾರಿಯಲ್ಲಿ ಹೋಗುತ್ತಿರುವಾಗ ಒಂದು ಉಪ್ಪರಿಗೆಯ ಮೇಲೆ ತಲೆಕೂದಲುಗಳನ್ನು ಒಣಗಿಸುತ್ತಾ ನಿಂತಿರುವ ಪರಮ ಸುಂದರಿಯಾದ ನವಯುವತಿಯಾದ ವೇಶ್ಯಾಸ್ತ್ರೀಯನ್ನು ನೋಡಿದನು. ಅವಳನ್ನು ನೋಡುವ ಮಾತ್ರದಿಂದಲೇ ಗೋಪತಿಯು ಮೋಹವಶನಾದನು. ಅವಳ ಮನೆಗೆ ಹೋಗಲಿಕ್ಕೆ ಹೊರಟನು. ಆಗಲೇ ಅವನ ಪಿತೃಗಳನ್ನು ಯಮದೂತರು ಕೀವುರಕ್ತಗಳಿಂದಲೇ ಕೆಸರಾಗಿರುವ ನರಕಕ್ಕೆ ಕರಕೊಂಡು ಹೋಗಲಿಕ್ಕೆ ಆರಂಭಿಸಿದರು. ಪಿತೃಗಳು 'ನಾವು ಮಂದಭಾಗ್ಯರು. ನಮ್ಮ ವಂಶದಲ್ಲಿ ಇಂತಹ ವೇಶ್ಯಾಗಾಮಿಯಾದ ನಿರ್ಭಾಗ್ಯನು ಹುಟ್ಟಿದನು' ಎಂದು ಅಳಲಿಕ್ಕೆ ಆರಂಭಿಸಿದರು. ಅವರು ಅಳುವುದನ್ನು ನೋಡಿ ಯಮದೂತರಿಗೇ ಕೃಪೆಯುಂಟಾಯಿತು. ಅವರು 'ನೀವೇಕೆ ಇಷ್ಟು ದೈನ್ಯದಿಂದ ಅಳುವಿರಿ. ನಿಮಗೆ ಇನ್ನೂ ನರಕದಲ್ಲಿ ಬೀಳಲಿಕ್ಕೆ ಆಗಲಿಲ್ಲ. ಯಾವಾಗಲೋ ಆಗುವ ದುಃಖಕ್ಕಾಗಿ ಈಗಲೇ ಯಾಕೆ ಅಳಬೇಕು? ಪರಮಾತ್ಮನ ಲೀಲೆಯು ವಿಚಿತ್ರವಾದದ್ದು. ಯಾವಾಗ ಹೇಗೆ ನಡೆಯುತ್ತದೆ? ಎಂದು ಯಾರಿಂದಲೂ ಹೇಳಲಿಕ್ಕೆ ಆಗಲಾರದು. ಗೋಪತಿಯು ಹೋಗಿ ವೇಶ್ಯಾಸಂಗವನ್ನು ಮಾಡಿದರೆ ಮಾತ್ರವೇ ನಿಮಗೆ ನರಕವುಂಟಾಗುವುದು. ಇಲ್ಲದಿದ್ದರೆ ಇಲ್ಲ. ಆದಕ್ಕಿನ್ನೂ ಸಮಯವಿದೆ. ಧೈರ್ಯವನ್ನು ತಂದುಕೊಳ್ಳಿರಿ. ನಿರಪರಾಧಿಗಳಾದ ನಿಮಗೆ ಅಂತಹ ಸಂದರ್ಭವು ಎಷ್ಟು ಮಾತ್ರಕ್ಕೂ ಬರಲಾರದು' ಎಂದು ಸಮಾಧಾನಪಡಿಸಿದರು.

ಗೋಪತಿಯು ತನ್ನ ಮನೆಗೆ ಬರುತ್ತಿರುವುದನ್ನು ಆ ವೇಶ್ಯೆಯು ದೂರದಲ್ಲಿಯೇ

ನೋಡಿದಳು. ಹಣವಂತನು ಮನೆಗೆ ಬಂದನೆಂದು ತುಂಬಾ ಸಂತೋಷವನ್ನು ಹೊಂದಿದಳು. ಅವನಿಗೆ ಎಣ್ಣೆಹಚ್ಚಿ ಅಭ್ಯಂಗ ಮಾಡಿಸಿದಳು. ಗೋಪತಿಯು ಚೆನ್ನಾಗಿ ಸ್ನಾನಮಾಡಿ ಪುಷ್ಪಾದಿಗಳಿಂದ ಅಲಂಕೃತನಾಗಿ ಸುಂದರವಾದ ವಸ್ತ್ರವನ್ನು ಧರಿಸಿಕೊಂಡು ಹಾಸಿಗೆಯಲ್ಲಿ ಕೂತುಕೊಂಡು ಅವಳ ಕೈಯನ್ನು ಹಿಡಿದನು. ಅಷ್ಟರಲ್ಲೇ ದೈವೇಚ್ಛೆಯಿಂದ ಅಲ್ಲಿದ್ದ ದೀಪವು ಆರಿಹೋಯಿತು. ತರುವಾಯ ಅವಳು ದೀಪವನ್ನು ತರುವುದಕ್ಕಾಗಿ ಹೊರಗೆ ಹೋದಳು. ಆಗ ಒಂದು ಹಾವಿನ ಬಾಲದ ಮೇಲೆ ಕಾಲನ್ನು ಇಟ್ಟಳು. ಹಾವು ಅವಳನ್ನು ಕಚ್ಚಿಬಿಟ್ಟಿತು. ಆಗಲೇ ವಿಷವೇರಿ ಅವಳು ಬಿದ್ದುಬಿಟ್ಟಳು. ಹಾಹಾಕಾರವುಂಟಾಯಿತು. ಆ ವೇಶ್ಯೆಯು ಬೇಗನೇ ಮೃತಳಾದಳು. ರಕ್ತವನ್ನು ವಾಂತಿಮಾಡುತ್ತಿದ್ದ ಕಪ್ಪಾದ ವಿಕಾರವುಳ್ಳ ಮುಖವನ್ನು ನೋಡಿ ನಾಚಿಕೆ ಉಳ್ಳವನಾದನು. ದೇವರು ಕೃಪೆಯುಳ್ಳವನು. ಪಿತೃಗಳಿಂದ ಸಹಿತನಾಗಿ ನರಕಕ್ಕೆ ಹೋಗಬೇಕಾದ ನನ್ನನ್ನು ತಪ್ಪಿಸಿದನು. ಇಂತಹ ಹೇಯವಾದ ದೇಹದಲ್ಲಿ ಆಸೆಪಟ್ಟೆನು ಎಂದು ಹೇಳುತ್ತಾ ಪಶ್ಚಾತ್ತಾಪವುಳ್ಳವನಾಗಿ ಮನೆಗೆ ಹೋಗಿ ತನ್ನ ಎಲ್ಲಾ ಸೊತ್ತನ್ನೂ ಬ್ರಾಹ್ಮಣರಿಗೆ ದಾನಮಾಡಿ ಪತ್ನೀ ಸಹಿತನಾಗಿ ಋಷಿಗಳಿದ್ದಲ್ಲಿಗೆ ಹೋಗಿ ಕಠಿಣವಾದ ತಪಸ್ಸು ಮಾಡಿ ಪಿತೃಗಳಿಂದ ಕೂಡಿಕೊಂಡನು. ಉತ್ತಮಲೋಕವನ್ನು ಹೊಂದಿದನು.



## ಸರ್ಪದ ಕಥೆ [1]

ಪೂರ್ವದಲ್ಲಿ ಮಧುರೆಯಲ್ಲಿ ಒಬ್ಬ ಬಡಗಿಯಿದ್ದನು. (ಮರದ ಕೆಲಸ ಮಾಡುವವನು) ಒಂದು ಸೂರ್ಯಗ್ರಹಣವು ಬಂದಿತು. ಆಗ ಬಹುಜನರು ಪುಣ್ಯವನ್ನು ಸಂಪಾದಿಸಲು ಕುರುಕ್ಷೇತ್ರಕ್ಕೆ ಹೋದರು. ಆಗ ಆ ಬಡಗಿಗೂ ಅಲ್ಲಿಗೆ ಹೋಗಬೇಕೆಂದು ಆಸೆಯುಂಟಾಯಿತು.

ತರುವಾಯ ತನ್ನ ಹೆಂಡತಿಯನ್ನು ಕರೆದುಕೊಂಡು ಕುರುಕ್ಷೇತ್ರಕ್ಕೆ ಹೋದನು. ಗ್ರಹಣಕಾಲದಲ್ಲಿ ಹಣವಂತರಾದ ವೈಶ್ಯರೂ ರಾಜಪುತ್ರರೂ ಇನ್ನೂ ಇತರರೂ ಬ್ರಾಹ್ಮಣರೂ ಶೂದ್ರರೂ ಎಲ್ಲರೂ ತಮ್ಮ ಇಚ್ಛಾನುಸಾರವಾಗಿ ದಾನವನ್ನು ಮಾಡಿದರು. ಅವರೆಲ್ಲರೂ ದಾನಮಾಡುವುದನ್ನು ನೋಡಿ ಆ ಬಡಗಿಗೆ ಬಹಳ ದುಃಖವುಂಟಾಯಿತು. ಮಂದಭಾಗ್ಯನಾದ ತಾಯಿಯ ಯೌವನವನ್ನು ನಾಶ

ಮಾಡಿರುವ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ. ಯಾವ ನಾನು ಬ್ರಾಹ್ಮಣರನ್ನು ದಾನಾದಿಗಳಿಂದ ಸಂತೋಷಪಡಿಸಲಿಲ್ಲ. ನನಗೀಗ ದಾನಮಾಡಲಿಕ್ಕೆ ಒಂದೂ ಇಲ್ಲವಲ್ಲಾ! ನನ್ನ ಕೈಯಲ್ಲಿ ನಾಲ್ಕು ನಾಣ್ಯಗಳು ಮಾತ್ರವಿದೆ. ಬಿದಿರನ್ನು ಕಡಿಯಲಿಕ್ಕೆ ಒಂದು ಆಯುಧವಿದೆ. ಅದನ್ನು ಕೊಟ್ಟುಬಿಟ್ಟರೆ ನಾವು ಹೇಗೆ ಜೀವನಮಾಡಲಿ? ಆದುದರಿಂದ ಪುಣ್ಯವನ್ನು ಸಂಪಾದಿಸಲು ಬ್ರಾಹ್ಮಣರಿಗೆ ಏನು ದಾನ ಮಾಡಲಿ? ಹಾ! ನಾನು ಬದುಕಿರುವುದು ವ್ಯರ್ಥವಾಯಿತು'. ಈರೀತಿಯಾಗಿ ವಿಲಾಪವನ್ನು ಮಾಡಿದನು. ಆಗ ಪತಿವ್ರತೆಯಾದ ಅವನ ಪತ್ನಿಯು ಗದ್ಗದ ಸ್ವರದಿಂದ 'ನೀವು ದುಃಖವನ್ನು ಹೊಂದಬೇಡಿರಿ. ನಿಮ್ಮ ಕೈಯಲ್ಲಿ ಏನಿದೆಯೋ ಅದನ್ನು ದಾನಮಾಡಿಬಿಡಿರಿ. ಅದೇ ನಿಮಗೆ ಸರ್ವಸ್ವದಾನವಾಗುವುದು. ಸರ್ವಸಾಕ್ಷಿಯಾದ ಪರಮಾತ್ಮನು ಅದರಿಂದಲೇ ಸಂತುಷ್ಟನಾಗುವನು. ಸರ್ವಸ್ವವನ್ನು ದಾನಮಾಡಿದರೆ ಶಕ್ತಿಯನ್ನು ಮೀರಿ ದಾನ ಮಾಡಿದಂತಾಗುವುದು. ಸರ್ವಜ್ಞನಾದ ಪರಮಾತ್ಮನು ಏಕೆ ಸಂತೋಷಹೊಂದಲಾರನು? ಜೀವನವು ಹೇಗೋ ನಡೆಯುವುದು. ಬದುಕಿರುವ ವರೆಗೆ ಹೇಗೋ ಅನ್ನವು ಸಿಕ್ಕಿಯೇ ಸಿಗುವುದು' ಎಂದಳು.

ಈರೀತಿಯಾಗಿ ಹೆಂಡತಿಯ ಮಾತನ್ನು ಕೇಳಿ ಬಡಗಿಯು ಕೈಯಲ್ಲಿ ಇದ್ದ ನಾಲ್ಕುನಾಣ್ಯಗಳನ್ನೂ ತನ್ನ ಆಯುಧವನ್ನೂ ದಾನ ಮಾಡಿದನು. ತನ್ನಲ್ಲಿದ್ದ ವಸ್ತ್ರವನ್ನೂ ದಾನ ಮಾಡಿದನು. ತರುವಾಯ ಆಯುಷ್ಯವು ಕ್ಷೀಣವಾಗಲು ಯಮಲೋಕಕ್ಕೆ ಹೋದನು. ಅವನ ಹೆಂಡತಿಯೂ ಸಹಗಮನ ಮಾಡಿ ಹೋದಳು. ಅಲ್ಲಿ ಯಮದೇವರು ಅವನನ್ನು ನೋಡಿ 'ನೀನು ಸೂರ್ಯಗ್ರಹಣ ಕಾಲದಲ್ಲಿ ಕುರುಕ್ಷೇತ್ರ ದಲ್ಲಿ ಸರ್ವಸ್ವವನ್ನೂ ದಾನಮಾಡುವಿರಿ. ಆದುದರಿಂದ ಎಲ್ಲರಿಗಿಂತಲೂ ಉತ್ತಮ ಸ್ಥಾನವನ್ನು ಹೊಂದು. ಆ ಸಮಯದಲ್ಲಿ ಕುರುಕ್ಷೇತ್ರದಲ್ಲಿ ಯಾರು ದಾನ ಮಾಡಿದ್ದರೋ ಅವರ ಎಲ್ಲರ ದಾನಗಳಿಗಿಂತ ನಿನ್ನ ದಾನವೇ ಶ್ರೇಷ್ಠವಾದದ್ದು. ಏಕೆಂದರೆ ಅವರು ಯಾರೂ ಸರ್ವಸ್ವವನ್ನು ದಾನಮಾಡಿಲ್ಲ. ಆದುದರಿಂದ ನೀನು ಅವರಿಗೆಲ್ಲಾ ಸಿಕ್ಕಿರುವ ಸ್ಥಾನಕ್ಕಿಂತ ಎತ್ತರವಾದ ಸ್ವರ್ಗದ ಸ್ಥಾನವನ್ನು ಪತ್ನೀಸಹಿತನಾಗಿ ಹೊಂದು' ಎಂದು ಹೇಳಿದಳು. ಮತ್ತು ದೂತರೊಡನೆ 'ಇವನನ್ನು ಸೂರ್ಯ ಲೋಕಕ್ಕೆ ಕರೆದುಕೊಂಡು ಹೋಗಿರಿ. ಅಲ್ಲಿಯೂ ಉತ್ತಮವಾದ ಸ್ಥಾನದಲ್ಲಿ ಇವನು ವಾಸ ಮಾಡಲಿ' ಎಂದು ಹೇಳಿದರು.

ತರುವಾಯ ದೂತರು ಪತ್ನೀಸಹಿತನಾದ ಅವನನ್ನು ಸರ್ವಭೋಗಗಳಿಂದ ಕೂಡಿದ ಸೂರ್ಯಲೋಕಕ್ಕೆ ಕರೆದುಕೊಂಡು ಹೋದರು. ಅಲ್ಲಿ ಒಂದು

ಮನ್ವಂತರದ ವರೆಗೆ ವಾಸಮಾಡಿ ಆಮೇಲೆ ಪುಣ್ಯಶೇಷದಿಂದ ಭೂಮಿಯಲ್ಲಿ ವೇದವೇದಾಂಗಶಾಸ್ತ್ರಪಾರಂಗತನಾದ ಹಣವಂತನಾದ ಬ್ರಾಹ್ಮಣ ಪೂಜಕನಾದ ವಾಸುದೇವ ಎಂದು ಹೆಸರುಳ್ಳ ಬ್ರಾಹ್ಮಣನಾಗಿ ಹುಟ್ಟಿದನು. ಆ ವಾಸುದೇವನು ದೈವೇಚ್ಛೆಯಿಂದ ಮನೆಗೆಬಂದ ಬ್ರಾಹ್ಮಣನನ್ನು ಅವಮಾನಮಾಡಿದನು. ಆ ಬ್ರಾಹ್ಮಣ ಅವಮಾನದಿಂದ ಸರ್ಪವಾಗಿ ಹುಟ್ಟಿದನು. ಬಹುವರ್ಷವಿದ್ದನು. ಬ್ರಾಹ್ಮಣರ ಅನುಗ್ರಹದಿಂದ ಪೂರ್ವದ ಸ್ಮರಣೆಯು ಇದ್ದಿತು. ಕಪಿಲನ ಮನೆಯಲ್ಲಿ ಹಣದ ಕೋಣೆಯಲ್ಲಿ ವಾಸಮಾಡುತ್ತಿತ್ತು. ಅಲ್ಲಿಗೆ ಕುಬೇರನ ಆಜ್ಞೆಯಿಂದ ಒಬ್ಬ ಯಕ್ಷನು ಬಂದು 'ಈ ಹಣವನ್ನು ಸಂಪಾದಿಸಲಿಕ್ಕೆ ಮಾತ್ರ ಕಪಿಲನು. ಈ ಹಣಕ್ಕೆ ಸ್ವಾಮಿಯು ಶಂಬುಕನು. ಶಂಬುಕನು ಬರುವವರೆಗೆ ಈ ಹಣವನ್ನು ನೀನು ರಕ್ಷಿಸತುತ್ತಾ ಇರು. ಧರ್ಮಿಷ್ಠನಾದ ಶಂಬುಕನು ಪ್ರತಿನಿತ್ಯವೂ ಬಂದ ಹಣದಲ್ಲಿ ನಾಲ್ಕನೇ ಒಂದು ಭಾಗವನ್ನು ದಾನಮಾಡುತ್ತಿರುವನು' ಎಂದು ಹೇಳಿ ಹೊರಟುಹೋದನು.

ತರುವಾಯ ಸರ್ಪನು ವಾಯು ಆಹಾರವುಳ್ಳದ್ದಾಗಿ ಕುಬೇರನನ್ನು ಧ್ಯಾನ ಮಾಡಿತು. ಅದರಿಂದ ಕುಬೇರನ ಸಂತೋಷವನ್ನು ಹೊಂದಿದನು. ಪ್ರತ್ಯಕ್ಷನಾದನು. ತರುವಾಯ ಸರ್ಪವು ಕುಬೇರನಿಗೆ ನಮಸ್ಕರಿಸಿತು. ಕುಬೇರನು ಸರ್ಪವನ್ನು ಎಬ್ಬಿಸಿ ಸಮಾಧಾನ ಪಡಿಸಿದನು. 'ಬ್ರಾಹ್ಮಣಾವಮಾನದ ಪಾಪವು ಅಪರಿಹಾರ್ಯವಾದದ್ದು. ಆದುದ ರಿಂದ ನೀನು ಸರ್ಪವಾಗಿಯೇ ಸಾವಿರವರ್ಷ ಸುಖವಾಗಿ ಇರು. ಈಗಲೂ ನೀನು ನನ್ನ ಸೇವೆಯನ್ನು ಮಾಡುವಿ. ಇದರಿಂದ ಉಂಟಾಗುವ ಪುಣ್ಯದಿಂದ ಉತ್ತಮ ಯಕ್ಷನಾಗುವಿ' ಎಂದು ಹೇಳಿ ಅಂತರ್ಧಾನವನ್ನು ಹೊಂದಿದರು. ಆಮೇಲೆ ಆ ಸರ್ಪನು ಕಪಿಲನ ಮನೆಯಲ್ಲಿ ವಾಸಿಸುತ್ತಾ ಇತ್ತು. ಶಂಬುಕನು ಮೃತನಾಗಿ ಕಪಿಲನಿಗೆ ಮಗನಾಗಿ ಹುಟ್ಟಿ ಯೌವನವುಳ್ಳವನಾಗಿ ಆದಮೇಲೆ ಕಪಿಲನ ಹಣವನ್ನು ಅವನಿಗೆ ಒಪ್ಪಿಸಿ ತಾನು ಕುಬೇರನ ಲೋಕಕ್ಕೆ ಹೋಯಿತು.



# ಶಂಬರಾಸುರನ ಕಥೆ [1]

ಶ್ರೀಕೃಷ್ಣಪರಮಾತ್ಮನು ದುಷ್ಟಜನರನ್ನು ಮೋಹಗೊಳಿಸುವುದಕ್ಕಾಗಿ ಕೈಲಾಸ ಪರ್ವತಕ್ಕೆ ಹೋಗಿ ರುದ್ರದೇವರನ್ನು ತಪಸ್ಸು ಮಾಡುವಂತೆ ತೋರಿಸಿದನು. ಅವರಿಂದ ವರವನ್ನು ಪಡೆದಂತೆ ಜನರಿಗೆ ತೋರಿಸಿಕೊಂಡು ಬಂದು ರುಕ್ಮಿಣೀ ದೇವಿಯರಲ್ಲಿ ಪ್ರದ್ಯುಮ್ನ ಎಂಬ ಮಗನನ್ನು ಪಡೆದನು.

ಭಗವಂತನ ಪ್ರದ್ಯುಮ್ನ ಎಂಬ ರೂಪದ ಆವೇಶವುಳ್ಳ ಕಾಮನು ಪೂರ್ವದಲ್ಲಿ ರುದ್ರದೇವರ ಕೋಪದಿಂದ ಸುಟ್ಟುಹೋದನು. ತರುವಾಯ ದೇಹವನ್ನು ಹೊಂದು ವುದಕ್ಕಾಗಿ ರುದ್ರದೇವರನ್ನೇ ಮರೆಹೊಂದಿದನು. ರುದ್ರದೇವರಿಗೆ ಮಗನಾಗಿ ಸ್ಕಂದ ಎಂಬ ಹೆಸರಿನಿಂದ ಹುಟ್ಟಿದನು. ಅವನೇ ಕೃಷ್ಣಪರಮಾತ್ಮನಿಂದ ರುಕ್ಮಿಣೀ ದೇವಿಯರಲ್ಲಿ ಪ್ರದ್ಯುಮ್ನ ಎಂಬ ಹೆಸರಿನಿಂದ ಹುಟ್ಟಿದನು. ಅವನನ್ನು ಶಂಬರಾಸುರನು ಹತ್ತುದಿವಸದ ಒಳಗೆ ಹಡೆದ ಮನೆಯಿಂದ ಅಪಹರಿಸಿಕೊಂಡು ಬಂದು ಸಮುದ್ರದಲ್ಲಿ ಹಾಕಿ ಹೋದನು. ಸರ್ವಜ್ಞನಾದ ಭಗವಂತನು ಮುಂದಿನ ಕಾರ್ಯವು ನಡೆಯುವುದಕ್ಕಾಗಿ ಸಮರ್ಥನಾದರೂ ಉಪೇಕ್ಷಾ ಮಾಡಿದನು. ಸಮುದ್ರದಲ್ಲಿ ಬಿದ್ದ ಮಗುವನ್ನು ಒಂದು ಬಲಿಷ್ಠವಾದ ಮೀನು ನುಂಗಿತು. ಆಮೇಲೆ ಬೆಸ್ತರು ಮೀನು ಹಿಡಿಯುವಾಗ ಇತರ ಮೀನುಗಳೊಡನೆ ಆ ಮೀನೂ ಬಲೆಯಲ್ಲಿ ಸಿಕ್ಕಿಬಿದ್ದಿತು. ಆಮೇಲೆ ಬೆಸ್ತರು ಶಂಬರಾಸುರನಿಗೆ ಆ ದೊಡ್ಡ ಮೀನನ್ನು ಕಾಣಿಕೆ ಯನ್ನಾಗಿ ಕೊಟ್ಟರು. ಅಡಿಗೆ ಮಾಡುವವರು ಆ ದೊಡ್ಡ ಮೀನನ್ನು ತೆಗೆದುಕೊಂಡು ಹೋಗಿ ಕೈಕೊಡಲಿಯಿಂದ ತುಂಡುಮಾಡಿದರು. ಅದರ ಹೊಟ್ಟೆಯಲ್ಲಿರುವ ಮಗು ವನ್ನು ನೋಡಿ ಅದನ್ನು ಅಡಿಗೆ ಮನೆಗೆ ಅಧ್ಯಕ್ಷಳಾದ ಮಾಯಾವತಿಗೆ ತೆಗೆದುಕೊಂಡು ಹೋಗಿಕೊಟ್ಟರು.

ಪೂರ್ವದಲ್ಲಿ ಒಂದು ಸಮಯದಲ್ಲಿ ಬ್ರಹ್ಮದೇವರು ದ್ರೌಪದೀದೇವಿಯರಿಗೆ ಐದು ಜನ ಪತಿಗಳು ಎಂಬ ವಿಷಯವನ್ನು ಕಥೆಯನ್ನು ಹೇಳುವ ಸಂದರ್ಭದಲ್ಲಿ ಹೇಳಿದರು. ಅದನ್ನು ಕೇಳಿ ಕಾಮನ ಪತ್ನಿಯಾದ ರತಿದೇವಿಯು ನಗಾಡಿದಳು. ಈರೀತಿಯಾಗಿ ದೊಡ್ಡವರನ್ನು ಅಪಹಾಸಮಾಡಿದ್ದರಿಂದ ಬ್ರಹ್ಮದೇವರು ಕೋಪಿಸಿ ಕೊಂಡವರಾಗಿ ನೀನು ಅಸುರನಿಂದ ದೂಷಿಸಲ್ಪಡುವವಳಾಗು ಎಂಬ ಶಾಪವನ್ನು ಕೊಟ್ಟರು. ಆ ಶಾಪದಿಂದಾಗಿ ಕಾಮನು ರುದ್ರದೇವರ ಕಣ್ಣಿನಿಂದ ಸುಟ್ಟುಹೋದ

1. ಭಾಗ. X-68

ಮೇಲೆ ಆ ಬ್ರಹ್ಮದೇವರ ಶಾಪದಿಂದ ಶಂಬರಾಸುರ ವಶವನ್ನು ಹೊಂದಿದಳು. ಆದರೆ ತನ್ನ ಮಾಯಾಸಾಮರ್ಥ್ಯದಿಂದ ನಿಜವಾದ ದೇಹವನ್ನು ಮರೆಮಾಡಿಕೊಂಡು ಬೇರೊಂದು ರೂಪದಿಂದ ಅಸುರನ ಬಳಿಗೆ ಹೋಗುತ್ತಿದ್ದಳು. ಈರೀತಿಯಾಗಿ ಅಸುರನ ಮನೆಯಲ್ಲಿಯೇ ಇದ್ದರೂ ತನ್ನ ನಿಜರೂಪದಿಂದ ಅಸುರನ ಬಳಿಗೆ ಹೋಗುತ್ತಿರಲಿಲ್ಲ. ಅವಳೇ ಮಾಯಾವತಿಯೆಂಬ ಹೆಸರಿನಿಂದ ಅಡಿಗೆಮನೆಗೆ ಅಧ್ಯಕ್ಷಳಾಗಿದ್ದಳು. ಪರಮಸುಂದರವಾದ ಆ ಮಗುವನ್ನು ನೋಡಿ ಸಂದೇಹ ಪಡುತ್ತಿದ್ದ ಮಾಯಾವತಿಗೆ ನಾರದರು ಬಂದು ಆ ಮಗುವು ಯಾರೆಂಬುದನ್ನು ಅದು ಹುಟ್ಟಿದ್ದನ್ನು ಶಂಬರಾಸುರನು ಅಪಹರಿಸಿ ಸಮುದ್ರಕ್ಕೆ ಹಾಕಿದ್ದೇ ಮೊದಲಾದದ ಎಲ್ಲಾ ವಿಷಯವನ್ನು ಹೇಳಿದರು. ತರುವಾಯ ಆ ಮಗುವು ತನ್ನ ಪತಿಯಾದ ಕಾಮದೇವನೆಂಬ ವಿಷಯವನ್ನು ತಿಳಿದು ಆ ಮಗುವಿನಲ್ಲಿ ಸರ್ವದಾ ವಿಶೇಷವಾದ ಸ್ನೇಹವನ್ನು ಮಾಡಿದಳು. ರುದ್ರದೇವರ ಕಣ್ಣಿನಿಂದ ಸುಟ್ಟುಹೋದ ಗಂಡನಿಗೆ ಯಾವಾಗ ದೇಹವು ಉಂಟಾಗುವುದೆಂದು ಮೊದಲೇ ಎದುರು ನೋಡುತ್ತಿದ್ದಳು. ನಾನಾ ರಸಾಯನಗಳಿಂದ ರತಿದೇವಿಯು ಮಗುವನ್ನು ಬೆಳೆಸಿದಳು. ನಾಲ್ಕೇ ವರ್ಷಗಳಲ್ಲಿ ಮಗುವು ಸಂಪೂರ್ಣ ಯೌವನವನ್ನು ಹೊಂದಿತು. ಯೌವನದಿಂದ ಕೂಡಿದ ಗಂಡನನ್ನು ನೋಡಿದ ರತಿದೇವಿಯು ಶೃಂಗಾರಚೇಷ್ಟೆಯನ್ನು ಮಾಡಲು ಆರಂಭಿಸಿದಳು. ಅದನ್ನು ನೋಡಿ ಕೃಷ್ಣನ ಮಗನು 'ಅಮ್ಮಾ! ಏನಿದು ತಾಯಿಯಂತೆ ಇರುವುದನ್ನು ಬಿಟ್ಟು ಕಾಮುಕಿಯಂತೆ ಚೇಷ್ಟೆಯನ್ನು ಮಾಡುವಿಯಲ್ಲಾ! ಇದಕ್ಕೇನು ಕಾರಣ?' ಎಂದು ಕೇಳಿದನು. ಆಗ ರತಿಯು 'ನೀವು ಶ್ರೀಕೃಷ್ಣಪರಮಾತ್ಮನ ಪುತ್ರರು. ಶಂಬರಾಸುರನು ನಿಮ್ಮನ್ನು ಅಪಹಾರ ಮಾಡಿಕೊಂಡು ಬಂದನು. ನೀವು ಕಾಮನು. ನಾನು ನಿಮ್ಮ ಪತ್ನಿಯಾದ ರತಿದೇವಿಯು. ಶಂಬರಾಸುರನು ಹತ್ತುದಿವಸದ ಒಳಗೆ ನಿಮ್ಮನ್ನು ಅಪಹರಿಸಿಕೊಂಡು ಬಂದು ಸಮುದ್ರಕ್ಕೆ ಹಾಕಿದನು. ಅಲ್ಲಿ ಒಂದು ಮೀನು ನಿಮ್ಮನ್ನು ನುಂಗಿಹಾಕಿತು. ಅದರ ಹೊಟ್ಟೆಯಿಂದ ಇಲ್ಲಿಗೆ ಬೆಸ್ತರ ಮೂಲಕ ನೀವು ಬಂದಿರಿ. ನೂರಾರು ಮಾಯೆಗಳನ್ನು ತಿಳಿದಿರುವ ಅವನನ್ನು ಕೊಲ್ಲಿರಿ. ನಿಮ್ಮ ತಾಯಿಯು ಪುತ್ರಸ್ನೇಹದಿಂದ ಕರುವನ್ನು ಕಳೆದುಕೊಂಡಿರುವ ಗೋವಿನಂತೆ ಅಳುತ್ತಿರುವರು' ಎಂದು ಹೇಳಿ ಪ್ರದ್ಯುಮ್ನನಿಗೆ ಸರ್ವಮಾಯೆಯನ್ನು ನಾಶಮಾಡುವ ವಿದ್ಯೆಯನ್ನು ಉಪದೇಶ ಮಾಡಿದಳು.

ತರುವಾಯ ಪ್ರದ್ಯುಮ್ನನು ಶಂಬರಾಸುರನ ಬಳಿಗೆ ಹೋಗಿ ತುಟಿಯನ್ನು ಕಚ್ಚಿ ಆಕ್ಷೇಪಮಾಡಿ ಜಗಳಕ್ಕೆ ಕರೆದನು. ಆಗ ಶಂಬರಾಸುರನು ಕೋಪದಿಂದ ಕಣ್ಣು

ಕೆಂಪಗೆ ಮಾಡಿಕೊಂಡು ಗದೆಯನ್ನು ಹಿಡಿದುಕೊಂಡು ಬಂದನು. ಅವನು ಪ್ರದ್ಯುಮ್ನನ ಮೇಲೆ ಗದೆಯನ್ನು ಬೀಸಿ ಕ್ರೂರವಾಗಿ ಗರ್ಜನೆ ಮಾಡಿದನು. ಬರುವ ಗದೆಯನ್ನು ಪ್ರದ್ಯುಮ್ನನು ತನ್ನ ಗದೆಯಿಂದ ತಡೆದು ಅಸುರನ ಮೇಲೆ ತನ್ನ ಗದೆಯನ್ನು ಬೀಸಿದನು. ತರುವಾಯ ಶಂಬರಾಸುರನು ಮಾಯೆಯಿಂದ ಪ್ರದ್ಯುಮ್ನನ ಮೇಲೆ ಕಲ್ಲಿನ ಮಳೆಯನ್ನು ಸುರಿಸಿದನು. ಹೀಗೆಯೇ ಅನೇಕ ಮಾಯೆಗಳನ್ನು ತೋರಿಸಿದನು. ಅವೆಲ್ಲವನ್ನು ರತಿಯು ಉಪದೇಶಿಸಿದ ವಿದ್ಯೆಯಿಂದ ಅಂದರೆ ವಿಜ್ಞಾನಾಸ್ತ್ರದಿಂದ ನಾಶಮಾಡಿದನು. ತರುವಾಯ ತೀಕ್ಷ್ಣವಾದ ಕತ್ತಿಯನ್ನು ತೆಗೆದು ಅದರಿಂದ ಶಂಬಾಸುರ ತಲೆಯನ್ನು ಕತ್ತರಿಸಿದನು. ಆಗ ದೇವತೆಗಳೆಲ್ಲಾ ಪುಷ್ಪದ ಮಳೆಯನ್ನು ಸುರಿಸಿದರು.

ಆಕಾಶದಲ್ಲಿ ಸಂಚರಿಸುವ ಪತ್ನಿಯಿಂದ ಆಕಾಶ ಮಾರ್ಗದಿಂದ ದ್ವಾರಕಾ ಪಟ್ಟಣಕ್ಕೆ ಹೋದನು. ಅಲ್ಲಿ ಪತ್ನಿಯಿಂದ ಸಹಿತನಾಗಿ ಆಕಾಶದಿಂದ ನೂರಾರು ಸ್ತ್ರೀಯರಿಂದ ಕೂಡಿದ ಅಂತಃಪುರಕ್ಕೆ ಪ್ರವೇಶಿಸಿದನು. ಅಲ್ಲಿ ಸ್ತ್ರೀಯರು ಪರಮ ಸುಂದರನಾದ ಪ್ರದ್ಯುಮ್ನನನ್ನು ನೋಡಿ ಅಂಜಿಕೆಯಿಂದ ಅಲ್ಲಲ್ಲೇ ಅಡಗಿಕೊಂಡರು. ಪರೀಕ್ಷಿಸಿನೋಡಿ ಸ್ವಲ್ಪ ಪರಮಾತ್ಮನಿಂದ ವ್ಯತ್ಯಾಸವು ಕಾಣಲು ಪರಮಾತ್ಮನಲ್ಲವೆಂದು ತಿಳಿದುಕೊಂಡು ಸಂತೋಷದಿಂದ ನಗುತ್ತಾ ಪತ್ನಿಯಿಂದ ಸಹಿತನಾದ ಪ್ರದ್ಯುಮ್ನನ ಸಮೀಪಕ್ಕೆ ಬಂದರು. ತರುವಾಯ ರುಕ್ಮಿಣೀದೇವಿಯರು (ಲೋಕ ಜನರಂತೆ ತೋರಿಸುವವರಾಗಿ) ತಾನು ಹಡೆದ ಮನೆಯಿಂದಲೇ ಮರೆಯಾದ ಮಗುವನ್ನು ಸ್ಮರಿಸಿಕೊಂಡರು. 'ಈ ಪುರುಷ ಶ್ರೇಷ್ಠನು ಯಾರಿರ ಬಹುದು? ಯಾವ ಸ್ತ್ರೀಯು ಇವನನ್ನು ಗರ್ಭದಲ್ಲಿ ಧರಿಸಿರಬಹುದು? ನನ್ನ ಮಗನೂ ಬದುಕಿದ್ದರೆ ಇವನ ವಯಸ್ಸೇ ರೂಪವೇ ಇರಬಹುದು. ಆಕಾರ ಅವಯವಗಳು ಗಮನ ಸ್ವರನೋಟ ನಗುವು ಇವುಗಳಿಂದ ಭಗವಂತನ ಸಾದೃಶ್ಯವು ಇವನಿಗೆ ಹೇಗೆ ಬಂದಿತು? ಅಥವಾ ನಾನು ಗರ್ಭದಲ್ಲಿ ಧರಿಸಿದ ಮಗನೇ ಇವನಿರಬಹುದೇ? ಇವನಲ್ಲಿ ನನಗೆ ಬಹುಪ್ರೀತಿಯಾಗುತ್ತಿದೆ. ನನ್ನ ಎಡಕೈಯೂ ನಡುಗುತ್ತಿದೆ.

ಈರೀತಿಯಾಗಿ ರುಕ್ಮಿಣಿದೇವಿಯರು ಸರ್ವವನ್ನು ತಿಳಿದವರಾದರೂ ಒಂದೂ ತಿಳಿಯದವರಂತೆ ನಟಿಸುತ್ತಾ ವಿಚಾರಮಾಡುತ್ತಿರಲು ಶ್ರೀಕೃಷ್ಣಪರಮಾತ್ಮನು ದೇವಕೀ ವಸುದೇವರಿಂದಲೂ ನಾರದರಿಂದಲೂ ಇತರ ಯಾದವರಿಂದಲೂ ಕೂಡಿಕೊಂಡು ಅಲ್ಲಿಗೆ ಬಂದನು. ಭಗವಂತನು ಎಲ್ಲವನ್ನೂ ತಿಳಿದವರಾಗಿದ್ದನೂ ಸುಮ್ಮನೆ ಇದ್ದನು. ನಾರದರು ಶಂಬರಾಸುರನು ಅಪಹಾರ ಮಾಡಿಕೊಂಡು ಹೋದದ್ದೇ ಮೊದಲಾದ

ಎಲ್ಲಾ ವಿಷಯವನ್ನು ಹೇಳಿದರು. ಈ ವಿಷಯವನ್ನು ಕೇಳಿ ಅಂತಃಪುರದಲ್ಲಿ ಇದ್ದ ಎಲ್ಲಾ ಸ್ತ್ರೀಯರೂ ದೇವಕೀದೇವಿಯೂ ವಸುದೇವನೂ ಕೃಷ್ಣಪರಮಾತ್ಮನೂ ಬಲರಾಮ ದೇವರೂ ರುಕ್ಮಿಣೀದೇವಿಯರೂ ಪ್ರದ್ಯುಮ್ನ ರತಿಯರನ್ನು ಆಲಿಂಗನಮಾಡಿ ಸಂತೋಷಪಟ್ಟರು. ಕಾಣಿಸದೆ ಹೋದ ಪ್ರದ್ಯುಮ್ನನು ಬಂದು ಸೇರಿದ್ದನ್ನು ಕೇಳಿ ದ್ವಾರಕಾಪಟ್ಟಣದ ಜನರು ಮೃತನಾದವನು ಪುನಃ ಬದುಕಿಬಂದಂತೆ ತಿಳಿದು ಕೊಂಡರು.



## ಬಾಣಾಸುರನ ಗೋವುಗಳು [1]

ಕೃಷ್ಣಪರಮಾತ್ಮನು ಬಾಣಾಸುರನನ್ನು ಜಯಿಸಿ ಅನಿರುದ್ಧನಿಗೆ ಉಷೆಯನ್ನು ವಿವಾಹ ಮಾಡಿಸಿ ಹೊರಡುವಾಗ ಕುಂಭಾಂಡನು ಕೃಷ್ಣಪರಮಾತ್ಮನೊಡನೆ ಕೈಮುಗಿದು ಕೊಂಡು 'ಬಾಣಾಸುರನ ಗೋವುಗಳು ವರುಣದೇವರ ಬಳಿಯಲ್ಲಿ ಇವೆ. ಅವುಗಳ ಹಾಲು ಅಮೃತದಂತೆ ಇರುತ್ತದೆ. ಆ ಹಾಲನ್ನು ಕುಡಿದ ಮನುಷ್ಯನಿಗೆ ಒಳ್ಳೇ ಬಲವು ಬರುತ್ತದೆ. ಅವನನ್ನು ಒಬ್ಬನೂ ಜಯಿಸಲಾಗುವುದಿಲ್ಲ' ಎಂದು ಹೇಳಿದನು. ಶ್ರೀಕೃಷ್ಣಪರಮಾತ್ಮನು ಆ ಮಾತನ್ನು ಕೇಳಿ ಸಂತೋಷವುಳ್ಳವನಾಗಿ ಅಲ್ಲಿಂದ ದ್ವಾರಕೆಗೆ ಹೋಗಲಿಕ್ಕೆ ಅಭಿಪ್ರಾಯಪಟ್ಟನು.

ಕೃಷ್ಣಪರಮಾತ್ಮನೂ ಬಲರಾಮದೇವರೂ ಪ್ರದ್ಯುಮ್ನನೂ ಅನಿರುದ್ಧನೂ ಗರುಡದೇವರ ಮೇಲೆ ಕೂತುಕೊಂಡರು. ಗರುಡದೇವರು ಬಹುವೇಗದಿಂದ ಹೊರಟರು. ಪಶ್ಚಿಮದಿಕ್ಕಿಗೆ ಹೋದರು. ಹೋಗುತ್ತಿರುವಾಗ ಸಮುದ್ರತೀರದಲ್ಲಿ ಸಂಚರಿಸುತ್ತಿದ್ದ ನಾನಾ ಬಣ್ಣವುಳ್ಳ ಸಾವಿರಾರು ಬಾಣಾಸುರನ ಗೋವುಗಳನ್ನು ನೋಡಿದರು. ಶ್ರೀಕೃಷ್ಣಪರಮಾತ್ಮನು ಆ ಗೋವುಗಳನ್ನು ನೋಡಿ ಕುಂಭಾಂಡನ ಮಾತನ್ನು ಜ್ಞಾಪಿಸಿಕೊಂಡು ಆ ಗೋವುಗಳಲ್ಲಿ ಮನಸ್ಸಿಟ್ಟನು. ಗರುಡದೇವರೊಡನೆ 'ಗರುಡ! ಆ ಬಾಣಾಸುರನ ಗೋವುಗಳು ಇರುವಲ್ಲಿಗೆ ಹೋಗು. ಅವುಗಳ ಹಾಲನ್ನು ಕುಡಿದರೆ ಮನುಷ್ಯನು ಮರಣ ರಹಿತನಾಗುವನು. ನಾನು ಬರುವಾಗ ಸತ್ಯ ಭಾಮೆಯೂ ನನ್ನೊಡನೆ 'ಬಾಣಾಸುರನ ಗೋವನ್ನು ನನಗೆ ತನ್ನಿರಿ. ಅವುಗಳ ಹಾಲನ್ನು ಕುಡಿದರೆ ಜನರು ಮುದುಕರಾಗುವುದೇ ಇಲ್ಲ. ಧರ್ಮಕ್ಕೇನೂ

ಲೋಪವಿಲ್ಲದಿದ್ದರೆ ಅವಶ್ಯವಾಗಿ ಅವುಗಳನ್ನು ತನ್ನಿರಿ. ಧರ್ಮಕ್ಕೇನಾದರೂ ಹಾನಿಯಾಗುವಂತೆ ಇದ್ದರೆ ತರಬೇಕಾಗಿಲ್ಲ' ಎಂದು ಹೇಳಿರುವಳು'' ಎಂದು ಹೇಳಿದನು.

ಗರುಡದೇವರು 'ಕಾಣಿಸುತ್ತಾ ಇದ್ದ ಗೋವುಗಳು ನನ್ನನ್ನು ನೋಡಿ ಎಲ್ಲವೂ ಸಮುದ್ರವನ್ನು ಪ್ರವೇಶಿಸಿಬಿಟ್ಟವು. ಮುಂದೇನು ಮಾಡಬೇಕು'? ಎಂದರು. ಈ ಪ್ರಕಾರವಾಗಿ ಹೇಳಿ ಗರುಡದೇವರು ರೆಕ್ಕೆಗಳ ಗಾಳಿಯಿಂದ ಸಮುದ್ರವನ್ನು ಅಲ್ಲೋಲಕಲ್ಲೋಲಮಾಡಿ ವರುಣಲೋಕವನ್ನು ಪ್ರವೇಶಿಸಿದರು. ಆಗ ಅಲ್ಲಿ ಇದ್ದ ವರುಣಭೃತ್ಯರೆಲ್ಲರೂ ನಡುಗಿಹೋದರು. ತರುವಾಯ ವರುಣದೇವರ ಸೈನ್ಯವು ಕೃಷ್ಣಪರಮಾತ್ಮನೊಡನೆ ಯುದ್ಧಕ್ಕೆ ಬಂದಿತು. ಶ್ರೀಭಗವಂತನು ಆ ಸೈನಿಕರ ಬಲವನ್ನು ನಾಶಮಾಡಿದನು. ಆ ಅರವತ್ತು ಆರುಸಾವಿರ ರಥಿಕರನ್ನು ಬಲರಾಮದೇವರೂ ಪರಮಾತ್ಮನೂ ಪ್ರದ್ಯುಮ್ನನೂ ಅನಿರುದ್ಧನೂ ಗರುಡದೇವರೂ ಜಯಿಸಿಬಿಟ್ಟರು.

ತರುವಾಯ ವರುಣದೇವರು ತನ್ನ ಸೈನ್ಯವು ಕೃಷ್ಣಪರಮಾತ್ಮನಿಂದ ಸೋತು ಹೋದದ್ದನ್ನು ನೋಡಿ ವರುಣದೇವರು ಕೋಪಿಸಿಕೊಂಡು ಯುದ್ಧಕ್ಕೆ ಬಂದರು. ಋಷಿಗಳಿಂದಲೂ ಗಂಧರ್ವರಿಂದಲೂ ಅಪ್ಸರಸ್ತ್ರೀಯರಿಂದ ಸ್ತೋತ್ರ ಮಾಡಲ್ಪಡುತ್ತಾ ವರುಣದೇವರು ಕಾಣಿಸಿಕೊಂಡರು. ಅವರ ಕೊನೆ ತಲೆಯ ಮೇಲೆ ಬೆಳ್ಳಗಿರುವ ಕೊಡೆಯನ್ನು ಹಿಡಿದಿದ್ದರು. ಆ ಕೊಡೆಯು ನೀರನ್ನು ಸುರಿಸುತ್ತಿತ್ತು. ವರುಣದೇವರು ಅತ್ಯಂತ ಕೋಪವುಳ್ಳವರಾಗಿ ಮಕ್ಕಳು ಮೊಮ್ಮಕ್ಕಳಿಂದ ಸಹಿತರಾಗಿ ಶ್ರೇಷ್ಠವಾದ ಧನುಸ್ಸನ್ನು ಹಿಡಿದುಕೊಂಡು ಬಂದರು. ಶಂಖವನ್ನು ಊದಿದರು. ರುದ್ರದೇವರಂತೆ ಬಾಣಗಳ ಸಮೂಹವನ್ನು ಸುರಿಸಿದರು. ಆಗ ಭಗವಂತನು ಪಾಂಚಜನ್ಯಶಂಖವನ್ನು ಊದಿ ಬಾಣಗಳಿಂದ ದಿಕ್ಕುಗಳನ್ನೆಲ್ಲಾ ತುಂಬಿಸಿದನು. ವರುಣದೇವರೂ ಪರಮಾತ್ಮನಿಗೆ ಅನೇಕ ಬಾಣಗಳನ್ನು ಬಿಟ್ಟರು. ಶ್ರೀಭಗವಂತನು ವೈಷ್ಣವಾಸ್ತ್ರವನ್ನು ಬಿಟ್ಟನು. ವರುಣದೇವರು ವಾರುಣಾಸ್ತ್ರವನ್ನು ಬಿಟ್ಟು ಗರ್ಜಿಸಿದರು. ವಾರುಣಾಸ್ತ್ರದಿಂದ ನೀರು ಉಂಟಾಗಿ ವೈಷ್ಣವಾಸ್ತ್ರದ ಮೇಲೆ ಆ ನೀರೇ ಜ್ವಲಿಸಿ ಬೀಳುತ್ತಿತ್ತು. ವೈಷ್ಣವಾಸ್ತ್ರವು ಜ್ವಲಿಸುತ್ತಲೇ ಇತ್ತು. ಅದನ್ನು ನೋಡಿ ಎಲ್ಲರೂ ಓಡಿಹೋದರು. ಆಗ ವರುಣದೇವರು ಪರಮಾತ್ಮನನ್ನು ಅನೇಕ ವಿಧವಾಗಿ ಪ್ರಾರ್ಥಿಸಿಕೊಂಡರು. ಆಗ ಪರಮಾತ್ಮನು ಮಂದಹಾಸವನ್ನು ಮಾಡುತ್ತಾ 'ಹಾಗಾದರೆ ನನಗೆ ಬಾಣಾಸುರನ ಗೋವುಗಳನ್ನು ಕೊಟ್ಟುಬಿಡು' ಎಂದನು. ಅದಕ್ಕೆ ವರುಣದೇವರು 'ಭಗವಂತನೇ! ನಾನು ಬಾಣಾಸುರನೊಡನೆ ನಾನು ಬದುಕಿರುವವರೆಗೆ ನಿನ್ನ ಗೋವು ಇನ್ನೊಬ್ಬರಿಗೆ

ಕೊಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೇನೆ. ಪ್ರತಿಜ್ಞೆ ಮಾಡ್ದಿದನ್ನು ಹೇಗೆ ಮೀರಲಿಕ್ಕೆ ಆಗುತ್ತದೆ? ಆದುದರಿಂದ ನನ್ನನ್ನು ಸಂಹರಿಸಿ ಗೋವುಗಳನ್ನು ತೆಗೆದುಕೊಂಡು ಹೋಗಬೇಕು. ನಾನು ಬದುಕಿರುವಾಗ ಕೊಡಲಾರೆನು. ಆದುದರಿಂದ ನನಗೆ ಅನುಗ್ರಹ ಮಾಡಬೇಕೆಂದು ಇದ್ದರೆ ನನ್ನನ್ನು ಉಳಿಸು. ಇಲ್ಲದಿದ್ದರೆ ಅಂದರೆ ಗೋವುಗಳಲ್ಲಿ ತುಂಬಾ ಅಭಿಲಾಷೆಯಿರುವುದಾದರೆ ನನ್ನನ್ನು ಕೊಂದು ತೆಗೆದುಕೊಂಡು ಹೋಗು' ಎಂದು ಹೇಳಿದರು.

ಈರೀತಿಯಾಗಿ ವರುಣದೇವರು ಹೇಳಲು ಶ್ರೀಕೃಷ್ಣಪರಮಾತ್ಮನು ವರುಣ ದೇವರ ಅಭೇದ್ಯವಾದ ಪ್ರತಿಜ್ಞೆಯನ್ನು ಕೇಳಿ ಮಂದಹಾಸವನ್ನು ಮಾಡಿ 'ನೀನು ಈರೀತಿಯಾಗಿ ಬಾಣನೊಡನೆ ಪ್ರತಿಜ್ಞೆಯನ್ನು ಮಾಡಿರುವಿಯಾದರೆ ನಾನು ನಿನ್ನನ್ನು ಬಿಟ್ಟುಬಿಟ್ಟಿದ್ದೇನೆ. ಇಷ್ಟು ಮಧುರವಾಗಿ ಮಾತಾಡುವ ನಿನ್ನಲ್ಲಿ ನಾನು ಹೇಗೆ ಪಾಪಕಾರ್ಯವನ್ನು ಮಾಡಲಿ? ನಿನ್ನನ್ನು ಬಿಟ್ಟು ಬಿಟ್ಟಿದ್ದೇನೆ. ಹೊರಟುಹೋಗು. ನಿನ್ನ ಪ್ರಿಯಕ್ಕಾಗಿ ನಾನು ಬಾಣನ ಗೋವುಗಳನ್ನು ಬಿಟ್ಟು ಬಿಟ್ಟಿದ್ದೇನೆ' ಎಂದು ಹೇಳಿದನು. ತರುವಾಯ ವರುಣದೇವರು ವಾದ್ಯಘೋಷದಿಂದ ಭಗವಂತನಿಗೆ ಅರ್ಘ್ಯವನ್ನು ಕೊಟ್ಟು ಪೂಜೆ ಮಾಡಿದರು. ಬಲರಾಮದೇವರಿಗೂ ಪೂಜೆಯನ್ನು ಮಾಡಿದರು. ತರುವಾಯ ಪರಮಾತ್ಮನು ವರುಣದೇವರಿಗೆ ಅಭಯಪ್ರದಾನವನ್ನು ಮಾಡಿ ದ್ವಾರಕಾಪಟ್ಟಣಕ್ಕೆ ಹೊರಟುಹೋದನು.



## ಜಾಲಂಧರನ ಕಥೆ [1]

ಒಂದು ಸಮಯದಲ್ಲಿ ಇಂದ್ರದೇವರು ಅಪ್ಸರಸ್ತ್ರೀಯರ ಸಮೂಹದಿಂದಲೂ ಬಹುದೇವತೆಗಳಿಂದಲೂ ಸಂಗೀತವಿದ್ಯೆಯಲ್ಲಿ ಪಾರಂಗತರಾದ ಗಂಧರ್ವ ರಿಂದಲೂ ಸಹಿತರಾಗಿ ರುದ್ರದೇವರನ್ನು ಸ್ತೋತ್ರಮಾಡುವುದಕ್ಕಾಗಿ ಅವರಿದ್ದಲ್ಲಿಗೆ ಹೋದರು. ಅವರೊಟ್ಟಿಗೆ ರಂಭಾ ತಿಲೋತ್ತಮ ರಾಮಾ ಕರ್ಪೂರಾ ಕದಲೀ ಮದನಾ ಭಾರತೀ ಕಾಮಾ ಎಂದು ಹೆಸರುಳ್ಳ ನರ್ತನವಿದ್ಯೆಯನ್ನು ತಿಳಿದವರಾದ ಸರ್ವಾಭರಣಗಳಿಂದ ಅಲಂಕೃತರಾದ ಅಪ್ಸರಸ್ತ್ರೀಯರೂ ಹೊರಟುಹೋದರು. ಹಾಗೆಯೇ ಗಂಧರ್ವರೂ ಯಕ್ಷರೂ ಸಿದ್ಧರೂ ನಾರದರೂ ತುಂಬುರುವೂ

1. ಪ.ಪು. ಉಖಂ. ಅ-3

ಕಿಂನರರೂ ಕಿಂನರಸ್ತ್ರೀಯರೂ ಕೋಣವಾಯು ಕುಬೇರ ಇತ್ಯಾದಿ ದೇವತೆಗಳೂ ಹೋಗಿದ್ದರು. ಎಲ್ಲರೂ ಅತ್ಯಂತ ಶೋಭಿತವಾದ ಕೈಲಾಸವನ್ನು ನೋಡಿದರು. ಎಲ್ಲಾ ದೇವತೆಗಳೂ ಇಂದ್ರದೇವರೂ ವಿಮಾನದಿಂದ ಇಳಿಯುವವರಾಗಿ ದ್ವಾರಪಾಲಕ ನಾದ ನಂದಿಯ ಬಳಿಗೆ ಹೋಗಿ ಇಂದ್ರನು ನರ್ತನಮಾಡುವುದಕ್ಕಾಗಿ ಬಂದಿರುವ ನೆಂದು ರುದ್ರದೇವರೊಡನೆ ವಿಜ್ಞಾಪನೆ ಮಾಡಿಕೊಳ್ಳಬೇಕೆಂದು ಹೇಳಿದರು. ನಂದಿಯು ರುದ್ರದೇವರೊಡನೆ ತಿಳಿಸಿ ಅವರ ಆಜ್ಞೆಯಿಂದ ಬಂದಿರುವ ಎಲ್ಲರೊಡನೆ ಇಂದ್ರದೇವರನ್ನು ಒಳಗೆ ಬಿಟ್ಟನು. ಇಂದ್ರದೇವರು ರುದ್ರದೇವರನ್ನು ನೋಡಿ ಸ್ತೋತ್ರಮಾಡಿದರು. ರಂಭೆಯೇ ಮೊದಲಾದ ಅಪ್ಸರಸ್ತ್ರೀಯರು ವೀಣೆಯೇ ಮೊದ ಲಾದ ವಾದ್ಯಗಳನ್ನು ಬಾರಿಸುತ್ತಾ ಸಂತೋಷದಿಂದ ನರ್ತನವನ್ನು ಮಾಡಿದರು. ಇಂದ್ರದೇವರು ಅತಿಮನೋಹರವಾಗಿ ನರ್ತನಮಾಡಿದರು. ಆದರಿಂದ ರುದ್ರದೇವರು ಸಂತೋಷವನ್ನು ಹೊಂದಿದವರಾಗಿ 'ದೇವೇಂದ್ರ! ನಿನ್ನ ಮೇಲೆ ಸಂತೋಷಗೊಂಡಿರುವೆನು. ಬೇಕಾದ ವರವನ್ನು ಕೇಳಿಕೊ' ಎಂದು ಹೇಳಿದರು. ಆಗ ಇಂದ್ರದೇವರು ತನ್ನ ಬಾಹುಬಲದಿಂದ ಗರ್ವವುಳ್ಳವರಾಗಿ 'ನನಗೆ ಯುದ್ಧವು ಅಪೇಕ್ಷಿತವಾಗಿದೆ. ನಿಮ್ಮಂತೆ ಇರುವವರು ನನ್ನ ಹತ್ತಿರ ಯುದ್ಧಮಾಡಬೇಕು' ಎಂದು ಹೇಳಿದರು. ರುದ್ರದೇವರು 'ಹಾಗೆಯೇ ಆಗಲಿ' ಎಂದು ಹೇಳಲು ಇಂದ್ರದೇವರು ಹೊರಟು ಹೋದರು.

ತರುವಾಯ ರುದ್ರದೇವರು 'ಗಣಗಳೇ! ಇಂದ್ರನ ಗರ್ವವನ್ನು ನೋಡಿ ದಿರಾ?' ಎಂದು ಹೇಳಿ ಕ್ರೋಧವುಳ್ಳವರಾದರು. ಆಗ ಕ್ರೋಧಾಭಿಮಾನಿಯಾದವನು ಗಾಢಾಂಧಕಾರದಂತೆ ಕಪ್ಪಾದ ರೂಪವುಳ್ಳವನಾಗಿ ದೇಹವುಳ್ಳವನಾಗಿ ಕಾಣಿಸಿ ಕೊಂಡು 'ನನಗೆ ಉಚಿತವಾದ ಕಾರ್ಯವನ್ನು ಆಜ್ಞಾಪಿಸಬೇಕೆಂದು ಕೇಳಿಕೊಂಡನು. ಅದಕ್ಕೆ ರುದ್ರದೇವರು 'ನೀನು ಸಮುದ್ರನಿಂದ ಗಂಗೆಯಲ್ಲಿ ಹುಟ್ಟುವವನಾಗಿ ಇಂದ್ರನನ್ನು ಜಯಿಸು' ಎಂದು ಹೇಳಲು ಕ್ರೋಧಾಭಿಮಾನಿಯು ಹಾಗೆಯೇ ಆಗಲಿ ಎಂದು ಹೇಳಿ ಮರೆಯಾಗಿ ಹೋದನು. ರುದ್ರದೇವರ ಗಣಗಳೆಲ್ಲವೂ ಆಶ್ಚರ್ಯವನ್ನು ಹೊಂದಿದವು. ತರುವಾಯ ಸಮುದ್ರನಿಂದ ಗಂಗೆಯಲ್ಲಿ ಪುತ್ರನು ಉದ್ಭವಿಸಿದನು. ಆ ಮಗನು ಹುಟ್ಟಿದ ಕೂಡಲೇ ಗಟ್ಟಿಯಾಗಿ ಕೂಗಿದನು. ಅವನ ಕೂಗಿನಿಂದ ಮೂರು ಲೋಕವೂ ನಡುಗಿತು. ಸರ್ವಸ್ಥಳದಲ್ಲಿ ಪ್ರತಿಧ್ವನಿಯಾಯಿತು.

ಇಂದ್ರದೇವರ ಮಾತಿನಿಂದ ಬ್ರಹ್ಮದೇವರು ಹಂಸಪಕ್ಷಿಯಲ್ಲಿ ಕೂತುಕೊಂಡು ಸಮುದ್ರಕ್ಕೆ ಬಂದರು. ಸಮುದ್ರನು ಬಂದಿರುವ ಬ್ರಹ್ಮದೇವರನ್ನು ನೋಡಿ

ಪೂಜೆಯನ್ನು ಮಾಡಿದನು. ಬ್ರಹ್ಮದೇವರು ಸಮುದ್ರದೊಡನೆ 'ಯಾಕೆ ಸುಮ್ಮನೆ ಗರ್ಜಿಸುತ್ತಿರುವಿ?' ಎಂದು ಕೇಳಿದರು. ಅದಕ್ಕೆ ಸಮುದ್ರನು 'ಸ್ವಾಮಿ! ನಾನು ಗರ್ಜಿಸುವುದಲ್ಲ, ಬಲಿಷ್ಠನಾದ ನನ್ನ ಮಗನು ಗರ್ಜಿಸುತ್ತಿರುವನು. ತಮ್ಮ ದರ್ಶನವು ದುರ್ಲಭವು. ತಾವು ಮಗನಿಗೆ ರಕ್ಷೆಯನ್ನು ಮಾಡಬೇಕೆಂದು ಹೇಳಿ ಪತ್ನಿಯೊಡನೆ ಬ್ರಹ್ಮದೇವರಿಗೆ ಮಗನನ್ನು ತೋರಿಸೆಂದು ಹೇಳಿದನು. ಆಗ ಅವಳು ಗಂಡನ ಆಜ್ಞೆಯಿಂದ ಮಗುವನ್ನು ಹಿಡಿದುಕೊಂಡು ಬ್ರಹ್ಮದೇವರ ಬಳಿಗೆ ಬಂದಳು. ಬ್ರಹ್ಮದೇವರ ತೊಡೆಯಲ್ಲಿ ಮಗನನ್ನು ಇಟ್ಟು ನಮಸ್ಕರಿಸಿದಳು. ಅದ್ಭುತವಾದ ಆ ಸಮುದ್ರನ ಮಗನನ್ನು ನೋಡಿ ಬ್ರಹ್ಮದೇವರು ಆಶ್ಚರ್ಯಪಟ್ಟಂತೆ ತೋರಿಸಿದರು. ಬ್ರಹ್ಮದೇವರು ಮಗನಿಗೆ ಜಾಲಂಧರ ಎಂದು ಹೆಸರನ್ನಿಟ್ಟರು. 'ಈ ಜಾಲಾಂಧರನು ದೇವತೆಗಳಿಂದ ಪರಾಜಯರಹಿತನಾಗುನು. ಪಾತಾಳದಿಂದ ಸಹಿತವಾದ ಸ್ವರ್ಗವನ್ನು ನನ್ನ ಅನುಗ್ರಹದಿಂದ ಅನುಭವಿಸುವನು' ಎಂದು ಹೇಳಿ ಬ್ರಹ್ಮದೇವರು ಹಂಸಪಕ್ಷಿಯನ್ನು ಏರಿ ಮರೆಯಾಗಿ ಹೋದರು.



## ಜಾಲಂಧರನಿಗೆ ವೃಂದೆಯ ವಿವಾಹವೂ ಪಟ್ಟಾಭಿಷೇಕವೂ[1]

ಜಾಲಂಧರನು ಕ್ರಮದಿಂದ ಬೆಳೆಯುತ್ತಿದ್ದನು. ತಾಯಿಯ ತೊಡೆಯಿಂದ ಕೆಳಗೆ ಹಾರಿ ಸಮುದ್ರಕ್ಕೆ ಓಡಿಹೋಗುತ್ತಿದ್ದನು. ಸಿಂಹದ ಮರಿಗಳನ್ನು ತಂದು ಆಟಕ್ಕಾಗಿ ಪಂಜರದೊಳಗೆ ಇಡುತ್ತಿದ್ದನು. ಸಿಂಹ ಆನೆಗಳೊಡನೆ ಜಗಳವಾಡುತ್ತಿದ್ದನು. ಆಕಾಶಕ್ಕೆ ಹಾರಿ ಅಲ್ಲಿ ಸಂಚರಿಸುತ್ತಿರುವವರನ್ನು ಕೆಳಗೆ ಬೀಳಿಸುವನು. ತನ್ನ ಗರ್ಜನೆಯಿಂದ ಸಮುದ್ರದ ಪ್ರಾಣಿಗಳೆಲ್ಲವೂ ಮರೆಯಾದವು. ವಾಡವಾಗ್ನಿಯೂ ತನ್ನ ಸ್ಥಳವನ್ನು ಬಿಟ್ಟು ಹಿಮವತ್ಪರ್ವತಕ್ಕೆ ಹೋಯಿತು. ಜಾಲಂಧರನು ಬಾಲ್ಯವನ್ನು ಕಳೆದು ಯೌವನವುಳ್ಳವನಾಗಿ ಪರಾಕ್ರಮದಿಂದ ಸ್ವರ್ಗವನ್ನೂ ಆಕ್ರಮಿಸಿದನು. ಒಂದು ದಿನದಲ್ಲಿ ತಂದೆಯಾದ ಸಮುದ್ರದೊಡನೆ ತನಗೆ ಉಚಿತವಾದ ವಿಸ್ತಾರವುಳ್ಳ ಸ್ಥಳವನ್ನು ಕೊಡಬೇಕೆಂದು ಕೇಳಿಕೊಂಡನು. ಅದಕ್ಕೆ ಸಮುದ್ರರಾಜನು ಹಾಗೆಯೇ ಆಗಲಿ ಎಂದನು. ಆ ಸಮಯಕ್ಕೆ ಸರಿಯಾಗಿ ಶುಕ್ರಾಚಾರ್ಯರು ಸಮುದ್ರಕ್ಕೆ ಬಂದರು. ಬಂದಿರುವ ಶುಕ್ರಾಚಾರ್ಯರಿಗೆ ಸಮುದ್ರನು ವಿಧಿಪ್ರಕಾರವಾಗಿ ಪೂಜಿಸಿದನು.

1. ಪ.ಪು. ಉ.ಖಂ. ಅ-4

ಸುಂದರವಾದ ಆಸನಯದಲ್ಲಿ ಕೂತಿರುವ ಶುಕ್ರಾಚಾರ್ಯರೊಡನೆ ಸಮುದ್ರನು ಕೈಮುಗಿದುಕೊಂಡು 'ದೈವೇಚ್ಛೆಯಿಂದ ಇಲ್ಲಿಗೆ ತಮ್ಮ ಆಗಮನವಾಯಿತು. ನಾನು ಏನು ಮಾಡಬೇಕು?' ಎಂದು ಕೇಳಿದನು. ಅದಕ್ಕೆ ಶುಕ್ರಾಚಾರ್ಯರು 'ಯಾರು ವಂಶದಲ್ಲಿ ಪ್ರಸಿದ್ಧಿಯನ್ನು ಹೊಂದುವುದಿಲ್ಲವೋ ಅಂತಹ ತಾಯಿಯ ಯೌವನವನ್ನು ಅಪಹರಿಸುವ ಅವನಿಂದ ಏನು ಪ್ರಯೋಜನವಿದೆ? ನಿನ್ನ ಮಗನು ಪರಾಕ್ರಮದಿಂದ ಮೂರುಲೋಕಗಳನ್ನು ಅನುಭವಿಸುವನು. ಜಂಬೂದ್ವೀಪದಲ್ಲಿ ಯೋಗಿನಿಗಳ ಸಮೂಹದಿಂದ ಸೇವಿತವಾದ ಮಹಾಪೀಠವೆಂಬ ಸ್ಥಳವನ್ನು ಕೊಡು. ನೀನು ಅದನ್ನು ಈಗ ಮುಳಿಗಿಸಿರುವಿ. ಅದನ್ನು ಬಿಟ್ಟುಕೊಡು. ಅಲ್ಲಿ ನಿನ್ನ ಮಗನಿಗೆ ರಾಜ್ಯವನ್ನು ಒಪ್ಪಿಸು. ಅಲ್ಲಿದ್ದುಕೊಂಡು ಪರಾಜಯ ಶೂನ್ಯನಾಗಿರುವನು' ಎಂದು ಹೇಳಿದರು.

ಆಗ ಸಮುದ್ರನು ಮಗನ ಪ್ರೀತಿಗಾಗಿ ಹಿಂದೆ ಸರಿದು ಸ್ಥಳವನ್ನು ತೋರಿಸಿತು. ನೂರು ಯೋಜನ ವಿಸ್ತೀರ್ಣವಾದ ಮುನ್ನೂರು ಯೋಜನ ವಿಶಾಲವಾದ ಜಾಲಂಧರವೆಂದೇ ಹೆಸರುಳ್ಳ ಪವಿತ್ರವಾದ ಪ್ರದೇಶವನ್ನು ಕೊಟ್ಟು ಮಯಾಸುರನನ್ನು ಕೂಗಿ 'ಜಾಲಂಧರ ಪೀಠದಲ್ಲಿ ಜಾಲಂಧರನಿಗೆ ಪಟ್ಟಣವನ್ನು ಮಾಡಿಕೊಡು' ಎಂದು ಹೇಳಿದನು. ಮಯಾಸುರನು ಅತಿಸುಂದರವಾದ ಪಟ್ಟಣವನ್ನು ಕಟ್ಟಿದನು. ಅಲ್ಲಿ ಸಮುದ್ರನು ನದಿಗಳಿಂದಲೂ ಶುಕ್ರಾಚಾರ್ಯರಿಂದಲೂ ಸಹಿತನಾಗಿ ವಾದ್ಯ ಘೋಷಗಳಿಂದ ನಿಜಗರ್ಜನೆಯಿಂದಲೂ ಪಟ್ಟಾಭಿಷೇಕವನ್ನು ಮಾಡಿದನು. ತರುವಾಯ ಬ್ರಹ್ಮದೇವರು ಜಯವಾಗಲಿ ಎಂದು ಆಶೀರ್ವದಿಸಿದರು. ಸಮುದ್ರ ರಾಜನು ತನ್ನ ಮಧ್ಯದಲ್ಲಿ ಉದ್ಭವಿಸಿದ ಸಾವಿರ ಮಹಾಪದ್ಮಸಂಖ್ಯೆಯುಳ್ಳ ಭಯಂಕರವಾದ ಸೈನ್ಯವನ್ನು ತನ್ನ ಮಗನಿಗೆ ಕೊಟ್ಟನು. ಶುಕ್ರಾಚಾರ್ಯರು ಮೃತ ಸಂಜೀವನೀವಿದ್ಯೆಯನ್ನೂ ರುದ್ರದೇವರನ್ನು ಮೋಹಗೊಳಿಸುವ ಮಾಯೆಯನ್ನೂ ಕೊಟ್ಟರು. ಶಸ್ತ್ರಾಸ್ತ್ರವಿದ್ಯೆಗಳನ್ನೂ ಹೇಳಿಕೊಟ್ಟರು. ಸಮುದ್ರನು ದಿವ್ಯದೇಹದಿಂದ ಈರೀತಿಯಾಗಿ ವೈಭವದಿಂದ ನದಿಗಳಿಂದ ಕೂಡಿಕೊಂಡು ಪಟ್ಟಾಭಿಷೇಕವನ್ನು ಮಾಡಿ ಹೊರಟುಹೋದನು.

ಜಾಲಂಧರನು ಆ ದಿವ್ಯಪಟ್ಟಣದಲ್ಲಿ ಶುಕ್ರಾಚಾರ್ಯರಿಂದಲೂ ಬ್ರಾಹ್ಮಣ ರಿಂದಲೂ ಸತ್ಕರಿಸಲ್ಪಟ್ಟವನಾಗಿ ಸಂಚರಿಸಿದನು. ಆ ಸಮಯದಲ್ಲಿ ಪಾತಾಲದಲ್ಲಿ ಇದ್ದ ಮಹಾಬಲಿಷ್ಠರಾದ ಕಾಲನೇಮಿಯೇ ಮೊದಲಾದ ದೈತ್ಯರು ಜಾಲಂಧರನನ್ನು ಬಂದು ಸೇರಿದರು. ತರುವಾಯ ಅಸುರರು ಶುಂಭಾಸುರನನ್ನು ಸೇನಾಪತಿಯನ್ನಾಗಿ ಮಾಡಿದರು. ಜಾಲಂಧರನು ಎಲ್ಲಾ ಸೈನ್ಯವನ್ನು ತನ್ನ ವಶಮಾಡಿಕೊಂಡು ತಂದೆಯು

ಪೂಜೆಯನ್ನು ಮಾಡಿದನು. ಬ್ರಹ್ಮದೇವರು ಸಮುದ್ರದೊಡನೆ 'ಯಾಕೆ ಸುಮ್ಮನೆ ಗರ್ಜಿಸುತ್ತಿರುವಿ?' ಎಂದು ಕೇಳಿದರು. ಅದಕ್ಕೆ ಸಮುದ್ರನು 'ಸ್ವಾಮಿ! ನಾನು ಗರ್ಜಿಸುವುದಲ್ಲ. ಬಲಿಷ್ಠನಾದ ನನ್ನ ಮಗನು ಗರ್ಜಿಸುತ್ತಿರುವನು. ತಮ್ಮ ದರ್ಶನವು ದುರ್ಲಭವು. ತಾವು ಮಗನಿಗೆ ರಕ್ಷೆಯನ್ನು ಮಾಡಬೇಕೆಂದು ಹೇಳಿ ಪತ್ನಿಯೊಡನೆ ಬ್ರಹ್ಮದೇವರಿಗೆ ಮಗನನ್ನು ತೋರಿಸೆಂದು ಹೇಳಿದನು. ಆಗ ಅವಳು ಗಂಡನ ಆಜ್ಞೆಯಿಂದ ಮಗುವನ್ನು ಹಿಡಿದುಕೊಂಡು ಬ್ರಹ್ಮದೇವರ ಬಳಿಗೆ ಬಂದಳು. ಬ್ರಹ್ಮದೇವರ ತೊಡೆಯಲ್ಲಿ ಮಗನನ್ನು ಇಟ್ಟು ನಮಸ್ಕರಿಸಿದಳು. ಅದ್ಭುತವಾದ ಆ ಸಮುದ್ರನ ಮಗನನ್ನು ನೋಡಿ ಬ್ರಹ್ಮದೇವರು ಆಶ್ಚರ್ಯಪಟ್ಟಂತೆ ತೋರಿಸಿದರು. ಬ್ರಹ್ಮದೇವರು ಮಗನಿಗೆ ಜಾಲಂಧರ ಎಂದು ಹೆಸರನ್ನಿಟ್ಟರು. 'ಈ ಜಾಲಾಂಧರನು ದೇವತೆಗಳಿಂದ ಪರಾಜಯರಹಿತನಾಗುನು. ಪಾತಾಳದಿಂದ ಸಹಿತವಾದ ಸ್ವರ್ಗವನ್ನು ನನ್ನ ಅನುಗ್ರಹದಿಂದ ಅನುಭವಿಸುವನು' ಎಂದು ಹೇಳಿ ಬ್ರಹ್ಮದೇವರು ಹಂಸಪಕ್ಷಿಯನ್ನು ಏರಿ ಮರೆಯಾಗಿ ಹೋದರು.



## ಜಾಲಂಧರನಿಗೆ ವೃಂದೆಯ ವಿವಾಹವೂ ಪಟ್ಟಾಭಿಷೇಕವೂ[1]

ಜಾಲಂಧರನು ಕ್ರಮದಿಂದ ಬೆಳೆಯುತ್ತಿದ್ದನು. ತಾಯಿಯ ತೊಡೆಯಿಂದ ಕೆಳಗೆ ಹಾರಿ ಸಮುದ್ರಕ್ಕೆ ಓಡಿಹೋಗುತ್ತಿದ್ದನು. ಸಿಂಹದ ಮರಿಗಳನ್ನು ತಂದು ಆಟಕ್ಕಾಗಿ ಪಂಜರದೊಳಗೆ ಇಡುತ್ತಿದ್ದನು. ಸಿಂಹ ಆನೆಗಳೊಡನೆ ಜಗಳವಾಡುತ್ತಿದ್ದನು. ಆಕಾಶಕ್ಕೆ ಹಾರಿ ಅಲ್ಲಿ ಸಂಚರಿಸುತ್ತಿರುವವರನ್ನು ಕೆಳಗೆ ಬೀಳಿಸುವನು. ತನ್ನ ಗರ್ಜನೆಯಿಂದ ಸಮುದ್ರದ ಪ್ರಾಣಿಗಳೆಲ್ಲವೂ ಮರೆಯಾದವು. ವಾಡವಾಗ್ನಿಯೂ ತನ್ನ ಸ್ಥಳವನ್ನು ಬಿಟ್ಟು ಹಿಮವತ್ಪರ್ವತಕ್ಕೆ ಹೋಯಿತು. ಜಾಲಂಧರನು ಬಾಲ್ಯವನ್ನು ಕಳೆದು ಯೌವನ ವುಳ್ಳವನಾಗಿ ಪರಾಕ್ರಮದಿಂದ ಸ್ವರ್ಗವನ್ನೂ ಆಕ್ರಮಿಸಿದನು. ಒಂದು ದಿನದಲ್ಲಿ ತಂದೆಯಾದ ಸಮುದ್ರದೊಡನೆ ತನಗೆ ಉಚಿತವಾದ ವಿಸ್ತಾರವುಳ್ಳ ಸ್ಥಳವನ್ನು ಕೊಡಬೇಕೆಂದು ಕೇಳಿಕೊಂಡನು. ಅದಕ್ಕೆ ಸಮುದ್ರರಾಜನು ಹಾಗೆಯೇ ಆಗಲಿ ಎಂದನು. ಆ ಸಮಯಕ್ಕೆ ಸರಿಯಾಗಿ ಶುಕ್ರಾಚಾರ್ಯರು ಸಮುದ್ರಕ್ಕೆ ಬಂದರು. ಬಂದಿರುವ ಶುಕ್ರಾಚಾರ್ಯರಿಗೆ ಸಮುದ್ರನು ವಿಧಿಪ್ರಕಾರವಾಗಿ ಪೂಜಿಸಿದನು.

1. ಪ.ಪು. ಉ.ಖಂ. ಅ-4

ಸುಂದರವಾದ ಆಸನಯದಲ್ಲಿ ಕೂತಿರುವ ಶುಕ್ರಾಚಾರ್ಯರೊಡನೆ ಸಮುದ್ರನು ಕೈಮುಗಿದುಕೊಂಡು 'ದೈವೇಚ್ಛೆಯಿಂದ ಇಲ್ಲಿಗೆ ತಮ್ಮ ಆಗಮನವಾಯಿತು. ನಾನು ಏನು ಮಾಡಬೇಕು?' ಎಂದು ಕೇಳಿದನು. ಅದಕ್ಕೆ ಶುಕ್ರಾಚಾರ್ಯರು 'ಯಾರು ವಂಶದಲ್ಲಿ ಪ್ರಸಿದ್ಧಿಯನ್ನು ಹೊಂದುವುದಿಲ್ಲವೋ ಅಂತಹ ತಾಯಿಯ ಯೌವನವನ್ನು ಅಪಹರಿಸುವ ಅವನಿಂದ ಏನು ಪ್ರಯೋಜನವಿದೆ? ನಿನ್ನ ಮಗನು ಪರಾಕ್ರಮದಿಂದ ಮೂರುಲೋಕಗಳನ್ನು ಅನುಭವಿಸುವನು. ಜಂಬೂದ್ವೀಪದಲ್ಲಿ ಯೋಗಿನಿಗಳ ಸಮೂಹದಿಂದ ಸೇವಿತವಾದ ಮಹಾಪೀಠವೆಂಬ ಸ್ಥಳವನ್ನು ಕೊಡು. ನೀನು ಅದನ್ನು ಈಗ ಮುಳಿಗಿಸಿರುವಿ. ಅದನ್ನು ಬಿಟ್ಟುಕೊಡು. ಅಲ್ಲಿ ನಿನ್ನ ಮಗನಿಗೆ ರಾಜ್ಯವನ್ನು ಒಪ್ಪಿಸು. ಅಲ್ಲಿದ್ದುಕೊಂಡು ಪರಾಜಯ ಶೂನ್ಯನಾಗಿರುವನು' ಎಂದು ಹೇಳಿದರು.

ಆಗ ಸಮುದ್ರನು ಮಗನ ಪ್ರೀತಿಗಾಗಿ ಹಿಂದೆ ಸರಿದು ಸ್ಥಳವನ್ನು ತೋರಿಸಿತು. ನೂರು ಯೋಜನ ವಿಸ್ತೀರ್ಣವಾದ ಮುನ್ನೂರು ಯೋಜನ ವಿಶಾಲವಾದ ಜಾಲಂಧರವೆಂದೇ ಹೆಸರುಳ್ಳ ಪವಿತ್ರವಾದ ಪ್ರದೇಶವನ್ನು ಕೊಟ್ಟು ಮಯಾಸುರನನ್ನು ಕೂಗಿ 'ಜಾಲಂಧರ ಪೀಠದಲ್ಲಿ ಜಾಲಂಧರನಿಗೆ ಪಟ್ಟಣವನ್ನು ಮಾಡಿಕೊಡು' ಎಂದು ಹೇಳಿದನು. ಮಯಾಸುರನು ಅತಿಸುಂದರವಾದ ಪಟ್ಟಣವನ್ನು ಕಟ್ಟಿದನು. ಅಲ್ಲಿ ಸಮುದ್ರನು ನದಿಗಳಿಂದಲೂ ಶುಕ್ರಾಚಾರ್ಯರಿಂದಲೂ ಸಹಿತನಾಗಿ ವಾದ್ಯ ಘೋಷಗಳಿಂದ ನಿಜಗರ್ಜನೆಯಿಂದಲೂ ಪಟ್ಟಾಭಿಷೇಕವನ್ನು ಮಾಡಿದನು. ತರುವಾಯ ಬ್ರಹ್ಮದೇವರು ಜಯವಾಗಲಿ ಎಂದು ಆಶೀರ್ವದಿಸಿದರು. ಸಮುದ್ರ ರಾಜನು ತನ್ನ ಮಧ್ಯದಲ್ಲಿ ಉದ್ಭವಿಸಿದ ಸಾವಿರ ಮಹಾಪದ್ಮಸಂಖ್ಯೆಯುಳ್ಳ ಭಯಂಕರವಾದ ಸೈನ್ಯವನ್ನು ತನ್ನ ಮಗನಿಗೆ ಕೊಟ್ಟನು. ಶುಕ್ರಾಚಾರ್ಯರು ಮೃತ ಸಂಜೀವನೀವಿದ್ಯೆಯನ್ನೂ ರುದ್ರದೇವರನ್ನು ಮೋಹಗೊಳಿಸುವ ಮಾಯೆಯನ್ನೂ ಕೊಟ್ಟರು. ಶಸ್ತ್ರಾಸ್ತ್ರವಿದ್ಯೆಗಳನ್ನೂ ಹೇಳಿಕೊಟ್ಟರು. ಸಮುದ್ರನು ದಿವ್ಯದೇಹದಿಂದ ಈರೀತಿಯಾಗಿ ವೈಭವದಿಂದ ನದಿಗಳಿಂದ ಕೂಡಿಕೊಂಡು ಪಟ್ಟಾಭಿಷೇಕವನ್ನು ಮಾಡಿ ಹೊರಟುಹೋದನು.

ಜಾಲಂಧರನು ಆ ದಿವ್ಯಪಟ್ಟಣದಲ್ಲಿ ಶುಕ್ರಾಚಾರ್ಯರಿಂದಲೂ ಬ್ರಾಹ್ಮಣ ರಿಂದಲೂ ಸತ್ಕರಿಸಲ್ಪಟ್ಟವನಾಗಿ ಸಂಚರಿಸಿದನು. ಆ ಸಮಯದಲ್ಲಿ ಪಾತಾಲದಲ್ಲಿ ಇದ್ದ ಮಹಾಬಲಿಷ್ಠರಾದ ಕಾಲನೇಮಿಯೇ ಮೊದಲಾದ ದೈತ್ಯರು ಜಾಲಂಧರನನ್ನು ಬಂದು ಸೇರಿದರು. ತರುವಾಯ ಅಸುರರು ಶುಂಭಾಸುರನನ್ನು ಸೇನಾಪತಿಯನ್ನಾಗಿ ಮಾಡಿದರು. ಜಾಲಂಧರನು ಎಲ್ಲಾ ಸೈನ್ಯವನ್ನು ತನ್ನ ವಶಮಾಡಿಕೊಂಡು ತಂದೆಯು

ಕೊಟ್ಟ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಆ ಸಮಯದಲ್ಲಿ ಸ್ವರ್ಗದಲ್ಲಿ ಸ್ವರ್ಣ ಎಂದು ಹೆಸರುಳ್ಳ ಅಪ್ಸರಸ್ತ್ರೀಯು ಇದ್ದಳು. ಅವಳಿಗೆ ಕ್ರೌಂಚ ಎಂಬ ಪರ್ವತಾಭಿಮಾನಿಯ ಅನುಗ್ರಹದಿಂದ ವೃಂದಾ ಎಂಬ ಮಗಳಿದ್ದಳು. ಆ ವೃಂದೆಯು ಅತಿಸುಂದರಿ ಯಾಗಿದ್ದಳು. ಅವಳನ್ನು ಜಾಲಂಧರನಿಗಾಗಿ ಶುಕ್ರಾಚಾರ್ಯರು ಹೋಗಿ ಯಾಚಿಸಿ ದರು. ಸ್ವರ್ಣೆಯು ಕೊಟ್ಟು ಬಿಟ್ಟಳು. ಶುಕ್ರಾಚಾರ್ಯರು 'ಈ ಸೌಂದರ್ಯದಿಂದ ದೀರ್ಘಾಯುಷ್ಯವುಳ್ಳವಳಾಗಿ ಸುಖವುಳ್ಳವಳಾಗಿ ಇರು' ಎಂದು ಆಶೀರ್ವಾದಿಸಿ ದರು. ಜಾಲಂಧರನು ವೃಂದೆಯನ್ನು ಗಾಂಧರ್ವವಿವಾಹ ಮಾಡಿಕೊಂಡನು. ದಂಪತಿಗಳು ಸಂತೋಷದಿಂದ ಇದ್ದನು.

ಒಂದು ದಿನದಲ್ಲಿ ಜಲಂಧರನು ರಾಹುವನ್ನು ನೋಡಿ ಶುಕ್ರಾಚಾರ್ಯರೊಡನೆ ಅವನಿಗೆ ತಲೆಯು ಮಾತ್ರ ಇರಲಿಕ್ಕೆ ಕಾರಣವೇನು? ಎಂದು ಕೇಳಿದನು. ಆ ಶುಕ್ರಾಚಾರ್ಯರು ದೇವತೆಗಳು ಕ್ಷೀರ ಸಮುದ್ರಮಥನ ಮಾಡಿ ಅಮೃತಾದಿಗಳು ಬಂದ ವಿಷಯವನ್ನೆಲ್ಲಾ ವಿಸ್ತಾರವಾಗಿ ಹೇಳಿದರು. ಅದನ್ನು ಕೇಳಿ ಜಾಲಂಧರನು ಆಶ್ಚರ್ಯವುಳ್ಳವನಾಗಿ ರಾಹುವಿನ ಮೇಲೆ ಪ್ರಸನ್ನನಾಗಿ 'ನೀನು ಇಚ್ಛಾನುಸಾರವಾಗಿ ರೂಪದಿಂದ ಇರು' ಎಂದು ಹೇಳಿ ತನ್ನ ದೊಡ್ಡ ತಂದೆಯನ್ನು ಸ್ಮರಿಸಿಕೊಂಡು ದೇವತೆಗಳೊಡನೆ ವಿರೋಧವನ್ನು ಮಾಡಿದನು.



## ಜಾಲಂಧರನ ಯುದ್ಧದ ಸನ್ನಾಹ [1]

ಕ್ಷೀರಸಮುದ್ರವು ಜಾಲಂಧರನ ದೊಡ್ಡ ತಂದೆಯು ಅದನ್ನು ದೇವತೆಗಳೂ ಅಸುರರೂ ಸೇರಿ ಮಥನ ಮಾಡಿ ದೇವತೆಗಳು ಶ್ರೀದೇವಿಯನ್ನು ಚಂದ್ರನನ್ನು ಅಮೃತ ಇತ್ಯಾದಿ ಪದಾರ್ಥಗಳನ್ನೂ ಹೊಂದಿದ್ದನ್ನು ಕೇಳಿ ಜಾಲಂಧರನು ಕುಪಿತನಾಗಿ ದೇವತೆಗಳೊಡನೆ ವಿರೋಧ ಮಾಡಿದನು. ಒಂದು ದಿನದಲ್ಲಿ ದುರ್ವಾರಣ ಎಂಬ ಅಸುರನನ್ನು ಹೇಳಬೇಕಾದದ್ದನ್ನೆಲ್ಲಾ ತಿಳಿಸಿ ಇಂದ್ರದೇವರ ಮಂದಿರಕ್ಕೆ ಕಳುಹಿಸಿದನು. ದುರ್ವಾರಣನು ರಥವನ್ನು ಏರಿಕೊಂಡು ಹೋಗಿ ಇಂದ್ರದೇವರ ಮನೆಯೊಳಗೆ ಪ್ರವೇಶಿಸಲು ಹೋಗಲು ದ್ವಾರಪಾಲಕರು ತಡೆದರು. ಆಗ ದುರ್ವಾರಣನು 'ನಾನು ಜಾಲಂಧರನ ದೂತನಾಗಿ ಬಂದಿರುವೆನು. ಇಂದ್ರದೇವರೊಡನೆ ತಿಳಿಸಿರಿ' ಎಂದು

1. ಪ.ಪು. ಉ.ಖಂ. ಅ-5

ಹೇಳಿದನು. ಅದನ್ನು ಕೇಳಿ ದೇವದೂತನು ಒಳಗೆ ಹೋಗಿ ಇಂದ್ರದೇವರೊಡನೆ ತಿಳಿಸಿ ಅವರ ಆಜ್ಞೆಯಿಂದ ದುರ್ವಾರಣನನ್ನು ಕೈಹಿಡಿದು ಇಂದ್ರದೇವರ ಬಳಿಗೆ ಕರೆದುಕೊಂಡು ಬಂದನು.

ದುರ್ವಾರಣನು ದೇವಸಭೆಯನ್ನು ಪ್ರವೇಶಿಸಿ ಮೂವತ್ತಮೂರು ಕೋಟಿ ದೇವತೆಗಳಿಂದ ಸಹಿತರಾದ ಬಂಗಾರದ ಸಿಂಹಾಸನದಲ್ಲಿ ಕೂತಿದ್ದ ಚಾಮರದಿಂದ ಬೀಸಲ್ಪಡುತ್ತಿದ್ದ ಇಂದ್ರದೇವರನ್ನು ನೋಡಿದನು. ಗರ್ವದಿಂದ ನಗುತ್ತಾ ಇಂದ್ರದೇವರಿಗೆ ನಮಸ್ಕಾರವನ್ನು ಮಾಡಿದನು. ಇಂದ್ರದೇವರು ತೋರಿಸಿದ ಆಸನದಲ್ಲಿ ಕೂತುಕೊಂಡನು. ಆಗ ಇಂದ್ರದೇವರು 'ನೀನು ಯಾರು? ಯಾವ ಕಾರ್ಯಕ್ಕಾಗಿ ಬಂದಿರುವಿ?' ಎಂದು ಕೇಳಿದರು. ಅದಕ್ಕೆ ಅವನು 'ನಾನು ಜಾಲಂಧರನ ದೂತನು. ಜಾಲಂಧರನು ಸರ್ವಲೋಕಗಳಿಗೂ ರಾಜನು. ಅವನ ಆಜ್ಞೆಯನ್ನು ಕೇಳು. ನೀವೆಲ್ಲರೂ ತನ್ನ ದೊಡ್ಡ ತಂದೆಯಾದ ಕ್ಷೀರಸಮುದ್ರವನ್ನು ಮಂದರಪರ್ವತದಿಂದ ಯಾಕೆ ಮಥನ ಮಾಡಿದಿರಿ? ಎಂದು ಕೇಳುವನು. ಕ್ಷೀರಸಮುದ್ರಮಥನದಿಂದ ಸಿಕ್ಕಿದ ಚಂದ್ರ ಅಮೃತ ರತ್ನ ಇತ್ಯಾದಿಗಳನ್ನು ನನಗೆ ಕೊಡಬೇಕು. ಬೇಗನೇ ಸ್ವರ್ಗವನ್ನು ಬಿಟ್ಟು ಹೋಗಬೇಕು. ನಿನಗೆ ಬದುಕಿರುವ ಆಸೆಯಿದ್ದರೆ ಬೇಗನೇ ಕ್ಷಮಾ ಕೇಳಿಕೊ' ಎಂದು ಹೇಳಿದನು.

ಅದನ್ನು ಕೇಳಿ ಇಂದ್ರದೇವರು ನಗುವವರಾಗಿ 'ದೂತನೇ! ಸಮುದ್ರ ಮಥನ ಮಾಡಿದ್ದಕ್ಕೆ ಕಾರಣವನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಕೇಳು. ಪೂರ್ವದಲ್ಲಿ ನನ್ನ ಶತ್ರುವಾದ ಹಿಮವಂತನ ಮಗನಾದ ಮೈನಾಕ ಪರ್ವತವನ್ನು ತನ್ನ ಉದರದಲ್ಲಿ ಸಮುದ್ರನು ಧರಿಸಿರುವನು. ಚರಾಚರ ಪ್ರಪಂಚವನ್ನೇ ಸುಡುವ ವಡವಾಗ್ನಿಯನ್ನು ಉದರದಲ್ಲಿ ಧರಿಸಿರುವನು. ಧರ್ಮದ್ವೇಷಿಗಳಾದ ದಾನವರಿಗೆ ಆಶ್ರಯನಾಗಿರುವನು. ನಿತ್ಯವೂ ದಾನವರಿಗೆ ಮೊಸರು ತುಪ್ಪ ಹಾಲುಗಳನ್ನು ಕೊಡುತ್ತಿರುವನು. ಅದಕ್ಕಾಗಿಯೇ ನಾವು ಮಥನ ಮಾಡಿದೆವು. ನಮ್ಮವರಾದ ಅಗಸ್ತ್ಯರು ಸಮುದ್ರವನ್ನು ಪಾನ ಮಾಡಿದರು. ಆ ಜಾಲಂಧರನು ಸೈನ್ಯಸಹಿತನಾಗಿ ನಮ್ಮೊಡನೆ ಯುದ್ಧಕ್ಕೆ ಬಂದರೆ ಅವನೇ ಸಾಯುವನು' ಎಂದು ಹೇಳಿದರು. ದುರ್ವಾರಣನು ಜಾಲಂಧರನಿದ್ದಲ್ಲಿಗೆ ಬಂದು ಹಾಗೆಯೇ ಎಲ್ಲಾ ವಿಷಯವನ್ನೂ ತಿಳಿಸಿದನು.



# ದೇವದಾನವರ ಯುದ್ಧ [1]

ದೂತನ ಮುಖದಿಂದ ಇಂದ್ರದೇವರು ಹೇಳಿದ ಮಾತನ್ನು ಕೇಳಿ ಕೋಪಿಸಿಕೊಳ್ಳುವವನಾಗಿ ಸೈನ್ಯವನ್ನೆಲ್ಲಾ ಕೂಗಿದನು. ರಸಾತಲದಲ್ಲಿ ಭೂಮಿಯಲ್ಲಿ ಇದ್ದ ಎಲ್ಲಾ ದೈತ್ಯರೂ ಸೈನ್ಯಸಹಿತರಾಗಿ ಬಂದರು. ಯುದ್ಧಕ್ಕೆ ಪ್ರಯಾಣ ಮಾಡುವಾಗ ಸೈನ್ಯದ ಗರ್ಜನೆಯಿಂದ ಆಕಾಶವೆಲ್ಲವೂ ಸೀಳಿಹೋಗುವಂತೆ ಆಯಿತು. ನಾನಾವಿಧ ಪ್ರಾಣಿಗಳ ಮುಖದಂತೆ ಮುಖವುಳ್ಳ ಅಸುರರೆಲ್ಲರೂ ಯುದ್ಧಕ್ಕೆ ಹೋದರು. ನೂರುಯೋಜನ ವಿಸ್ತಾರವುಳ್ಳ ಕೋಟಿ ಹಂಸ ಪಕ್ಷಿಗಳಿಂದ ಕೂಡಿದ ನಾನಾವಸ್ತುಗಳಿಂದ ತುಂಬಿದ ವಿಮಾನದಲ್ಲಿ ಕೂತುಕೊಂಡು ಜಾಲಂಧರನು ಯುದ್ಧಕ್ಕೆ ಹೋದನು.

ಮೊದಲನೇ ದಿನದಲ್ಲಿ ಸೈನ್ಯಸಹಿತನಾಗಿ ಮಂದರಪರ್ವತಕ್ಕೆ ಬಂದನು. ಎರಡನೇ ದಿವಸದಲ್ಲಿ ಮೇರುಪರ್ವತಕ್ಕೆ ಬಂದು ಸೇರಿದನು. ಇಲಾವೃತ ಖಂಡದಲ್ಲಿ ಶಿಖರದಲ್ಲಿ ಆ ಮಹಾಸೈನ್ಯವು ಬಂದು ನಿಂತಿತು. ಪದಾತಿಗಳಿಂದ ಖಾಂಡವವನವೂ ನಂದನವನವೂ ಭಗ್ನವಾಯಿತು. ದಾನವರು ಮೇರುಪರ್ವತದ ಶಿಖರಗಳನ್ನು ಪುಡಿ ಮಾಡಿದರು. ಸಿದ್ಧಸ್ತ್ರೀಯರಿಂದ ಕೂಡಿಕೊಂಡು ದೈತ್ಯರು ವಿಹಾರ ಮಾಡಿದರು. ಮೇರುಪರ್ವತದ ಪೂರ್ವಭಾಗವನ್ನು ಆನೆಗಳು ಪುಡಿಮಾಡಿದವು ದಕ್ಷಿಣವನ್ನು ರಥಿಕರೂ ಪಶ್ಚಿಮಭಾಗವನ್ನು ಭಟರೂ ಪುಡಿಮಾಡಿದರು. ಇತರರು ಮಹೇಂದ್ರಶಿಖರವನ್ನು ಪುಡಿಮಾಡಿದರು. ಕುಬೇರ ಯಮ ವರುಣ ಇನ್ನು ಇತರ ದಿಕ್ಪಾಲಕರ ಪಟ್ಟಣಗಳನ್ನು ಪುಡಿಮಾಡಿದರು. ಆಗ ಅನೇಕ ದುರ್ನಿಮಿತ್ತಗಳು ಕಾಣಿಸಿಕೊಂಡವು. ಇಂದ್ರದೇವರ ಕೈಯಿಂದ ವಜ್ರಾಯುಧವು ಕೆಳಗೆ ಬಿದ್ದಿತು. ಆಗ ಇಂದ್ರದೇವರು ಬೃಹಸತ್ಯಾಚಾರ್ಯರೊಡನೆ 'ನಾವು ಏನು ಮಾಡಲಿ? ಯಾರನ್ನು ಮರೆಹೊಂದಲಿ? ಯುದ್ಧವು ಸಮೀಪಿಸಿದಂತೆ ಇದೆಯಲ್ಲಾ' ಎಂದು ಹೇಳಿದರು. ಅದಕ್ಕೆ ಬೃಹಸ್ಪತ್ಯಾಚಾರ್ಯರು ವೈಕುಂಠವಾಸಿಯಾದ ಪರಮಾತ್ಮನ ಪಾದಗಳನ್ನು ಮರೆಹೊಂದು ಎಂದು ಹೇಳಿದರು.

ಆಗ ಇಂದ್ರದೇವರು ವೈಕುಂಠಲೋಕಕ್ಕೆ ಹೋದರು. ದ್ವಾರಪಾಲಕನಾದ ವಿಜಯನು 'ಜಾಲಂಧರನ ಭಯದಿಂದ ದೇವತೆಗಳೆಲ್ಲರೂ ಬಂದಿರುವರು' ಎಂದು ತಿಳಿಸಿದನು. ಆಗ ಶ್ರೀದೇವಿಯರು ನನ್ನ ತಮ್ಮನಾದ ಅವನನ್ನು ನೀವು ಕೊಲ್ಲಬಾರದು

1. ಪ.ಪು. ಉ.ಖಂ. ಅ.6

ಎಂದು ಹೇಳಿದರು. ಅದನ್ನು ಕೇಳಿ ಪರಮಾತ್ಮನು ಬೇಗನೇ ಗರುಡಾರೂಢನಾದನು. ಹೊರಗೆ ಬಂದು ಜಾಲಂಧರನ ಭಯದಿಂದ ಕಾಂತಿಹೀನರಾದ ದೇವತೆಗಳನ್ನು ನೋಡಿದನು. ಇಂದ್ರದೇವರು ಪರಮಾತ್ಮನನ್ನು ಸ್ತೋತ್ರಮಾಡಿ ಸಮುದ್ರನ ಮಗ ನಾದ ಜಾಲಂಧರನಿಂದ ಸ್ವರ್ಗಲೋಕವು ನಷ್ಟವಾಯಿತು ಎಂದು ಹೇಳಿಕೊಂಡರು. ಇಂದ್ರದೇವರ ಮಾತನ್ನು ಕೇಳಿ ಭಗವಂತನು ದೇವತೆಗಳಿಗೆ ಅಭಯಪ್ರದಾನವನ್ನು ಮಾಡಿ ಅಸುರರನ್ನು ಜಯಿಸಲಿಕ್ಕೆ ಹೊರಟನು–ತರುವಾಯ ಇಂದ್ರದೇವರು ಮಾತಲಿಯು ತಂದ ರಥದಲ್ಲಿ ಕೂತುಕೊಂಡು ವಜ್ರಾಯುಧವನ್ನು ಹಿಡಿದುಕೊಂಡು ಪರಮಾತ್ಮನ ಮುಂಭಾಗದಲ್ಲಿ ಹೋದರು. ಎಡಬಲ ಪಾರ್ಶ್ವಗಳಲ್ಲಿ ಎಲ್ಲಾ ದೇವತೆಗಳೂ ಹೋದರು. ಬಲಪಾರ್ಶ್ವದಲ್ಲಿ ಅಗ್ನಿದೇವರು ಮೇಕೆಯ ಮೇಲೆ ಕೂತುಕೊಂಡು ಹೋದರು. ಇಂದ್ರದೇವರ ಮಗನಾದ ಜಯಂತನು ಐರಾವಣ ಎಂಬ ಆನೆಯನ್ನು ಏರಿಕೊಂಡು ಹೋದನು. ಚಂದ್ರದೇವರು ಉಚ್ಚೈಃ ಶ್ರವಾ ಎಂಬ ಕುದುರೆಯ ಮೇಲೆ ಕೂತುಕೊಂಡು ಹೋದರು. ದ್ವಾದಶ ಆದಿತ್ಯರೂ ಏಕಾದಶ ರುದ್ರರೂ ಗಂಧರ್ವರೂ ಚಾರಣರೂ ಯಕ್ಷರೂ ಪಿಶಾಚರೂ ಉರಗರೂ ಶಸ್ತ್ರಧಾರಿ ಗಳಾಗಿ ಯುದ್ಧಕ್ಕೆ ಹೋದರು. ದೈತ್ಯಸೈನ್ಯವನ್ನು ಸಂಹರಿಸುವುದಕ್ಕಾಗಿ ಸ್ವರ್ಗದಿಂದ ಕೆಳಗೆ ಇಳಿದು ಬಂದರು. ಮೇರುಪರ್ವತದ ಉತ್ತರಭಾಗವು ದೇವತಾಸೈನ್ಯದಿಂದ ತುಂಬಿಹೋಯಿತು.

ಮೇರುಪರ್ವತದ ದಕ್ಷಿಣಭಾಗದಲ್ಲಿ ಅಸುರಸೈನ್ಯವು ತುಂಬಿಹೋಯಿತು. ಮೇರು ಮಂದರಗಳ ಮಧ್ಯವು ಯುದ್ಧಭೂಮಿಯಾಯಿತು. ದೇವದಾನವರಿಗೆ ಅದ್ಭುತವಾದ ಯುದ್ಧವು ನಡೆಯಿತು. ದೇವತೆಗಳಿಂದ ಅನೇಕ ದೈತ್ಯರು ಬಿದ್ದರು. ದೈತ್ಯರಿಂದ ದೇವತೆಗಳೂ ಬಿದ್ದರು. ಭಯಂಕರವಾದ ಯುದ್ಧವು ನಡೆಯಿತು. ತರುವಾಯ ಪರಮಾತ್ಮನು ಕೋಪಿಸಿಕೊಂಡು ಕಾಲನೇಮಿಯೊಡನೆ ಯುದ್ಧ ಮಾಡ ಲಿಕ್ಕೆ ಹೋದನು. ಯಮದೇವರು ದುರ್ವಾರಣನೊಡನೆಯೂ ಚಂದ್ರ ಸೂರ್ಯರು ರಾಹುವಿನೊಡನೆಯೂ ಅಗ್ನಿದೇವರು ಕೇತುವಿನೊಡನೆಯೂ ಬೃಹಸ್ಪತ್ಯಾಚಾರ್ಯರು ಶುಕ್ರಾಚಾರ್ಯರೊಡನೆಯೂ ಅಶ್ವಿನಿದೇವತೆಗಳು ಅಂಗಾರಪರ್ಣಕ ಎಂಬ ಅಸುರ ನೊಡನೆಯೂ ಜಯಂತನು ಸಂಹ್ಲಾದನೊಡನೆಯೂ ಕುಬೇರನು ನಿರ್ಹಾದ ನೊಡನೆಯೂ ನಿಶುಂಭನು ರುದ್ರರೊಡನೆಯೂ ಶುಂಭನು ವಸುಗಳೊಡನೆಯೂ ವಿಶ್ವೇದೇವತೆಗಳು ಜೃಂಭನೊಡನೆಯೂ ವಾಯುಗಳು ವಜ್ರರೋಮನೊಡೆಯೂ ಮೃತ್ಯುವು ಮಯಾಸುರನೊಡನೆಯೂ ಇಂದ್ರದೇವರು ನಮುಚಿಯೊಡನೆಯೂ

ಹೀಗೆಯೇ ಇತರ ದೈತ್ಯರು ಇತರ ದೇವತೆಗಳೊಡನೆಯೂ ಯುದ್ಧವನ್ನು ಮಾಡಿದರು.



## ಬಲ ಎಂಬ ದೈತ್ಯನ ಸಂಹಾರವು [1]

ಈರೀತಿಯಾಗಿ ದ್ವಂದ್ವ ಯುದ್ಧವು ನಡೆಯುತ್ತಿರವು ಪರಮಾತ್ಮನು ಕಾಲನೇಮಿಯನ್ನು ಗದೆಯಿಂದ ಬಡೆದನು. ಆದರಿಂದ ಅವನು ಮೂರ್ಛಿತನಾಗಿ ಆಮೇಲೆ ಮೂರ್ಛೆಯಿಂದ ಎದ್ದು ಭಗವಂತನನ್ನು ಬಾಣಗಳಿಂದ ಬಡೆದನು. ತರುವಾಯ ಪರಮಾತ್ಮನು ಕೋಪದಿಂದ ಬಡೆಯಲು ಅವನು ಸತ್ತುಬಿದ್ದನು. ಚಂದ್ರನು ರಾಹುವನ್ನು ಖಡ್ಗದಿಂದ ಬಡೆದನು. ರಾಹುವು ಚಂದ್ರನನ್ನು ಬಿಟ್ಟು ಸೂರ್ಯನ ಬಳಿಗೆ ಓಡಿದನು. ಸೂರ್ಯನನ್ನು ಯುದ್ಧದಲ್ಲಿ ಜಯಿಸಿ ಪುನಃ ಚಂದ್ರನಿದ್ದಲ್ಲಿಗೆ ಬಂದನು. ಆಗ ಚಂದ್ರನು ಪುನಃ ಅವನನ್ನು ಖಡ್ಗದಿಂದ ಬಡೆದನು. ರಾಹುವಿನ ದೇಹವು ದಾರ್ಢ್ಯದಿಂದ ಚಂದ್ರನಖಡ್ಗವೇ ಪುಡಿಪುಡಿಯಾಯಿತು. ರಾಹುವು ದೃಢವಾದ ಮುಷ್ಟಿಯಿಂದ ಚಂದ್ರನಿಗೆ ಬಡಿದನು. ಆಗ ಅವನು ಮೂರ್ಛಿತನಾಗಲು ರಾಹುವು ಅವನನ್ನು ನುಂಗಿ ಪುನಃ ವಾಂತಿ ಮಾಡಿದನು. ತನ್ನ ಮೃಗಚಿಹ್ನೆಯನ್ನು ಅವನ ಎದೆಯಲ್ಲಿ ಇಟ್ಟು ಬಿಟ್ಟುಬಿಟ್ಟನು. ತರುವಾಯ ರಾಹುವು ಉಚ್ಚೈಃಶ್ರವ ಎಂಬ ಕುದುರೆಯನ್ನು ಹಿಡಿದುಕೊಂಡು ಹೋಗಿ ಭಕ್ತಿಯಿಂದ ಜಾಲಂಧರನಿಗೆ ಒಪ್ಪಿಸಿದನು. ಹೀಗೆಯೇ ದೇವಾಸುರರಿಗೆ ಭಯಂಕರವಾದ ಯುದ್ಧವು ನಡೆಯಿತು.

ಇಂದ್ರದೇವರು ನಮುಚಿಯನ್ನು ಪಾಶಗಳಿಂದ ಕಟ್ಟಿ ರಸಾತಲದಲ್ಲಿ ಇಟ್ಟರು. ತರುವಾಯ ಇಂದ್ರದೇವರೊಡನೆ ಯುದ್ಧಮಾಡಲಿಕ್ಕೆ ಬಲ ಎಂಬ ಅಸುರನು ಬಂದನು. ಇಂದ್ರದೇವರಿಗೂ ಬಲನಿಗೂ ಭಯಂಕರವಾದ ಯುದ್ಧವು ನಡೆಯಿತು. ಬಲನ ದೇಹಕಾಂತಿಯಿಂದ ಹತ್ತು ದಿಕ್ಕುಗಳೂ ಪ್ರಕಾಶಿಸಿದವು. ಇಂದ್ರದೇವರು ಅವನ ದೇಹದ ಮೇಲೆ ಹಾಕಿದ ಎಲ್ಲಾ ಆಯುಧಗಳೂ ಪುಡಿಪುಡಿಯಾದವು. ಅವನು ಇಂದ್ರದೇವರ ಎದೆಗೆ ಗದೆಯಿಂದ ಬಡೆದನು. ಇಂದ್ರದೇವರು ಭಯಂಕರವಾಗಿ ಗರ್ಜನೆ ಮಾಡಿದರು. ಅದನ್ನು ಕೇಳಿ ಬಲನು ನಗುವವನಾದನು. ಆಗ ಇಂದ್ರದೇವರು ಅವನ ಅಂಗವನ್ನು ಹೊಂದಬೇಕೆಂಬ ಆಸೆಯಿಂದ ಯುದ್ಧ

1. ಪ.ಪು. ಉ.ಖಂ.7

ಮಾಡಲಿಲ್ಲ. ಅವನನ್ನು ಬಹಳವಾಗಿ ಸ್ತೋತ್ರ ಮಾಡಿದರು. ಆಗ ಅವನು ಸಂತುಷ್ಟನಾಗಿ ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದನು. ಆಗ ಇಂದ್ರದೇವರು ಸಂತುಷ್ಟನಾಗಿರುವ ಪಕ್ಷದಲ್ಲಿ ನಿನ್ನ ದೇಹವನ್ನೇ ನನಗೆ ಕೊಡಬೇಕು ಎಂದು ಹೇಳಿದರು. ಆಗ ಬಲನು ಶಸ್ತ್ರದಿಂದ ಬಡೆದು ತೆಗೆದುಕೊ ಎಂದು ಹೇಳಿದನು. ಇಂದ್ರದೇವರು ಮುದ್ಗರದಿಂದ ಅವನ ದೇಹವನ್ನು ಬಡೆದರು. ಆಗ ದೇಹವು ಸೀಳಿಹೋಲಿಲ್ಲ. ಏನು ಮಾಡಲಿ ಎಂದು ಯೋಚಿಸಿದರು. ಆಗ ಮಾತಲಿಯು ಜ್ಞಾಪಕಪಡಿಸಲು ವಜ್ರಾಯುಧದಿಂದ ಬಲನ ದೇಹವನ್ನು ಸೀಳಿದರು. ಬಲನ ದೇಹದ ಒಂದು ಭಾಗವು ಮೇರುಪರ್ವತದಲ್ಲಿ ಬಿದ್ದಿತು. ಮತ್ತೊಂದು ಭಾಗವು ಹಿಮವತ್ಪರ್ವತದಲ್ಲಿಯೂ ಮೂರನೇ ಭಾಗವು ಗೋನಗರದಲ್ಲಿಯೂ ನಾಲ್ಕನೇ ಭಾಗವು ದೇವನದಿಯಲ್ಲಿಯೂ ಐದನೇ ಭಾಗವು ಮಂದರಪರ್ವತ ದಲ್ಲಿಯೂ ಬಿದ್ದವು.

ಅವನ ದೇಹದ ಭಾಗಗಳೆಲ್ಲವೂ ರತ್ನಗಳಿಗೆ ಕಾರಣಗಳಾದವು. ವಜ್ರಪ್ರಹಾರ ದಿಂದ ಎಲುಬಿನ ಚೂರುಗಳೆಲ್ಲವೂ ಸಿಡಿದುಹೋಗಿ ಅವುಗಳೆಲ್ಲವೂ ಆರು ಕೋಣವುಳ್ಳ ಮಣಿಗಳಾದವು. ಕಣ್ಣುಗಳಿಂದ ಇಂದ್ರನೀಲ ಮಣಿಗಳಾದವು. ಕಿವಿಗಳಿಂದ ಮಾಣಿಕ್ಯಮಣಿಗಳಾದವು– ರಕ್ತದಿಂದ ಪದ್ಮರಾಗ ಮಣಿಗಳೂ (ಮೇದಸ್ಸಿನಿಂದ ಮರಕತಮಣಿಗಳೂ) ಆದವು. ನಾಲಿಗೆಯಿಂದ ಹವಳಗೂ ಹಲ್ಲುಗಳಿಂದ ಮುತ್ತುಗಳೂ ಆದವು. ಮಜ್ಜಾದಿಂದ ಮರಕತರತ್ನವಾಯಿತು. ಹಾಗೆಯೇ ಗರುಡ್ಗಾರ ಎಂಬ ಮಣಿಯು ಉಂಟಾಯಿತು. ಅದನ್ನು ಬಂಗಾರದಿಂದ ಕಟ್ಟಿ ಯಾವ ಪುರುಷನು ಧರಿಸುವನೋ ಅವನಿಗೆ ಸರ್ಪಗ್ರಹ ದಾರಿದ್ರ್ಯ ಭಯವುಂಟಾಗುವುದಿಲ್ಲ. ಅವನ ಮಲದಿಂದ ಕಂಚು ಉಂಟಾಯಿತು. ವೀರ್ಯ ದಿಂದ ಬೆಳ್ಳಿಯೂ ಮೂತ್ರದಿಂದ ತಾಮ್ರವೂ ಮೈಯನ್ನು ಉಜ್ಜದ್ದರಿಂದ ಹಿತ್ತಾಳೆಯೂ ಧ್ವನಿಯಿಂದ ವೈಢೂರ್ಯವೂ ಉಗುರುಗಳಿಂದ ಬಂಗಾರವೂ ರಕ್ತದಿಂದ ರಸಗಳೂ ಮೇದಸ್ಸಿನಿಂದ ಸ್ಫಟಿಕವೂ ಮಾಂಸದಿಂದ ಹವಳವೂ ಉಂಟಾದವು. ಪುಣ್ಯ ಮಾಡಿದವರು ಈ ರತ್ನಗಳನ್ನು ಅನುಭವಿಸುವರು.

ಈ ಸಮಯದಲ್ಲಿ ಇಂದ್ರದೇವರಿಂದ ಬಲನು ಮೃತನಾದದ್ದನ್ನು ತಿಳಿದು ಅವನ ಹೆಂಡತಿಯಾದ ಪ್ರಭಾವತಿಯು ತಲೆಯನ್ನು ಬಿಚ್ಚಿಕೊಂಡು ಕಣ್ಣೀರನ್ನು ಸುರಿಸುತ್ತಾ ಬಂದು ನಾನಾವಿಧವಾಗಿ ಅಳುವವಳಾದಳು. ಅದನ್ನು ನೋಡಿ ಜಾಲಂಧರನು ಶುಕ್ರಾಚಾರ್ಯರೊಡನೆ ಬಲನನ್ನು ಬದುಕಿಸಬೇಕೆಂದು ಹೇಳಿದನು. ಅದಕ್ಕೆ ಅವರು

'ಇವನು ಇಚ್ಛೆಯಿಂದಲೇ ಮರಣವನ್ನು ಹೊಂದಿದ ಕಾರಣ ಇವನನ್ನು ಹೇಗೆ ಬದುಕಿಸಲಿ? ಆದರೂ ಮಂತ್ರಸಾಮರ್ಥ್ಯದಿಂದ ಮಾತಾಡುವಂತೆ ಮಾಡುವೆನು' ಎಂದು ಹೇಳಿದರು. ಒಂದು ಕ್ಷಣಧ್ಯಾನಮಾಡಿದರು. ತರುವಾಯ ವಾದ್ಯದ ಮುಖದಿಂದ ಸ್ವರವು ಕೇಳಿಸುವಂತೆ ಮೃತನಾದ ಬಲನ ಮುಖದಿಂದ 'ಪ್ರಭಾವತಿ! ನಿನ್ನ ದೇಹವನ್ನು ನನ್ನ ದೇಹದಲ್ಲಿ ಲಯಗೊಳಿಸು' ಎಂಬ ಮಾತು ಹೊರಟಿತು. ಆ ಮಾತನ್ನು ಕೇಳಿ ಪ್ರಭಾವತಿಯು ನದಿಯಾಗಿ ಬಲನ ಅಂಗದಲ್ಲಿ ಪ್ರವೇಶಿಸಿದಳು. ಆ ನದಿಯು ಮೇರುವಿನ ಪೂರ್ವದಲ್ಲಿ ಪ್ರವಹಿಸುತ್ತಿರುವುದು. ಆದರ ನೀರಿನಿಂದ ರತ್ನಗಳಿಗೆ ಉತ್ತಮಕಾಂತಿಯುಂಟಾಗಿರುವುದು.



## ಭಗವಂತನಿಗೂ ಜಾಲಂಧರನಿಗೂ ಯುದ್ಧ [1]

ತರುವಾಯ ಜಾಲಂಧರನು 'ಅಧಮನೇ! ಕಪಟದಿಂದ ಬಲವನ್ನು ಸಂಹರಿಸಿ ಎಲ್ಲಿಗೆ ಓಡುವಿ?' ಎಂದು ಹೇಳುತ್ತಾ ಸಾರಥಿ ಕುದುರೆ ರಥ ಧ್ವಜಗಳಿಂದ ಸಹಿತರಾದ ಇಂದ್ರದೇವರನ್ನು ಬಾಣಗಳಿಂದ ಮರೆಮಾಡಿದನು. ಇಂದ್ರದೇವರು ಗಾಯವುಳ್ಳವರಾಗಿ ರಥದಲ್ಲಿ ಮೂರ್ಛಿತರಾಗಿ ಬಿದ್ದರು. ಇಂದ್ರದೇವರು ಬಿದ್ದದ್ದನ್ನು ನೋಡಿ ಜಾಲಂಧರನು ಗರ್ಜನೆ ಮಾಡಿದನು. ತರುವಾಯ ಇಂದ್ರದೇವರು ಮೂರ್ಛೆಯಿಂದ ಎದ್ದವರಾಗಿ ಜಾಲಂಧರನಿಗ ವಜ್ರಾಯುಧವನ್ನು ಬಿಟ್ಟರು. ಆಗ ಜಾಲಂಧರನು ಆ ವಜ್ರಾಯುಧವನ್ನು ಕಂಕುಳಲ್ಲಿ ಇಟ್ಟುಕೊಂಡು ರಥದಿಂದ ಕೆಳಗೆ ಇಳಿದು ಇಂದ್ರದೇವರನ್ನು ಹಿಡಿಯಲಿಕ್ಕೆ ಓಡಿದನು. ಆಗ ಇಂದ್ರದೇವರು ತನ್ನ ರಥವನ್ನು ಬಿಟ್ಟು ಭಗವಂತನನ್ನು ಸ್ಮರಿಸಿಕೊಂಡು ಓಡಿಹೋದರು. ಆಗ ಜಾಲಂಧರನು ಇಂದ್ರದೇವರ ರಥದಲ್ಲಿ ಕೂತುಕೊಂಡು ಮಾತಲಿಯನ್ನೇ ಸಾರಥಿಯನ್ನಾಗಿ ಮಾಡಿಕೊಂಡು ತನ್ನ ಮನೋಭೀಷ್ಟವನ್ನು ಹೊಂದಿದವನಾಗಿ ಸೈನ್ಯದಲ್ಲಿ ಸಂಚರಿಸುವವನಾದನು.

ತರುವಾಯ ಪರಮಾತ್ಮನು ಕೋಪದಿಂದ ನಂದಕ ಎಂಬ ತನ್ನ ಖಡ್ಗದಿಂದ ಗರುಡದೇವರ ಮೇಲೆ ಕೂತುಕೊಂಡೇ ದೈತ್ಯಸೈನ್ಯವನ್ನು ಸಂಹರಿಸಿದನು. ರಥಗಳನ್ನು ಆನೆಗಳನ್ನೂ ಕುದುರೆಗಳನ್ನು ಪದಾತಿಗಳನ್ನು ಸಂಹರಿಸುತ್ತಾ ಸಂಚರಿಸಿದನು.

---

1. ಪ.ಪು.ಉ.ಖಂ. ಅ-8

ಪರಮಾತ್ಮನಿಂದ ಸಂಹರಿಸಲ್ಪಟ್ಟ ಸೈನ್ಯವನ್ನು ನೋಡಿ ಜಾಲಂಧರನ ಆಜ್ಞೆಯಿಂದ ದೈತ್ಯರು ಪರಮಾತ್ಮನ ಸುತ್ತಲೂ ನಿಂತು ಯುದ್ಧ ಮಾಡಿದರು. ಅವರೆಲ್ಲರನ್ನೂ ಪರಮಾತ್ಮನು ಬೀಳಿಸಿದನು. ತರುವಾಯ ಶೈಲರೋಮ ಎಂಬ ದೈತ್ಯನು ಯುದ್ಧಕ್ಕೆ ಬಂದು ಭಯಂಕರ ಯುದ್ಧವನ್ನು ಮಾಡಿದನು. ಅವನ ಮೈಗೆ ಬಾಣಗಳನ್ನು ಬಿಟ್ಟಾಗ ಬಾಣಗಳೇ ಸೀಳಿಹೋದವು. ಕೊನೆಗೆ ಪರಮಾತ್ಮನು ಖಡ್ಗದಿಂದ ಅವನ ತಲೆಯನ್ನು ಕತ್ತರಿಸಿದನು. ತಲೆಯು ಮೇಲೆ ಹಾರಿಬಂದು ಗರುಡದೇವರ ಮೇಲೆ ಬಂದು ಬಿದ್ದಿತು. ಅದನ್ನು ನೋಡಿ ಪರಮಾತ್ಮನು ಆಶ್ಚರ್ಯಪಟ್ಟಂತೆ ತೋರಿಸಿದನು. ಗರುಡದೇವರು ಕೆಳಗೆ ಬಿದ್ದರು. ಆಮೇಲೆ ಆ ತಲೆಯು ಪುನಃ ತನ್ನ ಮುಂಡದಲ್ಲಿಯೇ ಹಾರಿ ಸೇರಿಕೊಂಡಿತು. ಪುನಃ ಶೈಲರೋಮನು ಬಂದು ಪರಮಾತ್ಮನನ್ನು ಗರುಡದೇವರ ಮೇಲಿನಿಂದ ಎತ್ತಿಹಾಕಿದನು. ಆಗ ಭಗವಂತನು ಅವನನ್ನು ಅಂಗೈಯಿಂದ ಬಡೆದನು. ಅದರಿಂದ ಅವನು ಸತ್ತುಬಿದ್ದನು.

ತರುವಾಯ ಜಾಲಂಧರನು ಸಾರಥಿಯಾದ ಖಡ್ಗರೋಮನೊಡನೆ ತನ್ನ ರಥವನ್ನು ಭಗವಂತನಿದ್ದಲ್ಲಿಗೆ ಓಡಿಸಲಿಕ್ಕೆ ಹೇಳಿದನು. ಜಾಲಂಧರನು ಪರಮಾತ್ಮ ನನ್ನು ನೋಡಿ 'ವಿಷ್ಣುವೇ! ಸಂದೇಹವಿಲ್ಲದೆ ನನ್ನನ್ನು ನೀನು ಕೊಲ್ಲು. ನಿನ್ನನ್ನು ನಾನು ಕೊಲ್ಲುವುದಿಲ್ಲ' ಎಂದು ಹೇಳಿದನು. ಆಗ ಪರಮಾತ್ಮನು ಕ್ರೋಧದಿಂದ ಕೆಂಪಾದ ಕಣ್ಣು ಉಳ್ಳವನಾಗಿ ಅವನ ಮೇಲೆ ಬಾಣಗಳನ್ನು ತುಂಬಿಸಿದನು. ಅವನೂ ಪರಮಾತ್ಮನ ಮೇಲೆ ಬಾಣಗಳನ್ನು ಬಿಟ್ಟನು. ಅವನ ಬಾಣಗಳಿಂದ ಗರುಡದೇವರು ಮೂರ್ಛಿತರಾಗಿ ಬಿದ್ದರು. ಆಗ ಪರಮಾತ್ಮನು ವೈಕುಂಠದಲ್ಲಿ ಇದ್ದ ರಥವನ್ನು ಸ್ಮರಿಸಿದರು. ಆಗ ಸಾರಥಿಯಿಂದ ರಹಿತವಾಗಿ ಕುದುರೆಗಳಿಂದ ಕೂಡಿದ ರಥವು ಬಂದು ಸೇರಿತು. ಪರಮಾತ್ಮನು ಗರುಡದೇವರನ್ನು ಎಬ್ಬಿಸಿ ಸಾರಥ್ಯವನ್ನು ಮಾಡುವಂತೆ ಹೇಳಿದರು. ತರುವಾಯ ಪರಮಾತ್ಮನು ಬಹುರಾಕ್ಷಸಸೈನ್ಯವನ್ನು ಸಂಹರಿಸಿದನು. ಅಗ್ನಿಯೂ ಇಂದ್ರದೇವರಿಂದ ಆಜ್ಞಪ್ತನಾಗಿ ಕೋಣವಾಯುವಿನಿಂದ ಸಹಿತನಾಗಿ ಬಹುರಾಕ್ಷಸಸೈನ್ಯವನ್ನು ಸುಟ್ಟನು. ಜಾಲಂಧರನು ತನ್ನ ಸೈನ್ಯವು ಸ್ವಲ್ಪ ಮಾತ್ರ ಉಳಿದಿರುವುದನ್ನು ನೋಡಿ ಯೋಚನೆ ಮಾಡಿದನು.

ತರುವಾಯ ಶುಕ್ರಾಚಾರ್ಯರೊಡನೆ 'ಮೃತಸಂಜೀವನ ವಿದ್ಯೆಯು ತಿಳಿದವರಾದ ನೀವು ಇರುತ್ತಿರಲು ನನ್ನ ಮಹತ್ತಾದ ಸೈನ್ಯವು ನಾಶವನ್ನು ಹೊಂದಿತು. ಶರಣಾಗತರನ್ನು ರಕ್ಷಿಸದೆ ಇರುವ ನಿಮ್ಮ ವಿದ್ಯೆಯಿಂದಲೂ ಬ್ರಹ್ಮತೇಜಸ್ಸಿನಿಂದಲೂ ಏನು ಉಪಯೋಗವಿದೆ?' ಎಂದು ಹೇಳಿದನು. ಆಗ ಶುಕ್ರಾಚಾರ್ಯರು 'ರಾಜನೇ!

ಬ್ರಾಹ್ಮಣನಾದ ನನ್ನ ಬಲವನ್ನು ನೋಡು' ಎಂದು ಹೇಳಿ ಆಚಮನೆ ಮಾಡಿ ಮಂತ್ರವನ್ನು ಜಪಿಸಿ ಹುಂಕಾರದಿಂದಲೇ ಮೃತರಾದ ದೈತ್ಯರನ್ನೆಲ್ಲರನ್ನು ಎಬ್ಬಿಸಿದರು. ದೇವತೆಗಳು ದೈತ್ಯರಿಂದ ಬಾಣಗಳಿಂದ ಬಡಿಯಲ್ಪಟ್ಟವರಾಗಿ ಮೈಯೆಲ್ಲಾ ಗಾಯವಾಗಿ ಬಲಹೀನರಾಗಿ ಬಿದ್ದುಬಿಟ್ಟರು. ಮರಣಹೀನರಾದ ಕಾರಣ ಪ್ರಾಣವು ಮಾತ್ರ ಹೋಗಲಿಲ್ಲ. ಅದನ್ನು ನೋಡಿ ಭಗವಂತನು 'ದೇವತಾಗುರುವೇ! ನಿನಗೆ ಧಿಕ್ಕಾರವಿರಲಿ. ನೀನು ದೇವತೆಗಳನ್ನು ಎಬ್ಬಿಸುವುದಿಲ್ಲವಲ್ಲಾ' ಎಂದು ಹೇಳಿದನು. ಅದನ್ನು ಕೇಳಿ ಬೃಹಸ್ಪತ್ಯಾಚಾರ್ಯರು ಬೇಗನೇ 'ಸ್ವಾಮಿನ್! ಔಷಧಿಗಳಿಂದ ದೇವತೆಗಳನ್ನು ಬದುಕಿಸುತ್ತೇನೆ' ಎಂದು ಹೇಳಿ ಕ್ಷೀರಸಮುದ್ರದಲ್ಲಿ ಇದ್ದ ದ್ರೋಣ ಪರ್ವತಕ್ಕೆ ಹೋಗಿ ಅಲ್ಲಿಂದ ಔಷಧಿಗಳನ್ನು ತಂದು ದೇವತೆಗಳನ್ನೆಲ್ಲಾ ಎಬ್ಬಿಸಿದರು. ದೇವತೆಗಳು ಪುನಃ ದೈತ್ಯರನ್ನು ಹಿಂಸಿಸಿದರು. ಅದನ್ನು ನೋಡಿ ಜಾಲಂಧರನು ಶುಕ್ರಾಚಾರ್ಯರೊಡನೆ 'ನಿಮ್ಮ ವಿದ್ಯೆಯಿಲ್ಲದೆ ಈದೇವತೆಗಳು ಹೇಗೆ ಬದುಕಿ ಬಂದರು?' ಎಂದು ಕೇಳಿದನು. ಅದಕ್ಕೆ ಶುಕ್ರಾಚಾರ್ಯರು 'ಕ್ಷೀರಸಮುದ್ರದಲ್ಲಿ ದ್ರೋಣಪರ್ವತವಿದೆ. ಅದರಲ್ಲಿ ಸತ್ತವರನ್ನು ಬದುಕಿಸುವ ಔಷಧಿಗಳಿವೆ. ಬೃಹಸ್ಪತ್ಯಾಚಾರ್ಯರು ಆ ಔಷಧಿಗಳನ್ನು ತಂದು ಅವುಗಳಿಂದ ಸತ್ತವರನ್ನು ಬದುಕಿಸುತ್ತಾರೆ' ಎಂದರು.

ಅದನ್ನು ಕೇಳಿ ಜಾಲಂಧರನು ನಿಶುಂಭನಲ್ಲಿ ಯುದ್ಧ ಭಾಗವನ್ನು ಒಪ್ಪಿಸಿ ಕ್ಷೀರಸಮುದ್ರಕ್ಕೆ ಹೋದನು. ಅಲ್ಲಿ ಕ್ಷೀರಸಮುದ್ರಾಭಿಮಾನಿಯ ಕ್ರೀಡಾಸ್ಥಾನವನ್ನು ನೋಡಿದನು. ಅಲ್ಲಿ ಸುಖಕರವಾದ ಸ್ಥಾನದಲ್ಲಿ ವಿಲಾಸಿನಿಯರಿಂದ ಕೂಡಿಕೊಂಡು ವಿಹಾರ ಮಾಡುತ್ತಿದ್ದ ಕ್ಷೀರಸಮುದ್ರಾಭಿಮಾನಿಯನ್ನು ನೋಡಿ ನಮಸ್ಕರಿಸಿ 'ತಾತ! ದ್ರೋಣಪರ್ವತದಲ್ಲಿರುವ ಔಷಧಿಗಳ ವ್ಯಾಜದಿಂದ ನಮ್ಮನ್ನೇಕೆ ಹಿಂಸಿರುವಿ? ಆ ಪರ್ವತವನ್ನು ಅಲೆಗಳಿಂದ ಮುಳುಗಿಸಿಬಿಡು' ಎಂದು ಹೇಳಿದನು. ಅದಕ್ಕೆ ಕ್ಷೀರಸಮುದ್ರಾಭಿಮಾನಿಯು 'ಶರಣಾಗತನಾದ ಅವನನ್ನು ನಾನು ಹೇಗೆ ಮುಳುಗಿಸಲಿ? ಶರಣಾಗತರನ್ನು ಪರಿತ್ಯಜಿಸುವವರನ್ನು ಮುನಿಗಳು ಪ್ರಶಂಸಿಸಲಾರರು' ಎಂದು ಹೇಳಿದನು.

ಅದನ್ನು ಕೇಳಿ ಜಾಲಂಧರನು ಕೋಪಿಸಿಕೊಳ್ಳುವವನಾಗಿ ದ್ರೋಣಪರ್ವತವನ್ನು ಕೈಯಿಂದ ಬಡಿದನು. ಆಗ ದ್ರೋಣಗಿರಿಯು ಜಾಲಂಧರನಿಂದ ಅತ್ಯಂತ ಭಯವುಳ್ಳದ್ದಾಗಿ ಮೂರ್ತಿಮತ್ತಾಗಿ ಬಂದು 'ನಾನು ನಿನ್ನ ದಾಸನಾಗಿದ್ದೇನೆ. ಶರಣಾಗತನಾದ ನನ್ನನ್ನು ರಕ್ಷಣೆ ಮಾಡು. ನಾನು ನಿನ್ನ ಆಜ್ಞೆಯಿಂದ ರಸಾತಲಕ್ಕೆ

ಹೋಗುತ್ತೇನೆ. ನೀನು ರಾಜ್ಯಭಾರ ಮಾಡುವವರೆಗೆ ಅಲ್ಲಿಯೇ ಇರುತ್ತೇನೆ' ಎಂದು ಹೇಳಿ ಔಷಧಿಗಳೆಲ್ಲವೂ ಕೂಗುತ್ತಿರಲು ಸಿದ್ಧರೆಲ್ಲರೂ ಅಳುತ್ತಿರಲು ಜಾಲಂಧರನು ನೋಡುವಂತೆ ರಸಾತಲಕ್ಕೆ ಹೊರಟುಹೋಯಿತು.

ತರುವಾಯ ಜಾಲಂಧರನು ಯುದ್ಧರಂಗಕ್ಕೆ ಬಂದು ರಥದಲ್ಲಿ ಕೂತುಕೊಂಡು ರಥದಲ್ಲಿ ಕೂತಿರುವ ಪರಮಾತ್ಮನ ಬಳಿಗೆ ಬರುವವನಾಗಿ, ಅವನನ್ನು ನೋಡಿ ಗಟ್ಟಿಯಾಗಿ ನಗುವವನಾದನು. 'ನಾನು ಶತ್ರುಗಳನ್ನೆಲ್ಲಾ ಸಂಹರಿಸುವವರೆಗೆ ರಥದಲ್ಲಿಯೇ ಕೂತಿರು' ಎಂದು ಹೇಳುವವನಾಗಿ ಬಾಣಗಳಿಂದ ದೇವತೆಗಳನ್ನೆಲ್ಲಾ ಬಡಿದುಹಾಕಿದನು. ಆಗ ದೇವತೆಗಳು ಬೃಹಸ್ಪತ್ಯಾಚಾರ್ಯರೊಡನೆ ರಕ್ಷಿಸಬೇಕೆಂದು ಪ್ರಾರ್ಥಿಸಲು ಬೃಹಸ್ಪತ್ಯಾಚಾರ್ಯರು ಬೇಗನೆ ಕ್ಷೀರಸಮುದ್ರಕ್ಕೆ ಹೋದರು. ಅಲ್ಲಿ ದ್ರೋಣಪರ್ವತವನ್ನು ಕಾಣದೆ ಯೋಚನೆ ಮಾಡಿದರು. ತರುವಾಯ ಬೇಗನೇ ದೇವತೆಗಳಿದ್ದಲ್ಲೆ ಬಂದು 'ದ್ರೋಣಪರ್ವತವು ಮರೆಯಾಗಿರುವುದು. ಆದುದರಿಂದ ನೀವು ಬೇಗನೇ ಓಡಿಹೋಗಿರಿ. ಓಡಿಹೋಗಿರಿ' ಎಂದು ಹೇಳಿದರು. ಈರೀತಿಯಾಗಿ ಬೃಹಸ್ಪತ್ಯಾಚಾರ್ಯರು ಹೇಳುತ್ತಿರಲು ಜಾಲಂಧರನು ದೇವತೆಗಳನ್ನು ಅಪಹಾಸ ಮಾಡುತ್ತಾ ಬೃಹಸ್ಪತ್ಯಾಚಾರ್ಯರ ಯಜ್ಞೋಪವೀತವನ್ನು ಕತ್ತರಿಸಿದನು. ಬಾಣಗಳಿಂದ ತಲೆಕೂದಲುಗಳನ್ನು ಕತ್ತರಿಸಿದನು. ಬೃಹಸ್ಪತ್ಯಾಚಾರ್ಯರು ಪ್ರಾಣಭಯದಿಂದ ಬೇಗನೇ ಓಡಿಹೋದರು. ದೇವತೆಗಳೂ ಓಡಿಹೋದರು.

ತರುವಾಯ ಪರಮಾತ್ಮನಿದ್ದಲ್ಲಿಗೆ ಜಾಲಂಧರನು ಓಡಿ ಬಂದನು. ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಜಾಲಂಧರನು ಗರುಡದೇವರನ್ನು ಪರಮಾತ್ಮನನ್ನು ಹಿಡಿದು ತಿರುಗಿಸಿ ಆಕಾಶದಲ್ಲಿ ದೂರಕ್ಕೆ ಬಿಸಾಡಿದವನು. ಗರುಡದೇವರು ಕ್ರೌಂಚದ್ವೀಪಕ್ಕೆ ಹೋಗಿ ಅಲ್ಲಿಯೇ ಬಹುಹೊತ್ತು ವಿಶ್ರಾಂತಿ ಪಡೆದರು. ಪರಮಾತ್ಮನು ಜಾಲಂಧರನೊಡನೆ ಪುನಃ ಯುದ್ಧಕ್ಕೆ ಬಂದನು. ಕೊನೆಗೆ ಪರಮಾತ್ಮನು ದುಷ್ಟರನ್ನು ಮೋಹಗೊಳಿಸುವವನಾಗಿ ಅಚ್ಛೇದ್ಯಾಭೇದ್ಯದೇಹವುಳ್ಳ ತಾನು ಮೂರ್ಛಾಬಂದಂತೆ ನಟಿಸುತ್ತಾ ಭೂಮಿಯ ಮೇಲೆ ಬಿದ್ದುಕೊಂಡನು. ಜಾಲಂಧರನು ಭೂಮಿಯಲ್ಲಿ ಬಿದ್ದಿದ್ದ ಪರಮಾತ್ಮನನ್ನು ಎತ್ತಿಕೊಂಡು ತನ್ನ ರಥಕ್ಕೆ ಹೋದನು. ಆಗ ಪರಮಾತ್ಮನ ಅಭಿಪ್ರಾಯದಂತೆ ನಡೆಯುವ ರಮಾದೇವಿಯರೂ ದುಷ್ಟಜನರಿಗೆ ಮೋಹವನ್ನು ಉಂಟುಮಾಡುವುದಕ್ಕಾಗಿಯೇ ಅಳುವಂತೆ ನಟಿಸುತ್ತಾ ಬಂದು 'ತಮ್ಮ! ಭಗವಂತನನ್ನು ಹಿಡಿದುಕೊಂಡು ಹೋಗಬೇಡ. ಅಕ್ಕನಿಗೆ ನೀನು ವೈಧವ್ಯವನ್ನು ಉಂಟುಮಾಡುವುದು ಸರಿಯಲ್ಲ' ಎಂದು ಹೇಳಿದರು. ಅದನ್ನು ಕೇಳಿ

ಜಾಲಂಧರನು ಭಗವಂತನನ್ನು ಬಿಟ್ಟುಬಿಟ್ಟನು. ಸಮುದ್ರದಲ್ಲಿ ಅವತರಿಸಿದ ಕಾರಣ ತನಗೆ ಅಕ್ಕನಾದ ರಮಾದೇವಿಯರಿಗೆ ನಮಸ್ಕರಿಸಿದನು. ಅಕ್ಕನ ಮೇಲಿನ ಸ್ನೇಹದಿಂದ ಪರಮಾತ್ಮನಿಗೂ ನಮಸ್ಕರಿಸಿದನು. ಆಗ ಪರಮಾತ್ಮನು 'ನಾನು ಸಂತುಷ್ಟನಾಗಿರುವೆನು. ಬೇಕಾದ ವರವನ್ನು ಕೇಳಿಕೊ' ಎಂದು ಹೇಳಿದನು. ಅದಕ್ಕೆ ಅವನು 'ಭಗವಂತನೇ! ನೀನು ನನ್ನ ಶೌರ್ಯದಿಂದ ಸಂತುಷ್ಟನಾಗಿದ್ದರೆ ನನ್ನ ತಂದೆಯಾದ ಸಮುದ್ರದ ಸ್ಥಾನದಲ್ಲಿಯೇ ರಮಾದೇವಿಯರಿಂದ ಸಹಿತನಾಗಿ ಇರಬೇಕು' ಎಂದು ಹೇಳಿದನು. ಆಗ ಪರಮಾತ್ಮನು ಹಾಗೆಯೇ ಆಗಲಿ ಎಂದು ಹೇಳಿ ರಮಾದೇವಿಯರಿಂದ ಸಹಿತನಾಗಿ ಕ್ಷೀರಸಮುದ್ರಕ್ಕೆ ಹೋಗಿ ಅಲ್ಲಿಯೇ ಇದ್ದನು.



## ಜಾಲಂಧರನ ರಾಜ್ಯಭಾರವು [1]

ಜಾಲಂಧರನು ಶುಂಭನೇ ಮೊದಲಾದ ದೈತ್ಯರಿಗೆ ಬೇಕಾದಷ್ಟು ಧನವನ್ನು ಕೊಡುವವನಾಗಿ ಸ್ವರ್ಗಕ್ಕೆ ಹೋದನು. ಸ್ವರ್ಗವನ್ನು ನೋಡಿದನು. ನಾನಾ ದಾನಗಳನ್ನು ಇಲ್ಲಿ ಮಾಡಿದವರು ಸ್ವರ್ಗದಲ್ಲಿ ಅದರ ಫಲವನ್ನು ಅನುಭವಿಸುತ್ತಿದ್ದರು. ಇಲ್ಲಿ ಪುಷ್ಪ ಕರ್ಪೂರ ಇತ್ಯಾದಿಗಳನ್ನು ದಾನ ಮಾಡಿದವರು ಸ್ವರ್ಗದಲ್ಲಿ ಇದ್ದರು. ಯಾರು ದೇವಾಲಯಗಳಲ್ಲಿ ವಾದ್ಯಗಳನ್ನು ಬಾರಿಸುತ್ತಾರೋ ಜಲ ಮೊಸರನ್ನಗಳನ್ನು ದಾನ ಮಾಡುವರೋ ಅವರೆಲ್ಲರೂ ಅಲ್ಲಿ ಸುಖವನ್ನು ಅನುಭವಿಸುತ್ತಿದ್ದರು. ಅನೇಕ ಅಪ್ಸರಸ್ತ್ರೀಯರು ಅಲ್ಲಿ ಇದ್ದರು. ಅವರೊಡನೆ ಜನರು ವಿಹರಿಸುತ್ತಿದ್ದರು. ಈ ಪ್ರಕಾರವಾದ ಸ್ವರ್ಗದಲ್ಲಿ ಜಾಲಂಧರನು ಶುಂಭನನ್ನು ರಾಜನನ್ನಾಗಿಯೂ ನಿಶುಂಭನನ್ನು ಯುವರಾಜನನ್ನಾಗಿಯೂ ಸ್ಥಾಪಿಸಿದನು. ತಾನು ಸ್ವರ್ಗದಿಂದ ಬಂದು ಜಾಲಂಧರಪೀಠದಲ್ಲಿ ರಾಜ್ಯಭಾರವನ್ನು ಮಾಡುತ್ತಿದ್ದನು. ಚಿತ್ರಸೇನನೇ ಮೊದಲಾದ ಗಂಧರ್ವರು ಅವನ ಸೇವೆಯನ್ನು ಮಾಡುತ್ತಿದ್ದರು. ಅವನೇ ಎಲ್ಲಾ ದೇವತೆಗಳಿಗೆ ಸಿಗಬೇಕಾದ ಯಜ್ಞಭಾಗಗಳನ್ನು ಸ್ವೀಕರಿಸುತ್ತಿದ್ದನು. ಕ್ಷೀರಸಮುದ್ರ ಮಥನ ಸಮಯದಲ್ಲಿ ದೇವತೆಗಳು ಹೊಂದಿರುವ ರತ್ನಗಳೆಲ್ಲವನ್ನೂ ಅಪಹರಿಸಿದನು.

ಆ ಜಾಲಂಧರನು ರಾಜ್ಯಭಾರ ಮಾಡುತ್ತಿರಲು ಒಬ್ಬ ಮನುಷ್ಯನೂ ಸಾಯುತ್ತಿರಲಿಲ್ಲ. ಒಬ್ಬನೂ ನರಕಕ್ಕೆ ಹೋಗುತ್ತಿರಲಿಲ್ಲ. ಜನರಿಗೆ ಜಗಳವಾಗುತ್ತಿರ

1. ಪ.ಪು.ಉ.ಖಂ. ಅ-9

ಲಿಲ್ಲ. ವಸ್ತುಗಳು ಭೋಗಿಸದೆ ಹಾಗೆಯೇ ನಾಶವಾಗುತ್ತಿರಲಿಲ್ಲ. ಹೆಂಗಸು ಹಡೆಯದೆ ಇದ್ದವಳೂ ಕುರೂಪಿಯಾದವಳು ಇರಲಿಲ್ಲ. ಅಲಂಕಾರಹೀನಳೂ ದುಷ್ಟಳೂ ದುರವಸ್ಥೆಯನ್ನು ಹೊಂದಿದವಳೂ ಇರಲಿಲ್ಲ. ಎಲ್ಲಿ ನೋಡಿದರೂ ದಾನಮಾಡುವವರೇ ಇರುವರು. ದಾನ ತೆಗೆದುಕೊಳ್ಳುವವರೇ ಸಿಗಲಾರರು. ಒಂದೊಂದು ಮನೆಯಲ್ಲಿಯೂ ರೂಪಯೌವನವುಳ್ಳವರಾದ ಸುಂದರಿಯರೇ ಇದ್ದರು. ಆಕಳ ಹಾಲು ಮೊಸರು ತುಪ್ಪ ಇತ್ಯಾದಿಗಳು ಬೇಕಾದಷ್ಟು ಸಿಗುತ್ತಿದ್ದವು. ಜನರಿಗೆ ಮುದಿತನವು ಬರುತ್ತಿರಲಿಲ್ಲ. ಎಲ್ಲಾ ಸ್ಥಳಗಳಲ್ಲಿಯೂ ಮಂಗಲಗಳು ನಡೆಯುತ್ತಿದ್ದವು. ಯಾರಿಗೂ ಸಾವೂ ಬಂಧನವೂ ಆಗುತ್ತಿರಲಿಲ್ಲ. ಒಬ್ಬರಿಗೆ ಮತ್ತೊಬ್ಬರಿಂದ ಹಿಂಸೆಯೂ ನಡೆಯುತ್ತಿರಲಿಲ್ಲ. ಸಾಲಗಾರನೊಬ್ಬನು ಕಾಣಿಸುತ್ತಿರಲಿಲ್ಲ. ಎಲ್ಲರೂ ಹಣವಂತರೇ ಆಗಿದ್ದರು. ಎಲ್ಲ ಪ್ರಜೆಗಳೂ ಸಂತೋಷವುಳ್ಳವರಾಗಿದ್ದರು. ಎಲ್ಲರೂ ಬೇಕಾದ ಪದಾರ್ಥವುಳ್ಳವರಾಗಿದ್ದರು.



## ರಾಹುವು ಕೈಲಾಸಕ್ಕೆ ಹೋಗಿ ಬಂದದ್ದು [1]

ಸ್ವರ್ಗವನ್ನು ಬಿಟ್ಟು ಓಡಿಹೋದ ದೇವತೆಗಳಿಗೆ ಅಮೃತವು ಸಿಗಲಿಲ್ಲ. ಯಜ್ಞಭಾಗವೂ ಸಿಗಲಿಲ್ಲ. ಬ್ರಹ್ಮದೇವರ ಬಳಿಗೆ ಹೋಗಿ ದೂರಿಕೊಂಡರು. ಬ್ರಹ್ಮದೇವರು ಅವರನ್ನು ಕರೆದುಕೊಂಡು ಕೈಲಾಸಕ್ಕೆ ಹೋದರು. ಇಂದ್ರಾದಿ ದೇವತೆಗಳು ರುದ್ರದೇವರಿಗೆ ನಮಸ್ಕರಿಸಿ ಸ್ತೋತ್ರ ಮಾಡಿದರು. ಬ್ರಹ್ಮದೇವರು ರುದ್ರದೇವರೊಡನೆ ಜಾಲಂಧರನನ್ನು ಸಂಹರಿಸಿ ದೇವತೆಗಳನ್ನು ರಕ್ಷಿಸಬೇಕೆಂದು ಹೇಳಿದರು. ಆಗ ರುದ್ರದೇವರು 'ಯಾರನ್ನು ಪರಮಾತ್ಮನೂ ಸಂಹರಿಸಲಿಲ್ಲವೋ ಅವನನ್ನು ನಾನು ಹೇಗೆ ಸಂಹರಿಸಲಿ? ಪೂರ್ವದಲ್ಲಿ ಸೃಷ್ಟಿಸಲ್ಪಟ್ಟ ಯಾವ ಆಯುಧಗಳಿಂದಲೂ ಅವನು ಸಾಯಲಾರನು. ದೇವತೆಗಳೆಲ್ಲರೂ ನನ್ನ ಬಲವನ್ನು ಸಹಿಸುವ ಆಯುಧವನ್ನು ಮಾಡಲಿ ಎಂದರು. ಅದಕ್ಕೆ ಬ್ರಹ್ಮದೇವರು ನಿನ್ನ ಬಲವನ್ನು ನೀನೇ ತಿಳಿದವನಾದ ಕಾರಣ ಅದಕ್ಕೆ ಸರಿಯಾದ ಶಸ್ತ್ರವನ್ನು ನೀನೇ ಮಾಡು ಎಂದು ಹೇಳಿದರು.

ಆಗ ರುದ್ರದೇವರು ಬ್ರಹ್ಮದೇವರೊಡನೆಯೂ ಎಲ್ಲ ದೇವತೆಗಳೊಡನೆಯೂ

1. ಪ.ಪು.ಉ.ಖಂ. ಅ-11

ತಮ್ಮ ತೇಜಸ್ಸನ್ನು ಬಿಡಲಿಕ್ಕೆ ಹೇಳಿದರು. ಮತ್ತು ಶ್ರೀಪರಮಾತ್ಮನನ್ನು ಸ್ಮರಿಸಲು ಅವನೂ ಅಲ್ಲಿಗೆ ಬಂದನು. ನನ್ನಿಂದ ಏನಾಗಬೇಕೆಂದು ಕೇಳಿದನು. ರುದ್ರದೇವರು ಯುದ್ಧದಲ್ಲಿ ಜಾಲಂಧರನನ್ನು ಯಾಕೆ ಕೊಲ್ಲಲಿಲ್ಲ ಎಂದು ಕೇಳಲು ಪರಮಾತ್ಮನು ಅವನು ರಮಾದೇವಿಯ ತಮ್ಮನಾದ ಕಾರಣ ನೀನೇ ಸಂಹರಿಸು ಎಂದು ಹೇಳಿದನು. ಆಮೇಲೆ ರುದ್ರದೇವರು ಪರಮಾತ್ಮನೊಡನೆಯೂ ತೇಜಸ್ಸನ್ನು ಬಿಡಲಿಕ್ಕೆ ಹೇಳಲು ಬಿಟ್ಟನು. ಈ ತೇಜಸ್ಸುಗಳಿಂದ ನನಗೆ ಅಸ್ತ್ರವನ್ನು ಮಾಡಬೇಕೆಂದು ರುದ್ರದೇವರು ಹೇಳಿದರು. ವಿಶ್ವಕರ್ಮನೇ ಮೊದಲಾದವರು ಪರಸ್ಪರವಾಗಿ ನಾವು ಏನು ಮಾಡಲಿ ಎಂದು ಹೇಳಿಕೊಂಡರು. ಆಗ ಬ್ರಹ್ಮದೇವರು ರುದ್ರದೇವರೊಡನೆ ದೇವತೆಗಳು ಈ ತೇಜಸ್ಸನ್ನು ಸಹಿಸಲಿಕ್ಕೆ ಅಸಮರ್ಥರಾಗಿರುವರು ಎಂದರು. ಅದನ್ನು ಕೇಳಿ ರುದ್ರದೇವರು ಆ ತೇಜಸ್ಸಿನ ಮೇಲೆ ಹಾರಿ ನರ್ತನ ಮಾಡಿದರು. ಅದರಿಂದ ಆ ತೇಜಸ್ಸಿನಿಂದ ಒಂದು ಚಕ್ರಾಯುಧವುಂಟಾಯಿತು. ತರುವಾಯ ಆ ಚಕ್ರವನ್ನು ನೋಡಿ ದೇವತೆಗಳೆಲ್ಲರೂ ಭಯವುಳ್ಳವರಾಗಿ ರಕ್ಷಿಸಬೇಕೆಂದು ಹೇಳಿಕೊಂಡರು. ವಿಶ್ವಕರ್ಮನು ಅದಕ್ಕೆ ಮಾಡಿಕೊಟ್ಟ ಕೋಶವು ಭಸ್ಮವಾಗಿ ಹೋಯಿತು. ಕೊನೆಗೆ ರುದ್ರದೇವರು ನಗುತ್ತಾ ಬ್ರಹ್ಮದೇವರ ಕೈಯಿಂದ ಚಕ್ರಾಯುಧವನ್ನು ತೆಗೆದುಕೊಂಡು ತನ್ನ ಕೊಂಕುಳಲ್ಲಿ ಇಟ್ಟುಕೊಂಡರು. ಆಗ ಆ ಚಕ್ರವು ಒಬ್ಬರ ಕಣ್ಣಿಗೂ ಕಾಣದೆ ಹೋಯಿತು. ಆ ಸಮಯದಲ್ಲಿ ನಾರದರು ಜಾಲಂಧರನ ಬಳಿಗೆ ಹೋಗಿ ರುದ್ರದೇವರು ನಿನ್ನನ್ನು ಕೊಲ್ಲಲಿಕ್ಕೆ ಪ್ರತಿಜ್ಞೆ ಮಾಡಿರುವರು' ಎಂದು ಹೇಳಿದರು.

ಅದನ್ನು ಕೇಳಿ ಜಾಲಂಧರನು 'ರುದ್ರದೇವರ ಬಳಿಯಲ್ಲಿ ಏನು ಒಳ್ಳೆ ಪದಾರ್ಥವಿದೆ? ಒಂದೂ ಇಲ್ಲದೆ ಹೇಗೆ ಅವರೊಡನೆ ಜಗಳಕ್ಕೆ ಹೋಗಲಿ?' ಎಂದನು. ಆಗ ನಾರದರು 'ರುದ್ರದೇವರ ಬಳಿಯಲ್ಲಿ ಏನಿದೆ? ಒಂದು ಮುದಿ ಎತ್ತು ಇದೆ. ಮೈಯೆಲ್ಲಾ ಹಾವುಗಳಿವೆ. ಕುತ್ತಿಗೆಯಲ್ಲಿ ವಿಷವಿದೆ. ಕೈಯಲ್ಲಿ ಭಿಕ್ಷಾಪಾತ್ರವಿದೆ. ಆನೆಯ ಮುಖವುಳ್ಳ ಆರುಮುಖವುಳ್ಳ ಇಬ್ಬರು ಮಕ್ಕಳಿರುವರು. ಆದರೆ ಹೆಂಡತಿಯಾದ ಪಾರ್ವತಿಯು ಮಾತ್ರ ಪರಮಸುಂದರಿಯಾಗಿರುವಳು. ರುದ್ರನು ಮನ್ಮಥನನ್ನು ಸುಟ್ಟು ಹಾಕಿದ್ದರೂ ಅವಳ ಸೌಂದರ್ಯವನ್ನು ಸೋತು ಹೋಗಿರುವನು. ನಿನ್ನ ಹೆಂಡತಿಯಾದ ವೃಂದೆಯಾಗಲೀ ಯಾವ ಅಪ್ಸರಸ್ತ್ರೀಯೇ ಆಗಲಿ ಪಾರ್ವತಿಯ ಸೌಂದರ್ಯದ ಹದಿನಾರನೇ ಒಂದು ಅಂಶವನ್ನು ಹೊಂದಲಿಕ್ಕೆ ಆಗಲಾರದು' ಎಂದು ಹೇಳಿ ಮರೆಯಾಗಿ ಹೋದರು.

ಜಾಲಂಧರನು ಕೈಲಾಸಕ್ಕೆ ರಾಹುವನ್ನು ದೂತನನ್ನಾಗಿ ಕಳುಹಿಸಿದನು.

ಆಸಮಯದಲ್ಲಿ ಪರಮಾತ್ಮನು ರುದ್ರದೇವರನೊಡನೆ ಹೋಗಿಬರುವೆನೆಂದು ಹೇಳಿ ಕ್ಷೀರಸಮುದ್ರಕ್ಕೆ ಹೋದನು. ರಾಹುವು ಕೈಲಾಸಕ್ಕೆ ಹೋಗಿ ನಂದಿಯೊಡನೆ ಒಳಗೆ ಹೋಗಲಿಕ್ಕೆ ಬಿಡಬೇಕೆಂದನು. ನಂದಿಯು ರುದ್ರದೇವರ ಬಳಿಗೆ ಹೋಗಿ ತಿಳಿಸಿದನು. ರುದ್ರದೇವರು ಸಖಿಯರಿಂದ ಸಹಿತರಾದ ಪಾರ್ವತೀದೇವಿಯರನ್ನು ಅಂತಃಪುರಕ್ಕೆ ಕಳುಹಿಸಿ ರಾಹುವನ್ನು ಬರಲಿಕ್ಕೆ ಹೇಳಿಕಳುಹಿಸಿದರು. ರಾಹುವು ಒಳಗೆ ಹೋಗಿ ರುದ್ರದೇವರೊಡನೆ 'ನಾನು ಜಾಲಂಧರನಿಂದ ಕಳುಹಿಸಲ್ಪಟ್ಟ ದೂತನು. ನನ್ನ ಬಾಯಿಯಿಂದ ಬರುವ ಮಾತನ್ನು ಕೇಳಿ ಹಾಗೆಯೇ ಮಾಡು. ನೀನು ಬೆಟ್ಟದ ಮೇಲೆ ಮಲಗುವವನು. ತಪಸ್ಸು ಮಾಡುವವನು. ನಿನ್ನ ತಂದೆ ತಾಯಿ ಒಬ್ಬರೂ ಇಲ್ಲ. ಜಾಲಂಧರನು ಮಹಾಬಾಹುಶಾಲಿಯು. ಮೂರುಲೋಕವೂ ಅವನ ಅಧೀನವು. ನೀನೂ ಅವನ ಅಧೀನನು. ಆದುದರಿಂದ ನೀನು ಅವನು ಹೇಳಿದಂತೆ ನಡೆಯುವವನಾಗು. ನಿನಗೆ ಎತ್ತು ಯಾಕೆ ಬೇಕು?' ಹೀಗೆಲ್ಲಾ ಹೇಳಿದನು.

ಈ ಮಾತುಗಳನ್ನು ಕೇಳಿ ರುದ್ರದೇವರ ಮಕ್ಕಳಾದ ವಿಘ್ನೇಶ್ವರನಿಗೂ ಷಣ್ಮುಖನಿಗೂ ಕೋಪವು ಬಂದಿತು. ಆಗ ರುದ್ರದೇವರು ಮೈಯನ್ನು ತಿಕ್ಕಿಕೊಂಡರು. ಆಗ ಅವರ ಮೈಯಲ್ಲಿ ಇದ್ದ ವಾಸುಕಿಸರ್ಪವು ಕೆಳಗೆ ಬಿದ್ದಿತು. ವಿಘ್ನೇಶ್ವರನ ವಾಹನವಾದ ಇಲಿಯ ಬಾಲವನ್ನು ನುಂಗಿತು. ತನ್ನ ವಾಹನದ ಬಾಲವನ್ನು ಹಿಡಿದದ್ದನ್ನು ನೋಡಿ ವಿಘ್ನೇಶ್ವರನು ಬಿಡು ಬಿಡು ಎಂದು ಕೂಗಿದನು. ಆಗ ಷಣ್ಮುಖನ ವಾಹನವಾದ ನವಿಲು ಕೋಪಿಸಿಕೊಂಡು ಗಟ್ಟಿಯಾಗಿ ಗರ್ಜನೆ ಮಾಡಿತು. ಅದನ್ನು ಕೇಳಿ ಹಾವು ಇಲಿಯ ಬಾಲವನ್ನು ಬಿಟ್ಟು ಭಯದಿಂದ ರುದ್ರದೇವರ ದೇಹವನ್ನೇ ಹತ್ತಿ ಕೂತುಕೊಂಡಿತು. ಅದು ರುದ್ರದೇವರ ಕುತ್ತಿಗೆಗೆ ಸುತ್ತುಹಾಕಿಕೊಂಡು ಇರುವಾಗ ಅದರ ಶ್ವಾಸಗಾಳಿಯಿಂದ ಬೆಂಕಿಯುಂಟಾಯಿತು. ಅದರ ಬಿಸಿಯಿಂದ ರುದ್ರದೇವರ ತಲೆಯಲ್ಲಿ ಇದ್ದ ಚಂದ್ರರೇಖೆಯಿಂದ ಅಮೃತವು ಸುರಿಯಿತು. ಆ ಅಮೃತವು ರುದ್ರದೇವರು ಕುತ್ತಿಗೆಯಲ್ಲಿ ಧರಿಸಿದ್ದ ರುಂಡಮಾಲೆಯ ಮೇಲೆ ಬೀಳಲು ಆ ಮಾಲೆಯಲ್ಲಿ ಇದ್ದ ತಲೆಗಳಿಗೆ ಜೀವವುಂಟಾಯಿತು. ಆಗ ಅವು 'ನಾನು ಉತ್ತಮನು. ನಾನೇ ಸೃಷ್ಟಿಮಾಡುವನು. ನಾನೇ ರಕ್ಷಣೆಮಾಡುವವನು. ಅಯ್ಯೋ! ನಾನು ದಾನ ಮಾಡಲಿಲ್ಲವಲ್ಲಾ! ನಾನು ಒಂದು ಭೋಗವನ್ನು ಅನುಭವಿಸ ಲಿಲ್ಲವಲ್ಲಾ! ನಾನು ಲೋಭವುಳ್ಳವನಾಗಿ ಒಬ್ಬರಿಗೂ ದಾನಮಾಡಲಿಲ್ಲವಲ್ಲಾ!' ಈ ರೀತಿಯಾಗಿ ಜಗಳಾಡಿಕೊಂಡವು.

ಆಗ ರುದ್ರದೇವರ ಜಟೆಯಿಂದ ಮೂರು ಮುಖವುಳ್ಳ ಮೂರು ಪಾದಗಳುಳ್ಳ

ಮೂರು ಬಾಲಗಳುಳ್ಳ ಏಳು ಕೈಗಳುಳ್ಳ ಪಿಂಗಲಬಣ್ಣವುಳ್ಳ ಜಟೆಯನ್ನು ಬೆಳೆಸಿಕೊಂಡು ಕೀರ್ತಿಮುಖ ಎಂಬ ಗಣವು ಉಂಟಾಯಿತು. ಆ ಗಣವನ್ನು ನೋಡಿ ಆ ತಲೆಗಳೆಲ್ಲವೂ ಭಯದಿಂದ ಸತ್ತಂತೆಯೇ ಇದ್ದವು. ಕೀರ್ತಿಮುಖನು ರುದ್ರದೇವರಿಗೆ ನಮಸ್ಕರಿಸಿ ತನಗೆ ಹಸಿವೆಯಾಗುತ್ತಿದೆ ಎಂದನು. ರುದ್ರದೇವರು ಯುದ್ಧದಲ್ಲಿ ಬಿದ್ದಿರುವ ಹೆಣಗಳನ್ನು ತಿನ್ನು ಎಂದರು. ಆ ಸಮಯದಲ್ಲಿ ಎಲ್ಲಿಯೂ ಯುದ್ಧವು ನಡೆದಿರಲಿಲ್ಲ. ಕೊನೆಗೆ ಕೀರ್ತಿಮುಖನು ಹಸಿವೆಯಿಂದ ಒಂದೂ ಸಿಗದೆ ತನ್ನ ಅಂಗವನ್ನೇ ತಿಂದುಕೊಂಡನು. ಅವನ ಸಾಹಸವನ್ನು ಭಕ್ತಿಯಿಂದ ನೋಡಿ ರುದ್ರದೇವರು ನೀನು ನನ್ನ ಸಮೀಪದಲ್ಲೇ ಇರು. ನನ್ನ ಸ್ಥಳದಲ್ಲಿ ನಿನ್ನಲ್ಲಿ ಯಾರು ಮನಸ್ಸಿಲ್ಲದಿರುವನೋ ಅವನು ಅಧಃಪಾತವನ್ನು ಹೊಂದುವನು ಎನ್ನಲು ಕೀರ್ತಿಮುಖನು ಮರೆಯಾಗಿ ಹೋದನು. ಆಗ ರುದ್ರದೇವರ ತಲೆಯ ಮೇಲೆ ಹೂವಿನ ಮಳೆಯನ್ನು ಸುರಿಸಿದನು. ಇದನ್ನೆಲ್ಲಾ ನೋಡಿ ರಾಹುವು ಆಶ್ಚರ್ಯವುಳ್ಳವನಾಗಿ 'ನೀನು ಏಕೆ ಹೀಗೆ ಇರುವಿ. ನೀನು ಎಲ್ಲರ ಪೂಜೆಯನ್ನು ಸ್ವೀಕರಿಸುವಿ. ನೀನು ಒಬ್ಬರನ್ನೂ ಪೂಜಿಸುವುದಿಲ್ಲ. ಸಮರ್ಥನಾಗಿದ್ದುಕೊಂಡು ಭಿಕ್ಷೆಯನ್ನು ಏಕೆ ಬೇಡುವಿ. ಸುಂದರಿಯಾದ ನಿನ್ನ ಹೆಂಡತಿಯಾದ ಗೌರಿಯನ್ನು ಕೊಟ್ಟುಬಿಡು. ಈ ಸ್ಕಂದ ವಿಘ್ನೇಶ ಎಂಬ ಮಕ್ಕಳನ್ನು ಕರೆದುಕೊಂಡು ಮನೆಮನೆಗೆ ಭಿಕ್ಷೆಯನ್ನು ಬೇಡುತ್ತಾ ಹೋಗು' ಎಂದು ಹೇಳಿದನು.

ಈ ಕ್ಷುದ್ರ ಮಾತುಗಳನ್ನು ಕೇಳಿ ರುದ್ರದೇವರು ಮಾತಾಡಲೇ ಇಲ್ಲ. ಆಗ ರಾಹುವು ನಂದಿಯನ್ನು ನೋಡಿ 'ಎಲಾ! ನೀನು ಇವನ ಮಂತ್ರಿಯಷ್ಟೆ! ಈ ಭ್ರಷ್ಟನನ್ನು ನೀನಾದರೂ ಶಿಕ್ಷಿಸು. ಇಲ್ಲದಿದ್ದರೆ ನೀನು ಆ ದೋಷದಿಂದ ಯುದ್ಧದಲ್ಲಿ ಸಾಯುವಿ' ಎಂದನು. ಆ ಮಾತನ್ನು ಕೇಳಿ ನಂದಿಯು ರುದ್ರದೇವರ ಅಭಿಪ್ರಾಯವನ್ನು ಅವರ ಹುಬ್ಬಿನ ಸಂಜ್ಞೆಯಿಂದಲೇ ತಿಳಿದವನಾಗಿ ರಾಹುವಿಗೆ ಮರ್ಯಾದೆ ಮಾಡಿ ಕೊಟ್ಟು ಕಳುಹಿಸಿದನು. ರಾಹುವು ಜಾಲಂಧರನ ಬಳಿಗೆ ಹೋಗಿ ಎಲ್ಲಾ ವಿಷಯವನ್ನು ಗೌರಿಯು ಅತಿಸುಂದರಿಯೆಂದೂ ತಿಳಿಸಿದನು.



# ದೈತ್ಯಸೈನ್ಯದ ಪರಾಜಯವು [1]

ಜಾಲಂಧನು ದೂತನ ಮುಖದಿಂದ ಎಲ್ಲಾ ವಿಷಯವನ್ನೂ ತಿಳಿದವನಾಗಿ ಸೈನ್ಯವನ್ನು ಕೂಗಿ ಯುದ್ಧಕ್ಕೆ ಪ್ರಯಾಣ ಬೆಳೆಸಿದನು. ಸೈನ್ಯದ ಕೋಲಾಹಲವು ಸರ್ವ ಸ್ಥಳದಲ್ಲಿ ವ್ಯಾಪಿಸಿಹೋಯಿತು. ತರುವಾಯ ಜಾಲಂಧರಪೀಠದಲ್ಲಿ ದುಂದುಭಿಯ ಶಬ್ದವಾಯಿತು. ಬೆಟ್ಟಗಳೆಲ್ಲವೂ ನಡುಗಿದವು. ಏಳು ಸಮುದ್ರಗಳ ಒಳಗಿನಿಂದ ದೈತ್ಯದಾನವರು ಹೊರಗೆ ಬಂದರು. ಸರ್ವಸಾಮಗ್ರಿಯಿಂದ ಸಹಿತವಾಗಿ ಮಹಾಸೈನ್ಯವು ಯುದ್ಧಕ್ಕೆ ಹೊರಟಿತು. ಜಾಲಂಧರನು ಪ್ರಯಾಣಕ್ಕೆ ಉದ್ಯುಕ್ತನಾಗಿ ನಾನಾರತ್ನಗಳಿಂದ ಅಲಂಕೃತವಾದ ಶಕ್ತಿಯನ್ನು ಹೆಗಲಲ್ಲಿ ಇಟ್ಟುಕೊಂಡು ಸಮುದ್ರದಲ್ಲಿ ಇದ್ದ ಪರಮಾತ್ಮನ ಬಳಿಗೆ ಹೋಗಿ ನಮಸ್ಕರಿಸಿ 'ಭಾವ! ನಿಮಗೆ ಭೋಗಕ್ಕೆ ಏನು ಬೇಕಾಗಿದೆ? ನಾನು ತಂದುಕೊಡುತ್ತೇನೆ' ಎಂದು ಹೇಳಿದನು. ಅದನ್ನು ಕೇಳಿ ಪರಮಾತ್ಮನು ಸಂತುಷ್ಟನಂತೆ ತೋರಿಸುತ್ತಾ 'ನಾನು ನಿನಗೆ ಏನು ಪ್ರಿಯವನ್ನು ಮಾಡಬೇಕು?' ಎಂದು ಕೇಳಿದನು. ಅದಕ್ಕೆ ಜಾಲಂಧರನು 'ನಾನು ಯುದ್ಧಕ್ಕೆ ಹೋಗುವೆನು. ನೀವು ಸುಖವಾಗಿ ಇರಿ' ಎಂದನು.

ರಮಾದೇವಿಯರು ಅವನಿಗೆ ಅಕ್ಷತೆಯನ್ನು ಕೊಟ್ಟರು. ಪರಮಾತ್ಮನಿಂದಲೂ ಅವನು ಸತ್ಕೃತನಾಗಿ ತಂದೆಯಾದ ಸಮುದ್ರನಿಗೆ ನಮಸ್ಕರಿಸಿ 'ನಾನು ಯುದ್ಧದಲ್ಲಿ ರುದ್ರದೇವರನ್ನು ಜಯಿಸಲಿಕ್ಕೆ ಹೋಗುತ್ತಿರುವೆನು. ಅನುಜ್ಞೆಯನ್ನು ಕೊಡಬೇಕು' ಎಂದು ಹೇಳಿದನು. ಅದಕ್ಕೆ ಸಮುದ್ರನು 'ಮಗ! ಆ ತಪಸ್ವಿಯನ್ನು ದೂರದಲ್ಲಿಯೇ ಬಿಟ್ಟು ನಾನು ಕೊಟ್ಟಿರುವ ರಾಜ್ಯವನ್ನು ನೀನು ಅನುಭವಿಸುತ್ತಿರು. ನಿನ್ನ ಪ್ರತಾಪವು ಅತ್ಯದ್ಭುತವಾಗಿರುವುದು. ಭೂಮಿಯನ್ನು ಸ್ವರ್ಗಕ್ಕಿಂತ ಶ್ರೇಷ್ಠವನ್ನಾಗಿ ಮಾಡಿರುವಿ' ಇತ್ಯಾದಿ ರೀತಿಯಾಗಿ ಹೇಳಲು ಅಸುರನು ಪಾರ್ವತೀದೇವಿಯ ಮೇಲೆ ಅನುರಾಗವುಳ್ಳವನಾಗಿ ತಂದೆಯ ಮಾತನ್ನು ಕೇಳದೆ ಯುದ್ಧಕ್ಕೆ ಹೊರಟನು. ಆಗ ವೃಂದೆಯು ಬಂದು 'ನಾಥ! ನೀವು ಆ ಕುಯೋಗಿಯೊಡನೆ ಯುದ್ಧಕ್ಕೆ ಹೋಗಬಾರದು. ಪಾರ್ವತಿಯಲ್ಲಿರುವ ಮನಸ್ಸನ್ನು ಹಿಂದೆ ತಿರುಗಿಸಿರಿ. ಆ ಗೌರಿಯನ್ನು ನೀವೇಕೆ ಅಪೇಕ್ಷಿಸುವಿರಿ? ಅವಳು ನನ್ನಿಂದ ಅಧಿಕಳಲ್ಲ. ತಪಸ್ವಿನಿಯು ಆಶ್ರಯಹೀನಳು. ಆ ಶಿವನಲ್ಲಿಯೇ ಆಸಕ್ತಳಾಗಿರುವಳು. ನಾರದರೇನೋ ಸುಮ್ಮನೆ ಅವಳನ್ನು ಸ್ತೋತ್ರ ಮಾಡಿರುವರು' ಎಂದು ಹೇಳಿದಳು.

1. ಪ.ಪು. ಉ.ಖಂ. ಅ-12

ಅದನ್ನು ಜಲಂಧರನು 'ಪಾರ್ವತಿಯ ರೂಪವನ್ನು ನೋಡದೆ ನನ್ನ ಮನಸ್ಸು ಹಿಂದೆ ತಿರುಗಲಾರದು. ವೃಂದೆ! ನೀನು ರಾಜ್ಯವನ್ನು ನೋಡಿಕೊಂಡಿರು. ಶಿವನು ನನ್ನನ್ನು ಕೊಂದರೆ ನನ್ನನ್ನು ಯಾವಾಗಲೂ ಸ್ಮರಿಸುತ್ತಿರು' ಎಂದು ಹೇಳಿ ಅವಳನ್ನು ಕಳುಹಿಸಿ ಅರವತ್ತು ಸಾವಿರ ಮಹಾ ಪದ್ಮಸಂಖ್ಯೆಯುಳ್ಳ ಸೈನ್ಯದಿಂದ ಸಹಿತನಾಗಿ ಕೈಲಾಸಕ್ಕೆ ಹೊರಟನು. ಆ ಸಮಯದಲ್ಲಿ ರುದ್ರದೇವರು ಪಾರ್ವತೀದೇವಿಯರನ್ನೂ ಎಲ್ಲಾ ಗಣಗಳನ್ನು ಕರೆದುಕೊಂಡು ಕೈಲಾಸ ಪರ್ವತವನ್ನು ಬಿಟ್ಟು ಮಾನಸೋತ್ತರ ಪರ್ವತಕ್ಕೆ ಹೋದರು. ಜಾಲಂಧರನು ಅತಿಸುಂದರವಾದ ಸರ್ವರತ್ನಭರಿತವಾದ ಕೈಲಾಸವನ್ನು ನೋಡಿ ಆಶ್ಚರ್ಯವುಳ್ಳವನಾಗಿ 'ಯಾವ ಶಿವನಿಗೆ ಅಂತಹ ಸುಂದರಿಯಾದ ಹೆಂಡತಿಯಿರುವಳು. ಇಂತಹ ಸುಂದರವಾದ ಸ್ಥಾನವಿರುವುದು. ಅವನನ್ನು ತಪಸ್ವಿಯೆಂದು ನಿಮ್ಮಂತವರು ಯಾಕೆ ಹೇಳುವಿರಿ?' ಎಂದು ಶುಕ್ರಾಚಾರ್ಯರೊಡನೆ ಕೇಳಿದನು. ಆಮೇಲೆ ಕೈಲಾಸದಲ್ಲಿ ಶಿವನನ್ನು ಕಾಣದೆ 'ಹರನು ನನ್ನ ಭಯದಿಂದ ಎಲ್ಲಿಗೆ ಓಡಿರುವನು?' ಎಂದು ಕೇಳಿದನು. ಶುಕ್ರಾಚಾರ್ಯರು 'ರುದ್ರದೇವರು ಮಾನಸೋತ್ತರಪರ್ವತಕ್ಕೆ ಹೋಗಿರುವರು' ಎಂದರು.

ಅದನ್ನು ಕೇಳಿ ಜಾಲಂಧರನು 'ನೀವು ಊರಿಗೆ ಹೋಗಿರಿ. ನಾನು ಹರನನ್ನು ಜಯಿಸುವೆನು' ಎಂದು ಹೇಳಿ ರುದ್ರದೇವರಲ್ಲಿಗೆ ಹೋದನು ಆ ಮಾನಸೋತ್ತರ ಪರ್ವತವು ಅರುವತ್ತು ಸಾವಿರ ಯೋಜನ ಎತ್ತರವಾಗಿರುವುದು. ಅನೇಕ ದೈತ್ಯ ಶ್ರೇಷ್ಠರು ಆ ಪರ್ವತವನ್ನು ಹತ್ತಿ ಹೋದರು. ಸೈನ್ಯದ ಕೋಲಾಹವುಂಟಾಯಿತು. ಅದನ್ನು ಕೇಳಿ ರುದ್ರದೇವರು ಅತಿ ಎತ್ತರವಾದ ಶಿಖರದಲ್ಲಿ ಸಖಿಯರಿಂದ ಸಹಿತಳಾದ ಪಾರ್ವತೀದೇವಿಯನ್ನು ಕೂತುಕೊಳ್ಳಿಸಿ ತನ್ನ ಗಣಗಳಿಂದ ಯುದ್ಧ ಮಾಡಿಸಿದರು. ನಂದಿಯೊಡನೆ 'ಮಹಾಕಾಲನೇ ಮೊದಲಾದ ಗಣಗಳಿಂದ ಕೂಡಿಕೊಂಡು ಹೋಗಿ ಯುದ್ಧ ಮಾಡು' ಎಂದರು. ನಂದಿಯು ರುದ್ರದೇವರ ಆಜ್ಞೆಯಂತೆ ಕಾಕತುಂಡ ಎಂಬ ಸಾರಥಿಯಿಂದ ಓಡಿಸಲ್ಪಡುವ ರಥದಲ್ಲಿ ಕೂತುಕೊಂಡು ಅನೇಕ ಗಣಗಳಿಂದ ಸಹಿತನಾಗಿ ಹೋಗಿ ಯುದ್ಧಮಾಡಿ ಅನೇಕ ದೈತ್ಯ ಸೈನಿಕರನ್ನು ಪರಾಜಯಗೊಳಿಸಿದನು.



# ರುದ್ರದೇವರ ಸಮಾಗಮವು [1]

ದೈತ್ಯಸೈನ್ಯವು ನಂದಿಯಿಂದ ಮೃತವಾದದ್ದನ್ನು ನೋಡಿ ಶುಂಭನೇ ಮೊದಲಾದ ದೈತ್ಯರು ರುದ್ರದೇವರ ಗಣಗಳೊಡನೆ ಯುದ್ಧಕ್ಕೆ ಬಂದರು. ಶುಂಭ ಎಂಬ ದೈತ್ಯನು ನಂದಿಯೊಡನೆ ಯುದ್ಧವನ್ನು ಮಾಡಿದನು. ಮಹಾಕಾಲನೊಡನೆ ನಿಶುಂಭನು ಯುದ್ಧ ಮಾಡಿದನು. ಹೀಗೆಯೇ ಒಬ್ಬೊಬ್ಬ ಪ್ರಸಿದ್ಧ ದೈತ್ಯರು ರುದ್ರದೇವರ ಗಣಗಳೊಡನೆ ಯುದ್ಧ ಮಾಡಿದರು. ಶುಂಭನು ನಂದಿಯೊಡನೆ ಭಯಂಕರವಾದ ಯುದ್ಧವನ್ನು ಮಾಡಿ ಕೊನೆಗೆ ನಂದಿಯ ಎದೆಗೆ ಪರ್ವತದಿಂದ ಬಡೆದನು. ಇದರಿಂದ ನಂದಿಯು ಮೂರ್ಛಿತನಾಗಿ ಬಿದ್ದು ಆ ಮೇಲೆ ಎದ್ದು ಓಡಿಹೋದನು. ನಿಶುಂಭ ಎಂಬ ದೈತ್ಯನು ಮಹಾಕಾಲ ಎಂಬ ರುದ್ರದೇವರ ಗಣದೊಡನೆ ಯುದ್ಧವನ್ನು ಮಾಡಿ ಕೊನೆಗೆ ಅವನ ಕಾಲನ್ನು ಹಿಡಿದು ತಿರುಗಿಸಿ ದೂರಕ್ಕೆ ಬಿಸಾಡಿದನು.

ಪುಷ್ಪದಂತ ಎಂಬ ರುದ್ರದೇವರ ಗಣನಿಗೆ ಶೈಲರೋಮ ಎಂಬ ಅಸುರನು ಮುಷ್ಟಿಯಿಂದ ಬಡೆದನು. ಆಗ ಪುಷ್ಪದಂತನು ಶೈಲರೋಮನನ್ನು ಬಡಿದು ಕೆಳಗೆ ಬೀಳಿಸಿದನು. ಆಗ ಗಿರಿಕೇತು ಎಂಬ ಅಸುರನು ಒಂದು ಪುಷ್ಪದಂತನನ್ನು ಮುದ್ಗರದಿಂದ ಬಡಿದನು. ಆಗ ಪುಷ್ಪದಂತನು ಗಿರಿಕೇತುವಿನ ತಲೆಯನ್ನು ಕತ್ತರಿಸಿದನು. ಆಗ ಶಿರಸ್ಸಿನ ಕೆಳಗೆ ಮುಂಡವು ಮಾತ್ರ ಖಡ್ಗಚರ್ಮವನ್ನು ಹಿಡಿದುಕೊಂಡು ಪುಷ್ಪದಂತನಿದ್ದಲ್ಲಿಗೆ ಓಡಿತು. ಆಗ ಶಿರಸ್ಸು 'ಯುದ್ಧಮಾಡಲು ಆಸೆಯುಳ್ಳ ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವಿ? ತಲೆಯಿಲ್ಲದೆ ಹೋಗಲಿಕ್ಕೆ ನಿನಗೆ ನಾಚಿಕೆಯಾಗುವುದಿಲ್ಲವೇ?' ಎಂದು ಮುಂಡದೊಡನೆ ಹೇಳಿತು. ಶಿರಸ್ಸು ಹಾಗೆ ಹೇಳುತ್ತಿರುವಾಗಲೇ ಮುಂಡವು ಒಂದು ಪುಷ್ಪದಂತಹ ಕಾಲಲ್ಲಿ ಹಿಡಿಯಿತು. ಆಗ ಪುಷ್ಪದಂತನು ಆ ಮುಂಡದ ಹೊಟ್ಟೆಯನ್ನು ಖಡ್ಗದಿಂದ ಸೀಳಿದನು. ಆಗ ಆ ಹೊಟ್ಟೆಯಿಂದ ನೂರು ತಲೆಗಳುಳ್ಳ ಮಹಾಬಲವುಳ್ಳ ಇನ್ನೂರು ಕಣ್ಣುಗಳುಳ್ಳ ಇನ್ನೂರು ಕೈಗಳುಳ್ಳ ಪುರುಷನು ಉದ್ಭವಿಸಿದನು. ಅಷ್ಟರಲ್ಲಿ ಆ ಶಿರಸ್ಸು ಹೊರಳುತ್ತಾ ಆ ಮುಂಡದ ಬಳಿಗೆ ಬಂದಿತು. ಅದನ್ನು ನೋಡಿ ಪುಷ್ಪದಂತನು ಖಡ್ಗದಿಂದ ಆ ಶಿರಸ್ಸನ್ನು ಕತ್ತರಿಸಿದನು. ಆಗ ಅದರಿಂದ ಭೂಕಂಪನ ಎಂಬ ಜ್ವರನು ಉಂಟಾದನು. ಆಗ ಪುಷ್ಪದಂತನು ನೂರು ತಲೆಯುಳ್ಳ ಪುರುಷನಿಂದಲೂ ಭೂಕಂಪನದಿಂದಲೂ ಪೀಡಿಸಲ್ಪಟ್ಟವನಾಗಿ ಯುದ್ಧರಂಗವನ್ನು ಬಿಟ್ಟು ಓಡಿಹೋದನು.

---

1. ಪ.ಪು. ಉ.ಖಂ. ಅ-13

ಹಾಗೆಯೇ ಕೋಲಾಹಲ ಎಂಬ ದೈತ್ಯನಿಗೂ ಮೂಲ್ಯವಂತನೆಂಬ ರುದ್ರ ದೇವರ ಗಣಕ್ಕೂ ಭಯಂಕರವಾದ ಯುದ್ಧವು ನಡೆದು ಕೊನೆಗೆ ಮಾಲ್ಯವಂತನು ಒಂದು ಪರ್ವತವನ್ನು ತೆಗೆದು ಕೋಲಾಹಲವನ್ನು ಬಡೆದನು. ಆಗ ಅವನ ದೇಹದಿಂದ ಜ್ವಲನ ಎಂದು ಹೆಸರುಳ್ಳ ಮೂರು ತಲೆಯುಳ್ಳ ಒಂಭತ್ತು ಕೈಕಾಲುಗಳುಳ್ಳ ಅತಿಪಿಂಗಲ ಬಣ್ಣವುಳ್ಳ ಜ್ವರನು ಬಂದು ಮಾಲ್ಯವಂತನನ್ನು ಮೋಹಗೊಳಿಸಿದನು. ಮಾಲ್ಯವಂತನು ಯುದ್ಧವನ್ನು ಬಿಟ್ಟು ಓಡಿಹೋದನು. ಭಯಾನಕ ಎಂಬ ಅಸುರನು ಚಂಡಿ ಎಂಬ ಗಣವನ್ನು ಪಾಶದಿಂದ ಎದೆಗೆ ಬಡಿದು ಸಮುದ್ರಕ್ಕೆ ತೂಕಿ ಬಿಸಾಡಿದನು. ಸ್ಕಂದನು ರಾಹುವಿನೊಡನೆ ಬಾಣಗಳಿಂದ ಯುದ್ಧಮಾಡಿ ಕೊನೆಗೆ ಶಕ್ತಿಯನ್ನು ರಾಹುವಿನ ಮೇಲೆ ಬಿಟ್ಟನು. ರಾಹುವು ಅದನ್ನು ಕೈಯಲ್ಲಿ ಹಿಡಿದು ಅದನ್ನೇ ಸ್ಕಂದನ ಎದೆಗೆ ಬಿಸಾಡಿದನು. ಆಗ ಎದೆಯಿಂದ ನದಿಯು ಹರಿಯಿತು. ತರುವಾಯ ಸ್ಕಂದನು ಆ ನದಿಯನ್ನು ನಿಲ್ಲಿಸಿ ತನ್ನ ವಾಹನವಾದ ನವಿಲಿನಿಂದ ಸಹಿತನಾಗಿ ಹೊರಟುಹೋದನು. ಹೀಗೆಯೇ ಭಯಂಕರವಾದ ಯುದ್ಧವು ನಡೆದು ಅಸುರರಿಂದ ರುದ್ರದೇವರ ಪಕ್ಷದವರು ಸೋತುಹೋದರು.

ಜಂಭ ಎಂಬ ಅಸುರನಿಗೂ ವಿಘ್ನೇಶ್ವರನಿಗೂ ಯುದ್ಧವು ನಡೆಯಿತು. ಜಂಭನ ಬಾಣಗಳಿಂದ ಪೀಡಿತನಾದ ವಿಘ್ನೇಶನು ಜಂಭನು ಕೂತಿದ್ದ ಆನೆಯ ಸೊಂಡಿಲನ್ನು ಕೊಡಲಿಯಿಂದ ಕಡಿದು ಹಾಕಿದನು. ತರುವಾಯ ಜಂಭಾಸುರನು ವಿಘ್ನೇಶನನ್ನು ಶಕ್ತಿಯಿಂದ ಬಡಿದನು. ವಿಘ್ನೇಶನ ವಾಹನವಾದ ಇಲಿಯು ಜಂಭನ ಬಾಣಗಳಿಂದ ಗಾಯವನ್ನು ಹೊಂದಿ ಬಿಲದೊಳಗೆ ಓಡಿಹೋಯಿತು. ವಿಘ್ನೇಶನು ಬಲವಾದ ಪೆಟ್ಟಿನಿಂದ 'ಹಾ ತಂದೆ! ಹಾ ತಾಯಿ, ಹಾ ಅಣ್ಣ! ಹಾ ನನ್ನ ವಾಹನವಾದ ಇಲಿಯೇ!' ಎಂದು ವಿಲಾಪವನ್ನು ಮಾಡಿದನು. ವಿಘ್ನೇಶನು ಕೂಗುವುದನ್ನು ಕೇಳಿ ರುದ್ರದೇವರು ಒಂದು ಪರ್ವತಶಿಖರದಿಂದ ಹೊರಟುಬಂದರು. ಆಗ ಪಾರ್ವತೀದೇವಿಯರು 'ವಿಘ್ನೇಶನು ದೈತ್ಯರಿಂದ ಬಡಿಯಲ್ಪಡುತ್ತಿದ್ದಾನೆ. ಸ್ಕಂದನೂ ಬಿದ್ದುಬಿಟ್ಟನು. ನೀವು ಯಾಕೆ ಪರ್ವತದಲ್ಲಿ ಆಡುತ್ತಿರುವಿರಿ? ಮಕ್ಕಳನ್ನು ಬಿಡಿಸಿರಿ. ಯಾವಾಗಲೂ ಶೂಲ ಮೊದಲಾದ ಆಯುಧಗಳನ್ನು ಧರಿಸಿಕೊಂಡಿದ್ದಕ್ಕೆ ಅದರ ಫಲವನ್ನು ತೋರಿಸುವ ಸಮಯವು ಈಗ ಬಂದಿರುವುದು' ಎಂದು ಹೇಳಿದರು.

ಪಾರ್ವತೀದೇವಿಯ ಮಾತನ್ನು ಕೇಳಿ ರುದ್ರದೇವರು ವೀರಭದ್ರನೊಡನೆ ವೃಷಭವನ್ನು ಸಿದ್ಧಪಡಿಸಲಿಕ್ಕೆ ಹೇಳಿದರು. ವೀರಭದ್ರನು ಹಾಗೆಯೇ ಮಾಡಿದನು. ಅದರ ಕೊಂಬುಗಳಲ್ಲಿ ಕಿರೀಟವನ್ನು ಧರಿಸಿದನು. ಕುತ್ತಿಗೆಯಲ್ಲಿ ನೂರುಘಂಟೆಗಳನ್ನು

ಕಟ್ಟಿದನು. ಕಿವಿಗಳಿಗೆ ಕನ್ನಡಿಗಳನ್ನು ಕಟ್ಟಿದನು. ಭುಜದಲ್ಲಿ ಗೆಜ್ಜೆಗಳನ್ನು ಕಟ್ಟಿ ಪಾದದಲ್ಲಿ ನೂಪುರ ಎಂಬ ಆಭರಣವನ್ನಿಟ್ಟನು. ಬಾಲಕ್ಕೆ ಚಾಮರವನ್ನು ಕಟ್ಟಿದನು. ವೃಷಭದ ಮೇಲೆ ಎಲ್ಲಾ ಶಸ್ತ್ರಗಳನ್ನು ಇಟ್ಟನು. ಪಾರ್ವತಿಯು ಹಣೆಗೆ ಬೊಟ್ಟನ್ನು ಇಟ್ಟು 'ಯುದ್ಧದಲ್ಲಿ ನೀನು ರುದ್ರದೇವರನ್ನು ಬಿಡಬಾರದು. ಶತ್ರುಗಳನ್ನು ಜಯಿಸಿ ರುದ್ರದೇವರಿಂದ ಸಹಿತನಾಗಿ ಹಿಂದೆ ಬರುವವನಾಗು' ಎಂದು ಹೇಳಿದರು. ಈ ಮಾತನ್ನು ಕೇಳುತ್ತಾ ರುದ್ರದೇವರು ವೃಷಭವನ್ನು ಏರಿದರು. ಸಾವಿರಾರು ಆಯುಧ ಗಳನ್ನು ಧರಿಸಿದರು. ಪಾರ್ವತಿದೇವಿಯೊಡನೆ 'ಯುದ್ಧಕ್ಕೆ ಹೋಗುವೆನೆಂದು ಹೇಳಿದರು. ನೀನೊಬ್ಬಳೇ ಇರುವಿ. ದುರಭಿಪ್ರಾಯವುಳ್ಳ ದಾನವರು ಬಂದಿರುವರು. ಆದುದರಿಂದ ನಿನ್ನನ್ನು ನೀನೇ ರಕ್ಷಣೆ ಮಾಡಿಕೊಳ್ಳಬೇಕು' ಎಂದು ಹೇಳಿ ಎತ್ತಿನ ಮೇಲೆ ಕೂತುಕೊಂಡು ಮೂವತ್ತು ಮಹಾಬ್ಜಸಾವಿರ ಪ್ರಮಥಗಣಗಳಿಂದ ಸಹಿತರಾಗಿ ಯುದ್ಧರಂಗಕ್ಕೆ ಹೋದರು.

ವೀರಭದ್ರನು ಸಿಂಹಧ್ವಜವುಳ್ಳ ರಥದಲ್ಲಿ ಕೂತುಕೊಂಡು ರುದ್ರದೇವರ ಎಡಪಾರ್ಶ್ವವನ್ನೂ ಮಣಿಭದ್ರನು ಕುದುರೆಯು ಸೆಳೆಯುವ ರಥದಲ್ಲಿ ಕೂತು ಕೊಂಡು ರುದ್ರದೇವರ ಬಲಪಾರ್ಶ್ವವನ್ನು ರಕ್ಷಿಸಿದರು. ರುದ್ರದೇವರು ಗಣ ಗಳೊಡನೆ ಎತ್ತರವಾದ ಪರ್ವತಶ್ರೇಷ್ಠದಿಂದ ಕೆಳಗೆ ಇಳಿದು ಬಂದಿರುವ ರುದ್ರದೇವರನ್ನು ನೋಡಿ ದೈತ್ಯರೆಲ್ಲರೂ ಗರ್ಜಿಸಿದರು. ತರುವಾಯ ದೈತ್ಯ ಸೈನ್ಯ ದಲ್ಲಿಯೂ ರುದ್ರದೇವರ ಸೈನ್ಯದಲ್ಲಿಯೂ ಪರಸ್ಪರ ಯುದ್ಧವು ನಡೆಯಿತು. ಪೂರ್ವದಲ್ಲಿ ಸೋತುಹೋದ ಗಣಗಳೆಲ್ಲವೂ ರುದ್ರದೇವರ ಎದುರಲ್ಲಿ ಬಂದು ಯುದ್ಧ ಮಾಡಿದವು. ಭಯಂಕರವಾದ ಯುದ್ಧವು ನಡೆಯಿತು. ದೈತ್ಯರು ರುದ್ರದೇವರ ಗಣಗಳನ್ನು ಓಡಿಸಿ ನಾನಾ ಆಯುಧಗಳನ್ನು ಹಿಡಿದುಕೊಂಡು ರುದ್ರ ದೇವರು ಸುತ್ತಲೂ ಬಂದುಬಿಟ್ಟರು. ರುದ್ರದೇವರು ಕ್ರೂರಬಾಣಗಳಿಂದ ದೈತ್ಯರನ್ನು ಬಡೆದರು.



# ಮಾಯಾಮಹೇಶನ ಆಗಮನವು 1

ತರುವಾಯ ಜಾಲಂಧರನು ದೈತ್ಯರ ಕೋಲಾಹಲವನ್ನು ಕೇಳಿ ರುದ್ರದೇವರು ಇದ್ದಲ್ಲಿಗೆ ಬಂದನು. ಸಾರಥಿಯಾದ ಖಡ್ಗರೋಮನೊಡನೆ ಕೋಪದಿಂದ 'ಸಾವಿರ ಕುದುರೆಗಳನ್ನು ಕಟ್ಟಿರುವ ಈ ರಥವನ್ನು ಬೇಗನೇ ಬೇಡಿಸು. ಹಾವು ಭಸ್ಮ ಎಲುಬು ಇವುಗಳನ್ನು ಧರಿಸಿದ ಆ ತಪಸ್ವಿಯಾದ ಶಿವನನ್ನು ಕೊಂದು ಹಾಕುವೆನು. ಎತ್ತಿನ ಮೇಲೆ ಕೂತುಕೊಂಡು ಬಂದಿರುವ ಆ ನೊಂಡಿಗೆ ನನ್ನೊಡನೆ ಯುದ್ಧಮಾಡಲಿಕ್ಕೆ ಏನು ಶಕ್ತಿಯಿದೆ?' ಎಂದು ಹೇಳಿ ಘೋರವಾದ ಧನುಸ್ಸನ್ನು ಹಿಡಿದುಕೊಂಡು ಓಡಿದನು. ಆಗ ವೀರಭದ್ರನು ತಡೆದು ತೀಕ್ಷ್ಣಬಾಣಗಳಿಂದ ಬಡೆದನು. ಮಣಿಭದ್ರನೂ ಬಾಣಗಳಿಂದ ಜಾಲಂಧರನನ್ನು ಬಡೆದನು. ಜಾಲಂಧರನು ಮಣಿಭದ್ರನನ್ನು ಪಾಶದಿಂದ ಒಡೆದು ರುದ್ರದೇವರೊಡನೆ 'ಮಹಾದೇವನೇ! ನಿನಗೆ ಶಸ್ತ್ರದ ಅಭ್ಯಾಸವಿದ್ದರೆ ಯುದ್ಧಕ್ಕೆ ಬಾ. ನೀನೇ ಮೊದಲು ಬಡಿ. ಜಟೆಯನ್ನು ಧರಿಸಿರುವ ನಿನ್ನನ್ನು ನಾನು ಮೊದಲು ಬಡೆಯಲಾರೆನು' ಎಂದು ಹೇಳಿದನು. ಆಗ ಅವನನ್ನು ವೀರಭದ್ರನು ಗದೆಯಿಂದ ಸೈನ್ಯವನ್ನು ಬಡೆದನು. ರಥದ ಮೇಲೆ ರಥವನ್ನು ಕುದುರೆಯ ಮೇಲೆ ಕುದುರೆಯನ್ನು ಆನೆಯ ಮೇಲೆ ಆನೆಯನ್ನೂ ನಾಶಮಾಡಿ ಹಾಕಿದನು. ರುದ್ರದೇವರ ಗಣಗಳು ಅಸುರರನ್ನು ಬಡೆದರು. ಅನೇಕ ಶೂರರಾದ ಅಸುರರು ಸತ್ತು ಬಿದ್ದರು. ದೈತ್ಯರ ರುಂಡಗಳಿಂದಲೂ ಮುಂಡ ಗಳಿಂದಲೂ ಕೈಗಳಿಂದಲೂ ಕಟಿಗಳಿಂದಲೂ ತಲೆಗಳಿಂದಲೂ ಯುದ್ಧರಂಗವು ತುಂಬಿಹೋಯಿತು.

ಈ ಪ್ರಕಾರವಾದ ಯುದ್ಧವನ್ನು ನೋಡಿ ಜಾಲಂಧರನು ರುದ್ರದೇವರನ್ನು ಜಯಿಸಲಿಕ್ಕೆ ಶಕ್ಯವಾಗಲಾರದೆಂದು ತಿಳಿದುಕೊಂಡು 'ನಾನು ನಾರದರು ಹೇಳಿದ ಗೌರಿಯನ್ನು ನೋಡಿಲ್ಲವಲ್ಲಾ! ಅವಳನ್ನು ಹೇಗೆ ನೋಡಲಿ? ಮೊದಲು ಅವಳನ್ನು ನೋಡಲಿಕ್ಕೆ ಹೋಗುವೆನು. ಆಮೇಲೆ ಶಿವನೊಡನೆ ಯುದ್ಧಮಾಡುವೆನು' ಎಂದು ಮನಸ್ಸಿನಲ್ಲಿಯೇ ಯೋಚಿಸಿ 'ನನಗೆ ಸಮಾನವಾದ ಪರಾಕ್ರಮವುಳ್ಳ ಶುಂಭನೇ! ನೀನು ನನ್ನಂತೆಯೇ ರೂಪವನ್ನು ಧರಿಸಿಕೊಂಡು ಯುದ್ಧವನ್ನು ಮಾಡಬೇಕು. ಯುದ್ಧದ ಭಾರವನ್ನು ನಿನಗೆ ಒಪ್ಪಿಸಿರುವೆನು. ನಾನು ನನ್ನ ಮನಸ್ಸನ್ನು ಅಪಹರಿಸಿರುವ ಗೌರಿಯನ್ನು ನೋಡಲಿಕ್ಕೆ ಹೋಗುವೆನು' ಎಂದು ಹೇಳಿ ಅವನಿಗೆ ತನ್ನ ಅಲಂಕಾರ

1. ಪ.ಪು. ಉ.ಖಂ. ಅ-13,14

ಶಸ್ತ್ರ ಕವಚ ಇತ್ಯಾದಿಗಳನ್ನು ಕೊಟ್ಟು ಸಾರಥಿಯಿಂದ ಸಹಿತವಾದ ರಥವನ್ನು ಕೊಟ್ಟು ದುರ್ವಾರಣನಿಂದ ಸಹಿತನಾಗಿ ಸೈನ್ಯವನ್ನು ಬಿಟ್ಟು ಮರೆಯಾಗಿ ಒಂದು ಗುಹೆಯೊಳಗೆ ಹೋಗಿ ರುದ್ರದೇವರ ರೂಪವನ್ನು ಧರಿಸಿದನು. ದುರ್ವಾರಣನು ನಂದಿಯ ರೂಪವನ್ನು ಧರಿಸಿದನು. ತರುವಾಯ ಆ ಕಪಟದ ನಂದಿಶಂಕರರು ಪಾರ್ವತೀದೇವಿಯು ಸಖಿಯೊಡನೆ ಇದ್ದ ಪರ್ವತಶಿಖರಕ್ಕೆ ಬಂದರು. ಮೈಯೆಲ್ಲಾ ಬಾಣಗಳಿಂದ ಗಾಯವನ್ನು ಹೊಂದಿ ನಂದಿಯ ಭುಜವನ್ನು ಆಶ್ರಯಿಸಿಕೊಂಡು ಕೆಂಪಾದ ವಸ್ತ್ರವುಳ್ಳವನಾಗಿ ಬರುವ ಕಪಟಶಿವನನ್ನು ನೋಡಿ ಪಾರ್ವತೀದೇವಿಯು ಆಶ್ಚರ್ಯಪಟ್ಟಳು.

ಜಯಾ ಮೊದಲಾದ ಪಾರ್ವತೀದೇವಿಯ ಸಖಿಯರು ಸಂಭ್ರಮದಿಂದ ಆ ಶಿವನ ಸಮೀಪಕ್ಕೆ ಬಂದು ದುಃಖಿತರಾಗಿ 'ದೇವೇಶ! ನಿಮಗೆ ಏನಾಯಿತು? ನೀವು ಯಾರಿಂದ ಸೋತುಹೋದಿರಿ? ಬಾಣದ ಗಾಯವುಳ್ಳವರಾಗಿ ಸಂಸಾರಿ ಮನುಷ್ಯನಂತೆ ನೀವು ಯಾಕೆ ಅಳುತ್ತಿರುವಿರಿ?' ಎಂದು ಕೇಳಿದರು. ಆಗ ಮಾಯಾಶಿವನು ಮೆಲ್ಲಗೆ ಅವರ ಕೈಯಲ್ಲಿ ವಾಸುಕಿಯೇ ಮೊದಲಾದ ತನ್ನ ಆಭರಣಗಳನ್ನು ಕೊಟ್ಟನು. ಆ ಶಿವನ ಕೊರಳಲ್ಲಿ ವಿಘ್ನೇಶನ ಮತ್ತು ಸ್ಕಂದನ ಕತ್ತರಿಸಲ್ಪಟ್ಟ ತಲೆಗಳು ಜೋಲುತ್ತಿದ್ದವು. ಅದನ್ನು ನೋಡಿ ಪಾರ್ವತೀದೇವಿಯು 'ಹಾ ಗಣೇಶ! ಹಾ ಸ್ಕಂದ! ಹಾರುದ್ರ!' ಎಂದು ಅಳುವವಳಾದಳು. ಅವಳ ಸಖಿಯರೂ ಅಳುವವರಾದರು. ಆಗ ನಂದಿಯು ಪಾರ್ವತಿಯೊಡನೆ 'ದೇವಿ! ಯುದ್ಧದಲ್ಲಿ ಅಸುರರ ಬಾಣಗಳಿಂದ ಗಾಯಹೊಂದಿರುವ ಈ ರುದ್ರದೇವರನ್ನು ಪರಿಪಾಲಿಸಿರಿ. ಯುದ್ಧದಲ್ಲಿ ವೀರಭದ್ರ ಮಣಿಭದ್ರ ಮೊದಲಾದ ಎಲ್ಲಾ ವೀರರೂ ಮೃತರಾದರು. ಯುದ್ಧರಂಗದಲ್ಲಿ ತಿರುಗುತ್ತಿರುವಾಗ ಈ ವಿನಾಯಕನ ಮತ್ತು ಸ್ಕಂದನ ತಲೆಗಳನ್ನು ನೋಡಿ ನಾನು ತೆಗೆದುಕೊಂಡು ಬಂದಿರುವೆನು' ಎಂದು ಹೇಳಿ ಆ ತಲೆಗಳನ್ನು ಮುಂದೆ ಹಾಕಿದನು.

ಅದನ್ನು ನೋಡಿ ಪಾರ್ವತೀದೇವಿಯು ನಾನಾವಿಧವಾಗಿ ವಿಲಾಪವನ್ನು ಮಾಡಿದಳು. ಅದನ್ನು ನೋಡಿ ಕಪಟಶಿವನು 'ದೇವಿ! ನಾನು ಸಾಕ್ಷಾತ್ ರುದ್ರನಾಗಿರುವೆನು. ಭಯವನ್ನು ಹೊಂದಬೇಡ' ಎಂದನು. ಪಾರ್ವತಿಯು 'ದೇವ! ವೃಷಭವು ಎಲ್ಲಿಗೆ ಹೋಯಿತು? ಬಾಣಗಳಿಂದ ಗಾಯವನ್ನು ಹೊಂದಿರುವ ನಿಮಗೆ ನಾನೇನು ಪ್ರಿಯವನ್ನು ಮಾಡಲಿ?' ಎಂದು ಹೇಳಿದಳು. ಅದಕ್ಕೆ ಆ ಮಾಯಾ ಮಹೇಶನು ಪಾರ್ವತೀದೇವಿಯ ಮಾತನ್ನು ಕೇಳಿ ದೀರ್ಘಶ್ವಾಸವನ್ನು ಬಿಡುವವನಾಗಿ

ಸತ್ತುಹೋದ ಮಕ್ಕಳನ್ನು ಸ್ಮರಿಸಿಕೊಂಡು ಯಾಕೆ ದುಃಖಪಡುವಿ? ದೇವಿ! ಈಗ ನಿನ್ನ ಅಂಗಸಂಗವನ್ನು ಕೊಟ್ಟು ನನ್ನನ್ನು ಬದುಕಿಸುವವಳಾಗು' ಎಂದು ಹೇಳಿದನು. ಆಗ ಪಾರ್ವತಿಯು 'ನಿಮ್ಮ ಮಾತು ಸರಿಯಾಗಿ ಇಲ್ಲವಲ್ಲಾ! ಮಹಾವಿಷಾದವೂ ಭಯವೂ ಬಂದಿರುವಾಗ ಧ್ಯಾನ ಮಾಡುವ ಸಂದರ್ಭದಲ್ಲಿ ವಾಂತಿಯಾಗುವಾಗ ಜ್ವರಬಂದಿರುವಾಗ ಶ್ರಾದ್ಧದಿವಸದಲ್ಲಿ ಪ್ರಯಾಣಕಾಲದಲ್ಲಿ ದೊಡ್ಡವರ ಸಮೀಪದಲ್ಲಿ ಜ್ಞಾನಿಗಳು ಸ್ತ್ರೀಯರೊಡನೆ ಕ್ರೀಡೆಯನ್ನು ಪರಿತ್ಯಜಿಸುವರಲ್ಲಾ! ಈಗ ಪುತ್ರಶೋಕದಿಂದ ಪೀಡಿತಳಾದ ನನ್ನೊಡನೆ ಈ ಮಾತನ್ನು ಹೇಗೆ ಆಡುವಿರಿ' ಎಂದು ಕೇಳಿದಳು. ಆದಕ್ಕೆ ಮಾಯಾ ಮಹೇಶನು 'ಯಾರು ಆಸೆಯಿಂದ ಬಂದಿರುವ ಪುರುಷನಿಗೆ ಸಂತೋಷ ಪಡಿಸುವುದಿಲ್ಲವೋ ಆ ಸ್ತ್ರೀಯರು ರೌರವ ನರಕದಲ್ಲಿ ಬೀಳುವರು. ನಾನೀಗ ಗಣಗಳಿಂದ ರಹಿತನಾಗಿರುವೆನು. ಮಕ್ಕಳಿಂದ ರಹಿತನಾಗಿರುವೆನು. ಬುದ್ಧಿಯಿಂದ ರಹಿತನಾಗಿರುವೆನು. ಸರ್ವಶೂನ್ಯನಾಗಿರುವೆನು. ಜೀವಿತದಿಂದಲೇ ಹೀನನಾಗಿ ನಿನ್ನನ್ನು ಕೇಳಲಿಕ್ಕೆ ಬಂದಿರುವೆನು. ನನ್ನ ಗುಹೆಗೆ ಹೋಗಿ ನನ್ನ ದೇಹವನ್ನು ಪರಿತ್ಯಜಿಸುವೆನು. ನಂದಿಯೇ! ಏಳು! ಹೋಗುವ. ಪ್ರಿಯೆ! ನೀನು ಇಚ್ಛಾನುಸಾರವಾಗಿ ಹೋಗು' ಎಂದು ಹೇಳಿದನು. ಆ ಮಾತನ್ನು ಕೇಳಿ ಪಾರ್ವತೀದೇವಿಯು ತುಂಬಾ ದುಃಖವುಳ್ಳವಳಾಗಿ ಒಂದು ಮಾತಾಡದೆ ಬಹಳವಾಗಿ ಯೋಚನೆ ಮಾಡುತ್ತಾ ಕೂತುಕೊಂಡಳು.



## ಭಗವಂತನು ವೃಂದೆಯನ್ನು ಮೋಹಗೊಳಿಸಿದ್ದು [1]

ಈರೀತಿಯಾಗಿ ಮಾಯಾಮಹೇಶನು ಪಾರ್ವತೀದೇವಿಯನ್ನು ಮೋಹಗೊಳಿಸಲು ಪ್ರಯತ್ನಮಾಡುತ್ತಿರುವಾಗ ಕ್ಷೀರಸಮುದ್ರದಲ್ಲಿ ಮಲಗಿದ್ದ ಪರಮಾತ್ಮನು ಹೃದಯದಲ್ಲಿ ಕ್ಷೋಭೆಯಾದಂತೆ ನಟಿಸಿ, ಜಾಲಂಧರನ ಯುದ್ಧವನ್ನು ನೋಡಿ ಪಾರ್ವತಿಯು ಏನು ಮಾಡುತ್ತಿರುವಳೆಂದು ನೋಡಿ ಬಾರೆಂದು ಗರುಡದೇವರನ್ನು ನೋಡಿ ಹೇಳಿದರು. ಗರುಡರು ಸರ್ವತ್ರ ನೋಡುವವರಾಗಿ ಪಾರ್ವತೀದೇವಿಯು ಇದ್ದಲ್ಲಿಗೆ ಹೋಗಿ ಅಲ್ಲಿ ಇದ್ದ ಮಾಯಾಮಹೇಶನನ್ನು ನೋಡಿದರು. ಅಸುರರ ಮಾಯೆಯಿಂದ ಭ್ರಮವುಂಟಾಗದಂತೆ ಮಾಡುವ ದೇವರು ಕೊಟ್ಟಿದ್ದ ಗುಳಿಗೆಯನ್ನು ಬಾಯಿಯಲ್ಲಿ

1. ಪ.ಪು. ಉ.ಖಂ. ಅ-15, 16

ಹಾಕಿಕೊಂಡು ನೋಡಲು 'ಅವನು ಶಿವನಲ್ಲ, ದೈತ್ಯನು' ಎಂದು ತಿಳಿದುಕೊಂಡು ದುಃಖಪಡುತ್ತಾ ಭಗವಂತನ ಮುಂಭಾಗದಲ್ಲಿ ಬಂದು ಜಾಲಂಧರನು ಶಿವನ ವೇಷವನ್ನು ಧರಿಸಿಕೊಂಡು ಪಾರ್ವತಿಯನ್ನು ಮೋಸಮಾಡಲಿಕ್ಕೆ ಹೋಗಿರುವನು ಎಂದು ಹೇಳಿದರು.

ತರುವಾಯ ಪರಮಾತ್ಮನು ಒಂದು ರೂಪದಿಂದ ಅಲ್ಲಿಯೇ ಇದ್ದು ಇನ್ನೊಂದು ರೂಪದಿಂದ ಹೊರಟುಹೋದನು. ಶೇಷದೇವರೂ ಮತ್ತೊಂದು ರೂಪದಿಂದ ಪರಮಾತ್ಮನ ಬಳಿಗೆ ಬಂದು 'ನಾನು ಎಲ್ಲಿಗೆ ಬರಬೇಕು' ಏನನ್ನು ಮಾಡಬೇಕು?' ಎಂದು ಕೇಳಿದರು. ರುದ್ರನಿಗೂ ಪಾರ್ವತಿಗೂ ಉಪಕಾರವಾಗುವುದಕ್ಕಾಗಿ ಸುಂದರಿಯಾದ ಜಾಲಂಧನ ಹೆಂಡತಿಯನ್ನು ಅಪಹರಿಸುವೆನು. ನೀನೂ ಬಾ ಹೋಗುವ. ಆ ವೃಂದೆಯನ್ನು ಸೆಳೆಯುವುದಕ್ಕಾಗಿ ಒಂದು ವನಕ್ಕೆ ಹೋಗುವ' ಎಂದು ಹೇಳಿ ಪರಮಾತ್ಮನೂ ಶೇಷದೇವರೂ ಜಟೆಯನ್ನು ಧರಿಸಿಕೊಂಡು ನಾರುವಸ್ತ್ರವನ್ನು ಉಟ್ಟುಕೊಂಡು ಸರ್ವಾಭಿಷ್ಟಪ್ರದವಾದ ಮನೋಹರವಾದ ಆಶ್ರಮವನ್ನು ನಿರ್ಮಿಸಿದರು. ಸಿಂಹ ವರಾಹ ಹುಲಿ ಇತ್ಯಾದಿ ಮೃಗಗಳು ಅವರಿಗೆ ಶಿಷ್ಯರಾಗಿಯೂ ಪ್ರಶಿಷ್ಯರಾಗಿಯೂ ಆದರು. ಆ ಸಮಯದಲ್ಲಿ ಪರಮಾತ್ಮನು ವೃಂದೆಯನ್ನು ಸೆಳೆದನು. ಅವಳಿಗೆ ಹೃದಯಕ್ಕೆ ಸಂತಾಪವನ್ನು ಉಂಟುಮಾಡಿದನು. ಆ ಸಮಯದಲ್ಲಿ ವೃಂದೆಯು ಬಹಳ ತಾಪವುಳ್ಳವಳಾಗಿ ದಿವ್ಯಸ್ತ್ರೀಯರಿಂದ ಚಾಮರವನ್ನು ಬೀಸಲಿಕ್ಕೆ ಹೇಳಿದಳು. ತನ್ನ ಪ್ರಿಯನ ಆಗಮನವನ್ನೇ ಯೋಚಿಸುವವ ಳಾದಳು. ಮೂರ್ಛೆಯನ್ನು ಹೊಂದಿದಳು. ಚತುರ್ದಶಿಯಲ್ಲಿ ರಾತ್ರಿಯಲ್ಲಿ ಕೊನೆಯ ಝಾಮದಲ್ಲಿ ವೈಧವ್ಯಸೂಚಕವಾದ ಸ್ವಪ್ನವನ್ನು ನೋಡಿದಳು. ಜಾಲಂಧರನ ಶಿರಸ್ಸು ಅಪಹರಿಸಲ್ಪಟ್ಟು ಇತ್ತು. ಹದ್ದುಪಕ್ಷಿಯು ಕಣ್ಣುಗಳನ್ನು ಕುಕ್ಕಿತ್ತು. ಕಿವಿಯೂ ಮೂಗೂ ಕತ್ತರಿಸಲ್ಪಟ್ಟಿತ್ತು. ತಲೆಕೂದಲನ್ನು ಬಿಚ್ಚಿಕೊಂಡು ಕಪ್ಪಾಗಿದ್ದ ಕೆಂಪಾದ ಸೀರೆಯಿದ್ದ ಕೆಂಪಾದ ಮುಖವಿದ್ದ ಒಬ್ಬ ಹೆಂಗಸು ಜಾಲಂಧರನನ್ನು ತಿಂದು ಹಾಕಿದಂತೆಯೂ ಸ್ವಪ್ನವನ್ನು ಕಂಡಳು. ತರುವಾಯ ಎದ್ದಮೇಲೆ ಅವಳು ಬ್ರಾಹ್ಮಣರಿಗೆ ಆ ಸ್ವಪ್ನವನ್ನು ಹೇಳಿಕೊಂಡಳು. ಶಾಸ್ತ್ರಪಾರಂಗತರಾದ ಬ್ರಾಹ್ಮಣರು ಆ ಸ್ವಪ್ನವನ್ನು ಕೇಳಿ 'ದೇವಿ! ಇದು ತುಂಬ ಅನಿಷ್ಟಸೂಚಕವಾದ ಸ್ವಪ್ನವಾಗಿರುವುದು. ಬ್ರಾಹ್ಮಣರಿಗೆ ಗೋದಾನ ವಸ್ತ್ರದಾನ ಇತ್ಯಾದಿ ದಾನಗಳನ್ನು ಕೊಡು' ಎಂದು ಹೇಳಿದರು. ಬ್ರಾಹ್ಮಣರು ದಾನವನ್ನು ಪಡೆದು ಸಂತುಷ್ಟರಾಗಿ ವೃಂದೆಗೆ ಅಭಿಷೇಕ ಮಾಡಿದರು.

ಆದರೂ ಅವಳಿಗೆ ಸಂತಾಪವಾಗುತ್ತಿತ್ತು. ಬ್ರಾಹ್ಮಣರನ್ನು ಕಳುಹಿಸಿ ಮಾಡಿಯ

ಮೇಲೆ ಹೋದಳು. ತರುವಾಯ ಪರಮಾತ್ಮನು ಆಕರ್ಷಣ ಮಾಡಿದ ಕಾರಣ ರಥದಲ್ಲಿ ಕೂತುಕೊಂಡು ಸ್ಮರದೂತಿಯಿಂದ ಸಹಿತಳಾಗಿ ಕಾಡಿಗೆ ಹೋದಳು. ಜಾಲಂಧರನನ್ನು ಹೇಗೆ ನೋಡುವೆನೆಂದು ಸ್ಮರಿಸಿಕೊಂಡಳು. ವಿಚಿತ್ರವಾದ ವನವನ್ನು ಕಂಡಳು. ರಥವನ್ನು ಓಡಿಸುತ್ತಿದ್ದ ಸಖಿಯಾದ ಸ್ಮರದೂತಿಯೊಡನೆ 'ಬೇಗನೆ ಮನೆಗೆ ರಥವನ್ನು ಓಡಿಸು' ಎಂದು ಹೇಳಿದಳು. ಅದಕ್ಕೆ ಅವಳು 'ಸಖಿ! ನಮ್ಮ ರಥವು ಯಾವ ದಿಕ್ಕಿನಲ್ಲಿ ಇದೆ ಎಂದು ಒಂದೂ ತಿಳಿಯಲಿಲ್ಲ. ಕುದುರೆಗಳು ಶ್ರಮಪಟ್ಟಿರುವುವು. ಇಲ್ಲಿ ದಾರಿಯೇ ಇರುವುದಿಲ್ಲ. ದೈವೇಚ್ಛೆಯಿಂದ ರಥವು ಹೋದಲ್ಲಿಗೆ ಹೋಗಲಿ. ಇಲ್ಲಿ ಯಾರೋ ಮಾಂಸಭಕ್ಷಕನು ಇರಬಹುದು' ಎಂದು ಹೇಳಿದಳು. ಶೀಘ್ರವಾಗಿ ರಥವನ್ನು ಓಡಿಸಿದಳು. ಆ ರಥವು ವೇಗದಿಂದ ಮುಂದೆ ಹೋಯಿತು. ಅಲ್ಲಿ ಭಯಂಕರವಾದ ವನವಿದ್ದಿತು. ಅಲ್ಲಿ ಸರಿಯಾಗಿ ಗಾಳಿಯಿರಲಿಲ್ಲ. ಪಕ್ಷಿಗಳ ಶಬ್ದವೂ ಇರಲಿಲ್ಲ. ಬೆಳಕಾಗಲೀ ನೀರಾಗಲೀ ಇರಲಿಲ್ಲ. ಅಲ್ಲಿ ಬರಲು ರಥದ ಲಕ್ಷಣವೂ ವಿಪರೀತವಾಯಿತು. ಅಶ್ವತರಿಗಳು ಕೂಗಲಿಲ್ಲ. ರಥದ ಚಕ್ರದ ಶಬ್ದವೂ ಆಗಲಿಲ್ಲ. ಪತಾಕೆಯೂ ಚಲಿಸಲಿಲ್ಲ. ಗಂಟೆಗಳು ಶಬ್ದ ಮಾಡಲಿಲ್ಲ. ಇದನ್ನೆಲ್ಲಾ ನೋಡಿ ವೃಂದೆಯು 'ಸಖಿ! ಸ್ಮರದೂತಿ! ನಾವು ಎಲ್ಲಿ ಹೋಗಲಿ? ವನದಲ್ಲಿ ಸಿಂಹ ಹುಲಿಗಳ ಭಯವಿದೆ. ಮನೆಯಲ್ಲಿ ರಾಜ್ಯದಲ್ಲಿ ನನಗೆ ಸುಖವಿಲ್ಲ' ಎಂದಳು. ಸ್ಮರದೂತಿಯು 'ದೇವಿ! ಮುಂದೆ ಒಂದು ಭಯಂಕರವಾದ ಬೆಟ್ಟವು ಕಾಣಿಸುತ್ತದೆ.

ಅದನ್ನು ನೋಡಿ ಕುದುರೆಗಳು ಅಂಜಿಕೆಯಿಂದ ಮುಂದೆ ಕಾಲಿಡುವುದಿಲ್ಲ' ಎಂದಳು. ಅದನ್ನು ಕೇಳಿ ವೃಂದೆಯೂ ಅಂಜಿಕೊಂಡಳು. ರಥದಲ್ಲಿಯೇ ಬೇಗನೇ ಎದ್ದು ನಿಂತಳು. ಅಷ್ಟರಲ್ಲಿಯೇ ಒಬ್ಬ ಭಯಂಕರನಾದ ರಾಕ್ಷಸನು ಬಂದನು. ಅವನಿಗೆ ಮೂರು ಕಾಲುಗಳಿದ್ದವು. ಐದು ಕೈಗಳು, ಏಳು ಕಣ್ಣುಗಳು, ಅತಿಭಯಂಕರ ನಾಗಿದ್ದನು. ಪಿಂಗಲ ಬಣ್ಣವುಳ್ಳವನಾಗಿದ್ದನು. ಹುಲಿಯಂತೆ ಕಿವಿ ಕೆಂಪಾದ ಕೂದಲು ಅವನನ್ನು ನೋಡಿದ ಕೂಡಲೇ ವೃಂದೆಯು ಅಂಜಿಕೆಯಿಂದ ನಡುಗಿಹೋದಳು. ಕೈಗಳಿಂದ ಕಣ್ಣುಗಳನ್ನು ಮುಚ್ಚಿಕೊಂಡಳು. ಸ್ಮರದೂತಿಯು ಚಾಟುವಾರಿಯನ್ನು ಕೆಳಗೆ ಹಾಕಿ ವೃಂದೆಯೊಡನೆ 'ದೇವಿ! ಅಂಜಿಕೆಯಾಗುತ್ತದೆ. ರಕ್ಷಸು. ತಿನ್ನಲಿಕ್ಕಾಗಿ ಇವನು ಓಡಿ ಬರುತ್ತಿರುವನು' ಎಂದಳು. ಆ ಸಮಯದಲ್ಲಿ ರಾಕ್ಷಸನು ರಥದ ಬಳಿಗೆ ಬಂದವನಾಗಿ ಕುದುರೆಗಳಿಂದ ಸಹಿತವಾದ ರಥವನ್ನು ಕೈಯಿಂದ ಮೇಲಕ್ಕೆ ಎತ್ತಿ ತಿರುಗಿಸಿದನು. ವೃಂದೆಯು ಅಂಜಿಕೆಯಿಂದ ಭೂಮಿಯಲ್ಲಿ ಬಿದ್ದಳು. ಸ್ಮರದೂತಿಯೂ ಮರದ ಬುಡದಲ್ಲಿ ಬಿದ್ದಳು. ತರುವಾಯ ರಾಕ್ಷಸನು ಕುದುರೆಗಳನ್ನೆಲ್ಲಾ ತಿಂದು

ಹಾಕಿದನು. ವೃಂದೆಯನ್ನು ಕೈಯಿಂದ ಎತ್ತಿಹಿಡಿದನು. 'ನಿನ್ನ ಗಂಡನು ಯುದ್ಧದಲ್ಲಿ ರುದ್ರನಿಂದ ಮೃತನಾದನೆಂದು ಕೇಳಿದ್ದೇನೆ. ನಿನಗೆ ಪ್ರಾಣವು ಬೇಕೆಂಬ ಅಭಿಪ್ರಾಯವಿದ್ದರೆ ನನ್ನ ಹೆಂಡತಿಯಾಗು. ಬಹುಕಾಲ ಬದುಕಿರು. ಮಾಂಸವನ್ನು ತಿನ್ನು. ಮದ್ಯಪಾನವನ್ನು ಮಾಡು' ಎಂದು ಹೇಳಿದನು.

ಆ ಮಾತನ್ನು ಕೇಳಿ ವೃಂದೆಗೆ ಪ್ರಾಣವು ಹೋದಂತೆ ಆಯಿತು. ಆ ಸಮಯದಲ್ಲಿ ಪರಮಾತ್ಮನೂ ಶೇಷದೇವರೂ ಋಷಿವೇಷದಿಂದ ಬಂದರು. ಅವರನ್ನು ನೋಡಿ ಸ್ಮರದೂತಿಯು ವಿಲಾಪವನ್ನು ಮಾಡಿದಳು. ಅದನ್ನು ಕೇಳಿ ಅವರು 'ಸುಂದರಿ! ಭಯಪಡಬೇಡ. ನಿನ್ನನ್ನು ರಕ್ಷಿಸಲಿಕ್ಕೆ ನಾವು ಬಂದಿರುವೆವು' ಎಂದು ಹೇಳಿ ರಾಕ್ಷಸನೊಡನೆ 'ಅಧಮಾಚಾರವುಳ್ಳವನೇ! ಈ ಕೋಮಲಾಂಗಿಯನ್ನು ಬಿಟ್ಟುಬಿಡು' ಇತ್ಯಾದಿ ಮಾತುಗಳನ್ನು ಆಡಿದರು. ಅದನ್ನು ಕೇಳಿ ರಾಕ್ಷಸನು ಕೋಪಿಸಿಕೊಂಡು 'ನೀನು ಸಮರ್ಥನಾಗಿದ್ದರೆ ಇವಳನ್ನು ನನ್ನ ಕೈಯಿಂದ ಬಿಡಿಸು' ಎಂದನು. ಅಷ್ಟು ಹೇಳುವ ಮಾತ್ರವೇ ಪರಮಾತ್ಮನು ಕೋಪದಿಂದ ನೋಡಲು ರಾಕ್ಷಸನು ಭಸ್ಮವಾಗಿಹೋದನು. ಪರಮಾತ್ಮನ ಮಾಯೆಯಿಂದ ಮೋಹಿತಳಾಗಿ ವೃಂದೆಯು 'ನನ್ನನ್ನು ರಕ್ಷಣೆ ಮಾಡಿದ ನೀವು ಯಾರು? ನನ್ನ ಕಷ್ಟವನ್ನು ಪರಿಹರಿಸಿದಿರಿ. ನಿಮ್ಮ ಆಶ್ರಮದಲ್ಲಿ ನಾನು ತಪಸ್ಸನ್ನು ಮಾಡುವೆನು' ಎಂದು. ಅದಕ್ಕೆ ಪರಮಾತ್ಮನು 'ನಾನು ಭರದ್ವಾಜರ ಮಗನು. ದೇವಶರ್ಮ ಎಂದು ಪ್ರಸಿದ್ಧನಾದವನು. ಎಲ್ಲಾ ಭೋಗ ಗಳನ್ನು ಬಿಟ್ಟು ಘೋರವಾದ ತಪಸ್ಸನ್ನು ಮಾಡಲಿಕ್ಕೆ ಬಂದಿರುವೆನು. ಈ ಶಿಷ್ಯನನ್ನು ಕರೆದುಕೊಂಡು ಬಂದಿರುವೆನು. ಇನ್ನು ಅನೇಕ ಶಿಷ್ಯರು ಇರುವರು. ನೀನು ನನ್ನ ಆಶ್ರಮಕ್ಕೆ ಬಂದು ತಪಸ್ಸನ್ನು ಮಾಡು. ದೂರದಲ್ಲಿರುವ ವನಕ್ಕೆ ಹೋಗುವ ಬಾ' ಎಂದು ವೃಂದೆಯೊಡನೆ ಹೇಳಿ ಪೂರ್ವದಿಕ್ಕಿಗೆ ಹೋದನು.

ವೃಂದೆಯು ಕಣ್ಣಲ್ಲಿ ನೀರನ್ನು ತುಂಬಿಸಿಕೊಂಡು ಹೋಗುತ್ತಿದ್ದಳು. ಅವಳ ಹಿಂದೆ ಸ್ಮರದೂತಿಯು ಹೋಗುತ್ತಿದ್ದಳು. ಆ ಸಮಯದಲ್ಲಿ ಒಬ್ಬ ಬೇಡನು ಬಲೆಯನ್ನು ಹಾಕಿ ಪ್ರಾಣಿಗಳನ್ನು ಸೆಳೆದನು. ಆಗ ವೃಂದೆಯೊಡನೆ ಸ್ಮರದೂತಿಯು 'ದೇವಿ! ನನ್ನನ್ನು ತಿನ್ನಲಿಕ್ಕೆ ಬರುತ್ತಿರುವನು. ನನ್ನನ್ನು ಹಿಡಿಯುವನು' ಎಂದಳು. ವೃಂದೆಯು ಆ ಮಾತನ್ನು ಕೇಳಿ ಅವನನ್ನು ನೋಡಿ ನಡುಗಿಹೋದಳು. ಸ್ಮರದೂತಿಯಿಂದ ಸಹಿತಳಾಗಿ ಓಡಿ ತಪಸ್ವಿಗಳ ಆಶ್ರಮಕ್ಕೆ ಹೋದಳು. ಆ ವನದಲ್ಲಿ ಅವಳು ಅತ್ಯಂತ ಅದ್ಭುತವಾದದ್ದೆಲ್ಲವನ್ನೂ ನೋಡಿದಳು. ನಾನಾ ಶಬ್ದವನ್ನು ಮಾಡುತ್ತಿದ್ದ ಬಂಗಾರ ದಂತೆ ಇದ್ದ ಪಕ್ಷಿಗಳನ್ನು ಬಂಗಾರದ ಕಮಲಗಳುಳ್ಳ ಬಂಗಾರದ ತೀರವುಳ್ಳ

ಇಳಿಬಾವಿಯನ್ನು ಹಾಲಿನ ಪ್ರವಾಹವುಳ್ಳ ನದಿಯನ್ನು ಜೇನುತುಪ್ಪವನ್ನು ಸುರಿಸುತ್ತಿದ್ದ ಮರಗಳನ್ನು ಅಲ್ಲಲ್ಲಿ ಸಕ್ಕರೆಯ ರಾಶಿಗಳನ್ನು ಮೋದಕಭಕ್ಷ್ಯಗಳ ರಾಶಿಗಳನ್ನು ಶುಚಿಕರ ಭಕ್ಷ್ಯಗಳನ್ನು ಅನೇಕ ಆಭರಣಗಳನ್ನು ನೋಡಿದಳು. ಅವುಗಳೆಲ್ಲವೂ ಅನೇಕವಾಗಿ ಆಕಾಶದಿಂದ ಬೀಳುತ್ತಿದ್ದವು. ಅತಿಸುಂದರವಾದ ಮಠದಲ್ಲಿ ಹುಲಿಯ ಚರ್ಮದ ಮೇಲೆ ಕೂತಿದ್ದ ಮೂರುಲೋಕವನ್ನೂ ಪ್ರಕಾಶಗೊಳಿಸುತ್ತಿದ್ದ ತಪಸ್ವಿಯನ್ನು ನೋಡಿದಳು. 'ವಿಭೋ! ನನ್ನನ್ನು ರಕ್ಷಿಸು. ತಪಸ್ಸು ಧರ್ಮ ಮೌನ ಇವುಗಳಿಂದ ಏನು ಪ್ರಯೋಜನವಿದೆ? ಭೀತರನ್ನು ರಕ್ಷಿಸುವುದಕ್ಕಿಂತ ಹೆಚ್ಚಾದ ಪುಣ್ಯವಿಲ್ಲ' ಎಂದಳು.

ಅಷ್ಟರಲ್ಲಿಯೇ ಬೇಡನು ಬಂದುಬಿಟ್ಟನು. ಆಗ ವೃಂದೆಯು ಭಯವುಳ್ಳವಳಾಗಿ ಆ ತಪಸ್ವಿ ವೇಷದಿಂದ ಇದ್ದ ಪರಮಾತ್ಮನ ಕಂಠವನ್ನು ಬಂದು ಆಲಿಂಗಿಸಿದಳು. ಆಗ ಭಗವಂತನು 'ನಿನ್ನ ಆಲಿಂಗನದಿಂದ ನಿನ್ನ ಗಂಡನ ತಲೆಯು ಸಂಪೂರ್ಣ ಶರೀರವುಳ್ಳದ್ದಾಗಿ ಆಗುವುದು. ನೀನು ಚಿತ್ರಶಾಲೆಗೆ ಹೋಗು' ಎಂದನು. ಅವಳು ಒಳಗೆ ಹೋಗಿ ದಿವ್ಯಮಂಚದಲ್ಲಿ ಕೂತುಕೊಂಡು ಗಂಡನ ತಲೆಯನ್ನು ಮುದ್ದಿಟ್ಟಳು. ಅಷ್ಟರಲ್ಲಿ ಜಾಲಂಧರನ ದೇಹದಂತೆ ಇದ್ದ ಸಂಪೂರ್ಣ ದೇಹವು ಕಾಣಿಸಿತು. ಅಂದರೆ ಭಗವಂತನೇ ಆ ರೂಪವನ್ನು ಧರಿಸಿದನು. ಆಗ ವೃಂದೆಯು 'ನಿಮಗೆ ನಾನು ಪ್ರಿಯವನ್ನು ಮಾಡುವೆನು. ನಿಮ್ಮ ಯುದ್ಧದ ವಿಷಯವನ್ನು ಹೇಳಿ' ಎಂದಳು. ಅದಕ್ಕೆ ಜಾಲಂಧರನ ರೂಪವನ್ನು ಧರಿಸಿದ್ದ ಪರಮಾತ್ಮನು 'ದೇವಿ! ನನಗೂ ರುದ್ರನಿಗೂ ಯುದ್ಧವು ನಡೆಯಿತು. ರುದ್ರನು ಕ್ರೂರವಾದ ಚಕ್ರದಿಂದ ನನ್ನ ತಲೆಯನ್ನು ಕಡಿದನು. ನಿನ್ನ ಸಿದ್ಧಿಯೋಗದಿಂದ ನಿನ್ನ ದೂತನೊಬ್ಬನು ತಲೆಯನ್ನು ಇಲ್ಲಿಗೆ ತಂದನು. ನಿನ್ನ ಅಂಗಸಂಗವನ್ನು ಹೊಂದಿರುವೆ. ನನ್ನ ಅಪರಾಧವನ್ನು ಕ್ಷಮಿಸು. ನಿನ್ನನ್ನು ಬಿಟ್ಟು ಯುದ್ಧಕ್ಕೆ ಹೋದದ್ದು ಸರಿಯಲ್ಲ' ಎಂದು ಹೇಳಿದನು. ತರುವಾಯ ವೃಂದೆಯು ಗಂಡನೆಂದೇ ತಿಳಿದುಕೊಂಡು ಜಾಲಂಧರನ ರೂಪವನ್ನು ಧರಿಸಿದ್ದ ಭಗವಂತ ನೊಡನೆ ಸಂತೋಷದಿಂದ ರಮಿಸುತ್ತಿದ್ದಳು. ಹೀಗೆಯೇ ಕೆಲವು ದಿವಸಗಳು ಹೋಗಲು ಭಗವಂತನು ಶಿವನ ಕಾರ್ಯವಾಯಿತೆಂದು ತಿಳಿದುಕೊಂಡನು.

ಒಂದು ದಿನದಲ್ಲಿ ವೃಂದೆಯು ವಿಹಾರವನ್ನು ಮುಗಿಸಿದ ಮೇಲೆ ತಪಸ್ವಿಯ ರೂಪವುಳ್ಳ ಭಗವಂತನಿಂದ ತಾನು ಆಲಿಂಗಿತಳಾಗಿರುವುದನ್ನು ನೋಡಿಕೊಂಡಳು. ಕೂಡಲೇ ಆಲಿಂಗನದಿಂದ ತನ್ನನ್ನು ಬಿಡಿಸಿಕೊಂಡು 'ತಪಸ್ವಿಯ ರೂಪದಿಂದ ನನ್ನನ್ನು ಮೋಹಗೊಳಿಸಲಿಕ್ಕೆ ಹೇಗೆ ಬಂದಿರುವೆ?' ಎಂದು ಕೇಳಿದಳು. 'ವಂದಾರಿಕೇ! ನಾನು

ಲಕ್ಷ್ಮೀಪತಿಯು. ನಿನ್ನ ಗಂಡನು ರುದ್ರನನ್ನು ಜಯಿಸುವುದಕ್ಕಾಗಿ ಪಾರ್ವತಿಯನ್ನು ತರುವುದಕ್ಕಾಗಿ ಹೋಗಿರುವನು. ಶಿವನು ನನಗೆ ಅತ್ಯಂತ ಪ್ರೀತಿಪಾತ್ರನು. ಜಾಲಂಧರನು ಶಿವನಿಂದ ಮೃತನಾದನು. ನೀನು ನನ್ನನ್ನು ಹೊಂದುವವಳಾಗು' ಎಂದು ಪರಮಾತ್ಮನು ಹೇಳಿದನು. ವೃಂದೆಯು 'ನನ್ನ ಗಂಡನಿಂದ ನೀನು ನಾನಾ ವಿಧವಾಗಿ ಸತ್ಕೃತನಾಗಿರುವಿ. ಹೀಗೆ ಪರಸ್ತ್ರೀಯಲ್ಲಿ ಹೇಗೆ ಆಸಕ್ತನಾಗಿರುವೆ? ನೀನು ಕಪಟ ತಾಪಸನ ರೂಪವನ್ನು ಧರಿಸಿ ನನ್ನನ್ನು ಹೇಗೆ ಮೋಸಮಾಡಿದಿಯೋ ಹಾಗೆಯೇ ನಿನ್ನ ಹೆಂಡತಿಯನ್ನು ಒಬ್ಬ ಕಪಟಿಯಾದ ತಪಸ್ವಿಯು ಅಪಹರಿಸುವನು' ಎಂದು ಶಾಪವನ್ನು ಕೊಟ್ಟಳು. ಅವಳ ತಪಸ್ಸು ಕಡಿಮೆಯಾಗುವುದಕ್ಕಾಗಿ ಪರಮಾತ್ಮನು ತನ್ನ ಇಚ್ಛೆಯಿಂದಲೇ ಆ ಶಾಪವನ್ನು ಸ್ವೀಕರಿಸುವವನಾಗಿ ಅಲ್ಲಿಯೇ ಮರೆಯಾದನು.

ತರುವಾಯ ಆ ಚಿತ್ರಶಾಲೆಯಾಗಲೀ ಆ ಮಂಚವಾಗಳೀ ಒಂದೂ ಇರಲಿಲ್ಲ. ಕೇವಲ ಶೂನ್ಯವಾದ ವನವಿದ್ದಿತು. ತರುವಾಯ ವೃಂದೆಯು ಸಖಿಯಿಂದ ಸಹಿತಳಾಗಿ ಆಹಾರವನ್ನು ಪರಿತ್ಯಾಗ ಮಾಡಿ ಕಠಿಣವಾದ ತಪಸ್ಸನ್ನು ಮಾಡಿದಳು. ದೇಹವನ್ನು ಕೃಶವನ್ನಾಗಿ ಮಾಡಿಕೊಂಡಳು. ಆಗ ಗಂಧರ್ವಲೋಕದಿಂದ ಅಪ್ಸರ ಸ್ತ್ರೀಯರು ಬಂದು ಸ್ವರ್ಗಕ್ಕೆ ಬರಹೇಳಿದರು. ಅದಕ್ಕೆ ವೃಂದೆಯು 'ಸ್ವರ್ಗಲೋಕದ ಅಪ್ಸರಸ್ತ್ರೀಯರನ್ನು ನನ್ನ ಗಂಡನು ಅಪಹಾರ ಮಾಡಿಕೊಂಡು ಬಂದುಬಿಟ್ಟಿದ್ದಾರೆ. ಆದುದರಿಂದ ಸ್ವರ್ಗವು ನಿಯಮದಿಂದ ಸುಖಕರವಲ್ಲ. ನಾನು ನಿತ್ಯವನ್ನು ಸ್ಥಾನವನ್ನು ಅಪೇಕ್ಷಿಸುವೆನು' ಎಂದು ಹೇಳಿ ಕಳುಹಿಸಿದಳು. ಆದರೂ ಅವರು ಆಗಾಗ್ಗೆ ಸ್ನೇಹದಿಂದ ಬರುತ್ತಿದ್ದರು. ತರುವಾಯ ವೃಂದೆಯು ಯೋಗಾಭ್ಯಾಸದಿಂದ ದೇಹವನ್ನು ಹೂವಿನ ಮಳೆಯನ್ನು ಸುರಿಸಿದರು. ಸ್ಮರದೂತಿಯು ವೃಂದೆಯ ದೇಹವನ್ನು ಸುಟ್ಟು ತಾನೂ ಅಗ್ನಿಯಲ್ಲಿ ಪ್ರವೇಶಮಾಡಿದಳು. ವೃಂದೆಯು ದೇಹವನ್ನು ಪರಿತ್ಯಜಿಸಿ ಬ್ರಹ್ಮಲೋಕವನ್ನು ಹೊಂದಿದ ಸ್ಥಳವೇ ಗೋವರ್ಧನ ಪರ್ವತದ ಬಳಿಯಲ್ಲಿ ವೃಂದಾವನವೆಂದು ಪ್ರಸಿದ್ಧವಾಯಿತು.



# ಜಾಲಂಧರನ ಸಂಹಾರವು [1]

ಜಾಲಂಧರನು ಕಪಟದಿಂದ ಶಿವರೂಪವನ್ನು ಧರಿಸಿ ಹೋಗುವವನಾಗಿ ಪಾರ್ವತಿಯೊಡನೆ ತನ್ನೊಡನೆ ವಿಹಾರವನ್ನು ಮಾಡೆಂದು ಕೇಳಿಕೊಳ್ಳಲು ಪಾರ್ವತೀದೇವಿಯು ಕ್ಷೋಭೆಯುಳ್ಳವಳಾಗಿ ಅಲ್ಲಿಂದ ಹೊರಟು ಗಂಗಾತೀರಕ್ಕೆ ತಪಸ್ಸನ್ನು ಮಾಡುವೆನೆಂದು ಹೋದಳು. ಅಲ್ಲಿ ಪಾರ್ವತಿಯು ತನ್ನ ಸಖಿಯಾದ ಜಯೆಯೊಡನೆ 'ಸಖಿ! ನೀನು ನನ್ನ ರೂಪವನ್ನು ಧರಿಸಿಕೊಂಡು ಹೋಗಿ ಬಂದಿರುವವರು ರುದ್ರದೇವರೋ ಅಲ್ಲವೋ ಎಂದು ನೋಡಿಕೊಂಡು ಬಾ. ನಿನ್ನನ್ನು ನೋಡಿದ ಕೂಡಲೇ ಅವನು ಆಲಿಂಗನಾದಿಗಳನ್ನು ಮಾಡಿದರೆ ಅವನು ರುದ್ರದೇವರಲ್ಲ. ಅಸುರನು ಆ ವೇಷವನ್ನು ಧರಿಸಿಕೊಂಡು ಬಂದಿರುವನೆಂದು ನಿಶ್ಚಯಿಸು. ನಿನ್ನೊಡನೆ ನನ್ನ ನಿಮಿತ್ತವಾದ ಶುಭಾಶುಭವನ್ನು ಹೇಳಿದರೆ ರುದ್ರದೇವರೇ ಬಂದಿರುವರೆಂದು ನಿಶ್ಚಯಿಸಬಹುದು' ಎಂದು ಹೇಳಿ ಕಳುಹಿಸಿದಳು. ಹೀಗೆ ಪಾರ್ವತೀದೇವಿಯಿಂದ ಆಜ್ಞಪ್ತಳಾದ ಜಯೆಯು ಪಾರ್ವತಿಯ ರೂಪದಿಂದ ಬಂದಳು. ಅವಳನ್ನು ನೋಡಿ ತುಂಬಾ ಮನ್ಮಥಪೀಡಿತನಾದ ಜಾಲಂಧರನು ಅವಳನ್ನು ಆಲಿಂಗನ ಮಾಡಿದವನಾಗಿ ಆಗಲೇ ವೀರ್ಯವನ್ನು ವಿಸರ್ಜಿಸಿದನು. ಅದನ್ನು ತಿಳಿದು ಜಯೆಯು 'ನೀನು ರುದ್ರನಲ್ಲ. ಅಲ್ಪವೀರ್ಯವುಳ್ಳವನಾಗಿರುವಿ. ನಾನು ಪಾರ್ವತಿಯಲ್ಲ. ಅವಳ ಸಖಿಯು' ಎಂದು ಹೇಳಿ ತನ್ನ ರೂಪವನ್ನು ಧರಿಸಿ 'ನೀನು ರುದ್ರದೇವರಿಂದ ಸಾಯುವಿ' ಎಂದು ಹೇಳಿ ಪಾರ್ವತೀದೇವಿಯ ಒಳಗೆ ಹೋಗಿ 'ಬಂದಿರುವನು ಜಾಲಂಧರನು ನಿಮ್ಮ ಪತಿಯಾದ ರುದ್ರದೇವರಲ್ಲ' ಎಂದು ಹೇಳಿದಳು. ತರುವಾಯ ಪಾರ್ವತಿಯು ಭಯದಿಂದ ತಾವರೆಹೂವಿನ ಮಧ್ಯವನ್ನು ಪ್ರವೇಶಿಸಿದಳು. ಅವಳ ಸಖಿಯರು ಜಾಲಂಧರನ ಭಯದಿಂದ ಭ್ರಮರಿಗಳ ರೂಪವನ್ನು ಧರಿಸಿದರು.

ಈ ಸಮಯದಲ್ಲಿ ವೃಂದೆಯ ರಕ್ಷಕರು ವೃಂದೆಯನ್ನು ಕಾಣದೆ ಬೇಗನೇ ಬಂದು ಜಾಲಂಧರನ ರೂಪದಿಂದ ರುದ್ರದೇವರೊಡನೆ ಯುದ್ಧ ಮಾಡುತ್ತಿದ್ದ ಶುಂಭನೆಂಬ ದೈತ್ಯನನ್ನು ನೋಡಿ 'ವೃಂದೆಯು ಅಪಹೃತಳಾದಳು' ಎಂದು ತಿಳಿಸಿದರು. ತರುವಾಯ ಶುಂಭನು ಸರಿಯಾಗಿ ಕೇಳಲು ವಿಷ್ಣುವು ಅಪಹರಿಸಿದನು' ಎಂದರು. ಅದನ್ನು ಕೇಳಿ ಶುಂಭನು ಭಯವುಳ್ಳವನಾಗಿ ರುದ್ರದೇವರೊಡನೆ ಯುದ್ಧವನ್ನು ಬಿಟ್ಟು

1. ಪ.ಪು. ಉ.ಖಂ. ಅ-19

ಚಂಡಮುಂಡರನ್ನು ಜಾಲಂಧರನ ಬಳಿಗೆ ಕಳುಹಿಸಿದನು. ಅವರು ವೇಗದಿಂದ ಮಾನಸೋತ್ತರ ಪರ್ವತಕ್ಕೆ ಹೋಗಿ ಶಿವರೂಪವನ್ನು ಧರಿಸಿದ್ದ ಜಾಲಂಧರನೊಡನೆ 'ಯುದ್ಧದಲ್ಲಿ ಶುಂಭನು ಸೋತುಹೋದನು. ಸೈನ್ಯವು ರುದ್ರದೇವರಿಂದ ಹತವಾಯಿತು. ಬಾ ಯುದ್ಧವನ್ನು ಮಾಡು. ನೀನು ಪಾರ್ವತೀ ದೇವಿಯನ್ನು ಹೊಂದಲಾರಿ. ಸಿಂಹದ ಪತ್ನಿಯನ್ನು ನರಿಯು ಹೇಗೆ ಹೊಂದುವುದು? ಜಾಲಂಧರಪೀಠದಿಂದ ಹರಿಯು ನಿನ್ನ ರಾಣಿಯನ್ನು ಅಪಹರಿಸಿಕೊಂಡು ಹೋದನೆಂದು ವೃತ್ತಾತವು ತಿಳಿಯುತ್ತದೆ. ಆದುದರಿಂದ ನೀನು ಯುದ್ಧಮಾಡು. ಯುದ್ಧದಲ್ಲಿ ರುದ್ರದೇವರನ್ನು ಜಯಿಸಿ ಸರ್ವೇಶ್ವರನಾಗು. ಅಥವಾ ಅವನ ಬಾಣಗಳಿಂದ ಖಂಡಿತವಾಗಿ ಅವನ ಲೋಕವನ್ನು ಹೊಂದುವಿ' ಎಂದು ಹೇಳಿದರು.

ಅದನ್ನು ಕೇಳಿ ಜಾಲಂಧರನು ಕ್ರೋಧವುಳ್ಳವನಾಗಿ ಕಣ್ಣುಕೆಂಪಗೆ ಮಾಡಿಕೊಂಡು ಚಂಡಮುಂಡರನ್ನು ಸಮಾಧಾನಪಡಿಸಿ ಶಿವರೂಪವನ್ನು ಬಿಟ್ಟು ಹೋಗುತ್ತಾ ದಾರಿಯಲ್ಲಿ ದುರ್ವಾರಣನೊಡನೆ 'ದುರ್ವಾರಣ! ಈಗ ವಿಷ್ಣುವು ಮಾಯೆಯಿಂದ ಮಾಡಿದ ಕಾರ್ಯವನ್ನು ನೋಡಿದೆಯಾ? ವೃಂದೆಯನ್ನು ಅಪಹರಿಸಿದನು. ಮನೆಯಲ್ಲಿ ಇರುವ ಅಳಿಯನನ್ನು ನಂಬಬಾರದು. ಅವನಿಗೆ ಹೆಣ್ಣನ್ನು ಕೊಟ್ಟು ಕಳುಹಿಸಿ ಬಿಡಬೇಕು. ಅಳಿಯನನ್ನು ಯಾವಾಗಲೂ ಮನೆಯಲ್ಲಿ ವಾಸಮಾಡಿಸಬಾರದು. ಮಾಡಿದರೆ ಧನಸ್ತ್ರೀ ಇತ್ಯಾದಿಗಳನ್ನೆಲ್ಲವನ್ನೂ ಮೆಲ್ಲಮೆಲ್ಲನೆ ಅಪಹರಿಸುವನು' ಎಂದು ಹೇಳಿದನು. ಅದಕ್ಕೆ ದುರ್ವಾರಣನು 'ರಾಜನೇ! ಅವರವರು ಮಾಡಿದ ಕರ್ಮದ ಫಲವನ್ನು ಅನುಭವಿಸುವರು. ನೀನು ಪಾರ್ವತಿಯನ್ನು ಅಪಹರಿಸಲು ಬಂದಾಗ ನಿನ್ನ ಹೆಂಡತಿಯನ್ನು ಹರಿಯು ಅಪಹಿಸುವವನಾದನು' ಎಂದು ಹೇಳಲು ಜಾಲಂಧರನು ಮಾತಾಡಲಿಲ್ಲ. ಈಗ ಏನು ಮಾಡಲಿ? ಹರನನ್ನು ಜಯಿಸಲು ಹೋಗಲೇ? ಅಥವಾ ಹರಿಯನ್ನು ಜಯಿಸಲಿಕ್ಕೆ ಹೋಗಲೇ? ಹೀಗೆ ಎರಡು ಕಾರ್ಯವು ಬಂದು ಸೇರಿರಲು ಯಾವ ಕಾರ್ಯವನ್ನು ಮಾಡಲಿ ಎಂದು ಹೇಳು' ಎಂದನು. ದುರ್ವಾರಣನು 'ಹರಿಯ ಹತ್ತಿರ ಯುದ್ಧಕ್ಕೆ ಹೋದರೆ ಹಿಂದಿನಿಂದ ಹರನು ಬಂದು ಕೊಲ್ಲುವನು. ಯುದ್ಧದಲ್ಲಿ ಶೂರರು ನೆಗಾಡುವರು. ಶಿವನು ನಿನಗೆ ಹೋಗಲಿಕ್ಕೆ ದಾರಿಯನ್ನು ಬಿಡಲಾರನು. ಆದುದರಿಂದ ಮೊದಲು ಶಿವನನ್ನು ಜಯಿಸಿ ವಶಮಾಡಿಕೊಂಡು ಆಮೇಲೆ ಹರಿಯೊಡನೆ ಯುದ್ಧಕ್ಕೆ ಹೋಗು' ಎಂದು ಹೇಳಲು ಜಾಲಂಧರನು ರುದ್ರದೇವರೊಡನೆ ಯುದ್ಧಮಾಡಲಿಕ್ಕೆ ಹೋದನು.

ತನ್ನ ಪತ್ನಿಯ ಅಪಹಾರದಿಂದ ದುಃಖವನ್ನು ಹೊಂದಿದ್ದ ಜಾಲಂಧರನು ಯುದ್ಧರಂಗಕ್ಕೆ ಬಂದು ಯುದ್ಧರಂಗದಲ್ಲಿ ಇದ್ದ ರುದ್ರದೇವರನ್ನು ನೋಡಿದನು. ಶುಂಭನೊಡನೆ ಈ ತಾಪಸನನ್ನು ಕೊಲ್ಲಲಿಲ್ಲವೇ?' ಎಂದು ಕೇಳಿದನು. ಅದಕ್ಕೆ ಶುಂಭನು ಜಾಲಂಧರನೊಡನೆ 'ಈ ತಾಪಸನು ಯುದ್ಧದಲ್ಲಿ ಮಹಾಕಾರ್ಯವನ್ನು ಮಾಡಿದನು. ಇವನನ್ನು ಕೊಲ್ಲಲಿಕ್ಕೆ ಆಗಲಾರದು. ಜಯಿಸಲಿಕ್ಕೆಯೇ ಆಗಲಾರದು' ಎಂದು ಹೇಳಲು ಜಾಲಂಧರನು ಕೋಪದಿಂದ ಬಹುಸೈನ್ಯದಿಂದ ಸಹಿತನಾಗಿ ಧನುಸ್ಸನ್ನು ಹಿಡಿದುಕೊಂಡು ಯುದ್ಧಕ್ಕೆ ಹೋದನು. ರುದ್ರದೇವರ ಗಣಗಳಿಗೂ ಅವನಿಗೂ ಭಯಂಕರವಾದ ಯುದ್ಧವು ನಡೆಯಿತು. ರುದ್ರದೇವರಿಗೂ ಜಾಲಂಧರನಿಗೂ ಭಯಂಕರ ಯುದ್ಧವು ನಡೆಯಿತು. ಕೊನೆಗೆ ರುದ್ರದೇವರು ಜಾಲಂಧರನನ್ನು ಮೂರ್ಛೆಗೊಳಿಸಿದರು ಜಾಲಂಧರನು ಮೂರ್ಛಿತನಾಗಿರುವಾಗ ರುದ್ರದೇವರು ಅವನ ಸೈನ್ಯವನ್ನೆಲ್ಲಾ ನಾಶಮಾಡಿದರು. ಜಾಲಂಧರನು ಮೂರ್ಛೆಯಿಂದ ಎದ್ದು ಸೈನ್ಯವೆಲ್ಲವೂ ನಾಶವನ್ನು ಹೊಂದಿರುವುದನ್ನು ನೋಡಿ ಭಯವುಳ್ಳವನಾಗಿ ಶುಕ್ರಾಚಾರ್ಯರನ್ನು ಸ್ಮರಿಸಿದನು.

ಆಗಲೇ ಶುಕ್ರಾಚಾರ್ಯರು ಬಂದು ಸೇರಿದರು. ನಾನು ಏನು ಮಾಡಬೇಕೆಂದು ಕೇಳಿದರು. ಅದಕ್ಕೆ ಜಾಲಂಧರನು ಮೃತರಾದ ದೈತ್ಯರೆಲ್ಲರನ್ನೂ ಬದುಕಿಸಬೇಕೆಂದು ಹೇಳಿದನು. ಶುಕ್ರಾಚಾರ್ಯರು ಹಾಗೆಯೇ ದೈತ್ಯರೆಲ್ಲವನ್ನೂ ಬದುಕಿಸಿದರು. ಅದನ್ನು ತಿಳಿದು ರುದ್ರದೇವರು ಕೋಪಿಸಿಕೊಂಡರು. ಶುಕ್ರಾಚಾರ್ಯರನ್ನು ಕೊಲ್ಲಲಿಕ್ಕೆ ಶೂಲವನ್ನು ತೆಗೆದರು. ಆಗ ಶುಕ್ರಾಚಾರ್ಯರು ಏಕಾಂತದಲ್ಲಿ ರುದ್ರದೇವರೊಡನೆ 'ಸರ್ವವಿದ್ಯೆಗಳಲ್ಲಿ ಪಂಡಿತನಾದ ಬ್ರಾಹ್ಮಣನಾದ ನನ್ನನ್ನು ಹೇಗೆ ಕೊಲ್ಲುವಿರಿ? ನಾನು ಸತ್ತರೆ ನಿಮಗೆ ಬ್ರಹ್ಮಹತ್ಯೆಯು ಬರುವುದು' ಎಂದರು. ಅದನ್ನು ಕೇಳಿ ರುದ್ರದೇವರು ಪೂರ್ವದಲ್ಲಿ ಬ್ರಹ್ಮದೇವರ ಪಂಚಮಮುಖವನ್ನು ಕತ್ತರಿಸಲು ಅದು ತನ್ನನ್ನು ಪೀಡಿಸಿದ್ದನ್ನು ಜ್ಞಾಪಿಸಿಕೊಂಡು ಶೂಲವನ್ನು ಕೆಳಗಿಳಿಸಿದರು. 'ಬ್ರಾಹ್ಮಣನು ಪ್ರಾಣವನ್ನು ತೆಗೆಯಲಿಕ್ಕೆ ಬಂದರೂ ಕೊಲ್ಲಬಾರದು. ಈ ಶುಕ್ರನು ದೈತ್ಯರನ್ನು ಬದುಕಿಸುತ್ತಾ ಇರುವ ಕಾರಣ ನಿಗ್ರಹಕ್ಕೆ ಅರ್ಹನು. ಆದುದರಿಂದ ದೈತ್ಯರನ್ನು ಬದುಕಿಸುವ ಇವನನ್ನು ಸ್ತ್ರೀಯೋನಿಯಲ್ಲಿ ಹಾಕುವೆನು' ಎಂದು ಹೇಳುತ್ತಿರಲು ರುದ್ರದೇವರ ಮೂರನೇ ಕಣ್ಣಿನಿಂದ ವಸ್ತ್ರಹೀನಳಾದ ತಲೆಬಿಚ್ಚಿಕೊಂಡಿದ್ದ ಜೋಲುವ ದೊಡ್ಡ ಸ್ತನಗಳುಳ್ಳ ಭಯಂಕರಳಾದ ಒಬ್ಬ ಸ್ತ್ರೀಯು ಬಂದು ನನಗೆ ಆಜ್ಞಾಪಿಸಬೇಕೆಂದು ರುದ್ರದೇವರೊಡನೆ ಹೇಳಿಕೊಂಡಳು. ಅದಕ್ಕೆ ರುದ್ರದೇವರು

'ಕೃತ್ಯೆಯೇ! ನಾನು ಜಾಲಂಧರನನ್ನು ಕೊಲ್ಲುವವರೆಗೆ ಈ ದೈತ್ಯಾಚಾರ್ಯನನ್ನು ನಿನ್ನ ಯೋನಿಯಲ್ಲಿ ಧರಿಸಿಕೊಂಡು ಇರು. ಅವನನ್ನು ಕೊಂದಮೇಲೆ ಬಿಟ್ಟುಬಿಡು' ಎಂದು ಹೇಳಿದರು. ಈರೀತಿಯಾಗಿ ರುದ್ರದೇವರು ಹೇಳಲು ಆ ಕೃತ್ಯೆಯು ಶುಕ್ರಾಚಾರ್ಯ ರಿದ್ದಲ್ಲಿಗೆ ಓಡಿದಳು. ಅವಳನ್ನು ನೋಡಿ ಶುಕ್ರಾಚಾರ್ಯರು ಭೂಮಿಯಲ್ಲಿ ಬಿದ್ದುಬಿಟ್ಟರು. ದೈತ್ಯರು ಓಡಿದರು. ಅವಳು ಶುಕ್ರಾಚಾರ್ಯರ ಕೂದಲನ್ನು ಹಿಡಿದು ಎಳೆದುಕೊಂಡು ಬಂದಳು. ಅವರೂ ವಸ್ತ್ರರಹಿತರಾದರು. ಅವರನ್ನು ಅವಳು ಆಲಿಂಗಿಸಿ ನಗುತ್ತಾ ತನ್ನ ಯೋನಿಯಲ್ಲಿ ಧರಿಸಿದಳು. ಅದನ್ನು ನೋಡಿ ಜಾಲಂಧರನು ಬಾಣಗಳನ್ನು ಬಿಡುವಷ್ಟರಲ್ಲಿಯೇ ಅವಳು ಮರೆಯಾಗಿ ಹೋದಳು.

ತರುವಾಯ ಜಾಲಂಧರನು ರುದ್ರದೇವರೊಡನೆ 'ಶಿವ' ಮೊದಲು ನಿನ್ನನ್ನು ರಕ್ಷಣೆ ಮಾಡಿಕೊ. ನಿನ್ನನ್ನು ಆ ಹರಿಯಿರುವ ಸಮುದ್ರಕ್ಕೆ ಸೆಳೆದು ಹಾಕುವೆನು. ಆಮೇಲೆ ಬ್ರಹ್ಮನನ್ನು ಸೆಳೆದು ಹಾಕುವೆನು. ನಿಮ್ಮನ್ನು ಮೂವರನ್ನು ಜಯಿಸಿದ ಮೇಲೆ ನಾನೇ ಸರ್ವೇಶ್ವರನಾಗುವೆನು' ಎಂದು ಹೇಳಿ ಯುದ್ಧವನ್ನು ಮಾಡಿದನು. ರುದ್ರದೇವರ ಗಣಗಳಿಗೂ ದೈತ್ಯರಿಗೂ ಭಯಂಕರವಾದ ಯುದ್ಧವು ನಡೆಯಿತು.

ತರುವಾಯ ಜಾಲಂಧರನು ಮಾಯೆಯಿಂದ ಗೌರಿಯನ್ನು ಅವಳ ಸಖಿಯಾದ ಜಯೆಯನ್ನು ಮಾಡಿ ರುದ್ರನನ್ನು ಮೋಹಗೊಳಿಸೆಂದು ಜಯೆಯನ್ನು ಕಳುಹಿಸಿದನು. ಆ ಮಾಯೆಯ ಜಯೆಯು ರುದ್ರದೇವರ ಮುಂದೆ ಹೋಗಿ ತಲೆಬಿಚ್ಚಿಕೊಂಡು ಅಳುವವಳಾದಳು. ಏಕೆ ಅಳುವಿಯೆಂದು ರುದ್ರದೇವರು ಕೇಳಲು 'ಜಾಲಂಧರನು ಬಂದು ನಿಮ್ಮ ಪತ್ನಿಯನ್ನು ಅಪಹಾರ ಮಾಡಿಕೊಂಡನು' ಎಂದು ಹೇಳಿದಳು. ಆಗ ರುದ್ರದೇವರು 'ಜಯೆ! ನೀನು ವೃಷಭದ ಮೇಲೆ ಕುತುಕೋ. ನಿನ್ನನ್ನು ಅಸುರರು ಅಪಹರಿಸುವರು' ಎಂದು ಹೇಳಿದರು. ತರುವಾಯ ಜಯೆಯು ವೃಷಭದ ಮೇಲೆ ಕೂತುಕೊಂಡು ರುದ್ರದೇವರನ್ನು ಆಲಿಂಗಿಸಿ, 'ನಾನು ಹೋಗುತ್ತೇನೆ. ಪಾರ್ವತೀ ದೇವಿಯಿಲ್ಲದೆ ನಾನು ಬದುಕಲಾರೆನು' ಎಂದು ಹೇಳಿ ರುದ್ರದೇವರ ಜಟೆಯಲ್ಲಿದ್ದ ಚಂದ್ರನನ್ನು ಹಿಡಿದುಕೊಂಡು ಬೇಗನೆ ವೃಷಭದಿಂದ ಕೆಳಗೆ ಇಳಿದು ಹೊರಟು ಹೋದಳು. ರುದ್ರದೇವರು ಪಾರ್ವತೀದೇವಿಯು ಅಪಹೃತಳಾದಳು ಎಂಬ ಮಾತನ್ನು ಕೇಳಿ ಯೋಚಿಸಿದರು. ಆ ಸಮಯದಲ್ಲಿ ಜಾಲಂಧರನು ಮಾಯೆಯಿಂದ ಮಾಡಿದ ಪಾರ್ವತಿಯನ್ನು ತನ್ನ ರಥದಲ್ಲಿ ಇಟ್ಟುಕೊಂಡು ಗರ್ಜನೆ ಮಾಡುತ್ತಾ ಬಂದನು. ಅವನ ಗರ್ಜನೆಯಿಂದ ಭೂಮಿಯು ನಡುಕಿತು. ಪರ್ವತಗಳಲ್ಲಿ ಪ್ರತಿಧ್ವನಿಯಾಯಿತು. ಜಾಲಂಧರನು ರುದ್ರದೇವರಿಗೆ ಮಾಯಾಪಾರ್ವತಿಯನ್ನು

ತೋರಿಸಿದನು. ಅವಳು ಹಾನಾಥ! ಪ್ರಿಯ! ರುದ್ರ! ಎಂದು ಪದೇ ಪದೇ ಹೇಳುತ್ತಾ ಕಣ್ಣೀರನ್ನು ಸುರಿಸುತ್ತಿದ್ದಳು.

ಆಗ ರುದ್ರದೇವರು ನಾನು ಪತ್ನಿಯನ್ನು ಹೇಗೆ ಹೊಂದಲಿ ಎಂದು ಯೋಚಿಸಿದರು. ದೈತ್ಯನ ಮಾಯೆಯಿಂದ ಮೋಹಿತರಾಗಿ 'ಹಾ ಕಾಂತೆ! ನಿನ್ನನ್ನು ಹೇಗೆ ಅಪಹರಿಸಿದರು' ಇತ್ಯಾದಿ ರೀತಿಯಿಂದ ವಿಲಾಪವನ್ನು ಮಾಡಿದರು. ಆಗ ಜಾಲಂಧರನು 'ಸರ್ವಸಾಮರ್ಥ್ಯಹೀನನಾಗಿರುವಿ. ಈಶ್ವರನಾದರೂ ಪಾರ್ವತಿ ಯಿಲ್ಲದೆ ನೀಚನಾಗಿರುವಿ. ಅಳಬೇಡ. ನಿನ್ನ ಹೆಂಡತಿಯನ್ನು ನಿನಗೇ ಕೊಟ್ಟುಬಿಡು ತ್ತೇನೆ' ಎಂದು ಹೇಳಿದನು. ಈರೀತಿಯಾಗಿ ಹೇಳಿ ತನ್ನ ರಥದಿಂದ ಮಾಯಾ ಪಾರ್ವತಿಯನ್ನು ಕೆಳಗಿಳಿಸಿ ರುದ್ರದೇವರ ಎದುರಾಗಿ ಸೈನ್ಯವನ್ನು ಕಳುಹಿಸಿದನು. ರುದ್ರದೇವರು ವೃಷಭದ ಮೇಲೆ ಕೂತುಕೊಂಡು 'ಬನ್ನಿರಿ. ರಕ್ಷಿಸಿರಿ. ರಕ್ಷಿಸಿರಿ' ಎಂದು ಕೂಗುತ್ತಿದ್ದ ಮಾಯಾಪಾರ್ವತಿಯನ್ನು ಹಿಡಿಯುವುದಕ್ಕಾಗಿ ವೃಷಭದ ಮೇಲೆ ಕೂತುಕೊಂಡು ಅಸುರ ಸೈನ್ಯವಿದ್ದಲ್ಲಿಗೆ ಓಡಿದರು. ರುದ್ರದೇವರು ಹೋಗಿ ಮಾಯಾಪಾರ್ವತಿಯನ್ನು ಹಿಡಿಯುವಷ್ಟರಲ್ಲಿಯೇ ಶುಂಭಾಸುರನು ಮಾಯಾ ಪಾರ್ವತಿಯನ್ನು ಹಿಡಿದುಕೊಂಡು ಆಕಾಶದಲ್ಲಿ ಹೋಗಿ ನಿಂತುಕೊಂಡನು. ಆಗ ಶುಂಭಾಸುರನು ಮೇಲೆ ಮಾಯಾಪಾರ್ವತಿಯನ್ನು ಬಿಟ್ಟುಬಿಟ್ಟನು. ಅವಳು ಅಳುತ್ತಾ ಕೆಳಗೆ ಶೂಲದ ಮೇಲೆ ಬಿದ್ದು ರುದ್ರದೇವರ ಮುಂಭಾಗದಲ್ಲಿಯೇ ಪ್ರಾಣಪರಿತ್ಯಾಗ ಮಾಡಿದಳು.

ಈರೀತಿಯಾಗಿ ಮಾಯಾಪಾರ್ವತಿಯು ಮೃತಳಾದದ್ದನ್ನು ನೋಡಿ ರುದ್ರದೇವರು 'ಹಾ ಪ್ರಿಯೆ!' ಎಂದು ಹೇಳಿ ಮೂರ್ಛಿತರಾಗಿ ಭೂಮಿಯಲ್ಲಿ ಬಿದ್ದರು. ಒಂದುಕ್ಷಣದಲ್ಲಿ ಜ್ಞಾನ ಬಂದು ಎದ್ದವರಾಗಿ ಶುಂಭನೇ ಮೊದಲಾದ ನಿಮ್ಮನ್ನು ಗೌರಿಯು ಸಂಹರಿಸುವಳು' ಎಂದು ಶಾಪವನ್ನು ಕೊಟ್ಟರು. ತರುವಾಯ ಆ ಮನ್ವಂತರವು ಹೋದ ಮೇಲೆ ಶುಂಭಾದಿಗಳು ರುದ್ರದೇವರ ಶಾಪದಿಂದ ಯುದ್ಧದಲ್ಲಿ ಪಾರ್ವತಿದೇವಿಯಿಂದ ಮೃತರಾದರು. ರುದ್ರದೇವರು ಅವರಿಗೆ ಶಾಪವನ್ನು ಕೊಟ್ಟಮೇಲೆ 'ಹಾ ಪ್ರಿಯೆ! ಎಲ್ಲಿಗೆ ಹೋದಿರಿ? ಯುದ್ಧರಂಗದಲ್ಲಿ ನನ್ನನ್ನು ಕೈಬಿಟ್ಟು ಹೋದೆಯಾ? ದಕ್ಷನ ಯಾಗದಲ್ಲಿ ದೇಹಪರಿತ್ಯಾಗವನ್ನು ಮಾಡಿದಿ. ಪುನಃ ಹಿಮವಂತನಿಗೆ ಮಗಳಾದವಳು ನನ್ನನ್ನು ಬಿಟ್ಟು ಹೋದಿಯಾ? ಏಳು ಏಳು' ಇತ್ಯಾದಿ ರೀತಿಯಾಗಿ ರುದ್ರದೇವರು ವಿಲಾಪವನ್ನು ಮಾಡಿದರು. ರುದ್ರದೇವರು ಈರೀತಿಯಾಗಿ ದೈತ್ಯನ ಮಾಯೆಯಿಂದ ಮೋಹಿತನಾಗಿರುವುದನ್ನು ನೋಡಿ

ದೇವತೆಗಳ ಮಧ್ಯದಲ್ಲಿ ಅಂತರಿಕ್ಷದಲ್ಲಿ ಎಲ್ಲರಿಗೂ ಮರೆಯಾಗಿ ಬ್ರಹ್ಮದೇವರು ಬಂದು 'ನಿನ್ನ ಪತ್ನಿಯು ಮೃತಳಾಗಿಲ್ಲ. ಜಾಲಂಧರನ ಮಾಯೆಯಿದು. ಪಾರ್ವತಿಯು ಕಮಲಕೋಶದೊಳಗಿರುವಳು. ನೀನು ಶತ್ರುಗಳೊಡನೆ ಯುದ್ಧ ಮಾಡಿ ಅವರನ್ನು ಸಂಹರಿಸು. ಭಕ್ತರನ್ನು ಪರಿಪಾಲಿಸು' ಎಂದು ಹೇಳಿದರು.

ಬ್ರಹ್ಮದೇವರ ಮಾತಿನಿಂದ ರುದ್ರದೇವರ ಅಸುರಮಾಯೆಯೆಂದು ತಿಳಿದವ ರಾಗಿ ದೊಡ್ಡ ಶಿಲೆಯನ್ನು ಹಾಕಿ ಮುನ್ನೂರು ಕೋಟಿ ಅಸುರರನ್ನು ಸಂಹರಿಸಿದರು. ತರುವಾಯ ವೃಷಭದ ಮೇಲೆ ಕೂತುಕೊಂಡು ಮಹಾಕೋಪದಿಂದ ರುದ್ರದೇವರು ಪಿನಾಕಧನುಸ್ಸನ್ನು ಧರಿಸಿ ಬಾಣಗಳನ್ನು ತೆಗೆದರು. ಅದನ್ನು ನೋಡಿ ಜಲಾಂಧರನು ಇನ್ನೊಂದು ಮಾಯೆಯನ್ನು ಉಂಟುಮಾಡಿದನು.

ಅವನು ಕೋಟಿ ಕೈಗಳುಳ್ಳವನಾದನು. ಮರಕಲ್ಲು ಶಸ್ತ್ರಗಳಿಂದ ಯುದ್ಧವನ್ನು ಮಾಡಿದನು. ಮಧ್ಯದಲ್ಲಿ ದೇವಾಲಯಗಳಿಂದ ನಾನಾಪುಷ್ಪಗಳಿಂದ ಮನೋಹರ ವಾದ ಭೂಮಿಯನ್ನು ಮಾಯೆಯಿಂದ ನಿರ್ಮಾಣಮಾಡಿದನು. ಅಲ್ಲಿ ಮೇನಕೆಯೇ ಮೊದಲಾದ ಸುಂದರಿಯರಾಗಿ ಅಪ್ಸರಸ್ತ್ರೀಯರು ನರ್ತನ ಮಾಡುತ್ತಿದ್ದರು. ಅದನ್ನು ನೋಡಿ ರುದ್ರದೇವರು ಎಲ್ಲವನ್ನು ಮರೆತು ಬಿಡುವವರಾಗಿ ಧನುಸ್ಸನ್ನು ಕೆಳಗೆ ಹಾಕಿ ವಾದ್ಯಗಾಯನಗಳಿಂದ ಅತ್ಯಂತ ಮೋಹಿತರಾಗಿ ವೃಷಭದ ಮೇಲೆ ಕೂತುಕೊಂಡೇ ಹೊರಟರು. ರುದ್ರದೇವರು ಮೋಹಿತರಾಗಿ ವೃಷಭದ ಮೇಲೆ ಕೂಡಿರುವುದನ್ನು ನೋಡಿ ಜಾಲಂಧರನು ಗಾಯನ ವಾದ್ಯ ನರ್ತನಗಳಿಂದ ಮೋಹಗೊಳಿಸುವುದ ಕ್ಕಾಗಿ ಗರ್ಜನ ಮಾಡಿದನು. ಜನರೆಲ್ಲರನ್ನು ಸಮುದ್ರದಲ್ಲಿ ತೂಕಿಹಾಕಿ ನಗಾಡಿದನು. ಆಗ ಪರಮಾತ್ಮನು ಬಂದು 'ದೇವತೆಗಳೂ ನಂದಿಯೇ ಮೊದಲಾದವರೂ ಎಲ್ಲಿಗೆ ಹೋದರು? ದೈತ್ಯನ ಮಾಯೆಯಿಂದ ಮೋಹಿತನಾಗಿರುವಿಯಲ್ಲಾ! ಈಗ ಯಾಕೆ ಇವನನ್ನು ಉಪೇಕ್ಷಿಸುತ್ತಿರುವಿ? ಇವನ ಸಂಹಾರಕ್ಕಾಗಿಯೇ ನಿರ್ಮಿಸಿರುವ ಚಕ್ರಾಯುಧವನ್ನು ಇವನ ಮೇಲೆ ಪ್ರಯೋಗಿಸು. ಅದರಿಂದ ಇವನನ್ನು ಸಂಹರಿಸು' ಎಂದು ಹೇಳಿದನು.

ತರುವಾಯ ರುದ್ರದೇವರು ಪರಮಾತ್ಮನ ಉಪದೇಶದಿಂದ ಸರಿಯಾದ ಜ್ಞಾನವುಳ್ಳವರಾಗಿ ಬೇಗನೆ ವೃಷಭದ ಮೇಲೆ ಕೂತುಕೊಂಡು ಯುದ್ಧಕ್ಕೆ ಬಂದರು. ಜಾಲಂಧರನೂ ಕೋಪಿಸಿಕೊಂಡು ಸರ್ವಸೈನ್ಯಸಹಿತವಾಗಿ ಯುದ್ಧಕ್ಕೆ ಬಂದನು. ರುದ್ರದೇವರು ಕೋಪಿಸಿಕೊಳ್ಳಲು ಅವರ ಮೂರನೇ ಕಣ್ಣಿನ ಅಗ್ನಿಯಲ್ಲಿ ಅಸುರರು ದೀಪದ ಹುಳುಗಳಂತೆ ಆದರು. ಅಸುರರು ರುದ್ರದೇರನ್ನು ನೋಡಿ ಅಂಜಿಕೊಂಡವ

ರಾಗಿ ಪಾತಾಳವನ್ನು ಪ್ರವೇಶಿಸಿದರು. ಅನೇಕ ಭಟರು ಸತ್ತರು. ಜಾಲಂಧರನೊಬ್ಬನೇ ಬೆಟ್ಟದಂತೆ ನಿಂತಿದ್ದನು. ಅವನು ರುದ್ರದೇವರ ಭಯಂಕರವಾದ ರೂಪವನ್ನು ನೋಡಿ ಸಂತೋಷವುಳ್ಳವನಾಗಿ 'ಶಿವನೇ! ಚರಾಚರ ಪ್ರಪಂಚವನ್ನು ಸುಡುತ್ತಿರುವ ಈ ಭಯಂಕರವಾದ ರೂಪವನ್ನು ಉಪಸಂಹಾರ ಮಾಡು. ಶಸ್ತ್ರದಿಂದ ಯುದ್ಧಮಾಡು' ಎಂದು ನಗುತ್ತಾ ಹೇಳಿದನು. ಆಗ ರುದ್ರದೇವರು 'ದೈತ್ಯಶ್ರೇಷ್ಠನೇ! ಇಂತಹ ನನ್ನ ರೂಪವನ್ನು ನೋಡಿಯೂ ಭಯಪಡದೆ ಇರುವಿಯಲ್ಲಾ! ಇದರಿಂದ ನಾನು ಸಂತೋಷಪಟ್ಟಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೊ' ಎಂದು ಹೇಳಿದರು. ಅದಕ್ಕೆ ಅವನು ತನಗೆ ಮುಕ್ತಿಯನ್ನು ಕೊಡಬೇಕೆಂದನು. ರುದ್ರದೇವರು 'ನಿನಗೆ ಮೋಕ್ಷವು ಸಿಗಲಾರದು. ಸಂಸಾರದಲ್ಲಿ ಬೇಕಾದ ವರವನ್ನು ಕೇಳಿಕೊ' ಎಂದರು. ಅವನು 'ಕೃತಕೃತ್ಯನಿಗೆ ಮೋಕ್ಷವು ಸಿಗುವುದು. ಈಗ ನಾನು ನಿಮ್ಮಿಂದ ಸಾಯುವವನಾಗಿ ಕೃತಕೃತ್ಯನಾಗುವೆನು' ಎಂದನು. ರುದ್ರದೇವರು 'ನನ್ನ ಸ್ಥಾನವನ್ನು ಹೊಂದಬೇಕೆಂಬ ಅಭಿಪ್ರಾಯವಿದ್ದರೆ ದೃಢವಾದ ಬಾಣಗಳಿಂದ ನನ್ನನ್ನು ಬಡೆದು ಕೋಪಗೊಳಿಸು. ಆಗ ನಿನ್ನನ್ನು ನಾನು ಸಂಹರಿಸುವೆನು. ನೀನು ನನ್ನ ಸ್ಥಾನವನ್ನು ಹೊಂದುವಿ' ಎಂದರು.

ಜಾಲಂಧರನು 'ಸರ್ವಜಗತ್ಪೂಜ್ಯರಾದ ನಿಮ್ಮನ್ನು ನಾನು ಮೊದಲು ಬಡೆಯಲಾರೆನು' ಎಂದನು. ತರುವಾಯ ರುದ್ರದೇವರು ಜಾಲಂಧರನಿಗೆ ಬಾಣ ಗಳನ್ನು ಬಿಟ್ಟರು. ಜಾಲಂಧರನು ರುದ್ರದೇವರ ದೇಹವನ್ನು ಬಾಣಗಳಿಂದ ತುಂಬಿಸಿದನು. ಜಾಲಂಧರನಿಗೂ ರುದ್ರದೇವರಿಗೂ ಭಯಂಕರವಾದ ಯುದ್ಧವು ನಡೆಯಿತು. ಜಾಲಂಧರನು ರುದ್ರದೇವರ ಮೇಲೆ ಕೋಟಿ ಸಾವಿರ ಪರ್ವತಗಳನ್ನು ಹಾಕಿದನು. ರುದ್ರದೇವರು ಅವನ ಎದೆಗೆ ಶೂಲದಿಂದ ಕುಕ್ಕಿದರು. ಆಗ ಜಾಲಂಧರನ ಬಾಯಿಯಿಂದ ಚಿರಜ್ವರವೆಂದೂ ಜಂಭ ಎಂದು-- ಹೆಸರುಳ್ಳ ಸಿಂಹದಂತೆ ಮುಖವೂ ಮನುಷ್ಯರಂತೆ ಇತರ ದೇಹದ ಭಾಗವೂ ಉಳ್ಳ ಜ್ವರನು ಬಂದನು. ಅದನ್ನು ನೋಡಿ ರುದ್ರದೇವರು ಹುಂಕಾರ ಮಾಡಿದರು. ಆಗ ಶರಭ ಎಂಬುವನು ಬಂದು ಜಂಭನ್ನು ಬೀಳಿಸಿದನು. ಜಾಲಂಧರನು ರುದ್ರದೇವರನ್ನು ಜಯಿಸಲಿಕ್ಕೆ ಆಗದೆ ಇದ್ದದ್ದನ್ನು ನೋಡಿ ಬೇಗನೇ ವೃಷಭದ ಸಮೀಪಕ್ಕೆ ಬಂದನು. ವೃಷಭದ ಬಾಲವನ್ನು ಹಿಡಿದು ಆಕಾಶದಲ್ಲಿ ಗರಗರನೆ ತಿರುಗಿಸಿ ಹಿಮವತ್ಪರ್ವತದ ಮೇಲೆ ಬಿಸಾಡಿದನು. ತರುವಾಯ ರುದ್ರದೇವರು ಶೂಲವನ್ನು ಬಿಟ್ಟರು. ಜಾಲಂಧರನು ಅದನ್ನು ಕೈಯಲ್ಲಿ ಹಿಡಿದು ರುದ್ರದೇವರ ಸಮೀಪದಲ್ಲಿಯೇ

ರಥವನ್ನು ಏರುವವನಾಗಿ ನೆಲದ ಮೇಲೆ ನಿಂತಿದ್ದ ರುದ್ರದೇವರ ಮೈಮೇಲೆ ಎಲ್ಲಾ ಬಾಣಗಳನ್ನು ಬಿಟ್ಟನು. ರುದ್ರದೇವರು ಹತ್ತು ಯೋಜನ ವಿಸ್ತೀರ್ಣವಾದ ಸಾರಥಿ ಕುದುರೆಗಳಿಂದ ಸಹಿತವಾದ ಅವನ ರಥವನ್ನು ಬಾಣಗಳಿಂದ ಪುಡಿಮಾಡಿದರು. ಜಾಲಂಧರನೂ ರಥಹೀನನಾಗಿ ರುದ್ರದೇವರ ಬಳಿಗೆ ಓಡಿದನು. ರೋಮಾಂಚಕ ವಾದ ಯುದ್ಧವು ನಡೆಯಿತು. ಅದನ್ನು ನೋಡಿ ದೇವತೆಗಳೆಲ್ಲರೂ ಭಯಪಟ್ಟರು. ರುದ್ರದೇವರು ಅಸುರನ ಬಲವನ್ನು ನೋಡಿ ತನ್ನ ಯೋಗಸಾಮರ್ಥ್ಯದಿಂದ ಅವನ ಶಸ್ತ್ರಸಮೂಹವನ್ನೆಲ್ಲಾ ನಾಶಮಾಡಿದರು.

ತರುವಾಯ ಕೋಟಿಕೈಗಳುಳ್ಳ ಜಾಲಂಧರನು ಶಸ್ತ್ರಹೀನನಾದರೂ ರುದ್ರದೇವರ ಬಳಿಗೆ ಓಡಿದನು. ತನ್ನ ಕೈಗಳಿಂದ ರುದ್ರದೇವರನ್ನು ಕಟ್ಟಿಕೊಂಡನು. ರುದ್ರದೇವರು ಖಡ್ಗದಿಂದ ಅವನ ಕೈಗಳನ್ನು ಕಡಿದುಹಾಕಿದರು. ಕೈಗಳನ್ನು ಕಡಿದು ಹಾಕಿದರೂ ಜಾಲಂಧರನು ಯುದ್ಧವನ್ನು ಮಾಡಿ ರುದ್ರದೇವರನ್ನು ಸಂತೋಷ ಪಡಿಸಿದನು. ರುದ್ರದೇವರು ಅವನೊಡನೆ ಬೇಕಾದ ವರವನ್ನು ಕೇಳುವಂತೆ ಹೇಳಿದರು. ಅದಕ್ಕೆ ಜಾಲಂಧರನು 'ನನಗೆ ನಿನ್ನ ಸ್ಥಾನವನ್ನು ಕೊಡು. ನನಗೆ ಕೈಗಳೂ ಶಸ್ತ್ರಗಳೂ ಇಲ್ಲವೆಂದು ತಿರಸ್ಕಾರ ಮಾಡಬೇಡ. ನನಗೆ ಬೇಗನೇ ಸಿದ್ಧಿಯನ್ನು ಕೊಡು. ಇಲ್ಲದಿದ್ದರೆ ನಿನ್ನನ್ನು ಸಂಹರಿಸುವೆನು' ಎಂದು ಹೇಳಿ ಪೂರ್ವದಂತೆ ಕೈಗಳುಳ್ಳವನಾಗಿ ರುದ್ರದೇವರ ಎದೆಗೆ ಮುಷ್ಟಿಯಿಂದ ಗುದ್ದಿದನು. ಆಗ ರುದ್ರದೇವರು ತಾನು ಪೂರ್ವದಲ್ಲಿ ನಿರ್ಮಿಸಿದ್ದ ಚಕ್ರಾಯುಧವನ್ನು ಮುಖದಿಂದ ಕಾರಿ, ಕೋಟಿ ಸಾವಿರ ಸೂರ್ಯರಂತೆ ಪ್ರಕಾಶಮಾನವಾದ ಚರಾಚರ ಪ್ರಪಂಚವನ್ನೇ ನುಂಗುವಂತೆ ಇದ್ದ ಸುದರ್ಶನವೆಂದು ಹೆಸರುಳ್ಳ ಆ ಚಕ್ರಾಯುಧದಿಂದ ಜಾಲಂಧರನ ತಲೆಯನ್ನು ಕತ್ತರಿಸಿದರು. ಆಗ ಆ ತಲೆಯು ಆಕಾಶದಲ್ಲಿ ನೂರು ಯೋಜನ ಹಾರಿ ಬ್ರಹ್ಮಲೋಕಕ್ಕೆ ಹೋಯಿತು. ಆಮೇಲೆ ಸ್ವರ್ಗಕ್ಕೆ ಬಂದಿತು. ರುದ್ರದೇವರು ರಕ್ತವನ್ನು ಸುರಿಸುತ್ತಿರುವ ಭಯಂಕರವಾಗಿ ಗರ್ಜನೆ ಮಾಡುತ್ತಿರುವ ಆ ತಲೆಯನ್ನು ನೋಡಿ ಅದರ ಹತ್ತಿರ ಓಡಿದರು. ಆ ತಲೆಯಿಂದ ಒಂದು ಗ್ರಹಗಳ ಪ್ರಕಾಶವೂ ಇರಲಿಲ್ಲ. ಭೂಮಿಯು ಭಯದಿಂದ ನಡುಗಿತು. ಬರುತ್ತಿದ್ದ ಆ ತಲೆಯನ್ನು ರುದ್ರದೇವರು ಚಕ್ರಾಯುಧದಿಂದ ಕತ್ತರಿಸಿದರು. ಅದು ಎರಡಾಗಿ ಸೀಳಿಹೋಗಿ ಹಿಮವತ್ಪರ್ವತದಲ್ಲಿ ಬಿದ್ದಿತು. ತರುವಾಯ ಆ ತಲೆಯ ಚೂರುಗಳು ಎಲ್ಲರೂ ನೋಡುತ್ತಿರುವಂತೆ ರುದ್ರದೇವರನ್ನು ಪ್ರವೇಶಿಸಿವು.

ತರುವಾಯ ಜಾಲಂಧರನ ಕಂಠದೇಶದಿಂದ ನೂರುಸಾವಿರ ದೈತ್ಯರು ಎದ್ದು

ಬಂದರು. ರುದ್ರದೇವರು ಚಕ್ರಾಯುಧದಿಂದ ಅವರೆಲ್ಲರನ್ನೂ ನಾಶಮಾಡಿದರು. ಜಾಲಂಧರನ ಮುಂಡವು ನರ್ತನ ಮಾಡಿತು. ಅದರ ಕಂಠದೇಶದಿಂದ ಪುನಃಪುನಃ ರಾಕ್ಷಸರು ಹೊರಗೆ ಬರುತ್ತಲೇ ಇದ್ದರು. ರುದ್ರದೇವರೂ ಪುನಃ ಪುನಃ ಆ ದೈತ್ಯರನ್ನು ಬಾಣಗಳಿಂದ ಸಂಹರಿಸುತ್ತಲೇ ಇದ್ದರು. ಜಾಲಂಧರನ ಮೇದಸ್ಸಿನಿಂದ ಭೂಮಿಯು ತುಂಬಿಹೋಯಿತು. ಅದರಿಂದ ಮೇದಿನಿಯೆಂದು ಪ್ರಸಿದ್ಧಿಯನ್ನು ಹೊಂದಿತು. ಆ ರಾಕ್ಷಸನ ರಕ್ತವು ಕೈಲಾಸದ ಉತ್ತರಭಾಗದಲ್ಲಿ ಬೆಟ್ಟವಾಗಿ ಆಯಿತು. ಅಲ್ಲಿ ಶೋಣಿತಪುರವಾಯಿತು. ತರುವಾಯ ಎಲ್ಲಾ ಸ್ಥಳದಳಲ್ಲಿಯೂ ವ್ಯಾಪಿಸಿಕೊಂಡಿರುವ ಮಾಂಸರಾಶಿಗಳನ್ನು ನೋಡಿ ರುದ್ರದೇವರು ತನ್ನ ಅರುವತ್ತನಾಲ್ಕು ಗಣಗಳನ್ನು ಸ್ಮರಿಸಿದರು. ಕೂಡಲೇ ಆ ಗಣಗಳು ರುದ್ರದೇವರ ಬಳಿಗೆ ಬಂದು ಕೈಮುಗಿದುಕೊಂಡು ನಾವೇನು ಮಾಡಬೇಕೆಂದು ಕೇಳಿದವು. ರುದ್ರದೇವರು ಬ್ರಾಹ್ಮೀ ಮಾಹೇಶ್ವರೀ ಕೌಮಾರೀ ವೈಷ್ಣವೀ ವಾರಾಹೀ ಮಾಹೇಂದ್ರೀ ಎಂಬ ಹೆಸರುಳ್ಳ ನೀವು ಈ ಮಾಂಸರಾಶಿಯಲ್ಲಿ ಬೇಗನೇ ಭಕ್ಷಣೆ ಮಾಡಿರಿ' ಎಂದು ಹೇಳಿದರು. ಆದೇವಿಯರು ಕ್ರೂರದೃಷ್ಟಿಯಿಂದ ಆ ಮಾಂಸಾರಾಶಿಗಳನ್ನು ನೋಡಿ ಒಂದೇ ಕ್ಷಣದಲ್ಲಿ ಮರೆಮಾಡಿದರು. ಆ ಗಣಗಳು ಜಾಲಂಧರನ ದೇಹವನ್ನು ಹಿಡಿಯಲು ಕ್ಷೀಣವಾಯಿತು. ಸೂರ್ಯನಂತೆ ಇದ್ದ ಒಂದು ತೇಜಸ್ಸು ಅವನ ದೇಹದಿಂದ ಹೊರಟು ಬಂದು ರುದ್ರದೇವರ ಬಳಿಗೆ ಬಂದು ರುದ್ರದೇವರಲ್ಲಿ ಪ್ರವೇಶಮಾಡಿತು. ತರುವಾಯ ಯೋಗಿನಿಯರೆಂಬ ಆ ಗಣಗಳೊಡನೆ ಬೇಕಾದ ವರವನ್ನು ಕೇಳಿಕೊಳ್ಳಲಿಕ್ಕೆ ರುದ್ರದೇವರು ಹೇಳಿದರು. ಆಗ ಗಣಗಳು 'ಮನುಷ್ಯಲೋಕದಲ್ಲಿ ಭೋಗಾದಿಗಳನ್ನು ಅಪೇಕ್ಷಿಸುವವರಾಗಿ ತಮ್ಮ ಮನೆಯಲ್ಲಿ ಯೋಗಿನೀಗಣವನ್ನು ಪೂಜಿಸುವವರೋ ಅವರಿಗೆ ನಿಮ್ಮ ಅನುಗ್ರಹದಿಂದ ಸರ್ವಾಭೀಷ್ಟವೂ ಸಿದ್ಧಿಯನ್ನು ಹೊಂದಲಿ' ಎಂದು ಹೇಳಿದವು. ರುದ್ರದೇವರು 'ಯಾರು ನಿಮ್ಮನ್ನು ಪೂಜಿಸುವನೋ ಅವನಿಗೆ ನಾನು ವರವನ್ನು ಕೊಡುವೆನು. ನನ್ನ ಭಕ್ತನು ನಿಮ್ಮನ್ನು ದ್ವೇಷಿಸಿದರೆ ಅವನ ಪುಣ್ಯವನ್ನು ನಾಶಮಾಡುವೆನು' ಎಂದು ಹೇಳಲು ಗಣಗಳು ಸಂತೋಷಪಟ್ಟವು.

ಆಗ ರುದ್ರದೇವರು ಪಾರ್ವತೀದೇವಿಯನ್ನು ವೃಷಭವನ್ನು ಸ್ಮರಿಸಿಕೊಂಡರು. ಕೂಡಲೇ ಪಾರ್ವತೀದೇವಿಯೂ ವೃಷಭವೂ ಬಂದರು. ಪಾರ್ವತೀದೇವಿಯು ಸಖಿಯರಿಂದ ಸಹಿತರಾಗಿ ಬಂದು ತಾನು ಧರಿಸಿದ್ದ ಭ್ರಮರ ರೂಪವನ್ನು ಬಿಟ್ಟು ರುದ್ರದೇವರ ಅರ್ಧಾಂಗವನ್ನು ಏರಿದರು. ಪಾರ್ವತೀದೇವಿಯಿಂದ ಸಹಿತರಾಗಿ ರುದ್ರದೇವರು ಸಂತೋಷಪಟ್ಟರು. ತರುವಾಯ ಅವರು ಯೋಗಿನಿಯರೊಡನೆ

ಜಾಲಂಧರನ ಮುಂಡದಲ್ಲಿರುವ ರಕ್ತವನ್ನು ಪಾನಮಾಡಿರಿ ಎಂದರು. ಅದನ್ನು ಕೇಳಿ ಯೋಗಿನಿಗಳು ಬಹುಸಂತೋಷವನ್ನು ಹೊಂದಿದವು. ಮಾಂಸಮೇದಸ್ಸುರಕ್ತಗಳನ್ನು ಹೀರುತ್ತಾ ಯೋಗಿನಿಯರು ಸಂತೋಷದಿಂದ ನರ್ತನ ಮಾಡಿದವು. ಅವರು ನರ್ತನ ಮಾಡುವುದನ್ನು ನೋಡಿ ರುದ್ರದೇವರು ಸಂತೋಷಪಟ್ಟರು. ತಾನೂ ಭಯಂಕರವಾದ ರೂಪವುಳ್ಳವರಾಗಿ ಅವುಗಳ ಮಧ್ಯದಲ್ಲಿ ರಕ್ತಪಾನ ಮಾಡಿದರು. ತೀಕ್ಷ್ಣವಾದ ಕೋರೆಹಲ್ಲುಗಳುಳ್ಳ ದೊಡ್ಡ ಶರೀರವುಳ್ಳ ಯೋಗಿನಿಗಳನ್ನು ಮಾಂಸರಕ್ತಗಳನ್ನು ಪುನಃ ಪುನಃ ಪಾನಮಾಡುತ್ತಲೇ ಇದ್ದವು. ಆದರಿಂದ ಜಾಲಂಧರನ ದೇಹವು ಆಮೇಲೆ ಯುದ್ಧರಂಗದಲ್ಲಿ ಏಳಲೇ ಇಲ್ಲ. ತರುವಾಯ ಅಲ್ಲಿಗೆ ಬ್ರಹ್ಮಾದಿ ದೇವತೆಗಳೂ ಋಷಿಗಳೂ ರುದ್ರದೇವರನ್ನು ಸ್ತೋತ್ರಮಾಡುತ್ತಾ ಬಂದರು. ರುದ್ರದೇವರ ಮೇಲೆ ಹೂವಿನ ಮಳೆಯನ್ನು ಸುರಿಸಿದರು. ಎಲ್ಲರೂ ಸಂತೋಷಪಟ್ಟರು. ದೇವತೆಗಳು ಪೂರ್ವದಂತೆಯೇ ಸ್ವರ್ಗವನ್ನು ಹೊಂದಿ ಪ್ರಕಾಶಿಸಿದರು. ಹವಿರ್ಭಾಗವನ್ನು ಹೊಂದಿದರು. ಇತ್ಯಾದಿ ಕಥೆಯನ್ನು ನಾರದರು ಧರ್ಮರಾಜನಿಗೆ ಹೇಳಿದರು.



## ತುಲಸೀ ಮಹಿಮೆಯು [1]

ಈ ಜಾಲಂಧರನ ಕಥೆಯನ್ನೇ ಪದ್ಮಪುರಾಣದಲ್ಲಿಯೇ ಸ್ವಲ್ಪ ವ್ಯತ್ಯಾಸವಾಗಿ ಹೇಳಿರುವರು. ಅದು ಕಲ್ಪಾಂತರದ ಕಥೆಯೆಂದು ತಿಳಿಯಬೇಕು. ಅದು ಹೀಗಿರುವುದು—

ಪೂರ್ವದಲ್ಲಿ ಇಂದ್ರದೇವರು ರುದ್ರದೇವರನ್ನು ನೋಡಲಿಕ್ಕೆ ಕೈಲಾಸಕ್ಕೆ ಹೋದರು. ಸರ್ವದೇವತೆಗಳಿಂದಲೂ ಅಪ್ಸರಸ್ತ್ರೀಯರಿಂದಲೂ ಸಹಿತರಾಗಿ ಹೋದರು. ರುದ್ರದೇವರ ಮಂದಿರಕ್ಕೆ ಹೋಗುವಾಗ ಭಯಂಕರವಾದ ಕರ್ಮವುಳ್ಳ ಕೋರೆಹಲ್ಲುಗಳಿಂದ ಕಣ್ಣುಗಳಿಂದಲೂ ಭಯಂಕರನಾಗಿದ್ದ ಒಬ್ಬ ಪುರುಷನು ನಿಂತಿದ್ದನು. ಇಂದ್ರದೇವರು ಅವನೊಡನೆ ನೀನು ಯಾರು? ರುದ್ರದೇವರು ಎಲ್ಲಿಗೆ ಹೋಗಿರುವರು? ಎಂದು ಪುನಃ ಪುನಃ ಕೇಳಿದರೂ ಆ ಪುರುಷನು ಮಾತಾಡಲೇ ಇಲ್ಲ. ಆಗ ಇಂದ್ರದೇವರು 'ಎಲಾ! ನಾನು ಪುನಃ ಪುನಃ ಕೇಳಿದರೂ ಉತ್ತರನ್ನೇ ಕೊಡುವುದಿಲ್ಲವಲ್ಲಾ! ವಜ್ರಾಯುಧದಿಂದ ನಿನ್ನನ್ನು ಕೊಂದು ಹಾಕುವೆನು. ನಿನ್ನನ್ನು

1. ಪ.ಪು. ಇದನ್ನು ದೇವತರಂಗದಲ್ಲಿಯೂ ಓದುವುದು.

ಕಾಪಾಡುವವರು ಯಾರಿರುವರು?' ಎಂದು ಹೇಳಿ ವಜ್ರಾಯುಧದಿಂದ ಅವನ ಕುತ್ತಿಗೆಯನ್ನು ಬಡಿದರು. ಆಗ ಕುತ್ತಿಗೆಯು ನೀಲವಾಯಿತು. ವಜ್ರಾಯುಧವು ಭಸ್ಮವಾಗಿ ಹೋಯಿತು. ಅವರೇ ರುದ್ರದೇವರು. ಅವರು ತೇಜಸ್ಸಿನಿಂದ ಸುಟ್ಟುಹಾಕು ವಂತೆ ಜ್ವಲಿಸಿದರು. ಆಗ ಬೃಹಸ್ಪತ್ಯಾಚಾರ್ಯರು ಬೇಗನೆ ಕೈಮುಗಿದು ಸ್ತೋತ್ರ ಮಾಡಿದರು. ಇಂದ್ರದೇವರೂ ಉದ್ದಕ್ಕೆ ನಮಸ್ಕರಿಸಿ ಸ್ತೋತ್ರ ಮಾಡಿದರು. ಬೃಹಸ್ತ್ಯಾಚಾರ್ಯರ ಸ್ತೋತ್ರದಿಂದ ರುದ್ರದೇವರು ಸಂತುಷ್ಟರಾಗಿ ಮೂರುಲೋಕ ಗಳನ್ನೂ ಸುಡಲಿಕ್ಕೆ ಸಮರ್ಥವಾದ ತನ್ನ ಕಣ್ಣಿನ ಜ್ವಾಲೆಯನ್ನು ಉಪಸಂಹರಿಸುತ್ತಾ 'ಬೃಹಸ್ಪತಿಯೇ! ನಿನ್ನ ಸ್ತೋತ್ರದಿಂದ ಸಂತೋಷವನ್ನು ಹೊಂದಿರುವೆನು. ಬೇಕಾದ ವರವನ್ನು ಕೇಳಿಕೊ. ಈ ಇಂದ್ರನಿಗೆ ಜೀವದಾನವನ್ನು ಮಾಡಿದ ಕಾರಣ ಜೀವ ಎಂದೇ ಪ್ರಸಿದ್ಧಿಯನ್ನು ಹೊಂದು' ಎಂದು ಹೇಳಿದರು.

ಆಗ ಬೃಹಸ್ಪತ್ಯಾಚಾರ್ಯರು 'ತಾವು ಸಂತುಷ್ಟರಾಗಿರುವ ಪಕ್ಷದಲ್ಲಿ ಶರಣಾಗತನಾದ ಇಂದ್ರನನ್ನು ರಕ್ಷಿಸಬೇಕು. ನಿಮ್ಮ ಕಣ್ಣಿನಲ್ಲಿ ಉಂಟಾಗಿರುವ ಅಗ್ನಿಯು ಶಾಂತಿಯನ್ನು ಹೊಂದಲಿ' ಎಂದರು. ರುದ್ರದೇವರು 'ಈ ಅಗ್ನಿಯು ನನ್ನ ಹಣೆಯಲ್ಲಿರುವ ಕಣ್ಣನ್ನು ಪುನಃ ಹೇಗೆ ಪ್ರವೇಶ ಮಾಡಲಿಕ್ಕೆ ಬಿಟ್ಟುಬಿಡುತ್ತೇನೆ' ಎಂದು ಹೇಳಿದರು. ಈಪ್ರಕಾರವಾಗಿ ಆ ಅಗ್ನಿಯನ್ನು ಕೈಯಲ್ಲಿ ಹಿಡಿದು ಸಮುದ್ರಕ್ಕೆ ಬಿಸಾಡಿದರು. ಅದು ಗಂಗಾಸಾಗರ ಸಂಗಮಸ್ಥಳದಲ್ಲಿ ಹೋಗಿಬಿದ್ದಿತು. ಆಗಲೇ ಆ ಅಗ್ನಿಯು ಬಾಲರೂಪವನ್ನು ಧರಿಸಿ ಅಳುವವನಾದನು. ಅಳುವ ಅವನ ಶಬ್ದದಿಂದ ಭೂಮಿಯು ಪುನಃ ಪುನಃ ನಡುಗಿತು. ಅವನ ಅಳುವ ಶಬ್ದದಿಂದ ಸ್ವರ್ಗಲೋಕವು ಸತ್ಯಲೋಕವೂ ಕಿವುಡು ಆಗುವಂತೆ ಆಯಿತು. ಅದನ್ನು ಕೇಳಿ ಬ್ರಹ್ಮದೇವರು ಇದೇನೆಂದು ಆಶ್ಚರ್ಯಪಡುವಂತೆ ನಟಿಸುತ್ತಾ ಅಲ್ಲಿಗೆ ಬಂದನು. ಅಲ್ಲಿ ಸಮುದ್ರರಾಜನ ತೊಡೆಯಲ್ಲಿ ಇದ್ದ ಕೂಸನ್ನು ನೋಡಿದರು. ಸಮುದ್ರರಾಜನು ಬಂದ ಬ್ರಹ್ಮದೇವರನ್ನು ನೋಡಿ ಉದ್ದಕ್ಕೆ ನಮಸ್ಕರಿಸಿ ಆ ಮಗುವನ್ನು ಅವರ ತೊಡೆಯ ಮೇಲೆ ಇಟ್ಟನು.

ಆಗ ಬ್ರಹ್ಮದೇವರು 'ಸಮುದ್ರರಾಜನೇ! ಅದ್ಭುತವಾದ ಈ ಮಗುವು ಯಾರದ್ದು? ನಿನಗೆ ಎಲ್ಲಿಗೆ ಸಿಕ್ಕಿದನು? ಈ ಬಾಲಕನು ಮಹಾಬಲಿಷ್ಠನಾಗಿರುವನು. ಇವನ ಅಳುವ ಶಬ್ದದಿಂದ ದೇವಾಸುರ ಮಹೋರಗರು ಎಲ್ಲರೂ ಭಯಪಟ್ಟಿರು ವರು' ಎಂದು ಲೋಕದ ಜನರಂತೆ ತಾನು ಎಲ್ಲವನ್ನೂ ತಿಳಿದವರಾಗಿದ್ದರೂ ತಿಳಿಯದವರಂತೆ ಕೇಳಿದರು. ಅದನ್ನು ಸಮುದ್ರರಾಜನು 'ಇವನು ಗಂಗೆಯಲ್ಲಿ

ನನ್ನಿಂದ ಹುಟ್ಟಿದವನು. ಜಗದ್ಗುರುಗಳಾದ ತಾವು ಇವನಿಗೆ ಜಾತಕರ್ಮಾದಿಗಳನ್ನು ಮಾಡಬೇಕು' ಎಂದು ಹೇಳಿದನು. ಈರೀತಿಯಾಗಿ ಸಮುದ್ರರಾಜನು ಹೇಳುತ್ತಿರಲು ಆ ಮಗುವು ಬ್ರಹ್ಮದೇವರ ದಾಡಿಯನ್ನು ಹಿಡಿದು ಸೆಳೆಯಿತು. ಆಗ ಬ್ರಹ್ಮದೇವರು ಕಣ್ಣಲ್ಲಿ ನೀರು ಬಂದಂತೆ ನಟಿಸಿದರು. ತರುವಾಯ ದಾಡಿಯನ್ನು ಕೂಸಿನ ಕೈಯಿಂದ ಬಿಡಿಸಿಕೊಂಡವರಾಗಿ 'ಈ ಕೂಸಿನಿಂದಾಗಿ ನಾನು ಕಣ್ಣಲ್ಲಿ ನೀರನ್ನು ಧರಿಸಿದೆನು. ಆದುದರಿಂದ ಇದಕ್ಕೆ ಜಲಂಧರ ಎಂದು ಪ್ರಸಿದ್ಧಿಯು ಬರಲಿ. ಈಗಲೇ ಇವನು ತರುಣನಾಗಿ ಸರ್ವಶಾಸ್ತ್ರಾಸ್ತ್ರಪಾರಂಗತನಾಗಿ ರುದ್ರನೊಬ್ಬನನ್ನು ಹೊರತು ಸಮಸ್ತರಿಂದ ಅವಧ್ಯನಾಗುವನು. ಯಾರಿಂದ ಹುಟ್ಟಿದನೋ ಅವನಿಂದಲೇ ನಾಶ ವನ್ನು ಹೊಂದವನು' ಎಂದು ಶುಕ್ರಾಚಾರ್ಯರನ್ನು ಕರೆದು (ಕೂಗಿ) ಅವನಿಗೆ ರಾಜ್ಯದಲ್ಲಿ ಅಭಿಷೇಕ ಮಾಡಿದರು. ಸಮುದ್ರರಾಜನೊಡನೆ ಹೋಗಿ ಬರುತ್ತೇನೆ ಎಂದು ಹೇಳಿ ಮರೆಯಾಗಿ ಹೋದರು.

ಸಮುದ್ರರಾಜನು ಮಗನನ್ನು ನೋಡಿ ಸಂತೋಷಪಡುವವನಾಗಿ ಕಾಲನೇಮಿಯ ಮಗಳಾದ ವೃಂದೆಯನ್ನು ಅವನಿಗೆ ಕೊಟ್ಟು ಮದುವೆ ಮಾಡ ಬೇಕೆಂದು ಯಾಚಿಸಿದನು. ಕಾಲನೇಮಿಯೇ ಮೊದಲಾದ ವರು ಸಂತೋಷ ದಿಂದಲೇ ಜಲಂಧರನಿಗೆ ವೃಂದೆಯನ್ನು ಮದುವೆ ಮಾಡಿಕೊಟ್ಟರು. ಜಲಂಧರನೂ ಅವರನ್ನೆಲ್ಲಾ ಮಿತ್ರರನ್ನಾಗಿ ಪಡೆದು ಶುಕ್ರಾಚಾರ್ಯರ ಸಹಾಯ ವುಳ್ಳವನಾಗಿ ಭೂಮಿಯನ್ನು ಆಳಿದನು. ಪೂರ್ವದಲ್ಲಿ ದೇವತೆಗಳಿಂದ ಸೋತುಹೋಗಿ ಪಾತಾಳದಲ್ಲಿ ವಾಸಮಾಡುತ್ತಿದ್ದ ದೈತ್ಯರೆಲ್ಲರೂ ಭಯರಹಿತರಾಗಿ ಭೂಮಿಯ ಮೇಲೆ ಬಂದು ಜಲಂಧರನನ್ನು ಆಶ್ರಯಿಸಿಕೊಂಡಿದ್ದರು. ಒಂದು ದಿವಸದಲ್ಲಿ ತಲೆಮಾತ್ರ ಇರುವ ರಾಹುವನ್ನು ನೋಡಿ ಜಲಂಧರನು ಶುಕ್ರಾಚಾರ್ಯರೊಡನೆ ಇವನ ತಲೆಯ ಕತ್ತರಿಸಲಿಕ್ಕೆ ಏನು ಕಾರಣ? ಎಂದು ಕೇಳಲು ಶುಕ್ರಾಚಾರ್ಯರು ಸಮುದ್ರಮಥನದ ಕಥೆಯನ್ನು ವಿಸ್ತಾರವಾಗಿ ಹೇಳಿ ದೇವತೆಗಳು ದೈತ್ಯರನ್ನು ಪರಾಜಯಗೊಳಿಸಿ ರತ್ನಗಳನ್ನು ಅಪಹರಿಸಿದರು ಎಂದು ಹೇಳಿದರು. ಅದನ್ನು ಕೇಳಿ ಜಲಂಧರನು ಕೋಪವುಳ್ಳವನಾಗಿ ಘಸ್ಮರ ಎಂದು ಹೆಸರುಳ್ಳ ದೂತನನ್ನು ಇಂದ್ರದೇವರಲ್ಲಿಗೆ ಕಳುಹಿಸಿದನು. ಅವನು ಹೋಗಿ ಇಂದ್ರದೇವರೊಡನೆ 'ಸಮುದ್ರರಾಜನ ಮಗನಾದ ಜಲಂಧರನು ಎಲ್ಲಾ ದೈತ್ಯರಿಗೂ ರಾಜನಾಗಿರುವನು. ಅವನು ನನ್ನನ್ನು ದೂತನನ್ನಾಗಿ ಕಳುಹಿರುವನು. ಅವನು 'ನೀನು ನನ್ನ ತಂದೆಯಾದ ಸಮುದ್ರನನ್ನು ದೊಡ್ಡಬೆಟ್ಟದಿಂದ ಯಾಕೆ ಮಥನೆ ಮಾಡಿದಿ? ನೀನು ಅಪಹರಿಸಿರುವ ರತ್ನಗಳೆಲ್ಲವನ್ನೂ ನಮಗೆ

ಕೊಟ್ಟುಬಿಡು' ಎಂದು ನಿನ್ನೊಡನೆ ಹೇಳಲಿಕ್ಕೆ ಹೇಳಿರುವನು' ಎಂದು ತಿಳಿಸಿದನು. ದೂತನ ಮಾತನ್ನು ಕೇಳಿ ಇಂದ್ರದೇವರು ಆಶ್ಚರ್ಯಪಡುವವರಾಗಿ ರುದ್ರದೇವರನ್ನು ಸ್ಮರಿಸಿಕೊಂಡು ಭಯರೋಷದಿಂದ ಕೂಡಿದವರಾಗಿ 'ದೂತನೇ! ನಾನು ಸಮುದ್ರವನ್ನು ಯಾಕೆ ಮಥಿಸಿದೆನೆಂಬುದಕ್ಕೆ ಕಾರಣವನ್ನು ಹೇಳುತ್ತೇನೆ. ಕೇಳು. ನನ್ನ ಭಯದಿಂದ ಇದ್ದ ಪರ್ವತಗಳನ್ನು ಸಮುದ್ರನು ತನ್ನ ಉದರದಲ್ಲಿ ಇಟ್ಟುಕೊಂಡು ರಕ್ಷಿಸಿರುವನು. ಇತರರಾದ ನನ್ನ ದ್ವೇಷಿಗಳಾದ ರಾಕ್ಷಸರನ್ನು ರಕ್ಷಣೆ ಮಾಡಿರುವನು. ಆದುದರಿಂದ ನಾನು ರತ್ನಸಮೂಹಗಳನ್ನು ಅಪಹರಿಸಿರುವೆನು. ಸಮುದ್ರನ ಮಗನಾದ ಶಂಖ ಎಂಬ ದೈತ್ಯನೂ ದೇವತೆಗಳನ್ನು ದ್ವೇಷಿಸಿರುವನು. ಅವನನ್ನೂ ತಮ್ಮನಾದ ಕೃಷ್ಣನು ಸಂಹರಿಸಿರುವನು. ನೀನು ಹೋಗಿ ಈ ಕಾರಣವೆಲ್ಲವನ್ನೂ ತಿಳಿಸು' ಎಂದು ಹೇಳಿದರು.

ದೂತನು ಹೋಗಿ ಹಾಗೆಯೇ ಜಲಂಧರನೊಡನೆ ತಿಳಿಸಿದನು. ಆಗ ಅವನು ಕೋಪವುಳ್ಳವನಾಗಿ ಎಲ್ಲ ದೇವತೆಗಳನ್ನು ಜಯಿಸಬೇಕೆಂದು ಉದ್ಯೋಗ ವನ್ನು ಮಾಡಿದನು. ಆಸಮಯದಲ್ಲಿ ದಿಕ್ಕು ದಿಕ್ಕುಗಳಿಂದ ಪಾತಾಳದಿಂದ ಅಸುರರು ಬಂದು ಅವನನ್ನು ಸೇರಿಕೊಂಡರು. ಜಲಂಧರನು ಶುಂಭ ನಿಶುಂಭ ಮೊದಲಾದ ಅಸುರರಿಂದ ಕೂಡಿಕೊಂಡು ಸ್ವರ್ಗಕ್ಕೆ ಹೋಗಿ ನಂದನವನದಲ್ಲಿ ಇಳಿದುಕೊಂಡನು. ಆಗ ಇಂದ್ರಾದಿದೇವತೆಗಳೂ ಯುದ್ಧಕ್ಕೆ ಸಿದ್ಧರಾಗಿ ಅಮರಾವತಿಯಿಂದ ಬಂದರು. ಭಯಂಕರವಾದ ಯುದ್ಧವು ನಡೆಯಿತು. ಸತ್ತುಬಿದ್ದ ದೈತ್ಯರನ್ನು ಶುಕ್ರಾಚಾರ್ಯರು ಮೃತಸಂಜೀವಿನೀ ವಿದ್ಯೆಯಿಂದ ಬದುಕಿಸಿದರು. ಬೃಹಸ್ಪತ್ಯಾಚಾರ್ಯರು ದ್ರೋಣ ಪರ್ವತದಿಂದ ಔಷಧಿಗಳನ್ನು ತಂದು ದೇವತೆಗಳನ್ನು ಬದುಕಿಸಿದರು.

ಈ ವಿಷಯವನ್ನು ಶುಕ್ರಾಚಾರ್ಯರಿಂದ ತಿಳಿದು ಜಲಂಧರನು ದ್ರೋಣಪರ್ವತವನ್ನು ಸಮುದ್ರದಲ್ಲಿ ಹಾಕಿ ಯುದ್ಧಕ್ಕೆ ಬಂದನು. ತರುವಾಯ ಬೃಹಸ್ಪತ್ಯಾಚರ್ಾರು ದೇವತೆಗಳನ್ನು ಎಬ್ಬಿಸಲಿಕ್ಕಾಗಿ ಔಷಧಿಗಳನ್ನು ತರಲಿಕ್ಕೆ ಹೋಗಿ ಅಲ್ಲಿ ದ್ರೋಣ ಪರ್ವತವನ್ನೇ ಕಾಣದೆ ಭಯಪರವಶರಾಗಿ ಓಡಿಬಂದವರಾಗಿ ದೇವತೆಗಳೊಡನೆ 'ನೀವು ಓಡಿಹೋಗಿರಿ. ಈ ಮಹಾದೈತ್ಯನನ್ನು ಜಯಿಸಲಿಕ್ಕೆ ಆಗಲಾರದು. ಇವನು ರುದ್ರದೇವರ ಅಂಶದಿಂದ ಹುಟ್ಟಿರುವನು. ಇಂದ್ರನು ಮಾಡಿದ ವ್ಯಾಪಾರವನ್ನು ಜ್ಞಾಪಿಸಿಕೊಳ್ಳಿರಿ' ಎಂದು ಹೇಳಲು ಎಲ್ಲಾ ದೇವತೆಗಳೂ ಭಯದಿಂದ ಓಡಿ ಹೋದರು. ಅದನ್ನು ನೋಡಿ ಜಲಂಧರನು ಜಯಭೇರಿಯನ್ನು ಬಡೆಯಿಸುವವನಾಗಿ ಅಮರಾವತಿಯನ್ನು ಪ್ರವೇಶಿಸಿದನು. ಇಂದ್ರಾದಿದೇವತೆಗಳು

ಮೇರುಪರ್ವತದ ಗುಹೆಯನ್ನು ಪ್ರವೇಶಿಸಿ ವಾಸಮಾಡಿದರು. ತರುವಾಯ ಜಲಂಧರನು ಶುಂಭಾದಿ ಅಸುರರನ್ನು ಇಂದ್ರಾದಿ ದೇವತೆಗಳ ಅಧಿಕಾರದಲ್ಲಿ ನಿಯಮಿಸಿದನು. ತಾನು ಮೇರುಪರ್ವತದ ಗುಹೆಗೆ ಹೋದನು.

ಪುನಃ ಬಂದಿರುವ ದೈತ್ಯನನ್ನು ನೋಡಿ ಇಂದ್ರಾದಿದೇವತೆಗಳು ಶ್ರೀಪರಮಾತ್ಮನನ್ನು ಸ್ತೋತ್ರ ಮಾಡಿದರು. ಅದನ್ನು ತಿಳಿದು ಶ್ರೀಪರಮಾತ್ಮನು ಎದ್ದು ವೇಗದಿಂದ ಗರುಡನ ಮೇಲೆ ಕೂತುಕೊಂಡು ರಮಾದೇವಿಯರೊಡನೆ 'ನಿನ್ನ ತಮ್ಮನಾದ ಜಲಂಧರನು ದೇವತೆಗಳೊಡನೆ ಯುದ್ಧ ಮಾಡುತ್ತಿರುವನು. ದೇವತೆಗಳು ನನ್ನನ್ನು ಪ್ರಾರ್ಥಿಸುತ್ತಿರುವರು. ನಾನು ಬೇಗನೇ ಯುದ್ಧಕ್ಕೆ ಹೋಗುವೆನು' ಎಂದು ಹೇಳಿದನು. ರಮಾದೇವಿಯರು 'ಭಗವಂತನೇ! ನಾನು ನಿಮ್ಮ ಪತ್ನಿಯು ಭಕ್ತಳು. ನನ್ನ ತಮ್ಮನನ್ನು ಹೇಗೆ ಸಂಹರಿಸುವಿರಿ?' ಎಂದು ಕೇಳಿದನು. ಅದಕ್ಕೆ ಪರಮಾತ್ಮನು 'ಅವನು ರುದ್ರನ ಅಂಶದಿಂದ ಹುಟ್ಟಿದ ಕಾರಣವೂ ಬ್ರಹ್ಮನ ಮಾತಿನಿಂದಲೂ ನಿನ್ನ ಮೇಲಿನ ಪ್ರೀತಿಯಿಂದಲೂ ನಾನು ಅವನನ್ನು ಕೊಲ್ಲುವುದಿಲ್ಲ' ಎಂದುಹೇಳಿ ದೇವತೆಗಳು ಸ್ತೋತ್ರ ಮಾಡುತ್ತಾ ಇದ್ದ ಸ್ಥಳಕ್ಕೆ ಹೋದನು.

ಆಗ ಗರುಡದೇವರ ರೆಕ್ಕೆಗಳ ಗಾಳಿಯಿಂದ ಪೀಡಿತರಾಗಿ ದೈತ್ಯರೆಲ್ಲರೂ ಸುತ್ತಲಿಕ್ಕೆ ಆರಂಭಿಸಿದರು. ಅದನ್ನು ನೋಡಿ ಜಲಂಧರನು ಕೋಪದಿಂದ ಪರಮಾತ್ಮನೊಡನೆ ಯುದ್ಧಕ್ಕೆ ಹೋದನು. ಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ಪರಮಾತ್ಮನು 'ನಿನ್ನ ಪರಾಕ್ರಮದಿಂದ ಸಂತೋಷವನ್ನು ಹೊಂದಿರುವೆನು. ಬೇಕಾದ ವರವನ್ನು ಕೇಳಿಕೊ' ಎಂದನು. ಅದಕ್ಕೆ ಅವನು 'ನೀನು ಸಂತುಷ್ಟನಾಗಿದ್ದ ಪಕ್ಷದಲ್ಲಿ ನನ್ನ ಅಕ್ಕನೊಡನೆ ಸಪರಿವಾರನಾಗಿ ನನ್ನ ಮನೆಯ್ಲಲಿ ವಾಸಮಾಡಬೇಕು' ಎಂದನು. ಪರಮಾತ್ಮನು ಹಾಗೆಯೇ ಆಗಲಿ ಎಂದು ಹೇಳಿ ದೇವತೆಗಳಿಂದಲೂ ರಮಾದೇವಿಯರಿಂದಲೂ ಸಹಿತನಾಗಿ ಜಾಲಂಧರ ಎಂಬ ಪುರಕ್ಕೆ ಹೋದನು. ಜಲಂಧರನು ಅಸುರರನ್ನು ದೇವತೆಗಳ ಅಧಿಕಾರದಲ್ಲಿ ಇಟ್ಟು ಪುನಃ ಭೂಮಿಗೆ ಬಂದನು. ದೇವಗಂಧರ್ವ ಇತ್ಯಾದಿಗಳಲ್ಲಿ ಇದ್ದ ಎಲ್ಲಾ ರತ್ನಗಳನ್ನು ತನ್ನ ವಶಮಾಡಿಕೊಂಡನು. ಪಾತಾಳದಲ್ಲಿ ನಿಶುಂಭನನ್ನು ಸ್ಥಾಪನೆ ಮಾಡಿ ಶೇಷಾದಿಗಳನ್ನು ಭೂಮಿಗೆ ಕರಕೊಂಡು ಬಂದನು. ದೇವಗಂಧರ್ವ ಸಿದ್ಧ ಸರ್ಪ ರಾಕ್ಷಸ ಮನುಷ್ಯರನ್ನು ತನ್ನ ರಾಜ್ಯದಲ್ಲಿ ಪ್ರಜೆಗಳನ್ನಾಗಿ ಮಾಡಿ ಆಳಿದನು.

ಈರೀತಿಯಾಗಿ ಜಲಂಧರನು ದೇವತೆಗಳೆಲ್ಲರನ್ನೂ ತನ್ನ ಅಧೀನರನ್ನಾಗಿ ಮಾಡಿ ಪ್ರಜೆಗಳನ್ನು ಮಕ್ಕಳನ್ನು ರಕ್ಷಿಸುವಂತೆ ಧರ್ಮದಿಂದ ಪರಿಪಾಲಿಸಿದನು. ಆಗ

ಒಬ್ಬರಿಗೂ ರೋಗವು ಬರುತ್ತಿರಲಿಲ್ಲ. ದುಃಖವುಂಟಾಗುತ್ತಿದ್ದಿಲ್ಲ. ಹೀಗೆಲ್ಲಾ ಅವನು ರಾಜ್ಯಭಾರ ಮಾಡುತ್ತಿರಲು ಒಂದು ದಿವಸದಲ್ಲಿ ಅವನ ಸಂಪತ್ತನ್ನು ನೋಡಲಿಕ್ಕೂ ಭಗವಂತನನ್ನು ಸೇವಿಸಲಿಕ್ಕೂ ಜಲಂಧರನಿದ್ದಲ್ಲಿಗೆ ನಾರದರು ಹೋದರು. ಆಗ ಅವನು ಭಕ್ತಿಯಿಂದ ನಾರದರನ್ನು ಶಾಸ್ತ್ರದಲ್ಲಿ ಹೇಳಿದ ರೀತಿಯಿಂದಲೇ ಪೂಜಿಸಿ ನಗುತ್ತಾ 'ನೀವು ಎಲ್ಲಿಂದ ಬರುತ್ತಿದ್ದೀರಿ? ಎಲ್ಲಿಯಾದರೂ ಏನನ್ನಾದರೂ ನೋಡಿದಿರಾ? ಯಾಕೆ ಬರುತ್ತಿರುವಿರಿ? ಅದನ್ನು ಆಜ್ಞಾಪಿಸಬೇಕು' ಎಂದು ಹೇಳಿದನು.

ಆಗ ನಾರದರು 'ದೈತ್ಯೇಂದ್ರನೇ! ನಾನು ದೈವೇಚ್ಛೆಯಿಂದ ಕೈಲಾಸಶಿಖರಕ್ಕೆ ಹೋದೆನು. ಅಲ್ಲಿ ಪಾರ್ವತಿಯಿಂದ ಸಹಿತನಾಗಿ ಕೂತಿದ್ದ ಶಂಕರನನ್ನು ನೋಡಿದೆನು. ಆಪ್ರದೇಶವು ಹತ್ತು ಸಾವಿರ ಯೋಜನೆ ವಿಸ್ತೀರ್ಣವಾಗಿತ್ತು. ಕಲ್ಪವೃಕ್ಷಗಳ ಮಹಾವನ ವಿದ್ದಿತು. ನೂರಾರು ಕಾಮಧೇನುಗಳು ಅಲ್ಲಿ ಇದ್ದವು. ಚಿಂತಾಮಣಿಯಿಂದ ಆ ಪ್ರದೇಶವು ಅತ್ಯಂತ ಶೋಭಿಸುತ್ತಾ ಇತ್ತು. ಆ ಆಶ್ಚರ್ಯವನ್ನು ನೋಡಿ ನನಗೆ ಮೂರುಲೋಕದಲ್ಲಿ ಇಂತಹ ಸಂಪತ್ತು ಬೇರೆಯೆಲ್ಲಿಯಾದರೂ ಇದೆಯೋ ಇಲ್ಲವೋ ಎಂದು ಸಂದೇಹವುಂಟಾಯಿತು. ಅಷ್ಟರಲ್ಲಿಯೇ ನಿನ್ನ ಸಂಪತ್ತು ಸ್ಮರಣೆಗೆ ಬಂದಿತು. ಅದರಿಂದ ನೋಡಬೇಕೆಂದು ನಿನ್ನ ಬಳಿಗೆ ಬಂದೆನು. ನಿನ್ನ ಸಂಪತ್ತಿನಲ್ಲಿ ಸ್ತ್ರೀರತ್ನವೊಂದು ಕಡಿಮೆಯಾಗಿರುವ ಕಾರಣ ಮೂರುಲೋಕದಲ್ಲಿ ಶಂಕರನಿಂದ ಇತರನಾದ ಯಾರೂ ಅಷ್ಟು ಸಂಪತ್ತು ಉಳ್ಳವನಾಗಿಲ್ಲವೆಂದು ನಿಶ್ಚಯಮಾಡಿರುವೆನು. ಅಪ್ಸರಸ್ತ್ರೀಯರೂ ನಾಗಕನ್ಯೆಯರೂ ನಿನ್ನ ವಶದಲ್ಲಿ ಇರುವರು. ಆದರೆ ಅವರೆಲ್ಲರೂ ರೂಪದಿಂದ ಪಾರ್ವತಿಗೆ ಸಮಾನರಾಗಲಾರರು. ಅಂತಹ ಪರಮಸುಂದರ ಸ್ತ್ರೀರತ್ನವನ್ನು ಅನುಭವಿಸುತ್ತಿರುವ ಶಿವನಿಗಿರುವ ಸಮೃದ್ಧಿಯು ನಿನಗೂ ಇರುವುದಿಲ್ಲ' ಎಂದು ಹೇಳಿ ಹೊರಟುಹೋದರು.

ತರುವಾಯ ಜಲಂಧರನು ಪಾರ್ವತೀದೇವಿಯರ ಸೌಂದರ್ಯವನ್ನು ಕೇಳಿ ಮೋಹಿತನಾಗಿ ರಾಹುವನ್ನು ಕಳುಹಿಸಿದನು. ಅವನು ನಂದಿಯಿಂದ ಒಳಗೆ ಪ್ರವೇಶಿಸಲ್ಪಟ್ಟವನಾಗಿ ರುದ್ರದೇವರೊಡನೆ 'ದೇವತೆಗಳಿಂದಲೂ ಸರ್ಪಗಳಿಂದಲೂ ಸೇವಿಸಲ್ಪಡುವ ಮೂರುಲೋಕಕ್ಕೆ ಅಧಿಪತಿಯಾದ ಸರ್ವರತ್ನಗಳಿಗೆ ಈಶ್ವರನಾದ ಜಲಂಧರ ಮಹಾರಾಜನ ಆಜ್ಞೆಯನ್ನು ಕೇಳು. ಯಾವಾಗಲೂ ಸ್ಮಶಾನವಾಸಿಯಾದ ಎಲುಬಿನ ಭಾಗವನ್ನು ಹೊತ್ತುಕೊಂಡಿರುವ ವಸ್ತ್ರದಿಂದ ರಹಿತನಾಗಿರುವ ನಿನಗೆ ಸುಂದರಿಯಾದ ಪಾರ್ವತಿಯು ಹೆಂಡತಿಯು ನಿನಗೆ ಯಾಕೆ? ನಾನು ರತ್ನಗಳಿಗೆ

ಸ್ವಾಮಿಯು. ಪಾರ್ವತಿಯು ಸ್ತ್ರೀರತ್ನಳಾಗಿರುವಳು. ಆದುದರಿಂದ ಅವಳು ನನಗೆ ಯೋಗ್ಯಳು. ಭಿಕ್ಷಾಬೇಡುವ ನಿನಗೆ ಯೋಗ್ಯಳಲ್ಲ' ಎಂದು ಹೇಳಿದನು.

ಈರೀತಿಯಾಗಿ ರಾಹುವು ಹೇಳುತ್ತಿರಲು ರುದ್ರದೇವರ ಹುಬ್ಬಿನ ಮಧ್ಯದಿಂದ ಕ್ರೂರನಾದ ಸಿಂಹದಂತೆ ಮುಖವುಳ್ಳ ಚಂಚಲವಾದ ನಾಲಿಗೆಯುಳ್ಳ ಜ್ವಾಲೆಯಿಂದ ಕೂಡಿದ ಕಣ್ಣುಳುಳ್ಳ ಮೇಲೆ ಕೂದಲುಳ್ಳ ಬೆಳ್ಳಗಿನ ದೇಹವುಳ್ಳ ನರಸಿಂಹದೇವರಂತೆ ಕಾಣಿಸುವ ಪುರುಷನು ಭಯಂಕರವಾಗಿ ಗರ್ಜನೆ ಮಾಡುತ್ತಾ ಉಂಟಾದವನಾಗಿ ರಾಹುವನ್ನು ನುಂಗಲಕ್ಕೆ ಬಂದನು. ರಾಹುವು ಅತಿವೇಗದಿಂದ ಓಡಿದನು. ಆದರೆ ಆ ಪುರುಷನು ಹೋಗಿ ಅವನನ್ನು ಹಿಡಿದು ನಿಲ್ಲಿಸಿದನು.

ಆಗ ರಾಹುವು ರುದ್ರದೇವರೊಡನೆ 'ಶರಣಾಗತನಾದ ನನ್ನನ್ನು ರಕ್ಷಿಸು. ನಾನು ಬ್ರಾಹ್ಮಣನು. ನನ್ನನ್ನು ಇವನು ತಿನ್ನಲು ಬರುತ್ತಿರುವನು' ಎಂದು ಹೇಳಿಕೊಂಡು ಅದನ್ನು ಕೇಳಿ ರುದ್ರದೇವರು ರಾಹುವನ್ನು ನುಂಗಲಿಕ್ಕೆ ಆರಂಭಿಸಿದ್ದ ಆ ಪುರುಷನನ್ನು ತಡೆದು 'ಇವನು ದೂತನಾಗಿ ಬಂದಿದ್ದಾನೆ. ಅದುದರಿಂದ ಇವನನ್ನು ಕೊಲ್ಲಬಾರದು. ಇವನನ್ನು ಬಿಟ್ಟುಬಿಡು' ಎಂದರು. ಆಗ ಆ ಪುರುಷನು ರಾಹುವನ್ನು ಆಕಾಶದಲ್ಲಿ ಬಿಟ್ಟು ರುದ್ರದೇವರೊಡನೆ 'ನನಗೆ ಹಸಿವೆಯಾಗುತ್ತದೆ. ಏನನ್ನು ತಿನ್ನಲಿ?' ಎಂದು ಕೇಳಿದನು. ಅದಕ್ಕೆ ರುದ್ರದೇವರಿಂದ ಆಜ್ಞಪ್ತನಾದ ಆ ಪುರುಷನು ಹಾಗೆಯೇ ತನ್ನ ಕೈಕಾಲುಗಳ ಮಾಂಸವನ್ನೆಲ್ಲಾ ತಿಂದನು. ಅವನ ತಲೆಯು ಮಾತ್ರ ಉಳಿಯಿತು. ಆಗ ರುದ್ರದೇವರು ಪ್ರಸನ್ನರಾಗಿ ಆಶ್ಚರ್ಯವುಳ್ಳವರಾಗಿ 'ನೀನು ಕೀರ್ತಿಮುಖ ಎಂಬ ಹೆಸರಿನಿಂದ ನನ್ನ ದ್ವಾರಪಾಲಕನಾಗಿರು. ಯಾರು ನಿನ್ನನ್ನು ಪೂಜಿಸುವುದಿಲ್ಲವೋ ಅವರು ನನಗೆ ಪ್ರಿಯರಾಗಲಾರರು' ಎಂದು ಹೇಳಿದರು.

ಆ ಸಮಯವನ್ನು ಆರಂಭಿಸಿ ಕೀರ್ತಿಮುಖನು ರುದ್ರದೇವರ ದ್ವಾರದಲ್ಲಿ ಇರುವನು. ಅವನನ್ನು ಪೂಜಿಸದಿದ್ದರೆ ರುದ್ರದೇವರನ್ನು ಪೂಜಿಸಿದ್ದು ವ್ಯರ್ಥವಾಗುವುದು. ರಾಹುವು ಅವನಿಂದ ಬಿಡಲ್ಪಟ್ಟವನಾಗಿ ಬರ್ಬರ ಎಂಬ ಸ್ಥಳದಲ್ಲಿ ಬಿದ್ದನು. ಅದರಿಂದ ಅವನು ಬರ್ಬರ ಸ್ಥಳದಿಂದ ಹುಟ್ಟಿದವನೆಂದು ಭೂಮಿಯಲ್ಲಿ ಪ್ರಸಿದ್ಧಿಯನ್ನು ಹೊಂದಿದನು. ಆಮೇಲೆ ರಾಹುವು ತಾನು ಪುನಃ ಹುಟ್ಟಿದೆನೆಂದು ತಿಳಿದುಕೊಂಡ ಜಲನಂಧರನಿದ್ದಲ್ಲಿಗೆ ಬರುವವನಾಗಿ ಜಲಂಧರ ನೊಡನೆ ನಡೆದ ವಿಷಯವನ್ನೆಲ್ಲಾ ತಿಳಿಸಿದನು.

ಜಲಂಧರನು ಅದನ್ನು ಕೇಳಿ ಕೋಪವುಳ್ಳವನಾಗಿ ದೈತ್ಯಸೇನೆಯಿಂದ ತುಂಬಿದ ನೂರಾರು ವಿಮಾನಗಳಿಂದ ಸಹಿತನಾಗಿ ಯುದ್ಧಕ್ಕೆ ಹೊರಟನು. ಇದನ್ನು ತಿಳಿದು

ಇಂದ್ರಾದಿ ದೇವತೆಗಳು ಮೆಲ್ಲನೆ ಹೋಗಿ ಈ ವಿಷಯವನ್ನು ರುದ್ರದೇವರಿಗೆ ತಿಳಿಸಿದರು. ಅದನ್ನು ಕೇಳಿ ರುದ್ರದೇವರು ಮಂದಹಾಸವನ್ನು ಮಾಡುವವರಾಗಿ ಭಗವಂತನೊಡನೆ 'ನೀವು ಯಾಕೆ ಜಲಂಧರನನ್ನು ಸಂಹರಿಸಲಿಲ್ಲ. ಅವನ ಮನೆಗೇ ಹೋಗಿ ಯಾಕೆ ಇರುವಿರಿ?' ಎಂದು ಕೇಳಿದರು. ಅದಕ್ಕೆ ಪರಮಾತ್ಮನು 'ಅವನು ನಿನ್ನ ಅಂಶದಿಂದ ಹುಟ್ಟಿದವನಾದ ಕಾರಣವೂ ಲಕ್ಷ್ಮಿಯ ತಮ್ಮನಾದ ಕಾರಣವೂ ನಾನು ಅವನನ್ನು ಯುದ್ಧದಲ್ಲಿ ಸಂಹರಿಸಲಿಲ್ಲ. ನೀನು ಅವನನ್ನು ಸಂಹರಿಸು' ಎಂದನು. 'ಅವನು ಸಾಮಾನ್ಯ ಶಸ್ತ್ರದಿಂದ ಸಾಯಲಾರನು. ದೇವತೆಗಳೆಲ್ಲರೂ ತಮ್ಮ ತೇಜಸ್ಸಿನಿಂದ ಒಂದು ಆಯುಧವನ್ನು ಮಾಡಿಕೊಡಬೇಕು' ಎಂದ ರುದ್ರದೇವರು ಹೇಳಿದರು. ತರುವಾಯ ಪರಮಾತ್ಮನೂ ಇತರ ದೇವತೆಗಳೂ ತಮ್ಮ ತೇಜಸ್ಸನ್ನು ಸೇರಿ ಅದರಿಂದ ಉತ್ತಮವಾದ ಚಕ್ರಾಯುಧವನ್ನು ಮಾಡಿಕೊಂಡರು. ಉಳಿದ ತೇಜಸ್ಸಿನಿಂದ ವಜ್ರಾಯುಧವನ್ನು ಮಾಡಿದರು. ತರುವಾಯ ಜಲಂಧರನು ಕೈಲಾಸಕ್ಕೆ ಬಂದನು. ದೇವತೆಗಳು ಅವರ ಕಣ್ಣಿಗೆ ಬೀಳದೆ ಮೆಲ್ಲನೆ ಹೊರಟುಹೋದರು. ರುದ್ರದೇವರ ಗಣಗಳು ಯುದ್ಧಕ್ಕೆ ಹೋದವು. ಗಣಗಳಿಗೂ ದೈತ್ಯರಿಗೂ ಭಯಂಕರವಾದ ಯುದ್ಧವು ನಡೆಯಿತು.

ರುದ್ರದೇವರು ಅನೇಕ ದೈತ್ಯರನ್ನು ಸಂಹರಿಸಿದರು. ಕೊನೆಗೆ ಜಲಂಧರನೇ ರುದ್ರದೇವರ ಬಳಿಗೆ ಬಂದು ಭಯಂಕರವಾದ ಯುದ್ಧವನ್ನು ಮಾಡಿದನು. ಕೊನೆಗೆ ಬಲಿಷ್ಠರು ಎಂದು ತಿಳಿದುಕೊಂಡು ರುದ್ರದೇವರನ್ನು ಮೋಹಗೊಳಿಸಲಿಕ್ಕೆ ಗಾಂಧರ್ವ ಮಾಯೆಯನ್ನು ಉಂಟುಮಾಡಿದನು. ಆ ಮಾಯೆಯಿಂದ ಗಂಧರ್ವರೂ ಅಪ್ಸರಸ್ತ್ರೀಯರೂ ಗಾಯನ ಮಾಡಿದರು. ನರ್ತನ ಮಾಡಿದರು. ವೀಣಾದಿವಾದ್ಯಗಳನ್ನು ಬಾರಿಸಿದರು. ಆ ಆಶ್ಚರ್ಯವನ್ನು ನೋಡಿ ರುದ್ರದೇವರು ಮೋಹಿತರಾದರು. ಕೈಗಳಿಂದ ಶಸ್ತ್ರಗಳು ಕೆಳಗೆ ಬಿದ್ದು ಹೋದದ್ದನ್ನು ತಿಳಿಯಲಿಲ್ಲ. ಅದನ್ನು ನೋಡಿ ಜಲಂಧರನು ಕಾಮಾಂಧನಾಗಿ ಯುದ್ಧದಲ್ಲಿ ಶಂಭನಿಶುಂಭರನ್ನು ನಿಲ್ಲಿಸಿ ತಾನು ರುದ್ರದೇವರಂತೆ ರೂಪವನ್ನು ಧರಿಸುವವನಾಗಿ ವೃಷಭದ ಮೇಲೆ ಕೂತುಕೊಂಡು ಪಾರ್ವತಿದೇವಿಯಿದ್ದಲ್ಲಿಗೆ ಹೋದನು. ಅವನನ್ನು ನೋಡಿ ಪಾರ್ವತೀದೇವಿಯರು ಸಖಿಯರ ಮಧ್ಯದಿಂದ ಅವನ ಎದುರಾಗಿ ಬಂದರು. ಸೌಂದರ್ಯವುಳ್ಳ ಅವರನ್ನು ನೋಡಿದ ಮಾತ್ರದಿಂದಲೇ ಜಲಂಧರನ ವೀರ್ಯವು ಕೆಳಗೆ ಬಿದ್ದಿತು. ಅವನು ಸ್ತಬ್ಧನಾದನು. ಆಗ ಪಾರ್ವತೀದೇವರು ಅವನನ್ನು ಅಸುರನೆಂದು ತಿಳಿದು ಭಯದಿಂದ ಮರೆಯಾಗಿ ಬೇಗನೇ ಉತ್ತರ ಮಾನಸಕ್ಕೆ

ಹೊರಟುಹೋದರು. ಜಲಂಧರನು ಪಾರ್ವತೀದೇವಿಯನ್ನು ಕಾಣದೆ ಪುನಃ ಯುದ್ಧ ನಡೆಯುತ್ತಿರುವಲ್ಲಿಗೇ ಬಂದನು. ಪಾರ್ವತೀದೇವಿಯರು ಶ್ರೀಭಗವಂತನನ್ನು ಸ್ಮರಿಸಿದನು. ಆಗಲೇ ತನ್ನ ಸಮೀಪದಲ್ಲಿ ಕೂತಿದ್ದ ಪರಮಾತ್ಮನನ್ನು ನೋಡಿದರು. 'ಭಗವಂತನೇ! ಜಲಂಧರನು ಅತ್ಯಂತ ಅದ್ಭುತವಾದ ಕಾರ್ಯವನ್ನು ಮಾಡಿದನು. ದುರ್ಬುದ್ಧಿಯುಳ್ಳ ಅವನ ವ್ಯಾಪಾರವು ತಮಗೆ ತಿಳಿಯಲಿಲ್ಲವೇ' ಎಂದರು. 'ಅವನು ತೋರಿಸಿದ ಮಾರ್ಗವನ್ನೇ ನಾವೂ ಅನುಸರಿಸುವ, ಇಲ್ಲದಿದ್ದರೆ ಅವನು ಸಾಯಲಾರನು. ಪತ್ನಿಯ ಪಾತಿವ್ರತ್ಯದಿಂದ ರಕ್ಷಿತನಾಗಿ ಅವಧ್ಯನಾಗಿರುವನು' ಎಂದು ಹೇಳಿ ಪರಮಾತ್ಮನು ಜಲಂಧರನ ಪಟ್ಟಣಕ್ಕೆ ಹೋದನು. ರುದ್ರದೇವರು ಯುದ್ಧರಂಗದಲ್ಲಿ ಅಸುರನ ಮಾಯೆಯೆಂದು ತಿಳಿದವರಾಗಿ ಆಶ್ಚರ್ಯವುಳ್ಳವರಾಗಿ ಪುನಃ ರೋಷದಿಂದ ಯುದ್ಧಕ್ಕೆ ಹೋದರು. ಜಲಂಧರನೂ ರುದ್ರದೇವರನ್ನು ಎದುರಿಸಿಕೊಂಡು ಹೋದನು.

ಪರಮಾತ್ಮನು ಜಲಂಧರನ ನಗರಕ್ಕೆ ಹೋಗಿ ವೃಂದೆಯ ಪಾತಿವ್ರತ್ಯವನ್ನು ಕೆಡಿಸಬೇಕೆಂದು ಅಭಿಪ್ರಾಯಪಟ್ಟನು. ತರುವಾಯ ವೃಂದೆಯು ಸ್ವಪ್ನದಲ್ಲಿ ತನ್ನ ಗಂಡನು ಎಣ್ಣೆಹಚ್ಚಿಕೊಂಡು ಕೋಣದಮೇಲೆ ಕೂತುಕೊಂಡು ದಿಗಂಬರನಾಗಿ ಕಪ್ಪಾದ ಪುಷ್ಪಗಳನ್ನು ಆಭರಣಗಳನ್ನೂ ಧರಿಸಿಕೊಂಡು ತಲೆಯನ್ನು ಬೋಳಿಸಿ ಕೊಂಡು ಕತ್ತಲೆಯಲ್ಲಿ ದಕ್ಷಿಣದಿಕ್ಕಿಗೆ ಹೋದಂತೆಯೂ ತನ್ನ ನಗರವು ಸಮುದ್ರದಲ್ಲಿ ಮುಳುಗಿಹೋದಂತೆಯೂ ನೋಡಿದಳು. ಮತ್ತು ಸೂರ್ಯನನ್ನು ನೋಡುವಾಗ ಸೂರ್ಯನ ಮಧ್ಯದಲ್ಲಿ ಅವಳ ಕಣ್ಣಿಗೆ ಒಡಕು ಕಾಣಿಸಿತು. ಇದೆಲ್ಲವೂ ಅನಿಷ್ಟವೆಂದು ತಿಳಿದುಕೊಂಡು ಅಳುತ್ತಾ ಭಯವುಳ್ಳವಳಾಗಿ ಎಲ್ಲಿಯೂ ನಿಲ್ಲಲಿಕ್ಕೆ ಮನಸ್ಸಿಲ್ಲದೆ ಇಬ್ಬರು ಸಖಿಯರನ್ನು ಕರೆದುಕೊಂಡು ಉದ್ಯಾನಕ್ಕೆ ಹೋದಳು. ಅಲ್ಲಿ ಸಂಚರಿಸು ತ್ತಿರುವಾಗ ಸಿಂಹದಂತೆ ಮುಖವುಳ್ಳ ಕೋರೆಹಲ್ಲುಗಳಿಂದಲೂ ಕಣ್ಣುಗಳಿಂದಲೂ ಭಯಂಕರರಾದ ಇಬ್ಬರು ರಾಕ್ಷಸರನ್ನು ನೋಡಿದಳು. ಅವರಿಬ್ಬರನ್ನು ನೋಡಿ ಭಯಪಟ್ಟು ಓಡಲಿಕ್ಕೆ ಆರಂಭಿಸಿದಳು. ಅಷ್ಟರಲ್ಲಿಯೇ ಶಿಷ್ಯನಿಂದ ಸಹಿತನಾಗಿ ಮೌನದಿಂದ ಕೂತಿದ್ದ ಒಬ್ಬ ತಪಸ್ವಿಯನ್ನು ನೋಡಿದಳು. ಆ ತಪಸ್ವಿಯು ಅವಳ ಹಿಂದೆಯೇ ಬರುತ್ತಿದ್ದ ರಾಕ್ಷಸರನ್ನು ನೋಡಿ ಕೋಪದಿಂದ ಹುಂಕಾರವನ್ನು ಮಾಡಿದನು. ಆಗ ಅವರು ಭಯವುಳ್ಳವರಾಗಿ ಓಡಿಹೋದರು. ಆಗ ವೃಂದೆಯು ಆ ತಪಸ್ವಿಗೆ ನಮಸ್ಕರಿಸಿ 'ಕೃಪಾನಿಧಿಗಳೇ! ನಾನು ಈ ಘೋರವಾದ ಭಯದಿಂದ ನಾನು ನಿಮ್ಮಿಂದ ರಕ್ಷಿತಳಾಗಿದ್ದೇನೆ. ತಾವು ಇನ್ನೊಂದನ್ನು ವಿಜ್ಞಾಪಿಸಿಕೊಳ್ಳುತ್ತೇನೆ. ನನ್ನ

ಪತಿಯಾದ ಜಲಂಧರ ಎನ್ನುವವರು ಯುದ್ಧಕ್ಕೆ ಹೋಗಿರುವರು. ಅವರು ಯುದ್ಧದಲ್ಲಿ ಹೇಗೆ ಇರುವರು? ಅದನ್ನು ಹೇಳಿರಿ' ಎಂದು ಕೇಳಿದಳು. ಆ ಮಾತನ್ನು ಕೇಳಿ ಆ ತಪಸ್ವಿಯು ಕೃಪೆಯಿಂದ ಮೇಲೆ ನೋಡಿದರು. ಆಗ ಎರಡು ಕಪಿಗಳು ಬಂದು ಅವರಿಗೆ ನಮಸ್ಕರಿಸಿ ಮುಂದೆ ನಿಂತುಕೊಂಡವು. ತರುವಾಯ ಆ ತಪಸ್ವಿಯ ಹುಟ್ಟಿನ ವಿಲಾಸದ ಸಂಜ್ಞೆಯಿಂದ ಆಕಾಶಮಾರ್ಗದಲ್ಲಿ ಹೋಗಿ ಅರ್ಧಕ್ಷಣದಲ್ಲಿಯೇ ಜಲಂಧರನ ತಲೆಯನ್ನೂ ಮುಂಡವನ್ನೂ ಹಿಡಿದುಕೊಂಡು ಬಂದು ನಿಂತವು. ಅದನ್ನು ನೋಡಿ ವೃಂದೆಯು ಮೂರ್ಛಿತಳಾಗಿ ಭೂಮಿಯಲ್ಲಿ ಬಿದ್ದಳು. ಆಗ ಆ ಮುನಿಗಳು ಕಮಂಡಲು ಜಲದಿಂದ ಪ್ರೋಕ್ಷಿಸಲು ಎದ್ದು ಅವಳು ಗಂಡನ ಹಣೆಯಲ್ಲಿ ತನ್ನ ಹಣೆಯನ್ನು ಇಟ್ಟು ದೈನ್ಯದಿಂದ ಬಹಳವಾಗಿ ಅಳುವವಳಾದಳು. ಆ ಮುನಿಗಳೊಡನೆ 'ನನ್ನ ಪ್ರಿಯರಾದ ಇವರನ್ನು ಬದುಕಿಸಿರಿ. ನೀವು ಬದುಕಿಸಲಿಕ್ಕೆ ಸಮರ್ಥರು' ಎಂದು ಹೇಳಿದಳು. ಆಗ ಆ ಮುನಿಗಳು ನಗುತ್ತಾ 'ರುದ್ರನಿಂದ ಮೃತನಾದ ಇವನನ್ನು ಬದುಕಿಸಲಿಕ್ಕೆ ಆಗಲಾರದು ಆದರೂ ನಿನ್ನ ಮೇಲಿನ ದಯೆಯಿಂದ ಇವನನ್ನು ಬದುಕಿಸುವೆನು' ಎಂದು ಹೇಳಿ ಮರೆಯಾದರು.

ಅಷ್ಟರಲ್ಲಿ ಆ ಜಲಂಧರನು ಎದ್ದನು. ಸಂತೋಷದಿಂದ ವೃಂದೆಯನ್ನು ಆಲಿಗಿಂಸಿ ಅವಳ ಮುಖವನ್ನು ಚುಂಬಿಸಿದನು. ತರುವಾಯ ವೃಂದೆಯೂ ಸಂತೋಷವುಳ್ಳವಳಾಗಿ ಗಂಡನೊಡನೆ ಅವನ ಮಧ್ಯದಲ್ಲಿ ಬಹುದಿವಸ ವಿಹರಿಸುತ್ತಿದ್ದಳು. ಒಂದುದಿನದಲ್ಲಿ ವಿಹರಿಸಿದ ಅನಂತರದಲ್ಲಿ ತನ್ನ ಸಮೀಪದಲ್ಲಿ ಮಲಗಿರುವವನ್ನು ವಿಷ್ಣುವನ್ನು ನೋಡಿದಳು. ಆಗ ವೃಂದೆಯು ಕೋಪವುಳ್ಳವಳಾಗಿ ಬೆದರಿಸಿ 'ಹರಿಯೇ! ಪರಸ್ತ್ರೀ ಗಮನ ಮಾಡುವ ನಿನಗೆ ಧಿಕ್ಕಾರವಿರಲಿ. ನೀನೇ ಮಾಯೆಯಿಂದ ತಪಸ್ವಿಯ ವೇಷವನ್ನು ಧರಿಸಿರುವಿ ತಿಳಿಯಿತು. ನೀನು ಯಾವ ಇಬ್ಬರು ದ್ವಾರಪಾಲಕರನ್ನು ನನಗೆ ರಾಕ್ಷಸರಂತೆ ಮಾಡಿ ತೋರಿಸಿದಿಯೋ ಅವರೇ ರಾಕ್ಷಸರಾಗಿ ನಿನ್ನ ಪತ್ನಿಯನ್ನು ಅಪಹರಿಸುವರು. ನೀನೂ ಕೂಡ ಪತ್ನೀದುಃಖದಿಂದ ಪೀಡಿತನಾಗಿ ಕಪಿಗಳ ಸಹಾಯವುಳ್ಳವನಾಗಿ ಈಗ ನಿನ್ನ ಶಿಷ್ಯರೂಪವನ್ನು ಧರಿಸಿದ ಶೇಷನಿಂದ ಕೂಡಿಕೊಂಡು ಸಂಚರಿಸುತ್ತಾ ಇರು' ಎಂದು ಶಾಪವನ್ನು ಕೊಟ್ಟಳು. ಭಗವಂತನು ಶಾಪಕ್ಕೆ ಒಳಗೆ ಆಗುವವನಲ್ಲ. ಆದರೂ ಅವಳ ಪುಣ್ಯವು ನಾಶವನ್ನು ಹೊಂದುವುದಕ್ಕಾಗಿ ಅದನ್ನು ಅಂಗೀಕರಿಸಿದಂತೆ ತೋರಿಸಿದನು.

ತರುವಾಯ ಪರಮಾತ್ಮನು ಬೇಡಬೇಡವೆಂದು ಹೇಳಿದರೂ ವೃಂದೆಯು ಅಗ್ನಿಯಲ್ಲಿ ಪ್ರವೇಶಿಸಿದಳು. ತರುವಾಯ ಪರಮಾತ್ಮನು ಆ ವೃಂದೆಯನ್ನೇ

ಸ್ಮರಿಸುವಂತೆ ತೋರಿಸುತ್ತಾ ಅವಳ ಚಿತೆಯ ಭಸ್ಮವನ್ನು ಹಚ್ಚಿಕೊಂಡು ಅಲ್ಲಿಯೇ ಇದ್ದನು. ದೇವತೆಗಳೆಲ್ಲರೂ ಬಂದು ಹೇಳಿದರೂ ಶಾಂತಿಯನ್ನು ಹೊಂದದಂತೆ ಅಜ್ಞಾನಿಗಳಿಗೆ ತೋರಿಸುತ್ತಾ ಇದ್ದನು.

ತರುವಾಯ ಜಲಂಧರನು ರುದ್ರದೇವರ ಅದ್ಭುತವಾದ ಪರಾಕ್ರಮವನ್ನು ನೋಡಿ ಅವರನ್ನು ಮೋಹಗೊಳಿಸುವುದಕ್ಕಾಗಿ ಮಾಯೆಯಿಂದ ಗೌರಿಯನ್ನು ನಿರ್ಮಿಸಿದನು. ರಥದ ಮೇಲೆ ಅಳುತ್ತಾ ಇದ್ದ ಶುಂಭನಿಶುಂಭರಿಂದ ಕೊಲ್ಲಲ್ಪಟ್ಟ ಮಾಯಾಗೌರಿಯನ್ನು ರುದ್ರದೇವರು ನೋಡಿ ದುಃಖವುಳ್ಳ ಮನಸ್ಸುಳ್ಳವರಾಗಿ ತನ್ನ ಪರಾಕ್ರಮವನ್ನು ಮರೆತು ಮುಖವನ್ನು ತಗ್ಗಿಸಿಕೊಂಡು ಸುಮ್ಮನೆ ಇದ್ದರು. ಆಗ ಜಲಂಧರನು ವೇಗದಿಂದ ರುದ್ರದೇವರ ಶಿರಸ್ಸಿಗೂ ಎದೆಗೂ ಹೊಟ್ಟೆಗೂ ಮೂರು ಬಾಣಗಳಿಂದ ಬಡೆದನು. ತರುವಾಯ ರುದ್ರದೇವರು ಪರಮಾತ್ಮ ಉಪದಿಷ್ಟರಾಗಿ ಅದು ಅಸುರನ ಮಾಯೆಯೆಂದು ತಿಳಿದು ಭಯಂಕರವಾದ ರೂಪವನ್ನು ಧರಿಸಿದರು. ಅವರ ಭಯಂಕರವಾದ ರೂಪವನ್ನು ಅಸುರರೆಲ್ಲರೂ ಅವರ ಮುಂದೆ ನಿಲ್ಲಲಿಕ್ಕೆ ಅಸಮರ್ಥರಾಗಿ ದಿಕ್ಕುದಿಕ್ಕುಗಳಿಗೆ ಓಡಿದರು.

ತರುವಾಯ ರುದ್ರದೇವರು ಶುಂಭನಿಶುಂಭರಿಗೆ ಗೌರಿಯಿಂದ ಸಾಯುವಿ ರೆಂದು ಶಾಪವನ್ನು ಕೊಟ್ಟರು. ಪುನಃ ಜಲಂಧರನು ಬಾಣಗಳ ಮಳೆಯನ್ನು ಸುರಿಸಿ ದನು. ರುದ್ರದೇವರು ಬಾಣಗಳನ್ನು ಕತ್ತರಿಸುವಷ್ಟರಲ್ಲಿಯೇ ಬೇಗನೇ ಪರಿಘದಿಂದ ವೃಷಭವನ್ನು ಬಡಿದನು. ಆ ಪೆಟ್ಟಿನಿಂದ ವೃಷಭವು ಯುದ್ಧದಿಂದ ಹಿಂದೆ ತಿರುಗಿಹೋಯಿತು. ರುದ್ರದೇವರು ಎಷ್ಟು ಸೆಳೆದರೂ ಯುದ್ಧರಂಗದಲ್ಲಿ ಬಂದು ನಿಲ್ಲಲಿಕ್ಕೆ ಕೇಳಲಿಲ್ಲ. ತರುವಾಯ ರುದ್ರದೇವರು ಅತ್ಯಂತ ಕೋಪವುಳ್ಳವನಾಗಿ ಸೂರ್ಯನಂತೆ ಪ್ರಕಾಶಮಾನವಾದ ಚಕ್ರವನ್ನು ವೇಗದಿಂದ ಬಿಟ್ಟರು. ಅದು ಆಕಾಶ ಭೂಮಿಗಳು ಸುಡುವಂತೆ ಮಾಡಿ ವೇಗದಿಂದ ಜಲಂಧರನ ತಲೆಯನ್ನು ಕತ್ತರಿಸಿತು. ಅವನ ದೇಹವು ಶಬ್ದವನ್ನು ಮಾಡುತ್ತಾ ರಥದಿಂದ ಕೆಳಗೆ ಬಿದ್ದಿತು. ದೇಹದಿಂದ ಒಂದು ತೇಜಸ್ಸು ಬಂದು ರುದ್ರದೇವರನ್ನು ಪ್ರವೇಶಿಸಿತು. ವೃಂದೆಯ ತೇಜಸ್ಸು ಪಾರ್ವತೀದೇವಿಯಲ್ಲಿ ಪ್ರವೇಶಿ ಸಿತು. ಆಗ ಇಂದ್ರಾದಿದೇವತೆಗಳು ಬಂದು ಸಂತೋಷದಿದಂದ ರುದ್ರದೇವರಿಗೆ ಶಿರಸಾ ನಮಸ್ಕರಿಸಿ ಭಗವಂತನು ವೃಂದೆಯಿಂದ ಮೋಹಿತನಾಗಿ ಅಲ್ಲಿಂದ ಏಳದೆ ಇರುವನೆಂದು ತಿಳಿಸಿದರು. ಆಗ ರುದ್ರದೇವರು ಮೋಹಿನಿಯೆಂದು ಹೆಸರುಳ್ಳ ರಮಾದೇವಿಯರನ್ನು ಪ್ರಾರ್ಥಿಸುವಂತೆ ಹೇಳಿ ಭೂತಗಣಗಳಿಂದ ಕೂಡಿಕೊಂಡು ಮರೆಯಾದರು.

ದೇವತೆಗಳು ಹೋಗಿ ರಮಾದೇವಿಯರನ್ನು ಪ್ರಾರ್ಥಿಸಿದರು. ಆಗ ರಮಾದೇವಿಯರು ನಾನೇ ಗೌರಿಯಲ್ಲಿ ಅಂತರ್ಯಾಮಿಯಾದ ಗೌರಿಯೆಂಬ ರೂಪದಿಂದಲೂ, ಲಕ್ಷ್ಮೀ ಎಂಬ ರೂಪದಿಂದಲೂ ಸರಸ್ವತಿಯಲ್ಲಿ ಅಂತರ್ಯಾಮಿ ಯಾದ ಸ್ವರಾ ಎಂಬ ರೂಪದಿಂದಲೂ ಇರುವೆನು. ಆ ರೂಪಗಳೊಡನೆ ಹೋಗಿರಿ. ಅವರು ನಿಮ್ಮ ಕಾರ್ಯವನ್ನು ಮಾಡುವರು' ಎಂದು ಹೇಳಿ ಅಂತರ್ಧಾನವನ್ನು ಹೊಂದಿದರು. ತರುವಾಯ ದೇವತೆಗಳು ಹೋಗಿ ಗೌರೀ ಲಕ್ಷ್ಮೀ ಸ್ವರಾದೇವಿಯರಿಗೆ ಹೋಗಿ ನಮಸ್ಕರಿಸಿದರು. ಆಗ ಅವರು ಮೂರು ಜನರು ಮೂರು ಬೀಜಗಳನ್ನು ಕೊಟ್ಟರು. ಈ ಬೀಜಗಳನ್ನು ಪರಮಾತ್ಮನು ಇರುವಲ್ಲಿಗೆ ಹೋಗಿ ಬಿತ್ತಿರಿ. ನಿಮ್ಮ ಕಾರ್ಯವು ಸಿದ್ಧಿಸುವುದು.

ತರುವಾಯ ದೇವತೆಗಳು ಪರಮಾತ್ಮನು ಇದ್ದ ವೃಂದೆಯ ಚಿತೆಯು ಇದ್ದ ಸ್ಥಳದಲ್ಲಿ ಹೋಗಿ ಆ ಬೀಜಗಳನ್ನು ಬಿತ್ತಿದರು. ಆ ಬೀಜಗಳಿಂದ ಧಾತ್ರೀ (ನೆಲ್ಲಿಯಗಿಡ) ಮಾಲತೀ ಎಂಬ ಪುಷ್ಪದ ಗಿಡ, ತುಲಸೀ ಈ ಪ್ರಕಾರವಾಗಿ ಮೂರು ಗಿಡಗಳಾದವು. ಧಾತ್ರೀ ಎಂದು ಹೆಸರುಳ್ಳ ಸರಸ್ವತಿಯಲ್ಲಿ ಅಂತರ್ಯಾಮಿಯಾದ ರಮಾದೇವಿಯರಿಂದ ಉಂಟಾದದ್ದು ಧಾತ್ರಿಯು. ಲಕ್ಷ್ಮೀರೂಪದಿಂದ ಉಂಟಾದ ಗಿಡವು ಮಾಲತಿಯು. ಗೌರಿಯಲ್ಲಿ ಅಂತರ್ಯಾಮಿಯಾದ ಗೌರಿಯೆಂಬ ರಮಾದೇವಿಯರ ರೂಪದಿಂದ ಉಂಟಾದದ್ದು ತುಲಸಿಯು. ಸ್ತ್ರೀರೂಪವುಳ್ಳ ಆ ಗಿಡಗಳನ್ನು ನೋಡಿ ಪರಮಾತ್ಮನು ಎದ್ದನು. ಅವನು ಧಾತ್ರಿಯೂ ತುಲಸಿಯೂ ಅನುರಾಗದಿಂದ ನೋಡಿದರು. ಲಕ್ಷ್ಮೀದೇವಿಯರು ಮಾತ್ರ ಈರ್ಷ್ಯೆಯುಳ್ಳವರಂತೆ ತೋರಿಸುತ್ತಾ ಬೀಜವನ್ನು ಕೊಟ್ಟ ಕಾರಣ ಮಾಲತಿಯೂ ಪರಮಾತ್ಮನಲ್ಲಿ ಈರ್ಷ್ಯೆಯುಳ್ಳವಳಾದಳು. ಆದರಿಂದ ಅವಳಿಗೆ ಬರ್ಬರಿಯೆಂದು ಹೆಸರಾಯಿತು. ಧಾತ್ರೀ ತುಲಸಿಯರು ಭಗವಂತನ ಪ್ರೀತಿಗೆ ಪಾತ್ರರಾದರು.

ತರುವಾಯ ಪರಮಾತ್ಮನು ದುಃಖವನ್ನು ಮರೆತವನಂತೆಯೂ ಸಂತೋಷ ಪಟ್ಟವನಂತೆಯೂ (ದುಷ್ಟರಿಗೆ ಮೋಹವನ್ನು ಉಂಟುಮಾಡುವುದಕ್ಕೆ ತೋರಿಸುವವ ನಾಗಿ ಸರ್ವದೇವತೆಗಳಿಂದ ನಮಸ್ಕೃತನಾಗಿ ಅವರಿಬ್ಬರನ್ನು ಕರೆದುಕೊಂಡು ವೈಕುಂಠಕ್ಕೆ ಹೋದನು. ಆದುದರಿಂದ ಕಾರ್ತಿಕೋದ್ಯಾಪನದಲ್ಲಿ ತುಲಸೀಮೂಲ ದಲ್ಲಿ ಪರಮಾತ್ಮನ ಪೂಜೆಯನ್ನು ಮಾಡಬೇಕು. ತುಲಸಿಯು ಪರಮಾತ್ಮನಿಗೆ ಪ್ರೀತಿಪಾತ್ರಳು. ತುಲಸಿಯ ಕಾನನವು ಯಾವ ಮನೆಯಲ್ಲಿ ಇರುವುದೋ ಆ ಮನೆಯು ಉತ್ತಮವಾದ ತೀರ್ಥವು. ಅಲ್ಲಿ ಯಮದೂತರು ಬರುವುದಿಲ್ಲ. ಯಾರು

ಸರ್ವಪಾಪಪರಿಹಾರಕವಾದ ಪುಣ್ಯಕರವಾದ ಅಭೀಷ್ಟಪ್ರದವಾದ ತುಲಸೀವನವನ್ನು ನೆಡುವರೋ ಅವರು ಯಮದೇವರನ್ನು ನೋಡಲಾರರು. ನರ್ಮದಾನದಿಯ ದರ್ಶನವೂ, ಗಂಗಾಸ್ನಾನವೂ ತುಲಸೀವನ ಸಂಸರ್ಗವೂ ಈ ಮೂರೂ ಸಮಾನ ವಾದದ್ದು. ತುಲಸಿಯನ್ನು ನೆಡುವುದರಿಂದಲೂ ರಕ್ಷಣೆ ಮಾಡುವುದರಿಂದಲೂ ಬಾಯಿಯ ಮಾತಿನಿಂದಲೂ ಮನಸ್ಸಿನಿಂದಲೂ ದೇಹದಿಂದಲೂ ಉಂಟಾದ ಪಾಪಗಳು ಪರಿಹೃತವಾಗುವುವು. ತುಲಸೀದಳಗಳಿಂದ ಭಗವಂತನನ್ನು ಪೂಜಿಸುವವನು ಗರ್ಭವಾಸವನ್ನು ಹೊಂದಲಾರನು. ಮೋಕ್ಷವನ್ನು ಹೊಂದುವನು. ತುಲಸೀದಲದಲ್ಲಿ ಪುಷ್ಕರಾದಿ ತೀರ್ಥಾಭಿಮಾನಿಗಳೂ ಗಂಗಾದಿ ನದಿ ಅಭಿಮಾನಿಗಳೂ ಭಘವಂತನೇ ಮೊದಲಾದ ದೇವತೆಗಳೂ ವಾಸಮಾಡುವರು. ತುಲಸೀಮೃತ್ತಿಕೆಯನ್ನು ಹಚ್ಚಿಕೊಂಡು ಯಾರು ಪ್ರಾಣಬಿಡುವನೋ ಅವನು ನೂರಾರು ಪಾಪ ಮಾಡಿದವನಾದರೂ ಅವನನ್ನು ಯಮದೇವರು ನೋಡಲಿಕ್ಕೂ ಸಮರ್ಥರಾಗಲಾರರು. ತುಲಸೀದಲವುಳ್ಳವನಾಗಿ ಯಾರು ಪ್ರಾಣಬಿಡುವನೋ ಅವನು ಕ್ರಮದಿಂದ ಪರಮಾತ್ಮನು ಸಾಯುಜ್ಯವನ್ನು ಹೊಂದುವನು. ತುಲಸೀಕಾಷ್ಠಮಿಶ್ರವಾದ ಗಂಧವನ್ನು ಹಚ್ಚಿಕೊಂಡರು. ಆ ದೇಹಕ್ಕೆ ಪಾಪದ ಸಂಬಂಧವೇ ಆಗಲಾರದು. ತುಲಸೀವನದ ನೆರಳಿನಲ್ಲಿ ಪಿತೃಗಳಿಗೆ ಶ್ರಾದ್ಧವನ್ನು ಮಾಡಿದರೆ ಅದು ಅಕ್ಷಯವಾಗುವುದು. ನೆಲ್ಲಿಯ ಮರದ ನೆರಳಿನಲ್ಲಿ ಪಿಂಡಪ್ರದಾನವನ್ನು ಮಾಡಿದರೆ ನರಕದಲ್ಲಿ ಇದ್ದ ಪಿತೃಗಳೂ ಸ್ವರ್ಗವನ್ನು ಹೊಂದುವರು. ತಲೆಯಲ್ಲಿಯೂ ಕೈಯಲ್ಲಿಯೂ ಮುಖದಲ್ಲಿಯೂ ದೇಹದಲ್ಲಿಯೂ ನೆಲ್ಲಿಕಾಯಿಯನ್ನು ಧರಿಸಿದರೆ ಭಗವಂತನ ಸನ್ನಿಧಾನವುಳ್ಳವನಾಗುವನು. ನೆಲ್ಲಿಕಾಯಿಯೂ ತುಲಸಿಯೂ ಗೋಪೀಚಂದನವೂ ಯಾರ ದೇಹದಲ್ಲಿ ನಿತ್ಯವೂ ಇರುವುದೋ ಅವನು ಜೀವನ್ಮುಕ್ತನೇ ಆಗುವನು. ನೆಲ್ಲಿಕಾಯಿಯಿಂದಲೂ ತುಲಸೀ ಪತ್ರದಿಂದಲೂ ಮಿಶ್ರವಾದ ನೀರಿನಲ್ಲಿ ಸ್ನಾನಮಾಡಿದರೆ ಗಂಗಾಸ್ನಾನವನ್ನು ಮಾಡಿದ ಫಲವು ಬರುವುದು. ನೆಲ್ಲಿಯ ಕಾಯಿಗಳಿಂದಲೂ ಪತ್ರಗಳಿಂದಲೂ ಪರಮಾತ್ಮನನ್ನು ಪೂಜಿಸಿದರೆ ಬಂಗಾರದ ಪುಷ್ಪಗಳಿಂದ ಪೂಜಿಸಿದ ಫಲವು ಬರುವುದು. ತುಲಾಮಾಸದಲ್ಲಿ ನಿತ್ಯವೂ ನೆಲ್ಲಿಮರದಲ್ಲಿ ಸಮಸ್ತತೀರ್ಥಗಳೂ ಮುನಿಗಳೂ ದೇವತೆಗಳೂ ಯಜ್ಞಗಳೂ ವಾಸಮಾಡುವರು. ದ್ವಾದಶೀದಿನದಲ್ಲಿ ಕಾರ್ತಿಕಮಾಸ ದಲ್ಲಿ ತುಲಸೀಪತ್ರವನ್ನು ನೆಲ್ಲಿ ಪತ್ರವನ್ನೂ ಯಾರು ಕೊಯ್ಯುವನೋ ಅವನು ನರಕವನ್ನು ಹೊಂದುವನು. ಕಾರ್ತಿಕಮಾಸದಲ್ಲಿ ನೆಲ್ಲಿಯ ಮರದ ಬುಡದಲ್ಲಿ ಯಾರು

ಭೋಜನ ಮಾಡುವರೋ ಅವರಿಗೆ ಒಂದು ವರ್ಷದವರೆಗೆ ಅನ್ನ ಸಂಬಂಧದ ಪಾಪವು ಪರಿಹೃತವಾಗುವುದು. ಕಾರ್ತಿಕ ಮಾಸದಲ್ಲಿ ನೆಲ್ಲಿಯ ಮರದ ಬುಡದಲ್ಲಿ ಯಾರು ಪರಮಾತ್ಮನನ್ನು ಪೂಜಿಸುವನೋ ಅವನು ಸರ್ವಕ್ಷೇತ್ರಗಳಲ್ಲಿ ಪರಮಾತ್ಮನನ್ನು ಪೂಜಿಸಿದ ಪುಣ್ಯವನ್ನು ಹೊಂದುವನು. ನೆಲ್ಲಿಯ ತುಲಸಿಯ ಮಹಿಮೆಯನ್ನ ಸಂಪೂರ್ಣವಾಗಿ ಹೇಳಲಿಕ್ಕೇ ಆಗಲಾರದು. ನೆಲ್ಲೀತುಲಸಿಗಳ ಉತ್ಪತ್ತಿಯ ಕಾರಣವನ್ನು ಯಾರು ಭಕ್ತಿಯಿಂದ ಕೇಳುವರೋ ಅಥವಾ ಹೇಳುವರೋ ಅವರು ಪೂರ್ವಿಕರಿಂದ ಸಹಿತನಾಗಿ ಪಾಪರಹಿತನಾಗಿ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋಗುವನು.



## ಧನೇಶ್ವರೋಪಾಖ್ಯಾನವು [1]

ಪೂರ್ವದಲ್ಲಿ ಅವಂತೀಪುರದಲ್ಲಿ ಧನೇಶ್ವರನೆಂಬ ಬ್ರಾಹ್ಮಣನಿದ್ದನು. ಅವನು ವೇದೋಕ್ತಕರ್ಮಗಳನ್ನೆಲ್ಲವನ್ನೂ ಬಿಟ್ಟಿದ್ದನು. ಪಾಪಿಷ್ಠನಾಗಿದ್ದನು. ದುರ್ಬುದ್ಧಿಯುಳ್ಳವನಾಗಿದ್ದನು. ರಸಪದಾರ್ಥಗಳನ್ನು ಕಂಬಳಿ ಚರ್ಮ ಇತ್ಯಾದಿಗಳನ್ನು ಮಾರಿ ಸುಳ್ಳು ಹೇಳಿ ಜೀವಿಸುತ್ತಿದ್ದನು. ಕಳವು ಮಾಡುತ್ತಿದ್ದನು. ವೇಶ್ಯೆಯಲ್ಲಿ ಆಸಕ್ತನಾಗಿದ್ದನು. ಕಳ್ಳು ಕುಡಿಯುತ್ತಿದ್ದನು. ಚೀಟಾಟವಾಡುತ್ತಿದ್ದನು. ಕ್ರಯವಿಕ್ರಯಕ್ಕಾಗಿ ದೇಶದಿಂದ ದೇಶಕ್ಕೆ ಹೋಗುತ್ತಾ ಒಂದು ಸಮಯದಲ್ಲಿ ಮಾಹಿಷ್ಮತೀನಗರಕ್ಕೆ ಹೋದನು. ಮಹಿಷನಿಂದ ರಚಿತವಾದ ಕಾರಣ ಮಾಹಿಷ್ಮತೀನಗರವೆಂದು ಹೆಸರು. ಅಲ್ಲಿ ಪಾಪಪರಿಹಾರಕವಾದ ನರ್ಮದಾನದಿಯು ಶೋಭಿಸುತ್ತಿತ್ತು. ಕಾರ್ತಿಕಮಾಸ ವ್ರತಕ್ಕಾಗಿ ಅಲ್ಲಿ ನಾನಾ ಗ್ರಾಮದಿಂದ ಬಂದಿರುವ ಜನರನ್ನು ನೋಡಿ ಅಲ್ಲಿಯೇ ವಿಕ್ರಯವನ್ನು ಮಾಡುತ್ತಾ ಒಂದು ತಿಂಗಳು ವಾಸಮಾಡಿದನು. ಅವನು ವ್ಯಾಪಾರಕ್ಕಾಗಿ ನಿತ್ಯವೂ ನರ್ಮದಾತೀರದಲ್ಲಿ ಸಂಚರಿಸುತ್ತಾ ಅಲ್ಲಿ ಸ್ನಾನಮಾಡುತ್ತಿದ್ದ. ದೇವರ ಪೂಜೆಯನ್ನು ಮಾಡುತ್ತಿದ್ದ. ಯಜ್ಞವನ್ನು ಮಾಡುತ್ತಿದ್ದ. ಪುರಾಣವನ್ನು ಹೇಳುತ್ತಿದ್ದ. ಪುರಾಣವನ್ನು ಕೇಳುತ್ತಿದ್ದ. ನರ್ತನ ಮಾಡುತ್ತಿದ್ದ. ಗಾಯನ ಮಾಡುತ್ತಿದ್ದ. ವಾದ್ಯಬಾರಿಸುತ್ತಾ ಪರಮಾತ್ಮನ ಸ್ತೋತ್ರ ಮಾಡುತ್ತಿದ್ದ ಪರಮಾತ್ಮನ ಮುದ್ರೆಗಳನ್ನು ಧರಿಸಿದ್ದ ತುಲಸೀಮಾಲೆಯನ್ನು ಧರಿಸಿದ್ದ ಬ್ರಾಹ್ಮಣರನ್ನು ಕುತೂಹಲದಿಂದ ನೋಡಿದನು. ಅಲ್ಲಿ ನಿತ್ಯವೂ ಸಂಚರಿಸುತ್ತಾ ವೈಷ್ಣವನ್ನು ನೋಡುತ್ತಲೂ ಒಂದು ತಿಂಗಳನ್ನು ಕಳೆದನು. ಕಾರ್ತಿಕವ್ರತದ ಉದ್ಯಾಪನೆಗಾಗಿ ಭಕ್ತರು ಮಾಡುತ್ತಿದ್ದ

ಜಾಗರಣವನ್ನು ಹುಣ್ಣಿಮೆದಿನದಲ್ಲಿ ಮಾಡಿದ ಬ್ರಾಹ್ಮಣರ ಗೋವುಗಳ ಪೂಜೆ ಇತ್ಯಾದಿಗಳನ್ನು ವ್ರತಮಾಡಿದವರು ಕೊಡುತ್ತಿದ್ದ ದಕ್ಷಿಣೆಭೋಜನ ಇತ್ಯಾದಿಗಳನ್ನು ನೋಡಿದನು. ಆಮೇಲೆ ರಾತ್ರಿಯಾಗಲು ರುದ್ರದೇವರ ಪ್ರೀತಿಗಾಗಿ ಮಾಡುತ್ತಿದ್ದ ದೀಪೋತ್ಸವವನ್ನು ನೋಡಿದನು. ಆ ದಿವಸದಲ್ಲಿಯೇ ರುದ್ರದೇವರು ತ್ರಿಪುರಾಸುರರನ್ನು ಸಂಹರಿಸಿದ್ದರು. ಆದುದರಿಂದ ಆ ದಿವಸದಲ್ಲಿ ಭಕ್ತರು ಮಹೋತ್ಸವವನ್ನು ಮಾಡುವರು. ಅಲ್ಲಿ ನಡೆಯುತ್ತಿದ್ದ ನರ್ತನಾದಿಗಳನ್ನು ನೋಡುತ್ತಾ ಧನೇಶ್ವರನು ಅಲ್ಲಿ ಸಂಚರಿಸುತ್ತಿದ್ದನು. ಅಷ್ಟರಲ್ಲಿಯೇ ಒಂದು ಕೃಷ್ಣಸರ್ಪವು ಅವನನ್ನು ಕಚ್ಚಿತು. ವಿಷವೇರಿ ಅವನು ಅಲ್ಲಿಯೇ ಬಿದ್ದುಬಿಟ್ಟನು. ಜನರು ಬಿದ್ದ ಅವನನ್ನು ನೋಡಿ ಸುತ್ತಲೂ ದಯೆಯಿಂದ ಬಂದರು. ತುಲಸೀಮಿಶ್ರಿತವಾದ ನೀರನ್ನು ಅವನ ಬಾಯಿಗೆ ಹಾಕಿದರು. ತರುವಾಯ ಅವನು ಮೃತನಾಗಲು ಯಮದೂತರು ಅವನನ್ನು ಕಟ್ಟಿ ಚಾಟುವಾರಿಯಿಂದ ಬಡಿಯುತ್ತಾ ಎಳೆದುಕೊಂಡು ರೋಷದಿಂದ ಸಂಯಮಿನಿಗೆ ಹೋದರು. ಚಿತ್ರಗುಪ್ತನು ಅವನನ್ನು ನೋಡಿ ಬೆದರಿಸಿ ಯಮದೇವರೊಡನೆ ಅವನು ಬಾಲ್ಯದಿಂದ ದುಷ್ಕರ್ಮವನ್ನು ಮಾಡಿದವನೆಂದು ತಿಳಿಸಿದರು.

'ಇವನು ಬಾಲ್ಯದಿಂದ ಒಂದು ಪುಣ್ಯವನ್ನು ಮಾಡಿಲ್ಲ. ಇವನು ಮಾಡಿದ ಪಾಪವನ್ನು ಹೇಳಲಿಕ್ಕೇ ಸಾಧ್ಯವಾಗಲಾರದು. ಇವನು ದುಷ್ಟನು. ಪಾಪದ ಮೂರ್ತಿಯು. ಆದುದರಿಂದ ಕಲ್ಪದವರೆಗೆ ನರಕವನ್ನು ಅನುಭವಿಸಲಿ' ಎಂದು ಚಿತ್ರಗುಪ್ತನು ಹೇಳಿದನು.

ಅದನ್ನು ಕೇಳಿ ಯಮದೇವರು ಪ್ರಲಯಕಾಲದ ಅಗ್ನಿಯಂತೆ ಭಯಂಕರವಾದ ತನ್ನ ರೂಪವನ್ನು ತೋರಿಸಿ 'ಪ್ರೇತಪನೇ! ಈ ಪಾಪಿಯನ್ನು ಮುದ್ಗರದಿಂದ ಬಡಿಯುತ್ತಾ ಎಳೆದುಕೊಂಡು ಹೋಗಿ ಬೇಗನೇ ಕುಂಭೀಪಾಕದಲ್ಲಿ ಹಾಕು' ಎಂದು ಹೇಳಿದರು.

ಪ್ರೇತಪನೆಂಬ ಯಮದೂತನು ಯಮದೇವರ ಆಜ್ಞೆಯಂತೆ ಅವನ ತಲೆಗೆ ಮುದ್ಗರದಿಂದ ಒಡೆದು ಸೀಳಿಹಾಕಿ ಎಳೆದುಕೊಂಡು ಹೋಗಿ ಎಣ್ಣೆಯು ಕುದುಯುತ್ತಿದ್ದ ಕುಂಭೀಪಾಕದಲ್ಲಿ ಹಾಕಿದನು. ಆಗ ಪೂರ್ವದಲ್ಲಿ ಪ್ರಹ್ಲಾದನನ್ನು ಹಾಕುವಾಗ ಆದಂತೆ ಕುದಿಯುತ್ತಿದ್ದ ಎಣ್ಣೆಯು ತಣ್ಣಗೆ ಆಯಿತು. ಆ ಆಶ್ಚರ್ಯವನ್ನು ನೋಡಿ ಪ್ರೇತಪನು ಬೇಗನೇ ಓಡಿಬಂದು ಯಮದೇವರೊಡನೆ ತಿಳಿಸಿದನು. ಅದನ್ನು ಕೇಳಿ 'ಆಹಾ! ಏನಿದು' ಎಂದು ಹೇಳಿ ಅವನನ್ನು ತರಿಸಿ ವಿಚಾರಿಸಿದರು. ಅಷ್ಟರಲ್ಲಿ ಅಲ್ಲಿಗೆ ಬೇಗನೇ ನಗುತ್ತಾ ನಾರದರು ಬಂದರು. ಯಮದೇವರು ಚೆನ್ನಾಗಿ

ಪೂಜಿಸಲು ಧನೇಶ್ವರನನ್ನು ನೋಡಿ 'ಇವನು ನರಕವನ್ನು ಅನುಭವಿಸಲಿಕ್ಕೆ ಅರ್ಹನಲ್ಲ. ಏಕೆಂದರೆ ಇವನಿಗೆ ನರಕವನ್ನು ಪರಿಹರಿಸುವ ಸತ್ಕರ್ಮವು ಉಂಟಾಗಿದೆ. ಯಾರು ಪುಣ್ಯಕರ್ಮಗಳನ್ನು ಮಾಡುವವರನ್ನು ನೋಡುವರೋ ಅವರ ಸ್ಪರ್ಶ ಮಾಡುವರೋ ಅವರೊಡನೆ ಮಾತಾಡುವರೋ ಅವರು ಪುಣ್ಯದ ಆರನೇ ಒಂದು ಅಂಶವನ್ನು ಹೊಂದುವರು. ಇವನು ಅಸಂಖ್ಯಾತರಾದ ಕಾರ್ತಿಕವ್ರತವನ್ನು ಮಾಡುವ ವಿಷ್ಣುಭಕ್ತರ ಸಂಸರ್ಗ ಮಾಡಿರುವನು. ಆದುದರಿಂದ ಅವರ ಪುಣ್ಯದ ಭಾಗವನ್ನು ಹೊಂದಿರುವನು. ಅವರ ಸೇವೆಯನ್ನು ಮಾಡಿದನು. ಆದುದರಿಂದ ಸಂಪೂರ್ಣ ವ್ರತಪುಣ್ಯವನ್ನು ಹೊಂದಿರುವನು. ಕಾರ್ತಿಕವ್ರತವನ್ನು ಮಾಡಿದವರ ಮಹಾಪಾಪಗಳನ್ನು ಪರಮಾತ್ಮನು ಪರಿಹರಿಸುವನು. ಕೊನೆಯ ಕಾಲದಲ್ಲಿ ತುಲಸೀಮಿಶ್ರವಾದ ನರ್ಮದಾ ನದಿಯ ಜಲವನ್ನು ಇವನ ಬಾಯಿಗೆ ಹಾಕಿರುವರು. ವಿಷ್ಣುನಾಮವನ್ನು ಕೇಳಿಸಿರುವರು. ಇವನು ವೈಷ್ಣವರ ಅನುಗ್ರಹಕ್ಕೆ ಪಾತ್ರನಾಗಿರುವನು. ಆದುದರಿಂದ ಇವನು ನರಕಕ್ಕೆ ಅರ್ಹನಲ್ಲ. ಪಾಪಗಳಿಂದ ನರಕುವುಂಟಾಗುವಂತೆ ಪುಣ್ಯಗಳಿಂದ ಸ್ವರ್ಗವುಂಟಾಗುವುದು. ಆದುದರಿಂದ ಇಚ್ಛೆಯಿಲ್ಲದೆಯೇ ಪುಣ್ಯಮಾಡಿದ ಇವನು ಯಕ್ಷಯೋನಿಯನ್ನು ಹೊಂದುವವನಾಗಿ ನರಕಗಳನ್ನು ನೋಡಿಯೇ ಪಾಪಭೋಗವನ್ನು ಅನುಭವಿಸಲಿ' ಎಂದು ಹೇಳಿ ಹೊರಟುಹೋದನು. ಯಮದೇವರು ನಾರದರ ಮಾತಿನಿಂದ ಅವನ ಪುಣ್ಯವನ್ನು ತಿಳಿದು ಅವನಿಗೆ ನರಕಗಳನ್ನು ತೋರಿಸುವುದಕ್ಕಾಗಿ ದೂತನೊಡನೆ ಕಳುಹಿಸಿದನು.

ತರುವಾಯ ಪ್ರೇತಪನು ಧನೇಶ್ವರನನ್ನು ಕರಕೊಂಡು ಹೋಗಿ ನರಕಗಳನ್ನು ತೋರಿಸಿದನು. 'ಧನೇಶ್ವರನೇ! ಈ ಭಯಂಕರಗಳಾದ ನರಕಗಳನ್ನು ನೋಡು. ಪಾಪಮಾಡಿದವರು ಇವುಗಳಲ್ಲಿ ನಿತ್ಯವೂ ದುಃಖವನ್ನು ಅನುಭವಿಸುವರು. ಇದು ತಪ್ತವಾಲುಕ ಎಂಬ ನರಕವು. ಇದರಲ್ಲಿ ಪಾಪಿಗಳು ಸುಡಲ್ಪಟ್ಟ ದೇಹವುಳ್ಳವರಾಗಿ ಅಳುತ್ತಾ ಇರುವರು. ವೈಶ್ವದೇವವು ಮುಗಿದಮೇಲೆ ಹಸಿವೆಯಿಂದ ಬಂದಿರುವ ಅತಿಥಿಗಳನ್ನು ಯಾರು ಪೂಜಿಸುವುದಿಲ್ಲವೋ ಅವರು ತಮ್ಮ ಪಾಪದಿಂದ ದುಃಖಪಡುವರು. ಗುರುಗಳನ್ನೂ ಅಗ್ನಿಯನ್ನೂ ಬ್ರಾಹ್ಮಣರನ್ನೂ ಗೋವುಗಳನ್ನೂ ದೇವತೆಗಳನ್ನೂ ರಾಜರನ್ನೂ ಕಾಲಿನಿಂದ ಒದೆಯುತ್ತಾರೋ ಅವರು ಸುಟ್ಟುಹೋದ ಪಾಪಗಳುಳ್ಳವರಾಗುವರು. ಆರು ಪ್ರಭೇದವುಳ್ಳ ಈ ತಪ್ತವಾಲುಕ ಎಂಬ ನರಕವು ನಾನಾ ಪಾಪಗಳಿಂದ ಲಭಿಸುವುದು. ಹಾಗೆಯೇ ಇದ್ದು ಅಂಥ ತಾಮಿಸ್ರವೆಂಬ ಎರಡನೇ ನರಕವು. ನೋಡು ಇಲ್ಲಿ ಪಾಪಮಾಡಿದವರ ದೇಹವನ್ನು ಸೂಜಿಯಿಂದ

ಕುಕ್ಕುವರು. ಘೋರಮುಖವುಳ್ಳ ಕ್ರಿಮಿಗಳು ಕಚ್ಚುವುವು. ಮೂರನೆಯದ್ದು ಕ್ರಕಚ ವೆಂಬ ನರಕವು. ಇಲ್ಲಿ ಪಾಪಿಗಳನ್ನು ರಂಪದಿಂದ ಕೊಯ್ಯುವರು. ಅಸಿಪತ್ರವನಾದಿ ಗಳಿಂದ ಇದು ಆರು ಪ್ರಕಾರವುಳ್ಳದ್ದಾಗಿದೆ. ಯಾರು ಪತ್ನೀಪುತ್ರಾದಿಗಳಿಂದ ವಿಯೋಗವನ್ನು ಮಾಡಿಸುತ್ತಾರೋ ಇತರ ಇಷ್ಟ ಜನರ ವಿಯೋಗವನ್ನು ಮಾಡಿಸು ತ್ತಾರೋ ಅವರು ಅಸಿಪತ್ರವನಗಳಿಂದ ಛೇದಿಸಲ್ಪಟ್ಟವ ರಾಗಿ ಅಂಜಿಕೆಯಿಂದ ಓಡುವರು. ಅಳುತ್ತಿರುವ ಇವರನ್ನು ನೋಡು. ಇದು ಅರ್ಗಲ ಎಂಬ ಹೆಸರುಳ್ಳ ನಾಲ್ಕನೇಯ ನರಕವು. ನೋಡಿ ಇಲ್ಲಿ ಯಮದೂತರಿಂದ ಪಾಪಿಗಳು ನಾನಾಪಾಶಗಳಿಂದ ಕಟ್ಟಲ್ಪಟ್ಟವರಾಗಿ ಮುದ್ಗರಾದಿಗಳಿಂದ ಬಡಿಯಲ್ಪಡುವವರಾಗಿ ಅಳುತ್ತಾ ಇರುವರು. ಬ್ರಾಹ್ಮಣರೇ ಮೊದಲಾದ ಸಜ್ಜನರನ್ನು ಕುತ್ತಿಗೆಯನ್ನು ಹಿಡಿದು ಕೊಲ್ಲುವರೋ ಅವರು ಈ ನರಕದಲ್ಲಿ ಶ್ರಮಪಡುವರು. ಇದೂ ಆರು ಪ್ರಬೇಧವುಳ್ಳದಾಗಿರುವುದು. ಇದು ಕೂಟಶಾಲ್ಮಲಿ ಎಂದು ಹೆಸರುಳ್ಳದ್ದು ಐದನೇ ನರಕವು. ಇಲ್ಲಿ ಬೆಂಕಿಯ ಕೆಂಡದಂತೆ ಶಾಲ್ಮಲೀ ಮೊದಲಾದ ಮರಗಳು ಇರುವುವು. ಇದೂ ಆರು ಪ್ರಭೇದವುಳ್ಳದಾಗಿರುವುದು. ಇಲ್ಲಿ ಪರಸ್ತ್ರೀಯರನ್ನು ಪರದ್ರವ್ಯವನ್ನು ಅಪಹರಿಸಿದವರೂ ಪರದ್ರೋಹವನ್ನು ಮಾಡುವವರೂ ದುಃಖವನ್ನು ಅನುಭವಿಸು ವರು. ರಕ್ತಪೂಯ ಎಂಬ ಹೆಸರುಳ್ಳ ಅದ್ಭುತವಾದ ಈ ಆರನೇ ನರಕವನ್ನು ನೋಡು. ಇಲ್ಲಿ ಪಾಪಿಗಳು ತಲೆಕೆಳಗಾಗಿ ದುಃಖವನ್ನು ಅನುಭವಿಸುತ್ತಾ ಇರುತ್ತಾರೆ. ನಿಷಿದ್ಧ ಪದಾರ್ಥವನ್ನು ತಿನ್ನುವವರೂ ಇನ್ನೊಬ್ಬರನ್ನು ನಿಂದಿಸುವವರೂ ಚಾಡಿ ಹೇಳುವವರೂ ಈ ನರಕದಲ್ಲಿ ಮುಳುಗಿದವರಾಗಿ ಬಡಿಯಲ್ಪಡುವವರಾಗಿ ಭಯಂಕರವಾಗಿ ಕೂಗುತ್ತಾ ಇರುವರು. ಈ ನರಕವೂ ಆರು ಪ್ರಕಾರವಾಗಿರುವುದು. ಕುಂಭೀಪಾಕವು ಏಳನೇ ನರಕವು. ಘೋರವಾಗಿರುವುದು. ತೈಲಾದಿಗಳಿಂದ ಆರು ಪ್ರಕಾರವಾಗಿರುವುದು. ಇದರಲ್ಲಿ ಮಹಾಪಾತಕಗಳು ಯಮಕಿಂಕರರಿಂದ ಕುದಿಸಲ್ಪಡುತ್ತಾರೆ. ಅನೇಕ ಸಾವಿರ ವರ್ಷ ಮುಳುಗುತ್ತಾ ಏಳುತ್ತಾ ಇರುವರು'. ಇತ್ಯಾದಿ ರೀತಿಯಿಂದ ಹೇಳುತ್ತಾ 'ನಿನಗೆ ಕಾರ್ತಿಕವ್ರತವನ್ನು ಮಾಡಿದವರ ಸಹವಾಸವುಂಟಾದ ಕಾರಣ ಈ ನರಕಗಳು ತಪ್ಪಿದವು' ಎಂದು ಹೇಳಿ ಧನೇಶ್ವರನನ್ನು ಯಕ್ಷಲೋಕಕ್ಕೆ ಕರೆದುಕೊಂಡು ಹೋದನು. ಅಲ್ಲಿ ಅವನು ಯಕ್ಷನಾದನು. ಅವನು ಕುಬೇರನ ಭೃತ್ಯನಾಗಿ ಧನಯಕ್ಷನೆಂದು ಪ್ರಸಿದ್ಧನಾದನು.



# ಕಾಂಚನಮಾಲಿನಿಯ ಕಥೆ [1]

ರೂಪವತಿಯಾದ ಕಾಂಚನಮಾಲಿನಿಯೆಂಬ ಅಪ್ಸರಸ್ತ್ರೀಯು ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನಮಾಡಿ ಕೈಲಾಸಕ್ಕೆ ಹೋಗುತ್ತಿದ್ದಳು. ಆಗ ಕೈಲಾಸದ ಒಂದುಪ್ರದೇಶದಲ್ಲಿ ಘೋರರೂಪವುಳ್ಳ ಒಬ್ಬ ವೃದ್ಧನಾದ ರಾಕ್ಷಸನಿದ್ದನು. ಅವನು ಆಕಾಶಮಾಗದಲ್ಲಿ ಹೋಗುತ್ತಿದ್ದ ಅವಳನ್ನು ನೋಡಿದನು. ಅಷ್ಟರಲ್ಲಿ ಮೇಲಿನಿಂದ ಅವರ ಸೀರೆಯಿಂದ ಕೆಲವು ನೀರಿನ ಬಿಂದುಗಳು ರಾಕ್ಷಸನ ಮೇಲೆ ಬಿದ್ದವು. ಆಗ ರಾಕ್ಷಸನ ಕ್ರೂರಸ್ವಭಾವವು ಹೊರಟುಹೋಗಿ ಅವನು ಶಾಂತನಾದನು. ಸುಂದರಿ ಯಾದ ಆ ಕಾಂಚನಮಾಲಿನಿಯನ್ನು ನೋಡಿ ಆ ರಾಕ್ಷಸನು 'ಸುಂದರಿ! ನೀನು ಯಾರು? ಎಲ್ಲಿಂದ ಬರುತ್ತಿರುವಿ? ನಿನ್ನ ಸೀರೆಯೇಕೆ ಒದ್ದೆಯಾಗಿರುವುದು? ತಲೆಕೂದಲು ಏಕೆ ಒದ್ದೆಯಾಗಿರುವುದು? ಎಲ್ಲಿಗೆ ಹೋಗುತ್ತಿರುವಿ? ಆಕಾಶಮಾರ್ಗ ದಲ್ಲಿ ಹೇಗೆ ಸಂಚರಿಸುವಿ? ಯಾವ ಪುಣ್ಯಪ್ರಭಾವದಿಂದ ನಿನ್ನ ದೇಹವು ಇಷ್ಟು ತೇಜೋಮಯವಾಗಿರುವುದು? ಇಷ್ಟು ರೂಪವುಳ್ಳದಾಗಿರುವುದು? ನಿನ್ನ ಸೀರೆಯಿಂದ ನೀರಿನ ಬಿಂದುಗಳು ನನ್ನ ತಲೆಗೆ ಬಿದ್ದ ಮಾತ್ರದಿಂದಲೇ ಸರ್ವದಾ ಕ್ರೂರವಾಗಿದ್ದ ನನ್ನ ಮನಸ್ಸು ಶಾಂತವಾಗಿರುವುದು. ಆ ನೀರಿಗೆ ಇಷ್ಟು ಮಹಿಮೆಯೇನು?' ಇತ್ಯಾದಿ ರೀತಿಯಿಂದ ಪ್ರಶ್ನೆ ಮಾಡಿದನು.

ಅದಕ್ಕೆ ಆ ಅಪ್ಸರಸ್ತ್ರೀಯು 'ನಾನೊಬ್ಬ ಅಪ್ಸರಸ್ತ್ರೀಯು. ನನ್ನ ಹೆಸರು ಕಾಂಚನಮಾಲಿನಿಯೆಂದು. ನಾನು ಪ್ರಯಾಗದಲ್ಲಿ ಸ್ನಾನಮಾಡಿ ಬರುತ್ತಿರುವೆನು. ಆದುದರಿಂದ ತಲೆಯೂ ಸೀರೆಯೂ ಒದ್ದೆಯಾಗಿದೆ. ನಾನು ಈಗ ರುದ್ರದೇವರು ಇರುವ ಕೈಲಾಸಕ್ಕೆ ಹೋಗುತ್ತಿದ್ದೇನೆ. ತ್ರಿವೇಣಿಯ ನೀರು ನನ್ನ ಸೀರೆಯಿಂದ ನಿನ್ನ ಮೇಲೆ ಬಿದ್ದ ಕಾರಣ ನಿನ್ನ ಮನಸ್ಸು ಶಾಂತವಾಯಿತು. ನಾನು ಯಾವ ಪುಣ್ಯಪ್ರಭಾವದಿಂದ ಸುಮೇಧಃ ಎಂದು ಹೆಸರುಳ್ಳ ಗಂಧರ್ವನಿಗೆ ದಿವ್ಯರೂಪವುಳ್ಳ ಕನ್ಯೆಯಾಗಿ ಹುಟ್ಟಿರುವೆನೋ ಅದನ್ನು ನಿನಗೆ ಹೇಳುವೆನು. ನಾನು ಪೂರ್ವದಲ್ಲಿ ಕಲಿಂಗರಾಜನ ವೇಶ್ಯೆಯಾಗಿದ್ದೆನು. ರೂಪವತಿಯಾಗಿದ್ದೆನು. ಸೌಭಾಗ್ಯಮದದಿಂದ ಗರ್ವಿತಳಾಗಿದ್ದನು. ಆ ಊರಲ್ಲಿ ಇದ್ದ ಎಲ್ಲಾ ಸ್ತ್ರೀಯರಿಂದ ಶ್ರೇಷ್ಠಳಾಗಿದ್ದೆನು. ಆಗ ನಾನು ಇಚ್ಛಾನುಸಾರವಗಿ ಬೇಕಾದ ಭೋಗಗಳನ್ನು ಅನುಭವಿಸಿದೆನು. ನನ್ನ ಯೌವನ ಸಂಪತ್ತಿನಿಂದ ಊರಿನ ಜನರೆಲ್ಲರೂ ಮೋಹಿತರಾದರು. ಬಹು

1. ಪ.ಪು. ಇದನ್ನು ಸದಾಚಾರ ತರಂಗದಲ್ಲಿಯೂ ಓದುವುದು.

ಆಭರಣಗಳನ್ನು ಹಣವನ್ನು ಸಂಪಾದಿಸಿದೆನು. ಯುವಕರೆಲ್ಲರೂ ಕಾಮಪೀಡಿತರಾಗಿ ನನ್ನ ಪಾದಗಳಿಗೆ ಬೀಳುತ್ತಿದ್ದರು. ನಾನು ಅವರ ಸರ್ವಸ್ವವನ್ನೂ ಅಪಹರಿಸಿ ವಂಚಿಸಿದೆನು. ಅವರು ಪರಸ್ಪರ ದುಷ್ಟಸ್ವಭಾವದಿಂದ ಜಗಳಾಡಿ ಸತ್ತರು. ಈರೀತಿಯಾಗಿ ನನಗೆ ಆ ಊರಲ್ಲಿ ಕಾಲವು ಹೋಯಿತು. ಆಮೇಲೆ ಮುದುಕಿಯಾದೆನು. ಆಗ ನನ್ನ ಮನಸ್ಸಿನಲ್ಲಿ ಪಶ್ಚಾತ್ತಾಪವುಂಟಾಯಿತು. ನಾನು ಸ್ವಲ್ಪವೂ ಪುಣ್ಯವನ್ನು ಮಾಡಲಿಲ್ಲವಲ್ಲಾ ಎಂದು ಬಹಳವಾಗಿ ವಿಲಾಪನ್ನು ಮಾಡಿ ಆ ರಾಜನ ಪುರೋಹಿತರಾದ ಬ್ರಹ್ಮಜ್ಞಾನಿಯಾದ ಬ್ರಾಹ್ಮಣರನ್ನು ಮರೆಹೊಂದಿದೆನು. ನನ್ನನ್ನು ಉದ್ಧರಿಸಬೇಕೆಂದು ಬೇಡಿಕೊಂಡೆನು. ಆಗ ಅವರು ನನ್ನಲ್ಲಿ ಕರುಣೆಯನ್ನು ತೋರಿಸಿದರು. ಅವರು 'ಸುಂದರಿ! ನೀನು ಮಾಡಿದ ನಿಷಿದ್ಧ ವ್ಯಾಪಾರಗಳೆಲ್ಲವನ್ನು ನಾನು ತಿಳಿದಿರುವೆನು. ಆಗಲಿ ನನ್ನ ಮಾತಿನಂತೆ ನೀನು ಮಾಡು. ನೀನು ಬೇಗನೇ ಪ್ರಯಾಗಕ್ಕೆ ಹೋಗು. ಬೇರೊಂದು ಯಾವುದೂ ನಿನಗೆ ಪಾಪಪರಿಹಾರಕವಾದದ್ದು ಕಾಣಿಸುವುದಿಲ್ಲ. ಪ್ರಯಾಗದಲ್ಲಿ ಸ್ನಾನ ಮಾಡಿದರೆ ಶುದ್ಧಳಾಗಿ ಸ್ವರ್ಗಕ್ಕೆ ಹೋಗುವಿ. ಪ್ರಯಾಗದಲ್ಲಿ ಸ್ನಾನವನ್ನು ಮಾಡುವ ಮಾತ್ರದಿಂದಲೇ ಜನರಿಗೆ ಸ್ವರ್ಗವು ಉಂಟಾಗುವುದು. ಇತರ ದೇಶದಲ್ಲಿ ಮಾಡಿದ ಪಾಪವೆಲ್ಲವೂ ಪ್ರಯಾಗದಲ್ಲಿ ಸ್ನಾನ ಮಾಡಿದರೆ ನಾಶವನ್ನು ಹೊಂದುವುದು. ಅದಕ್ಕೊಂದು ಇತಿಹಾಸವನ್ನು ಹೇಳುವೆನು.

ಪೂರ್ವದಲ್ಲಿ ಇಂದ್ರದೇವರು ಗೌತಮರ ಪತ್ನಿಯಾದ ಅಹಲ್ಯೆಯನ್ನು ನೋಡಿ ಕಾಮವುಳ್ಳವರಾಗಿ ಅವಳ ಸಂಗವನ್ನು ಮಾಡಿದರು. ಆಗ ಗೌತಮರು ಶಾಪದಿಂದ ಇಂದ್ರದೇವರ ಮೈಯಲ್ಲಿ ಎಲ್ಲಾ ಸ್ತ್ರೀಯೋನಿಯುಂಟಾಯಿತು. ಇದರಿಂದ ಇಂದ್ರದೇವರು ಲಜ್ಜೆಯುಳ್ಳವರಾಗಿ ತಾನು ಮಾಡಿದ ಪಾಪವನ್ನು ನಿಂದಿಸುತ್ತಾ ಮುಖವನ್ನು ತಗ್ಗಿಸಿಕೊಂಡು ಹೋಗಿ ಮೇರುಪರ್ವತದಲ್ಲಿ ನೂರು ಯೋಜನ ವಿಸ್ತಾರವಾದ ನೀರಿನಿಂದ ತುಂಬಿದ ಸರೋವರದಲ್ಲಿ ಬಂಗಾರದ ಕಮಲದ ಮೊಗ್ಗೆಯೊಳಗೆ ಪ್ರವೇಶಿಸಿ ತನ್ನನ್ನು ಮನ್ಮಥನನ್ನೂ ನಿಂದಿಸುತ್ತಾ ಇದ್ದರು. ಆಗ ಇಂದ್ರದೇವರು ಇಲ್ಲದೆ ಸ್ವರ್ಗಲೋಕವು ಶೋಭಿಸಲಿಲ್ಲ. ಆಗ ದೇವತೆಗಳೂ ಗಂಧರ್ವರೂ ಲೋಕಪಾಲಕರೂ ಕಿಂನರರೂ ಶಚೀದೇವಿಯಿಂದ ಸಹಿತರಾಗಿ ಬೃಹಸ್ಪತ್ಯಾಚಾರ್ಯರ ಬಳಿಗೆ ಬಂದು 'ಇಂದ್ರದೇವರಿಲ್ಲದೆ ಸ್ವರ್ಗಕ್ಕೆ ಶೋಭೆಯಿಲ್ಲ. ಇಂದ್ರದೇವರು ಎಲ್ಲಿ ಇರುವರೆಂದು ತಿಳಿಯಲಿಲ್ಲ. ಇಂದ್ರದೇವರು ಬರುವಂತೆ ಉಪಾಯವನ್ನು ಮಾಡಬೇಕು' ಎಂದು ಹೇಳಿಕೊಂಡರು. ಆಗ ಬೃಹಸ್ಪತ್ಯಾಚಾರ್ಯರು 'ಇಂದ್ರನು ತನ್ನ ಅಪರಾಧದಿಂದ ನಾಚಿಕೊಂಡು ಇರುವನು.

ವಿಚಾರಮಾಡದೆ ಮಾಡಿದ ಕಾರ್ಯದ ಫಲವನ್ನು ಅನುಭವಿಸುತ್ತಿರುವನು. ಆ ಇಂದ್ರನಿದ್ದಲ್ಲಿಗೆ ಈಗ ನಾವೆಲ್ಲರೂ ಹೋಗುವ' ಎಂದು ಹೇಳಿ ಎಲ್ಲರೂ ಆ ಸರೋವರಕ್ಕೆ ಹೋದರು. ಅಲ್ಲಿ ಇಂದ್ರದೇವರನ್ನು ಸ್ತೋತ್ರ ಮಾಡಿದರು. ಇಂದ್ರದೇವರು ತಾವರೆಹೂವಿನಿಂದ ಹೊರಗೆ ಬಂದು ಲಜ್ಜೆಯುಳ್ಳವರಾಗಿ ದೈನ್ಯವುಳ್ಳವರಾಗಿ ಬೃಹಸ್ಪತ್ಯಾಚಾರ್ಯರಿಗೆ ನಮಸ್ಕರಿಸಿದರು. ನನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳಬೇಕೆಂದರು.

'ಪ್ರಯಾಗದಲ್ಲಿ ಸ್ನಾನಮಾಡುವ ಮಾತ್ರದಿಂದ ನಿನ್ನ ದೋಷವು ಪರಿಹೃತ ವಾಗುವುದು. ಅಲ್ಲಿಗೆ ನಾವು ಹೋಗೋಣ' ಎಂದು ಹೇಳಿ ಅಲ್ಲಿಗೆ ಹೋದರು. ಇಂದ್ರದೇವರು ಪ್ರಯಾಗದಲ್ಲಿ ಸ್ನಾನಮಾಡಿ ಸರ್ವಪಾಪಗಳಿಂದ ರಹಿತರಾದರು. ಆಗ ಬೃಹಸ್ಪತ್ಯಾಚಾರ್ಯರು 'ದೇವೇಂದ್ರ! ನಿನ್ನ ಪಾಪವು ಪರಿಹೃತವಾಯಿತು. ನಿನ್ನ ಸಹಸ್ರಯೋನಿಗಳು ಸಹಸ್ರ ಕಣ್ಣುಗಳಾಗಲಿ' ಎಂದರು. ತರುವಾಯ ಇಂದ್ರದೇವರು ಸಾವಿರ ಕಣ್ಣುಗಳಿಂದ ಶೋಭಿಸಿದರು. ದೇವತೆಗಳೇ ಮೊದಲಾದವರಿಂದ ಸ್ತೋತ್ರ ಮಾಡಲ್ಪಟ್ಟವರಾಗಿ ಅಮರಾವತಿಗೆ ಹೋದರು.

ಆದುದರಿಂದ ನೀನೂ ಕೂಡ ಪಾಪಪರಿಹಾರಕ್ಕಾಗಿ ಸ್ವರ್ಗ ಪ್ರಾಪ್ತಿಗಾಗಿ ಪ್ರಯಾಗಕ್ಕೋ ಹೋಗು' ಎಂದು ಹೇಳಿದರು.

ಈರೀತಿಯಾಗಿ ಪುರೋಹಿತರು ಹೇಳಿದ ಮಾತನ್ನು ಕೇಳಿ ನಾನು ಸಂಭ್ರಮ ದಿಂದ ಅವರ ಪಾದಗಳಿಗೆ ನಮಸ್ಕರಿಸಿ ಬಂಧು ಜನರನ್ನೂ ದಾಸೀದಾಸರನ್ನು ಹಣವನ್ನು ಮನೆಯನ್ನು ಎಲ್ಲವನ್ನೂ ಬಿಟ್ಟು ಪಶ್ಚಾತ್ತಾಪಡುತ್ತಾ ಪ್ರಯಾಗಕ್ಕೆ ಹೋದೆನು. ಅಲ್ಲಿ ತ್ರಿವೇಣಿಯಲ್ಲಿ ಮೂರುದಿವಸಗಳಲ್ಲಿ ಸ್ನಾನ ಮಾಡಿದ ಮಾತ್ರದಿಂದಲೇ ನನ್ನ ಪಾಪಗಳೆಲ್ಲವೂ ಹೋದವು. ಆಮೇಲೆ ಇಪ್ಪತ್ತೇಳು ದಿವಸಗಳಲ್ಲಿ ಸ್ನಾನ ಮಾಡಿ ಪ್ರಭಾವದಿಂದ ನನಗೆ ದೇವತ್ವವುಂಟಾಯಿತು. ನಾನು ಪಾರ್ವತೀದೇವಿಯರಿಗೆ ಪ್ರಿಯಸಖಿಯಾಗಿ ಕೈಲಾಸದಲ್ಲಿ ಸಂತೋಷದಿಂದ ಇರುತ್ತಿರುವನು. ಪ್ರಯಾಗದ ಮಹಿಮೆಯಿಂದ ಪೂರ್ವಜನ್ಮ ಸ್ಮರಣೆಯುಳ್ಳವರಾಗಿರುವೆನು. ಪ್ರಯಾಗ ಮಹಿಮೆ ಯನ್ನು ಸ್ಮರಿಸಿಕೊಂಡು ಒಂದೊಂದು ಮಾಘಮಾಸದಲ್ಲಿಯೂ ಪ್ರಯಾಗಕ್ಕೆ ಸ್ನಾನ ಮಾಡಲಿಕ್ಕೆ ಹೋಗುತ್ತಿರುವೆನು. ನಿನ್ನ ಚರಿತ್ರೆಯನ್ನು ತಿಳಿಸು' ಎಂದು ಹೇಳಿದಳು.

ಅದಕ್ಕೆ ರಾಕ್ಷಸನು 'ಸುಂದರಿ! ನಿನ್ನಿಂದ ಈ ಕ್ರೂರಜನ್ಮಕ್ಕೆ ನಿವೃತ್ತಿಯಾಯಿತು. ನಾನು ಪೂರ್ವದಲ್ಲಿ ದೊಡ್ಡ ವಂಶದಲ್ಲಿ ಹುಟ್ಟಿದ ಬ್ರಾಹ್ಮಣನು. ಕಾಶಿಯಲ್ಲಿ ಎಲ್ಲರಿಂದಲೂ ದಾನವನ್ನು ತೆಗದುಕೊಂಡಿರುವೆನು. ರಾಜರಿಂದ ವೈಶ್ಯರಿಂದ

ಶೂದ್ರರಿಂದ ಎಲ್ಲರಿಂದಲೂ ದಾನವನ್ನು ತೆಗೆದುಕೊಂಡು ಎಷ್ಟೋ ಸಾರಿ ಪಂಡಿತರು ಹಾಗೆ ಮಾಡಬೇಡ ಎಂದರು. ಆದರೂ ಚಂಡಾಲಕೈಯಲ್ಲಿ ದಾನವನ್ನು ತೆಗೆದುಕೊಳ್ಳುವುದನ್ನು ಬಿಡಲಿಲ್ಲ. ಮತ್ತು ಬಹುಪಾಪವನ್ನು ಮಾಡಿದೆನು. ಕಾಶಿಯಲ್ಲಿ ಸ್ವಲ್ಪ ಪುಣ್ಯ ಮಾಡಿದರೂ ಅದು ಮೇರುಪರ್ವತಕ್ಕೆ ಸಮಾನವಾಗುವುದು. ಅಂತಹ ಕಾಶಿಯಲ್ಲಿ ಒಂದು ಪುಣ್ಯವನ್ನೂ ಮಾಡಿಲ್ಲ. ಕಾಶಿಯಲ್ಲಿ ವಾಸಮಾಡುವವರಾರೂ ನರಕವನ್ನು ಹೊಂದಲಾರರು. ಆದುದರಿಂದ ನಾನು ನರಕವನ್ನು ಹೊಂದಲಿಲ್ಲ. ಆದರೂ ಕಾಶಿಯಲ್ಲಿ ಮಾಡಿದ್ದ ಪಾಪವು ವಜ್ರಲೇಪದಂತೆ ಆಗುವುದು. ಆದರಿಂದ ನನಗೆ ಪಾಪದಿಂದ ನನಗೆ ರಾಕ್ಷಸ ಜನ್ಮವು ಬಂದಿತು. ಹಿಮವತ್ಪರ್ವತದಲ್ಲಿ ಇಂತಹ ಕ್ರೂರಜನ್ಮವು ಉಂಟಾಯಿತು. ಎರಡು ಜನ್ಮಗಳಲ್ಲಿ ಹದ್ದುಪಕ್ಷಿಯಾದೆನು. ಎರಡು ಜನ್ಮಗಳಲ್ಲಿ ಹುಲಿಯಾಗಿಯೂ ಮತ್ತೆ ಎರಡು ಜನ್ಮಗಳಲ್ಲಿ ಹಾವಾಗಿಯೂ ಒಂದು ಜನ್ಮದಲ್ಲಿ ಗೂಗೆಯಾಗಿಯೂ ಆಮೇಲೆ ಹಂದಿಯಾಗಿಯೂ ಹುಟ್ಟಿ ಈಗ ರಾಕ್ಷಸನಾಗಿ ಹುಟ್ಟಿರುವೆನು. ಇದು ಹತ್ತನೇ ಜನ್ಮವು. ಈ ರಾಕ್ಷಸಜನ್ಮದಲ್ಲಿ ಎಪ್ಪತ್ತೈದು ಸಾವಿರ ವರ್ಷಗಳಾದವು. ಈ ದುಃಖಸಮುದ್ರದಿಂದ ನನಗೆ ಬಿಡುಗಡೆಯಿಲ್ಲದಾಗಿತ್ತು. ಅಲ್ಲಿ ಮೂರುಯೋಜನ ಜನರಿಲ್ಲದಂತೆ ಮಾಡಿರುವೆನು. ನಿರಪರಾಧಿಗಳಾದ ಅನೇಕ ಪ್ರಾಣಿಗಳನ್ನು ಕೊಂದಿರುವೆನು. ಆದರಿಂದ ನನಗೆ ತುಂಬಾ ದುಃಖವಾಗುತ್ತದೆ. ನಿನ್ನ ದರ್ಶನದಿಂದ ನನ್ನ ಮನಸ್ಸು ಶಾಂತವಾಯಿತು. ನನ್ನ ಈ ದುಃಖವು ಹೇಗೆ ಕೊನೆಗಾಣುವುದೆಂದು ದಯೆಯಿಂದ ತಿಳಿಸು' ಎಂದು ಹೇಳಿದನು.

ಆಗ ಕಾಂಚನ ಮಾಲಿನಿಯು ದಯೆಯುಳ್ಳವಳಾಗಿ 'ನಾನು ಅನೇಕ ಮಾಘಸ್ನಾನಗಳನ್ನು ಮಾಡಿರುವೆನು. ಅವು ಎಷ್ಟು ಎಂದು ಹೇಳಲಾರೆನು. ಏಕೆಂದರೆ ನಾವು ಮಾಡಿದ ಪುಣ್ಯವನ್ನು ಹೇಳಬಾರದು. ನಾನು ಒಂದು ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನ ಮಾಡಿದ ಪುಣ್ಯವನ್ನು ನಿನಗೆ ಕೊಡುವೆನು. ಇದರಿಂದ ನಿನಗೆ ಸ್ವರ್ಗವು ಲಭಿಸುವುದು' ಎಂದು ಹೇಳಿ ಸೀರೆಯನ್ನು ಹಿಂಡಿ ಕೈಯಲ್ಲಿ ನೀರನ್ನು ಹಿಡಿದುಕೊಂಡು ಒಂದು ಮಾಘಮಾಸದ ಪುಣ್ಯವನ್ನು ವೃದ್ಧನಾದ ಆ ರಾಕ್ಷಸನಿಗೆ ಕೊಟ್ಟಳು. ಆಗಲೇ ಅವನು ರಾಕ್ಷಸದೇಹವನ್ನು ಬಿಟ್ಟು ದಿವ್ಯದೇಹವುಳ್ಳವನಾಗಿ ವಿಮಾನದಲ್ಲಿ ಕೂತುಕೊಂಡು ಕಾಂಚನಮಾಲಿನಿಗೆ ನಮಸ್ಕಾರ ಮಾಡಿದನು. 'ಮಂಗಳೆಯೇ! ಭಗವಂತನು ಫಲವನ್ನು ಕೊಡುವವನು. ನೀನೂ ನನಗೆ ಪರಮಉಪಕಾರವನ್ನು ಮಾಡುವವಳಾದಿ. ಈಗ ನನ್ನ ಮೇಲೆ ಕರುಣೆಯಿಂದ ಅನುಗ್ರಹ ಮಾಡು. ನೀತಿಯನ್ನು ಶಿಕ್ಷಿಸು. ಇನ್ನು ಮುಂದೆ ನಾನು ಪಾಪವನ್ನು

ಮಾಡಿದರೆ ಶಿಕ್ಷಿಸು. ಅದನ್ನು ಕೇಳಿ ನಿನ್ನ ಅನುಜ್ಞೆಯನ್ನು ಪಡೆದು ಆಮೇಲೆ ನರಕಕ್ಕೆ ಹೋಗುವೆನು.

ಆಗ ಕಾಂಚನಮಾಲಿನಿಯು 'ಸರ್ವಕಾಲದಲ್ಲಿಯೂ ಧರ್ಮವನ್ನು ಮಾಡು. ಪ್ರಾಣಿಗಳ ಹಿಂಸೆಯನ್ನು ಮಾಡದಿರು. ಸಾಧುಪುರುಷರರು ಈ ದುಷ್ಟ ಕಾಮವೆಂಬ ಶತ್ರುವನ್ನು ಜಯಿಸು. ಇನ್ನೊಬ್ಬರ ದೋಷಗಳನ್ನು ಬಿಟ್ಟು ಸತ್ಯವನ್ನು ಹೇಳು. ಪರಮಾತ್ಮನನ್ನು ಪೂಜಿಸು. ಸರ್ವದುಃಖವನ್ನು ಪರಿಹರಿಸಿಕೊಳ್ಳು. ದೇಹದಲ್ಲಿ ಅಭಿಮಾನವನ್ನು ಬಿಡು. ಹೆಂಡತಿ ಮಕ್ಕಳ ಮಮತೆಯನ್ನು ಬಿಡು. ಜಗತ್ತೆಲ್ಲವೂ ನಶ್ವರವೆಂದು ತಿಳಿದುಕೊಂಡು ಅಸಂಗವುಳ್ಳವನಾಗು. ಪ್ರೀತಿಯಿಂದ ನಾನು ಹೇಳಿದ ಧರ್ಮ ಸಮೂಹವನ್ನು ಮಾತ್ರ ಇಟ್ಟುಕೊಳ್ಳು. ರಾಕ್ಷಸದೇಹವನ್ನು ಬಿಟ್ಟು ದೇವತಾದೇಹ ಪಡೆದು ಸ್ವರ್ಗವನ್ನು ಹೊಂದು' ಎಂದು ಉಪದೇಶ ಮಾಡಿದಳು.

ಆಗ ರಾಕ್ಷಸನು 'ನೀನು ಸಂತೋಷದಿಂದ ಇರು, ಸರ್ವಕಾಲದಲ್ಲಿಯೂ ನಿನಗೆ ಮಂಗಳವಾಗಲಿ. ಚಂದ್ರಸೂರ್ಯರು ಇರುವವರೆಗೆ ಕೈಲಾಸದಲ್ಲಿ ರುದ್ರದೇವರ ಸಮೀಪದಲ್ಲಿ ಸಂತೋಷದಿಂದ ಇರು. ನಿನಗೆ ಯಾವಾಗಲೂ ಪಾರ್ವತೀ ದೇವಿಯ ಅಖಂಡಿತ ಪ್ರೇಮವಿರಲಿ' ಇತ್ಯಾದಿ ರೀತಿಯಿಂದ ಹೇಳಿ ಕಾಂಚನಮಾಲಿನಿ ಯನ್ನು ನಮಸ್ಕರಿಸಿ ಗಂಧರ್ವರಿಂದ ಆದರ ಮಾಡಲ್ಪಡುವವನಿಗಾಗಿ ಸ್ವರ್ಗಕ್ಕೆ ಹೋದನು. ಆಗ ದೇವಕನ್ಯೆಯರು ಬಹು ಸಂತೋಷದಿಂದ ಕಾಂಚನಮಾಲಿನಿಯ ತಲೆಯಮೇಲೆ ಹೂವಿನ ಮಳೆ ಸುರಿಸಿದರು. ಕನ್ಯೆಯರು ಅವಳನ್ನು ಆಲಿಂಗಿಸಿ 'ಮಂಗಳೇ! ಈ ರಾಕ್ಷಸರನ್ನು ಬಿಡುಗಡೆಯನ್ನು ಮಾಡಿದಿ. ಈ ದುಷ್ಟನ ಭಯದಿಂದ ಈ ಕಾಡಿಗೇ ಒಬ್ಬರೂ ಬರಲು ಆಶಿಸುತ್ತಿರಲಿಲ್ಲ. ಈಗ ಭಯವಿಲ್ಲದೇ ಸಂಚರಿಸುವೆ' ಎಂದು ಹೇಳಿದರು. ಈ ಮಾತನ್ನು ಕೇಳಿ ಕಾಂಚನಮಾಲಿನಿಯು ತಾನು ಮಾಡಿದ ಪುಣ್ಯದಾನದಿಂದ ಕೃತಾರ್ಥಳಾಗಿ ಕೈಲಾಸದಲ್ಲಿ ಸಂತೋಷದಿಂದ ಇರುತ್ತಿದ್ದಳು.



# ಕೇರಲದೇಶದ ಬ್ರಾಹ್ಮಣನ ಕಥೆ [1]

ಕೇರಲದೇಶದಲ್ಲಿ ವಸು ಎಂದು ಹೆಸರುಳ್ಳ ವೇದಶಾಸ್ತ್ರ ಪಾರಂಗತನಾದ ಬ್ರಾಹ್ಮಣನು ಇದ್ದನು. ಅವನ ದಾಯಾದರು ಅವನ ಭೂಮಿಯನ್ನು ಅಪಹರಿಸಿದರು. ಇದರಿಂದ ದರಿದ್ರನಾಗಿ ಬಂಧುಗಳಿಂದ ರಹಿತನಾಗಿ ತನ್ನ ಜನ್ಮಭೂಮಿಯನ್ನು ಬಿಟ್ಟು ಮಹಾದುಃಖದಿಂದ ಹೊರಟುಹೋದನು. ದೇಶದಿಂದ ದೇಶಕ್ಕೆ ಸಂಚರಿಸುತ್ತಾ ಬಹುಕಾಲದ ಮೇಲೆ ದೊಡ್ಡ ಅರಣ್ಯಕ್ಕೆ ಪ್ರವೇಶಿಸಿದನು. ಹಾಗೆಯೇ ಹಸಿವೆಯಿಂದ ಶ್ರಮದಿಂದ ಸಂಚರಿಸುತ್ತಾ ವಿಂಧ್ಯಪರ್ವತಕ್ಕೆ ಹೋಗಿ ದುರ್ಭಿಕ್ಷೆಯಿಂದ ಮರಣವನ್ನು ಹೊಂದಿದನು. ಅವನಿಗೆ ಒಬ್ಬರೂ ಉತ್ತರಕ್ರಿಯೆಯನ್ನು ಮಾಡಲಿಲ್ಲ. ಅದರಿಂದ ಅವನು ಪ್ರೇತನಾಗಿ ಬಹುಕಾಲ ನಿರ್ಜನ ವನದಲ್ಲಿ ವಾಸಮಾಡಿಕೊಂಡು ಇದ್ದನು. ಛಳಿ ಬಿಸಿಲುಗಳಿಂದ ಶ್ರಮಪಡುತ್ತಾ ನೀರು ಆಹಾರ ರಹಿತನಾಗಿ ದಿಗಂಬರನಾಗಿ ಕಾಲಿಗೆ ಪಾದರಕ್ಷೆಯೂ ಇಲ್ಲದೆ ಹಾಹಾಕಾರವನ್ನು ಮಾಡುತ್ತಾ ಇದ್ದನು. ಗಾಳಿಯ ಆಕಾರವುಳ್ಳವನಾಗಿ ಅಲ್ಲಿ ಇಲ್ಲಿ ಸುತ್ತುತ್ತಾ ಇದ್ದನು.

ಅವನಿಗೆ ಒಬ್ಬರೂ ರಕ್ಷಕರು ಸಿಗಲಿಲ್ಲ. ಎಲ್ಲಿಯೂ ಸುಖವುಂಟಾಗಲಿಲ್ಲ. ದುಃಖಪಡುತ್ತಿದ್ದನು. ಅವನು ಯಾವಾಗಲೂ ದಾನವನ್ನು ಮಾಡಿದವನಲ್ಲ. ಆದುದ ರಿಂದ ಬಹುಶ್ರಮಪಡುತ್ತಿದ್ದನು. ಯಾರು ಅಗ್ನಿಯಲ್ಲಿ ಹೋಮವನ್ನು ಮಾಡುವು ದಿಲ್ಲವೋ, ಪರಮಾತ್ಮನನ್ನು ಪೂಜಿಸುವುದಿಲ್ಲವೋ, ಭಗವನ್ಮಹಿಮಾಪ್ರತಿಪಾದಕವಾದ ವಿದ್ಯೆಯನ್ನು ಓದುವುದಿಲ್ಲವೋ, ತೀರ್ಥಸ್ನಾನ ಮಾಡುವುದಿಲ್ಲವೋ, ಬಂಗಾರ, ವಸ್ತ್ರ ತಾಂಬೂಲ, ರತ್ನ, ಅನ್ನ, ಫಲ, ಜಲ, ಇವುಗಳನ್ನು ದಾನಮಾಡುವುದಿಲ್ಲವೋ, ಬ್ರಾಹ್ಮಣರ ಸೊತ್ತನ್ನೂ ಇನ್ನೊಬ್ಬರ ಸೊತ್ತನ್ನೂ ಸ್ತ್ರೀಯರ ಹಣವನ್ನು ಬಲಾತ್ಕಾರ ದಿಂದಲೋ ಮೋಸ ಮಾಡಿಯೋ ಅಪಹರಿಸುವರೋ, ಡಾಂಭಿಕರಾಗಿರುವರೋ, ಕಪಟವನ್ನು ಮಾಡುವರೋ, ಬಾಲರಲ್ಲಿ ವೃದ್ಧರಲ್ಲಿ, ರೋಗಿಗಳಲ್ಲಿ, ಸ್ತ್ರೀಯರಲ್ಲಿ ದಯಾರಹಿತರಾಗಿರುವರೋ, ಸತ್ಯವಚನ ರಹಿತರಾಗಿರುವರೋ, ಮನೆಗೆ ಬೆಂಕಿ ಕೊಡುವರೋ, ಒಬ್ಬರಿಗೆ ವಿಷವನ್ನು ಹಾಕುವರೋ, ಸುಳ್ಳು ಸಾಕ್ಷಿಯನ್ನು ಹೇಳು ವರೋ, ಅಗಮ್ಯಾಗಮನ ಮಾಡುತ್ತಾರೋ, ಅಯೋಗ್ಯರಿಗೆ ಪೌರೋಹಿತ್ಯ ಮಾಡಿಸುತ್ತಾರೋ, ತಂದೆ, ತಾಯಿ, ಸೊಸೆ, ಮಗ, ಹೆಂಡತಿಯರನ್ನು ಪರಿತ್ಯಾಗ ಮಾಡುತ್ತಾರೋ, ಲೋಭಿಗಳಾಗಿರುವರೋ, ನಾಸ್ತಿಕರಾಗಿರುತ್ತಾರೋ, ಧರ್ಮ ದೂಷಕರಾಗಿರುತ್ತಾರೋ, ಯುದ್ಧಕಾಲದಲ್ಲಿ ತಮ್ಮ ಯಜಮಾನನನ್ನು ಬಿಟ್ಟು ಬಿಡು ತ್ತಾರೋ, ಶರಣಾಗತರನ್ನು ಬಿಟ್ಟುಬಿಡುತ್ತಾರೋ ಗೋವುಗಳು ಮೇಯಲಿಕ್ಕೆ ಬಿಟ್ಟ

ಸ್ಥಳವನ್ನು ಅಪಹರಿಸುತ್ತಾರೋ, ರತ್ನವನ್ನು ದೂಷಿಸುತ್ತಾರೋ, ದೊಡ್ಡ ಕ್ಷೇತ್ರಗಳಲ್ಲಿ ದಾನವನ್ನು ತೆಗೆದುಕೊಳ್ಳುತ್ತಾರೋ, ಪರದ್ರೋಹವನ್ನು ಮಾಡುತ್ತಾರೋ, ಪ್ರಾಣಿಗಳ ಹಿಂಸೆಯನ್ನು ಮಾಡುತ್ತಾರೋ, ಇನ್ನೊಬ್ಬರ ಮೇಲೆ ಅಪವಾದವನ್ನು ಹೇಳುತ್ತಾರೋ, ದೇವತೆಗಳನ್ನು ಗುರುಗಳನ್ನು ನಿಂದಿಸುತ್ತಾರೋ, ದುಷ್ಟದಾನಗಳನ್ನು ಪಡೆಯುತ್ತಾರೋ ಅವರು ಪುನಃಪುನಃ ಪ್ರೇತ ರಾಕ್ಷಸ ಪಿಶಾಚಗಳಾಗಿಯೂ ತಿರ್ಯಕ್ ಪ್ರಾಣಿ ಗಳಾಗಿಯೂ ಮರಗಿಡಗಳಾಗಿಯೂ ಹುಟ್ಟುವರು. ಅವರಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸ್ವಲ್ಪವೂ ಸುಖವು ಇರುವುದಿಲ್ಲ. ಆದುದರಿಂದ ನಿಷಿದ್ಧಕರ್ಮವನ್ನು ಮಾಡದೆ ವಿಹಿತಕರ್ಮವನ್ನೇ ಮಾಡಬೇಕು. ಯಜ್ಞ ದಾನ ತಪಸ್ಸು ತೀರ್ಥ ಮಂತ್ರ ದೇವರು ಗುರುಗಳು ಇವರನ್ನು ಸೇವಿಸಬೇಕು. ನಾಲ್ಕು ವರ್ಣದವರೂ ಯಾವಾಗಲೂ ಧರ್ಮವನ್ನೇ ಮಾಡಬೇಕು.

ಆ ಪ್ರೇತನು ಬಹುಕಾಲ ದುಃಖದಿಂದ ಕಳೆದನು. ಒಂದು ದಿವಸದಲ್ಲಿ ಒಬ್ಬ ದಾರಿಗನು ಕಾವಡಿಯಲ್ಲಿ ತ್ರಿವೇಣಿಯ ತೀರ್ಥವನ್ನು ಹಿಡಿದುಕೊಂಡು ಸಂತೋಷ ದಿಂದ ಪರಮಾತ್ಮನನ್ನು ಗಾನಮಾಡುತ್ತಾ ಹೋಗುವುದನ್ನು ನೋಡಿ ದಾರಿಯಲ್ಲಿ ಹೋಗಿ ಅಡ್ಡ ತಡೆದನು. ತನ್ನ ರೂಪವನ್ನು ತೋರಿಸಿದನು. ಭಯಪಡಬೇಡ ಎಂದು ಹೇಳಿದನು. 'ಕಾವಡಿಗನೇ! ನನಗೆ ತುಂಬಾ ನೀರಡಿಕೆಯಾಗುತ್ತಿದೆ. ನೀನು ನೀರನ್ನು ಕೊಡದೆ ಇದ್ದರೆ ನನ್ನ ಪ್ರಾಣಗಳು ಹೋಗುತ್ತವೆ' ಎಂದು ಹೇಳಿದನು. ಆ ಮಾತನ್ನು ಕೇಳಿ ದಾರಿಗನು 'ಇಷ್ಟು ದುಃಖಪಡುತ್ತಿರುವ ಕೃಶನಾದ ಕಪ್ಪಾಗಿರುವ ದಿಗಂಬರ ನಾಗಿರುವ ಸಾಯಲಿಕ್ಕೆ ಹೊರಟಿರುವ ಭಯಂಕರವಾದ ವಿಕಾರವುಳ್ಳವನಾದ ಹೊಗೆಯಂತೆ ಇರುವ ಚಂಚಲಗಳಾದ ಕಣ್ಣುಗಳುಳ್ಳ ಪಾದಗಳಿಂದ ಭೂಮಿಯನ್ನು ಮುಟ್ಟದೆ ಇರುವ ನೀನು ಯಾರು?' ಎಂದು ಕೇಳಿದನು.

ಆದಕ್ಕೆ ಪ್ರೇತನು 'ಧಾರ್ಮಿಕನೇ! ನನ್ನ ಚರಿತ್ರೆಯನ್ನು ಹೇಳುವೆನು ಕೇಳು. ನಾನು ಒಬ್ಬ ಬ್ರಾಹ್ಮಣನಾಗಿದ್ದೆನು. ದಾನ ಮಾಡಿದವನಲ್ಲ. ಲೋಭಿಯು. ನಿಷಿದ್ಧಕಾರ್ಯವನ್ನು ಮಾಡಿದವನು. ಯಾವಾಗಲೂ ಪರಾನ್ನದಿಂದ ಪುಷ್ಟನಾಗಿದ್ದೆನು. ಒಬ್ಬನೇ ರುಚಿಕರವಾದ ಅನ್ನವನ್ನು ಭೋಜನ ಮಾಡುತ್ತಿದ್ದೆನು. ನಾನು ಒಬ್ಬ ಯತಿಗೂ ಭಿಕ್ಷೆಯನ್ನು ಹಾಕಲಿಲ್ಲ. ಒಬ್ಬ ಬ್ರಾಹ್ಮಣನಿಗೂ ಅನ್ನವನ್ನು ಹಾಕಲಿಲ್ಲ. ವೈಶ್ವದೇವವನ್ನು ಮಾಡಿಲ್ಲ. ಬಲಿಹರಣವನ್ನೂ ಮಾಡಲಿಲ್ಲ. ನೀರಡಿಕೆಯಿಂದ ಬಂದ ಪ್ರಾಣಿಗಳಿಗೆ ನೀರನ್ನು ಕೊಡಲಿಲ್ಲ. ಮನೆಮನೆಗೆ ತಿರುಗುತ್ತಿದ್ದೆನು. ಒಂದು ದಿವಸದಲ್ಲಿಯೂ ತಂದೆತಾಯಿಗಳಿಗೆ ಸಂತೋಷಪಡಿಸಿದವನಲ್ಲ. ತಂದೆತಾಯಿಗಳು

ಸತ್ತಮೇಲೆ ಅವರಿಗೆ ಶ್ರಾದ್ಧವನ್ನೂ ಮಾಡಲಿಲ್ಲ. ದೇವರ ಪೂಜೆಯನ್ನು ಮಾಡಲಿಲ್ಲ. ಬಿಸಿಲಿನ ತಾಪವನ್ನು ಪರಿಹರಿಸುವ ಪಾದರಕ್ಷೆಯನ್ನು (ಮೆಟ್ಟನ್ನು) ದಾನಮಾಡಲಿಲ್ಲ. ಜಲಕುಂಭವನ್ನು ತಾಂಬೂಲವನ್ನೂ ದಾನ ಮಾಡಲಿಲ್ಲ. ಒಬ್ಬರಿಗೂ ಮನೆಯಲ್ಲಿ ವಾಸಮಾಡಲಿಕ್ಕೆ ಅವಕಾಶವನ್ನು ಕೊಡಲಿಲ್ಲ. ಒಬ್ಬರಿಗೂ ಆತಿಥ್ಯೋಪಚಾರವನ್ನು ಮಾಡಿಲ್ಲ. ಕುರುಡರನ್ನೂ ಮುದುಕರನ್ನು ದರಿದ್ರರನ್ನು ಅನಾಥರನ್ನೂ ಅನ್ನದಾನದಿಂದ ಸಂತೋಷಪಡಿಸಲಿಲ್ಲ. ಗೋಗ್ರಾಸವನ್ನು ಕೊಟ್ಟಿಲ್ಲ. ರೋಗಿಯ ರೋಗವನ್ನು ಪರಿಹಾರ ಮಾಡಲಿಲ್ಲ. ಎರಡು ಮೂರು ಎಳ್ಳುಗಳನ್ನಾದರೂ ದಾನವನ್ನು ಮಾಡಲಿಲ್ಲ. ಹೋಮವನ್ನು ಮಾಡಲಿಲ್ಲ. ಪೃಥಿವಿಯಲ್ಲಿ ತಿಲದಾನವನ್ನು ಮಾಡಿದವರು ನನ್ನಂತೆ ಪ್ರೇತಗಳಾಗುವುದಿಲ್ಲ. ವ್ಯತೀಪಾತಯೋಗದಲ್ಲಿ ಸ್ವಲ್ಪದಾನ ವನ್ನು ಮಾಡಿದರೂ ಮಹಾಫಲಕ್ಕೆ ಕಾರಣವಾಗುವುದು. ಅಂತಹ ವ್ಯತೀಪಾತ ದಿನದಲ್ಲಿ ನಾನು ಸ್ವಲ್ಪವೂ ದಾನ ಮಾಡಲಿಲ್ಲ. ಸಂಕ್ರಾಂತಿ ಪುಣ್ಯಕಾಲದಲ್ಲಿಯೂ ಚಂದ್ರಸೂರ್ಯಗ್ರಹಣಕಾಲದಲ್ಲಿಯೂ ಒಬ್ಬರಿಗೂ ದಾನ ಮಾಡಲಿಲ್ಲ. ಎಲ್ಲಾ ಪುಣ್ಯಕಾಲಗಳನ್ನೂ ವ್ಯರ್ಥವಾಗಿ ಕಳೆದೆನು. ಕಾರ್ತಿಕಮಾಸದ ಮುಖ್ಯತಿಥಿಗಳನ್ನು ವ್ಯರ್ಥವಾಗಿ ಕಳೆದೆನು. ಶ್ರಾದ್ಧಮಾಡಲಿಕ್ಕೆ ಅರ್ಹಗಳಾದ ದಿವಸಗಳಲ್ಲಿಯೂ ಪಿತೃಗಳಿಗೆ ಶ್ರಾದ್ಧವನ್ನು ಮಾಡಲಿಲ್ಲ. ಮನ್ವಾದಿಗಳಲ್ಲಿಯೂ ಯುಗಾದಿಗಳಲ್ಲಿಯೂ ಬ್ರಾಹ್ಮಣರಿಗೆ ಸಂತೋಷಪಡಿಸಲಿಲ್ಲ. ಕಾರ್ತಿಕಮಾಸದಲ್ಲಿ ಎಳ್ಳೆಣ್ಣೆಯಿಂದ ದೀಪವನ್ನು ಇಡಲಿಲ್ಲ. ಮಾಘಮಾಸದಲ್ಲಿ ಪ್ರಾತಃಸ್ನಾವನ್ನು ಮಾಡಲಿಲ್ಲ. ಪುಷ್ಯಮಾಘಮಾಸಗಳಲ್ಲಿ ಸ್ನಾನಮಾಡಿ ಛಳಿಯಿಂದ ನಡುಗುವವರೆಗೆ ಮೈಯನ್ನು ಕಾಸಿಕೊಳ್ಳಲಿಕ್ಕೆ ಬೆಂಕಿಯನ್ನು ಕೊಡಲಿಲ್ಲ. ವೈಶಾಖಾದಿ ಮಾಸಗಳಲ್ಲಿ ಜಲದಾನವನ್ನು ಮಾಡಲಿಲ್ಲ. ಅಶ್ವತ್ಥಾದಿ ಮರಗಳನ್ನು ನೆಡಲಿಲ್ಲ. ಪ್ರಾಣಭಯದಿಂದ ಶರಣಾಗತನನ್ನು ರಕ್ಷಣೆ ಮಾಡಲಿಲ್ಲ. ಏಕಾದಶಿ ಉಪವಾಸ ಮಾಡಿ ಪರಮಾತ್ಮನನ್ನು ಸಂತೋಷಪಡಿಸಲಿಲ್ಲ. ಕೃಚ್ಛ್ರಚಾಂದ್ರಾಯಣ ಮೊದಲಾದ ವ್ರತಗಳನ್ನು ಮಾಡಲಿಲ್ಲ. ವ್ರತಗಳನ್ನು ಮಾಡಿ ನನ್ನ ದೇಹವನ್ನು ಕೃಶವಾಗಿ ಮಾಡಿಕೊಳ್ಳಲಿಲ್ಲ.

ಈರೀತಿಯಾಗಿ ನನ್ನ ಪೂರ್ವಜನ್ಮವು ವ್ಯರ್ಥವಾಯಿತು. ಈ ಜನ್ಮದಲ್ಲಿ ಅದ್ಭುತವಾದ ವಿಷಯವನ್ನು ನೋಡು. ಇಲ್ಲಿ ಹುಲಿ, ತೋಳಗಳಲ್ಲಿ ಸಂಹರಿಸಲ್ಪಟ್ಟ ಜಿಂಕೆಗಳ ಮಾಂಸವು ಬೇಕಾದಷ್ಟಿದೆ. ಗಿಣಿಗಳು ಕೊಯ್ದುಹಾಕಿದ ಹಣ್ಣುಗಳೂ ಇವೆ. ಹದ್ದು, ಪಕ್ಷಿಗಳು ಬಿಟ್ಟುಹೋದ ಆಹಾರವೂ ಇದೆ. ವಾಸನೆಯುಳ್ಳ ಪುಷ್ಪಗಳ ರಸವುಳ್ಳ ಹಣ್ಣುಗಳೂ ಒಳ್ಳೇ ಗೆಡ್ಡೆಗಳೂ ಬೇಕಾದಷ್ಟು ಇವೆ. ನಾನಾ ಜೇನುತುಪ್ಪಗಳಿವೆ. ನೀರಿನ

ಪ್ರವಾಹಗಳು ಬೇಕಾದಷ್ಟು ಇವೆ. ಇಷ್ಟಿದ್ದರೂ ನನಗೆ ಮಾತ್ರ ಆಹಾರವಾಗಲೀ ನೀರಾಗಲೀ ತೋರುವುದೇ ಇಲ್ಲ. ಬರೇಗಾಳಿಯ ಆಹಾರದಿಂದ ಜೀವಿಸುತ್ತೇನೆ. ಏನಿದ್ದರೂ ಯಾರ ಸಹಾಯವಿದ್ದರೂ ಅಲಭ್ಯವನ್ನು ಹೊಂದಲಿಕ್ಕೆ ಆಗಲಾರದು. ಎಲ್ಲದಕ್ಕೂ ದೈವವೇ ಕಾರಣವು. ಯಾರು ಎಳ್ಳನ್ನು ಗೋವನ್ನು ಬಂಗಾರವನ್ನು ವಸ್ತ್ರಗಳನ್ನು ದಾನಮಾಡಿರುತ್ತಾರೋ ಭೂದಾನ ಮಾಡಿರುತ್ತಾರೋ ಶಯ್ಯಾ ಆಸನ ತಾಂಬೂಲ ಮನೆ ಭಕ್ಷ್ಯಭೋಜ್ಯ ಗಂಧಗಳನ್ನೂ ದಾನಮಾಡುತ್ತಾರೋ ಅವರು ಪರ್ವತದ ಕೊನೆಯಲ್ಲಿಯೇ ಕಾಡಿನಲ್ಲಿಯೋ ಊರಲ್ಲಿಯೋ ಎಲ್ಲಿ ಇದ್ದರೂ ಅವನಿಗೆ ಬೇಕಾದ ಭೋಗಗಳು ಉಂಟಾಗುವುವು. ಆದುದರಿಂದಲೇ ಕುರೂಪಿ ಗಳೂ ದುಷ್ಟವಂಶದಲ್ಲಿ ಹುಟ್ಟಿದವರೂ ಮೂರ್ಖರೂ ದುರಾಚಾರಿಗಳೂ ಶೌರ್ಯ ರಹಿತರಾದವರೂ ನೊಂಡಿಗಳೂ ನೀತಿಹೀನರೂ ನಿರ್ಗುಣರು ನಪುಂಸಕರೂ ದೈವೇಚ್ಛೆಯಿಂದ ರಾಜ್ಯವನ್ನು ಹೊಂದುವರು.

ಈ ಪರ್ವತದಲ್ಲಿ ಬೇರೆಯಾದ ಬಲಿಷ್ಠರಾದ ರಾಕ್ಷಸರೂ ವನದಲ್ಲಿ ಸಂಚರಿಸುತ್ತಾ ಬಹುಕಷ್ಟದಿಂದ ಆಹಾರವನ್ನು ಹೊಂದುತ್ತವೆ. ಅದನ್ನು ಕೇಳಿ ನೀನು ಭಯಪಡುವುದುಬೇಡ. ಶುದ್ಧನಾದ ಪರಮಾತ್ಮನ ಭಕ್ತನಾದ ನಿನ್ನನ್ನು ಮುಟ್ಟಲಿಕ್ಕೆ ಅವರು ಸಮರ್ಥರಾಗಲಾರರು. ವಿಷ್ಣುಭಕ್ತಿಯುಳ್ಳ ಪುರುಷನನ್ನು ಪ್ರೇತ ರಾಕ್ಷಸ ಮೊದಲಾದ ಯಾರೂ ಮುಟ್ಟಲಾರರು. ನೋಡಲಾರರು. ಈ ಪ್ರಕಾರವಾಗಿ ನಾನು ನನ್ನ ಕರ್ಮದ ಫಲವನ್ನು ಅನುಭವಿಸುತ್ತಾ ಇದ್ದೇನೆ. ಸಾರಸಪಕ್ಷಿಯೊಂದು ಹೇಳಿದ ಮಾತನ್ನು ಕೇಳಿದ ಮೇಲೆ ದುಃಖಪಟ್ಟು ಉಪಯೋಗವಿಲ್ಲವೆಂದು ಯೋಚಿಸಿ ಸುಮ್ಮನೆ ಇದ್ದೇನೆ' ಎಂದು ಹೇಳಿ ಆ ಸಾರಸಪಕ್ಷಿಯ ಚರಿತ್ರೆಯನ್ನು ಹೇಳಿ 'ಬ್ರಾಹ್ಮಣ! ಸಾರಸಪಕ್ಷಿಯ ಚರಿತ್ರೆಯಿಂದ ನನಗೂ ಅಜ್ಞಾನವು ಶೋಕವು ಹೋಯಿತು.

ಈಗ ಗಂಗಾಜಲದ ಪರಮಾದ್ಭುತವಾದ ಮಹಿಮೆಯನ್ನು ತಿಳಿದುಕೊಂಡು ಬ್ರಾಹ್ಮಣಶ್ರೇಷ್ಠ ನಾದ ನಿನ್ನೊಡನೆ ಗಂಗಾಜಲವನ್ನು ಕೇಳುತ್ತೇನೆ. ಬಹಳ ನೀರಡಿಕೆ ಯಿಂದ ಕೂಡಿದ ನಾನು ಈ ಪ್ರೇತದೇಹದಿಂದ ಬಿಡುಗಡೆಯನ್ನು ಹೊಂದುವ ಆಸೆಯಿಂದ ಗಂಗಾಜಲವನ್ನು ಕೇಳುತ್ತೇನೆ. ಇದೇ ಪರ್ವತದಲ್ಲಿ ಅದ್ಭುತವಾದ ಗಂಗಾಜಲದ ಮಹಿಮೆಯನ್ನು ನೋಡಿದೆನು. ಅದರಿಂದ ನಾನು ಆ ಜಲವನ್ನು ಅಪೇಕ್ಷಿಸುತ್ತತೇನೆ. ಗ್ರಾಮ ಪುರೋಹಿತನಾದ ಒಬ್ಬ ಬ್ರಾಹ್ಮಣನು ಅಯೋಗ್ಯರಿಗೆ ಪೌರೋಹಿತ್ಯವನ್ನು ಮಾಡಿಸುವವನಾಗಿ ವಿಂಧ್ಯಪರ್ವತದಲ್ಲಿ ಬ್ರಹ್ಮರಾಕ್ಷಸನಾದನು. ನನ್ನ ಸಹವಾಸದಲ್ಲಿಯೇ ಎಂಟು ವರ್ಷವಿದ್ದನು. ಅಷ್ಟರಲ್ಲಿ ಅವನ ಮಗನು ಅವನ

ಎಲುಬುಗಳನ್ನು (ಪೂರ್ವದೇಹದ ಎಲುಬುಗಳನ್ನು) ಗಂಗಾಜಲದಲ್ಲಿ ಹಾಕಿದನು. ಆಗಲೇ ಬ್ರಹ್ಮರಾಕ್ಷಸದೇಹದಿಂದ ಬಿಡುಗಡೆಯನ್ನು ಹೊಂದಿದನು. ಈರೀತಿಯಾಗಿ ಗಂಗಾಜಲದ ಮಹಿಮೆಯನ್ನು ಪ್ರತ್ಯಕ್ಷವಾಗಿ ನೋಡಿದವನಾದ ಕಾರಣ ಗಂಗಾಜಲವನ್ನು ಅಪೇಕ್ಷಿಸುವೆನು. ಪೂರ್ವಜನ್ಮದಲ್ಲಿ ನಾನು ತೀರ್ಥದಲ್ಲಿ ಬಹಳವಾಗಿ ದಾನಗಳನ್ನು ತೆಗೆದುಕೊಂಡು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಿಲ್ಲವಾದ ಕಾರಣ ಪ್ರೇತನಾಗಿರುವ ನನಗೆ ನೀರು ಸಿಗುವುದೇ ದುರ್ಲಭವಾಗಿದೆ. ವಿಂಧ್ಯಪರ್ವತದಲ್ಲಿ ಹೀಗೆಯೇ ಮೂರು ಸಾವಿರ ವರ್ಷಗಳಾದವು. ಈರೀತಿಯಾಗಿ ಲಜ್ಜೆಯನ್ನು ಬಿಟ್ಟು ನನ್ನ ಚರಿತ್ರೆಯೆಲ್ಲವನ್ನೂ ಹೇಳಿಕೊಂಡಿರುವೆನು. ಕುತ್ತಿಗೆಯವರೆಗೆ ಬಂದಿರುವ ನನ್ನ ಪ್ರಾಣಗಳನ್ನು ನೀರು ಕೊಟ್ಟು ರಕ್ಷಿಸು' ಎಂದು ಹೇಳಿದನು.

ಆಗ ದಾರಿಗನು ಅದನ್ನು ಕೇಳಿ ಆಶ್ಚರ್ಯವುಳ್ಳವನಾಗಿ ಆ ಪ್ರೇತನಲ್ಲಿ ದಯೆಯುಳ್ಳವನಾಗಿ 'ಪಾಪಪುಣ್ಯಗಳ ಫಲವು ಲೋಕದಲ್ಲಿ ಅನುಭವಸಿದ್ಧವಾಗಿರುವುದು. ಪಾಪಪುಣ್ಯಗಳಿಲ್ಲದಿದ್ದರೆ ದೇವ ಮಾನವ ದಾನವರಾಗಿ ಹುಟ್ಟುವುದೂ ತಿರ್ಯಕ್ ಪ್ರಾಣಿಯಾಗಿಯೂ ಕೃಮಿಕೀಟವಾಗಿ ಹುಟ್ಟುವುದೂ ನಾನಾ ರೋಗಗಳನ್ನು ಅನುಭವಿಸುವುದೂ ಬಾಲವೃದ್ಧರಾಗಿ ಮರಣವನ್ನು ಹೊಂದುವುದೂ ಕುರುಡನಾಗುವುದೂ ಐಶ್ವರ್ಯವೂ ದಾರಿದ್ರ್ಯವೂ ಪಾಂಡಿತ್ಯವೂ ಮೂರ್ಖತನವೂ ಇವುಗಳೆಲ್ಲವೂ ಹೇಗೆ ಕೂಡುವುವು? ಯಾರು ಕರ್ಮಭೂಮಿಯಲ್ಲಿ ನ್ಯಾಯದಿಂದ ಸಂಪಾದಿಸಿದ ಹಣವನ್ನು ಸತ್ಪಾತ್ರರಲ್ಲಿ ಕೊಡುವರೋ ಅವರೇ ಪರಮಧನ್ಯರು.

ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖದಿಂದ ಇರಬೇಕೆಂದು ಇಚ್ಛೆಯುಳ್ಳ ವರು ಭೂಮಿ, ರತ್ನ, ಬಂಗಾರ, ಗೋವು, ಧಾನ್ಯ, ಮನೆ, ಆನೆ, ರಥ, ಕುದುರೆ, ವಸ್ತ್ರ ಗ್ರಾಮ, ಅನ್ನ, ಜಲ, ಫಲ, ಕನ್ಯಾ, ಔಷಧ, ಕೊಡೆ, ಪಾದರಕ್ಷೆ, ಆಸನ, ಹಾಸಿಗೆ, ತಾಂಬೂಲ, ಪುಷ್ಪ, ಬೀಸಣಿಗೆ ಇತ್ಯಾದಿಗಳೆಲ್ಲವನ್ನು ದಾನಮಾಡಬೇಕು. ಇಲ್ಲಿ ದಾನಮಾಡಿದ್ದ ಸ್ವರ್ಗದಲ್ಲಿ ಸಿಗುವುದು. ಭೂಮಿಯಲ್ಲಿ ರತ್ನ, ಭೂಷಣ, ಮುತ್ತುಗಳು, ದಾಸರು, ದಾಸಿಯರು, ದೊಡ್ಡವಂಶದಲ್ಲಿ ಹುಟ್ಟುವುದು. ಆಯುಷ್ಯ, ಆರೋಗ್ಯ, ಸೌಭಾಗ್ಯ, ವಿದ್ಯೆಗಳಲ್ಲಿ ಪಾಂಡಿತ್ಯವು, ಛತ್ರ, ಚಾಮರ, ವಾಹನಗಳು, ಒಳ್ಳೇ ಕುದುರೆಗಳು, ವಾಹನಗಳು, ಮಹಡಿಯ ಮನೆ, ಹಾಸಿಗೆ, ಗೋವುಗಳು, ಎಮ್ಮೆಗಳು, ಉತ್ತಮಸ್ತ್ರೀಯರು ಇವೆಲ್ಲವು ಜನರಿಗೆ ಸಿಗುವುದೂ ದಾನ ಮಾಡಿದ ಫಲದಿಂದಲೇ. ಆದುದರಿಂದ ಅವಶ್ಯವಾಗಿ ದಾನವನ್ನು ಮಾಡಬೇಕು. ದಾನವನ್ನು ಮಾಡದೆ ಇದ್ದುದು ನಮಗೆ ಸಿಗಲಾರದು' ಎಂದು ಹೇಳಿದನು.

ಆಗ ಪ್ರೇತನು 'ದಾರಿಗನೇ! ನೀನು ಸರ್ವಜ್ಞ ಸದೃಶನಾಗಿರುವಿ ಎಂದು ತಿಳಿಯುವೆನು. ಇದಕ್ಕೆ ಸಂದೇಹವೇ ಇರುವುದಿಲ್ಲ. ನನಗೆ ನೀರನ್ನು ಕೊಡು. ನನ್ನ ಪ್ರಾಣಗಳನ್ನು ಉಳಿಸಲಿಕ್ಕೆ ಸಾವಕಾಶವನ್ನು ಮಾಡಬೇಡ' ಎಂದು ಹೇಳಿದನು.

ಆಗ ದಾರಿಗನು 'ಪ್ರೇತನೇ! ನಾನು ಹೇಳುವ ಮಾತನ್ನು ಕೇಳು. ಭೃಗುಕಚ್ಛದಲ್ಲಿ ನನ್ನ ತಂದೆತಾಯಿಗಳಿರುವರು. ಅವರಿಗಾಗಿ ನಾನು ಗಂಗಾಜಲವನ್ನು ತೆಗೆದುಕೊಂಡು ಹೋಗುತ್ತಿರುವೆನು. ಮಧ್ಯದಲ್ಲಿ ನೀನು ಆ ನೀರನ್ನು ಕೇಳುತ್ತಿರುವಿ. ಈಗ ನನಗೆ ಧರ್ಮಸಂದೇಹವು ಬಂದಿರುವುದು. ಆದರೂ ಯೋಚನೆ ಮಾಡಿದಾಗ ಒಬ್ಬರ ಪ್ರಾಣರಕ್ಷಣೆ ಮಾಡುವುದೇ ಸಮಸ್ತ ಯಜ್ಞಾದಿಪುಣ್ಯಕಾರ್ಯಗಳಿಗಿಂತಲೂ ಶ್ರೇಷ್ಠ ವೆಂದು ಕಾಣಿಸುತ್ತಿದೆ. ಈ ನೀರನ್ನು ನಿನಗೆ ಕೊಟ್ಟು ಇನ್ನೊಮ್ಮೆ ಹೋಗಿ ತಂದೆತಾಯಿ ಗಳಿಗೆ ನೀರನ್ನು ತೆಗೆದುಕೊಂಡು ಹೋಗುವೆನು. ಎಲ್ಲವೂ ಪರೋಪಕಾರಕ್ಕಿಂತ ಕಡಿಮೆಯಾದದ್ದು ಎಂದು ತೋರುತ್ತದೆ. ದಧೀಚಿಋಷಿಗಳು ಪೂರ್ವದಲ್ಲಿ 'ತನ್ನ ಪ್ರಾಣವನ್ನು ಉಪಯೋಗಿಸಿಯೋ ಹಣವನ್ನು ಉಪಯೋಗಿಸಿಯೋ ಪರೋಪಕಾರ ವನ್ನು ಮಾಡಬೇಕು. ಪರೋಪಕಾರದಿಂದ ಉಂಟಾಗುವ ಪುಣ್ಯವು ನೂರಾರು ಯಾಗಗಳಿಂದಲೂ ಉಂಟಾಗಲಾರದು' ಎಂದು ಹೇಳಿರುವರು.

ಈ ಪ್ರಕಾರವಾಗಿ ಹೇಳಿ ಆ ದಾರಿಗನು ಗಂಗಾಯಮುನಾ ಸಂಗಮದ ಜಲವನ್ನು ಪ್ರೇತನಿಗೆ ಪ್ರಾಣರಕ್ಷಣೆಗಾಗಿ ಕೊಟ್ಟನು. ಪ್ರೇತನು ಆ ನೀರನ್ನು ಕುಡಿದು ತಲೆಯ ಮೇಲೆ ಹಾಕಿಕೊಂಡು ಪ್ರೇತದೇಹವನ್ನು ಬಿಟ್ಟನು. ಆಗಲೇ ದಿವ್ಯದೇಹವುಳ್ಳ ದಾಯಿತು. ಆ ಆಶ್ಚರ್ಯವನ್ನು ನೋಡಿ ಆ ಪ್ರೇತನು 'ಗಂಗಾಸಂಗಮ ಜಲದಿಂದ ನನ್ನ ಪ್ರೇತಜನ್ಮವು ಹೋಯಿತು. ದಿವ್ಯದೇಹವುಳ್ಳವನಾಗಿರುವೆನು. ಈ ನೀರಿನ ಮಹಿಮೆಯನ್ನು ಹೇಳಲಿಕ್ಕೆ ಯಾರಿಂದಲೂ ಸಾಧ್ಯವಾಗಲಾರದು. ಇಲ್ಲದಿದ್ದರೆ ಗಂಗಾಜಲವನ್ನು ರುದ್ರದೇವರು ತಲೆಯಲ್ಲಿ ಏಕೆ ಧರಿಸುವರು?'— ಇತ್ಯಾದಿ ರೀತಿಯಿಂದ ಗಂಗೆಯನ್ನು ಹೊಗಳಿ 'ನೀನು ಅಂತಹ ಗಂಗಾಜಲವನ್ನು ಕೊಟ್ಟು ನನ್ನನ್ನು ಉದ್ಧರಿಸಿರಿ. ಇನ್ನೂ ಹೀಗೆಯೇ ಪುಣ್ಯವನ್ನು ಸಂಪಾದಿಸು. ಧರ್ಮದಿಂದ ವಿಮುಖನಾಗಬೇಡ' ಎಂದು ಹೇಳಿದನು. ದಾರಿಗನಿಗೆ ಆಶೀರ್ವಾದವನ್ನು ಮಾಡಿ ಸ್ವರ್ಗಕ್ಕೆ ಹೋದನು. ದಾರಿಗನು ಈರೀತಿಯಾಗಿ ಪ್ರೇತನನ್ನು ಬಿಡಿಸಿ ಪುನಃ ಅದೇ ಮಾರ್ಗದಿಂದ ಗಂಗಾಜಲದ ಮಹಿಮೆಯನ್ನು ಸ್ಮರಿಸುತ್ತಾ ಗಂಗಾಜಲವನ್ನು ತೆಗೆದುಕೊಂಡು ಹೋದನು.



# ಸಾರಸಪಕ್ಷಿಯ ಚರಿತ್ರೆಯು [1]

ದಾರಿಗನು ಪ್ರೇತನಾದ ಕೇರಲದೇಶದ ಬ್ರಾಹ್ಮಣನೊಡನೆ ಸಾರಸಪಕ್ಷಿಯ ಚರಿತ್ರೆಯನ್ನು ಕೇಳಲು, ಆ ಪ್ರೇತನು ಈ ಪ್ರಕಾರವಾಗಿ ಹೇಳಿದನು—

ಈ ಕಾಡಿನಲ್ಲಿ ಧೂಸರ ಎಂದು ಹೆಸರುಳ್ಳ ಬೆಟ್ಟದಿಂದ ಉಂಟಾದ ಒಂದು ನದಿಯಿರುವುದು. ಒಂದು ದಿವಸದಲ್ಲಿ ಅದರ ತೀರದಲ್ಲಿ ಇರುವ ವನಕ್ಕೆ ನಾನು ಹೋಗಿದ್ದೆನು. ಹಣ್ಣುಗಳನ್ನು ತಿನ್ನುವ ಆಸೆಯಿಂದ ನಾನು ಇಲ್ಲಿ ಇರುತ್ತಿರಲು ಬೇರೊಂದು ಕಾಡಿನಿಂದ ಒಂದು ಸಾರಸ ಪಕ್ಷಿಯು ಹಾರಿ ಅಲ್ಲಿಗೆ ಬಂದಿತು. ಅನೇಕ ಪಕ್ಷಿಗಳಿಂದ ಕೂಡಿದ ಆ ನದೀತೀರಕ್ಕೆ ಬಂದಿತು. ಅಲ್ಲಿಯೇ ನೀರನ್ನು ಕುಡಿದು ತನ್ನ ಹೆಂಡತಿಯೊಡನೆ ವಿಹಾರವನ್ನು ಮಾಡಿ ಎಡರೆಕ್ಕೆಯಲ್ಲಿ ತನ್ನ ತಲೆಯನ್ನು ಇಟ್ಟು ಸುಖವಾಗಿ ಮಲಗಿತು. ಅಷ್ಟರಲ್ಲಿಯೇ ಕೆಂಪಾದ ಮುಖವುಳ್ಳ ಕೆಂಪಾದ ಕಣ್ಣುಳ್ಳ ದೃಢವಾಗಿ ಉಗುರುಉಳ್ಳ ಉದ್ದವಾದ ಬಾಲವುಳ್ಳ ಮೈಯೆಲ್ಲಾ ರೋಮವುಳ್ಳ ಒಂದು ದುಷ್ಟಕಪಿಯು ಮರದಿಂದ ಕೆಳಗೆ ಇಳಿದು ಆ ಸಾರಸಪಕ್ಷಿಯು ಮಲಗಿದ್ದಲ್ಲಿಗೆ ವೇಗದಿಂದದ ಬಂದು ಎಲ್ಲಾ ಇತರ ಪಕ್ಷಿಗಳು ನೋಡುತ್ತಿರುವಂತೆ ಕ್ರೂರಬುದ್ಧಿಯಿಂದ ತನ್ನ ಕೈಗಳಿಂದ ಆ ಸಾರಸಪಕ್ಷಿಯ ಕಾಲನ್ನು ಗಟ್ಟಿಯಾಗಿ ಹಿಡಿಯಿತು. ಅದನ್ನು ನೋಡಿ ಇತರ ಪಕ್ಷಿಗಳೆಲ್ಲವೂ ಹಾರಿಹೋದವು. ಹೆಣ್ಣುಸಾರಸ ಪಕ್ಷಿಯು ಅಂಜಿಕೆಯಿಂದ ಕೂಗುತ್ತಾ ಇದ್ದಿತು.

ಆಗ ಸಾರಸಪಕ್ಷಿಯು ನಿದ್ರಾಭಂಗವನ್ನು ಹೊಂದಿ ಭಯದಿಂದ ಚಂಚಲವಾದ ಕಣ್ಣುಳ್ಳದ್ದಾಗಿ ಕುತ್ತಿಗೆಯನ್ನು ಮೇಲೆ ಎತ್ತಿ ನೋಡಿತು. ಹಿಂದಿನಿಂದ ತನ್ನನ್ನು ಕೊಲ್ಲಲಿಕ್ಕೆ ಇಚ್ಛೆಯುಳ್ಳ ಕ್ರೂರವಾದ ಕಪಿಯನ್ನು ನೋಡಿ ಮಧುರವಾದ ವಾಣಿಯಿಂದ ಮಾತಾಡಿತು. ಕಪಿಯೇ! ಅಪರಾಧವಿಲ್ಲದೆ ನನ್ನನ್ನು ಏಕೆ ಪೀಡಿಸುವಿ? ರಾಜರು ಅಪರಾಧಿಗಳನ್ನು ಭೂಮಿಯಲ್ಲಿ ಬಾಧಿಸುವುದು ಉಂಟು. ನಿನ್ನಂತಹ ಉತ್ತಮಜನರು ಒಬ್ಬರನ್ನು ಹಿಂಸಾಮಾಡದೆ ಇರುವ ಸಾಧುಗಳಾದ ಇನ್ನೊಬ್ಬರ ಜೀವನವನ್ನೂ ಕೆಡಿಸದ, ಇನ್ನೊಬ್ಬರ ಮೇಲೆ ಅಪವಾದವನ್ನು ಹೇಳದ, ಕಳ್ಳತನವನ್ನು ಮಾಡದ, ಯಾಚನೆಯನ್ನು ಮಾಡದ, ದುರ್ವ್ಯಾಪಾರದಿಂದಲೂ, ದುಷ್ಟಸಹವಾಸದಿಂದಲೂ ರಹಿತರಾದ ನಮ್ಮಂತವರನ್ನು ಕೊಲ್ಲಬಾರದು. ಸರ್ವಥಾ ನಿರಪರಾಧಿಯಾದ ನನ್ನನ್ನು ಬಿಟ್ಟುಬಿಡು. ನಿನ್ನ ಜನ್ಮವನ್ನು ನಾನು ತಿಳಿದಿರುವೆನು. ನನ್ನ ಜನ್ಮವನ್ನು ಮಾತ್ರ ನೀನು ತಿಳಿದಿರುವುದಿಲ್ಲ' ಎಂದು ಹೇಳಿತು.

ಆ ಮಾತನ್ನು ಕೇಳಿ ಚಂಚಲವಾದ ಆ ಕಪಿಯು ಸಾರಸಪಕ್ಷಿಯ ಕಾಲನ್ನು ಬಿಟ್ಟುಬಿಟ್ಟಿತು. ಸ್ವಲ್ಪದೂರಕ್ಕೆ ಹೋಗಿ ನಿಂತುಕೊಂಡಿತು. ಆ ಕಪಿಯು ಪಕ್ಷಿಯೊಡನೆ ತನ್ನ ಪೂರ್ವಚರಿತ್ರೆಯನ್ನು ಹೇಳಬೇಕೆಂದು ಕೇಳಿಕೊಂಡಿತು. ಅದಕ್ಕೆ ಸಾರಸಪಕ್ಷಿಯು 'ನಿನ್ನ ಪೂರ್ವಚರಿತ್ರೆಯನ್ನು ನಾನು ತಿಳಿದಿರುವೆನು. ನನಗೆ ಪೂರ್ವಸ್ಮರಣೆಯು ಇರುವುದು. ನೀನು ಪೂರ್ವದಲ್ಲಿ ವಿಂಧ್ಯೆಯ ರಾಜನಾಗಿದ್ದಿ. ಪರ್ವತೇಶ್ವರನೆಂದು ಹೆಸರು. ನಾನು ನಿನಗೆ ವಂಶಪುರೋಹಿತನಾಗಿದ್ದೆನು. ಆದುದರಿಂದ ಚೆನ್ನಾಗಿ ನಿನ್ನ ವಿಷಯವನ್ನು ನಾನು ತಿಳಿದಿರುವೆನು. ನೀನು ಭೂಮಿಯನ್ನು ಪರಿಪಾಲಿಸುತ್ತಿರುವಾಗ ವಿವೇಕಹೀನನಾಗಿ ಹಣವನ್ನು ಸಂಗ್ರಹಿಸಬೇಕೆಂದು ಪ್ರಜೆಗಳೆಲ್ಲರನ್ನು ಹಿಂಸಿಸಿರುವಿ. ಪ್ರಜೆಗಳನ್ನು ಪೀಡಿಸಿದ ಪಾಪದಿಂದ ಉಂಟಾದ ಅಗ್ನಿಜ್ವಾಲೆಗಳಿಂದ ಮೊದಲು ಸುಟ್ಟುಹೋದಿ. ಆಮೇಲೆ ಕುಂಭೀಪಾಕ ನರಕದಲ್ಲಿ ಬಿದ್ದಿ. ಪುನಃ ಪುನಃ ಅಳುತ್ತಾ ಕುಂಭೀಪಾಕದಲ್ಲಿ ಮೂವತ್ತು ಸಾವಿರವರ್ಷ ಇರುವವನಾದಿ. ನರಕವನ್ನು ಅನುಭವಿಸಿ ಪಾಪಶೇಷದಿಂದ ಕಪಿಯಾಗಿ ಈಗ ಹುಟ್ಟಿರುವಿ. ನನ್ನನ್ನು ಯಾಕೆ ಕೊಲ್ಲಲಿಕ್ಕೆ ಇಚ್ಛಿಸುವಿ? ನೀನು ಪೂರ್ವದಲ್ಲಿ ಒಬ್ಬ ಬ್ರಾಹ್ಮಣನ ತೋಟಕ್ಕೆ ಹೋಗಿ ಪೌರುಷದಿಂದ ಅವನ ಅನುಜ್ಞೆಯನ್ನು ಪಡೆಯದೆ ಅಲ್ಲಿದ್ದ ಬಾಳೆಹಣ್ಣುಗಳನ್ನು ತಿಂದವನಾದಿ. ಆ ಪಾಪವು ಈಗ ಫಲಿಸಿತು. ಅದರಿಂದಲೇ ಈಗ ಕಪಿಯಾಗಿರುವಿ. ಪೂರ್ವದಲ್ಲಿ ಶುಭ ಅಥವಾ ಅಶುಭ ಕರ್ಮದ ಫಲವನ್ನು ಎಲ್ಲರೂ ಅನುಭವಿಸಿಯೇ ತೀರಬೇಕು. ಈರೀತಿಯಾಗಿ ನಿನ್ನ ಜನ್ಮವಿಷಯವನ್ನು ತಿಳಿದಿರುವೆನು' ಎಂದಿತು.

ಅದಕ್ಕೆ ಕಪಿಯು 'ನೀನು ಸರಿಯಾಗಿ ತಿಳಿದವನಾಗಿರುವಿ. ನಿನಗೆ ಪಕ್ಷಿದೇಹವು ಹೇಗೆ ಬಂದಿತು?' ಎಂದು ಕೇಳಿತು.

ಸಾರಸಪಕ್ಷಿಯು 'ನಾನು ಪಕ್ಷಿಯಾಗಿ ಹುಟ್ಟಲಿಕ್ಕೆ ಕಾರಣವನ್ನು ಹೇಳುತ್ತೇನೆ. ನೀನು ಪೂರ್ವದಲ್ಲಿ ರಾಜನಾಗಿರುವಾಗ ನರ್ಮದಾನದಿಯಲ್ಲಿ ಗ್ರಹಣಕಾಲದಲ್ಲಿ ಸ್ನಾನಮಾಡಿ ನೂರು ಚೀಲಗಳಿಗಿಂತ ಹೆಚ್ಚಾಗಿಯೇ ಧಾನ್ಯಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕೆಂದು ಬಿಟ್ಟಿದ್ದಿ. ಬಹುಬ್ರಾಹ್ಮಣರಿಗೆ ದಾನಮಾಡಬೇಕೆಂದು ನಿನ್ನ ಅಭಿಪ್ರಾಯವಿದ್ದಿತು. ನಾನು ಪೌರೋಹಿತ್ಯ ಮದದಿಂದ ಲೋಭದಿಂದ ವಂಚನೆಮಾಡಿ ಬ್ರಾಹ್ಮಣರಿಗೆ ಸ್ವಲ್ಪವನ್ನೇ ಕೊಟ್ಟು ಎಲ್ಲವನ್ನು ನಾನೇ ಅಪಹರಿಸಿದೆನು. ಎಲ್ಲಾ ಬ್ರಾಹ್ಮಣರಿಗೆ ಸೇರಬೇಕಾಗಿದ್ದ ಹಣವನ್ನು ನಾನೊಬ್ಬನೇ ಅಪಹರಿಸಿದ್ದರಿಂದ ರಕ್ತದಿಂದ ಕೆಸರುಳ್ಳ ಚಂಚಲಗಳಾದ ಕ್ರಿಮಿಗಳಿಂದ ತುಂಬಿದ್ದ ಕಂಪಿನಿಂದ (ದುರ್ವಾಸನೆಯಿಂದ) ಕೂಡಿದ್ದ ಕೀವುಗಳೇ ನೊರೆಯಾಗಿ ಉಳ್ಳ ಕಾಲಸೂತ್ರ ಎಂಬ

ನರಕದಲ್ಲಿ ಬಿದ್ದೆನು. ಅದರಲ್ಲಿ ನಾಭಿಯವರೆಗೆ ಮುಳುಗಿದ್ದೆನು. ಮುಖವನ್ನು ತಗ್ಗಿಸಿಕೊಂಡು ಆ ಕೀವನ್ನೇ ನೆಕ್ಕುತ್ತಿದ್ದೆನು. ಮೇಲಿನಿಂದ ಹದ್ದುಗಳೂ ಕಾಗೆಗಳೂ ಬಂದು ಕುಕ್ಕುತ್ತಿದ್ದವು. ಕೆಳಗೆ ಕೃಮಿಗಳು ಚೆನ್ನಾಗಿ ಕಚ್ಚುತ್ತಿದ್ದವು. ಆ ರಕ್ತಮಯವಾದ ಕೆಸರಿನ ಶ್ವಾಸಬಿಡಲಿಕ್ಕೂ ಆಗುತ್ತಿದ್ದಿಲ್ಲ. ಒಂದು ಮುಹೂರ್ತವಾದದ್ದು ಒಂದು ಕಲ್ಪದಂತೆ ಆಗುತ್ತಿತ್ತು. ಮೂವತ್ತು ಸಾವಿರ ವರ್ಷ ಯಾತನೆಗಳನ್ನು ಅನುಭವಿಸಿದೆನು. ನಾನು ಅನುಭವಿಸಿದ ದುಃಖವು ಇಷ್ಟೆಂದು ಬಾಯಿಯಲ್ಲಿ ಹೇಳಲಿಕ್ಕೇ ಆಗಲಾರದು. ರಾಜರ ಹತ್ತಿರ ದಾನವನ್ನು ಪಡೆಯುವುದೇ ಮಹಾಪಾಪವು. ಅದರಿಂದ ಬ್ರಾಹ್ಮಣರು ದಗ್ಧರಾಗುವರು. ಅವರ ದ್ರವ್ಯವನ್ನು ಅಪಹರಿಸಿದ ಪುರೋಹಿತನಾದ ನಾನು ಅದರಿಂದ ನರಕವನ್ನು ಹೊಂದಿದೆನು. ರಾಜನು ಮಾಡಿದ ಪಾಪದ ಫಲವನ್ನು ಮೊದಲು ತನ್ನ ದೇಹದಲ್ಲಿ ಧರಿಸುವ ಕಾರಣವೇ ಪುರೋಹಿತರಿಗೆ ಪುರೋಧಾ ಎಂದು ಹೆಸರು ಬಂದಿರುವುದು. ದೈವೇಚ್ಛೆಯಿಂದ ಬಹುಕಷ್ಟದಿಂದ ಆ ನರಕದಿಂದ ಮೇಲೆ ಬಂದವನು ಪಕ್ಷಿಯಾಗಿ ಹುಟ್ಟಿದೆನು. ಅದಕ್ಕೆ ಕಾರಣವನ್ನು ಹೇಳುವೆನು. ನಾನು ಸಹೋದರಿಯ ಮನೆಯಿಂದ ಒಂದು ಕಂಚಿನಪಾತ್ರೆಯನ್ನು ಕದ್ದುಕೊಂಡು ತಂದು ಒಬ್ಬನಿಗೆ ಕೊಟ್ಟೆನು.

ಈರೀತಿಯಾಗಿ ಕಂಚಿನಪಾತ್ರೆಯನ್ನು ಕದ್ದಕಾರಣ ನಾನು ಪಕ್ಷಿಯಾದೆನು. ನನ್ನ ಹೆಂಡತಿಯಾದ ಇವಳೂ ಪೂರ್ವದಲ್ಲಿ ಬ್ರಾಹ್ಮಣಿಯಾಗಿದ್ದು ಒಂದು ಕಂಚಿನಪಾತ್ರೆ ಯನ್ನು ಕಳವು ಮಾಡಿದಳು. ಅದರಿಂದ ಇವಳೂ ಸಾರಸಪಕ್ಷಿಯಾಗಿರುವಳು. ಈರೀತಿಯಾಗಿ ಸಮಸ್ತ ಕರ್ಮದ ಫಲವನ್ನು ಹೇಳಿರುವೆನು. ಇನ್ನು ಮುಂದೆ ಆಗಲಿಕ್ಕೆ ಹೋಗುವ ವಿಷಯವನ್ನು ಹೇಳುತ್ತೇನೆ ಕೇಳು. ನಾನು ಹಂಸಪಕ್ಷಿಯಾಗುವೆನು. ನೀನೂ ಹಂಸಪಕ್ಷಿಯಾಗುವಿ. ನನ್ನ ಹೆಂಡತಿಯಾದ ಈ ಸಾರಸಿಯೂ ಹಂಸಿಯಾಗು ವಳು. ಕಾಮರೂಪದೇಶದಲ್ಲಿ ಸುಖವಾಗಿ ವಾಸಮಾಡುವೆವು.

ಆಮೇಲೆ ಗೋವುಗಳಾಗುವೆವು. ಆಮೇಲೆ ಮನುಷ್ಯಜನ್ಮವನ್ನು ಹೊಂದು ವೆವು. ನನ್ನ ಕರ್ಮವನ್ನು ಅನುಸರಿಸಿ ಭಗವಂತನು ಎಲ್ಲವನ್ನೂ ಮಾಡಿಸುವನು. ಅದನ್ನು ಯಾರೂ ಅತಿಕ್ರಮಿಸಲಿಕ್ಕೆ ಆಗಲಾರದು. ನೀನು ಮೊದಲು ರಾಜನಾಗಿದ್ದಿ. ಆಮೇಲೆ ನರಕವನ್ನು ಅನುಭವಿಸಿದಿ. ಈಗ ಕಪಿಯಾಗಿರುವಿ. ಹೀಗೆಲ್ಲಾ ತಿಳಿದುಕೊಂಡು ಶೋಕವನ್ನು ಹೊಂದಬೇಡ. ಕಾಡಿನಲ್ಲಿ ಸಂತೋಷಪಡುತ್ತಾ ಕಾಲವನ್ನು ನಿರೀಕ್ಷಿಸುತ್ತಿರು. ನಾನೂ ಕೂಡ ಭಗವಂತನ ಬಂಧಕಶಕ್ತಿಯಿಂದ ಬದ್ಧನಾದವನು ಧೈರ್ಯವನ್ನು ತಂದುಕೊಡು. ವನದಲ್ಲಿ ಈ ಜನ್ಮವನ್ನು

ಕಳೆಯುತ್ತಿರುವೆನು' ಎಂದಿತು.

ಆಗ ಕಪಿಯು 'ನೀನು ಪೂರ್ವದಲ್ಲಿ ನನ್ನಿಂದ ಪೂಜಿತನಾಗಿದ್ದಿ. ಈಗಲೂ ನಿನ್ನನ್ನು ಸ್ತೋತ್ರ ಮಾಡುವೆನು. ನೀನು ಪೂರ್ವಸ್ಮರಣೆಯುಳ್ಳವನಾಗಿರುವಿ. ನಿನ್ನಿಂದ ಪೂರ್ವದೇಹದ ಎಲ್ಲಾ ವಿಷಯವನ್ನು ತಿಳಿದೆನು. ಸಾರಸವೇ! ನೀನು ಸಾರಸಿಯಿಂದ ಸಹಿತನಾಗಿ ಸುಖವಾಗಿರು. ನಿನ್ನ ಮಾತಿನಿಂದ ಮೋಹರಹಿತನಾಗಿ ನಾನು ಸಂಚರಿಸುತ್ತಾ ಇರುತ್ತೇನೆ' ಎಂದು ಹೇಳಿ ಹೊರಟುಹೋಯಿತು.



# ಋಷಿತರಂಗ

## ಆರುಣಿಯು [1]

ಧೌಮ್ಯಋಷಿಗಳಿಗೆ ಮೂರು ಶಿಷ್ಯರು. ಅವರಲ್ಲಿ ಆರುಣಿಯು ಒಬ್ಬನು. ಗುರುಗಳು ಒಂದು ದಿನ ಗದ್ದೆಗೆ ಬರುವ ನೀರನ್ನು ನಿಲ್ಲಿಸಿ ಬಾ ಎಂದು ಕಳುಹಿಸಿದರು. ಆರುಣಿಯು ಗದ್ದೆಗೆ ಬರುವ ನೀರನ್ನು ನಿಲ್ಲಿಸಲಿಕ್ಕೆ ಸಾಧ್ಯವಾಗಲಿಲ್ಲ. ಎಷ್ಟು ಶ್ರಮಪಟ್ಟರೂ ನೀರನ್ನು ನಿಲ್ಲಿಸಲಿಕ್ಕೆ ಸಾಧ್ಯವಾಗಲಿಲ್ಲ. ಕೊನೆಗೆ ನೀರು ಬರುವ ದ್ವಾರದಲ್ಲಿ ಮಲಗಿಕೊಂಡನು. ಈ ಪ್ರಕಾರ ಆದ್ವಾರಕ್ಕೆ ಸರಿಯಾಗಿ ಮಲಗಲು ನೀರು ಬರುವುದು ನಿಂತು ಹೋಯಿತು. ತರುವಾಯ ಗುರುಗಳು ತನ್ನ ಇತರ ಶಿಷ್ಯರ ಹತ್ತಿರ ಆರುಣಿಯು ಎಲ್ಲಿ? ಎಂದು ಕೇಳಿದರು. ಆಗ ಶಿಷ್ಯರು 'ಗದ್ದೆಗೆ ಬರುವ ನೀರನ್ನು ನಿಲ್ಲಿಸಲಿಕ್ಕೆ ತಾವೇ ಅವನನ್ನು ಕಳುಹಿಸೋಣವಾಗಿದೆಯಷ್ಟೆ' ಎಂದರು. ಆಗ ಗುರುಗಳು ಹಾಗಾದರೆ ನಾವೆಲ್ಲರೂ ಅಲ್ಲಿಗೆ ಹೋಗುವ ಎಂದು ಹೇಳಿ ಹೊರಟುಹೋದರು. ಅಲ್ಲಿಗೆ ಹೋಗಿ ಅವನ ಹೆಸರನ್ನು ಹೇಳಿ ಕರೆದರು. 'ಮಗು! ಆರುಣಿ! ಎಲ್ಲಿ ಇದ್ದಿ? ಬಾ' ಎಂದರು.

ಗುರುಗಳ ಮಾತನ್ನು ಕೇಳಿ ಆರುಣಿಯು ಮಲಗಿದ್ದವನು ಬೇಗನೆ ಅಲ್ಲಿಂದ ಎದ್ದು ಗುರುಗಳಿದ್ದಲ್ಲಿಗೆ ಬಂದನು. ಗುರುಗಳೊಡನೆ 'ನಾನು ಇಲ್ಲಿಯೇ ಇದ್ದೇನೆ. ಗದ್ದೆಗೆ ಬರುತ್ತಾ ಇರುವ ನೀರನ್ನು ನಿಲ್ಲಿಸಲಿಕ್ಕೆ ಸಾಧ್ಯವಾಗದೆ ದ್ವಾರದಲ್ಲಿ ಮಲಗಿದ್ದೆನು. ತಮ್ಮ ಶಬ್ದವನ್ನು ಕೇಳಿ ಗದ್ದೆಯ ನೀರು ಬರುವ ಮಾರ್ಗವನ್ನು ಭೇದಿಸಿಕೊಂಡು

1. ಮ.ಭಾ. ಆ.ಪ. ಅ-3 ; ಸ್ವಪ ಅ-5

ಬಂದೆನು' ಎಂದು ಹೇಳಿದನು. 'ತಮಗೆ ನಮಸ್ಕರಿಸುತ್ತೇನೆ. ನಾನು ಏನು ಮಾಡಲಿ? ಆಜ್ಞಾ ಮಾಡಬೇಕು' ಎಂದು ಹೇಳಿದನು.

ಈ ಪ್ರಕಾರ ಹೇಳೋಣ ಗುರುಗಳು 'ಗದ್ದೆಯ ದ್ವಾರವನ್ನು ಭೇದಿಸಿಕೊಂಡು ಬಂದ ಪ್ರಕಾರ ನಿನಗೆ ಉದ್ದಾಲಕ ಎಂಬ ಹೆಸರಾಗುವುದು. ನನ್ನ ಮಾತಿನಂತೆ ನೀನು ನಡೆದ ಪ್ರಯುಕ್ತ ನಿನಗೆ ಶ್ರೇಯಸ್ಸು ಆಗುವುದು. ನಿನಗೆ ಎಲ್ಲಾ ವೇದಗಳೂ ಧರ್ಮಶಾಸ್ತ್ರಗಳೂ ತಿಳಿಯುವುವು' ಎಂದು ಅನುಗ್ರಹ ಮಾಡಿದರು. ತರುವಾಯ ಆರುಣಿಯು ಗುರುಗಳ ಸಮೀಪದಲ್ಲಿ ಸ್ವಲ್ಪ ಶಾಸ್ತ್ರ ಶ್ರವಣಮಾಡಿ ತನ್ನ ಇಷ್ಟ ದೇಶಕ್ಕೆ ಹೊರಟುಹೋದನು.



## ಉಪಮನ್ಯು [1]

ಧೌಮ್ಯಾಚಾರ್ಯರ ಇನ್ನೊಬ್ಬ ಶಿಷ್ಯನು ಉಪಮನ್ಯುವು. ಗುರುಗಳು 'ಮಗು ಉಪಮನ್ಯು! ನೀನು ದನಕಾಯು' ಎಂದು ಆಜ್ಞಾಪಿಸಿದರು. ಅವನು ಗುರುಗಳ ಮಾತಿನಂತೆ ದನಗಳನ್ನು ಮೇಯಿಸಿದನು. ಹಗಲಲ್ಲಿ ದನಗಳನ್ನು ಮೇಯಿಸಿ, ಸಾಯಂಕಾಲವಾಗಲು ಗುರುಗಳ ಮನೆಗೆ ಬಂದು ಗುರುಗಳ ಮುಂದೆ ನಿಂತು ನಮಸ್ಕಾರಮಾಡಿದನು.

ಗುರುಗಳು ಚೆನ್ನಾಗಿ ಪುಷ್ಟನಾಗಿದ್ದ ಉಪಮನ್ಯುವನ್ನು ನೋಡಿ 'ಉಪಮನ್ಯು ನೀನು ಒಳ್ಳೇ ಪುಷ್ಟನಾಗಿದ್ದಿ. ಹೇಗೆ ಜೀವಿಸುತ್ತಿರುವಿ'? ಎಂದು ಕೇಳಿದರು. ಅದಕ್ಕೆ 'ಸ್ವಾಮೀ! ನಾನು ಭಿಕ್ಷಾಕೇಳಿ ತಂದ ಅನ್ನವನ್ನು ಊಟಮಾಡುತ್ತಾ ಜೀವಿಸುತ್ತಿರುವೆನು' ಎಂದನು. ಅದಕ್ಕೆ ಗುರುಗಳು 'ನಾಳೆಯಿಂದ ಭಿಕ್ಷಾನ್ನವನ್ನು ತಂದು ನನಗೆ ತಿಳಿಸದೆ ಊಟಮಾಡಬಾರದು' ಎಂದರು. 'ಹಾಗೆಯೇ ಆಗಲಿ' ಎಂದು ಹೇಳಿ ಶಿಷ್ಯನು ಮರುದಿವಸ ಭಿಕ್ಷಾಬೇಡಿ ಅನ್ನವನ್ನು ಗುರುಗಳಿಗೆ ತಂದು ಒಪ್ಪಿಸಿದನು. ಆಗ ಗುರುಗಳು ಎಲ್ಲಾ ಅನ್ನವನ್ನೂ ತಾನೇ ಇಟ್ಟುಕೊಂಡು ನೀನು ದನವನ್ನು ಕಾಯಲಿಕ್ಕೆ ಹೋಗು ಎಂದರು. ಹಾಗೆಯೇ ಆಗಲಿ ಎಂದು ಹೇಳಿ ಶಿಷ್ಯನು ದನಗಳನ್ನು ಕಾಯುತ್ತಿದ್ದನು. ಪುನಃ ಗುರುಗಳ ಮುಂದೆ ನಿಂತು ನಮಸ್ಕಾರ ಮಾಡಿದನು. ಆಗ ಗುರುಗಳು ಮತ್ತು ಪುಷ್ಟಿಯುಳ್ಳವನಾಗಿಯೇ ಇರುವ ಶಿಷ್ಯನನ್ನು ನೋಡಿ

1. ಮಭಾ. ಆ.ಪ. ಅ-3

'ಉಪಮನ್ಯು! ನೀನು ಭಿಕ್ಷಾನ್ನವನ್ನೆಲ್ಲಾ ನಾನೇ ತೆಗೆದುಕೊಳ್ಳುತ್ತಿದ್ದೇನಲ್ಲಾ! ನೀನು ಈಗ ಹೇಗೆ ಜೀವಿಸುವಿ?' ಎಂದು ಕೇಳಿದರು. ಅದಕ್ಕೆ ಉಪಮನ್ಯುವು ನಾನು ಮೊದಲು ಭಿಕ್ಷಾ ಕೇಳಿದ ಅನ್ನವನ್ನು ತಮಗೆ ಒಪ್ಪಿಸಿ, ಪುನಃ ಇನ್ನೊಮ್ಮೆ ಭಿಕ್ಷಾ ಕೇಳಿ ಆ ಅನ್ನವನ್ನು ಊಟಮಾಡುತ್ತಿರುವೆನು' ಎಂದನು.

ಅದನ್ನು ಕೇಳಿದ ಗುರುಗಳು 'ವತ್ಸ! ನೀನು ಹಾಗೆ ಮಾಡುವುದು ಸರಿಯಲ್ಲ. ಇನ್ನೂ ನಿನ್ನಂತೆ ಭಿಕ್ಷೆಕೇಳಲಿಕ್ಕೆ ಹೋಗುವ ಬ್ರಹ್ಮಚಾರಿಗಳಿಗೆ ನಿನ್ನಿಂದ ಉಪದ್ರವವಾಗುವುದು. ಅಂದರೆ ನೀನೇ ಎರಡು ಸಲ ಭಿಕ್ಷೆಗೆ ಹೋದರೆ ಮತ್ತೆ ಬಂದ ಬ್ರಹ್ಮಚಾರಿಗಳಿಗೆ ಹಾಕಲಾರರು. ನೀನು ಹೀಗೆ ಮಾಡುವುದು ತುಂಬಾ ಲೋಭವು' ಎಂದರು. ಹಾಗೆಯೇ ಆಗಲಿ ಎಂದು ಉಪಮನ್ಯುವು ಗುರುಗಳಿಗೆ ನಮಸ್ಕರಿಸಿ ಹೊರಟುಹೋದನು.

ಪುನಃ ಹಾಗೆಯೇ ದನಗಳನ್ನು ಮೇಯಿಸಿ, ಸಾಯಂಕಾಲ ಗುರುಗಳ ಮನೆಗೆ ಬಂದು ನಮಸ್ಕರಿಸಿದನು. ಮತ್ತು ಪುಷ್ಟನಾಗಿರುವ ಶಿಷ್ಯನನ್ನು ನೋಡಿ ಮಗು ಉಪಮನ್ಯು ನೀನು ಭಿಕ್ಷಾತಂದ ಅನ್ನವನ್ನೆಲ್ಲಾ ನಾನೇ ತೆಗೆದುಕೊಳ್ಳುತ್ತಿರುವೆನು. ನೀನು ಎರಡನೇ ಬಾರಿ ಭಿಕ್ಷೆಗೆ ಹೋಗುವುದಿಲ್ಲ. ಆದರೂ ಪುಷ್ಟನಾಗಿದ್ದಿ. ಈಗ ಹೇಗೆ ಜೀವಿಸುವಿ? ಎಂದು ಕೇಳಿದರು. ಅದಕ್ಕೆ ಉಪಮನ್ಯುವು 'ಸ್ವಾಮಿ! ನಾನು ಈ ದನಗಳ ಹಾಲನ್ನು ಕರೆದು ಅದನ್ನು ಕುಡಿದು ಜೀವಿಸುತ್ತೇನೆ' ಎಂದನು. ಗುರುಗಳು 'ನೀನು ಮಾಡುವುದು ಸರಿಯಲ್ಲ. ನೀನು ಹಾಲು ಕುಡಿಯುವುದು ನ್ಯಾಯವಲ್ಲ. ನಾನು ಅಪ್ಪಣೆ ಕೊಡಲಿಲ್ಲವಲ್ಲ' ಎಂದರು. ಹಾಗೆಯೇ ಆಗಲಿ ಎಂದು ಉಪಮನ್ಯುವು ಹೊರಟುಹೋದನು.

ಆಮೇಲೆ ಸ್ವಲ್ಪ ದಿವಸಗಳ ಮೇಲೆ ಗುರುಗಳ ಸಮೀಪಕ್ಕೆ ಹೋಗಿ ಉಪಮನ್ಯುವು ನಮಸ್ಕರಿಸಿದನು. 'ವತ್ಸ ಉಪಮನ್ಯು! ನೀನು ಭಿಕ್ಷಾನ್ನವನ್ನು ಭೋಜನ ಮಾಡುವುದಿಲ್ಲ, ಎರಡನೇ ಬಾರಿ ಭಿಕ್ಷಾ ಕೇಳುವುದಿಲ್ಲ. ಹಾಲನ್ನು ಕುಡಿಯುವುದಿಲ್ಲ. ಆದರೂ ಪುಷ್ಟನಾಗಿದ್ದಿ. ಈಗ ಹೇಗೆ ಜೀವಿಸುವಿ'? ಎಂದು ಕೇಳಿದರು. ಉಪಮನ್ಯುವು 'ಕರುಗಳು ದನಗಳ ಹಾಲು ಕುಡಿಯುವಾಗ ಕರುಗಳ ಬಾಯಿಯಲ್ಲಿ ನೊರೆಯು ಸುರಿಯುವುದು. ಆ ನೊರೆಯನ್ನು ಕುಡಿದು ಜೀವಿಸುತ್ತೇನೆ ಎಂದನು. ಗುರುಗಳು 'ವತ್ಸ! ನೀನು ಮಾಡುವ ಕಾರ್ಯವು ಸರಿಯಲ್ಲ. ಒಳ್ಳೇ ಕರುಗಳು ನಿನ್ನ ಮೇಲೆ ದಯೆಯಿಂದ ತುಂಬಾ ನೊರೆಗಳನ್ನು ಬಿಡುತ್ತದೆ. ಆದುದರಿಂದ ಅವುಗಳ ಜೀವನಕ್ಕೆ ನೀನು ತುಂಬಾ ಉಪದ್ರವನ್ನು ಮಾಡುತ್ತಿ. ನೀನು ಇನ್ನು ಮುಂದೆ

ನೊರೆಯನ್ನೂ ಕುಡಿಯಬಾರದು' ಎಂದರು. ಉಪಮನ್ಯುವು ಹಾಗೆಯೇ ಆಗಲಿ ಎಂದು ಹೇಳಿ ಹೊರಟುಹೋದನು.

ಈ ಪ್ರಕಾರ ಗುರುಗಳು ಆಜ್ಞಾಪಿಸಲು ಉಪಮನ್ಯುವು ಭಿಕ್ಷಾನ್ನವನ್ನು ಊಟಮಾಡಲಿಲ್ಲ, ಎರಡನೇ ಬಾರಿ ಭಿಕ್ಷೆಯನ್ನು ಬೇಡಲಿಲ್ಲ, ದನದ ಹಾಲನ್ನು ಕುಡಿಯಲಿಲ್ಲ, ಕರುಗಳ ಬಾಯಿಯಿಂದ ಸುರಿಯುವ ನೊರೆಯನ್ನೂ ಕುಡಿಯಲಿಲ್ಲ. ಉಪವಾಸದಿಂದಲೇ ದನಗಳನ್ನು ಮೇಯಿಸುತ್ತಾ ಇದ್ದನು. ಒಂದುದಿನ ತುಂಬಾ ಹಸಿವೆಯಾಗಿ ಎಕ್ಕೆಎಲೆಯನ್ನು ತಿಂದನು. ಈ ರೀತಿ ಎಕ್ಕೆಎಲೆಗಳನ್ನು ತಿನ್ನಲು ಅವುಗಳ ತೀಕ್ಷ್ಣತೆಯಿಂದ ಅವನ ಎರಡು ಕಣ್ಣುಗಳೂ ಕಾಣಿಸದಾದವು. ಕುರುಡನಾಗಿ ಹಾಗೆಯೇ ಸಂಚರಿಸುತ್ತಾ ಹೋಗಿ ಬಾವಿಗೆ ಬಿದ್ದನು.

ತರುವಾಯ ಸಾಯಂಕಾಲವಾದರೂ ಉಪಮನ್ಯುವು ಬಾರದೆ ಇದ್ದದ್ದನ್ನು ನೋಡಿ ಗುರುಗಳು ಶಿಷ್ಯರೊಡನೆ ಉಪಮನ್ಯುವನ್ನು ನಾನು ಒಂದನ್ನೂ ತಿನ್ನಲಿಕ್ಕೆ ಬಿಡಲಿಲ್ಲವೆಂದು ಕೋಪಿಸಿಕೊಂಡಿರುವನೆಂದು ಕಾಣುತ್ತದೆ. ಆದುದರಿಂದ ಇಷ್ಟುಹೊತ್ತಾದರೂ ಬರಲಿಲ್ಲ, ನಾವು ಅವನನ್ನು ಹುಡುಕಿಕೊಂಡು ಹೋಗುವ ಎಂದು ಹೇಳಿದರು. ಹಾಗೆಯೇ ಎಲ್ಲರನ್ನೂ ಕರೆದುಕೊಂಡು ಕಾಡಿಗೆ ಹೋಗಿ 'ಮಗು! ಉಪಮನ್ಯು' ಎಲ್ಲಿರುವೆ? ಇಲ್ಲಿಗೆ ಬಾ' ಎಂದು ಕರೆದರು.

ಉಪಾಧ್ಯಾಯರ ಮಾತನ್ನು ಕೇಳಿ ಉಪಮನ್ಯುವು ನಾನು ಭಾವಿಯಲ್ಲಿ ಬಿದ್ದಿದ್ದೇನೆ ಎಂದರು. ಭಾವಿಯಲ್ಲಿ ಹೇಗೆ ಬಿದ್ದಿ? ಎಂದು ಗುರುಗಳು ಕೇಳಿದರು. ಅದಕ್ಕೆ ಉಪಮನ್ಯುವು ಹಸಿವೆಯಿಂದ ಎಕ್ಕೆಯ ಎಲೆಗಳನ್ನು ತಿಂದುಕುರುಡನಾಗಿ ಸಂಚಾರಮಾಡುತ್ತಾ ಹೋಗಿ ಭಾವಿಗೆ ಬಿದ್ದುಬಿಟ್ಟೆನು ಎಂದನು. ಗುರುಗಳು 'ದೇವವೈದ್ಯರಾದ ಅಶ್ವಿನೀದೇವತೆಗಳನ್ನು ಸ್ತೋತ್ರಮಾಡು ಅವರು ನಿನಗೆ ಕಣ್ಣನ್ನು ಕೊಡುವರು' ಎಂದು ನುಡಿದರು.

ಆದೇಪ್ರಕಾರ ಉಪಮನ್ಯುವು ವೇದಮಂತ್ರಗಳಿಂದ ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿದನು. ಆಗ ಅಶ್ವಿನೀದೇವತೆಗಳು ಅಲ್ಲಿಗೆ ಬಂದರು. ನಿನ್ನ ಸ್ತೋತ್ರದಿಂದ ಸಂತುಷ್ಟರಾಗಿದ್ದೇವೆ. ಈ ಅಪ್ಪಗಳನ್ನು ತಿನ್ನು. ನಿನಗೆ ಕಣ್ಣು ಬರುತ್ತದೆ ಎಂದರು. ಆಗ ಉಪಮನ್ಯುವು ಗುರುಗಳ ಹತ್ತಿರ ತಿಳಿಸದೆ ನಾನು ಈ ಅಪ್ಪಗಳನ್ನು ತಿನ್ನಲಾರೆನು ಎಂದನು. ಆಗ ದೇವವೈದ್ಯರು 'ಪೂರ್ವದಲ್ಲಿ ಒಂದು ಸಮಯದಲ್ಲಿ ನಿನ್ನ ಗುರುಗಳು ಹೀಗೆ ನಮ್ಮನ್ನು ಸ್ತೋತ್ರಮಾಡಿದ್ದರು. ಆಗ ನಾವು ಹೀಗೆಯೇ ಅಪ್ಪವನ್ನು ಕೊಟ್ಟಿದ್ದೆವು. ಆಗ ನಿನ್ನ ಗುರುಗಳು ತನ್ನ ಗುರುಗಳ ಹತ್ತಿರ ತಿಳಿಸದೆ

ಅಪ್ಪವನ್ನು ತಿಂದಿದ್ದಾರೆ. ಅದೇರೀತಿ ನೀನು ಮಾಡು' ಎಂದರು. ಆಗ ಉಪಮನ್ಯುವು 'ನಾನು ತಮ್ಮ ಹತ್ತಿರ ತುಂಬಾ ಕೇಳಿಕೊಳ್ಳುತ್ತೇನೆ. ಗುರುಗಳ ಹತ್ತಿರ ತಿಳಿಸದೆ ಅಪ್ಪವನ್ನು ತಿನ್ನಲಿಕ್ಕೆ ನನಗೆ ಮನಸ್ಸಿಲ್ಲ' ಎಂದನು.

ಆಗ ಅಶ್ವಿನೀದೇವತೆಗಳು 'ನಿನ್ನ ಗುರುಭಕ್ತಿಯಿಂದ ಸಂತುಷ್ಟರಾದೆವು. ನಿನ್ನ ಗುರುಗಳಿಗೆ ಕಬ್ಬಿಣದ ಹಲ್ಲುಗಳಾಗುತ್ತವೆ. ನಿನಗೆ ಬಂಗಾರದ ಹಲ್ಲುಗಳಾಗುವುವು. ನಿನ್ನ ಕಣ್ಣುಗಳು ಕಾಣಿಸುವುವು. ಶ್ರೇಯಸ್ಸನ್ನು ಹೊಂದುವಿ' ಎಂದು ಹೇಳಿದರು. ಈರೀತಿಯಾಗಿ ಅಶ್ವಿನೀದೇವತೆಗಳು ಅನುಗ್ರಹಿಸಲು ಉಪಮನ್ಯುವು ಕಣ್ಣು ಕಾಣಿಸುವಂತಾಗಲೂ ಗುರುಗಳ ಸಮೀಪಕ್ಕೆ ಹೋಗಿ ನಮಸ್ಕಾರಮಾಡಿದನು. ಎಲ್ಲಾ ವಿಷಯವನ್ನೂ ಹೇಳಿದನು. ಅದನ್ನು ಕೇಳಿ ಗುರುಗಳು ಸಂತೋಷಪಟ್ಟರು. 'ಅಶ್ವಿನೀದೇವತೆಗಳು ಹೇಳಿದಂತೆ ನಿನಗೆ ಶ್ರೇಯಸ್ಸಾಗುವುದು. ನಿನಗೆ ಎಲ್ಲಾ ವೇದಗಳು ಧರ್ಮಶಾಸ್ತ್ರವೂ ತಿಳಿಯುವುದು' ಎಂದು ಹೇಳಿದರು. ತರುವಾಯ ಉಪಮನ್ಯುವು ಗುರುಗಳೊಡನೆ ಸ್ವಲ್ಪ ಪಾಠವನ್ನು ಕೇಳಿ ಮಹಾಜ್ಞಾನಿಯಾಗಿ ಹೊರಟುಹೋದನು. ಈರೀತಿಯಾಗಿ ಉಪಮನ್ಯುವು ಗುರುಗಳ ಸೇವೆಯನ್ನು ಹೊಂದಿ ಶ್ರೇಯಸ್ಸನ್ನು ಹೊಂದಿದನು.



## ಬೈದನು [1]

ಧೌಮ್ಯಾಚಾರ್ಯರಿಗೆ ಆಪೋದ ಧೌಮ್ಯ ಎಂದು ಹೆಸರಿದ್ದಿತು. ಅವರಿಗೆ ಬೈದ ಎಂಬ ಮತ್ತೊಬ್ಬ ಶಿಷ್ಯನಿದ್ದನು. ಗುರುಗಳು ಬೈದನೊಡನೆ 'ಬೈದ' ನೀನು ನಮ್ಮ ಮನೆಯಲ್ಲಿಯೇ ಕೆಲಸಮಾಡುತ್ತಾ ಸ್ವಲ್ಪ ದಿವಸವಿರು. ನಿನಗೆ ಇದರಿಂದ ಒಳ್ಳೆಯದಾಗುವುದು ಎಂದರು.

ಬೈದನು ಹಾಗೆಯೇ ಆಗಲಿ ಎಂದು ಹೇಳಿ ಬಹುಕಾಲ ಗುರುಗಳ ಸೇವೆಯಲ್ಲಿಯೇ ಕಾಲವನ್ನು ಕಳೆದನು. ಎತ್ತಿನ ಹಾಗೆ ಗುರುಗಳ ಮನೆಯಲ್ಲಿ ಭಾರವನ್ನು ಹೊರುತ್ತಾ ಇದ್ದನು. ಛಳಿ, ಬಿಸಿಲು, ಮಳೆ ಎಲ್ಲವನ್ನೂ ಸಹಿಸಿಕೊಂಡು, ಗುರುಗಳು ಹೇಳಿದ್ದಕ್ಕೆ ಪ್ರತಿಮಾತಾಡದೆ ಗುರುಗಳ ಸೇವೆಯನ್ನು ಮಾಡಿದನು. ಹೀಗೆ ಬಹುಕಾಲ ಸೇವೆಯನ್ನು ಮಾಡಲು ಗುರುಗಳು ಸಂತುಷ್ಟರಾದರು. ಸಂತೋಷದಿಂದ

1. ಮ.ಭಾ. ಆ.ಪ. ಅ-3

ಜ್ಞಾನಬರುವಂತೆ ಅನುಗ್ರಹಮಾಡಿದರು. ಬೈದನೂ ಗುರುಗಳಿಂದ ಸ್ವಲ್ಪ ಪಾಠವನ್ನು ಕೇಳಿ ಅವರ ಅನುಗ್ರಹದಿಂದ ಸರ್ವಜ್ಞತ್ವವನ್ನು ಹೊಂದಿದನು.

ತರುವಾಯ ಗುರುಗಳ ಅನುಜ್ಞೆಯನ್ನು ಪಡೆದು ಸಮಾವರ್ತನೆ ಮಾಡಿಕೊಂಡು, ಗುರುಕುಲವಾಸದಿಂದ ಮನೆಗೆ ಬಂದು ಮದುವೆಮಾಡಿಕೊಂಡು ಸುಖದಿಂದ ಇದ್ದನು. ಅವನಿಗೂ ಮನೆಯಲ್ಲಿ ಮೂರು ಶಿಷ್ಯರು ಇದ್ದರು. ಬೈದನು ಗುರುಕುಲವಾಸದಲ್ಲಿ ಬಹಳ ಕಷ್ಟಪಟ್ಟವನಾದ ಪ್ರಯುಕ್ತ ಶಿಷ್ಯರ ಹತ್ತಿರ ಒಂದು ಕೆಲಸವನ್ನೂ ಹೇಳಲಿಲ್ಲ. ಶಿಷ್ಯರಿಗೆ ಕಷ್ಟ ಕೊಡಲಿಕ್ಕೆ ಅವರಿಗೆ ಇಚ್ಛೆಯಿರಲಿಲ್ಲ.



## ಉತ್ತಂಕರು [1]

ಬೈದಋಷಿಗಳನ್ನು ಜನಮೇಜಯರಾಜ, ಪೌಷ್ಯರಾಜ ಇಬ್ಬರೂ ಕೂಡ ಪೌರೋಹಿತ್ಯಕ್ಕೆ ಸ್ವೀಕಾರ ಮಾಡಿದ್ದರು. ಆ ಋಷಿಗಳು ಒಂದು ದಿವಸ ಯಜ್ಞಕಾರ್ಯಕ್ಕೆ ಹೋಗಬೇಕಾದ ಸಂದರ್ಭವು ಬರಲು ತನ್ನ ಶಿಷ್ಯನಾದ ಉತ್ತಂಕರೊಡನೆ 'ಮನೆಯಲ್ಲಿ ಯಾವುದು ಕಡಿಮೆಯಾಗುತ್ತದೋ ಅದನ್ನು ಪೂರಯಿಸು' ಎಂದು ಹೇಳಿ ಹೊರಟುಹೋದನು.

ಉತ್ತಂಕರು ಗುರುಗಳ ಆಜ್ಞೆಯಂತೆ ಮಾಡುತ್ತಾ ಗುರುಗಳ ಮನೆಯಲ್ಲಿ ಇದ್ದರು. ಒಂದುದಿವಸ ಕೆಲವು ಹೆಂಗಸರು ಬಂದು ಗುರುಗಳ ಪತ್ನಿಗೆ ಋತುಕಾಲವಾಗಿದೆ. ಗುರುಗಳು ಪರಸ್ಥಳಕ್ಕೆ ಹೋಗಿದ್ದಾರೆ. ಆದುದರಿಂದ ಅವರ ಋತುವನ್ನು ಸಾರ್ಥಕಮಾಡಬೇಕು ಎಂದರು. ಅದನ್ನು ಕೇಳಿ ಉತ್ತಂಕರು 'ನಿಮ್ಮ ಹೆಂಗಸರ ಮಾತು ಕೇಳಿ ನಾನು ಅಂತಹ ಅಕಾರ್ಯವನ್ನು ಮಾಡಲಾರೆನು. ಉಪಾಧ್ಯಾಯರು ಹೋಗುವಾಗ ಅಂತಹ ಅಕಾರ್ಯವನ್ನು ಮಾಡಬೇಕೆಂದು ಹೇಳಿಲ್ಲ' ಎಂದುಬಿಟ್ಟರು. ಗುರುಗಳು ಬಂದ ಮೇಲೆ ಈ ವಿಷಯವನ್ನು ತಿಳಿಸಿದರು. ಗುರುಗಳು ತುಂಬಾ ಸಂತೋಷಪಟ್ಟರು. ಗುರುಗಳ 'ವತ್ಸ ಉತ್ತಂಕ! ಧರ್ಮದಿಂದ ನನ್ನ ಸೇವಾಮಾಡಿದ್ದಿ. ತುಂಬಾ ಸಂತೋಷ. ನಿನಗೆ ನಾನು ಏನು ಪ್ರಿಯ ಮಾಡಲಿ? ನಮ್ಮಿಬ್ಬರಿಗೂ ಪರಸ್ಪರ ತುಂಬಾ ಪ್ರೀತಿ ಹೆಚ್ಚಾಗಿದೆ. ನೀನು ಎಲ್ಲಾ ಅಭೀಷ್ಟವನ್ನು ಹೊಂದುವಿ. ನೀನು ಮನೆಗೆ ಹೋಗಬಹುದು' ಎಂದರು.

1. ಮ.ಭಾ. ಆಪ. ಅ-3

ಆಗ ಉತ್ತಂಕರು 'ಶಿಷ್ಯರು ಗುರುಗಳಿಗೆ ಗುರುದಕ್ಷಿಣೆಯನ್ನು ಶಿಷ್ಯನು ಅಧರ್ಮದಿಂದ ಕೇಳಿದಂತೆ ಆಗುವುದು. ಗುರುಗಳು ಅಧರ್ಮದಿಂದ ಹೇಳಿದಂತೆ ಆಗುವುದು. ಇದರಿಂದ ಇವರಲ್ಲಿ ಯಾರಾದರೂ ಒಬ್ಬನು ಮರಣವನ್ನು ಹೊಂದುವನು. ದ್ವೇಷವನ್ನೂ ಹೊಂದುವನು. ಆದುದರಿಂದ ತಮಗೆ ಬೇಕಾದ ವಸ್ತುವನ್ನು ಗುರುದಕ್ಷಿಣೆಯನ್ನು ಕೊಡಬೇಕೆಂದು ಅಪೇಕ್ಷಿಸುತ್ತೇನೆ ಎಂದರು. ಆಗ ಗುರುಗಳು ವತ್ಸ ಉತ್ತಂಕ! ಸ್ವಲ್ಪ ದಿವಸ ಇಲ್ಲೇ ಇರು ಎಂದರು. ಸ್ವಲ್ಪ ದಿವಸವಾಗಲು ಪುನಃ ಉತ್ತಂಕರು ಗುರುಗಳ ಬಳಿಗೆ ನಡೆದು ನಾನು ತಮಗೆ ಏನು ಗುರುದಕ್ಷಿಣೆಕೊಡಲಿ ಎಂದು ಕೇಳಿದರು. ಗುರುಗಳು 'ವತ್ಸ ಉತ್ತಂಕ! ಬಹುಬಾರಿ ನನ್ನ ಹತ್ತಿರ ಗುರುದಕ್ಷಿಣೆಯನ್ನು ಕೊಡುತ್ತೇನೆ ಎನ್ನುವಿ. ಹಾಗಾದರೆ ಒಳಗೆ ಹೋಗಿ ನನ್ನ ಹೆಂಗಸಿನ ಹತ್ತಿರ ಏನು ತಂದುಕೊಡಲಿ? ಎಂದು ಕೇಳು. ಅವಳು ಏನು ಹೇಳುತ್ತಾಳೋ ಅದನ್ನು ತಂದುಕೊಡು' ಎಂದನು.

ಉತ್ತಂಕರು ಗುರುಪತ್ನಿಯ ಬಳಿಗೆ ಹೋಗಿ 'ಅಮ್ಮ! ಗುರುಗಳು ನನಗೆ ಮನೆಗೆ ಹೋಗಲು ಅನುಜ್ಞೆ ಕೊಟ್ಟಿದ್ದಾರೆ. ಹೋಗುವಾಗ ಗುರುದಕ್ಷಿಣೆಯನ್ನು ಕೊಟ್ಟು ಋಣಪರಿಹಾರ ಮಾಡಿಕೊಂಡು ಹೋಗಬೇಕು ಎಂದು ಇದ್ದೇನೆ. ಆದುದರಿಂದ ಏನನ್ನು ಗುರುದಕ್ಷಿಣೆ ಕೊಡಲಿ ಎಂದು ತಾವು ಹೇಳಬೇಕು' ಎಂದು ಕೇಳಿದರು.

ಆಗ ಗುರುಪತ್ನಿಯು 'ಪೌಷ್ಯರಾಜನ ಬಳಿಗೆ ಹೋಗು. ಅವನ ಹೆಂಡತಿಯ ಕಿವಿಯಲ್ಲಿ ಧರಿಸಿರುವ ತೋಡನ್ನು (ಬೆಂಡೋಲೆಯನ್ನು) ತೆಗೆದುಕೊಂಡು ಬಾ. ಈ ದಿನದಿಂದ ನಾಲ್ಕನೇ ದಿನದಲ್ಲಿ ನಮ್ಮಲ್ಲಿ ಒಂದು ಪುಣ್ಯಕಾರ್ಯವು ನಡೆಯುತ್ತಿರುವುದು. ಆ ದಿನ ನಾನು ಆ ತೋಡುಗಳನ್ನು ಹಾಕಿಕೊಂಡು ಬ್ರಾಹ್ಮಣರಿಗೆ ಬಡಿಸಬೇಕೆಂದು ಆಸೆಪಡುವೆನು. ಆದುದರಿಂದ ಬೇಗನೆ ಹೋಗಿ ಆ ತೋಡುಗಳನ್ನು ತಂದುಕೊಡು. ಹಾಗೆ ಮಾಡಿದರೆ ಮಾತ್ರ ನಿನಗೆ ಶ್ರೇಯಸ್ಸಾಗುವುದು. ಇಲ್ಲದ್ದಿದರೆ ನಿನಗೆ ಹೇಗೆ ಶ್ರೇಯಸ್ಸಾಗುವುದು'? ಎಂದು ಹೇಳಿದಳು.

ಈ ರೀತಿಯಾಗಿ ಗುರುಪತ್ನಿಯು ಹೇಳಲು, ಹಾಗೆಯೇ ಆಗಲಮ್ಮ ಎಂದು ಹೇಳಿ ಉತ್ತಂಕರು ಹೊರಟುಹೋದರು. ಹೋಗುವಾಗ ದಾರಿಯಲ್ಲಿ ಒಂದು ದೊಡ್ಡ ಎತ್ತನ್ನು ಅದರ ಮೇಲೆ ಕೂತಿರುವ ಒಬ್ಬ ದೊಡ್ಡ ಪುರುಷನನ್ನೂ ನೋಡಿದರು. ಆ ದೊಡ್ಡ ಪುರುಷನು ಉತ್ತಂಕರನ್ನು ನೋಡಿ. ಉತ್ತಂಕ! ನೀನು ಈ ಎತ್ತಿನ ಸೆಗಣಿಯನ್ನು ತಿನ್ನು ಎಂದನು. ಉತ್ತಂಕರು ಎತ್ತಿನ ಸೆಗಣಿಯನ್ನು ತಿನ್ನಲು ಇಚ್ಛಿಸಲಿಲ್ಲ. ಆಗ ಆ ಪುರುಷನು 'ಉತ್ತಂಕ! ಸೆಗಣಿಯನ್ನು ತಿನ್ನು. ವಿಚಾರಮಾಡಬೇಡ. ನಿನ್ನ ಗುರುಗಳೂ

ತಿಂದಿದ್ದಾರೆ' ಎಂದನು. ಈ ಪ್ರಕಾರ ಹೇಳೋಣ ಉತ್ತಂಕರು ಹಾಗೆಯೇ ಆಗಲಿ ಎಂದು ಹೇಳಿ ಸೆಗಣಿಯನ್ನು ತಿಂದು, ಆ ಎತ್ತಿನ ಮೂತ್ರವನ್ನೂ ಕುಡಿಯುವವರಾಗಿ, ಅವಸರದಿಂದ ಆಚಮನ ಮಾಡದೆ ಹೊರಟುಹೋದನು.

ಪೌಷ್ಯರಾಜನಲ್ಲಿದ್ದಲ್ಲಿಗೆ ಹೋಗಿ ಉತ್ತಂಕರು ಆಶೀರ್ವಾದ ಮಾಡಿ ನಾನು ನಿನ್ನೊಡನೆ ಯಾಚನೆ ಮಾಡಲಿಕ್ಕೆ ಬಂದಿದ್ದೇನೆ. ನಿನ್ನ ಪತ್ನಿಯು ಧರಿಸಿರುವ ತೋಡುಗಳನ್ನು ಗುರುದಕ್ಷಿಣೆ ಕೊಡಲಿಕ್ಕಾಗಿ ನೀನು ಕೊಡಬೇಕು ಎಂದು ಹೇಳಿದರು. ಅಂತಃಪುರಕ್ಕೆ ಹೋಗಿ ನೀವೇ ಅವಳ ಹತ್ತಿರ ಕೇಳಿರಿ ಎಂದನು. ಉತ್ತಂಕರು ಒಳಗೆ ಹೋಗಲು ರಾಜಪತ್ನಿಯು ಕಣ್ಣಿಗೆ ಬೀಳಲಿಲ್ಲ. ಉತ್ತಂಕರು ರಾಜನಬಳಿಗೆ ಬಂದು 'ರಾಜನ್! ನೀನು ಈರೀತಿ ಸುಳ್ಳು ಹೇಳುವುದು ಸರಿಯಲ್ಲ. ಅಂತಃಪುರದಲ್ಲಿ ನಿನ್ನ ಪತ್ನಿಯು ಇಲ್ಲ. ನನ್ನ ಕಣ್ಣಿಗೆ ಬೀಳಲಿಲ್ಲ' ಎಂದರು. ಅದಕ್ಕೆ ನೀವು ಏನೋ ತಿಂದು ಆಚಮನೆ ಮಾಡದೆ ಇರಬೇಕು. ಪತಿವ್ರತೆಯಾದ ಅವಳನ್ನು ಅಶುಚಿಯಿಂದ ಇರುವಾಗ ನೋಡಲಿಕ್ಕೆ ಆಗಲಾರದು ಎಂದನು.

ಅದಕ್ಕೆ ಉತ್ತಂಕರು ಜ್ಞಾಪಿಸಿಕೊಂಡು 'ಹೌದು ನಾನು ದಾರಿಯಲ್ಲಿ ಬರುವಾಗ ತಿಂದದ್ದು ಉಂಟು. ಆಚಮನ ಮಾಡಿಲ್ಲ. ಎಂದು ಹೇಳಿ ಆಚಮನ ಮಾಡಿದರು. ಆಮೇಲೆ ಅಂತಃಪುರಕ್ಕೆ ಹೋಗಿ ರಾಜಪತ್ನಿಯನ್ನು ನೋಡಿದರು. ರಾಜಪತ್ನಿಯು ಬಂದು ನಮಸ್ಕರಿಸಿ 'ಪೂಜ್ಯರೇ ಬರಬೇಕು. ತಮಗೆ ಏನು ಸೇವಾಮಾಡಲಿ? ಆಜ್ಞಾಪಿಸಬೇಕು' ಎಂದಳು. ಆಗ ಉತ್ತಂಕರು ನಮ್ಮ ಗುರುಗಳಿಗೆ ದಕ್ಷಿಣೆಯಾಗಿ ಕೊಡಲಿಕ್ಕೆ ನಿನ್ನ ಕಿವಿಯಲ್ಲಿರುವ ತೋಡನ್ನು ಕೊಡಬೇಕೆಂದು ಹೇಳಿದರು. ಆಗ ರಾಜಪತ್ನಿಯು ಪ್ರೀತಳಾಗಿ ಒಳ್ಳೆ ಸತ್ಪಾತ್ರರು ಬಂದಿದ್ದಾರೆ ಎಂದು ತಿಳಿದುಕೊಂಡು, ತೋಡನ್ನು ಕಿವಿಯಿಂದ ತೆಗೆದುಕೊಟ್ಟು 'ಈ ತೋಡುಗಳನ್ನು ನಾಗರಾಜನಾದ ತಕ್ಷಕನು ತುಂಬಾ ಅಪೇಕ್ಷಿಸುತ್ತಾನೆ. ಆದುದರಿಂದ ತಾವು ತುಂಬಾ ಜಾಗ್ರತೆಯಿಂದ ತೆಗೆದುಕೊಂಡು ಹೋಗಬೇಕು' ಎಂದಳು. ಆಗ ಉತ್ತಂಕರು 'ನೀನು ನಿಶ್ಚಿಂತ ಳಾಗಿರು. ನನ್ನನ್ನು ತಕ್ಷಕನು ಎದುರಿಸಲಿಕ್ಕೆ ಆಗಲಾರದು. ನಾನು ಹೋಗಿಬರುತ್ತೇನೆ' ಎಂದು ಹೇಳಿ ಪೌಷ್ಯರಾಜನಿದ್ದಲ್ಲಿಗೆ ಬಂದರು. ರಾಜನ್ 'ನನಗೆ ತುಂಬಾ ಸಂತೋಷವಾಯಿತು' ಎಂದರು.

ರಾಜನು 'ತಾವು ಬಹುಕಾಲದ ಮೇಲೆ ಬಂದಿದ್ದೀರಿ. ನೀವು ಒಳ್ಳೆ ಗುಣವಂತ ರಾದ ಅತಿಥಿಗಳಾಗಿದ್ದೀರಿ. ತಾವು ಬಂದಿರುವ ಸಮಯವೇ ಶ್ರಾದ್ಧವನ್ನು ಮಾಡಬೇಕೆಂದು ಇದ್ದೇನೆ. ತಾವು ಕ್ಷಣವನ್ನು ಸ್ವೀಕರಿಸಬೇಕು ಎಂದನು. ಉತ್ತಂಕರು

'ನಾನು ಸಿದ್ಧನಾಗಿಯೇ ಇದ್ದೇನೆ. ಬೇಗನೆ ಯೋಗ್ಯವಾದ ಅನ್ನದಿಂದ ಭೋಜನ ಮಾಡಿಸು' ಎಂದರು. ರಾಜನು ಹಾಗೆಯೇ ಆಗಲಿ ಭೋಜನ ಮಾಡಿಸಿದನು.

ಉತ್ತಂಕರು ಎಲೆಯಲ್ಲಿ ಆರಿದ ಅನ್ನವನ್ನೂ ಅದರಲ್ಲಿ ತಲೆಕೂದಲನ್ನೂ ನೋಡಿ ಇದು ಅಪವಿತ್ರವಾದ ಅನ್ನವೆಂದು ತಿಳಿದುಕೊಂಡು, ರಾಜನ್ ನೀನು ನನಗೆ ದುಷ್ಟವಾದ ಅನ್ನವನ್ನು ಹಾಕಿದಿಯಾದ ಕಾರಣ ನೀನು ಕುರುಡನಾಗುವಿ ಎಂದರು. ಆಗ ರಾಜನು ನೀವು ಒಳ್ಳೆಯ ಅನ್ನವನ್ನು ದೂಷಿಸಿದಿರಿ. ಆದುದರಿಂದ ನಿಮಗೆ ಮಕ್ಕಳಾಗದೆ ಹೋಗುವುದು' ಎಂದನು.

ಆಗ ಉತ್ತಂಕರು ನೀನು ಅಶುದ್ಧವಾದ ಅನ್ನವನ್ನು ಹಾಕಿ ಪ್ರತಿಶಾಪವನ್ನೂ ಕೊಡುವುದು ನ್ಯಾಯವಲ್ಲ. ನೀನೇ ಈ ಅನ್ನವನ್ನು ನೋಡು ಎಂದರು. ಆಗ ರಾಜನು ಅನ್ನವನ್ನು ಪರೀಕ್ಷಾ ಮಾಡಿ ಅಶುದ್ಧವಾಗಿದೆಯೆಂದು ತಿಳಿದುಕೊಂಡನು. ತಲೆಬಿಚ್ಚಿಕೊಂಡು ಅನ್ನವನ್ನು ತಂದ ಪ್ರಯುಕ್ತ ಇದರಲ್ಲಿ ಕೂದಲು ಬಿದ್ದಿದೆ ಎಂದು ತಿಳಿದುಕೊಂಡು, ಸ್ವಾಮಿಯೆ! ತಿಳಿಯದೆ ಕೂದಲಿನಿಂದ ಸಹಿತವಾದ ಆರಿದ ಅನ್ನವನ್ನು ತಮಗೆ ಹಾಕೋಣವಾಯಿತು. ತಾವು ಕ್ಷಮಿಸಬೇಕು. ನಾನು ಕುರುಡನಾಗದಂತೆ ಮಾಡಬೇಕು ಎಂದು ಕೇಳಿಕೊಂಡನು.

ಆಗ ಉತ್ತಂಕರು ನಾನು ಹೇಳಿದ ಮಾತು ಸುಳ್ಳಾಗಲಾರದು. ಒಂದು ಬಾರಿ ಕುರುಡನಾಗಿ, ಬೇಗನೆ ಕಣ್ಣುಳ್ಳವನಾಗುವಿ. ನೀನು ನನಗೆ ಕೊಟ್ಟ ಶಾಪವನ್ನು ಪರಿಹಾರ ಮಾಡು ಎಂದರು.

ಆಗ ರಾಜನು ನಾನು ಕೊಟ್ಟ ಶಾಪವನ್ನು ಪರಿಹಾರ ಮಾಡಲಿಕ್ಕೆ ಶಕ್ತನಾಗಿಲ್ಲ. ಏಕೆಂದರೆ ನನಗೆ ಇನ್ನೂ ನಿಮ್ಮ ಮೇಲೆ ಉಂಟಾದ ಕೋಪವು ಶಾಪವಾಗಿಲ್ಲ, ತಮಗೆ ಈ ವಿಷಯವು ತಿಳಿಯಲಿಲ್ಲವಾ? ಬ್ರಾಹ್ಮಣರ ಮನಸ್ಸು ಬೆಣ್ಣೆಯಂತೆ ಇರುವುದು. ಮಾತು ಕತ್ತಿಯಂತೆ ಇರುವುದು. ಕ್ಷತ್ರಿಯರಿಗೆ ಹಾಗಲ್ಲ. ಮಾತು ಬೆಣ್ಣೆಯಂತೆ. ಮನಸ್ಸು ಕತ್ತಿಯಂತೆ. ಆದುದರಿಂದ ನಾನು ನಿಮಗೆ ಕೊಟ್ಟ ಶಾಪವನ್ನು ಪರಿಹಾರಮಾಡಲಿಕ್ಕೆ ಸಾಧ್ಯವಿಲ್ಲ, ನೀವು ಹೊರಟು ಹೋಗಿರಿ ಎಂದನು.

ಅದಕ್ಕೆ ಉತ್ತಂಕರು 'ಅನ್ನವನ್ನು ಅಶುದ್ಧವಾಗಿರುವುದನ್ನು ನಿನಗೆ ತೋರಿಸಿಯೇ ನಿನ್ನನ್ನು ಸಮಾಧಾನಪಡಿಸಿದ್ದೇನೆ. ನೀನಾದರೂ ಅದುಷ್ಟವಾದ ಅನ್ನವನ್ನು ದೂಷಿಸಿದ ಕಾರಣ ಮಕ್ಕಳಿಲ್ಲದೆ ಹೋಗಲಿ ಎಂದು ಶಾಪವನ್ನು ಕೊಟ್ಟಿರುವಿ. ನಿನ್ನ ಅನ್ನವು ದುಷ್ಟವಾಗಿರುವ ಪ್ರಯುಕ್ತ ನಿನ್ನ ಶಾಪವು ಫಲಿಸಲಾರದು. ನಾನು ಹೋಗಿಬರುವೆನು ಎಂದು ಹೇಳಿಹೋದರು. ಅವರು ಹೋಗುವಾಗ ತನ್ನ ಹಿಂದೆಯೇ ದೂರದಲ್ಲಿ

ಮಧ್ಯೇ ಕಾಣಿಸುತ್ತಾ ಮಧ್ಯೆ ಮಧ್ಯೆ ಕಾಣಿಸದೆಯೂ ಇರುತ್ತಾ ಬರುವ ದಿಗಂಬರನಾದ ಜೈನ ಸನ್ಯಾಸಿಯನ್ನು ನೋಡಿದರು.

ಉತ್ತಂಕರು ತೋಡುಗಳನ್ನು ಭೂಮಿಯಲ್ಲಿ ಇಟ್ಟು ಮೂತ್ರವಿಸರ್ಜಕ್ಕೆಗೆ ಕೂತುಕೊಂಡರು. ಆಗ ಆ ಜೈನಸನ್ಯಾಸಿಯ ವೇಷದಿಂದ ಇದ್ದ ತಕ್ಷಕನು ಓಡಿಬಂದು, ಆ ತೋಡುಗಳನ್ನು ಹಿಡಿದುಕೊಂಡು ಓಡಿಹೋದನು. ಉತ್ತಂಕರು ಬೇಗನೆ ಎದ್ದು ಶುದ್ಧಿಮಾಡಿಕೊಡು ಆಚಮನೆ ಮಾಡಿ ದೇವತೆಗಳಿಗೂ ಗುರುಗಳಿಗೂ ನಮಸ್ಕಾರ ಮಾಡಿ ಹಿಂದೆಯೇ ಓಡಿದರು.

ಆ ಜೈನಸನ್ಯಾಸಿಯು ತುಂಬ ಹತ್ತಿರವಾಗಲು ಉತ್ತಂಕರು ಅವನನ್ನು ಹಿಡಿದರು. ಹಿಡಿದ ಕೂಡಲೇ ಆ ಸನ್ಯಾಸಿರೂಪವನ್ನು ಬಿಟ್ಟು ತಕ್ಷಕ ರೂಪವನ್ನೇ ಧರಿಸಿ ಭೂಮಿಯಲ್ಲಿರುವ ಒಂದು ಬಿಲವನ್ನು ಪ್ರವೇಶಿಸಿದನು. ತನ್ನ ಲೋಕವಾದ ನಾಗಲೋಕಕ್ಕೆ ಹೋದನು. ಉತ್ತಂಕರು ರಾಜಪತ್ನಿಯ ಮಾತನ್ನು ಸ್ಮರಿಸಿಕೊಂಡು ತಕ್ಷಕನನ್ನು ಅನುಸರಿಸಿ ಹೋದನು.

ಉತ್ತಂಕರು ತನ್ನ ದಂಡದಿಂದ ಆ ಬಿಲವನ್ನು ಆಗೆಯಲಿಕ್ಕೆ ಆರಂಭಿಸಿದರು. ಶ್ರಮಪಡುತ್ತಿರುವ ಉತ್ತಂಕರನ್ನು ನೋಡಿ ಇಂದ್ರದೇವರು ವಜ್ರಾಯುಧವನ್ನು ಸಹಾಯಕ್ಕೆ ಕಳುಹಿಸಿದರು. ಆ ವಜ್ರವು ಉತ್ತಂಕರ ದಂಡವನ್ನು ಪ್ರವೇಶಿಸಿ ಆ ಬಿಲದ್ವಾರವನ್ನು ದೊಡ್ಡದಾಗಿ ಮಾಡಿತು.

ಉತ್ತಂಕರು ಆ ಬಿಲದ್ವಾರದಿಂದ ನಾಗಲೋಕಕ್ಕೆ ಹೋದರು. ಅಲ್ಲಿ ನಾಗಗಳನ್ನು ನಾನಾವಿಧವಾಗಿ ಸ್ತೋತ್ರಮಾಡಿದರು. ಹೀಗೆ ಸ್ತೋತ್ರಮಾಡಿದರೂ ಉಕ್ತಂಕರಿಗೆ ತೋಡುಗಳು ಲಭಿಸಲಿಲ್ಲ. ಆಗ ಯೋಚನೆ ಮಾಡಿದರು. ಆ ಸಮಯದಲ್ಲಿ ಇಬ್ಬರು ಸ್ತ್ರೀಯರು ವಸ್ತ್ರವನ್ನು ನೇಯುತ್ತಿದ್ದರು. ಬಿಳಿನೂಲುಗಳೂ ಕಪ್ಪುನೂಲುಗಳೂ ಇದ್ದವು. ಅಲ್ಲಿ ಒಂದು ಚಕ್ರವೂ ಇತ್ತು. ಅದಕ್ಕೆ ಹನ್ನೆರಡು ಗೂಟಗಳಿದ್ದವು. ಆರು ಕುಮಾರರು ಅದನ್ನು ತಿರುಗಿಸುತ್ತಿದ್ದರು. ಅಲ್ಲಿ ಒಬ್ಬ ಪುರುಷನೂ, ಒಂದು ಸುಂದರವಾದ ಕುದುರೆಯೂ ಇದ್ದಿತು. ಅವರನ್ನು ನೋಡಿ ಉತ್ತಂಕರು ಎಲ್ಲರನ್ನೂ ಸ್ತೋತ್ರಮಾಡಿದರು.

ಆಗ ಅಲ್ಲಿದ್ದ ಪುರುಷನು 'ನಿನ್ನ ಸ್ತೋತ್ರದಿಂದ ಸಂತೋಷವನ್ನು ಹೊಂದಿದೆನು. ನಿನಗೇನು ಪ್ರಿಯವನ್ನು ಮಾಡಲಿ'? ಎಂದು ಕೇಳಿದನು. ಅದಕ್ಕೆ ಉತ್ತಂಕರು 'ಸರ್ಪಗಳೆಲ್ಲಾ ನನ್ನ ವಶವಾಗಬೇಕು' ಎಂದರು. ಆಗ ಪುರುಷನು 'ಈ ಕುದುರೆಯ ಪೃಷ್ಠಭಾಗವನ್ನೂ ಊದು' ಎಂದರು. ಉತ್ತಂಕರು ಆ ಕುದುರೆಯ ಪೃಷ್ಠಭಾಗವನ್ನು ಊದಲು, ಆ ಕುದುರೆಯ ಸರ್ವದ್ವಾರಗಳಿಂದಲೂ ಹೊಗೆಗಳೂ ಬೆಂಕಿಯ

ಕಿಡಿಗಳೂ ಹೊರಗೆ ಬಂದವು. ಆ ಹೊಗೆಯಿಂದ ಮತ್ತು ಬೆಂಕಿಯ ಕಿಡಿಗಳಿಂದ ನಾಗಲೋಕವು ವ್ಯಾಪಿಸಿತು. ಆಗ ತಕ್ಷಕನು ಅಗ್ನಿಯ ಭಯದಿಂದ ವಿಷಾದವನ್ನು ಹೊಂದಿ ಆ ತೋಡುಗಳನ್ನು ಹಿಡಿದುಕೊಂಡು ಮನೆಯಿಂದ ಹೊರಗೆ ಬಂದು 'ಈ ತೋಡುಗಳನ್ನು ತೆಗೆದುಕೊ' ಎಂದು ಉತ್ತಂಕರಿಗೆ ಕೊಟ್ಟನು.

ಉತ್ತಂಕರು ತೋಡುಗಳನ್ನು ಹಿಡಿದುಕೊಂಡು 'ಗುರುಪತ್ನಿಯು ಹೇಳಿದ ಪುಣ್ಯಕಾರ್ಯವು ಈ ದಿವಸವೇ ನಡೆಯುವುದು. ನಾನು ಬಹುದೂರ ಬಂದಿದ್ದೇನಲ್ಲಾ. ಹೇಗೆ ಬೇಗನೆ ಹೋಗಿ ಸೇರಲಿ' ಎಂದು ಯೋಚಿಸಿದರು. ಆಗ ಅಲ್ಲಿರುವ ಪುರುಷನು 'ಉತ್ತಂಕ! ಈ ಕುದುರೆಯ ಮೇಲೆ ಕೂತುಕೊ ಒಂದೇ ಕ್ಷಣದಲ್ಲಿ ಗುರುಗಳ ಮನೆಗೆ ಹೋಗಿ ಸೇರುವೆ' ಎಂದನು. ಹಾಗೆಯೇ ಆಗಲಿ ಎಂದು ಉತ್ತಂಕರು ಆ ಕುದುರೆಯ ಮೇಲೆ ಕೂತುಕೊಂಡು ಆಗಲೇ ಗುರುಗಳ ಮನೆಗೆ ಹೋಗಿ ಸೇರಿದರು. ಆ ಸಮಯದಲ್ಲಿ ಗುರುಪತ್ನಿಯು ಮಂಗಳಸ್ನಾನ ಮಾಡಿ, ತಲೆಕೂದಲು ಆರಿಸಿಕೊಳ್ಳುತ್ತಾ ಕೂತುಕೊಂಡು, ಉತ್ತಂಕನು ಇನ್ನೂ ಬರಲಿಲ್ಲ. ಅವನಿಗೆ ನಾನು ಶಾಪವನ್ನು ಕೊಡುವೆನು, ಎಂದು ಯೋಚಿಸಿದಳು.

ಆ ಸಮಯಕ್ಕೆ ಸರಿಯಾಗಿ ಉತ್ತಂಕರು ಬಂದು ಗುರುಪತ್ನಿಗೆ ನಮಸ್ಕಾರ ಮಾಡಿದರು. ತೋಡುಗಳನ್ನು ಕೊಟ್ಟರು. ಆಗ ಗುರುಪತ್ನಿಯು ಆ ತೋಡುಗಳನ್ನು ಸ್ವೀಕರಿಸಿ 'ಮಗು ಉತ್ತಂಕ! ಬಾ1 ಈಗ ನೀನು ಬಾರದೆ ಇದ್ದಿದ್ದರೆ ನಾನು ನಿನಗೆ ಶಾಪವನ್ನು ಕೊಡುತ್ತಿದ್ದೆನು. ಸರಿಯಾದ ಸಮಯಕ್ಕೆ ಬಂದಿ. ನಿನಗೆ ಶ್ರೇಯಸ್ಸು ಸಮೀಪಿಸಿದೆ. ಸಿದ್ಧಿಯನ್ನು ಹೊಂದು ಎಂದಳು.

ಆಮೇಲೆ ಉತ್ತಂಕರು ಗುರುಗಳಿಗೆ ನಮಸ್ಕಾರ ಮಾಡಿದರು. ಗುರುಗಳು ವತ್ಸ! ಉತ್ತಂಕ! ಬಾ. ಯಾಕೆ ಇಷ್ಟು ಸಮಯಮಾಡಿದಿ?' ಎಂದರು. ಅದಕ್ಕೆ ಉತ್ತಂಕರು 'ನಾಗರಾಜನಾದ ತಕ್ಷಕನು ನನಗೆ ದಾರಿಯಲ್ಲಿ ವಿಘ್ನಮಾಡಿದನು. ಅದರಿಂದ ನಾನು ನಾಗಲೋಕಕ್ಕೆ ಹೋದೆನು ಅಲ್ಲಿ ನಾನು ಇಬ್ಬರು ಹೆಂಗಸರು ವಸ್ತ್ರವನ್ನು ನೇಯುತ್ತಿರುವುದನ್ನೂ, ಆ ವಸ್ತ್ರದಲ್ಲಿ ಬಳಿ ಕಪ್ಪು ನೂಲುಗಳನ್ನೂ, ಅಲ್ಲಿ ಒಂದು ಚಕ್ರವನ್ನೂ ಆ ಚಕ್ರದಲ್ಲಿ ಹನ್ನೆರಡು ಗೂಟಗಳನ್ನೂ ಆ ಚಕ್ರವನ್ನು ಆರು ಕುಮಾರರು ತಿರುಗಿಸುತ್ತಿರುವುದನ್ನೂ, ಒಬ್ಬ ಪುರುಷನನ್ನೂ ಒಂದು ದೊಡ್ಡ ಕುದುರೆಯನ್ನೂ ನೋಡಿದೆನು. ಅದೆಲ್ಲಾ ಯಾರು? ಮತ್ತು ದಾರಿಯಲ್ಲಿ ಹೋಗುವಾಗ ಒಂದು ದೊಡ್ಡ ಎತ್ತನ್ನು ನೋಡಿದೆನು. ಆ ಎತ್ತಿನ ಮೇಲೆ ಒಬ್ಬ ದೊಡ್ಡ ಪುರುಷನು ಕುಳಿತಿದ್ದನು. ಆ

ಪುರುಷನು ನನ್ನೊಡನೆ ಉಪಚಾರ ಮಾಡಿ ಉತ್ತಂಕ! ನೀನು ಈ ಎತ್ತಿನ ಸೆಗಣಿಯನ್ನು ತಿನ್ನು. ನಿನ್ನ ಗುರುಗಳೂ ತಿಂದಿದ್ದಾರೆ' ಎಂದನು. ಅವನ ಮಾತಿನಿಂದ ನಾನು ಅದರ ಸೆಗಣಿಯನ್ನು ತಿಂದೆನು. ಅವನು ಯಾರು? ಇದೆಲ್ಲವನ್ನೂ ತಮ್ಮ ಮುಖದಿಂದ ಕೇಳಬೇಕೆಂದು ಆಸೆಯುಳ್ಳವನಾಗಿದ್ದೇನೆ' ಎಂದನು.

ಆಗ ಗುರುಗಳು 'ಆ ಇಬ್ಬರು ಸ್ತ್ರೀಯರು ಧಾತಾ ವಿಧಾತಾ ಎಂಬ ಇಬ್ಬರು ದೇವತೆಗಳು. ಆ ಕಪ್ಪು ಬಿಳಿ ನೂಲುಗಳೇ ರಾತ್ರಿಹಗಲುಗಳು. ಆ ಚಕ್ರವೇ ಸಂವತ್ಸರವು. ಹನ್ನೆರಡು ಗೂಟುಗಳೇ ಹನ್ನೆರಡು ತಿಂಗಳುಗಳು. ಆರು ಕುಮಾರರೇ ಆರು ಋತುಗಳು. ಆ ಪುರುಷನು ಪರ್ಜನ್ಯನು. ಆ ಕುದುರೆಯೇ ಅಗ್ನಿಯು. ಆ ದೊಡ್ಡ ಎತ್ತು ಐರಾವತವು. ಅದರ ಮೇಲೆ ಕೂತಿರುವ ಪುರುಷನು ಇಂದ್ರದೇವರು. ನೀನು ತಿಂದ ಸೆಗಣಿಯು ಅಮೃತವು. ಆ ಅಮೃತವನ್ನು ಕುಡಿದ ಪ್ರಯುಕ್ತವೇ ನಾಗಲೋಕದಲ್ಲಿ ಹೋದವನು ಸಾಯಲಿಲ್ಲ. ಇಂದ್ರದೇವರು ನನಗೆ ಮಿತ್ರರು. ಅವರು ನಿನ್ನ ಮೇಲೆ ದಯೆಯಿಂದ ಈ ಅನುಗ್ರಹವನ್ನು ಮಾಡಿದರು. ಆದುದರಿಂದಲೇ ನೀನು ತೋಡುಗಳನ್ನು ಹಿಡಿದುಕೊಂಡು ಇಲ್ಲಿಗೆ ಬಂದು ಸೇರಿದಿ. ವತ್ಸ! ನೀನು ಹೋಗಬಹುದು. ನಿನಗೆ ಶ್ರೇಯಸ್ಸಾಗುವುದು' ಎಂದರು.

ಈ ಪ್ರಕಾರವಾಗಿ ಗುರುಗಳಿಂದ ಅನುಜ್ಞೆಯನ್ನು ಪಡೆದ ಉತ್ತಂಕರು ತಕ್ಷಕನ ಮೇಲೆ ಕೋಪಿಸಿಕೊಂಡು ಅವನಿಗೆ ಸರಿಯಾದ ಪ್ರತೀಕಾರವನ್ನು ಮಾಡಬೇಕೆಂದು ಹಸ್ತಿನಾವತಿಗೆ ಹೋಗಿ ಅಲ್ಲಿ ಜನಮೇಜಯ ರಾಜನೊಡನೆ 'ಪಾಪಿ ತಕ್ಷಕನು ನಿನ್ನ ತಂದೆಯನ್ನು ಕೊಂದನು. ನನಗೂ ಗುರುಗಳ ಕಾರ್ಯಕ್ಕೆ ವಿಘ್ನ ಮಾಡಿದನು. ಆದುದರಿಂದ ಸರ್ಪಯಾಗವನ್ನು ಮಾಡಿ ಅವನನ್ನು ಸುಟ್ಟುಹಾಕು' ಎಂದು ಹೇಳಿ ಹೊರಟುಹೋದರು.

**॥ ಶ್ರೀಕೃಷ್ಣಾರ್ಪಣಮಸ್ತು ॥**



# ಸಂಪಾದನೆಗೆ ಆಧಾರ ಗ್ರಂಥಗಳು


01. ಋಗ್ವೇದ ಸಂಹಿತಾ
02. ಶ್ರೀಮಧ್ವಾಚಾರ್ಯರ ಭಾಗವತ ತಾತ್ಪರ್ಯ, ಮಹಾಭಾರತ ತಾತ್ಪರ್ಯ ನಿರ್ಣಯ. ಮಾಂಡೂಕ್ಯಭಾಷ್ಯ... ಮುಂತಾದವು.
03. ಪದ್ಮ ಪುರಾಣ - ಮಹಾದೇವ ಚಿಮ್ನಾ ಜಿ, ಆಪ್ಟೆ-ಫೆಲೋ-ಬಾಂಬೆ ವಿಶ್ವವಿದ್ಯಾಲಯ ಪ್ರಕಾಶನ, ಆನಂದಾಶ್ರಮ ಮುದ್ರಣ, ಪೂನಾ-1894
04. ಶ್ರೀ ವೇಂಕಟಾಚಲಮಹಾತ್ಮ್ಯ-ಶ್ರೀ ತಿರುಮಲ ತಿರುಪತಿ ದೇವಸ್ಥಾನ ಪ್ರಕಾಶನ 1962
05. ಗರುಡಪುರಾಣ-ಬ್ರಹ್ಮಕಾಂಡ-ರಾಮತತ್ತ್ವ ಮುದ್ರಣಾಲಯ ಬೆಳಗಾಂ-1905
06. ಮಹಾಭಾರತ (ಗೀತಾಪ್ರೆಸ್, ಗೋರಖಪುರ 1951)
07. ಮಹಾಭಾರತ (ಶ್ರೀ ಟಿ.ಆರ್.ಕೃಷ್ಣಾಚಾರ್ ಪ್ರಕಾಶನ-ಕುಂಭಕೋಣ)
08. ಹರಿವಂಶ-ಗೀತಾಪ್ರೆಸ್ ಪ್ರಕಾಶನ
09. ಭಾಗವತ ಪುರಾಣ-ಪುರಾಣನಾಮ ಚೂಡಾಮಣಿ (ಮೈಸೂರು ವಿಶ್ವವಿದ್ಯಾಲಯ-1969)
10. ಪುರಾಣಭಾರತ ಕೋಶ-ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಾಶನ-ಬೆಂಗಳೂರು ಪ್ರಕಾಶನ 1994
11. ಜೈಮಿನಿ ಭಾರತ-ಅಶ್ವಮೇಧಿಕಪರ್ವ-ಅನುವಾದ-ಶ್ರೀ ಶೇಖರ್‌ಕುಮಾರ್ ಸೇನ್. ಕೊಲ್ಕತ್ತಾ-ಸಂಪಾದನೆ ಡಾ.ಪ್ರದೀಪಭಟ್ಟಾಚಾರ್ಯ, ಕೊಲ್ಕತ್ತಾ
12. 12 ಮಾಸಮಾಹಾತ್ಮೆಗಳು-ಶ್ರೀ ರಾಘವೇಂದ್ರತೀರ್ಥ ಪ್ರತಿಷ್ಠಾನಂ ಟ್ರಸ್ಟ್ ಧಾರವಾಡ
13. ಶ್ರೀಮಾಘಮಾಸ ಮಾಹಾತ್ಮ್ಯ-ಶ್ರೀ ಮಧ್ವ ಸಮಾಜ ಪ್ರಕಾಶನ, ಮೈಸೂರು-1994.
14. Encyclopedia of Puranic Words by - Vettam Mani Motilal Banarasidas Publishers-Delhi. 1993.
15. ಬೃಹತ್ ಸ್ತೋತ್ರ ರತ್ನಾಕರ-ಪ್ರಕಾಶಕರು-ಪಾಂಡುರಂಗ ಜಾವಜಿ-ನಿರ್ಣಯಸಾಗರ ಪ್ರೆಸ್. ಮುಂಬಯಿ (1922)

ಇತ್ಯಾದಿಗಳು

# ನಮ್ಮ ಪ್ರಕಟಣೆಗಳು

01. ಗಾಯತ್ರೀ ಹೃದಯ
02. ಗಾಯತ್ರೀ ಭಾವತಿಲಕಂ (ಸಂಸ್ಕೃತ)
03. ಅಹಂ ಬ್ರಹ್ಮಾಸ್ಮಿ
04. ಗುರಿಯಿಲ್ಲದ ದಾರಿ
05. ಗಾಯತ್ರಿಯಲ್ಲಿ ಅಧ್ಯಾತ್ಮದೀಪ
06. ಗಾಯತ್ರಿಯಲ್ಲಿ ವ್ಯಾಸಚಿಂತನೆ
07. ಹರಿನಾಮ ರಹಸ್ಯ
08. ಗೀತಾರ್ಥ ವೈಭವ
09. ಗೀತಾಸಾರ ಸೌರಭ
10. ಭಾಗವತವು ಬೆಳಗಿದ ವೇದಾಂತ ದೀಪಾವಳಿ
11. ಗೀತೆಯಲ್ಲಿ ಪ್ರಾಣತತ್ತ್ವದ ಹಿರಿಮೆ
12. ಭಗವಂತನು ನಿರ್ಗುಣ, ನಿರಾಕಾರನೇ ?
13. ವಾಸುದೇವನಲ್ಲಿ ಗೀತಾಕಟಾಕ್ಷ
14. ಹರಿತತ್ತ್ವ ಚೂಡಾಮಣಿ
15. ಹರಿತೀರ್ಥ ವಿವೇಕ
16. ಭಾಗವತ ರಸ ಸಂದೇಶ
17. ಶಿವರಾತ್ರಿ ರಹಸ್ಯ
18. ವಿರೋಧೋದ್ಧಾರ (ಸಂಸ್ಕೃತ)
19. ಸುಲಲಿತಂ ಶ್ರೀಮದ್ಭಾಗವತಂ - 7 ಸಂಪುಟಗಳಲ್ಲಿ
(ಸಮಗ್ರ ಭಾಗವತದ ಕನ್ನಡಾನುವಾದ)
20. ಸತ್ಕಥಾಸಾಗರ ಭಗವತ್ಕಥಾ ತರಂಗ - 1
21. ಸತ್ಕಥಾಸಾಗರ ಭಾರತ ಕಥಾ ತರಂಗ - 2
22. ಸತ್ಕಥಾಸಾಗರ ಸದಾಚಾರ ತರಂಗ - 3
23. ಸತ್ಕಥಾಸಾಗರ ಮಹತ್ಕಥಾ ತರಂಗ - 4

